# ಶ್ರೀ ರಾಮಕೃಷ್ಣ ವಚನವೇದ

(ಪೂರ್ವಾರ್ಧ)

‘ಮ’



ಶ್ರೀ ರಾಮಕೃಷ್ಣ ಆಶ್ರಮ

ಮೈಸೂರು

೧೯೫೬

# ವಿಷಯಾನುಕ್ರಮಣಿಕೆ

# ಪ್ರಕಾಶಕರ ಬಿನ್ನಹ

ವಂಗ ಭಾಷೆಯಲ್ಲಿ "ಶ್ರೀರಾಮಕೃಷ್ಣ ಕಥಾಮೃತ" ವೆಂಬುದೊಂದು ಪ್ರಖ್ಯಾತವಾದ ಬೃಹತ್ ಮತ್ತು ಮಹತ್ ಗ್ರಂಥ. ಅದರ ಕರ್ತರೇ ಶ್ರೀರಾಮಕೃಷ್ಣಪರಮಹಂಸರನ್ನು ಅವರ ಜೀವಿತ ಕಾಲದಲ್ಲಿ ಸಂದರ್ಶಿಸಲು ಬರುತ್ತಿದ್ದ 'ಮಹೇಂದ್ರನಾಥಗುಪ್ತ' ಅಥವಾ 'ಮ'. ಪರಮಹಂಸರ ವದನಾರವಿಂದದಿಂದ ಹೊರಬಂದ ಸಂಭಾಷಣೆಯನ್ನೆಲ್ಲ ತಮ್ಮ ಸ್ಮೃತಿ ಭಂಡಾರದಲ್ಲಿ ಕೂಡಿಟ್ಟು ಕೆಲವು ಕಾಲದ ಮೇಲೆ ಅವನ್ನೆಲ್ಲ ಒಂದು ಪುಸ್ತಕ ರೂಪದಲ್ಲಿ ಹೊರಗೆಡಹಿದರು. ಅದೇ ಆ ಮಹತ್ ಗ್ರಂಥ. ಪರಮಹಂಸರ ಬಾಯಿಂದ ಬಂದ ವಾಕ್ಯಗಳಿಂದಲೇ ಕಟ್ಟಿದ ಪದದೇಗುಲ ಅದು. ಮಹೇಂದ್ರನಾಥ'ಗುಪ್ತ'ರು ತಮ್ಮ ಹೆಸರಿಗೆ ತಕ್ಕಂತೆ ತಾವು ಯಾರ ಕಣ್ಣಿಗೂ ಬೀಳದೆ ಗುಪ್ತರಾಗೇ ಇದ್ದು ತಮ್ಮ ಅಹಂಕಾರವನ್ನೆಲ್ಲ ಬದಿಗಿರಿಸಿ ಶ್ರೀರಾಮಕೃಷ್ಣರ ವ್ಯಕ್ತಿತ್ವ ಸ್ಪಷ್ಟವಾಗಿ ಪುಟಪುಟದಲ್ಲೂ ಮೈದೋರುವಂತೆ ಮಾಡಿರುವರು. ಸ್ವಾಮಿ ವಿವೇಕಾನಂದರ ಜೀವಿತಕಾಲದಲ್ಲೆ ಅದರ ಒಂದು ಭಾಗ ವಂಗ ಭಾಷೆಯಲ್ಲಿ ಪ್ರಕಟವಾಯಿತು. ಸ್ವಾಮಿಜಿ ಅದನ್ನು ಓದಿ ತಲೆದೂಗಿ, "ಶ್ರೀರಾಮಕೃಷ್ಣರು ಧರೆಗೆ ಇಳಿದುಬರುವಾಗ ಈ ಕೆಲಸಕ್ಕಾಗಿಯೇ ನಿನ್ನನ್ನು ಕರೆತಂದಂತಿದೆ" ಎಂದು ಹೇಳಿ ತಮ್ಮ ಮೆಚ್ಚುಗೆಯನ್ನು ತೋರಿದರು.

ಆ ಕಥಾಮೃತವನ್ನು ಓದಿದಾಗಲೆಲ್ಲ ಅಂದಿನ ದೃಶ್ಯ ಇಂದು ನಮ್ಮ ಕಣ್ಣಿಗೆ ಕಟ್ಟಿದಂತಾಗುತ್ತದೆ. ಪರಮಹಂಸರೇ ನಮ್ಮೆದುರಿಗೆ ನಿಂತು ಮಾತನಾಡುತ್ತಿರುವಂತೆ ಭಾಸವಾಗುತ್ತದೆ. ನಮ್ಮ ದೈನಂದಿನ ಜೀವನದಿಂದ ಆಯ್ದು ಉಪಮಾನ ಉಪಮೇಯ ಉಪಕಥೆಗಳಿಂದ ತರ್ಕಕ್ಕೂ ಅತೀತವಾದ ಸತ್ಯಗಳನ್ನು ಅವರು ಎಷ್ಟು ಲೀಲಾಜಾಲವಾಗಿ ಪಾಮರನಿಗೂ ಅರಿವಾಗುವಂತೆ ವರ್ಣಿಸಿದ್ದಾರೆ ಎಂಬುದು ಅಸದೃಶ! ಆ ಅಮೃತ ಸುಧೆಯನ್ನು ಕನ್ನಡಿಗರಿಗೂ ಪಾನಮಾಡಿಸಬೇಕೆಂಬುದು ನಮ್ಮ ಬಹಳ ಕಾಲದ ಹಂಬಲವಾಗಿತ್ತು. ಅದರ ಪ್ರತಿಫಲವೇ 'ಶ್ರೀ ರಾಮಕೃಷ್ಣ ವಚನ-ವೇದ' ಎಂಬ ಗ್ರಂಥ—ಕನ್ನಡ ನುಡಿಯಲ್ಲಿ. ಅವರು ಹೇಗೆ ಮಾತನಾಡಿದರೋ ಅದೇ ಶೈಲಿಯಲ್ಲಿ ಭಾಷಾಂತರಿಸಲು ಪ್ರಯತ್ನಿಸಿರುವೆವು.

ಎರಡು ವರ್ಷಗಳ ಹಿಂದೆ ಇದರ ಉತ್ತರಾರ್ಧ ಬಂದಿತ್ತು; ಈಗ ಇದರ ಪೂರ್ವಾರ್ಧವೂ ಬಂದು ಬಂಗಾಳಿಯ ಕಥಾಮೃತ ಸಮಗ್ರವಾಗಿ ಕನ್ನಡಕ್ಕೆ ಬಂದಂತಾಯಿತು. ಈಶ್ವರೇಚ್ಛೆಯಿಂದ ನಮ್ಮ ಹಲವು ಕಾಲದ ಹಂಬಲ ಇಂದು ಈಡೇರಿತು. ಬೃಹತ್ ಕರ್ಣಾಟಕದ ಅರುಣೋದಯದ ಮಹಾ ಪುಣ್ಯದಿನದ ಸಮಯದಲ್ಲಿ ಈ ಗ್ರಂಥ ಹೊರಬರುತ್ತಿದೆ. ಹಿಂದೆ ಜೈನ ಬ್ರಾಹ್ಮಣ ವೀರಶೈವ ಕವಿಗಳ ಕಾವ್ಯಧಾರೆಯಿಂದ ಫಲವತ್ತಾದ ಈ ಭೂಮಿಗೆ 'ಶ್ರೀ ರಾಮಕೃಷ್ಣ ವಚನವೇದ' ವೆಂಬ ದೇವಗಂಗಾ ಸ್ರೋತವೂ ಇಂದು ಬಂದುಸೇರಿದೆ. ಇಪ್ಪತ್ತನೆಯ ಶತಮಾನದ ಯುಗಾವತಾರನ ಸಮನ್ವಯ ವಾಣಿ ಇಂದು ನಮಗೆ ದಾರಿಬೆಳಕಾಗಬೇಕಾಗಿದೆ.

ಪರಮಹಂಸರ ಅಮೃತ ವಾಣಿಯನ್ನೊಳಗೊಂಡ 'ವಚನವೇದ' ವೆಂಬ ಈ ದೇವಗಂಗೆ ಕನ್ನಡನಾಡಿಗೆ ಇಳಿದುಬರಲು ಹಲವು ಜನ ತಮ್ಮ ಮಹತ್ತರ ಸೇವೆಯನ್ನು ಸಲ್ಲಿಸಿದ್ದಾರೆ. ಆಶ್ರಮವಾಸಿಗಳೇ ಒಬ್ಬರು ಹಲವಾರು ವರ್ಷ ಶ್ರಮಿಸಿ ಅದನ್ನು ವಂಗಭಾಷೆಯಿಂದ ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಇದು ಈಗ ಇರುವ ರೀತಿಗೆ ಬರಲು ನೆರವು ನೀಡಿದ ಕೆಲವರ ಹೆಸರನ್ನು ಮಾತ್ರ ಇಲ್ಲಿ ಉಲ್ಲೇಖಿಸುವೆವು. ವಿಶ್ವವಿದ್ಯಾನಿಲಯದ ಪ್ರಸ್ತುತ ಉಪಕುಲ-ಪತಿಗಳಾದ ಶ್ರೀ ಕುವೆಂಪು ಅವರು ಈ ಗ್ರಂಥಕ್ಕೆ ಮುಖ್ಯ ಸಂಪಾದಕರಂತೆಯೇ ಇದ್ದಾರೆ. ಅವರ ನೇತೃತ್ವದಲ್ಲಿ ಈ ಪುಣ್ಯ ಕೆಲಸ ಸಾಗಿ ಮುಗಿದಿದೆ. ಶ್ರೀರಾಮಕೃಷ್ಣರ ಮೇಲೆ ಅವರಿಗೆ ಇರುವ ಅಮಿತ ಶ್ರದ್ಧೆ ಭಕ್ತಿಗಳ ಜೊತೆಗೆ ಕನ್ನಡ ಅಭಿಮಾನವೂ ಅವರಲ್ಲಿ ಪ್ರೇರಕವಾಗಿ ನಿಂತು ಈ ಕೆಲಸವನ್ನು ಮಾಡಿಸಿದೆ. ಶ್ರೀರಾಮಕೃಷ್ಣರು ಮತ್ತು ಅವರ ಭಕ್ತವೃಂದ ಹಾಡುತ್ತಿದ್ದ ಪದ್ಯಗಳನ್ನೆಲ್ಲ ತರುಣ ಕವಿಗಳಾದ ಶ್ರೀಮಾನ್ ಜಿ. ಎಸ್. ಶಿವರುದ್ರಪ್ಪನವರು ಕನ್ನಡ ಭಾಷೆಗೆ ಅನುವಾದ ಮಾಡಿದ್ದಾರೆ. ಪರಮಹಂಸರ ಸೇವೆಗೆ ತಮಗೊಂದು ಮಹದವಕಾಶ ದೊರೆಯಿತೆಂದು ಭಾವಿಸಿ ತಮ್ಮ ಹೃತ್ಪೂರ್ವಕ ಕಾಣಿಕೆಯನ್ನು ಶ್ರೀ ಗುರುವಿನ ಅಡಿದಾವರೆಗೆ ಅರ್ಪಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಇಲಾಖೆಯಲ್ಲಿರುವ ಶ್ರೀ ಪ್ರಭುಶಂಕರ ಅವರು ಭಾಷೆ ಮತ್ತು ಕರಡುಪ್ರತಿಗಳನ್ನು ತಿದ್ದುವ ಕೆಲಸದಲ್ಲಿ ತಮ್ಮ ಶ್ರಮವನ್ನು ಸ್ವಲ್ಪವೂ ಗಮನಿಸದೆ ದುಡಿದಿದ್ದಾರೆ. ಶ್ರೀ ಡಿ. ಶ್ರೀಕಂಠಯ್ಯ, ಶ್ರೀ ಎಸ್. ವೆಂಕಟೇಶಮೂರ್ತಿ ಇವರೇ ಮೊದಲಾದ ಕೆಲವು ಮಂದಿ ಕಾಲೇಜಿನ

ವಿದ್ಯಾರ್ಥಿಗಳೂ ಕರಡುಪ್ರತಿಯನ್ನು ತಿದ್ದುವುದರಲ್ಲಿ ಬಹಳ ಶ್ರಮ ವಹಿಸಿದ್ದಾರೆ. ಕೊನೆಯದಾಗಿ ಈ ಗ್ರಂಥವನ್ನು, ನಾವು ಕೊಟ್ಟ ಕಿರುಕುಳವನ್ನೆಲ್ಲ ಸ್ವಲ್ಪವೂ ಗಮನಿಸದೆ, ಮೈಸೂರಿನಲ್ಲಿರುವ ಬೆಂಗಳೂರು ಪ್ರೆಸ್ ಬ್ರಾಂಚಿನ ಕೆಲಸಗಾರರೆಲ್ಲರೂ ತಾವೂ ಈ ಮಹಾಕಾರ್ಯದಲ್ಲಿ ಭಾಗಿಗಳಾಗಬೇಕೆಂಬ ದೃಷ್ಟಿಯಿಂದ ದುಡಿದು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ಆಶ್ರಮದ ಹೃತ್ಪೂರ್ವಕ ಧನ್ಯವಾದಗಳು.

**ಪ್ರಕಾಶಕರು.**

---

# ಮುನ್ನುಡಿ

"ಈ ಅಸೀಮ ಅನಂತಭಾವವು, ಸನಾತನ ಶಾಸ್ತ್ರ ಮತ್ತು ಧರ್ಮಗಳಲ್ಲಿ ನಿಹಿತವಾಗಿದ್ದರೂ ಕೆಲವು ಕಾಲ ಮಾತ್ರ ಪ್ರಚ್ಛನ್ನವಾಗಿದ್ದ ಈ ಅಸೀಮ ಅನಂತಭಾವವು, ಈ ಯುಗಾವತಾರನಿಂದ ಪುನರಾವಿಷ್ಕೃತವಾಗಿ ಪಾಂಚಜನ್ಯಸದೃಶವಾದ ಉಚ್ಚನಿನಾದದಿಂದ ಮಾನವ ಸಮಾಜದಲ್ಲಿ ಘೋಷಿತವಾಗುವುದು.

"ಈ ನವಯುಗ ಪ್ರವರ್ತಕನಾದ ಭಗವಾನ್ ಶ್ರೀರಾಮಕೃಷ್ಣನು ಹಿಂದೆ ಅವತರಿಸಿದ ಯುಗಧರ್ಮಪ್ರವರ್ತಕ ಸಮೂಹದ ಪುನಸ್ಸಂಸ್ಕೃತ ಮಹಾಪ್ರಕಾಶವಾಗಿರುತ್ತಾನೆ!

"ಯಾವ ಶಕ್ತಿಯ ಉನ್ಮೇಷಮಾತ್ರದಿಂದಲೆ ದಿಗ್ದಿಗಂತವ್ಯಾಪಿಯಾದ ಪ್ರತಿಧ್ವನಿಯಿಂದ ಜಗತ್ತು ಜಾಗ್ರತವಾಗುತ್ತಿರುವುದೊ ಆ ಶಕ್ತಿಯ ಪೂರ್ಣತ್ವವನ್ನು ಭಾವಿಸಿ ಅನುಭವಿಸು!"

ಅರ್ಧಶತಮಾನಕ್ಕೆ ಪೂರ್ವದಲ್ಲಿ ಶ್ರೀರಾಮಕೃಷ್ಣರು ಮಹಾಸಮಾಧಿಸ್ಥರಾದ ತರುಣದಲ್ಲಿಯೆ, ಜಗತ್ತಿನ ಕಿವಿ ಆ ದಕ್ಷಿಣೇಶ್ವರ ದೇವಮಾನವನ ಪುಣ್ಯನಾಮದ ದೂರಘೋಷದ ಅನುರಣನ ಮತ್ತು ಪ್ರತಿಧ್ವನನಗಳಿಂದ ಆಗತಾನೆ ಒಂದಿನಿತೆ ಉನ್ಮೇಷಗೊಳ್ಳುತ್ತಿದ್ದ ಶುಭ ಮುಹೂರ್ತದಲ್ಲಿ ದ್ರಷ್ಟಾರ ಸ್ವಾಮಿ ವಿವೇಕಾನಂದರ ಋಷಿವಾಣಿ ಹಾಗೆಂದು ಘೋಷಿಸಿತು. ಅವರು ಅಂದು ಸಾರಿ ಹೇಳಿದ ಭವಿಷ್ಯತ್ತು ದಿನದಿನಕ್ಕೂ ಹೆಚ್ಚು ಹೆಚ್ಚು ಸತ್ಯವಾಗಿ ಈ ಐವತ್ತು ವರ್ಷಗಳಲ್ಲಿ ನಿರ್ವಿವಾದವಾದ ನಿಸ್ಸಂದೇಹವಾದ ನಿರ್ಣಾಯಕವಾದ ಸಿದ್ಧಾಂತವಾಗಿರುವುದನ್ನು ಕಾಣುತ್ತಲಿದ್ದೇವೆ. ಶ್ರೀರಾಮಕೃಷ್ಣರ ದಿವ್ಯಪ್ರಭಾವ ಸಮಗ್ರ ಪೃಥ್ವೀಮಂಡಲವನ್ನೆ ವ್ಯಾಪಿಸುತ್ತಿದೆ. ಅವರ ಜೀವನ ಉಪದೇಶಗಳಿಂದ ಕೋಟ್ಯಂತರ ಚೇತನಗಳು ಅರಳಿ ಬೆಳಕು ಕಾಣುತ್ತಿವೆ; ಅಸಂಖ್ಯ ಹೃದಯಗಹ್ವರಗಳಲ್ಲಿ ಶಾಂತಿಯ ಸತ್ತ್ವದ ಆನಂದದ ಭಗವಜ್ಜ್ಯೋತಿ ಹೊಮ್ಮುತ್ತಿದೆ. ಆ ದಿವ್ಯ ಸಂದೇಶಾಮೃತದಿಂದ ಆಕರ್ಷಿತರಾಗಿ ಆರ್ತರೂ ಮುಮುಕ್ಷುಗಳೂ ಜ್ಞಾನಾರ್ಥಿಗಳೂ ಭೂಮಂಡಲದ ಮೂಲೆ ಮೂಲೆಗಳಿಂದ ಯಾತ್ರೆ ಬರುತ್ತಿದ್ದಾರೆ. ಕಂಡರಿಯದ ಕೇಳರಿಯದ ಬಹುದೂರದ ದೇಶವಿದೇಶಗಳಲ್ಲಿ ಪರಮಹಂಸರ ಜೀವನ

ಸಂದೇಶಗಳು ಪ್ರಕಟವಾಗುತ್ತಿವೆ. ಸ್ವಾಮಿ ವಿವೇಕಾನಂದರಿಂದ "ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ" ಎಂಬ ಮಹಾಧ್ಯೇಯದಿಂದ ಸ್ಥಾಪಿತವಾದ ಶ್ರೀರಾಮಕೃಷ್ಣ ಮಹಾಸಂಘವು ಸದ್ದುಗದ್ದಲವಿಲ್ಲದೆ ಮೆಲ್ಲಮೆಲ್ಲಗೆ ಕ್ರಮಕ್ರಮೇಣ ತನ್ನ ಶಾಖೋಪಶಾಖೆಗಳನ್ನು ವಿಸ್ತರಿಸುತ್ತಾ ತನ್ನ ಮಾತೃಸದೃಶವಾದ ಕರುಣಾಬಾಹುಗಳಿಂದ ಪ್ರಪಂಚವನ್ನೆಲ್ಲ ತಬ್ಬುತ್ತಿದೆ. ಪ್ರತಿ ವರುಷವೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಮಹಾಸಂಘದ ಶಾಖಾಕೇಂದ್ರಗಳು ಸ್ಥಾಪಿತವಾಗುತ್ತಿವೆ.

ಆದರೆ ಅದರ ರೀತಿಯೆ ಬೇರೆ, ನೀತಿಯೆ ಬೇರೆ. ಅಲ್ಲಿ ಪ್ರೀತಿಗಲ್ಲದೆ ಭೀತಿಗೆ ಒಂದಿನಿತೂ ಅವಕಾಶವಿರುವುದಿಲ್ಲ. ಅದು ಮತಪ್ರಚಾರ ಸಂಸ್ಥೆಯಲ್ಲ; ಧರ್ಮಪ್ರಸಾರ ಸಂಸ್ಥೆ. ಅದರ ಉದ್ದೇಶ ಇತರ ವಿದೇಶೀಯ ಮತ ಸಂಸ್ಥೆಗಳಂತೆ ಮತಾಂತರಗೊಳಿಸುವುದಲ್ಲ. ಎಲ್ಲ ಮತಗಳೂ ಭಗವಂತನೆಡೆಗೆ ಭಕ್ತನನ್ನು ಕರೆದೊಯ್ಯುವ ವಿವಿಧ ಪಥಗಳು ಎಂಬುದೆ ಅದರ ದೃಢ ವಿಶ್ವಾಸ. ಅಮೆರಿಕದ ಮತ್ತು ಇಂಗ್ಲೆಂಡಿನ ಕ್ರೈಸ್ತಮಿಷನ್ನುಗಳಂತೆಯಾಗಲಿ ಮಹಮ್ಮದೀಯ ಬೌದ್ಧಾದಿ ಪ್ರಚಾರ ಸಂಸ್ಥೆಗಳಂತಾಗಲಿ ಅದು ಮತಾಂತರಗೊಳಿಸುವ ನೆವದಿಂದ ತಮ್ಮ ಪಕ್ಷದ ಸಂಖ್ಯೆಯನ್ನು ವಿಪುಲಗೊಳಿಸುವ ಲೌಕಿಕವೂ ರಾಜಕೀಯವೂ ಆದ ಕಾರ್ಯಕ್ಕೆ ಎಂದೂ ಪ್ರವೇಶಿಸುವುದಿಲ್ಲ. ಅಲ್ಲದೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ, ಇತರ ವಿದೇಶೀಯ ಮಿಷನ್ನುಗಳಿಗೆ ಅವರ ದೇಶದ ಸರಕಾರವೋ ಅಥವಾ ಅವರ ಮಠಾಧಿಪತಿಯೋ ಹಣವೊದಗಿಸುವಂತೆ ಶ್ರೀರಾಮಕೃಷ್ಣ ಮಹಾಸಂಘವು ಹಣವೊದಗಿಸುವುದಿಲ್ಲ. ಎಲ್ಲಿ ಯಾವ ದೇಶದಲ್ಲಿ ಕೇಂದ್ರ ತೆರೆದರೂ ಅಲ್ಲಿನ ಜನರ ಅಪೇಕ್ಷೆಯಂತೆಯೆ ತೆರೆಯಬೇಕು. ಅಲ್ಲಿಯ ಜನರೆ ಆ ಸಂಸ್ಥೆ ನಡೆಯುವುದಕ್ಕೆ ಹಣ ಒದಗಿಸಬೇಕು. ಅವರು ಬೇಕೆಂದರೆ ಇರುತ್ತದೆ; ಬೇಡವೆಂದರೆ ಹೋಗುತ್ತದೆ. ತಾಯಿಸಂಸ್ಥೆ ಹಣವೊದಗಿಸಿ ಅದರ ಆಯುಃಪ್ರಮಾಣವನ್ನು ಕೃತಕವಾಗಿ ಅಧಿಕಗೊಳಿಸುವ ಗೋಜಿಗೆ ಎಂದಿಗೂ ಹೋಗುವುದಿಲ್ಲ. ಈ ಎಲ್ಲ ಕಾರಣಗಳಿಂದ ಶ್ರೀರಾಮಕೃಷ್ಣ ಸಂಘದ ಕೇಂದ್ರೋಪಕೇಂದ್ರಗಳು ಯಾವ ಕೃತಕ ಪ್ರಚೋದನೆಯೂ ಇಲ್ಲದೆ, ಯಾವ ಲೌಕಿಕ ಪ್ರಯೋಜನದ ಉದ್ದೇಶವನ್ನೂ ಒಲ್ಲದೆ, ಸ್ವಾಭಾವಿಕವಾಗಿ, ಸಂದೇಹ ಭೀತಿ ಘರ್ಷಣೆಗಳಿಗೆ ಒಂದಿನಿತೂ ಅವಕಾಶವಿಲ್ಲದಂತೆ ಮೂಡಿ ಮಲರಿ ಬಾಳುತ್ತಿವೆ, ಬದುಕನ್ನು ಬೆಳಗಿಸುತ್ತಿವೆ.

ಶ್ರೀರಾಮಕೃಷ್ಣರ ಹೆಸರು ಜಗದ್ವ್ಯಾಪಿಯಾಗುವಂತೆಯೂ ಅವರ ಉಪದೇಶಾಮೃತ ಲೋಕದ ಹೃದಯಕ್ಕೆ ಪ್ರವಹಿಸುವಂತೆಯೂ ಮಾಡಿದ ಮಹಾವ್ಯಕ್ತಿಗಳಲ್ಲಿ ಇಬ್ಬರು ಕಲಶಪ್ರಾಯವಾಗಿದ್ದಾರೆ. ಅವರಲ್ಲಿ ಒಬ್ಬರು ವಿಖ್ಯಾತನಾಮರು; ಮತ್ತೊಬ್ಬರು ಅಜ್ಞಾತರು ಅಥವಾ ಅನಾಮರು: ಸ್ವಾಮಿ ವಿವೇಕಾನಂದ ಮತ್ತು "ಮ"! ಒಂದು, ಆಕಾಶದಲ್ಲಿ ತೊಳಗುವ ಸೂರ್ಯ; ಮತ್ತೊಂದು, ಮನೆಮನೆಯ ಹೃದಯದ ಗುಡಿಗುಡಿಯಲ್ಲಿ ಬೆಳಗುವ ಹಣತೆ, ನಂದಾದೀಪ, ಕತ್ತಲೆಯಲ್ಲಿ ಭಾಸ್ಕರನಿಲ್ಲದ ವೇಳೆಯಲ್ಲಿಯೂ ತಂಪಿನ ಕಾಂತಿ ಶಾಂತಿಗಳನ್ನು ಕಣ್ಣು ಕೋರೈಸದಂತೆ ನಿರಾಡಂಬರವಾಗಿ ನೀಡುವ ಸೊಡರು, ಮುದ್ದು ಸೊಡರು, ತಾಯ್ತನದ ಸೊಡರು, ಹಣತೆಸೊಡರು! ಆತನು ತನ್ನ ಪೂರ್ಣನಾಮದಿಂದ ಪ್ರಪಂಚದ ಸಂತೆಬಯಲಿಗೆ ಬರಲು ನಾಚಿ, ಹೇಸಿ, ಹೆದರಿ, 'ಮ' ಎಂಬ ಮೊದಲಕ್ಕರದಿಂದ ಮಾತ್ರ ತೆರೆಮರೆಯಿಂದ ಇಣುಕಿದ ಎಲೆಮರೆಯ ಮಿಣುಕು ಹೂ!

ಸ್ವಾಮಿ ವಿವೇಕಾನಂದರು ಚಿಕಾಗೊ ಸರ್ವಧರ್ಮಸಮ್ಮೇಳನದಲ್ಲಿ ವಿಜಯಿಯಾದಂದು ಮೊದಲುಗೊಂಡು ಅವರು ಪರಂಧಾಮವನ್ನೈದುವವರೆಗೂ ದೇಶವಿದೇಶಗಳಲ್ಲಿ ಜನಾಂಗ ಜನಾಂಗಗಳಲ್ಲಿ ಸಹಸ್ರಾರು ವೇದಿಕೆಗಳ ಮೇಲೆ ನಿಂತು ತಮ್ಮ ಅನನುಕರಣೀಯವಾದ ಧೀರವಾಣಿಯಿಂದಲೂ ಅನುಪಮ ತೇಜಸ್ಸಿನ ವ್ಯಕ್ತಿತ್ವದಿಂದಲೂ ಶ್ರೀ ಗುರುದೇವನ ಉದಾರ ದಿವ್ಯ ಸಮನ್ವಯ ಸಂದೇಶವನ್ನು ಜಗತ್ತಿಗೆ ಸಾರಿ ಶ್ರೀರಾಮಕೃಷ್ಣರ ನಾಮ ಸಿಂಹಾಸನ ದಶದಿಕ್ಕುಗಳಲ್ಲಿಯೂ ಸಂಸ್ಥಾಪಿತವಾಗುವಂತೆ ಪೀಠಿಕೆ ಹಾಕಿದರು. ಅವರು ತಾವೆ ಸ್ವತಃ ಬರೆದ ಬರವಣಿಗೆಯೂ ಶಿಷ್ಯವರ್ಗದವರು ಬರೆದಿಟ್ಟುಕೊಂಡ ಅವರ ಮಾತುಕತೆ ಮತ್ತು ಭಾಷಣಗಳೂ ತರುವಾಯ ಮುದ್ರಿತವಾಗಿ ಹಲವಾರು ಮಹಾಹೊತ್ತಗೆಗಳ ರೂಪದಲ್ಲಿ ಹೊರಬಿದ್ದು ಕೋಟ್ಯಂತರ ಜನಗಳ ಹೃದಯ ಬುದ್ಧಿಗಳಿಗೆ ಪುಷ್ಟಿಕಾಂತಿಗಳನ್ನು ದಾನ ಮಾಡಿವೆ ಮತ್ತು ಮಾಡುತ್ತಲೂ ಇವೆ. ಇಂಗ್ಲಿಷಿನಲ್ಲಿ ಮೊದಲು ಬೆಳಕು ಕಂಡ ಅವು ಪ್ರಪಂಚದ ಅನೇಕಾನೇಕ ಭಾಷೆಗಳಿಗೆ ಪರಿವರ್ತಿತವಾಗಿ ಈಗ ಸರ್ವಜಗತ್ತಿನ ಸ್ವತ್ತಾಗಿ ಪರಿಣಮಿಸಿವೆ.

ಸ್ವಾಮಿ ವಿವೇಕಾನಂದರ ಸಿರಿಬಾಯಿಯಿಂದಲೆ ಪರಮಹಂಸರ ಜೀವನ ವಿಚಾರಗಳನ್ನೆಲ್ಲ ಸಾಧ್ಯವಾದಷ್ಟು ಆಮೂಲಾಗ್ರವಾಗಿ ಕೇಳಿ ಅವರ ವಿಚಾರವಾಗಿ ಮೊತ್ತಮೊದಲನೆಯ ಚಿಕ್ಕದಾದರೂ ಮಹತ್ತಾದ ಗ್ರಂಥ

ವನ್ನು ಬರೆದವರೆಂದರೆ ಭಾರತೀಯ ತತ್ತ್ವಶಾಸ್ತ್ರಗಳನ್ನು ಪಾಶ್ಚಾತ್ಯರಿಗೆ ಪರಿಚಯಮಾಡಿ ಕೊಡುವುದರಲ್ಲಿಯೆ ತಮ್ಮ ಜೀವಮಾನವನ್ನೆಲ್ಲ ಕಳೆದ ಪ್ರೊಫೆಸರ್ ಮ್ಯಾಕ್ಸ್‌ಮುಲ್ಲರ್ ಅವರು. ಅವರ ತರುವಾಯ ಬಹುವರ್ಷ ಕಳೆದ ಮೇಲೆ, ಅವರಷ್ಟೆ ಪ್ರಸಿದ್ಧರೂ ಪ್ರಪಂಚದ ಸಾಹಿತ್ಯಲೋಕದಲ್ಲಿ ಒಂದು ಶಾಶ್ವತ ತಾರೆಯಾಗಿ ಪ್ರಕಾಶಿಸುತ್ತಿರುವವರೂ ಆದ ಫ್ರೆಂಚ್ ಸಾಧಕ ಸಾಹಿತಿ ಮತ್ತು ಮಹಾಜ್ಞಾನಿ ದಿವಂಗತ ರೊಮೇನ್ ರೊಲಾಂಡ್ ಅವರು ಶ್ರೀರಾಮಕೃಷ್ಣ ಮತ್ತು ಸ್ವಾಮಿ ವಿವೇಕಾನಂದ ಇವರಿಬ್ಬರ ಜೀವನ ಚರಿತ್ರೆಗಳನ್ನೂ ಅನ್ಯಾದೃಶವಾದ ವಿಶಾಲ ದೃಷ್ಟಿಯಿಂದಲೂ ವಿದ್ವತ್ತಿನಿಂದಲೂ ಬರೆದು ಜಗತ್ತನ್ನು ಬೆರಗುಗೊಳಿಸಿದರು. ಅದಕ್ಕೆ ಮೊದಲೆ ಭಾರತೀಯ ಭಾಷೆಗಳಲ್ಲಿ ಒಂದಾಗಿರುವ ಬಂಗಾಳಿಯಲ್ಲಿ ಪರಮಹಂಸರ ಅಂತರಂಗ ಶಿಷ್ಯರಲ್ಲಿ ಅಗ್ರಗಣ್ಯರೆಂದು ಪರಿಗಣಿತರಾಗಿದ್ದ ಶ್ರೀಮತ್ ಸ್ವಾಮಿ ಶಾರದಾನಂದರು 'ಶ್ರೀ ರಾಮಕೃಷ್ಣ ಲೀಲಾ ಪ್ರಸಂಗ' ಎಂಬ ಅದ್ಭುತ ಬೃಹದ್‌ಗ್ರಂಥವನ್ನು ಪೌರಾಣಿಕ ಪ್ರಮಾಣದಲ್ಲಿ ಬರೆದು ತಮ್ಮ ಗುರುವಿನ ಜೀವನದ ನಿಕಟ ಪರಿಚಯವನ್ನು ಲೋಕಕ್ಕೆ ಮಾಡಿ ಕೊಟ್ಟರು.[1] ಆದರೆ ಎಲ್ಲಕ್ಕೂ ಮೊದಲಾಗಿ, ಎಲ್ಲಕ್ಕೂ ಮಿಗಿಲಾಗಿ, ಎಲ್ಲರಿಗಿಂತಲೂ ಹಿರಿದಾಗಿ, ಇತರರಾರಿಂದಲೂ ಸಾಧ್ಯವಿಲ್ಲದಷ್ಟು ವಿವರವಾಗಿ, ಬರೆವ ಇತರರೆಲ್ಲರಿಗೂ ಮೂಲಾಧಾರ ಗ್ರಂಥವಾಗುವಂತೆ ಸಕಲ ವಿಷಯ ವಿಸ್ತಾರವಾಗಿ, ಹಿಂದಿಲ್ಲ ಮುಂದೆ ಬರುವುದಿಲ್ಲವೆಂಬಂತೆ ಆಶ್ಚರ್ಯಕರವಾಗಿ, ಪಂಡಿತ ಪಾಮರ ಸರ್ವಸುಲಭ ಸ್ವರಸವಾಗಿ, ಶ್ರೀರಾಮಕೃಷ್ಣಪರಮಹಂಸರ ಸ್ವಂತ ಸಹಜ ದಿವ್ಯವಾಣಿಯೆ ಲೋಕಕಲ್ಯಾಣಾರ್ಥವಾಗಿ ಮೂರ್ತಿಮತ್ತಾಗಿರುವಂತೆ ಅವರ ವಚನವೇದವನ್ನು ಲೋಕಕ್ಕೆ ಅನುಗ್ರಹಿಸಿದವರೆಂದರೆ 'ಕಥಾಮೃತ' ಕರ್ತೃ ಶ್ರೀ 'ಮ'! 'ಮ' ಅವರಿಗೆ ತಾನು ಯಾವ ಪ್ರಮಾಣದಲ್ಲಿ ಋಣಿಯಾಗಿದ್ದೇನೆ ಎಂಬುದಿನ್ನೂ ಜಗತ್ತಿಗೆ ಸಂಪೂರ್ಣವಾಗಿ ಅರಿವಾಗಿಲ್ಲ. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣ ಮಹಾಸಂಘ ಸಂಸ್ಥಾಪನೆ ಮಾಡಿದುದಕ್ಕೆ ಸಮಸಂವಾದಿಯಾಗಿ, ಹೆಗಲೆಣೆಯಾಗಿ ನಿಲ್ಲುತ್ತದೆ 'ಮ' ಅವರ 'ಶ್ರೀರಾಮಕೃಷ್ಣ ವಚನವೇದ' ಮೇರುಕೃತಿ!

1. ಈ ಮಹಾಕೃತಿಯನ್ನು ಇತ್ತೀಚೆಗೆ ಸ್ವಾಮಿ ಪ್ರಣವೇಶಾನಂದಜಿಯವರು ಕನ್ನಡಕ್ಕೆ ಸಂಪೂರ್ಣವಾಗಿ ಪರಿವರ್ತಿಸಿ ಪ್ರಕಟಿಸಿರುವರು.

ಅಷ್ಟೆ ಅಲ್ಲ. ಅದಕ್ಕಿಂತಲೂ ಚಿರಸ್ಥಾಯಿ ಎಂದಾದರೂ ಹೇಳ ಬಹುದು. ಒಮ್ಮೆ ಬೇಲೂರು ಮಠದ ಒಂದು ಮರದಡಿಯಲ್ಲಿ ಅಡ್ಡಾಡು ತ್ತಿದ್ದಾಗ ಸ್ವಾಮಿ ವಿವೇಕಾನಂದರು ಹೇಳಿದರಂತೆ 'ಇಂದು ಇಲ್ಲಿ ಸ್ಥಾಪಿತ ವಾದ ಈ ಸಂಘರೂಪದ ಶಕ್ತಿ ಇನ್ನು ಐನೂರು ವರ್ಷಗಳವರೆಗೂ ಚ್ಯುತಿ ಯಿಲ್ಲದೆ ಅವ್ಯಾಹತವಾಗಿ ಮುಂಬರಿಯುತ್ತದೆ' ಎಂದು. ನಮಗನ್ನಿಸು ತ್ತದೆ 'ಮ' ಅವರ ಈ ಮೇರುಕೃತಿ ಮನುಷ್ಯತ್ವವಿರುವವರೆಗೆ, ಅದು ದೇವತ್ವವನ್ನು ಬಯಸುತ್ತಿರುವವರೆಗೆ ಚಿರಸ್ಥಾಯಿಯಾಗಿ, ಜೀವಂತ ಶಕ್ತಿ ಯಾಗಿರುತ್ತದೆ ಎಂದು. ಕಟ್ಟಡ ಸಂಸ್ಥೆಗಳು ಕಾಲವಶವಾಗಿ ಗತಿಸ ಬಹುದು; ಸರಸ್ವತಿ ಅಮರೆ!

ಈಗೀಗ ಜಗತ್‌ಪ್ರಸಿದ್ಧವಾಗುತ್ತಿರುವ 'ಮ' ಅವರ ನಿಜವಾದ ಹೆಸರು ಮಹೇಂದ್ರನಾಥಗುಪ್ತ. ಬಂಗಾಳಿಗಳಿಗೆ 'ಮಾಸ್ಟರ್ ಮಹಾ ಶಯ' ಎಂಬ ನಚ್ಚಿನ ನಾಮಾಂಕಿತದಿಂದ ನಿತ್ಯಪರಿಚಿತರಾಗಿದ್ದಾರೆ. ಅವರು ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ನವೀನ ರೀತಿಯ ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ಉತ್ತೀರ್ಣರಾಗಿ, ಅಂದಿನ ಅಂತಹರೆಲ್ಲ ತರುಣರಂತೆ ಬ್ರಾಹ್ಮಸಮಾಜಕ್ಕೆ ಸೇರಿದವರಾಗಿ, ಒಂದು ವಿದ್ಯಾಸಂಸ್ಥೆಯಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದರು. ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿಯಿಂದ ಭಾರತೀಯ ತರುಣರ ಮೇಲೆ ಆದ ಎಲ್ಲ ಸತ್ ಮತ್ತು ದುಷ್ ಪರಿಣಾಮಗಳಿಗೆ ಅವರೇನೂ ಹೊರತಾಗಿರಲಿಲ್ಲ. ಯಾವ ಅಗೋಚರ ದಿವ್ಯಶಕ್ತಿ ನರೇಂದ್ರನಾಥನನ್ನು ದಕ್ಷಿಣೇಶ್ವರದ ಭವತಾರಿಣಿಯ ಭಕ್ತವರೇಣ್ಯನೆಡೆಗೆ ಸೆಳೆಯಿತೋ ಅದೇ ಶಕ್ತಿ ಮಹೇಂದ್ರನಾಥಗುಪ್ತನನ್ನೂ ತನ್ನ ಸನ್ನಿಧಿಗೆ ಆಕರ್ಷಿಸಿತು. ನರೇಂದ್ರ ಮತ್ತು ಶ್ರೀರಾಮಕೃಷ್ಣರ ಮೊದಮೊದಲ ಸಂದರ್ಶನ ಸಂದರ್ಭ ಗಳಲ್ಲಿ ನಮಗೆ ಗೋಚರವಾಗುವ ಅದ್ಭುತ ನಾಟಕೀಯತೆ ಮಾಸ್ಟರ್ ಮಹಾಶಯ ಶ್ರೀರಾಮಕೃಷ್ಣರನ್ನು ಸಂದರ್ಶಿಸಿದ ಪ್ರಥಮದಲ್ಲಿ ನಮಗೆ ಕಾಣಿಸುವುದಿಲ್ಲ. ಆದರೆ 'ಮ' ತನ್ನ ದಿನಚರಿಯಾದ 'ಕಥಾಮೃತ'ದಲ್ಲಿ ಲೋಕಕ್ಕೆ ಕೊಟ್ಟಿರುವ ಆ ಸಂದರ್ಶನ ಕಥನವನ್ನು ಸುಸೂಕ್ಷ್ಮವಾಗಿ ಅವಲೋಕಿಸುವ ಯಾರಿಗಾದರೂ ಹೊಳೆಯುತ್ತದೆ, ನರೇಂದ್ರನಿಗಾಗಿ ಅವರು ಹಾತೊರೆದು ಕಾಯುತ್ತಿದ್ದಂತೆಯೆ ಮಾಸ್ಟರ್ ಮಹಾಶಯನನ್ನೂ ನಿರೀಕ್ಷಿಸುತ್ತಿದ್ದರೆಂದು. ತಮ್ಮ ಸಂದೇಶವನ್ನು ಡಿಂಡಿಮಸದೃಶ ಕಂಠದಿಂದ ದಶದಿಕ್ಕುಗಳೂ ಪ್ರತಿಧ್ವನಿಸುವಂತೆ ಡಂಗುರಹೊಯ್ದು ಸಾರಿ ಆಲಿಸಿದವರನ್ನು

ತನ್ನ ಭವ್ಯ ವ್ಯಕ್ತಿತ್ವದಿಂದ ಅಪ್ಪಳಿಸುವ ಕಾರ್ಯಕ್ಕೆ ನರೇಂದ್ರನು ಆವಶ್ಯಕವಾಗಿದ್ದಂತೆಯೆ ಆ ಲೋಕಪರಿವರ್ತನಕರವಾದ ದಿವ್ಯಸಂದೇಶವನ್ನು ತಮ್ಮ ಸ್ವಂತ ಸಹಜವಾಣಿಯಲ್ಲಿಯೆ ಹಿಡಿದಿಟ್ಟು, ಅದರ ವಿವರ ವಿವರವನ್ನೂ ಸ್ತರಸ್ತರವಾಗಿ ಚಿತ್ರಿಸಿ, ಗುರುದೇವನ ದೈನಂದಿನವಾದ ಗುರುಲಘುಮಿಶ್ರಿತ ಮನೋವಾಕ್ಕಾಯ ವ್ಯಾಪಾರಗಳನ್ನೆಲ್ಲ ತನ್ನ ನೆನಹಿನ ತೊಟ್ಟಿಲಲ್ಲಿ ಲಾಲಿಸಿ ಪಾಲಿಸಿ ಅಪಚಾರವಾಗದಂತೆ ಪೊರೆದು, ಸದ್ದುಗದ್ದಲವಿಲ್ಲದೆ ಆಟೋಪ ಅಟ್ಟಹಾಸಗಳಿಲ್ಲದೆ ಲೋಕಶಿಶುಹೃದಯಕ್ಕೆ ಅಮರಸ್ತನ್ಯವೀಯುವ ದೀನ ದಿವ್ಯ ಮಹತ್ತರ ಕಾರ್ಯಕ್ಕೆ ಮಹೇಂದ್ರನಾಥನಂತಹರ ಆವಶ್ಯಕತೆಯೂ ಅತ್ಯಂತ ಅನಿವಾರ್ಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ. 'ವಚನವೇದ'ದ ನಾನಾ ಭಾಗಗಳಲ್ಲಿ ಮಾಸ್ಟರ್ ಮಹಾಶಯನ ವಿಚಾರವಾಗಿ ಶ್ರೀಗುರು ಆತನ ಜನ್ಮಾಂತರ ವಿಷಯಗಳನ್ನು ಸೂಚಿಸುತ್ತಾರೆ. ಈ ಯುಗದ ಭಗವದ್‌ವಾಣಿಯನ್ನು ಬರೆದಿಡುವುದಕ್ಕಾಗಿಯೆ ಯುಗಾವತಾರನು ತನ್ನ ದಿವ್ಯ ಕರಣಿಕನನ್ನು ಮಹೇಂದ್ರನಾಥಗುಪ್ತನನ್ನಾಗಿ ಕರೆತಂದಿದ್ದನೆಂಬುದೂ ಅಲ್ಲಲ್ಲಿ ಧ್ವನಿತವಾಗುತ್ತದೆ. ಮಹೇಂದ್ರನೂ ತನ್ನ ಹೆಸರಿಗೆ ತಕ್ಕಂತೆಯೆ ಗುಪ್ತನಾಗಿದ್ದುಕೊಂಡು, ಗುಪ್ತರೀತಿಯಲ್ಲಿಯೆ ಎಲ್ಲವನ್ನೂ ಬರೆದಿಟ್ಟುಕೊಂಡು, ಯಾವುದಕ್ಕಾಗಿ ತಾನು ಅವತಾರದೊಡನೆ ಅವತರಿಸಿದ್ದನೊ ಅದನ್ನು ಸಂಪೂರ್ಣವಾಗಿ ಸಾರ್ಥಕಗೊಳಿಸಿ ಕೃತಕೃತ್ಯನಾಗಿ ಭೂರಂಗತ್ಯಾಗಮಾಡಿದ್ದಾನೆ. ಆತನಿಗೆ ನಾವೆಷ್ಟು ಋಣಿ ಎಂಬುದನ್ನು ಹೇಳಿ ಪೂರೈಸಲಾದೀತೆ?

'ಶ್ರೀರಾಮಕೃಷ್ಣ ವಚನವೇದ'ವೆಂದರೆ ಅದೊಂದು ಕರತಲ ದೇವಸ್ಥಾನ, ಕರತಲ ತಪೋರಂಗ, ಕರತಲ ಪುಣ್ಯಕ್ಷೇತ್ರ. ಆದರೆ ದೇವಸ್ಥಾನ ಪುಣ್ಯಕ್ಷೇತ್ರಗಳಂತೆ ತಾನೆಂದಿಗೂ ಕಲುಷಿತವಾಗುವ ಸಂಭವವಿಲ್ಲ, ಶಿಥಿಲವಾಗುವ ಸಂಭವವಿಲ್ಲ. ಯಾವ ಮನೆಯಲ್ಲಿ ಈ 'ವಚನವೇದ'ವಿರುತ್ತದೆಯೊ ಅದು ಮಂದಿರವಾಗುತ್ತದೆ. ಯಾರ ಕೈ ಇದನ್ನು ಹಿಡಿದಿರುತ್ತದೆಯೊ ಅದು ಭಗವಂತನ ಪಾದಾರವಿಂದವನ್ನೆ ಧರಿಸಿರುತ್ತದೆ. ಯಾರ ಜಿಹ್ವೆ ಇದನ್ನು ಪಠಿಸುತ್ತದೆಯೊ ಅದು ಅಮೃತವನ್ನೆ ಉಂಟುತ್ತಿರುತ್ತದೆ. ಇದು ಆನಂದದ ಆಗರ; ಶಾಂತಿಯ ಸಾಗರ; ದಿವ್ಯಜ್ಞಾನದ ಓಗರ. ಕಷ್ಟದ ಸಮಯದಲ್ಲಿ ಧೈರ್ಯವೀಯುವ ಸಖ; ಸುಖದ ಸಮಯದಲ್ಲಿ ಸಮರ್ಪಣಭಾವವಿತ್ತು ವಿನಯ ಭಕ್ತಿಗಳನ್ನು ಪ್ರಚೋದಿಸುವ ಗುರು;

ಕತ್ತಲಲ್ಲಿ ದೀಪ, ದಾರಿಗೆ ಊರೆಗೋಲು, ದಿಕ್ಕುಗೆಡದಂತೆ ಗುರಿದೋರುವ ಧ್ರುವತಾರೆ. ಇಲ್ಲಿ ವೇದವೇದಾಂತ ದರ್ಶನಾದಿ ಸರ್ವಸಾರವಿದೆ. ಓದು ಬರುವ ಅತ್ಯಂತ ಸಾಮಾನ್ಯನೂ ಇದನ್ನು ಓದಿದ ಮೇಲೆ ಯಾವ ಪಂಡಿತನಿಗೂ ಕರುಬುವ ಆವಶ್ಯಕತೆಯಿಲ್ಲ; ಯಾವ ವಿದ್ವತ್‌ಪೂರ್ಣನಾದ ತತ್ತ್ವಜ್ಞಾನಿಗೂ ಕೀಳೆಂದು ನಾಚಬೇಕಾಗಿಲ್ಲ. ಅದಕ್ಕೆ ಬದಲು ಭಗವಂತನ ಕೃಪೆಯಿಂದ ತನಗಿಂತಲೂ ಧನ್ಯರಿಲ್ಲ ಎಂದರಿತು ನಿರ್ಮಮನಾಗುತ್ತಾನೆ, ಶಾಂತನಾಗುತ್ತಾನೆ, ಪೂರ್ಣನಾಗುತ್ತಾನೆ. ಆತನಿಗೆ ಗಗನದ ವೈಶಾಲ್ಯ, ಹೈಮಾಚಲದ ಔನ್ನತ್ಯ, ಅಂಬುಧಿಯ ಗಭೀರ ಗಾಂಭೀರ್ಯ ಎಲ್ಲವೂ ಸಿದ್ಧಿಸುತ್ತವೆ. ಇಷ್ಟು ಸರ್ವಜನ ಸಾಮಾನ್ಯರೂಪದಲ್ಲಿ, ಇಷ್ಟು ಸರ್ವಸುಲಭ ರೂಪದಲ್ಲಿ ಭಗವಂತ ಎಂದೂ ಅವತರಿಸಿರಲಿಲ್ಲ, ಭಗವದ್‌ವಾಣಿ ತಾನೆಂದೂ ಕೃತಿಗೊಂಡಿರಲಿಲ್ಲ.

'ಮ' ಅವರ ಈ ಮಹತ್‌ಕೃತಿ 'ಕಥಾಮೃತ' ಈಗಾಗಲೆ ಅನೇಕ ಭಾಷೆಗಳಲ್ಲಿ ಪರಿವರ್ತನಗೊಂಡಿದೆ, ಗೊಳ್ಳುತ್ತಿದೆ. ಸ್ವಾಮಿ ನಿಖಿಲಾನಂದರಿಂದ ಇಂಗ್ಲಿಷ್ ಭಾಷೆಗೆ ಭಾಷಾಂತರಿತವಾಗಿ, ಅಮೆರಿಕದಲ್ಲಿ ಮೊತ್ತ ಮೊದಲು ಪ್ರಕಟವಾಗಿ, "The Gospel of Sri Ramakrishna" ಎಂಬ ಹೆಸರಿನಿಂದ ಜಗತ್‌ಪ್ರಿಯವೂ ಪ್ರಸಿದ್ಧವೂ ಆಗಿದೆ. ಅಸಂಖ್ಯಾತ ವಿದೇಶೀಯ ಜೀವಗಳು ಆ ಭಾಷೆಯಲ್ಲಿ ಅದನ್ನು ಓದಿ ಧನ್ಯರಾಗುತ್ತಿದ್ದಾರೆ. ವಿಚಾರವಾದಿಗಳೂ ಕವಿಗಳೂ ಮೇಧಾವಿಗಳೂ ತತ್ತ್ವಜ್ಞರೂ ದೇಶ ಪಕ್ಷ ಪಂಥ ವಾದ ಮತ ಯಾವ ಭೇದವೂ ಇಲ್ಲದೆ ಭಾರತದ ಈ ಭಾಗೀರಥಿಯ ತೀರ್ಥಕ್ಕೆ ಪುಣ್ಯಸ್ನಾನಗೈಯಲು ಬರತೊಡಗಿದ್ದಾರೆ. ಆ ಆಧ್ಯಾತ್ಮಿಕ ಸಾಹಸದಲ್ಲಿ ಕನ್ನಡಿಗರೂ ಹಿಂದುಳಿದಿಲ್ಲ. 'ಮ' ಅವರ ಗ್ರಂಥದ ಪೂರ್ವಭಾಗದ ಕನ್ನಡ ಭಾಷಾಂತರ 'ಶ್ರೀರಾಮಕೃಷ್ಣ ವಚನಾಮೃತ' ಎಂಬ ಅಂಕಿತದಿಂದ ಅನೇಕ ವರ್ಷಗಳ ಹಿಂದೆಯೆ ಬೆಂಗಳೂರು ಶ್ರೀರಾಮಕೃಷ್ಣಾಶ್ರಮದಿಂದ ಪ್ರಕಟಗೊಂಡಿತು. ಆದರೆ ಆ ಭಾಷಾಂತರ ನಾವು ಅಪೇಕ್ಷಿಸುವಷ್ಟು ಸಮರ್ಪಕವಾಗಿತ್ತೆಂದು ಹೇಳುವಂತಿಲ್ಲ. ಮಾಸ್ಟರ್ ಮಹಾಶಯನು ಶ್ರೀರಾಮಕೃಷ್ಣರ ಬಾಯಿಂದ ಬಂದ ಮಾತುಗಳನ್ನು ಮಾತಾಡಿದಂತೆಯೆ ಬರೆದಿಟ್ಟಿದಾನೆ, ಬಂಗಾಳಿಯಲ್ಲಿ. ಸಂವಾದವನ್ನು ನಿರ್ವಹಿಸುವಾಗ ಅಲ್ಲಿ ಗ್ರಂಥಭಾಷೆಯ ಪ್ರಯೋಗವೆ ಇಲ್ಲ. ಗ್ರಾಮ್ಯ ಪ್ರಯೋಗಗಳೂ ಯಥೇಚ್ಛವಾಗಿವೆ. ಬರವಣಿಗೆಯ ಕೃತಕತೆ ಒಂದಿನಿತೂ

ಇಲ್ಲ. ಓದುಗನಿಗೆ ಶ್ರೀರಾಮಕೃಷ್ಣರ ಸಾಮೀಪ್ಯದಲ್ಲಿಯೆ ಕುಳಿತು ಅವರ ಬಾಯಿಂದ ಬರುವ ಮಾತನ್ನೆ ಕೇಳುತ್ತಿರುವಂತೆ ಅನುಭವವಾಗುತ್ತದೆ. ಅತ್ಯಂತ ಗಹನವಾದ ಆಧ್ಯಾತ್ಮಿಕ ವಿಚಾರಗಳ ಮಧ್ಯೆಮಧ್ಯೆ ಅಳ್ಳೆಬಿರಿಯೆ ನಗುವಂತಹ ಪರಿಹಾಸದ ಮತ್ತು ವಿನೋದದ ಪ್ರಸಂಗಗಳೂ ತಿಳಿಯಾದ ಆಡುಮಾತಿನಲ್ಲಿಯೆ ಹೊಳೆಯುತ್ತವೆ. ಆದ್ದರಿಂದ ಈಗಿನ ಈ ಭಾಷಾಂತರದಲ್ಲಿ ಮೂಲದ ಆ ಸಹಜತೆ ಸರಳತೆಗಳನ್ನು ಅನುಸರಿಸುವ ಉದ್ದೇಶದಿಂದ ಭಾಷೆಯನ್ನು ಆದಷ್ಟು ಮಟ್ಟಿಗೆ ಗ್ರಂಥಭಾಷೆಯಾಗದಂತೆ ನೋಡಿಕೊಂಡು ಆಡುಮಾತಿನ ಶೈಲಿಯನ್ನೆ ಬಳಸಿಕೊಂಡಿದೆ.

ಈ ಭಾಷಾಂತರಕ್ಕೆ 'ಶ್ರೀರಾಮಕೃಷ್ಣ ವಚನವೇದ' ಎಂದು ಹೆಸರಿಟ್ಟಿದೆ. ಅದಕ್ಕೆ ಈ ಮುನ್ನುಡಿಕಾರನೆ ಬಹುಮಟ್ಟಿಗೆ ಕಾರಣವಾಗಿರುವುದರಿಂದ ಅದರ ಪರವಾಗಿ ಎರಡು ಮಾತು ಹೇಳಬೇಕಾಗಿದೆ.

'ವೇದ' ಎಂದರೆ ನಿತ್ಯಜ್ಞಾನ. ಅದು ಸನಾತನ. ಅದು ಅಪೌರುಷೇಯ. ಅಂದರೆ ಯಾವ ಮಾನವವ್ಯಕ್ತಿಯಿಂದಲೂ ಹುಟ್ಟಿಬಂದುದಲ್ಲ. ಮನುಷ್ಯತ್ವ ಹುಟ್ಟುವುದಕ್ಕೆ ಮೊದಲು ಅದು ಇತ್ತು; ಮನುಷ್ಯತ್ವ ಹೋದ ಮೇಲೆಯೂ ಅದು ಇರುತ್ತದೆ. ಅಂದರೆ 'ಲೋಕ'ಕ್ಕೆ ಪೂರ್ವದಲ್ಲಿಯೂ ಇತ್ತು; 'ಲೋಕ'ದ ಅನಂತರವೂ ಇರುತ್ತದೆ. 'ವೇದ' ಲೋಕಕ್ಕೆ ಅವತರಿಸುವಾಗ ಯಾವನಾದರೊಬ್ಬ ಮನುಷ್ಯಪಾತ್ರದ ಮೂಲಕವಾಗಿಯೆ ಹೊಮ್ಮುತ್ತದೆ. ಅಂತಹ ಮನುಷ್ಯ ನೀರನ್ನು ಹರಿಯಿಸುವ ಒದಗೆಯೆ ಹೊರತು ಅದನ್ನು ಸೃಷ್ಟಿಸುವವನಲ್ಲ. ಅವನು ಪ್ರಣಾಳಿಕಾ ರೂಪ ಮಾತ್ರ. ಅಂತಹನನ್ನು ಋಷಿ, ಕವಿ, ದ್ರಷ್ಟಾರ ಎಂದೆಲ್ಲ ಕರೆಯುತ್ತೇವೆ. ಆ ದೃಷ್ಟಿಯಿಂದ ವೇದ ಎಂಬುದು ಎಂದೋ ಮುಗಿದ ಒಂದು ಗ್ರಂಥದ ಅಥವಾ ಗ್ರಂಥರಾಶಿಯ ಹೆಸರಲ್ಲ. ವೇದದ ಮಹಾಗ್ರಂಥಕ್ಕೆ ಕಾಲಕಾಲಕ್ಕೂ ಯುಗಯುಗಕ್ಕೂ ಹೊಸಹೊಸ ಅಧ್ಯಾಯಗಳೂ ಪ್ರಕರಣಗಳೂ ಸೇರುತ್ತಲೆ ಹೋಗುತ್ತಿವೆ. ಅವುಗಳಲ್ಲಿ ಆಧುನಿಕ ವಿಜ್ಞಾನಶಾಸ್ತ್ರಗಳಿಗೂ ಗೌರವಸ್ಥಾನವಿದೆ. ನಮ್ಮ ಅನುಭವಗಳು ವಿಸ್ತರಿಸಿದಂತೆಲ್ಲ, ಹೊಸ ಹೊಸ ಸಾಕ್ಷಾತ್ಕಾರಗಳೂ ಸಿದ್ಧಿಗಳೂ ಮೈದೋರಿದಂತೆಲ್ಲ ವೇದವೂ ವಿಸ್ತರಣಗೊಳ್ಳುತ್ತದೆ. ಸದ್ಯಕ್ಕೆ ಅತೀತವಾಗಿರುವ 'ವೇದ'ದ ವಿರಾಟ್ ಜಗತ್ತಿನಲ್ಲಿ 'ಲೋಕ'ಕ್ಕೆ ಇಳಿಯಬಹುದಾದ, ಇಳಿಯಲಿರುವ ಮತ್ತು ಇಳಿಯಲೆಬೇಕಾಗಿರುವ ಇನ್ನೆಷ್ಟೆಷ್ಟು ವಿಸ್ಮಯಗಳೂ

ಅದ್ಭುತಗಳೂ ಆಶ್ಚರ್ಯಗಳೂ ಕಾಲಲಬ್ಧಿಯನ್ನು ಕಾಯುತ್ತಿವೆಯೊ ಹೇಳ ಬಲ್ಲವರಾರು? ಸೂಕ್ಷ್ಮವಾದ ಆಧ್ಯಾತ್ಮಿಕಾನುಭವ ಜಗತ್ತಿನ ಮಾತಂತಿರಲಿ; ನಮ್ಮ ನಕ್ಷತ್ರನೀಹಾರಿಕಾಮಯವಾದ ಈ ಸ್ಥೂಲ ಜಗತ್ತಿನಲ್ಲಿಯೆ ನಮ್ಮ ವಿಜ್ಞಾನ ಊಹಿಸದಿದ್ದ ಅಘಟನಗಳೂ ಘಟಿಸುತ್ತಿವೆ ಎಂಬುದನ್ನು ನಮ್ಮ ಕಣ್ಣ ಮುಂದೆಯೆ ಕಾಣುತ್ತಿದ್ದೇವೆ! 'Flying Saucers From Outer Space', 'Flying Saucers Have Landed', 'Flying Saucer from Mars' ಎಂಬ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನೂ ನಂಬಲರ್ಹರೂ ಸಮರ್ಥವೀಕ್ಷಕರೂ ಆದ ವಿವಿಧ ಸಾಕ್ಷಿಗಳ ಹೇಳಿಕೆಗಳು ಪ್ರಪಂಚದ ನಾನಾ ಭಾಗದ ಪತ್ರಿಕೆಗಳಲ್ಲಿ ವರದಿಯಾಗುತ್ತಿರುವುದನ್ನೂ ಗಮನಿಸಿದರೆ ನಮ್ಮ ಆಶ್ಚರ್ಯಕ್ಕೆ ಏನೇನು ಆಹಾರಗಳನ್ನು ಒದಗಿಸುತ್ತಾರೋ ಈ ವ್ಯೋಮಾಂತರದ ವಿಯದ್ಯಾನಗಳಲ್ಲಿರಬಹುದಾದ ಅತಿಥಿ ಮಹನೀಯರು, ಹೇಳಬಲ್ಲವರಾರು? ಅಂತೂ ಸದ್ಯಕ್ಕೆ ಅತೀತವಾಗಿರುವ 'ವೇದ' ಅನಂತವಾಗಿರುವುದರಿಂದ ಲೋಕಕ್ಕಿಳಿಯುವ ನಮ್ಮ ವೇದವೂ ಕೊನೆಯಿಲ್ಲದೆ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ಶ್ರೀರಾಮಕೃಷ್ಣರಂತಹ ಸಿದ್ಧಪುರುಷನ, ಮಹರ್ಷಿಯ, ದ್ರಷ್ಟಾರನ, ಅವತಾರವರಿಷ್ಠನ ವಾಕ್‌ಶ್ರೀಯನ್ನು 'ವಚನವೇದ' ಎಂದು ಕರೆಯುವುದರಲ್ಲಿ ಅನೌಚಿತ್ಯವೆಲ್ಲಿ ಬಂತು? ಈ 'ವಚನವೇದ' ವೇದಗಳೂ ಮಾಡದ ಕೆಲಸವನ್ನು ಮಾಡುತ್ತದೆ. ಈ 'ವಚನವೇದ' ವೇದಗಳು ಹೊಗಲಾರದ, ಬಹುಶಃ ಕೆಲವರ ದೃಷ್ಟಿಯಲ್ಲಿ ಹೊಗಬಾರದ ಮೂಲೆಮೂಲೆಗಳನ್ನೂ ಪ್ರವೇಶಿಸಿ ಜ್ಯೋತಿರ್ದಾನ ಮಾಡುತ್ತದೆ. ಈ 'ವಚನವೇದ' ಅಂಧಶ್ರದ್ಧೆಯ ಮೂಢಾಚಾರದ ಜನಜಂಗುಳಿಯನ್ನು ಪುರೋಹಿತ ನಖಪಂಜರದಿಂದ ಪಾರುಮಾಡಿ, ಅವರ ಧರ್ಮದಾಸ್ಯದೈನ್ಯಗಳನ್ನು ಪರಿಹರಿಸಿ, ಅವರನ್ನು 'ಮನುಷ್ಯ'ರನ್ನಾಗಿ ಮಾಡುತ್ತದೆ. ಈ 'ವಚನವೇದ' ಪ್ರಜ್ಞಾಪರಾಧಜನ್ಯವಾದ ಭಯಭೀತಿಗಳಿಂದಲೂ ನೀಚೋಽಹಂ ಉಚ್ಚೋಽಹಂ ಮನೋಜಟಿಲಗಳಿಂದಲೂ ನಮ್ಮನ್ನುದ್ಧರಿಸಿ, ಉದಾರಧೀರರನ್ನಾಗಿ ಮಾಡಿ, ಸಂರಕ್ಷಿಸುತ್ತದೆ; ಜೀವನ್ಮುಕ್ತಿಗೆ ನಡಸುತ್ತದೆ.

ಸ್ವತಂತ್ರಭಾರತವನ್ನು ನಮ್ಮ ರಾಜ್ಯಾಂಗ 'ಸೆಕ್ಯುಲರ್ ರಾಜ್ಯ' ಎಂದು ಕರೆದಿದೆ. ಸೆಕ್ಯುಲರ್ ಎಂದರೆ ಧಾರ್ಮಿಕವಲ್ಲದ, ಮತದೂರವಾದ, ಲೌಕಿಕ, ಲೋಕಾಯುತ ಎಂದು ಅರ್ಥವಾಗುತ್ತದೆ. ಯಾವ ಭರತಖಂಡ

ವನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಪುಣ್ಯಭೂಮಿಯೆಂದು ಕರೆದರೊ; ಯಾವುದರ ವಿಶೇಷ ಪ್ರಜ್ಞೆ, ವಿಶೇಷ ಪ್ರತಿಭೆ, ವಿಶಿಷ್ಟ ಕರ್ತವ್ಯ, ಸ್ವಭಾವ, ಸ್ವಧರ್ಮ, ಸರ್ವವೂ ಧಾರ್ಮಿಕದಲ್ಲಿ ಮಾತ್ರವೆ ನಿಷ್ಠವಾಗಿದೆ ಎಂದು ಸ್ವಾಮಿ ವಿವೇಕಾನಂದರು ಸಾರಿದರೊ; ಯಾವುದರ ಸ್ವಾತಂತ್ರ್ಯಕ್ಕಾಗಿ ದುಡಿದು ಮಡಿದ ಸ್ವಾತಂತ್ರ್ಯ ಶಿಲ್ಪಿ ಮಹಾತ್ಮಾ ಗಾಂಧಿಜಿಯ ನಡೆ ನುಡಿ ಉಸಿರು ಎಲ್ಲವೂ ಭಗವದಭಿಮುಖವಾದ ದಿವ್ಯ ಧರ್ಮದಲ್ಲಿಯೆ ಸಮರ್ಪಿತವಾಗಿ ದ್ದಿತೊ ಆ ಭೂಭಾಗವನ್ನು 'ಧಾರ್ಮಿಕವಲ್ಲದ' 'ಮತದೂರವಾದ' 'ಲೌಕಿಕ' 'ಲೋಕಾಯತ' 'ಸೆಕ್ಯುಲರ್' ಎಂದು ಕರೆದರೆ ಏನರ್ಥ ವಾಗುತ್ತದೆ? ಹಿಮಾಲಯವನ್ನಾದರೂ ಎತ್ತಿ ಬೇರೆ ದಿಕ್ಕಿಗೆ ಸಾಗಿಸ ಬಹುದೊ ಏನೊ! ಅಣುಶಕ್ತಿಯ ಪ್ರಯೋಗದಿಂದ ಸಮತಲ ಮಾಡ ಬಹುದೊ ಏನೊ! ಆದರೆ ಭಾರತೀಯ ಸಂಸ್ಕೃತಿಯ ಈ ಆಧ್ಯಾತ್ಮಿಕ ಲಕ್ಷಣವನ್ನು ಮಾತ್ರ ಮಾರ್ಪಡಿಸಲು ಎಂದೆಂದಿಗೂ ಸಾಧ್ಯವಿಲ್ಲ! ಹಾಗೆ ಮಾಡುವುದೂ ರಾಜ್ಯಾಂಗದ ಉದ್ದೇಶವಲ್ಲ. ರಾಜ್ಯಾಂಗ 'ಸೆಕ್ಯುಲರ್' ಎಂದು ಕರೆದುದರ ಉದ್ದೇಶ ಆಡಳಿತದ ಸಮನ್ವಯ ದೃಷ್ಟಿಯನ್ನೂ ಮತೀಯ ನಿಷ್ಪಕ್ಷಪಾತವನ್ನೂ ಎಲ್ಲ ಮತದವರಿಗೂ ಸರ್ವಸಮಾನ ವಾದ ಹಕ್ಕು ಬಾಧ್ಯತೆ ಹೊರೆ ಹೊಣೆ ಉಂಟೆಂಬುದನ್ನೂ ಸಾರುವುದೆ ವಿನಾ ಯಾವ ಆಸ್ತಿಕ ನಾಸ್ತಿಕ ಸಿದ್ಧಾಂತಗಳನ್ನೂ ಸಂಸ್ಥಾಪಿಸುವುದೂ ಅಲ್ಲ, ಉತ್ಪಾಟಿಸುವುದೂ ಅಲ್ಲ. ಅಂದರೆ ನಮ್ಮ ರಾಷ್ಟ್ರದ ಆಡಳಿತದ ಈ ಲಕ್ಷಣವನ್ನು ಸರಿಯಾದ ಮಾತಿನಲ್ಲಿ ವರ್ಣಿಸುವುದಾದರೆ 'ಸಮನ್ವಯ ರಾಷ್ಟ್ರ' ಎಂದು ಕರೆಯಬೇಕಾಗುತ್ತದೆ. ಅಂತಹ ಸಮನ್ವಯ ರಾಷ್ಟ್ರಕ್ಕೆ ಅತ್ಯಂತ ಆವಶ್ಯಕವಾಗಿರುವ ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಈ ಯುಗದಲ್ಲಿ ಸ್ವಾತಂತ್ರ್ಯೋದಯಕ್ಕೆ ಬಹು ಪೂರ್ವದಲ್ಲಿಯೆ ಸ್ಪಷ್ಟವಾಗಿ ಅನುಭವಪೂರ್ವಕವಾಗಿ ಸರ್ವಜನ ಸುಲಭಗ್ರಾಹ್ಯವಾಗಿ ಪ್ರಭಾವಯುತ ವಾಗಿ ಕ್ರಾಂತಿಪೂರ್ಣವಾದರೂ ಸಂಪ್ರದಾಯ ಅವಿರುದ್ಧವೆಂಬಂತೆ ಲೋಕ ಸಮಸ್ತಕ್ಕೂ ತೋರಿ ಸಾರಿದವರೆಂದರೆ ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರು. ಅವರ ಈ 'ವಚನವೇದ' ನಿಜವಾಗಿಯೂ ಸಮನ್ವಯ ದೃಷ್ಟಿಯನ್ನು ಸರ್ವ ಪ್ರಜೆಗಳಿಗೂ ಸುಲಭವಾಗಿ ಹೃದಯಸ್ಪರ್ಶಿಯಾಗು ವಂತೆ ಬೋಧಿಸುವ ನವೀನ ವೇದ. ಮತಾಂತರಗೊಳಿಸುವುದು, ಪರಮತ ನಿಂದೆಯಿಂದ ಸ್ವಮತಶ್ಲಾಘನೆ ಮಾಡುವುದು, ರಾಜಕೀಯ ಪ್ರಯೋಜನ

ಕ್ಕಾಗಿ ಸ್ವಮತೀಯರ ಸಂಖ್ಯೆಯನ್ನು ಹೆಚ್ಚಿಸುವ ಕುತಂತ್ರಕ್ಕೆ ಕೈ ಹಾ ದು ಮೊದಲಾದ ಕಾಡುಭಾವನೆಗಳನ್ನೆಲ್ಲ ಬೇರುಸಹಿತ ಸುಟ್ಟುಹಾಕ ಎಲ್ಲಿಚ್ಚಾಗುತ್ತದೆ ಈ 'ವಚನವೇದ'. ನಮ್ಮ ರಾಜ್ಯಾಂಗದ ರಾಜಕೀಯ ಸುರತರು ಸುಫಲಸುಮಭರಿತವಾಗಬೇಕಾದರೆ ಜನಹೃದಯಮೂಲ ವಾಗಿರುವ ಅದರ ತಾಯಿಬೇರು ಈ 'ವಚನವೇದ' ಸಾರವನ್ನು ಹೀರಿ ಕೊಂಡಲ್ಲದೆ ಸಾಧ್ಯವಿಲ್ಲ. ನಮ್ಮ ರಾಜಕೀಯ ರಾಜ್ಯಾಂಗಕ್ಕೆ ಪೂರಕ ವಾಗುವ ಧಾರ್ಮಿಕ ರಾಜ್ಯಾಂಗವಾಗುತ್ತದೆ ಈ 'ಶ್ರೀರಾಮಕೃಷ್ಣ ವಚನವೇದ'!

ಸುಮಾರು ಇಪ್ಪತ್ತೇಳು ಸಂವತ್ಸರಗಳ ಹಿಂದೆ ಮಾಸ್ಟರ್ ಮಹಾ ಶಯನನ್ನು ಆತನ ಕಲಿಕತ್ತೆಯ ಮನೆಯಲ್ಲಿ, ಸಾಯಂ ಸಮಯದಲ್ಲಿ, ಉತ್ತುಂಗ ಮಹಾಸೌಧದ ಉನ್ನತ ತಾರಸಿಯ ಮೇಲೆ, ಆಕಾಶದ ಕೊಡೆಯಡಿಯಲ್ಲಿ, ಸ್ವಾಮಿ ಸಿದ್ಧೇಶ್ವರಾನಂದರೊಡಗೂಡಿ ಹೋಗಿದ್ದ ಈ ಲೇಖಕ ಸಂದರ್ಶಿಸುವ ಯೋಗವೊದಗಿತ್ತು. ಶ್ರೀರಾಮಕೃಷ್ಣರ ವಿಚಾರ ವಾಗಿ ಈ ಲೇಖಕ ಬರೆದಿದ್ದ ಕನ್ನಡ ಕವನವೊಂದನ್ನು ಹಾಡಿಸಿ ಕೇಳಿ 'ಮ' ತುಂಬ ಆನಂದಿತರಾಗಿ ಅದನ್ನು ಯಾರ ಕೈಯಲ್ಲಾದರೂ ಬಂಗಾಳಿಗೆ ಪರಿವರ್ತಿಸಿ ಕಳುಹಿಸುವಂತೆ ಅತ್ಯಂತ ವಿಶ್ವಾಸಪೂರ್ವಕವಾಗಿ ಕೇಳಿ ಕೊಂಡಿದ್ದರು; ಲೇಖಕನೂ ಒಪ್ಪಿದ್ದ. ಆದರೆ ಬಹುಶಃ ಆಲಸ್ಯವೆ ಕಾರಣ ವಾಗಿ ಎರಡು ಮೂರು ವರ್ಷಗಳಾದರೂ ಅದನ್ನು ಭಾಷಾಂತರಿಸಿ ಕಳುಹಿ ಸಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ 'ಮ' ಹೋದವರು ಹಿಂತಿರುಗದ ಧಾಮಕ್ಕೆ ಪ್ರಯಾಣಮಾಡಿಬಿಟ್ಟರು. ಆ ವಚನಋಣವನ್ನು ಇಂದು ಈ ರೀತಿಯಿಂದಾದರೂ ತೀರಿಸುತ್ತೇನೆ. ಆ ಸ್ತೋತ್ರಕವನವನ್ನು ಅವರ 'ಕಥಾಮೃತ' ದ ಕನ್ನಡ ಭಾಷಾಂತರಕ್ಕೆ ನಾಂದಿಯಾಗಿ ಹಾಡಿ ಸಮರ್ಪಿ ಸುತ್ತೇನೆ. 'ವಚನವೇದ' ವನ್ನು ನಮಗಿತ್ತ ಸರ್ವಧರ್ಮ ಸಮನ್ವಯಾ ಚಾರ್ಯನ ಸರ್ವೋದಯಕಾರಿಯಾದ ಸಮನ್ವಯಭಾವವೂ ಪೂರ್ಣ ದೃಷ್ಟಿಯೂ ಆ ಸ್ತೋತ್ರದಲ್ಲಿ ಮೂರ್ತಿಮತ್ತಾಗಿ ನಮ್ಮನ್ನು ಶ್ರೇಯಸ್ಸಿಗೆ ನಡಸಲಿ :

ಭರತಖಂಡದ ನೀಲಗಗನವ ತಿಮಿರ ಮುಸುಗಿರಲು,
ಭಾರತೀಯರು ತಮ್ಮ ಧ್ಯೇಯವ ಮರೆತು ಮಲಗಿರಲು,
ಪರಮಹಂಸನೆ, ಉದಯ ಸೂರ್ಯನ ತೆರದಿ ರಂಜಿಸಿದೆ;
ಹೃದಯ ನಭದಜ್ಞಾನ ತಿಮಿರವನಿರದೆ ಭಂಜಿಸಿದೆ.

ಸರ್ವಮಾರ್ಗಗಳೊಂದೆ ನಿಲಯಕೆ ಪೋಪುವೆಂಬುದನು
ಯೋಗವಿದ್ಯೆಯೊಳರಿತು ಮಾನವಕುಲಕೆ ಬೋಧಿಸಿದೆ;
ಕ್ರೈಸ್ತ ಹಿಂದೂ ಮಹಮದೀಯರೆ ಬೌದ್ಧ ಮೊದಲಾದ
ಮತಗಳಾತ್ಮವದೊಂದೆ ಎಂಬುದ ತಿಳುಹಿ ಪಾಲಿಸಿದೆ.

ಮಾಯ ತಿಮಿರದಿ ಮಾರ್ಗ ಕಾಣದೆ ಗೋಳಿಡುತಲಿಹರ
ಅಭಯದೀಪವ ಹಿಡಿದು ದಾರಿಯ ತೋರಿ ರಕ್ಷಿಸಿದೆ;
ಘೋರಸಂಸಾರಾಂಬುನಿಧಿಯೊಳು ಮುಳುಗಿ ತೇಲುವರ
ಅಮೃತನಾವೆಯ ತಂದು ವೇಲೆಯನಿರದೆ ಸೇರಿಸಿದೆ.

ಶಿರವ ನಾಕದೊಳಿರಿಸಿ ಚರಣಗಳೆರಡ ಭೂತಳದಿ
ಗುರು ಹಿಮಾಚಲದಂತೆ ನಿಂತಿಹೆ, ಶಾಂತಿಯಾಶ್ರಯನೆ.
ಹೃದಯ ನಿನ್ನದು ಮೇರೆಯಿಲ್ಲದ ರುಂದ್ರವಾರಿನಿಧಿ:
ಚಲಿತ ಮತಗಳ ಚಂದ್ರನಾವೆಗಳಲ್ಲಿ ತೇಲುತಿವೆ!

ಕ್ರಿಸ್ತ ಮಹಮದ ರಾಮ ಕೃಷ್ಣ ಜ಼ೊರಾಸ್ತ ಗೌತಮರು
ದಿವ್ಯ ವೇದ ಕೊರಾನು ಬೈಬಲು ತಲ್ಮಡಾದಿಗಳು
ಗುಡಿಯು ಚರ್ಚು ಮಸೀದಿ ಆಶ್ರಮ ಅಗ್ನಿಪೂಜೆಗಳು
ಕಾಶಿ ಮಕ್ಕಗಳೆಲ್ಲ ನಿನ್ನೊಳಗೈಕ್ಯವಾ ‘ಗಿಹವು’!

ದಕ್ಷಿಣೇಶ್ವರ ದೇವನಿಲಯದ ಪರಮಯೋಗೀಂದ್ರ,
ಶ್ರೀ ವಿವೇಕಾನಂದ ಪೂಜಿತನಾತ್ಮ ಭಾವಿತನೆ,
ಲೋಕಜೀವರಿಗಾತ್ಮಶಕ್ತಿಯ ನೀಡಿ ಕಾಪಾಡು;
ನೆನೆವರೆಲ್ಲರ ಹೃದಯವಾಗಲಿ ನಿನ್ನ ನೆಲೆವೀಡು!

ಮೈಸೂರು
ಗಣೇಶ ಚತುರ್ಥಿ
೮-೯-೧೯೩೭

— ಕುವೆಂಪು.



Sri Ramakrishna in Samadhi

ಶ್ರೀ ರಾಮಕೃಷ್ಣರು ಸಮಾಧಿಯಲ್ಲಿ

# ಶ್ರೀ ರಾಮಕೃಷ್ಣ ವಚನವೇದ

## ೧

## ಗುರು – ಶಿಷ್ಯ

ಮಾರ್ಚ್, ೧೮೮೨.

ಶ್ರೀ ರಾಮಕೃಷ್ಣಪರಮಹಂಸರು ದಕ್ಷಿಣೇಶ್ವರದಲ್ಲಿ ಗಂಗೆಯ ದಡದಲ್ಲಿರುವ ಕಾಳೀದೇವಾಲಯದಲ್ಲಿ ವಾಸವಾಗಿದಾರೆ. ಮಾಸ್ಟರ್ ಮಹಾಶಯನಿಗೆ ಪರಮಹಂಸರ ಪ್ರಥಮ ದರ್ಶನ ದೊರೆತುದು ವಸಂತ ಋತುವಿನ ಒಂದು ಭಾನುವಾರ. ಅವರ ಜನ್ಮೋತ್ಸವ ನಡೆದು ಆಗತಾನೆ ಕೆಲವು ದಿನಗಳಾಗಿದ್ದುವು.

ಭಾನುವಾರ ರಜಾದಿನವಾದ್ದರಿಂದ ಮಾಸ್ಟರ್ ತನ್ನ ಸ್ನೇಹಿತ ಸಿಧುವಿನೊಡನೆ ವರಾಹನಗರದಲ್ಲಿನ ಉದ್ಯಾನವನಗಳಲ್ಲಿ ಸುತ್ತಾಡಿಬರಲು ಬಂದಿದಾನೆ. ಪ್ರಸನ್ನ ವಂದ್ಯೋಪಾಧ್ಯಾಯನ ಉದ್ಯಾನವನದಲ್ಲಿ ಅಡ್ಡಾಡುತ್ತಿರುವಾಗ ಸಿಧು ಮಾಸ್ಟರನ್ನು ಕೇಳಿದ: "ಗಂಗಾ ತೀರದಲ್ಲಿ ಬಹಳ ಮನೋಹರವಾದ ಒಂದು ಉದ್ಯಾನವನವಿದೆ. ಅಲ್ಲಿ ಪರಮಹಂಸರೊಬ್ಬರು ವಾಸವಾಗಿದಾರೆ. ಅಲ್ಲಿಗೆ ಹೋಗೋಣವೆ?" ಮಾಸ್ಟರ್ ಅದಕ್ಕೆ ಒಪ್ಪಿ ಇಬ್ಬರೂ ದಕ್ಷಿಣೇಶ್ವರ ಕಾಳೀದೇವಾಲಯದ ಕಡೆ ಮುಂದುವರಿಯಲಾರಂಭಿಸಿದರು. ಹೆಬ್ಬಾಗಿಲ ಹತ್ತಿರ ಬರುವುದರೊಳಗೆಯೇ ಮುಂಗತ್ತಲು ಕಾಲಿಕ್ಕಲಾರಂಭಿಸಿತು. ಅವರು ನೇರವಾಗಿ ಪರಮಹಂಸರ ಕೊಠಡಿಗೇ ಮುಂದುವರಿದು ನೋಡುತ್ತಾರೆ, ಪರಮಹಂಸರು ಪೂರ್ವಾಭಿಮುಖವಾಗಿ ಒಂದು ಮಂಚದ ಮೇಲೆ ಕುಳಿತು ಪ್ರಸನ್ನಚಿತ್ತದಿಂದ ಭಗವದ್ವಿಷಯವಾಗಿ ಮಾತನಾಡುತ್ತಿದಾರೆ. ಕೊಠಡಿ ಜನರಿಂದ ಕಿಕ್ಕಿರಿದು ತುಂಬಿದೆ. ಎಲ್ಲರೂ ನೆಲದ ಮೇಲೆ ಕುಳಿತು ಅವರ ಅಮೃತಮಯ ವಾಣಿಯನ್ನು ಸ್ತಬ್ಧರಾಗಿ ಕೇಳುತ್ತಿದಾರೆ.

ಮಾಸ್ಟರ್ ಮಂತ್ರಮುಗ್ಧನಾಗಿ ಸುಮ್ಮನೆ ನಿಂತು ನೋಡಲಾರಂಭಿಸಿದ. ಆತನಿಗೆ ತೋರಿತು, ಸಾಕ್ಷಾತ್ ಶುಕದೇವನೇ ಭಗವದ್ವಿಷಯವಾಗಿ ಅಲ್ಲಿ ಮಾತನಾಡುತ್ತಿರುವ ಹಾಗೆ, ಸರ್ವ ತೀರ್ಥಗಳೂ ಅಲ್ಲಿ ಸಮಾಗಮವಾಗಿರುವ ಹಾಗೆ, ಸಾಕ್ಷಾತ್ ಚೈತನ್ಯದೇವನೇ ಜಗನ್ನಾಥ-ಪುರಿ ಕ್ಷೇತ್ರದಲ್ಲಿ

ಕುಳಿತು ರಾಮಾನಂದ, ಸ್ವರೂಪ ಇವರೇ ಮೊದಲಾದ ಭಕ್ತರೊಡನೆ ಭಗವಂತನ ನಾಮಗುಣಕೀರ್ತನೆ ಮಾಡುತ್ತಿರುವ ಹಾಗೆ.

ಶ್ರೀ ರಾಮಕೃಷ್ಣರು ಹೇಳುತ್ತಿದಾರೆ: "ಯಾವಾಗ ನಿಮಗೆ ಹರಿನಾಮವನ್ನೊ, ರಾಮನಾಮವನ್ನೊ ಒಮ್ಮೆ ಉಚ್ಚರಿಸಿದ ಮಾತ್ರದಿಂದಲೇ ರೋಮಾಂಚವಾಗುವುದೊ, ಪ್ರೇಮಾಶ್ರು ಸುರಿಯುವುದೊ, ಆಗ ಸುನಿಶ್ಚಿತವಾಗಿ ತಿಳಿದುಕೊಳ್ಳಿ, ಇನ್ನು ನೀವು ಸಂಧ್ಯಾದಿ ಕರ್ಮಗಳನ್ನು ಮಾಡಬೇಕಾಗಿಲ್ಲ ಎಂಬುದಾಗಿ. ಆಗ ಮಾತ್ರವೇ ನಿಮಗೆ ಕರ್ಮತ್ಯಾಗದ ಅಧಿಕಾರ— ಕರ್ಮ ತನಗೆ ತಾನೇ ನಿಮ್ಮನ್ನು ಬಿಟ್ಟು ತೊಲಗಿಹೋಗುತ್ತದೆ. ಆಗ ಕೇವಲ ರಾಮನಾಮವನ್ನೊ, ಹರಿನಾಮವನ್ನೊ ಅಥವಾ ಬರೀ ಓಂಕಾರವನ್ನೊ ಜಪಿಸಿದರೇ ಸಾಕು." ಮತ್ತೆ ಹೇಳುತ್ತಿದಾರೆ: "ಸಂಧ್ಯೆ ಗಾಯತ್ರಿಯಲ್ಲಿ ಲಯಹೊಂದುತ್ತದೆ, ಗಾಯತ್ರಿ ಓಂಕಾರದಲ್ಲಿ ಲಯಹೊಂದುತ್ತದೆ."

ಮಾಸ್ಟರ್ ಹಾಗೇ ಸುತ್ತಲೂ ನೋಡುತ್ತ ನೋಡುತ್ತ ತನಗೆ ತಾನೆ ಹೇಳಿಕೊಳ್ಳುತ್ತಿದಾನೆ: "ಎಂಥ ರಮ್ಯವಾದ ಸ್ಥಳ ಇದು! ಎಂಥ ಮೋಹಕ ವ್ಯಕ್ತಿ ಇವರು! ಎಂಥ ಅಮೃತೋಪಮ ಮಾತುಗಳು ಇವರ ಬಾಯಿಂದ. ಈ ಸ್ಥಳವನ್ನು ಬಿಟ್ಟು ಕದಲಲೇ ಮನಸ್ಸಾಗುತ್ತಿಲ್ಲವಲ್ಲ!" ಕೆಲವು ನಿಮಿಷಗಳಾದನಂತರ ಆತನಿಗೆ ಯೋಚನೆ ಬಂತು: "ಮೊದಲು ನಾನೆಲ್ಲಿಗೆ ಬಂದಿದೇನೆ ಎಂಬುದನ್ನು ನೋಡಿಕೊಂಡು ಬಂದು, ಅನಂತರ ಇಲ್ಲಿಗೇ ಬಂದು ಕುಳಿತುಕೊಳ್ಳುತ್ತೇನೆ."

ಸಿಧುವಿನೊಡಗೂಡಿ ಮಾಸ್ಟರ್ ಕೊಠಡಿಯಿಂದ ಹೊರಕ್ಕೆ ಬಂದನೊ ಇಲ್ಲವೊ ಎನ್ನುವಷ್ಟರಲ್ಲೇ ಶಂಖ, ಗಂಟೆ, ಜಾಗಟೆ, ತಾಳ, ನಗಾರಿ ಇವುಗಳಿಂದ ಹೊರಹೊಮ್ಮುತ್ತಿದ್ದ ಸಾಯಂ ಮಂಗಳಾರತಿಯ ಮಧುರ ನಿನಾದ ದೇವಾಲಯದಿಂದ ಕೇಳಿಬರಲಾರಂಭಿಸಿತು. ದಕ್ಷಿಣ ಅಂಚಿನಲ್ಲಿದ್ದ ನಹಬತ್ ಖಾನೆಯಿಂದಲೂ ಇಂಪಾದ ವಾದ್ಯಘೋಷ ಹೊಮ್ಮಿ ಬರಲಾರಂಭಿಸಿತು. ಆ ಶಬ್ದತರಂಗಗಳೆಲ್ಲಾ ಭಾಗೀರಥಿಯ ವಕ್ಷಸ್ಥಳದ ಮೇಲೆ ತೇಲಿ ತೇಲಿ ಮುಂದುವರಿದು ಕೊನೆಗೆ ಎಲ್ಲೊ ಬಹುದೂರದಲ್ಲಿ ಶೂನ್ಯದಲ್ಲಿ ಲಯವಾಗುವಂತೆ ತೋರಿಬರಲಾರಂಭಿಸಿದುವು. ಕುಸುಮಗಳ ಸುವಾಸನೆಯನ್ನು ಹೊತ್ತಿರುವ ವಸಂತ ಋತುವಿನ ಮಂದಮಾರುತ ಬೀಸಲಾರಂಭಿಸಿತು. ಚಂದ್ರ ಆಗತಾನೆ ಉದಯವಾಗಲಾರಂಭಿಸಿದ. ಪ್ರಕೃತಿ, ಮನುಷ್ಯ ಇಬ್ಬರೂ

ಸಹಕರಿಸಿ ಭಗವಂತನ ಸಾಯಂ ಮಂಗಳಾರತಿಗೆ ಸನ್ನದ್ಧರಾಗುತ್ತಿರುವಂತೆ ತೋರಿಬರಲಾರಂಭಿಸಿತು. ದ್ವಾದಶ ಶಿವ ದೇವಾಲಯಗಳಲ್ಲೂ, ರಾಧಾ ಕಾಂತ ದೇವಾಲಯದಲ್ಲೂ, ಭವತಾರಿಣೀ ದೇವಾಲಯದಲ್ಲೂ ನಡೆದ ಮಂಗಳಾರತಿಗಳನ್ನು ನೋಡಿ ಮಾಸ್ಟರಿಗೆ ಪರಮಾನಂದವಾಗಿಬಿಟ್ಟಿತು.

ಅವರಿಬ್ಬರೂ ಪರಮಹಂಸರ ಕೊಠಡಿಯ ಕಡೆ ಬರುತ್ತಿದ್ದಾಗ ಸಿಧು ಮಾಸ್ಟರಿಗೆ ಹೇಳಿದ: "ರಾಣಿ ರಾಸಮಣಿಯ ದೇವಾಲಯ ಎಂಬುದು ಇದೇ. ಇಲ್ಲಿ ನಿತ್ಯಪೂಜೆ ನಡೆಯುತ್ತಿದೆ; ಅನೇಕ ಅತಿಥಿಗಳ, ಭಿಕ್ಷುಕರ ಸೇವೆ ನಡೆಯುತ್ತಿದೆ." ಪರಮಹಂಸರ ಕೊಠಡಿಯ ಹತ್ತಿರ ಬಂದು ನೋಡುತ್ತಾರೆ ಬಾಗಿಲು ಮುಚ್ಚಿದೆ. ಈಗತಾನೆ ಧೂಪ ಹಾಕಿದಂತಿದೆ. ಬೃಂದೆ ಎಂಬ ಸೇವಕಿ ಬಾಗಿಲ ಹತ್ತಿರ ನಿಂತಿದಾಳೆ. ಒಳ್ಳೆ ಮನೆತನದವನಾದ ಮಾಸ್ಟರ್ ಏಕಾಏಕೀ ಕೊಠಡಿಯನ್ನು ಪ್ರವೇಶಿಸಲು ಹಿಂಜರಿದು ಬೃಂದೆಯನ್ನು ಕೇಳಿದ: "ಸಾಧುಗಳು ಒಳಗಿರುವರೆ?"

ಬೃಂದೆ ಹೇಳಿದಳು: "ಹೌದು, ಒಳಗಿದಾರೆ."

ಮಾಸ್ಟರ್: "ಇವರು ಇಲ್ಲಿ ಎಷ್ಟು ಕಾಲದಿಂದ ಇದಾರೆ?"

ಬೃಂದೆ: "ಬಹಳ ಕಾಲದಿಂದ."

ಮಾಸ್ಟರ್: "ಒಳ್ಳೇದು, ಇವರೇನು ಬಹಳವಾಗಿ ಪುಸ್ತಕ–ಗಿಸ್ತಕ ಓದುತ್ತಾರೊ?"

ಬೃಂದೆ: "ಪುಸ್ತಕ–ಗಿಸ್ತಕಗಳೆ! ಎಲ್ಲಾ ಇವರ ಬಾಯಲ್ಲೆ."

ಮಾಸ್ಟರ್ ಆಗತಾನೆ ತನ್ನ ವಿಶ್ವವಿದ್ಯಾನಿಲಯದ ವ್ಯಾಸಂಗ ಮುಗಿಸಿ ಬಂದಿದ್ದ. ಪರಮಹಂಸರು ಪುಸ್ತಕ-ಗಿಸ್ತಕ ಏನೂ ಓದೋದಿಲ್ಲ ಎಂಬುದನ್ನು ಕೇಳಿ ಬಹಳವಾಗಿ ಆಶ್ಚರ್ಯಪಟ್ಟ.

ಮಾಸ್ಟರ್: "ಬಹುಶಃ ಈಗ ಇವರು ಸಾಯಂ ಜಪತಪಾದಿಗಳಲ್ಲಿ ತೊಡಗಿರಬಹುದು. ನಾವು ಈಗ ಒಳಕ್ಕೆ ಹೋಗಬಹುದೆ? ದಯವಿಟ್ಟು ಸಮಾಚಾರ ತಿಳಿಸಿಬರ್ತೀಯ?"

ಬೃಂದೆ: "ನೀವು ಒಳಕ್ಕೆ ಹೋಗಿ. ಹೋಗಿ ಒಂದು ಕಡೆ ಕುಳಿತು ಕೊಳ್ಳಿ."

ಆಗ ಅವರು ಕೊಠಡಿಯನ್ನು ಪ್ರವೇಶಿಸಿ ನೋಡುತ್ತಾರೆ, ಅಲ್ಲಿ ಬೇರೆ ಯಾರೂ ಇಲ್ಲ. ಪರಮಹಂಸರೊಬ್ಬರೆ ಮಂಚದ ಮೇಲೆ ಕುಳಿತುಕೊಂಡಿದಾರೆ. ಕೊಠಡಿಗೆ ಧೂಪ ಹಾಕಿದೆ. ಕಿಟಕಿ ಬಾಗಿಲುಗಳೆಲ್ಲ ಮುಚ್ಚಿವೆ.

ಕೊಠಡಿಯನ್ನು ಪ್ರವೇಶಿಸಿದೊಡನೆಯೇ ಮಾಸ್ಟರ್ ಅವರಿಗೆ ಪ್ರಣಾಮ ಮಾಡಿದ. ಅವರ ಸೌಜನ್ಯಾನುಸಾರ ಮಾಸ್ಟರ್ ಮತ್ತು ಸಿಧು ನೆಲದ ಮೇಲೆ ಕುಳಿತುಕೊಳ್ಳುತ್ತಿದ್ದಾರೆ. ಪರಮಹಂಸರು ಅವರನ್ನು ಕೇಳುತ್ತಿದ್ದಾರೆ: "ಎಲ್ಲಿದ್ದೀರಿ? ಏನು ಕೆಲಸ? ವರಾಹನಗರಕ್ಕೆ ಬಂದ ಉದ್ದೇಶ ವೇನು?" ಇತ್ಯಾದಿ. ಮಾಸ್ಟರ್ ಅವಕ್ಕೆಲ್ಲಾ ಉತ್ತರವೀಯಲಾರಂಭಿಸಿದ. ಆದರೆ ಆಗಾಗ ಪರಮಹಂಸರು ಅನ್ಯಮನಸ್ಕರಾಗುತ್ತಿದ್ದುದು ಆತನ ಅರಿವಿಗೆ ಬಂತು. ಅದಕ್ಕೇ "ಭಾವ" ಅಂತ ಹೆಸರು ಎಂಬುದನ್ನು ಕ್ರಮೇಣ ಆತ ಅರಿತುಕೊಂಡ. ಅದು ಗಾಳ ಹಾಕಿ ಮೀನು ಹಿಡಿಯಲು ಕುಳಿತಿರುವವನ ಮಾನಸಿಕ ಅವಸ್ಥೆಯ ಹಾಗೆ: ಮೀನು ಎರೆ ತಿನ್ನಲು ಆರಂಭಿಸಿದಾಗ ಬೆಂಡು ಅಲುಗಲು ಆರಂಭಿಸುತ್ತದೆ; ಮೀನು ಹಿಡಿಯುವವ ಬಹಳ ಎಚ್ಚರಿಕೆಯಿಂದ ಗಾಳದ ಕಡ್ಡಿಯನ್ನು ಬಲವಾಗಿ ಹಿಡಿದು ಆ ಬೆಂಡಿನ ಕಡೆಗೇ ಏಕಾಗ್ರಚಿತ್ತನಾಗಿ ನೋಡತೊಡಗುತ್ತಾನೆ; ಆಗ ಆತ ಬೇರೆ ಯಾರೊಡನೆಯೂ ಮಾತನಾಡಲೊಲ್ಲ. ಪರಮಹಂಸರದೂ ಅದೇ ತರದ ಮಾನಸಿಕ ಅವಸ್ಥೆ. ಅವರಿಗೆ ಮುಚ್ಚಂಜೆಯಾದ ಮೇಲೆ ಪ್ರಾಯಶಃ ಈ ವಿಧವಾದ ಅವಸ್ಥೆ ಬರುತ್ತದೆ ಮತ್ತು ಒಮ್ಮೊಮ್ಮೆ ಅವರು ಸಂಪೂರ್ಣ ಬಾಹ್ಯಜ್ಞಾನ ಶೂನ್ಯರಾಗಿಬಿಡುತ್ತಾರೆ ಎಂಬುದನ್ನು ಕ್ರಮೇಣ ಕೇಳಿ ತಿಳಿದುಕೊಂಡುದೂ ಅಲ್ಲದೆ ತಾನೂ ಪ್ರತ್ಯಕ್ಷ ನೋಡಿಯೂ ನೋಡಿದ.

ಮಾಸ್ಟರ್: "ಬಹುಶಃ ಈಗ ನೀವು ಸಾಯಂ ಸಂಧ್ಯಾವಂದನಾದಿಗಳಲ್ಲಿ ತೊಡಗಬೇಕಾಗಿರಬಹುದು. ನಾವು ಹೋಗಿಬರಲು ಅನುಮತಿಯೆ?"

ಶ್ರೀರಾಮಕೃಷ್ಣರು ಭಾವಸ್ಥರಾಗಿಯೆ: "ಸಂಧ್ಯಾವಂದನೆಯೆ? ಇಲ್ಲ, ಅಂಥದೇನಿಲ್ಲ."

ಹಾಗೇ ಇನ್ನೂ ಸ್ವಲ್ಪ ಹೊತ್ತು ಮಾತುಕತೆಗಳಾಡಿದನಂತರ ಮಾಸ್ಟರ್ ಅವರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಪರಮಹಂಸರು ಹೇಳುತ್ತಿದ್ದಾರೆ: "ಮತ್ತೆ ಬನ್ನಿ" ಎಂದು.

ಮಾಸ್ಟರ್ ಹಿಂದಿರುಗುವಾಗ ಆಲೋಚಿಸಲಾರಂಭಿಸಿದ: "ಯಾರನ್ನು ಮತ್ತೆ ಹೋಗಿ ನೋಡಬೇಕೆಂಬ ಇಚ್ಛೆಯಾಗುತ್ತಿರುವುದೊ ಅಂಥ ಈ ಸೌಮ್ಯರು ಯಾರು? ಪುಸ್ತಕ-ಗಿಸ್ತಕ ಓದದೆ ಮನುಷ್ಯ ದೊಡ್ಡವನಾಗ ಬಲ್ಲನೆ? ಏನಾಶ್ಚರ್ಯ, ಇವರನ್ನು ಮತ್ತೆ ನೋಡಬೇಕು ಅಂತ ಅನ್ನಿ

ಸುತ್ತಾ ಇದೆಯಲ್ಲ! ಇವರೂ ಹೇಳಿದಾರೆ: 'ಮತ್ತೆ ಬನ್ನಿ' ಎಂದು. ನಾಳೆಯೊ, ನಾಳಿದ್ದೊ ಬೆಳಗ್ಗೆಯೇ ಬಂದುಬಿಡುತ್ತೇನೆ."

ಮಾಸ್ಟರಿಗೆ ಪರಮಹಂಸರ ದ್ವಿತೀಯ ದರ್ಶನ ದೊರೆತುದು ಅವರ ಕೊಠಡಿಯ ಆಗ್ನೇಯ ಜಗಲಿ ಮೇಲೆ, ಸುಮಾರು ಬೆಳಗಿನ ಎಂಟು ಘಂಟೆ ಸಮಯದಲ್ಲಿ. ಕ್ಷೌರಿಕ ಆಗತಾನೆ ಬಂದಿದಾನೆ. ಕ್ಷೌರ ಮಾಡಿಸಿಕೊಳ್ಳಲು ಹೋಗುತ್ತಿದಾರೆ. ಇನ್ನೂ ಚಳಿಗಾಲವಾಗಿದ್ದುದರಿಂದ ಒಂದು ವಿಧದ ಮಖಮಲ್ಲಿನ ಶಾಲು ಹೊದ್ದುಕೊಂಡಿದಾರೆ. ಅದಕ್ಕೆ ಕೆಂಪು ಅಂಚು ಹಾಕಿದೆ. ಮಾಸ್ಟರನ್ನು ನೋಡಿ ಹೇಳುತ್ತಿದಾರೆ: "ಬಂದೆಯಾ? ಒಳ್ಳೇದು, ಇಲ್ಲೆ ಕುಳಿತುಕೊ." ಅವರು ನಗುಮುಖರಾಗಿದಾರೆ. ಮಾತ ನಾಡುವಾಗ ಸ್ವಲ್ಪ ಬಿಕ್ಕಳಿಸುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿನ್ನ ಮನೆ ಎಲ್ಲಿ?"

ಮಾಸ್ಟರ್: "ಕಲ್ಕತ್ತದಲ್ಲಿ."

ಶ್ರೀರಾಮಕೃಷ್ಣರು: "ಇಲ್ಲಿ ಯಾರ ಮನೆಗೆ ಬಂದಿದೀಯೆ?"

ಮಾಸ್ಟರ್: "ಹಿರಿಯಕ್ಕನ–ಈಶಾನ ಕವಿರಾಜನ–ಮನೆಗೆ."

ಶ್ರೀರಾಮಕೃಷ್ಣರು: "ಓಹೋ, ಈಶಾನನ ಮನೆಗೊ? ಒಳ್ಳೇದು, ಈಗ ಕೇಶವಸೇನನಿಗೆ ಹೇಗಿದೆ? ಆತನಿಗೆ ಬಹಳ ಕಾಯಿಲೆ ಆಗಿಬಿಟ್ಟಿತ್ತು."

ಮಾಸ್ಟರ್: "ನಾನೂ ಹಾಗೇ ಕೇಳಿದ್ದೆ, ಆದರೆ ಇಷ್ಟರಲ್ಲಿ ಗುಣ ವಾಗಿರಬೇಕು."

ಶ್ರೀರಾಮಕೃಷ್ಣರು: "ಕೇಶವನಿಗೆ ಗುಣವಾದರೆ ಭಗವತಿಗೆ ಎಳನೀರು ಸಕ್ಕರೆ ಅರ್ಪಿಸುವುದಾಗಿ ಹರಕೆ ಹೊತ್ತಿದೇನೆ. ಬೆಳಗಿನ ಜಾವ ಎಚ್ಚರವಾಗಿಬಿಡುತ್ತದೆ. ಆಗ ಎದ್ದು ಭಗವತಿಯ ಹತ್ತಿರ ಅಳುತ್ತಾ ಮೊರೆಯಿಡುತ್ತೇನೆ: 'ಹೇ ತಾಯಿ, ಕೇಶವನಿಗೆ ಗುಣವಾಗುವಂತೆ ಮಾಡಿಬಿಡು. ಆತ ಬದುಕಿಕೊಳ್ಳದೆಹೋದರೆ ಕಲ್ಕತ್ತಕ್ಕೆ ಹೋದಾಗ ಅಲ್ಲಿ ನಾನು ಇನ್ನು ಬೇರೆ ಯಾರ ಸಂಗಡ ಮಾತಾಡಲಿ?' ಅದಕ್ಕಾಗೇ ಎಳನೀರು ಸಕ್ಕರೆಯ ಹರಕೆ ಹೊತ್ತಿರುವುದು.

"ಒಳ್ಳೇದು, ಯಾರೊ ಒಬ್ಬ 'ಕುಕ್‌ಸಾಹೇಬ' ಅಂತ ಬಂದಿದಾನಂತಲ್ಲ, ನಿಜವೆ? ಆತ ಉಪನ್ಯಾಸ-ಗಿಪನ್ಯಾಸ ಕೊಡುತ್ತಾ ಇದಾನೇನು? ಒಮ್ಮೆ ಕೇಶವ ನನ್ನನ್ನು ಜಹಜಿನಲ್ಲಿ ಕರೆದುಕೊಂಡುಹೋಗಿದ್ದ. ಅದರಲ್ಲಿ ಆತನೂ ಇದ್ದ."

ಮಾಸ್ಟರ್: "ಹೌದು, ನಾನೂ ಹಾಗೇ ಕೇಳಿದೇನೆ, ಆದರೆ ಮಾತ್ರ ನಾನು ಹೋಗಿ ಆತನ ಉಪನ್ಯಾಸ ಕೇಳಿಲ್ಲ. ಆತನ ವಿಷಯವಾಗಿ ಹೆಚ್ಚಾಗಿ ಏನೂ ಗೊತ್ತಿಲ್ಲ."

ಶ್ರೀರಾಮಕೃಷ್ಣರು: "ಪ್ರತಾಪನ ಸೋದರ ಇಲ್ಲಿಗೆ ಬಂದಿದ್ದ. ಕೆಲವು ದಿನ ಇದ್ದ. ಕೆಲಸವೂ ಇಲ್ಲ, ಕಾರ್ಯವೂ ಇಲ್ಲ. ಹೇಳಿದ, ಇಲ್ಲಿ ಸುಮ್ಮನೆ ಇದ್ದುಬಿಡುತ್ತೇನೆ ಅಂತ. ಹೆಂಡತಿ ಮಕ್ಕಳನ್ನೆಲ್ಲ ಮಾವನ ಮನೆಗೆ ಅಟ್ಟಬಿಟ್ಟಿರುವುದಾಗಿ ತಿಳಿದುಬಂತು. ಅನೇಕ ಮಕ್ಕಳು ಮರಿ. ತರಾಟೆಗೆ ತೆಗೆದುಕೊಂಡೆ. ಹಾಗೇ ನೋಡು ಇದನ್ನ! ಮಕ್ಕಳು ಮರಿ ಆಗಿಬಿಟ್ಟಿವೆ! ನೆರೆಹೊರೆಯ ಜನ ಬಂದು ಅವರನ್ನು ಪೋಷಿಸಿ ಬೆಳಸಿ ಮನುಷ್ಯರನ್ನಾಗಿ ಮಾಡುತ್ತಾರೆಯೇ? ಹೆಂಡತಿ ಮಕ್ಕಳನ್ನು ಮಾವನ ಮನೆಗೆ ಅಟ್ಟಬಿಟ್ಟದೇನಲ್ಲ, ಅವರನ್ನು ಬೇರೊಬ್ಬರು ಸಾಕಿಸಲಹುತ್ತಿದಾರಲ್ಲ ಎಂಬ ನಾಚಿಕೆಯೂ ಆತನಿಗಿರಲಿಲ್ಲ. ಆತನನ್ನು ಚೆನ್ನಾಗಿ ಬೈದು ಹೇಳಿದೆ, ಯಾವುದಾದರು ಒಂದು ಉದ್ಯೋಗಕ್ಕೆ ಸೇರಿಕೊ ಅಂತ. ಆಗ ಮಾತ್ರ ಇಲ್ಲಿಂದ ಹೊರಡಲು ಮನಸ್ಸು ಮಾಡಿದ.

"ನಿನಗೆ ವಿವಾಹವಾಗಿದೆಯೆ?"

ಮಾಸ್ಟರ್: "ಹೌದು, ಆಗಿದೆ."

ಶ್ರೀರಾಮಕೃಷ್ಣರು ಬೆಚ್ಚಿಬಿದ್ದು: "ಓ, ರಾಮಲಾಲ![1] ಹೋಗು, ಈತ ಆಗಲೇ ವಿವಾಹ ಮಾಡಿಕೊಂಡುಬಿಟ್ಟಿದಾನೆ!"

ಮಾಸ್ಟರ್ ಘೋರತರ ಅಪರಾಧಮಾಡಿದವನ ಹಾಗೆ ಸ್ತಬ್ಧನಾಗಿ ತಲೆ ತಗ್ಗಿಸಿ ನೆಲ ದಿಟ್ಟಿಸಿನೋಡುತ್ತಾ ಕುಳಿತಿದಾನೆ. ಯೋಚಿಸುತ್ತಿದಾನೆ: "ವಿವಾಹವಾಗುವುದು ದೊಡ್ಡ ಪಾಪಕೃತ್ಯವೇ?"

ಪರಮಹಂಸರು ಮತ್ತೆ ಕೇಳುತ್ತಿದಾರೆ: "ನಿನಗೆ ಮಕ್ಕಳಾಗಿವೆಯೇ?"

ಮಾಸ್ಟರ ಹೃದಯ 'ಡಬ್, ಡಬ್' ಅನ್ನಲಾರಂಭಿಸಿತು. ಹೆದರಿ ಹೆದರಿ ಹೇಳಿದ: "ಹೌದು, ಆಗಿವೆ."

ಅತ್ಯಂತವಾಗಿ ದುಃಖ ಸೂಚಿಸುತ್ತ ಶ್ರೀರಾಮಕೃಷ್ಣರು: "ಹೋಗು, ಈತನಿಗೆ ಮಕ್ಕಳೂ ಆಗಿಬಿಟ್ಟಿವೆ!"

---

1. ಶ್ರೀರಾಮಕೃಷ್ಣರ ಅಣ್ಣನ ಮಗ. ಕಾಳೀದೇವಾಲಯದಲ್ಲಿ ಅರ್ಚಕನಾಗಿದಾನೆ.

ಈ ರೀತಿಯಾಗಿ ಖಂಡಿಸಲ್ಪಟ್ಟವನಾಗಿ ಮಾಸ್ಟರ್ ಸ್ತಬ್ಧನಾಗಿ ಕುಳಿತಿದ್ದಾನೆ. ಆತನ ಅಹಂಕಾರ ಪುಡಿಪುಡಿಯಾಗಲಾರಂಭಿಸಿತು. ಕೆಲವು ನಿಮಿಷಗಳಾದನಂತರ ಪರಮಹಂಸರು ಆತನ ಕಡೆ ತಮ್ಮ ಕೃಪಾದೃಷ್ಟಿ ಬೀರಿ ಪ್ರೇಮಪೂರಿತ ಹೃದಯದಿಂದ ಹೇಳುತ್ತಿದಾರೆ: "ನೋಡು, ನಿನ್ನಲ್ಲಿ ಒಳ್ಳೆ ಚಿಹ್ನೆಗಳಿವೆ. ಕಣ್ಣು, ಹಣೆ ಮೊದಲಾದುವನ್ನು ನೋಡೇ ಅರಿತು ಕೊಂಡುಬಿಡಬಲ್ಲೆ. ಒಳ್ಳೇದು, ನಿನ್ನ ಹೆಂಡತಿ ಎಂಥವಳು? ವಿದ್ಯಾ ಶಕ್ತಿಯೊ, ಅವಿದ್ಯಾಶಕ್ತಿಯೊ?"

ಮಾಸ್ಟರ್: "ಒಳ್ಳೆಯವಳೇ, ಆದರೆ ಅಜ್ಞೆ."

ಶ್ರೀರಾಮಕೃಷ್ಣರು ಅಸಹನೆಯಿಂದ: "ನೀನು? ಜ್ಞಾನಿ!"

ಜ್ಞಾನವಾವುದು, ಅಜ್ಞಾನವಾವುದು ಎಂಬುದನ್ನು ಮಾಸ್ಟರ್ ಇನ್ನೂ ಅರಿತುಕೊಳ್ಳಬೇಕಾಗಿತ್ತು. ಓದುಬರಹ ಕಲಿತುಕೊಂಡರೆ, ಪುಸ್ತಕ-ಗಿಸ್ತಕ ಓದುವುದಕ್ಕೆ ಬಂದರೆ ಜ್ಞಾನ ದೊರಕುತ್ತದೆ ಎಂಬುದು ಆತನ ಭಾವನೆಯಾಗಿತ್ತು. ಕ್ರಮೇಣ ಆತ ಈ ಭ್ರಮಾತ್ಮಕ ಭಾವನೆಯಿಂದ ಮುಕ್ತನಾದ. ಭಗವಂತನನ್ನು ಅರಿಯುವಿಕೆಯೇ ಜ್ಞಾನ, ಅರಿಯದಿರುವಿಕೆಯೇ ಅಜ್ಞಾನ ಎಂಬುದನ್ನು ಅರಿತುಕೊಂಡ. ಪರಮಹಂಸರು, "ನೀನು? ಜ್ಞಾನಿ!" ಎಂದು ಹೇಳಿದಾಗ ಆತನ ಅಹಂಕಾರಕ್ಕೆ ಬಲವಾದ ಪೆಟ್ಟುಬಿತ್ತು.

ಶ್ರೀರಾಮಕೃಷ್ಣರು: "ಒಳ್ಳೇದು, ನಿನಗೆ ಸಾಕಾರದಲ್ಲಿ ವಿಶ್ವಾಸವೊ, ನಿರಾಕಾರದಲ್ಲಿ ವಿಶ್ವಾಸವೊ?"

ಮಾಸ್ಟರ್ ಆಶ್ಚರ್ಯಚಕಿತನಾಗಿ ತನಗೆ ತಾನೆ: "ಸಾಕಾರದಲ್ಲಿ ವಿಶ್ವಾಸವಿದ್ದುದೇ ಆದರೆ ನಿರಾಕಾರದಲ್ಲಿ ವಿಶ್ವಾಸವುಂಟಾದೀತೇ? ಭಗವಂತ ನಿರಾಕಾರ ಎಂಬ ವಿಶ್ವಾಸವಿರುವುದಾದರೆ, ಆತ ಸಾಕಾರ ಎಂಬ ವಿಶ್ವಾಸವುಂಟಾಗಲೂ ಸಾಧ್ಯವೇ? ವಿರುದ್ಧ ಅವಸ್ಥೆಗಳು, ಎರಡೂ ಸತ್ಯವಾಗಲು ಸಾಧ್ಯವೇ? ಬಿಳಿ ವಸ್ತುವಾದ ಹಾಲು ಕಪ್ಪಾಗಿಯೂ ಇರಬಲ್ಲದೇ?"

ಮಾಸ್ಟರ್: "ನನಗೆ ನಿರಾಕಾರ ಹಿಡಿಸುತ್ತದೆ."

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದೆ. ಒಂದರಲ್ಲಿ ವಿಶ್ವಾಸವಿದ್ದರೆ ಅದೇ ಯಥೇಷ್ಟ. ನಿರಾಕಾರದಲ್ಲಿ ವಿಶ್ವಾಸವೆ; ಬಹಳ ಒಳ್ಳೆಯದು. ಆದರೆ ಎಂದಿಗೂ ಹೀಗೆ ಯೋಚಿಸಬೇಡ, — ಇದೇ ಕೇವಲ ಸತ್ಯ, ಉಳಿದು

ದೆಲ್ಲ ಮಿಥ್ಯಾ ಎಂದು. ತಿಳಿದುಕೊ,—ನಿರಾಕಾರವೂ ಸತ್ಯ, ಸಾಕಾರವೂ ಸತ್ಯ. ಯಾವುದರಲ್ಲಿ ವಿಶ್ವಾಸವೊ ಅದರಲ್ಲಿ ದೃಢಬುದ್ಧಿಯಿಡು.''

ಪರಮಹಂಸರು ಎರಡೂ ಸತ್ಯ ಎಂಬುದಾಗಿ ಒತ್ತಿ ಒತ್ತಿ ಹೇಳಿದ್ದನ್ನು ಕೇಳಿ ಮಾಸ್ಟರ್ ಬಹಳವಾಗಿ ಆಶ್ಚರ್ಯಪಡುತ್ತಿದಾನೆ. ಈ ವಿಷಯವನ್ನ ಆತನ ಪುಸ್ತಕರಾಶಿ ಯಾವುದೂ ತಿಳಿಸಿರಲಿಲ್ಲ. ಆತನ ಅಹಂಕಾರ ಮೂರನೆ ಸಲ ಪುಡಿಪುಡಿಯಾಗಲಾರಂಭಿಸಿತು. ಆದರೆ ಇನ್ನೂ ಸಂಪೂರ್ಣವಾಗಿ ಧ್ವಂಸವಾಗಿರಲಿಲ್ಲ. ಆದ್ದರಿಂದ ಸ್ವಲ್ಪ ತರ್ಕಮಾಡಲು ಮುಂದೆ ಬಂದ.

ಮಾಸ್ಟರ್: ''ಒಂದು ಪಕ್ಷ ಭಗವಂತ, ಸಾಕಾರ, ಅಂತ ಇಟ್ಕೊ ಕೊಳ್ಳೋಣ. ಆದರೆ ಆತ ಮಣ್ಣಿನ ಪ್ರತಿಮೆಯೇನಲ್ಲವಲ್ಲ, ನಿಜವಾ ಗಿಯೂ!''

ಶ್ರೀರಾಮಕೃಷ್ಣರು ಮಧ್ಯೆ ಬಾಯಿ ಹಾಕಿ: ''ಮಣ್ಣಿನದೇಕೆ? ಚಿನ್ಮಯಮೂರ್ತಿ.''

ಮಾಸ್ಟರಿಗೆ ''ಚಿನ್ಮಯಮೂರ್ತಿ'' ಎಂಬುದರ ಸೂಚಿತಾರ್ಥ ಗೊತ್ತಾಗಲಿಲ್ಲ. ಮುಂದುವರಿಸುತ್ತಿದಾನೆ: ''ಒಳ್ಳೇದು, ಯಾರು ಮಣ್ಣಿನ ಪ್ರತಿಮೆಯನ್ನು ಪೂಜಿಸುತ್ತಿದಾರೊ ಅವರಿಗೆ ತಿಳಿಸಿಕೊಡಬೇಕಾಗುತ್ತವೆ ಮಣ್ಣಿನ ಪ್ರತಿಮೆಯೇ ಭಗವಂತನಲ್ಲ, ಅದನ್ನು ಪೂಜಿಸುವಾಗ ಭಗವಂತ ನನ್ನು ಉದ್ದೇಶಿಸಿ ಪೂಜಿಸಬೇಕೇ ವಿನಾ ಅದನ್ನೇ ಅಲ್ಲ. ಮಣ್ಣನ್ನು ಪೂಜಿ ಸುವುದು ಸೂಕ್ತವಲ್ಲ'' ಎಂದು.

ಶ್ರೀರಾಮಕೃಷ್ಣರು ಅಸಹನೆಯಿಂದ: ''ನಿಮ್ಮ ಕಲ್ಕತ್ತದ ಜನರಿ ಗೆಲ್ಲಾ ಇದೊಂದೇ ಪಿತ್ತ—ಕೇವಲ ಲೆಕ್ಚರ್ ಕೊಡೋದು, ಇನ್ನೊಬ್ಬರ ಹೃದಯಕ್ಕೆ ಬೆಳಕು ತರೋದು! ಮೊದಲು ತಮ್ಮ ಹೃದಯಕ್ಕೆ ಯಾವ ರೀತಿ ಬೆಳಕು ತಂದುಕೊಳ್ಳುವುದು ಎಂಬುದರ ಯೋಚನೆಯೇ ಇಲ್ಲ. ಪರರಿಗೆ ತಿಳಿವಳಿಕೆ ಕೊಡಲು ಯಾರು ನೀವು?

''ಈ ಜಗತ್ತು ಯಾರದೊ ಆತ ತಿಳಿವಳಿಕೆ ಕೊಡುತ್ತಾನೆ. ಯಾರು ಈ ಜಗತ್ತನ್ನು ಸೃಷ್ಟಿಸಿದಾನೊ; ಸೂರ್ಯ ಚಂದ್ರ ಮತ್ತು ಮನುಷ್ಯ ಜೀವ ಜಂತು ಇವನ್ನು ನಿರ್ಮಿಸಿದಾನೊ; ಜೀವಜಂತುಗಳ ಆಹಾರಕ್ಕೆ ವ್ಯವಸ್ಥೆ, ಬೆಳೆಗಾಗಿ ಮಳೆ, ಪಾಲನೆಗಾಗಿ ತಾಯಿ ತಂದೆ ಇವರನ್ನು ಸೃಷ್ಟಿಸಿದಾನೊ; ತಾಯಿತಂದೆಗಳಲ್ಲಿ ಪ್ರೀತಿ, ಮಮತೆ ತುಂಬಿದಾನೊ ಆತ ತಿಳಿವಳಿಕೆ ಕೊಡುತ್ತಾನೆ. ಇಷ್ಟೊಂದು ಮಾಡಿರೋನು ಅದೊಂದಷ್ಟು ಮಾಡ

ಲಾರನೇ? ಒಂದು ಪಕ್ಷ ತಿಳಿವಳಿಕೆ ಕೊಡಲಾವಶ್ಯಕತೆಯೇನಾದರೂ ತೋರಿ ಬಂದರೆ ಆತನೇ ಆ ಕಾರ್ಯಕ್ಕೆ ಮುಂದೆ ಬರುತ್ತಾನೆ. ಆತ ನಮ್ಮ ಅಂತರ್ಯಾಮಿ.

"ಒಂದು ಪಕ್ಷ ಮಣ್ಣಿನ ಪ್ರತಿಮೆಯನ್ನು ಪೂಜಿಸುವುದು ಸರಿಯಲ್ಲ ಎಂದು ಇಟ್ಟುಕೊಂಡರೂ, ಅದರ ಮೂಲಕ ತನ್ನ ಪೂಜೆಯೇ ನಡೆಯುತ್ತಿದೆ ಎಂಬುದನ್ನು ಆತ ಅರಿಯನೇ? ಆತ ಆ ವಿಧದ ಪೂಜೆಯಿಂದಲೇ ಸಂತುಷ್ಟನಾಗುತ್ತಾನೆ. ಅದಕ್ಕೇಕೆ ನಿನಗೆ ತಲೆನೋವು? ಮೊದಲು ನಿನಗೇ ಯಾವುದರಿಂದ ಜ್ಞಾನ ಭಕ್ತಿ ದೊರೆಯಬಹುದೋ ಅದಕ್ಕಾಗಿ ಪ್ರಯತ್ನಿಸು."

ಈ ಸಲ ಮಾಸ್ಟರ ಅಹಂಕಾರ ಬಹುಶಃ ಪೂರ್ಣವಾಗಿ ಧ್ವಂಸವಾಗಿ ಹೋಗಿರಬೇಕು. ಯೋಚಿಸಲಾರಂಭಿಸಿದ: "ನಿಜ. ಇವರು ಹೇಳುತ್ತಿರುವುದು ಸತ್ಯ. ತಿಳಿವಳಿಕೆ ಕೊಡಲು ಹೋಗುವ ಆವಶ್ಯಕತೆಯಾದರೂ ಏನಿದೆ? ನಾನು ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡಿದೇನೆಯೆ? ನನಗೆ ಆತನ ಪಾದಪದ್ಮಗಳಲ್ಲಿ ಭಕ್ತಿ ಉಂಟಾಗಿದೆಯೆ? 'ತನಗೇ ಮಲಗಲು ಸ್ಥಳವಿಲ್ಲ; ಶಂಕರನ್ನ ಬೇರೆ ಕರೆಯೋದು!' ನನಗೇ ಏನೆಂದರೆ ಏನೂ ಭಗವಂತನ ವಿಷಯವಾಗಿ ಗೊತ್ತಿಲ್ಲ, ಆದರೂ ಪರರಿಗೆ ತಿಳಿವಳಿಕೆ ಕೊಡಲು ಯತ್ನಿಸುತ್ತಿದೇನಲ್ಲ, ಇದು ಎಂಥ ನಾಚಿಕೆಗೇಡಿತನ! ಎಂಥ ತಿಳಿಗೇಡಿ ನಾನು! ಪರರಿಗೆ ತಿಳಿಸಿಕೊಡಹೋಗಲು ಇದೇನು ಗಣಿತಶಾಸ್ತ್ರವೆ, ಇತಿಹಾಸವೆ, ಸಾಹಿತ್ಯವೆ? ಇದು ಭಗವತ್ತತ್ತ್ವ! ಇವರು ಹೇಳುತ್ತಿರುವುದು ನನ್ನ ಹೃದಯಕ್ಕೆ ಬಹಳವಾಗಿ ಒಪ್ಪುತ್ತಿದೆ."

ಮಾಸ್ಟರ್ ಶ್ರೀರಾಮಕೃಷ್ಣರೊಡನೆ ಮಾಡಿದ ವಾದ ಇದೇ ಮೊಟ್ಟ ಮೊದಲನೆಯದು. ಭಗವತ್ಕೃಪೆಯಿಂದ ಇದೇ ಕಟ್ಟಕಡೆಯದು.

ಶ್ರೀರಾಮಕೃಷ್ಣರು: "ನೀನು ಮಣ್ಣಿನ ಪ್ರತಿಮೆ ಪೂಜೆಯ ಸಂಬಂಧವಾಗಿ ಮಾತು ಎತ್ತಿದ್ದೆ. ಪ್ರತಿಮೆ ಮಣ್ಣಿನದಾದರೂ ಆ ವಿಧದ ಪೂಜೆಯ ಆವಶ್ಯಕತೆ ಇದೆ. ಹಲವಾರು ವಿಧದ ಪೂಜಾ ಕ್ರಮಗಳನ್ನು ಭಗವಂತನೇ ಏರ್ಪಡಿಸಿದಾನೆ. ಈ ಜಗತ್ತು ಯಾರದ್ದೊ, ಆತನೇ ಅಧಿಕಾರಿಭೇದಕ್ಕನುಗುಣವಾಗಿ ಇವನ್ನೆಲ್ಲಾ ಮಾಡಿದಾನೆ.

"ತಾಯಿ, ತನ್ನ ಮಕ್ಕಳ ಜೀರ್ಣಶಕ್ತಿಗನುಸಾರ ಆಹಾರ ತಯಾರು ಮಾಡುತ್ತಾಳೆ. ಒಬ್ಬಳಿಗೆ ಐದು ಮಕ್ಕಳಿವೆ ಅಂತ ಇಟ್ಟುಕೊ. ಆಕೆ

ಮೀನನ್ನು ಅಡಿಗೆ ಮಾಡಬೇಕಾಗಿದ್ದರೆ ಮಕ್ಕಳ ರುಚಿ, ಜೀರ್ಣಶಕ್ತಿ, ಇವಕ್ಕೆ ತಕ್ಕಂತೆ ಭಕ್ಷ್ಯಭೋಜ್ಯಗಳನ್ನು—ಪಲಾವು, ಉಪ್ಪಿನಕಾಯಿ, ಬಜ್ಜಿ, ಪಲ್ಯ, ಸಾರು, ಇತ್ಯಾದಿ—ಅಡಿಗೆ ಮಾಡುತ್ತಾಳೆ.

"ಅರ್ಥವಾಯಿತೆ?"

ಮಾಸ್ಟರ್ ವಿನಯದಿಂದ: "ಹೌದು, ಆಯಿತು. ಒಳ್ಳೆಯದು, ಏನು ಮಾಡಿದರೆ ಭಗವಂತನ ಕಡೆ ಮನಸ್ಸು ಹರಿಯಲಾರಂಭಿಸುತ್ತದೆ?"

ಶ್ರೀರಾಮಕೃಷ್ಣರು: "ಭಗವಂತನ ನಾಮಗುಣಕೀರ್ತನೆಯನ್ನು ಸರ್ವದಾ ಮಾಡುತ್ತಿರಬೇಕು. ಸತ್ಸಂಗ, ಎಂದರೆ ಭಗವದ್ಭಕ್ತರ ಸಾಧು ಸತ್ಪುರುಷರ ಸಹವಾಸ ಆಗಾಗ ಮಾಡುತ್ತಿರಬೇಕು. ಮನಸ್ಸು ಹಗಲಿರುಳೂ ಸಂಸಾರದಲ್ಲೇ, ಪ್ರಾಪಂಚಿಕ ಕೆಲಸಕಾರ್ಯಗಳಲ್ಲೇ ನಿರತವಾಗಿಬಿಟ್ಟಿದ್ದರೆ ಅದು ಭಗವನ್ಮುಖವಾಗಲಾರದು; ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಭಗವದ್ಧ್ಯಾನದಲ್ಲಿ ತೊಡಗುವುದು ಅತ್ಯಂತ ಆವಶ್ಯಕ. ಮೊದಮೊದಲು ಪದೇ ಪದೇ ನಿರ್ಜನಪ್ರದೇಶಕ್ಕೆ ಹೋಗಿ ಆತನ ಧ್ಯಾನ ಮಾಡದೆ ಇದ್ದರೆ ಆತನಲ್ಲಿ ಮನಸ್ಸನ್ನು ನಿಲ್ಲಿಸುವುದು ದುಸ್ಸಾಧ್ಯ. ಗಿಡ ಇನ್ನೂ ಸಸಿಯಾಗಿರುವಾಗ ಅದರ ಸುತ್ತಲೂ ಬೇಲಿ ಕಟ್ಟಬೇಕು; ಇಲ್ಲದಿದ್ದರೆ ದನಕರುಗಳು, ಆಡುಕುರಿಗಳು ತಿಂದು ನಾಶಮಾಡಿಬಿಡುತ್ತವೆ.

"ಧ್ಯಾನವನ್ನು ಅಂತರ್ಯದಲ್ಲೊ, ಏಕಾಂತ ಸ್ಥಳದಲ್ಲೊ, ನಿಬಿಡ ಅರಣ್ಯದಲ್ಲೊ ಮಾಡಬೇಕು. ಸತತ ಸದಸದ್ವಿಚಾರ ಮಾಡುತ್ತಿರಬೇಕು. ಭಗವಂತನೊಬ್ಬನೇ ಸತ್, ನಿತ್ಯವಸ್ತು; ಉಳಿದುದೆಲ್ಲಾ ಅಸತ್, ಅನಿತ್ಯ ವಸ್ತು ಎಂದು. ಹೀಗೆ ವಿಚಾರ ಮಾಡುತ್ತ ಮಾಡುತ್ತ ಅನಿತ್ಯವಸ್ತುಗಳ ಮೇಲಿನ ಅನುರಾಗವನ್ನು ಕೊನೆಗೆ ಮನಸ್ಸಿನಿಂದ ಕಿತ್ತೊಗೆಯಬೇಕು."

ಮಾಸ್ಟರ್ ವಿನಯದಿಂದ: "ಸಂಸಾರದಲ್ಲಿ ಯಾವ ರೀತಿಯಾಗಿ ಇರಬೇಕು?"

ಶ್ರೀರಾಮಕೃಷ್ಣರು: "ಎಲ್ಲಾ ಕೆಲಸಕಾರ್ಯಗಳನ್ನೂ ಮಾಡು, ಆದರೆ ಮನಸ್ಸನ್ನು ಮಾತ್ರ ಭಗವಂತನ ಪಾದಪದ್ಮಗಳಲ್ಲಿ ಇಡು. ಎಲ್ಲರೊಡನೆ, ಎಂದರೆ ಹೆಂಡತಿ, ಮಕ್ಕಳು, ತಂದೆ, ತಾಯಿ ಇವರೊಡನೆ ಇರು. ಅವರ ಸೇವೆ ಮಾಡು. ಅವರೆಲ್ಲಾ ನಿನ್ನ ಪರಮ ಆಪ್ತರೆಂದೇ ಕಾಣು. ಆದರೆ ಮಾತ್ರ ಅವರಾರೂ ನಿನಗೆ ಸೇರಿದವರಲ್ಲ ಎಂಬುದು ನಿನ್ನ ಹೃದಯಾಂತರಾಳದಲ್ಲಿ ನೆಲಸಿರಲಿ.

"ಶ್ರೀಮಂತರ ಮನೆ ದಾಸಿ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡು ತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ಹಳ್ಳಿಯಲ್ಲಿರುವ ತನ್ನ ಮನೆಯ ಕಡೆಗೇ. ಯಜಮಾನನ ಮಕ್ಕಳು ತನ್ನವೆಂದೇ ಬೆಳಸುತ್ತಾಳೆ. ಅಷ್ಟೇ ಅಲ್ಲ ಅವನ್ನ ಕರೆಯುತ್ತಾಳೆ, 'ನನ್ನ ರಾಮು', 'ನನ್ನ ಹರಿ' ಎಂಬುದಾಗಿ. ಆದರೆ ಅವಾವೂ ತನ್ನವಲ್ಲವೆಂಬುದು ಆಕೆಗೆ ಹೃದಯದಲ್ಲಿ ಚೆನ್ನಾಗಿ ಗೊತ್ತಿದೆ.

"ಆಮೆ ನೀರಿನಲ್ಲಿ ಈಜಾಡುತ್ತಿರುತ್ತದೆ. ಆದರೆ ಅದರ ಮನಸ್ಸೆಲ್ಲಿದೆ ಗೊತ್ತೆ ನಿನಗೆ? ತನ್ನ ಮೊಟ್ಟೆಗಳಿರುವ ದಡದಲ್ಲಿ. ಸಂಸಾರದ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡು, ಆದರೆ ಮನಸ್ಸನ್ನು ಮಾತ್ರ ಭಗವಂತ ನಲ್ಲಿ ನೆಡು.

"ಭಗವಂತನಲ್ಲಿ ಭಕ್ತಿ ಬೆಳಸಿಕೊಳ್ಳುವುದಕ್ಕೆ ಮುನ್ನ ಸಂಸಾರಕ್ಕೆ ಕಾಲಿಟ್ಟೆ ಎಂದರೆ, ಇನ್ನೂ ಅಧಿಕಾಧಿಕವಾಗಿ ಕಷ್ಟಪರಂಪರೆಗಳಿಗೆ ಈಡಾ ಗುವೆ. ಶೋಕ, ತಾಪ, ವಿಪತ್ತು ಇವುಗಳಿಂದ ಸಂಪೂರ್ಣ ಬೆಂದು ಬೆಂಡಾಗಿ ಹೋಗುವೆ. ವಿಷಯಚಿಂತನೆ ಮಾಡಿದಷ್ಟೂ ಅವುಗಳಲ್ಲಿ ಆಸಕ್ತಿಯೂ ಬೆಳೆಯುತ್ತಾ ಹೋಗುತ್ತದೆ.

"ಮೊದಲು ಕೈಗೆ ಎಣ್ಣೆ ಸವರಿಕೊಂಡು ಬಳಿಕ ಹಲಸಿನ ಹಣ್ಣು ಬಿಡಿಸಬೇಕು. ಇಲ್ಲದಿದ್ದರೆ ಕೈಗೆ ಅಂಟು ಹತ್ತಿಕೊಂಡುಬಿಡುತ್ತದೆ. ಭಗವದ್ಭಕ್ತಿ ಎಂಬ ಎಣ್ಣೆಯನ್ನು ಮೊದಲು ಹವಣಿಸಿಕೊಂಡು ಬಳಿಕ ಸಾಂಸಾರಿಕ ಕೆಲಸಕಾರ್ಯಗಳಲ್ಲಿ ಕೈ ಇಡಬೇಕು.

"ಆದರೆ ಈ ವಿಧವಾದ ಭಕ್ತಿ ದೊರಕಬೇಕಾದರೆ, ನಿರ್ಜನಪ್ರದೇಶ ಗಳಿಗೆ ಹೋಗಿ ಇರಬೇಕು. ಬೆಣ್ಣೆ ತೆಗೆಯಬೇಕಾದರೆ ಮೊದಲು ನಿರ್ಜನ ಪ್ರದೇಶದಲ್ಲಿ ಹಾಲಿಗೆ ಹೆಪ್ಪು ಹಾಕಿ ಇಡಬೇಕು; ಅದನ್ನು ಅತಿಯಾಗಿ ಅಲ್ಲಾಡಿಸುತ್ತಿದ್ದರೆ ಅದು ಮೊಸರಾಗದು. ಬಳಿಕ ಉಳಿದ ಎಲ್ಲಾ ಕೆಲಸ ಕಾರ್ಯಗಳನ್ನೂ ಒಂದು ಮೂಲೆಯಲ್ಲಿ ಕಟ್ಟಿಟ್ಟು, ನಿರ್ಜನಪ್ರದೇಶದಲ್ಲಿ ಕುಳಿತು ಅದನ್ನು ಕಡೆಯಬೇಕು. ಆಗ ಬೆಣ್ಣೆ ತೆಗೆಯಲು ಸಾಧ್ಯ ವಾಗುತ್ತದೆ.

"ನೋಡು, ನಿರ್ಜನಪ್ರದೇಶಕ್ಕೆ ಹೋಗಿ ಈ ಮನಸ್ಸನ್ನು ಭಗವಂತನ ಧ್ಯಾನದಲ್ಲಿ ತೊಡಗಿಸುವುದಾದರೆ, ಅದು ಜ್ಞಾನ, ಭಕ್ತಿ, ವೈರಾಗ್ಯ ಇವನ್ನು ಗಳಿಸಿಕೊಳ್ಳುತ್ತದೆ; ಸಂಸಾರದಲ್ಲಿ ತೊಡಗಿಸುವುದಾದರೆ ಇದೇ ಮನಸ್ಸು

ಅಧೋಗತಿಗೆ ಇಳಿದುಬಿಡುತ್ತದೆ. ಸಂಸಾರದಲ್ಲಿ ಕೇವಲ ಒಂದೇ ಒಂದರ ಚಿಂತನೆ: 'ಕಾಮಕಾಂಚನ' ದ[1] ಚಿಂತನೆ.

"ಸಂಸಾರವೇ ನೀರು, ಮನಸ್ಸೇ ಹಾಲು. ಹಾಲನ್ನು ನೀರಿಗೆ ಸುರಿದರೆ ಅವೆರಡೂ ಬೆರೆತು ಒಂದಾಗಿಬಿಡುತ್ತವೆ; ಮತ್ತೆ ಶುದ್ಧ ಹಾಲು ಬೇಕೆಂದರೆ ಕಣ್ಣು ಮೇಲೆ ಕಣ್ಣಿಟ್ಟು ಹುಡುಕಿದರೂ ಅದು ದೊರೆಯುವ ಹಾಗೇ ಇಲ್ಲ. ಆದರೆ ಹಾಲಿಗೆ ಹೆಪ್ಪು ಹಾಕಿ ಮೊಸರು ಮಾಡಿ ಬೆಣ್ಣೆ ತೆಗೆದು ಅದನ್ನು ನೀರಿನಲ್ಲಿ ಇಟ್ಟರೆ, ಅದು ಅಲ್ಲಿ ತೇಲಲಾರಂಭಿಸುತ್ತದೆ.

"ಭಗವಂತನ ಧ್ಯಾನದೊಡನೆ ವಿಚಾರ ಮಾಡುವುದೂ ಅತ್ಯಂತ ಆವಶ್ಯಕ. ಕಾಮಕಾಂಚನ ಅನಿತ್ಯ. ಭಗವಂತನೇ ಏಕಮಾತ್ರ ವಸ್ತು. ಹಣದಿಂದ ಏನು ದೊರೆಯುತ್ತದೆ? ಅನ್ನಾಹಾರ, ಬಟ್ಟೆಬರೆ, ಮನೆಮಠ— ಇಷ್ಟು ಮಾತ್ರ. ಭಗವಂತನ ಸಾಕ್ಷಾತ್ಕಾರ ಎಂದಿಗೂ ದೊರೆಯದು. ಆದ್ದರಿಂದ ಹಣ ಜೀವನದ ಚರಮೋದ್ದೇಶವಾಗಲಾರದು. ಇದಕ್ಕೇ ವಿಚಾರ ಅಂತ ಹೆಸರು. ಅರ್ಥವಾಯಿತೆ?"

ಮಾಸ್ಟರ್: "ಹೌದು, ಅರ್ಥವಾಯಿತು. ಈಗ ತಾನೆ ಕೆಲವು ದಿನದ ಹಿಂದೆ 'ಪ್ರಬೋಧ ಚಂದ್ರೋದಯ' ಎಂಬ ನಾಟಕ ಓದಿದೆ. ಅದರಲ್ಲಿದೆ ವಸ್ತುವಿಚಾರ."

ಶ್ರೀರಾಮಕೃಷ್ಣರು: "ವಸ್ತುವಿಚಾರವೆ? ಯೋಚಿಸು—ಹಣದಲ್ಲಿ ತಾನೆ ಏನಿದೆ, ಸುಂದರ ದೇಹದಲ್ಲಿ ತಾನೆ ಏನಿದೆ? ಹಾಗೇ ವಿಚಾರಮಾಡಿ ನೋಡು. ಸುಂದರಿಯ ದೇಹದಲ್ಲೂ ಕೇವಲ ಅಸ್ಥಿ, ಮಾಂಸ, ಕೊಬ್ಬು, ಮಲ, ಮೂತ್ರ ಇತ್ಯಾದಿ ಇವೆ. ಮನುಷ್ಯ ಭಗವಂತನನ್ನು ಮರೆತು ಈ ಹೇಯವಾದ ವಸ್ತುಗಳಲ್ಲೇಕೆ ಮನಸ್ಸನ್ನಿಡಲು ಹೋಗಬೇಕು? ಭಗವಂತನನ್ನು ಏಕೆ ಮರೆತುಬಿಡಬೇಕು?"

ಮಾಸ್ಟರ್: "ಭಗವಂತನನ್ನ ದರ್ಶನಮಾಡಲಾಗುವುದೆ?"

---

1. ಪರಮಹಂಸರು ತಮ್ಮ ಉಪದೇಶಗಳಲ್ಲಿ ಉಪಯೋಗಿಸಿದಾರೆ: "ಕಾಮಿನೀ ಕಾಂಚನ" ಎಂಬ ಪದವನ್ನು. ಅವರು ಅದನ್ನು "ಕಾಮ ಮತ್ತು ಲೋಭ" ಎಂಬ ಅರ್ಥದಲ್ಲಿ ಉಪಯೋಗಿಸಿರುವುದರಿಂದ, ನಾವು ಇನ್ನು ಮುಂದೆ ಆ ಪದಕ್ಕೆ ಬದಲಾಗಿ "ಕಾಮಕಾಂಚನ" ಎಂಬ ಪದವನ್ನು ಬರೆದುಕೊಂಡು ಹೋಗಿದೇವೆ.

ಶ್ರೀರಾಮಕೃಷ್ಣರು: "ಹೌದು, ನಿಸ್ಸಂದೇಹವಾಗಿ. ಆಗಾಗ ಏಕಾಂತವಾಸ, ಆತನ ನಾಮಗುಣಕೀರ್ತನೆ, ವಸ್ತುವಿಚಾರ— ಈ ಸಾಧನೆ ಗಳನ್ನೆಲ್ಲಾ ಅವಲಂಬಿಸಬೇಕಾಗುತ್ತದೆ."

ಮಾಸ್ಟರ್: "ಯಾವ ಮಾನಸಿಕ ಅವಸ್ಥೆಯಲ್ಲಿ ಆತನ ದರ್ಶನ ದೊರೆಯುತ್ತದೆ?"

ಶ್ರೀರಾಮಕೃಷ್ಣರು: "ಅತ್ಯಂತ ವ್ಯಾಕುಲನಾಗಿ ಅತ್ತರೆ ಆತನ ದರ್ಶನ ಪಡೆಯಲು ಸಾಧ್ಯ. ಹೆಂಡತಿ ಮಕ್ಕಳಿಗಾಗಿ ಜನ ಬಿಂದಿಗೆ ತುಂಬ ಕಣ್ಣೀರು ಸುರಿಸುತ್ತಾರೆ; ಕಣ್ಣೀರು ಸಾಗರದಲ್ಲೇ ತೇಲಾಡಿಬಿಡುತ್ತಾರೆ ಹಣಕ್ಕಾಗಿ. ಆದರೆ ಭಗವಂತ ಬೇಕೆಂದು ಯಾರು ತಾನೆ ಕಣ್ಣೀರಿಡು ತ್ತಾರೆ? ಸಹಜ ಕರೆಯಿಂದ ಆತನನ್ನು ಕರೆಯಬೇಕು."

ಪರಮಹಂಸರು ಹಾಡಲಾರಂಭಿಸಿದಾರೆ:

ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ?
ನಿನ್ನ ತೊರೆದವಳೆಂತು ಇರಬಲ್ಲಳೊ?
ಬಿಲ್ವದಲ ಹೂವುಗಳ ತಂದು ಪಾದಕೆ ಮುಡಿಸೊ
ನಿನ್ನ ಭಕ್ತಿಯ ದಿವ್ಯ ಗಂಧದೊಡನೆ!

ಮತ್ತೆ ಪರಮಹಂಸರು ಹೇಳುತ್ತಿದಾರೆ: "ವ್ಯಾಕುಲತೆ ಉಂಟಾಯಿತು ಎಂದರೆ ಅರುಣೋದಯವಾದ ಹಾಗೇ. ಬಳಿಕ ಸೂರ್ಯೋದಯ. ವ್ಯಾಕುಲತೆಯಾನಂತರವೇ ಭಗವಂತನ ದರ್ಶನ.

"ಈ ಮೂರು ಪ್ರೀತಿಗಳೂ ಒಟ್ಟಿಗೆ ಉಂಟಾಗುವುದಾದರೆ ಭಗವಂತ ಗೋಚರನಾಗಿಬಿಡುತ್ತಾನೆ— ವಿಷಯಿಗೆ ವಿಷಯಗಳ ಮೇಲಿರೋ ಪ್ರೀತಿ, ತಾಯಿಗೆ ಮಕ್ಕಳ ಮೇಲಿರೋ ಪ್ರೀತಿ, ಸತಿಗೆ ಪತಿಯ ಮೇಲಿರೋ ಪ್ರೀತಿ. ಈ ಮೂರು ಪ್ರೀತಿಗಳೂ ಯಾರಲ್ಲೇ ಆಗಲಿ ಒಟ್ಟಿಗೆ ಮೂಡುವುದಾದರೆ, ಅವುಗಳ ಜೋರಿನಿಂದ ಆತನಿಗೆ ಭಗವಂತನ ಸಾಕ್ಷಾತ್ಕಾರ ಸಾಧ್ಯ ವಾಗುತ್ತದೆ.

"ಮುಖ್ಯಾಂಶವೇನೆಂದರೆ, ಭಗವಂತನನ್ನು ಪ್ರೀತಿಸಬೇಕು—ತಾಯಿ ಮಗುವನ್ನು ಪ್ರೀತಿಸೋ ಹಾಗೆ, ಸತಿ ಪತಿಯನ್ನು ಪ್ರೀತಿಸೋ ಹಾಗೆ, ವಿಷಯಿ ವಿಷಯಗಳನ್ನು ಪ್ರೀತಿಸೋ ಹಾಗೆ. ಈ ಮೂರು ಪ್ರೀತಿಗಳನ್ನೂ, ಈ ಮೂರು ಆಕರ್ಷಣೆಗಳನ್ನೂ ಒಟ್ಟುಗೂಡಿಸಿದರೆ ಅದು ಏನಾಗುತ್ತದೊ

ಅದಷ್ಟನ್ನೂ ಭಗವಂತನ ಕಡೆ ತಿರುಗಿಸುವುದಾದರೆ ಆತನ ದರ್ಶನ ದೊರೆಯುತ್ತದೆ.

" ವ್ಯಾಕುಲನಾಗಿ ಆತನನ್ನು ಕರೆಯಬೇಕು. ಬೆಕ್ಕಿನ ಮರಿಗೆ ಕೇವಲ, 'ಮಿಯಾವ್, ಮಿಯಾವ್!' ಅಂತ ತನ್ನ ತಾಯನ್ನು ಕರೆಯುವುದೊಂದೇ ಗೊತ್ತಿರೋದು. ತಾಯಿ ಅದನ್ನು ಎಲ್ಲಿ ಇಡುವುದೊ ಅದು ಅಲ್ಲೇ ಬಿದ್ದಿರುತ್ತದೆ—ಕೆಲವು ವೇಳೆ ಅಡಿಗೆ ಮನೆಯಲ್ಲಿ, ಇನ್ನು ಕೆಲವು ವೇಳೆ ನೆಲದ ಮೇಲೆ, ಮತ್ತೆ ಕೆಲವು ವೇಳೆ ಹಾಸಿಗೆ ಮೇಲೆ ಇಡುತ್ತದೆ. ಅದಕ್ಕೇನಾದರೂ ತೊಂದರೆ ಬಂದರೆ ಅದು ಕೇವಲ, 'ಮಿಯಾವ್, ಮಿಯಾವ್!' ಅಂತ ಕೂಗುತ್ತದೆ. ಅದಕ್ಕೆ ಇನ್ನು ಬೇರೆ ಏನೂ ಗೊತ್ತಿಲ್ಲ. ತಾಯಿ ಬೆಕ್ಕು ಎಲ್ಲಿದ್ದರೆ ತಾನೆ ಏನು, ಈ, 'ಮಿಯಾವ್, ಮಿಯಾವ್!' ಎಂಬ ಶಬ್ದವನ್ನು ಕೇಳಿದೊಡನೆಯೇ ಮರಿಯ ಹತ್ತಿರಕ್ಕೆ ಬಂದುಬಿಡುತ್ತದೆ."

ಮಾಸ್ಟರಿಗೆ ಪರಮಹಂಸರ ಮೂರನೆ ದರ್ಶನ ದೊರತುದು ಮತ್ತೊಂದು ಭಾನುವಾರ ಅಪರಾಹ್ನದಲ್ಲಿ. ಹಿಂದಿನ ಎರಡು ಭೇಟಿಗಳೇ ಆತನ ಹೃದಯದಲ್ಲಿ ದೊಡ್ಡ ಪರಿವರ್ತನೆಯನ್ನು ತಂದುಬಿಟ್ಟಿದ್ದುವು. ಹಗಲೂ ಇರುಳೂ ಶ್ರೀರಾಮಕೃಷ್ಣರ ಸಂಬಂಧವಾಗಿ, ವಿಶೇಷತಃ ಆಧ್ಯಾತ್ಮಿಕ ಗಭೀರ ತತ್ತ್ವಗಳನ್ನು ಅವರು ಎಷ್ಟು ಸುಲಭವಾಗಿ ಸಾಮಾನ್ಯರಿಗೂ ಅರಿವಾಗುವ ರೀತಿಯಲ್ಲಿ ತಿಳಿಸುತ್ತಿದಾರೆ ಎಂಬುದರ ವಿಷಯವಾಗಿ, ಚಿಂತಿಸುತ್ತಲೇ ಇದ್ದ. ಇಂಥ ಮಹಾಪುರುಷರನ್ನು ಆತ ಹಿಂದೆ ಎಂದೂ ಸಂಧಿಸಿರಲಿಲ್ಲ.

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಕೊಠಡಿ ಭಕ್ತರಿಂದ ತುಂಬಿದೆ. ರಜಾದಿನವಾದ್ದರಿಂದ ಅನೇಕ ಭಕ್ತರು ಬಂದಿದಾರೆ. ಅವರಾರ ಪರಿಚಯವೂ ಮಾಸ್ಟರಿಗೆ ಇನ್ನೂ ಆಗಿರಲಿಲ್ಲ; ಆದ್ದರಿಂದ ಆತ ಒಂದು ಮೂಲೆಯಲ್ಲಿ ಕುಳಿತುಕೊಂಡಿದಾನೆ. ಪರಮಹಂಸರು ಹಸನ್ಮುಖಿಗಳಾಗಿ ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಪರಮಹಂಸರು ಹತ್ತೊಂಬತ್ತು ವಯಸ್ಸಿನ ಒಬ್ಬ ಹುಡುಗನನ್ನುದ್ದೇಶಿಸಿ ಆತನ ಕಡೆಗೆ ಬಾಗಿ ಆನಂದದಿಂದ ಏನೇನೊ ಆತನೊಡನೆ ಮಾತನಾಡುತ್ತಿದಾರೆ. ಆತನ ಹೆಸರು ನರೇಂದ್ರ. ಕಾಲೇಜಿನಲ್ಲಿ ಓದುತ್ತಿದಾನೆ; ಸಾಧಾರಣ ಬ್ರಾಹ್ಮಸಮಾಜಕ್ಕೆ ಹೋಗಿಬರುತ್ತಾ ಇದಾನೆ. ಆತನ ಮಾತು

ಕತೆಗಳು ತೇಜಃಪೂರ್ಣವಾಗಿವೆ; ಕಣ್ಣು ಉಜ್ಜ್ವಲವಾಗಿವೆ; ಭಕ್ತನ ಅವಲೋಕನ.

ಭಗವದಭಿಮುಖರಾಗಿರುವವರನ್ನು ವಿಷಯಾಸಕ್ತ ಸಂಸಾರಿಗಳು ಯಾವ ರೀತಿಯಾಗಿ ನಿಂದಿಸುತ್ತಾರೆ ಎಂಬ ವಿಷಯವಾಗಿ ಮಾತುಕತೆ ಆಗುತ್ತಿರಬೇಕೆಂದು ಮಾಸ್ಟರ್ ಊಹಿಸಿದ. ಈ ಜಗತ್ತಿನಲ್ಲಿ ಅಂಥವರು ಎಷ್ಟೊಂದು ಅಸಂಖ್ಯವಾಗಿದಾರೆ, ಅವರೊಡನೆ ಹೇಗೆ ವ್ಯವಹರಿಸಬೇಕು ಎಂಬುದರ ವಿಷಯವಾಗಿ ಮಾತುಕತೆ ಆಗುತ್ತಿದೆ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನರೇಂದ್ರ, ನೀನು ಏನು ಹೇಳುತ್ತೀಯೆ? ಪ್ರಾಪಂಚಿಕರು ಎಷ್ಟೊಂದಾಗಿ ಆಡಿಕೊಳ್ಳುತ್ತಾರೆ ಏನು ಕತೆ! ಆದರೆ ನೋಡು, ಆನೆ ನಡೆದುಹೋಗುವಾಗ ಅದರ ಹಿಂದೆ ಎಷ್ಟೊಂದು ಪ್ರಾಣಿಗಳು ಎಷ್ಟೆಷ್ಟು ವಿಧವಾಗಿ ಚೀತ್ಕಾರಮಾಡುತ್ತವೆ; ಆದರೂ ಅದು ಮಾತ್ರ ಹಿಂದಿರುಗಿ ನೋಡೋದೆ ಇಲ್ಲ. ನಿನ್ನನ್ನೂ ಯಾರಾದರು ನಿಂದಿಸಿದರೆ ನಿನಗೇನನಿಸುತ್ತದೆ?"

ನರೇಂದ್ರ: "ನಾನು ಭಾವಿಸುತ್ತೇನೆ ನಾಯಿ 'ಬೊವ್, ಬೊವ್!' ಅನ್ನುತ್ತಿದೆ."

ಶ್ರೀರಾಮಕೃಷ್ಣರು ನಗುತ್ತ: "ಬೇಡಪ್ಪ, ಅಷ್ಟು ದೂರ ಹೋಗಬೇಡ! (ನಗು.) ಭಗವಂತ ಸರ್ವಭೂತಗಳಲ್ಲಿಯೂ ಇದಾನೆ. ಆದರೆ ನೀನು ಒಳ್ಳೆಯವರೊಡನೆ ಹೆಚ್ಚಾಗಿ ಬೆರೆಯಬಹುದು; ಕೆಟ್ಟವರಿಂದ ಬಹಳ ದೂರದಲ್ಲೇ ಇರಬೇಕು. ಹುಲಿಯಲ್ಲಿಯೂ ಭಗವಂತನಿದಾನೆ; ಹಾಗೆಂದು ಅದನ್ನು ಆಲಿಂಗನೆಮಾಡಿಕೊಳ್ಳಲಾಗೋದಿಲ್ಲ. (ನಗು.) ನೀನು ಕೇಳಬಹುದು: 'ಹುಲಿಯೂ ಭಗವಂತನ ಆವಿರ್ಭಾವವೇ ಆಗಿರುವಾಗ ಅದನ್ನು ಕಂಡು ಏಕೆ ಹೆದರಿ ಓಡಬೇಕು?' ಉತ್ತರ: 'ಓಡಿಹೋಗು ಎಂಬುದಾಗಿ ಹೇಳುವವರೂ ಭಗವದಾವಿರ್ಭಾವಿಗಳೇ — ಅವರ ಮಾತಿಗೆ ಏಕೆ ಬೆಲೆ ಕೊಡಬಾರದು?'

"ಒಂದು ಕಥೆ ಕೇಳು. ಒಂದು ಕಾಡಿನಲ್ಲಿ ಒಬ್ಬ ಸಾಧು ತಪಸ್ಸು ಮಾಡಿಕೊಂಡಿದ್ದ. ಆತನಿಗೆ ಅನೇಕ ಮಂದಿ ಶಿಷ್ಯರಿದ್ದರು. ಆತ ಒಂದು ದಿನ ಶಿಷ್ಯರಿಗೆ ಉಪದೇಶಕೊಟ್ಟ: 'ಸರ್ವಭೂತಗಳಲ್ಲಿಯೂ ಭಗವಂತನಿದಾನೆ. ಇದನ್ನು ಅರಿತುಕೊಂಡು ಅವುಗಳಿಗೆ ನಮಸ್ಕಾರಮಾಡಬೇಕು.' ಒಂದು ದಿನ ಒಬ್ಬ ಶಿಷ್ಯ ಹೋಮಕ್ಕೆ ಸಮಿತ್ತು ತರಲು ಕಾಡಿಗೆ ಹೋದ.

ಅಲ್ಲಿ ಇದ್ದಕ್ಕಿದ್ದಹಾಗೆ ಒಂದು ಬೊಬ್ಬೆ ಕೇಳಿಬಂತು: 'ಇಲ್ಲಿ ಇರೋರೆಲ್ಲ ಓಡಿಹೋಗಿಬಿಡಿ! ಒಂದು ಮದಿಸಿದ ಆನೆ ಬರುತ್ತಾ ಇದೆ!' ಎಲ್ಲರೂ ಕಂಬಿಕಿತ್ತರು, ಆದರೆ ಶಿಷ್ಯ ಮಾತ್ರ ಕದಲಲಿಲ್ಲ. ಆತ ವಿಚಾರದಲ್ಲಿ ತೊಡಗಿದ: 'ಆನೆಯೂ ಭಗವಂತನ ಒಂದು ರೂಪ. ಆದ್ದರಿಂದ ನಾನೇಕೆ ಹೆದರಿ ಓಡಿಹೋಗಲಿ?' ಅಲ್ಲೇ ನಿಂತು ನಮಸ್ಕಾರ ಹಾಕಿ ಸ್ತೋತ್ರ ಮಾಡಲಾರಂಭಿಸಿದ. ಇದನ್ನು ನೋಡಿ ಮಾವಟಿಗ ಗಂಟಲು ಕಿತ್ತು ಹೋಗೋ ಹಾಗೆ ಕಿರಿಚಿಕೊಳ್ಳಲಾರಂಭಿಸಿದ: 'ಓಡಿ ಹೋಗು! ಓಡಿ ಹೋಗು!' ಹಾಗೂ ಶಿಷ್ಯ ಕದಲಲೇ ಇಲ್ಲ. ಕೊನೆಗೆ ಆನೆ ಬಂದು ಸೊಂಡಿಲಿನಿಂದ ಎತ್ತಿ ಒಂದು ಕಡೆಗೆ ಬಿಸಾಡಿ ಹೊರಟುಹೋಯಿತು. ಶಿಷ್ಯನ ಕೈ ಮೈಯೆಲ್ಲಾ ಕಿತ್ತುಹೋಗಿ ಪ್ರಜ್ಞೆ ತಪ್ಪಿ ನೆಲದ ಮೇಲೆ ಬಿದ್ದಿರ ಬೇಕಾಯಿತು. ಈ ಸಮಾಚಾರ ಕೇಳಿ ಗುರು ಮತ್ತು ಉಳಿದ ಶಿಷ್ಯರು ಕ್ಷಣಮಾತ್ರದಲ್ಲಿ ಅಲ್ಲಿಗೆ ಬಂದು ಆತನನ್ನು ಆಶ್ರಮಕ್ಕೆ ಎತ್ತಿಕೊಂಡು ಹೋದರು. ಔಷಧೋಪಚಾರಗಳಾನಂತರ ಆತನಿಗೆ ಪ್ರಜ್ಞೆ ಬಂತು. ಒಬ್ಬ ಆತನನ್ನು ಕೇಳಿದ: 'ಆನೆ ಬರುತ್ತಿದೆ ಎಂಬುದಾಗಿ ಕೇಳಿಯೂ ಏಕೆ ಆ ಸ್ಥಳ ಬಿಟ್ಟು ಕದಲಲಿಲ್ಲ?' ಆತ ಉತ್ತರವಿತ್ತ: 'ಗುರುಗಳು ನಮಗೆ ತಿಳಿಸಿದ್ದರು, ಭಗವಂತನೇ ಮನುಷ್ಯ ಜೀವ ಜಂತು ಇವೇ ಮೊದಲಾದ ರೂಪಗಳನ್ನು ಧರಿಸಿದಾನೆ. ಆದ್ದರಿಂದ, ಭಗವಂತ ಆನೆಯ ರೂಪದಲ್ಲಿ ಬರುತ್ತಿರುವುದನ್ನು ನೋಡಿ ಆ ಸ್ಥಳ ಬಿಟ್ಟು ಕದಲಲಿಲ್ಲ.' ಇದನ್ನು ಕೇಳಿ ಗುರು ಹೇಳಿದರು: 'ಮಗು, ಭಗವಂತ ಆನೆಯ ರೂಪದಲ್ಲಿ ಬರುತ್ತಿದ್ದು ದೇನೊ ನಿಜ. ಆದರೆ ಮಾವಟಿಗನ ರೂಪದಲ್ಲಿದ್ದ ಭಗವಂತ ತಿಳಿಸಿದ, ಅಲ್ಲಿ ನಿಲ್ಲಕೂಡದು ಎಂಬುದಾಗಿ. ಭಗವಂತನೇ ಎಲ್ಲಾ ರೂಪಗಳನ್ನು ಧರಿಸಿರುವುದರಿಂದ, ಆತನ ಮಾತಿಗೆ ಏಕೆ ನೀನು ಬೆಲೆ ಕೊಡಲಿಲ್ಲ? ಮಾವಟಿಗನ ರೂಪದಲ್ಲಿದ್ದ ಭಗವಂತನ ಮಾತಿಗೂ ನೀನು ಬೆಲೆ ಕೊಡ ಬೇಕಾಗಿತ್ತು.' (ಎಲ್ಲರೂ ನಗುತ್ತಾರೆ.)

"ಶಾಸ್ತ್ರದಲ್ಲಿ ಹೇಳಿದೆ, 'ಆಪೋ ನಾರಾಯಣಃ'—ನೀರು ಭಗವಂತನ ಒಂದು ರೂಪು. ಆದರೆ, ಕೆಲವು ನೀರು ಪೂಜೆಗೆ ಅರ್ಹವಾಗಿವೆ, ಇನ್ನು ಕೆಲವು ಮುಖ ತೊಳೆಯಲು, ಮತ್ತೆ ಕೆಲವು ಮುಸುರೆ ತಿಕ್ಕಲು, ಮತ್ತೂ ಕೆಲವು ಬಟ್ಟೆ ಒಗೆಯಲು. ಇವನ್ನು ಕುಡಿಯೋಕಾಗಲಿ, ದೇವರ ಪೂಜೆಗಾಗಲಿ ಉಪಯೋಗಿಸಲಾಗೋದಿಲ್ಲ. ಹಾಗೇನೆ ಭಗವಂತ ಎಲ್ಲರ

ಹೃದಯದಲ್ಲೂ—ಸಾಧು ಅಸಾಧು, ಭಕ್ತ ಅಭಕ್ತ ಎಲ್ಲರಲ್ಲೂ ಇದ್ದಾನೆ; ಆದರೆ ಅಸಾಧು, ಅಭಕ್ತ, ದುಷ್ಟ ಇವರೊಡನೆ ವ್ಯವಹರಿಸಕೂಡದು; ಸ್ನೇಹ ಬೆಳಸಕೂಡದು. ಕೆಲವರೊಡನೆ ಕೇವಲ ಒಂದೆರಡು ಮಾತುಕತೆ ಆಡಬಹುದು, ಆದರೆ ಇನ್ನು ಕೆಲವರೊಡನೆ ಹಾಗೂ ಮಾಡಕೂಡದು. ಅಂಥವರಿಂದ ಬಹಳ ದೂರದಲ್ಲೇ ಇದ್ದುಬಿಡಬೇಕು."

ಒಬ್ಬ ಭಕ್ತ: "ಮಹಾಶಯರೆ, ದುಷ್ಟ ನಮಗೆ ಕೇಡು ತರಲುದ್ಯುಕ್ತ ನಾಗಿದ್ದರೂ ಅಥವಾ ತಂದೇ ಬಿಟ್ಟರೂ ನಾವು ಸುಮ್ಮನೆ ಕೈ ಕಟ್ಟಿ ಕುಳಿತಿರಬೇಕೇ?"

ಶ್ರೀರಾಮಕೃಷ್ಣರು: "ಸಮಾಜದ ಮಧ್ಯೆ ಇರಬೇಕಾದರೆ, ದುಷ್ಟರ ಕೈಯಿಂದ ತಪ್ಪಿಸಿಕೊಳ್ಳಲು ಮನುಷ್ಯ ಸ್ವಲ್ಪ ತಮೋಗುಣವನ್ನು ಪ್ರದರ್ಶಿಸ ಬೇಕಾಗುತ್ತದೆ. ಆದರೆ ಮುಯ್ಯಿಗೆ ಮುಯ್ಯಿ ತೀರಿಸಲು ಹೋಗಬಾರದು.

"ಒಂದು ಕಥೆ ಕೇಳು. ಕೆಲವು ಗೊಲ್ಲರ ಹುಡುಗರು ಒಂದು ಹುಲ್ಲು ಗಾವಲಿನಲ್ಲಿ ದನ ಕಾಯುತ್ತಿದ್ದರು. ಅಲ್ಲಿ ಒಂದು ಭಯಂಕರ ವಿಷಸರ್ಪ ವಾಸವಾಗಿತ್ತು. ಆ ಹಾವಿಗೆ ಹೆದರಿ ಎಲ್ಲರೂ ಬಹಳ ಎಚ್ಚರಿಕೆಯಿಂದ ಇರು ತ್ತಿದ್ದರು. ಒಂದು ದಿನ ಒಬ್ಬ ಬ್ರಹ್ಮಚಾರಿ ಆ ಹುಲ್ಲುಗಾವಲ ಮಾರ್ಗವಾಗಿ ಹೋಗುತ್ತಿದ್ದ. ಹುಡುಗರು ಓಡಿಹೋಗಿ ಆತನಿಗೆ ಹೇಳಿದರು: 'ಮಹಾ ಶಯರೆ, ಈ ಮಾರ್ಗವಾಗಿ ಹೋಗಬೇಡಿ. ಅಲ್ಲಿ ಭಯಂಕರ ವಿಷಸರ್ಪ ವೊಂದಿದೆ.' ಬ್ರಹ್ಮಚಾರಿ ಹೇಳಿದ: 'ಗೆಳೆಯರಾ, ಇದ್ದರೆ ಇರಲಿ. ನನಗೇನೂ ಹೆದರಿಕೆಯಿಲ್ಲ; ಮಂತ್ರ ಗೊತ್ತಿದೆ.' ಹೀಗೆಂದು ಹೇಳಿ ಆತ ಹಾಗೇ ಮುಂದುವರಿದ. ಹೆದರಿಕೊಂಡು, ಹುಡುಗರಾರೂ ಆತನನ್ನು ಹಿಂಬಾಲಿಸಲಿಲ್ಲ. ಸ್ವಲ್ಪ ದೂರ ಮುಂದುವರಿಯುವುದರೊಳಗೇ ಆ ಹಾವು ಹೆಡೆ ಬಿಚ್ಚಿ ಓಡಿಬರಲಾರಂಭಿಸಿತು. ಹತ್ತಿರಕ್ಕೆ ಬಂದೊಡನೆ ಆತ ಏನೋ ಒಂದು ಮಂತ್ರ ಪಠಿಸಿದ. ಹಾವು ಎರೆ ಹುಳುವಿನೋಪಾದಿಯಲ್ಲಿ ಆತನ ...ದದ ...ಬಳಿ ಸುಮ್ಮನೆ ಬಿದ್ದುಕೊಂಡಿತು. ಬ್ರಹ್ಮಚಾರಿ ಹೇಳಿದ: ... ಪರರಿಗೆ ಹಿಂಸೆ ಮಾಡುತ್ತ ಏಕೆ ನೀನು ಸುತ್ತಾಡುತ್ತಿದೀಯೆ? ... ಕೊಡುತ್ತೇನೆ. ಅದನ್ನು ಜಪಿಸಿದರೆ ನಿನಗೆ ಭಗವಂತನಲ್ಲಿ ... ಆತನ ಸಾಕ್ಷಾತ್ಕಾರ ದೊರಕುತ್ತದೆ; ಹಿಂಸಾ ...ದೆ.' ಹೀಗೆಂದು ಹೇಳಿ ಮಂತ್ರೋಪದೇಶ ... ಆ ಹಾವು ಗುರುವಿಗೆ ಪ್ರಣಾಮಮಾಡಿ

ಆತನನ್ನು ಕೇಳಿಕೊಂಡಿತು: 'ಪೂಜ್ಯರೆ, ಯಾವ ರೀತಿಯಾಗಿ ಸಾಧನೆಯಲ್ಲಿ ತೊಡಗಬೇಕು, ದಯವಿಟ್ಟು ತಿಳಿಸಿ.' ಗುರು ಹೇಳಿದ: 'ಈ ಮಂತ್ರ ಜಪಿಸು. ಯಾರಿಗೂ ಹಿಂಸೆ ಮಾಡಬೇಡ.' ಹೊರಡುವಾಗ ಹೇಳಿದ: 'ಮತ್ತೆ ಬಂದು ನಿನ್ನನ್ನು ನೋಡುತ್ತೇನೆ.'

"ಹಾಗೇ ಕೆಲವು ದಿನ ಉರುಳಿದುವು. ಹುಡುಗರಿಗೆ ಗೊತ್ತಾಯಿತು, ಆ ಹಾವು ಕಡಿಯೋದಿಲ್ಲ ಎಂಬುದಾಗಿ. ಕಲ್ಲು ಹೊಡೆದರು. ಆದರೂ ಅದು ಉದ್ರೇಕಗೊಳ್ಳಲಿಲ್ಲ; ಎರೆ ಹುಳುವಿನಂತೆ ವರ್ತಿಸಿತು. ಒಂದು ದಿನ ಒಬ್ಬ ಹುಡುಗ ಹತ್ತಿರ ಹೋಗಿ ಬಾಲ ಹಿಡಿದು ಚೆನ್ನಾಗಿ ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಒಂದು ಕಡೆಗೆ ಬಿಸಾಡಿಬಿಟ್ಟ. ಅದರ ಬಾಯಿಂದ ರಕ್ತ ಸುರಿಯ ಲಾರಂಭಿಸಿತು; ಪ್ರಜ್ಞೆ ತಪ್ಪಿ ಬಿದ್ದುಕೊಂಡಿತು; ಚಲನವಲನವೆಲ್ಲ ನಿಂತು ಹೋಯಿತು. ಆ ಹಾವು ಸತ್ತಿತೆಂದು ಭಾವಿಸಿ ಹುಡುಗರೆಲ್ಲರೂ ಹೊರಟು ಹೋದರು.

"ರಾತ್ರಿ ಬಹಳವಾಗಿ ಮುಂದುವರಿದನಂತರ ಆ ಹಾವಿಗೆ ಪ್ರಜ್ಞೆ ಬಂತು. ಬಹಳ ಕಷ್ಟಪಟ್ಟು ಮೆತ್ತಮೆತ್ತಗೆ ತೆವಳಿ ತನ್ನ ಹುತ್ತವನ್ನು ಸೇರಿಕೊಂಡಿತು. ಮೈಯೆಲ್ಲಾ ನಜ್ಜುಗುಜ್ಜಾಗಿಬಿಟ್ಟಿತ್ತು — ಚಲಿಸಲು ಶಕ್ತಿಯೇ ಇರಲಿಲ್ಲ. ಹಾಗೇ ಕೆಲವು ದಿನ ಕಳೆದುಹೋದವು. ಅದು ಮೂಳೆ ಚಕ್ಕಳ ಆಗಿಹೋಯಿತು. ರಾತ್ರಿವೇಳೆ ತನ್ನ ಆಹಾರಕ್ಕಾಗಿ ಆಗಾಗ ಹೊರಕ್ಕೆ ಬರುತ್ತಿತ್ತು. ಹಗಲುವೇಳೆ ಹುಡುಗರಿಗೆ ಹೆದರಿ ಹುತ್ತ ದಿಂದ ಹೊರಕ್ಕೆ ಬರುತ್ತಲೇ ಇರಲಿಲ್ಲ. ಮಂತ್ರ ಪಡೆದಂದಿನಿಂದ ಯಾರಿಗೂ ಹಿಂಸೆಮಾಡುತ್ತಿರಲಿಲ್ಲ. ಕಸ ಕಡ್ಡಿ ಎಲೆ ಮರದಿಂದ ಬಿದ್ದ ಹಣ್ಣುಹಂಪಲ ಇವನ್ನು ತಿಂದೇ ಪ್ರಾಣಧಾರಣೆ ಮಾಡಿಕೊಳ್ಳುತ್ತಿತ್ತು.

"ಸುಮಾರು ಒಂದು ವರ್ಷ ಕಳೆದನಂತರ ಆ ಬ್ರಹ್ಮಚಾರಿ ಅದೇ ಮಾರ್ಗವಾಗಿ ಬಂದು ಆ ಹಾವನ್ನು ಹುಡುಕಿದ. ಗೊಲ್ಲರ ಹುಡುಗರು ಹೇಳಿದರು: 'ಆ ಹಾವು ಸತ್ತುಹೋಯಿತು.' ಬ್ರಹ್ಮಚಾರಿ ನಂಬಲಿ[illegible] ಆತನಿಗೆ ಗೊತ್ತಿತ್ತು, ಮಂತ್ರಸಿದ್ಧಿಯಾದ ಹೊರತು ಅದು ಸಾ[illegible] ಎಂಬುದು. ಹಾಗೇ ಹುಡುಕಿಕೊಂಡು ಹುಡುಕಿಕೊಂಡು ವಾಗಿದ್ದ ಸ್ಥಳಕ್ಕೆ ಹೋಗಿ ತಾನು ಕೊಟ್ಟಿದ್ದ ಹೆಸರಿ[illegible] ಲಾರಂಭಿಸಿದ. ಗುರುವಿನ ಧ್ವನಿಯನ್ನು ಕೇಳಿ ಬಂದು ಅತ್ಯಂತ ಶ್ರದ್ಧಾಭಕ್ತಿಯಿಂ[illegible]

ಬ್ರಹ್ಮಚಾರಿ ಕೇಳಿದ: 'ಕ್ಷೇಮವೆ?' ಅದು ಹೇಳಿತು: 'ಹೌದು, ಕ್ಷೇಮದಿಂದಿದೇನೆ.' ಬ್ರಹ್ಮಚಾರಿ ಕೇಳಿದ: 'ಆದರೆ ನೀನೇಕೆ ಇಷ್ಟು ಕಂಗೆಟ್ಟು ಹೋಗಿದೀಯೆ?' ಹಾವು ಉತ್ತರವಿತ್ತಿತು: 'ಪೂಜ್ಯರೆ, ತಾವು ಉಪದೇಶ ವಿತ್ತಿದ್ದಿರಿ, ಯಾರಿಗೂ ಹಿಂಸೆಮಾಡಕೂಡದು ಎಂಬುದಾಗಿ. ಅದಕ್ಕಾಗಿ ಎಲೆ ಹಣ್ಣು ಹಂಪಲ ತಿನ್ನುತ್ತಿರುವುದರಿಂದ ಶರೀರ ಬಹುಶಃ ಕೃಶವಾಗಿ ತೋರುತ್ತಿರಬಹುದು.'

"ಅದರ ಹೃದಯದಲ್ಲಿ ಸತ್ತ್ವಗುಣ ಬೆಳೆದುಬಿಟ್ಟಿದ್ದರಿಂದ ಅದಕ್ಕೆ ಯಾರ ಮೇಲೂ ಕ್ರೋಧವಿರಲಿಲ್ಲ. ಆ ಗೊಲ್ಲರ ಹುಡುಗರು ತನ್ನನ್ನು ಕೊಂದುಹಾಕಲು ಯತ್ನಿಸಿದ್ದನ್ನು ಅದು ಮರತೇಬಿಟ್ಟಿತ್ತು.

"ಬ್ರಹ್ಮಚಾರಿ ಹೇಳಿದ: 'ಕೇವಲ ಆಹಾರಾಭಾವದಿಂದಲೇ ಈ ದುರವಸ್ಥೆ ಉಂಟಾಗದು. ನಿಶ್ಚಯವಾಗಿ ಬೇರೆ ಏನೊ ಕಾರಣವಿರಬೇಕು, ಯೋಚಿಸಿ ನೋಡು.' ಗೊಲ್ಲರ ಹುಡುಗರು ತನ್ನನ್ನು ಚೆನ್ನಾಗಿ ನೆಲಕ್ಕೆ ಅಪ್ಪಳಿಸಿದ್ದರ ಜ್ಞಾಪಕ ಅದಕ್ಕೆ ಬಂತು. ಅದು ಹೇಳಿತು: 'ಪೂಜ್ಯರೆ, ಈಗ ನನ್ನ ಜ್ಞಾಪಕಕ್ಕೆ ಬಂತು. ಒಂದು ದಿನ ಆ ಗೊಲ್ಲರ ಹುಡುಗರು ಚೆನ್ನಾಗಿ ನನ್ನನ್ನು ನೆಲಕ್ಕೆ ಅಪ್ಪಳಿಸಿದರು. ಏನೆಂದರೂ ಅವರಿನ್ನೂ ಅರಿಯದ ಹುಡುಗರು. ನನ್ನ ಮನಸ್ಸಿನಲ್ಲಿ ಎಂಥ ಬದಲಾವಣೆ ಬಂದುಬಿಟ್ಟಿದೆ ಎಂಬುದು ಅವರಿಗೆ ಗೊತ್ತಾಗಲಿಲ್ಲ. ನಾನು ಯಾರನ್ನೂ ಕಚ್ಚೋದಿಲ್ಲ, ಬೇರೆ ಯಾವ ವಿಧದಿಂದಲೂ ಹಿಂಸೆಮಾಡೋದಿಲ್ಲ ಎಂಬುದು ಅವರಿಗೆ ಹೇಗೆ ಗೊತ್ತಾಗಬೇಕು?' ಬ್ರಹ್ಮಚಾರಿ ಬಯ್ದು ಹೇಳಿದ: 'ಛೆ! ನೀನು ಎಂಥಾ ತಿಳಿಗೇಡಿ! ನಿನ್ನನ್ನು ನೀನು ಹೇಗೆ ರಕ್ಷಿಸಿಕೊಳ್ಳಬೇಕು ಎಂಬುದು ನಿನಗೆ ಗೊತ್ತಿಲ್ಲವಲ್ಲ. ಕಚ್ಚಬೇಡ ಅಂತ ಹೇಳಿದೆನೇ ವಿನಾ ಬುಸುಗುಟ್ಟಬೇಡ ಅಂತ ಹೇಳಲಿಲ್ಲವಲ್ಲ. ಬುಸುಗುಟ್ಟಿ ಏಕೆ ಅವರನ್ನು ಹೆದರಿಸಬಾರದಾಗಿತ್ತು?'

"ದುಷ್ಟರ ಕಡೆ ಬುಸುಗುಟ್ಟಬೇಕು. ಕೇಡು ತರದೆ ಇರಲೆಂದು ಅವರಿಗೆ ಭಯ ತೋರಿಸಬೇಕು. ಅವರ ಮೇಲೆ ವಿಷ ಕಾರಬಾರದು; ಅನಿಷ್ಟ ತರಬಾರದು.

"ಭಗವಂತನ ಸೃಷ್ಟಿಯಲ್ಲಿ ಹಲವಾರು ವಿಧದ ಜೀವ, ಜಂತು, ಮರ, ಗಿಡ ಇವೆ. ಪ್ರಾಣಿಗಳಲ್ಲಿ ಒಳ್ಳೆಯವೂ ಇವೆ, ಕೆಟ್ಟವೂ ಇವೆ. ಹುಲಿಯಂಥ ಕ್ರೂರ ಮೃಗಗಳೂ ಇವೆ. ಮರಗಳಲ್ಲಿ ಕೆಲವು ಅಮೃತೋಪಮ

ಹಣ್ಣು ಬಿಡುತ್ತವೆ. ಇನ್ನು ಕೆಲವು ಇವೆ, ಅವು ವಿಷಪೂರಿತ ಹಣ್ಣು ಬಿಡುತ್ತವೆ. ಅದೇ ರೀತಿಯಾಗಿ ಮನುಷ್ಯರಲ್ಲಿ ಒಳ್ಳೆಯವರೂ, ಕೆಟ್ಟವರೂ; ಸಾಧೂ, ಅಸಾಧೂ ಎಲ್ಲರೂ ಇದ್ದಾರೆ. ಸಂಸಾರಾಸಕ್ತರೂ ಇದ್ದಾರೆ; ಭಕ್ತರೂ ಇದ್ದಾರೆ.

"ಜೀವರಲ್ಲಿ ನಾಲ್ಕು ವಿಧ: ಬದ್ಧ, ಮುಮುಕ್ಷು, ಮುಕ್ತ, ನಿತ್ಯ.

"ನಿತ್ಯಜೀವರು: ನಾರದಾದಿಗಳು. ಇವರು ಈ ಪ್ರಪಂಚದಲ್ಲಿರುವುದು ಜೀವರ ಮಂಗಳಕ್ಕಾಗಿ—ಜೀವರಿಗೆ ಶಿಕ್ಷಣ ಕೊಡಲೋಸುಗ.

"ಬದ್ಧಜೀವರು: ವಿಷಯಾಸಕ್ತರಾಗಿರುತ್ತಾರೆ; ಭಗವಂತನನ್ನು ಮರೆತು ಇರುತ್ತಾರೆ—ಮರೆತು ಕೂಡ ಭಗವಂತನನ್ನು ನೆನೆಯೋದಿಲ್ಲ.

"ಮುಮುಕ್ಷುಜೀವರು ಎಂದರೆ, ಮುಕ್ತರಾಗಲು ಇಚ್ಛೆಪಡುವವರು. ಆದರೆ ಇವರಲ್ಲಿ ಕೆಲವರು ಜಯಶೀಲರಾಗುತ್ತಾರೆ; ಇನ್ನು ಕೆಲವರು ಆಗೋದಿಲ್ಲ.

"ಮುಕ್ತಜೀವರು: ಈ ಪ್ರಪಂಚದಲ್ಲಿ ಕಾಮಕಾಂಚನದಿಂದ ಬಂಧಿತರಾಗದವರು—ಉದಾಹರಣೆಗೆ ಸಾಧು ಮಹಾತ್ಮರು. ಇವರ ಹೃದಯದಲ್ಲಿ ವಿಷಯಬುದ್ಧಿ ಲೇಶಮಾತ್ರವೂ ಇರದು; ಸರ್ವದಾ ಹರಿಪಾದಪದ್ಮ ಚಿಂತನೆ ಮಾಡುತ್ತಿರುತ್ತಾರೆ.

"ಮೀನು ಹಿಡಿಯಲು ಕೆರೆಗೆ ಬಲೆ ಹಾಕುತ್ತಾರೆ. ಕೆಲವು ಮೀನು, ಅಂಥಾ ಬುದ್ಧಿಶಾಲಿಗಳು, ಬಲೆಗೆ ಬೀಳೋದೇ ಇಲ್ಲ. ಅವನ್ನು ನಿತ್ಯಜೀವರಿಗೆ ಹೋಲಿಸಬಹುದು. ಆದರೆ ಬಹು ಭಾಗ ಮೀನು ಬಲೆಗೆ ಬೀಳುತ್ತವೆ. ಅವುಗಳಲ್ಲಿ ಕೆಲವು ತಪ್ಪಿಸಿಕೊಂಡುಹೋಗಲು ಪ್ರಯತ್ನಿಸುತ್ತವೆ. ಅವನ್ನು ಮುಮುಕ್ಷುಜೀವರಿಗೆ ಹೋಲಿಸಬಹುದು. ಆದರೆ ಎಲ್ಲವೂ ತಪ್ಪಿಸಿಕೊಂಡು ಹೋಗಲಾರವು. ಎಲ್ಲೋ ಕೆಲವು 'ಟಪಕ್, ಟಪಕ್' ಅಂತ ಶಬ್ದ ಮಾಡಿ ಬಲೆಯಿಂದ ನೆಗೆದುಬಿಡುತ್ತವೆ. ಆಗ ಬೆಸ್ತ ಕೂಗಿಕೊಳ್ಳುತ್ತಾನೆ: 'ನೋಡಲ್ಲಿ! ದೊಡ್ಡದೊಂದು ತಪ್ಪಿಸಿಕೊಂಡುಹೋಗುತ್ತಿರೋದನ್ನ!' ಆದರೆ ಬಲೆಗೆ ಬಿದ್ದ ಅಧಿಕಾಂಶ ತಪ್ಪಿಸಿಕೊಳ್ಳಲಾರವು; ತಪ್ಪಿಸಿಕೊಳ್ಳಲು ಪ್ರಯತ್ನವನ್ನೂ ಮಾಡೋದಿಲ್ಲ. ಅದಕ್ಕೆ ಬದಲು ಬಲೆಯನ್ನು ಕಚ್ಚಿಕೊಂಡು ಕೆಸರಿನೊಳಕ್ಕೆ ಹೋಗಿ ಸುಮ್ಮನೆ ಮಲಗಿ ಯೋಚಿಸುತ್ತವೆ: 'ಇನ್ನು ಭಯಪಡಬೇಕಾದ್ದೇನಿಲ್ಲ; ಸುರಕ್ಷಿತವಾಗಿದೇವೆ ಇಲ್ಲಿ' ಅಂತ. ಆದರೆ ಅವಕ್ಕೆ

ಗೊತ್ತಿಲ್ಲ, ಬೆಸ್ತ 'ಸರ್' ಅಂತ ಬಲೆ ಎಳೆದು ತಮ್ಮನ್ನು ಹೊರಕ್ಕೆ ಹಾಕುತ್ತಾನೆ ಎಂಬುದು. ಇವನ್ನೇ ಬದ್ಧಜೀವರಿಗೆ ಹೋಲಿಸಬಹುದು.

"ಬದ್ಧಜೀವರು ಈ ಪ್ರಪಂಚದಲ್ಲಿ ಕಾಮಕಾಂಚನದಿಂದ ಬದ್ಧರಾಗಿರುತ್ತಾರೆ. ಕೈ ಕಾಲುಗಳಿಗೆ ಬೇಡಿ. ಭಾವಿಸುತ್ತಾರೆ, ಕಾಮಕಾಂಚನದಿಂದಲೇ ತಮಗೆ ಸುಖ ದೊರೆಯುತ್ತದೆ, ನಿರ್ಭಯರಾಗಿರಬಹುದು ಎಂಬುದಾಗಿ. ಅವರಿಗೆ ಗೊತ್ತಿಲ್ಲ ಅದರಿಂದಲೇ ಸರ್ವನಾಶ ಎಂಬುದು. ಬದ್ಧಜೀವ ಸಾಯುವಾಗ ಆತನ ಹೆಂಡತಿ ಹೇಳುತ್ತಾಳೆ: 'ನೀವೇನೊ ಹೊರಟುಬಿಟ್ಟಿರಿ, ನನಗೇನು ಮಾಡಿ ಹೋಗ್ತಾ ಇದೀರಿ?' ಮಾಯೆ ಅಂಥದು, ದೀಪ ಸ್ವಲ್ಪ ದಪ್ಪವಾಗಿ ಉರಿಯುತ್ತಿದ್ದರೆ ಬದ್ಧಜೀವ ಹೇಳುತ್ತಾನೆ: 'ಎಣ್ಣೆ ಹೆಚ್ಚಾಗಿ ಖರ್ಚಾಗುತ್ತಿದೆ, ಬತ್ತಿ ಕಡಮೆ ಮಾಡು.' ಆದರೆ, ಆತ ಮಲಗಿರೋದು ಮೃತ್ಯುಶಯ್ಯೆಯಲ್ಲಿ!

"ಬದ್ಧಜೀವರು ಭಗವಚ್ಚಿಂತನೆ ಮಾಡೋದೇ ಇಲ್ಲ. ಸಮಯ ದೊರೆತರೆ ಕಾಡುಹರಟೆ, ಇಲ್ಲದಿದ್ದರೆ ಕೆಲಸಕ್ಕೆ ಬಾರದ ಕೆಲಸ ಇವುಗಳಲ್ಲಿ ತೊಡಗುತ್ತಾರೆ. 'ಏಕೆ ಹೀಗೆ?' ಎಂದು ಕೇಳಿದರೆ, ಉತ್ತರ: 'ಸುಮ್ಮನೆ ಕುಳಿತಿರಲಾಗೋದಿಲ್ಲ; ಆಕಾಶಕ್ಕೆ ಏಣಿ ಹಾಕುತ್ತ ಇದೇವೆ.' ಹಾಗೂ ಸಮಯ ಕಳೆಯದೆ ಇತ್ತು ಎಂದರೆ, ಇಸ್ಪೀಟಾಡಲು ಆರಂಭಿಸುತ್ತಾರೆ."

ಕೊಠಡಿಯಲ್ಲಿ ನಿಶ್ಶಬ್ದತೆ ತಾಂಡವವಾಡುತ್ತಿದೆ.

ಒಬ್ಬ ಭಕ್ತ: "ಮಹಾಶಯರೆ, ಹಾಗಾದರೆ ಈ ವಿಧದ ಪ್ರಾಪಂಚಿಕ ಜೀವರ ಉದ್ಧಾರಕ್ಕೆ ಯಾವ ಮಾರ್ಗವೂ ಇಲ್ಲವೇ?"

ಶ್ರೀರಾಮಕೃಷ್ಣರು: "ನಿಶ್ಚಯವಾಗಿ ಇದೆ. ಆಗಾಗ ಸಾಧುಸಂಗ, ಆಗಾಗ ನಿರ್ಜನ ಪ್ರದೇಶದಲ್ಲಿ ಭಗವಚ್ಚಿಂತನೆ ಮಾಡುತ್ತಿರಬೇಕು. ಸದಸದ್ವಿಚಾರ ಮಾಡುತ್ತಿರಬೇಕು. ಆತನನ್ನು ಪ್ರಾರ್ಥಿಸಬೇಕು: 'ನನಗೆ ಶ್ರದ್ಧಾ ಭಕ್ತಿ ಕೊಡು' ಎಂಬುದಾಗಿ. ಶ್ರದ್ಧೆಯುಂಟಾಗಿಬಿಟ್ಟಿತು ಎಂದರೆ ಎಲ್ಲವೂ ದೊರೆತ ಹಾಗೆ. ಶ್ರದ್ಧೆಗಿಂತ ಮಿಗಿಲಾದ್ದು ಯಾವುದೂ ಇಲ್ಲ.

(ಕೇದಾರನಿಗೆ) "ಶ್ರದ್ಧೆಯ ಶಕ್ತಿ ಎಷ್ಟು ಜೋರಾದ್ದು ಗೊತ್ತೆ? ಪುರಾಣದಲ್ಲಿ ಹೇಳಿದೆ, ಸಾಕ್ಷಾತ್ ಪೂರ್ಣಬ್ರಹ್ಮ ಶ್ರೀರಾಮಚಂದ್ರ ಲಂಕೆಗೆ ಹೋಗಲು ಸೇತುವೆ ಕಟ್ಟಬೇಕಾಗಿ ಬಂತು. ಆದರೆ ಹನುಮಂತ ರಾಮನಾಮದಲ್ಲಿ ಶ್ರದ್ಧೆಯಿಟ್ಟು ಒಂದೇ ನೆಗೆತಕ್ಕೆ ಸಮುದ್ರ ದಾಟಿ ಆಚೆ ದಡ

ತಲುಪಿದ! ಆತನಿಗೆ ಸೇತುವೆ-ಗೀತುವೆ ಏನೂ ಬೇಕಾಗಲಿಲ್ಲ. (ಎಲ್ಲರೂ ನಗುತ್ತಿದಾರೆ.)

"ಒಮ್ಮೆ ಒಬ್ಬ ಸಮುದ್ರ ದಾಟಬೇಕಾಗಿತ್ತು. ವಿಭೀಷಣ ಒಂದು ಎಲೆಯ ಮೇಲೆ ರಾಮನಾಮ ಬರೆದು ಅದನ್ನು ಆತನ ಪಂಚೆ ಕೊನೆಗೆ ಕಟ್ಟಿ ಹೇಳಿದ: 'ಏನೂ ಹೆದರಬೇಕಾಗಿಲ್ಲ. ಶ್ರದ್ಧೆಯಿಟ್ಟು ನೀರಿನ ಮೇಲೆ ನಡೆದುಹೋಗಿಬಿಡು. ಆದರೆ ನೋಡಿಕೊ — ಶ್ರದ್ಧೆ ಕಳೆದುಕೊಂಡೆಯೋ ಮುಳುಗಿಹೋಗಿಬಿಡುತ್ತೀಯೆ.' ಆತ ನಿರಾಯಾಸವಾಗಿ ಸಮುದ್ರದ ಮೇಲೆ ನಡೆದುಹೋಗುತ್ತಿದ್ದ. ಆಗ ಆತನಿಗೆ ಅತ್ಯಂತ ಕುತೂಹಲ ಹುಟ್ಟಿತು, ಪಂಚೆ ಕೊನೆಯಲ್ಲಿ ಏನು ಕಟ್ಟಿದೆ ಒಮ್ಮೆ ನೋಡೋಣ ಎಂಬುದಾಗಿ. ಬಿಚ್ಚಿ ನೋಡುತ್ತಾನೆ, ಕೇವಲ ರಾಮನಾಮ ಬರೆದಿದೆ. ಆಗ ಅವನಿಗೆ ಭಾವನೆ ಬಂತು: 'ಏನಿದು? ಬರೀ ರಾಮನಾಮ!' ಶ್ರದ್ಧೆ ಕಳೆದುಕೊಳ್ಳುವುದೇ ತಡ ಮುಳುಗಿಹೋದ.

"ಯಾರಿಗೆ ಭಗವಂತನಲ್ಲಿ ಶ್ರದ್ಧೆ ಉಂಟಾಗಿದೆಯೊ, ಆತ ಮಹಾ ಪಾತಕಗಳನ್ನು ಮಾಡಿದ್ದರೂ — ಗೋ ಬ್ರಾಹ್ಮಣ ಸ್ತ್ರೀ ಹತ್ಯಾದಿ ಮಾಡಿದ್ದರೂ—ಆ ಶ್ರದ್ಧೆಯ ಬಲದಿಂದ ಅಂಥಾ ದೊಡ್ಡದೊಡ್ಡ ಪಾಪಗಳಿಂದಲೂ ಮುಕ್ತನಾಗಿಬಿಡಲು ಸಾಧ್ಯ. ಆತ ಭಗವಂತನಿಗೆ ಹೇಳಿಬಿಟ್ಟದ್ದೇ ಆದರೆ: 'ಹೇ ಭಗವಂತ, ಇನ್ನು ಮುಂದೆ ಎಂದೂ ಇಂಥ ಕಾರ್ಯಗಳನ್ನು ಮಾಡೋದಿಲ್ಲ ಅಂತ, ಆತ ಇನ್ನು ಹೆದರಬೇಕಾದ್ದೇನಿಲ್ಲ."

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದಾರೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀನಾಮವನು ಜಪಿಸುತಿರಲು
ಮುಕ್ತಿಗೊಯ್ಯದೆ ನೀನು ಬಿಡುವಳೇನು?
ಸ್ತ್ರೀಹತ್ಯ ಪಶುಹತ್ಯ ಭ್ರೂಣ ಬ್ರಾಹ್ಮಣಹತ್ಯ
ಇನಿತೆಲ್ಲ ಪಾಪಗಳ ಮಾಡಿದ್ದರೂ
ನಿನ್ನ ಶ್ರೀಶುಭನಾಮ ನನ್ನ ದುರಿತವ ನೀಗಿ
ಬ್ರಹ್ಮಪದವಿಯ ಕಡೆಗೆ ಎತ್ತದೇನು?

ನರೇಂದ್ರನನ್ನು ತೋರಿಸಿ ಪರಮಹಂಸರು ಹೇಳುತ್ತಿದಾರೆ: "ಈ ಹುಡುಗ ನಿಮಗೆ ಗೊತ್ತಿದೆ. ಇಲ್ಲಿ ಹೀಗೆ ವರ್ತಿಸುತ್ತಿದಾನೆ. ತುಂಟ

ಹುಡುಗ ತಂದೆಯ ಬಳಿ ಬಹಳ ಸಾಧು ಪ್ರಾಣಿ; ಜಗಲಿ ಮೇಲೆ ಆಟವಾಡೋವಾಗ ಬೇರೆ ಮೂರ್ತಿ. ಇವರು ನಿತ್ಯಸಿದ್ಧರ ಗುಂಪಿಗೆ ಸೇರಿದವರು. ಎಂದಿಗೂ ಸಂಸಾರದ ಬಲೆಗೆ ಬೀಳರು. ಸ್ವಲ್ಪ ವಯಸ್ಸಾಗುವುದರೊಳಗೇ ಜಾಗೃತರಾಗಿಬಿಡುತ್ತಾರೆ. ನೇರವಾಗಿ ಭಗವಂತನ ಕಡೆಗೆ ಮುಂದುವರಿದು ಬಿಡುತ್ತಾರೆ. ಇವರು ಈ ಪ್ರಪಂಚದಲ್ಲಿ ಜನ್ಮತಳೆಯುವುದು ಲೋಕ ಶಿಕ್ಷಣಕ್ಕಾಗಿ. ಇವರಿಗೆ ಈ ಜಗತ್ತಿನದಾವೂ ರುಚಿಸವು—ಕಾಮಕಾಂಚನ ದಲ್ಲಿ ಎಂದಿಗೂ ಆಸಕ್ತರಾಗರು.

"ವೇದದಲ್ಲಿದೆ ಹೋಮಾಪಕ್ಷಿ ಕಥೆ. ಎತ್ತರದ ಆಕಾಶದಲ್ಲಿ ವಾಸಿಸುತ್ತದೆ. ಅಲ್ಲೇ ಮೊಟ್ಟೆಯಿಡುತ್ತದೆ. ಬಳಿಕ ಮೊಟ್ಟೆ ಕೆಳಕ್ಕೆ ಬೀಳಲಾರಂಭಿಸುತ್ತದೆ—ಅದು ಅಷ್ಟೊಂದು ಎತ್ತರ, ಅನೇಕ ದಿನಗಳವರೆಗೆ ಮೊಟ್ಟೆ ಬೀಳುತ್ತಲೇ ಇರುತ್ತದೆ. ಬೀಳುತ್ತ ಬೀಳುತ್ತ ಮೊಟ್ಟೆ ಬಿರಿದು ಮರಿಯಾಗುತ್ತದೆ. ಬಳಿಕ ಮರಿ ಬೀಳುತ್ತಲೇ ಇರುತ್ತದೆ. ಬೀಳುತ್ತ ಬೀಳುತ್ತ ಕಣ್ಣು ಬಿಡುತ್ತದೆ; ರೆಕ್ಕೆ ಬೆಳೆಯುತ್ತವೆ. ಕಣ್ಣು ಬಿಟ್ಟೊಡನೆ ಅದಕ್ಕೆ ಗೊತ್ತಾಗುತ್ತದೆ, ತಾನು ಕೆಳಕ್ಕೆ ಬೀಳುತ್ತಿರುವುದಾಗಿ, ನೆಲಕ್ಕೆ ಬಿದ್ದದೇ ಆದರೆ ಒಮ್ಮೆಗೇ ಚೂರುಚೂರಾಗಿ ಹೋಗುವುದಾಗಿ. ಒಡನೆಯೇ ಅದು 'ಸೊಯ್ಯ್' ಅಂತ ಎತ್ತರದಲ್ಲಿರುವ ತನ್ನ ತಾಯ ಕಡೆಗೆ ಹಾರಿ ಹೋಗಿಬಿಡುತ್ತದೆ."

ನರೇಂದ್ರ ಈಗ ಕೊಠಡಿಯಿಂದ ಎದ್ದು ಹೊರಕ್ಕೆ ಹೋದ. ಪ್ರಾಣ-ಕೃಷ್ಣ, ಕೇದಾರ, ಮಾಸ್ಟರ್ ಇತ್ಯಾದಿ ಅನೇಕ ಮಂದಿ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ನೋಡಿ, ನರೇಂದ್ರ ಹಾಡುವುದರಲ್ಲಿ, ಬಾಜಿಸುವುದರಲ್ಲಿ, ಓದುವುದರಲ್ಲಿ ಎಲ್ಲದರಲ್ಲೂ ಚತುರ. ಅಂದು ಕೇದಾರ ನೊಡನೆ ತರ್ಕಮಾಡುತ್ತಿದ್ದ. ಆತನ ಮಾತುಕತೆಗಳನ್ನು 'ಕಚ್, ಕಚ್' ಅಂತ ಕತ್ತರಿಸಿ ತುಂಡುಮಾಡಿಹಾಕಿಬಿಟ್ಟ. (ಎಲ್ಲರೂ ನಗುತ್ತಿದಾರೆ.)

(ಮಾಸ್ಟರಿಗೆ) "ಇಂಗ್ಲಿಷಿನಲ್ಲಿ ತರ್ಕಶಾಸ್ತ್ರವಿದೆಯೇ?"

ಮಾಸ್ಟರ್: "ಹೌದು, ಇದೆ. ಅದಕ್ಕೆ 'ಲಾಜಿಕ್' ಅಂತ ಹೆಸರು."

ಶ್ರೀರಾಮಕೃಷ್ಣರು: "ಅದು ಏನು ಹೇಳುತ್ತದೆ ಹೇಳು ನೋಡೋಣ."

ಮಾಸ್ಟರಿಗೆ ಈಗ ಕಷ್ಟಕ್ಕಿಟ್ಟುಕೊಂಡಿತು. ಆತ ಹೇಳಿದ: "ಅದರ ಒಂದು ಭಾಗ ತಿಳಿಸುತ್ತದೆ, ಸಾಧಾರಣ-ಸಿದ್ಧಾಂತದಿಂದ ವಿಶೇಷ-

ಸಿದ್ಧಾಂತಕ್ಕೆ ಬರುವುದರ ಸಂಬಂಧವಾಗಿ. ಉದಾಹರಣೆಗೆ: ಮನುಷ್ಯರೆಲ್ಲರೂ ಸಾಯುತ್ತಾರೆ. ಪಂಡಿತರು ಮನುಷ್ಯರು. ಆದ್ದರಿಂದ ಪಂಡಿತರೂ ಸಾಯುತ್ತಾರೆ. ಅದರ ಇನ್ನೊಂದು ಭಾಗ ವಿಶೇಷ-ಸಿದ್ಧಾಂತದಿಂದ ಸಾಧಾರಣ-ಸಿದ್ಧಾಂತಕ್ಕೆ ಬರುವುದರ ಸಂಬಂಧವಾಗಿ. ಉದಾಹರಣೆಗೆ: ಈ ಕಾಗೆ ಕಪ್ಪು. ಆ ಕಾಗೆ ಕಪ್ಪು. ಕಣ್ಣಿಗೆ ಬೀಳುವ ಕಾಗೆಗಳೆಲ್ಲಾ ಕಪ್ಪೇ. ಆದ್ದರಿಂದ ಎಲ್ಲಾ ಕಾಗೆಗಳೂ ಕಪ್ಪೇ. ಈ ವಿಧದ ಸಿದ್ಧಾಂತ ಅವ್ಯಾಪ್ಯವಾಗಬಹುದು; ಹುಡುಕುತ್ತಾ ಹುಡುಕುತ್ತಾ ಬೇರೊಂದು ದೇಶದಲ್ಲಿ ಬಿಳಿ ಕಾಗೆ ಸಿಕ್ಕಿದರೂ ಸಿಕ್ಕಿಬಿಡಬಹುದು. ಇನ್ನೊಂದು ಉದಾಹರಣೆ ಇದೆ: ಮಳೆಯಾದ ಕಡೆ ಮೋಡ ಇದೆ ಅಥವಾ ಇತ್ತು. ಆದ್ದರಿಂದ ಮೋಡದಿಂದ ಮಳೆ ಬರುತ್ತದೆ. ಮತ್ತೊಂದು ಉದಾಹರಣೆ: ಈ ಮನುಷ್ಯನಿಗೆ ಮೂವತ್ತೆರಡು ಹಲ್ಲು. ಆ ಮನುಷ್ಯನಿಗೆ ಮೂವತ್ತೆರಡು ಹಲ್ಲು. ಯಾವ ಮನುಷ್ಯನನ್ನು ನೋಡಿದರೂ ಮೂವತ್ತೆರಡು ಹಲ್ಲು. ಆದ್ದರಿಂದ ಎಲ್ಲಾ ಮನುಷ್ಯರಿಗೂ ಮೂವತ್ತೆರಡು ಹಲ್ಲು. ಈ ವಿಧದ ಸಿದ್ಧಾಂತಗಳ ವಿಚಾರ ಆಂಗ್ಲ ತರ್ಕಶಾಸ್ತ್ರದಲ್ಲಿ ಇದೆ.''

ಪರಮಹಂಸರು ಈ ಮಾತುಗಳನ್ನು ಕಿವಿಯ ಮೇಲೆ ಬರಿದೆ ಹಾಕಿಕೊಂಡಿದ್ದೆಷ್ಟೋ ಅಷ್ಟೆ. ಕೇಳುತ್ತ ಕೇಳುತ್ತ ಅನ್ಯಮನಸ್ಕರಾಗಿಬಿಟ್ಟಿದ್ದರು. ಆದ್ದರಿಂದ ಇದರ ಸಂಬಂಧವಾಗಿ ವಿಶೇಷವಾಗಿ ಏನೂ ಮಾತುಕತೆ ಮುಂದುವರಿಯಲಿಲ್ಲ.

ಮಾತುಕತೆ ಮುಗಿದನಂತರ ಭಕ್ತರು ಉದ್ಯಾನವನದಲ್ಲಿ ಅಲ್ಲಲ್ಲಿ ಸುತ್ತಾಡಲಾರಂಭಿಸಿದಾರೆ. ಮಾಸ್ಟರ್ ಪಂಚವಟಿಯ ಹತ್ತಿರ ಅಡ್ಡಾಡುತ್ತಿದಾನೆ. ಘಂಟೆ ಸಾಯಂಕಾಲ ಐದು. ಹಾಗೇ ಸ್ವಲ್ಪ ಹೊತ್ತು ಅಡ್ಡಾಡಿದ ನಂತರ ಆತ ಪರಮಹಂಸರ ಕೊಠಡಿಗೆ ಒಂದ. ಅದರ ಉತ್ತರ ದಿಕ್ಕಿನ ಚಿಕ್ಕ ವರಾಂಡದಲ್ಲಿ ಒಂದು ಅದ್ಭುತ ದೃಶ್ಯ ಆತನ ಕಣ್ಣಿಗೆ ಬಿತ್ತು.

ಪರಮಹಂಸರು ಸ್ಥಿರವಾಗಿ ನಿಂತಿದಾರೆ. ನರೇಂದ್ರ ಹಾಡುತ್ತಿದಾನೆ. ಹತ್ತಿರವೇ ನಾಲ್ಕೈದು ಜನ ಭಕ್ತರೂ ನಿಂತಿದಾರೆ. ಪರಮಹಂಸರನ್ನು ಬಿಟ್ಟರೆ ಬೇರೆ ಯಾರೂ ಇಷ್ಟು ಮಧುರವಾಗಿ ಹಾಡುವುದನ್ನು ಆತ ಕೇಳಿರಲಿಲ್ಲ. ಹಾಗೇ ಪರಮಹಂಸರ ಕಡೆ ನೋಡಿ ಆಶ್ಚರ್ಯಚಕಿತನಾಗಿ ನಿಂತುಕೊಂಡ. ಅವರು ಎವೆಯಿಕ್ಕದೆ ನೆಟ್ಟ ಕಣ್ಣುಗಳಿಂದ ಸ್ಥಿರವಾಗಿ ನಿಂತಿದಾರೆ. ಉಸಿರಾಡುತ್ತಿರುವಂತೆಯೂ ತೋರಿಬರಲಿಲ್ಲ. ಕೇಳಲಾಗಿ, ಒಬ್ಬ

ಭಕ್ತ ಹೇಳಿದ ಪರಮಹಂಸರು ಸಮಾಧಿಯಲ್ಲಿದಾರೆ ಎಂಬುದಾಗಿ. ಮಾಸ್ಟರ್ ಇಂಥದನ್ನು ಎಂದೂ ನೋಡಿಯೂ ಇರಲಿಲ್ಲ, ಕೇಳಿಯೂ ಇರಲಿಲ್ಲ. ವಿಸ್ಮಯಗೊಂಡು ಭಾವಿಸಲಾರಂಭಿಸಿದ: "ಭಗವಂತನ ಧ್ಯಾನದಲ್ಲಿರುವಾಗ ಮನುಷ್ಯ ಇಷ್ಟರಮಟ್ಟಿಗೆ ಬಾಹ್ಯಜ್ಞಾನಶೂನ್ಯನಾಗಲು ಸಾಧ್ಯವೆ? ಎಂಥಾ ಮಟ್ಟದ ಶ್ರದ್ಧಾಭಕ್ತಿಗಳಿದ್ದರೆ ಈ ರೀತಿಯ ಅವಸ್ಥೆ ಬರುತ್ತದೆಯೊ!"

ನರೇಂದ್ರ ಹಾಡುತ್ತಿದಾನೆ:

ನಿರಂಜನ ಪರಿಚಿದ್ಘನ ಮೂರುತಿಯನು ನೆನೆಯೊ
ನಿರಂತರ—ಮೋಹನ ಮೂರುತಿಯನು ನೆನೆಯೊ.—
ಅನುಪಮ ತೇಜನ, ಸುಂದರ ರೂಪನ
ಭಕ್ತರ ಎದೆಯಲಿ ರಂಜಿಪನ,
ಕೋಟಿಚಂದ್ರಸಮ ಕಾಂತಿಯ ನಾಚಿಸಿ
ಮಿಂಚಿನಂತೆ ನಮ್ಮೆದೆಯೊಳು ರಂಜಿಸಿ
ಮೋಹಿಪನ—
ನಿರಂಜನ ಪರಿಚಿದ್ಘನ ಮೂರುತಿಯನು ನೆನೆಯೊ
ನಿರಂತರ—ಮೋಹನ ಮೂರುತಿಯನು ನೆನೆಯೊ!

ಹಾಡಿನ ಈ ಚರಣ ಹಾಡುತ್ತಿದ್ದಾಗ ಪರಮಹಂಸರ ಶರೀರ ಕಂಪಿಸಲಾರಂಭಿಸಿತು. ರೋಮಾಂಚವಾಗಿ ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿತು. ಏನನ್ನೊ ನೋಡುತ್ತ ಆಗಾಗ ಮುಗುಳುನಗೆ ನಗುತ್ತಿದಾರೆ. "ಕೋಟಿಚಂದ್ರಸಮ ಕಾಂತಿಯ ನಾಚಿಸಿ" ಹೊಳೆಯುತ್ತಿದ್ದ ಭಗವಂತನ ಅನುಪಮ ರೂಪನ್ನು ದರ್ಶನಮಾಡುತ್ತಿದಾರೆಯೇ? ಭಗವಂತನ ಚಿನ್ಮಯರೂಪದರ್ಶನ ಎಂಬುದು ಇದೇ ಏನು? ಎಷ್ಟು ಸಾಧನೆ ಮಾಡಿದರೆ, ಎಷ್ಟು ತಪಸ್ಸು ಮಾಡಿದರೆ, ಎಂಥಾ ಶ್ರದ್ಧಾಭಕ್ತಿ ಇದ್ದರೆ ಈ ರೀತಿಯ ದರ್ಶನ ಪಡೆಯಲು ಸಾಧ್ಯವೊ!

ಹಾಡು ಮುಂದುವರಿಯುತ್ತಿದೆ:

ಹೃದಯಪದ್ಮದಲಿ ಪೂಜಿಸು ಆತನ
ಶಾಂತ ಮಾನಸದಿ ಜ್ಞಾನ ನಯನದಲಿ,
ಅಪೂರ್ವ ದರ್ಶನ ಮೋಹನನ!

ಮತ್ತೆ ಅದೇ ಭುವನಮೋಹನ ಮುಗುಳುನಗೆ. ಶರೀರ ಹಿಂದಿನಂತೆ ನಿಸ್ಪಂದ. ಅರ್ಧಮುಚ್ಚಿದ ಕಣ್ಣುಗಳು. ಯಾವುದೊ ಅಪೂರ್ವ ರೂಪ

ದರ್ಶನಮಾಡುತ್ತ ಮಹದಾನಂದಸಾಗರದಲ್ಲಿ ಈಜಾಡುತ್ತಿರುವಂತೆ ಕಂಡಿತು.

ಈಗ ಆ ಹಾಡಿನ ಕೊನೆ ಭಾಗ ಬಂತು. ನರೇಂದ್ರ ಹಾಡುತ್ತಿದಾನೆ:

ಭಕ್ತಿಯೋಗದಾವೇಶದಿ ಮುಳುಗಿಪ
ಚಿದಾನಂದರಸ ಸಾಗರನ—
ನಿರಂಜನ ಹರಿಚಿದ್ಘನ ಮೂರುತಿಯನು ನೆನೆಯೊ
ನಿರಂತರ—ಮೋಹನ ಮೂರುತಿಯನು ನೆನೆಯೊ!

ಈ ಸಮಾಧಿ, ಈ ಪ್ರೇಮಾನಂದ ಇವುಗಳ ದೃಶ್ಯ ಮಾಸ್ಟರ ಮನಸ್ಸಿನ ಮೇಲೆ ಬಹಳ ಅಗಾಧ ಮುದ್ರೆ ಒತ್ತಿಬಿಟ್ಟವು. ಇವನ್ನೇ ಚಿಂತಿಸುತ್ತ ಮನೆಗೆ ಹಿಂದಿರುಗುತ್ತಿದಾನೆ. ಆಗಾಗ ಆತನ ಹೃದಯವನ್ನ ಪ್ರೇಮೋನ್ಮತ್ತಕಾರಿ "ಭಕ್ತಿಯೋಗದಾವೇಶದಿ ಮುಳುಗಿಪ ಚಿದಾನಂದರಸ ಸಾಗರನ—" ಎಂಬ ನುಡಿ ತಾನು ತಾನಾಗೇ ಮೀಟುತ್ತಿದೆ.

ಮಾರನೆ ದಿನವೂ ಮಾಸ್ಟರಿಗೆ ರಜವಿತ್ತು. ದಕ್ಷಿಣೇಶ್ವರಕ್ಕೆ ಅಪರಾಹ್ನ ಮೂರಕ್ಕೆ ಬಂದ. ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ನೆಲದ ಮೇಲೆ ಮಂದಲಿಗೆ ಹಾಸಿದೆ. ಅದರ ಮೇಲೆ ನರೇಂದ್ರ, ಭವನಾಥ, ಇನ್ನೂ ಕೆಲವರು ಕುಳಿತಿದಾರೆ. ಅವರೆಲ್ಲರೂ ಹತ್ತೊಂಬತ್ತು ಇಪ್ಪತ್ತು ವರ್ಷದ ಯುವಕರು. ನಗುಮುಖದಿಂದ ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಅವರೊಡನೆ ಆನಂದದಿಂದ ಮಾತುಕತೆಯಾಡುತ್ತಿದಾರೆ.

ಮಾಸ್ಟರ್ ಕೊಠಡಿಯನ್ನು ಪ್ರವೇಶಿಸುವುದೇ ತಡ ಪರಮಹಂಸರು ಗಟ್ಟಿಯಾಗಿ ನಗುತ್ತ ಯುವಕರಿಗೆ ಹೇಳುತ್ತಿದಾರೆ: "ಅಲ್ಲಿ! ಮತ್ತೆ ಬಂದಿದಾನೆ." ಅವರೂ ನಗಲಾರಂಭಿಸಿದರು. ಮಾಸ್ಟರ್ ಸಾಷ್ಟಾಂಗ ಪ್ರಣಾಮಮಾಡಿ ಕುಳಿತುಕೊಂಡ. ಹಿಂದೆ, ಕೈ ಜೋಡಿಸಿ ಪ್ರಣಾಮ ಮಾಡುತ್ತಿದ್ದ—ಆಂಗ್ಲ ವಿದ್ಯಾಭ್ಯಾಸ ಪಡೆದವರ ಹಾಗೆ. ಆದರೆ ಇಂದು ಸಾಷ್ಟಾಂಗ ಪ್ರಣಾಮಮಾಡುವುದನ್ನು ಕಲಿತಿದಾನೆ.

ಈಗ ಪರಮಹಂಸರು ತಮ್ಮ ನಗುವಿಗೆ ಕಾರಣವೇನು ಎಂಬುದನ್ನು ಆ ಯುವಕರಿಗೆ ವಿವರಿಸಲಾರಂಭಿಸಿದರು. ಹೇಳುತ್ತಿದಾರೆ: "ನೋಡಿ, ಒಮ್ಮೆ ಒಬ್ಬ ಒಂದು ನವಿಲಿಗೆ ಅಪರಾಹ್ನ ನಾಲ್ಕು ಘಂಟೆ ಸಮಯಕ್ಕೆ ಅಫೀಮು ತಿನ್ನಿಸಿದ. ಮಾರನೆ ದಿನ ಸರಿಯಾಗಿ ನಾಲ್ಕು ಘಂಟೆಗೆ ನವಿಲು

ಮತ್ತೆ ಬಂತು. ಅಫೀಮಿನ ತೆವಲು ಅದನ್ನು ಹಿಡಿದುಬಿಟ್ಟಿತ್ತು. ಅದಕ್ಕಾಗೇ ಆ ಸಮಯಕ್ಕೆ ಸರಿಯಾಗಿ ಅಫೀಮು ತಿನ್ನಲು ಬಂತು.'' (ಎಲ್ಲರೂ ನಗುತ್ತಿದಾರೆ.)

ಮಾಸ್ಟರ್ ತನ್ನೊಳಗೆ ತಾನೆ ಭಾವಿಸುತ್ತಿದಾನೆ, ಇದು ತನಗನ್ವಯಿಸುವ ಸರಿಯಾದ ಉದಾಹರಣೆ. ಮನೆಯಲ್ಲೂ ಇವರ ಯೋಚನೆ ಮಾಡದೆ ಒಂದು ಕ್ಷಣವೂ ಇರಲಾಗುತ್ತಿಲ್ಲ, ಮನಸ್ಸು ಇಲ್ಲೇ ನೆಲಸಿಬಿಟ್ಟಿದೆ. ಮತ್ತೆ ಬರುವವರೆಗೆ ನಿಮಿಷಗಳನ್ನು ಎಣಿಸುತ್ತಲೇ ಇರಬೇಕಾಗಿದೆ.

ಇಷ್ಟರಲ್ಲಿ ಪರಮಹಂಸರು, ಆ ಯುವಕರು ತಮ್ಮ ಸಮವಯಸ್ಕರೊ ಏನೊ ಎಂಬಂತೆ ಹುಡುಗಾಟವಾಡಲು ಆರಂಭಿಸಿಬಿಟ್ಟರು. ಹಾಸ್ಯದ ಲಹರಿ ಸುಮ್ಮನೆ ಏಳುತ್ತಿದೆ. ಆನಂದದ ಕೂಟವೇ ಆಗಿ ಕಾಣುತ್ತಿದೆ. ಮಾಸ್ಟರ್ ಆಶ್ಚರ್ಯಚಕಿತನಾಗಿ ಈ ಅದ್ಭುತ ಸೋಜಿಗವನ್ನು ನೋಡುತ್ತಿದಾನೆ. ಭಾವಿಸುತ್ತಿದಾನೆ: ''ನಾನು ಇವರು ಪ್ರೇಮೋನ್ಮತ್ತರಾಗಿದ್ದುದನ್ನು ನೋಡಿದುದು ನಿನ್ನೆ ತಾನೆ? ಎಂದೂ ಕಾಣದ ಅಸದೃಶ ಪ್ರೇಮಾನಂದ ಸಾಗರದಲ್ಲಿ ಇವರು ಈಜಾಡುತ್ತಿರಲಿಲ್ಲವೆ? ಇಂದು ಪ್ರಾಕೃತರಂತೆ ವ್ಯವಹರಿಸುತ್ತಿದಾರಲ್ಲ! ಮೊದಲನೆ ದರ್ಶನದ ದಿನ ಉಪದೇಶ ಕೊಡುವಾಗ ನನ್ನನ್ನು ಒಂದು ವಿಧದ ತಿರಸ್ಕಾರ ದೃಷ್ಟಿಯಿಂದ ನೋಡಿದವರು ಇವರೇ ಅಲ್ಲವೇ? 'ನೀನು? ಜ್ಞಾನಿ!' ಎಂದು ಬಯ್ದು ಬುದ್ಧಿವಾದವಿತ್ತವರು ಇವರೇ ಅಲ್ಲವೇ? ಸಾಕಾರ, ನಿರಾಕಾರ ಎರಡೂ ಸತ್ಯ ಅಂತ ಹೇಳಿದವರು ಇವರೇ ಅಲ್ಲವೇ? ಭಗವಂತನೊಬ್ಬನೇ ಸತ್ಯ, ಈ ಜಗತ್ತಿನ ಪ್ರತಿಯೊಂದೂ ಅನಿತ್ಯ ಅಂತ ಹೇಳಿದವರು ಇವರೇ ಅಲ್ಲವೇ? ಸಂಸಾರದಲ್ಲಿ ಶ್ರೀಮಂತರ ಮನೆ ದಾಸಿಯೋಪಾದಿಯಲ್ಲಿ ಇರಬೇಕು ಎಂದು ಬುದ್ಧಿವಾದವಿತ್ತವರು ಇವರೇ ಅಲ್ಲವೇ?''

ಪರಮಹಂಸರು ಆ ಯುವಕರೊಡನೆ ಬಹಳವಾಗಿ ಈಗ ತಮಾಷೆಯಲ್ಲಿ ತೊಡಗಿದಾರೆ; ಆಗಾಗ ಮಾಸ್ಟರ ಕಡೆ ಕಣ್ಣು ಹಾಕುತ್ತಿದಾರೆ. ಮಾಸ್ಟರ್ ಮಂತ್ರಮುಗ್ಧನಾಗಿ ಸುಮ್ಮನೆ ಕುಳಿತಿರುವುದು ಅವರ ಕಣ್ಣಿಗೆ ಬಿತ್ತು. ಅವರು ರಾಮಲಾಲನನ್ನು ಸಂಬೋಧಿಸಿ ಹೇಳುತ್ತಿದಾರೆ: ''ನೋಡು, ಈತನಿಗೆ ವಯಸ್ಸು ಸ್ವಲ್ಪ ಹೆಚ್ಚಾಗಿದೆಯಲ್ಲ ಅದಕ್ಕಾಗಿ ಈ ಗಂಭೀರ ಮುದ್ರೆ. ಇವರು ಇಷ್ಟೊಂದು ತಮಾಷೆ–ಗಿಮಾಷೆ ಮಾಡುತ್ತಿದಾರೆ,

ಆದರೂ ಇವನು ಸುಮ್ಮನೆ ಕುಳಿತಿದಾನೆ." ಮಾಸ್ಟರಿಗೆ ಇಪ್ಪತ್ತೆಂಟು ವಯಸ್ಸು.

ಹಾಗೇ ಮಾತಾಡುತ್ತ ಆಡುತ್ತ ಪರಮ ಭಕ್ತ ಹನುಮಂತನ ಮಾತು ಬಂತು. ಪರಮಹಂಸರ ಕೊಠಡಿಯಲ್ಲಿ ಆತನ ಒಂದು ಪಟವೂ ತೂಗ ಹಾಕಿತ್ತು.

ಶ್ರೀರಾಮಕೃಷ್ಣರು ಹೇಳುತ್ತಿದಾರೆ: "ಆಲೋಚಿಸಿ ನೋಡಿ, ಹನುಮಂತನ ಭಾವ ಎಂಥದು ಎಂಬುದನ್ನ! ಧನ, ಮಾನ, ದೇಹಸುಖ ಯಾವುದೂ ಅವನಿಗೆ ಬೇಕಾಗಿರಲಿಲ್ಲ; ಬೇಕಾಗಿದ್ದುದು ಕೇವಲ ಭಗವಂತ ಮಾತ್ರ. ಸ್ಫಟಿಕದ ಕಂಬದೊಳಗಿಟ್ಟಿದ್ದ ಬ್ರಹ್ಮಾಸ್ತ್ರ ತೆಗೆದುಕೊಂಡು ಪರಾರಿಯಾಗುತ್ತಿದ್ದಾಗ, ಮಂಡೋದರಿ ವಿವಿಧ ಫಲಗಳಿಂದ ಆತನನ್ನು ಲೋಭಗೊಳಿಸಲು ಪ್ರಯತ್ನಿಸಿದಳು. ಆದರೆ ಹನುಮಂತ ಇದಕ್ಕೆಲ್ಲಾ ಮರುಳುಹೋಗೋ ಮಗುವೇ! ಆಗ ಆತ ಹೀಗೆ ಹಾಡಿದ:

ನನಗಾವ ಫಲ ಬೇಕು
ಜನ್ಮ ಸಫಲವ ಗೈವ ಫಲವಿರಲು ನನಗೆ?
ಮೋಕ್ಷಫಲಗಳ ಬಿಡುವ
ಶ್ರೀರಾಮತರುವಿಹುದು ನನ್ನ ಎದೆಯೊಳಗೆ!
ಶ್ರೀರಾಮ ಕಲ್ಪತರು ಮೂಲದಲಿ ನಾ ಕುಳಿತು
ಬೇಕಾದ ಫಲಗಳನು ಪಡೆಯುತಿರುವೆ.
ಪ್ರತಿಫಲವ ನಾ ಬಯಸೆ; ಜಗದ ಕಹಿಫಲಗಳನು
ನಿಮ್ಮೊಂದಿಗೇ ಬಿಟ್ಟು ಮುನ್ನಡೆಯುವೆ!"

ಪರಮಹಂಸರು ಈ ಹಾಡನ್ನು ಹಾಡುತ್ತಿದ್ದ ಹಾಗೇ ಸಮಾಧಿಸ್ಥರಾಗಿ ಬಿಟ್ಟಿದಾರೆ. ಮತ್ತೆ ನಿಸ್ಪಂದ ಹೃದಯ, ಸ್ತಿಮಿತ ಲೋಚನ, ಸ್ಥಿರ ದೇಹ! ಕುಳಿತುಕೊಂಡಿದಾರೆ—ಫೋಟೋವಿನಲ್ಲಿ ಕುಳಿತಿರುವ ಹಾಗೆ. ಭಕ್ತರು ಈಗೊಂದು ಕ್ಷಣದ ಹಿಂದೆ ವಿನೋದದಲ್ಲಿ ತೊಡಗಿದ್ದವರು ಈಗ ಪರಮಹಂಸರ ಈ ಅದ್ಭುತ ಅವಸ್ಥೆಯನ್ನು ಏಕದೃಷ್ಟಿಯಿಂದ ನೋಡುತ್ತ ಕುಳಿತಿದಾರೆ. ಸಮಾಧಿ ಅವಸ್ಥೆಯನ್ನು ಮಾಸ್ಟರ್ ಈಗ ಎರಡನೆ ಸಲ ನೋಡುತ್ತಿದಾನೆ.

ಬಹಳ ಹೊತ್ತಾದ ಮೇಲೆ ಪರಮಹಂಸರ ಸಮಾಧ್ಯವಸ್ಥೆ ಪರಿವರ್ತನೆ ಹೊಂದಲಾರಂಭಿಸಿತು. ದೇಹ ಅಲುಗುತ್ತಿದೆ. ಮುಖದಲ್ಲಿ ಮಂದಹಾಸ

ಹೊರಸೂಸುತ್ತಿದೆ. ಇಂದ್ರಿಯ ಸಮೂಹ ತಮ್ಮ ತಮ್ಮ ಕೆಲಸ ಮಾಡಹತ್ತಿವೆ. ಕಣ್ಣಿನಿಂದ ಪ್ರೇಮಾಶ್ರು ಸುರಿಸುತ್ತ ಸುರಿಸುತ್ತ 'ರಾಮ', 'ರಾಮ' ಅಂತ ಉಚ್ಚರಿಸುತ್ತಿದಾರೆ. ಮಾಸ್ಟರ್ ಯೋಚಿಸಲಾರಂಭಿಸಿದ, ಈಗ ಕೆಲವು ನಿಮಿಷಗಳ ಹಿಂದೆ ಐದು ವರ್ಷದ ಹಸುಳೆಯ ಹಾಗೆ ಯುವಕರೊಡನೆ ತಮಾಷೆ ಮಾಡುತ್ತಿದ್ದವರು ಈ ಮಹಾಪುರುಷರೇ ಏನು!

ಪರಮಹಂಸರು ಪ್ರಕೃತಿಸ್ಥರಾಗಿ ಮತ್ತೆ ಸಾಮಾನ್ಯರ ಹಾಗೆ ವ್ಯವಹರಿಸಲಾರಂಭಿಸಿದರು. ಮಾಸ್ಟರ್ ಮತ್ತು ನರೇಂದ್ರನನ್ನು ಸಂಬೋಧಿಸಿ ಹೇಳುತ್ತಿದಾರೆ: "ನೀವಿಬ್ಬರೂ ಇಂಗ್ಲಿಷಿನಲ್ಲಿ ಸಂಭಾಷಿಸಿ, ವಾದಮಾಡಿ. ನಾನು ಆಲಿಸುತ್ತೇನೆ." ಈ ಮಾತನ್ನು ಕೇಳಿ ಮಾಸ್ಟರ್, ನರೇಂದ್ರ ಇಬ್ಬರೂ ನಗುತ್ತಿದಾರೆ. ಇಬ್ಬರೂ ಸ್ವಲ್ಪ ಹೊತ್ತು ಸಂಭಾಷಣೆ ಮಾಡಿದರು. ಆದರೆ ಬಂಗಾಳಿಯಲ್ಲಿ. ಪರಮಹಂಸರೆದುರಿಗೆ ಮಾಸ್ಟರ್ ವಾದವಿವಾದದಲ್ಲಿ ತೊಡಗುವುದು, ಎಂದಿಗೂ ನಡೆಯದ ಮಾತು. ಆತನ ತಾರ್ಕಿಕ ಪ್ರವೃತ್ತಿಗೆ ಪರಮಹಂಸರ ಕೃಪೆಯಿಂದ ಒಂದು ರೂಪದಲ್ಲಿ ಬೀಗ ಮುದ್ರೆ ಬಿದ್ದಿತ್ತು. ಆದ್ದರಿಂದ ಆತ ತರ್ಕ, ವಾದವಿವಾದ ಮಾಡುವ ಬಗೆ ಹೇಗೆ? ಪರಮಹಂಸರು ಬಲಾತ್ಕರಿಸಿದರೂ ಸಂಭಾಷಣೆ ಇಂಗ್ಲಿಷಿನಲ್ಲಿ ನಡೆಯಲಿಲ್ಲ.

ಘಂಟೆ ಐದು. ಕೆಲವು ಮಂದಿ ಭಕ್ತರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿಹೊರಟುಹೋದರು. ಕೇವಲ ಮಾಸ್ಟರ್ ಮತ್ತು ನರೇಂದ್ರ ಉಳಿದುಕೊಂಡಿದಾರೆ. ನರೇಂದ್ರ ಕಾಲು-ತಂಬಿಗೆ ತೆಗೆದುಕೊಂಡು ಹಂಸ-ಪುಷ್ಕರಣಿ ಮತ್ತು ಸರ್ವೆ ಮರಗಳ ಕಡೆಗೆ ಕೈ ಕಾಲು ತೊಳೆಯಲು ಹೋದ. ಮಾಸ್ಟರ್ ದೇವಾಲಯಗಳ ಹತ್ತಿರ ಅಡ್ಡಾಡುತ್ತಿದಾನೆ. ಸ್ವಲ್ಪ ಹೊತ್ತಾದ ನಂತರ ಕುಟೀರದ ಮಾರ್ಗವಾಗಿ ಹಂಸ-ಪುಷ್ಕರಣಿಯ ಕಡೆಗೆ ಮುಂದುವರಿದು ನೋಡುತ್ತಾನೆ, ಪುಷ್ಕರಣಿಯ ದಕ್ಷಿಣ ದಿಕ್ಕಿನ ಹಂತಗಳ ಮೇಲಿರುವ ಚೌಕಟ್ಟಿನ ಮೇಲೆ ಪರಮಹಂಸರು ನಿಂತಿದಾರೆ, ನರೇಂದ್ರ ಮುಖ ತೊಳೆದುಕೊಂಡು ಕೈಯಲ್ಲಿ ಕಾಲು-ತಂಬಿಗೆ ಹಿಡಿದುಕೊಂಡು ನಿಂತಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನೋಡು, ಇನ್ನೂ ಹೆಚ್ಚು ಹೆಚ್ಚಾಗಿ ಇಲ್ಲಿಗೆ ಬಂದು ಹೋಗುತ್ತಿರು. ಹೊಸದಾಗಿ ಬಂದಿದೀಯೆ. ಪರಿಚಯವಾದ ಹೊಸದರಲ್ಲಿ ಹೆಚ್ಚು ಹೆಚ್ಚಾಗಿ ಭೇಟಿ ಮಾಡೋದುಂಟು. ಉದಾಹರಣೆಗೆ ಹೊಸ—ಪತಿ. (ನರೇಂದ್ರ, ಮಾಸ್ಟರ್ ಇಬ್ಬರೂ ನಗುತ್ತಾರೆ.) ಏನು, ಬರುತ್ತೀಯೆ ತಾನೆ?"

ನರೇಂದ್ರ ಬ್ರಾಹ್ಮಸಮಾಜದ ಸದಸ್ಯನಾಗಿದ್ದುದರಿಂದ ತನ್ನ ವಾಗ್ದಾನದ ವಿಷಯವಾಗಿ ಬಹಳ ಎಚ್ಚರಿಕೆಯಿಂದ ಇದ್ದ. ನಗುತ್ತ ನಗುತ್ತ ಹೇಳುತ್ತಿದಾನೆ: "ಆಗಲಿ, ಪ್ರಯತ್ನಮಾಡುತ್ತೇನೆ."

ಮೂವರೂ ಕುಟೀರದ ಮಾರ್ಗವಾಗಿ ಪರಮಹಂಸರ ಕೊಠಡಿ ಕಡೆ ಬರುತ್ತಿದಾರೆ. ಕುಟೀರದ ಹತ್ತಿರ ಪರಮಹಂಸರು ಮಾಸ್ಟರಿಗೆ ಹೇಳಲಾರಂಭಿಸಿದರು,: "ನೋಡು ರೈತರು ಜಾತ್ರೆಗೆ ಹೋರಿಗರು ಕೊಂಡುಕೊಂಡುಬರಲು ಹೋಗುತ್ತಾರೆ. ಅವರು ಒಳ್ಳೆಯದಾವುದು ಕೆಟ್ಟದಾವುದು ಎಂಬುದನ್ನು ಸರಿಯಾಗಿ ಗುರುತಿಸಬಲ್ಲರು. ಬಾಲದ ಹತ್ತಿರ ಕೈಯಿಟ್ಟು ನೋಡುತ್ತಾರೆ. ಕೆಲವು ಹೋರಿ ಆಗ ಸುಮ್ಮನೆ ಬಿದ್ದುಕೊಳ್ಳುತ್ತವೆ; ಅಂಥವನ್ನು ಕೊಂಡುಕೊಳ್ಳೋದಿಲ್ಲ. ಬಾಲದ ಹತ್ತಿರ ಕೈಯಿಟ್ಟೊಡನೆಯೇ ಯಾವ ಹೋರಿ ಕೈಕಾಲು ಒದರಿ ಮೊರಗುಟ್ಟುತ್ತ ತಿವಿಯಲು ಬರುವುದೊ ಅಂಥವು ಅವರಿಗೆ ಹಿಡಿಸುತ್ತವೆ. ನರೇಂದ್ರ ಈ ಗುಂಪಿಗೆ ಸೇರಿದ ಹೋರಿ; ಅಂತರ್ಯದಲ್ಲಿ ಒಳ್ಳೇ ತಿರುಳಿದೆ."

ಹೀಗೆಂದು ಹೇಳಿ ಪರಮಹಂಸರು ನಗಲಾರಂಭಿಸಿದರು. ಮತ್ತೆ ಹೇಳುತ್ತಿದಾರೆ: "ಕೆಲಕೆಲವರಿದಾರೆ ಹಾಲಿನಲ್ಲಿ ನೆಂದ ಅವಲಕ್ಕಿ ಹಾಗೆ—ಸಾಹಸವಿಲ್ಲ, ಜೋರಿಲ್ಲ, ನಸೆನಸೆ ಅನ್ನುತ್ತಿರುತ್ತಾರೆ!"

ಸಾಯಂಕಾಲವಾಗಿದೆ. ಪರಮಹಂಸರು ಭಗವಚ್ಚಿಂತನೆ ಮಾಡುತ್ತಿದಾರೆ. ಮಾಸ್ಟರಿಗೆ ಹೇಳುತ್ತಿದಾರೆ: "ನೀನು ನರೇಂದ್ರನೊಡನೆ ಮಾತುಕತೆಗಳಾಡಿ ಆತನೆಂಥವನು ಎಂಬುದನ್ನು ನನಗೆ ಬಂದು ತಿಳಿಸು."

ಸಾಯಂ ಮಂಗಳಾರತಿ ಮುಗಿಯಿತು. ಬಹಳ ಹೊತ್ತಾದನಂತರ ಮುಖಮಂಟಪದ ಪಶ್ಚಿಮ ಭಾಗದಲ್ಲಿ ನರೇಂದ್ರ ಮಾಸ್ಟರಿಗೆ ಸಿಕ್ಕಿದ. ಇಬ್ಬರೂ ಮಾತುಕತೆಗಳಾಡಲು ಶುರುಮಾಡಿದರು. ನರೇಂದ್ರ ತಾನು ವಿಶ್ವವಿದ್ಯಾನಿಲಯದಲ್ಲಿ ಓದುತ್ತಿರುವುದು, ಸಾಧಾರಣ ಬ್ರಾಹ್ಮಸಮಾಜದ ಸದಸ್ಯನಾಗಿರುವುದು ಇತ್ಯಾದಿಗಳ ವಿಷಯವಾಗಿ ಹೇಳಲಾರಂಭಿಸಿದ.

ಆಗಲೆ ಬಹಳವಾಗಿ ರಾತ್ರಿಯಾಗಿಬಿಟ್ಟಿದೆ. ಮಾಸ್ಟರ್ ಮನೆಗೆ ಹಿಂದಿರುಗಬೇಕಾಗಿದೆ; ಆದರೆ ಇಚ್ಛೆಯಾಗುತ್ತಿಲ್ಲ. ನರೇಂದ್ರನ ಹತ್ತಿರದಿಂದೆದ್ದು ಪರಮಹಂಸರನ್ನು ಹುಡುಕಲಾರಂಭಿಸಿದ. ಅವರ ಮಧುರವಾದ ಹಾಡು ಕೇಳಿ ಆತನ ಹೃದಯ, ಮನಸ್ಸು ಮುಗ್ಧವಾಗಿ ಹೋಗಿವೆ; ಮತ್ತೆ ಕೇಳಬೇಕು ಅಂತ ಉತ್ಕಟೇಚ್ಛೆಯಾಗಿದೆ. ಹುಡುಕುತ್ತ ಹುಡುಕುತ್ತ

ಕಾಳೀದೇವಾಲಯದ ಮುಂಭಾಗದಲ್ಲಿರುವ ನಾಟ್ಯಮಂದಿರದಲ್ಲಿ ಒಬ್ಬರೇ ಅಡ್ಡಾಡುತ್ತಿರುವುದನ್ನು ಕಂಡ. ದೇವಾಲಯದಲ್ಲಿ ಭಗವತಿಯ ಎರಡು ಪಾರ್ಶ್ವಗಳಲ್ಲಿಯೂ ಬೆಳಕು ಉರಿಯುತ್ತಿವೆ. ಆ ಬೃಹತ್ ನಾಟ್ಯಮಂದಿರ ದಲ್ಲಿ ಎಲ್ಲೋ ಒಂದು ದೀಪ ಮಾತ್ರ ಉರಿಯುತ್ತಿದೆ, ಅದೂ ಕ್ಷೀಣವಾಗಿ. ಕತ್ತಲೆ ಬೆಳಕು ಮಿಶ್ರಿತವಾದಾಗ ಹೇಗೆ ಕಾಣುತ್ತದೆಯೊ ಹಾಗೆ ಕಾಣುತ್ತಿದೆ ನಾಟ್ಯಮಂದಿರದ ಒಳಭಾಗ.

ಪರಮಹಂಸರ ಹಾಡು ಮಾಸ್ಟರನ್ನು ಮಂತ್ರಮುಗ್ಧ ಸರ್ಪದ ಹಾಗೆ ಮಾಡಿಬಿಟ್ಟಿದೆ. ಒಂದು ವಿಧವಾದ ಸಂಕೋಚದಿಂದ ಪರಮಹಂಸರನ್ನು ಕೇಳುತ್ತಿದಾನೆ: "ಮತ್ತೆ ತಾವು ಹಾಡುತ್ತೀರೇನು?" ಪರಮಹಂಸರು ಸ್ವಲ್ಪ ಹೊತ್ತು ಆಲೋಚಿಸಿ ಹೇಳುತ್ತಿದಾರೆ: "ಇಲ್ಲ, ಈ ದಿನ ಇಲ್ಲ." ಬಳಿಕ ಏನನ್ನೊ ಜ್ಞಾಪಿಸಿಕೊಂಡವರಾಗಿ ಹೇಳುತ್ತಿದಾರೆ: "ಹಾಗಾದರೆ ಒಂದು ಕೆಲಸ ಮಾಡು. ನಾನು ಕಲ್ಕತ್ತದಲ್ಲಿರೋ ಬಲರಾಮನ ಮನೆಗೆ ಹೋಗಬೇಕಾಗಿದೆ. ನೀನೂ ಅಲ್ಲಿಗೆ ಬಾ, ಅಲ್ಲಿ ಹಾಡು ಕೇಳೋವಂತೆ." ಮಾಸ್ಟರ್ ಒಪ್ಪಿಕೊಂಡ.

ಶ್ರೀರಾಮಕೃಷ್ಣರು: "ಬಲರಾಮುವಸು ಗೊತ್ತೆ?"

ಮಾಸ್ಟರ್: "ಇಲ್ಲ, ಗೊತ್ತಿಲ್ಲ."

ಶ್ರೀರಾಮಕೃಷ್ಣರು: "ಆತನ ಮನೆ ಗೋಸ್ಪಾರಾದಲ್ಲಿ."

ಮಾಸ್ಟರ್: "ಒಳ್ಳೆಯದು, ಪತ್ತೆಮಾಡಿ ಬರುತ್ತೇನೆ."

ಮಾಸ್ಟರೊಡನೆ ಆ ನಾಟ್ಯಮಂದಿರದಲ್ಲಿ ನಡೆಯುತ್ತ ನಡೆಯುತ್ತ ಇದ್ದ ಹಾಗೆ ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನಿನಗೊಂದು ಪ್ರಶ್ನೆ ಹಾಕಬೇಕೆಂದಿದೇನೆ. ನನ್ನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್ ಸುಮ್ಮನೆ ಇದಾನೆ. ಪರಮಹಂಸರು ಮತ್ತೆ ಆತನನ್ನು ಕೇಳಿದರು: "ನಿನಗೇನನಿಸುತ್ತದೆ? ನನಗೆ ಎಷ್ಟಾಣೆ ಜ್ಞಾನ ಇದೆ?"

ಮಾಸ್ಟರ್: "'ಆಣೆ' ಎಂದು ಹೇಳಿದಿರಲ್ಲ ಅದು ನನಗರ್ಥ ವಾಗುತ್ತಿಲ್ಲ. ಆದರೆ ಇದು ಮಾತ್ರ ಸತ್ಯ, ಈ ವಿಧದ ಜ್ಞಾನವನ್ನೇ ಆಗಲಿ, ಪ್ರೇಮಭಕ್ತಿಯನ್ನೇ ಆಗಲಿ, ವಿಶ್ವಾಸವನ್ನೇ ಆಗಲಿ, ವೈರಾಗ್ಯವನ್ನೇ ಆಗಲಿ, ಔದಾರ್ಯವನ್ನೇ ಆಗಲಿ ಎಂದೂ ಎಲ್ಲೂ ನೋಡಿರಲಿಲ್ಲ."

ಪರಮಹಂಸರು ನಗಲಾರಂಭಿಸಿದಾರೆ.

ಈ ರೀತಿಯಾಗಿ ಮಾತುಕತೆಗಳನ್ನಾಡಿದ ಮೇಲೆ ಮಾಸ್ಟರ್ ಪರಮ ಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಹೆಬ್ಬಾಗಿಲವರೆಗೆ ಹೋಗಿ ಏನನ್ನೊ ನೆನಸಿಕೊಂಡು ಮತ್ತೆ ನಾಟ್ಯಮಂದಿರದಲ್ಲಿದ್ದ ಪರಮ ಹಂಸರ ಹತ್ತಿರಕ್ಕೆ ಬಂದ. ಪರಮಹಂಸರು ಆ ಕ್ಷೀಣ ಬೆಳಕಿನಲ್ಲಿ ಏಕಾಕಿ ಯಾಗಿ ತಿರುಗಾಡುತ್ತಿದಾರೆ. ಒಬ್ಬರೆ;— ನಿಸ್ಸಂಗರಾಗಿ. ಮೃಗರಾಜ ಅರಣ್ಯಮಧ್ಯದಲ್ಲಿ ಸ್ವೇಚ್ಛೆಯಿಂದ ಏಕಾಕಿ ತಿರುಗಾಡುತ್ತಿರುವುದೊ ಏನೊ ಎಂಬ ಹಾಗೆ! ಆತ್ಮಾರಾಮರು; ಸಿಂಹಕ್ಕೆ ಒಂಟಿಯಾಗಿರಲು, ಒಂಟಿ ಯಾಗಿ ತಿರುಗಲು ಇಚ್ಛೆ! ಅನಪೇಕ್ಷರು!

ಮಾಸ್ಟರ್ ಆಶ್ಚರ್ಯಚಕಿತನಾಗಿ ಮತ್ತೆ ಆ ಮಹಾಪುರುಷರನ್ನು ನೋಡಲಾರಂಭಿಸಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಮತ್ತೆ ಹಿಂದಿರುಗಿ ಬಂದುಬಿಟ್ಟೆ?"

ಮಾಸ್ಟರ್: "ಬಹುಶಃ ಅದು ದೊಡ್ಡ ಮನುಷ್ಯರ ಮನೆಯೇ ಆಗಿರಬೇಕು — ಬಿಡದೆಹೋಗಬಹುದು. ಅದಕ್ಕಾಗಿ ಹೋಗದಿರುವುದೇ ಮೇಲು. ಇಲ್ಲಿಗೇ ಬಂದು ತಮ್ಮನ್ನು ನೋಡುತ್ತೇನೆ."

ಶ್ರೀರಾಮಕೃಷ್ಣರು: "ಏಕೆ, ಹಾಗೇಕೆ ಯೋಚಿಸುತ್ತಿದೀಯೆ? ನನ್ನ ಹೆಸರು ಹೇಳು. ನನ್ನನ್ನು ನೋಡಬೇಕು ಅಂತ ತಿಳಿಸು; ನನ್ನ ಹತ್ತಿರಕ್ಕೆ ಯಾರಾದರೂ ಕರೆದುಕೊಂಡು ಬರುತ್ತಾರೆ."

ಮಾಸ್ಟರ್ ಒಪ್ಪಿಕೊಂಡು ಮತ್ತೆ ಅವರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ.



೨

# ಭಕ್ತರ ಜೊತೆಯಲ್ಲಿ

೧೧ ನೆ ಮಾರ್ಚಿ ೧೮೮೩, ಫಾಲ್ಗುಣ ಶುಕ್ಲ ಪೂರ್ಣಿಮೆ, ಶನಿವಾರ.

ಘಂಟೆ ರಾತ್ರಿ ಎಂಟೊ ಒಂಬತ್ತೊ. ದೋಲ ಜಾತ್ರೆ ಇಂದು. ಬಲರಾಮುವಸು ಪರಮಹಂಸರನ್ನು ತನ್ನ ಮನೆಗೆ ಕರೆದುಕೊಂಡು ಬಂದಿದಾನೆ. ಜೊತೆಯಲ್ಲಿ ರಾಮು, ಮನಮೋಹನ, ರಾಖಾಲ, ನಿತ್ಯಗೋಪಾಲ ಮೊದಲಾದವರು ಬಂದಿದಾರೆ. ಪರಮಹಂಸರ ಆಜ್ಞೆಗನುಸಾರ ಮಾಸ್ಟರೂ ಅಲ್ಲಿಗೆ ಬಂದಿದಾನೆ.

ಪರಮಹಂಸರೂ, ಭಕ್ತರೂ ಕೂಡಿ ಹರಿನಾಮ ಸಂಕೀರ್ತನೆ ಮಾಡುತ್ತ ಮಾಡುತ್ತ ಪ್ರೇಮೋನ್ಮತ್ತರಾಗಿಬಿಟ್ಟಿದಾರೆ. ಕೆಲವು ಮಂದಿ ಭಕ್ತರಿಗೆ ಭಾವಾವಸ್ಥೆ ಬಂದುಬಿಟ್ಟಿದೆ. ನಿತ್ಯಗೋಪಾಲನ ಎದೆ ಕೆಂಪೇರಿ ಬಿಟ್ಟಿದೆ. ರಾಖಾಲ ಭಾವಸ್ಥನಾಗಿ ಸಂಪೂರ್ಣ ಬಾಹ್ಯಜ್ಞಾನಶೂನ್ಯನಾಗಿ ನೆಲದ ಮೇಲೆ ಬಿದ್ದಿದಾನೆ. ಪರಮಹಂಸರು ಆತನ ಎದೆ ಮೇಲೆ ತಮ್ಮ ಕೈಯಿಟ್ಟು ಹೇಳುತ್ತಿದಾರೆ: "ಶಾಂತನಾಗು, ಶಾಂತನಾಗು." ಇದೇ ರಾಖಾಲನ ಪ್ರಥಮ ಭಾವಾವಸ್ಥೆ. ಆತ ಕಲ್ಕತ್ತದಲ್ಲಿ ತನ್ನ ತಂದೆಯೊಡನೆ ಇದ್ದುಕೊಂಡಿದಾನೆ. ಪರಮಹಂಸರನ್ನು ನೋಡಲು ಆಗಾಗ ದಕ್ಷಿಣೇಶ್ವರಕ್ಕೆ ಬಂದುಹೋಗುತ್ತಿದಾನೆ. ಶ್ಯಾಮಪುಕುರದಲ್ಲಿರುವ ವಿದ್ಯಾಸಾಗರನ ಶಾಲೆಯಲ್ಲಿ ಸ್ವಲ್ಪ ಕಾಲ ವ್ಯಾಸಂಗಮಾಡಿದಾನೆ.

ಸಂಕೀರ್ತನೆ ಮುಗಿದನಂತರ ಭಕ್ತರೆಲ್ಲರೂ ಊಟಕ್ಕೆ ಕುಳಿತುಕೊಂಡಿದಾರೆ. ಬಲರಾಮ ಭೃತ್ಯನ ಹಾಗೆ ಕೈಕಟ್ಟಿ ನಿಂತಿದಾನೆ. ನೋಡುವುದಕ್ಕೆ ಮನೆ ಯಜಮಾನನ ಹಾಗೆ ಕಂಡುಬರುತ್ತಿಲ್ಲ. ಮಾಸ್ಟರ್ ಭಕ್ತರ ಬಳಗಕ್ಕೆ ಇನ್ನೂ ಹೊಸಬ. ಅವರೊಡನೆ ಮಾತುಕತೆ ಏನೂ ನಡೆದಿಲ್ಲ. ಕೇವಲ ನರೇಂದ್ರನೊಡನೆ ಮಾತ್ರ ದಕ್ಷಿಣೇಶ್ವರದಲ್ಲಿ ಮಾತುಕತೆ ಆಡಿದ್ದಾನೆ.

ಕೆಲವು ದಿವಸಗಳನಂತರ ಮಾಸ್ಟರ್ ದಕ್ಷಿಣೇಶ್ವರಕ್ಕೆ ಬಂದಿದಾನೆ. ಘಂಟೆ ಅಪರಾಹ್ನ ನಾಲ್ಕೊ ಐದೊ ಇರಬೇಕು. ಈಗ ಪರಮಹಂಸರು ಮಾಸ್ಟರೊಡನೆ ಶಿವದೇವಾಲಯಗಳ ಹಂತಗಳ ಮೇಲೆ ಕುಳಿತಿದಾರೆ. ತಮ್ಮ

ಎದುರಿಗೇ ಇದ್ದ ರಾಧಾಕಾಂತದೇವಾಲಯದ ಕಡೆ ನೋಡಿ ಪರಮಹಂಸರು ಇದ್ದಕ್ಕಿದ್ದಹಾಗೆ ಭಾವಾವಿಷ್ಟರಾಗಿಬಿಟ್ಟಿದಾರೆ.

ಪರಮಹಂಸರ ಸೋದರಳಿಯ ಹೃದಯನನ್ನು ದೇವಾಲಯದ ಕೆಲಸ ದಿಂದ ತೆಗೆದುಹಾಕಿಬಿಟ್ಟಂದಿನಿಂದ ಬೇರೆ ಯಾರೂ ಅವರ ಶುಶ್ರೂಷೆಗಾಗಿ ದೊರೆತಿಲ್ಲ. ಅವರು ಆಗಾಗ ಭಾವಾವಿಷ್ಟರಾಗಿಬಿಡುತ್ತಿದ್ದುದರಿಂದ ಅವರ ಶರೀರದ ಯೋಗಕ್ಷೇಮ ನೋಡಿಕೊಳ್ಳಲು ಅವರಿಂದ ಸಾಧ್ಯವೇ ಆಗುತ್ತಿರ ಲಿಲ್ಲ. ಶುಶ್ರೂಷೆಗೆ ಯಾರೂ ಅವರ ಬಳಿ ಇಲ್ಲದಿದ್ದುದು ಅವರಿಗೆ ಬಹಳ ವಾಗಿ ತೊಂದರೆಯನ್ನುಂಟುಮಾಡುತ್ತಿದೆ.

ಪರಮಹಂಸರು ಜಗನ್ಮಾತೆಯೊಡನೆ ಮಾತಾಡುತ್ತಿದಾರೆ ಈಗ. ಹೇಳುತ್ತಿದಾರೆ: "ಎಲ್ಲರೂ ಹೇಳುತ್ತಾರೆ ತಮ್ಮ ಗಡಿಯಾರ ಸರಿಯಾಗಿ ನಡೆಯುತ್ತಿದೆ ಎಂಬುದಾಗಿ. ಕ್ರಿಶ್ಚಿಯನ್, ಬ್ರಾಹ್ಮೊ,[1] ಹಿಂದೂ, ಮುಸಲ್ಮಾನ ಎಲ್ಲರೂ ಹೇಳುತ್ತಾರೆ, ತಮ್ಮ ಧರ್ಮ ಸರಿ ಎಂಬುದಾಗಿ. ಆದರೆ, ತಾಯೆ, ಯಾರ ಗಡಿಯಾರವೂ ಸರಿಯಾಗಿ ನಡೆಯುತ್ತಿಲ್ಲ. ನಿನ್ನನ್ನು ಸರಿಯಾಗಿ ಯಾರು ತಾನೆ ಅರಿಯಬಲ್ಲರು? ಆದರೆ ವ್ಯಾಕುಲತೆಯಿಂದ ನಿನ್ನನ್ನು ಕರೆದರೆ, ನೀನೂ ಕೃಪೆಮಾಡೋದಾದರೆ, ಎಲ್ಲಾ ಮಾರ್ಗ ಗಳಿಂದಲೂ ನಿನ್ನನ್ನು ಮುಟ್ಟಬಹುದು. ತಾಯೆ, ಕ್ರಿಶ್ಚಿಯನ್ನರು ನಿನ್ನನ್ನು ಚರ್ಚಿನಲ್ಲಿ ಹೇಗೆ ಕರೆಯುತ್ತಾರೆ ಎಂಬುದನ್ನು ಒಮ್ಮೆ ನನಗೆ ತೋರಿಸು. ಆದರೆ ತಾಯಿ, ಒಳಕ್ಕೆ ಹೋದರೆ ಜನ ಏನನ್ನುಕೋತಾರೊ? ಒಂದುಪಕ್ಷ ಅವರು ಇಲ್ಲದ ಸಲ್ಲದ ಗೊಂದಲ ಎಬ್ಬಿಸಿಬಿಟ್ಟರೆ! ಕಾಳೀದೇವಾಲಯಕ್ಕೆ ಬಿಡದೆಹೋಗಿಬಿಟ್ಟರೆ! ಹಾಗಾದರೆ ಚರ್ಚಿನ ಬಾಗಿಲ ಹಂತದಿಂದಲೇ ಅವರ ಪೂಜೆಯನ್ನು ನನಗೆ ತೋರಿಸಿಬಿಡು."

ಇನ್ನೊಂದು ದಿನ ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಕಾಳೀಕೃಷ್ಣನನ್ನು ಮಾಸ್ಟರ್ ಜೊತೆಯಲ್ಲಿ ಕರೆದು ಕೊಂಡು ಬಂದಿದಾನೆ. ಮನೆಯಿಂದ ಹೊರಟಾಗ ಕಾಳೀಕೃಷ್ಣನಿಗೆ ಗೊತ್ತೇ ಇರಲಿಲ್ಲ ಮಾಸ್ಟರ್ ತನ್ನನ್ನು ಎಲ್ಲಿಗೆ ಕರೆದುಕೊಂಡುಹೋಗುತ್ತಾನೆ ಎಂಬುದು. ಮಾಸ್ಟರ್ ಆತನಿಗೆ ಹೇಳಿದ್ದ: "ಮದ್ಯದಂಗಡಿಗೆ ಹೋಗ ಬೇಕು ಅಂತ ಇದ್ದರೆ ನನ್ನೊಡನೆ ಬಾ. ಅಲ್ಲಿ ಒಂದು ಗುಡಾಣ ಮದ್ಯ

1. ಬ್ರಾಹ್ಮಸಮಾಜದ ಅನುಯಾಯಿ.

ಇದೆ.'' ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಕಾಳೀಕೃಷ್ಣನಿಗೆ ತಾನು ಹೇಳಿದ್ದುದನ್ನು ಅವರಿಗೆ ತಿಳಿಸುತ್ತಿದಾನೆ. ಪರಮಹಂಸರು ನಗಲಾರಂಭಿಸಿದಾರೆ. ಅವರು ಹೇಳುತ್ತಿದಾರೆ: "ಭಜನಾನಂದವೇ, ಬ್ರಹ್ಮಾನಂದವೇ ನಿಜವಾದ ಸುರೆ, ಪ್ರೇಮದ ಸುರೆ. ಮಾನವ ಜೀವನದ ಉದ್ದೇಶ ಭಗವಂತನಲ್ಲಿ ಪ್ರೇಮ ಗಳಿಸಿಕೊಳ್ಳುವುದೇ, ಆತನನ್ನು ಪ್ರೀತಿಸುವುದೇ. ಭಕ್ತಿಯೇ ಮುಖ್ಯವಾದ್ದು. ಜ್ಞಾನ, ವಿಚಾರ ಇವುಗಳಿಂದ ಆತನನ್ನು ಅರಿಯುವುದು ಎಂದರೆ ಬಹಳ ಕಠಿನ.''

ಬಳಿಕ ಪರಮಹಂಸರು ಹಾಡುತ್ತಿದಾರೆ:

ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು!
ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು . . . (ಉ. ೧೩೦)*

ಪರಮಹಂಸರು ಮತ್ತೆ ಹೇಳುತ್ತಿದಾರೆ: "ಭಗವಂತನನ್ನು ಪ್ರೀತಿಸುವುದು— ಇದೇ ಜೀವನದ ಉದ್ದೇಶ; ಬೃಂದಾವನದಲ್ಲಿ ಗೋಪ-ಗೋಪಿಯರು, ಗೋವಳಿಗರು ಶ್ರೀಕೃಷ್ಣನನ್ನು ಪ್ರೀತಿಸುತ್ತಿದ್ದ ಹಾಗೆ. ಕೃಷ್ಣ ಮಥುರೆಗೆ ಹೊರಟುಹೋದನಂತರ ಗೋವಳಿಗರು ಆತನ ವಿರಹದಿಂದ ಅಳುತ್ತ ಅಳುತ್ತ ಸುಮ್ಮನೆ ಸುತ್ತಾಡುತ್ತಿದ್ದರು.''

ಹೀಗೆಂದು ಹೇಳಿ ಪರಮಹಂಸರು ಊರ್ಧ್ವದೃಷ್ಟಿಯುಳ್ಳವರಾಗಿ ಹಾಡಲಾರಂಭಿಸಿದಾರೆ:

ಒಂದು ಕೈಯೊಳು ತನ್ನ ಮುದ್ದು ಕರುವನು ತಬ್ಬಿ
ಮತ್ತೊಂದರೊಳು ಮರದ ಕೊಂಬೆಯನು ಹಿಡಿದು,
ಇಲ್ಲಿಯೇ ನಿಂತಿದ್ದ ರಾಖಲನ ಕಂಡೆ.
"ಎಲ್ಲಿರುವೆ ಓ ಕೃಷ್ಣ''—ಎಂದು ಬಲು ಕಷ್ಟದಲಿ
ಕರೆಯುವಷ್ಟರೊಳವನ ಕೊರಳು ಬಿಗಿದು,
"ಕೃ'' ಎಂಬ ಮಾತಿಗೇ ಅವನ ದನಿ ತಡೆದು
"ಎಲ್ಲಿರುವೆ ನನ್ನಯ್ಯ''—ಎಂದು ಕೂಗಲು ಅವನ
ಎರಡು ಕಣ್ಣೊಳು ನೀರು ತುಂಬಿಕೊಂಡಿತ್ತು!

ಪರಮಹಂಸರ ಪ್ರೇಮಮಯ ಹಾಡನ್ನು ಕೇಳಿ ಮಾಸ್ಟರ ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿದೆ.

* ಶ್ರೀ ರಾಮಕೃಷ್ಣ ವಚನವೇದ (ಉತ್ತರಾರ್ಧ) ೧೩೦ನೆ ಪುಟ ನೋಡಿ ಪೂರ್ಣ ಹಾಡಿಗೆ.

೨ನೆ ಏಪ್ರಿಲ್ ೧೮೮೨.

ಶ್ರೀರಾಮಕೃಷ್ಣರು ಕಲ್ಕತ್ತದಲ್ಲಿರುವ ಕೇಶವಚಂದ್ರಸೇನನ ಕಮಲ-ಕುಟೀರದ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಘಂಟೆ ಸಾಯಂಕಾಲ ಐದು. ಕೇಶವಚಂದ್ರಸೇನ ಮನೆಯ ಒಳಗೆ ಇದ್ದ. ಆತನಿಗೆ ಪರಮಹಂಸರು ಬಂದಿರುವ ಸುದ್ದಿಯನ್ನು ತಲುಪಿಸಲಾಯಿತು. ಆತ ಉತ್ತರೀಯವನ್ನು ಹೊದ್ದುಕೊಂಡು ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಆತನ ಸ್ನೇಹಿತ ಕಾಳೀನಾಥ ರೋಗಗ್ರಸ್ತನಾಗಿದ್ದುದರಿಂದ ಅವನನ್ನು ನೋಡಲು ಹೋಗಬೇಕೆಂದು ಸಿದ್ಧನಾಗಿದ್ದ. ಪರಮಹಂಸರು ಮನೆಗೆ ಬಂದದ್ದರಿಂದ ಅದನ್ನು ಮುಂದಕ್ಕೆ ಹಾಕಿದ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನಿನಗೆ ಅನೇಕ ಕೆಲಸಕಾರ್ಯಗಳು. ಜೊತೆಗೆ ವೃತ್ತಪತ್ರಿಕೆಯನ್ನು ಪರಿಷ್ಕರಿಸಿ ಮುದ್ರಿಸಬೇಕಾಗಿದೆ. ದಕ್ಷಿಣೇಶ್ವರಕ್ಕೆ ಬರಲು ನಿನಗೆ ಸಮಯವೇ ದೊರೆಯುತ್ತಿಲ್ಲ; ಅದಕ್ಕಾಗಿ ನಾನೇ ಇಲ್ಲಿಗೆ ಬಂದುಬಿಟ್ಟೆ. ನಿನಗೆ ಕಾಯಿಲೆ ಆಗಿರೋದನ್ನು ಕೇಳಿ ಭಗವತಿಗೆ ಎಳನೀರು-ಸಕ್ಕರೆಯ ಹರಕೆ ಹೊತ್ತೆ. ಆಕೆಗೆ ಹೇಳಿದೆ: 'ತಾಯೆ, ಕೇಶವಸೇನನಿಗೆ ಏನಾದರೂ ಎಡವಟ್ಟು ಆಗಿಬಿಟ್ಟಿದ್ದೇ ಆದರೆ ಕಲ್ಕತ್ತಕ್ಕೆ ಹೋದಾಗ ಅಲ್ಲಿ ಯಾರ ಸಂಗಡ ಮಾತಾಡಲಿ?'"

ಪ್ರತಾಪನೇ ಮೊದಲಾದ ಬ್ರಾಹ್ಮಭಕ್ತರೊಡನೆ ಪರಮಹಂಸರು ಮಾತುಕತೆ ಆಡುತ್ತಿದಾರೆ. ಮಾಸ್ಟರ್ ಹತ್ತಿರ ಕುಳಿತಿದಾನೆ. ಆತನನ್ನು ತೋರಿಸಿ ಪರಮಹಂಸರು ಕೇಶವನಿಗೆ ಹೇಳುತ್ತಿದಾರೆ: "ವಿಚಾರಿಸು, ಈತ ಏಕೆ ದಕ್ಷಿಣೇಶ್ವರಕ್ಕೆ ಬರುತ್ತಾ ಇಲ್ಲ? ಯಾವಾಗಲೂ ಹೇಳುತ್ತಿದಾನೆ, ಹೆಂಡತಿ ಮಕ್ಕಳ ಮೇಲೆ ವ್ಯಾಮೋಹ ಇಲ್ಲ ಎಂಬುದಾಗಿ." ಮಾಸ್ಟರ್ ಈಗ ಸುಮಾರು ಒಂದು ತಿಂಗಳಿಂದ ಪರಮಹಂಸರ ಹತ್ತಿರಕ್ಕೆ ಬಂದು ಹೋಗುತ್ತಾ ಇದಾನೆ. ಈಗೆಲ್ಲೊ ಕೆಲವು ದಿನಗಳಿಂದ ಅಲ್ಲಿಗೆ ಹೋಗುವುದಕ್ಕಾಗದೆ ಇದ್ದುದರಿಂದ ಅವರು ಹೀಗೆ ಹೇಳುತ್ತಿದಾರೆ. ಬರುವುದು ತಡವಾದರೆ ಕಾಗದ ಬರೆಯಬೇಕು ಎಂಬುದಾಗಿ ಪರಮಹಂಸರು ಆತನಿಗೆ ತಿಳಿಸಿದ್ದರು.

ಅಲ್ಲಿ ಪಂಡಿತ ಸಮಾಧ್ಯಾಯಿ ಇದ್ದ. ಆತ ಒಬ್ಬ ಪಂಡಿತ, ವೇದಾದಿ ಶಾಸ್ತ್ರಗಳನ್ನು ಚೆನ್ನಾಗಿ ಓದಿದಾನೆ ಎಂಬುದಾಗಿ ಬ್ರಾಹ್ಮಭಕ್ತರು ಆತನನ್ನು ಪರಮಹಂಸರಿಗೆ ಪರಿಚಯಮಾಡಿಕೊಟ್ಟರು. ಪರಮಹಂಸರು ಹೇಳುತ್ತಿದಾರೆ: "ಹೌದು, ಈತನ ಕಣ್ಣುಗಳಿಂದಲೇ ಈತನ ಅಂತರ್ಯ ತೋರ

ಬರುತ್ತಿದೆ; ಗಾಜಿನ ಬಾಗಿಲ ಮೂಲಕ ಮನೆ ಒಳಗಿರುವುದೆಲ್ಲ ತೋರಿಬರೋ ಹಾಗೆ.''

ತ್ರೈಲೋಕ್ಯ ಹಾಡುತ್ತಿದಾನೆ. ಹಾಡು ಕೇಳುತ್ತ ಕೇಳುತ್ತ ಪರಮ-ಹಂಸರು ಇದ್ದಕ್ಕಿದ್ದಹಾಗೆ ಎದ್ದು ನಿಂತು ಭಗವತಿಯ ನಾಮ ಜಪಿಸುತ್ತ ಜಪಿಸುತ್ತ ಸಮಾಧಿಸ್ಥರಾಗಿಬಿಟ್ಟಿದಾರೆ. ಈಗ ಕಿಂಚಿತ್ ಪ್ರಕೃತಿಸ್ಥರಾಗಿ ತಾವೇ ನರ್ತಿಸುತ್ತ ನರ್ತಿಸುತ್ತ ಹಾಡುತ್ತಿದಾರೆ:

'ಜಯ್ ಕಾಳಿ—ಎಂದು ನಾ ಕುಡಿಯುವೀ ದಿವ್ಯ ಮಧು
ಸಾಮಾನ್ಯ ಸುರೆಯಲ್ಲವೆಂದರಿಯದೆ, . . . (ಉ. ೭೮೬)

ಪರಮಹಂಸರು ಕೇಶವಸೇನನನ್ನು ಸ್ನೇಹಪೂರ್ಣ ದೃಷ್ಟಿಯಿಂದ ನೋಡುತ್ತಿದಾರೆ, ತಮ್ಮ ಆತ್ಮೀಯನೊ ಏನೊ ಎಂಬಂತೆ. ಕೇಶವಸೇನ ಬೇರೆಯವರಿಗೆ ಸೇರಿದವನಾಗಿ, ಎಂದರೆ ಪ್ರಾಪಂಚಿಕನಾಗಿ ಆಗಿಬಿಡುತ್ತಾನೊ ಏನೊ ಎಂಬುದಾಗಿ ಅವರು ಭಯಪಡುವಂತೆ ಕಂಡುಬಂತು. ಆತನ ಕಡೆ ನೋಡುತ್ತ ಮತ್ತೆ ಹಾಡುತ್ತಿದಾರೆ:

ನುಡಿಯಲಮ್ಮೆವು ನಾವು, ರಾಧಾ ನುಡಿಯದಿರಲೂ ಅರೆವು!
ನಾವು ನಿನ್ನನು ಕಳೆದುಕೊಳುವೆವು—ಎಂಬ ಭಯದೊಳಗಿರುವೆವು.
ಹಿಂದೆ ಎನಿತೋ ಸಾರಿ ಕಂಟಕದಾಚೆ ದಾಟಿದ ಗುಟ್ಟನು
ಇಂದು ನಾವೂ ಬಲ್ಲೆವಾದರು—ಇಂದಿನೆಲ್ಲಾ ಆಗು ಹೋಗನು
ನಿನ್ನ ಮೇಲೇ ಬಿಟ್ಟೆವು!

ಪರಮಹಂಸರು ಈ ಹಾಡಿನ ಕೊನೆ ಭಾಗವನ್ನು ಪುನರಾವೃತ್ತಿಮಾಡಿ ಕೇಶವಸೇನನಿಗೆ ಹೇಳುತ್ತಿದಾರೆ: ''ಇದರ ಅರ್ಥ, ಎಲ್ಲವನ್ನೂ ತ್ಯಜಿಸಿ ಭಗವಂತನನ್ನು ಕರೆ. ಆತನೇ ಸತ್ಯ; ಉಳಿದುದೆಲ್ಲ ಅನಿತ್ಯ. ಆತನ ಸಾಕ್ಷಾತ್ಕಾರ ಮಾಡಿಕೊಳ್ಳದಿದ್ದರೆ ಎಲ್ಲವೂ ವ್ಯರ್ಥ. ಇದೇ ಮಹಾ ಮಂತ್ರ.''

ಪರಮಹಂಸರು ಕೆಳಗೆ ಕುಳಿತುಕೊಂಡು ಈಗ ಮತ್ತೆ ಭಕ್ತರೊಡನೆ ಮಾತುಕತೆಯಾಡಲು ಆರಂಭಿಸಿದಾರೆ. ಹಜಾರದ ಒಂದು ಭಾಗದಲ್ಲಿ ಒಬ್ಬ ಬ್ರಾಹ್ಮಭಕ್ತ ಪಿಯಾನೊ ನುಡಿಸಲು ಆರಂಭಿಸಿದ. ಪರಮಹಂಸರು ಬಾಲಕನ ಹಾಗೆ ಅದರ ಹತ್ತಿರ ಹೋಗಿ ನಿಂತು ನೋಡುತ್ತಿದಾರೆ. ಸ್ವಲ್ಪ ಹೊತ್ತಾದನಂತರ ಅವರನ್ನು ಮನೆ ಒಳಕ್ಕೆ ಕರೆದುಕೊಂಡು ಹೋದರು. ಅಲ್ಲಿ

ಅವರಿಗೆ ಉಪಾಹಾರ ಮಾಡಿಸುತ್ತಿದಾರೆ. ಈಗ ಮನೆ ಹೆಂಗಸರು ಬಂದು ಅವರಿಗೆ ಪ್ರಣಾಮಮಾಡುತ್ತಿದಾರೆ.

ಪರಮಹಂಸರ ಉಪಾಹಾರ ಮುಗಿಯಿತು. ಈಗ ಗಾಡಿಗೆ ಹತ್ತಿದಾರೆ. ಬ್ರಾಹ್ಮಭಕ್ತರೆಲ್ಲರೂ ಗಾಡಿ ಹತ್ತಿರ ಬಂದು ನಿಂತಿದಾರೆ. ಗಾಡಿ ಕಮಲ-ಕುಟೀರ ಬಿಟ್ಟು ದಕ್ಷಿಣೇಶ್ವರದ ಕಡೆ ಹೊರಟಿತು.

೯ ನೆ ಏಪ್ರಿಲ್ ೧೮೮೨, ಚೈತ್ರ ಶುಕ್ಲ ಚತುರ್ದಶಿ, ಭಾನುವಾರ.

ಶ್ರೀರಾಮಕೃಷ್ಣರು ತಮ್ಮ ಭಕ್ತರೊಡನೆ ಕಲ್ಕತ್ತದಲ್ಲಿರುವ ಪ್ರಾಣ-ಕೃಷ್ಣಮುಖರ್ಜಿಯ ಮನೆಯ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಘಂಟೆ ಅಪರಾಹ್ನ ಒಂದೊ ಎರಡೊ ಇರಬೇಕು. ಕ್ಯಾಪ್ಟನ್ ವಿಶ್ವನಾಥನ[1] ಮನೆಯೂ ಹತ್ತಿರದಲ್ಲೆ ಇದೆ. ಪರಮಹಂಸರ ಇಚ್ಛೆ ಇಲ್ಲೆ ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದು, ಬಳಿಕ ಕ್ಯಾಪ್ಟನ್ನನ ಮನೆಗೆ ಹೋಗಿ, ಆ ಬಳಿಕ ಕಮಲ-ಕುಟೀರಕ್ಕೆ ತೆರಳಿ ಕೇಶವಸೇನನನ್ನು ಕಾಣಬೇಕು ಎಂಬುದಾಗಿ. ಬೈಠಕ್‌ಖಾನೆಯಲ್ಲಿ ಪ್ರಾಣಕೃಷ್ಣನ ನೆರೆಹೊರೆಯವರೂ ಮತ್ತು ಆತನ ಇನ್ನೂ ಅನೇಕ ಸ್ನೇಹಿತರೂ ಕುಳಿತಿದಾರೆ. ಪರಮಹಂಸರ ಮಾತು ಕೇಳಲು ಎಲ್ಲರೂ ಉತ್ಸುಕರಾಗಿ ಕಾದಿದಾರೆ.

ಶ್ರೀರಾಮಕೃಷ್ಣರು: "ನೋಡಿ, ಭಗವಂತ ಮತ್ತು ಆತನ ಐಶ್ವರ್ಯ. ಈ ಜಗತ್ತು ಆತನ ಐಶ್ವರ್ಯ. ಜನ ಆತನ ಐಶ್ವರ್ಯಕ್ಕೆ ಮರುಳಾಗೇ ಎಲ್ಲವನ್ನು ಮರೆತುಬಿಡುತ್ತಾರೆ: ಐಶ್ವರ್ಯ ಯಾರದೊ ಆತನಿಗಾಗಿ ಹುಡುಕೋದಿಲ್ಲ. ಕಾಮಕಾಂಚನದ ಸುಖಕ್ಕಾಗಿ ಎಲ್ಲರೂ ಹಾತೊರೆಯುತ್ತಾರೆ. ಆದರೆ ಅದರಲ್ಲಿ ದುಃಖ, ಅಶಾಂತಿ ಇವೇ ಅಧಿಕ. ಈ ಸಂಸಾರ ವಿಶಾಲಾಕ್ಷಿಯ[2] ಸುಳಿಯ ಹಾಗೆ. ದೋಣಿಯೇನಾದರು ಅದಕ್ಕೆ ಸಿಕ್ಕಿತು ಎಂದರೆ ಮೇಲೆ ಏಳೋಹಾಗೇ ಇಲ್ಲ. ಮತ್ತೆ ಈ ಸಂಸಾರ ಸೀಗೆ ಮುಳ್ಳಿನ ಹಾಗೆ: ಒಂದರಿಂದ ಬಿಡಿಸಿಕೊಂಡೆ ಎಂದರೆ ಇನ್ನೊಂದು ಚುಚ್ಚಿಕೊಳ್ಳುತ್ತದೆ. ಬಲಿಚಕ್ರವರ್ತಿಯ ಕೋಟೆಗೆ ಒಮ್ಮೆ ನುಗ್ಗಿದೆ ಎಂದರೆ ಹೊರಕ್ಕೆ ಬರುವುದು ಬಹಳ ಕಷ್ಟ. ಮನುಷ್ಯ ಬರೆಯಿಂದ ಸುಟ್ಟವನ ಹಾಗೆ ಆಗಿಬಿಡುತ್ತಾನೆ.

1. ಕಲ್ಕತ್ತದಲ್ಲಿ ವಾಸವಾಗಿರುವ ನೇಪಾಳ ಸರ್ಕಾರದ ಪ್ರತಿನಿಧಿ. ಆತ ಪರಮಹಂಸರ ಭಕ್ತ.

2. ಕಾಮಾರಪುಕುರದ ಹತ್ತಿರವಿರುವ ಒಂದು ನದಿ.

ಒಬ್ಬ ಭಕ್ತ: "ಹಾಗಾದರೆ, ಉಪಾಯ?"

ಶ್ರೀರಾಮಕೃಷ್ಣರು: "ಸಾಧುಸಂಗ ಮತ್ತು ಪ್ರಾರ್ಥನೆ. ವೈದ್ಯನ ಹತ್ತಿರಕ್ಕೆ ಹೋಗದೆ ಇದ್ದರೆ ರೋಗ ಗುಣವಾಗೋದಿಲ್ಲ. ಸಾಧುಸಂಗ ವನ್ನ ಎಲ್ಲೊ ಒಂದು ದಿನ ಮಾಡಿಬಿಟ್ಟರೇ ಸಾಕಾಗದು, ಅದು ಸರ್ವದಾ ಆವಶ್ಯಕ; ರೋಗ ತಗುಲಿಕೊಂಡೇ ಇದೆ. ವೈದ್ಯನ ಸಹವಾಸ ಮಾಡದೆ ಇದ್ದರೆ ನಾಡಿ-ಜ್ಞಾನ ದೊರಕದು; ಒಡನೊಡನೆ ಸುತ್ತಾಡಬೇಕಾಗುತ್ತದೆ. ಆಗ ಅರಿತುಕೊಳ್ಳಬಹುದು ಯಾವುದು ಕಫದ ನಾಡಿ, ಯಾವುದು ಪಿತ್ತದ ನಾಡಿ ಎಂಬುದನ್ನ."

ಭಕ್ತ: "ಸಾಧುಸಂಗದಿಂದ ಆಗುವ ಉಪಕಾರವೇನು?"

ಶ್ರೀರಾಮಕೃಷ್ಣರು: "ಭಗವಂತನಲ್ಲಿ ಅನುರಾಗ ಹುಟ್ಟಿಸುತ್ತದೆ. ಆತನನ್ನು ಪ್ರೀತಿಸುವಂತೆ ಮಾಡುತ್ತದೆ. ವ್ಯಾಕುಲತೆ ಉಂಟಾಗದಿದ್ದರೆ ಏನೂ ದೊರಕದು. ಸಾಧುಸಂಗ ಮಾಡುತ್ತ ಮಾಡುತ್ತ ಭಗವಂತನಿಗಾಗಿ ಪ್ರಾಣ ವ್ಯಾಕುಲಪಡಲಾರಂಭಿಸುತ್ತದೆ. ಮನೆಯಲ್ಲಿ ಯಾರಿಗಾದರು ಅಸೌಖ್ಯವಾದರೆ ಆತನನ್ನು ಗುಣಪಡಿಸುವುದು ಹೇಗೆ ಎಂಬುದಾಗಿ ಸರ್ವದಾ ಮನಸ್ಸು ವ್ಯಾಕುಲಪಡುತ್ತಾ ಇರುತ್ತದೆಯಲ್ಲ ಹಾಗೆ. ಅಥವಾ ಕೆಲಸ ಕಳೆದುಕೊಂಡ ವ್ಯಕ್ತಿ ಯಾವರೀತಿಯಾಗಿ ವ್ಯಾಕುಲತೆಯಿಂದ ಒಂದು ಆಫೀಸಿನಿಂದ ಇನ್ನೊಂದು ಆಫೀಸಿಗೆ ಕೆಲಸಕ್ಕಾಗಿ ಅಲೆಯುತ್ತಾ ಇರು ತ್ತಾನೊ ಹಾಗೆ. ಇವೊತ್ತು ಯಾವುದಾದರು ಒಂದು ಆಫೀಸಿನಲ್ಲಿ ಕೆಲಸ ಖಾಲಿ ಇಲ್ಲ ಎಂದು ತಿಳಿಸಿದರೆ, ಮಾರನೆ ದಿನ ಮತ್ತೆ ಅಲ್ಲಿಗೆ ಹೋಗಿ ವಿಚಾರಮಾಡುತ್ತಾನೆ: 'ಇಂದು ಯಾವುದಾದರೂ ಖಾಲಿ ಬಿದ್ದಿರುವುದೆ?'

"ಇನ್ನೊಂದು ಮಾರ್ಗ—ವ್ಯಾಕುಲನಾಗಿ ಪ್ರಾರ್ಥನೆಮಾಡುವುದು. ಭಗವಂತ ನಮ್ಮ ಸ್ವಂತದವ. ನಾವು ಆತನಿಗೆ ಹೇಳಬೇಕು: 'ಹೇ ಭಗವಂತ, ನಿನ್ನ ಸ್ವರೂಪ ಎಂಥದು? ತೋರಿಸು ಅದನ್ನ ನನಗೆ. ನೀನು ತೋರಿಸಲೇಬೇಕು. ಇಲ್ಲದಿದ್ದರೆ ನನ್ನನ್ನು ಏಕೆ ಸೃಷ್ಟಿಸಿದೆ?' ಕೆಲವು ಸಿಕ್ಕರು ಒಮ್ಮೆ ನನಗೆ ತಿಳಿಸಿದರು: 'ಭಗವಂತ ದಯಾಮಯ' ಎಂದು. ನಾನು ಹೇಳಿದೆ: 'ದಯಾಮಯ ಅಂತ ಏಕೆ ಹೇಳೋಕೆ ಹೋಗಬೇಕು ಆತನನ್ನ? ಆತ ನಮ್ಮನ್ನು ಸೃಷ್ಟಿಸಿದಾನೆ. ನಮಗೆ ಶ್ರೇಯಸ್ಸು ತರಲು ಆತ ಪ್ರಯತ್ನಿಸಿದರೆ ಅದಕ್ಕಾಗಿ ಆಶ್ಚರ್ಯಪಡೋದೇನಿದೆ? ತಂದೆತಾಯಿಗಳು ಮಕ್ಕಳನ್ನ ಬೆಳಸುತ್ತಾರೆ. ಅದೇನು ದಯೆಯ ಕಾರ್ಯವೇ? ಅವರು

ಹಾಗೆ ಮಾಡಲೇಬೇಕು.' ಆದ್ದರಿಂದಲೇ ನಾವು ಆತನನ್ನು ಬಲಾತ್ಕರಿಸಿ ಕೇಳಬೇಕು. ಆತ ನಮ್ಮ ತಂದೆ ತಾಯಿ, ಅಲ್ಲವೆ? ಮಗ ಅನ್ನ ನೀರು ಬಿಟ್ಟು ತನ್ನ ಹಿಸ್ಸೆ ಬೇಕೆಂದರೆ, ದೊಡ್ಡವನಾಗಲು ಇನ್ನೂ ಮೂರು ವರ್ಷ ವಿದೆ ಎನ್ನುವಾಗಲೇ ತಂದೆತಾಯಿಗಳು ಆತನ ಹಿಸ್ಸೆ ಕೊಟ್ಟುಬಿಡುತ್ತಾರೆ. ಅಥವಾ ಮಗು ಕಾಸು ಕೇಳುವಾಗ ಮತ್ತೆ ಮತ್ತೆ ಕೇಳಲಾರಂಭಿಸಿದರೆ: 'ಅಮ್ಮಾ, ನಿನ್ನ ಕಾಲಿಗೆ ಅಡ್ಡಬೀಳುತ್ತೇನಮ್ಮ. ನನಗೆರಡು ಕಾಸು ಕೊಡಮ್ಮಾ!'—ತಾಯಿ ಆತನ ವ್ಯಾಕುಲತೆ ನೋಡಿ ಇನ್ನು ತಡೆಯಲಾರದೆ ಕಾಸು ಬಿಸಾಡಿಬಿಡುತ್ತಾಳೆ.

"ಸಾಧುಸಂಗದಿಂದ ಇನ್ನೊಂದು ಉಪಕಾರವಾಗುತ್ತದೆ. ಸದಸದ್ವಿಚಾರ ಬೆಳೆಯುತ್ತದೆ. ಭಗವಂತನೇ ಸತ್, ಎಂದರೆ ನಿತ್ಯ, ಈ ಜಗತ್ತು ಅಸತ್, ಎಂದರೆ ಅನಿತ್ಯ. ಅಸತ್ ಮಾರ್ಗಕ್ಕೆ ಮನಸ್ಸು ಕಾಲುಹಾಕಿತು ಎಂದೊಡನೇ ವಿಚಾರದಲ್ಲಿ ತೊಡಗಬೇಕಾಗುತ್ತದೆ. ಆನೆ ಬೇರೆಯವರ ತೋಟದಲ್ಲಿರೋ ಬಾಳೆ ಗಿಡಗಳ ಕಡೆ ಸೊಂಡಿಲು ನೀಡಿತು ಎಂದರೆ, ಅದಕ್ಕೆ ಮಾವಟಿಗನ ಅಂಕುಶದೇಟು ಬೀಳುತ್ತದೆ."

ನೆರೆಯವ: "ಮಹಾಶಯರೆ, ಪಾಪಬುದ್ಧಿ ಏಕೆ ಬರುತ್ತದೆ?"

ಶ್ರೀರಾಮಕೃಷ್ಣರು: "ಆತನ ಸೃಷ್ಟಿಯಲ್ಲಿ ಎಲ್ಲವೂ ಇವೆ. ಸಾಧುಗಳನ್ನು ಆತನೆ ಸೃಷ್ಟಿಸಿದಾನೆ, ದುಷ್ಟರನ್ನೂ ಆತನೆ ಸೃಷ್ಟಿಸಿದಾನೆ. ಸದ್ಬುದ್ಧಿ ಕೊಡೋನೂ ಅವನೇ, ದುರ್ಬುದ್ಧಿ ಕೊಡೋನೂ ಅವನೆ."

ನೆರೆಯವ: "ಹಾಗಾದರೆ, ಪಾಪಕಾರ್ಯಕ್ಕೆ ನಾವೇನೂ ಹೊಣೆಗಾರರಲ್ಲ, ಅಲ್ಲವೆ?"

ಶ್ರೀರಾಮಕೃಷ್ಣರು: "ಭಗವಂತನ ನಿಯಮ, ಪಾಪ ಮಾಡಿದೆ ಎಂದರೆ ಅದರ ಫಲ ಅನುಭವಿಸಲೇಬೇಕಾಗುತ್ತದೆ. ಮೆಣಸಿನ ಕಾಯಿ ತಿಂದರೆ ಬಾಯಿಗೆ ಕಾರ ಹತ್ತೋದಿಲ್ಲವೆ? ಮಥುರಬಾಬು[1] ಯೌವನದಲ್ಲಿ ಏನೇನೊ ಮಾಡಿದ್ದ; ಆದ್ದರಿಂದ ಕೊನೆಗಾಲದಲ್ಲಿ ಆತನಿಗೆ ಏನೇನೊ ರೋಗ ಬಂತು.

"ಯೌವನಾವಸ್ಥೆಯಲ್ಲಿ ಇದು ಗೊತ್ತಾಗದೆ ಹೋಗಬಹುದು. ಕಾಳೀ

1. ರಾಣಿರಾಸಮಣಿಯ ಅಳಿಯ. ಪರಮಹಂಸರ ದೊಡ್ಡ ಭಕ್ತ. ಪರಮಹಂಸರಿಗೆ ಬೇಕಾಗುವ ಅನುಕೂಲತೆಗಳನ್ನೆಲ್ಲಾ ಈತ ಕಲ್ಪಿಸಿಕೊಟ್ಟ.

ದೇವಾಲಯದಲ್ಲಿ ಅಡಿಗೆಗೆ ಉರುಟು ಸೌದೆ ಉಪಯೋಗಿಸೋದನ್ನು ನೋಡಿದೇನೆ. ಮೊದಮೊದಲು ಸೌದೆ ನೆನೆದಿದ್ದರೂ ಚೆನ್ನಾಗಿ ಉರಿಯುತ್ತದೆ, ಅದರಲ್ಲಿ ನೀರಿರುವ ಹಾಗೇ ತೋರೋದಿಲ್ಲ. ಆದರೆ ಸಾಕಾದಷ್ಟು ಉರಿಯುವುದರೊಳಗೆ ನೀರು ಅದರ ತುದಿಗೆ ಬಂದುಬಿಟ್ಟಿರುತ್ತದೆ. ಕೊನೆಗೆ 'ಚೊಯ್ಞ್, ಚೊಯ್ಞ್' ಅಂತ ನೀರು ಸೌದೆಯಿಂದ ಹೊರಕ್ಕೆ ಬಂದು ಒಲೆಯನ್ನ ಆರಿಸಿಬಿಡುತ್ತದೆ.

"ಆದ್ದರಿಂದ ಕಾಮ, ಕ್ರೋಧ, ಲೋಭ ಇವುಗಳ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದಿರಬೇಕು. ಉದಾಹರಣೆಗೆ ಹನುಮಂತನನ್ನು ತೆಗೆದುಕೊ. ಕೋಪಗೊಂಡು ಲಂಕೆಗೆ ಬೆಂಕಿ ಹಾಕಿಬಿಟ್ಟ. ಕೊನೆಗೆ ಯೋಚನೆ ಬಂತು ಅಶೋಕವನದಲ್ಲಿ ಸೀತೆ ಇದಾಳಲ್ಲ ಏನುಗತಿ. ಆಕೆಗೆ ಏನಾದರೂ ಆಗಿಬಿಟ್ಟರೆ ಮುಂದೆ ಗತಿ ಎಂಬುದಾಗಿ ಚಟಪಟಗುಡಲಾರಂಭಿಸಿದ."

ನೆರೆಯುವ: "ಭಗವಂತ ದುಷ್ಟರನ್ನೇಕೆ ಸೃಷ್ಟಿಮಾಡಿದ?"

ಶ್ರೀರಾಮಕೃಷ್ಣರು: "ಆತನ ಇಚ್ಛೆ, ಆತನ ಲೀಲೆ. ಆತನ ಮಾಯೆಯಲ್ಲಿ ವಿದ್ಯೆಯೂ ಇದೆ, ಅವಿದ್ಯೆಯೂ ಇದೆ. ಅಂಧಕಾರದ ಆವಶ್ಯಕತೆಯೂ ಇದೆ. ಅದು ಬೆಳಕಿನ ಮಹತ್ತನ್ನು ಇನ್ನೂ ಹೆಚ್ಚಾಗಿ ಪ್ರಕಾಶಗೊಳಿಸುತ್ತದೆ. ಕಾಮ, ಕ್ರೋಧ, ಲೋಭ ಇವು ಕೆಟ್ಟವೇನೊ ನಿಜ. ಹಾಗಾದರೇಕೆ ಅವನ್ನು ಸೃಷ್ಟಿಸಿದಾನೆ ಅಂತೀಯೋ? ಮಹಾಪುರುಷರನ್ನಾಗಿ ತಯಾರುಮಾಡಲು. ಇಂದ್ರಿಯಗಳನ್ನು ಗೆದ್ದರೆ ಮನುಷ್ಯ ಮಹಾಪುರುಷನಾಗುತ್ತಾನೆ. ಜಿತೇಂದ್ರಿಯನ ಕೈಯಲ್ಲಿ ಏನುತಾನೆ ಸಾಧ್ಯವಿಲ್ಲ? ಭಗವಂತನ ಸಾಕ್ಷಾತ್ಕಾರವೂ ಆತನ ಕೃಪೆಯಿಂದ ದೊರೆತುಬಿಡುತ್ತದೆ. ಮತ್ತೆ, ಬೇರೆ ದೃಷ್ಟಿಯಿಂದ ನೋಡು. ಕಾಮದಿಂದಲೆ ಆತನ ಸೃಷ್ಟಿ-ಲೀಲೆ ಮುಂದುವರಿಯುತ್ತಿದೆ.

"ದುಷ್ಟರ ಆವಶ್ಯಕತೆಯೂ ಇದೆ. ಒಮ್ಮೆ ಒಂದು ಎಸ್ಟೇಟಿನ ಜನರು ಪುಂಡೆದ್ದರು. ಜಮೀನುದಾರ ಗೋಲೋಕಚೌಧುರಿಯನ್ನು ಅಲ್ಲಿಗೆ ಕಳುಹಿಸಬೇಕಾಯಿತು. ಆತ ಅಂಥಾ ನಿರ್ದಯಿ, ಆತನ ಹೆಸರು ಕೇಳೇ ಜನ 'ತರತರ' ಅಂತ ನಡುಗಲಾರಂಭಿಸಿದರು.

"ಪ್ರತಿಯೊಂದರ ಆವಶ್ಯಕತೆಯೂ ಇದೆ. ಒಮ್ಮೆ ಸೀತೆ ರಾಮನಿಗೆ ಹೇಳಿದಳು: 'ರಾಮ, ಅಯೋಧ್ಯೆಯಲ್ಲಿನ ಪ್ರತಿಯೊಂದು ಮನೆಯೂ

ಅರಮನೆಯಂತಿದ್ದರೆ ಬಹಳ ಚೆನ್ನಾಗಿರುತ್ತದೆ! ಅನೇಕ ಮನೆ ನೋಡುತ್ತೇನೆ, ಹರುಕಲು-ಮುರುಕಲು, ಬಹಳ ಹಳೆಯವು.' ರಾಮ ಹೇಳಿದ: 'ಸೀತೆ, ಎಲ್ಲಾ ಮನೆಗಳೂ ಒಳ್ಳೆ ಸುಂದರವಾದುವೇ ಆಗಿಬಿಟ್ಟರೆ, ಮೇಸ್ತ್ರಿಗಳಿಗೆ ಗತಿ?' (ನಗು.) ಭಗವಂತ ಎಲ್ಲಾ ರಕಮುವಾರಿ ಸೃಷ್ಟಿಸಿದಾನೆ—ಒಳ್ಳೆ ಮರ, ವಿಷದ ಗಿಡ, ಜೊತೆಗೆ ಜೊಂಡು ಕೂಡ. ಪ್ರಾಣಿಗಳಲ್ಲಿಯೂ ಒಳ್ಳೇದು ಕೆಟ್ಟದ್ದು ಎಲ್ಲಾ ಇವೆ—ಹುಲಿ, ಸಿಂಹ, ಹಾವು ಎಲ್ಲಾ."

ನೆರೆಯವ: "ಮಹಾಶಯರೆ, ಸಂಸಾರದಲ್ಲಿದ್ದು ಭಗವಂತನ ಸಾಕ್ಷಾತ್ಕಾರ ಪಡೆಯಲು ಸಾಧ್ಯವೆ?"

ಶ್ರೀರಾಮಕೃಷ್ಣರು: "ಖಂಡಿತ ಸಾಧ್ಯ. ಆದರೆ ನಾನು ತಿಳಿಸಿದ ಹಾಗೆ ಸಾಧುಸಂಗ, ಸರ್ವದಾ ಪ್ರಾರ್ಥನೆ ಇವನ್ನೂ ಮಾಡುತ್ತಿರಬೇಕು. ಆತನಿಗಾಗಿ ಅಳಬೇಕು. ಮನಸ್ಸಿನ ಕಲ್ಮಷಗಳೆಲ್ಲ ತೊಳೆದುಹೋದ ಮೇಲೆ ಆತನ ದರ್ಶನ ದೊರೆಯುತ್ತದೆ. ಮನಸ್ಸು ಮಣ್ಣು ಹಿಡಿದ ಸೂಜಿಯ ಹಾಗೆ, ಭಗವಂತ ಚುಂಬಕದ ಹಾಗೆ. ಮಣ್ಣು ತೊಳೆದುಹೋಗದವರೆಗೆ ಸೂಜಿ ಚುಂಬಕದೊಡನೆ ಐಕ್ಯವಾಗಲಾರದು. ಅಳುತ್ತ ಅಳುತ್ತ ಸೂಜಿಯ ಮಣ್ಣು ತೊಳೆದುಹೋಗುತ್ತದೆ. ಸೂಜಿಯ ಮಣ್ಣು ಎಂದರೆ, ಕಾಮ, ಕ್ರೋಧ, ಲೋಭ, ಪಾಪಬುದ್ಧಿ, ವಿಷಯಬುದ್ಧಿ. ಮಣ್ಣು ತೊಳೆದು ಹೋದೊಡನೇ ಸೂಜಿಯನ್ನು ಚುಂಬಕ ಎಳೆದುಕೊಂಡುಬಿಡುತ್ತದೆ, ಎಂದರೆ ಭಗವಂತನ ದರ್ಶನ ದೊರೆಯುತ್ತದೆ. ಚಿತ್ತಶುದ್ಧಿಯಾಯಿತು ಎಂದರೆ, ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಜ್ವರ ಬಂದು ದೇಹದಲ್ಲಿ ನೀರು ಹೆಚ್ಚಿಬಿಟ್ಟದೆ. ಅದನ್ನು ಕಡಮೆಮಾಡದ ಮುನ್ನ ಕ್ವಿನೈನ್ ಕೊಟ್ಟರೆ ಏನಾದೀತು?

"ಸಂಸಾರದಲ್ಲಿ ಭಗವಂತನ ಸಾಕ್ಷಾತ್ಕಾರ ಏಕೆ ಸಾಧ್ಯವಿಲ್ಲ? ನಾನು ತಿಳಿಸಿದ ಹಾಗೆ ಸಾಧುಸಂಗ, ಅಳುತ್ತ ಅಳುತ್ತ ಪ್ರಾರ್ಥನೆ, ಆಗಾಗ ನಿರ್ಜನ ವಾಸ ಇವನ್ನು ಮಾಡಬೇಕು. ಫುಟ್‌ಪಾತಿನಲ್ಲಿರೋ ಗಿಡಕ್ಕೆ ಬೇಲಿ ಹಾಕದೆ ಇದ್ದರೆ ಆಡು-ಕುರಿ, ದನ-ಕರು ತಿಂದುಬಿಡುತ್ತವೆ."

ನೆರೆಯವ: "ಹಾಗಾದರೆ, ಸಂಸಾರಿಗಳಿಗೂ ದೊರಕುತ್ತದೆ?"

ಶ್ರೀರಾಮಕೃಷ್ಣರು: "ಎಲ್ಲರಿಗೂ ಮುಕ್ತಿ ದೊರೆಯುತ್ತದೆ. ಆದರೆ ಗುರುವಿನ ಉಪದೇಶಕ್ಕನುಸಾರ ನಡೆದುಕೊಳ್ಳಬೇಕು. ಅಡ್ಡಮಾರ್ಗ ಹಿಡಿದರೆ ದಾರಿಗೆ ಹಿಂದಿರುಗಿಬರಲು ಕಷ್ಟಪಡಬೇಕಾಗುತ್ತದೆ. ಮುಕ್ತಿ

ದೊರಕಬೇಕಾದರೆ ಬಹಳ ಕಾಲ ಹಿಡಿಯುತ್ತದೆ. ಬಹುಶಃ ಈ ಜನ್ಮದಲ್ಲಿ ದೊರೆಯದೆಹೋಗಬಹುದು. ಮತ್ತೆ, ಬಹುಶಃ ಅನೇಕ ಜನ್ಮಗಳನಂತರ ದೊರೆತುಬಿಡಬಹುದು. ಜನಕಾದಿಗಳು ಸಾಂಸಾರಿಕ ಕೆಲಸಗಳನ್ನೂ ಮಾಡಿದರು. ಆದರೆ ಭಗವಂತನನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಾಡಿದರು—ನರ್ತಕಿ ತಲೆ ಮೇಲೆ ಪಾತ್ರೆ ಇಟ್ಟುಕೊಂಡು ನರ್ತಿಸುತ್ತಾಳಲ್ಲ ಹಾಗೆ. ಪಶ್ಚಿಮ ಭಾರತದ ಹೆಂಗಸರು ತಲೆ ಮೇಲೆ ನೀರಿನ ಕೊಡ ಹೊತ್ತುಕೊಂಡು ನಗುತ್ತ ನಗುತ್ತ ಮಾತುಕತೆಯಾಡುತ್ತ ನಡೆದುಹೋಗುವುದನ್ನು ನೋಡಿಲ್ಲ ನೀನು ?''

ನೆರೆಯವ: ''ಗುರುವಿನ ಉಪದೇಶದ ಸಂಬಂಧವಾಗಿ ತಿಳಿಸಿದಿರಲ್ಲ ಆತನನ್ನು ನಾವು ಪಡೆದುಕೊಳ್ಳುವ ಬಗೆ ಹೇಗೆ? ''

ಶ್ರೀರಾಮಕೃಷ್ಣರು: ''ಸಿಕ್ಕಿಸಿಕ್ಕಿದವರೆಲ್ಲಾ ಗುರು ಆಗಲಾರರು. ಮರದ ದಿಮ್ಮಿ ತಾನೂ ತೇಲಿಹೋಗಬಲ್ಲದು, ಅನೇಕ ಜೀವಜಂತುಗಳನ್ನೂ ಹೊತ್ತುಕೊಂಡು ಹೋಗಬಲ್ಲದು. ಆದರೆ ಬೆಂಡಿನ ಮೇಲೆ ಹತ್ತಿಕುಳಿತರೆ ಬೆಂಡೂ ಮುಳುಗಿಹೋಗುತ್ತದೆ, ಹತ್ತಿದವನೂ ಮುಳುಗಿಹೋಗುತ್ತಾನೆ. ಅದಕ್ಕಾಗೇ ಭಗವಂತ ಯುಗ ಯುಗದಲ್ಲೂ ಲೋಕಶಿಕ್ಷಣಕ್ಕಾಗಿ ಗುರು ರೂಪದಿಂದ ಅವತೀರ್ಣನಾಗುತ್ತಾನೆ. ಸಚ್ಚಿದಾನಂದನೇ ಗುರು.

''ಯಾವುದಕ್ಕೆ ಜ್ಞಾನ ಅಂತ ಹೆಸರು? ನಾನು ಎಂಬುದರ ಸ್ವರೂಪ ವೇನು? 'ಭಗವಂತನೊಬ್ಬನೇ ಕರ್ತ, ಉಳಿದವರೆಲ್ಲರೂ ಅಕರ್ತರೇ'—ಇದೇ ಜ್ಞಾನ. ನಾನು ಅಕರ್ತ ; ಆಕೆಯ ಕೈಯ ಯಂತ್ರ. ಅದಕ್ಕಾಗೆ ನಾನು ಹೇಳೋದು: 'ತಾಯೆ, ನೀನು ಯಂತ್ರಿ, ನಾನು ಯಂತ್ರ ; ನೀನು ಗೃಹಿಣಿ, ನಾನು ಗೃಹ; ನೀನು ಚಾಲಕ, ನಾನು ಗಾಡಿ; ಚಲಿಸಿದಂತೆ ಚಲಿಸುತ್ತೇನೆ, ಮಾಡಿಸಿದಂತೆ ಮಾಡುತ್ತೇನೆ; ನುಡಿಸಿದಂತೆ ನುಡಿಯುತ್ತೇನೆ; ನಾನಲ್ಲ ನಾನಲ್ಲ ನೀನು ನೀನು.''

ಪರಮಹಂಸರು ಪ್ರಾಣಕೃಷ್ಣನ ಮನೆಯಿಂದ ಹೊರಟು ಕ್ಯಾಪ್ಟನ್ ವಿಶ್ವನಾಥನ ಮನೆಗೆ ಹೋಗಿ ಬಳಿಕ ಕಮಲ-ಕುಟೀರಕ್ಕೆ ಹೋಗುತ್ತಿದಾರೆ.

೩

# ವಿದ್ಯಾಸಾಗರನೊಡನೆ ಭೇಟಿ

೫ನೆ ಆಗಸ್ಟ್ ೧೮೮೨, ಶ್ರಾವಣ ಕೃಷ್ಣ ಷಷ್ಠಿ, ಶನಿವಾರ.

ಪರಮಹಂಸರ ಜನ್ಮಭೂಮಿ ಹುಗ್ಲಿ ಜಿಲ್ಲೆಯಲ್ಲಿರುವ ಕಾಮಾರ-ಪುಕುರ. ಅದರ ಹತ್ತಿರವಿರುವ ವೀರಸಿಂಗ್ ಎಂಬ ಗ್ರಾಮದಲ್ಲೇ ಈಶ್ವರಚಂದ್ರ ವಿದ್ಯಾಸಾಗರ ಜನ್ಮ ತಳೆದುದು. ಒಳ್ಳೆ ದೊಡ್ಡ ವಿದ್ಯಾವಂತ, ಶಿಕ್ಷಣ ಸಮರ್ಥ, ಬರಹಗಾರ, ಲೋಕೋಪಕಾರಿ ಎಂಬುದಾಗಿ ಹೆಸರು ಪಡೆದಿದಾನೆ. ಆಧುನಿಕ ಬಂಗಾಳಿಯನ್ನು ಪೋಷಿಸಿದವರಲ್ಲಿ ಆತನೂ ಒಬ್ಬ. ಸಂಸ್ಕೃತ ವ್ಯಾಕರಣದಲ್ಲಿ ಮತ್ತು ಪದ್ಯಕಾವ್ಯದಲ್ಲಿ ಮಹಾ ಪಂಡಿತ. ಆತನ ಔದಾರ್ಯ ಆತನ ಹೆಸರನ್ನು ಮನೆ ಮಾತಾಗಿ ಮಾಡಿಬಿಟ್ಟಿದೆ. ಆತನ ಆದಾಯದ ಬಹು ಭಾಗ ವಿಧವೆಯರ, ಅನಾಥರ, ದಿಕ್ಕಿಲ್ಲದವರ, ದರಿದ್ರರ, ಇನ್ನೂ ಬೇರೆ ಬೇರೆ ಕಷ್ಟದಲ್ಲಿರುವವರ ಕಣ್ಣೀರು ಒರಸಲು ಹೋಗುತ್ತಿದೆ. ಆತನಸಹಾನುಭೂತಿ ಮಾನವ ಕುಲದ ಎಲ್ಲೆಯೊಳಗೇ ನಿಂತಿರಲಿಲ್ಲ: ಕರುಗಳಿಗೆ ಹಾಲು ದೊರೆಯಲಿ ಎಂಬುದಾಗಿ ಅನೇಕ ವರ್ಷಗಳ ಕಾಲ ಆತ ಹಾಲನ್ನೇ ಕುಡಿಯಲಿಲ್ಲ. ಕುದುರೆಗಳಿಗೆ ಕಷ್ಟ ಕೊಡಬೇಕಾಗುತ್ತೆಂದು ಗಾಡಿಯನ್ನೇ ಹತ್ತುತ್ತಿರಲಿಲ್ಲ. ಆತ ಸ್ವಾತಂತ್ರ್ಯ ಪ್ರೇಮಿ: ಮೇಲಧಿಕಾರಿಗಳೊಡನೆ ಭಿನ್ನಾಭಿಪ್ರಾಯ ಬೆಳೆದುದರಿಂದ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲ್ ಪದವಿಯನ್ನೇ ತ್ಯಾಜ್ಯಮಾಡಿಬಿಟ್ಟ. ತನ್ನ ತಾಯನ್ನ ಕಂಡರೆ ಆತನಿಗೆ ಬಹಳ ಪ್ರೀತಿ. ತಾನು ತನ್ನ ತಮ್ಮನ ವಿವಾಹದ ಸಮಯದಲ್ಲಿ ಹಾಜರಿರುವೆನೆಂಬುದಾಗಿ ಆತ ಆಕೆಗೆ ವಾಗ್ದಾನ ಮಾಡಿದ್ದುದರಿಂದ ಹುಚ್ಚು ಪ್ರವಾಹ ಬಂದಿದ್ದ ದಾಮೋದರ ನದಿಯನ್ನು ಯಾವ ಪ್ರಾಣಾಪಾಯಕ್ಕೂ ಹೆದರದೆ, ದೋಣಿ ಸಿಕ್ಕದೆಹೋದುದರಿಂದ ಈಜಿ ದಾಟಿ ತನ್ನ ಮಾತನ್ನು ಉಳಿಸಿಕೊಂಡ. ಆತ ಸರಳತೆಯ ಮೂರ್ತಿಯಾಗಿದ್ದ. ವಿದ್ಯಾಸಾಗರ ಎಂಬ ಹೆಸರಿಗೆ ತಕ್ಕಂತೆ ಆತ ವಿದ್ಯೆಯ ಸಾಗರವೇ ಆಗಿದ್ದ.

ಪರಮಹಂಸರು ಬಹಳ ಕಾಲದಿಂದ ವಿದ್ಯಾಸಾಗರನನ್ನು ನೋಡಬೇಕು ಎಂಬುದಾಗಿ ಕಾತರರಾಗಿದ್ದರು. ವಿದ್ಯಾಸಾಗರನ ಶಾಲೆಯಲ್ಲಿ ಮಾಸ್ಟರ್ ಅಧ್ಯಾಪಕನಾಗಿರುವುದನ್ನು ತಿಳಿದು ಅವರು ಆತನನ್ನು ಕೇಳಿದರು:

"ನನ್ನನ್ನು ವಿದ್ಯಾಸಾಗರನ ಹತ್ತಿರಕ್ಕೆ ಕರೆದುಕೊಂಡು ಹೋಗು ತ್ತೀಯ? ಆತನನ್ನು ನೋಡಬೇಕು ಎಂಬುದಾಗಿ ಬಹಳವಾಗಿ ಇಚ್ಛೆ ಆಗುತ್ತಿದೆ." ವಿದ್ಯಾಸಾಗರನಿಗೆ ಮಾಸ್ಟರ್ ಈ ಸಮಾಚಾರ ತಿಳಿಸಿದ. ಆತ ಬಹಳ ಹರ್ಷಗೊಂಡು ಒಂದು ಶನಿವಾರ ನಾಲ್ಕು ಘಂಟೆ ಸಮಯಕ್ಕೆ ಅವರನ್ನು ಕರೆದುಕೊಂಡು ಬರುವ ಹಾಗೆ ಮಾಸ್ಟರಿಗೆ ತಿಳಿಸಿದ. ಒಮ್ಮೆ ಮಾತ್ರ ಕೇಳಿದ: "ಅವರು ಯಾವ ವಿಧದ ಪರಮಹಂಸರು? ಕಾಷಾಯ ವಸ್ತ್ರ ಉಡುತ್ತಾರೆಯೆ?" ಮಾಸ್ಟರ್ ಉತ್ತರವಿತ್ತ: "ಇಲ್ಲ. ಅವರು ಒಬ್ಬ ಅದ್ಭುತ ಪುರುಷರು. ಕೆಂಪು ಅಂಚಿನ ಪಂಚೆ ಉಡುತ್ತಾರೆ, ಷರಟು ತೊಟ್ಟುಕೊಳ್ಳುತ್ತಾರೆ, ಪಾಲಿಷ್ ಹಾಕಿದ ಸ್ಲಿಪ್ಪರ್ ಮೆಟ್ಟುತ್ತಾರೆ. ರಾಣಿ ರಾಸಮಣಿಯ ಕಾಳೀದೇವಾಲಯದ ಒಂದು ಕೊಠಡಿಯಲ್ಲಿ ವಾಸವಾಗಿ ದಾರೆ. ಅವರ ಕೊಠಡಿಯಲ್ಲಿ ಮಂಚ ಹಾಕಿದೆ. ಅದರ ಮೇಲೆ ಸುಪ್ಪತ್ತಿಗೆ-ಗಿಪ್ಪತ್ತಿಗೆ ಎಲ್ಲಾ ಇವೆ. ಸೊಳ್ಳೆಪರದೆ ಕಟ್ಟಿದೆ. ಅದರ ಮೇಲೇ ಅವರು ಮಲಗುವುದು. ಸನ್ಯಾಸಿಯ ಯಾವ ಬಾಹ್ಯ ಚಿಹ್ನೆಯೂ ಕಾಣಬರುತ್ತಿಲ್ಲ. ಆದರೆ ಅವರಿಗೆ ಭಗವಂತನೊಬ್ಬನ ಹೊರತು ಬೇರೆ ಏನೂ ಗೊತ್ತಿಲ್ಲ. ಅಹರ್ನಿಶಿ ಭಗವಚ್ಚಿಂತನೆಯಲ್ಲೇ ಕಾಲ ಕಳೆಯುತ್ತಾರೆ."

ಪರಮಹಂಸರು ಆಗಸ್ಟ್ ಐದನೆ ತಾರೀಖು ಅಪರಾಹ್ನ ಭವನಾಥ, ಮಾಸ್ಟರ್, ಹಾಜರಾ ಇವರೊಡನೆ ಗಾಡಿಯಲ್ಲಿ ಕುಳಿತು ದಕ್ಷಿಣೇಶ್ವರ ಬಿಟ್ಟು ಹೊರಟದಾರೆ. ವಿದ್ಯಾಸಾಗರನ ಮನೆ ಇರುವುದು ಕಲ್ಕತ್ತದ ಮಧ್ಯ ಪ್ರದೇಶದಲ್ಲಿರುವ ಬಾದುರಬಾಗಾನಿನಲ್ಲಿ. ದಕ್ಷಿಣೇಶ್ವರದಿಂದ ಅಲ್ಲಿಗೆ ಆರು ಮೈಲಿ. ಗಾಡಿಯಲ್ಲಿ ಆನಂದದಿಂದ ಬಾಲಕನ ಹಾಗೆ ಮಾತುಕತೆ ಆಡಿ ಕೊಂಡೇ ಬರುತ್ತಿದಾರೆ. ಆದರೆ ವಿದ್ಯಾಸಾಗರನ ಮನೆಯ ಹತ್ತಿರಕ್ಕೆ ಬಂದಾಗ ಇದ್ದಕ್ಕಿದ್ದಹಾಗೆ ಅವರ ಭಾವ ಪರಿವರ್ತನೆಹೊಂದಿಬಿಟ್ಟಿತು. ಭಗವದಾವೇಶ ಬಂದುಬಿಟ್ಟಿದೆ. ಮಾಸ್ಟರಿಗೆ ಇದು ಗೊತ್ತಾಗದೆ ಆತ ರಾಜಾರಾಮಮೋಹನರಾಯನ ತೋಟದ ಮನೆಯನ್ನು ಅವರಿಗೆ ತೋರಿಸಿದ. ಪರಮಹಂಸರು ಅಸಮಾಧಾನಗೊಂಡು ಹೇಳುತ್ತಿದಾರೆ: "ಈಗ ಅದೆಲ್ಲ ನನಗೆ ರುಚಿಸುತ್ತಿಲ್ಲ." ಭಾವಾವಿಷ್ಟರಾಗುತ್ತಿದಾರೆ.

ವಿದ್ಯಾಸಾಗರನ ಮನೆ ಮುಂದೆ ಗಾಡಿ ಬಂದು ನಿಂತಿತು. ಪರಮ ಹಂಸರು ಗಾಡಿಯಿಂದಿಳಿದು ಮಾಸ್ಟರನ್ನು ಹಿಡಿದುಕೊಂಡು ಮುಂದುವರಿ ಯುತ್ತಿದಾರೆ. ಅಂಗಳದಲ್ಲಿ ವಿವಿಧ ಹೂವಿನ ಗಿಡಗಳು ಬೆಳೆದಿವೆ. ಅವರು

ಮನೆಯ ಒಳಕ್ಕೆ ಹೋಗುತ್ತ ಹೋಗುತ್ತ ತಮ್ಮ ಷರಟನ್ನು ತೋರಿಸಿ ಮಾಸ್ಟರನ್ನು ಮಗುವಿನ ಹಾಗೆ ಕೇಳುತ್ತಿದಾರೆ: "ನಾನು ಗುಂಡಿ ಹಾಕಿಕೊಂಡಿಲ್ಲ. ಇದು ವಿದ್ಯಾಸಾಗರನ ಮನಸ್ಸನ್ನು ನೋಯಿಸುವುದೇ?" ಮಾಸ್ಟರ್ ಹೇಳಿದ: "ಏನಿಲ್ಲ! ಅದಕ್ಕಾಗಿ ನೀವು ಚಿಂತಿಸಬೇಕಾಗಿಲ್ಲ. ಹೇಗೆ ನಡೆದುಕೊಂಡರೂ ನೀವು ತಪ್ಪು ಮಾಡಿದ ಹಾಗಾಗುವುದಿಲ್ಲ. ನೀವು ಗುಂಡಿ ಹಾಕಿಕೊಳ್ಳುವ ಆವಶ್ಯಕತೆಯೇನಿಲ್ಲ." ಅವರು ಮಗುವಿನ ಹಾಗೆ ಅದನ್ನು ಒಪ್ಪಿಕೊಂಡು ನಿಶ್ಚಿಂತರಾಗಿಬಿಟ್ಟರು.

ವಿದ್ಯಾಸಾಗರನ ವಯಸ್ಸು ಅರವತ್ತೆರಡು ಇರಬೇಕು. ಪರಮಹಂಸರಿಗಿಂತ ಹದಿನಾರೊ ಹದಿನೇಳೊ ವರ್ಷ ಜಾಸ್ತಿ. ಆತನ ಮನೆ ಎರಡು ಅಂತಸ್ತಿನದು. ಆಂಗ್ಲರ ಬಂಗಲೆ ಹಾಗೆ ಕಟ್ಟಲ್ಪಟ್ಟಿದೆ. ಸುತ್ತಲೂ ಹುಲ್ಲು ಮೈದಾನ. ಎತ್ತರವಾದ ಕಾಂಪೌಂಡು. ಪರಮಹಂಸರು ಮತ್ತು ಅವರೊಡನೆ ಬಂದಿದ್ದವರು ಮೆಟ್ಟಲು ಹತ್ತಿ ಎರಡನೆ ಅಂತಸ್ತಿಗೆ ಹೋಗಿ ಅಲ್ಲಿ ಒಂದು ಕೊಠಡಿಯನ್ನು ಪ್ರವೇಶಿಸಿದರು. ಅದರ ಒಂದು ಕೊನೆಯಲ್ಲಿ ವಿದ್ಯಾಸಾಗರ ಕುರ್ಚಿ ಮೇಜು ಹಾಕಿಕೊಂಡು ಕುಳಿತಿದ್ದ. ಆ ಮೇಜಿನ ಬಲಭಾಗಕ್ಕೆ ಒಂದು ಬೆಂಚು ಹಾಕಿತ್ತು. ಬಾಕಿ ಎರಡು ಕಡೆಗಳಲ್ಲಿ ಆತನ ಸ್ನೇಹಿತರು ಕುರ್ಚಿ ಹಾಕಿಕೊಂಡು ಕುಳಿತಿದ್ದರು.

ಪರಮಹಂಸರು ಕೊಠಡಿಯನ್ನು ಪ್ರವೇಶಿಸಿದೊಡನೆಯೇ ವಿದ್ಯಾಸಾಗರ ಅವರನ್ನು ಎದುರುಗೊಳ್ಳಲು ಎದ್ದು ನಿಂತುಕೊಂಡ. ಪರಮಹಂಸರು ಆ ಬೆಂಚಿನ ಹತ್ತಿರ ಹೋಗಿ ಒಂದು ಕೈಯನ್ನು ಆ ಮೇಜಿನ ಮೇಲೆ ಊರಿ ನಿಂತುಕೊಂಡರು. ವಿದ್ಯಾಸಾಗರ ಪೂರ್ವ ಪರಿಚಿತನೊ ಏನೊ ಎಂಬಂತೆ ಆತನನ್ನು ಏಕ ದೃಷ್ಟಿಯಿಂದ ನೋಡುತ್ತ ಭಾವದಲ್ಲಿ ಕಿರುನಗೆ ನಗುತ್ತಿದಾರೆ. ಆ ಅವಸ್ಥೆಯಲ್ಲೇ ಕೆಲವು ನಿಮಿಷಗಳು ಹಾಗೇ ನಿಂತುಕೊಂಡರು. ಪ್ರಕೃತಿಸ್ಥರಾಗಲೋಸುಗ ಆಗಾಗ ಹೇಳುತ್ತಿದಾರೆ: "ನೀರು ಕುಡಿಯಬೇಕು, ನೀರು ಕುಡಿಯಬೇಕು."

ಇಷ್ಟರಲ್ಲೇ ಮನೆ ಮಕ್ಕಳು, ಆತನ ಸ್ನೇಹಿತರು, ಬಂಧುಗಳು ಇವರೆಲ್ಲಾ ಅಲ್ಲಿಗೆ ಬಂದು ನೆರೆದುಬಿಟ್ಟರು. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಬೆಂಚಿನ ಮೇಲೆ ಕುಳಿತುಕೊಂಡಿದಾರೆ. ಹದಿನೇಳೊ ಹದಿನೆಂಟೊ ವಯಸ್ಸಿನ ಒಬ್ಬ ಹುಡುಗನೂ ಅದೇ ಬೆಂಚಿನ ಮೇಲೆ ಕುಳಿತಿದಾನೆ; ವಿದ್ಯಾಭ್ಯಾಸ ಮುಂದುವರಿಸಲು ಸಹಾಯ ಕೇಳಲು ಆತ ಅಲ್ಲಿಗೆ

ಬಂದಿದಾನೆ. ಪರಮಹಂಸರು ಆತನಿಂದ ಸ್ವಲ್ಪ ದೂರದಲ್ಲಿ ಸರಿದು ಕುಳಿತುಕೊಂಡು ಭಾವದಲ್ಲೇ ಹೇಳುತ್ತಿದಾರೆ: "ತಾಯೆ, ಈ ಹುಡುಗನಿಗೆ ಅತ್ಯಂತ ಸಂಸಾರಾಸಕ್ತಿ. ನಿನ್ನ ಅವಿದ್ಯಾ ಸಂಸಾರಕ್ಕೆ ಸೇರಿದವ."

ವಿದ್ಯಾಸಾಗರ ಯಾರೊ ಒಬ್ಬನಿಗೆ ನೀರು ತರುವಂತೆ ಹೇಳಿದ. ಆತ ಮಾಸ್ಟರನ್ನು ಕೇಳುತ್ತಿದಾನೆ, ಏನಾದರೂ ಫಲಾಹಾರ ತರಿಸಿದರೆ ಇವರು ಸ್ವೀಕರಿಸುವರೆ? ಆತ ಬೇಡವೆಂದು ಹೇಳದಿರುವುದನ್ನು ನೋಡಿ ವಿದ್ಯಾಸಾಗರನೇ ಮನೆಯೊಳಕ್ಕೆ ಹೋಗಿ ಸ್ವಲ್ಪ ಸಿಹಿ ತಿಂಡಿಗಳನ್ನು ತೆಗೆದುಕೊಂಡು ಬಂದು ಪರಮಹಂಸರ ಮುಂದೆ ಇಟ್ಟ. ಬಳಿಕ ಹಾಜರಾ ಮತ್ತು ಭವನಾಥ ಇವರಿಗೂ ತಿಂಡಿ ದೊರಕಿತು. ಮಾಸ್ಟರಿಗೆ ತಂದುಕೊಟ್ಟಾಗ ವಿದ್ಯಾಸಾಗರ ಹೇಳುತ್ತಿದಾನೆ : "ಈತ ನಮ್ಮ ಮನೆ ಹುಡುಗ. ಈತನಿಗೆ ಕೊಡದೆ ಇದ್ದರೂ ಚಿಂತೆಯಿಲ್ಲ." ಪರಮಹಂಸರು ಅಲ್ಲಿದ್ದ ಒಬ್ಬ ಯುವಕ ಭಕ್ತನ ಮಾತೆತ್ತಿ ವಿದ್ಯಾಸಾಗರನಿಗೆ ಹೇಳುತ್ತಿದಾರೆ: "ಆ ಹುಡುಗ ಬಹಳ ಒಳ್ಳೆ ಹುಡುಗ; ಅಂತರ್ಯದಲ್ಲಿ ಒಳ್ಳೆ ಸಾರವಿದೆ. ಫಲ್ಗು ನದಿಯ ಹಾಗಿದಾನೆ. ನೋಡೋಕೆ ಮೇಲೆ ಬರೀ ಮರಳೇ. ಸ್ವಲ್ಪ ಬಗೆದರೇ ಸಾಕು ಒಳಗೆ ನೀರು ಹರಿಯುವುದು ಕಾಣಬರುತ್ತದೆ."

ಸಿಹಿಗಳನ್ನು ತಿಂದನಂತರ ಪರಮಹಂಸರು ನಗುನಗುತ್ತ ವಿದ್ಯಾಸಾಗರನೊಡನೆ ಮಾತನಾಡಲಾರಂಭಿಸಿದಾರೆ. ಸ್ವಲ್ಪ ಹೊತ್ತಿನಲ್ಲೇ ಕೊಠಡಿ ಜನರಿಂದ ತುಂಬಿಬಿಟ್ಟಿತು. ಕೆಲವರು ಕುಳಿತಿದಾರೆ, ಕೆಲವರು ನಿಂತಿದಾರೆ.

ಶ್ರೀರಾಮಕೃಷ್ಣರು: "ಆಹ! ಇಂದು ಸಾಗರಕ್ಕೆ ಬಂದು ಸೇರಿಬಿಟ್ಟಿದೇನೆ. ಇಲ್ಲಿಯವರೆಗೆ ಕಾಲುವೆ, ಜೌಗು ಭೂಮಿ, ಅತಿ ಹೆಚ್ಚೆಂದರೆ ನದಿ ಇವನ್ನು ನೋಡಿದ್ದೆ. ಆದರೆ ಇಂದು ಸಾಗರವೇ ನನ್ನ ಕಣ್ಣೆದುರಿಗೆ!" (ಎಲ್ಲರೂ ನಗುತ್ತಿದಾರೆ.)

ವಿದ್ಯಾಸಾಗರ ನಗುತ್ತ: "ಹಾಗಾದರೆ, ಇಲ್ಲಿಂದ ತೆಗೆದುಕೊಂಡು ಹೋಗಿ ಸ್ವಲ್ಪ ಉಪ್ಪು ನೀರನ್ನ." (ನಗು.)

ಶ್ರೀರಾಮಕೃಷ್ಣರು : "ಇಲ್ಲ, ಇಲ್ಲ! ಏಕೆ ಉಪ್ಪು ನೀರು ತೆಗೆದುಕೊಂಡುಹೋಗಲಿ? ನೀನು ಅವಿದ್ಯೆಯ ಸಾಗರವೇನಲ್ಲ, ವಿದ್ಯೆಯ ಸಾಗರ. ನೀನು ಕ್ಷೀರಸಮುದ್ರ." (ಎಲ್ಲರೂ ನಗುತ್ತಿದಾರೆ.)

ವಿದ್ಯಾಸಾಗರ: "ನೀವು ಸುಮ್ಮನೆ ಬೇಕಾದರೆ ಹಾಗೆ ಹೇಳ ಬಹುದು."

ವಿದ್ಯಾಸಾಗರ ಈಗ ಸುಮ್ಮನೆ ಕುಳಿತುಕೊಂಡಿದಾನೆ. ಪರಮಹಂಸರು ಹೇಳುತ್ತಿದಾರೆ: "ನಿನ್ನ ಕರ್ಮ ಸಾತ್ತ್ವಿಕ ಕರ್ಮ; ಸತ್ತ್ವಪ್ರಧಾನ ರಾಜಸಿಕ ಕರ್ಮ, ಸತ್ತ್ವಗುಣದಿಂದ ದಯೆ ಉಂಟಾಗುತ್ತದೆ. ದಯಾ ಪ್ರೇರಿತ ಕರ್ಮಗಳೂ ರಾಜಸಿಕ ಕರ್ಮಗಳೇನೊ ನಿಜ. ಆದರೆ ಅವುಗಳಲ್ಲಿನ ರಜಸ್ಸು ಸತ್ತ್ವಪ್ರಧಾನ ರಜಸ್ಸು. ಅದರಿಂದ ಯಾವ ತೊಂದರೆಯೂ ಬಾರದು. ಶುಕದೇವಾದಿಗಳು ಲೋಕಶಿಕ್ಷಣಕ್ಕಾಗಿ, ಭಗವದ್ವಿಷಯವನ್ನು ತಿಳಿಸುವುದಕ್ಕಾಗಿ ದಯೆ ಇಟ್ಟುಕೊಂಡಿದ್ದರು. ನೀನು ವಿದ್ಯಾದಾನ, ಅನ್ನದಾನ ಮಾಡುತ್ತಿದೀಯೆ. ಇವೂ ಒಳ್ಳೆಯವೆ. ನಿಷ್ಕಾಮಭಾವನೆ ಯಿಂದ ಮಾಡಿದರೆ ಇವುಗಳಿಂದಲೂ ಭಗವಂತನ ಸಾಕ್ಷಾತ್ಕಾರ ದೊರೆ ಯುತ್ತದೆ. ಕೆಲವರು ಇವನ್ನು ಮಾಡುತ್ತಾರೆ ಕೀರ್ತಿಗಾಗಿ, ಪುಣ್ಯಕ್ಕಾಗಿ. ಇವರದು ನಿಷ್ಕಾಮ ಕರ್ಮ ಅಲ್ಲವೇ ಅಲ್ಲ. ಜೊತೆಗೆ ನೀನಾಗಲೆ ಸಿದ್ಧಪುರುಷ."

ವಿದ್ಯಾಸಾಗರ: "ಅದು ಹೇಗೆ?"

ಶ್ರೀರಾಮಕೃಷ್ಣರು ನಗುತ್ತ: "ಆಲೂಗಡ್ಡೆ, ಪಡವಲಕಾಯಿ ಸಿದ್ಧವಾದರೆ (ಬೆಂದರೆ) ಮೃದು ಆಗುತ್ತವೆ. ನೀನು ಬಹಳ ಮೃದು! ನಿನ್ನಲ್ಲಿ ಬಹಳ ದಯೆ!" (ನಗು.)

ವಿದ್ಯಾಸಾಗರ ನಗುತ್ತ: "ತಿರುವಿದ ಉದ್ದಿನ ಬೇಳೆಯನ್ನು ಬೇಯಿ ಸಿತು ಎಂದರೆ ಅದು ಇನ್ನೂ ಅಧಿಕವಾಗಿ ಗಟ್ಟಿಯಾಗುತ್ತದೆ."

ಶ್ರೀರಾಮಕೃಷ್ಣರು: "ಆದರೆ ನೀನು ಆ ಗುಂಪಿಗೆ ಸೇರಿದವನಲ್ಲ. ಬರಿಯ ಪಂಡಿತರು ರೋಗ ಹಿಡಿದ ಹಣ್ಣಿನ ಹಾಗೆ, ಕಾಯಿಗೆ ಕಾಯೂ ಅಲ್ಲ ಹಣ್ಣಿಗೆ ಹಣ್ಣೂ ಅಲ್ಲ ಎಡಬಿಡಂಗಿ. ರಣಹದ್ದು ಬಹಳ ಎತ್ತರಕ್ಕೇನೋ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಸತ್ತ ಪ್ರಾಣಿಗಳ ಕಡೆ. ಬರಿಯ ಪಂಡಿತರು ಹೆಸರಿಗೇನೊ ಪಂಡಿತರು, ಆದರೆ ಕಾಮಕಾಂಚನಾ ಸಕ್ತರು—ರಣಹದ್ದುಗಳ ಹಾಗೆ ಕೊಳೆತು ನಾರೋ ಮಾಂಸಕ್ಕಾಗಿ ಹುಡುಕುತ್ತಾರೆ. ಆಸಕ್ತಿ ಅವಿದ್ಯಾ ಸಂಸಾರಕ್ಕೆ ಸೇರಿದ್ದು. ದಯೆ, ಭಕ್ತಿ, ವೈರಾಗ್ಯ ಇವು ವಿದ್ಯೆಯ ಐಶ್ವರ್ಯ."

ವಿದ್ಯಾಸಾಗರ ಸುಮ್ಮನೆ ಕುಳಿತು ಕೇಳುತ್ತಿದಾನೆ. ಉಳಿದವರೂ ಏಕಾಗ್ರ ದೃಷ್ಟಿಯಿಂದ ಆ ಆನಂದಮಯ ಪುರುಷರನ್ನು ದರ್ಶನಮಾಡುತ್ತ ಅವರ ಬಾಯಿಂದ ಬರುತ್ತಿದ್ದ ವೇದವಚನಾಮೃತವನ್ನು ಪಾನಮಾಡುತ್ತಿದಾರೆ.

ವಿದ್ಯಾಸಾಗರ ಧಾರ್ಮಿಕ ವಿಷಯವಾಗಿ ಯಾರಿಗೂ ಒಂದು ಮಾತೂ ಆಡುತ್ತಿರಲಿಲ್ಲ. ಆತ ಹಿಂದೂ ದರ್ಶನಾದಿಗಳನ್ನು ಓದಿದಾನೆ. ಒಮ್ಮೆ ಅವುಗಳ ಸಂಬಂಧವಾಗಿ ಮಾಸ್ಟರ್ ಆತನಿಗೆ ಪ್ರಶ್ನೆ ಹಾಕಿದ್ದಾಗ ಆತ ಉತ್ತರವಿತ್ತಿದ್ದ: "ನನಗನಿಸುತ್ತಿದೆ, ದಾರ್ಶನಿಕರ ಮನಸ್ಸಿನಲ್ಲಿ ಏನಿತ್ತೊ ಅದನ್ನು ಅವರು ಹೊರಗೆಡಹಲಾಗಲಿಲ್ಲ ಎಂಬುದಾಗಿ." ಆದರೆ ಆತ ವೈದಿಕರಂತೆ ಶ್ರಾದ್ಧಾದಿ ಧರ್ಮಕರ್ಮಗಳನ್ನು ಮಾಡುತ್ತಿದ್ದ; ಕೊರಳಿಗೆ ಉಪವೀತ ಹಾಕಿಕೊಳ್ಳುತ್ತಿದ್ದ. ಬಂಗಾಳಿಯಲ್ಲೇ ಎಲ್ಲಾ ಪತ್ರ ಬರೆಯುತ್ತಿದ್ದ. ಅವುಗಳಲ್ಲಿ "ಶ್ರೀ ಶ್ರೀ ಹರಿಶರಣಂ" ಎಂಬುದಾಗಿ ಮೊದಲು ಬರೆಯುತ್ತಿದ್ದ. ಭಗವಂತನ ವಿಷಯವಾಗಿ ಆತ ಒಮ್ಮೆ ಹೇಳಿದ್ದ: "ಭಗವಂತನನ್ನು ಅರಿತುಕೊಳ್ಳಲಂತೂ ಮಾರ್ಗವೇ ಇಲ್ಲ. ಆದ್ದರಿಂದ ನಾವು ಮಾಡಬೇಕಾದ ಕರ್ತವ್ಯ ಏನು? ನನ್ನ ದೃಷ್ಟಿಯಿಂದ ನಾವು ಮಾಡಬೇಕಾದ ಕರ್ತವ್ಯ, ನಾವು ಆ ರೀತಿಯಾಗಿ ಬದುಕಿ ಬಾಳಬೇಕು, ಇತರರೂ ಅದನ್ನು ಅನುಸರಿಸುವುದಾದರೆ ಈ ಭೂಮಂಡಲವೇ ಸ್ವರ್ಗವಾಗಿ ಹೋಗಿಬಿಡಬೇಕು. ಈ ಜಗತ್ತಿಗೆ ಶ್ರೇಯಸ್ಸು ತರಲು ಪ್ರತಿಯೊಬ್ಬನೂ ಪ್ರಯತ್ನಿಸಬೇಕು."

ಈಗ ಪರಮಹಂಸರ ಮಾತುಕತೆ ಬ್ರಹ್ಮಜ್ಞಾನದ ಸಂಬಂಧವಾಗಿ ಆರಂಭವಾಯಿತು.

ಶ್ರೀ ರಾಮಕೃಷ್ಣರು: "ಬ್ರಹ್ಮ ವಿದ್ಯೆ, ಅವಿದ್ಯೆಗಳಿಗೆ ಅತೀತ. ಆತ ಮಾಯಾತೀತ.

"ಈ ಜಗತ್ತಿನಲ್ಲಿ ವಿದ್ಯಾಮಾಯೆ ಅವಿದ್ಯಾಮಾಯೆ ಎರಡೂ ಇವೆ. ಜ್ಞಾನಭಕ್ತಿಯೂ ಇವೆ, ಕಾಮಕಾಂಚನವೂ ಇವೆ; ಸತ್ ಕೂಡ ಇದೆ, ಅಸತ್ ಕೂಡ ಇದೆ; ಒಳ್ಳೇದೂ ಇದೆ, ಕೆಟ್ಟದ್ದೂ ಇದೆ. ಆದರೆ ಬ್ರಹ್ಮ ಮಾತ್ರ ನಿರ್ಲಿಪ್ತ. ಒಳ್ಳೇದು ಕೆಟ್ಟದ್ದು, ಸತ್ ಅಸತ್ ಇವು ಜೀವಿಗಳ ಪಕ್ಷಕ್ಕೆ ಮಾತ್ರ; ಆದರೆ ಬ್ರಹ್ಮನಿಗೆ ಅವುಗಳಿಂದ ಏನೂ ಆಗದು.

"ಒಬ್ಬ ದೀಪದ ಬೆಳಕಿನಲ್ಲಿ ಭಾಗವತ ಓದುತ್ತಿರಬಹುದು, ಇನ್ನೊಬ್ಬ ಅದೇ ಬೆಳಕಿನಲ್ಲಿ ಸುಳ್ಳುಪತ್ರ ಬರೆಯುತ್ತಿರಬಹುದು; ಆದರೆ ದೀಪ

ಮಾತ್ರ ನಿರ್ಲಿಪ್ತವಾದ್ದು. ಸೂರ್ಯ ತನ್ನ ಬೆಳಕನ್ನು ಒಳ್ಳೆಯವರ ಮೇಲೂ ಬಿಡುತ್ತಾನೆ, ಕೆಟ್ಟವರ ಮೇಲೂ ಬಿಡುತ್ತಾನೆ.

"ನೀನು ಕೇಳಬಹುದು: 'ಹಾಗಾದರೆ ದುಃಖ, ಪಾಪ, ಅಶಾಂತಿ ಇವುಗಳಿಗೆಲ್ಲ ಸಮಂಜಸ ಉತ್ತರ ಎಲ್ಲಿ?' ಇವೆಲ್ಲ ಜೀವಕ್ಕೆ ಸಂಬಂಧ ಪಟ್ಟವು ಎಂಬುದೇ ಉತ್ತರ. ಬ್ರಹ್ಮ ಇವುಗಳಿಂದ ನಿರ್ಲಿಪ್ತ. ಹಾವಿನಲ್ಲಿ ವಿಷವಿದೆ. ಅದು ಪರರನ್ನು ಕಡಿದಾಗ ಮಾತ್ರ ಅವರು ಸತ್ತುಹೋಗುತ್ತಾರೆ, ಆದರೆ ಹಾವಿಗೆ ಮಾತ್ರ ಅದರಿಂದ ಏನೂ ಆಗದು.

"ಬ್ರಹ್ಮ ಏನು ಎಂಬುದನ್ನ ಬಾಯಿಂದ ವರ್ಣನೆಮಾಡಲಾಗೋದಿಲ್ಲ. ಎಲ್ಲವೂ ಉಚ್ಛಿಷ್ಟವಾಗಿಹೋಗಿವೆ—ವೇದ, ಪುರಾಣ, ತಂತ್ರ, ಷಡ್ದರ್ಶನ ಎಲ್ಲಾ. ಇವೆಲ್ಲಾ ಬಾಯಿಂದ ಹೊರಹೊಮ್ಮಿರುವುದರಿಂದ, ನಾಲಗೆ ಉಚ್ಚರಿಸಿರುವುದರಿಂದ ಉಚ್ಛಿಷ್ಟವಾಗಿವೆ. ಆದರೆ ಕೇವಲ ಒಂದು ವಸ್ತು ಮಾತ್ರ ಉಚ್ಛಿಷ್ಟವಾಗಿಲ್ಲ. ಅದೇ ಬ್ರಹ್ಮ. ಬ್ರಹ್ಮ ಅಂದರೆ ಏನು ಎಂಬುದನ್ನ ಯಾರೂ ಇದುವರೆಗೆ ವರ್ಣನೆಮಾಡಲಾಗಿಲ್ಲ."

ವಿದ್ಯಾಸಾಗರ ತನ್ನ ಸ್ನೇಹಿತರಿಗೆ: "ಆಹಾ! ಇದು ಬಹಳ ಒಳ್ಳೆ ಧಿವ್ಯವಾದ ಮಾತು. ಇಂದು ಒಂದು ಹೊಸ ವಿಷಯವನ್ನೇ ಕಲಿತು ಕೊಂಡ ಹಾಗಾಯಿತು."

ಶ್ರೀರಾಮಕೃಷ್ಣರು: "ಒಬ್ಬನಿಗೆ ಇಬ್ಬರು ಮಕ್ಕಳಿದ್ದರು. ಆ ಇಬ್ಬರು ಮಕ್ಕಳಿಗೂ ಬ್ರಹ್ಮವಿದ್ಯೆ ಕಲಿಸಬೇಕೆಂದು ತಂದೆ ಅವರನ್ನು ಒಬ್ಬ ಗುರುವಿನ ಹತ್ತಿರಕ್ಕೆ ಕಳುಹಿಸಿದ ಕೆಲವು ವರ್ಷಗಳನಂತರ ಅವರಿಬ್ಬರೂ ಗುರುಗೃಹದಿಂದ ಹಿಂದಿರುಗಿ ಬಂದು ತಂದೆಗೆ ಪ್ರಣಾಮ ಮಾಡಿದರು. ತಂದೆಗೆ ಕುತೂಹಲವುಂಟಾಯಿತು ತನ್ನ ಮಕ್ಕಳ ಬ್ರಹ್ಮ ಜ್ಞಾನ ಎಷ್ಟು ಆಳದ್ದು ಎಂಬುದನ್ನು ಕಂಡುಹಿಡಿಯಲು. ಆತ ದೊಡ್ಡವನಿಗೆ ಪ್ರಶ್ನೆಹಾಕಿದ: 'ಮಗು, ನೀನು ಎಲ್ಲವನ್ನೂ ಓದಿಬಂದಿದೀಯೆ. ಬ್ರಹ್ಮನ ಸ್ವರೂಪ ಏನು ತಿಳಿಸು ನೋಡೋಣ?' ಆ ಹುಡುಗ ವೇದಗಳಿಂದ ಅನೇಕ ಶ್ಲೋಕಗಳನ್ನು ಎತ್ತಿ ಎತ್ತಿ ಹೇಳಿ ಬ್ರಹ್ಮನ ಸ್ವರೂಪ ಏನು ಎಂಬುದನ್ನ ವಿವರಿಸಲಾರಂಭಿಸಿದ. ತಂದೆ ಎಲ್ಲವನ್ನೂ ಸಾವಧಾನದಿಂದ ಕೇಳಿದ. ಬಳಿಕ ತಂದೆ ಅದೇ ಪ್ರಶ್ನೆಯನ್ನು ಕಿರಿಯ ಮಗನಿಗೆ ಹಾಕಿದ. ಆತ ತನ್ನ ದೃಷ್ಟಿಯನ್ನು ನೆಲದ ಕಡೆಗೆ ತಿರುಗಿಸಿ ಸುಮ್ಮನೆ ನಿಂತುಕೊಂಡ. ಬಾಯಿಂದ ಒಂದು ಮಾತೂ ಹೊರಡಲಿಲ್ಲ. ತಂದೆ ಬಹಳ ಸಂತುಷ್ಟನಾಗಿ

ಆತನಿಗೆ ಹೇಳಿದ: 'ಮಗು, ನಿನಗೆ ಬ್ರಹ್ಮ ಎಂದರೆ ಏನು ಎಂಬುದು ಸ್ವಲ್ಪ ಅರ್ಥವಾಗಿದೆ. ಬ್ರಹ್ಮ ಏನು ಎಂಬುದನ್ನ ಬಾಯಿಂದ ಹೇಳಲಾಗೋದಿಲ್ಲ.'

"ಜನ ಅನೇಕವೇಳೆ ಭಾವಿಸುತ್ತಾರೆ ತಮಗೆ ಬ್ರಹ್ಮನ ಸ್ವರೂಪ ಏನು ಎಂಬುದು ಅರ್ಥವಾಗಿಬಿಟ್ಟಿದೆ ಎಂಬುದಾಗಿ. ಒಂದು ಇರುವೆ ಸಕ್ಕರೆ ಬೆಟ್ಟಕ್ಕೆ ಹೋಗಿತ್ತು. ಅದರ ಒಂದು ಕಣ ತಿನ್ನುವುದರೊಳಗೇ ಅದಕ್ಕೆ ಹೊಟ್ಟೆ ತುಂಬಿಕೊಂಡುಬಿಟ್ಟಿತು. ಇನ್ನೊಂದು ಕಣವನ್ನ ಬಾಯಲ್ಲಿ ಕಚ್ಚಿಕೊಂಡು ತನ್ನ ಗೂಡಿಗೆ ಹೊರಟಿತು. ಹೋಗುತ್ತಾ ಇರುವಾಗ ಭಾವಿಸುತ್ತಿದೆ: 'ಮುಂದಿನ ಸಲ ಬಂದಾಗ ಈ ಬೆಟ್ಟವನ್ನೇ ಹೊತ್ತುಕೊಂಡು ಹೋಗಿಬಿಡುತ್ತೇನೆ.' ಸಾಮಾನ್ಯರೂ ಹೀಗೇ ಭಾವಿಸುತ್ತಾರೆ. ಅವರಿಗೆ ಗೊತ್ತಿಲ್ಲ ಬ್ರಹ್ಮ ವಾಙ್ಮನಾತೀತ ಎಂಬುದು. ಮನುಷ್ಯ ಎಷ್ಟೇ ದೊಡ್ಡವನಾಗಿದ್ದರೂ ಭಗವಂತನ ವಿಷಯವಾಗಿ ಏನುತಾನೆ ಅರಿತುಕೊಳ್ಳಬಲ್ಲ. ಶುಕದೇವಾದಿಗಳು ಬಹುಶಃ ದೊಡ್ಡ ಇರುವೆ; ಸಕ್ಕರೆಯ ಎಂಟೊ ಹತ್ತೊ ಕಣ ಕಚ್ಚಿಕೊಂಡು ಹೋಗುವಷ್ಟು ಶಕ್ತರಾಗಿದ್ದರು.

"ವೇದ ಪುರಾಣ ಇವುಗಳಲ್ಲಿ ವರ್ಣಿತವಾಗಿದೆಯಲ್ಲ ಅದು ಯಾವ ರೀತಿಯದು ಗೊತ್ತೆ? ಬಹುಶಃ ಒಬ್ಬ ಸಮುದ್ರ ನೋಡಿ ಬಂದಿದಾನೆ ಅಂತ ಇಟ್ಟುಕೊ. ಆತನನ್ನು ಯಾರಾದರೂ ಕೇಳಿದರೆ: 'ಏನಪ್ಪ, ಸಮುದ್ರ ಹೇಗಿದೆ?' ಆತ ಆಕಾಶಕ್ಕೂ ಭೂಮಿಗೂ ತನ್ನ ಬಾಯಿ ತೆರೆದು ಹೇಳುತ್ತಾನೆ: 'ಆಹಾ, ಎಂಥಾ ಅದ್ಭುತವಾದ ದೃಶ್ಯ! ಎಂಥಾ ಭಯಂಕರ ಅಲ್ಲೋಲ ಕಲ್ಲೋಲ ಅದರಲ್ಲಿ!' ಬ್ರಹ್ಮನ ವಿಷಯವೂ ಅದೇ ರೀತಿಯದು. ವೇದದಲ್ಲಿ ಹೇಳಿದೆ, ಬ್ರಹ್ಮ ಆನಂದಸ್ವರೂಪ— ಸಚ್ಚಿದಾನಂದ ಎಂಬುದಾಗಿ.

"ಶುಕದೇವಾದಿಗಳು ಈ ಬ್ರಹ್ಮಸಾಗರದ ದಡದಲ್ಲಿ ನಿಂತು ಅದರ ದರ್ಶನ ಸ್ಪರ್ಶನ ಮಾತ್ರ ಮಾಡಿದ್ದರು. ಕೆಲವರು ಹೇಳುತ್ತಾರೆ, ಅವರು ಈ ಸಾಗರಕ್ಕೇ ಇಳಿಯಲಿಲ್ಲ ಎಂಬುದಾಗಿ. ಈ ಸಾಗರಕ್ಕೆ ಇಳಿದದ್ದೇ ಆದರೆ ಹಿಂದಿರುಗಿ ಬರುವ ಹಾಗೇ ಇಲ್ಲ."

"ಸಮಾಧಿಯಲ್ಲಿ ಬ್ರಹ್ಮಜ್ಞಾನ ದೊರೆಯುತ್ತದೆ— ಬ್ರಹ್ಮದರ್ಶನ ದೊರೆಯುತ್ತದೆ. ಆ ಅವಸ್ಥೆಯಲ್ಲಿ ವಿಚಾರ ಪೂರ್ತಿಯಾಗಿ ನಿಂತುಹೋಗುತ್ತದೆ, ಮನುಷ್ಯ ಮೂಕನಾಗಿಬಿಡುತ್ತಾನೆ. ಬ್ರಹ್ಮನ ಸ್ವರೂಪವೇನು ಎಂಬುದನ್ನು ವರ್ಣಿಸಲು ಶಕ್ತಿ ಇರುವುದಿಲ್ಲ.

"ಉಪ್ಪಿನ ಬೊಂಬೆ ಒಮ್ಮೆ ಸಮುದ್ರದ ಆಳ ಕಂಡುಹಿಡಿಯಲು ಹೋಯಿತು. (ಎಲ್ಲರೂ ನಗುತ್ತಿದಾರೆ.) ಅದರ ಆಳ ಎಷ್ಟಿದೆ ಎಂಬುದನ್ನು ಪರರಿಗೆ ತಿಳಿಸಬೇಕು ಅಂತ ಅದು ಮನಸ್ಸುಮಾಡಿಕೊಂಡಿತ್ತು. ಆದರೆ ಅದಕ್ಕೆ ಹಾಗೆ ಮಾಡಲು ಸಾಧ್ಯವೇ ಆಗಲಿಲ್ಲ. ಇಳಿಯೋದೆ ತಡ ಕರಗಿಹೋಯಿತು. ಸಮುದ್ರದ ಆಳ ಎಷ್ಟು ಎಂಬುದನ್ನು ತಿಳಿಸುವುದಕ್ಕೆ ಉಳಿದುಕೊಂಡಿರೋರು ಯಾರು ?"

ಒಬ್ಬ ಭಕ್ತ : "ಒಬ್ಬನಿಗೆ ಸಮಾಧಿಯಲ್ಲಿ ಬ್ರಹ್ಮಜ್ಞಾನ ದೊರೆಯಿತು ಅಂತ ಇಟ್ಟುಕೊಳ್ಳಿ. ಮತ್ತೆ ಆತನ ಬಾಯಿಂದ ಮಾತೇ ಹೊರಡುವುದಿಲ್ಲವೆ ?"

ಶ್ರೀರಾಮಕೃಷ್ಣರು : "ಶಂಕರಾಚಾರ್ಯರು ಲೋಕಶಿಕ್ಷಣಕ್ಕಾಗಿ 'ವಿದ್ಯೆಯ ಅಹಂ' ಇಟ್ಟುಕೊಂಡಿದ್ದರು. ಬ್ರಹ್ಮದರ್ಶನ ದೊರೆತನಂತರ ಮನುಷ್ಯ ಮೂಕನಾಗಿಬಿಡುತ್ತಾನೆ. ದರ್ಶನ ದೊರೆಯುದವರೆಗೆ ಮಾತ್ರ ವಿಚಾರ. ತುಪ್ಪ ಇನ್ನೂ ಹಸಿಯಾಗಿರೋವರೆಗೆ ಮಾತ್ರ ಅದು 'ಕಲ, ಕಲ' ಅಂತ ಶಬ್ದಮಾಡುತ್ತಿರುತ್ತದೆ. ಚೆನ್ನಾಗಿ ಕಾದಿರೋ ತುಪ್ಪದಲ್ಲಿ ಯಾವ ಶಬ್ದವೂ ಇರದು. ಆದರೆ ಹಸಿಯಾಗಿರುವ ಪೂರಿ ಅದಕ್ಕೆ ಬಿತ್ತು ಎಂದರೆ ಅದು ಮತ್ತೆ 'ಕಲ, ಕಲ' ಅಂತ ಶಬ್ದಮಾಡಲಾರಂಭಿಸುತ್ತದೆ. ಪೂರಿ ಬೆಂದೊಡನೆ ಮತ್ತೆ ಶಬ್ದ ನಿಂತುಹೋಗುತ್ತದೆ. ಅದೇ ರೀತಿಯಾಗಿ ಸಮಾಧಿ ಪಡೆದ ಮನುಷ್ಯ ಲೋಕಶಿಕ್ಷಣಕ್ಕಾಗಿ ಮತ್ತೆ ಕೆಳಕ್ಕೆ ಇಳಿದು ಬಂದು ಮಾತುಕತೆಯಾಡಲು ಆರಂಭಿಸುತ್ತಾನೆ.

"ಜೇನುಹುಳು ಹೂವಿನ ಮೇಲೆ ಕೂರದವರೆಗೆ ಝೇಂಕರಿಸುತ್ತಿರುತ್ತದೆ. ಹೂವಿನಲ್ಲಿ ಕುಳಿತು ಮಧುಪಾನ ಮಾಡಲಾರಂಭಿಸಿದೊಡನೆಯೇ ಅದರ ಶಬ್ದ-ಗಿಬ್ದ ಎಲ್ಲಾ ನಿಂತುಹೋಗುತ್ತವೆ. ಮಧುಪಾನ ಮಾಡಿಯಾದನಂತರ ಮದಿಸಿ ಒಮ್ಮೊಮ್ಮೆ 'ಗುಯ್ಞ್, ಗುಯ್ಞ್' ಅಂತ ಶಬ್ದಮಾಡುತ್ತದೆ.

"ಕೊಳದಲ್ಲಿ ಬಿಂದಿಗೆಗೆ ನೀರು ತುಂಬುವಾಗ ಅದು 'ಬಕ್, ಬಕ್' ಅಂತಶಬ್ದ ಮಾಡುತ್ತದೆ. ಪೂರ್ಣವಾಗಿ ತುಂಬಿದನಂತರ ಅದು ಯಾವ ಶಬ್ದವನ್ನೂ ಮಾಡದು. (ಎಲ್ಲರೂ ನಗುತ್ತಿದಾರೆ.) ಆದರೆ, ಅದರಿಂದ ಇನ್ನೊಂದು ಬಿಂದಿಗೆಗೆ ನೀರು ಸುರಿಯುವಾಗ ಮತ್ತೆ ಅದು ಶಬ್ದ ಮಾಡುತ್ತದೆ. (ನಗು

"ಹಿಂದಿನ ಋಷಿಗಳಿಗೆ ಬ್ರಹ್ಮಜ್ಞಾನ ದೊರೆತಿತ್ತು. ವಿಷಯಬುದ್ಧಿ ಲೇಶಮಾತ್ರವಿದ್ದರೂ ಬ್ರಹ್ಮಜ್ಞಾನ ದೊರಕೋದಿಲ್ಲ. ಋಷಿಗಳು ಎಷ್ಟು ಕಷ್ಟ ತೆಗೆದುಕೊಳ್ಳುತ್ತಿದ್ದರು ಏನು ಕತೆ! ಬೆಳಗಾಗೆದ್ದು ಆಶ್ರಮ ಬಿಟ್ಟು ಹೊರಟುಹೋಗುತ್ತಿದ್ದರು. ಇಡೀ ದಿನವನ್ನೆಲ್ಲಾ ಏಕಾಂಗಿಯಾಗಿ ಭಗವಂತನ ಧ್ಯಾನ ಚಿಂತನೆಯಲ್ಲೇ ಕಳೆಯುತ್ತಿದ್ದರು. ರಾತ್ರಿವೇಳೆ ಆಶ್ರಮಕ್ಕೆ ಹಿಂದಿರುಗಿ ಬಂದು ಎಲ್ಲೊ ಸ್ವಲ್ಪ ಫಲಮೂಲಾದಿಗಳನ್ನು ತಿನ್ನುತ್ತಿದ್ದರು. ರೂಪ, ಶಬ್ದ, ಸ್ಪರ್ಶ ಇವೇ ಮೊದಲಾದ ವಿಷಯವಸ್ತುಗಳ ಕಡೆ ಮನಸ್ಸು ಹೋಗದ ಹಾಗೆ ನೋಡಿಕೊಳ್ಳುತ್ತಿದ್ದರು. ಅಷ್ಟು ಕಷ್ಟ ತೆಗೆದುಕೊಳ್ಳುತ್ತಿದ್ದರಿಂದಲೆ ಅವರು ಬ್ರಹ್ಮ ತಮ್ಮ ಅಂತರ್ಯಾಮಿ ಎಂಬ ಅನುಭವ ಪಡೆಯುತ್ತಿದ್ದರು.

"ಕಲಿಯುಗದಲ್ಲಿ ಅನ್ನಗತ ಪ್ರಾಣ. ದೇಹಬುದ್ಧಿ ಸುಲಭವಾಗಿ ಹೋಗದು. ಮನುಷ್ಯ ಈ ಅವಸ್ಥೆಯಲ್ಲಿರುವಾಗ 'ಸೋಽಹಮ್' ಎಂಬುದಾಗಿ ಹೇಳುವುದು ಒಳ್ಳೆಯದಲ್ಲ. ಪ್ರಾಪಂಚಿಕ ಎಲ್ಲಾ ಕಾರ್ಯಗಳಲ್ಲೂ ತೊಡಗುತ್ತಾ 'ನಾನೇ ಬ್ರಹ್ಮ' ಅಂತ ಹೇಳಿಕೊಳ್ಳುವುದು ಸರಿಯಲ್ಲ. ಯಾರ ಕೈಯಲ್ಲಿ ವಿಷಯವಸ್ತುಗಳನ್ನು ತ್ಯಾಗಮಾಡಲು ಸಾಧ್ಯವಿಲ್ಲವೊ, ಯಾರ 'ಅಹಂ' ಬಡಪಟ್ಟಿಗೆ ಜಗ್ಗಲೊಲ್ಲದೊ, ಅವರು 'ನಾನು ದಾಸ', 'ನಾನು ಭಕ್ತ' ಎಂಬ ಭಾವನೆಯನ್ನು ಇಟ್ಟುಕೊಂಡಿರುವುದು ಒಳ್ಳೆಯದು. ಭಕ್ತಿಮಾರ್ಗದಲ್ಲಿ ಹೋದರೂ ಆತನ ಸಾಕ್ಷಾತ್ಕಾರವನ್ನು ಪಡೆಯಬಹುದು.

"ಜ್ಞಾನಿ 'ನೇತಿ', 'ನೇತಿ' ಮಾರ್ಗ ಅನುಸರಿಸಿ ವಿಷಯಬುದ್ಧಿಯನ್ನು ಪೂರ್ಣವಾಗಿ ತ್ಯಾಗಮಾಡಿಬಿಡುತ್ತಾನೆ. ಆಗ ಮಾತ್ರವೇ ಆತನಿಗೆ ಬ್ರಹ್ಮನ ಸಾಕ್ಷಾತ್ಕಾರ. ಇದು ಮೆಟ್ಟಿಲಸಾಲಿನ ಹಂತಗಳನ್ನು ಒಂದೊಂದಾಗಿ ಹಿಂದೆ ಬಿಟ್ಟು ಚಾವಣಿ ಮುಟ್ಟೋ ಹಾಗೆ. ಆದರೆ ವಿಜ್ಞಾನಿ ವಿಶೇಷ ರೀತಿಯಾಗಿ ಬ್ರಹ್ಮನೊಡನೆ ಬೆರೆತು ಇನ್ನೂ ವಿಶೇಷವಾದ ಅನುಭವ ಪಡೆಯುತ್ತಾನೆ. ಆತ ಅನುಭವಪಡೆದುಕೊಳ್ಳುತ್ತಾನೆ ಚಾವಣಿ ಯಾವಾವ ವಸ್ತುಗಳಿಂದ ಎಂದರೆ, ಇಟ್ಟಿಗೆ, ಸುಣ್ಣ, ಇಟ್ಟಿಗೆ ಚೂರು ಇವುಗಳಿಂದ ನಿರ್ಮಿತವಾಗಿದೆಯೊ, ಅದೇ ವಸ್ತುಗಳಿಂದ ಮೆಟ್ಟಿಲಸಾಲೂ ನಿರ್ಮಿತವಾಗಿದೆ ಎಂಬುದಾಗಿ. 'ನೇತಿ', 'ನೇತಿ' ಮಾರ್ಗವನ್ನು ಅನುಸರಿಸಿ ಯಾವ ವಸ್ತುವನ್ನು ಬ್ರಹ್ಮ ಎಂಬುದಾಗಿ ಅರಿತುಕೊಂಡನೊ, ಅದೇ ವಸ್ತುವೇ

ಜೀವ ಜಗತ್ತಾಗಿಯೂ ಆಗಿರುವುದು ಎಂದು ಆತನ ಅರಿವಿಗೆ ಬರುತ್ತದೆ. ವಿಜ್ಞಾನಿಗೆ ಕಂಡುಬರುತ್ತದೆ ಯಾರು ನಿರ್ಗುಣನೊ ಆತನೇ ಸಗುಣ ಎಂಬುದಾಗಿ.

"ಜನರಿಗೆ ಹೆಚ್ಚು ಹೊತ್ತು ಚಾವಣಿ ಮೇಲೆ ಇರಲಾಗೋದಿಲ್ಲ, ಮತ್ತೆ ಕೆಳಕ್ಕೆ ಇಳಿದು ಬಂದುಬಿಡುತ್ತಾರೆ. ಸಮಾಧಿಯಲ್ಲಿ ಬ್ರಹ್ಮದರ್ಶನ ವನ್ನು ಪಡೆದಂಥವರು ಕೆಳಕ್ಕೆ ಇಳಿದುಬಂದು ನೋಡುತ್ತಾರೆ— ಆತನೇ ಈ ಜೀವ ಜಗತ್ತು ಕೂಡ ಆಗಿಬಿಟ್ಟಿದಾನೆ! ಸ, ರಿ, ಗ, ಮ, ಪ, ದ, ನಿ; 'ನಿ' ಯಲ್ಲಿ ಹೆಚ್ಚು ಹೊತ್ತು ಕಂಠ ಇಟ್ಟುಕೊಂಡಿರಲಾಗೋದಿಲ್ಲ. 'ಅಹಂ' ಎಂಬುದು ಸಂಪೂರ್ಣವಾಗಿ ಹೋಗದು. ಸಮಾಧಿಯಿಂದ ಇಳಿದುಬಂದು ನೋಡುತ್ತಾನೆ, ಬ್ರಹ್ಮನೇ ಈ 'ಅಹಂ' ಆಗಿಬಿಟ್ಟಿದಾನೆ, ಆತನೇ ಈ ಜೀವ ಜಗತ್ತೆಲ್ಲವೂ ಆಗಿಬಿಟ್ಟಿದಾನೆ. ಇದಕ್ಕೇ 'ವಿಜ್ಞಾನ' ಅಂತ ಹೆಸರು.

"ಜ್ಞಾನಮಾರ್ಗವೂ ಭಗವಂತನ ಸಾಕ್ಷಾತ್ಕಾರಕ್ಕೆ ಮಾರ್ಗ, ಹಾಗೇನೆ ಜ್ಞಾನ-ಭಕ್ತಿ ಮಾರ್ಗ ಕೂಡ. ಇವೂ ಅಲ್ಲದೆ ಭಕ್ತಿಮಾರ್ಗವೂ ಮಾರ್ಗ. ಜ್ಞಾನ ಮಾರ್ಗವೂ ಸರಿಯಾದ್ದೇ, ಭಕ್ತಿಮಾರ್ಗವೂ ಸರಿ ಯಾದ್ದೇ. ಎಲ್ಲಾ ಮಾರ್ಗಗಳಿಂದಲೂ ಆತನನ್ನು ಮುಟ್ಟಬಹುದು. ಆದರೆ ಆತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟರೋವರೆಗೆ ಭಕ್ತಿ ಮಾರ್ಗವೇ ಸರಾಗವಾದ್ದು.

"ವಿಜ್ಞಾನಿಗೆ ಕಂಡುಬರುತ್ತದೆ ಬ್ರಹ್ಮ ಅಚಲನಾಗಿ, ನಿಷ್ಕ್ರಿಯನಾಗಿ ಇರುವುದು—ಸುಮೇರುವಿನ ಹಾಗೆ. ಈ ಜಗತ್ತು ಈ ಮೂರು ಗುಣ ಗಳಿಂದ ಎಂದರೆ, ಸತ್ತ್ವ, ರಜಸ್ಸು, ತಮಸ್ಸು ಇವುಗಳಿಂದ ಉದ್ಭವ ವಾಗಿದೆ. ಇವು ಮೂರೂ ಬ್ರಹ್ಮನಲ್ಲಿವೆ. ಆದರೆ ಆತ ಮಾತ್ರ ನಿರ್ಲಿಪ್ತ.

"ವಿಜ್ಞಾನಿಗೆ ಮತ್ತೆ ಕಂಡುಬರುತ್ತದೆ ಬ್ರಹ್ಮನೇ ಸಾಕಾರನಾಗಿರು ವುದು. ಯಾರು ಗುಣಾತೀತನೊ ಆತನೇ ಷಡೈಶ್ವರ್ಯಪೂರ್ಣ ಭಗವಂತ ನಾಗಿದಾನೆ. ಈ ಜೀವ, ಜಗತ್ತು, ಮನಸ್ಸು, ಬುದ್ಧಿ, ಭಕ್ತಿ, ವೈರಾಗ್ಯ, ಜ್ಞಾನ—ಇವೆಲ್ಲಾ ಆತನ ಐಶ್ವರ್ಯ. (ನಗುತ್ತ) ಯಾವ ಸಾಹುಕಾರನಿಗೆ ಮನೆ ಮಠ ಏನೂ ಇಲ್ಲವೊ ಅಥವಾ ಇದ್ದರೂ ಮಾರಿಹಾಕಬೇಕಾಗಿ ಬಂದು ಬಿಟ್ಟಿತೊ ಆ ಸಾಹುಕಾರ ಇನ್ನೆಂಥ ಸಾಹುಕಾರ! (ಎಲ್ಲರೂ ನಗುತ್ತಿದಾರೆ.) ಭಗವಂತ ಷಡೈಶ್ವರ್ಯಪೂರ್ಣ. ಅದು ಹಾಗಿಲ್ಲದಿದ್ದರೆ ಆತನನ್ನು ಯಾರು ತಾನೆ ಲೆಕ್ಕಕ್ಕಿಡುತ್ತಿದ್ದರು? (ಎಲ್ಲರೂ ನಗುತ್ತಿದಾರೆ.)

"ಹಾಗೇ ನೋಡು, ಈ ಜಗತ್ತು ಎಷ್ಟು ವಿಚಿತ್ರವಾದ್ದು. ಎಷ್ಟು ಬಗೆಯ ವಸ್ತುಗಳು!—ಚಂದ್ರ, ಸೂರ್ಯ, ನಕ್ಷತ್ರ, ಇತ್ಯಾದಿ. ಎಷ್ಟು ಬಗೆಯ-ಜೀವಿಗಳು!—ದೊಡ್ಡದು ಪುಟ್ಟದು, ಒಳ್ಳೆಯದು ಕೆಟ್ಟದ್ದು, ಬಲವಾದ್ದು ದುರ್ಬಲವಾದ್ದು—ಕೆಲವಕ್ಕೆ ಜಾಸ್ತಿ ಶಕ್ತಿ ಕೆಲವಕ್ಕೆ ಕಡಮೆ ಶಕ್ತಿ."

ವಿದ್ಯಾಸಾಗರ: "ಏನು, ಆತ ಕೆಲವಕ್ಕೆ ಹೆಚ್ಚು ಶಕ್ತಿ ಕೆಲವಕ್ಕೆ ಕಡಮೆ ಶಕ್ತಿ ಕೊಟ್ಟಿದಾನೆಯೇ?"

ಶ್ರೀರಾಮಕೃಷ್ಣರು: "ಭಗವಂತ ವಿಭುರೂಪದಲ್ಲಿ ಎಲ್ಲಾ ಭೂತಗಳಲ್ಲಿಯೂ ಇದಾನೆ—ಇರುವೆಯಲ್ಲಿ ಕೂಡ; ಆದರೆಮಾತ್ರ ಶಕ್ತಿ ವಿಶೇಷತೆಯಿಂದ. ಹಾಗಿಲ್ಲದಿದ್ದರೆ ಒಬ್ಬ ಹತ್ತು ಜನವನ್ನು ಬಡಿದೋಡಿಸಿಬಿಡೋಕೂ ಇನ್ನೊಬ್ಬ ಒಬ್ಬನನ್ನುಕೂಡ ಎದುರಿಸಲಾಗದಿರೋಕೂ ಎಲ್ಲಾಗುತ್ತಿತ್ತು? ಇಲ್ಲದಿದ್ದರೆ ನಿನ್ನನ್ನು ಏಕೆ ಎಲ್ಲಾ ಗೌರವಿಸುತ್ತಿದಾರೆ? ನಿನಗೇನು ಎರಡು ಕೊಂಬು ಬೆಳೆದಿವೆಯೆ? (ನಗು.) ನಿನ್ನಲ್ಲಿ ವಿದ್ಯೆ, ದಯೆ ಇವೆ—ಬೇರೆಯವರಿಗಿಂತ ಅಧಿಕವಾಗಿ. ಅದಕ್ಕಾಗಿ ಜನ ನಿನ್ನನ್ನು ಗೌರವಿಸುತ್ತಾರೆ, ನೋಡುವುದಕ್ಕೆ ಬರುತ್ತಾರೆ. ಏನು ನಾನು ಹೇಳುವುದು ಸರಿ ತಾನೆ?"

ವಿದ್ಯಾಸಾಗರ ಕಿರುನಗೆ ನಗುತ್ತಿದಾನೆ.

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: "ಕೇವಲ ಪಾಂಡಿತ್ಯ ಯಾವುದಕ್ಕೂ ಬಾರದ್ದು. ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳುವುದಕ್ಕಾಗಿಯೇ, ಆತನನ್ನು ಅರಿತುಕೊಳ್ಳುವುದಕ್ಕಾಗಿಯೇ ಪುಸ್ತಕಗಳ ವ್ಯಾಸಂಗ. ಒಬ್ಬ ಸಾಧುವಿನ ಹತ್ತಿರ ಒಂದು ಪುಸ್ತಕ ಇತ್ತು. ಅದರಲ್ಲಿ ಏನು ಬರೆದಿದೆ ಎಂದು ಕೇಳಲಾಗಿ ಆತ ಅದನ್ನು ಬಿಚ್ಚಿ ತೋರಿಸಿದ. ಹಾಳೆ ಹಾಳೆಯಲ್ಲೂ 'ಓಂ ರಾಮಃ', 'ಓಂ ರಾಮಃ' ಎಂದು ಬರೆದಿತ್ತು—ಇನ್ನು ಏನೂ ಬರೆದಿರಲಿಲ್ಲ.

"ಗೀತೆಯ ಸೂಚಿತಾರ್ಥವೇನು? ಹತ್ತು ಸಲ ಉಚ್ಚರಿಸಿದರೆ ಅದು ಏನಾಗಿ ಕೇಳಿಬರುತ್ತದೆಯೊ ಅದೇ ಅದು. 'ಗೀತೆ', 'ಗೀತೆ' ಎಂಬುದಾಗಿ ಹತ್ತು ಸಲ ಉಚ್ಚರಿಸಿದರೆ ಅದು 'ತ್ಯಾಗಿ', 'ತ್ಯಾಗಿ' ಎಂಬುದಾಗಿ ಕೇಳಿಬರುತ್ತದೆ. ಎಂದರೆ ಗೀತೆಯ ಉಪದೇಶ: 'ಹೇ ಜೀವ, ಎಲ್ಲವನ್ನೂ ತ್ಯಾಗಮಾಡಿ ಭಗವಂತನ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸು' ಎಂಬುದಾಗಿ.

ಸಾಧುವೇ ಆಗಲಿ, ಸಂಸಾರಿಯೇ ಆಗಲಿ ಎಲ್ಲರೂ ಆಸಕ್ತಿಗಳನ್ನು ಮನಸ್ಸಿನಿಂದ ತೊಡೆದುಹಾಕಬೇಕು.

"ಚೈತನ್ಯದೇವ ದಕ್ಷಿಣ ಭಾರತದಲ್ಲಿ ತೀರ್ಥಯಾತ್ರೆ ಮಾಡುತ್ತಿದ್ದಾಗ, ಒಬ್ಬ ಗೀತೆ ಓದುತ್ತಿರುವುದನ್ನು ಆತ ನೋಡಿದ. ಇನ್ನೊಬ್ಬ ಸ್ವಲ್ಪ ದೂರದಲ್ಲೇ ಕುಳಿತು ಅದನ್ನು ಕೇಳುತ್ತ ಅಳುತ್ತಿದ್ದ. ಆತನ ಕಣ್ಣುಗಳಲ್ಲಿ ನೀರು ಸುಮ್ಮನೆ ತುಂಬಿಕೊಂಡಿತ್ತು. ಚೈತನ್ಯದೇವ ಆತನನ್ನು ಕೇಳಿದ: 'ಏನು, ಇದೆಲ್ಲಾ ನಿನಗೆ ಅರ್ಥವಾಗುತ್ತಿದೆಯೇ?' ಆತ ಉತ್ತರವಿತ್ತ: 'ಇಲ್ಲ. ಈ ಶ್ಲೋಕ-ಗೀಕ ಎಳ್ಳಷ್ಟೂ ಅರ್ಥವಾಗುತ್ತಿಲ್ಲ.' ಚೈತನ್ಯದೇವ ಕೇಳಿದ: 'ಹಾಗಾದರೆ, ಏಕೆ ಅಳುತ್ತಾ ಇದೀಯೆ?' ಭಕ್ತ ಉತ್ತರವಿತ್ತ: 'ನಾನು ಅರ್ಜುನನ ರಥ ನೋಡುತ್ತಾ ಇದೇನೆ. ಶ್ರೀಕೃಷ್ಣ ಮತ್ತು ಅರ್ಜುನ ಅದರಲ್ಲಿ ಕುಳಿತು ಮಾತುಕತೆಯಾಡುತ್ತಿರುವುದು ನನ್ನ ಕಣ್ಣಿಗೆ ಕಾಣುತ್ತಿದೆ. ಅದನ್ನು ನೋಡಿ ಅಳುತ್ತಾ ಇದೇನೆ.'

"ವಿಜ್ಞಾನಿ ಏಕೆ ಭಕ್ತಿಯನ್ನು ಆಶ್ರಯಿಸಿಕೊಂಡು ಇರುತ್ತಾನೆ ಗೊತ್ತೆ? ಈ 'ಅಹಂ' ಎಂಬುದು ಹೋಗದೆ ಇರುವುದರಿಂದ. ಸಮಾಧಿಯ ಅವಸ್ಥೆಯಲ್ಲಿ ಅದು ಹೊರಟುಹೋಗುವುದೇನೊ ನಿಜ, ಆದರೆ ಅದು ಮತ್ತೆ ಬಂದುಬಿಡುತ್ತದೆ. ಸಾಧಾರಣ ಜೀವರ 'ಅಹಂ' ಎಂದಿಗೂ ಹೋಗೋದೇ ಇಲ್ಲ. ಅಶ್ವತ್ಥವೃಕ್ಷವನ್ನ ಇಂದು ಕತ್ತರಿಸು, ಮಾರನೆ ದಿನವೇ ಅದು ಚಿಗುರುತ್ತದೆ. (ಎಲ್ಲರೂ ನಗುತ್ತಾರೆ.)

"ಜ್ಞಾನ ದೊರೆತನಂತರವೂ ಎಲ್ಲಿಂದಲೊ ಈ 'ಅಹಂ' ಎಂಬುದು ಬಂದುಬಿಡುತ್ತದೆ. ಸ್ವಪ್ನದಲ್ಲಿ ನೀನು ಹುಲಿ ಕಾಣುತ್ತಿದ್ದೆ. ಬಳಿಕ ಎಚ್ಚೆತ್ತೆ; ಆದರೂ ನಿನ್ನ ಹೃದಯ ಮಾತ್ರ 'ಡಬ, ಡಬ' ಅಂತ ಹೊಡೆದುಕೊಳ್ಳುತ್ತಲೇ ಇರುತ್ತದೆ! ಜೀವರ ಎಲ್ಲಾ ದುಃಖದುರಿತಗಳಿಗೂ ಈ 'ಅಹಂ' ಎಂಬುದೇ ಮೂಲ. ಹಸು ಕೂಗುತ್ತದೆ, 'ಹಂಬಾ! ಹಂಬಾ!' ಎಂದರೆ, 'ನಾನು! ನಾನು!' ಎಂಬುದಾಗಿ. ಅದಕ್ಕಾಗೇ ಅದು ಅಷ್ಟು ಕಷ್ಟಕ್ಕೀಡಾಗೋದು. ನೇಗಿಲಿಗೆ ಕಟ್ಟಿ ಮಳೆಬಿಸಿಲೆನ್ನದೆ ಉಳುತ್ತಾರೆ. ಬಳಿಕ ಕಟುಕ ಅದನ್ನು ಕತ್ತರಿಸಿಹಾಕುತ್ತಾನೆ. ಅದರ ಚರ್ಮದಿಂದ ಮೆಟ್ಟು ಮಾಡುತ್ತಾರೆ; ನಗಾರಿ ತಯಾರಾಗುತ್ತದೆ. ನಗಾರಿಯನ್ನ ಯಾವ ದಯೆ ದಾಕ್ಷಿಣ್ಯವೂ ಇಲ್ಲದೆ ಚೆನ್ನಾಗಿ ಬಡಿಯುತ್ತಾರೆ. (ನಗು.) ಅಷ್ಟಾದರೂ ಅದಕ್ಕೆ ಇನ್ನೂ ಕಷ್ಟ ತಪ್ಪೋ ಹಾಗಿಲ್ಲ. ಕೊನೆಗೆ

ಅದರ ಚಿಕ್ಕ ಕರುಳಿನಿಂದ ಹುರಿ ತಯಾರುಮಾಡುತ್ತಾರೆ. ಆ ಹುರಿಯನ್ನು ಹತ್ತಿ ಎಕ್ಕುವ ಯಂತ್ರಕ್ಕೆ ಕಟ್ಟುತ್ತಾರೆ. ಆಗ ಅದು 'ಹಂಬಾ! ಹಂಬಾ!', 'ನಾನು! ನಾನು!' ಎಂದು ಶಬ್ದಮಾಡದೆ 'ತುಹ್ನೂ! ತುಹ್ನೂ!' ಎಂದರೆ 'ನೀನು! ನೀನು!' ಎಂಬುದಾಗಿ ಶಬ್ದಮಾಡುತ್ತದೆ. 'ನೀನು! ನೀನು!' ಎಂಬುದಾಗಿ ಶಬ್ದಮಾಡಲು ಶುರುಮಾಡಿದ ಮೇಲೇ ಅದರ ಕಷ್ಟಪರಂಪರೆಗಳೆಲ್ಲಾ ಕೊನೆಗಾಣುತ್ತವೆ.

"ಹೇ ಭಗವಂತ, ನಾನು ದಾಸ; ನೀನು ಪ್ರಭು. ನಾನು ಮಗು; ನೀನು ತಾಯಿ.

"ಒಮ್ಮೆ ರಾಮ ಹನುಮಂತನನ್ನು ಕೇಳಿದ: 'ನನ್ನನ್ನು ನೀನು ಯಾವ ದೃಷ್ಟಿಯಿಂದ ನೋಡುತ್ತ ಇದೀಯೆ?' ಹನುಮಂತ ಉತ್ತರವಿತ್ತ: 'ಹೇ ರಾಮ, ನನ್ನಲ್ಲಿ "ಅಹಂ" ಎಂಬ ಬೋಧೆ ಇರುವವರೆಗೆ ನನಗೆ ಕಂಡುಬರುತ್ತದೆ, ನೀನು ಪೂರ್ಣ, ನಾನು ಅಂಶ; ನೀನು ಪ್ರಭು, ನಾನು ದಾಸ ಎಂಬುದಾಗಿ. ಆದರೆ ರಾಮ, ತತ್ತ್ವಜ್ಞಾನ ಬಂದೊಡನೆಯೆ ಕಂಡುಬರುತ್ತದೆ, ನೀನೇ ನಾನು, ನಾನೇ ನೀನು ಎಂಬುದಾಗಿ.'

"ಸೇವ್ಯಸೇವಕ ಭಾವವೇ ಒಳ್ಳೆಯದು. 'ಅಹಂ' ಎಂಬುದು ಪೂರ್ಣವಾಗಿ ಹೋಗದೆ ಇರುವುದರಿಂದ ಆ ನೀಚಮುಂಡೇದು 'ದಾಸ ಅಹಂ' ಆಗಿ ಉಳಿದುಕೊಂಡಿರಲಿ.

"'ನಾನು', 'ನನ್ನದು'—ಇವೆರಡೇ ಅಜ್ಞಾನಕ್ಕೆ ಮೂಲ. 'ನನ್ನ ಮನೆ', 'ನನ್ನ ಹಣ', 'ನನ್ನ ಪಾಂಡಿತ್ಯ', 'ನನ್ನ ಐಶ್ವರ್ಯ'—ಎಂಬ ಈ ಭಾವ ಇದೆಯಲ್ಲ ಇದು ಅಜ್ಞಾನದಿಂದ ಜನಿಸುತ್ತದೆ. ಇದಕ್ಕೆ ಬದಲು 'ಹೇ ಭಗವಂತ, ನೀನು ಕರ್ತ, ಇವೆಲ್ಲವೂ ನಿನಗೆ ಸೇರಿದವೆ—ಮನೆ, ಮಠ, ಹೆಂಡತಿ, ಮಕ್ಕಳು ಮರಿ, ಆಳುಕಾಳು, ಬಂಧುಬಾಂಧವರು ಎಲ್ಲವೂ ನಿನಗೆ ಸೇರಿದವೆ'—ಈ ಭಾವ ಜ್ಞಾನದಿಂದ ಜನಿಸುತ್ತದೆ.

"ಮೃತ್ಯುವನ್ನು ಸರ್ವದಾ ನೆನಸಿಕೊಳ್ಳುವುದು ಒಳ್ಳೆಯದು. ಸತ್ತ ಮೇಲೆ ಯಾವುದೂ ಹಿಂದೆ ಬಾರದು. ಹಳ್ಳಿಗಳಿಂದ ಜನರು ಕಲ್ಕತ್ತಕ್ಕೆ ಕೆಲಸಮಾಡಲು ಬರೋಹಾಗೆ ನಾವೂ ಈ ಜಗತ್ತಿಗೆ ಬಂದಿದೇವೆ—ಕೆಲವು ಕೆಲಸಗಳನ್ನು ಮಾಡಿಹೋಗಲು. ಯಾರಾದರೂ ದೊಡ್ಡ ಮನುಷ್ಯನ ತೋಟ ನೋಡಲು ಬಂದರೆ, ಸೂಪರಿಂಟೆಂಡೆಂಟ್ ಅವರಿಗೆ ಹೇಳುತ್ತಾನೆ: 'ಈ ತೋಟ ನಮ್ಮದು', ಈ ಕೊಳ ನಮ್ಮದು', ಇತ್ಯಾದಿ. ಆದರೆ

ಏನೊ ತಪ್ಪಿಗಾಗಿ ಯಜಮಾನ ಸೂಪರಿಂಟೆಂಡೆಂಟನ್ನು ಕೆಲಸದಿಂದ ತೆಗೆದುಹಾಕಿಬಿಟ್ಟ ಅಂದರೆ ಆತ ತನ್ನ ಮಾವಿನಮರದ ಸಂದೂಕ ತೆಗೆದು ಕೊಂಡು ಹೋಗುವುದಕ್ಕೂ ಸಾಧ್ಯವಾಗೋದಿಲ್ಲ; ಮಾಲಿಯ ಮೂಲಕ ಅದನ್ನು ರಹಸ್ಯವಾಗಿ ಹೊರಕ್ಕೆ ತರಿಸಿಕೊಳ್ಳಬೇಕಾಗುತ್ತದೆ. (ನಗು.)

"ಭಗವಂತ ಈ ಎರಡು ಸಂದರ್ಭಗಳಲ್ಲಿ ನಗುತ್ತಾನೆ. ಕವಿರಾಜ (ಆಳಲೆಕಾಯಿ ಪಂಡಿತ) ರೋಗಿಯ ತಾಯಿಗೆ, 'ತಾಯಿ, ನಿನಗೇಕೆ ಹೆದರಿಕೆ? ನಿನ್ನ ಮಗನನ್ನು ನಾನು ಗುಣಪಡಿಸಿಬಿಡುತ್ತೇನೆ' ಎಂಬುದಾಗಿ ಹೇಳಿದಾಗ ಒಮ್ಮೆ ನಗುತ್ತಾನೆ. ಆಗ ಭಗವಂತ ಅಂದುಕೊಳ್ಳುತ್ತಾನೆ: 'ನಾನು ಈತನನ್ನು ಸಾಯಿಸುವುದರಲ್ಲಿದೇನೆ, ಈ ಪಂಡಿತ ಹೇಳುತ್ತ ಇದಾನಲ್ಲ ತಾನು ಬದುಕಿಸಿಕೊಡುತ್ತೇನೆ ಅಂತ!' ಕವಿರಾಜ ಭಾವಿ ಸುತ್ತಾನೆ, ತಾನು ಕರ್ತ ಎಂಬುದಾಗಿ; ಆತ ಮರೆತುಬಿಟ್ಟದಾನೆ, ಭಗವಂತನೇ ಕರ್ತ ಎಂಬುದನ್ನ. ಬಳಿಕ ಅಣ್ಣತಮ್ಮಂದಿರು ಹಗ್ಗ ಹಿಡಿದುಕೊಂಡು ಜಮೀನು ಭಾಗಮಾಡಿಕೊಳ್ಳುವಾಗ: 'ಈ ಭಾಗ ನನ್ನದು, ಆ ಭಾಗ ನಿನ್ನದು' ಎಂದು ಹೇಳುತ್ತಾರಲ್ಲ ಆಗ ಮತ್ತೆ ಭಗವಂತ ನಗುತ್ತಾನೆ. ಆಗ ಆತ ಅಂದುಕೊಳ್ಳುತ್ತಾನೆ: 'ಏನಿದು! ಈ ಬ್ರಹ್ಮಾಂಡವೇ ನನ್ನದು; ಅಂಥಾದ್ದರಲ್ಲಿ ಇವರು ಹೇಳುತ್ತಾ ಇದಾರಲ್ಲ: "ಈ ಭಾಗ ನನ್ನದು, ಆ ಭಾಗ ನಿನ್ನದು" ಎಂಬುದಾಗಿ!'

"ಭಗವಂತನನ್ನು ವಿಚಾರದ ಮೂಲಕ ಅರಿಯಲು ಸಾಧ್ಯವೆ? ಆತನಿಗೆ ದಾಸನಾಗಿ, ಆತನಿಗೆ ಶರಣಾಗತನಾಗಿ ಆತನನ್ನು ಕರೆ.

(ವಿದ್ಯಾಸಾಗರನಿಗೆ ನಗುತ್ತ) "ಒಳ್ಳೇದು, ನಿನ್ನ ಭಾವ ಎಂಥದು?"

ವಿದ್ಯಾಸಾಗರ ಕಿರುನಗೆ ನಗುತ್ತ: "ಆ ವಿಷಯವಾಗಿ ಒಂದು ದಿನ ನಿಮಗೆ ರಹಸ್ಯವಾಗಿ ತಿಳಿಸುತ್ತೇನೆ." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ನಗುತ್ತ: "ಭಗವಂತನನ್ನು ಕೇವಲ ಪಾಂಡಿತ್ಯ-ಪೂರ್ಣ ವಿಚಾರದಿಂದಲೇ ಪಡೆಯಲಾಗೋದಿಲ್ಲ."

ಪರಮಹಂಸರು ಪ್ರೇಮೋನ್ಮತ್ತರಾಗಿ ಹಾಡುತ್ತಿದಾರೆ:

ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು!
ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು.
ಯೋಗಿ ಹೃದಯದ ದಿವ್ಯನಿತ್ಯಾನಂದರೂಪಿಣಿ—ಆಕೆಯು.
ತನ್ನ ಆನಂದದಲಿ ತಾನೇ ಜೀವರೆದೆಯೊಳಗಿರುವಳು.

ಸಕಲ ಬ್ರಹ್ಮಾಂಡವನು ಬಸಿರಲಿ ಧರಿಸಿ ನಿತ್ಯವು ಪೊರೆವಳು.
ಮೂಲಾಧಾರ ಸಹಸ್ರಾರದಲ್ಲಿಯೆ ಮುನಿಗಳವಳನು ನೆನೆವರು.
ಶಿವನ ಹೊರತಿನ್ನಾರು ಅರಿಯರು ಅವಳ ದಿವ್ಯ ಸ್ವರೂಪವ,
ಪದ್ಮವನದಲಿ ಹಂಸರೂಪನ ಜೊತೆಗೆ ನಲಿಯುವ ಮಾಟವ!
ಕಡಲನೀಜುವೆನೆಂಬ ಮರುಳನ ಕಲ್ಪನೆಗೆ ನಗುವಂದದಿ!
ಇಂಥ ತಾಯಿಯ ತಿಳಿದೆನೆಂದರೆ ಪ್ರಸಾದರಾಮನು ನಗುವನು!
ಕುಬ್ಜನಾದವ ಮುಗಿಲ-ಚಂದ್ರನ ಹಿಡಿವ ಯತ್ನದ ತೆರದಲಿ,
ಬುದ್ಧಿಯರಿತರು ಹೃದಯವರಿಯದು ತಾಯಿ ದುರ್ಗೆಯ ನಿಜವನು!

ಪರಮಹಂಸರು ಮಾತು ಮುಂದುವರಿಸುತ್ತ ಹೇಳುತ್ತಿದಾರೆ: "ನೋಡಿದೆಯೋ?

ಸಕಲ ಬ್ರಹ್ಮಾಂಡವನು ಬಸಿರಲಿ ಧರಿಸಿ ನಿತ್ಯವು ಪೊರೆವಳು.

"ಮತ್ತೆ ಕವಿ ಹೇಳುತ್ತಿದಾನೆ:

ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು.

ಕೇವಲ ಪಾಂಡಿತ್ಯದಿಂದಲೆ ಆಕೆಯನ್ನು ಪಡೆದುಕೊಳ್ಳಲಾಗೋದಿಲ್ಲ.

"ಶ್ರದ್ಧೆ ಮತ್ತು ಭಕ್ತಿ ಬೇಕು. ವಿಶ್ವಾಸಕ್ಕೆ ಎಷ್ಟು ಬಲ ಎಂಬುದನ್ನು ಕೇಳು. ಒಬ್ಬ ಸಮುದ್ರ ದಾಟಿ ಲಂಕೆಯಿಂದ ಭಾರತಕ್ಕೆ ಬರಬೇಕಾಗಿತ್ತು. ವಿಭೀಷಣ ಆತನಿಗೆ ಹೇಳಿದ: 'ಈ ವಸ್ತುವನ್ನು ನಿನ್ನ ಪಂಚೆಯ ಕೊನೆಗೆ ಕಟ್ಟಿಕೊ, ನಿರ್ವಿಘ್ನವಾಗಿ ಸಮುದ್ರ ದಾಟಿಬಿಡುತ್ತೀಯೆ. ನೀರಿನ ಮೇಲೆ ನಡೆದು ಹೋಗಲು ಸಾಧ್ಯವಾಗುತ್ತದೆ. ಆದರೆ ಅದನ್ನು ಮಾತ್ರ ಬಿಚ್ಚಿ ನೋಡಬೇಡ; ನೋಡಿದೆಯೊ ಮುಳುಗಿಹೋಗಿಬಿಡುತ್ತೀಯೆ.' ಶ್ರದ್ಧೆಯ ಬಲ ಅಂಥದು, ಆ ಮನುಷ್ಯ ಸುಲಭವಾಗಿ ಸಮುದ್ರದ ಮೇಲೆ ನಡೆದುಹೋಗುತ್ತಿದ್ದ. ಸ್ವಲ್ಪ ದೂರ ಹಾಗೇ ನಡೆದುಹೋದಮೇಲೆ ಆತನಿಗೆ ಯೋಚನೆಬಂತು: 'ವಿಭೀಷಣ ನನ್ನ ಪಂಚೆ ತುದಿಗೆ ಎಂಥ ಅದ್ಭುತ ವಸ್ತುವನ್ನು ಕಟ್ಟಿರಬೇಕು ನಾನು ಇಷ್ಟು ಸುಲಭವಾಗಿ ನೀರಿನ ಮೇಲೆ ನಡೆದುಕೊಂಡುಹೋಗಬೇಕಾದರೆ?' ಹೀಗೆಂದು ಯೋಚಿಸಿ ಗಂಟು ಬಿಚ್ಚಿನೋಡುತ್ತಾನೆ, ಕೇವಲ ರಾಮನಾಮ ಬರೆದಿರುವ ಒಂದು ಎಲೆ ಮಾತ್ರ ಅದರಲ್ಲಿದೆ. 'ಓ, ಇದೇನೆ ಇದರೊಳಗಿರೋದು!' ಎಂಬ ಭಾವನೆ ಬಂದೊಡನೆಯೇ ಆತ ಮುಳುಗಿಹೋದ.

"ಜನ ಹೇಳುತ್ತಾರೆ, ಹನುಮಂತನಿಗೆ ರಾಮನಾಮ ಮಹಿಮೆಯಲ್ಲಿ ಅಂಥ ವಿಶ್ವಾಸ, ಅದರ ಬಲದಿಂದ ಆತ ಸಮುದ್ರವನ್ನೇ ಲಂಘನೆಮಾಡಿಬಿಟ್ಟ! ಆದರೆ ಸ್ವಯಂ ರಾಮ ಸೇತುವೆ ಕಟ್ಟಬೇಕಾಗಿಬಂತು.

"ಭಗವಂತನಲ್ಲಿ ಶ್ರದ್ಧೆಯುಂಟಾಗಿಬಿಟ್ಟದ್ದೇ ಆದರೆ ಮನುಷ್ಯ ಪಾಪ ಕಾರ್ಯಗಳನ್ನು ಮಾಡಿರಲಿ ಅಥವಾ ಮಹಾಪಾತಕಕಾರ್ಯಗಳನ್ನೂ ಮಾಡಿರಲಿ ಆತ ಯಾವುದಕ್ಕೂ ಹೆದರಬೇಕಾಗಿಲ್ಲ."

ಈಗ ಪರಮಹಂಸರು ಶ್ರದ್ಧೆಯ ಮಹಿಮೆಯನ್ನು ಕೊಂಡಾಡುವ ಒಂದು ಹಾಡನ್ನು ಹಾಡುತ್ತಿದಾರೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀನಾಮವನು ಜಪಿಸುತಿರಲು . . .

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಶ್ರದ್ಧೆ ಮತ್ತು ಭಕ್ತಿ. ಭಕ್ತಿಯಿಂದ ಭಗವಂತನನ್ನ ಸಹಜವಾಗಿ ಸಾಕ್ಷಾತ್ಕಾರಮಾಡಿಕೊಳ್ಳಬಹುದು. ಆತ ಭಾವಕ್ಕೆ ವಶನಾಗುತ್ತಾನೆ."

ಹೀಗೆಂದು ಹೇಳಿ ಮತ್ತೆ ಪರಮಹಂಸರು ಹಾಡುತ್ತಿದಾರೆ:

ದೇವದೇವನ ನಿಜವನರಿಯಲು
ಮನವು ತೊಳಲುತ ಬಳಲಿದೆ . . . . (ಉ. ೧೦೭)

ಹಾಡನ್ನು ಹಾಡುಹಾಡುತ್ತಿದ್ದ ಹಾಗೇ ಪರಮಹಂಸರು ಸಮಾಧಿಸ್ಥರಾಗಿಬಿಟ್ಟಿದಾರೆ. ಕೈ ಮುಗಿದುಕೊಂಡಿದಾರೆ. ದೇಹ ನೆಟ್ಟಗೆ ಸ್ಥಿರವಾಗಿ ಕುಳಿತಿದೆ. ನೇತ್ರಗಳೆರಡೂ ಸ್ಪಂದಹೀನವಾಗಿವೆ. ಆ ಬೆಂಚಿನ ಮೇಲೆ ಪಶ್ಚಿಮಾಭಿಮುಖರಾಗಿ ಕುಳಿತು ಕಾಲನ್ನು ಕೆಳಕ್ಕೆ ಬಿಟ್ಟುಕೊಂಡಿದಾರೆ. ಎಲ್ಲರೂ ಕತ್ತು ಎತ್ತಿ ಈ ಅದ್ಭುತ ಅವಸ್ಥೆಯನ್ನು ನೋಡುತ್ತಿದಾರೆ. ಪಂಡಿತ ವಿದ್ಯಾಸಾಗರ ಸ್ತಬ್ಧನಾಗಿ ಏಕದೃಷ್ಟಿಯಿಂದ ನೋಡುತ್ತಿದಾನೆ.

ಪರಮಹಂಸರು ಈಗ ಪ್ರಕೃತಿಸ್ಥರಾಗುತ್ತಿದಾರೆ. ದೀರ್ಘ ನಿಶ್ವಾಸ ಬಿಟ್ಟು ನಸುನಗೆ ನಗುತ್ತ ಹೇಳುತ್ತಿದಾರೆ: "ಭಗವಂತನ ಸಾಕ್ಷಾತ್ಕಾರಕ್ಕೆ ಭಾವ ಭಕ್ತಿ ಬೇಕು—ಎಂದರೆ ಆತನನ್ನು ಪ್ರೀತಿಸಬೇಕು. ಬ್ರಹ್ಮನನ್ನೇ ತಾಯಿಯೆಂದು ಪ್ರಸಾದ ಕರೆಯುತ್ತಿದಾನೆ:

ಶ್ರೀಪ್ರಸಾದನು ನುಡಿವನೀತೆರ:
"ಮಾತೃಭಾವದಿ ನೆನೆವೆನು;

ಈ ರಹಸ್ಯವ ಜಗದ ಸಂತೆಯು
ಜನದ ಜಂಗುಳಿಗೊರೆಯೆನು,
ನನ್ನ ಸೂಚನೆಯರಿತು ನೀವೇ
ತಿಳಿಯಿರಾತನ ನಿಜವನು!"

"ಭಗವಂತನ ಸ್ವರೂಪವನ್ನು ಊಹಿಸುವಂತೆ ರಾಮಪ್ರಸಾದ ತನ್ನ ಮನಸ್ಸಿಗೆ ಆಜ್ಞೆಮಾಡುತ್ತಿದಾನೆ. ವೇದದಲ್ಲಿ ಯಾವುದನ್ನ ಬ್ರಹ್ಮ ಅಂತ ಕರೆಯುತ್ತಾರೊ ಅದನ್ನೇ ತಾನು ತಾಯಿ ಎಂಬುದಾಗಿ ಕರೆಯುತ್ತಾ ಇರುವುದನ್ನು ಅದು ಅರಿತುಕೊಳ್ಳಬೇಕು ಎಂಬುದಾಗಿ ಆತ ಇಚ್ಛಿಸಿದಾನೆ. ಯಾರು ನಿರ್ಗುಣನೊ ಆತನೇ ಸಗುಣ. ಯಾರು ಬ್ರಹ್ಮನೊ ಆತನೇ ಶಕ್ತಿ. ಭಗವಂತ ನಿಷ್ಕ್ರಿಯ ಎಂಬ ಬೋಧೆಯಾದಾಗ ಆತನನ್ನು ಬ್ರಹ್ಮ ಅಂತ ಕರೆಯುತ್ತೇವೆ; ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುತ್ತಿದಾನೆ ಎಂಬ ಬೋಧೆಯಾದಾಗ ಆತನನ್ನೇ ಆದ್ಯಾಶಕ್ತಿ, ಕಾಳಿ ಎಂಬುದಾಗಿ ಕರೆಯುತ್ತೇವೆ.

"ಬ್ರಹ್ಮನಿಗು ಶಕ್ತಿಗು ಅಭೇದ. ಉದಾಹರಣೆಗೆ ಅಗ್ನಿ ಮತ್ತು ಅದರ ಸುಡುವ ಶಕ್ತಿ. ಅಗ್ನಿಯ ಭಾವನೆಯೊಡನೆ ಅದರ ಸುಡುವ ಶಕ್ತಿಯ ಭಾವನೆಯೂ ಬಂದುಬಿಡುತ್ತದೆ. ಹಾಗೇನೆ ಸುಡುವ ಶಕ್ತಿ ಎಂದೊಡನೆಯೇ ಅಗ್ನಿಯ ಭಾವನೆಯೂ ಬಂದುಬಿಡುತ್ತದೆ. ಒಂದನ್ನು ಭಾವಿಸಿದೊಡನೆ ಇನ್ನೊಂದನ್ನೂ ಭಾವಿಸಲೇಬೇಕು.

"ಬ್ರಹ್ಮನನ್ನೇ ತಾಯಿ ಎಂಬುದಾಗಿ ಕರೆಯುತ್ತಿದೇವೆ, ಏಕೆಂದರೆ ತಾಯಿ ಬಹಳ ಪ್ರೀತಿಯ ವಸ್ತು, ಅಲ್ಲವೆ. ಭಗವಂತನನ್ನು ಪ್ರೀತಿಸಿದೆವು ಎಂದರೆ ಆತ ದೊರೆತುಬಿಡುತ್ತಾನೆ. ಭಾವ, ಭಕ್ತಿ, ಪ್ರೀತಿ, ಶ್ರದ್ಧೆ—ಇವು ಸಲಕರಣೆಗಳು. ಇನ್ನೊಂದು ಹಾಡು ಕೇಳು:

ಭಾವುಕನ ಭಾವದೊಲು ಅವನೊಳುದಿಸುವ ಒಲವು,
ಆ ಒಲವಿಗನುಸಾರ ಅವನು ಪಡೆಯುವ ಫಲವು;
ಶ್ರದ್ಧೆ ಎಲ್ಲಕು ಮೂಲ; ತಾಯ ಶ್ರೀಪಾದ ಮಧು-
ಸರಸಿಯುಲಿ ಮುಳುಗಿರುವ ನನಗೇಕೆ ಮತ್ತೆ ಜಪ-
ತಪ ಹೋಮಹವನಾದಿ ಕರ್ಮಗಳ ರಗಳೆ?

ಭಗವಂತನನ್ನ ಅತ್ಯಂತವಾಗಿ ಪ್ರೀತಿಸುವುದೇ, ಆತನಲ್ಲಿ ಚಿತ್ತವನ್ನು ತದ್ಗತಮಾಡುವುದೇ ಬೇಕಾಗಿರೋದು. ಅಮೃತತ್ವಸರೋವರ ತಾನೈಸುಧಾ

ಸರೋವರ? ಅದರಲ್ಲಿ ಮುಳುಗಿದರೆ ಮನುಷ್ಯ ಸಾಯೋದಿಲ್ಲ; ಅಮರನಾಗಿ ಬಿಡುತ್ತಾನೆ. ಕೆಲಕೆಲವರು ಭಾವಿಸುತ್ತಾರೆ, ಹೆಚ್ಚಾಗಿ 'ಭಗವಂತ! ಭಗವಂತ!' ಅಂತ ಶುರುಮಾಡಿದರೆ ಕೊನೆಗೆ ಹುಚ್ಚು ಹಿಡಿದುಬಿಡುತ್ತದೆ ಎಂಬುದಾಗಿ. ಅದು ಸತ್ಯವಲ್ಲ. ಭಗವಂತ ಸುಧೆಯ ಸರೋವರ, ಅಮೃತದ ಸಾಗರ. ವೇದದಲ್ಲಿ ಆತನನ್ನ 'ಅಮೃತಸ್ವರೂಪ' ಎಂಬುದಾಗಿ ವರ್ಣಿಸಿದೆ. ಅದರಲ್ಲಿ ಮುಳುಗಿದರೆ ಮನುಷ್ಯ ಸಾಯೋದಿಲ್ಲ—ಅದಕ್ಕೆ ಬದಲು ಅಮರ ನಾಗಿಬಿಡುತ್ತಾನೆ.

### ಜಪತಪ ಹೋಮಹವನಾದಿ ಕರ್ಮಗಳ ರಗಳೆ ಏಕೆ?

ಭಗವಂತನಲ್ಲಿ ಅನುರಾಗ ಉಂಟಾಯಿತು ಎಂದರೆ, ಈ ಕರ್ಮಗಳ ವಿಷಯ ವಾಗಿ ಅತಿಯಾಗೇನು ತಲೆಗೆ ಹಚ್ಚಿಕೊಳ್ಳಬೇಕಾಗಿಲ್ಲ. ಗಾಳಿ ಬೀಸದವರೆಗೆ ಮಾತ್ರವೇ ಬೀಸಣಿಗೆಯ ಆವಶ್ಯಕತೆ. ತೆಂಗಾಳಿ ಬೀಸಲಾರಂಭಿಸಿತು ಎಂದರೆ ಬೀಸಣಿಗೆಯನ್ನ ಕೆಳಕ್ಕೆ ಇಟ್ಟುಬಿಡಬಹುದು. ಬಳಿಕ ಬೀಸಣಿಗೆಯ ಆವಶ್ಯಕತೆ ಏನಿದೆ?

(ವಿದ್ಯಾಸಾಗರನಿಗೆ) "ನೀನು ಮಾಡುತ್ತಿರುವ ಕರ್ಮಗಳೆಲ್ಲ ಸತ್ಕರ್ಮಗಳು. ನಾನು ಕರ್ತ ಎಂಬ ಅಹಂಕಾರ ತೊರೆದು ನಿಷ್ಕಾಮ ಭಾವನೆಯಿಂದ ಮಾಡುವುದಾದರೆ ಬಹಳ ಒಳ್ಳೆಯದು. ಈ ರೀತಿಯಾಗಿ ನಿಷ್ಕಾಮಕರ್ಮ ಮಾಡುತ್ತ ಮಾಡುತ್ತ ಮುಂದುವರಿದರೆ, ಕೊನೆಗೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ.

"ಭಗವಂತನಲ್ಲಿ ನಿನಗೆ ಭಕ್ತಿ ಪ್ರೇಮ ಬೆಳೆದಷ್ಟೂ ನಿನ್ನ ಕರ್ಮ ಕಡಮೆ ಕಡಮೆಯಾಗುತ್ತಾ ಬಂದುಬಿಡುತ್ತದೆ. ಸೊಸೆ ಗರ್ಭಿಣಿಯಾದರೆ ಅತ್ತೆ ಆಕೆಯ ಕೆಲಸವನ್ನು ಕಡಮೆಮಾಡಿಕೊಡುತ್ತಾಳೆ. ತಿಂಗಳು ಆದಷ್ಟೂ ಆಕೆಯ ಪಾಲಿನ ಕೆಲಸ ಕಡಮೆ ಕಡಮೆಯಾಗುತ್ತಾ ಹೋಗು ತ್ತದೆ. ಒಂಬತ್ತು ತಿಂಗಳು ತುಂಬಿತು ಎಂದರೆ ಹೊಟ್ಟೆಯಲ್ಲಿ ಮಗುವಿಗೆ ಏನಾದರೂ ಅಪಾಯ ಸಂಭವಿಸಬಹುದೊ, ಹೆರಿಗೆ ಸಮಯದಲ್ಲಿ ಏನಾ ದರೂ ತೊಂದರೆಯಾಗಬಹುದೊ ಏನೊ ಎಂದು ಹೆದರಿ ಆಕೆಯ ಕೈಯಲ್ಲಿ ಯಾವ ಕೆಲಸವನ್ನೂ ಮಾಡಿಸೋದೇ ಇಲ್ಲ. (ನಗು.)

"ನೀನು ಈ ಕೆಲಸಗಳನ್ನೆಲ್ಲ ಮಾಡುತ್ತಾ ಇದೀಯಲ್ಲ ಇದರಿಂದ ನಿಜವಾಗಿ ನೀನು ನಿನಗೇ ಉಪಕಾರ ಮಾಡಿಕೊಳ್ಳುತ್ತಾ ಇದೀಯೆ. ನಿಷ್ಕಾಮ ಭಾವನೆಯಿಂದ ಕೆಲಸಮಾಡಲು ಸಾಧ್ಯವಾದರೆ ಚಿತ್ತಶುದ್ಧಿ

ಉಂಟಾಗುತ್ತದೆ, ಭಗವಂತನಲ್ಲಿ ನಿನಗೆ ಪ್ರೀತಿ ಉಂಟಾಗುತ್ತದೆ. ಪ್ರೀತಿ ಉಂಟಾಯಿತು ಎಂದರೆ ಆತನ ಸಾಕ್ಷಾತ್ಕಾರ ಪಡೆದುಕೊಳ್ಳುತ್ತೀಯೆ.

"ಮನುಷ್ಯ ಜಗತ್ತಿಗೆ ನಿಜವಾಗಿ ಉಪಕಾರ ಮಾಡಲಾರ; ಭಗವಂತ ಮಾಡಬಲ್ಲ. ಯಾರು ಚಂದ್ರಸೂರ್ಯರನ್ನು ಸೃಷ್ಟಿಸಿದಾನೊ, ಯಾರು ತಂದೆತಾಯಿಗಳ ಅಂತರ್ಯದಲ್ಲಿ ಪ್ರೀತಿ ಇಟ್ಟಿದಾನೊ, ಯಾರು ಮಹಾ ಪುರುಷರಲ್ಲಿ ದಯೆ ಬೆಳಸಿದಾನೊ, ಯಾರು ಸಾಧು ಭಕ್ತರ ಹೃದಯದಲ್ಲಿ ಭಕ್ತಿ ಮೂಡುವಂತೆ ಮಾಡಿದಾನೊ ಆತ ಆ ಕಾರ್ಯ ಮಾಡುತ್ತಾನೆ. ಯಾರು ಕಾಮನಾಶೂನ್ಯನಾಗಿ ಕೆಲಸ ಮಾಡುತ್ತಾನೊ ಆತ ತನಗೇ ತಾನು ಶ್ರೇಯಸ್ಸು ತಂದುಕೊಳ್ಳುತ್ತಾನೆ.

"ನಿನ್ನ ಅಂತರ್ಯದಲ್ಲಿ ಚಿನ್ನದ ಗಟ್ಟಿ ಇದೆ, ಆದರೆ ಅದು ನಿನಗೆ ಗೊತ್ತಾಗಿಲ್ಲ. ಅದರ ಮೇಲೆ ಸ್ವಲ್ಪ ಮಣ್ಣು ಮುಚ್ಚಿಕೊಂಡಿದೆ. ಅದರ ನೆಲೆ ನಿನಗೆ ಸಿಕ್ಕಿಬಿಟ್ಟಿತು ಎಂದರೆ ನಿನ್ನ ಈ ಕೆಲಸಕಾರ್ಯಗಳೆಲ್ಲ ಕಡಮೆ ಯಾಗಿ ಹೋಗುತ್ತವೆ. ಸೊಸೆಗೆ ಮಗು ಆದೊಡನೆಯೆ ಆಕೆ ಮಗುವಿನ ಯೋಗಕ್ಷೇಮದಲ್ಲೇ ನಿರತಳಾಗಿರುತ್ತಾಳೆ. ಅದನ್ನು ಎತ್ತಿಕೊಂಡೇ ಸುತ್ತಾಡುತ್ತ ಬಳಸಾಡುತ್ತ ಇರುತ್ತಾಳೆ. ಆಗ ಅತ್ತೆ ಆಕೆಯ ಕೈಯಲ್ಲಿ ಒಂದು ಕೆಲಸವನ್ನೂ ಮಾಡಿಸೋದಿಲ್ಲ.

ಮುಂದೆ ಹೋಗು. ಒಮ್ಮೆ ಒಬ್ಬ ಸೌದೆ ಕಡಿಯುವವ ಸೌದೆ ತರಲು ಕಾಡಿಗೆ ಹೋದ. ಅಲ್ಲೊಬ್ಬ ಬ್ರಹ್ಮಚಾರಿ ಹೇಳಿದ: 'ಮುಂದೆ ಹೋಗು.' ಮುಂದೆ ಹೋಗಿನೋಡುತ್ತಾನೆ, ಚಂದನದ ಕಾಡು. ಕೆಲವು ದಿನಗಳಾದ ಮೇಲೆ ಯೋಚನೆಬಂತು: 'ಬ್ರಹ್ಮಚಾರಿ ಮುಂದೆ ಹೋಗುವಂತೆ ನನಗೆ ಹೇಳಿದನೇ ವಿನಾ, ಈ ಚಂದನದ ಕಾಡಿನವರೆಗೆ ಮಾತ್ರ ಹೋಗು ಅಂತಲೇನು ಹೇಳಲಿಲ್ಲವಲ್ಲ.' ಅಲ್ಲಿಂದ ಮುಂದೆ ಹೋಗಿನೋಡುತ್ತಾನೆ, ಬೆಳ್ಳಿ ಗಣಿ. ಇನ್ನು ಕೆಲವು ದಿನಗಳಾದ ಮೇಲೆ ಇನ್ನೂ ಮುಂದಕ್ಕೆ ಹೋಗಿನೋಡು ತ್ತಾನೆ, ಚಿನ್ನದ ಗಣಿ. ಅದರಿಂದ ಮುಂದಕ್ಕೆ ಹೀರ, ಮಾಣಿಕ್ಯ ಇವುಗಳ ಗಣಿ. ಇವನ್ನೆಲ್ಲಾ ಪಡೆದುಕೊಂಡು ದೊಡ್ಡ ಐಶ್ವರ್ಯವಂತನಾಗಿಬಿಟ್ಟ.

"ನಿಷ್ಕಾಮಕರ್ಮ ಮಾಡಿದರೆ ಭಗವಂತನಲ್ಲಿ ಪ್ರೀತಿ ಉಂಟಾ ಗುತ್ತದೆ. ಬಳಿಕ ಆತನ ಕೃಪೆಯಿಂದ ಆತನ ಸಾಕ್ಷಾತ್ಕಾರ ದೊರೆಯುತ್ತದೆ. ಆತನನ್ನು ನೋಡಲು ಸಾಧ್ಯ. ಆತನೊಡನೆ ಮಾತುಕತೆಯಾಡಬಹುದು, ನಾನು ನಿಮ್ಮೊಡನೆ ಮಾತುಕತೆಯಾಡುತ್ತಿರೋ ಹಾಗೆ."

ಎಲ್ಲರೂ ಆಶ್ಚರ್ಯಚಕಿತರಾಗಿ ಶಬ್ದದ ಸುಳಿವೇ ಇಲ್ಲದ ಹಾಗೆ ಕುಳಿತು ಪರಮಹಂಸರ ಮಾತುಕತೆಗಳನ್ನೆಲ್ಲ ಕೇಳುತ್ತಿದಾರೆ. ಸಾಕ್ಷಾತ್ ವಾಗ್ದೇವಿಯೇ ಪರಮಹಂಸರ ನಾಲಗೆಯ ಮೇಲೆ ಕುಳಿತು ವಿದ್ಯಾಸಾಗರರನ್ನು ನೆಪಮಾಡಿಕೊಂಡು ಇಡಿಯ ಮಾನವ ಜಗತ್ತಿಗೇ ಉಪದೇಶವೀಯುತ್ತಿದಾಳೊ ಏನೊ ಎಂಬಂತೆ ತೋರಲಾರಂಭಿಸಿತು.

ಘಂಟೆ ಆಗಲೆ ರಾತ್ರಿ ಒಂಬತ್ತು. ಪರಮಹಂಸರು ಈಗ ಹೊರಡಲು ಅನುವಾಗುತ್ತಿದಾರೆ.

ಶ್ರೀರಾಮಕೃಷ್ಣರು ವಿದ್ಯಾಸಾಗರನಿಗೆ ನಗುತ್ತ: "ಇಷ್ಟೊಂದು ಹೊತ್ತು ಮಾತನಾಡಿದೆನಲ್ಲ, ಅದೆಲ್ಲಾ ಸುಮ್ಮನೆ ಅನಾವಶ್ಯಕ. ಎಲ್ಲಾ ನಿನಗೆ ಗೊತ್ತಿದೆ; ಆದರೆ ಅದರ ಅರಿವೇ ಇರಲಿಲ್ಲ. ವರುಣನ ಭಂಡಾರದಲ್ಲಿ ಎಷ್ಟೊಂದು ರತ್ನಗಳು! ಆದರೆ ಅವು ಆತನಿಗೆ ಗೊತ್ತೇ ಇಲ್ಲ."

ವಿದ್ಯಾಸಾಗರ ನಗುತ್ತ: "ನೀವು ಸುಮ್ಮನೆ ಬೇಕಾದರೆ ಹಾಗೆ ಹೇಳಬಹುದು."

ಶ್ರೀರಾಮಕೃಷ್ಣರು ನಗುತ್ತ: "ಹೌದು. ಅನೇಕ ಮಂದಿ ಧನಿಕರಿಗೆ ತಮ್ಮ ಆಳುಕಾಳಿನ ಹೆಸರೇ ಗೊತ್ತಿರೋದಿಲ್ಲ; ಮನೆಯಲ್ಲಿ ಎಷ್ಟೆಷ್ಟು ಬೆಲೆಯುಳ್ಳ ವಸ್ತು ಎಲ್ಲೆಲ್ಲಿ ಬಿದ್ದಿವೆ ಎಂಬುದೂ ಗೊತ್ತಿರೋದಿಲ್ಲ." (ಎಲ್ಲರೂ ನಗುತ್ತಿದಾರೆ.)

ಪರಮಹಂಸರ ಮಾತುಕತೆ ಕೇಳಿ ಎಲ್ಲರಿಗೂ ಆನಂದವಾಗಿಬಿಟ್ಟಿದೆ. ಮತ್ತೆ ವಿದ್ಯಾಸಾಗರನನ್ನು ಸಂಬೋಧಿಸಿ ನಗುತ್ತ ಹೇಳುತ್ತಿದಾರೆ: "ಒಮ್ಮೆ ತೋಟ ನೋಡುವುದಕ್ಕೆ ಬನ್ನಿ—ರಾಣಿ ರಾಸಮಣಿಯ ತೋಟವನ್ನ. ಬಹಳ ಮನೋಹರವಾದ ಜಾಗ."

ವಿದ್ಯಾಸಾಗರ: "ಬಾರದೆ ಮತ್ತೆ! ನೀವು ಇಲ್ಲಿಗೆ ಬಂದ ಮೇಲೆ ನಿಮ್ಮ ಅಲ್ಲಿಗೆ ನಾನು ಹೋಗಬೇಡ?"

ಶ್ರೀರಾಮಕೃಷ್ಣರು: "ನಮ್ಮ ಅಲ್ಲಿಗೆ? ಛೆ! ಛೆ!"

ವಿದ್ಯಾಸಾಗರ: "ಏಕೆ? ಏಕೆ ಹೀಗೆ ಹೇಳುತ್ತಿದೀರಿ? ದಯವಿಟ್ಟು ಕಾರಣ ತಿಳಿಸಿ."

ಶ್ರೀ ರಾಮಕೃಷ್ಣರು ನಗುತ್ತ: "ನಾವು ಚಿಕ್ಕ ಮೀನು ಹಿಡಿಯೋ ದೋಣಿ. (ಎಲ್ಲರೂ ನಗುತ್ತಿದಾರೆ.) ಚಿಕ್ಕ ಕಾಲುವೆ, ಜೌಗುಪ್ರದೇಶ, ಬೇಕಾದರೆ ದೊಡ್ಡನದಿ ಎಲ್ಲಿಗೆಬೇಕಾದರಲ್ಲಿಗೆ ಹೋಗಬಲ್ಲೆವು. ನೀವು

ದೊಡ್ಡ ಜಹಜು. ಯಾರಿಗೆ ಗೊತ್ತು ಅಲ್ಲಿಗೆ ಬರುವುದಕ್ಕೆ ಹೋಗಿ ಆಳ ಸಾಕಾಗದೆ ನೆಲ ಹತ್ತಿಬಿಟ್ಟರೆ!" (ಎಲ್ಲರೂ ನಗುತ್ತಿದಾರೆ.)

ವಿದ್ಯಾಸಾಗರ ನಗುತ್ತ ಸುಮ್ಮನೆ ಆದ. ಪರಮಹಂಸರು ಮತ್ತೆ ನಗುತ್ತ ಹೇಳುತ್ತಿದಾರೆ: "ಈ ಸಮಯದಲ್ಲಿ ಜಹಜೂ ಅಲ್ಲಿಗೆ ಬರಬಲ್ಲದು."

ವಿದ್ಯಾಸಾಗರ ನಗುತ್ತ: "ಹೌದು, ಹೌದು. ಇದು ಮಳೆಗಾಲ ನಿಜ." (ಎಲ್ಲರೂ ನಗುತ್ತಿದಾರೆ.)

ಮಾಸ್ಟರ್ ತನಗೆ ತಾನೆ: "ನವಾನುರಾಗದ ಮಳೆಗಾಲ. ನವಾನು ರಾಗದ ಸಮಯದಲ್ಲಿ ಮಾನ ಅಪಮಾನ ಇವುಗಳ ಬೋಧೆ ಇರುವುದಿಲ್ಲ ನಿಜ."

ಪರಮಹಂಸರು ತಮ್ಮ ಭಕ್ತರೊಡನೆ ವಿದ್ಯಾಸಾಗರನಿಂದ ಬೀಳ್ಕೊಳ್ಳಲು ಎದ್ದು ನಿಂತರು. ಕೊಠಡಿಯಿಂದ ಹೊರಕ್ಕೆ ಬರುವ ಮುನ್ನ ಭಾವಾವಿಷ್ಟರಾಗಿ ಸ್ವಲ್ಪ ಹೊತ್ತು ವಿದ್ಯಾಸಾಗರನ ಮನೆಯವರ ಮಂಗಳ ಕ್ಕಾಗಿ ಪ್ರಾರ್ಥನೆಮಾಡಿದರು. ಈಗ ವಿದ್ಯಾಸಾಗರ ತಾನೇ ಕೈಯಲ್ಲಿ ದೀಪ ಹಿಡಿದು ಪರಮಹಂಸರನ್ನು ಗೇಟಿನ ಕಡೆಗೆ ಕರೆದುಕೊಂಡುಬರುತ್ತಿದಾನೆ. ಆತನ ನಂಟರಿಷ್ಟರೆಲ್ಲರೂ ಪರಮಹಂಸರನ್ನು ಹಿಂಬಾಲಿಸುತ್ತಿದಾರೆ.

ಪರಮಹಂಸರೂ ಭಕ್ತರೂ ಗೇಟಿನ ಹತ್ತಿರಕ್ಕೆ ಹೋದಾಗ ಒಂದು ಅನಿರೀಕ್ಷಿತ ದೃಶ್ಯ ಅವರ ಕಣ್ಣಿಗೆ ಬಿತ್ತು. ಮೂವತ್ತೈದು ಮೂವತ್ತಾರು ವರ್ಷದ, ಗಡ್ಡ ಬಿಟ್ಟುಕೊಂಡಿರುವ, ಗೌರವರ್ಣದ ಒಬ್ಬ ವ್ಯಕ್ತಿ ನಿಂತಿದಾನೆ. ಬಂಗಾಳಿಗಳಂತೆ ಬಟ್ಟೆಬರೆ ಹಾಕಿಕೊಂಡಿದಾನೆ, ಆದರೆ ತಲೆಗೆ ಮಾತ್ರ ಸಿಕ್ಕರಂತೆ ಪೇಟ ಸುತ್ತಿದಾನೆ. ಪರಮಹಂಸರು ಆತನ ಕಣ್ಣಿಗೆ ಬಿದ್ದೊಡನೇ ಆತ ಅವರಿಗೆ ಪೇಟ ಸಮೇತ ಸಾಷ್ಟಾಂಗಪ್ರಣಾಮ ಮಾಡಿದ.

ಆತ ಎದ್ದುನಿಂತನಂತರ ಪರಮಹಂಸರು ಕೇಳಿದರು: "ಯಾರಪ್ಪ ಇದು? ಏನು, ಬಲರಾಮ! ಏನು ಇಷ್ಟು ಹೊತ್ತಿನಲ್ಲಿ?"

ಬಲರಾಮ: "ನಾನು ಇಲ್ಲಿ ಬಹಳ ಹೊತ್ತಿನಿಂದ ಕಾದಿದೇನೆ."

ಶ್ರೀರಾಮಕೃಷ್ಣರು: "ಒಳಕ್ಕೇಕೆ ಬರಲಿಲ್ಲ?"

ಬಲರಾಮ: "ಎಲ್ಲರೂ ನಿಮ್ಮ ಮಾತುಕತೆ ಕೇಳುತ್ತಿದ್ದರು. ಮಧ್ಯೆ ಬಂದು ತೊಂದರೆಮಾಡಲಿಚ್ಛೆಯಾಗಲಿಲ್ಲ."

ಪರಮಹಂಸರು ಭಕ್ತರೊಡನೆ ಗಾಡಿಗೆ ಹತ್ತಿದರು.

ವಿದ್ಯಾಸಾಗರ ಮಾಸ್ಟರಿಗೆ ಮೆತ್ತಗೆ: "ಗಾಡಿ ಬಾಡಿಗೆ ಕೊಡಲೆ?"

ಮಾಸ್ಟರ್: "ಬೇಡಿ, ಕೊಟ್ಟಾಗಿದೆ."

ವಿದ್ಯಾಸಾಗರ ಮತ್ತು ಉಳಿದವರೆಲ್ಲರೂ ಪರಮಹಂಸರಿಗೆ ಪ್ರಣಾಮ ಮಾಡುತ್ತಿದ್ದಾರೆ. ಈಗ ಗಾಡಿ ದಕ್ಷಿಣೇಶ್ವರದ ಕಡೆಗೆ ಹೊರಟಿತು. ವಿದ್ಯಾಸಾಗರ ಮತ್ತು ಉಳಿದವರೆಲ್ಲರೂ, ಗಾಡಿ ಕಣ್ಣಿಗೆ ಬೀಳುವವರೆಗೆ ಗೇಟಿನ ಹತ್ತಿರವೇ ನಿಂತು ಪರಮಹಂಸರ ಕಡೆ ದಿಟ್ಟಿಸಿನೋಡುತ್ತಿದ್ದರು.



## ೪

# ಗೃಹಸ್ಥರಿಗೆ ಬುದ್ಧಿವಾದ

---

೧೩ ನೆ ಆಗಸ್ಟ್ ೧೮೮೨, ಶ್ರಾವಣ ಅಮಾವಾಸ್ಯೆ, ಭಾನುವಾರ.

ಪರಮಹಂಸರು ಕೇದಾರನೇ ಮೊದಲಾದ ಭಕ್ತರೊಡನೆ ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಮಾತುಕತೆಯಾಡುತ್ತಿದಾರೆ. ಕೇದಾರಚಟ್ಟೋಪಾಧ್ಯಾಯ ಢಾಕಾದಲ್ಲಿ ಬಹಳ ವರ್ಷಗಳ ಕಾಲ ಅಕೌಂಟೆಂಟ್ ಕೆಲಸ ಮಾಡಿಕೊಂಡಿದ್ದ. ಆಗ ಆತನಿಗು ವಿಜಯಕೃಷ್ಣಗೋಸ್ವಾಮಿಗು ಸ್ನೇಹ ಬೆಳೆಯಿತು. ಇಬ್ಬರೂ ಯಾವಾಗ ನೋಡಿದರೂ ಪರಮಹಂಸರ ವಿಷಯವಾಗೇ ಮಾತುಕತೆ ಆಡುತ್ತಿದ್ದರು. ಭಗವದ್ವಿಷಯ ಕೇದಾರನ ಕಿವಿಗೆ ಬಿದ್ದಾಗಲೆಲ್ಲ ಆತ ಅಶ್ರುಪೂರ್ಣಲೋಚನನಾಗುತ್ತಿದ್ದ. ಆತ ಹಿಂದೆ ಬ್ರಾಹ್ಮಸಮಾಜದ ಅನುಯಾಯಿಯಾಗಿದ್ದ.

ಘಂಟೆ ಸಾಯಂಕಾಲ ಐದು. ಕೇದಾರ ಇಂದು ಒಂದು ಸಂತೋಷಕೂಟ ಏರ್ಪಡಿಸಿದಾನೆ. ಆದ್ದರಿಂದ ಆತ ಆನಂದದಿಂದ ತುಂಬಿತುಳುಕಾಡುತ್ತಿದಾನೆ. ರಾಮು ಒಬ್ಬ ಸಂಗೀತ ವಿದ್ವಾಂಸನನ್ನು ಕರೆದುಕೊಂಡು ಬಂದಿದ್ದ. ಇಡೀ ದಿನವೆಲ್ಲ ಆನಂದದಲ್ಲೇ ಕಳೆಯಿತು.

ಪರಮಹಂಸರು ಸಮಾಧಿಯ ಸಂಬಂಧವಾಗಿ ಭಕ್ತರಿಗೆ ವಿವರಿಸುತ್ತಿದಾರೆ.

ಶ್ರೀರಾಮಕೃಷ್ಣರು: "ಸಚ್ಚಿದಾನಂದನ ಸಾಕ್ಷಾತ್ಕಾರ ಆಯಿತು ಎಂದರೆ ಸಮಾಧಿ ಉಂಟಾಗುತ್ತದೆ. ಬಳಿಕ ಕರ್ಮತ್ಯಾಗವಾಗಿಬಿಡುತ್ತದೆ. ನಾನು ಸಂಗೀತ ವಿದ್ವಾಂಸನ ಸಂಬಂಧವಾಗಿ ವರ್ಣಿಸುತ್ತಿರುವಾಗ ಆತನೇ ಬಂದುಬಿಟ್ಟರೆ ಇನ್ನು ಆತನ ವಿಷಯವಾಗಿ ವರ್ಣಿಸುವ ಆವಶ್ಯಕತೆಯೇನಿದೆ? ಜೇನುಹುಳು ಎಲ್ಲಿಯವರೆಗೆ ಝೇಂಕರಿಸುತ್ತಿರುತ್ತದೆ? ಹೂವಿನ ಮೇಲೆ ಕೂರದವರೆಗೆ. ಆದರೆ, ಸಾಧಕ ಕರ್ಮತ್ಯಾಗ ಮಾಡಕೂಡದು. ಪೂಜೆ, ಜಪ, ಧ್ಯಾನ, ಸಂಧ್ಯಾವಂದನೆ, ತೀರ್ಥಯಾತ್ರೆ ಇವನ್ನೆಲ್ಲ ಮಾಡಲೇಬೇಕು.

"ಭಗವಂತನ ಸಾಕ್ಷಾತ್ಕಾರ ದೊರೆತನಂತರವೂ ಯಾರೆ ಆಗಲಿ ವಿಚಾರದಲ್ಲಿ ತೊಡಗಿರುವುದು ಕಂಡುಬಂದರೆ, ಅವರನ್ನು ಜೇನುಹುಳುವಿಗೆ

ಹೋಲಿಸಬಹುದು. ಜೇನುಹುಳು ಜೇನು ಕುಡಿಯುತ್ತಿರುವಾಗಲೂ ಒಮ್ಮೊಮ್ಮೆ 'ಗುಯ್ಞ್, ಗುಯ್ಞ್' ಅಂತ ಶಬ್ದ ಮಾಡುತ್ತದೆ."

ಸಂಗೀತ ವಿದ್ವಾಂಸ ಬಹಳ ಚೆನ್ನಾಗಿ ಹಾಡಿದ. ಪರಮಹಂಸರಿಗೆ ಬಹಳವಾಗಿ ಆನಂದ ಆಗಿಬಿಟ್ಟಿದೆ. ಆತನಿಗೆ ಹೇಳುತ್ತಿದಾರೆ: "ಯಾರಲ್ಲೇ ಆಗಲಿ ಒಂದು ದೊಡ್ಡ ಪ್ರತಿಭೆ—ಉದಾಹರಣೆಗೆ ಸಂಗೀತವಿದ್ಯೆ ಇರುವುದಾದರೆ, ಆತನಲ್ಲಿ ಭಗವಂತನ ಶಕ್ತಿ ವಿಶೇಷರೂಪದಿಂದ ವ್ಯಕ್ತವಾಗಿರುತ್ತದೆ.

ಸಂಗೀತ ವಿದ್ವಾಂಸ: "ಮಹಾಶಯರೆ, ಭಗವಂತನ ಸಾಕ್ಷಾತ್ಕಾರ ಪಡೆಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಭಕ್ತಿಯೇ ಮುಖ್ಯವಾದ್ದು. ಭಗವಂತನೇನೊ ಎಲ್ಲಾ ಭೂತಗಳಲ್ಲಿಯೂ ಇದಾನೆ. ಇದರಲ್ಲಿ ಸಂದೇಹವೇನಿಲ್ಲ. ಆದರೆ ಭಕ್ತ ಅನಿಸಿಕೊಳ್ಳೋನು ಯಾರು ಅಂತೀಯೊ? ಯಾರ ಮನಸ್ಸು ಸರ್ವದಾ ಭಗವಂತನಲ್ಲೇ ರತವಾಗಿದೆಯೊ ಆತ. ಅಹಂಕಾರ, ಅಭಿಮಾನ ಇರೋವರೆಗೆ ಮನಸ್ಸು ಹಾಗೆ ಮಾಡಲಾರದು. 'ಅಹಂ' ರೂಪದ ದಿಣ್ಣೆ ಮೇಲೆ ಭಗವಂತನ ಕೃಪಾರೂಪದ ನೀರು ಶೇಖರವಾಗದು. ಅದು ಕೆಳಕ್ಕೆ ಹರಿದುಬಂದುಬಿಡುತ್ತದೆ. ನಾನು ಕೇವಲ ಒಂದು ಯಂತ್ರ ಮಾತ್ರ.

(ಕೇದಾರಾದಿ ಭಕ್ತರಿಗೆ) "ಎಲ್ಲಾ ಮಾರ್ಗಗಳಿಂದಲೂ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು. ಎಲ್ಲಾ ಧರ್ಮಗಳೂ ಸತ್ಯವಾದುವೆ. ನಮ್ಮ ಮುಖ್ಯವಾದ ಕರ್ತವ್ಯ ಚಾವಣಿಗೆ ಹತ್ತಿಹೋಗೋದು. ಆ ಕಾರ್ಯವನ್ನ ಮೆಟ್ಟಲಸಾಲಿನಿಂದಾಗಲಿ, ಮರದ ಏಣಿಯಿಂದಾಗಲಿ, ಬಂಬಿನ ಏಣಿಯಿಂದಾಗಲಿ ಅಥವಾ ಒಂದು ಹಗ್ಗದಿಂದಾಗಲಿ ಸಾಧಿಸಬಹುದು. ಅಷ್ಟೇ ಅಲ್ಲ, ಕೇವಲ ಬಂಬಿನಿಂದಲೇ ಹತ್ತಿಬಿಡಬಹುದು.

"ನೀವು ಹೇಳಬಹುದು, ಪರರ ಧರ್ಮಗಳಲ್ಲಿ ಅನೇಕ ಕುಂದು ಕೊರತೆಗಳಿವೆ ಎಂಬುದಾಗಿ. ನನ್ನ ಉತ್ತರ: ಇದ್ದರೆ ತಾನೆ ಏನು? ಪ್ರತಿಯೊಂದು ಧರ್ಮದಲ್ಲೂ ಇದ್ದೇ ಇವೆ. ಎಲ್ಲರೂ ಭಾವಿಸುತ್ತಾರೆ ತಮ್ಮ ಗಡಿಯಾರ ಸರಿಯಾಗಿ ನಡೆದುಕೊಂಡುಹೋಗುತ್ತಿದೆ ಎಂಬುದಾಗಿ. ಅಂತರ್ಯದಲ್ಲಿ ವ್ಯಾಕುಲತೆ ಇದ್ದರೇ ಯಥೇಷ್ಟ. ಭಗವಂತನಲ್ಲಿ ಪ್ರೀತಿ ಇದ್ದರೇ ಸಾಕು. ಆತ ಅಂತರ್ಯಾಮಿ. ನಮ್ಮ ಅಂತರ್ಯದಲ್ಲಿರೋ ಪ್ರೀತಿ, ವ್ಯಾಕುಲತೆ ಏನೇನು ಎಂಬುದನ್ನು ಆತ ಅರಿತುಕೊಳ್ಳಬಲ್ಲ.

ಉದಾಹರಣೆಗೆ ಒಬ್ಬನಿಗೆ ಅನೇಕ ಮಕ್ಕಳು ಅಂತ ಇಟ್ಟುಕೊಳ್ಳಿ. ದೊಡ್ಡ ಮಕ್ಕಳು ಆತನನ್ನು ಸ್ಪಷ್ಟವಾಗಿ 'ಅಪ್ಪ', 'ಅಯ್ಯ' ಎಂಬುದಾಗಿ ಕರೆಯುತ್ತವೆ. ಆದರೆ ಎಳೆಯ ಮಕ್ಕಳು ಅತಿ ಹೆಚ್ಚೆಂದರೆ 'ಪಾ', 'ಯಾ' ಎಂಬುದಾಗಿ ಕರೆಯಬಲ್ಲವು. ಈ ರೀತಿಯಾಗಿ ಅಸ್ಪಷ್ಟವಾಗಿ ಮಾತಾಡೋ ಮಕ್ಕಳ ಮೇಲೆ ತಂದೆ ಕೋಪಿಸಿಕೊಳ್ಳುತ್ತಾನೇನು? ತಂದೆಗೆ ಗೊತ್ತಿದೆ ಅವೂ ತನ್ನನ್ನೇ ಕರೆಯುತ್ತಿವೆ, ಆದರೆ ಅವಕ್ಕೆ ತನ್ನ ಹೆಸರನ್ನು ಸ್ಪಷ್ಟವಾಗಿ ಉಚ್ಚರಿಸಲು ಸಾಧ್ಯವಾಗುತ್ತಿಲ್ಲ ಎಂಬುದಾಗಿ. ತಂದೆಗೆ ಎಲ್ಲಾ ಮಕ್ಕಳೂ ಒಂದೇ ಸಮ. ಹಾಗೇನೆ ಭಕ್ತರೂ ಆತನನ್ನೇ ಕರೆಯುತ್ತಾರೆ, ಆದರೆ ವಿವಿಧ ಹೆಸರುಗಳಿಂದ. ಎಲ್ಲರೂ ಆ ಒಬ್ಬನನ್ನೇ ಕರೆಯುತ್ತಿರುವುದು. ಭಗವಂತ ಒಬ್ಬನೇ, ಆದರೆ ಆತನಿಗೆ ಹೆಸರು ಮಾತ್ರ ಅನೇಕ."

೨೪ನೆ ಆಗಸ್ಟ್ ೧೮೮೨, ಶ್ರಾವಣ ಶುಕ್ಲ ದಶಮಿ, ಗುರುವಾರ.

ಮಾಸ್ಟರ್ ದಕ್ಷಿಣೇಶ್ವರಕ್ಕೆ ಬಂದಾಗ ಪರಮಹಂಸರು ಅವರ ಕೊಠಡಿಯಿಂದ ಉತ್ತರ ಪೂರ್ವಕ್ಕೆ ಹಬ್ಬಿರುವ ಉದ್ದ ವರಾಂಡದಲ್ಲಿ ಹಾಜರಾನೊಡನೆ ಮಾತುಕತೆಯಾಡುತ್ತ ನಿಂತಿರುವುದು ಆತನ ಕಣ್ಣಿಗೆ ಬಿತ್ತು. ಮಾಸ್ಟರು ಅವರನ್ನು ಸಮೀಪಿಸಿ ಅವರಿಗೆ ಸಾಷ್ಟಾಂಗಪ್ರಣಾಮ ಮಾಡಿದ.

ಶ್ರೀರಾಮಕೃಷ್ಣರು: "ಇನ್ನೊಂದೆರಡು ಸಲ ಈಶ್ವರಚಂದ್ರವಿದ್ಯಾಸಾಗರನನ್ನ ನೋಡಬೇಕು ಅಂತ ಅನಿಸುತ್ತಿದೆ. ಚಿತ್ರಗಾರ ಮೊದಲು ಸಾಮಾನ್ಯ ನಕ್ಷೆ ಬರೆದುಕೊಂಡು ಬಳಿಕ ಸಾವಕಾಶವಾಗಿ ರೂಪವನ್ನು ತಿದ್ದಿ ತಿದ್ದಿ ಬಣ್ಣ ಹಚ್ಚುತ್ತಾನೆ. ಮಣ್ಣಿನ ಪ್ರತಿಮೆ ಮಾಡೋನು ಜೇಡಿಮಣ್ಣಿನಿಂದ ಮೊದಲು ಪ್ರತಿಮೆ ಮಾಡಿಕೊಂಡು ಅದಕ್ಕೆ ಒರೆಮಣ್ಣು ಹಚ್ಚಿ ಬಳಿಕ ಸುಣ್ಣ ತುಂಬಿ ಕೊನೆಗೆ ಬಣ್ಣಬಳಿಯುತ್ತಾನೆ. ಈ ಕೆಲಸಗಳನ್ನೆಲ್ಲ ಅನುಕ್ರಮವಾಗಿ ಮಾಡಬೇಕು. ವಿದ್ಯಾಸಾಗರನಲ್ಲಿ ಎಲ್ಲಾ ಸಿದ್ಧವಾಗಿವೆ. ಆದರೆ ಎಲ್ಲೋ ಸ್ವಲ್ಪ ಮಣ್ಣು ಮುಚ್ಚಿಕೊಂಡಿದೆ. ಅನೇಕ ಸತ್ಕಾರ್ಯಗಳನ್ನು ಮಾಡುತ್ತಿದಾನೆ; ಆದರೆ ತನ್ನ ಅಂತರ್ಯದಲ್ಲಿ ಏನಿದೆ ಎಂಬುದು ಆತನಿಗೆ ಗೊತ್ತಿಲ್ಲ. ಅಂತರ್ಯದಲ್ಲಿರುವ ಚಿನ್ನವನ್ನ ಮಣ್ಣು ಮುಚ್ಚಿಕೊಂಡಿದೆ. ನಮ್ಮ ಪ್ರತಿಯೊಬ್ಬರ ಅಂತರ್ಯದಲ್ಲೂ ಭಗವಂತ ನಿದಾನೆ. ಅದು ಅರಿವಿಗೆ ಬಂತು ಎಂದರೆ, ಎಲ್ಲಾ ಕೆಲಸಕಾರ್ಯಗಳನ್ನು ಬಿಟ್ಟು ಆತನನ್ನು ಕರೆಯಬೇಕು ಅಂತ ನಮಗೆ ಇಚ್ಛೆಯಾಗಿಬಿಡುತ್ತದೆ."

ಪರಮಹಂಸರು ಈ ರೀತಿಯಾಗಿ ಮಾಸ್ಟರೊಡನೆ ಮಾತಾಡುತ್ತಿದಾರೆ—

ಕೆಲವು ವೇಳೆ ನಿಂತುಕೊಂಡು, ಇನ್ನು ಕೆಲವು ವೇಳೆ ನಡೆಯುತ್ತ ಆ ಉದ್ದ ವರಾಂಡದಲ್ಲಿ.

ಶ್ರೀರಾಮಕೃಷ್ಣರು: "ಅಂತರ್ಯದಲ್ಲಿ ಏನಿದೆ ಎಂಬುದನ್ನು ಅರಿತ ಕೊಳ್ಳಬೇಕಾದರೆ ಸ್ವಲ್ಪ ಸಾಧನೆ ಮಾಡಬೇಕು."

ಮಾಸ್ಟರ್: "ಇಡೀ ಜೀವನದಲ್ಲೆಲ್ಲಾ ಸಾಧನೆ ಮಾಡಿಕೊಂಡು ಹೋಗುತ್ತಿರಬೇಕೇ?"

ಶ್ರೀರಾಮಕೃಷ್ಣರು: "ಇಲ್ಲ. ಮೊದಲು ಸ್ವಲ್ಪ ಕಾಲ ಸೊಂಟ ಕಟ್ಟಬೇಕಾಗುತ್ತದೆ. ಬಳಿಕ ಅಷ್ಟು ಶ್ರಮ ತೆಗೆದುಕೊಳ್ಳಬೇಕಾಗಿರೋದಿಲ್ಲ. ಎಲ್ಲಿಯವರೆಗೆ ದೋಣಿ ಅಲೆ, ಬಿರುಮಳೆ, ಬಿರುಗಾಳಿ ಇವುಗಳ ಮೂಲಕ ಅಥವಾ ನದಿಯ ತಿರುವಿನ ಮೂಲಕ ಹಾದುಹೋಗಬೇಕಾಗಿರುವುದೊ ಅಲ್ಲಿಯವರೆಗೆ ದೋಣಿ ನಡೆಸುವವ ಎದ್ದುನಿಂತು ಚುಕ್ಕಾಣಿ ಹಲಗೆಯನ್ನು ಬಿಗಿಯಾಗಿ ಹಿಡಿದುಕೊಂಡಿರಬೇಕಾಗುತ್ತದೆ. ಆದರೆ ಅವನ್ನು ದಾಟಿಯಾದ ನಂತರ ಅಷ್ಟು ಶ್ರಮ ತೆಗೆದುಕೊಳ್ಳಬೇಕಾಗಿರೋದಿಲ್ಲ. ಅದು ತಿರುವನ್ನು ಹಾದನಂತರ ಅನುಕೂಲವಾದ ಗಾಳಿ ಬೀಸಲಾರಂಭಿಸಿದರೆ ಚುಕ್ಕಾಣಿ ಹಲಗೆಯನ್ನ ಸುಮ್ಮನೆ ಕೈಯಲ್ಲಿ ಹಿಡಿದುಕೊಂಡು ಹಾಯಾಗಿ ಕುಳಿತು ಕೊಳ್ಳುತ್ತಾನೆ. ಬಳಿಕ ಪಟ ಕಟ್ಟಲು ವ್ಯವಸ್ಥೆಮಾಡಿ ತಂಬಾಕು ಸೇದಲು ಸಿದ್ಧನಾಗುತ್ತಾನೆ. ಹಾಗೇನೆ ಸಾಧಕ ಕಾಮಕಾಂಚನಗಳ ಬಿರುಗಾಳಿ, ಬಿರುಮಳೆ ಇವನ್ನೆಲ್ಲಾ ದಾಟಬಿಟ್ಟ ಅಂದರೆ ಆಗ ಆತನಿಗೆ ಶಾಂತಿ.

"ಕೆಲಕೆಲವರು ಯೋಗಿಯ ಲಕ್ಷಣಗಳಿಂದ ಜನ್ಮತಳೆಯುತ್ತಾರೆ; ಆದರೆ ಅವರೂ ಎಚ್ಚರಿಕೆಯಿಂದಿರಬೇಕು. ಕಾಮಕಾಂಚನವೇ ಯೋಗದ ಪ್ರತಿಬಂಧಕ. ಅದು ಅವರನ್ನು ಯೋಗಭ್ರಷ್ಟರನ್ನಾಗಿಮಾಡಿ ಸಂಸಾರಕ್ಕೆ ಎಳೆದುಬಿಡುತ್ತದೆ. ಬಹುಶಃ ಭೋಗಾಸಕ್ತಿ ಅವರಲ್ಲಿ ಸ್ವಲ್ಪ ಇದ್ದಿರಬೇಕು. ಅದು ಮುಗಿಯಿತು ಎಂದರೆ ಮತ್ತೆ ಭಗವಂತನ ಕಡೆಗೆ ಹೊರಟುಹೋಗು ತ್ತಾರೆ. ಮತ್ತೆ ಅವರಿಗೆ ಹಿಂದಿನ ಯೋಗಾವಸ್ಥೆ ಬಂದುಬಿಡುತ್ತದೆ.

"ಮೀನು ಹಿಡಿಯೋಕೆ 'ಸಟ್ಕ-ಕಲ್' ಎಂಬ ಹೆಸರಿನ ಒಂದು ಸಲಕರಣೆ ಇದೆ ನೋಡಿದೀಯಾ?"

ಮಾಸ್ಟರ್: "ಇಲ್ಲ, ನೋಡಿಲ್ಲ."

ಶ್ರೀರಾಮಕೃಷ್ಣರು: "ನಮ್ಮ ಊರಿನ ಕಡೆ ಅದನ್ನ ಉಪಯೋಗಿ ಸುತ್ತಾರೆ. ಒಂದು ಹಸಿ ಗಳು ತೆಗೆದುಕೊಂಡು ಅದರ ಒಂದು ತುದಿಯನ್ನ

ನೆಲಕ್ಕೆ ಹೂಳುತ್ತಾರೆ, ಇನ್ನೊಂದು ತುದಿಯನ್ನ ಬಗ್ಗಿಸಿ ಅದನ್ನು ನೆಪ ಮಾತ್ರ ಹಿಡಿದುಕೊಳ್ಳೋ ರೀತಿಯಲ್ಲಿ ಒಂದು ವ್ಯವಸ್ಥೆ ಮಾಡುತ್ತಾರೆ. ಆ ತುದಿಗೆ ಒಂದು ದಾರ ಕಟ್ಟಿ ಅದನ್ನು ನೀರಿನ ಮೇಲೆ ಇಳಿಬಿಡುತ್ತಾರೆ. ದಾರದ ಕೊನೆಗೆ ಎರೆಹುಳು ಸಿಕ್ಕಿಸಿದ ಗಾಳ ಕಟ್ಟುತ್ತಾರೆ. ಮೀನು ಗಾಳ ನುಂಗಿದೊಡನೆಯೇ ಗಳು ಥಟ್ಟನೆ ಮೇಲಕ್ಕೆದ್ದು ನೆಟ್ಟಗೆ ನಿಂತುಕೊಂಡು ಬಿಡುತ್ತದೆ.

"ಮತ್ತೆ ಉದಾಹರಣೆಗೆ ತೂಗೋ ತಕ್ಕಡಿ ತೆಗೆದುಕೊ. ಒಂದು ತಟ್ಟೆಗೆ ಭಾರ ಹಾಕಿದರೆ ಕೆಳಗಿನ ಮತ್ತು ಮೇಲಿನ ಮುಳ್ಳು ಒಂದೇ ಮುಖವಾಗಿರೋದಿಲ್ಲ. ಕೆಳಗಿನ ಮುಳ್ಳೇ ಮನಸ್ಸು—ಮೇಲಿನ ಮುಳ್ಳೇ ಭಗವಂತ. ಎರಡು ಮುಳ್ಳೂ ಒಂದೇ ಮುಖವಾಗುವುದಕ್ಕೇ ಯೋಗ ಅಂತ ಹೆಸರು.

"ಮನಸ್ಸು ಸ್ಥಿರವಾಗದ ಹೊರತು ಯೋಗಾವಸ್ಥೆ ಬಾರದು. ಸಂಸಾರದ ಗಾಳಿ ಮನಸ್ಸೆಂಬ ದೀಪವನ್ನು ಸರ್ವದಾ ಅಲ್ಲಾಡಿಸುತ್ತಿರುತ್ತದೆ. ಆ ದೀಪ ಸಂಪೂರ್ಣವಾಗಿ ಅಲ್ಲಾಡದೆ ಇತ್ತು ಎಂದರೆ ಆಗ ಅದಕ್ಕೆ ಯೋಗಾವಸ್ಥೆ ಬಂದುಬಿಡುತ್ತದೆ.

"ಕಾಮಕಾಂಚನವೇ ಯೋಗದ ಪ್ರತಿಬಂಧಕ. ಯಾವಾಗಲೂ ವಸ್ತುವಿಚಾರದಲ್ಲಿ ತೊಡಗಿರಬೇಕು. ಹೆಂಗಸಿನ ಶರೀರದಲ್ಲಿ ಏನು ತಾನೆ ಇದೆ—ರಕ್ತ, ಮಾಂಸ, ಕೊಬ್ಬು, ಕರುಳು, ಹೊಟ್ಟೆ, ಕ್ರಿಮಿ, ಮೂತ್ರ, ವಿಷ್ಟ ಇತ್ಯಾದಿ. ಇಂಥ ಶರೀರದ ಮೇಲೆ ಯಾಕಪ್ಪ ಪ್ರೀತಿಯಿಡಬೇಕು?

"ನಾನು ರಾಜಸಿಕ ಭಾವ ಆರೋಪಿಸಿಕೊಳುತ್ತಿದ್ದೆ—ತ್ಯಾಗಮಾಡ ಲೋಸುಗ. ಒಮ್ಮೆ ಇಚ್ಛೆಬಂತು ಚಿನ್ನದ ಜರಿ ಹಾಕಿರೋ ಪೋಷಾಕು ಉಡಬೇಕು, ಬೆರಳಿಗೆ ಉಂಗುರ ಹಾಕ್ಕೋಬೇಕು, ಉದ್ದವಾದ ಕೊಳವೆ ಯುಳ್ಳ ಗುಡುಗುಡಿಯಿಂದ ತಂಬಾಕು ಸೇದಬೇಕು ಎಂಬುದಾಗಿ. ಮಥುರಬಾಬು ಎಲ್ಲವನ್ನೂ ತಂದೊದಗಿಸಿದ. ಚಿನ್ನದ ಜರಿ ಹಾಕಿರೋ ಪೋಷಾಕು ಉಟ್ಟುಕೊಂಡೆ. ಸ್ವಲ್ಪ ಹೊತ್ತಿನ ಮೇಲೆ ಮನಸ್ಸಿಗೆ ಹೇಳಿದೆ: 'ಹೇ ಮನಸ್ಸೆ! ಚಿನ್ನದ ಜರಿಯ ಪೋಷಾಕು ಎಂಬುದು ಇದೇ.' ಬಳಿಕ ಎಲ್ಲವನ್ನೂ ಬಿಚ್ಚಿ ಒಂದು ಕಡೆಗೆ ಬಿಸಾಡಿಬಿಟ್ಟೆ. ಮತ್ತೆ ಅದರ ಮೇಲೆ ಇಚ್ಛೆಯಾಗಲಿಲ್ಲ. ಮತ್ತೆ ನಾನು ಮನಸ್ಸಿಗೆ ಹೇಳಿದೆ: 'ಮನಸ್ಸೆ! ಇದಕ್ಕೇ ಶಾಲು ಅಂತ ಹೆಸರು, ಇದಕ್ಕೇ ಉಂಗುರ ಅಂತ ಹೆಸರು, ಉದ್ದವಾದ

ಕೊಳವೆಯಿರೋ ಗುಡುಗುಡಿಯಿಂದ ತಂಬಾಕು ಸೇದುವುದು ಇದೇನೆ.' ಬಳಿಕ ಎಲ್ಲವನ್ನೂ ಬಿಸಾಡಿಬಿಟ್ಟೆ; ಮತ್ತೆ ಅವು ಬೇಕೆಂದು ಮನಸ್ಸು ಕೇಳಲಿಲ್ಲ."

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಕೊಠಡಿಯ ಆಗ್ನೇಯ ವರಾಂಡದಲ್ಲಿ ಬಾಗಿಲ ಹತ್ತಿರ ಪರಮಹಂಸರು ಮಾಸ್ಟರೊಡನೆ ಏಕಾಂತದಲ್ಲಿ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಯೋಗಿಗಳ ಮನಸ್ಸು ಸರ್ವದಾ ಭಗವಂತನ ಅಡಿದಾವರೆಗಳಲ್ಲಿ ನೆಲಸಿರುತ್ತದೆ—ಸರ್ವದಾ ಆತ್ಮಸ್ಥವಾಗಿ ರುತ್ತದೆ. ಮುಖ ನೋಡಿದರೇ ಗೊತ್ತಾಗಿಬಿಡುತ್ತದೆ. ಕಣ್ಣೇನೊ ತೆರೆದಿ ರುತ್ತದೆ, ದೃಷ್ಟಿಮಾತ್ರ ಬಹಿರ್ಜಗತ್ತಿನ ಕಡೆಗಿರೋಲ್ಲ. ಹಕ್ಕಿ ಕಾವಿಗೆ ಕುಳಿತಿರುವಾಗ ಅದರ ಇಡೀ ಮನಸ್ಸು ಮೊಟ್ಟೆ ಮೇಲೆ ನೆಲಸಿ ಅದರ ಕಣ್ಣು ಮಾತ್ರ ಸುಮ್ಮನೆ ಮೇಲಕ್ಕೆ ನೋಡುತ್ತಿರೋ ಹಾಗೆ ಕಾಣಿಸುತ್ತದೆ. ಒಳ್ಳೆಯದು, ಹಕ್ಕಿ ಕಾವಿಗೆ ಕುಳಿತಿರೋದರ ಒಂದು ಚಿತ್ರ ತಂದು ತೋರಿ ಸುತ್ತೀಯಾ?"

ಮಾಸ್ಟರ್: "ಆಗಲಿ, ಪ್ರಯತ್ನಮಾಡಿ ತರುತ್ತೇನೆ."

ಸಾಯಂಕಾಲವಾಗಿದೆ. ಕಾಳೀದೇವಾಲಯದಲ್ಲಿ, ರಾಧಾಕಾಂತ ದೇವಾಲಯದಲ್ಲಿ, ಉಳಿದ ಕೊಠಡಿಗಳಲ್ಲಿಯೂ ದೀಪ ಹಚ್ಚಿದಾರೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಜಗನ್ಮಾತೆಯ ಧ್ಯಾನ ಮಾಡುತ್ತಿದಾರೆ. ಈಗ ಭಗವಂತನ ನಾಮಗಳನ್ನು ಹೇಳುತ್ತಿದಾರೆ. ಕೊಠಡಿಗೆ ಧೂಪಹಾಕಿ ದೀಪ ಹಚ್ಚಲಾಯಿತು. ಸ್ವಲ್ಪ ಹೊತ್ತಿನಲ್ಲೆ ಶಂಖ, ಜಾಗಟೆ, ಗಂಟೆಗಳ ಶಬ್ದ ಕೇಳಿಬರಲಾರಂಭಿಸಿತು. ಕಾಳೀದೇವಾ ಲಯದಲ್ಲಿ ಮಂಗಳಾರತಿ ನಡೆಯುತ್ತಿದೆ. ಚಂದ್ರನ ಬೆಳಕು ನಾಲ್ಕು ಕಡೆಗೂ ಹಬ್ಬಿದೆ. ಪರಮಹಂಸರು ಮತ್ತೆ ಈಗ ಮಾಸ್ಟರೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನಿಷ್ಕಾಮಕರ್ಮ ಮಾಡುತ್ತಿರು. ಈಶ್ವರ-ಚಂದ್ರವಿದ್ಯಾಸಾಗರ ಮಾಡುತ್ತಿರೋ ಕೆಲಸಗಳೆಲ್ಲ ಬಹಳ ಒಳ್ಳೆಯವೆ. ನಿಷ್ಕಾಮಕರ್ಮ ಮಾಡಲು ಸತತ ಪ್ರಯತ್ನಮಾಡುತ್ತಿರು."

ಮಾಸ್ಟರ್: "ಆಗಲಿ. ಒಳ್ಳೇದು, ಕರ್ಮಗಳ ಕಡೆ ಮನಸ್ಸು ಕೊಡುತ್ತಾ ಇದ್ದರೆ ಭಗವಂತನ ಸಾಕ್ಷಾತ್ಕಾರ ಪಡೆಯಲಾಗುವುದೆ? ರಾಮ

ಕಾಮ ಇಬ್ಬರೂ ಒಟ್ಟಿಗೆ ಇರಲಾಗುವುದೆ? ಅಂದು ಹಿಂದಿಯಲ್ಲಿ ಒಂದು ದ್ವಿಪದಿ ಓದಿದೆ: 'ರಾಮನಿರುವ ಕಡೆ ಕಾಮನಿಲ್ಲ; ಕಾಮನಿರುವ ಕಡೆ ರಾಮನಿಲ್ಲ.'"

ಶ್ರೀರಾಮಕೃಷ್ಣರು: "ಒಬ್ಬರೂ ತಪ್ಪದೆ ಎಲ್ಲರೂ ಕರ್ಮ ಮಾಡುತ್ತಲೇ ಇದಾರೆ. ಭಗವಂತನ ನಾಮಗುಣಕೀರ್ತನೆ ಮಾಡೋದೂ ಕರ್ಮವೆ. ಸೋಽಹಮ್‌ವಾದಿಗಳ 'ನಾನೇ ಅವನು' ಎಂಬುದರ ಮೇಲಿನ ಧ್ಯಾನವೂ ಕರ್ಮವೆ. ಉಸಿರಾಡುವುದೂ ಕರ್ಮವೆ. ಕರ್ಮವನ್ನ ತ್ಯಾಗಮಾಡೋ ಹಾಗೇ ಇಲ್ಲ. ಆದ್ದರಿಂದ ಕರ್ಮ ಮಾಡು, ಆದರೆ ಫಲವನ್ನ ಭಗವಂತನಿಗೆ ಸಮರ್ಪಿಸಿಬಿಡು."

ಮಾಸ್ಟರ್: "ಒಳ್ಳೇದು, ಹೆಚ್ಚಾಗಿ ಹಣ ಸಂಪಾದಿಸಲು ನಾನು ಪ್ರಯತ್ನಿಸಬಹುದೆ?"

ಶ್ರೀರಾಮಕೃಷ್ಣರು: "ವಿದ್ಯಾಸಂಸಾರದ ಸಲುವಾಗಿ ಬೇಕಾದರೆ ಹಾಗೆ ಮಾಡಬಹುದು. ಹೆಚ್ಚಾಗಿ ಧನಾರ್ಜನೆಮಾಡು, ಆದರೆ ಒಳ್ಳೆಯ ರೀತಿಯಿಂದ. ಜೀವನದ ಉದ್ದೇಶ ಧನಾರ್ಜನೆಯಲ್ಲ, ಭಗವಂತನ ಸೇವೆ. ಧನಾರ್ಜನೆಯಿಂದ ಭಗವಂತನ ಸೇವೆ ನಡೆಯೋದಾದರೆ, ಅದು ದೋಷವಾದ್ದೇನಲ್ಲ."

ಮಾಸ್ಟರ್: "ಹೆಂಡತಿಮಕ್ಕಳನ್ನ ಎಲ್ಲಿಯವರೆಗೆ ಸಾಕಿಸಲಹಬೇಕು?"

ಶ್ರೀರಾಮಕೃಷ್ಣರು: "ಅವರ ಅನ್ನಬಟ್ಟೆಗೆ ತೊಂದರೆಯಾಗುತ್ತಿರೋವರೆಗೆ. ಆದರೆ ಮಕ್ಕಳು ತಮ್ಮ ಕಾಲಮೇಲೆ ತಾವೇ ನಿಂತುಕೊಳ್ಳಲು ಸಮರ್ಥರಾದರು ಎಂದರೆ ಮತ್ತೆ ಅವರ ಹೊರೆಯನ್ನು ಹೊತ್ತುಕೊಳ್ಳುವ ಆವಶ್ಯಕತೆಯೇನಿರೋದಿಲ್ಲ. ಹಕ್ಕಿಯ ಮರಿ ಮೇವು ಹುಡುಕಲು ಕಲಿತುಕೊಂಡಬಳಿಕ, ಅದೇನಾದರು ತಾಯ ಹತ್ತಿರಕ್ಕೆ ಗುಟುಕಿಗಾಗಿ ಬಂತು ಎಂದರೆ ತಾಯಿ ಹಕ್ಕಿ ಅದನ್ನು ಕುಟುಕಿ ಓಡಿಸಿಬಿಡುತ್ತದೆ."

ಮಾಸ್ಟರ್: "ಎಲ್ಲಿಯುವರೆಗೆ ಕರ್ಮ ಮಾಡುತ್ತಿರಬೇಕು?"

ಶ್ರೀರಾಮಕೃಷ್ಣರು: "ಫಲ ಬಿಟ್ಟೊಡನೆಯೇ ಹೂವು ಉದುರಿಹೋಗುತ್ತದೆ. ಭಗವಂತನ ಸಾಕ್ಷಾತ್ಕಾರವಾದನಂತರ ಕರ್ಮ ಮಾಡುವುದರ ಆವಶ್ಯಕತೆಯೇನಿರೋದಿಲ್ಲ; ಮಾಡಲು ಇಚ್ಛೆಯೂ ಆಗೋದಿಲ್ಲ.

"ಕುಡುಕ ಹೆಚ್ಚಾಗಿ ಮದ್ಯ ಕುಡಿದ ಅಂದರೆ ಆತ ಪ್ರಜ್ಞೆ ಇಟ್ಟು ಕೊಂಡಿರಲಾಗೋದಿಲ್ಲ. ಎಲ್ಲೊ ಒಂದೆರಡಾಣೆಯಷ್ಟು ಮಾತ್ರ ಕುಡಿದರೆ ತನ್ನ ಕೆಲಸಕಾರ್ಯಗಳನ್ನು ಮಾಡಿಕೊಂಡುಹೋಗಬಲ್ಲ. ಭಗವಂತನ ಕಡೆಗೆ ನಾವು ಮುಂದುವರಿದಷ್ಟೂ ಆತ ನಮ್ಮ ಕೆಲಸಕಾರ್ಯಗಳನ್ನು ಕಡಮೆಮಾಡಿಕೊಟ್ಟುಬಿಡುತ್ತಾನೆ. ಹೆದರಿಕೊಳ್ಳಬೇಡ.

"ಸದ್ಯ ಮಾಡಬೇಕಾಗಿರೋ ಕೆಲಸಗಳನ್ನು ಮಾಡಿಮುಗಿಸಿಬಿಡು. ಬಳಿಕ ನಿಶ್ಚಿಂತೆಯಿಂದ ಇರಬಲ್ಲೆ. ಗೃಹಿಣಿ ಅಡಿಗೆ-ಗಿಡಿಗೆ ಕೆಲಸಗಳನ್ನೆಲ್ಲಾ ಮಾಡಿಮುಗಿಸಿ ಸ್ನಾನಕ್ಕೆ ಹೋದಳು ಎಂದರೆ ಮತ್ತೆ ಕರೆದರೆ ಹಿಂದಿರುಗಿ ಬರೋದಿಲ್ಲ—ಗಂಟಲು ಕಿತ್ತುಕೊಂಡರೂ ಹಿಂದಿರುಗಿಬರೋದಿಲ್ಲ."

ಮಾಸ್ಟರ್: "ಭಗವಂತನ ಸಾಕ್ಷಾತ್ಕಾರ ಅಂದರೆ ಏನು? ಭಗವಂತನ ದರ್ಶನ ಎಂಬುದು ಏನದು? ಅದನ್ನು ಪಡೆದುಕೊಳ್ಳುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ವೈಷ್ಣವರು ಹೇಳುತ್ತಾರೆ, ಮುಮುಕ್ಷುಗಳಲ್ಲಿ, ಮತ್ತು ಮುಕ್ತರಲ್ಲಿ ವಿವಿಧ ಅಂತಸ್ತಿನವರು ಇದಾರೆ. ಅವರೇ ಪ್ರವರ್ತಕರು, ಸಾಧಕರು, ಸಿದ್ಧರು, ಸಿದ್ಧರ ಸಿದ್ಧರು. ಯಾರು ಈಗ ತಾನೆ ಮಾರ್ಗಕ್ಕೆ ಇಳಿದಿದಾನೊ, ಆತನೇ ಪ್ರವರ್ತಕ. ಯಾರು ಸಾಧನೆ ಭಜನೆ ಮಾಡುತ್ತಿದಾನೊ—ಪೂಜೆ, ಜಪ, ಧ್ಯಾನ, ಭಗವನ್ನಾಮಗುಣಕೀರ್ತನೆ ಮಾಡುತ್ತಿದಾನೊ, ಆತನೇ ಸಾಧಕ. ಯಾರು ಭಗವಂತನಿದಾನೆ ಎಂಬುದನ್ನು ತನ್ನ ಸ್ವಂತ ಅನುಭವದಿಂದ ಅರಿತುಕೊಂಡಿದಾನೊ, ಆತನೇ ಸಿದ್ಧ. ಇದನ್ನ ವಿವರಿಸಲು ವೇದಾಂತದಲ್ಲಿ ಒಂದು ಉಪಮೆ ಇದೆ. ಮನೆಯ ಯಜಮಾನ ಕತ್ತಲೆ ಕೊಠಡಿಯಲ್ಲಿ ಮಲಗಿದಾನೆ. ಒಬ್ಬ ಆತನನ್ನು ಕತ್ತಲೆಯಲ್ಲೇ ತಡವರಿಸಿಕೊಂಡು ತಡವರಿಸಿಕೊಂಡು ಹುಡುಕುತ್ತಿದಾನೆ. ಒಂದು ಸೋಫಾಕ್ಕೆ ಕೈ ಹಾಕಿ ಹೇಳುತ್ತಾನೆ: 'ಇದಲ್ಲ.' ಕಿಟಕಿಗೆ ಕೈ ಹಾಕಿ ಹೇಳುತ್ತಾನೆ: 'ಇದಲ್ಲ.' ಬಾಗಿಲಿಗೆ ಕೈ ಹಾಕಿ ಹೇಳುತ್ತಾನೆ: 'ಇದಲ್ಲ.' 'ನೇತಿ, ನೇತಿ, ನೇತಿ' ಅಂತಲೇ ಮುಂದುವರಿಯುತ್ತಿದಾನೆ. ಕೊನೆಗೆ ಯಜಮಾನನ ಶರೀರ ಕೈಗೆ ತಾಗುತ್ತದೆ. ಆಗ ಹೇಳುತ್ತಾನೆ: 'ಓ, ಇಲ್ಲೆ ಯಜಮಾನರು!' ಎಂದರೆ ಯಜಮಾನ ಇರುವುದರ ಅನುಭವ ಆತನಿಗೆ ಬಂತು. ಯಜಮಾನನೇನೊ ಆತನ ಕೈಗೆ ಸಿಕ್ಕಿದ, ಆದರೆ ಆತನನ್ನು ವಿಶೇಷವಾಗಿ ಇನ್ನೂ ಅರಿತಿಲ್ಲ.

“ಇನ್ನೊಂದು ಅಂತಸ್ತಿನವರಿದಾರೆ, ಅವರಿಗೆ ‘ಸಿದ್ಧರ ಸಿದ್ಧರು’ ಎಂಬುದಾಗಿ ಹೆಸರು. ಯಜಮಾನನೊಡನೆ ವಿಶೇಷ ರೀತಿಯಾಗಿ ಮಾತು ಕತೆ ಆಡಿದರೆ, ಭಗವಂತನೊಡನೆ ವಿಶೇಷ ರೀತಿಯಾಗಿ ಭಕ್ತಿ ಪ್ರೇಮ ಇವು ಗಳಿಂದ ಮಾತುಕತೆ ಆಡಿದರೆ, ಆಗ ಅದು ಪ್ರತ್ಯೇಕ ಅನುಭವ ಆಗಿ ಬಿಡುತ್ತದೆ. ಸಿದ್ಧ, ಭಗವಂತನ ಸಾಕ್ಷಾತ್ಕಾರವನ್ನೇನೊ ಮಾಡಿಕೊಂಡಿ ದಾನೆ, ಆದರೆ ‘ಸಿದ್ಧರ ಸಿದ್ಧ’ ಭಗವಂತನೊಡನೆ ವಿಶೇಷ ರೀತಿಯಾಗಿ ಮಾತುಕತೆ ಆಡಿದಾನೆ.

“ಆದರೆ ಆತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಯಾವು ದಾದರೂ ಒಂದು ಭಾವವನ್ನು ಆಶ್ರಯಿಸಿಕೊಳ್ಳಬೇಕಾಗುತ್ತದೆ—ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಇವುಗಳಲ್ಲಿ ಯಾವುದಾದರೂ ಒಂದನ್ನ.

“ಶಾಂತ—ಋಷಿಗಳು ಅನುಸರಿಸಿದುದು. ಅವರಿಗೆ ಭಗವಂತನ ಹೊರತು ಬೇರೆ ಯಾವುದರ ಮೇಲಿನ ಕಾಮನೆಯೂ ಇರಲಿಲ್ಲ. ಇದು ಸತಿ, ಪತಿಯ ಮೇಲೆ ಇಟ್ಟಿರೋ ನಿಷ್ಠೆಯ ಹಾಗೆ. ಆಕೆಗೆ ಗೊತ್ತಿದೆ ತನ್ನ ಪತಿ ಕಂದರ್ಪನೇ ಎಂಬುದಾಗಿ.

“ದಾಸ್ಯ—ಹನುಮಂತನದು. ರಾಮನ ಕೆಲಸ ಮಾಡುವಾಗ ಸಿಂಹಪರಾಕ್ರಮಿಯಾಗಿರುತ್ತಿದ್ದ. ಸತಿಯಲ್ಲೂ ಈ ಭಾವ ಇರುತ್ತದೆ— ಪ್ರಾಣಾಪಾಯವನ್ನೂ ಲೆಕ್ಕಿಸದೆ ಪತಿಸೇವೆ ಮಾಡುತ್ತಾಳೆ. ತಾಯಲ್ಲೂ ಇದು ಅಲ್ಪಸ್ವಲ್ಪ ಇರುತ್ತದೆ—ಯಶೋದೆಯಲ್ಲಿ ಇದ್ದ ಹಾಗೆ.

“ಸಖ್ಯ—ಸ್ನೇಹಭಾವ. ಸ್ನೇಹಿತರು ಒಬ್ಬರನ್ನೊಬ್ಬರು ಆದರಿ ಸುತ್ತಾರೆ: ‘ಬಾ, ಹತ್ತಿರ ಬಂದು ಕುಳಿತುಕೊ’ ಎಂಬುದಾಗಿ. ಶ್ರೀದಾಮನೇ ಮೊದಲಾದ ಸ್ನೇಹಿತರು ಕೆಲವು ವೇಳೆ ತಾವು ಎಂಜಲು ಮಾಡಿದ ಹಣ್ಣುಗಳನ್ನು ಕೃಷ್ಣನಿಗೆ ತಿನ್ನಿಸುತ್ತಿದ್ದರು, ಇನ್ನು ಕೆಲವು ವೇಳೆ ಆತನ ಹೆಗಲ ಮೇಲೂ ಹತ್ತಿಬಿಡುತ್ತಿದ್ದರು.

“ವಾತ್ಸಲ್ಯ—ಯಶೋದೆಯದು. ಸತಿಯಲ್ಲೂ ಇದು ಸ್ವಲ್ಪ ಇರುತ್ತೆ. ಆಕೆ ಪತಿಗೆ ತನ್ನ ಪ್ರಾಣಕೊಡಲೂ ಸಿದ್ಧಳಾಗಿರುತ್ತಾಳೆ. ಮಗು ಗಂಟಲ ವರೆಗೂ ತಿಂದರೆ ಆಗ ತಾಯಿ ಸಂತುಷ್ಟಳಾಗುತ್ತಾಳೆ. ಯಶೋದೆ ಕೃಷ್ಣನಿಗೆ ಬೆಣ್ಣೆ ತಿನ್ನಿಸಲೋಸುಗ ಅದನ್ನು ಕೈಯಲ್ಲಿ ಹಿಡಿದುಕೊಂಡು ಆತನೊಡನೆ ಸುತ್ತಾಡುತ್ತಿದ್ದಳು.

"ಮಧುರ—ಶ್ರೀಮತಿಯದು (ರಾಧೆಯದು). ಸತಿಯಲ್ಲೂ ಈ ಭಾವ ಇದೆ. ಇದರಲ್ಲಿ ಉಳಿದ ನಾಲ್ಕೂ ಅಡಕವಾಗಿವೆ."

ಮಾಸ್ಟರ್: "ಭಗವಂತನ ದರ್ಶನ ಈ ಕಣ್ಣುಗಳಿಂದ ಸಾಧ್ಯವೇ?"

ಶ್ರೀರಾಮಕೃಷ್ಣರು: "ಆತನನ್ನು ಈ ಸ್ಥೂಲ ಕಣ್ಣುಗಳಿಂದ ನೋಡಲಾಗೋದಿಲ್ಲ. ಸಾಧನೆ ಮುಂದುವರಿಸುತ್ತ ಮುಂದುವರಿಸುತ್ತ ಸಾಧಕನಿಗೆ ಪ್ರೇಮದ ಶರೀರ ಉಂಟಾಗುತ್ತದೆ. ಅದಕ್ಕೆ ಪ್ರೇಮದ ಕಣ್ಣು, ಪ್ರೇಮದ ಕಿವಿ ಇರುತ್ತವೆ. ಆ ಕಣ್ಣುಗಳಿಂದ ಆತ ನೋಡುತ್ತಾನೆ. ಆ ಕಿವಿಗಳಿಂದ ಭಗವಂತನ ವಾಣಿಯನ್ನು ಕೇಳುತ್ತಾನೆ. ಅದಕ್ಕೆ ಪ್ರೇಮದ ಜನನೇಂದ್ರಿಯವೂ ಇರುತ್ತದೆ."

ಇದನ್ನು ಕೇಳಿ ಮಾಸ್ಟರ್ "ಹೊ, ಹೊ, ಹೊ!" ಅಂತ ನಗಲಾರಂಭಿಸಿದ. ಪರಮಹಂಸರು ಕೋಪಗೊಳ್ಳದೆ ಮಾತು ಮುಂದುವರಿಸುತ್ತಿದಾರೆ: "ಆ ಪ್ರೇಮ ಶರೀರದಿಂದ ಪರಮಾತ್ಮನೊಡನೆ ವಿಲಾಸಿಸಬಹುದು."

ಈಗ ಮಾಸ್ಟರ್ ಗಂಭೀರಮುದ್ರೆ ತಾಳಿದಾನೆ.

ಶ್ರೀರಾಮಕೃಷ್ಣರು: "ಭಗವಂತನಲ್ಲಿ ಪ್ರೀತಿ ಬಹಳವಾಗಿ ಉಂಟಾಗದವರೆಗೆ, ಇದು ಸಾಧ್ಯವಿಲ್ಲ. ಬಹಳವಾಗಿ ಪ್ರೀತಿ ಉಂಟಾಯಿತು ಎಂದರೆ, ಎಲ್ಲವೂ ಭಗವನ್ಮಯವಾಗಿ ಕಾಣುತ್ತದೆ. ಇದು ಕಾಮಾಲೆ ರೋಗ ಅಧಿಕವಾದರೆ ಎಲ್ಲವೂ ಹಳದಿಯಾಗಿ ಕಾಣೋ ಹಾಗೆ. ಆಗ ಅನುಭವ ಆಗುತ್ತದೆ, 'ನಾನೇ ಅವನು' ಎಂಬುದಾಗಿ.

"ಕುಡುಕನಿಗೆ ಅಧಿಕವಾಗಿ ನಶಾ ಹತ್ತಿಬಿಟ್ಟಿತು ಎಂದರೆ ಆತ ಹೇಳುತ್ತಾನೆ: 'ನಾನೇ ಕಾಳಿ!' ಗೋಪಿಯರು ಪ್ರೇಮೋನ್ಮತ್ತರಾಗಿ ಹೇಳಲಾರಂಭಿಸಿದರು: 'ನಾನೇ ಕೃಷ್ಣ! ನಾನೇ ಕೃಷ್ಣ!'

"ಹಗಲೂ ಇರುಳೂ ಯಾರು ಭಗವಂತನ ಧ್ಯಾನದಲ್ಲೇ ಇರುತ್ತಾನೊ ಆತ ಭಗವಂತನನ್ನು ಎಲ್ಲೆಲ್ಲೂ ನೋಡುತ್ತಾನೆ. ಇದು ಸ್ವಲ್ಪ ಹೊತ್ತಿನವರೆಗೆ ದೀಪದ ಕುಡಿಯ ಕಡೆ ದಿಟ್ಟಿಸಿನೋಡುತ್ತಿದ್ದ ಬಳಿಕ ಯಾವ ಕಡೆಗೆ ತಿರುಗಿ ನೋಡಿದರೂ ಎಲ್ಲೆಲ್ಲೂ ದೀಪದ ಕುಡಿಯೇ ಕಾಣುವ ಹಾಗೆ."

ಮಾಸ್ಟರಿಗೆ ಅನಿಸಿತು: "ಅದು ನಿಜವಾದ ದೀಪದ ಕುಡಿ ಅಲ್ಲವಲ್ಲ."

ಪರಮಹಂಸರು ಅಂತರ್ಯಾಮಿ. ಹೇಳುತ್ತಿದಾರೆ: "ಚೈತನ್ಯನ ಧ್ಯಾನಮಾಡಿ ಮನುಷ್ಯ ಅಚೈತನ್ಯನಾಗಿಬಿಡೋದಿಲ್ಲ. ಶಿವನಾಥ ಒಮ್ಮೆ

ಹೇಳಿದ, ಬಹುವಾಗಿ ಭಗವಂತನ ಧ್ಯಾನ ಮಾಡಿದರೆ ತಲೆ ಕೆಟ್ಟುಹೋಗಿ ಬಿಡುತ್ತದೆ ಎಂಬುದಾಗಿ. ಅದಕ್ಕೆ ನಾನು ಉತ್ತರವಿತ್ತೆ: 'ಚೈತನ್ಯನ ಧ್ಯಾನಮಾಡಿದರೆ ಮನುಷ್ಯ ಅಚೈತನ್ಯನಾಗಲು ಸಾಧ್ಯವೆ ?' "

ಮಾಸ್ಟರ್: "ಹೌದು, ಈಗ ಅರ್ಥವಾಯಿತು. ಇದು ಅನಿತ್ಯ ವಸ್ತುವಿನ ಮೇಲೆ ಧ್ಯಾನ ಮಾಡಿದಂತೇನಾಗೋದಿಲ್ಲವಲ್ಲ. ನಿತ್ಯಚೈತನ್ಯ ಸ್ವರೂಪನ ಮೇಲೆ ಮನಸ್ಸಿಟ್ಟರೆ ಮನುಷ್ಯ ಅಚೈತನ್ಯ ಏಕಾಗಬೇಕು ?"

ಶ್ರೀರಾಮಕೃಷ್ಣರು ಸಂತೋಷದಿಂದ: "ಈ ನಿನ್ನ ಭಾವನೆ ಭಗವಂತನ ಕೃಪೆಯಿಂದ. ಆತನ ಕೃಪೆ ಇಲ್ಲದೆ ಇದ್ದರೆ ಸಂದೇಹ ನಿವೃತ್ತಿಯಾಗೋದಿಲ್ಲ. ಆತ್ಮಸಾಕ್ಷಾತ್ಕಾರವಾಗದೆ ಸಂದೇಹ ನಿವೃತ್ತಿಯಾಗೋದಿಲ್ಲ.

"ಆತನ ಕೃಪೆ ದೊರಕಿತು ಎಂದರೆ ಇನ್ನು ಭಯಪಡಬೇಕಾಗಿಲ್ಲ. ಮಗು ತಂದೆಯ ಕೈಯನ್ನು ಹಿಡಿದುಕೊಂಡಿದ್ದರೆ ಅದು ಬೀಳಬಹುದಾದ ಸಂಭವ. ಆದರೆ ತಂದೆಯೇ ಅದರ ಕೈಯನ್ನು ಹಿಡಿದುಕೊಂಡಿದ್ದರೆ ಇನ್ನು ಅದು ಹೆದರಬೇಕಾಗಿಲ್ಲ. ಭಗವಂತನೇ ಕೃಪೆಮಾಡಿ ಸಂದೇಹ ನಿವೃತ್ತಿ ಮಾಡಿಕೊಟ್ಟರೆ, ತಾನೇ ತೋರಿಸಿಕೊಂಡರೆ ಇನ್ನು ಕಷ್ಟಪಡಬೇಕಾಗಿರೋದಿಲ್ಲ. ಆದರೆ ಆತನ ಸಾಕ್ಷಾತ್ಕಾರಕ್ಕಾಗಿ ವ್ಯಾಕುಲರಾಗಿ ಆತನನ್ನು ಕರೆಯುತ್ತ ಕರೆಯುತ್ತ, ಸಾಧನೆ ಮಾಡುತ್ತ ಮಾಡುತ್ತ ಇದ್ದರೆ ಆತನ ಕೃಪೆ ಒದಗುತ್ತದೆ. ಮಗು ತನಗಾಗಿ ಬಹಳವಾಗಿ ಸುತ್ತಿಬಳಸಾಡುತ್ತಿರುವುದನ್ನು ನೋಡಿದರೆ ತಾಯಿಗೆ ಮರುಕ ಹುಟ್ಟಿಬಿಡುತ್ತದೆ. ಅವಿತುಕೊಂಡಿದ್ದ ತಾಯಿ ಹೊರಕ್ಕೆ ಬಂದು ತೋರಿಸಿಕೊಂಡುಬಿಡುತ್ತಾಳೆ."

ಮಾಸ್ಟರಿಗೆ ಯೋಚನೆಬಂತು: "ಭಗವಂತ ನಮ್ಮ ಕೈಯಲ್ಲಿ ಸುತ್ತಿ ಬಳಸಾಡುವ ಹಾಗೆ ಏಕೆ ಮಾಡಿಸಬೇಕು ?"

ಪರಮಹಂಸರು ಒಡನೇ ಹೇಳಿದರು: "ನಾವು ಒಂದಃ ಸ್ವಲ್ಪ ಸುತ್ತಿ ಬಳಸಾಡಬೇಕು ಎಂಬುದು ಆತನ ಇಚ್ಛೆ. ಆಗ ಒಂದು ತಮಾಷೆ ನಡೆದ ಹಾಗೆ ಆಗುತ್ತದೆ. ಆತ ತನ್ನ ಲೀಲೆಯಿಂದ ಈ ಸಂಸಾರವನ್ನು ಸೃಷ್ಟಿಸಿದಾನೆ. ಆತನ ಈ ಲೀಲಾಶಕ್ತಿಗೇ ಮಹಾಮಾಯೆ ಅಂತ ಹೆಸರು. ಅದಕ್ಕಾಗಿ ಆ ಶಕ್ತಿರೂಪಿಣಿ ತಾಯಿಯಲ್ಲಿ ಶರಣಾಗತಿ ಪಡೆಯಬೇಕು. ಆಕೆ ಮಾಯಾಪಾಶದಿಂದ ನಮ್ಮನ್ನು ಬಂಧಿಸಿ ಇಟ್ಟುಬಿಟ್ಟಿದಾಳೆ.

ಈ ಪಾಶಗಳನ್ನು ಕತ್ತರಿಸಿಹಾಕಲು ಶಕ್ತರಾದರೆ ಮಾತ್ರ ನಮಗೆ ಭಗವಂತನ ದರ್ಶನ ದೊರೆಯುತ್ತದೆ. ''

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: '' ಭಗವಂತನ ಕೃಪೆ ದೊರಕಿಸಿಕೊಳ್ಳಬೇಕಾದರೆ ಆದ್ಯಾಶಕ್ತಿರೂಪಿಣಿಯನ್ನ ಪ್ರಸನ್ನಳನ್ನಾಗಿ ಮಾಡಿಕೊಳ್ಳಬೇಕು. ಭಗವಂತನೇ ಒಂದು ರೂಪದಲ್ಲಿ ಮಹಾಮಾಯೆಯಾಗಿದಾನೆ. ಆಕೆ ಈ ಜಗತ್ತನ್ನು ಮುಗ್ಧಮಾಡಿ ಸೃಷ್ಟಿಸ್ಥಿತಿಪ್ರಳಯ ಮಾಡುತ್ತಿದಾಳೆ. ಆಕೆ ನಮ್ಮ ಕಣ್ಣಿಗೆ ಅಜ್ಞಾನವೆಂಬ ಮುಸುಕು ಹಾಕಿದಾಳೆ. ಆ ಮಹಾಮಾಯೆ ಬಾಗಿಲು ಬಿಟ್ಟುಕೊಟ್ಟರೆ ಮಾತ್ರ ಒಳಕ್ಕೆ ಪ್ರವೇಶ. ಹೊರಗಡೆಯೇ ಇದ್ದರೆ ಹೊರಗಿನ ವಸ್ತುಗಳನ್ನು ಮಾತ್ರ ನೋಡಬಹುದೇ ಹೊರತು ಒಳಗಿರೋ ಆ ಸಚ್ಚಿದಾನಂದಪುರುಷನನ್ನು ನೋಡಲಾಗೋದಿಲ್ಲ. ಅದಕ್ಕಾಗೆ ಚಂಡೀಪುರಾಣದಲ್ಲಿ ಹೇಳಿದೆ, ಮಧುಕೈಟಭರ ವಧೆಯಾದಾಗ ಬ್ರಹ್ಮಾದಿ ದೇವತೆಗಳು ಮಹಾಮಾಯೆಯನ್ನು ಸ್ತೋತ್ರಮಾಡಿದರು ಎಂಬುದಾಗಿ.

'' ಶಕ್ತಿಯೇ ಜಗತ್ತಿನ ಮೂಲಾಧಾರ. ಆ ಆದ್ಯಾಶಕ್ತಿಯಲ್ಲಿ ವಿದ್ಯೆ ಅವಿದ್ಯೆ ಎರಡೂ ಇವೆ. ಅವಿದ್ಯೆ ಮುಗ್ಧಕಾರಿ. ಅವಿದ್ಯೆ ಕಾಮಕಾಂಚನವನ್ನು ಸೃಷ್ಟಿಸಿ ಅದರಿಂದ ಮೋಹಗೊಳಿಸುತ್ತದೆ. ವಿದ್ಯೆ ಭಕ್ತಿ, ದಯೆ, ಜ್ಞಾನ, ಪ್ರೇಮ ಇವನ್ನು ಉಂಟುಮಾಡುತ್ತದೆ. ಇವು ನಮ್ಮನ್ನು ಭಗವಂತನ ಕಡೆಗೆ ಕರೆದೊಯ್ಯುತ್ತವೆ. ಅವಿದ್ಯೆಯನ್ನು ಪ್ರಸನ್ನಗೊಳಿಸಿಕೊಳ್ಳಬೇಕು. ಅದಕ್ಕಾಗೇ ಶಕ್ತಿಪೂಜಾಪದ್ಧತಿ ರೂಢಿಗೆ ಬಂದಿರೋದು.

'' ಆಕೆಯನ್ನ ಪ್ರಸನ್ನಗೊಳಿಸಲೋಸುಗ ಭಕ್ತ ಅನೇಕ ಭಾವಗಳಿಂದ —ದಾಸೀಭಾವ, ವೀರಭಾವ, ಸಂತಾನಭಾವ ಇವುಗಳಿಂದ ಆಕೆಯನ್ನು ಪೂಜಿಸುತ್ತಾನೆ. ವೀರಭಾವ — ಎಂದರೆ ವಿಲಾಸದಿಂದ ಆಕೆಯನ್ನು ಪ್ರಸನ್ನಗೊಳಿಸಿಕೊಳ್ಳೋದು.

'' ಶಕ್ತಿಸಾಧನೆ ಬಹಳ ಕಠಿನವಾದ್ದು. ಅದೇನು ಹುಡುಗಾಟವಾದ್ದಲ್ಲ. ನಾನು ದಾಸೀಭಾವದಿಂದ, ಸಖೀಭಾವದಿಂದ ಎರಡು ವರ್ಷ ಕಳೆದೆ. ಆದರೆ ನನ್ನ ಸ್ವಾಭಾವಿಕ ಭಾವ ಸಂತಾನಭಾವ—ಹೆಂಗಸರ ಸ್ತನ ನನ್ನ ಕಣ್ಣಿಗೆ ಮಾತೃ ಸ್ತನ.

'' ಪ್ರತಿಯೊಬ್ಬ ಹೆಂಗಸೂ ಶಕ್ತಿಯ ಒಂದೊಂದು ರೂಪು. ಪಶ್ಚಿಮ ಭಾರತದಲ್ಲಿ ವಿವಾಹದ ಸಮಯದಲ್ಲಿ ವಧು ತನ್ನ ಕೈಯಲ್ಲಿ ಒಂದು ಕತ್ತಿ

ಹಿಡಿದುಕೊಳ್ಳುತ್ತಾಳೆ; ಬಂಗಾಳದಲ್ಲಿ ಅಡಕೆ ಕತ್ತರಿಯನ್ನ. ಇದರ ಅರ್ಥ ಆ ಶಕ್ತಿರೂಪಿಣಿ ಕನ್ಯೆಯ ಸಹಾಯದಿಂದ ವರ ಮಾಯಾಪಾಶವನ್ನು ಕತ್ತರಿಸುತ್ತಾನೆ ಎಂಬುದಾಗಿ. ಇದೇ ವೀರಭಾವ. ನಾನು ಈ ಭಾವದಿಂದ ಪೂಜೆಮಾಡಲಿಲ್ಲ. ನನ್ನದು ಸಂತಾನಭಾವ.

"ಕನ್ಯೆ ಶಕ್ತಿರೂಪಿಣಿ. ವಿವಾಹದ ಸಮಯದಲ್ಲಿ ನೋಡಿಲ್ಲವೆ ವರ ಪೆದ್ದನಹಾಗೆ ಹಿಂದುಗಡೆ ಕುಳಿತುಕೊಳ್ಳುವುದನ್ನ? ಆದರೆ ಕನ್ಯೆ ನಿರ್ಭಯಳಾಗಿ ಕುಳಿತಿರುತ್ತಾಳೆ!

"ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡದ್ದೇ ಆದರೆ ಆತನ ಹೊರಗಿನ ಐಶ್ವರ್ಯ, ಆತನ ಜಗತ್ತಿನ ಐಶ್ವರ್ಯ ಮರೆತುಹೋಗಿ ಬಿಡುತ್ತದೆ. ಆತನ ದರ್ಶನ ಪಡೆದನಂತರ ಆತನ ಐಶ್ವರ್ಯದ ಭಾವನೆ ಮನಸ್ಸಿನಲ್ಲಿ ನಿಲ್ಲದು. ಭಕ್ತ ಭಗವದಾನಂದದಲ್ಲಿ ಒಮ್ಮೆ ಮಗ್ನನಾಗಿಬಿಟ್ಟ ಎಂದರೆ ಆತನಿಗೆ ಇನ್ನು ಬೇರೆ ಯಾವುದರ ಭಾವನೆಯೂ ಬಾರದು. ನರೇಂದ್ರನನ್ನು ನೋಡಿದರೆ ನಾನು ಕೇಳಬೇಕಾಗಿರೋದಿಲ್ಲ: 'ನಿನ್ನ ಹೆಸರೇನು? ನಿಮ್ಮ ಮನೆ ಎಲ್ಲಿದೆ?' ಎಂಬುದಾಗಿ. ಹಾಗೆಲ್ಲ ಪ್ರಶ್ನೆ ಹಾಕಲು ಸಮಯತಾನೆ ಎಲ್ಲಿರುತ್ತೆ? ಒಮ್ಮೆ ಒಬ್ಬ ಹನುಮಂತನನ್ನು ಕೇಳಿದನಂತೆ: 'ಇಂದು ಯಾವ ತಿಥಿ?' ಆತ ಅದಕ್ಕೆ ಉತ್ತರವಿತ್ತನಂತೆ: 'ಸೋದರ, ನನಗೆ ವಾರ, ತಿಥಿ, ನಕ್ಷತ್ರ ಇವು ಯಾವೂ ಗೊತ್ತಿಲ್ಲ. ನಾನು ಕೇವಲ ರಾಮಚಿಂತನೆಯನ್ನು ಮಾತ್ರ ಮಾಡುತ್ತಿದೇನೆ.'"

೧೬ ನೆ ಅಕ್ಟೋಬರ್ ೧೮೮೨, ಆಶ್ವೀಜ ಶುಕ್ಲ ಚತುರ್ಥಿ, ಸೋಮವಾರ.

ದುರ್ಗಾಪೂಜೆ ಬರುವ ಗುರುವಾರದಿಂದ ಆರಂಭವಾಗುತ್ತದೆ. ಪರಮಹಂಸರು ಇಂದು ಬಹಳ ಆನಂದದಿಂದ ಇದಾರೆ. ದಕ್ಷಿಣೇಶ್ವರಕ್ಕೆ ನರೇಂದ್ರ ಬಂದಿದಾನೆ. ಆತ ಬ್ರಾಹ್ಮಸಮಾಜದ ಒಬ್ಬಿಬ್ಬರು ಸ್ನೇಹಿತರನ್ನೂ ಕರೆದುಕೊಂಡುಬಂದಿದಾನೆ. ರಾಖಾಲ, ರಾಮಲಾಲ, ಹಾಜರಾ ಪರಮಹಂಸರೊಡನೇ ಇದಾರೆ. ಮಾಸ್ಟರೂ ಅಲ್ಲಿಗೆ ಬಂದಿದಾನೆ.

ನರೇಂದ್ರನ ಮಧ್ಯಾಹ್ನದ ಊಟ ಪರಮಹಂಸರೊಡನೇ ಆಯಿತು. ಭಕ್ತರೆಲ್ಲರೂ ವಿಶ್ರಾಂತಿ ಪಡೆಯಲು ಸಾಮಾನ್ಯವಾದ ಹಾಸಿಗೆಯನ್ನ ಪರಮಹಂಸರ ಕೊಠಡಿಯಲ್ಲೇ ಹಾಕಲಾಗುತ್ತಿದೆ. ಮುಂದಲಿಗೆ ಮೇಲೆ ಮೆತ್ತೆ ಹಾಸಿ ಬಿಳಿ ಬಟ್ಟೆ ಹಾಕಿಯಾಯಿತು. ಕೆಲವು ದಿಂಬುಗಳನ್ನೂ ಅಲ್ಲಿ ಇಲ್ಲಿ ಹಾಕಿಯಾಯಿತು. ಪರಮಹಂಸರು ನರೇಂದ್ರನ ಹತ್ತಿರ ಹಾಸಿಗೆ

ಮೇಲೆ ಬಾಲಕನ ಹಾಗೆ ಕುಳಿತುಕೊಂಡಿದಾರೆ. ಭಕ್ತರೊಡನೆ, ವಿಶೇಷತಃ ನರೇಂದ್ರನೊಡನೆ ನಗುಮುಖರಾಗಿ ಬಹಳ ಆನಂದದಿಂದ ಮಾತುಕತೆ ಆಡುತ್ತಿದಾರೆ. ತಮ್ಮ ಮಾನಸಿಕ ಅವಸ್ಥೆಗಳನ್ನೂ, ತಮ್ಮ ಜೀವನದ ಘಟನಾವಳಿಗಳನ್ನೂ ಕಥೆ ರೂಪದಲ್ಲಿ ಹೇಳುತ್ತಿದಾರೆ.

ಶ್ರೀರಾಮಕೃಷ್ಣರು: "ನನಗೆ ಸಮಾಧಿ ದೊರೆತನಂತರ ನನ್ನ ಮನಸ್ಸು ಕೇವಲ ಭಗವಂತನ ಸಂಬಂಧವಾಗಿ ಶ್ರವಣಮಾಡಲು ಮಾತ್ರವೇ ತವಕಪಡುತ್ತಿತ್ತು. ಎಲ್ಲಿ ಭಾಗವತ, ಎಲ್ಲಿ ಅಧ್ಯಾತ್ಮರಾಮಾಯಣ, ಎಲ್ಲಿ ಮಹಾಭಾರತ ಅಂತಲೇ ಸುತ್ತಾಡುತ್ತಿದ್ದೆ. ಏಡೇದಾರ್ ಕೃಷ್ಣಕಿಶೋರನ ಮನೆಗೆ ಅಧ್ಯಾತ್ಮರಾಮಾಯಣ ಕೇಳಲು ಹೋಗುತ್ತಿದ್ದೆ.

"ಕೃಷ್ಣಕಿಶೋರನದು ಎಂಥಾ ಅದ್ಭುತ ಶ್ರದ್ಧೆ! ಆತ ಬೃಂದಾವನಕ್ಕೆ ಹೋಗಿದ್ದ. ಒಂದು ದಿನ ನೀರಡಿಕೆಯಾಯಿತು. ಬಾವಿಯ ಹತ್ತಿರಕ್ಕೆ ಹೋದಾಗ ಅಲ್ಲಿ ಯಾರೊ ಒಬ್ಬ ನಿಂತುಕೊಂಡಿದ್ದ. ಆತನನ್ನು ಸ್ವಲ್ಪ ನೀರು ಸೇದಿಕೊಡು ಎಂದು ಕೇಳಲಾಗಿ ಆತ ಉತ್ತರವಿತ್ತ: 'ನಾನು ನೀಚ ಜಾತಿಗೆ ಸೇರಿದವ, ನೀವು ಬ್ರಾಹ್ಮಣರು. ನಿಮಗೆ ಹೇಗೆ ನಾನು ನೀರು ಸೇದಿಕೊಡಲಿ?' ಕೃಷ್ಣಕಿಶೋರ ಹೇಳಿದ: 'ನೀನು "ಶಿವ, ಶಿವ" ಅಂತ ಹೇಳು. "ಶಿವ, ಶಿವ" ಅಂತ ಹೇಳಿದೊಡನೇ ನೀನು ಶುದ್ಧನಾಗಿ ಬಿಡುತ್ತೀಯೆ.' ಆತ ಹಾಗೇ ಮಾಡಿ ನೀರು ಸೇದಿಕೊಟ್ಟ. ಆತ ಬಹಳ ಆಚಾರವಂತ ಬ್ರಾಹ್ಮಣ, ಆದರೂ ಆ ನೀರನ್ನು ಕುಡಿದುಬಿಟ್ಟ. ಎಂಥ ಶ್ರದ್ಧೆ ಆತನದು!

"ಏಡೇದಾರ್ ಸ್ನಾನಘಟ್ಟದಲ್ಲಿ ಒಬ್ಬ ಸಾಧು ಬಂದು ಇಳಿದುಕೊಂಡಿದ್ದ. ಅಲ್ಲಿಗೆ ಒಂದು ದಿನ ಹೋಗಬೇಕು ಅಂತ ನಾವು ಮಾಡಿಕೊಂಡೆವು. ನಾನು ಹಲಧಾರಿಗೆ ತಿಳಿಸಿದೆ: 'ನಾನು, ಕೃಷ್ಣಕಿಶೋರ, ಇಬ್ಬರೂ ಆ ಸಾಧುವನ್ನು ನೋಡಲು ಹೋಗುತ್ತಿದೇವೆ. ನೀನೂ ಬರುತ್ತೀಯಾ?' ಹಲಧಾರಿ ಉತ್ತರಕೊಟ್ಟ: 'ಹೋಗಿ ಆ ಮಣ್ಣಿನ ಗೂಡು ನೋಡಿಕೊಂಡುಬರುವುದರಿಂದ ಯಾವ ಪದವಿ ಸಿಕ್ಕೀತು?' ಹಲಧಾರಿ ಗೀತೆ, ವೇದಾಂತ ಓದುತ್ತಿದಾನಲ್ಲ ಅದಕ್ಕಾಗಿ ಆ ಸಾಧುವನ್ನ ಮಣ್ಣಿನ ಗೂಡು ಎಂಬುದಾಗಿ ಕರೆದ. ಈ ಮಾತನ್ನು ನಾನು ಕೃಷ್ಣಕಿಶೋರನಿಗೆ ತಿಳಿಸಿದೆ. ಆತನಿಗೆ ಬಹಳವಾಗಿ ಕೋಪ ಬಂದುಬಿಟ್ಟಿತು. ಹೇಳಿದ: 'ಏನು! ಹಲಧಾರಿ ಹೀಗೆಂದು ಹೇಳಿದನೆ? ಯಾರು ಭಗವಚ್ಚಿಂತನೆ

ಮಾಡುತ್ತಿದಾನೆಯೊ, ಯಾರು ರಾಮಚಿಂತನೆ ಮಾಡುತ್ತಿದಾನೆಯೊ, ಯಾರು ಭಗವಂತನಿಗಾಗಿ ಎಲ್ಲವನ್ನೂ ತ್ಯಾಗಮಾಡಿದಾನೆಯೊ ಅಂಥವನ ದೇಹ ಮಣ್ಣಿನ ಗೂಡೇ? ಆತನಿಗೆ ಗೊತ್ತಿಲ್ಲ ಭಕ್ತನ ದೇಹ ಚಿನ್ಮಯದೇಹ ಎಂಬುದು.' ಆತ ಆಗಾಗ ಕಾಳೀದೇವಾಲಯಕ್ಕೆ ಹೂವು ಕೊಯ್ಯಲು ಬರುತ್ತಿದ್ದ. ಆತನಿಗೆ ಅಷ್ಟೊಂದು ಕೋಪ ಹಲಧಾರಿ ಕಂಡರೆ, ಆತನೇನಾದರು ಕಣ್ಣಿಗೆ ಬಿದ್ದ ಎಂದರೆ ಮುಖ ತಿರುಗಿಸಿಕೊಂಡುಬಿಡುತ್ತಿದ್ದ. ಕೊನೆಗೆ ಆತನೊಡನೆ ಮಾತುಕತೆಯಾಡೋದನ್ನೇ ನಿಲ್ಲಿಸಿಬಿಟ್ಟ.

"ಒಮ್ಮೆ ಕೃಷ್ಣಕಿಶೋರ ನನ್ನನ್ನು ಕೇಳಿದ: 'ಯಜ್ಞೋಪವೀತವನ್ನ ಏಕೆ ಬಿಸಾಡಿಬಿಟ್ಟಿದೀರಿ?' ನನಗೆ ಹಿಂದೆ ಭಗವದವಸ್ಥೆ ಉಂಟಾದಾಗ ಆಶ್ವೀಜದ ಬಿರುಗಾಳಿ ಮಳೆ[1] ಹಾಗೆ ಏನೊ ಒಂದು ಬಂದು ನನ್ನ ಹತ್ತಿರ ಏನೇನು ಇತ್ತೊ ಎಲ್ಲವನ್ನೂ ಹೊಡೆದುಕೊಂಡುಹೋಗಿ ಬಿಟ್ಟಿತು. ನನ್ನ ಹಿಂದಿನ ಸ್ವರೂಪವೇ ಬದಲಾವಣೆಹೊಂದಿಬಿಟ್ಟಿತು. ಬಾಹ್ಯಪ್ರಜ್ಞೆ ಇರುತ್ತಿರಲಿಲ್ಲ. ಉಟ್ಟಿದ್ದ ಬಟ್ಟೆಯೇ ಮೈ ಮೇಲೆ ನಿಲ್ಲದೆ ಹೋಗುವಾಗ ಇನ್ನು ಯಜ್ಞೋಪವೀತದ ಪಾಡು ಕೇಳಬೇಕೇ? ನಾನು ಕೃಷ್ಣಕಿಶೋರನಿಗೆ ಉತ್ತರವಿತ್ತೆ: 'ನಿನಗೂ ಒಮ್ಮೆ ಭಗವದುನ್ಮಾದ ಉಂಟಾಗಲಿ, ಆಗ ನಿನಗೇ ಅದು ಅರ್ಥವಾಗುತ್ತದೆ.'

"ಹಾಗೇ ಆಯಿತು. ಆತನಿಗೂ ಭಗವದುನ್ಮಾದ ಒಮ್ಮೆ ಬಂತು. ಆಗ 'ಓಂ, ಓಂ,' ಎಂಬುದಾಗಿ ಹೇಳುತ್ತ ತನ್ನ ಕೊಠಡಿಯೊಳಗೆ ಸುಮ್ಮನೆ ಸೇರಿಕೊಂಡುಬಿಡುತ್ತಿದ್ದ. ಆತನ ಸಂಬಂಧಿಗಳು ಬುದ್ಧಿ ಕೆಟ್ಟು ಹೋಗಿದೆ ಎಂಬುದಾಗಿ ಕವಿರಾಜನನ್ನು ಕರಸಿದರು. ನಾಟಗೋರಿನ ರಾಮ ಕವಿರಾಜ ಆತನನ್ನು ನೋಡಲು ಬಂದ. ಕೃಷ್ಣಕಿಶೋರ ಆತನಿಗೆ ಹೇಳಿದ: 'ನೋಡಿ, ನನ್ನ ರೋಗ ಏನಿದ್ದರೂ ಗುಣಪಡಿಸಿಬಿಡಿ; ಆದರೆ ನನ್ನ ಓಂಕಾರದ ತಂಟೆಗೆ ಮಾತ್ರ ಬರಬೇಡಿ.' (ಎಲ್ಲರೂ ನಗುತ್ತಿದಾರೆ.)

"ಒಂದು ದಿನ ಹೋಗಿ ನೋಡುತ್ತೇನೆ, ಕುಳಿತುಕೊಂಡು ಏನೊ ಯೋಚಿಸುತ್ತಾ ಇದಾನೆ. ಕೇಳಿದೆ: 'ಏನು ನಡೆಯುತ್ತಾ ಇದೆ ಮನಸ್ಸಿನಲ್ಲಿ?' ಹೇಳಿದ: 'ಕಂದಾಯದವರು ಬಂದಿದ್ದರು. ಹೆದರಿಸಿದರು: "ಕಂದಾಯ ಕೊಡದಿದ್ದರೆ ಮನೆಯ ಪಾತ್ರೆ ಪದಾರ್ಥಗಳನ್ನೆಲ್ಲಾ ಹರಾಜು ಹಾಕಿಸಿ

---

1. ಪರಮಹಂಸರು ಸೂಚಿಸಿದ್ದು ೧೮೬೪ನೆ ಆಶ್ವೀಜ ಮಾಸದಲ್ಲಿ ಬಂದಿದ್ದ ಬಿರುಗಾಳಿ ಮಳೆ.

ಬಿಡುತ್ತೇವೆ" ಎಂಬುದಾಗಿ. ಅದಕ್ಕಾಗಿ ಯೋಚಿಸುತ್ತಾ ಇದೇನೆ.' ನಾನು ಹೇಳಿದೆ: 'ಅದಕ್ಕಾಗಿ ಏಕೆ ನೀನು ಇಷ್ಟೊಂದಾಗಿ ಯೋಚಿಸಬೇಕು? ಅವರು ಬೇಕಾದರೆ ನಿನ್ನ ಪಾತ್ರೆ ಪದಾರ್ಥಗಳನ್ನು ತೆಗೆದುಕೊಂಡು ಹೋಗಲಿ. ಇನ್ನೂ ಬೇಕಾದರೆ ನಿನ್ನ ಶರೀರವನ್ನೂ ಕಟ್ಟಿ ಹೊತ್ತುಕೊಂಡು ಹೋಗಿಬಿಡಲಿ. ಆದರೆ ನಿನ್ನನ್ನು ಮಾತ್ರ ಅವರು ಎಂದಿಗೂ ಕಟ್ಟಿ ಹೊತ್ತುಕೊಂಡು ಹೊಗಲಾರರು ತಾನೆ? ನೀನು "ಆಕಾಶ" ಅಲ್ಲವೆ!' (ನರೇಂದ್ರನೇ ಮೊದಲಾದವರು ನಗಲಾರಂಭಿಸಿದಾರೆ.) ಆತ ತಾನು ಆಕಾಶವತ್ ಎಂಬುದಾಗಿ ಹೇಳಿಕೊಳ್ಳುತ್ತಿದ್ದ. ಅಧ್ಯಾತ್ಮರಾಮಾಯಣ ಓದುತ್ತಿದ್ದುದರಿಂದ ಆ ಭಾವನೆ ಆತನಿಗೆ ಬಂದಿತ್ತು. ಆಗಾಗ ಆತನನ್ನು 'ಖ' ಎಂದು ಸಂಬೋಧಿಸಿ ನಾನು ತಮಾಷೆಮಾಡುತ್ತಿದ್ದೆ. ಅಂದು ನಾನು ನಗುತ್ತ ಆತನಿಗೆ ಹೇಳಿದೆ: 'ನೀನು "ಖ". ಕಂದಾಯದವರು ನಿನ್ನನ್ನು ಎತ್ತಿಕೊಂಡು ಹೋಗಲಾರರು!'

"ಆ ಭಗವದವಸ್ಥೆಯಲ್ಲಿ ನನ್ನ ಅಂತರ್ಯಕ್ಕೆ ಹೊಳೆಯುತ್ತಿದ್ದುದ ನೆಲ್ಲಾ ಹೊರಗೆಡಹಿಬಿಡುತ್ತಿದ್ದೆ. ಮುಖ ನೋಡಿ ಮಣೆ ಹಾಕುತ್ತಿರಲಿಲ್ಲ. ದೊಡ್ಡ ಪದವಿಯಲ್ಲಿ ಇರತಕ್ಕವರನ್ನು ಕಂಡರೂ ಯಾವ ಹೆದರಿಕೆಯೂ ಇಲ್ಲದೆ ಯಥಾರ್ಥ ಹೇಳಿಬಿಡುತ್ತಿದ್ದೆ.

"ಯದುಮಲ್ಲಿಕನ ತೋಟಕ್ಕೆ ಒಮ್ಮೆ ಯತೀಂದ್ರ[1] ಬಂದಿದ್ದ. ನಾನೂ ಅಲ್ಲಿ ಕುಳಿತಿದ್ದೆ. ನಾನು ಆತನನ್ನು ಕೇಳಿದೆ: 'ಮನುಷ್ಯನ ಕರ್ತವ್ಯವೇನು? ಭಗವಚ್ಚಿಂತನೆ ಮಾಡುವುದೇ ನಮ್ಮ ಕರ್ತವ್ಯವಲ್ಲವೆ?' ಯತೀಂದ್ರ ಉತ್ತರ ಕೊಟ್ಟ: 'ನಾವು ಸಂಸಾರಿಗಳು. ನಮಗೆಲ್ಲಿ ಮುಕ್ತಿ ದೊರೆತೀತು? ರಾಜ ಯುಧಿಷ್ಠಿರನೂ ನರಕದರ್ಶನ ಮಾಡಬೇಕಾಗಿ ಬಂತು? ಇದನ್ನು ಕೇಳಿ ಅಧಿಕವಾಗೇ ನನ್ನಲ್ಲಿ ಕೋಪ ಕೆರಳಿತು. ಛೀಮಾರಿ ಮಾಡಿದೆ: 'ನೀನು ಎಂಥಾ ಮನುಷ್ಯ! ಎಲ್ಲವನ್ನೂ ಬಿಟ್ಟು ಯುಧಿಷ್ಠಿರ ನರಕದರ್ಶನ ಮಾಡಿದ್ದನ್ನ ಮಾತ್ರ ಮನಸ್ಸಿನಲ್ಲಿ ಇಟ್ಟುಕೊಂಡಿದೀಯಲ್ಲ? ಆತನ ಸತ್ಯವಚನ, ಕ್ಷಮೆ, ಧೈರ್ಯ, ವಿವೇಕ, ವೈರಾಗ್ಯ, ಭಗವದ್ಭಕ್ತಿ ಇವೊಂದೂ ನಿನ್ನ ಮನಸ್ಸಿಗೆ ಬರುತ್ತಿಲ್ಲ!' ಇನ್ನೂ ಏನೇನೊ ಹೇಳಬೇಕು ಅಂತ ಇದ್ದೆ. ಅಷ್ಟರಲ್ಲಿ ಹೃದೆ ಬಂದು ನನ್ನ ಬಾಯನ್ನು ಬಿಗಿಯಾಗಿ ಹಿಡಿದುಕೊಂಡ. ಕೆಲವು ನಿಮಿಷಗಳೊಳಗೇ ತನಗೆ ಸ್ವಲ್ಪ ಕೆಲಸವಿದೆ ಎಂದು ಹೇಳಿ ಯತೀಂದ್ರ ಅಲ್ಲಿಂದ ಎದ್ದು ಹೊರಟುಹೋದ.

1. ಹೆಸರುವಾಸಿ ಪಡೆದಿದ್ದ ಕಲ್ಕತ್ತದ ಒಬ್ಬ ಧನಿಕ.

“ಬಹುದಿನಗಳಾದ ಮೇಲೆ ಕ್ಯಾಪ್ಟನ್ನಿನೊಡನೆ ರಾಜ ಸೌರೀಂದ್ರ-ಠಾಕೂರನನ್ನು ನೋಡಲು ಹೋಗಿದ್ದೆ. ಆತ ನನ್ನ ಕಣ್ಣಿಗೆ ಬಿದ್ದೊಡನೆಯೇ ಆತನಿಗೆ ಹೇಳಿದೆ: ‘ನಿನ್ನನ್ನು ನಾನು ರಾಜ-ಗೀಜ ಅಂತಲೇನು ಕರೆಯೋಕೆ ಹೋಗೋದಿಲ್ಲ, ಏಕೆಂದರೆ ಅದು ಸುಳ್ಳುಮಾತು ಆಡಿದ ಹಾಗೆ ಆಗುತ್ತದೆ.’ ನನ್ನೊಡನೆ ಸ್ವಲ್ಪ ಹೊತ್ತು ಮಾತುಕತೆಯಾಡಿದ. ಅಷ್ಟರಲ್ಲಿ ಅನೇಕ ಮಂದಿ ಸಾಹೇಬರು-ಗೀಹೇಬರು ಬಂದುಹೋಗಲಾರಂಭಿಸಿದರು. ರಾಜಸಿಕ ಮನುಷ್ಯ, ಅನೇಕ ವಿಧದ ಕೆಲಸಕಾರ್ಯಗಳಿಗೆ ಮನಸ್ಸುಕೊಡಬೇಕಾಗಿದೆ. ಆತನ ಅಣ್ಣ ಯತೀಂದ್ರನಿಗೆ ಹೇಳಿಕಳುಹಿಸಲಾಯಿತು. ಆತ ಉತ್ತರ ಕಳುಹಿಸಿದ, ತನ್ನ ಗಂಟಲು ನೋಯುತ್ತಿರುವುದರಿಂದ ತಾನು ಎಲ್ಲೂ ಹೊರಕ್ಕೆ ಬರೋಕಾಗೋಲ್ಲ ಎಂಬುದಾಗಿ.

“ಒಂದು ದಿನ ನನ್ನ ಆ ಭಗವದವಸ್ಥೆಯಲ್ಲಿ ವರಾಹನಗರದ ಗಂಗಾಘಟ್ಟಕ್ಕೆ ಹೋಗಿದ್ದೆ. ಅಲ್ಲಿ ಜಯಮುಖ್ಯೋಪಾಧ್ಯಾಯ ನನ್ನ ಕಣ್ಣಿಗೆ ಬಿದ್ದ. ಜಪಮಾಡುತ್ತ ಕುಳಿತಿದಾನೆ, ಆದರೆ ಅನ್ಯಮನಸ್ಕನಾಗಿ. ಆಗ ಆತನ ಹತ್ತಿರ ಹೋಗಿ ಕೆನ್ನೆಗೆ ಎರಡು ಅಪ್ಪಳಿಸಿದೆ.

“ಒಮ್ಮೆ ರಾಣಿ ರಾಸಮಣಿ ಕೆಲವು ದಿನಗಳ ಮಟ್ಟಿಗೆ ಕಾಳೀದೇವಾಲಯದಲ್ಲಿರುವ ತನ್ನ ಕುಟೀರದಲ್ಲಿ ಇಳಿದುಕೊಂಡಿದ್ದಳು. ದಿನವೂ ಪೂಜೆ ಸಮಯದಲ್ಲಿ ಕಾಳೀದೇವಾಲಯಕ್ಕೆ ಬಂದು ನನ್ನನ್ನು ಒಂದೆರಡು ಹಾಡು ಹೇಳುವಂತೆ ಕೇಳಿಕೊಳ್ಳುತ್ತಿದ್ದಳು. ಒಂದು ದಿನ ಎಂದಿನಂತೆ ಆಕೆ ಬಂದಿದಾಳೆ, ನಾನೂ ಅವಳೆದುರಿಗೆ ಹಾಡುತ್ತಾ ಇದೇನೆ. ನೋಡುತ್ತೇನೆ, ಅವಳು ಅನ್ಯಮನಸ್ಕಳಾಗಿ ಪೂಜೆಗೆ ಹೂವು ಅಣಿಮಾಡುತ್ತಿದಾಳೆ. ಒಡನೆಯೆ ಕೊಟ್ಟೆ ಕೆನ್ನೆಗೆ ಎರಡು. ಆಗ ಆಕೆ ದಡಬಡನೆ ಕೈ ಜೋಡಿಸಿ ಕುಳಿತುಕೊಂಡಳು.

“ನನ್ನ ಮನಸ್ಸಿನ ಈ ಅವಸ್ಥೆಯನ್ನು ನೋಡಿ, ಹೆದರಿ ಹಲಧಾರಿಗೆ ಹೇಳಿದೆ: ‘ನನಗೇನು ಸ್ವಭಾವ ಬಂದುಬಿಟ್ಟಿದೆ ನೋಡು! ನಾನು ಇದರಿಂದ ಹೇಗೆ ಪಾರಾಗಲಿ?’ ಬಳಿಕ ಭಗವತಿಗೆ ಪ್ರಾರ್ಥನೆ ಮಾಡುತ್ತ ಮಾಡುತ್ತ ಆ ಸ್ವಭಾವ ನನ್ನನ್ನು ಬಿಟ್ಟುತೊಲಗಿತು.

“ಆ ಅವಸ್ಥೆಯಲ್ಲಿ ಭಗವದ್ವಿಷಯ ಹೊರತು ಬೇರೆ ಏನೂ ರುಚಿಸದು. ಪ್ರಾಪಂಚಿಕ ಮಾತುಕತೆ ಕಿವಿಗೆ ಬಿತ್ತು ಎಂದರೇ ಒಂದು ಕಡೆ ಕುಳಿತು

ಅಳುತ್ತಿದ್ದೆ. ಮಥುರಬಾಬು ನನ್ನನ್ನು ತೀರ್ಥಯಾತ್ರೆಗೆ ಕರೆದುಕೊಂಡು ಹೋಗಿದ್ದಾಗ ನಾವು ಕಾಶಿಯಲ್ಲಿ ಕೆಲವು ದಿನಗಳನ್ನ ರಾಜಬಾಬುವಿನ ಮನೆಯಲ್ಲಿ ಕಳೆದೆವು. ಒಂದು ದಿನ ನಾನು ಮಥುರಬಾಬು, ರಾಜಬಾಬು ಗಳೊಡನೆ ಬೈಠಕ್‌ಖಾನೆಯಲ್ಲಿ ಕುಳಿತುಕೊಂಡಿದ್ದೆ. ಶುರುಮಾಡಿದರು ಪ್ರಾಪಂಚಿಕ ಮಾತುಕತೆಗಳನ್ನ: 'ಇಷ್ಟು ಹಣ ನಷ್ಟವಾಯಿತು. ಹೀಗಾ ಯಿತು. ಹಾಗಾಯಿತು.' ಇನ್ನೂ ಏನೇನೊ. ನಾನು ಅಳಲು ಶುರುಮಾಡಿದೆ. ಹೇಳಿದೆ ಭಗವತಿಗೆ: 'ತಾಯೆ, ಎಲ್ಲಿಗೆ ಕರೆದುಕೊಂಡುಬಂದಿದೀಯೆ ನನ್ನನ್ನ? ರಾಸಮಣಿಯ ದೇವಾಲಯದಲ್ಲಿ ಆನಂದದಿಂದ ಇದ್ದೆನಲ್ಲ. ತೀರ್ಥಯಾತ್ರೆಗೆ ಬಂದೂ ಅದೇ ಕಾಮಕಾಂಚನಗಳ ಮಾತು ಕೇಳಬೇಕಾಗಿದೆಯಲ್ಲ! ಆದರೆ ಅಲ್ಲಿ (ದಕ್ಷಿಣೇಶ್ವರದಲ್ಲಿ) ಇವುಗಳಿಂದ ತಪ್ಪಿಸಿಕೊಳ್ಳಬಹುದಾಗಿತ್ತು.'"

ಪರಮಹಂಸರು ಭಕ್ತರೆಲ್ಲರಿಗೂ ವಿಶೇಷತಃ ನರೇಂದ್ರನಿಗೆ ವಿಶ್ರಮಿಸಿ ಕೊಳ್ಳುವಂತೆ ಹೇಳಿ ತಾವೂ ಚಿಕ್ಕ ಮಂಚದ ಮೇಲೆ ಮಲಗಿ ವಿಶ್ರಮಿಸಿ ಕೊಳ್ಳುತ್ತಿದಾರೆ.

ಸಾಯಂಕಾಲವಾಗಿದೆ. ನರೇಂದ್ರ ಹಾಡುತ್ತಿದಾನೆ. ರಾಖಾಲ, ಲಾಟು, ಮಾಸ್ಟರ್, ನರೇಂದ್ರನ ಗೆಳೆಯ ಬ್ರಾಹ್ಮಸಮಾಜದ ಪ್ರಿಯನಾಥ, ಹಾಜರಾ ಮೊದಲಾದವರೆಲ್ಲ ಕುಳಿತಿದಾರೆ. ಹಾಡಿನೊಡನೆ ಮೃದಂಗ-ಬಾಜನವಾಗುತ್ತಿದೆ:

ನಿರಂಜನ ಹರಿಚಿದ್ಘನ ಮೂರುತಿಯನು ನೆನೆಯೊ
ನಿರಂತರ—ಮೋಹನ ಮೂರುತಿಯನು ನೆನೆಯೊ.— . . .

(ಉ. ೪೭೯)

ನರೇಂದ್ರ ಮತ್ತೆ ಹಾಡುತ್ತಿದಾನೆ:

ಸತ್ಯಶಿವಸುಂದರನ ರೂಪ ಹೃದಿಮಂದಿರದಿ
ಹೊಳೆವುದೆಂದೋ,
ನಿತ್ಯ ದರುಶನದಿಂದ ಆ ರೂಪಸಾಗರದಿ
ನಾನಿಳಿವುದೆಂದೋ,
ಆ ದಿವ್ಯ ಶುಭದಿನದ ಉದಯವೆಂದೋ!
ಬಾರಯ್ಯ ಓ ಪ್ರಭುವೆ, ಅನಂತ ಜ್ಞಾನದೊಲು
ನನ್ನೆದೆಯಲಿ,
ಮೂಕವಿಸ್ಮಿತಗೈದು ನನ್ನ ಚಂಚಲ ಮತಿಗೆ

ತೋರಯ್ಯ ಸಗ್ಗವನು ನಿನ್ನಡಿಯಲಿ!
ಆನಂದದಮೃತಕರನಾಗಿ ನೀ ಮೂಡಯ್ಯ
ನನ್ನ ಹೃದಯಾಕಾಶದೇಶದಲ್ಲಿ,
ಆ ಪ್ರಕಾಶದಿ ನನ್ನ ಮನ ಚಕೋರನ ತೆರದಿ
ನಲಿದಾಡಲಿ,
ಸಗ್ಗಸುಖ ಅವತರಿಸಿ ನನ್ನ ಹೃದಯವ ತುಂಬಿ
ತುಳುಕಾಡಲಿ!

ರಾಜರಾಜೇಶ್ವರನೆ, ಓ ನನ್ನ ಪ್ರಾಣಸಖ,
ಅದ್ವಿತೀಯನು ನೀನು ಶಾಂತಶಿವನು;
ನಿನ್ನ ಶ್ರೀ ಚರಣದಲಿ ನನ್ನೆಲ್ಲವನು ಮುಡಿಪು-
ಗೈದೆನ್ನ ಗುರಿಯನ್ನು ಸಾಧಿಸುವೆನು.

ಆ ಅನಂತರ ನಾನು ನಿನ್ನ ನಿರ್ಮಲ ಶುದ್ಧ
ರೂಪವನು ಎಲ್ಲೆಲ್ಲು ದರ್ಶಿಸುವೆನು.
ಬೆಳಕು ಬಂದೊಡನೆಯೇ ಕತ್ತಲೋಡುವ ತೆರದಿ
ನಿನ್ನ ಪ್ರಭೆಯುದಯದಲಿ ನನ್ನ ದುರಿತಗಳೆಲ್ಲ
ತೊಲಗವೇನು?

ನಿನ್ನ ಶ್ರೀ ಧ್ರುವತಾರೆಗೆದೆಯು ತುಡಿವಂದದಲಿ
ವಿಶ್ವಾಸದಗ್ನಿಯನು ದೀಪ್ತಗೊಳಿಸು.
ಓ ದೀನಬಾಂಧವನೆ ದಿನರಾತ್ರಿಯೂ ನಿನ್ನ
ಪ್ರೇಮುದಾನಂದದಲಿ ಮಗ್ನಗೊಳಿಸು;
ನೀನೆ ನನ್ನೊಳು ನೆಲಸು, ನನ್ನನಳಿಸು!

ನರೇಂದ್ರ ಮತ್ತೆ ಹಾಡುತ್ತಿದಾನೆ:

ಮಧುರ ಬ್ರಹ್ಮನಾಮವನ್ನು ಜಪಿಸು ಹರುಷಮುಖದಲಿ
ಸುಧಾಸಿಂಧು ಉಕ್ಕಿಬರಲಿ ತುಂಬಿದಂಥ ಎದೆಯಲಿ
ಎಲ್ಲರೊಡನೆ ಅದನು ಹೀರಿ ಸುಖಿಸು ನೀನು ಜಗದಲಿ.
ಶುಷ್ಕವಾದರೇನು ಎದೆಯು ವಿಷಯಜ್ವಾಲೆ ತಟ್ಟಲು,
ಮರೆಯಬೇಡ ಹರಿಯ ಮಧುರ ನಾಮವನ್ನು ನೆನೆಯಲು,
ಅವನ ನೆನೆಯೆ ಸಗ್ಗದೊಲವು ಇಳಿದು ತೊಳೆವುದೆದೆಯನು.

ಹಿರಿಯೆಡರುಗಳಡ್ಡಬರಲು ಕರೆದು ಕೂಗು ಅವನನು,
ಕರುಣಾಮಯನವನ ಹೆಸರು ದುರಿತಂಗಳ ಕಟ್ಟನು
ಸಿಡಿಲಿನಂತೆ ಬಡಿದು ಹರಿದು ಬಿಡುಗಡೆಯನು ಕೊಡುವುದು.
ಓ ಬನ್ನಿರಿ ನಿಮ್ಮೆದೆಗಳ ಅರಕೆಗಳನು ತುಂಬಿರಿ,
ಆನಂದದ ರಸವ ಕುಡಿದು ತೃಪ್ತಿಯನ್ನು ಪಡೆಯಿರಿ
ಪ್ರೇಮಯೋಗದಲ್ಲಿ ನೀವು ಪೂರ್ಣಕಾಮರಾಗಿರಿ.

ಈಗ ಮೃದಂಗ ಕರತಾಲಗಳೊಡನೆ ಕೀರ್ತನೆ ನಡೆಯುತ್ತಿದೆ. ನರೇಂದ್ರಾದಿ ಭಕ್ತರು ಪರಮಹಂಸರ ಸುತ್ತಲೂ ಸುತ್ತುತ್ತ ಸುತ್ತುತ್ತ ಹಾಡುತ್ತಿದಾರೆ:

ಪ್ರೇಮಾನಂದ ರಸ ಪೂರದಿ
ನೀನಾಗಿರು ಚಿರಮಗ್ನ.

ಬಳಿಕ ಹಾಡುತ್ತಿದಾರೆ:

ಸತ್ಯಶಿವಸುಂದರನ ರೂಪ ಹೃದಿಮಂದಿರದಿ
ಹೊಳೆವುದೆಂದೋ, . . .

ಈಗ ನರೇಂದ್ರನೇ ಮೃದಂಗ ಬಾಜಿಸುತ್ತ ಮತ್ತನಾಗಿ ಪರಮಹಂಸರೊಡನೆ ಹಾಡುತ್ತಿದಾನೆ.

ಮಧುರ ಬ್ರಹ್ಮನಾಮವನ್ನು ಜಪಿಸು ಹರುಷನುಂಖದಲಿ
ಸುಧಾಸಿಂಧು ಉಕ್ಕಿಬರಲಿ ತುಂಬಿದಂಥ ಎದೆಯಲಿ . . .

ಕೀರ್ತನೆ ಮುಗಿದನಂತರ ಪರಮಹಂಸರು ನರೇಂದ್ರನನ್ನು ಹಿಡಿದು ಆಗಾಗ ಆಲಿಂಗನೆ ಮಾಡಿಕೊಳ್ಳುತ್ತ ಹೇಳುತ್ತಿದಾರೆ: "ನೀನು ನಮ್ಮನ್ನು ಬಹಳವಾಗಿ ಆನಂದಪಡಿಸಿಬಿಟ್ಟೆ!" ಇಂದು ಪರಮಹಂಸರ ಹೃದಯದಲ್ಲಿ ಪ್ರೇಮದ ಬುಗ್ಗೆ ಸುಮ್ಮನೆ ಉಕ್ಕುತ್ತಿದೆ. ಆಗಲೆ ರಾತ್ರಿ ಎಂಟು ಘಂಟೆಯಾಗಿಬಿಟ್ಟಿದೆ. ಆದರೂ ಅವರು ಪ್ರೇಮೋನ್ಮತ್ತರಾಗಿ ಏಕಾಕಿಯಾಗಿ ಉತ್ತರ ವರಾಂಡದಲ್ಲಿ ತಿರುಗಾಡುತ್ತಿದಾರೆ. ಆಗಾಗ ಭಗವತಿಯೊಡನೆ ಏನೇನೊ ಮಾತನಾಡಿಕೊಳ್ಳುತ್ತಿದಾರೆ. ಇದ್ದಕ್ಕಿದ್ದಹಾಗೆ ಆವೇಶಗೊಂಡು ಹೇಳುತ್ತಿದಾರೆ: "ನನಗೇನು ನೀನು ಮಾಡಬಲ್ಲೆ?" ಭಗವತಿ ಯಾರ ಸಹಾಯಕಳಾಗಿದಾಳೊ ಆತನನ್ನು ಆಕೆಯ ಮಾಯೆ ಏನುತಾನೆ ಮಾಡಬಲ್ಲದು ಎಂಬುದಾಗಿ ಪರಮಹಂಸರು ಸೂಚಿಸುತ್ತಿದಾರೇನು?

ನರೇಂದ್ರ, ಮಾಸ್ಟರ್, ಪ್ರಿಯ ಮೂವರೂ ತಮ್ಮ ರಾತ್ರಿಯನ್ನು ಅಲ್ಲೇ ಕಳೆಯುವುದಾಗಿ ನಿಶ್ಚಯಿಸಿದಾರೆ. ರಾತ್ರಿಯನ್ನು ನರೇಂದ್ರ ತಮ್ಮೊಡನೆ ಕಳೆಯುತ್ತಾನೆ ಎಂಬುದನ್ನು ಕೇಳಿ ಪರಮಹಂಸರ ಆನಂದಕ್ಕೆ ಪಾರವೇ ಇಲ್ಲದಂತಾಗಿದೆ. ಶ್ರೀ ಶಾರದಾದೇವಿಯವರು ನಹಬತ್ ಖಾನೆಯಲ್ಲಿ ವಾಸವಾಗಿದಾರೆ. ಅವರು ಅಡಿಗೆ ಮಾಡಿ ಪರಮಹಂಸರ ಕೊಠಡಿಯ ನೈರುತ್ಯ ದಿಕ್ಕಿನಲ್ಲಿರುವ ವರಾಂಡಕ್ಕೆ ಕಳುಹಿಸಿಕೊಟ್ಟರು. ಭಕ್ತರು ಇಂದಿನ ಹಾಗೆ ಆಗಾಗ ಪರಮಹಂಸರೊಡನೆ ಉಳಿದುಕೊಳ್ಳುತ್ತಿದ್ದರು. ಸುರೇಂದ್ರ ಪರಮಹಂಸರ ಖರ್ಚುವೆಚ್ಚದ ಬಹುಭಾಗವನ್ನು ಹೊರುತ್ತಿದ್ದ.

ಪರಮಹಂಸರ ಕೊಠಡಿಯ ಪೂರ್ವ ಬಾಗಿಲಿನ ಹತ್ತಿರ ನರೇಂದ್ರನೇ ಮೊದಲಾದವರು ಕುಳಿತು ಹರಟುತ್ತಿದಾರೆ.

ನರೇಂದ್ರ: "ಈಗಿನ ಕಾಲದ ಹುಡುಗರು ನಿಮಗೆ ಹೇಗೆ ಕಾಣುತ್ತಿದಾರೆ?"

ಮಾಸ್ಟರ್: "ಕೆಟ್ಟವರೇನಲ್ಲ; ಆದರೆ ಅವರಿಗೆ ಧರ್ಮೋಪದೇಶ ದೊರೆಯುತ್ತಿಲ್ಲ."

ನರೇಂದ್ರ: "ನನ್ನ ಕಣ್ಣಿಗೆ ಬೀಳುತ್ತಿರುವುದನ್ನು ನೋಡಿದರೆ ನನಗನಿಸುತ್ತಿದೆ ಅವರು ಹಾಳಾಗಿಹೋಗುತ್ತಿದಾರೆ. ಸಿಗರೇಟು ಸೇದುತ್ತಿದಾರೆ, ಗುರುಹಿರಿಯರಿಗೆ ಗೌರವ ತೋರಿಸುತ್ತಿಲ್ಲ, ದುಂದು ಪೋಷಾಕು ಹಾಕುತ್ತಾರೆ, ಸ್ಕೂಲಿಗೆ ಚಕ್ಕರ್ ಕೊಡುತ್ತಾರೆ, ಇನ್ನೂ ಏನೇನೊ ಮಾಡುತ್ತಾರೆ. ಇಷ್ಟೇ ಅಲ್ಲ, ಕೆಟ್ಟ ಸ್ಥಳಗಳಿಗೆ ಅವರು ಹೋಗಿಬರುವುದನ್ನೂ ನೋಡಿದೇನೆ."

ಮಾಸ್ಟರ್: "ನಾವು ಓದುತ್ತಿದ್ದಾಗ ಈ ರೀತಿಯಾಗೆಲ್ಲ ಕಂಡದ್ದೂ ಇಲ್ಲ ಕೇಳಿದ್ದೂ ಇಲ್ಲ."

ನರೇಂದ್ರ: "ಬಹುಶಃ ನೀವು ಹೆಚ್ಚಾಗಿ ಹುಡುಗರೊಡನೆ ಬೆರೆಯುತ್ತಿರಲಿಲ್ಲ ಅಂತ ಕಾಣುತ್ತೆ. ನೀತಿಬಾಹಿರರು ಕೂಡ ಹುಡುಗರ ಹೆಸರು ಹಿಡಿದು ಕರೆಯುವುದನ್ನು ನೋಡಿವೇನೆ. ಹಿಂದೆ ಅವರೊಡನೆ ಅವರು ಯಾವಾಗ ಬೆರೆತಿದ್ದರೊ ಏನೊ ಯಾರಿಗೆ ಗೊತ್ತು?"

ಮಾಸ್ಟರ್: "ಏನು ವಿಚಿತ್ರ ನಡವಳಿಕೆ ಇದು!"

ನರೇಂದ್ರ: "ನನಗೆ ಗೊತ್ತಿದೆ ಅನೇಕರು ನೀತಿಬಾಹಿರರಾಗಿ

ಬಿಟ್ಟಿದಾರೆ. ಸ್ಕೂಲಿನ ಮುಖ್ಯಾಧಿಕಾರಿಗಳು ಮತ್ತು ತಂದೆತಾಯಿಗಳು ಈ ಕಡೆಗೆ ಒಂದು ಸ್ವಲ್ಪ ಕಣ್ಣಿಟ್ಟರೆ ಬಹಳ ಒಳ್ಳೆಯದಾಗುತ್ತದೆ.''

ಈ ರೀತಿಯಾಗಿ ಮಾತುಕತೆ ನಡೆಯುತ್ತಿರುವಾಗ ಪರಮಹಂಸರು ಅವರ ಹತ್ತಿರಕ್ಕೆ ಬಂದು ನಗುತ್ತ ನಗುತ್ತ ಕೇಳುತ್ತಿದಾರೆ: "ಏನು ಸಮಾಚಾರ? ಯಾವ ರಾಜ್ಯವನ್ನು ಗೆಲ್ಲುತ್ತಿದೀರಿ?''

ನರೇಂದ್ರ: "ಏನಿಲ್ಲ. ಇವರೊಡನೆ ಸ್ಕೂಲಿನ ಸಂಬಂಧವಾಗಿ ಮಾತುಕತೆ ಆಡುತ್ತಿದ್ದೆ. ಈಗಿನ ಕಾಲದ ಹುಡುಗರ ನಡತೆ ಅಷ್ಟು ಸಮರ್ಪಕವಾಗಿಲ್ಲ.''

ಪರಮಹಂಸರು ಗಂಭೀರಮುದ್ರೆ ತಾಳಿ ಸ್ವಲ್ಪ ರೇಗೇ ಮಾಸ್ಟರಿಗೆ ಹೇಳುತ್ತಿದಾರೆ: "ಈ ವಿಧವಾದ ಮಾತುಕತೆ ಒಳ್ಳೆಯದಲ್ಲ. ಭಗವಂತನ ಸಂಬಂಧವಾಗಿ ಆಡೋ ಮಾತುಕತೆ ಬಿಟ್ಟರೆ ಉಳಿದುದು ಯಾವುದೂ ಶ್ರೇಯಸ್ಕರವಾದ್ದಲ್ಲ. ನೀನು ಇವರೆಲ್ಲರಿಗಿಂತ ವಯಸ್ಸಿನಲ್ಲಿ ದೊಡ್ಡವನು; ಬುದ್ಧಿ ಬಂದಿದೆ. ಈ ವಿಧವಾದ ಮಾತುಕತೆ ಎತ್ತಲೂ ಬಿಟ್ಟುಕೊಡ ಬಾರದಾಗಿತ್ತು.''

ನರೇಂದ್ರನಿಗೆ ವಯಸ್ಸು ಹದಿನೆಂಟೊ ಹತ್ತೊಂಬತ್ತೊ, ಮಾಸ್ಟರಿಗೆ ಇಪ್ಪತ್ತೇಳೊ ಇಪ್ಪತ್ತೆಂಟೊ. ಮಾಸ್ಟರ್ ದಿಗ್ಭ್ರಮೆಹಿಡಿದಂಥವನಾದ. ಉಳಿದವರೂ ಸುಮ್ಮನೆ ಕುಳಿತುಕೊಂಡರು.

ಭಕ್ತರೆಲ್ಲರೂ ಊಟಮಾಡುತ್ತಿರುವಾಗ ಪರಮಹಂಸರು ಅವರ ಹತ್ತಿರ ನಿಂತು ಅವರನ್ನು ಆನಂದಪಡಿಸುತ್ತಿದಾರೆ. ಪರಮಹಂಸರು ಇಂದು ಮಹಾ ಆನಂದದಲ್ಲಿದಾರೆ.

ನರೇಂದ್ರನೇ ಮೊದಲಾದವರು ಊಟ ಮುಗಿಸಿಕೊಂಡನಂತರ ಪರಮಹಂಸರ ಕೊಠಡಿಯಲ್ಲಿ ಮಂದಲಿಗೆ ಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಿದಾರೆ. ಪರಮಹಂಸರೂ ಅವರ ಹತ್ತಿರ ಕುಳಿತು ಮಾತುಕತೆ ಆಡುತ್ತಿದಾರೆ. ಆನಂದದ ಕೂಟವೇ ಸೇರಿದಂತಿದೆ. ಮಾತು ಆಡುತ್ತ ಆಡುತ್ತ ಪರಮ-ಹಂಸರು ನರೇಂದ್ರನಿಗೆ ಹೇಳಿದರು: "'ಉದಯಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು' ಎಂಬ ಹಾಡನ್ನು ಹಾಡು.''

ನರೇಂದ್ರ ಹಾಡುತ್ತಿದಾನೆ. ಉಳಿದವರು ಮೃದಂಗ, ಕರತಾಳ ಬಾಜಿಸುತ್ತಿದಾರೆ:''

ಉದಯಿಸಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು
ಪ್ರೇಮಸಿಂಧು ಉಕ್ಕಿ ಹರಿದು ಲೋಕಗಳೇ ನಾಂದು! . . .
(ಉ. ೩೬)

ಪರಮಹಂಸರೂ ನರೇಂದ್ರನೊಡನೆ ಕೂಡಿ ಹಾಡುತ್ತ ನರ್ತಿಸ ಲಾರಂಭಿಸಿದಾರೆ. ಭಕ್ತರೂ ಅವರ ಸುತ್ತಲು ಸುತ್ತುತ್ತ ಸುತ್ತುತ್ತ ನರ್ತಿಸುತ್ತಿದಾರೆ.

ಕೀರ್ತನೆ ಮುಗಿದನಂತರ ಪರಮಹಂಸರು ಈಶಾನ್ಯ ವರಾಂಡದಲ್ಲಿ ತಿರುಗಾಡುತ್ತಿದಾರೆ. ಹಾಜರಾ ಮತ್ತು ಮಾಸ್ಟರ್ ಅದರ ಉತ್ತರ ಕೊನೆಯಲ್ಲಿ ಕುಳಿತು ಮಾತುಕತೆ ಆಡುತ್ತಿದಾರೆ. ಈಗ ಪರಮಹಂಸರೂ ಅಲ್ಲಿಗೆ ಬಂದು ಕುಳಿತುಕೊಂಡರು. ಒಬ್ಬ ಭಕ್ತನನ್ನು ಕೇಳುತ್ತಿದಾರೆ: "ನಿನಗೆ ಸ್ವಪ್ನ-ಗಿಪ್ನ ಬೀಳುತ್ತದೆಯೆ?"

ಭಕ್ತ: "ಹೌದು. ಅಂದು ಒಂದು ವಿಚಿತ್ರ ಸ್ವಪ್ನ ಕಂಡೆ. ಈ ಜಗತ್ತು ಯಾವ ಕಡೆಗೆ ನೋಡಿದರೂ ನೀರೇನೀರಾಗಿ ಅನಂತ ಜಲರಾಶಿಯಾಗಿ ಕಂಡಿತು. ಕೆಲವು ದೋಣಿಗಳು ತೇಲಾಡುತ್ತಿದ್ದುವು. ಇದ್ದಕ್ಕಿದ್ದ ಹಾಗೆ ಅಲೆಗಳು ಬಂದು ಅವನ್ನು ಮುಳುಗಿಸಿಬಿಟ್ಟವು. ನಾನೂ, ಇನ್ನೂ ಕೆಲವರು ಒಂದು ಜಹಜಿನಲ್ಲಿ ಇದ್ದೆವು. ಒಬ್ಬ ಬ್ರಾಹ್ಮಣ ಆ ವಿಶಾಲವಾದ ಜಲರಾಶಿಯ ಮೇಲೆ ಸುಮ್ಮನೆ ನಡೆದುಹೋಗುತ್ತಿರುವುದು ಕಣ್ಣಿಗೆ ಬಿತ್ತು. ನಾನು ಅವರನ್ನು ಕೇಳಿದೆ: 'ತಾವು ನೀರಿನ ಮೇಲೆ ನಡೆದು ಹೋಗುತ್ತಿದೀರಲ್ಲ ಅದು ಯಾವ ರೀತಿಯಾಗಿ?' ಆ ಬ್ರಾಹ್ಮಣ ಸ್ವಲ್ಪ ನಕ್ಕು ಹೇಳಿದರು: 'ಕಷ್ಟವೇನಿಲ್ಲ; ನೀರಿನ ಕೆಳಗೆ ಸೇತುವೆ ಇದೆ.' ಮತ್ತೆ ಕೇಳಿದೆ: 'ತಾವು ಎಲ್ಲಿಗೆ ಹೋಗುತ್ತಿದೀರಿ?' ಅವರು ಉತ್ತರಕೊಟ್ಟರು: 'ಭವಾನಿಪುರಕ್ಕೆ.' ನಾನು ಬೇಡಿಕೊಂಡೆ: 'ಹಾಗಾದರೆ ಸ್ವಲ್ಪ ತಾಳಿ. ನಾನೂ ನಿಮ್ಮೊಡನೆ ಬರುತ್ತೇನೆ."

ಶ್ರೀರಾಮಕೃಷ್ಣರು: "ಇದನ್ನು ಕೇಳಿ ನನಗೆ ರೋಮಾಂಚವಾಗುತ್ತಿದೆ."

ಭಕ್ತ: "ಆ ಬ್ರಾಹ್ಮಣ ಹೇಳಿದರು: 'ನಾನು ಬಹಳ ಆತುರದಲ್ಲಿದೇನೆ. ಅಲ್ಲಿಂದ ಇಳಿದುಬರುವುದಕ್ಕೆ ನಿನಗೆ ಸಮಯ ಹಿಡಿಯುತ್ತದೆ. ನಾನು ಹೋಗಿಬರುತ್ತೇನೆ. ಈ ದಾರಿಯನ್ನು ನೋಡಿಕೊಂಡಿರು, ಆಮೇಲೆ ಬರುವೆಯಂತೆ.'"

ಶ್ರೀರಾಮಕೃಷ್ಣರು: "ರೋಮಾಂಚವಾಗುತ್ತಿದೆ. ನೀನು ಬೇಗ ಮಂತ್ರೋಪದೇಶ ಪಡೆದುಕೊ."

ಘಂಟೆ ರಾತ್ರಿ ಹನ್ನೊಂದು. ನರೇಂದ್ರನೇ ಮೊದಲಾದವರು ಪರಮ-ಹಂಸರ ಕೊಠಡಿಯಲ್ಲಿ ಹಾಸಿಗೆ ಹಾಕಿಕೊಂಡು ಮಲಗಿಕೊಂಡರು.

ಭಕ್ತರಲ್ಲಿ ಕೆಲವರು ನಿದ್ದೆಯಿಂದ ಎಚ್ಚರಗೊಂಡು ನೋಡುತ್ತಾರೆ. ಆಗಲೇ ಬೆಳಗಾಗಿಬಿಟ್ಟಿದೆ. ಪರಮಹಂಸರು ಮಗುವಿನ ಹಾಗೆ ದಿಗಂಬರರಾಗಿ ಭಗವನ್ನಾಮ ಜಪಿಸುತ್ತ ಜಪಿಸುತ್ತ ಕೊಠಡಿಯಲ್ಲಿ ತಿರುಗಾಡುತ್ತಿದಾರೆ. ಒಮ್ಮೊಮ್ಮೆ ಗಂಗಾದರ್ಶನ ಮಾಡುತ್ತ, ಒಮ್ಮೊಮ್ಮೆ ದೇವ ದೇವಿಯರ ಪಟಗಳ ಹತ್ತಿರ ಹೋಗಿ ಪ್ರಣಾಮಮಾಡುತ್ತ, ಒಮ್ಮೊಮ್ಮೆ ತಮ್ಮ ಮಧುರ ಕಂಠದಿಂದ ಭಗವನ್ನಾಮ ಕೀರ್ತನೆಮಾಡುತ್ತ ಸುತ್ತಾಡುತ್ತಿದಾರೆ. ಇನ್ನು ಕೆಲವು ವೇಳೆ ಹೇಳುತ್ತಿದಾರೆ: "ವೇದ, ಪುರಾಣ, ತಂತ್ರ; ಗೀತೆ, ಗಾಯತ್ರಿ; ಭಾಗವತ, ಭಕ್ತ, ಭಗವಾನ್" ಎಂಬುದಾಗಿ. ಗೀತೆಯನ್ನು ಉದ್ದೇಶಿಸಿ ಪದೇ ಪದೇ ಹೇಳುತ್ತಿದಾರೆ: "ತ್ಯಾಗಿ, ತ್ಯಾಗಿ, ತ್ಯಾಗಿ, ತ್ಯಾಗಿ" ಎಂಬುದಾಗಿ. ಮತ್ತೆ ಕೆಲವುವೇಳೆ ಹೇಳುತ್ತಿದಾರೆ: "ತಾಯೆ, ನೀನೇ ಬ್ರಹ್ಮ, ನೀನೇ ಶಕ್ತಿ. ನೀನೇ ಪ್ರಕೃತಿ, ನೀನೇ ಲೀಲಾಮಯಿ. ನೀನೇ ಚತುರ್ವಿಂಶತಿ ತತ್ತ್ವಗಳು."

ಇಷ್ಟರಲ್ಲೇ ಕಾಳೀದೇವಾಲಯದಲ್ಲಿ ಮತ್ತು ರಾಧಾಕಾಂತದೇವಾಲಯ-ದಲ್ಲಿ ಮಂಗಳಾರತಿ ಆರಂಭವಾಗಿಬಿಟ್ಟಿತು. ಶಂಖ ಗಂಟೆ ಜಾಗಟೆಗಳ ಶಬ್ದ ಕೇಳಿಬರುತ್ತಿದೆ. ಭಕ್ತರು ಹಾಸಿಗೆಯಿಂದೆದ್ದು ಹೊರಗೆ ಬಂದು ನೋಡು ತ್ತಾರೆ, ಆಗಲೇ ಪೂಜಾರಿಗಳು ಮತ್ತು ಸೇವಕರು ಪೂಜೆಗಾಗಿ ತೋಟದಲ್ಲಿ ಹೂವು ಕೊಯ್ಯುತ್ತಿದಾರೆ. ನಹಬತ್‌ಖಾನೆಯಿಂದ ಉದಯರಾಗ ಹೊರ ಹೊಮ್ಮುತ್ತಿದೆ.

ನರೇಂದ್ರಾದಿ ಭಕ್ತರು ಪ್ರಾತಃಕೃತ್ಯಗಳನ್ನೆಲ್ಲ ಮುಗಿಸಿಕೊಂಡು ಪರಮಹಂಸರ ಹತ್ತಿರ ಬಂದು ನಿಂತುಕೊಂಡಿದಾರೆ. ಪರಮಹಂಸರು ನಗುಮುಖರಾಗಿ ಈಶಾನ್ಯ ದಿಕ್ಕಿನ ವರಾಂಡದ ಪಶ್ಚಿಮ ಕೊನೆಯಲ್ಲಿ ನಿಂತು ಕೊಂಡಿದಾರೆ.

ನರೇಂದ್ರ: "ಪಂಚವಟಿಗೆ ಕೆಲವು ಮಂದಿ ನಾನಕ್‌ಪಂಥದ ಸಾಧುಗಳು ಬಂದಿದಾರೆ."

ಶ್ರೀರಾಮಕೃಷ್ಣರು: "ಹೌದು, ಬಂದಿದಾರೆ. ಅವರು ನಿನ್ನೆ

ಬಂದರು. (ನರೇಂದ್ರನಿಗೆ) ನೀವೆಲ್ಲರೂ ಒಟ್ಟಿಗೆ ಮಂದಲಿಗೆ ಮೇಲೆ ಕುಳಿತುಕೊಳ್ಳಿ, ನೋಡೋಣ."

ಎಲ್ಲರೂ ಮಂದಲಿಗೆ ಮೇಲೆ ಕುಳಿತುಕೊಂಡರು. ಪರಮಹಂಸರು ತಮ್ಮ ಆನಂದದ ದೃಷ್ಟಿಯನ್ನು ಅವರ ಕಡೆ ಬೀರುತ್ತ ಅವರೊಡನೆ ಮಾತು ಕತೆ ಆಡುತ್ತಿದಾರೆ. ನರೇಂದ್ರ ಸಾಧನೆಯ ಸಂಬಂಧವಾಗಿ ಮಾತು ಎತ್ತಿದ.

ಶ್ರೀರಾಮಕೃಷ್ಣರು: "ಭಕ್ತಿಯೇ ಸಾರವಾದ್ದು. ಭಗವಂತನನ್ನು ಪ್ರೀತಿಸಿದ್ರೇ ಆದರೆ ವಿವೇಕ ವೈರಾಗ್ಯ ಹೇಳದೆ ಕೇಳದೆ ಬಂದುಬಿಡುತ್ತವೆ."

ನರೇಂದ್ರ: "ಒಳ್ಳೇದು, ಹೆಂಗಸಿನ ಸಹಾಯದಿಂದ ಸಾಧನೆಯಲ್ಲಿ ತೊಡಗುವುದರ ವಿಷಯವಾಗಿ ತಂತ್ರದಲ್ಲಿ ಹೇಳಿದೆಯಲ್ಲವೆ?"

ಶ್ರೀರಾಮಕೃಷ್ಣರು: "ಅಂಥವೆಲ್ಲ ಒಳ್ಳೆ ಮಾರ್ಗವಲ್ಲ. ಬಹಳ ಕಠಿನ ಮಾರ್ಗ. ಅನೇಕ ವೇಳೆ ಅಧಃಪತನವಾಗೋ ಸಂಭವ. ವೀರಭಾವ, ದಾಸೀಭಾವ, ಮಾತೃಭಾವ ಇವುಗಳಿಂದ ಸಾಧನೆಯಲ್ಲಿ ತೊಡಗಬಹುದು. ನನ್ನದು ಮಾತೃಭಾವ. ದಾಸೀಭಾವವೂ ಒಳ್ಳೆಯದೆ. ವೀರಭಾವದ ಸಾಧನೆ ಬಹಳ ಕಠಿನವಾದ್ದು. ಸಂತಾನಭಾವ ಬಹಳ ಶುದ್ಧವಾದ ಭಾವ."

ನಾನಕ್‌ಪಂಥದ ಸಾಧುಗಳು ಕೊಠಡಿಗೆ ಬಂದು "ನಮೋ ನಾರಾಯಣ" ಎಂಬುದಾಗಿ ಪರಮಹಂಸರಿಗೆ ಅಭಿವಂದನೆ ಅರ್ಪಿಸಿದರು. ಪರಮಹಂಸರು ಅವರಿಗೆ ಕುಳಿತುಕೊಳ್ಳುವಂತೆ ಹೇಳುತ್ತಿದಾರೆ.

ಶ್ರೀರಾಮಕೃಷ್ಣರು: "ಭಗವಂತನಿಗೆ ಯಾವುದೂ ಅಸಾಧ್ಯವಲ್ಲ. ಆತನ ಸ್ವರೂಪ ಏನು ಎಂಬುದನ್ನು ಯಾರಿಂದಲೂ ಬಾಯಿಂದ ವರ್ಣಿಸಲಾಗೋದಿಲ್ಲ. ಭಗವಂತನ ಕೈಯಲ್ಲಿ ಎಲ್ಲವೂ ಸಾಧ್ಯ. ಒಂದು ಕಡೆ ಇಬ್ಬರು ಯೋಗಿಗಳು ಸಾಧನೆಯಲ್ಲಿ ತೊಡಗಿದ್ದರು. ನಾರದ ಋಷಿ ಆ ಮಾರ್ಗವಾಗಿ ಒಂದು ದಿನ ಮುಂದುವರಿಯುತ್ತಿದ್ದರು. ಒಬ್ಬ ಯೋಗಿ ನಾರದರ ಪರಿಚಯಮಾಡಿಕೊಂಡು ಅವರನ್ನು ಕೇಳಿದ: 'ನೀವು ನಾರಾಯಣನ ಸಾನ್ನಿಧ್ಯದಿಂದ ಬರುತ್ತಾ ಇದೀರಲ್ಲವೆ? ಆತ ಏನು ಮಾಡುತ್ತಾ ಇದಾನೆ?' ನಾರದರು ಉತ್ತರವಿತ್ತರು: 'ಈಗತಾನೆ ನೋಡಿಕೊಂಡುಬಂದೆ ಆತ ಸೂಜಿಯಕಣ್ಣಿನ ಮೂಲಕ ಆನೆ ಮತ್ತು ಒಂಟೆಗಳನ್ನು ಈ ಕಡೆಯಿಂದ ಆ ಕಡೆಗೆ ಆ ಕಡೆಯಿಂದ ಈ ಕಡೆಗೆ ಹುಗಿಸುತ್ತಾ ಇರುವುದನ್ನ.' ಅವರಲ್ಲಿ ಒಬ್ಬ ಹೇಳಿದ: 'ಅದರಲ್ಲಿ

ಆಶ್ಚರ್ಯಪಡುವುದೇನಿದೆ? ಆತನಿಗೆ ಎಲ್ಲವೂ ಸಾಧ್ಯ.' ಆದರೆ ಇನ್ನೊಬ್ಬ ವಿಸ್ಮಯದಿಂದ ಕೇಳಿದ: 'ಏನು! ಅದು ಎಂದಿಗಾದರೂ ಸಾಧ್ಯವೆ? ನೀವು ಅಲ್ಲಿಗೆ ಹೋಗೇ ಇಲ್ಲ ಅಂತ ಕಾಣುತ್ತೆ!'"

ಘಂಟೆ ಸುಮಾರು ಒಂಬತ್ತು. ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಮನಮೋಹನ ತನ್ನ ಮನೆಯವರೊಡನೆ ಕೊನ್ನಗರದಿಂದ ಬಂದು ಪರಮಹಂಸರಿಗೆ ಪ್ರಣಾಮಮಾಡಿ ಹೇಳುತ್ತಿದಾನೆ: "ನಾನು ಇವರನ್ನೆಲ್ಲ ಕಲ್ಕತ್ತಕ್ಕೆ ಕರೆದುಕೊಂಡು ಹೋಗುತ್ತಲಿದೇನೆ." ಪರಮಹಂಸರು ಆತನ ಕ್ಷೇಮಸಮಾಚಾರ ವಿಚಾರಿಸಿ ಹೇಳುತ್ತಿದಾರೆ: "ಇಂದು ಶುಭದಿವಸವಲ್ಲ. ಆದರೂ ಕಲ್ಕತ್ತಕ್ಕೆ ಕರೆದುಕೊಂಡು ಹೋಗುತ್ತಲಿದೀಯೆ. ಏನಾಗುತ್ತೊ?" ಹೀಗೆಂದು ಹೇಳಿ ಸ್ವಲ್ಪ ನಕ್ಕು ಈಗ ಬೇರೆ ವಿಷಯವಾಗಿ ಮಾತುಕತೆ ಆಡುತ್ತಿದಾರೆ.

ನರೇಂದ್ರ ಮತ್ತು ಆತನ ಸ್ನೇಹಿತರು ಸ್ನಾನಮಾಡಿ ಬಂದಿದಾರೆ. ಪರಮಹಂಸರು ನರೇಂದ್ರನಿಗೆ ಅಕ್ಕರೆಯಿಂದ ಹೇಳುತ್ತಿದಾರೆ: "ಹೋಗು, ಆಲದ ಮರದ ಕೆಳಗೆ ಕುಳಿತು ಧ್ಯಾನಮಾಡು ಹೋಗು. ಆಸನ ಬೇಕೆ?"

ಘಂಟೆ ಹತ್ತೂವರೆ. ನರೇಂದ್ರ ತನ್ನ ಸ್ನೇಹಿತರೊಡನೆ ಪಂಚವಟಿಯಲ್ಲಿ ಧ್ಯಾನಮಾಡುತ್ತಿದಾನೆ. ಪರಮಹಂಸರು ಸ್ವಲ್ಪ ಹೊತ್ತಾದ ಮೇಲೆ ಅಲ್ಲಿಗೆ ಬಂದರು. ಮಾಸ್ಟರೂ ಅಲ್ಲಿ ಕುಳಿತಿದಾನೆ. ಈಗ ಅವರು ಮಾತುಕತೆ ಆಡುತ್ತಿದಾರೆ.

ಶ್ರೀ ರಾಮಕೃಷ್ಣರು ಬ್ರಾಹ್ಮಭಕ್ತರಿಗೆ ಹೇಳುತ್ತಿದಾರೆ: "ಧ್ಯಾನದ ಸಮಯದಲ್ಲಿ ಭಗವದ್ಭಾವನೆಯಲ್ಲೇ ಮಗ್ನರಾಗಿಬಿಡಬೇಕು. ಮೇಲೆ ಮೇಲೆ ತೇಲಿದರೆ ನೀರಿನ ತಳದಲ್ಲಿರುವ ರತ್ನ ದೊರೆಯುವುದೆ?"

ಹೀಗೆಂದು ಹೇಳಿ ಪರಮಹಂಸರು ಹಾಡುತ್ತಿದಾರೆ:

ಜೈ ಕಾಳಿ ಎನ್ನುತ್ತ ಹೃದಯರತ್ನಾಕರನ
ಅಗಾಧ ಆಳಕ್ಕೆ ಮುಳುಗು ಮನವೇ,
ಮೊದಲೆರಡು ಸಲ ನೀನು ವಿಫಲನಾದರೆ ಒಳಗೆ
ಬರಿ ಶೂನ್ಯವೆಂದಿದನು ತೆಗಳಬೇಡ.
ದೃಢಮನದ ಸಂಯಮದಿ ಕುಲಕುಂಡಲಿನಿ ಕೂಲ-
ದೊಳಗಿಳಿದು ಅನುಭವವ ಪಡೆದು ನೋಡ!

ಜ್ಞಾನಸಾಗರದೊಳಗೆ ಶಾಂತಿ ಮುಕ್ತಾಫಲದ
ಭಂಡಾರವಿದೆ, ಹೋಗು ಅದನು ಗಳಿಸು.
ಆಹಾರ ಲೋಭದಲಿ ಅಲೆವ ಅರಿವರ್ಗಗಳ
ವಿವೇಕ ಲೇಪನದಿ ದೂರಗೊಳಿಸು.
ರಾಮುಪ್ರಸಾದನನು ಕೇಳು ಹೇಳುವನವನು:
ಅಂತರಂಗದೊಳಿರುವ ಅನಂತ ರತ್ನವನು
ಮುಳುಗಿ ಮೇಲಕೆ ತಂದು ನೀನು ಧರಿಸು.

ನರೇಂದ್ರ ಮತ್ತು ಆತನ ಸ್ನೇಹಿತರು ತಮ್ಮ ತಮ್ಮ ಆಸನಗಳಿಂದ ಕೆಳಕ್ಕೆ ಇಳಿದುಬಂದು ಪರಮಹಂಸರ ಹತ್ತಿರ ನಿಂತುಕೊಂಡರು. ಪರಮಹಂಸರು ಅವರೊಡನೆ ಮಾತುಕತೆಯಾಡುತ್ತ ತಮ್ಮ ಕೊಠಡಿ ಕಡೆಗೆ ನಡೆದುಬರುತ್ತಿದಾರೆ. ಅವರು ಹೇಳುತ್ತಿದಾರೆ: "ಸಾಗರದಲ್ಲಿ ಮುಳುಗು ಹಾಕಿದರೆ ಮೊಸಳೆ ಹಿಡಿದುಕೊಂಡುಬಿಡಬಹುದು. ಆದರೆ ಮೈಗೆ ಅರಿಸಿನ ಹಚ್ಚಿಕೊಂಡಿದ್ದರೆ ಅದು ಹತ್ತಿರವೇ ಬರೋದಿಲ್ಲ. ನಿಜ, ಹೃದಯ ರತ್ನಾಕರದ ಅಂತರಾಳದಲ್ಲಿ ಕಾಮಾದಿ ಷಡ್ರಿಪುಗಳು ಇವೆ. ಆದರೆ ವಿವೇಕ-ವೈರಾಗ್ಯ ಎಂಬ ಅರಿಸಿನವನ್ನು ಹಚ್ಚಿಕೊಂಡುಬಿಟ್ಟಿದ್ದೇ ಆದರೆ ಅವು ಹತ್ತಿರಕ್ಕೇ ಸುಳಿಯವು.

"ವಿವೇಕ-ವೈರಾಗ್ಯ ಗಳಿಸಿಕೊಳ್ಳದೆ ಪಾಂಡಿತ್ಯ ಗಳಿಸಿಕೊಂಡರೆ, ಉಪನ್ಯಾಸಕೊಟ್ಟರೆ ಏನು ಪ್ರಯೋಜನ? ಭಗವಂತನೊಬ್ಬನೇ ಸತ್ಯ ಉಳಿದುದೆಲ್ಲಾ ಅನಿತ್ಯ; ಆತನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು. ಇದಕ್ಕೇ ವಿವೇಕ ಅಂತ ಹೆಸರು.

"ಮೊದಲು ಹೃದಯಮಂದಿರದಲ್ಲಿ ಭಗವಂತನನ್ನು ಪ್ರತಿಷ್ಠಾಪನೆ ಮಾಡಿಕೊಳ್ಳಿ. ಬಳಿಕ ಇಚ್ಛೆಯಾದರೆ ಲೆಕ್ಚರ್-ಗಿಕ್ಚರನ್ನು ಕೊಡಿ. ವಿವೇಕ-ವೈರಾಗ್ಯ ಗಳಿಸಿಕೊಳ್ಳದೆ ಕೇವಲ 'ಬ್ರಹ್ಮ, ಬ್ರಹ್ಮ' ಅಂತ ಹೇಳುತ್ತಿದ್ದರೆ ಏನು ದೊರೆತೀತು? ಅದು ಬರೀ ಶಂಖಧ್ವನಿ ಮಾತ್ರ.

"ಒಂದು ಹಳ್ಳಿಯಲ್ಲಿ ಪದ್ಮಲೋಚನ ಎಂಬ ಒಬ್ಬ ಹುಡುಗ ಇದ್ದ. ಜನರು ಆತನನ್ನು 'ಪೋದೊ, ಪೋದೊ' ಎಂಬುದಾಗಿ ಕರೆಯುತ್ತಿದ್ದರು. ಅದೇ ಹಳ್ಳಿಯಲ್ಲಿ ಒಂದು ಶಿಥಿಲವಾದ ದೇವಾಲಯ ಇತ್ತು. ಒಳಗೆ ವಿಗ್ರಹವೇ ಇರಲಿಲ್ಲ. ಅದರ ಗೋಡೆಗಳ ಮೇಲೆ ಅಶ್ವತ್ಥವೃಕ್ಷ ಮತ್ತು ಇನ್ನೂ ಏನೇನೊ ಮರಗಿಡಗಳು ಬೆಳೆದುಕೊಂಡಿದ್ದುವು. ದೇವಾಲಯದ

ಒಳಗೆ ಬಾವಲಿ ಹಕ್ಕಿ ವಾಸವಾಗಿದ್ದುವು. ನೆಲ, ಅವುಗಳ ಹಿಕ್ಕೆ ಮತ್ತು ದೂಳಿನಿಂದ ತುಂಬಿತ್ತು. ಅಲ್ಲಿಗೆ ಯಾರೂ ಹೋಗುತ್ತಿರಲಿಲ್ಲ. ಒಂದು ದಿನ ಮುಚ್ಚಂಜೆಯಾದ ಮೇಲೆ ಆ ದೇವಾಲಯದ ಕಡೆಯಿಂದ ಶಂಖಧ್ವನಿ ಬರಲಾರಂಭಿಸಿತು. ಹಳ್ಳಿಯ ಜನರು ಭಾವಿಸಿದರು, ಬಹುಶಃ ದೇವಾಲಯ ದಲ್ಲಿ ಯಾರೊ ದೇವರನ್ನು ಪ್ರತಿಷ್ಠೆಮಾಡಿರಬೇಕು. ಸಾಯಂ ಮಂಗ ಳಾರತಿ ನಡೆಯುತ್ತಿದೆ. ಮಕ್ಕಳು ಮರಿ, ಗಂಡಸರು ಹೆಂಗಸರು, ದೊಡ್ಡವರು ಚಿಕ್ಕವರು ಎಲ್ಲರೂ ದೇವಾಲಯದ ಕಡೆಗೆ ಓಡಿ ಓಡಿ ಬಂದರು. ಅವರಲ್ಲಿ ಒಬ್ಬ ಮೆತ್ತಗೆ ಬಾಗಿಲು ತಳ್ಳಿ ನೋಡುತ್ತಾನೆ, ಪದ್ಮಲೋಚನ ಒಂದು ಕಡೆ ನಿಂತುಕೊಂಡು 'ಭ್ನೋ! ಭ್ನೋ!' ಅಂತ ಶಂಖ ಊದುತ್ತಿದಾನೆ. ದೇವರನ್ನು ಪ್ರತಿಷ್ಠೆಮಾಡಿಲ್ಲ. ನೆಲವನ್ನ ಗುಡಿಸಿಲ್ಲ ಸಾರಿಸಿಲ್ಲ. ಹೇರಳ ವಾಗಿ ಬಾವಲಿಯ ಹಿಕ್ಕೆ ಬಿದ್ದಿದೆ. ಆಗ ಅವನು ಗಟ್ಟಿಯಾಗಿ ಕೂಗಿ ಪದ್ಮಲೋಚನನಿಗೆ ಹೇಳಿದ:

ಮೂರ್ತಿಯನು ನಿಲಿಸಿಲ್ಲ
ಗುಡಿಯ ಪೀಠದಲಿ,
ಆದರೂ ಶಂಖವನು ಊದುತಿರುವೆ!
ಈ ಶಂಖನಾದಕ್ಕೆ ಹೆದರಿ ಬಾವಲಿ ಮಾತ್ರ
ಹಗಲು ಇರುಳೂ ಸುತ್ತ ಹಾರಾಡಿವೆ!

"ಹೃದಯಮಂದಿರದಲ್ಲಿ ಭಗವಂತನನ್ನು ಪ್ರತಿಷ್ಠಾಪಿಸಬೇಕು ಎಂಬುದಾಗಿ ಇಚ್ಛೆಪಡುತ್ತಿದ್ದರೆ, ಭಗವಂತನ ಸಾಕ್ಷಾತ್ಕಾರಮಾಡಿಕೊಳ್ಳ ಬೇಕು ಎಂಬುದಾಗಿ ಇಚ್ಛೆಪಡುತ್ತಿದ್ದರೆ ಕೇವಲ 'ಭ್ನೋ, ಭ್ನೋ' ಅಂತ ಶಂಖ ಊದಿದರೆ ಏನಾಗುತ್ತದೆ? ಮೊದಲು ಚಿತ್ತಶುದ್ಧಿ ಆಗಬೇಕು. ಮನಸ್ಸು ಶುದ್ಧವಾಯಿತು ಎಂದರೆ, ಭಗವಂತ ಆ ಪವಿತ್ರ ಆಸನದ ಮೇಲೆ ಬಂದು ಕುಳಿತುಕೊಳ್ಳುತ್ತಾನೆ. ಬಾವಲಿಯ ಹಿಕ್ಕೆ ಸುಮ್ಮನೆ ಬಿದ್ದಿದ್ದರೆ ಭಗವಂತನನ್ನು ಪ್ರತಿಷ್ಠಾಪನೆ ಮಾಡಲಾಗೋದಿಲ್ಲ. ಹನ್ನೊಂಯ ಬಾವಲಿ ಎಂಬುವು ನಮ್ಮ ಹನ್ನೊಂದು ಇಂದ್ರಿಯಗಳು—ಐದು ಜ್ಞಾನೇಂದ್ರಿಯ, ಐದು ಕರ್ಮೇಂದ್ರಿಯ ಮತ್ತು ಮನಸ್ಸು.

"ಮೊದಲು ಭಗವಂತನ ಪ್ರತಿಷ್ಠಾಪನೆ ಅನಂತರ ಇಚ್ಛೆಬಂದರೆ ಉಪನ್ಯಾಸ-ಗಿಪನ್ಯಾಸ. ಮೊದಲು ಆಳಕ್ಕೆ ಮುಳುಗು. ಆಳಕ್ಕೆ ಮುಳುಗಿ ರತ್ನ ಆರಿಸಿಕೊ. ಅನಂತರ ಏನು ಬೇಕಾದರೂ ಮಾಡು. ಜನರಿಗೆ ಆಳಕ್ಕೆ

ಮುಳುಗಲು ಇಚ್ಛೆಯಿಲ್ಲ. ಸಾಧನೆಯೆ, ಭಜನೆಯೆ, ವಿವೇಕ-ವೈರಾಗ್ಯವೆ, ಯಾವುದನ್ನೂ ಕೇಳಲೇಬೇಡಿ. ಒಂದೆರಡು ಮಾತು ಕಲಿತುಕೊಂಡು ಲೆಕ್ಚರ್ ಹೊಡಿಯೋದು! ಲೋಕಶಿಕ್ಷಣ ಬಹಳ ಕಠಿನವಾದ ಕಾರ್ಯ. ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡನಂತರ, ಆತನಿಂದ ಆದೇಶ ಪಡೆದುಕೊಂಡದ್ದೇ ಆದರೆ ಆಗ ಲೋಕಶಿಕ್ಷಣಕಾರ್ಯ ಸಾಧ್ಯ.''

ಹಾಗೇ ಮಾತಾಡುತ್ತ ಮಾತಾಡುತ್ತ ಪರಮಹಂಸರು ಉತ್ತರ ವರಾಂಡದ ಪಶ್ಚಿಮ ಅಂಚಿನ ಹತ್ತಿರ ಬಂದು ನಿಂತಿದಾರೆ. ಮಾಸ್ಟರೂ ಅವರ ಹತ್ತಿರ ನಿಂತಿದಾನೆ. ಪರಮಹಂಸರು ಪದೇ ಪದೇ ಹೇಳುತ್ತಿದಾರೆ: "ವಿವೇಕ-ವೈರಾಗ್ಯ ಗಳಿಸಿಕೊಳ್ಳದೆ ಭಗವಂತನನ್ನು ಪಡೆದುಕೊಳ್ಳಲಾಗೋದಿಲ್ಲ.'' ಮಾಸ್ಟರ್ ವಿವಾಹಮಾಡಿಕೊಂಡಿದಾನೆ. ಆದ್ದರಿಂದ ಆತ ವ್ಯಾಕುಲನಾಗಿ ತನಗೇನು ಗತಿ ಎಂಬುದಾಗಿ ಯೋಚಿಸುತ್ತಿದಾನೆ. ಆತನಿಗೆ ವಯಸ್ಸು ಇಪ್ಪತ್ತೆಂಟು. ಕಾಲೇಜಿನಲ್ಲಿ ಆಂಗ್ಲ ವಿದ್ಯಾಭ್ಯಾಸ ಮಾಡಿದಾನೆ. ಯೋಚಿಸುತ್ತಿದಾನೆ: "ವಿವೇಕ-ವೈರಾಗ್ಯ ಗಳಿಸಿಕೊಳ್ಳುವುದು ಎಂದರೆ, ಕಾಮಕಾಂಚನ ತ್ಯಾಗಮಾಡುವುದೆ?''

ಮಾಸ್ಟರು ಶ್ರೀರಾಮಕೃಷ್ಣರಿಗೆ: "ಹೆಂಡತಿ ಹೇಳಿದರೆ: 'ನೀನು ನನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ. ಆತ್ಮಹತ್ಯೆಮಾಡಿಕೊಂಡು ಬಿಡುತ್ತೇನೆ' ಅಂತ, ಆಗೇನು ಮಾಡುವುದು?''

ಶ್ರೀರಾಮಕೃಷ್ಣರು ಗಂಭೀರ ಸ್ವರದಿಂದ: "ಭಗವಂತನ ಸಾಕ್ಷಾತ್ಕಾರಕ್ಕೆ ಅಡ್ಡಬರೋ ಹೆಂಡತಿಯನ್ನು ಬಿಟ್ಟುಬಿಡಬೇಕು. ಅವಳು ಆತ್ಮಹತ್ಯೆಯನ್ನಾದರೂ ಮಾಡಿಕೊಳ್ಳಲಿ, ಏನನ್ನುಬೇಕಾದರೂ ಮಾಡಿಕೊಳ್ಳಲಿ, ಭಗವಂತನ ಸಾಕ್ಷಾತ್ಕಾರಕ್ಕೆ ಅಡ್ಡಬರೋ ಹೆಂಡತಿ ಅವಿದ್ಯಾಸ್ವರೂಪಿಣಿ ಹೆಂಗಸು.''

ಮಾಸ್ಟರ್ ಅತ್ಯಂತ ಚಿಂತೆಯಲ್ಲಿ ಮುಳುಗಿದವನಾಗಿ ಗೋಡೆ ಒರಗಿಕೊಂಡು ಒಂದು ಕಡೆ ನಿಂತಿದಾನೆ. ನರೇಂದ್ರನೇ ಮೊದಲಾದ ಭಕ್ತರು ಆಶ್ಚರ್ಯಚಕಿತರಾಗಿ ಸ್ವಲ್ಪ ಹೊತ್ತು ಸುಮ್ಮನೆ ಇದ್ದರು. ಪರಮಹಂಸರು ಅವರೊಡನೆ ಮತ್ತೆ ಮಾತನಾಡುತ್ತಿದ್ದವರು, ಇದ್ದಕ್ಕಿದ್ದಹಾಗೆ ಮಾಸ್ಟರ ಹತ್ತಿರ ಬಂದು ಆತನ ಕಿವಿಗೆ ಹೇಳುತ್ತಿದಾರೆ: "ಯಾರಿಗೆ ಭಗವಂತನಲ್ಲಿ ಹೃತ್ಪೂರ್ವಕವಾದ ಭಕ್ತಿ ಇದೆಯೊ, ಆತನಿಗೆ ರಾಜ, ಹೆಂಡತಿ, ದುಷ್ಟರು, ಎಲ್ಲರೂ ವಶರಾಗಿಬಿಡುತ್ತಾರೆ. ಪತಿಯಲ್ಲಿ ಹೃತ್ಪೂರ್ವಕ ಭಗವದ್ಭಕ್ತಿ

ಇತ್ತು ಎಂದರೆ ಹೆಂಡತಿಯೂ ಕ್ರಮೇಣ ಭಗವದಭಿಮುಖಳಾಗಿಬಿಡುತ್ತಾಳೆ. ಪತಿ ಒಳ್ಳೆಯವನಾಗಿದ್ದರೆ ಭಗವಂತನ ಕೃಪೆಯಿಂದ ಸತಿಯೂ ಒಳ್ಳೆಯವಳಾಗಲು ಸಾಧ್ಯವಾಗಬಹುದು."

ಈ ಮಾತು ಮಾಸ್ಟರ ಚಿಂತಾಗ್ನಿಯ ಮೇಲೆ ನೀರನ್ನು ಚಿಮುಕಿಸಿದಂತೆ ಆಯಿತು. ಆತ ಇದುವರೆಗೆ ಭಾವಿಸುತ್ತಿದ್ದ : "ಬೇಕಾದರೆ ಅವಳು ಆತ್ಮಹತ್ಯೆ ಮಾಡಿಕೊಳ್ಳಲಿ. ಅದಕ್ಕೆ ನಾನೇನು ಮಾಡಲಿ?"

ಮಾಸ್ಟರು ಶ್ರೀರಾಮಕೃಷ್ಣರಿಗೆ: "ಸಂಸಾರ ಬಹಳ ಭಯಂಕರವಾದ್ದು."

ಶ್ರೀರಾಮಕೃಷ್ಣರು ಭಕ್ತರಿಗೆ: "ಇದಕ್ಕಾಗೆ ಚೈತನ್ಯದೇವ ನಿತ್ಯಾನಂದನಿಗೆ ಹೇಳಿದ್ದು: 'ಸೋದರ ಕೇಳು, ಸಾಂಸಾರಿಕ ಪ್ರವೃತ್ತಿಯುಳ್ಳ ಜೀವರಿಗೆ ಮುಕ್ತಿ ದೊರಕುವ ಹಾಗೇ ಇಲ್ಲ.' "

ಬೇರೊಂದು ದಿನ ಪರಮಹಂಸರು ಮಾಸ್ಟರಿಗೆ ಏಕಾಂತದಲ್ಲಿ ಹೇಳಿದ್ದರು: "ಭಗವಂತನಲ್ಲಿ ಶುದ್ಧಭಕ್ತಿ ಗಳಿಸಿಕೊಳ್ಳದೆ ಇದ್ದರೆ, ಮುಕ್ತಿ ದೊರಕುವ ಹಾಗೇ ಇಲ್ಲ. ಭಗವಂತನ ಸಾಕ್ಷಾತ್ಕಾರ ಪಡೆದು ಸಂಸಾರದಲ್ಲಿದ್ದರೆ ಹೆದರಿಕೊಳ್ಳಬೇಕಾಗಿರೋದಿಲ್ಲ. ಆಗಾಗ ನಿರ್ಜನ ಪ್ರದೇಶದಲ್ಲಿ ಇದ್ದು ಸಾಧನೆ ಮಾಡಿ ಶುದ್ಧಭಕ್ತಿ ಗಳಿಸಿಕೊಂಡಿದ್ದೇ ಆದರೆ, ಸಂಸಾರದಲ್ಲಿ ಇದ್ದರೂ ಹೆದರಿಕೊಳ್ಳಬೇಕಾಗಿರೋದಿಲ್ಲ. ಚೈತನ್ಯದೇವನಿಗೆ ಸಂಸಾರಸ್ಥ ಭಕ್ತರೂ ಇದ್ದರು. ಅವರು ಸಂಸಾರದಲ್ಲಿ ಹೆಸರಿಗೆ ಮಾತ್ರ ಇರುತ್ತಿದ್ದರು; ಅನಾಸಕ್ತರಾಗಿ ಇರುತ್ತಿದ್ದರು.

ದೇವಾಲಯಗಳಲ್ಲಿ ನೈವೇದ್ಯ ಅರ್ಪಿತವಾದನಂತರ ಮಂಗಳಾರತಿ ನಡೆಯಿತು. ಈಗ ಶಯನೋತ್ಸವ ನಡೆಯಲಿದೆ. ನಹಬತ್‌ಖಾನೆಯಿಂದ ಮಂಗಳವಾದ್ಯ ಕೇಳಿಬರುತ್ತಿದೆ. ಪರಮಹಂಸರು ಭೋಜನಕ್ಕೆ ಕುಳಿತುಕೊಂಡಿದ್ದಾರೆ. ನರೇಂದ್ರನೇ ಮೊದಲಾದ ಭಕ್ತರೂ ಪರಮಹಂಸರ ಹತ್ತಿರವೇ ಕುಳಿತು ಭಗವತಿಯ ಪ್ರಸಾದ ಸ್ವೀಕರಿಸುತ್ತಿದಾರೆ.

೨೨ ನೆ ಅಕ್ಟೋಬರ್ ೧೮೮೨, ಆಶ್ವೀಜ ಶುಕ್ಲ ದಶಮಿ, ಭಾನುವಾರ.

ಇಂದು ವಿಜಯದಶಮಿ. ಘಂಟೆ ಬೆಳಗಿನ ಒಂಬತ್ತು. ಪರಮಹಂಸರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ವಿಶ್ರಮಿಸಿಕೊಳ್ಳುತ್ತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತಿದಾನೆ. ರಾಖಾಲ ಪರಮಹಂಸರೊಡನೆಯೇ ಇರುತ್ತಿದಾನೆ. ನರೇಂದ್ರ ಮತ್ತು

ಭವನಾಥ ಆಗಾಗ ಅಲ್ಲಿಗೆ ಬಂದುಹೋಗುತ್ತಿದಾರೆ. ಬಾಬುರಾಮ ಪರಮಹಂಸರನ್ನು ಒಂದೆರಡು ಸಲ ದರ್ಶನಮಾಡಿದಾನೆ.

ಶ್ರೀರಾಮಕೃಷ್ಣರು: "ನಿಮಗೆ ದಸರಾ ರಜ ಬಂದಿದೆಯೆ?"

ಮಾಸ್ಟರ್: "ಹೌದು, ಬಂದಿದೆ. ಸಪ್ತಮಿ, ಅಷ್ಟಮಿ, ನವಮಿ ಈ ಮೂರು ದಿನಗಳ ಪೂಜೆಗೂ ಕೇಶವಸೇನನ ಮನೆಗೆ ಹೋಗಿದ್ದೆ."

ಶ್ರೀರಾಮಕೃಷ್ಣರು: "ಹಾಗೇನು!"

ಮಾಸ್ಟರ್: "ಅಲ್ಲಿ ದುರ್ಗಾಪೂಜೆಯ ಸಂಬಂಧವಾಗಿ ಬಹಳ ಒಳ್ಳೆ ವ್ಯಾಖ್ಯಾನ ಕೇಳಿದೆ."

ಶ್ರೀರಾಮಕೃಷ್ಣರು: "ಅದೇನು ಹೇಳು ನೋಡೋಣ."

ಮಾಸ್ಟರ್: "ಕೇಶವಸೇನನ ಮನೆಯಲ್ಲಿ ಬೆಳಗಿನಿಂದ ಹಿಡಿದು ಹತ್ತು ಹನ್ನೊಂದು ಘಂಟೆಯವರೆಗೆ ದಿನವೂ ಉಪಾಸನೆ ನಡೆಯಿತು. ಈ ಉಪಾಸನೆ ಸಮಯದಲ್ಲಿ ಆತ ದುರ್ಗಾಪೂಜೆಯ ಸಂಬಂಧವಾಗಿ ವ್ಯಾಖ್ಯಾನಮಾಡಿದ. ಆತ ಹೇಳಿದ: 'ಭಗವತಿಯ ಸಾಕ್ಷಾತ್ಕಾರಮಾಡಿ ಕೊಳ್ಳಲು ಸಾಧ್ಯವಾದರೆ, ಅಂದರೆ ಭಗವತಿ ದುರ್ಗೆಯನ್ನು ಹೃದಯ ಮಂದಿರದಲ್ಲಿ ಪ್ರತಿಷ್ಠಾಪನೆಮಾಡಲು ಸಾಧ್ಯವಾದರೆ, ಲಕ್ಷ್ಮಿ, ಸರಸ್ವತಿ, ಕಾರ್ತಿಕೇಯ, ಗಣೇಶ ಇವರೆಲ್ಲ ತಾವಾಗೇ ಅಲ್ಲಿಗೆ ಬರುತ್ತಾರೆ. ಲಕ್ಷ್ಮಿ ಎಂದರೆ ಐಶ್ವರ್ಯ, ಸರಸ್ವತಿ ಎಂದರೆ ಜ್ಞಾನ, ಕಾರ್ತಿಕೇಯ ಎಂದರೆ ಪರಾಕ್ರಮ, ಗಣೇಶ ಎಂದರೆ ಸಿದ್ಧಿ. ಭಗವತಿಯನ್ನು ಸಾಕ್ಷಾತ್ಕಾರಮಾಡಿ ಕೊಂಡಿದ್ದೇ ಆದರೆ ಇವೆಲ್ಲ ತಾವಾಗೇ ದೊರೆತುಬಿಡುತ್ತವೆ.'"

ಪರಮಹಂಸರು ಕೇಶವಸೇನನ ಉಪಾಸನೆ ಸಂಬಂಧವಾಗಿ ಮಾಸ್ಟರಿಗೆ ಆಗಾಗ ಪ್ರಶ್ನೆ ಹಾಕುತ್ತ ಆತ ಕೊಟ್ಟ ವಿವರಣೆಯನ್ನೆಲ್ಲ ಸಾವಧಾನದಿಂದ ಕೇಳಿ ಕೊನೆಗೆ ಆತನಿಗೆ ಹೇಳುತ್ತಿದಾರೆ: "ನೀನು ಸುಮ್ಮನೆ ಅಲ್ಲಿಗಿಲ್ಲಿಗೆ ಅಲೆಯಬೇಡ. ಇಲ್ಲಿಗೇ ಬರುತ್ತಿರು. ಯಾರು ಅಂತರಂಗಿಗಳೊ ಅವರು ಕೇವಲ ಇಲ್ಲಿಗೇ ಬರುತ್ತಾರೆ. ನರೇಂದ್ರ, ಭವನಾಥ, ರಾಖಾಲ ಇವರು ನನ್ನ ಅಂತರಂಗ ಭಕ್ತರು. ಇವರು ಸಾಮಾನ್ಯ ವ್ಯಕ್ತಿಗಳಲ್ಲ. ನೀನು ಒಂದು ದಿನ ಇವರಿಗೆ ಅನ್ನ ಹಾಕು. ನರೇಂದ್ರ ನಿನ್ನ ಕಣ್ಣಿಗೆ ಹೇಗೆ ಕಾಣುತ್ತಾನೆ."

ಮಾಸ್ಟರ್: "ಆತ ಬಹಳ ಒಳ್ಳೆಯವ."

ಶ್ರೀರಾಮಕೃಷ್ಣರು: "ನೋಡು ನರೇಂದ್ರನಲ್ಲಿ ಎಷ್ಟೊಂದು ಗುಣಗಳಿವೆ— ಹಾಡುವುದರಲ್ಲಿ, ಬಾಜಿಸುವುದರಲ್ಲಿ ನೈಪುಣ್ಯಹೊಂದಿರುವುದಲ್ಲದೆ ವಿದ್ಯೆಯಲ್ಲಿ ಕೂಡ. ಇವೂ ಅಲ್ಲದೆ ಜಿತೇಂದ್ರಿಯ. ವಿವಾಹವಾಗೋದಿಲ್ಲ ಅನ್ನುತ್ತಾನೆ. ಬಾಲ್ಯದಿಂದಲೇ ಭಗವಂತನ ಕಡೆ ಮನಸ್ಸು.

"ಈಗ ನಿನ್ನ ಧ್ಯಾನ ಯಾವ ರೀತಿಯಾಗಿ ನಡೆಯುತ್ತಿದೆ? ನಿನಗೆ ಸಾಕಾರ ಅಧಿಕವಾಗಿ ರುಚಿಸುತ್ತೊ—ಅಥವಾ ನಿರಾಕಾರವೊ?"

ಮಾಸ್ಟರ್: "ಈಗ ಸಾಕಾರದ ಕಡೆಗೆ ಮನಸ್ಸು ಹೋಗುತ್ತಿಲ್ಲ. ನಿರಾಕಾರದಲ್ಲೂ ಮನಸ್ಸನ್ನು ಸ್ಥಿರವಾಗಿ ಇಡಲಾಗುತ್ತಿಲ್ಲ."

ಶ್ರೀರಾಮಕೃಷ್ಣರು: "ನೋಡಿದೆಯೊ, ಒಮ್ಮೆಗೇ ನಿರಾಕಾರದಲ್ಲಿ ಮನಸ್ಸನ್ನು ಸ್ಥಿರಮಾಡಲಾಗೋದಿಲ್ಲ. ಆದ್ದರಿಂದ ಮೊದಲು ಮೊದಲು ಸಾಕಾರದಲ್ಲಿ ಮನಸ್ಸು ಇಡುವುದೇ ಮೇಲು."

ಮಾಸ್ಟರ್: "ಈ ಮಣ್ಣಿನ ಮೂರ್ತಿಗಳ ಮೇಲೆ ಧ್ಯಾನಮಾಡಬೇಕು ಅಂತೀರಾ?"

ಶ್ರೀರಾಮಕೃಷ್ಣರು: "ಏಕೆ? ಚಿನ್ಮಯಮೂರ್ತಿಗಳ ಮೇಲೆ."

ಮಾಸ್ಟರ್: "ಹಾಗಾದರೂ ಕೈ, ಕಾಲು ಇವನ್ನೆಲ್ಲ ಭಾವಿಸಿಕೊಳ್ಳಬೇಕಾಗುತ್ತದೆಯಲ್ಲವೆ? ಆದರೆ ನೀವು ಹೇಳಿದೀರಲ್ಲ ಮೊದಲು ಮೊದಲು ಸಾಕಾರದ ಮೇಲೆ ಧ್ಯಾನಮಾಡದಿದ್ದರೆ ಮನಸ್ಸು ಸ್ಥಿರವಾಗುವುದಿಲ್ಲ ಎಂಬುದಾಗಿ, ಅದೂ ಸರಿ ಅಂತ ಯೋಚಿಸುತ್ತಿದೇನೆ. ಒಳ್ಳೇದು, ನೀವು ತಿಳಿಸಿದೀರಿ ಭಗವಂತ ವಿವಿಧ ರೂಪಗಳನ್ನು ಧರಿಸಬಲ್ಲ ಎಂಬುದಾಗಿ. ಆದ್ದರಿಂದ ಹೆತ್ತ ತಾಯ ಮೇಲೆ ಧ್ಯಾನಮಾಡಬಹುದೆ?"

ಶ್ರೀರಾಮಕೃಷ್ಣರು: "ಮಾಡಬಹುದು. ಆಕೆಯ ಮೇಲೆ ಧ್ಯಾನ ಮಾಡಬೇಕಾದ್ದೆ. ಆಕೆ ಗುರು; ಬ್ರಹ್ಮಮಯೀ ಸ್ವರೂಪಿಣಿ."

ಮಾಸ್ಟರ್ ಸುಮ್ಮನೆ ಕುಳಿತಿದಾನೆ. ಈಗ ಪರಮಹಂಸರನ್ನು ಕೇಳುತ್ತಿದಾನೆ: "ಒಳ್ಳೇದು. ನಿರಾಕಾರದ ಮೇಲೆ ಧ್ಯಾನಮಾಡುವಾಗ ಅದು ಹೇಗೆ ತೋರಿಬರುತ್ತದೆ? ಅದನ್ನು ವರ್ಣನೆಮಾಡಲಾಗೋದಿಲ್ಲವೆ?" ಪರಮಹಂಸರು ಸ್ವಲ್ಪ ಹೊತ್ತು ಆಲೋಚನೆ ಮಾಡಿ ಹೇಳುತ್ತಿದಾರೆ: "ಅದು ಯಾವ ರೀತಿಯಾಗಿ ಇದೆ ಗೊತ್ತೆ ನಿನಗೆ?" ಹೀಗೆಂದ ಬಳಿಕ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ತರುವಾಯ ಸಾಕಾರ ನಿರಾಕಾರ

ದರ್ಶನಗಳಲ್ಲಿ ಏನೇನು ಅನುಭವ ದೊರಕುತ್ತದೆ ಎಂಬುದರ ವಿಷಯವಾಗಿ ಒಂದೆರಡು ಮಾತಾಡಿ ಮತ್ತೆ ಸುಮ್ಮನೆ ಕುಳಿತುಕೊಂಡರು.

ಶ್ರೀರಾಮಕೃಷ್ಣರು: "ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಸಾಧನೆ ಮಾಡಬೇಕು. ಕಿರುಮನೆಯೊಳಗಿಟ್ಟಿರೋ ರತ್ನ ನೋಡಬೇಕಾಗಿದ್ದರೆ, ಅದನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿದ್ದರೆ ಶ್ರಮ ವಹಿಸಿ ಬೀಗದಕೈ ವಿಚಾರಿಸಿ ತಂದು ಬಾಗಿಲು ತೆರೆಯಬೇಕಾಗುತ್ತದೆ. ಬಳಿಕ ರತ್ನವನ್ನ ಹೊರಕ್ಕೆ ತೆಗೆದುಕೊಂಡುಬರಬೇಕಾಗುತ್ತದೆ. ಹಾಗೆ ಮಾಡದೆ, ಬೀಗ ಹಾಕಿದ ಬಾಗಿಲಿನ ಮುಂದೆ ನಿಂತುಕೊಂಡು ಸುಮ್ಮನೆ ಭಾವಿಸಿದರೆ: 'ಈಗ ಬೀಗ ತೆಗೆದಿದ್ದೇನೆ. ಸಂದೂಕದ ಬೀಗವನ್ನು ಮುರಿದುದಾಯಿತು. ಈಗ ರತ್ನ ಹೊರಕ್ಕೆ ತೆಗೆದಿದೇನೆ' ಎಂಬುದಾಗಿ, ಅದರಿಂದ ಏನುತಾನೆ ದೊರೆತೀತು?

"ಸಾಧನೆ ಮಾಡಬೇಕು.

"ಜ್ಞಾನಿಗಳು ನಿರಾಕಾರದ ಮೇಲೆ ಧ್ಯಾನಮಾಡುತ್ತಾರೆ. ಅವರು ಅವತಾರವನ್ನು ಒಪ್ಪೋದಿಲ್ಲ. ಅರ್ಜುನ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿದ: 'ನೀನು ಪೂರ್ಣಬ್ರಹ್ಮ' ಎಂಬುದಾಗಿ. ಶ್ರೀಕೃಷ್ಣ ಉತ್ತರವಿತ್ತ: 'ನಾನು ಪೂರ್ಣಬ್ರಹ್ಮ ಹೌದೊ ಅಲ್ಲವೊ ಎಂಬುದನ್ನು ನೋಡುವೆಯಂತೆ ಬಾ ನನ್ನೊಡನೆ.' ಹೀಗೆಂದು ಹೇಳಿ ಒಂದು ಜಾಗಕ್ಕೆ ಕರೆದುಕೊಂಡುಹೋಗಿ ಆತನನ್ನು ಕೇಳಿದ: 'ಅಲ್ಲಿ ಏನನ್ನು ನೋಡುತ್ತಾ ಇದೀಯೆ?' ಅರ್ಜುನ ಹೇಳಿದ: 'ಅಲ್ಲಿ ನಾನು ಒಂದು ದೊಡ್ಡ ಮರ ನೋಡುತ್ತಿದೇನೆ. ಅದರಲ್ಲಿ ನೇರಳೆ ಹಣ್ಣಿನಂಥ ಕಪ್ಪು ಹಣ್ಣುಗಳು ಜೊಂಪೆ ಜೊಂಪೆಯಾಗಿ ನೇತಾಡುತ್ತಿವೆ.' ಬಳಿಕ ಕೃಷ್ಣ ಹೇಳಿದ: 'ಇನ್ನೂ ಹತ್ತಿರಕ್ಕೆ ಬಂದುನೋಡು. ಅವು ಕಪ್ಪು ಹಣ್ಣುಗಳ ಜೊಂಪೆಗಳಲ್ಲ, ನನ್ನಂಥ ಕೃಷ್ಣರ ಜೊಂಪೆಗಳು. ಅಸಂಖ್ಯವಾಗಿ ನೇತಾಡುತ್ತಿವೆ.' ಅಂದರೆ, ಆ ಪೂರ್ಣಬ್ರಹ್ಮಸ್ವರೂಪವೃಕ್ಷದಿಂದ ಅಸಂಖ್ಯ ಅವತಾರಗಳು ಬಂದು ಹೋಗುತ್ತಿವೆ.

ಕಬೀರನ ಮನಸ್ಸು ನಿರಾಕಾರದ ಕಡೆಗೆ ಬಹಳವಾಗಿ ಬಾಗಿತ್ತು. ಕೃಷ್ಣನ ಮಾತು ಎತ್ತಿದರೆ ಆತ ಹೇಳುತ್ತಿದ್ದ: 'ಅವನನ್ನೇಕೆ ನಾನು ಭಜಿಸಲು ಪ್ರಯತ್ನಿಸಲಿ. ಗೋಪಿಯರು ಕರತಾಳ ಹಾಕುವಾಗ ಆತ ಕಪಿಯ ಹಾಗೆ ಕುಣಿಯುತ್ತಿದ್ದ.' (ನಗುತ್ತ) ನಾನು ಸಾಕಾರವಾದಿಗಳೊಡನೆ ಸಾಕಾರವಾದಿ, ನಿರಾಕಾರವಾದಿಗಳೊಡನೆ ನಿರಾಕಾರವಾದಿ."

ಮಾಸ್ಟರ್ ನಗುತ್ತ: "ನಾವು ಯಾರ ವಿಷಯವಾಗಿ ಮಾತಾಡು ತ್ತಿದ್ದೆವೊ ಆತ ಹೇಗೆ ಅನಂತನೊ ಹಾಗೇ ನೀವೂ ಅನಂತರೇ. ನಿಜವಾಗಿಯೂ ಯಾರೂ ನಿಮ್ಮ ಆಳವನ್ನು ಕಂಡುಹಿಡಿಯಲಾರರು."

ಶ್ರೀರಾಮಕೃಷ್ಣರು ನಗುತ್ತ: "ಓಹೊ! ನೀನು ಅದನ್ನು ಪತ್ತೆ ಮಾಡಿಬಿಟ್ಟದೀಯೆ. ನಿನಗೊಂದು ವಿಷಯ ತಿಳಿಸುತ್ತೇನೆ. ವಿವಿಧ ಮಾರ್ಗಗಳನ್ನು ಅನುಸರಿಸಿ ನೋಡಬೇಕು. ಪ್ರತಿಯೊಂದು ಧರ್ಮವನ್ನೂ ಸ್ವಲ್ಪ ಕಾಲ ಆಚರಿಸಿ ನೋಡಬೇಕು. ಪಗಡೆ ಆಟದಲ್ಲಿ ಪಗಡೆ ಕಾಯಿ ಎಲ್ಲಾ ಮನೆಗಳ ಮೂಲಕ ಹಾದುಹೋಗದೆ ಇದ್ದರೆ ಅದು ಹೇಗೆ ಹಣ್ಣಾಗ ಬಲ್ಲದು? ಆದರೆ ಒಮ್ಮೆ ಅದು ಹಣ್ಣಾಯಿತು ಎಂದರೆ ಅದನ್ನು ಯಾರೂ ಹೊಡೆಯಲು ಪ್ರಯತ್ನಿಸರು."

ಮಾಸ್ಟರ್: "ಅದು ನಿಜ."

ಶ್ರೀರಾಮಕೃಷ್ಣರು: "ಯೋಗಿಗಳಲ್ಲಿ ಎರಡು ಬಗೆ—ಬಹೂದಕ, ಕುಟೀಚಕ. ಯಾವ ಸಾಧು ಇನ್ನೂ ತೀರ್ಥಸ್ಥಾನಗಳಿಗೆ ಹೋಗುತ್ತಲೇ ಇದಾನೊ, ಯಾರ ಹೃದಯದಲ್ಲಿ ಇನ್ನೂ ಶಾಂತಿ ಎಂಬುದು ನೆಲಸಿಲ್ಲವೊ ಆತನೆ ಬಹೂದಕ. ಆದರೆ ಯಾರು ಎಲ್ಲಾ ತೀರ್ಥಯಾತ್ರೆಗಳನ್ನೂ ಮುಗಿಸಿ ಮನಸ್ಸನ್ನು ಶಾಂತಯುತವಾದುದನ್ನಾಗಿ ಮಾಡಿಕೊಂಡಿದಾನೊ ಆತನೆ ಕುಟೀಚಕ. ಆತ ಯಾವುದಾದರೂ ಒಂದು ಜಾಗದಲ್ಲಿ ಕುಟೀರ ಕಟ್ಟಿಕೊಂಡು ಇದ್ದುಬಿಡುತ್ತಾನೆ. ಮತ್ತೆ ಅವನು ಸಂಚಾರಕ್ಕೆ ಹೊರಡುವು ದಿಲ್ಲ. ಇರೋ ಜಾಗದಲ್ಲೇ ಆತ ಆನಂದದಿಂದಿರುತ್ತಾನೆ. ಆತನಿಗೆ ಇನ್ನು ತೀರ್ಥಯಾತ್ರೆಯ ಆವಶ್ಯಕತೆ ತೋರಿಬರುವುದಿಲ್ಲ. ಒಂದು ಪಕ್ಷ ಆತ ತೀರ್ಥಯಾತ್ರೆಗೆ ಹೋದರೂ ಅದು ಕೇವಲ ಉದ್ದೀಪನಕ್ಕಾಗಿಯೇ.

"ನಾನು ಪ್ರತಿಯೊಂದು ಧರ್ಮವನ್ನೂ — ಹಿಂದೂ ಧರ್ಮ, ಮಹಮ್ಮದೀಯ ಧರ್ಮ, ಕ್ರಿಸ್ತ ಧರ್ಮ—ಅನುಸರಿಸಿ ನೋಡಬೇಕಾ ಯಿತು. ಜೊತೆಗೆ ಶಾಕ್ತ, ವೈಷ್ಣವ, ವೇದಾಂತ ಈ ಮಾರ್ಗಗಳಲ್ಲೂ ನಡೆಯಬೇಕಾಗಿ ಬಂತು. ಅನುಭವವಾಯಿತು, ಇರತಕ್ಕವನು ಭಗವಂತ ನೊಬ್ಬನೇ—ಆತನ ಕಡೆಗೆ ಎಲ್ಲರೂ ಬರುತ್ತಿದಾರೆ; ಆದರೆ ವಿವಿಧ ಮಾರ್ಗ ಗಳಿಂದ ಅಷ್ಟೆ ಎಂಬುದಾಗಿ.

"ತೀರ್ಥಯಾತ್ರೆಗೆ ಹೋಗಿದ್ದಾಗ ಒಮ್ಮೊಮ್ಮೆ ನನಗೆ ಬಹಳ ಕಷ್ಟ ಆಗುತ್ತಿತ್ತು. ಕಾಶಿಯಲ್ಲಿ ಮಥುರಬಾಬುವಿನ ಸಂಗಡ ರಾಜಬಾಬುವಿನ

ಬೈಠಕ್‌ಖಾನೆಗೆ ಹೋಗಿದ್ದೆ. ಅಲ್ಲಿ ಅವರು ಪ್ರಾಪಂಚಿಕ ಮಾತುಕತೆ ಶುರುಮಾಡಿದರು— ಹಣ, ಜಮೀನುದಾರಿ ಇತ್ಯಾದಿಗಳ ವಿಷಯವಾಗಿ. ಅವರ ಮಾತುಕತೆ ಕೇಳಿ ಅಳಲಾರಂಭಿಸಿದೆ. ಆಗ ಭಗವತಿಗೆ ಹೇಳಿದೆ: 'ತಾಯಿ! ನನ್ನನ್ನು ಎಲ್ಲಿಗೆ ಕರೆದುಕೊಂಡುಬಂದಿದೀಯೆ? ನಾನು ದಕ್ಷಿಣೇಶ್ವರದಲ್ಲಿ ಸುಖವಾಗಿ ಇದ್ದೆನಲ್ಲ' ಎಂಬುದಾಗಿ. ಪ್ರಯಾಗದಲ್ಲೂ ಎಲ್ಲೆಲ್ಲೂ ಇರೋ ರೀತಿಯಲ್ಲೇ ನೋಡಿದೆ—ಅದೇ ತರದ ಕೊಳ, ಅದೇ ಬಗೆಯ ಹುಲ್ಲು, ಅದೇ ವಿಧದ ಮರಗಿಡಗಳು, ಅದೇ ರೀತಿಯ ಹುಣಿಸೆ ಎಲೆ.

''ಆದರೆ ತೀರ್ಥಸ್ಥಾನಗಳಲ್ಲಿ ಉದ್ದೀಪನವುಂಟಾಗುವುದೇನೊ ನಿಜ. ಮಥುರಬಾಬುವಿನೊಡನೆ ಬೃಂದಾವನಕ್ಕೆ ಹೋಗಿದ್ದೆ. ಆತನ ಮನೆಯ ಹೆಂಗಸರೂ ಬಂದಿದ್ದರು. ಹೃದಯನೂ ಬಂದಿದ್ದ. ಕಾಲಿಯದಮನ ಘಟ್ಟವನ್ನು ನೋಡಿದೊಡನೆಯೆ ನನಗೆ ಉದ್ದೀಪನ ಉಂಟಾಗಿಬಿಡುತ್ತಿತ್ತು; ಸಂಪೂರ್ಣ ಭಾವಪರವಶನಾಗಿಬಿಡುತ್ತಿದ್ದೆ. ಹೃದು ಮಕ್ಕಳನ್ನು ಹಿಡಿದು ಸ್ನಾನಮಾಡಿಸೋ ರೀತಿಯಲ್ಲಿ ನನಗೆ ಅಲ್ಲಿ ಸ್ನಾನಮಾಡಿಸುತ್ತಿದ್ದ.

''ಸಾಯಂಕಾಲದ ವೇಳೆ ತಿರುಗಾಡಿಕೊಂಡುಬರಲು ಯಮುನಾ ದಡಕ್ಕೆ ಹೋಗಿಬರುತ್ತಿದ್ದೆ. ದನಕರುಗಳು ಹುಲ್ಲುಗಾವಲಿನಿಂದ ಹಿಂದಿರುಗಿ ಬರುವಾಗ ಯಮುನೆಯ ಮರಳು ಗುಡ್ಡೆಗಳ ಮೂಲಕ ಹಾದುಬರುತ್ತಿದ್ದುವು. ಅವು ಕಣ್ಣಿಗೆ ಬಿದ್ದೊಡನೆಯೆ ನನಗೆ ಕೃಷ್ಣನ ಉದ್ದೀಪನವಾಗಿಬಿಡುತ್ತಿತ್ತು. 'ಕೃಷ್ಣ ಎಲ್ಲಿ? ನನ್ನ ಕೃಷ್ಣ ಎಲ್ಲಿ?' ಎಂದು ಹುಚ್ಚನ ಹಾಗೆ ಕೂಗಿಕೊಳ್ಳುತ್ತ ಕೂಗಿಕೊಳ್ಳುತ್ತ ಅವುಗಳ ಹಿಂದೆ ಓಡುತ್ತಿದ್ದೆ.

''ನಾನು ಪಲ್ಲಕ್ಕಿಯಲ್ಲಿ ಕುಳಿತು ಶ್ಯಾಮಕುಂಡ ರಾಧಾಕುಂಡಗಳಿಗೆ ಹೋಗುತ್ತಿದ್ದಾಗ ಗೋವರ್ಧನವನ್ನು ನೋಡಬೇಕೆಂದು ಕೆಳಕ್ಕೆ ಇಳಿದೆ. ಗೋವರ್ಧನ ಪರ್ವತ ಕಣ್ಣಿಗೆ ಬಿದ್ದೊಡನೆ ಸಂಪೂರ್ಣ ಭಗವದುನ್ಮತ್ತನಾಗಿ ನೇರವಾಗಿ ಓಡಿಹೋಗಿಬಿಟ್ಟು ಪರ್ವತದ ಮೇಲೆ ಹತ್ತಿ ನಿಂತುಕೊಂಡು ಬಾಹ್ಯಜ್ಞಾನಶೂನ್ಯನಾಗಿಬಿಟ್ಟೆ. ಆಗ ವ್ರಜವಾಸಿಗಳು ಅಲ್ಲಿಗೆ ಬಂದು ನನ್ನನ್ನು ಕೆಳಕ್ಕೆ ಇಳಿಸಿಕೊಂಡುಬಂದರು. ಶ್ಯಾಮಕುಂಡ ರಾಧಾಕುಂಡಗಳ ಮಾರ್ಗದಲ್ಲಿದ್ದ ಹುಲ್ಲುಗಾವಲು, ಮರಗಿಡಗಳು, ಹಕ್ಕಿಗಳು, ಜಿಂಕೆಗಳು ಇವನ್ನೆಲ್ಲ ನೋಡಿ ನನಗೆ ಭಗವದುದ್ದೀಪನವಾಗಿಬಿಟ್ಟಿತು. ಕಣ್ಣಿನಿಂದ ಪ್ರೇಮಾಶ್ರು ಸುರಿದು ಬಟ್ಟೆಯೆಲ್ಲಾ ನೆನೆದುಹೋಯಿತು. ಮನಸ್ಸಿಗೆ

ಯೋಚನೆಬರಲಾರಂಭಿಸಿತು: 'ಕೃಷ್ಣನ ಕಾಲದ ಎಲ್ಲವೂ ಇವೆ, ಆದರೆ ಕೇವಲ ಆತನನ್ನು ಮಾತ್ರ ನೋಡಲಾಗುತ್ತಿಲ್ಲವಲ್ಲ.' ಆಗ ಪಲ್ಲಕ್ಕಿಯಲ್ಲಿ ಕುಳಿತುಕೊಂಡಿದ್ದೆ. ಮಾತನಾಡೋ ಶಕ್ತಿಯೇ ಇಲ್ಲಪಂತಾಗಿಬಿಟ್ಟಿತ್ತು. ಹೃದೆ ಪಲ್ಲಕ್ಕಿಯ ಹಿಂದುಗಡೆ ಬರುತ್ತಿದ್ದ. ನನ್ನ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದ ಇರಬೇಕು ಎಂಬುದಾಗಿ ಆತ ಬೋಯಿಗಳಿಗೆ ತಿಳಿಸಿದ್ದ.

"ಬೃಂದಾವನದಲ್ಲಿ ಗಂಗಾಮಾಯಿ ಎಂಬುವಳು ನನ್ನನ್ನು ಬಹಳ ಆದರದಿಂದ ನೋಡಿಕೊಳ್ಳುತ್ತಿದ್ದಳು. ಆಕೆ ಒಬ್ಬ ಮುದುಕಿ. ನಿಧುವನದ ಹತ್ತಿರ ಕುಟೀರ ಕಟ್ಟಿಕೊಂಡು ಒಬ್ಬಳೆ ಇದ್ದಳು. ನನ್ನ ಮಾನಸಿಕ ಅವಸ್ಥೆ ಮತ್ತು ಭಾವ ನೋಡಿ ಹೇಳುತ್ತಿದ್ದಳು: 'ಇವರು ಸಾಕ್ಷಾತ್ ರಾಧೆಯ ದೇಹವನ್ನು ಧಾರಣೆಮಾಡಿಕೊಂಡುಬಂದಿದಾರೆ.' ನನ್ನನ್ನು 'ದುಲಾಲಿ' ಅಂತ ಕರೆಯುತ್ತಿದ್ದಳು. ಆಕೆಯ ಕುಟೀರಕ್ಕೆ ಹೋದೆನೆಂದರೆ ನನ್ನ ಊಟ-ಗೀಟದ ಯೋಚನೆ, ಹಿಂದಿರುಗಬೇಕು ಎಂಬ ಭಾವನೆ ಎಲ್ಲವೂ ಮರೆತು ಹೋಗಿಬಿಡುತ್ತಿತ್ತು. ಹೃದೆ ಒಂದೊಂದು ದಿನ ನಾವು ಇಳಿದುಕೊಂಡಿದ್ದ ಮನೆಯಿಂದ ಆಹಾರ ತೆಗೆದುಕೊಂಡುಬಂದು ಅಲ್ಲೇ ತಿನ್ನಿಸುತ್ತಿದ್ದ. ಆಕೆಯೂ ತಾನು ಮಾಡಿದ ಅಡಿಗೆಯನ್ನು ನನಗೆ ಬಡಿಸುತ್ತಿದ್ದಳು.

"ಗಂಗಾಮಾಯಿಗೆ ಭಾವ ಬರುತ್ತಿತ್ತು. ಆಕೆ ಭಾವಸ್ಥಳಾಗಿರೋದನ್ನು ನೋಡಲು, ಜನರ ದೊಡ್ಡ ದೊಡ್ಡ ಗುಂಪೇ ಬಂದುಬಿಡುತ್ತಿತ್ತು. ಒಂದು ದಿನ ಆಕೆ ಭಾವದಲ್ಲಿ ಹೃದಯನ ಹೆಗಲ ಮೇಲೆ ಹತ್ತಿಬಿಟ್ಟಳು.

"ಆಕೆಯನ್ನು ಬಿಟ್ಟು ಕಲ್ಕತ್ತಕ್ಕೆ ಹಿಂದಿರುಗಿಬರಲು ನನಗೆ ಇಚ್ಛೆಯೇ ಇರಲಿಲ್ಲ. ಆಕೆಯೊಡನೆ ಅಲ್ಲೇ ಇರಲು ಎಲ್ಲಾ ವ್ಯವಸ್ಥೆಯೂ ನಡೆದು ಹೋಯಿತು. ನನಗಾಗಿ ಕುದುಪಲಕ್ಕಿಯ ಅನ್ನದ ಏರ್ಪಾಡೂ ಆಯಿತು. ಆ ಕುಟೀರದಲ್ಲಿ ಗಂಗಾಮಾಯಿಯ ಹಾಸಿಗೆ ಯಾವ ಕಡೆ ಇರಬೇಕು, ನನ್ನ ಹಾಸಿಗೆ ಯಾವ ಕಡೆ ಇರಬೇಕು ಎಂಬುದರ ಏರ್ಪಾಡೂ ಆಯಿತು. ಇದನ್ನೆಲ್ಲ ನೋಡಿ ಹೃದೆ ನನಗೆ ಹೇಳಿದ: 'ನಿಮಗೆ ಅಜೀರ್ಣರೋಗ. ನಿಮ್ಮನ್ನು ನೋಡಿಕೊಳ್ಳುವವರು ಯಾರು ಇಲ್ಲಿ?' ಗಂಗಾಮಾಯಿ ಹೇಳಿದಳು: 'ಏಕೆ, ನಾನಿದೇನಲ್ಲ? ನಾನು ಇವರ ಸೇವೆ ಮಾಡುತ್ತೇನೆ.' ಹೃದೆ ಒಂದು ಕೈ, ಗಂಗಾಮಾಯಿ ಇನ್ನೊಂದು ಕೈ ಹಾಗೆ ಹಿಡಿದುಕೊಂಡು ನನ್ನನ್ನು ಎಳೆಯಲಾರಂಭಿಸಿದರು. ಆ ಸಮಯಕ್ಕೆ ಸರಿಯಾಗಿ ನನಗೆ ನನ್ನ ಹೆತ್ತ ತಾಯ ಜ್ಞಾಪಕ ಬಂತು. ಆಕೆ ಒಬ್ಬಳೆ ಇಲ್ಲಿನ ನಹಬತ್‌ಖಾನೆಯಲ್ಲಿ

ವಾಸವಾಗಿದ್ದಳು. ಬಳಿಕ ಅಲ್ಲಿ ನಿಲ್ಲಲಾಗಲಿಲ್ಲ. ಆಗ ಗಂಗಾಮಾಯಿಗೆ ಹೇಳಿದೆ: 'ಆಗೋಲ್ಲ. ನಾನು ಹೋಗಲೇಬೇಕು.' ಬೃಂದಾವನದಲ್ಲಿ ಒಳ್ಳೆ ಉದ್ದೀಪನ ಆಗುತ್ತದೆ.

ಹನ್ನೊಂದು ಘಂಟೆಯಾಯಿತು. ಪರಮಹಂಸರು ಭಗವತಿ ಕಾಳಿಯ ಪ್ರಸಾದ ಸ್ವೀಕರಿಸುತ್ತಿದಾರೆ. ಮಧ್ಯಾಹ್ನದ ವಿಶ್ರಾಂತಿಯಾದನಂತರ ಪರಮಹಂಸರು ಭಕ್ತರೊಡನೆ ಮಾತುಕತೆ ಆರಂಭಿಸಿದಾರೆ. ಮಧ್ಯೆಮಧ್ಯೆ ಒಮ್ಮೊಮ್ಮೆ ಪ್ರಣವೋಚ್ಚಾರಣೆಯನ್ನೊ ಅಥವಾ ಭಗವನ್ನಾಮೋಚ್ಚಾರಣೆಯನ್ನೊ ಮಾಡುತ್ತಿದಾರೆ.

ಮುಚ್ಚಂಜೆಯಾಯಿತು. ದೇವಾಲಯಗಳಲ್ಲಿ ಮಂಗಳಾರತಿ ನಡೆಯುತ್ತಿದೆ. ಪರಮಹಂಸರು ಕಾಳೀದೇವಾಲಯಕ್ಕೆ ಬಂದಿದಾರೆ. ಇಂದು ವಿಜಯದಶಮಿಯಾದ್ದರಿಂದ ಭಕ್ತರು ಮೊದಲು ಭಗವತಿಗೆ ಪ್ರಣಾಮ ಮಾಡಿ ಬಳಿಕ ಪರಮಹಂಸರ ಪಾದಧೂಳಿಯನ್ನು ಸ್ವೀಕರಿಸುತ್ತಿದಾರೆ.

೨೪ ನೆ ಅಕ್ಟೋಬರ್ ೧೮೮೨, ಆಶ್ವೀಜ ಶುಕ್ಲ ದ್ವಾದಶಿ, ಮಂಗಳವಾರ.

ಘಂಟೆ ಅಪರಾಹ್ನ ಮೂರೊ ನಾಲ್ಕೊ ಇರಬೇಕು. ಪರಮಹಂಸರು ತಿಂಡಿ ಇಟ್ಟಿದ್ದ ಬಡುವಿನ ಹತ್ತಿರ ನಿಂತಿದಾರೆ. ಬಲರಾಮ ಮತ್ತು ಮಾಸ್ಟರ್ ಕಲ್ಕತ್ತದಿಂದ ಗಾಡಿಯಲ್ಲಿ ಬಂದು ಅವರಿಗೆ ಪ್ರಣಾಮಮಾಡಿದರು. ಪರಮಹಂಸರು ನಗುತ್ತ ನಗುತ್ತ ಅವರಿಗೆ ಹೇಳುತ್ತಿದಾರೆ: "ಬಡುವಿನ ಮೇಲೆ ಇಟ್ಟಿದ್ದ ತಿಂಡಿಗೆ ಕೈ ಹಾಕಿದೆನೊ ಇಲ್ಲವೊ, ಒಡನೆಯೆ ಹಲ್ಲಿ 'ಲೊಚ್, ಲೊಚ್' ಅಂತ ಶಬ್ದಮಾಡಿತು. ತಕ್ಷಣ ಕೈಯನ್ನು ಹಿಂದಕ್ಕೆ ತೆಗೆದುಕೊಂಡುಬಿಟ್ಟೆ. (ಎಲ್ಲರೂ ನಗುತ್ತಿದಾರೆ.)

"ನಗಬೇಡಿ! ಇವುಗಳಿಗೂ ಬೆಲೆಕೊಡಬೇಕು. ಇಲ್ಲಿ ನೋಡಿ, ರಾಖಾಲ ಅಸ್ವಸ್ಥನಾಗಿದಾನೆ. ಅದಕ್ಕಾಗಿ ನನ್ನ ಕೈ ಕಾಲು ಕಡಿಯುತ್ತಿವೆ. ಏನಾಯಿತು ಗೊತ್ತೆ? ನಾನು ಹಾಸಿಗೆಯಿಂದ ಎದ್ದಾಗ ಯಾರೊ ಒಬ್ಬ ನನ್ನ ಕಣ್ಣಿಗೆ ಬಿದ್ದ. ಆತ ರಾಖಾಲ ಅಂತ ತಪ್ಪು ಭಾವಿಸಿದೆ. (ಎಲ್ಲರೂ ನಗುತ್ತಿದಾರೆ.) ನಿಜವಾಗಿಯೂ ಶಾರೀರಿಕ ಲಕ್ಷಣಗಳನ್ನೆಲ್ಲಾ ಚೆನ್ನಾಗಿ ನೋಡಬೇಕು. ಅಂದು ನರೇಂದ್ರ ಒಬ್ಬ ಒಕ್ಕಣ್ಣಿನ ಸ್ನೇಹಿತನನ್ನು ಕರೆದುಕೊಂಡು ಬಂದಿದ್ದ. ಆತನ ಇನ್ನೊಂದು ಕಣ್ಣು ಸಂಪೂರ್ಣವಾಗಿ ಕುರುಡಾಗಿರಲಿಲ್ಲ. ನನಗೆ ನಾನೆ ಹೇಳಿಕೊಂಡೆ: 'ಇದೇನಪ್ಪ ಇದು! ಇನ್ನೇನು ಅನಿಷ್ಟಕಾದಿದೆಯೊ?'

"ಇನ್ನೊಬ್ಬ ಇಲ್ಲಿಗೆ ಬರುತ್ತಾನೆ. ಆತ ತರೋ ತಿಂಡಿಯನ್ನು ನನ್ನ ಕೈಯಲ್ಲಿ ತಿನ್ನಲಾಗುತ್ತಿಲ್ಲ. ಆತ ಒಂದು ಆಫೀಸಿನಲ್ಲಿ ಕೆಲಸಮಾಡುತ್ತಿದಾನೆ, ಇಪ್ಪತ್ತು ರೂಪಾಯಿ ಸಂಬಳಕ್ಕೆ. ಇನ್ನೊಂದಿಪ್ಪತ್ತು ರೂಪಾಯನ್ನು ಸುಳ್ಳು ಲೆಕ್ಕ ಬರೆದು ಸಂಪಾದಿಸುತ್ತಾನೆ. ಆತ ಸುಳ್ಳು ಹೇಳೋ ಅಭ್ಯಾಸ ಇಟ್ಟುಕೊಂಡಿರುವುದರಿಂದ ನಾನು ಆತನೊಡನೆ ಹೆಚ್ಚಾಗಿ ಮಾತುಕತೆ ಆಡುತ್ತಿಲ್ಲ. ಒಮ್ಮೊಮ್ಮೆ ಆತ ಆಫೀಸಿಗೆ ಹೋಗದೆ ಇಲ್ಲೇ ಎರಡು ಮೂರು ದಿನಗಳನ್ನು ಕಳೆದುಬಿಡುತ್ತಾನೆ. ಏಕೆ ಹಾಗೆ ಮಾಡುತ್ತಾನೆ ಗೊತ್ತೆ? ನಾನು ಬೇರೆ ಯಾರಿಗಾದರೂ ಹೇಳಿ ಬೇರೆ ಕಡೆ ಕೆಲಸ ಮಾಡಿಸಿಕೊಡಲಿ ಅಂತ.

"ಬಲರಾಮ ಒಳ್ಳೆ ವೈಷ್ಣವ ವಂಶಕ್ಕೆ ಸೇರಿದವನು. ಈತನ ತಂದೆ ಈಗ ಬಹಳ ವೃದ್ಧನಾಗಿಬಿಟ್ಟಿದಾನೆ; ಪರಮವೈಷ್ಣವ. ತಲೆಯಲ್ಲಿ ಜುಟ್ಟು, ಕೊರಳಲ್ಲಿ ತುಳಸೀಮಾಲೆ, ಕೈಯಲ್ಲಿ ಸರ್ವದಾ ಜಪಮಾಲೆ. ಯಾವಾಗ ನೋಡಿದರೂ ಜಪಮಾಡುತ್ತಲೇ ಇರುತ್ತಾನೆ. ಇವರಿಗೆ ಒರಿಸ್ಸಾದಲ್ಲಿ ಬೇಕಾದಷ್ಟು ಜಮೀನು ಇದೆ. ಕೊಠಾರದಲ್ಲಿ, ಬೃಂದಾವನದಲ್ಲಿ ಇನ್ನೂ ಅನೇಕ ಕಡೆ ರಾಧಾಕಾಂತದೇವಾಲಯ ಕಟ್ಟಿಸಿ ಅನ್ನಸತ್ರ ಇಡಿಸಿದಾರೆ.

(ಬಲರಾಮನಿಗೆ) "ಅಂದು ಇಲ್ಲಿಗೆ ಒಬ್ಬ ಬಂದಿದ್ದ. ನನಗೆ ಗೊತ್ತಾಯಿತು ಆತ ತನ್ನ ಕರೀ ಹೆಂಡತಿಯ ದಾಸ ಅಂತ. ಜನರಿಗೆ ಭಗವಂತನ ದರ್ಶನ ಏಕೆ ದೊರೆಯೋದಿಲ್ಲ ಗೊತ್ತೆ? ಕಾಮಕಾಂಚನವೆಂಬುದು ಮಧ್ಯದಲ್ಲಿ ಅಡ್ಡಲಾಗಿ ಬಿದ್ದಿರುವುದರಿಂದ. ಅಂದು ಆತ ನಿನ್ನೆದುರಿಗೆ ಹೇಳಬೇಕಾದರೆ: 'ನಮ್ಮ ಮನೆಗೆ ಒಬ್ಬ ಪರಮಹಂಸರು ಬಂದಿದ್ದರು. ನಮ್ಮ ತಂದೆ ಅವರಿಗೆ ಕೋಳಿಪಲ್ಯವನ್ನು ಮಾಡಿಸಿ ಬಡಿಸಿದರು' ಎಂಬುದಾಗಿ, ಆತ ಎಷ್ಟು ದುರುಳನಾಗಿರಬೇಕು.!

"ಈಗಿನ ನನ್ನ ಅವಸ್ಥೆಯಲ್ಲಿ ಭಗವತಿಯ ಪ್ರಸಾದವಾಗಿದ್ದರೆ ಮಾತ್ರ ಒಂದು ಕಿಂಚಿತ್ ಮೀನಿನ ಸಾರು ಊಟಮಾಡಬಲ್ಲೆ, ಮಾಂಸಪ್ರಸಾದವನ್ನ ತಿನ್ನಲಾಗುತ್ತಿಲ್ಲ. ಆದರೆ ಆಕೆಗೆ ಕೋಪಬಾರದಿರಲೆಂದು ಬೆರಳಿನ ತುದಿಯಿಂದ ಮುಟ್ಟಿ ಒಂದು ಸ್ವಲ್ಪ ರುಚಿನೋಡುತ್ತೇನೆ. (ನಗು.)

"ಒಳ್ಳೇದು, ಈ ನನ್ನ ಅವಸ್ಥೆ ಇದೇನಿದು ಹೇಳು ನೋಡೋಣ. ಒಮ್ಮೆ ನಾನು ಎತ್ತಿನ ಬಂಡಿಯಲ್ಲಿ ಕುಳಿತು ವರ್ಧಮಾನದಿಂದ ಊರಿಗೆ (ಕಾಮಾರಪುಕುರಕ್ಕೆ) ಹೋಗುತ್ತಿದ್ದೆ. ಆಗ ಬಿರುಮಳೆ ಬಂದಿತು. ಯಾರ್‍ಯಾರೊ

ಗಾಡಿಯ ಹತ್ತಿರಕ್ಕೆ ಬರಲಾರಂಭಿಸಿದರು. ನನ್ನ ಜೊತೆಯಲ್ಲಿದ್ದವರು ಹೇಳಿದರು, ಅವರು ಡಕಾಯಿತರು. ಆಗ ನಾನು ಭಗವನ್ನಾಮ ಜಪಿಸಲು ಶುರುಮಾಡಿದೆ—ಕೆಲವು ವೇಳೆ 'ರಾಮ, ರಾಮ' ಎಂಬುದಾಗಿ, ಇನ್ನು ಕೆಲವು ವೇಳೆ 'ಕಾಳಿ, ಕಾಳಿ' ಎಂಬುದಾಗಿ, ಮತ್ತೆ ಕೆಲವು ವೇಳೆ 'ಹನು-ಮಂತ, ಹನುಮಂತ' ಎಂಬುದಾಗಿ. ಹೀಗೇ ಇನ್ನೂ ಎಲ್ಲಾ ದೇವರ ಹೆಸರನ್ನೂ ಜಪಿಸಿದೆ. ಏಕೆ ನಾನು ಹೀಗೆ ಮಾಡಿದೆ ಹೇಳು ನೋಡೋಣ."

ಇರುವವನು ಭಗವಂತನೊಬ್ಬನೇ, ಆದರೆ ಆತನಿಗೆ ಅನಂತ ಹೆಸರು. ಭಿನ್ನಭಿನ್ನ ಸಂಪ್ರದಾಯದವರು, ಭಿನ್ನಭಿನ್ನ ಧರ್ಮಾವಲಂಬಿಗಳು ಕೇವಲ ಆತನ ಹೆಸರಿಗಾಗಿ ವಾದವಿವಾದದಲ್ಲಿ ತೊಡಗಿ ಸಾಯುತ್ತಿದಾರೆ ಎಂಬುದನ್ನು ಪರಮಹಂಸರು ಸೂಚಿಸಿದರೇನು?

ಶ್ರೀರಾಮಕೃಷ್ಣರು ಬಲರಾಮನಿಗೆ: "ಕಾಮಕಾಂಚನವೇ ಮಾಯೆ ಎಂಬುದು. ಅದರ ಮಧ್ಯೆ ಬಹಳಕಾಲ ವಾಸವಾಗಿದ್ದರೆ, ಕ್ರಮೇಣ ಎಚ್ಚರಿಕೆ ತಪ್ಪಿಹೋಗುತ್ತದೆ — ಅದೇ ಆನಂದವಾಗಿರುವಂತೆ ತೋರಿ ಬರುತ್ತದೆ. ಜಾಡಮಾಲಿ ಕಕ್ಕಸ ಹೊರುತ್ತಾನೆ. ಹೊರುತ್ತ ಹೊರುತ್ತ ಕೊನೆಗೆ ಅದನ್ನು ಕಂಡರೆ ಅಸಹ್ಯನೇ ತೋರೋದಿಲ್ಲ. ಭಗವಂತನ ನಾಮ ಗುಣಕೀರ್ತನೆ ಮಾಡೋ ಅಭ್ಯಾಸ ಇಟ್ಟುಕೊಂಡಿದ್ದರೆ ಕ್ರಮೇಣ ಭಕ್ತಿ ಉಂಟಾಗಿಬಿಡುತ್ತದೆ. (ಮಾಸ್ಟರಿಗೆ) ಭಗವಂತನ ಹೆಸರು ಹೇಳಲು ಲಜ್ಜೆಪಟ್ಟುಕೊಳ್ಳಬಾರದು. 'ಲಜ್ಜೆ, ದ್ವೇಷ, ಭಯ ಇವು ಮೂರೂ ಇರಬಾರದು.'

"ಆ ದೇಶದಲ್ಲಿ (ಕಾಮಾರಪುಕುರದಲ್ಲಿ) ಒಳ್ಳೆ ಕೀರ್ತನೆ ನಡೆಯುತ್ತದೆ. ಕೀರ್ತನೆಯ ಸಮಯದಲ್ಲಿ ಮೃದಂಗವನ್ನೂ ಬಾಜಿಸುತ್ತಾರೆ. ನಕುಲ ಆಚಾರ್ಯನ ಕೀರ್ತನೆ ಬಹಳ ಸೊಗಸಾದ್ದು.

(ಬಲರಾಮನಿಗೆ) "ನೀವು ಬೃಂದಾವನದಲ್ಲಿ ಭಗವಂತನ ಆರಾಧನೆ ನಡೆಸುತ್ತಾ ಇದೀರೇನು?"

ಬಲರಾಮ: "ಹೌದು, ಅಲ್ಲಿ ನಮಗೊಂದು ಕುಂಜ ಇದೆ. ಅದರಲ್ಲಿ ಶ್ಯಾಮಸುಂದರನ ಆರಾಧನೆ ನಡೆಯುತ್ತಿದೆ."

ಶ್ರೀರಾಮಕೃಷ್ಣರು: "ನಾನೂ ಬೃಂದಾವನಕ್ಕೆ ಹೋಗಿದ್ದೆ. ನಿಧುವನ ಬಹಳ ಒಳ್ಳೆ ಜಾಗ."

೫

## ಶ್ರೀ ರಾಮಕೃಷ್ಣರು ಮತ್ತು ಕೇಶವಚಂದ್ರಸೇನ

೨೭ ನೆ ಅಕ್ಟೋಬರ್ ೧೮೮೨, ಲಕ್ಷ್ಮೀಪೂಜೆ, ಶುಕ್ರವಾರ.

ಕೇಶವಚಂದ್ರಸೇನ ಇಂದು ಪರಮಹಂಸರಿಗಾಗಿ ಒಂದು ಸಂತೋಷ ನೌಕಾ ವಿಹಾರ ಏರ್ಪಡಿಸಿದಾನೆ.

ಸುಮಾರು ಅಪರಾಹ್ನ ನಾಲ್ಕು ಘಂಟೆ ಸಮಯಕ್ಕೆ ಗಂಗಾನದಿಯಲ್ಲಿ ಒಂದು ಜಹಜು ಬಂದು ದಕ್ಷಿಣೇಶ್ವರ ಕಾಳೀದೇವಾಲಯ ಘಟ್ಟದ ಹತ್ತಿರ ಲಂಗರು ಹಾಕಿದೆ. ಒಳಗಡೆ ಕೇಶವಚಂದ್ರಸೇನ ಮತ್ತು ಬ್ರಾಹ್ಮಸಮಾಜದ ಆತನ ಅನುಯಾಯಿಗಳೆಲ್ಲ ಕುಳಿತಿದಾರೆ. ಅವರ ಮುಂದುಗಡೆಯೇ ಕಾಣ ಬರುತ್ತಿದೆ ಸ್ನಾನಘಟ್ಟ ಮತ್ತು ಎದುರು ಮಂಟಪ. ಆ ಮಂಟಪದ ಎಡಗಡೆ ಆರು ಶಿವದೇವಾಲಯಗಳು, ಬಲಗಡೆ ಆರು ಶಿವದೇವಾಲಯ ಗಳು. ಭವತಾರಿಣಿ ಕಾಳೀದೇವಾಲಯದ ಶಿಖರ, ಪಂಚವಟಿಯಲ್ಲಿರುವ ಮರಗಿಡಗಳ ಮತ್ತು ಅವುಗಳಿಗೆ ಸಮೀಪದಲ್ಲೆ ಇರುವ ಸರ್ಪ ಮರಗಳ ತುತ್ತತುದಿಗಳು ಶರತ್ಕಾಲದ ನೀಲಾಕಾಶವನ್ನು ಭೇದಿಸಿ ನಿಂತಿವೆ. ಎರಡು ನಹಬತ್‌ಖಾನೆಗಳ ಮಧ್ಯೆ ಹಬ್ಬಿರುವ ಹೂವಿನ ತೋಟ ಬಹಳ ಸುವಾಸನೆ ಯುಳ್ಳ ಹೂವುಗಳಿಂದ ಸುಮ್ಮನೆ ತುಂಬಿದೆ. ಗಂಗಾ ನದಿಯ ದಡದಲ್ಲಿ ಸಾಲು ಸಾಲಾಗಿ ಹೂವಿನ ಗಿಡಗಳು ಬೆಳೆದು ನಿಂತಿವೆ. ಇಂದಿನ ಸ್ವಚ್ಛ ನೀಲಾಕಾಶ ಜಾಹ್ನವೀ ಜಲದಲ್ಲಿ ಪ್ರತಿಬಿಂಬಿತವಾಗುತ್ತಿದೆ. ಹೊರಗಿನ ಜಗತ್ತು ಕೋಮಲಭಾವ ತಾಳಿದೆ. ಬ್ರಾಹ್ಮ ಭಕ್ತರ ಹೃದಯಮಧ್ಯದಲ್ಲೂ ಕೋಮಲಭಾವ ನೆಲಸಿದೆ. ಮೇಲುಗಡೆ ಸುಂದರ ಸುನೀಲ ಅನಂತ ಆಕಾಶ, ಎದುರಿಗೆ ಭವ್ಯಕಾಳೀದೇವಾಲಯ, ಕೆಳಗಡೆ ಯಾವುದರ ತೀರ ಆರ್ಯ ಋಷಿಗಳ ನೆಲೆಬೀಡಾಗಿತ್ತೊ ಅಂಥ ಪವಿತ್ರಗಂಗೆಯ ಸಲಿಲ. ಅದರ ದಡದಲ್ಲೆ ವಾಸವಾಗಿದಾರೆ ಸನಾತನ ಧರ್ಮವೇ ಮೂರ್ತಿಮತ್ತಾಗಿ ಅವತರಿಸಿದೆಯೊ ಏನೊ ಎಂಬಂತಿರುವ ವ್ಯಕ್ತಿ ಶ್ರೀರಾಮಕೃಷ್ಣಪರಮ- ಹಂಸರು. ಅಂಥ ಮಹಾಪುರುಷರ ದರ್ಶನಪಡೆಯುವ ಸೌಭಾಗ್ಯ ಎಲ್ಲರ ಹಣೆಯಲ್ಲೂ ಬರೆದಿದೆಯೆ? ಇಂಥ ಭವ್ಯವಾದ ಸ್ಥಳದಲ್ಲಿರುವ ಆ ಮಹಾ

ಪುರುಷರ ದರ್ಶನ ಮಾತ್ರದಿಂದಲೆ ಹೃದಯ ಎಂಥಾ ಕಲ್ಲಿನದಾಗಿದ್ದರೂ ಅದರಲ್ಲಿ ಭಕ್ತಿ ಉದ್ರೇಕಗೊಳ್ಳದೆ ಉಳಿದೀತೆ?

ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತು ವಿಜಯಗೋಸ್ವಾಮಿ ಮತ್ತು ಹರಲಾಲನೊಡನೆ ಮಾತುಕತೆ ಆಡುತ್ತಿದ್ದಾರೆ. ಕೇಶವನ ಅನುಯಾಯಿಗಳಲ್ಲಿ ಕೆಲವರು ಕೊಠಡಿಯನ್ನು ಪ್ರವೇಶಿಸಿದರು. ಪರಮಹಂಸರಿಗೆ ಪ್ರಣಾಮಮಾಡಿ ಅವರಿಗೆ ವಿಜ್ಞಾಪನೆ ಮಾಡಿಕೊಳ್ಳುತ್ತಿದಾರೆ: "ಮಹಾಶಯರೆ, ಜಹಜು ಬಂದಿದೆ. ಕೇಶವಬಾಬು ನಿಮ್ಮನ್ನು ಕರೆದುಕೊಂಡು ಬರಬೇಕೆಂದು ನಮ್ಮನ್ನು ಕಳುಹಿಸಿದಾರೆ. ದಯವಿಟ್ಟು ಹೊರಡಿ, ಸ್ವಲ್ಪ ಸುತ್ತಾಡಿಕೊಂಡು ಬರುವಿರಂತೆ." ಪರಮಹಂಸರನ್ನು ಜಹಜಿನ ಹತ್ತಿರಕ್ಕೆ ಕರೆದುಕೊಂಡುಹೋಗಲು ಒಂದು ಚಿಕ್ಕ ದೋಣಿ ಸಿದ್ಧವಾಗಿ ನಿಂತಿದೆ. ಅವರು ಆ ದೋಣಿಗೆ ಕಾಲು ಹಾಕುವುದೆ ತಡ ಬಾಹ್ಯಜ್ಞಾನಶೂನ್ಯರಾಗಿ ಸಮಾಧಿಸ್ಥರಾಗಿಬಿಟ್ಟರು. ವಿಜಯ ಅವರೊಡನೆ ಇದಾನೆ.

ಮಾಸ್ಟರ್ ಪ್ರಯಾಣಿಕರ ಮಧ್ಯೆ ನಿಂತಿದಾನೆ. ದೋಣಿ ಜಹಜಿನ ಹತ್ತಿರಕ್ಕೆ ಬರುವುದೆ ತಡ ಅವರ ದರ್ಶನ ಪಡೆಯಲು ಜನರೆಲ್ಲರೂ ಕಟಕಟೆಯ ಹತ್ತಿರಕ್ಕೆ ನುಗ್ಗಿಬಿಟ್ಟರು. ಕೇಶವಸೇನನಿಗೆ ತುಂಬ ವ್ಯಾಕುಲ ಹತ್ತಿಬಿಟ್ಟಿತು, ಅವರನ್ನು ಹೇಗೆ ಸುರಕ್ಷಿತವಾಗಿ ಜಹಜಿಗೆ ಹತ್ತಿಸುವುದು ಅಂತ. ಬಹಳ ಕಷ್ಟಪಟ್ಟು ಅವರಿಗೆ ಸ್ವಲ್ಪ ಬಾಹ್ಯಪ್ರಜ್ಞೆ ಬರುವಂತೆ ಮಾಡಿ ಕೊನೆಗೆ ಅವರನ್ನು ಜಹಜಿನ ಒಂದು ಕ್ಯಾಬಿನ್ನಿಗೆ ಕರೆದುಕೊಂಡು ಬಂದುದಾಯಿತು. ಇನ್ನೂ ಭಾವಸ್ಥರಾಗಿದಾರೆ. ಒಬ್ಬ ಭಕ್ತನ ಮೇಲೆ ಭಾರ ಹಾಕಿ ಹೆಜ್ಜೆ ಇಡುತ್ತಿದಾರೆ. ಕೇಶವನೇ ಮೊದಲಾದ ಭಕ್ತರು ಅವರಿಗೆ ಪ್ರಣಾಮಮಾಡುತ್ತಿದಾರೆ, ಆದರೆ ಅವರಿಗೆ ಎಚ್ಚರವೇ ಇಲ್ಲ. ಕ್ಯಾಬಿನ್ ಒಳಗೆ ಕೆಲವು ಕುರ್ಚಿ ಒಂದು ಮೇಜು ಹಾಕಲ್ಪಟ್ಟಿವೆ. ಒಂದು ಕುರ್ಚಿಯ ಮೇಲೆ ಪರಮಹಂಸರನ್ನು ಕೂರಿಸಿ ಇನ್ನೊಂದರ ಮೇಲೆ ಕೇಶವಸೇನ ಕುಳಿತುಕೊಳ್ಳುತ್ತಿದಾನೆ. ವಿಜಯನೂ ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾನೆ. ಭಕ್ತರು ಜಾಗವಿದ್ದ ಎಡೆಯಲ್ಲಿ ನೆಲದ ಮೇಲೆ ಕುಳಿತುಕೊಳ್ಳುತ್ತಿದಾರೆ. ಎಲ್ಲರಿಗೂ ಒಳಗೇ ಸ್ಥಳ ಆಗಲಿಲ್ಲ. ಉಳಿದವರು ಹೊರಗಡೆ ನಿಂತುಕೊಳ್ಳಬೇಕಾಯಿತು. ಅವರು ಬಾಗಿಲ ಮೂಲಕ, ಕಿಟಕಿಯ ಮೂಲಕ ಇಣಿಕಿ ನೋಡುತ್ತಿದಾರೆ. ಪರಮಹಂಸರು ಕುರ್ಚಿಯ ಮೇಲೆ ಕುಳಿತು ಮತ್ತೆ ಸಮಾಧಿಸ್ಥರಾಗಿಬಿಟ್ಟದಾರೆ. ಸಂಪೂರ್ಣ

ಬಾಹ್ಯಜ್ಞಾನಶೂನ್ಯರಾಗಿಬಿಟ್ಟಿದಾರೆ. ಎಲ್ಲರೂ ನೆಟ್ಟ ದೃಷ್ಟಿಯಿಂದ ಅವರ ಕಡೆಗೇ ನೋಡುತ್ತಿದಾರೆ.

ಕೊಠಡಿಯಲ್ಲಿ ಬಹಳ ಜನ ಸೇರಿಬಿಟ್ಟಿದ್ದರಿಂದ ಸಾಕಾದಷ್ಟು ಗಾಳಿ ಬರಲಿ ಎಂದು ಕೇಶವಚಂದ್ರಸೇನ ಕಿಟಕಿ ಬಾಗಿಲುಗಳನ್ನೆಲ್ಲಾ ತೆರೆದ. ವಿಜಯನಿಗು ಕೇಶವಸೇನನಿಗು ಬ್ರಾಹ್ಮಸಮಾಜದ ಕೆಲವು ನಿಯಮಗಳ ಸಂಬಂಧವಾಗಿ ವೈಮನಸ್ಯ ಹುಟ್ಟಿ, ವಿಜಯ ಕೇಶವನ ಸಂಗಡ ಬಿಟ್ಟು ಸಾಧಾರಣ ಬ್ರಾಹ್ಮಸಮಾಜದ ಅನುಯಾಯಿಯಾಗಿದಾನೆ. ಆತ ಇಲ್ಲಿಗೆ ಬಂದಿರುವುದನ್ನು ನೋಡಿ ಕೇಶವನ ಮನಸ್ಸಿಗೆ ಹೇಗೋ ಆಯಿತು.

ಬ್ರಾಹ್ಮಭಕ್ತರು ಏಕದೃಷ್ಟಿಯಿಂದ ಪರಮಹಂಸರ ಕಡೆ ನೋಡುತ್ತಿದಾರೆ. ಅವರು ಕ್ರಮೇಣ ಪ್ರಕೃತಿಸ್ಥರಾಗಲಾರಂಭಿಸಿದಾರೆ. ಇನ್ನೂ ಭಾವಸ್ಥರಾಗೇ ಪರಮಹಂಸರು ಅಸ್ಪಷ್ಟ ಸ್ವರದಿಂದ ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: "ತಾಯೆ, ನನ್ನನ್ನು ಇಲ್ಲಿಗೇಕೆ ಕರೆದುಕೊಂಡುಬಂದೆ? ಬೇಲಿಯೊಳಗೆ ಸಿಕ್ಕಿಕೊಂಡಿರೋ ಇವರನ್ನು ಉದ್ಧರಿಸಲು ನನ್ನಿಂದ ಸಾಧ್ಯವೆ? ಅಲ್ಲಿ ನೆರೆದಿದ್ದ ಜನರು ಈ ಜಗತ್ತೆಂಬ ಬಂದಿಖಾನೆಯ ಆವರಣದಲ್ಲಿ ಬದ್ಧರಾಗಿರುವುದು ಅವರ ಕಣ್ಣಿಗೆ ಬಿತ್ತೇನು? ಅವರು ಅಸಹಾಯಕರಾಗಿರುವುದನ್ನು ನೋಡಿ ಪರಮಹಂಸರು ಈ ಕೆಲ ಮಾತುಗಳನ್ನು ಭಗವತಿಯೊಡನೆ ಆಡಿದರೇನು?

ಪರಮಹಂಸರಿಗೆ ಕ್ರಮೇಣ ಬಾಹ್ಯಜ್ಞಾನ ಉಂಟಾಗುತ್ತಿದೆ. ಗಾಜಿಪುರದ ನೀಲಮಾಧವಬಾಬು ಮತ್ತು ಒಬ್ಬ ಬ್ರಾಹ್ಮಭಕ್ತ ಪವಹಾರಿಬಾಬನ ಸಂಬಂಧವಾಗಿ ಮಾತುಕತೆ ಆಡುತ್ತಿದ್ದರು. ಇನ್ನೊಬ್ಬ ಬ್ರಾಹ್ಮಭಕ್ತ ಪರಮಹಂಸರಿಗೆ ಹೇಳಿದ: "ಇವರು ಪವಹಾರಿಬಾಬರನ್ನು ನೋಡಿ ಬಂದಿದಾರೆ. ಅವರು ಗಾಜೀಪುರದಲ್ಲಿ ವಾಸಿಸುತ್ತಿದಾರೆ. ಅವರೂ ನಿಮ್ಮಂತೆಯೇ ಒಬ್ಬ ಮಹಾಪುರುಷರು." ಮಾತನಾಡುವ ಶಕ್ತಿ ಪರಮಹಂಸರಿಗೆ ಇನ್ನೂ ಬಂದಿಲ್ಲ; ಎಲ್ಲೊ ಕಿಂಚಿತ್ ನಗುತ್ತಿದಾರೆ. ಆ ಭಕ್ತ ಮತ್ತೆ ಹೇಳಿದ: "ಮಹಾಶಯರೆ, ಪವಹಾರಿಬಾಬರು ತಮ್ಮ ಕೊಠಡಿಯಲ್ಲಿ ನಿಮ್ಮ ಫೋಟೊ ಇಟ್ಟುಕೊಂಡಿದಾರೆ." ಪರಮಹಂಸರು ತಮ್ಮ ಶರೀರದ ಕಡೆ ಬೆರಳುಮಾಡಿ ಕಿಂಚಿತ್ ನಗುತ್ತ ಹೇಳುತ್ತಿದಾರೆ: "ಇದು ಕೇವಲ ದಿಂಬಿನ ಚೀಲ ಮಾತ್ರ."

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಆದರೆ ಒಂದು

ವಿಷಯ. ಭಕ್ತನ ಹೃದಯ ಭಗವಂತನ ಆವಾಸಸ್ಥಾನ. ಆತ ಸರ್ವ ಭೂತಗಳಲ್ಲೂ ಇರುವುದೇನೊ ನಿಜ, ಆದರೆ ಭಕ್ತನ ಹೃದಯದಲ್ಲಿ ವಿಶೇಷ ರೂಪದಿಂದ ಇರುತ್ತಾನೆ. ಜಮೀನುದಾರ ತನ್ನ ಎಸ್ಟೇಟಿನಲ್ಲಿ ಎಲ್ಲಿ ಬೇಕಾದ ರಲ್ಲಿ ಇರಬಲ್ಲ. ಆದರೆ ಆತನನ್ನು ವಿಶೇಷವಾಗಿ ಆತನ ಬೈಠಕ್‌ಖಾನೆಯಲ್ಲಿ ನೋಡಬಹುದು ಎಂಬುದಾಗಿ ಜನ ಹೇಳುತ್ತಾರೆ. ಭಕ್ತನ ಹೃದಯ ಭಗವಂತನ ಬೈಠಕ್‌ಖಾನೆ.

"ಜ್ಞಾನಿಗಳು ಯಾರನ್ನ ಬ್ರಹ್ಮ ಅಂತ ಕರೆಯುತ್ತಾರೊ, ಆತನನ್ನೇ ಯೋಗಿಗಳು ಆತ್ಮ ಅಂತ ಕರೆಯುತ್ತಾರೆ, ಭಕ್ತರು ಭಗವಂತ ಅಂತ ಕರೆಯುತ್ತಾರೆ. ಒಬ್ಬನೇ ಬ್ರಾಹ್ಮಣನಿಗೆ ಪೂಜೆಮಾಡುವಾಗ ಪೂಜಾರಿ ಅಂತ ಹೆಸರು, ಅಡಿಗೆಮಾಡುವಾಗ ಅಡಿಗೆಯವ ಅಂತ ಹೆಸರು. ಜ್ಞಾನಯೋಗಿ ಜ್ಞಾನಮಾರ್ಗನಿಷ್ಠನಾಗಿ ಸರ್ವದಾ 'ನೇತಿ, ನೇತಿ' ಎಂಬ ವಿಚಾರದಲ್ಲಿ, ಅಂದರೆ 'ಬ್ರಹ್ಮ ಇದಲ್ಲ, ಅದಲ್ಲ, ಜೀವವಲ್ಲ, ಜಗತ್ತಲ್ಲ' ಎಂಬ ವಿಚಾರದಲ್ಲಿ ತೊಡಗಿರುತ್ತಾನೆ. ಈ ರೀತಿಯಾಗಿ ವಿಚಾರಮಾಡುತ್ತ ಮಾಡುತ್ತ ಮುಂದುವರಿದರೆ ಮನಸ್ಸು ಸ್ಥಿರವಾಗುತ್ತದೆ. ಬಳಿಕ ಮನಸ್ಸು ಲಯಹೊಂದುತ್ತದೆ, ಸಮಾಧಿಯುಂಟಾಗುತ್ತದೆ. ಆಗ ಬ್ರಹ್ಮಜ್ಞಾನ ದೊರೆಯುತ್ತದೆ. ಬ್ರಹ್ಮಜ್ಞಾನಿಯ ನಿಶ್ಚಿತಾಭಿಪ್ರಾಯ, ಬ್ರಹ್ಮ ಸತ್ಯ ಜಗನ್ಮಿಥ್ಯಾ. ಈ ನಾಮರೂಪಗಳೆಲ್ಲ ಸ್ವಪ್ನದ ಹಾಗೆ ಮಿಥ್ಯಾ. ಬ್ರಹ್ಮ ಏನು ಎಂಬುದನ್ನ ಬಾಯಿಂದ ವರ್ಣಿಸಲಾಗೋದಿಲ್ಲ. ಆತನನ್ನು ಒಬ್ಬ ವ್ಯಕ್ತಿ ಅಂತಲೂ ಹೇಳಲಾಗೋದಿಲ್ಲ. ಹೀಗೆಂದು ಜ್ಞಾನಿಗಳು—ವೇದಾಂತ ವಾದಿಗಳು ಹೇಳುತ್ತಾರೆ.

"ಆದರೆ ಭಕ್ತರು ಎಲ್ಲಾ ಅವಸ್ಥೆಗಳನ್ನೂ ಸ್ವೀಕರಿಸುತ್ತಾರೆ. ಜಾಗ್ರತ್ ಅವಸ್ಥೆ ಕೂಡ ಸತ್ಯ ಅಂತ ಹೇಳುತ್ತಾರೆ. ಅವರು ಜಗತ್ತು ಸ್ವಪ್ನವತ್ ಅಂತ ಹೇಳೋದಿಲ್ಲ. ಹೇಳುತ್ತಾರೆ, ಈ ಜಗತ್ತು ಭಗವಂತನ ಐಶ್ವರ್ಯ. ಆಕಾಶ, ನಕ್ಷತ್ರ, ಚಂದ್ರ, ಸೂರ್ಯ, ಪರ್ವತ, ಸಮುದ್ರ, ಜೀವ, ಜಂತು ಎಲ್ಲವನ್ನೂ ಭಗವಂತ ಸೃಷ್ಟಿಸಿದಾನೆ. ಇವೆಲ್ಲವೂ ಆತನ ಐಶ್ವರ್ಯವೇ. ಆತ ನಮ್ಮ ಅಂತರ್ಯದಲ್ಲಿ, ಹೃದಯ ಮಧ್ಯದಲ್ಲಿ ಇದಾನೆ. ಮತ್ತೆ ಹೊರಗೂ ಇದಾನೆ. ಉತ್ತಮ ಭಕ್ತ ಹೇಳುತ್ತಾನೆ, ಆತನೇ ಈ ಚತುರ್ವಿಂಶತಿ ತತ್ತ್ವ—ಜೀವಜಗತ್ತು ಆಗಿದಾನೆ. ಭಕ್ತನ

ಇಚ್ಛೆ ಸಕ್ಕರೆ ತಿನ್ನಬೇಕು ಅಂತಲೇ ವಿನಾ ಸಕ್ಕರೆ ಆಗಬೇಕು ಅಂತಲ್ಲ. (ಎಲ್ಲರೂ ನಗುತ್ತಿದಾರೆ.)

"ಭಕ್ತನ ಭಾವ ಯಾವರೀತಿಯದು ಗೊತ್ತೆ? ಆತನ ಭಾವ: 'ಹೇ ಭಗವಂತ, ನೀನು ಪ್ರಭು, ನಾನು ನಿನ್ನ ದಾಸ. ನೀನು ತಾಯಿ, ನಾನು ನಿನ್ನ ಮಗು' ಎಂಬುದಾಗಿ. ಮತ್ತೆ: 'ನೀನು ನನ್ನ ತಾಯಿ, ತಂದೆ. ನೀನು ಪೂರ್ಣ, ನಾನು ಅಂಶ' ಎಂಬುದಾಗಿ. ಭಕ್ತ 'ನಾನೇ ಬ್ರಹ್ಮ' ಎಂಬುದಾಗಿ ಹೇಳಲು ಎಂದಿಗೂ ಇಚ್ಛೆಪಡೋದಿಲ್ಲ.

"ಯೋಗಿಯೂ ಪರಮಾತ್ಮನ ಸಾಕ್ಷಾತ್ಕಾರ ಪಡೆಯಲು ಪ್ರಯತ್ನಿಸುತ್ತಾನೆ. ಆತನ ಗುರಿ ಜೀವಾತ್ಮ ಪರಮಾತ್ಮರ ಐಕ್ಯ. ಆತ ವಿಷಯ ವಸ್ತುಗಳಿಂದ ಮನಸ್ಸನ್ನು ಸೆಳೆದುಕೊಂಡು ಅದನ್ನು ಪರಮಾತ್ಮನಲ್ಲಿ ಸ್ಥಿರ ಮಾಡಲು ಯತ್ನಿಸುತ್ತಾನೆ. ಆದಕ್ಕಾಗೇ ಮೊದಮೊದಲು ನಿರ್ಜನ ಪ್ರದೇಶಕ್ಕೆ ಹೋಗಿ ಸ್ಥಿರ ಆಸನದಲ್ಲಿ ಕುಳಿತು ಅನನ್ಯಮನಸ್ಕನಾಗಿ ಧ್ಯಾನ, ಚಿಂತನೆ ಮಾಡುತ್ತಾನೆ.

"ಆದರೆ ವಸ್ತು ಮಾತ್ರ ಒಂದೇ, ಹೆಸರು ಮಾತ್ರ ವಿವಿಧ. ಯಾರು ಬ್ರಹ್ಮನೊ, ಆತನೇ ಆತ್ಮ, ಆತನೇ ಭಗವಂತ. ಜ್ಞಾನಮಾರ್ಗಿಗಳ ಬ್ರಹ್ಮನೇ ಯೋಗಿಗಳ ಪರಮಾತ್ಮ, ಭಕ್ತರ ಭಗವಂತ.

ಜಹಜು ಕಲ್ಕತ್ತದ ಕಡೆಗೆ ಹೋಗುತ್ತಿದೆ. ಆದರೆ ಯಾರು ಜಹಜಿನಲ್ಲಿ ಕುಳಿತು ಪರಮಹಂಸರ ದರ್ಶನಮಾಡುತ್ತ ಅವರ ಅಮೃತಮಯ ವಾಣಿಯನ್ನು ಕೇಳುತ್ತಿದ್ದರೊ, ಅವರಿಗೆ ಜಹಜು ಚಲಿಸುತ್ತಿರುವುದು ಗೊತ್ತೇ ಆಗಲಿಲ್ಲ. ಸುಂದರವಾದ ಉದ್ಯಾನವನಗಳಿಂದ ಮತ್ತು ದೇವಾಲಯಗಳಿಂದ ಕೂಡಿದ ದಕ್ಷಿಣೇಶ್ವರ ಕಣ್ಣಿಗೆ ಮರೆಯಾಗುತ್ತಾ ಬಂತು. ಜಹಜಿನ ಹುಟ್ಟುಗಾಲಿಯ ಕಡೆತಕ್ಕೆ ಸಿಕ್ಕಿದ ಗಂಗಾವಾರಿ ನೊರೆಯಿಂದ ತುಂಬಿ ಭೋರ್ಗರೆಯುತ್ತ ಅಲೆಗಳಿಂದ ಅಲ್ಲೋಲಕಲ್ಲೋಲವಾಗುತ್ತಿದೆ. ಭಕ್ತರಿಗೆ ಇವುಗಳಾವುದರ ಅರಿವೂ ಆಗುತ್ತಲೇ ಇಲ್ಲ. ಅವರು ಮುಗ್ಧರಾಗಿ ನೋಡುತ್ತಿದಾರೆ, ನಗುಮುಖರಾದ, ಆನಂದಮಯರಾದ, ಪ್ರೇಮಾನುರಂಜಿತನಯನರಾದ, ಪ್ರಿಯದರ್ಶನರಾದ ಅದ್ಭುತ ಯೋಗವರ್ಯ ಪರಮಹಂಸರನ್ನ. ಪರಮಹಂಸರಿಗೆ ಭಗವಂತನ ಹೊರತು ಬೇರೇನೂ ಗೊತ್ತಿಲ್ಲ. ಜ್ಞಾನವಾಹಿನಿ ಅವರ ಬಾಯಿಂದ ಸುಮ್ಮನೆ ಹರಿಯುತ್ತಲೇ ಇದೆ.

ಶ್ರೀರಾಮಕೃಷ್ಣರು: "ಜ್ಞಾನಮಾರ್ಗಾವಲಂಬಿ ವೇದಾಂತಿಗಳು ಹೇಳುತ್ತಾರೆ, ಸೃಷ್ಟಿ, ಸ್ಥಿತಿ, ಪ್ರಳಯ, ಜೀವಜಗತ್ತು ಇವೆಲ್ಲಾ ಶಕ್ತಿಯ ಕ್ರೀಡೆ. ವಿಚಾರಮಾಡಿನೋಡಿದರೆ, ಇವೆಲ್ಲಾ ಸ್ವಪ್ನದ ಹಾಗೆ. ನಿಜವಾಗಿ ಬ್ರಹ್ಮನೇ ಏಕಮಾತ್ರ ವಸ್ತು, ಉಳಿದುದೆಲ್ಲಾ ಅವಸ್ತು. ಶಕ್ತಿಯೂ ಸ್ವಪ್ನದೋಪಾದಿಯಲ್ಲಿ ಅವಸ್ತು.

"ಆದರೆ ಇಡೀ ಜೀವನವನ್ನೆಲ್ಲಾ ವಿಚಾರಕ್ಕೆ ಮೀಸಲಾಗಿ ಇಟ್ಟರೂ ಸಮಾಧಿಯ ಸ್ಥಿತಿಯನ್ನು ಹೊಂದದವರೆಗೆ ಶಕ್ತಿಯ ಇಲಾಖೆಯನ್ನು ಬಿಟ್ಟು ಹೊರಗೆ ಹೋಗೋ ಹಾಗೇ ಇಲ್ಲ, 'ನಾನು ಧ್ಯಾನ ಮಾಡುತ್ತೇನೆ', 'ನಾನು ಚಿಂತನೆ ಮಾಡುತ್ತೇನೆ' ಎಂಬುದಾಗಿ ನೀನು ಹೇಳುವಾಗಲೂ ನೀನು ಇನ್ನೂ ಶಕ್ತಿಯ ಇಲಾಖೆಯ ಮಧ್ಯೆ, ಶಕ್ತಿಯ ಐಶ್ವರ್ಯದ ಮಧ್ಯೆ ಚಲಿಸುತ್ತಿದೀಯೆ.

"ಅದಕ್ಕಾಗೇ ಬ್ರಹ್ಮನಿಗು ಶಕ್ತಿಗು ಅಭೇದ ಎಂದು ಹೇಳುವುದು. ಒಂದನ್ನು ಸ್ವೀಕರಿಸಿದರೆ ಇನ್ನೊಂದನ್ನೂ ಸ್ವೀಕರಿಸಲೇಬೇಕಾಗುತ್ತದೆ. ಇದು ಬೆಂಕಿ ಮತ್ತು ಅದರ ಸುಡುವ ಶಕ್ತಿಯ ಹಾಗೆ. ಬೆಂಕಿಯನ್ನು ಸ್ವೀಕರಿಸಿದರೆ ಸುಡುವ ಶಕ್ತಿಯನ್ನೂ ಸ್ವೀಕರಿಸಲೇಬೇಕಾಗುತ್ತದೆ. ಸುಡುವ ಶಕ್ತಿಯನ್ನು ಬಿಟ್ಟು ಬೆಂಕಿಯನ್ನು, ಬೆಂಕಿಯನ್ನು ಬಿಟ್ಟು ಸುಡುವ ಶಕ್ತಿಯನ್ನ ಭಾವಿಸಲಾಗೋದೇ ಇಲ್ಲ. ಸೂರ್ಯನನ್ನು ಬಿಟ್ಟು ಸೂರ್ಯರಶ್ಮಿಯನ್ನ ಭಾವಿಸಲಾಗೋದಿಲ್ಲ, ಸೂರ್ಯರಶ್ಮಿಯನ್ನು ಬಿಟ್ಟು ಸೂರ್ಯನನ್ನ ಭಾವಿಸಲಾಗೋದಿಲ್ಲ.

"ಹಾಲು ಹೇಗಿದೆ? ಅದು ಬಿಳುಪು. ಹಾಲನ್ನು ಬಿಟ್ಟು ಅದರ ಬಿಳುಪನ್ನು ಭಾವಿಸಲಾಗೋದಿಲ್ಲ, ಹಾಲಿನ ಬಿಳುಪನ್ನು ಬಿಟ್ಟು ಹಾಲನ್ನು ಭಾವಿಸಲಾಗೋದಿಲ್ಲ.

"ಹಾಗೇ ಬ್ರಹ್ಮನನ್ನು ಬಿಟ್ಟು ಶಕ್ತಿಯನ್ನು, ಶಕ್ತಿಯನ್ನು ಬಿಟ್ಟು ಬ್ರಹ್ಮನನ್ನು ಭಾವಿಸಲಾಗೋದೇ ಇಲ್ಲ. ನಿತ್ಯವನ್ನು ಬಿಟ್ಟು ಲೀಲೆಯನ್ನು, ಲೀಲೆಯನ್ನು ಬಿಟ್ಟು ನಿತ್ಯವನ್ನ ಭಾವಿಸಲಾಗೋದೇ ಇಲ್ಲ.

"ಆದ್ಯಾಶಕ್ತಿ ಲೀಲಾಮಯಿ: ಸೃಷ್ಟಿಸ್ಥಿತಿಪ್ರಳಯ ಮಾಡುತ್ತಾಳೆ. ಆಕೆಗೇ ಕಾಳಿ ಅಂತ ಹೆಸರು. ಕಾಳಿಯೇ ಬ್ರಹ್ಮ, ಬ್ರಹ್ಮನೇ ಕಾಳಿ. ವಸ್ತು ಒಂದೇ. ನಿಷ್ಕ್ರಿಯವಾಗಿರುವಾಗ, ಸೃಷ್ಟಿಸ್ಥಿತಿಪ್ರಳಯ ಮಾಡದಿರುವಾಗ ಅದೇ ವಸ್ತುವಿಗೆ ಬ್ರಹ್ಮ ಅಂತ ಹೆಸರು. ಆದರೆ ಆ ಎಲ್ಲಾ ಕಾರ್ಯ

ಗಳನ್ನೂ ಮಾಡುತ್ತಿರುವಾಗ ಅದೇ ವಸ್ತುವಿಗೆ ಕಾಳಿ ಅಂತ ಹೆಸರು, ಶಕ್ತಿ ಅಂತ ಹೆಸರು. ವಸ್ತುವೇನೊ ಒಂದೇ; ಹೆಸರುಗಳು ಮಾತ್ರ ಬೇರೆ ಬೇರೆ.

"ಇದು ನೀರೆಂಬ ಒಂದೇ ವಸ್ತುವನ್ನ ವಿವಿಧ ಭಾಷೆಗಳಲ್ಲಿ ವಿವಿಧ ಹೆಸರಿನಿಂದ ಕರೆದ ಹಾಗೆ. ಒಂದು ಕೊಳಕ್ಕೆ ಮೂರು ನಾಲ್ಕು ಘಟ್ಟಗಳಿವೆ ಅಂತ ಇಟ್ಟುಕೊಳ್ಳಿ. ಒಂದು ಘಟ್ಟದಲ್ಲಿ ಹಿಂದೂಗಳು ನೀರು ಕುಡಿಯುತ್ತಾರೆ. ಅವರು ಅದಕ್ಕೆ 'ಜಲ' ಅಂತ ಹೇಳುತ್ತಾರೆ. ಇನ್ನೊಂದರಲ್ಲಿ ಮುಸಲ್ಮಾನರು ನೀರು ಕುಡಿಯುತ್ತಾರೆ. ಅವರು ಅದನ್ನು ಕರೆಯುತ್ತಾರೆ 'ಪಾನಿ' ಅಂತ. ಮತ್ತೊಂದರಲ್ಲಿ ಆಂಗ್ಲೇಯರು ನೀರು ಕುಡಿಯುತ್ತಾರೆ. ಅವರು ಅದಕ್ಕೆ ಹೇಳುತ್ತಾರೆ 'ವಾಟರ್' ಎಂಬುದಾಗಿ. ಈ ಮೂವರು ಕುಡಿಯುವುದೂ ನೀರೇ, ಆದರೆ ಹೆಸರಿನಲ್ಲಿ ಮಾತ್ರ ಪ್ರಭೇದ. ಹಾಗೆಯೇ ಕೆಲವರು ಭಗವಂತನನ್ನು 'ಅಲ್ಲಾ,' ಇನ್ನು ಕೆಲವರು 'ಗಾಡ್', ಮತ್ತೆ ಕೆಲವರು 'ಬ್ರಹ್ಮ,' ಮತ್ತು ಕೆಲವರು 'ಕಾಳಿ', ಇನ್ನೂ ಬೇರೆ ಬೇರೆಯವರು 'ರಾಮ', 'ಹರಿ', 'ಯೇಸು', 'ದುರ್ಗಾ' ಎಂಬಿವೇ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ."

"ಕೇಶವಚಂದ್ರಸೇನ ನಗುತ್ತ: "ಕಾಳಿ ಈ ಜಗತ್ತಿನಲ್ಲಿ ಎಷ್ಟೊಂದು ಭಾವಗಳಿಂದ ಕ್ರೀಡಿಸುತ್ತಾಳೆ ಎಂಬುದರ ವಿಷಯವಾಗಿ ಸ್ವಲ್ಪ ವರ್ಣನೆ ಮಾಡಿ ತಿಳಿಸಿ."

ಶ್ರೀರಾಮಕೃಷ್ಣರು ನಗುತ್ತ: "ಓ, ಆಕೆ ವಿವಿಧ ಭಾವಗಳಿಂದ ಕ್ರೀಡಿಸುತ್ತಾಳೆ. ಆಕೆಯೇ ಮಹಾಕಾಳಿ, ನಿತ್ಯಕಾಳಿ, ಶ್ಮಶಾನಕಾಳಿ, ರಕ್ಷಾಕಾಳಿ, ಶ್ಯಾಮಾಕಾಳಿ. ಮಹಾಕಾಳಿ, ನಿತ್ಯಕಾಳಿ — ಇವರ ವಿಷಯವಾಗಿ ತಂತ್ರಶಾಸ್ತ್ರದಲ್ಲಿ ವರ್ಣನೆ ಇದೆ. ಸೃಷ್ಟಿ ಆರಂಭವಾಗುವುದಕ್ಕೆ ಮುನ್ನ, ಚಂದ್ರ, ಸೂರ್ಯ, ಗ್ರಹ ಪೃಥಿವಿ, ಇವೆಲ್ಲಾ ಉದ್ಭವವಾಗುವುದಕ್ಕೆ ಮುನ್ನ, ಎಲ್ಲೆಲ್ಲೂ ನಿಬಿಡಾಂಧಕಾರ ಹಬ್ಬಿದ್ದಾಗ ಭಗವತಿ—ನಿರಾಕಾರ ಸ್ವರೂಪಿಣಿ ಮಹಾಕಾಳಿ ಮಹಾಕಾಲನೊಡನೆ ಐಕ್ಯವಾಗಿದ್ದಳು.

"ಶ್ಯಾಮಾಕಾಳಿಯದು ಸ್ವಲ್ಪಮಟ್ಟಿಗೆ ಕೋಮಲ ಸ್ವಭಾವ. ಆಕೆ ವರಾಭಯದಾಯಿನಿ. ಗೃಹಸ್ಥರು ಆಕೆಯನ್ನು ಪೂಜಿಸುತ್ತಾರೆ. ಮಹಾಮಾರಿಕೋಪದ್ರವ, ದುರ್ಭಿಕ್ಷ, ಭೂಮಿಕಂಪ, ಅನಾವೃಷ್ಟಿ, ಅತಿವೃಷ್ಟಿಗಳಾದಾಗ ರಕ್ಷಾಕಾಳಿಯ ಪೂಜೆ ಮಾಡಬೇಕಾಗುತ್ತದೆ. ಶ್ಮಶಾನಕಾಳಿ ಸಂಹಾರ ಮೂರ್ತಿ. ಆಕೆ ಶವ, ನರಿ, ಡಾಕಿನಿ, ಯೋಗಿನಿ ಇವುಗಳೊಡಗೂಡಿ

ಶ್ಮಶಾನದಲ್ಲಿ ವಾಸಿಸುತ್ತಾಳೆ. ಆಕೆಯ ಬಾಯಿಂದ ರಕ್ತದ ಕೋಡಿ ಹರಿಯುತ್ತಿರುತ್ತದೆ. ಕೊರಳಿಗೆ ರುಂಡಮಾಲೆ ಹಾಕಿಕೊಂಡಿರುತ್ತಾಳೆ. ಸೊಂಟಕ್ಕೆ ನರಹಸ್ತಗಳ ಒಡ್ಯಾಣ ಹಾಕಿಕೊಂಡಿರುತ್ತಾಳೆ.

"ಈ ಜಗತ್ತು ನಾಶವಾದಾಗ, ಮಹಾಪ್ರಳಯವಾದಾಗ ಮುಂದಿನ ಸೃಷ್ಟಿಗಾಗಿ ಬೀಜಗಳನ್ನೆಲ್ಲಾ ಶೇಖರಿಸಿ ಇಟ್ಟುಕೊಳ್ಳುತ್ತಾಳೆ. ಇದು ಮನೆಯ ಯಜಮಾನಿ ತನಗೆ ಬೇಕಾಗೋ ಎಲ್ಲಾ ಬಗೆಯ ವಸ್ತುಗಳನ್ನು ಒಂದು ಗುಡಾಣದಲ್ಲಿ ಶೇಖರಿಸಿ ಇಟ್ಟುಕೊಳ್ಳೋದಿಲ್ಲವೆ, ಹಾಗೆ. (ಎಲ್ಲರೂ ನಗುತ್ತಾರೆ.)

"ನಗಬೇಡಿ! ಯಜಮಾನಿಯರು ಇಂಥದೊಂದು ಗುಡಾಣ ಇಟ್ಟು ಕೊಂಡಿರುತ್ತಾರೆ. ಅದರೊಳಗೆ ಸಮುದ್ರದ ನೊರೆ, ನೀಲಿ ಗುಳಿಗೆ, ಸೌತೆ ಕಾಯಿ ಕುಂಬಳಕಾಯಿ ಸೋರೆಕಾಯಿ ಬೀಜಗಳ ಚಿಕ್ಕ ಚಿಕ್ಕ ಪೊಟ್ಟಣ ಗಳು ಇವನ್ನೆಲ್ಲಾ ಇಡುತ್ತಾರೆ. ಬೇಕಾದಾಗ ಅವನ್ನು ಹೊರಕ್ಕೆ ತೆಗೆಯು ತ್ತಾರೆ. ಅದೇ ರೀತಿಯಾಗಿ ಭಗವತಿ ಬ್ರಹ್ಮಮಯಿ ಈ ಜಗತ್ತು ನಾಶವಾದ ನಂತರ ಎಲ್ಲಾ ವಿಧದ ಬೀಜಗಳನ್ನೂ ಮುಂದಿನ ಸೃಷ್ಟಿಗಾಗಿ ಶೇಖರಿಸಿ ಇಟ್ಟುಕೊಳ್ಳುತ್ತಾಳೆ. ಸೃಷ್ಟಿಮಾಡಿದನಂತರ ಆದ್ಯಾಶಕ್ತಿ ಈ ಜಗತ್ತಿನ ಒಳಗೇ ಇರುತ್ತಾಳೆ—ಈ ಜಗತ್ತನ್ನು ಹೆತ್ತು ಅದರೊಳಗೇ ಅಂತರ್ಗತವಾಗಿ ರುತ್ತಾಳೆ. ವೇದದಲ್ಲಿ ಇದೆ 'ಊರ್ಣನಾಭಿಯ' (ಜೇಡರ ಹುಳುವಿನ) ಮತ್ತು ಅದರ ಬಲೆಯ ವಿಷಯ. ಜೇಡರ ಹುಳು ತನ್ನ ಹೊಟ್ಟೆಯಿಂದಲೇ ತೆಗೆದ ತಂತುವಿನಿಂದ ಬಲೆ ಕಟ್ಟಿ ಅದರ ಮೇಲೆ ತಾನೂ ನಿಲ್ಲುತ್ತದೆ. ಹಾಗೆಯೇ ಭಗವಂತ ಈ ಜಗತ್ತಿನ ಆಧಾರ ಆಧೇಯ ಎರಡೂ ಆಗಿದಾನೆ.

"ಕಾಳಿ ನಿಜವಾಗಿ ಕಪ್ಪೇನು? ದೂರದಿಂದ ನೋಡಿದರೆ ಕಪ್ಪಗೆ ಕಾಣು ತ್ತಾಳೆ, ಹತ್ತಿರ ನೋಡಿದರೆ ಕಪ್ಪಲ್ಲ. ಆಕಾಶ ದೂರದಿಂದ ನೀಲವರ್ಣದ್ದಾಗಿ ಕಾಣುತ್ತದೆ. ಹತ್ತಿರದಲ್ಲಿ ನೋಡಿದರೆ ಅದಕ್ಕೆ ಯಾವ ವರ್ಣವೂ ಇಲ್ಲ. ಸಮುದ್ರದ ನೀರು ದೂರದಿಂದ ನೀಲಿಯಾಗಿ ಕಾಣುತ್ತದೆ. ಹತ್ತಿರ ಹೋಗಿ ಕೈಗೆ ತೆಗೆದುಕೊಂಡು ನೋಡು ಅದಕ್ಕೆ ಯಾವ ವರ್ಣವೂ ಇಲ್ಲ."

ಪರಮಹಂಸರು ಪ್ರೇಮೋನ್ಮತ್ತರಾಗಿ ಈಗ ಹಾಡಲಾರಂಭಿಸಿದಾರೆ:

ಕಾಲರೂಪೆ ದಿಗಂಬರೀ
ಹೃದಯ ಪದ್ಮ ಭಾಸ್ಕರೀ
ನಿಜವಾಗಿಯು ಕಪ್ಪಗಿಹಳೆ ನನ್ನ ತಾಯಿ ಕಾಳಿ? . . .

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: "ಬಂಧನ ಮತ್ತು ಮುಕ್ತಿ ಇವೆರಡರ ಕರ್ತಳೂ ಅವಳೇ. ಆಕೆಯ ಮಾಯೆಯ ದೆಸೆಯಿಂದ ಸಾಂಸಾರಿಕ ಜೀವರು ಕಾಮಕಾಂಚನಗಳಿಂದ ಬದ್ಧರಾಗುತ್ತಾರೆ. ಮತ್ತೆ ಆಕೆಯ ಕೃಪೆಯಿಂದಲೇ ಮುಕ್ತರಾಗುತ್ತಾರೆ. ಆಕೆ ನಮ್ಮ ಭವಬಂಧನವನ್ನು ಹರಿದು ಕಾಪಾಡತಕ್ಕವಳು."

ಈಗ ಪರಮಹಂಸರು ತಮ್ಮ ಗಂಧರ್ವನಿಂದಿತ ಕಂಠದಿಂದ ಹಾಡಲಾರಂಭಿಸಿದಾರೆ:

ಪಟವನಾಡಿಸುತಿಹಳು ಈ ನನ್ನ ಘನ ಶ್ಯಾಮೆ
ಜಗದ ಸಂಸಾರಗಳ ಪೇಟೆಯಲ್ಲಿ,
ಮಾಯೆಯೀ ಸೂತ್ರದಲಿ ಬಿಗಿದ ಪಟವೇರುತಿವೆ
ತುಂಬಿರುವ ಭರವಸೆಯ ಗಾಳಿಯಲ್ಲಿ.
ನರರಸ್ಥಿಪಂಜರದಿ ಮೂರು ಗುಣಗಳ ಬೆಸೆದು
ಮಾಡಿರುವಳೀ ತಾಯಿ ಕುಶಲ ಕಲೆಯು;
ಪಟದ ಸೂತ್ರದ ಮೇಲೆ ವಿಷಯುದಂಟಿಸು ಬಳಿದು
ಹರಿಯದಂತವುಗಳನು ರಚಿಸಿರುವಳು.
ಇಂತು ಹಾರುವ ನೂರುಸಾವಿರದ ಪಟಗಳಲಿ
ಒಂದೊ ಎರಡೋ ಹರಿದು ಬಿಡುಗಡೆಯ ಪಡೆದು
ಹೋಗುತಿರಲವುಗಳನು ನಿರುಕಿಸುತ ಈ ತಾಯಿ
ಕೈಯ ಚಪ್ಪಳೆ ತಟ್ಟಿ ನಲಿಯುತಿಹಳು.
ರಾಮಪ್ರಸಾದನಿದೊ ನುಡಿಯುವನು: "ಓ ತಾಯಿ
ಅನುಕೂಲ ಮಾರುತವು ಬೀಸುವಾಗ
ನೀನಿಸಿತು ಕೃಪೆಗೈದು ಕೈ ಸಡಿಲಗೊಳಿಸಿದರೆ
ಎನಿತೊ ಪಟ ದಾಟುವುವು ಭವಜಲಧಿಯ!"

ಶ್ರೀರಾಮಕೃಷ್ಣರು ಹೇಳುತ್ತಿದಾರೆ: "ಭಗವತಿ ಲೀಲಾಮಯಿ. ಈ ಜಗತ್ತು ಆಕೆಯ ಕ್ರೀಡೆ. ಆಕೆ ಇಚ್ಛಾಮಯಿ, ಆನಂದಮಯಿ. ಲಕ್ಷ ಜನರಲ್ಲಿ ಎಲ್ಲೋ ಒಬ್ಬರಿಗೆ ಮಾತ್ರ ಮುಕ್ತಿಕೊಡುತ್ತಾಳೆ."

ಬ್ರಾಹ್ಮಭಕ್ತ: "ಮಹಾಶಯರೆ, ಇಚ್ಛೆಪಟ್ಟರೆ ಆಕೆ ಎಲ್ಲರನ್ನೂ ಮುಕ್ತರನ್ನಾಗಿ ಮಾಡಿಬಿಡಬಲ್ಲಳು. ಹಾಗಿರುವಾಗ ನಮ್ಮನ್ನೇಕೆ ಸಂಸಾರದಲ್ಲಿ ಬಂಧಿಸಿ ಇಟ್ಟಿದಾಳೆ?"

ಶ್ರೀರಾಮಕೃಷ್ಣರು: "ಆಕೆಯ ಇಚ್ಛೆ. ತಾನು ಸೃಷ್ಟಿಸಿದ ವಸ್ತುಗಳೊಡನೆ ತಾನು ಆಟವಾಡುತ್ತಲೇ ಇರಬೇಕು ಅಂತ ಆಕೆಯ ಇಚ್ಛೆ. ಕಣ್ಣುಮುಚ್ಚಾಲೆ ಆಟದಲ್ಲಿ ಯಾರು ಹೋಗಿ ಅಜ್ಜಿಯನ್ನು ಮುಟ್ಟಿಬಿಡುತ್ತಾರೊ, ಅವರು ಅನಂತರ ಓಡಾಡಬೇಕಾಗಿರೋದಿಲ್ಲ. ಎಲ್ಲರೂ ಹೋಗಿ ಅಜ್ಜಿಯನ್ನು ಮುಟ್ಟಿಬಿಟ್ಟರೆ ಆಟ ಹೇಗೆ ಮುಂದುವರಿಯಬೇಕು? ಅದು ಆಕೆಗೆ ಅಸಂತೋಷವನ್ನುಂಟುಮಾಡುತ್ತದೆ. ಆಟ ಮುಂದುವರಿದರೇ ಆಕೆಗೆ ಸಂತೋಷ. ಆದಕ್ಕಾಗೇ ರಾಮಪ್ರಸಾದ ಹೇಳಿರೋದು:

ಇಂತು ಹಾರುವ ನೂರುಸಾವಿರದ ಪಟಗಳಲಿ
ಒಂದೊ ಎರಡೋ ಹರಿದು ಬಿಡುಗಡೆಯ ಪಡೆದು
ಹೋಗುತಿರಲವುಗಳನು ಸಿರುಕಿಸುತ ಈ ತಾಯಿ
ಕೈಯ ಚಪ್ಪಳೆ ತಟ್ಟಿ ನಲಿಯುತಿಹಳು.

"ಭಗವತಿ ಕಣ್ಣುಸನ್ನೆಮಾಡಿ ಮನಸ್ಸಿಗೆ ರಹಸ್ಯವಾಗಿ ಆಜ್ಞೆಮಾಡಿಬಿಟ್ಟಿರುವಂತಿದೆ: 'ಹೋಗು, ಹೋಗಿ ಸಂಸಾರಸುಖ ಅನುಭವಿಸು.' ಆದ್ದರಿಂದ ಮನಸ್ಸಿನದೇನು ತಪ್ಪು? ಆದರೆ ಆಕೆ ಮತ್ತೆ ಕೃಪೆಯಿಟ್ಟು ಅದನ್ನು ತನ್ನ ಕಡೆಗೆ ಹರಿಯುವಂತೆ ಮಾಡಿಕೊಟ್ಟರೆ, ಆಗ ಮಾತ್ರವೇ ವಿಷಯಬುದ್ಧಿಯ ಬಂಧನದಿಂದ ಪಾರಾಗಿ ನಾವು ಮುಕ್ತಿ ಗಳಿಸಿಕೊಳ್ಳಬಹುದು. ಆಗ ಮಾತ್ರವೇ ಅದು ಭಗವತಿಯ ಪಾದಪದ್ಮಗಳಲ್ಲಿ ನೆಲಸಿ ಇರುತ್ತದೆ."

ಪರಮಹಂಸರು ಸಂಸಾರಿಗಳ ನರಕ ಯಾತನೆಯ ಭಾರವನ್ನು ತಾವೇ ತಮ್ಮ ತಲೆಯ ಮೇಲೆ ಹೊತ್ತುಕೊಂಡಿರುವಂತೆ, ಮತ್ತೆ ಅದಕ್ಕೆಲ್ಲಾ ತಾಯೇ ಹೊಣೆ ಎಂಬ ಭಾವವನ್ನು ವ್ಯಕ್ತಪಡಿಸುವ ಒಂದು ಹಾಡನ್ನು ಹಾಡಲಾರಂಭಿಸಿದಾರೆ:

ಈ ಎದೆಯ ಕೊರೆಯುವುದು ಒಂದೆ ವ್ಯಥೆ ನನಗೆ:
ನೀನೊಡನೆ ಇದ್ದರೂ ನಾನೆಚ್ಚರಿದ್ದರೂ
ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ!
ಎನಿತೊ ಸಲ ನಾನಿನ್ನ ಕರೆಯಬೇಕೆಂದೆಂಬ
ಸಂಕಲ್ಪವಿದ್ದರೂ, ಪ್ರಾರ್ಥನೆಯ ಹೊತ್ತಿನಲಿ
ನಿನ್ನ ಮರೆತೆ

ಇನಿತೆಲ್ಲ ನಿನ್ನ ಮಾಯೆಯೆ ಎಂದು
ಈಗ ಅರಿತೆ!
ನೀನು ನನಗೇನನೂ ಕೊಟ್ಟಿಲ್ಲವದರಿಂದ
ನಾನೇನು ಕೊಡಬಲ್ಲೆ ನಿನಗೆ ಹೇಳು?
ನೀ ಕೊಟ್ಟುದನೆ ನಿನಗೆ ಕೊಡುತಿದ್ದೆ ನಾನು!
ಯಶ-ಅಪಯಶ, ಸುರಸ-ಕುರಸ
ಸಕಲ ರಸವು ನಿನ್ನದೇ,
ಸಕಲ ರಸೇಶ್ವರಿಯು ನೀನೆ
ಜಗವೆಲ್ಲವು ನಿನ್ನ ಲೀಲೆ
ಇದರೊಳೇಕೆ ನೀನೀತೆರ ರಸಭಂಗವ ಮಾಡುವೆ?
ಈ ಮನವನು ನೀನಿತ್ತಿಹೆ,
ಜಗದ ಸುಖವ ಪಡೆಯಲೆಂದು ನನ್ನನಿಲ್ಲಿ ನಿಲಿಸಿಹೆ.
ನಾನು ನಿನ್ನ ಶಿಶುವಾದರು
ಈ ಜಗದೀ ಜಂಜಡದಲಿ
ಪರಿತ್ಯಕ್ತನಂದದಿ,
ಮಿಥ್ಯೆಯನೇ ಸತ್ಯವೆಂದು
ಕಹಿಯನ್ನೇ ಮಧುರವೆಂದು
ಭ್ರಮಿಸಿ ಬಳಲುತಿರುವೆನು. —
ಎನುವನೀ ಪ್ರಸಾದನು!

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: "ಭಗವತಿಯ ಮಾಯೆಯಿಂದಲೇ ಜನರು ಮೋಹಿತರಾಗಿ ಈ ಜಗತ್ತಿನಲ್ಲಿ ಕಟ್ಟುಬೀಳುತ್ತಾರೆ.

ಈ ಮನವನು ನೀನಿತ್ತಿಹೆ,
ಜಗದ ಸುಖವ ಪಡೆಯಲೆಂದು ನನ್ನನಿಲ್ಲಿ ನಿಲಿಸಿಹೆ.
ಎನುವನೀ ಪ್ರಸಾದನು!"

ಬ್ರಾಹ್ಮಭಕ್ತ: "ಮಹಾಶಯರೆ, ಪೂರ್ಣತ್ಯಾಗ ಮಾಡದೆ ಇದ್ದರೆ ಭಗವಂತನ ಸಾಕ್ಷಾತ್ಕಾರ ಪಡೆಯಲಾಗುವುದಿಲ್ಲವೆ?"

ಶ್ರೀರಾಮಕೃಷ್ಣರು ನಗುತ್ತ: "ನಿಮಗೆ ಸಾಧ್ಯವಾಗಬಹುದು! ನೀವು ಸಂಪೂರ್ಣವಾಗಿ ತ್ಯಾಗಮಾಡುವುದರ ಆವಶ್ಯಕತೆ ಏನಿದೆ? ಭಗವಂತ, ಜಗತ್ತು ಎರಡು ಕಡೆಗೂ ನೀವು ದೃಷ್ಟಿಯಿಟ್ಟು ಆನಂದದಿಂದಲೇ ಇದೀರಿ.

ಜೋನಿ ಬೆಲ್ಲ ಗಟ್ಟಿಗೆ ಗಟ್ಟಿಯೂ ಅಲ್ಲ ನೀರಿಗೆ ನೀರೂ ಅಲ್ಲ! (ಎಲ್ಲರೂ ನಗುತ್ತಾರೆ.) ನೀವೀಗಿರೋ ರೀತಿಯಲ್ಲಿ ಆನಂದದಿಂದಲೇ ಇದೀರಿ. ನಿಮಗೆ 'ನಕ್ಸ್' ಎಂಬ ಇಸ್ಪೀಟಾಟ ಗೊತ್ತೆ? ನಾನು ಹೆಚ್ಚಾಗಿ ನಂಬರು ಗೆದ್ದು ನನ್ನ ಆಟ ಮುಗಿದುಹೋಗಿದೆ. ನೀವು ಬಹಳ ಬುದ್ಧಿವಂತರು. ನಿಮ್ಮಲ್ಲಿ ಕೆಲವರು ಹತ್ತು, ಇನ್ನು ಕೆಲವರು ಆರು, ಮತ್ತೆ ಕೆಲವರು ಐದು ನಂಬರುಗಳನ್ನು ಮಾತ್ರ ಗಳಿಸಿಕೊಂಡಿದೀರಿ. ಹೆಚ್ಚಾಗೇನು ಗಳಿಸಿಕೊಂಡಿಲ್ಲ; ಆದ್ದರಿಂದ ನನ್ನ ಹಾಗೆ ನೀವು ಆಟವಾಡದೆ ಉಳಿದಿರಬೇಕಾಗಿರೋದಿಲ್ಲ. ನಿಮ್ಮ ಆಟ ಮುಂದುವರಿಯುತ್ತಿದೆ. ಭೇಷ್! (ಎಲ್ಲರೂ ನಗುತ್ತಿದಾರೆ.)

"ಸತ್ಯವಾಗಿ ಹೇಳ್ತೇನೆ: ನೀವು ಸಂಸಾರದಲ್ಲಿ ಇದೀರಿ. ಇದು ದೋಷವಾದ್ದೇನಲ್ಲ. ಆದರೆ ನೀವು ಭಗವಂತನ ಕಡೆಗೆ ಮನಸ್ಸು ತಿರುಗಿಸಿ ಇಡಬೇಕು; ಇಲ್ಲದಿದ್ದರೆ ನೀವು ಜಯಶಾಲಿಗಳಾಗೋದಿಲ್ಲ. ಒಂದು ಕೈಯಿಂದ ಕೆಲಸಮಾಡಿ, ಇನ್ನೊಂದು ಕೈಯಿಂದ ಭಗವಂತನನ್ನು ಬಲವಾಗಿ ಹಿಡಿದುಕೊಳ್ಳಿ. ಕರ್ಮ ಮುಗಿದನಂತರ ಎರಡು ಕೈಗಳಿಂದಲೂ ಭಗವಂತನನ್ನು ಹಿಡಿದುಕೊಳ್ಳಿ.

"ಎಲ್ಲಾ ಮನಸ್ಸಿನ ಮೇಲೆ ನಿಂತಿದೆ. ಮನಸ್ಸೇ ಬಂಧನಕ್ಕೆ ಕಾರಣ, ಮನಸ್ಸೇ ಮುಕ್ತಿಗೆ ಕಾರಣ. ಮನಸ್ಸಿಗೆ ಯಾವ ಬಣ್ಣ ಕೊಟ್ಟರೆ ಅದು ಆ ಬಣ್ಣ ಧರಿಸುತ್ತದೆ. ಉದಾಹರಣೆಗೆ ಅಗಸನ ಮನೆಯಿಂದ ತಂದ ಬಟ್ಟೆ. ಕೆಂಪು ಬಣ್ಣದಲ್ಲಿ ಅದ್ದಿದರೆ ಕೆಂಪು, ನೀಲಿ ಬಣ್ಣದಲ್ಲಿ ಅದ್ದಿದರೆ ನೀಲಿ, ಹಳದಿ ಬಣ್ಣದಲ್ಲಿ ಅದ್ದಿದರೆ ಹಳದಿ, ಮತ್ತಾವ ಬಣ್ಣದಲ್ಲಿ ಅದ್ದಿದರೂ ಆ ಬಣ್ಣ ಧರಿಸುತ್ತದೆ. ನೋಡಿಲ್ಲವೆ, ಒಂದಷ್ಟು ಇಂಗ್ಲಿಷು ಓದುವುದಕ್ಕೆ ಕಲಿತುಕೊಂಡಿರಿ ಎಂದರೆ, ನಿಮ್ಮನ್ನು ಹೇಳದೆ ಕೇಳದೆ 'ಕೊಸ್‌ಪಿಸ್' ಎಂಬ ಇಂಗ್ಲಿಷು ಪದಗಳ ನಿಮ್ಮ ಬಾಯಿಂದ ಹೊರಬೀಳುವುದನ್ನ? (ಎಲ್ಲರೂ ನಗುತ್ತಾರೆ.) ಬಳಿಕ ಕಾಲಿಗೆ ಬೂಟ್ಸು, ಸಿಳ್ಳುಹಾಕುತ್ತ ಆಲಾಪನೆ ಮಾಡುವುದು ಇವೆಲ್ಲಾ ಬಂದುಬಿಡುತ್ತವೆ. ಇವೆಲ್ಲಾ ಒಂದೇ ಜೊತೆ. ವಿದ್ವಾಂಸ ಸಂಸ್ಕೃತ ಕಲಿತುಕೊಂಡಿದ್ದೇ ಆದರೆ ಪದೇ ಪದೇ ಸಂಸ್ಕೃತ ಶ್ಲೋಕಗಳನ್ನು ಎತ್ತಿಹೇಳುತ್ತಲೇ ಇರುತ್ತಾನೆ. ನೀನು ಕೆಟ್ಟವರೊಡನೆ ಬೆಳೆದರೆ, ನಿನ್ನ ನಡೆ, ನುಡಿ, ವ್ಯವಹಾರ ಎಲ್ಲವೂ ಅವರಂತೆ ಆಗಿಬಿಡುತ್ತವೆ; ಭಕ್ತರ ಸಹವಾಸದಲ್ಲಿ ಬೆಳೆದರೆ ಮನಸ್ಸು ಭಗವಚ್ಚಿಂತನೆ, ಭಗವತ್ಕಥೆ ಇವುಗಳಲ್ಲೇ ನಿರತವಾಗಿರುತ್ತದೆ.

“ಮನಸ್ಸೇ ಎಲ್ಲಕ್ಕೂ ಕಾರಣ. ಮನುಷ್ಯನ ಒಂದು ಪಕ್ಕದಲ್ಲಿ ಹೆಂಡತಿ, ಇನ್ನೊಂದು ಪಕ್ಕದಲ್ಲಿ ಮಗಳು. ಒಬ್ಬಳಿಗೆ ಒಂದು ವಿಧದಲ್ಲಿ ಇನ್ನೊಬ್ಬಳಿಗೆ ಇನ್ನೊಂದು ವಿಧದಲ್ಲಿ ಪ್ರೀತಿ ತೋರಿಸುತ್ತಾನೆ. ಆದರೆ ಮನಸ್ಸು ಮಾತ್ರ ಒಂದೇ ಒಂದು.

“ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ. ‘ನಾನು ಮುಕ್ತ ಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯದು ಬಂಧನ? ನಾನು ಭಗವಂತನ ಮಗು; ರಾಜಾಧಿರಾಜನ ಮಗು. ನನಗಾವುದರ ಬಂಧನ?’ ಎಂಬುದಾಗಿ ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿಬಿಡುತ್ತಾನೆ. ಒಂದು ಪಕ್ಷ ಹಾವೇನಾದರೂ ಕಡಿದರೆ, ‘ನನ್ನನ್ನು ವಿಷ ಏನೂ ಮಾಡಲಾರದು’ ಎಂಬುದಾಗಿ ದೃಢವಾಗಿ ನಂಬಿದರೆ ಆಗ ಅದರಿಂದ ಪಾರಾಗಿಬಿಡಬಹುದು. ಹಾಗೇ ‘ನಾನು ಬದ್ಧನಲ್ಲ, ಮುಕ್ತ’ ಎಂಬುದಾಗಿ ದೃಢವಾಗಿ ಭಾವಿಸಿದರೆ ಹಾಗೇ ಆಗಿಬಿಡಬಹುದು—ಮುಕ್ತನೇ ಆಗಿಬಿಡಬಹುದು.

“ಒಮ್ಮೆ ಒಬ್ಬ ನನಗೆ ಕ್ರಿಶ್ಚಿಯನ್ನರ ಒಂದು ಪುಸ್ತಕ ತಂದುಕೊಟ್ಟ. ನಾನು ಆತನಿಗೆ ಅದನ್ನು ಓದಿಹೇಳುವಂತೆ ಹೇಳಿದೆ. ಅದರಲ್ಲಿ ಕೇವಲ ಪಾಪದ ವಿಷಯವೇ ಹೊರತು ಬೇರೇನೂ ಇರಲಿಲ್ಲ. (ಕೇಶವನಿಗೆ) ನಿಮ್ಮ ಬ್ರಾಹ್ಮಸಮಾಜದಲ್ಲೂ ಕೇವಲ ಪಾಪದ ಮಾತುಕತೆಯೇ. ಯಾವ ವ್ಯಕ್ತಿ, ‘ನಾನು ಬದ್ಧ, ನಾನು ಬದ್ಧ’ ಎಂಬುದಾಗಿ ಪದೇ ಪದೇ ಹೇಳುತ್ತಲೇ ಇರುತ್ತಾನೊ ಆ ನೀಚ ಬದ್ಧನೇ ಆಗಿಬಿಡುತ್ತಾನೆ. ಯಾರು ಹಗಲೂ ಇರುಳೂ ‘ನಾನು ಪಾಪಿ, ನಾನು ಪಾಪಿ’ ಎಂಬುದಾಗಿ ಹೇಳುತ್ತಲೇ ಇರುತ್ತಾನೋ ಆತ ಪಾಪಿಯೇ ಆಗಿಬಿಡುತ್ತಾನೆ.

“ಭಗವಂತನ ನಾಮಮಹಿಮೆಯಲ್ಲಿ ಮನುಷ್ಯನಿಗೆ ಅಂಥಾ ಶ್ರದ್ಧೆಯುಂಟಾಗಿಬಿಡಬೇಕು, ಆತ ಹೇಳುವಂತಾಗಬೇಕು: ‘ಏನು? ನಾನು ಭಗವಂತನ ನಾಮ ಜಪಿಸುತ್ತಾ ಇದೇನೆ, ನನ್ನಲ್ಲಿ ಇನ್ನೂ ಪಾಪ? ನನಗಿನ್ನಾವುದರ ಪಾಪ? ನನಗಿನ್ನೆಂಥದರ ಬಂಧನ?’

“ಭಗವಂತನ ನಾಮ ಜಪಿಸಿದರೆ ಮನುಷ್ಯನ ದೇಹ ಮನಸ್ಸು ಎಲ್ಲವೂ ಶುದ್ಧವಾಗಿಬಿಡುತ್ತವೆ. ಕೇವಲ ಪಾಪ, ನರಕ ಈ ಮಾತುಕತೆಗಳಲ್ಲೇ ಏಕೆ ತೊಡಗಬೇಕು? ಭಗವಂತನಿಗೆ ಒಮ್ಮೆ ಹೇಳಿಬಿಡು: ‘ಹೇ ಭಗವಂತ,

ಇದುವರೆಗೆ ಅನ್ಯಾಯ ಕರ್ಮಗಳನ್ನು ಮಾಡಿದೇನೆ, ಇನ್ನು ಮುಂದೆ ಮಾಡೋದಿಲ್ಲ.' ಆತನ ಹೆಸರಿನಲ್ಲಿ ಶ್ರದ್ಧೆಯಿಡು."

ಪರಮಹಂಸರು ಪ್ರೇಮೋನ್ಮತ್ತರಾಗಿ ಹಾಡುತ್ತಿದಾರೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀನಾಮವನು ಜಪಿಸುತಿರಲು
ಮುಕ್ತಿಗೊಯ್ಯದೆ ನೀನು ಬಿಡುವಳೇನು? . . .

ಬಳಿಕ ಹೇಳುತ್ತಿದಾರೆ: "ನಾನು ಭಗವತಿಯನ್ನು ಕೇವಲ ಭಕ್ತಿಗಾಗೇ ಪ್ರಾರ್ಥನೆ ಮಾಡಿದೆ. ಹೂವನ್ನು ಭಗವತಿಯ ಪಾದಪದ್ಮಗಳಿಗೆ ಅರ್ಪಿಸಿ ಪ್ರಾರ್ಥನೆ ಮಾಡಿದೆ: 'ಹೇ ತಾಯೆ, ಇಗೋ ತೆಗೆದುಕೊ ನಿನ್ನ ಪಾಪವನ್ನ, ಇಗೋ ತೆಗೆದುಕೊ ನಿನ್ನ ಪುಣ್ಯವನ್ನ. ನನಗೆ ಶುದ್ಧ ಭಕ್ತಿ ಕೊಡು. ಇಗೋ ತೆಗೆದುಕೊ ನಿನ್ನ ಜ್ಞಾನವನ್ನ, ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ. ನನಗೆ ಶುದ್ಧ ಭಕ್ತಿ ಕೊಡು. ಇಗೋ ತೆಗೆದುಕೊ ನಿನ್ನ ಶುಚಿಯನ್ನ, ಇಗೋ ತೆಗೆದುಕೊ ನಿನ್ನ ಅಶುಚಿಯನ್ನ. ನನಗೆ ಶುದ್ಧ ಭಕ್ತಿ ನೀಡು. ಇಗೋ ತೆಗೆದುಕೊ ನಿನ್ನ ಧರ್ಮವನ್ನ, ಇಗೋ ತೆಗೆದುಕೊ ನಿನ್ನ ಅಧರ್ಮವನ್ನ. ನನಗೆ ಶುದ್ಧ ಭಕ್ತಿ ಕರುಣಿಸು.'

(ಬ್ರಾಹ್ಮಭಕ್ತರಿಗೆ) "ರಾಮಪ್ರಸಾದನ ಒಂದು ಹಾಡು ಕೇಳಿ:

ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀಸುರತರುವಿರುವೆಡೆಗೆ! . . . (ಉ. ೭೩೬)

"ಸಂಸಾರದಲ್ಲಿರತಕ್ಕವರಿಗೆ ಭಗವಂತನ ಸಾಕ್ಷಾತ್ಕಾರ ಏಕೆ ದೊರೆಯದೆ ಹೋಗುತ್ತೆ? ಜನಕರಾಜನಿಗೆ ದೊರೆತಿತ್ತು. ರಾಮಪ್ರಸಾದ ಈ ಜಗತ್ತನ್ನ ವರ್ಣಿಸಿದಾನೆ: 'ಕನಸಿನ ತೆರೆ' ಎಂಬುದಾಗಿ. ಆದರೆ ಭಗವಂತನ ಪಾದಪದ್ಮಗಳಲ್ಲಿ ಭಕ್ತಿಯನ್ನು ದೊರಕಿಸಿಕೊಂಡದ್ದೇ ಆದರೆ—

ಈ ಜಗವೆಂಬುದು ಮೋಜಿನ ಮನೆಯೊ!
ಇದರೊಳು ನಾ ಮನಬಂದೊಲು ನಡೆವೆ.
ತಿನ್ನುವೆ—ಕುಡಿಯುವೆ—ಕುಣಿಯುವೆ—ನಲಿವೆ.
ಜನಕನ ತೇಜವ ಮೀರಿದರಾರೊ?
ಇಹ-ಪರದಲ್ಲೂ ಕೊರತೆಯಿಲ್ಲದೊಲು
ಬಾಳಿದನವನು.

ಅದನೂ ಇದನೂ—ಎರಡನು ಹಿಡಿದು
ಕುಡಿದನು ತುಂಬಿದ ಹಾಲ್‌ಬಟ್ಟಲನು !

( ಎಲ್ಲರೂ ನಗುತ್ತಿದಾರೆ. )

"ಆದರೆ ಇದ್ದಕ್ಕಿದ್ದಹಾಗೆ ಜನಕರಾಜ ಆಗಿಬಿಡಲಾಗೋದಿಲ್ಲ. ಜನಕರಾಜ ಮೊದಲು ನಿರ್ಜನಪ್ರದೇಶದಲ್ಲಿ ಬಹಳವಾಗಿ ತಪಸ್ಸುಮಾಡಿದ.

"ಸಂಸಾರದಲ್ಲಿರುವವರೂ ಒಮ್ಮೊಮ್ಮೆ ಹೋಗಿ ನಿರ್ಜನ ಪ್ರದೇಶದಲ್ಲಿ ವಾಸಮಾಡಬೇಕು. ಸಂಸಾರದ ಹೊಸಲು ದಾಟಿಹೋಗಿ ಒಬ್ಬನೇ ಹೊರಗೆ ಇದ್ದು ಕನಿಷ್ಠಪಕ್ಷ ಒಂದು ಮೂರು ದಿನಗಳಾದರೂ ಭಗವಂತನಿಗಾಗಿ ಅಳಲು ಸಾಧ್ಯವಾಗುವುದಾದರೆ ಅದೂ ಒಳ್ಳೆಯದೆ. ಹೋಗಲಿ, ಒಂದು ದಿನವಾದರೂ ಸರಿಯೆ ವಿರಾಮಮಾಡಿಕೊಂಡು ನಿರ್ಜನಪ್ರದೇಶದಲ್ಲಿ ಆತನ ಚಿಂತನೆ ಮಾಡಲು ಸಾಧ್ಯವಾಗುವುದಾದರೆ ಅದೂ ಎಷ್ಟೊ ಒಳ್ಳೆಯದೆ. ಜನ ಹೆಂಡತಿ ಮಕ್ಕಳಿಗಾಗಿ ಕೊಡಗಟ್ಟಲೆ ನೀರು ಸುರಿಸುತ್ತಾರೆ. ಭಗವಂತನಿಗಾಗಿ ಯಾರು ಅಳುತ್ತಾರೆ ಹೇಳು? ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆಮಾಡಬೇಕು. ಸಂಸಾರದಲ್ಲಿ ಕಾಲಿಟ್ಟು ಅದರ ವಿವಿಧ ಕರ್ಮಗಳಲ್ಲಿ ತೊಡಗಿರುವ ವ್ಯಕ್ತಿಗೆ ಭಗವಂತನಲ್ಲಿ ಮನಸ್ಸನ್ನು ಸ್ಥಿರವಾಗಿ ಇಡಬೇಕು ಎಂದರೆ, ಮೊದಲು ಮೊದಲು ಅನೇಕ ವಿಘ್ನಗಳು ಬರುತ್ತವೆ. ಫುಟ್‌ಪಾತಿನ ಗಿಡ ಇನ್ನೂ ಸಸಿಯಾಗಿರುವಾಗ ಅದಕ್ಕೆ ಬೇಲಿ ಹಾಕದೆ ಇದ್ದರೆ ಆಡುಕುರಿಗಳು ತಿಂದುಬಿಡುತ್ತವೆ. ಗಿಡ ಸಸಿಯಾಗಿರುವಾಗ ಬೇಲಿ ಆವಶ್ಯಕ. ಬುಡ ದಪ್ಪವಾಯಿತು ಎಂದರೆ ಬೇಲಿಯ ಆವಶ್ಯಕತೆಯೇನಿರೋದಿಲ್ಲ. ಆಗ ಆನೆ ತಂದು ಕಟ್ಟಿದರೂ ಅದಕ್ಕೆ ಏನೂ ಆಗದು.

"ತಗುಲಿರೋ ರೋಗ ವಿಷಮಶೀತ ಜ್ವರ. ಅಂಥ ರೋಗಿ ಇರೋ ಕೊಠಡಿಯಲ್ಲಿ ಇವೆ ನೀರಿನ ಹಂಡೆ, ಹುಣಿಸೆ ಕಾಯಿನ ಉಪ್ಪಿನ ಕಾಯಿ. ಆತನನ್ನು ಗುಣಪಡಿಸಬೇಕಾಗಿದ್ದರೆ ಮೊದಲು ಆತನನ್ನು ಬೇರೆ ಕೊಠಡಿಗೆ ಕರೆದುಕೊಂಡುಹೋಗಿ ಮಲಗಿಸಬೇಕು. ಸಂಸಾರಿ ಜೀವವೇ ವಿಷಮಶೀತ ಜ್ವರದ ರೋಗಿ. ವಿಷಯವಸ್ತುಗಳೇ ನೀರಿನ ಹಂಡೆ, ವಿಷಯಭೋಗ ತೃಷ್ಣೆಯೇ ನೀರಡಿಕೆ. ಹುಣಿಸೆಕಾಯಿನ ಉಪ್ಪಿನಕಾಯಿಯ ಯೋಚನೆ ಮನಸ್ಸಿಗೆ ಬಂದರೇನೇ ಬಾಯಲ್ಲಿ ನೀರು ಊರುತ್ತದೆ, ಅಂಥಾದ್ದರಲ್ಲಿ ಹತ್ತಿರ ತೆಗೆದುಕೊಂಡುಬಂದರೆ ಇನ್ನು ಕೇಳಬೇಕೇ? ಈ ವಿಧದ ವಸ್ತುಗಳು

ಕೊಠಡಿಯಲ್ಲಿ ಇವೆ. ಹೆಂಗಸಿನ ಸಹವಾಸವೇ ಉಪ್ಪಿನಕಾಯಿ. ಆದ್ದರಿಂದ ನಿರ್ಜನ ಪ್ರದೇಶದಲ್ಲಿ ಚಿಕಿತ್ಸೆ ಆವಶ್ಯಕ.

"ವಿವೇಕ ವೈರಾಗ್ಯಗಳನ್ನು ಗಳಿಸಿಕೊಂಡು ಬೇಕಾದರೆ ಸಂಸಾರದಲ್ಲಿ ಇರಬಹುದು. ಸಂಸಾರ ಸಮುದ್ರದಲ್ಲಿ ಕಾಮಕ್ರೋಧಾದಿ ಮೊಸಳೆ ವಾಸ ವಾಗಿವೆ. ಅರಿಸಿನ ಮೈಗೆ ಹಚ್ಚಿಕೊಂಡು ನೀರಿಗೆ ಇಳಿದರೆ ಮೊಸಳೆಗಳ ಕಾಟ ಇರೋದಿಲ್ಲ. ವಿವೇಕ ವೈರಾಗ್ಯವೇ ಅರಿಸಿನ. ಸದಸದ್ವಿಚಾರಕ್ಕೆ ವಿವೇಕ ಅಂತ ಹೆಸರು. ಭಗವಂತನೇ ಸತ್, ನಿತ್ಯವಸ್ತು; ಉಳಿದುದೆಲ್ಲಾ ಅಸತ್, ಅನಿತ್ಯವಸ್ತು—ಎರಡು ದಿನದ ಬಾಳಿನವು ಎಂಬುದೇ ಜ್ಞಾನ. ಭಗವಂತನಲ್ಲಿ ಅನುರಾಗ ಬೆಳಸಿಕೊಳ್ಳಬೇಕು. ಆತನ ಕಡೆ ಮನಸ್ಸು ಹರಿಯುವಂತೆ ಮಾಡಿಕೊಳ್ಳಬೇಕು—ಆತನನ್ನು ಪ್ರೀತಿಸಬೇಕು. ಕೃಷ್ಣ ನನ್ನು ಕಂಡರೆ ಗೋಪಿಯರಿಗೆ ಅತ್ಯಂತ ಮಹತ್ತಾದ ಆಕರ್ಷಣೆ. ಒಂದು ಹಾಡು ಕೇಳು:

ಕೇಳಿರೇ ಸಖಿ ಕೇಳಿರೇ ದೂರಕೊಳಲಿನ ಕರೆಯನು!
ನಾನು ಹಾರುವೆನಲ್ಲಿಗೀಗಲೆ, ಕಾಯುತಿರುವನು ಕೃಷ್ಣನು!
ನೀವು ಬರುವಿರೊ ಇಲ್ಲವೋ ಸಖಿ, ಹೇಳಿರೀಗಲೆ ನಡೆವೆನು.

ನಿಮ್ಮ ಪಾಲಿಗೆ ನನ್ನ ಕೃಷ್ಣನು ಬರಿಯ ಹೆಸರಾಗಿರುವನು
ನನಗೊ ಆತನು ಹೃದಯದೊಲವಿನ ಉಸಿರಿನುಸಿರಾಗಿರುವನು!
ನೀವು ಕಿವಿಯೊಳು ಕೇಳುತಿರುವಿರಿ ಅವನ ಕೊಳಲಿನ ರಾಗವ
ನಾನು ಕೇಳುವೆನಾತ್ಮದಾಳದಿ ಮಧುರ ಮುರಳೀನಾದವ!
'ನಿನ್ನ ಹೊರತೀ ಕುಂಜಕಾನನ ಬರಿಯ ನೀರಸವಾಗಿದೆ
ಬಾರ ರಾಧೇ, ಬಾರ ಪ್ರಿಯಸಖಿ'—ಎಂದು ಕೊಳಲುಲಿ ಕರೆದಿದೆ!"

ಪರಮಹಂಸರು ಈ ಹಾಡನ್ನು ಹಾಡುತ್ತ ಹಾಡುತ್ತ ಅಶ್ರುಪೂರ್ಣ ಲೋಚನರಾಗಿ ಕೇಶವನೇ ಮೊದಲಾದವರಿಗೆ ಹೇಳುತ್ತಿದಾರೆ: "ರಾಧಾಕೃಷ್ಣ ರನ್ನು ಒಪ್ಪಿದರೆ ಒಪ್ಪಿ ಇಲ್ಲದಿದ್ದರೆ ಬಿಡಿ, ಅವರಲ್ಲಿ ಪರಸ್ಪರ ಇದ್ದ ಆಕರ್ಷಣೆಯನ್ನು ಮಾತ್ರ ಒಪ್ಪಿಕೊಂಡುಬಿಡಿ. ಭಗವಂತನಿಗಾಗಿ ಅದೇ ವಿಧದ ವ್ಯಾಕುಲತೆ ನಿಮ್ಮಲ್ಲಿ ಉಂಟಾಗುವಂತೆ ಪ್ರಯತ್ನ ಮಾಡಿ. ವ್ಯಾಕು ಲತೆ ಉಂಟಾಯಿತು ಎಂದರೆ ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳ ಬಹುದು."

ಈಗ ನದಿ ಇಳಿಯಲು ಆರಂಭಿಸಿದೆ. ಜಹಜು ಕಲ್ಕತ್ತದ ಕಡೆಗೆ ವೇಗವಾಗಿ ಹೋಗುತ್ತಿದೆ. ಅದು ಈಗ ಹೌರ ಸೇತುವೆ ದಾಟಿ 'ಬೊಟಾನಿಕಲ್ ಗಾರ್ಡನ್' ಹತ್ತಿರಕ್ಕೆ ಬರುತ್ತಿದೆ. ಇನ್ನೂ ಸ್ವಲ್ಪ ಕೆಳಕ್ಕೆ ಹೋಗುವಂತೆ ಕ್ಯಾಪ್ಟನ್ನನಿಗೆ ತಿಳಿಸಲಾಯಿತು. ಜಹಜು ಎಷ್ಟು ದೂರ ಮುಂದುವರಿದುಬಿಟ್ಟದೆ! ಆದರೆ ಅನೇಕರಿಗೆ ಅದರ ಅರಿವೇ ಇರಲಿಲ್ಲ. ಅವರು ಮಗ್ನರಾಗಿ ಪರಮಹಂಸರ ಮಾತುಕತೆ ಕೇಳುತ್ತಿದಾರೆ. ಹೊತ್ತು ಹೇಗೆ ಕಳೆದುಹೋಯಿತು ಎಂಬುದರ ಪ್ರಜ್ಞೆಯೇ ಅವರಿಗಿರಲಿಲ್ಲ.

ಕೇಶವಸೇನ ಪುರಿ ಮತ್ತು ತೆಂಗಿನ ಕಾಯಿನ ತುರಿ ಇವನ್ನು ಹಂಚುತ್ತಿದಾನೆ. ಎಲ್ಲರೂ ಅವನ್ನು ತಮ್ಮ ಚೌಕದ ಸೆರಗಿಗೆ ಹಾಕಿಸಿಕೊಳ್ಳುತ್ತಿದಾರೆ. ಈಗ ಕೈಗು ಬಾಯಿಗು ಕೆಲಸ ಶುರುವಾಗಿದೆ. ಎಲ್ಲರೂ ಆನಂದದಿಂದ ತುಂಬಿತುಳುಕಾಡುತ್ತಿದಾರೆ. ಆದರೆ ಇಂಥ ಆನಂದದ ಸಮಯದಲ್ಲಿ ಕೇಶವನಿಗು ವಿಜಯನಿಗು ಸರಿಹೋಗದೆ ಇರುವುದನ್ನು ನೋಡಿ ಅವರಿಬ್ಬರಿಗೂ ಸ್ನೇಹಬೆಳಸಲು ಪರಮಹಂಸರು ಕಾತರರಾಗಿದಾರೆ.

ಶ್ರೀರಾಮಕೃಷ್ಣರು ಕೇಶವನಿಗೆ: "ನೋಡಿಲ್ಲಿ, ವಿಜಯ ಬಂದಿದಾನೆ. ನಿಮ್ಮಿಬ್ಬರ ಜಗಳ ವಿವಾದ ಶಿವ ಮತ್ತು ರಾಮರ ಜಗಳದಂತಿದೆ. ಶಿವ ರಾಮನ ಗುರು. ಇಬ್ಬರಿಗೂ ಯುದ್ಧವೂ ನಡೆಯಿತು; ಬಳಿಕ ಒಪ್ಪಂದಕ್ಕೂ ಬಂದುಬಿಟ್ಟರು. ಆದರೆ ಶಿವನ ಭೂತಪ್ರೇತಗಳಿಗೂ ರಾಮನ ವಾನರ ಸೈನ್ಯಕ್ಕೂ ಕಚ್ಚಾಟ ಬಡಿದಾಟ ಏನುಮಾಡಿದರೂ ನಿಲ್ಲಲೊಲ್ಲದು! (ಗಟ್ಟಿಯಾದ ನಗು.) ರಕ್ತಸಂಬಂಧಿಗಳಲ್ಲೂ ಈ ರೀತಿಯಾಗಿ ಜಗಳ ಆಗೋದುಂಟು. ಲವಕುಶರು ರಾಮನೊಡನೆ ಯುದ್ಧ ಮಾಡಲಿಲ್ಲವೆ? ತಾಯಿಯ ಶುಭ ಮಗಳ ಶುಭ ಪ್ರತ್ಯೇಕ ಪ್ರತ್ಯೇಕವೊ ಏನೊ ಎಂಬೋ ಹಾಗೆ ಅವರಿಬ್ಬರು ಪ್ರತ್ಯೇಕ ಪ್ರತ್ಯೇಕವಾಗಿ ಮಂಗಳಗೌರಿ ವ್ರತ ಆಚರಿಸೋದನ್ನು ನೀನು ನೋಡಿಲ್ಲ? ಆದರೆ ವಾಸ್ತವವಾಗಿ ಇವಳ ಶುಭದಿಂದ ಅವಳಿಗೆ ಶುಭ, ಅವಳ ಶುಭದಿಂದ ಇವಳಿಗೆ ಶುಭ. ಹಾಗೇನೆ ನಿನಗೊಂದು ಸಮಾಜ ಇದೆ, ಅವನಿಗೂ ಒಂದು ಸಮಾಜ ಬೇಕು. (ನಗು.) ಆದರೆ ಇವೆಲ್ಲಾ ಆವಶ್ಯಕ. ಸಾಕ್ಷಾತ್ ಭಗವಂತ ಶ್ರೀಕೃಷ್ಣನೇ ಬೃಂದಾವನದಲ್ಲಿ ಗೋಪಿಯರೊಡನೆ ಕ್ರೀಡೆಯಲ್ಲಿ ತೊಡಗಿರುವಾಗ ಜಟಿಲೆಕುಟಿಲೆಯರು ಅಲ್ಲಿಗೆ ಬರುತ್ತಾರೆ. ನೀನು ಕೇಳಬಹುದು ಏಕೆ ಎಂಬುದಾಗಿ. ಜಟಿಲೆ

ಕುಟಿಲೆಯರಿಲ್ಲದೆ ಇದ್ದರೆ ಕ್ರೀಡೆ ಕಳೆಕಟ್ಟದು. (ಎಲ್ಲರೂ ನಗುತ್ತಾರೆ.) ಅವರಿಲ್ಲದೆ ಇದ್ದರೆ ತಮಾಷೆಯೇ ಇರದು. (ಗಟ್ಟಿಯಾದ ನಗು.)

"ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವಾದಿ. ಆದರೆ ಅವರ ಗುರು ಅದ್ವೈತವಾದಿ. ಕೊನೆಗೆ ಇಬ್ಬರಿಗೂ ಹತ್ತಿಕೊಂಡಿತು. ಗುರು ಶಿಷ್ಯರು ಪರಸ್ಪರ ಮತಖಂಡನೆ ಮಾಡಲು ಶುರುಮಾಡಿದರು. ಹೀಗೆ ಯಾವಾಗಲೂ ಆಗೋದುಂಟು. ಆದರೂ ಗುರುವಿಗೆ ಶಿಷ್ಯ ತನ್ನವನೆ."

ಎಲ್ಲರೂ ಪರಮಹಂಸರ ಮಾತುಕತೆ ಕೇಳಿ ಆನಂದದಿಂದಿದಾರೆ.

ಶ್ರೀರಾಮಕೃಷ್ಣರು ಕೇಶವನಿಗೆ: "ನೀನು ಜನರ ಪ್ರಕೃತಿಯನ್ನು ಚೆನ್ನಾಗಿ ಪರೀಕ್ಷಿಸಿ ಶಿಷ್ಯರನ್ನಾಗಿ ಮಾಡಿಕೊಳ್ಳೋದಿಲ್ಲ. ಅದಕ್ಕಾಗೇ ಈ ರೀತಿಯಾಗಿ ನಿನ್ನನ್ನು ಬಿಟ್ಟು ಬಿಟ್ಟು ಹೋಗುತ್ತಾರೆ.

"ಮನುಷ್ಯರೆಲ್ಲರೂ ನೋಡುವುದಕ್ಕೇನೊ ಒಂದೇ ರೀತಿಯಾಗಿ ಕಾಣುತ್ತಾರೆ, ಆದರೆ ಭಿನ್ನ ಭಿನ್ನ ಪ್ರಕೃತಿಯುಳ್ಳವರು. ಕೆಲವರಲ್ಲಿ ಸತ್ತ್ವಗುಣ, ಇನ್ನು ಕೆಲವರಲ್ಲಿ ರಜೋಗುಣ, ಮತ್ತೆ ಕೆಲವರಲ್ಲಿ ತಮೋಗುಣ ಅಧಿಕವಾಗಿರುತ್ತದೆ. ಎಲ್ಲಾ ಕಡುಬುಗಳು ನೋಡುವುದಕ್ಕೇನೋ ಒಂದೇ ರೀತಿಯಾಗಿ ಕಾಣುತ್ತವೆ. ಆದರೆ ಕೆಲವುದರೊಳಗೆ ಹಾಲುಖೋವ ಇರುತ್ತದೆ, ಮತ್ತೆ ಕೆಲವುದರೊಳಗೆ ಉದ್ದಿನ ಬೇಳೆ ಹೂರ್ಣ ಇರುತ್ತದೆ. (ಎಲ್ಲರೂ ನಗುತ್ತಾರೆ.)

"ನನ್ನ ಭಾವ ಏನು ಗೊತ್ತೆ? ನನ್ನನ್ನು ತೆಗೆದುಕೊಂಡರೆ, ನಾನು ಉಂಡುತಿಂದು ಆನಂದದಿಂದಿದ್ದೇನೆ. ಉಳಿದುದೆಲ್ಲ ಭಗವತಿಗೆ ಗೊತ್ತು. ಈ ಮೂರು ಮಾತುಗಳನ್ನು — ಗುರು, ಕರ್ತ, ತಂದೆ ಎಂಬುವನ್ನು ಎತ್ತಿತು ಎಂದರೆ ನನಗೆ ಮುಳ್ಳು ಚುಚ್ಚಿದ ಹಾಗೆ ಆಗುತ್ತದೆ.

"ಇರತಕ್ಕ ಗುರು ಕೇವಲ ಒಬ್ಬನೇ ಒಬ್ಬ. ಆತನೇ ಸಚ್ಚಿದಾನಂದ. ಆತ ಮಾತ್ರನೇ ಶಿಕ್ಷಣ ಕೊಡಬಲ್ಲ. ನನ್ನದು ಸಂತಾನಭಾವ. ಮಾನವನ ಅಂತಸ್ತಿನಲ್ಲಿರೋ ಗುರುಗಳು ಲಕ್ಷಗಟ್ಟಲೆ ಸಿಕ್ಕುತ್ತಾರೆ. ಎಲ್ಲರಿಗೂ ಗುರು ಆಗಬೇಕು ಅಂತ ಇಚ್ಛೆ. ಆದರೆ ಶಿಷ್ಯನಾಗಬೇಕು ಅಂತ ಯಾರಿಗೆ ತಾನೆ ಇಚ್ಛೆಯಿದೆ?

"ಲೋಕಶಿಕ್ಷಣ ಬಹಳ ಕಠಿನವಾದ ಕೆಲಸ. ಭಗವಂತ ತನ್ನ ಸಾಕ್ಷಾತ್ಕಾರ ಕೊಟ್ಟು ಆದೇಶವೀಯುವುದಾದರೆ ಮನುಷ್ಯ ಲೋಕಶಿಕ್ಷಣ ಕಾರ್ಯವನ್ನು ಮಾಡಬಲ್ಲ. ನಾರದಶುಕದೇವಾದಿಗಳಿಗೆ ಭಗವಂತನಿಂದ

ಆದೇಶ ದೊರೆತಿತ್ತು. ಶಂಕರಾಚಾರ್ಯರಿಗೂ ದೊರೆತಿತ್ತು. ಆದೇಶವಿಲ್ಲದೆ ಇತ್ತು ಎಂದರೆ, ಯಾರು ತಾನೆ ನಿನ್ನ ಮಾತಿಗೆ ಬೆಲೆಕೊಡುತ್ತಾರೆ?

"ಕಲ್ಕತ್ತದ ಜನರು ಎಷ್ಟು ಸುಲಭದಿಂದ ಭಾವೋದ್ರೇಕಗೊಂಡು ಬಿಡುತ್ತಾರೆ ಗೊತ್ತೆ? ಸೌದೆ ಕೆಳಗೆ ಉರಿಯುತ್ತಿರುವವರೆಗೆ ಹಾಲು ಉಕ್ಕಿ ಉಕ್ಕಿ ಮರಳುತ್ತಿರುತ್ತದೆ. ಸೌದೆಯನ್ನು ಒಲೆಯಿಂದ ಹೊರಕ್ಕೆ ಎಳೆಯಿತು ಎಂದರೆ, ಅದು ಶಾಂತವಾಗಿಬಿಡುತ್ತದೆ. ಕಲ್ಕತ್ತದ ಜನರಿಗೆ ಯಾವುದಾದರೂ ಒಂದು ಭಾವೋದ್ರೇಕಕರವಾದ್ದು ಬೇಕೇ ಬೇಕು. ನೀರು ಬೇಕು ಅಂತ ಒಂದುಕಡೆ ಬಾವಿ ತೋಡುತ್ತಾರೆ. ಅಲ್ಲೇನಾದರು ಒಂದು ಸ್ವಲ್ಪ ಅರೆ ಸಿಕ್ಕಿತು ಎಂದರೆ, ಆ ಸ್ಥಳ ಬಿಟ್ಟುಬಿಡುತ್ತಾರೆ. ಬಳಿಕ ಬೇರೆ ಕಡೆ ಅಗೆಯಲು ಶುರುಮಾಡುತ್ತಾರೆ. ಅಲ್ಲೇನಾದರು ಮರಳು ಸಿಕ್ಕಿಬಿಟ್ಟಿತು ಎಂದರೆ ಆ ಜಾಗವನ್ನೂ ಬಿಟ್ಟುಬಿಡುತ್ತಾರೆ. ಹೀಗೇ ಮುಂದುವರಿಯುತ್ತಲೇ ಇರುತ್ತಾರೆ. ಸುಮ್ಮಸುಮ್ಮನೆ ಮನಸ್ಸಿನಲ್ಲಿ ತನಗೆ ಆದೇಶ ದೊರೆತು ಬಿಟ್ಟಿದೆ ಎಂದು ಭಾವಿಸಿಕೊಂಡುಬಿಟ್ಟರೆ ಅದು ಯಾವ ಪ್ರಯೋಜನಕ್ಕೂ ಬಾರದು.

"ಸತ್ಯವಾಗಿಯೂ ಭಗವಂತ ನಮ್ಮ ಕಣ್ಣಿಗೆ ಕಾಣಿಸಿಕೊಳ್ಳುತ್ತಾನೆ, ನಮ್ಮೊಡನೆ ಮಾತುಕತೆ ಆಡುತ್ತಾನೆ. ಆಗ ಆತನಿಂದ ಆದೇಶ ಪಡೆಯಲು ಸಾಧ್ಯ. ಆ ರೀತಿಯಾಗಿ ಆದೇಶ ಪಡೆದ ವ್ಯಕ್ತಿಯ ಬಾಯಿಂದ ಬರೋ ಮಾತಿಗೆ ಎಷ್ಟು ಬಲ! ಪರ್ವತಗಳನ್ನೂ ಚಲಿಸಿಬಿಡಬಲ್ಲವು. ಬರಿದೆ ಉಪನ್ಯಾಸ ಯಾವುದಕ್ಕೆ ಬಂದದ್ದು? ಒಂದೆರಡು ದಿನಗಳ ಮಟ್ಟಿಗೆ ಕೇಳುತ್ತಾರೆ, ಬಳಿಕ ಮರೆತುಬಿಡುತ್ತಾರೆ. ಅದರಂತೆ ಅವರು ಎಂದಿಗೂ ನಡೆದುಕೊಳ್ಳುವುದಿಲ್ಲ.

ಆ ದೇಶದಲ್ಲಿ (ಕಾಮಾರಪುಕುರದಲ್ಲಿ) ಹಾಲಧಾರಪುಕುರ ಎಂಬ ಹೆಸರಿನ ಒಂದು ಕೆರೆ ಇದೆ. ಕೆಲವರು ಬೆಳಗಿನ ಜಾವ ಎದ್ದು ಹೋಗಿ ಏರಿ ಬಳಿ ಹೇಸಿಗೆ ಮಾಡಿಬಿಡುತ್ತಿದ್ದರು. ಅಲ್ಲಿಗೆ ಪ್ರಾತಃಕಾಲ ಸ್ನಾನಕ್ಕಾಗಿ ಬರುತ್ತಿದ್ದವರು ಬಾನು ಬಿರಿಯೋ ಹಾಗೆ ತಪ್ಪಿತಸ್ಥರನ್ನು ಬಯ್ಯುತ್ತಿದ್ದರು. ಎಷ್ಟು ಬಯ್ದರೂ ಮಾರನೆ ದಿನವೂ ಅದೇ ಅವಸ್ಥೆ. ಹೇಸಿಗೆಮಾಡುವುದು ನಿಲ್ಲದೇನೇ ಹೋಯಿತು. (ಎಲ್ಲರೂ ನಗುತ್ತಿದಾರೆ.) ಆಲ್ಲಿನ ಜನರು ತಮ್ಮ ಕಷ್ಟವನ್ನ ಸರ್ಕಾರಕ್ಕೆ ತಿಳಿಸಿದರು. ಅವರು ಅಲ್ಲಿಗೆ ಒಬ್ಬ ಜವಾನನನ್ನು ಕಳುಹಿಸಿದರು. ಆತ ಬಂದು ಅಲ್ಲಿ ಒಂದು ಸೈನ್ಬೋರ್ಡು ನೆಟ್ಟ. ಅದರಲ್ಲಿ

ಬರೆದಿತ್ತು: 'ಹೇಸಿಗೆಮಾಡಿದವರಿಗೆ ಶಿಕ್ಷೆ ವಿಧಿಸಲಾಗುತ್ತೆ.' ಒಡನೆಯೆ ಎಲ್ಲಾ ನಿಂತುಹೋಯಿತು. (ಎಲ್ಲರೂ ನಗುತ್ತಿದಾರೆ.)

"ಲೋಕಶಿಕ್ಷಣ ಮಾಡಬೇಕಾಗಿದ್ದರೆ ಭಗವಂತನಿಂದ ಆದೇಶ ಪಡೆದುಕೊಂಡಿರಬೇಕು. ಇಲ್ಲದಿದ್ದರೆ ಅದು ಹಾಸ್ಯಾಸ್ಪದಕ್ಕೆ ಇಟ್ಟು ಕೊಳ್ಳುತ್ತದೆ. ತನಗೇ ಪರಿಪಕ್ವತೆ ತಂದುಕೊಂಡಿಲ್ಲ, ಬೇರೆಯವರಿಗೆ ಪರಿಪಕ್ವತೆ ತರಲು ಹೋಗೋದು! ಕುರುಡ ಕುರುಡನಿಗೆ ದಾರಿತೋರಿಸೋಕೆ ಹೋಗೋದು! ಈ ವಿಧವಾದ ಹಿತ ವಿಪರೀತಕ್ಕಿಟ್ಟುಕೊಳ್ಳುತ್ತದೆ. ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡನಂತರ ಅಂತರ್ದೃಷ್ಟಿ ಉಂಟಾಗು ತ್ತದೆ; ಯಾರಿಗೆ ಏನು ರೋಗ ಎಂಬುದು ಗೊತ್ತಾಗುತ್ತದೆ. ಆಗ ಸರಿ ಯಾದ ಔಷಧ ಕೊಡಬಹುದು.

"ಭಗವಂತನ ಆದೇಶ ಪಡೆದುಕೊಳ್ಳದೆ ಇದ್ದರೆ, 'ನಾನು ಲೋಕ-ಶಿಕ್ಷಣ ಮಾಡುತ್ತಿದೇನೆ' ಎಂಬ ಅಹಂಕಾರ ಬಂದುಬಿಡುತ್ತದೆ. ಅಹಂಕಾರ, ಅಜ್ಞಾನದಿಂದ ಉಂಟಾಗುತ್ತದೆ. ಅಜ್ಞಾನದಿಂದಲೇ ಅನಿಸು ತ್ತದೆ, 'ನಾನು ಕರ್ತ' ಎಂಬುದಾಗಿ. 'ಭಗವಂತನೇ ಕರ್ತ. ಆತನೇ ಎಲ್ಲ ವನ್ನು ಮಾಡುತ್ತಿದಾನೆ. ನಾನು ಏನನ್ನೂ ಮಾಡುತ್ತಿಲ್ಲ' ಎಂಬ ಬೋಧೆ ಮನುಷ್ಯನಿಗೆ ಉಂಟಾಯಿತು ಎಂದರೆ ಆತ ಜೀವನ್ಮುಕ್ತನಾಗಿಬಿಡುತ್ತಾನೆ. 'ನಾನು ಕರ್ತ, ನಾನು ಕರ್ತ' ಎಂಬ ಈ ಬೋಧೆಯಿಂದಲೇ ಮನುಷ್ಯ ಪಡುವ ಸಕಲ ದುಃಖದುರಿತಗಳೆಲ್ಲ ಜನ್ಮತಳೆಯುತ್ತವೆ.

"ನೀವು ಹೇಳುತ್ತೀರಿ ಜಗತ್ತಿಗೆ ಉಪಕಾರಮಾಡಬೇಕು ಎಂಬುದಾಗಿ. ಜಗತ್ತೇನು ಒಂದು ಅಂಗೈಯಗಲದ್ದೆ? ಅದೂ ಅಲ್ಲದೆ ಈ ಜಗತ್ತಿಗೆ ಉಪಕಾರಮಾಡಲು ಮೊದಲನೆಯದಾಗಿ ಯಾರು ನೀವು? ಮೊದಲು ಸಾಧನೆಮಾಡಿ ಭಗವಂತನನ್ನು ಸಾಕ್ಷಾತ್ಕಾರಮಾಡಿಕೊಳ್ಳಿ, ಆತನನ್ನು ಪಡೆದುಕೊಳ್ಳಿ. ಆತ ಶಕ್ತಿಯನ್ನು ಕರುಣಿಸಿದ್ದೇ ಆದರೆ ಆಗ ಎಲ್ಲರಿಗೂ ಹಿತವನ್ನು ಮಾಡಬಲ್ಲಿರಿ; ಇಲ್ಲದಿದ್ದರೆ ಸಾಧ್ಯವಿಲ್ಲ."

ಒಬ್ಬ ಬ್ರಾಹ್ಮಭಕ್ತ: "ಭಗವಂತನ ಸಾಕ್ಷಾತ್ಕಾರ ದೊರಕದವರೆಗೆ ನಾವು ಎಲ್ಲಾ ಕೆಲಸಕಾರ್ಯಗಳನ್ನು ಬಿಟ್ಟುಬಿಡೋಣವೆ?"

ಶ್ರೀರಾಮಕೃಷ್ಣರು: "ಇಲ್ಲ. ಹಾಗೇಕೆ ಮಾಡಬೇಕು? ಭಗ ವಚ್ಚಿಂತನೆ, ಆತನ ನಾಮಗುಣಕೀರ್ತನೆ, ನಿತ್ಯಕರ್ಮ ಇವೇ ಮೊದ ಲಾದುವುಗಳಲ್ಲಿ ತೊಡಗಿರಬೇಕು."

ಬ್ರಾಹ್ಮಭಕ್ತ: "ಸಂಸಾರಕ್ಕೆ ಸಂಬಂಧಪಟ್ಟ ಕೆಲಸಕಾರ್ಯಗಳಿವೆಯಲ್ಲ—ಹಣ ಸಂಪಾದಿಸುವುದು ಇವೇ ಮೊದಲಾದುವು, ಅವನ್ನ?"

ಶ್ರೀರಾಮಕೃಷ್ಣರು: "ಹೌದು, ಅವನ್ನು ಮಾಡಬೇಕು—ಸಂಸಾರಯಾಪನೆಗೆ ಅತ್ಯಾವಶ್ಯಕವಾದವುಗಳಷ್ಟನ್ನು ಮಾತ್ರ. ಆದರೆ ಅದೇ ಸಮಯದಲ್ಲಿ ನಿನ್ನ ಕರ್ಮಗಳನ್ನು ನೀನು ನಿಷ್ಕಾಮಭಾವನೆಯಿಂದ ಜರುಗಿಸಲು ಶಕ್ತನಾಗುವಂತೆ ಭಗವಂತ ಶಕ್ತಿ ದಯಪಾಲಿಸಬೇಕೆಂದು ಕಣ್ಣೀರು ಸುರಿಸುತ್ತ ಏಕಾಂತದಲ್ಲಿ ಆತನನ್ನು ಪ್ರಾರ್ಥಿಸಿಕೊಳ್ಳುತ್ತಿರಬೇಕು. ನೀನು ಆತನಿಗೆ ಹೇಳಬೇಕು: 'ಹೇ ಭಗವಂತ, ನನ್ನ ಸಾಂಸಾರಿಕ ಕೆಲಸಕಾರ್ಯಗಳನ್ನ ಕಡಮೆ ಕಡಮೆಮಾಡಿಕೊಡು; ಇಲ್ಲದಿದ್ದರೆ, ನನ್ನ ಅನುಭವಕ್ಕೆ ಬಂದಿದೆ, ಹೆಚ್ಚು ಕೆಲಸ ಬಂತು ಎಂದರೆ ನಿನ್ನನ್ನು ನಾನು ಮರೆತುಬಿಡುತ್ತೇನೆ. ಭಾವಿಸುತ್ತೇನೆ ನಿಷ್ಕಾಮಕರ್ಮ ಮಾಡುತ್ತಿದೇನೆ ಅಂತ, ಆದರೆ ಅದು 'ಸಕಾಮಕರ್ಮ ಆಗಿಬಿಡುತ್ತದೆ.' ದಾನಧರ್ಮಾದಿ ಕಾರ್ಯಗಳನ್ನು ಹೆಚ್ಚಾಗಿ ಮಾಡಲು ಹೋಗಿ ಕೊನೆಗೆ ಲೋಕಮಾನ್ಯನಾಗೋ ಇಚ್ಛೆ ಬಂದುಬಿಡಬಹುದು.

"ಒಮ್ಮೆ ಶಂಭುಮಲ್ಲಿಕ ತಾನು ಕಟ್ಟಿಸಬೇಕೆಂದಿರೋ ಆಸ್ಪತ್ರೆ, ಔಷಧಾಲಯ, ಸ್ಕೂಲು, ರಸ್ತೆ, ಕೊಳ ಇವೇ ಮೊದಲಾದುವುಗಳ ಮಾತು ಎತ್ತಿದ. ನಾನು ಆತನಿಗೆ ಹೇಳಿದೆ: 'ಆ ವಿಧದ ಕೆಲಸಗಳಿಗಾಗಿ ಸುಮ್ಮನೆ ಹುಡುಕಿಕೊಂಡು ಹೋಗಬೇಡ. ತಾನಾಗೇ ಬರುವ ಮತ್ತು ಅತ್ಯಾವಶ್ಯಕವಾಗಿರುವ ಕೆಲಸಕಾರ್ಯಗಳನ್ನು ಮಾತ್ರ ಮಾಡು—ನಿಷ್ಕಾಮಭಾವನೆಯಿಂದ.' ಬೇಕೂ ಅಂತ ಹೆಚ್ಚಾಗಿ ಕೆಲಸಕಾರ್ಯ ಗಂಟು ಹಾಕಿಕೊಳ್ಳುವುದು ಶ್ರೇಯಸ್ಕರವಲ್ಲ. ಹಾಗೆ ಮಾಡಿದರೆ ಭಗವಂತನನ್ನ ಮರೆತುಬಿಡಬೇಕಾಗುತ್ತದೆ. ಒಮ್ಮೆ ಕೆಲವರು ಕಾಳೀಘಟ್ಟಕ್ಕೆ ಬಂದರು. ಅವರ ಇಡೀ ಸಮಯವೆಲ್ಲ ದಾನಧರ್ಮಾಧಿಕಾರ್ಯಗಳಲ್ಲೇ ಕಳೆದುಹೋಯಿತು. ಅವರಿಗೆ ಭಗವತಿಯ ದರ್ಶನ ಮಾಡುವುದಕ್ಕೆ ಸಮಯವೇ ದೊರಕಲಿಲ್ಲ! (ನಗು.) ಮೊದಲು ಹೇಗೊ ಮಾಡಿ ಗುಂಪಿನೊಳಕ್ಕೆ ನುಗ್ಗಿ ತಳ್ಳಿಯೊ ತಳ್ಳಿಸಿಕೊಂಡೊ ಕಾಳಿಯ ದರ್ಶನ ಮಾಡಿಬಿಡಬೇಕು. ಬಳಿಕ ಇಚ್ಛೆ ಬಂತು ಅಂದರೆ ದಾನ ಮಾಡು, ಇಲ್ಲದಿದ್ದರೆ ಬಿಡು. ಆದರೆ ಇಚ್ಛೆ ಬಂತು ಎಂದರೆ, ಹೃದಯ ತಣಿದು ತೃಪ್ತಿಯಾಗುವವರೆಗೂ ಮಾಡು. ಭಗವಂತನ ಸಾಕ್ಷಾತ್ಕಾರಕ್ಕೆ ಕೆಲಸ ಕೇವಲ ಸಾಧನ ಮಾತ್ರ. ಅದಕ್ಕಾಗೆ ನಾನು ಶಂಭು-

ಮಲ್ಲಿಕನಿಗೆ ಹೇಳಿದೆ: 'ಒಂದು ಪಕ್ಷ ನಿನಗೆ ಭಗವಂತನ ಸಾಕ್ಷಾತ್ಕಾರ ಆಯಿತು ಅನ್ನು; ಆಗ ನೀನು ಆತನನ್ನು ನಿನಗೆ ಕೆಲವು ಆಸ್ಪತ್ರೆ, ಔಷಧಾಲಯ ಇವೇ ಮೊದಲಾದುವನ್ನು ಕಟ್ಟಿಸಿಕೊಡುವಂತೆ ಕೇಳಿ ಕೊಳ್ಳುತ್ತೀಯಾ?' (ನಗು.) ಭಕ್ತ ಎಂದಿಗೂ ಹಾಗೆ ಮಾಡೋದಿಲ್ಲ. ಅದಕ್ಕೆ ಬದಲು ಆತನನ್ನು ಪ್ರಾರ್ಥನೆಮಾಡಿಕೊಳ್ಳುತ್ತಾನೆ: 'ಹೇ ಭಗವಂತ, ನಿನ್ನ ಪಾದಪದ್ಮಗಳಲ್ಲಿ ನನಗೊಂದು ಸ್ಥಾನ ಕೊಡು. ನನ್ನನ್ನು ಸದಾ ನಿನ್ನೊಡನೇ ಇಟ್ಟುಕೊ. ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಉಂಟಾಗುವಂತೆ ಮಾಡು.'

"ಕರ್ಮಯೋಗ ಬಹಳ ಕಠಿನವಾದ್ದು. ಶಾಸ್ತ್ರಗಳಲ್ಲಿ ಹೇಳಿರುವ ಕರ್ಮಗಳನ್ನೆಲ್ಲಾ ಈ ಕಲಿಯುಗದಲ್ಲಿ ಮಾಡಬೇಕು ಅಂದರೆ ಬಹಳ ಕಷ್ಟ. ಈ ಯುಗದಲ್ಲಿ ಅನ್ನಗತ ಪ್ರಾಣ. ಹೆಚ್ಚಾಗಿ ಕರ್ಮ ಸಾಧ್ಯವಿಲ್ಲ. ಈಗಿನ ವರಿಗೆ ಜ್ವರ ಬಂತು ಅಂದರೆ, ಅವರಿಗೆ ಕವಿರಾಜರ ಕೈಯಲ್ಲಿ ಔಷಧ ಕೊಡಿಸಲು ಯತ್ನಿಸಿದ್ದೇ ಆದರೆ ಅದು ಅಷ್ಟು ನಿಧಾನವಾಗಿ ಕೆಲಸಮಾಡು ತ್ತದೆ, ಅಷ್ಟರಲ್ಲಿ ರೋಗಿ ಫೈಸಲೇ ಆಗಿಬಿಡುವ ಸಂಭವ. ಈಗಿನ ರೋಗಿ ಅಧಿಕ ಕಾಲವಿಳಂಬವನ್ನ ತಡೆಯಲಾರ. ಈಗಿನ ಕಾಲಕ್ಕೆ ಡಿ. ಗುಪ್ತನ ಔಷಧ.[1] ಕಲಿಯುಗಕ್ಕೆ ಸೂಕ್ತವಾದ್ದು ಭಕ್ತಿಯೋಗ—ಭಗವಂತನ ನಾಮ ಗುಣಕೀರ್ತನೆ ಮತ್ತು ಪ್ರಾರ್ಥನೆ. ಭಕ್ತಿಯೋಗವೇ ಯುಗಧರ್ಮ. (ಬ್ರಾಹ್ಮಭಕ್ತರಿಗೆ) ನಿಮ್ಮದೂ ಭಕ್ತಿಯೋಗವೇ. ನೀವೂ ಭಗವನ್ನಾಮ, ಭಗವತಿಯ ನಾಮಗುಣಕೀರ್ತನೆ ಮಾಡುತ್ತಿದೀರಿ. ಆದ್ದರಿಂದ ನೀವೂ ಧನ್ಯರೇ. ನಿಮ್ಮ ಭಾವ ಬಹಳ ಒಳ್ಳೆಯದು. ವೇದಾಂತವಾದಿಗಳ ಹಾಗೆ ನೀವು ಈ ಜಗತ್ತು ಸ್ವಪ್ನವತ್ ಎಂಬುದಾಗಿ ಹೇಳುತ್ತಿಲ್ಲ. ನೀವು ಆ ವಿಧದ ಬ್ರಹ್ಮಜ್ಞಾನಿಗಳಲ್ಲ; ನೀವು ಭಕ್ತರು. ನೀವು ಭಗವಂತನನ್ನು ವ್ಯಕ್ತಿ ಅಂತ ಭಾವಿಸುತ್ತೀರಿ. ಇದೂ ಒಳ್ಳೆಯದೆ. ನೀವು ಭಕ್ತರು. ವ್ಯಾಕುಲರಾಗಿ ಕರೆದರೆ ಖಂಡಿತ ಆತನ ಸಾಕ್ಷಾತ್ಕಾರ ಪಡೆದುಕೊಳ್ಳುತ್ತೀರಿ."

ಜಹಜು ಕೊಯಲಾಘಟ್ಟದ ಹತ್ತಿರ ಲಂಗರು ಹಾಕಿತು. ಎಲ್ಲರೂ ಕೆಳಕ್ಕೆ ಇಳಿಯುವ ಪ್ರಯತ್ನದಲ್ಲಿದಾರೆ. ಕ್ಯಾಬಿನ್ ಬಿಟ್ಟು ಹೊರಗಡೆ ಬಂದು ನೋಡುತ್ತಾರೆ, ಆಶ್ವೀಜ ಪೂರ್ಣಿಮೆಯ ಪೂರ್ಣೇಂದು ಸುಮ್ಮನೆ 'ಕಿಲ, ಕಿಲ' ಅಂತ ನಗುತ್ತಿದಾನೆ. ಭಾಗೀರಥಿಯ ವಕ್ಷಸ್ಥಲ ಕೌಮುದಿಯ

---

1 ಬಲವಾದ ಕ್ವಿನೈನ್ ಮಿಕ್ಸ್ಚರ್.

(ಬೆಳುದಿಂಗಳ) ಕ್ರೀಡಾಭೂಮಿಯಾಗಿಬಿಟ್ಟಿದೆ. ಪರಮಹಂಸರಿಗಾಗಿ ಒಂದು ಗಾಡಿಯನ್ನು ತರಿಸಲಾಯಿತು. ಮಾಸ್ಟರ್ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಅದಕ್ಕೇ ಹತ್ತಿದರು. ಪರಮಹಂಸರು ಕೇಶವನಿಗಾಗಿ ಕೇಳಿದರು. ಆತ ಅಲ್ಲಿಗೆ ಬಂದು ಪರಮಹಂಸರನ್ನು ಕಂಡು, ಅವರು ಹಿಂದಿರುಗಿ ದಕ್ಷಿಣೇಶ್ವರಕ್ಕೆ ಹೋಗಲು ಏನೇನು ವ್ಯವಸ್ಥೆ ಆಗಿದೆ ಎಂಬುದನ್ನು ವಿಚಾರಿಸಿದ. ಈಗ ಆತ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿ ಅವರ ಪಾದಧೂಳಿಯನ್ನು ತೆಗೆದುಕೊಂಡು ಅವರಿಂದ ಬೀಳ್ಕೊಳ್ಳುತ್ತಿದ್ದಾನೆ.

ಗಾಡಿ ಐರೋಪ್ಯ ನಿವಾಸಿಗಳ ಬೀದಿಯಲ್ಲಿ ಮುಂದುವರಿಯುತ್ತಿದೆ. ರಸ್ತೆ ಸೊಗಸಾದ ರಾಜಮಾರ್ಗ. ಒಳ್ಳೆ ಬೆಳಕುಗಳಿಂದ ಬೆಳಗುತ್ತಿದೆ. ಇಕ್ಕೆಲಗಳಲ್ಲಿಯೂ ದೊಡ್ಡದೊಡ್ಡ ಬಂಗಲೆಗಳ ಸಾಲು. ಸಾಲದುದಕ್ಕೆ ಪೂರ್ಣಚಂದ್ರೋದಯ ಬೇರೆ. ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ಇದ್ದಕ್ಕಿದ್ದಹಾಗೆ ಪರಮಹಂಸರು ಹೇಳುತ್ತಿದಾರೆ: "ನನಗೆ ನೀರಡಿಕೆಯಾಗುತ್ತಿದೆ. ಏನುಮಾಡೋದು ಈಗ?" ಗಾಡಿಯನ್ನು ಇಂಡಿಯಾ ಕ್ಲಬ್ಬಿನ ಹತ್ತಿರ ನಿಲ್ಲಿಸಿ, ಕೇಶವನ ಅಣ್ಣನ ಮಗ ನಂದಲಾಲವಸು ಕ್ಲಬ್ಬಿನ ಮಹಡಿ ಮೇಲಕ್ಕೆ ಹತ್ತಿಹೋಗಿ ಒಂದು ಗ್ಲಾಸಿನಲ್ಲಿ ನೀರು ತಂದ. ಗ್ಲಾಸನ್ನು ಚೆನ್ನಾಗಿ ತೊಳೆದಿರುವುದೇ ಎಂಬುದಾಗಿ ಪರಮಹಂಸರು ಕೇಳಿದರು. ಚೆನ್ನಾಗಿ ತೊಳೆದಿದೆ ಎಂಬ ಉತ್ತರವನ್ನು ಪಡೆದನಂತರ ಅವರು ಈಗ ನೀರು ಕುಡಿಯುತ್ತಿದಾರೆ.

ಗಾಡಿ ಮುಂದುವರಿಯಲಾರಂಭಿಸಿತು. ಪರಮಹಂಸರು ಮಕ್ಕಳ ಹಾಗೆ ತಲೆಯನ್ನು ಕಿಟಕಿಯಿಂದ ಹೊರಕ್ಕೆ ಚಾಚಿ ರಸ್ತೆಯಲ್ಲಿ ತಿರುಗಾಡುತ್ತಿರುವ ಜನ, ಗಾಡಿ, ಕುದುರೆ ಮತ್ತು ಎಲ್ಲೆಲ್ಲೂ ಹರಡಿರುವ ಚಂದ್ರನ ಬೆಳಕು ಇವನ್ನೆಲ್ಲ ಬಹಳ ಕುತೂಹಲದಿಂದ ನೋಡುತ್ತಿದಾರೆ. ಅಲ್ಲಲ್ಲಿ ಐರೋಪ್ಯ ಮಹಿಳೆಯರು ಪಿಯಾನೊ ನುಡಿಸುತ್ತಿರುವುದೂ ಅವರ ಕಿವಿಗೆ ಬೀಳುತ್ತಿದೆ. ಅವರು ಬಹಳ ಆನಂದಾವಸ್ಥೆಯಲ್ಲಿದಾರೆ.

ಗಾಡಿ ಸುರೇಶಮಿತ್ರನ ಮನೆಯ ಹತ್ತಿರಕ್ಕೆ ಬಂದು ನಿಂತಿತು. ಆತ ಪರಮಹಂಸರ ಒಬ್ಬ ದೊಡ್ಡ ಭಕ್ತ. ಅವರು ಆತನನ್ನು ಪ್ರೀತಿಯಿಂದ ಕರೆಯುತ್ತಿದ್ದರು, "ಸುರೇಂದ್ರ" ಎಂಬುದಾಗಿ. ಆತ ಮನೆಯಲ್ಲಿ ಇರಲಿಲ್ಲ.

ಆ ಮನೆಯವರು ಪರಮಹಂಸರಿಗೂ ಅವರ ಜೊತೆಯಲ್ಲಿ ಬಂದಿದ್ದವರಿಗೂ ಕುಳಿತುಕೊಳ್ಳಲು ನೆಲ ಅಂತಸ್ತಿನ ಒಂದು ಕೊಠಡಿಯನ್ನು ತೆರೆದಿಟ್ಟರು. ಗಾಡಿ ಬಾಡಿಗೆ ಕೊಡಬೇಕಾಗಿದೆ. ಸುರೇಂದ್ರ ಇದ್ದಿದ್ದರೆ ಆ ವಿಷಯವಾಗಿ ಯೋಚನೆಮಾಡಬೇಕಾಗೇ ಇರಲಿಲ್ಲ. ಪರಮಹಂಸರು ಒಬ್ಬ ಭಕ್ತನಿಗೆ ಹೇಳಿದರು: "ಬಾಡಿಗೆಯನ್ನು ಏಕೆ ಮನೆ ಹೆಂಗಸರನ್ನೇ ಕೇಳಿ ತೆಗೆದುಕೊಳ್ಳಬಾರದು? ಅವರಿಗೆ ಗೊತ್ತೇ ಇದೆ ಅವರ ಯಜಮಾನರು ದಕ್ಷಿಣೇಶ್ವರಕ್ಕೆ ಬಂದು ಹೋಗುತ್ತಿರುವುದು. ಅವರಿಗೆ ನಾನೇನು ಹೊಸಬನಲ್ಲ." (ಎಲ್ಲರೂ ನಗುತ್ತಾರೆ.)

ಸುರೇಂದ್ರನ ಮನೆಯ ಹತ್ತಿರವೇ ವಾಸಿಸುತ್ತಿದ್ದ ನರೇಂದ್ರನಿಗೆ ಹೇಳಿ ಕಳುಹಿಸಲಾಯಿತು. ಇಷ್ಟರಲ್ಲಿ ಮನೆಯವರು ಪರಮಹಂಸರನ್ನು ಮತ್ತು ಅವರೊಡನೆ ಬಂದಿದ್ದವರನ್ನೆಲ್ಲ ಎರಡನೆ ಅಂತಸ್ತಿನಲ್ಲಿದ್ದ ಬೈಠಕ್‌ಖಾನೆಗೆ ಕರೆದುಕೊಂಡು ಹೋಗಿ ಕೂರಿಸಿದರು. ನೆಲಕ್ಕೆ ಜಮಖಾನ ಹಾಸಿ ಅದರ ಮೇಲೆ ಬಿಳಿ ಬಟ್ಟೆ ಹಾಸಿದೆ. ಕೆಲವು ದಿಂಬುಗಳನ್ನು ಅಲ್ಲಿ ಇಲ್ಲಿ ಹಾಕಿದೆ. ಸುರೇಂದ್ರ ವಿಶೇಷ ಯತ್ನದಿಂದ ಬರೆಯಿಸಿದ ಒಂದು ತೈಲಚಿತ್ರ ಗೋಡೆಯ ಮೇಲೆ ತೂಗಹಾಕಿದೆ. ಅದರಲ್ಲಿ ಪರಮಹಂಸರು ಬೆರಳುಮಾಡಿ ಕೇಶವನಿಗೆ ತೋರಿಸುತ್ತಿದಾರೆ, ಹಿಂದೂ, ಮುಸಲ್ಮಾನ, ಕ್ರಿಶ್ಚಿಯನ್, ಬೌದ್ಧ ಇವೇ ಮೊದಲಾದ ಧರ್ಮಗಳ ಸಮನ್ವಯವನ್ನ.

ಪರಮಹಂಸರು ನಗುತ್ತ ಮಾತುಕತೆ ಆಡುತ್ತಿದಾರೆ. ಈಗ ನರೇಂದ್ರ ಬಂದಿದಾನೆ. ಪರಮಹಂಸರಿಗೆ ಆನಂದ ಇಮ್ಮಡಿಯಾಗಿಬಿಟ್ಟಿತು. ಅವರು ಆತನಿಗೆ ಹೇಳುತ್ತಿದಾರೆ: "ಈ ದಿನ ನಾನು ಕೇಶವಸೇನನೊಡನೆ ನೌಕಾ ವಿಹಾರಕ್ಕೆ ಹೋಗಿದ್ದೆ. ವಿಜಯನೇ ಮೊದಲಾದ ಅನೇಕ ಬ್ರಾಹ್ಮಭಕ್ತರೂ ಬಂದಿದ್ದರು. (ಮಾಸ್ಟರನ್ನು ತೋರಿಸಿ) ಇವನನ್ನು ಕೇಳು ನಾನು ಹೇಗೆ ವಿಜಯನಿಗೆ ಮತ್ತು ಕೇಶವನಿಗೆ ತಿಳಿಸಿದೆ ತಾಯಿ ಮಗಳು ಪ್ರತ್ಯೇಕ ಪ್ರತ್ಯೇಕವಾಗಿ ಮಂಗಳಗೌರೀವ್ರತ ಆಚರಿಸುವುದನ್ನ, ಜಟಿಲೆಕುಟಿಲೆಯರಿಲ್ಲದಿದ್ದರೆ ಕ್ರೀಡೆ ಸ್ಫೂರ್ತಿಗೊಳ್ಳದು ಎಂಬುದನ್ನ. (ಮಾಸ್ಟರಿಗೆ) ಏನು, ಅಲ್ಲವೆ?"

ಮಾಸ್ಟರ್: "ಹೌದು, ನಿಜ."

ಆಗಲೇ ಬಹಳವಾಗಿ ರಾತ್ರಿಯಾಗಿಬಿಟ್ಟಿದೆ, ಆದರೂ ಸುರೇಂದ್ರ ಇನ್ನೂ ಬರಲಿಲ್ಲ. ಪರಮಹಂಸರು ದಕ್ಷಿಣೇಶ್ವರಕ್ಕೆ ಹೊರಡಬೇಕಾಗಿದೆ.

ಒಂದು ಗಾಡಿಯನ್ನು ಮಾಡಿಕೊಂಡುಬಂದದ್ದಾಯಿತು. ಮಾಸ್ಟರ್ ಮತ್ತು ನರೇಂದ್ರ ಅವರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡರು. ಪರಮ-ಹಂಸರ ಗಾಡಿ ಬೆಳುದಿಂಗಳು ಹಾಲು ಚೆಲ್ಲಿದಂತಿದ್ದ ರಸ್ತೆಯಲ್ಲಿ ದಕ್ಷಿಣೇಶ್ವರಕ್ಕೆ ಮುಂದು ವರಿಯುತ್ತಿದೆ.



೬

# ಶ್ರೀರಾಮಕೃಷ್ಣರು ಬ್ರಾಹ್ಮಭಕ್ತರೊಡನೆ (೧)

೨೮ನೆ ಅಕ್ಟೋಬರ್ ೧೮೮೨, ಆಶ್ವೀಜ ಕೃಷ್ಣ ಬಿದಿಗೆ, ಶನಿವಾರ.

ಬ್ರಾಹ್ಮಸಮಾಜದ ಷಾಣ್ಮಾಸಿಕ ಮಹೋತ್ಸವ, ಶರತ್ಕಾಲದಲ್ಲಿ, ಒಮ್ಮೆ, ವಸಂತಕಾಲದಲ್ಲಿ ಒಮ್ಮೆ, ಕಲ್ಕತ್ತಕ್ಕೆ ಮೂರು ಮೈಲಿ ಉತ್ತರದಲ್ಲಿರುವ ಸಿಂಥಿಯಲ್ಲಿ ವೇಣೀಮಾಧವಪಾಲನ ಸುಂದರವಾದ ಉದ್ಯಾನವನದಲ್ಲಿ ನಡೆದುಕೊಂಡುಬರುತ್ತಿದೆ. ಇಂದು ಶರತ್ಕಾಲದ ಮಹೋತ್ಸವ. ಇಲ್ಲಿನ ಉದ್ಯಾನಗೃಹ ನಿರ್ಜನಪ್ರದೇಶದಲ್ಲಿದೆ. ಧ್ಯಾನಕ್ಕೆ ಒಳ್ಳೆ ಜಾಗ. ಹೂವಿನಿಂದ ತುಂಬಿದ್ದ ಗಿಡಗಳು, ಕೊಳಗಳು, ಹುಲ್ಲು ಮೈದಾನ, ಲತಾಗೃಹಗಳು ಇವೆಲ್ಲಾ ಉದ್ಯಾನವನಕ್ಕೆ ಹೆಚ್ಚು ಶೋಭೆಯನ್ನು ಕೊಟ್ಟಿವೆ. ಈಗ ತಾನೆ ಸೂರ್ಯ ಮುಳುಗುತ್ತಿದಾನೆ. ಪಶ್ಚಿಮ ದಿಗಂತದ ಮುಗಿಲು ಕೆಂಬಣ್ಣದುಡಿಗೆ ಉಡುತ್ತಿದೆ. ಪರಮಹಂಸರು ಇನ್ನೇನು ಇಲ್ಲಿಗೆ ಬರಲಿದಾರೆ.

ಅನೇಕ ಬ್ರಾಹ್ಮಭಕ್ತರು ಇಂದಿನ ಬೆಳಗಿನ ಉಪಾಸನೆಗೇ ಇಲ್ಲಿಗೆ ಬಂದು ಸೇರಿಬಿಟ್ಟಿದಾರೆ. ಸಾಯಂಕಾಲದ ಹೊತ್ತಿಗೆ ಕಲ್ಕತ್ತದಿಂದ ಮತ್ತು ಸಿಂಥಿಯ ಸುತ್ತಮುತ್ತಣ ಗ್ರಾಮಗಳಿಂದ ಇನ್ನೂ ಅನೇಕರು ಬಂದು ಕೂಡಿದರು. ಪರಮಹಂಸರು ಬಹಳವಾಗಿ ಪ್ರೀತಿಸುತ್ತಿದ್ದ ಶಿವನಾಥ ಶಾಸ್ತ್ರಿಯೂ ಇಲ್ಲಿಗೆ ಬಂದಿದಾನೆ. ಎಲ್ಲರೂ ಪರಮಹಂಸರ ಬರುವಿಕೆಯನ್ನು ಎದುರುನೋಡುತ್ತ ಕುಳಿತಿದಾರೆ.

ಪರಮಹಂಸರನ್ನು ಮತ್ತು ಇನ್ನು ಕೆಲವು ಭಕ್ತರನ್ನು ಕರೆತರುತ್ತಿದ್ದ ಗಾಡಿ ಉದ್ಯಾನಗೃಹವನ್ನು ಸಮೀಪಿಸಿದೊಡನೆ ಇಡೀ ಸಭೆಯೇ ಎದ್ದು ನಿಂತು ಅವರಿಗೆ ಸುಸ್ವಾಗತವನ್ನಿತ್ತಿತು. ನಾಟಕಶಾಲೆಯಲ್ಲಿ ಪರದೆ ಮೇಲಕ್ಕೆ ಹೋದೊಡನೆಯೇ ಯಾವ ರೀತಿಯಾದ ಶಾಂತಿಯನ್ನು ಕಾಣಬಹುದೊ ಅದೇ ರೀತಿಯಾದ ಶಾಂತಿ ತತ್ಕ್ಷಣವೇ ನೆಲೆಗೊಂಡಿತು. ಇದುವರೆಗೆ ಪರಸ್ಪರ ಮಾತುಕತೆಗಳಾಡುತ್ತಿದ್ದವರೆಲ್ಲಾ ಪರಮಹಂಸರ ಸೌಮ್ಯಮುಖದ ಕಡೆ ದಿಟ್ಟಿಸಿನೋಡುತ್ತಾ ಅವರ ಬಾಯಿಂದ ಬೀಳುವ

ಅಮೃತಮಯವಾಣಿಯನ್ನು ಒಂದೂ ತಪ್ಪದಂತೆ ಕೇಳಲೋಸುಗ ಅತ್ಯಂತ ಕಾತರರಾಗಿ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಶಿವನಾಥನೇ ಮೊದಲಾದ ಭಕ್ತಸಮುದಾಯವನ್ನು ದೃಷ್ಟಿಸಿ: "ಓಹೊ, ಶಿವನಾಥ ಬಂದುಬಿಟ್ಟಿದಾನೆ! ನೋಡಿ, ನೀವೆಲ್ಲರೂ ಭಕ್ತರು. ನಿಮ್ಮನ್ನು ನೋಡಿ ನನಗೆ ಬಹಳ ಆನಂದ ಆಗುತ್ತಿದೆ. ಗಾಂಜಾಖೋರನಿಗೆ ಗಾಂಜಾಖೋರರನ್ನು ಕಂಡರೆ ಬಹಳ ಆನಂದ. ಅನೇಕ ವೇಳೆ ಆನಂದೋತ್ಕರ್ಷದಿಯಿಂದ ಒಬ್ಬರನ್ನೊಬ್ಬರು ಆಲಿಂಗನ ಮಾಡಿಕೊಂಡೂ ಬಿಡುತ್ತಾರೆ."

ಶಿವನಾಥ ಮತ್ತು ಭಕ್ತರೆಲ್ಲರೂ ಗಹಗಹಿಸಿ ನಗುತ್ತಿದಾರೆ.

ಶ್ರೀರಾಮಕೃಷ್ಣರು: "ಅನೇಕರು ದಕ್ಷಿಣೇಶ್ವರ ದೇವಾಲಯಕ್ಕೆ ಬರುತ್ತಾರೆ. ಅವರಲ್ಲಿ ಕೆಲವರಿಗೆ ಭಗವಂತನ ಕಡೆ ಮನಸ್ಸಿಲ್ಲದಿರುವುದಾಗಿ ಕಂಡುಬಂದರೆ ನಾನು ಹೇಳುತ್ತೇನೆ: 'ನೀವು ಅಲ್ಲಿ ಎಲ್ಲಾದರೂ ಸ್ವಲ್ಪ ಹೊತ್ತು ಕುಳಿತುಕೊಂಡಿರಿ.' ಇನ್ನು ಕೆಲವು ವೇಳೆ ಹೇಳುತ್ತೇನೆ: 'ಹೋಗಿ. ಇಲ್ಲಿರೋ ಕಟ್ಟಡ-ಗಿಟ್ಟಡ ಎಲ್ಲ ನೋಡಿಕೊಂಡು ಬನ್ನಿ, ಹೋಗಿ.' (ನಗು.)

"ಕೆಲವು ವೇಳೆ ಕೆಲಸಕ್ಕೆ ಬಾರದವರೂ ಭಕ್ತರೊಡನೆ ಬರುತ್ತಾರೆ. ಅವರಿಗೆ ವಿಷಯಾಸಕ್ತಿ ಅಧಿಕ, ಭಗವಂತನ ಮಾತುಕತೆ ರುಚಿಸುವುದಿಲ್ಲ. ಭಕ್ತರು ನನ್ನೊಡನೆ ಬಹಳ ಹೊತ್ತಿನವರೆಗೆ ಭಗವಂತನ ಮಾತುಕತೆ ಆಡುತ್ತ ಕುಳಿತುಬಿಡೋದರಿಂದ ವಿಷಯಾಸಕ್ತರಿಗೆ ಬೇಜಾರು ಹಿಡಿದು ಸುಮ್ಮನೆ ಮೈ ಮುರಿಯುತ್ತಿರುತ್ತಾರೆ. ಅವರು ಭಕ್ತರ ಕಿವಿಯಲ್ಲಿ ಆಗಾಗ ಪಿಸುಗುಟ್ಟುತ್ತಿರುತ್ತಾರೆ: 'ಯಾವಾಗ ಹೋಗೋಣ? ಯಾವಾಗ ಹೋಗೋಣ?' ಅವರು ಹೇಳುತ್ತಾರೆ: 'ಇನ್ನು ಸ್ವಲ್ಪ ಹೊತ್ತು ತಾಳಿ, ಅನಂತರ ಹೋಗೋಣ.' ಆಗ ಅವರು ಬೇಸರಗೊಂಡು ಹೇಳುತ್ತಾರೆ: 'ಹಾಗಾದರೆ, ನೀವು ಮಾತುಕತೆ ಆಡಿಕೊಂಡು ಬನ್ನಿ. ನಾವು ಹೋಗಿ ದೋಣಿಯಲ್ಲಿ ಕುಳಿತಿರುತ್ತೇವೆ.' (ಎಲ್ಲರೂ ನಗುತ್ತಾರೆ.)

"ಸಂಸಾರಿಗಳಿಗೆ ಹೇಳಿದ್ದೇ ಆದರೆ, ನೀವು ಎಲ್ಲವನ್ನೂ ತ್ಯಾಗಮಾಡಿ ಭಗವಂತನ ಪಾದಪದ್ಮಗಳಲ್ಲಿ ಮಗ್ನರಾಗಿಬಿಡಿ ಎಂಬುದಾಗಿ, ಅದಕ್ಕೆ ಅವರು ಎಂದಿಗೂ ಬೆಲೆಯನ್ನೇ ಕೊಡೋದಿಲ್ಲ. ಅದಕ್ಕಾಗೇ ವಿಷಯಾಸಕ್ತರನ್ನ ಭಗವಂತನ ಕಡೆಗೆ ಎಳೆಯಲೋಸುಗ ಗೌರಾಂಗ ಮತ್ತು ನಿತಾಯಿ ಇಬ್ಬರೂ ಕೂಡಿ ಒಂದು ಸಂಧಾನ ಹೂಡಿದರು. ಅವರು ವಿಷಯಾಸಕ್ತರಿಗೆ

ಹೇಳುತ್ತಿದ್ದರು: 'ಬನ್ನಿ, "ಹರಿ, ಹರಿ" ಎಂದು ಹೇಳಿ. ನಿಮಗೆ ಮಾಗೂರು ಮೀನಿನ ಸಾರು, ಯುವತಿಯ ಆಲಿಂಗನ ಎರಡೂ ದೊರೆಯುತ್ತವೆ.' ಜನರು ಇವೆರಡಕ್ಕೂ ಲೋಭಪಟ್ಟು ಭಗವನ್ನಾಮೋಚ್ಚಾರಣೆ ಮಾಡಲು ಆರಂಭಿಸುತ್ತಿದ್ದರು. ಭಗವನ್ನಾಮಸುಧೆಯಲ್ಲಿ ಒಂದು ಸ್ವಲ್ಪ ರುಚಿ ಸಿಕ್ಕಿದೊಡನೆ ಅವರಿಗೆ ಅರ್ಥವಾಗುತ್ತಿತ್ತು, 'ಮಾಗೂರು ಮತ್ಸ್ಯದ ಸಾರು' ಎಂದರೆ ಇನ್ನು ಬೇರೆ ಏನಿಲ್ಲ, ಭಗವತ್ಪ್ರೇಮದಿಂದ ಪ್ರೇಮಾಶ್ರು ಸುರಿಯುತ್ತದೆಯಲ್ಲ ಅದು. 'ಯುವತಿ' ಎಂದರೆ ಪೃಥಿವಿ. 'ಯುವತಿಯ ಆಲಿಂಗನ ಎಂದರೆ, ಪ್ರೇಮೋನ್ಮತ್ತತೆಯಿಂದ ಭೂಮಿಯ ಮೇಲೆ ಹೊರಳಾಡುವಿಕೆ.

"ನಿತಾಯಿ ಹೇಗಾದರೂ ಮಾಡಿ ಜನರು ಭಗವನ್ನಾಮೋಚ್ಚಾರಣೆ ಮಾಡುವಂತೆ ಮಾಡುತ್ತಿದ್ದ. ಚೈತನ್ಯದೇವ ಹೇಳುತ್ತಿದ್ದ: 'ಭಗವನ್ನಾಮಕ್ಕೆ ಬಹಳ ಮಹಾತ್ಮ್ಯೆ. ಒಡನೇ ಫಲ ದೊರಕದೆಹೋಗಬಹುದು, ಆದರೆ ಒಂದಲ್ಲ ಒಂದು ದಿನ ಫಲ ದೊರತೇ ದೊರೆಯುತ್ತದೆ. ಇದು ಮನೆಯ ಕಾರ್ನೀಸಿನ ಮೇಲೆ ಬಿದ್ದಿರುವ ಬೀಜದ ಹಾಗೆ. ಬಹಳ ಕಾಲವಾದ ಮೇಲೆ ಕಟ್ಟಡ ನೆಲಸಮವಾಗುತ್ತದೆ. ಬೀಜ ನೆಲಕ್ಕೆ ಬೀಳುತ್ತದೆ. ಕೊನೆಗೆ ಅದು ಮೊಳೆತು ಫಲಕೊಡುತ್ತದೆ.

"ಸಂಸಾರಿಗಳಲ್ಲಿ ಸಾತ್ತ್ವಿಕ, ರಾಜಸಿಕ, ತಾಮಸಿಕ ಗುಣದವರು ಇರೋ ಹಾಗೆ ಭಕ್ತಿಯಲ್ಲೂ ಈ ಮೂರು ಗುಣದ ಭಕ್ತಿಗಳಿವೆ.

"'ಸಾತ್ತ್ವಿಕ ಸಂಸಾರಿ ಹೇಗೆ ಇರುತ್ತಾನೆ ಗೊತ್ತೆ? ಆತನ ಮನೆ ಈ ಕಡೆ ಮುರುಕಲು ಆ ಕಡೆ ಮುರುಕಲು. ಅದಕ್ಕೆ ಸುಣ್ಣ ಒರೆಮಣ್ಣು ಹಚ್ಚೋ ಬಾಬೇ ಇಲ್ಲ. ಪೂಜಾಂಗಳದಲ್ಲಿ ಪಾರಿವಾಳಗಳ ಹಿಕ್ಕೆ ಬಿದ್ದಿರಬಹುದು, ಪ್ರಾಂಗಣವೆಲ್ಲಾ ಪಾಚಿಮಯವಾಗಿರಬಹುದು, ಇದಾವುದರ ಮೇಲೂ ಆತನಿಗೆ ನಿಗವೇ ಇರೋದಿಲ್ಲ. ಮನೆ ಮುಟ್ಟುಗಳೆಲ್ಲವೂ ಬಹಳ ಹಳೆಯದಾಗಿ ಹೋಗಿರುತ್ತವೆ; ಅವಕ್ಕೆ ಮೆರುಗು-ಗಿರುಗು ಕೊಟ್ಟು ಸರಿಪಡಿಸೋ ಯೋಚನೆಯೇ ಇಲ್ಲ. ಉಡಿಗೆತೊಡಿಗೆಗಳ ಮೇಲೆ ನಿಗವೇ ಇಲ್ಲ; ಸಿಕ್ಕಿದ್ದೇ ಉಡಿಗೆತೊಡಿಗೆ. ಸ್ವಾಭಾವಿಕವಾಗಿ ಆತ ಅತ್ಯಂತ ಶಾಂತಸ್ವರೂಪಿ, ಶಿಷ್ಟಾಚಾರಸಂಪನ್ನ, ದಯಾಳು, ನಮ್ರ; ಯಾರಿಗೂ ಯಾವ ತೊಂದರೆಯನ್ನೂ ಕೊಡೋದಿಲ್ಲ.

"ಸಂಸಾರಿಗಳಲ್ಲಿ ರಾಜಸಿಕ ಪ್ರವೃತ್ತಿಯುಳ್ಳವರಿದಾರೆ. ಅವರು ಕೈಗೆ ಚೈನು ಇರೋ ಗಡಿಯಾರ ಕಟ್ಟಿರುತ್ತಾರೆ, ಬೆರಳುಗಳಿಗೆ ಎರಡು ಮೂರು ಉಂಗುರ ಹಾಕಿರುತ್ತಾರೆ. ಮನೆ ಮುಟ್ಟುಗಳೆಲ್ಲಾ ಠಾಕು ಠೀಕು. ಗೋಡೆ ಗಳಲ್ಲಿ ರಾಣಿಯ ಮತ್ತು ದೊಡ್ಡ ದೊಡ್ಡ ಮನುಷ್ಯರ ಪಟ ತೂಗಹಾಕಿ ರುತ್ತಾರೆ. ಮನೆಗೆ ಅಷ್ಟು ಚೆನ್ನಾಗಿ ಸುಣ್ಣ ಒರೆಮಣ್ಣು ಮಾಡಿರುತ್ತಾರೆ, ಒಂದು ಚೂರು ದೂಳೀ ಆಗಲಿ, ಒಂದು ಬಟ್ಟು ಕರೆಯೇ ಆಗಲಿ ಎಲ್ಲೂ ಕಂಡುಬರೋದಿಲ್ಲ. ನಾನಾ ಬಗೆಯ ಅಂದ ಚೆಂದದ ಉಡುಪು ಹಾಕಿ ಕೊಳ್ಳುತ್ತಾರೆ; ಅವರ ಸೇವಕರಿಗೂ ಒಳ್ಳೊಳ್ಳೆ ಪೋಷಾಕು. ಹೀಗೇ ಇನ್ನೂ ಏನೇನೊ.

"ತಾಮಸಿಕ ಸಂಸಾರಿ ನಿದ್ರೆ, ಕಾಮ, ಕ್ರೋಧ, ಅಹಂಕಾರ ಇವು ಗಳಿಂದ ತುಂಬಿರುತ್ತಾನೆ.

"ಹೀಗೇ ಸಾತ್ತ್ವಿಕ ಭಕ್ತಿ ಎಂಬುದೂ ಇದೆ. ಸಾತ್ತ್ವಿಕ ಭಕ್ತ ಗೋಪ್ಯವಾಗಿ, ಬಹುಶಃ ಸೊಳ್ಳೆಪರದೆಯೊಳಗೆ ಕುಳಿತು ಧ್ಯಾನಮಾಡುತ್ತಾನೆ. ಆತ ನಿದ್ದೆಯಿಂದೇಳಲು ಹೊತ್ತಾಗುತ್ತಿರುವುದನ್ನು ನೋಡಿ ಜನ ಭಾವಿಸಿ ಕೊಳ್ಳುತ್ತಾರೆ, ಬಹುಶಃ ಆತನಿಗೆ ರಾತ್ರಿವೇಳೆ ನಿದ್ದೆ ಬರುತ್ತಿಲ್ಲ ಅಂತ ಕಾಣುತ್ತೆ ಎಂಬುದಾಗಿ. ಆತನಿಗೆ ತನ್ನ ಶರೀರದ ಮೇಲಿನ ಮಮತೆ ಕೇವಲ ಹಸಿವು ಇಂಗಿಸುವವರೆಗೆ ಮಾತ್ರ; ಒಂದಷ್ಟು ಸೊಪ್ಪು ಅನ್ನ ಸಿಕ್ಕಿದರೇ ಸಾಕು. ಊಟದ ಮನೆಯಲ್ಲಿ ವಿಶೇಷವಾದ ವ್ಯವಸ್ಥೆ ಏನೂ ಇಲ್ಲ. ಉಡಿಗೆ-ತೊಡಿಗೆಗಳಲ್ಲೂ ಆಡಂಬರವೇನಿಲ್ಲ. ಮನೆಯ ಮುಟ್ಟು-ತಟ್ಟುಗಳಲ್ಲಿ ಯಾವ ವಿಧವಾದ ನಯ ನಾಜೋಕೂ ಕಂಡುಬರೋದಿಲ್ಲ. ಆತ ಹೊಗಳುಭಟ್ಟತನಮಾಡಿ ಎಂದಿಗೂ ದ್ರವ್ಯ ಸಂಪಾದಿಸೋದಿಲ್ಲ.

"ರಾಜಸಿಕ ಭಕ್ತ ಹಣೆಗೆ ತಿಲಕ ಇಟ್ಟುಕೊಳ್ಳುತ್ತಾನೆ, ಕೊರಳಿಗೆ ರುದ್ರಾಕ್ಷಿ ಮಾಲೆ ಹಾಕಿಕೊಳ್ಳುತ್ತಾನೆ. ಆ ರುದ್ರಾಕ್ಷಿಮಾಲೆಯ ಮಧ್ಯೆ ಮಧ್ಯೆ ಚಿನ್ನದ ರುದ್ರಾಕ್ಷಿಗಳೂ ಇರುತ್ತವೆ. (ಎಲ್ಲರೂ ನಗುತ್ತಾರೆ.) ಪೂಜೆ ಸಮಯದಲ್ಲಿ ರೇಷ್ಮೆ ವಸ್ತ್ರ ಉಡುತ್ತಾನೆ.

"ತಾಮಸಿಕ ಭಕ್ತನ ಶ್ರದ್ಧೆ ಉಜ್ಜ್ವಲವಾದ್ದು. ಡಕಾಯಿತರು ದರೋಡೆಮಾಡಿ ಜನರಿಂದ ಹಣ ಕಸಿದುಕೊಳ್ಳೋ ಹಾಗೆ, ಈ ವಿಧದ ಭಕ್ತ ಭಗವಂತನನ್ನು ಬಲಾತ್ಕರಿಸಿ ಆತನಿಂದ ವರ ಪಡೆದುಕೊಳ್ಳುತ್ತಾನೆ.

ಡಕಾಯಿತರ ಹಾಗೆ, 'ಬಡಿ! ಹೊಡಿ! ಕಡಿ!' ಎಂಬುದೇ ಈತನ ಮಂತ್ರ."

ಹೀಗೆಂದು ಹೇಳುತ್ತ ಪರಮಹಂಸರು ಊರ್ಧ್ವದೃಷ್ಟಿಯುಳ್ಳವರಾಗಿ ಪ್ರೇಮರಸಾಭಿಯುಕ್ತ ಕಂಠದಿಂದ ಹಾಡಲಾರಂಭಿಸಿದಾರೆ:

ಏತಕೆ, ಇನ್ನೇತಕೆ?
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ
ಪುಣ್ಯಕ್ಷೇತ್ರಗಳೇತಕೆ ?
ಎಲ್ಲಿವರೆಗೂ ನಾನು ಕಾಳಿಯ ನೆನೆಯುತಿರುವೆನೊ ನಿತ್ಯವೂ,
ಅಲ್ಲಿವರೆಗೂ ಜಪತಪಾದಿಯ ಕಟ್ಟು ಕಟ್ಟಲೆ ಏತಕೆ ?
ದಾನಧರ್ಮವೊ, ನಿಯಮವ್ರತವೊ—ಎಲ್ಲವೂ ನನಗೇತಕೆ ?
ಬ್ರಹ್ಮಮಯಿಯಾ ಪಾದಪದ್ಮವೆ ಸರ್ವವೂ ಎನುವಾತಗೆ!
ತಾಯಿ ದುರ್ಗೆಯ ಹೆಸರ ಮಹಿಮೆಯ
ತಿಳಿವರಾರೋ ಜಗದೊಳು!
ದೇವ ದೇವರದೇವ ಶಿವನೇ
ತಾಯಿ ದುರ್ಗೆಯ ನುತಿಸಿ ನಲಿವನು
ತನ್ನ ಐದೂ ಮುಖದೊಳು!

ಪರಮಹಂಸರು ಪ್ರೇಮೋನ್ಮತ್ತರಾಗಿಬಿಟ್ಟದಾರೆ. ಈಗ ಮತ್ತೆ ಹಾಡಲಾರಂಭಿಸಿದಾರೆ, ಅಗ್ನಿಮಂತ್ರೋಪದೇಶ ಪಡೆದವರ ಹಾಗೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀ ನಾಮವನು ಜಪಿಸುತಿರಲು
ಮುಕ್ತಿಗೊಯ್ಯದೆ ನೀನು ಬಿಡುವಳೇನು? . . .

ಬಳಿಕ ಹೇಳುತ್ತಿದಾರೆ: "ದೃಢಭಾವ ಆರೋಪಿಸಿಕೊಂಡು ಹೇಳಬೇಕು: 'ಏನು? ನಾನು ಭಗವತಿಯ ನಾಮ ಜಪಿಸಿದೇನೆ. ನನ್ನಲ್ಲಿ ಇನ್ನೂ ಪಾಪ ಅಂದರೆ? ನಾನು ಆಕೆಯ ಮಗು, ಆಕೆಯ ಐಶ್ವರ್ಯಕ್ಕೆ ಅಧಿಕಾರಿ.'

"ತಮೋಗುಣದ ಗತಿಯನ್ನು ಭಗವಂತನ ಕಡೆಗೆ ತಿರುಗಿಸಿಬಿಟ್ಟದ್ದೇ ಆದರೆ ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಆತನನ್ನು ಬಲಾತ್ಕರಿಸಿ ಕೇಳಿ. ಆತ ಅಪರಿಚಿತನೇನಲ್ಲ, ನಿಮ್ಮವನೇ.

"ಮತ್ತೆ ನೋಡಿ, ಇದೇ ತಮೋಗುಣವನ್ನ ಇತರರ ಮಂಗಳಕ್ಕಾಗಿ ಉಪಯೋಗಿಸಬಹುದು. ಡಾಕ್ಟರುಗಳಲ್ಲಿ ಮೂರು ವಿಧ— ಉತ್ತಮ,

ಮಧ್ಯಮ, ಅಧಮ. ಯಾವ ಡಾಕ್ಟರ್ ರೋಗಿಯ ನಾಡಿ ಹಿಡಿದುನೋಡಿ 'ಔಷಧ ಕುಡಿಯಪ್ಪ' ಅಂತ ಹೇಳಿ ಹೊರಟು ಹೋಗುತ್ತಾನೊ, ಆತ ಅಧಮ ಡಾಕ್ಟರ್. ರೋಗಿ ಔಷಧ ಕುಡಿದನೊ ಇಲ್ಲವೊ ಎಂಬುದನ್ನು ಆತ ಬಂದು ವಿಚಾರಮಾಡೋದೇ ಇಲ್ಲ. ಮಧ್ಯಮ ಡಾಕ್ಟರ್ ವಿವಿಧ ರೀತಿಯಿಂದ ಔಷಧ ಕುಡಿಯುವಂತೆ ರೋಗಿಗೆ ತಿಳಿಸಿ ಆತನ ಮನಸ್ಸನ್ನು ಒಪ್ಪಿಸಿ ಆತನಿಗೆ ಅಕ್ಕರೆಯಿಂದ ಹೇಳುತ್ತಾನೆ: 'ಎಲಾ ಅಪ್ಪ, ನೀನು ಔಷಧ ಕುಡಿಯದಿದ್ದರೆ ನಿನಗೆ ಹೇಗೆ ಗುಣವಾದೀತು? ಗೆಳೆಯಾ, ಕುಡಿ. ನಾನೇ ಸ್ವತಃ ಔಷಧ ತಯಾರುಮಾಡಿದೇನೆ ಕುಡಿ.' ಆದರೆ ಯಾವ ಡಾಕ್ಟರ್ ಯಾವ ವಿಧದಿಂದಲೂ ರೋಗಿ ಔಷಧ ಸೇವಿಸದಿರುವುದನ್ನು ನೋಡಿ ಆತನ ಎದೆ ಮೇಲೆ ಮಂಡಿಯೂರಿ ಬಲಾತ್ಕಾರದಿಂದ ಆತನಿಗೆ ಕುಡಿಸಿಬಿಡುತ್ತಾನೋ, ಆತನೇ ಉತ್ತಮ ಡಾಕ್ಟರ್. ಈತನಲ್ಲಿ ತಾಮಸಿಕ ಗುಣ ವ್ಯಕ್ತವಾಗಿದೆ. ಈ ಗುಣದಿಂದ ರೋಗಿಗೆ ಒಳ್ಳೆಯದಾಗುತ್ತೇ ವಿನಾ ಅಪಕಾರವೇನೂ ಆಗೋದಿಲ್ಲ.

"ಡಾಕ್ಟರುಗಳ ಹಾಗೇ ಆಚಾರ್ಯರಲ್ಲೂ ಮೂರು ವಿಧ. ಅಧಮ ಆಚಾರ್ಯ ಶಿಷ್ಯರಿಗೆ ಉಪದೇಶವಿತ್ತು ಮತ್ತೆ ಅವರು ಬದುಕಿದಾರೆಯೆ ಸತ್ತರೆ ಎಂಬುದರ ಗೋಜಿಗೇ ಹೋಗೋದಿಲ್ಲ. ಮಧ್ಯಮ ಆಚಾರ್ಯ ತನ್ನ ಶಿಷ್ಯರ ಶ್ರೇಯೋಭಿವೃದ್ಧಿಯ ದೃಷ್ಟಿಯಿಂದ ತಾನು ಕೊಟ್ಟ ಉಪದೇಶ ಸರಿಯಾಗಿ ಬೇರೂರಲೆಂದು ಅದನ್ನು ಪದೇ ಪದೇ ಅವರಿಗೆ ತಿಳಿಸುತ್ತಾನೆ, ಬಹಳವಾಗಿ ಅನುನಯ ವಿನಯ ತೋರಿಸುತ್ತಾನೆ, ಪ್ರೀತಿ ತೋರಿಸುತ್ತಾನೆ. ಆದರೆ ಯಾರು ತನ್ನ ಶಿಷ್ಯರು ಯಾವ ವಿಧದಿಂದಲೂ ದಾರಿಗೆ ಬಾರದೆ ಇರುವುದನ್ನು ನೋಡಿ ಕೊನೆಗೆ ಬಲಪ್ರಯೋಗವನ್ನೂ ಮಾಡಿಯೇ ಬಿಡುತ್ತಾನೊ, ಆತ ಉತ್ತಮ ಆಚಾರ್ಯ."

ಒಬ್ಬ ಬ್ರಾಹ್ಮಭಕ್ತ: "ಮಹಾಶಯರೆ, ಭಗವಂತ ಸಾಕಾರನೆ ಅಥವಾ ನಿರಾಕಾರನೆ?"

ಶ್ರೀರಾಮಕೃಷ್ಣರು: "ಆತನ ಸಂಬಂಧವಾಗಿ ಆತ ಕೇವಲ ಇದು ಮಾತ್ರವೇ ಎಂದು ಎಂದಿಗೂ ಹೇಳಲಾಗೋದಿಲ್ಲ. ಆತ ನಿರಾಕಾರನೂ ಹೌದು, ಸಾಕಾರನೂ ಹೌದು. ಭಕ್ತರಿಗಾಗಿ ಆತ ಸಾಕಾರನಾಗುತ್ತಾನೆ. ಜ್ಞಾನಿಗಳಿಗೆ, ಈ ಜಗತ್ತು ಸ್ವಪ್ನವತ್ ಎಂಬ ಅಭಿಮತವುಳ್ಳವರಿಗೆ, ಆತ ನಿರಾಕಾರ. ಭಕ್ತನಿಗೆ ಗೊತ್ತಿದೆ ತಾನೂ ಒಂದು ವಸ್ತು, ಹಾಗೇ ಈ ಜಗತ್ತು ಕೂಡ.

ಆದ್ದರಿಂದ ಭಗವಂತ ಭಕ್ತನಿಗೆ ವ್ಯಕ್ತಿ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಆದರೆ ಜ್ಞಾನಿ, ಉದಾಹರಣೆಗೆ ವೇದಾಂತವಾದಿ, ಕೇವಲ 'ನೇತಿ', 'ನೇತಿ' ಎಂಬ ವಿಚಾರದಲ್ಲಿ ತೊಡಗುತ್ತಾನೆ. ಈ ರೀತಿಯ ವಿಚಾರದಿಂದ ಜ್ಞಾನಿಯ ಅಂತರ್ದೃಷ್ಟಿಗೆ ಗೋಚರವಾಗುತ್ತದೆ: 'ಈ "ಅಹಂ" ಎಂಬುದೂ ಮಿಥ್ಯಾ, ಈ ಜಗತ್ತೂ ಮಿಥ್ಯಾ—ಸ್ವಪ್ನದ ಹಾಗೆ.' ಬಳಿಕ ಜ್ಞಾನಿ ತನ್ನ ಆಂತರಿಕ ಪ್ರಜ್ಞೆಯಲ್ಲಿ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಬ್ರಹ್ಮ ಏನು ಎಂಬುದನ್ನ ಆತ ಬಾಯಿಂದ ಹೇಳಲಾರ.

"ನಾನು ಹೇಳಿದ್ದು ಅರ್ಥವಾಯಿತೆ? ಭಾವಿಸಿಕೊ ಪರಬ್ರಹ್ಮ ದಡವೇ ಇಲ್ಲದ ಸಚ್ಚಿದಾನಂದ ಸಾಗರ ಅಂತ. ಭಕ್ತಿಯ ಶೈತ್ಯದ ದೆಸೆಯಿಂದ ಅಲ್ಲಲ್ಲಿ ನೀರು ಗಡ್ಡೆ ಕಟ್ಟುತ್ತದೆ—ಹಿಮುಗಡ್ಡೆಯಾಗುತ್ತದೆ. ಎಂದರೆ ಭಗವಂತ ತನ್ನ ಭಕ್ತರ ಸಲುವಾಗಿ ವ್ಯಕ್ತನಾಗಿ ಆಗಾಗ ಸಾಕಾರ ರೂಪ ಧರಿಸುತ್ತಾನೆ. ಜ್ಞಾನಸೂರ್ಯ ಉದಯಿಸಿದನೆಂದರೆ ಆ ಹಿಮುಗಡ್ಡೆ ಕರಗಿಹೋಗುತ್ತದೆ. ಆಗ ಭಗವಂತ ಸಾಕಾರ ಅಂತ ಮನಸ್ಸಿಗೆ ಅನಿಸುವುದೂ ಇಲ್ಲ, ಆತನ ರೂಪ ಕಾಣಿಸುವುದೂ ಇಲ್ಲ. ಆತ ಏನು ಎಂಬುದನ್ನು ಬಾಯಿಂದ ಹೇಳಲಾಗೋದಿಲ್ಲ. ಆತನನ್ನು ವರ್ಣಿಸಲು ಯಾರು ಉಳಿದುಕೊಂಡಿರುತ್ತಾರೆ? ಯಾರು ವರ್ಣನೆ ಮಾಡಬೇಕಾಗಿತ್ತೊ ಆತನ ಅಸ್ತಿತ್ವವೇ ಉಳಿದುಕೊಳ್ಳೋದಿಲ್ಲ. ಆತ ತನ್ನ 'ಅಹಂ' ಗಾಗಿ ಎಷ್ಟು ಹುಡುಕಿದರೂ ಅದು ಮಾತ್ರ ದೊರೆಯಲೊಲ್ಲದು.

"ವಿಚಾರದಲ್ಲಿ ಮುಂದುವರಿಯುತ್ತ ಮುಂದುವರಿಯುತ್ತ ಹೋದರೆ ಕೊನೆಗೆ 'ಅಹಂ' 'ಗಿಹಂ' ಏನೂ ಉಳಿದುಕೊಳ್ಳದು. ಉದಾಹರಣೆಗೆ ಈರುಳ್ಳಿ. ಹೊರಗಿನ ಕೆಂಪು ಸಿಪ್ಪೆ ತೆಗೆದನಂತರ ಮಂದವಾಗಿರೋ ಬಿಳಿ ಸಿಪ್ಪೆ ಕಾಣಿಸಿಕೊಳ್ಳುತ್ತವೆ. ಅವನ್ನು ಒಂದಾದರಮೇಲೊಂದು ತೆಗೆಯುತ್ತಾ ಬಂದರೆ ಕೊನೆಗೆ ಒಳಗೆ ಏನೂ ಕಾಣಿಸದು.

"ಆ ಅವಸ್ಥೆಯಲ್ಲಿ ಮನುಷ್ಯ ತನ್ನ 'ಅಹಂ' ಗಾಗಿ ಎಷ್ಟು ಹುಡುಕಿದರೂ ಅದು ದೊರೆಯಲೊಲ್ಲದು. ಅದನ್ನು ಹುಡುಕುವುದಕ್ಕೆ ಅಲ್ಲಿ ಉಳಿದುಕೊಂಡಿರೋರು ತಾನೆ ಯಾರು? ಆ ಅವಸ್ಥೆಯನ್ನು ಮುಟ್ಟಿದಾಗ ಆತ ತನ್ನ ಆಂತರಿಕ ಪ್ರಜ್ಞೆಯಲ್ಲಿ ಬ್ರಹ್ಮನ ನಿಜಸ್ವರೂಪದ ಸಂಬಂಧವಾಗಿ ಏನು ಅನುಭವ ಪಡೆಯುತ್ತಾನೆ ಎಂಬುದನ್ನು ಯಾರು ತಾನೆ ಹೇಳಬಲ್ಲರು? ಒಮ್ಮೆ ಒಂದು ಉಪ್ಪಿನ ಗೊಂಬೆ ಸಮುದ್ರದ ಆಳ ಕಂಡು

...ುದ್ರಕ್ಕೆ ಕಾಲಿಡುವುದೆ ತಡ ಒಡನೆಯೆ
...ತು. ಈಗ ಸಮುದ್ರದ ಆಳ ಎಷ್ಟು ಅಂತ
...ುಳಿದುಕೊಂಡಿದಾರೆ?

...ರ್ಣಜ್ಞಾನದ ಲಕ್ಷಣ—ಪೂರ್ಣಜ್ಞಾನ ದೊರೆಯಿತು ಎಂದರೆ ...ಷ್ಯ ಮೂಕನಾಗಿಬಿಡುತ್ತಾನೆ. ಆಗ 'ಅಹಂ' ರೂಪದ ಉಪ್ಪಿನ ಗೊಂಬೆ ಸಚ್ಚಿದಾನಂದ ರೂಪದ ಸಾಗರದಲ್ಲಿ ಕರಗಿ ಒಂದಾಗಿಬಿಡುತ್ತದೆ. ಬಳಿಕ ಕಿಂಚಿತ್ ಭೇದಬುದ್ಧಿಯೂ ಉಳಿಯದು.

"ವಿಚಾರಮಾಡೋದು ಕೊನೆಮುಟ್ಟದವರೆಗೆ ಜನ ಬಹಳವಾಗಿ ತರ್ಕದಲ್ಲಿ ತೊಡಗುತ್ತಾರೆ. ಮುಟ್ಟಿತು ಎಂದರೆ ತೆಪ್ಪಗಾಗಿಬಿಡುತ್ತಾರೆ. ಕೊಡ ತುಂಬಿಕೊಂಡಿತು ಎಂದರೆ, ಕೊಡದ ನೀರು ಕೆರೆ ನೀರು ಒಂದಾದುವು ಎಂದರೆ, ಬಳಿಕ ಶಬ್ದ ನಿಂತುಹೋಗುತ್ತದೆ. ಕೊಡ ಪೂರ್ಣವಾಗಿ ತುಂಬಿಕೊಳ್ಳದವರೆಗೆ ಮಾತ್ರ ಶಬ್ದ.

"ಹಿಂದಿನಕಾಲದಲ್ಲಿ ಜನ ಹೇಳುತ್ತಿದ್ದರು, ಜಹಜು ಸಾಗರದ ಕಪ್ಪು ನೀರಿನ ಕಡೆ ಹೋಯಿತು ಎಂದರೆ ಮತ್ತೆ ಹಿಂದಿರುಗಿ ಬಾರದ ಎಂದು.

"'ಅಹಂ' ಎಂಬುದು ಸತ್ತಿತು ಎಂದರೆ, ಎಲ್ಲಾ ಕೋಟಲೆಗಳೂ ಕೊನೆಗಾಣುವುವು. ಬೇಕಾದಷ್ಟು ವಿಚಾರದಲ್ಲಿ ತೊಡಗಬಹುದು, ಆದರೂ ಈ 'ಅಹಂ' ಎಂಬುದು ಮಾತ್ರ ಹೋಗದು. ನಿಮ್ಮಂಥವರಿಗೆ, ನನ್ನಂಥವರಿಗೆ 'ಭಕ್ತನ ಅಹಂ' ಬಹಳ ಶ್ರೇಯಸ್ಕರವಾದ್ದು.

"ಭಕ್ತರಿಗೆ ಸಗುಣಬ್ರಹ್ಮ. ಎಂದರೆ ಭಕ್ತ ನಂಬುತ್ತಾನೆ, ಭಗವಂತ ಸಗುಣ, ಆತ ತನಗಾಗಿ ರೂಪವನ್ನು ಧರಿಸಿ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ ಎಂಬುದಾಗಿ. ನಮ್ಮ ಪ್ರಾರ್ಥನೆ ಕೇಳತಕ್ಕವನು ಆತನೇ. ನೀವು ಪ್ರಾರ್ಥನೆ ಮಾಡುತ್ತೀರಲ್ಲ, ಅದೂ ಆತನನ್ನು ಉದ್ದೇಶಿಸಿಯೇ. ನೀವು ವೇದಾಂತವಾದಿಗಳಲ್ಲ, ಜ್ಞಾನಿಗಳಲ್ಲ, ಭಕ್ತರು. ಭಗವಂತನ ಸಾಕಾರ ರೂಪವನ್ನು ಒಪ್ಪಿದರೆ ಒಪ್ಪಿ ಇಲ್ಲದಿದ್ದರೆ ಬಿಡಿ; ಅದರಿಂದಲೇನು ಆಕಾಶ ಕಳಚಿಬಿದ್ದುಹೋಗೋದಿಲ್ಲ. ಭಗವಂತ ಒಬ್ಬ ವ್ಯಕ್ತಿ, ಆತ ನಮ್ಮ ಪ್ರಾರ್ಥನೆ ಕೇಳುತ್ತಾನೆ, ಸೃಷ್ಟಿಸ್ಥಿತಿಪ್ರಳಯ ಮಾಡುತ್ತಾನೆ, ಆತನಿಗೆ ಅನಂತಶಕ್ತಿ ಇದೆ ಎಂಬ ಭಾವನೆ ಇದ್ದುಬಿಟ್ಟರೆ ಅದೇ ಯಥೇಷ್ಟ.

"ಭಕ್ತಿಮಾರ್ಗದಿಂದ ಆತನನ್ನು ಸುಲಭವಾಗಿ ಸಾಕ್ಷಾತ್ಕಾರಮಾಡಿಕೊಳ್ಳಬಹುದು."

ಒಬ್ಬ ಬ್ರಾಹ್ಮಭಕ್ತ: "ಭಗವಂತನನ್ನು ನೋಡಲು ಸಾಧ್ಯವೇ? ಸಾಧ್ಯವಿದ್ದರೆ ನನ್ನಿಂದೇಕೆ ಆತನನ್ನು ನೋಡಲಾಗುತ್ತಿಲ್ಲ?"

ಶ್ರೀರಾಮಕೃಷ್ಣರು: "ಸಾಧ್ಯ. ನಿಸ್ಸಂದೇಹವಾಗಿಯೂ ಆತನನ್ನು ನೋಡಬಹುದು. ಆತನ ಸಾಕಾರ ರೂಪವನ್ನೂ ನೋಡಬಹುದು, ಆತನ ಅರೂಪವನ್ನೂ ನೋಡಬಹುದು. ಅದನ್ನು ನಾನು ನಿನಗೆ ಹೇಗೆ ವಿವರಿಸಿ ತಿಳಿಸಲಿ?"

ಬ್ರಾಹ್ಮಭಕ್ತ: "ಏನು ಮಾಡಿದರೆ ಆತನ ದರ್ಶನವನ್ನ ಪಡೆದು ಕೊಳ್ಳಬಹುದು?"

ಶ್ರೀರಾಮಕೃಷ್ಣರು: "ವ್ಯಾಕುಲನಾಗಿ ಆತನ ದರ್ಶನಕ್ಕಾಗಿ ಅಳ ಬಲ್ಲೆಯಾ? ಜನ ಮಕ್ಕಳಿಗಾಗಿ, ಹೆಂಡತಿಗಾಗಿ, ಹಣಕ್ಕಾಗಿ ಬಿಂದಿಗೆ ತುಂಬ ಕಣ್ಣೀರು ಸುರಿಸುತ್ತಾರೆ. ಆದರೆ ಭಗವಂತನಿಗಾಗಿ ಯಾರು ಅಳುತ್ತಾರೆ? ಮಗು ಗಿಲಿಕೆಯಲ್ಲೇ ಮಗ್ನವಾಗಿ ತಾಯಿಯನ್ನು ಮರೆತಿರುವಾಗ ಆಕೆ ಅಡಿಗೆ-ಗಿಡಿಗೆ, ಇನ್ನೂ ಉಳಿದ ಮನೆ ಕೆಲಸ ಇವನ್ನೆಲ್ಲಾ ಮಾಡುತ್ತಿರು ತ್ತಾಳೆ. ಯಾವಾಗ ಮಗುವಿಗೆ ಗಿಲಿಕೆ, ಉರುಟುಗೋಲು ಯಾವುದೂ ಬೇಡವಾಗಿ, ಅವನ್ನು ಬಿಸಾಡಿ ಚೀತ್ಕಾರಮಾಡುತ್ತ ಅಳಲಾರಂಭಿಸುವುದೊ ಆಗ ತಾಯಿ ಅನ್ನದ ತಪ್ಪಲೆ ಕೆಳಗಿಳಿಸಿ ಓಡಿ ಓಡಿ ಬಂದು ಮಗುವನ್ನು ಕಂಕುಳಿಗೆ ಹಾಕ್ಕೋತಾಳೆ."

ಬ್ರಾಹ್ಮಭಕ್ತ: "ಮಹಾಶಯರೆ, ಭಗವಂತನ ಸ್ವರೂಪದ ಸಂಬಂಧ ವಾಗಿ ನಾನಾ ಅಭಿಮತಗಳಿವೆಯಲ್ಲ ಏಕೆ? ಕೆಲವರು ಹೇಳುತ್ತಾರೆ ಭಗವಂತ ಸಾಕಾರ ಅಂತ, ಇನ್ನು ಕೆಲವರು ಹೇಳುತ್ತಾರೆ ಆತ ನಿರಾಕಾರ ಅಂತ. ಇದೂ ಅಲ್ಲದೆ ಈ ಸಾಕಾರವಾದಿಗಳು ಹೇಳುತ್ತಾರೆ, ಆತನಿಗೆ ನಾನಾ ರೂಪಗಳೂ ಇವೆ ಎಂಬುದಾಗಿ. ಇಷ್ಟೊಂದು ಗೊಂದಲವೆಲ್ಲ ಏಕೆ?"

ಶ್ರೀರಾಮಕೃಷ್ಣರು: "ಭಗವಂತ ಭಕ್ತನಿಗೆ ಯಾವ ರೂಪದಿಂದ ಕಾಣಿಸಿಕೊಳ್ಳುತ್ತಾನೊ ಭಕ್ತ ಆ ರೂಪದ ಸಂಬಂಧವಾಗೇ ಭಾವಿಸುತ್ತಾನೆ. ವಾಸ್ತವಿಕವಾಗಿ ಯಾವ ಗೊಂದಲವೂ ಇಲ್ಲ. ಹೇಗಾದರೂ ಮಾಡಿ ಆತನ ಸಾಕ್ಷಾತ್ಕಾರ ಪಡೆದುಕೊಂಡುಬಿಟ್ಟದ್ದೇ ಆದರೆ, ಬಳಿಕ ಆತ ಎಲ್ಲವನ್ನೂ ತಿಳಿಸಿಕೊಟ್ಟುಬಿಡುತ್ತಾನೆ. ಆ ಕಡೆಗೆ ನೀನು ಇನ್ನೂ ಒಂದು ಹೆಜ್ಜೆಯನ್ನೂ ಹಾಕೇ ಇಲ್ಲ—ಅಂಥಾದ್ದರಲ್ಲಿ ಭಗವಂತನ ಸಂಬಂಧವಾಗಿ ಎಲ್ಲವನ್ನೂ ತಿಳಿದುಕೊಂಡುಬಿಡಲು ಹೇಗೆ ಸಾಧ್ಯ?

“ಒಂದು ಕಥೆ ಕೇಳು. ಒಮ್ಮೆ ಒಬ್ಬ ಒಂದು ತೋಪಿನ ಕಡೆ ಹೋಗಿದ್ದ. ಅಲ್ಲಿ ಒಂದು ಮರದ ಮೇಲೆ ಒಂದು ಪ್ರಾಣಿ ಕಾಣಿಸಿ ಕೊಂಡಿತು. ಆತ ಬಂದು ಇನ್ನೊಬ್ಬನಿಗೆ ಹೇಳಿದ: ‘ನೋಡು, ಆ ಮರದ ಮೇಲೆ ಒಂದು ಕೆಂಪು ಬಣ್ಣದ ಪ್ರಾಣಿಯನ್ನು ನೋಡಿ ಬಂದೆ.’ ಅವನು ಉತ್ತರವಿತ್ತ: ‘ನಾನು ಅಲ್ಲಿಗೆ ಹೋಗಿದ್ದಾಗ, ನಾನೂ ಅದನ್ನು ನೋಡಿ ಬಂದಿದೇನೆ. ಅದು ಕೆಂಪು ಏಕಾದೀತು? ಹಸುರು.’ ಅವರ ಹತ್ತಿರ ನಿಂತಿದ್ದ ಮತ್ತೊಬ್ಬ ಹೇಳಿದ: ‘ಇಲ್ಲ, ಇಲ್ಲ. ಅದನ್ನು ನಾನೂ ನೋಡಿ ದೇನೆ. ಅದರ ಬಣ್ಣ ಹಳದಿ.’ ಹೀಗೆ ಅಲ್ಲಿ ನಿಂತಿದ್ದವರು ಅದರ ಬಣ್ಣ ಬೂದು, ನೇರಳೆ ಹಣ್ಣಿನ ಬಣ್ಣ, ನೀಲಿ ಇತ್ಯಾದಿಯಾಗಿ ಹೇಳಲಾರಂಭಿಸಿ ದರು. ಕೊನೆಗೆ ಒಬ್ಬರಿಗೊಬ್ಬರಿಗೆ ಜಗಳ ಹತ್ತಿಕೊಂಡುಬಿಟ್ಟಿತು. ಇದರ ಸಂಬಂಧವಾಗಿ ಒಂದು ಇತ್ಯರ್ಥಕ್ಕೆ ಬರಲು ಎಲ್ಲರೂ ಆ ಮರದ ಹತ್ತಿರಕ್ಕೆ ಹೋದರು. ಒಬ್ಬ ಮನುಷ್ಯ ಆ ಮರದ ಕೆಳಗೆ ಕುಳಿತುಕೊಂಡಿದ್ದುದು ಅವರ ಕಣ್ಣಿಗೆ ಬಿತ್ತು. ಆತನನ್ನು ಆ ಪ್ರಾಣಿಯ ಬಣ್ಣದ ಸಂಬಂಧವಾಗಿ ಕೇಳಲಾಗಿ, ಆತ ಉತ್ತರವಿತ್ತ: ‘ನಾನು ಈ ಮರದ ಕೆಳಗೇ ವಾಸಿಸುತ್ತಿದೇನೆ. ಆ ಪ್ರಾಣಿಯ ಸ್ವರೂಪ ನನಗೆ ಬಹಳ ಚೆನ್ನಾಗಿ ಗೊತ್ತಿದೆ. ನೀವು ಪ್ರತಿ ಯೊಬ್ಬರೂ ಹೇಳುತ್ತಿರುವುದು ಸತ್ಯವೆ. ಕೆಲವು ವೇಳೆ ಅದು ಕೆಂಪಾಗಿ, ಇನ್ನು ಕೆಲವು ವೇಳೆ ಹಸುರಾಗಿ ಮತ್ತೆ ಕೆಲವು ವೇಳೆ ಹಳದಿಯಾಗಿ ಮತ್ತೂ ಕೆಲವು ವೇಳೆ ನೀಲಿಯಾಗಿ, ಹೀಗೇ ಇನ್ನೂ ಏನೇನೊ ಬಣ್ಣಗಳಾಗಿ ಕಾಣಿಸಿ ಕೊಳ್ಳುತ್ತದೆ. ಅದಕ್ಕೆ ಗೋಸುಂಬೆ ಅಂತ ಹೆಸರು. ಒಂದೊಂದು ವೇಳೆ ಅದಕ್ಕೆ ಯಾವ ಬಣ್ಣವೂ ಇರೋದೇ ಇಲ್ಲ. ಕೆಲವು ವೇಳೆ ಅದು ಸಗುಣ, ಇನ್ನು ಕೆಲವು ವೇಳೆ ನಿರ್ಗುಣ.’

“ಇದೇ ರೀತಿಯಾಗಿ ಯಾರು ಸರ್ವದಾ ಭಗವಚ್ಚಿಂತನೆ ಮಾಡುತ್ತಾ ಇರುತ್ತಾನೊ ಆತನಿಗೆ ಗೊತ್ತಾಗುತ್ತದೆ ಆತನ ನಿಜಸ್ವರೂಪ ಏನು ಎಂಬುದು. ಆತನಿಗೆ ಮಾತ್ರವೇ ಕೇವಲ ಗೊತ್ತಿರುತ್ತದೆ ಭಗವಂತ ನಾನಾ ರೂಪಗಳಿಂದ, ನಾನಾ ಭಾವಗಳಿಂದ ಕಾಣಿಸಿಕೊಳ್ಳುತ್ತಾನೆ—ಆತ ಸಗುಣನೂ ಹೌದು, ನಿರ್ಗುಣನೂ ಹೌದು ಎಂಬುದು. ಕೇವಲ ಆ ಮರದ ಕೆಳಗೆ ವಾಸಿಸುತ್ತಿರುವವನಿಗೆ ಮಾತ್ರ ಗೊತ್ತಿರುತ್ತದೆ ಗೋಸುಂಬೆ ವಿವಿಧ ಬಣ್ಣಗಳನ್ನು ಧರಿಸುತ್ತದೆ ಮತ್ತೆ ಕೆಲವು ವೇಳೆ ಅದಕ್ಕೆ ಯಾವ ಬಣ್ಣವೂ

ಇರದು ಎಂಬುದು. ಉಳಿದವರು ಬರಿದೆ ವಾದ-ವಿವಾದ, ಜಗಳ-ಬವರ ಇವುಗಳಲ್ಲಿ ತೊಡಗಿ ಸುಮ್ಮನೆ ಸತ್ತು ಸುಣ್ಣವಾಗಿ ಹೋಗುತ್ತಾರೆ.

"ಕಬೀರ ಹೇಳುತ್ತಿದ್ದ: 'ನಿರಾಕಾರ ನನ್ನ ತಂದೆ, ಸಾಕಾರ ನನ್ನ ತಾಯಿ.'

"ಭಗವಂತ ಭಕ್ತವತ್ಸಲ. ಭಕ್ತ ಯಾವ ರೂಪವನ್ನು ಪ್ರೀತಿಸುತ್ತಾನೊ ಆ ರೂಪದಿಂದ ಆತ ಭಕ್ತನಿಗೆ ಕಾಣಿಸಿಕೊಳ್ಳುತ್ತಾನೆ. ಪುರಾಣದಲ್ಲಿ ಹೇಳಿದೆ, ವೀರಭಕ್ತ ಹನುಮಂತನಿಗಾಗಿ ಭಗವಂತ ರಾಮರೂಪವನ್ನು ಧರಿಸಿದ ಎಂಬುದಾಗಿ.

"ವೇದಾಂತ ವಿಚಾರದ ಮುಂದೆ ಭಗವಂತನ ರೂಪ-ಗೀಪವೆಲ್ಲಾ ಗಾಳಿಯಲ್ಲಿ ಹಾರಿಹೋಗಿಬಿಡುತ್ತದೆ. ಅದರ ಕೊನೆಯ ಸಿದ್ಧಾಂತ: ಬ್ರಹ್ಮನೇ ಸತ್ಯ; ನಾಮರೂಪಯುಕ್ತ ಈ ಜಗತ್ತು ಮಿಥ್ಯಾ. 'ನಾನು ಭಕ್ತ' ಎಂಬ ಭಾವನೆ ಭಕ್ತನಲ್ಲಿ ಇರೋವರೆಗೆ ಆತನಿಗೆ ಸಾಧ್ಯವಾಗುತ್ತದೆ ಭಗವಂತನನ್ನು ದರ್ಶನಮಾಡಲು, ಆತನನ್ನು ಒಬ್ಬ ವ್ಯಕ್ತಿ ಎಂದು ಭಾವಿಸಲು. ವಿಚಾರ ದೃಷ್ಟಿಯಿಂದ ನೋಡಿದರೆ ಭಕ್ತನ 'ಅಹಂ' ಎಂಬುದು ಆತನನ್ನು ಭಗವಂತನಿಂದ ಒಂದು ಸ್ವಲ್ಪ ದೂರದಲ್ಲೇ ನಿಲ್ಲಿಸಿಬಿಟ್ಟಿರುತ್ತದೆ.

"ಕೃಷ್ಣನ ಅಥವಾ ಕಾಳಿಯ ವಿಗ್ರಹ ಮೂರೂವರೆ ಮೊಳ ಮಾತ್ರ ಇದೆಯಲ್ಲ ಏಕೆ ಗೊತ್ತೆ? ದೂರದಲ್ಲಿರುವುದರಿಂದ. ಸೂರ್ಯ ದೂರದಲ್ಲಿರೋದರಿಂದ ಚಿಕ್ಕದಾಗಿ ಕಾಣುತ್ತಾನೆ. ಹತ್ತಿರ ಹೋಗಿ ನೋಡು, ಆತ ಅಷ್ಟೊಂದು ದೊಡ್ಡವನು, ಗ್ರಹಿಸಲೇ ಸಾಧ್ಯವಾಗೋದಿಲ್ಲ. ಮತ್ತೆ ನೋಡು, ಕಾಳಿಯು ಮತ್ತು ಕೃಷ್ಣನ ವಿಗ್ರಹ ಕಪ್ಪಾಗಿವೆಯಲ್ಲ ಏಕೆ? ಅದಕ್ಕೂ ಕಾರಣ, ದೂರವೇ. ಉದಾಹರಣೆಗೆ ಸಮುದ್ರದ ನೀರು. ಅದು ದೂರದಿಂದ ಹಸುರು, ನೀಲಿ, ಅಥವಾ ಕಪ್ಪು ಬಣ್ಣದ್ದಾಗಿ ಕಾಣಿಸಿಕೊಳ್ಳುತ್ತದೆ. ಹತ್ತಿರ ಹೋಗಿ ಕೈಯಲ್ಲಿ ಒಂದು ಸ್ವಲ್ಪ ನೀರು ತೆಗೆದುಕೊಂಡು ನೋಡು, ಅದಕ್ಕೆ ಯಾವ ಬಣ್ಣವೂ ಇಲ್ಲ. ಆಕಾಶ ದೂರದಿಂದ ನೀಲ ವರ್ಣದ್ದಾಗಿ ಕಾಣುತ್ತದೆ. ಹತ್ತಿರದಲ್ಲಿ ನೋಡು ಅದಕ್ಕೆ ಯಾವ ಬಣ್ಣವೂ ಇಲ್ಲ.

"ಅದಕ್ಕಾಗೇ ನಾನು ಹೇಳೋದು, ವೇದಾಂತ ವಿಚಾರದ ದೃಷ್ಟಿಯಿಂದ ಬ್ರಹ್ಮ ನಿರ್ಗುಣ ಎಂಬುದಾಗಿ. ಆತನ ನೈಜಸ್ವರೂಪ ಏನು

ಎಂಬುದನ್ನ ಬಾಯಿಂದ ವರ್ಣನೆಮಾಡಲಾಗೋದಿಲ್ಲ. ಆದರೆ ನಿನ್ನ ವ್ಯಕ್ತಿತ್ವ ಸತ್ಯವಾಗಿರುವವರೆಗೆ, ಜಗತ್ತೂ ಸತ್ಯ, ಭಗವಂತನ ನಾನಾ ರೂಪಗಳೂ ಸತ್ಯ, ಭಗವಂತ ಒಬ್ಬ ವ್ಯಕ್ತಿ ಎಂಬ ಭಾವನೆಯೂ ಸತ್ಯ.

"ನಿಮ್ಮ ಮಾರ್ಗ ಭಕ್ತಿಮಾರ್ಗ. ಇದು ತುಂಬ ಒಳ್ಳೆಯದೆ—ಬಹಳ ಸಹಜವಾದ ಮಾರ್ಗ. ಅನಂತನಾದ ಭಗವಂತನನ್ನು ಯಾರು ತಾನೆ ಅರಿತುಕೊಳ್ಳಬಲ್ಲರು? ಆತನನ್ನು ಅರಿತುಕೊಳ್ಳೋ ಆವಶ್ಯಕತೆ ತಾನೆ ಏನಿದೆ? ಈ ದುರ್ಲಭ ಮಾನುಷಜನ್ಮ ಪಡೆದನಂತರ ನಮಗೆ ಆವಶ್ಯಕವಾಗಿ ಬೇಕಾಗಿರೋದು ಆತನ ಪಾದಪದ್ಮಗಳಲ್ಲಿ ಭಕ್ತಿ.

"ನನ್ನ ದಾಹ ಅಡಗಿಸಲು ಒಂದು ಲೋಟ ನೀರೇ ಸಾಕಾಗಿರೋವಾಗ ಕೆರೆಯಲ್ಲಿ ಎಷ್ಟು ಕೊಡ ನೀರಿದೆ ಎಂಬುದನ್ನು ಅಳೆದುನೋಡುವ ಆವಶ್ಯಕತೆ ತಾನೆ ಏನಿದೆ ನನಗೆ? ಅರ್ಧ ಸೀಸೆ ಮದ್ಯದಿಂದಲೇ ನನಗೆ ಮತ್ತು ಹತ್ತಿಬಿಡೋವಾಗ, ಇನ್ನು ಸಾರಾಯಿ ಅಂಗಡಿಯಲ್ಲಿ ಎಷ್ಟು ಪೀಪಾಯಿ ಮದ್ಯ ಇದೆ ಎಂಬುದರ ಲೆಕ್ಕಾಚಾರವೇಕೆ ನನಗೆ? ಅನಂತನನ್ನು ಅರಿತುಕೊಳ್ಳಬೇಕಾದ ಆವಶ್ಯಕತೆ ತಾನೆ ಏನಿದೆ?

"ವೇದದಲ್ಲಿ ಬ್ರಹ್ಮಜ್ಞಾನಿಯ ವಿವಿಧ ಮಾನಸಿಕ ಅವಸ್ಥೆಗಳ ಸಂಬಂಧವಾಗಿ ವರ್ಣನೆ ಇದೆ. ಜ್ಞಾನಮಾರ್ಗ ಬಹಳ ಕಠಿನಮಾರ್ಗ. ವಿಷಯಬುದ್ಧಿ—ಕಾಮಕಾಂಚನಾಸಕ್ತಿ—ಲೇಶಮಾತ್ರವಿದ್ದರೂ ಬ್ರಹ್ಮಜ್ಞಾನ ದೊರಕೋದಿಲ್ಲ. ಈ ಮಾರ್ಗ ಕಲಿಯುಗಕ್ಕಲ್ಲ.

"ವೇದ ಸಪ್ತಭೂಮಿಕೆಗಳ ಸಂಬಂಧವಾಗಿ ಹೇಳುತ್ತವೆ. ಈ ಏಳು ಭೂಮಿಕೆಗಳೂ ಮನಸ್ಸು ವಾಸಮಾಡೋ ಸ್ಥಾನಗಳು. ಸಂಸಾರದಲ್ಲಿ ಮನಸ್ಸು ಇರೋವರೆಗೆ ಅದು ಲಿಂಗ, ಗುಹ್ಯ, ನಾಭಿ ಈ ಭೂಮಿಕೆಗಳಲ್ಲಿ ನೆಲಸಿರುತ್ತದೆ. ಆಗ ಮನಸ್ಸಿಗೆ ಊರ್ಧ್ವದೃಷ್ಟಿ ಇರದು—ಕಾಮಕಾಂಚನಗಳಲ್ಲೇ ಆಸಕ್ತವಾಗಿರುತ್ತದೆ. ಮನಸ್ಸಿನ ನಾಲ್ಕನೆ ಭೂಮಿಕೆ ಹೃದಯ. ಇಲ್ಲಿ ಮನಸ್ಸು ನೆಲಸಿದಾಗ ಆತ್ಮ ಜಾಗೃತಿಗೊಳ್ಳುತ್ತದೆ; ಸುತ್ತಲೂ ಜ್ಯೋತಿ ಕಾಣಿಸಿಕೊಳ್ಳಲಾರಂಭಿಸುತ್ತದೆ. ಆ ಅಂತಸ್ತಿನಲ್ಲಿರೋ ವ್ಯಕ್ತಿ ಆ ಭಗವಜ್ಜ್ಯೋತಿಯನ್ನು ನೋಡಿ ಆಶ್ಚರ್ಯಚಕಿತನಾಗಿ ಹೇಳುತ್ತಾನೆ: 'ಆಹ! ಏನಿದು? ಏನಿದು?' ಆತನ ಮನಸ್ಸು ಕೆಳಕ್ಕೆ ಇಳಿದುಹೋಗೋದಿಲ್ಲ—ಸಂಸಾರದ ಕಡೆಗೆ ಇಳಿದುಹೋಗೋದಿಲ್ಲ.

"ಮನಸ್ಸಿನ ಐದನೆ ಭೂಮಿಕೆ ಕಂಠ. ಯಾರ ಮನಸ್ಸು ಕಂಠದ ವರೆಗೆ ಹತ್ತಿದೆಯೊ ಅವರ ಅವಿದ್ಯೆ ಅಜ್ಞಾನ ಎಲ್ಲಾ ನಾಶವಾಗಿಹೋಗಿ ಬಿಟ್ಟು ಅವರಿಗೆ ಭಗವಂತನ ಮಾತುಕತೆ ವಿನಾ ಬೇರೆ ಯಾವ ಮಾತುಕತೆ ಯನ್ನು ಕೇಳಲೂ ಇಚ್ಛೆಯಾಗೋದಿಲ್ಲ, ಆಡಲೂ ಇಚ್ಛೆಯಾಗೋದಿಲ್ಲ. ಜನರು ಬೇರೆ ವಿಧದ ಮಾತುಕತೆ ಎತ್ತಿದರೆ ಅವರು ಅಲ್ಲಿಂದ ಎದ್ದು ಹೊರಟು ಹೋಗುತ್ತಾರೆ.

"ಮನಸ್ಸಿನ ಆರನೆ ಭೂಮಿಕೆಯೇ ಹಣೆ. ಮನಸ್ಸು ಇಲ್ಲಿಗೆ ಹತ್ತಿ ಬಂದರೆ ಹಗಲೂ ಇರುಳು ಭಗವಂತನ ರೂಪದರ್ಶನ ಆಗುತ್ತೆ. ಆಗಲೂ ಕಿಂಚಿತ್ 'ಅಹಂ' ಉಳಿದುಕೊಂಡಿರುತ್ತೆ. ಆ ವ್ಯಕ್ತಿ ಆ ನಿರುಪಮ ರೂಪವನ್ನು ದರ್ಶನಮಾಡಿ ಉನ್ಮತ್ತನಾಗಿಬಿಟ್ಟು ಆ ರೂಪವನ್ನು ಸ್ಪರ್ಶ ಮಾಡಲು ಆಲಿಂಗನೆಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ, ಆದರೆ ಜಯ ಶೀಲನಾಗೋದಿಲ್ಲ. ಇದು ಲಾಟೀನಿನಲ್ಲಿರೋ ಬೆಳಕಿನ ಹಾಗೆ. ಮನಸ್ಸಿಗೆ ಅನಿಸುತ್ತದೆ ಅದನ್ನು ಇನ್ನೇನು ಮುಟ್ಟಿಬಿಡೋಣ ಮುಟ್ಟಿಬಿಡೋಣ ಎಂದು, ಆದರೆ ಅದಕ್ಕೆ ಗಾಜು ಹಾಕಿರುವುದರಿಂದ ಸಾಧ್ಯವಾಗುವುದಿಲ್ಲ.

"ಶಿರಃಪ್ರದೇಶವೇ ಏಳನೆ ಭೂಮಿಕೆ. ಇಲ್ಲಿಗೆ ಮನಸ್ಸು ಹತ್ತಿತೆಂದರೆ ಸಮಾಧಿಯುಂಟಾಗುತ್ತದೆ. ಆಗ ಬ್ರಹ್ಮಜ್ಞಾನಿಗೆ ಬ್ರಹ್ಮನ ಪ್ರತ್ಯಕ್ಷ ದರ್ಶನ ದೊರೆಯುತ್ತದೆ. ಆದರೆ ಆ ಅವಸ್ಥೆಯನ್ನು ಹೊಂದಿದನಂತರ ಆತನ ಶರೀರ ಹೆಚ್ಚು ದಿನ ಬದುಕಿರಲಾರದು. ಯಾವಾಗಲೂ ಬಾಹ್ಯಪ್ರಜ್ಞೆ ಇಲ್ಲದವನಾಗೇ ಇರುತ್ತಾನೆ. ಆತನ ಕೈಯಲ್ಲಿ ಏನು ತಿನ್ನೋಕೂ ಸಾಧ್ಯ ವಾಗೋದಿಲ್ಲ. ಬಾಯಿಗೆ ಹಾಲು ಹಾಕಿದರೆ ಅದು ಕಟಬಾಯಿಂದ ಹೊರಕ್ಕೆ ಹರಿದುಬಂದುಬಿಡುತ್ತದೆ. ಆ ಅವಸ್ಥೆಯನ್ನು ಹೊಂದಿದನಂತರ ಇಪ್ಪತ್ತೊಂದು ದಿನದಲ್ಲಿ ದೇಹತ್ಯಾಗವಾಗಿಬಿಡುತ್ತದೆ. ಇದೇ ಬ್ರಹ್ಮ-ಜ್ಞಾನಿಯ ಅವಸ್ಥೆ. ನಿಮ್ಮದು ಭಕ್ತಿಮಾರ್ಗ. ಅದು ಬಹಳ ಒಳ್ಳೆಯದು ಮತ್ತು ಸಹಜವಾದ್ದು.

"ಒಮ್ಮೆ ಒಬ್ಬ ನನ್ನನ್ನು ಕೇಳಿದ: 'ಮಹಾಶಯರೆ, ನನಗೆ ಸಮಾಧಿ ಯನ್ನು ದೊರಕಿಸಿಕೊಡುತ್ತೀರಾ?' (ಎಲ್ಲರೂ ನಗುತ್ತಾರೆ.)

"ಸಮಾಧಿ ದೊರೆಯಿತು ಎಂದರೆ ಎಲ್ಲಾ ಕರ್ಮಗಳೂ ನಮ್ಮನ್ನು ಬಿಟ್ಟುಹೊರಟುಹೋಗುತ್ತವೆ. ಪೂಜೆ, ಜಪತಪಾದಿ ಕರ್ಮ, ಪ್ರಾಪಂಚಿಕ ಕರ್ಮ ಎಲ್ಲಾ ಬಿಟ್ಟುಹೊರಟುಹೋಗುತ್ತವೆ. ಮೊದಮೊದಲು ಕರ್ಮದ

ಗಡಿಬಿಡಿ ಹೆಚ್ಚಾಗೇ ಇರುತ್ತದೆ. ಭಗವಂತನ ಕಡೆಗೆ ಮುಂದುವರಿದಷ್ಟೂ ಕರ್ಮದ ಆಡಂಬರವೂ ಕಡಮೆ ಕಡಮೆಯಾಗುತ್ತಾ ಬರುತ್ತದೆ. ಅಷ್ಟೇ ಅಲ್ಲ, ಆತನ ನಾಮಗುಣಕೀರ್ತನೆಯೂ ಕೊನೆಗೆ ಸಾಧ್ಯವಿಲ್ಲದ್ದಾಗಿ ಬಿಡುತ್ತದೆ. (ಶಿವನಾಥನಿಗೆ) ನೀನು ಈ ಸಭೆಗೆ ಬರುವ ಮುನ್ನ ನಿನ್ನ ನಾಮಗುಣಕೀರ್ತನೆ ಇಲ್ಲಿ ಬಹಳವಾಗಿ ನಡೆಯುತ್ತಿತ್ತು. ನೀನೇ ಪ್ರತ್ಯಕ್ಷವಾಗಿ ಇಲ್ಲಿಗೆ ಬಂದೆಯೊ ಇಲ್ಲವೊ ಒಡನೆ ಅವೆಲ್ಲಾ ನಿಂತುಹೋದುವು. ಈಗ ಕೇವಲ ನಿನ್ನ ದರ್ಶನದಿಂದಲೇ ಜನರಿಗೆ ಆನಂದ ಆಗುತ್ತಿದೆ. ಅವರು ಕೇವಲ ಹೇಳುತ್ತಿದಾರೆ: 'ಇಗೋ, ಇಲ್ಲಿ ಶಿವನಾಥ!' ನಿನ್ನ ಸಂಬಂಧವಾದ ಉಳಿದ ಮಾತುಕತೆಗಳೆಲ್ಲಾ ನಿಂತುಹೋಗಿಬಿಟ್ಟುವು.

"ನನಗೀ ಅವಸ್ಥೆ ಬಂದನಂತರ ತರ್ಪಣ ಕೊಡೋಣ ಅಂತ ಗಂಗಾನದಿಗೆ ಹೋದೆ. ಕೈಯಲ್ಲಿ ನೀರು ತೆಗೆದುಕೊಳ್ಳೋಣ ಎಂದರೆ ಬೆರಳ ಸಂದಿನಿಂದ ನೀರೆಲ್ಲಾ ಸೋರಿಹೋಗುತ್ತಿದೆ. ಆಗ ಅಳುತ್ತ ಅಳುತ್ತ ಹಲಧಾರಿಯನ್ನು ಕೇಳಿದೆ: 'ಸೋದರ, ಏಕೆ ಹೀಗಾಗುತ್ತಿದೆ?' ಹಲಧಾರಿ ತಿಳಿಸಿದ: 'ಇದಕ್ಕೇ "ಗಳಿತ ಹಸ್ತ" ಅಂತ ಕರೆಯುತ್ತಾರೆ.' ಭಗವಂತನ ದರ್ಶನ ದೊರೆತನಂತರ ತರ್ಪಣಾದಿ ಕರ್ಮ ಸಾಧ್ಯವಿಲ್ಲ.

"ಕೀರ್ತನೆಯ ಶುರುವಿನಲ್ಲಿ ಭಕ್ತ ಮೊದಮೊದಲು ಹಾಡುತ್ತಿರುತ್ತಾನೆ: 'ನಿತಾಯಿ ನಮ್ಮ ಮದಿಸಿದ ಆನೆ! ನಿತಾಯಿ ನಮ್ಮ ಮದಿಸಿದ ಆನೆ!' ಎಂಬುದಾಗಿ. ಭಾವ ಗಾಢವಾಯಿತು ಎಂದರೆ, ಕೇವಲ ಹೇಳುತ್ತಿರುತ್ತಾನೆ: 'ಆನೆ! ಆನೆ!' ಬಳಿಕ ಕೇವಲ 'ಆನೆ!' ಎಂಬ ಪದ ಮಾತ್ರ. ಕೊನೆಗೆ 'ಆ!' ಎಂದು ಹೇಳುತ್ತ ಹೇಳುತ್ತ ಭಾವಸಮಾಧಿಸ್ಥನಾಗುತ್ತಾನೆ. ಆಗ ಅದುವರೆಗೆ ಅಷ್ಟೊಂದಾಗಿ ಹಾಡುತ್ತಿದ್ದ ವ್ಯಕ್ತಿ ಮೂಕನಾಗಿಬಿಡುತ್ತಾನೆ.

"ಬ್ರಾಹ್ಮಣರ ಸಂತರ್ಪಣೆ ಸಮಯದಲ್ಲಿ ಮೊದಮೊದಲು ಬಹಳವಾಗಿ ಗದ್ದಲ ಕೇಳಿಬರುತ್ತದೆ. ಎಲ್ಲರ ಮುಂದೆಯೂ ಊಟದ ಎಲೆ ಬಿತ್ತು ಎಂದರೆ ಗದ್ದಲ ಸ್ವಲ್ಪ ಕಡಮೆಯಾಗಿ, 'ಅನ್ನ ಸಾರು ತೆಗೆದುಕೊಂಡು ಬನ್ನಿ! ತುಪ್ಪ ತೆಗೆದುಕೊಂಡು ಬನ್ನಿ!' ಎಂಬ ಶಬ್ದ ಕೇಳಿಬರುತ್ತದೆ. ಅನ್ನ ಸಾರು ಊಟಮಾಡಲು ಶುರುಮಾಡಿದ ಒಡನೆ ಮುಕ್ಕಾಲ್ಪಾಗ ಶಬ್ದ ಅಡಗಿಹೋಗುತ್ತದೆ. ಬಳಿಕ ಮಜ್ಜಿಗೆ ತಂದುಬಡಿಸಿದಾಗ ಕೇವಲ 'ಸುಪ್, ಸುಪ್' ಎಂಬ ಶಬ್ದ. (ಎಲ್ಲರೂ ನಗುತ್ತಾರೆ.) ಬಳಿಕ

ಬಹುಮಟ್ಟಿಗೆ ಶಬ್ದವೇ ಇಲ್ಲ ಅಂತ ಹೇಳಬಹುದು. ಅನಂತರ ನಿದ್ರೆ. ಆಗ ಸಂಪೂರ್ಣ ನಿಶ್ಶಬ್ದತೆ.

"ಅದಕ್ಕಾಗೆ ನಾನು ಹೇಳುವುದು, ಅಧ್ಯಾತ್ಮಜೀವನದ ಆರಂಭದಲ್ಲಿ ಕರ್ಮಗಳ ಗಡಿಬಿಡಿ ಬಹಳವಾಗಿ ಇರುತ್ತೆ. ಭಗವಂತನ ಕಡೆಗೆ ಮುಂದು ವರಿದಷ್ಟೂ ಕರ್ಮ ಕಡಮೆ ಕಡಮೆಯಾಗಿ ಹೋಗುತ್ತದೆ. ಕಟ್ಟಕಡೆಗೆ ಕರ್ಮತ್ಯಾಗ ಉಂಟಾಗಿ ಸಮಾಧಿ ದೊರೆಯುತ್ತದೆ.

"ಸಮಾಧಿ ದೊರೆತನಂತರ ಪ್ರಾಯಿಕವಾಗಿ ಶರೀರ ಬದುಕಿಕೊಂಡಿರುವುದಿಲ್ಲ. ಕೆಲಕೆಲವರ ಶರೀರ ಲೋಕಶಿಕ್ಷಣಾರ್ಥವಾಗಿ ಬದುಕಿಕೊಂಡಿರುತ್ತದೆ—ಉದಾಹರಣೆಗೆ ನಾರದಾದಿಗಳು. ಚೈತನ್ಯದೇವನಂಥ ಅವತಾರ ಪುರುಷರ ದೇಹವೂ ಬದುಕಿಕೊಂಡಿರುತ್ತದೆ. ಬಾವಿ ತೋಡಿ ಮುಗಿಸಿದೊಡನೆ ಸಾಮಾನ್ಯವಾಗಿ ಜನ ಗುದ್ದಲಿ-ಗಿದ್ದಲಿ ಕುಕ್ಕೆ-ಗಿಕ್ಕೆ ಎಲ್ಲವನ್ನೂ ಸುಮ್ಮನೆ ಬಿಸಾಡಿಬಿಡುತ್ತಾರೆ. ಆದರೆ ಕೆಲವರು ಪರರಿಗೆ ಉಪಕಾರವಾಗಲಿ ಎಂದು ಅವನ್ನು ಸುರಕ್ಷಿತವಾಗಿ ಇಡುತ್ತಾರೆ. ಇದೇ ರೀತಿಯಾಗಿ ಮಹಾ ಪುರುಷರು ಜೀವರ ದುಃಖನಿವಾರಣೆಮಾಡಲು ಕಾತರರಾಗಿ ತಮ್ಮ ಶರೀರವನ್ನು ಉಳಿಸಿಕೊಂಡಿರುತ್ತಾರೆ. ಇವರು ತಮಗೆ ಜ್ಞಾನ ದೊರೆತುಬಿಟ್ಟರೇ ಸಾಕು ಎಂಬತಕ್ಕ ಸ್ವಾರ್ಥಿಗಳಲ್ಲ. ಸ್ವಾರ್ಥಿಗಳ ಸ್ವಭಾವ ಏನೆಂಬುದು ನಿಮಗೆ ಚೆನ್ನಾಗಿ ಗೊತ್ತೇ ಇದೆ. ಒಂದು ಕಡೆ ಉಗುಳಿ ಎಂದರೆ ಅವರು ಹಾಗೆ ಮಾಡುವುದೇ ಇಲ್ಲ, ಎಲ್ಲಿ ನಿಮಗೆ ಉಪಕಾರವಾಗಿಬಿಡುತ್ತೊ ಅಂತ. ಅಂಗಡಿಯಿಂದ ಕಾಲಾಣೆ ಸಂದೇಶ (ಸಿಹಿ ತಿಂಡಿ) ತೆಗೆದುಕೊಂಡು ಬಾ ಅಂತ ಕಳುಹಿಸಿದರೆ ಹಿಂದಿರುಗಿಬರುವಾಗ ಅದನ್ನು ನೆಕ್ಕಿ ನೆಕ್ಕಿ ತಂದು ಕೊಡುತ್ತಾರೆ. (ಎಲ್ಲರೂ ನಗುತ್ತಾರೆ.)

"ಆದರೆ ಶಕ್ತಿವಿಶೇಷತೆಯನ್ನು ಒಪ್ಪಲೇಬೇಕು. ಸಾಮಾನ್ಯ ಜೀವಿಗಳು ಲೋಕಶಿಕ್ಷಣ ಮಾಡಲು ಹೆದರುತ್ತಾರೆ. ಸಾಮಾನ್ಯ ಕಡ್ಡಿ ಹೇಗೋ ಮಾಡಿ ತಾನು ಮಾತ್ರ ನೀರಿನ ಮೇಲೆ ತೇಲಿಹೋಗಬಲ್ಲದು. ಆದರೆ ಅದರ ಮೇಲೇನಾದರು ಒಂದು ಹಕ್ಕಿ ಬಂದು ಕುಳಿತುಕೊಂಡಿತೆಂದರೆ ಅದು ಮುಳುಗಿಹೋಗುತ್ತದೆ. ಆದರೆ ನಾರದಾದಿಗಳು ಭಾರಿ ದಿಮ್ಮಿಗಳಂಥ ಮನುಷ್ಯರು. ಈ ವಿಧದ ದಿಮ್ಮಿ ತಾನೂ ತೇಲಿಹೋಗುವುದಲ್ಲದೆ ಮನುಷ್ಯರನ್ನು, ಹಸುಗಳನ್ನು ಕೊನೆಗೆ ಆನೆಯನ್ನೂ ಹೊತ್ತುಕೊಂಡು ಹೋಗಿಬಿಡುತ್ತದೆ.

(ಶಿವನಾಥ ಮೊದಲಾದ ಭಕ್ತರಿಗೆ) "ಒಳ್ಳೇದು, ನೀವು ಭಗವಂತನ ಐಶ್ವರ್ಯದ ವರ್ಣನೆ ಕಡೆ ಅಷ್ಟೊಂದಾಗಿ ಮನಸ್ಸು ಕೊಡುತ್ತೀರಲ್ಲ ಏಕೆ? ನಾನು ಕೇಶವಸೇನನಿಗೂ ಇದೇ ಪ್ರಶ್ನೆ ಹಾಕಿದೆ. ಒಂದು ದಿನ ಆತ ಮತ್ತು ಆತನ ಗುಂಪು ಎಲ್ಲರೂ ದಕ್ಷಿಣೇಶ್ವರಕ್ಕೆ ಬಂದಿದ್ದರು. ನಾನು ಅವರಿಗೆ ಹೇಳಿದೆ: 'ನಿಮ್ಮಗಳ ಲೆಕ್ಚರ್ ಕೇಳಬೇಕು ಅಂತ ಇದೇನೆ.' ಗಂಗಾ ಘಟ್ಟದ ಎದುರಿಗಿರುವ ಮುಖಮಂಟಪದಲ್ಲಿ ಎಲ್ಲರೂ ನೆರೆದರು. ಕೇಶವಸೇನ ಉಪನ್ಯಾಸ ಕೊಡಲಾರಂಭಿಸಿದ. ಆತ ಬಹಳ ಚೆನ್ನಾಗಿ ಮಾತನಾಡಿದ. ನನಗೆ ಭಾವಾವಸ್ಥೆ ಬಂದುಬಿಟ್ಟಿತು. ಉಪನ್ಯಾಸವಾದನಂತರ ನಾನು ಕೇಶವನಿಗೆ ಹೇಳಿದೆ: 'ನೀನು ಇವನ್ನ ಬಾರಿ ಬಾರಿಗೂ ಹೇಳುತ್ತೀಯಲ್ಲ— ಹೇ ಭಗವಂತ, ನೀನು ಎಂಥ ಸುಂದರ ಹೂವುಗಳನ್ನು ಸೃಷ್ಟಿಸಿದೀಯೆ! ಹೇ ಭಗವಂತ, ನೀನು ಆಕಾಶ, ನಕ್ಷತ್ರ, ಸಮುದ್ರ ಇವನ್ನು ಸೃಷ್ಟಿಸಿದೀಯೆ! ಇತ್ಯಾದಿ—ಏಕೆ?' ಯಾರಿಗೆ ತಮಗೇ ವೈಭವದ ಮೇಲೆ ಪ್ರೀತಿ ಇದೆಯೊ, ಅವರು ಮಾತ್ರವೇ ಭಗವಂತನ ವೈಭವವನ್ನು ವರ್ಣಿಸಲು ಪ್ರೀತಿಸುತ್ತಾರೆ.

"ಒಮ್ಮೆ ಒಬ್ಬ ಕಳ್ಳ ರಾಧಾಕಾಂತದೇವಾಲಯಕ್ಕೆ ನುಗ್ಗಿ ದೇವರ ಆಭರಣಗಳನ್ನು ಕದ್ದುಕೊಂಡುಹೋಗಿಬಿಟ್ಟ. ಮಥುರಬಾಬು ದೇವಾಲಯಕ್ಕೆ ಹೋಗಿ ದೇವರಿಗೆ ಹೇಳಿದ: 'ಛೇ! ನೀನು ಎಂಥ ದೇವರು! ನೀನು ನಿನ್ನ ಒಡವೆಯನ್ನು ರಕ್ಷಿಸಿಕೊಳ್ಳಲಾರದೆ ಹೋದೆಯಲ್ಲ?' ನಾನು ಮಥುರಬಾಬುವಿಗೆ ಹೇಳಿದೆ: 'ನಿನ್ನದು ಎಂಥಾ ಬುದ್ಧಿ! ಸಾಕ್ಷಾತ್ ಲಕ್ಷ್ಮಿಯನ್ನೇ ದಾಸಿಯನ್ನಾಗಿ ಮಾಡಿಕೊಂಡು ಆಕೆಯಿಂದ ಪಾದಸೇವೆ ಕೈಕೊಳ್ಳುತ್ತಿರುವ ಶ್ರೀಮನ್ನಾರಾಯಣನಿಗೆ ಐಶ್ವರ್ಯದ ಅಭಾವವಿರುವುದೇ? ಆ ಒಡವೆ ನಿನಗೇನೊ ಬಹಳ ಬೆಲೆಯುಳ್ಳ ವಸ್ತು ಆಗಿರಬಹುದು, ಆದರೆ ಭಗವಂತನಿಗೆ ಅವೆಲ್ಲಾ ಕೆಲವು ಮಣ್ಣಿನ ಹೆಂಟೆ ಮಾತ್ರ. ಛೇ! ನೀನು ಇಂಥ ಬುದ್ಧಿಯಿಲ್ಲದ ಮಾತನ್ನು ಎಂದಿಗೂ ಆಡಬಾರದಾಗಿತ್ತು. ನೀನು ಭಗವಂತನಿಗೆ ಏನು ಐಶ್ವರ್ಯಗಳನ್ನು ತಾನೆ ಕೊಡಬಲ್ಲೆ?'

"ಆದಕ್ಕಾಗೇ ನಾನು ಹೇಳುವುದು, ಯಾರಿಗೆ ಯಾರಿಂದ ಆನಂದ ದೊರೆಯುವುದೊ ಅವರು ಅವರಿಗಾಗೇ ಅಪೇಕ್ಷಿಪಡುತ್ತಾರೆ. ಆ ವ್ಯಕ್ತಿಯ ಮನೆ ಎಲ್ಲಿದೆ, ಅವರಿಗೆಷ್ಟು ಮನೆಗಳಿವೆ, ಎಷ್ಟು ತೋಟತುಡಿಕೆಗಳಿವೆ, ಆಳುಕಾಳು ಎಷ್ಟು ಜನ ಇದಾರೆ, ದಾಸಿ-ಗೀಸಿಯರು ಎಷ್ಟುಮಂದಿ

ಇವುಗಳ ಸುದ್ದಿ ಸಮಾಚಾರಗಳಿಂದ ಅವರಿಗೇನು ಪ್ರಯೋಜನ? ನರೇಂದ್ರ ಕಣ್ಣಿಗೆ ಬಿದ್ದ ಎಂದರೆ, ಎಲ್ಲವೂ ಮರೆತೇಹೋಗಿಬಿಡುತ್ತವೆ. ಆತನ ಮನೆ ಎಲ್ಲಿದೆ, ಆತನ ತಂದೆಗೆ ಏನು ಕೆಲಸ, ಆತನಿಗೆ ಎಷ್ಟು ಜನ ಸಹೋದರರಿದಾರೆ, ಇವೇ ಮೊದಲಾದ ಪ್ರಶ್ನೆಯನ್ನು ಮರೆತೂ ನಾನು ಅವನಿಗೆ ಇದುವರೆಗೆ ಒಂದು ದಿನವೂ ಹಾಕಿಲ್ಲ.

"ಭಗವಂತನ ಮಾಧುರ್ಯರಸದಲ್ಲಿ ಮುಳುಗಿಹೋಗಿಬಿಡು. ಆತನ ಅನಂತ ಸೃಷ್ಟಿಯು, ಆತನ ಅನಂತ ಐಶ್ವರ್ಯದ ಸುದ್ದಿ ಸಮಾಚಾರ ನಮಗೇಕೆ?"

ಪರಮಹಂಸರು ಹಾಡುತ್ತಿದಾರೆ:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ
ಮುಳುಗು ಮುಳುಗು ಒಳಗೇ . . . . (ಉ. ೬೭)

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: "ಹೌದು ನಿಜ, ಭಗವಂತನ ದರ್ಶನ ದೊರೆತ ಮೇಲೆ ಭಕ್ತನಿಗೆ ಇಚ್ಛೆಯಾಗುತ್ತೆ ಆತನ ಲೀಲೆ ನೋಡೋಣ ಅಂತ. ರಾವಣನನ್ನು ವಧಿಸಿದನಂತರ ಶ್ರೀರಾಮಚಂದ್ರ ಲಂಕಾಪುರಿಯನ್ನು ಪ್ರವೇಶಮಾಡಿದ. ವೃದ್ಧೆಯಾದ ರಾವಣನ ತಾಯಿ ನಿಕಷೆ ಪ್ರಾಣರಕ್ಷಣೆಗಾಗಿ ಸುಮ್ಮನೆ ಓಡಲಾರಂಭಿಸಿದಳು. ಲಕ್ಷ್ಮಣ ರಾಮನನ್ನು ಕೇಳಿದ: 'ರಾಮ, ಇದೇನಾಶ್ಚರ್ಯ! ಈ ನಿಕಷೆ ಇಷ್ಟೊಂದು ವೃದ್ಧೆಯಾಗಿದಾಳೆ, ಇಷ್ಟೊಂದು ಪುತ್ರಶೋಕ ಪಡೆದಿದಾಳೆ, ಆದರೂ ಪ್ರಾಣಭಯದಿಂದ ಓಡಿಹೋಗುತ್ತಾ ಇದಾಳಲ್ಲ, ಏನಾಶ್ಚರ್ಯ!' ಶ್ರೀರಾಮಚಂದ್ರ ನಿಕಷೆಗೆ ಅಭಯದಾನವಿತ್ತು, ಹತ್ತಿರಕ್ಕೆ ಕರಸಿಕೊಂಡು ಆಕೆ ಓಡಿಹೋಗುತ್ತಿದ್ದುದಕ್ಕೆ ಕಾರಣ ಕೇಳಲಾಗಿ, ಆಕೆ ಹೇಳಿದಳು: 'ಹೇ ರಾಮ, ನಾನು ಇಲ್ಲಿಯವರೆಗೆ ಬದುಕಿಕೊಂಡಿದ್ದುದರಿಂದ ಇದುವರೆಗೆ ನಿನ್ನ ಅನೇಕ ಲೀಲೆಗಳನ್ನು ನೋಡಿದೇನೆ. ನೀನು ಇನ್ನೂ ಮಾಡಬಹುದಾದ ಲೀಲೆಗಳನ್ನು ನೋಡಲು ಇನ್ನೂ ಹೆಚ್ಚು ಕಾಲ ಬದುಕಿರಬೇಕು ಎಂಬುದಾಗಿ ಇಚ್ಛೆಯಾಗುತ್ತಿದೆ.' (ಎಲ್ಲರೂ ನಗುತ್ತಿದಾರೆ.)

(ಶಿವನಾಥನಿಗೆ) "ನಿಮ್ಮನ್ನು ನೋಡಲು ನನಗೆ ಇಚ್ಛೆಯಾಗುತ್ತಿದೆ. ಶುದ್ಧಾತ್ಮರನ್ನು ನೋಡದೆ ಮಾಡದೆ ನಾನು ಹೇಗೆ ತಾನೆ ಬದುಕಿಕೊಂಡಿರಲಿ? ಅವರು ಪೂರ್ವಜನ್ಮದ ನನ್ನ ಬಂಧುಗಳಾಗಿ ಕಾಣಬರುತ್ತಾರೆ."

ಒಬ್ಬ ಬ್ರಾಹ್ಮಭಕ್ತ: "ಮಹಾಶಯರೆ, ನಿಮಗೆ ಜನ್ಮಾಂತರದಲ್ಲಿ ನಂಬಿಕೆ ಇದೆಯೆ?"

ಶ್ರೀರಾಮಕೃಷ್ಣರು: "ಹೌದು, ಜನ್ಮಾಂತರ ಇದೆ ಅಂತ ಕೇಳಿದೇನೆ. ಭಗವಂತನ ಕಾರ್ಯ ಏನು ಎಂಬುದನ್ನು ನಮ್ಮ ಈ ಅಲ್ಪ ಬುದ್ಧಿಯಿಂದ ಅರಿಯೋ ಬಗೆ ಹೇಗೆ? ಜನ್ಮಾಂತರದ ಸಂಬಂಧವಾಗಿ ಅನೇಕರು ಹೇಳಿದಾರೆ; ಆದ್ದರಿಂದ ಅದರಲ್ಲಿ ನಂಬಿಕೆ ಇಡದೆ ಇರಲಾಗುವುದಿಲ್ಲ. ಭೀಷ್ಮ ಶರಶಯ್ಯೆಯಲ್ಲಿ ಮಲಗಿ ಸಾಯುವುದರಲ್ಲಿದ್ದಾಗ ಪಾಂಡವರು ಶ್ರೀಕೃಷ್ಣನೊಡನೆ ಆತನ ಸುತ್ತಲೂ ನಿಂತುಕೊಂಡಿದ್ದರು. ಆ ಮಹಾವೀರನ ಕಣ್ಣಿಂದ ನೀರು ತೊಟ್ಟಕ್ಕುತ್ತಿರುವುದು ಅವರ ಕಣ್ಣಿಗೆ ಬಿತ್ತು. ಅರ್ಜುನ ಶ್ರೀಕೃಷ್ಣನಿಗೆ ಹೇಳಿದ: 'ಸೋದರ, ಏನಾಶ್ಚರ್ಯ ಇದು! ಸತ್ಯವಾದಿ, ಜಿತೇಂದ್ರಿಯ, ಜ್ಞಾನಿ ಇವೆಲ್ಲಾ ಆದ ಅಷ್ಟವಸುಗಳಲ್ಲಿ ಒಬ್ಬನಾದ ನಮ್ಮ ಈ ಪಿತಾಮಹ ಭೀಷ್ಮದೇವನೂ ಮಾಯೆಯ ದೆಸೆಯಿಂದ ಈಗ ದೇಹತ್ಯಾಗವಾಗುವ ಸಮಯದಲ್ಲಿ ಅಳುತ್ತಾ ಇದಾನಲ್ಲ!' ಶ್ರೀಕೃಷ್ಣ ಭೀಷ್ಮನಿಗೆ ಇದನ್ನು ತಿಳಿಸಲಾಗಿ ಆತ ಉತ್ತರವಿತ್ತ: 'ಓ ಕೃಷ್ಣ, ನಿನಗೆ ಚೆನ್ನಾಗಿ ಗೊತ್ತಿದೆ ನಾನು ಅದಕ್ಕಾಗಿ ಅಳುತ್ತಿಲ್ಲ ಎಂಬುದು. ಸಾಕ್ಷಾತ್ ಭಗವಂತನೇ ಪಾಂಡವರ ಸಾರಥಿಯಾಗಿದ್ದರೂ ಅವರ ದುಃಖಕ್ಕೂ ವಿಪತ್ತಿಗೂ ಕೊನೆಯೇ ಇಲ್ಲದೆ ಇದೆಯಲ್ಲ ಎಂಬ ಭಾವನೆ ಬಂದು ಭಗವಂತನ ಕಾರ್ಯ ಎಳ್ಳಷ್ಟೂ ನನಗೆ ಅರ್ಥವಾಗುತ್ತಿಲ್ಲವಲ್ಲ ಎಂಬುದಾಗಿ ಭಾವಿಸಿ ಅಳುತ್ತಿದೇನೆ.'"

ಈಗ ಸಮಾಜಗೃಹದಲ್ಲಿ ಸಾಯಂ ಉಪಾಸನೆ ಆರಂಭವಾಯಿತು. ಸಮಯ ಎಂಟೂವರೆ. ಸ್ವಲ್ಪ ಹೊತ್ತಿನಲ್ಲೆ ಚಂದ್ರೋದಯವಾಯಿತು. ಉದ್ಯಾನವನದ ವೃಕ್ಷಲತಾಪಲ್ಲವಗಳು ಶರಚ್ಚಂದ್ರನ ವಿಮಲ ಕಿರಣಗಳಿಂದ ಬೆಳಗಲಾರಂಭಿಸಿದುವು. ಉಪಾಸನೆ ಮುಗಿದನಂತರ ಸಂಕೀರ್ತನೆ ಆರಂಭವಾಗಿಬಿಟ್ಟಿತು. ಪರಮಹಂಸರು ಭಗವತ್ಪ್ರೇಮದಿಂದ ಮತ್ತರಾಗಿ ನರ್ತಿಸುತ್ತಿದಾರೆ. ಬ್ರಾಹ್ಮಭಕ್ತರು ತಾಳ ಮೃದಂಗಗಳೊಡನೆ ಅವರನ್ನು ಸುತ್ತುಗಟ್ಟಿ ಸುತ್ತುಗಟ್ಟಿ ನರ್ತಿಸುತ್ತಿದಾರೆ. ಭಗವಂತನ ಸಾಕ್ಷಾತ್ಕಾರ ದೊರೆತುಬಿಟ್ಟಿದೆಯೊ ಏನೊ ಎಂಬಂತೆ ಎಲ್ಲರೂ ಭಾವದಿಂದ ಮತ್ತರಾಗಿಬಿಟ್ಟದಾರೆ. ಭಗವನ್ನಾಮದ ಧ್ವನಿ ಆ ಸ್ಥಳದಲ್ಲೆಲ್ಲಾ ಸುಮ್ಮನೆ ಪ್ರತಿಧ್ವನಿತವಾಗುತ್ತಿದೆ.

ಕೀರ್ತನೆ ಮುಗಿದನಂತರ ಪರಮಹಂಸರು ಜಗನ್ಮಾತೆಗೆ ಮತ್ತೆ ಮತ್ತೆ ಸಾಷ್ಟಾಂಗಪ್ರಣಾಮ ಮಾಡುತ್ತ ಹೇಳುತ್ತಿದಾರೆ: "ಭಾಗವತ—ಭಕ್ತ—ಭಗವಾನ್! ಜ್ಞಾನಿಗಳ ಚರಣಗಳಿಗೆ ಪ್ರಣಾಮ! ಭಕ್ತರ ಚರಣಗಳಿಗೆ ಪ್ರಣಾಮ! ಸಾಕಾರವಾದಿ ಭಕ್ತರ, ನಿರಾಕಾರವಾದಿ ಭಕ್ತರ ಚರಣಗಳಿಗೆ ಪ್ರಣಾಮ! ಹಿಂದಿನ ಕಾಲದ ಬ್ರಹ್ಮಜ್ಞಾನಿಗಳ ಚರಣಗಳಿಗೂ, ಬ್ರಾಹ್ಮ-ಸಮಾಜದ ಈಗಿನ ಕಾಲದ ಬ್ರಹ್ಮಜ್ಞಾನಿಗಳ ಚರಣಗಳಿಗೂ ಪ್ರಣಾಮ!"

ವೇಣೀಮಾಧವ ಅನೇಕ ವಿಧದ ಭಕ್ಷ್ಯಭೋಜ್ಯಗಳನ್ನು ಮಾಡಿಸಿ ಭಕ್ತರೆಲ್ಲರಿಗೂ ಊಟಕ್ಕೆ ಬಡಿಸಿದ. ಪರಮಹಂಸರು ಭಕ್ತರೊಡನೆ ಕುಳಿತು ಆನಂದದಿಂದ ಪ್ರಸಾದ ಸ್ವೀಕರಿಸುತ್ತಿದಾರೆ.

೧೫ ನೆ ನೊವೆಂಬರ್ ೧೮೮೨, ಕಾರ್ತಿಕ ಶುಕ್ಲ ಪಂಚಮಿ, ಬುಧವಾರ.

ಪರಮಹಂಸರು ರಾಖಾಲನೇ ಮೊದಲಾದ ಒಬ್ಬಿಬ್ಬರು ಭಕ್ತರೊಡನೆ ಮಾಸ್ಟರನ್ನೂ ವಿಲ್‌ಸನ್ ಸರ್ಕಸ್ಸಿಗೆ ಕರೆದುಕೊಂಡುಹೋಗಲು ವಿದ್ಯಾಸಾಗರನ ಶಾಲೆಯ ಹತ್ತಿರಕ್ಕೆ ಗಾಡಿಯಲ್ಲಿ ಬಂದರು. ಈಗ ಎಲ್ಲರೂ ಮೈದಾನದ ಕಡೆ ತೆರಳುತ್ತಿದಾರೆ. ಗಾಡಿ ಜನಸಂದಣಿಯಿಂದ ಕೂಡಿದ ಚಿತ್ಪುರ ರಸ್ತೆಯ ಮಾರ್ಗವಾಗಿ ಹೋಗಲಾರಂಭಿಸಿತು. ಪರಮಹಂಸರ ಆನಂದಕ್ಕೆ ಪಾರವೇ ಇಲ್ಲದುದಾಗಿ ಚಿಕ್ಕ ಮಕ್ಕಳ ಹಾಗೆ ಗಾಡಿಯ ಈ ಕಡೆಯ ಕಿಟಕಿಯಿಂದ ಒಮ್ಮೆ ಆ ಕಡೆಯ ಕಿಟಕಿಯಿಂದ ಒಮ್ಮೆ ಹೀಗೆ ಹೊರಕ್ಕೆ ಬಗ್ಗಿ ಬಗ್ಗಿ ನೋಡುತ್ತ ರಸ್ತೆಯ ಜನರನ್ನು ಸಂಬೋಧಿಸುತ್ತಿರುವರೊ ಏನೊ ಎಂಬಂತೆ ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: "ಹೊಟ್ಟೆ ಪಾಡಿಗಾಗಿ ಎಲ್ಲರೂ ಹೋಗುತ್ತಿದಾರೆ. ಭಗವಂತನ ಕಡೆಗೆ ದೃಷ್ಟಿಯನ್ನೇ ಇಟ್ಟಿಲ್ಲ."

ಗಾಡಿ ಸರ್ಕಸ್ಸಿನ ಹತ್ತಿರಕ್ಕೆ ಬಂದಿತು. ಭಕ್ತರು ಸುಲಭ ಬೆಲೆಯ ಟಿಕೆಟ್ಟುಗಳನ್ನು ಕೊಂಡುಕೊಂಡು ಪರಮಹಂಸರನ್ನು ಒಂದು ಎತ್ತರವಾದ ಜಾಗದಲ್ಲಿ ಕೂರಿಸಿ ತಾವೂ ಒಂದು ಬೆಂಚಿನ ಮೇಲೆ ಕುಳಿತುಕೊಂಡರು. ಪರಮಹಂಸರು ಆನಂದದಿಂದ ಹೇಳುತ್ತಿದಾರೆ: "ಭೇಷ್! ಇಲ್ಲಿಂದ ಬಹಳ ಚೆನ್ನಾಗಿ ಕಾಣುತ್ತೆ." ರಂಗಭೂಮಿಯಲ್ಲಿ ಅನೇಕ ವಿಧದ ಸಾಹಸ ಕಾರ್ಯ ನಡೆಯಲಾರಂಭಿಸಿದುವು. ಒಂದು ಕುದುರೆ ಒಂದು ಗುಂಡಾದ ಮಾರ್ಗದಲ್ಲಿ ಓಡಲಾರಂಭಿಸಿತು. ಅದರ ಮೇಲೆ ಒಬ್ಬ ಆಂಗ್ಲ ಮಹಿಳೆ ಒಂಟಿ ಕಾಲಿನಲ್ಲಿ ನಿಂತುಕೊಂಡಿದ್ದಳು. ಆಕೆಯ ಮುಂದೆ ಮಧ್ಯೆ ಮಧ್ಯೆ ಆ ದಾರಿಯ ಮೇಲೆ ಕಬ್ಬಿಣದ ಭಾರಿ ಭಾರಿ ಉಂಗುರಗಳನ್ನು ನೇತು

ಹಾಕಿದ್ದರು. ಕುದುರೆ ಪ್ರತಿಯೊಂದು ಉಂಗುರದ ಕೆಳಗೆ ಹೋದಾಗಲೆಲ್ಲಾ ಆ ಮಹಿಳೆ ಕುದುರೆಯಿಂದ ನೆಗೆದು ಆ ಉಂಗುರದ ಮೂಲಕ ಹಾದು ಮತ್ತೆ ಒಂಟಿ ಕಾಲಿನಲ್ಲೇ ಆ ಕುದುರೆಯ ಬೆನ್ನ ಮೇಲಕ್ಕೆ ಇಳಿದು ಮುಂದು ಮುಂದುವರಿಯುತ್ತಿದ್ದಳು. ಕುದುರೆ ಆ ಗುಂಡಾದ ಮಾರ್ಗದಲ್ಲಿ ಮತ್ತೆ ಮತ್ತೆ ಸುತ್ತುತ್ತಲೇ ಇತ್ತು; ಆ ಮಹಿಳೆ ಕೂಡ ಎಲ್ಲೂ ತಪ್ಪದೆ ಆ ಕುದುರೆಯ ಮೇಲೆ ಸಕಾಲಕ್ಕೆ ಆ ಉಂಗುರಗಳ ಮೂಲಕ ಹಾದು ಹಾದು ಇಳಿದು ಇಳಿದು ಮುಂದುವರಿಯುತ್ತಲೇ ಇದ್ದಳು.

ಸರ್ಕಸ್ಸು ಮುಗಿಯಿತು. ಪರಮಹಂಸರು ಮತ್ತು ಭಕ್ತರು ಗಾಡಿಯ ಹತ್ತಿರಕ್ಕೆ ಬಂದರು. ಚಳಿ ಶುರುವಾಗಿದೆ. ಹಸುರು ಶಾಲು ಹೊದ್ದು ಕೊಂಡು ಪರಮಹಂಸರು ಭಕ್ತರೊಡನೆ ಮಾತುಕತೆಯಾಡುತ್ತ ಮೈದಾನ ದಲ್ಲಿ ನಿಂತುಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳುತ್ತಿದಾರೆ: "ನೋಡಿದೆಯೋ ಹೇಗೆ ಆ ಕುದುರೆ ಮಿಂಚಿನ ವೇಗದಲ್ಲಿ ಓಡುತ್ತಿದ್ದರೂ ಆ ಮಹಿಳೆ ಒಂಟಿ ಕಾಲಿನಲ್ಲಿ ಅದರ ಮೇಲೆ ನಿಂತುಕೊಂಡಿರುತ್ತಿದ್ದಳು? ಅದು ಎಂಥ ಕಷ್ಟ ವಾದ ಸಾಹಸಕಾರ್ಯ! ಆಕೆ ಬಹಳ ಕಾಲ ಅಭ್ಯಾಸಮಾಡಿರಬೇಕು. ಒಂದು ಸ್ವಲ್ಪವೇನಾದರೂ ಅಜಾಗರೂಕಳಾದಳು ಎಂದರೆ, ಕೈಕಾಲು ಮುರಿದುಕೊಳ್ಳುವ ಸಂಭವ; ಪ್ರಾಣವೂ ಹೋಗುವ ಸಂಭವ. ಸಂಸಾರಿಯ ಜೀವನವೂ ಇದೇ ರೀತಿಯಾಗಿ ಕಠಿನವಾದ್ದು. ಎಲ್ಲೋ ಕೆಲವರು ಮಾತ್ರ ಭಗವಂತನ ಕೃಪೆಯಿಂದ ಮತ್ತು ತಮ್ಮ ತೀವ್ರ ಸಾಧನೆ ಭಜನೆಯ ಬಲ ದಿಂದ ಅದರಲ್ಲಿ ಜಯಶೀಲರಾಗುತ್ತಾರೆ. ಆದರೆ ಅಧಿಕಾಂಶ ಜನರಿಗೆ ಇದು ಸಾಧ್ಯವಿಲ್ಲ. ಸಂಸಾರಕ್ಕೆ ಕಾಲಿಟ್ಟು ಇನ್ನೂ ಅಧಿಕವಾಗಿ ಬಂಧನಕ್ಕೆ ಒಳಗಾಗಿಬಿಡುತ್ತಾರೆ; ಇನ್ನೂ ಆಳಕ್ಕೆ ಮುಳುಗಿಹೋಗಿಬಿಡುತ್ತಾರೆ; ಬಹಳ ಕಷ್ಟಕ್ಕೆ ತುತ್ತಾಗುತ್ತಾರೆ. ಎಲ್ಲೋ ಕೆಲವರು, ಉದಾಹರಣೆಗೆ ಜನಕನೇ ಮೊದಲಾದವರು ತಮ್ಮ ಮಹಾ ತಪಸ್ಸಿನ ಬಲದಿಂದ ಸಂಸಾರ ಜೀವನದಲ್ಲಿ ಜಯಶೀಲರಾದರು. ಆದ್ದರಿಂದ ಸಾಧನೆ ಭಜನೆ ಅತ್ಯಂತ ಆವಶ್ಯಕ; ಇಲ್ಲದಿದ್ದರೆ ಸಂಸಾರದಲ್ಲಿ ಸರಿಯಾಗಿ ಇರಲಾಗೋದಿಲ್ಲ."

ಶ್ರೀರಾಮಕೃಷ್ಣರು ಭಕ್ತರೊಡನೆ ಗಾಡಿಯನ್ನು ಹತ್ತಿ ಬಲರಾಮ ವಸುವಿನ ಮನೆಗೆ ಬಂದರು. ಆ ಮನೆಯವರು ಅವರೆಲ್ಲರನ್ನೂ ಎರಡನೆ ಅಂತಸ್ತಿಗೆ ಕರೆದುಕೊಂಡುಹೋದರು. ಸಾಯಂಕಾಲವಾಗಿದೆ, ದೀಪ

ಹಚ್ಚಿದಾರೆ. ಪರಮಹಂಸರು ತಾವು ಸರ್ಕಸ್ಸಿನಲ್ಲಿ ನೋಡಿದ ಸಾಹಸ ಕಾರ್ಯಗಳನ್ನೆಲ್ಲಾ ಆ ಮನೆಯವರಿಗೆ ವರ್ಣಿಸಲು ಆರಂಭಿಸಿದರು. ಕ್ರಮೇಣ ಅನೇಕ ಭಕ್ತರು ಅಲ್ಲಿಗೆ ಬಂದು ಸೇರಿಬಿಟ್ಟರು. ಅವರೊಡನೆಯೆಲ್ಲಾ ಈಗ ಭಗವತ್ಸಂಬಂಧವಾಗಿ ಮಾತುಕತೆ ಆಡಲು ಆರಂಭಿಸಿದಾರೆ.

ಹಾಗೇ ಮಾತು ಜಾತಿಭೇದದ ಸಂಬಂಧವಾಗಿ ಆರಂಭವಾಯಿತು. ಪರಮಹಂಸರು ಹೇಳುತ್ತಿದಾರೆ: "ಜಾತಿಭೇದವನ್ನು ಒಂದು ವಿಧದಿಂದ ತೆಗೆದುಹಾಕಿಬಿಡಬಹುದು. ಆ ಮಾರ್ಗವೇ ಭಕ್ತಿ. ಭಕ್ತರಿಗೆ ಜಾತಿ ಎಂಬುದೇ ಇಲ್ಲ. ಭಕ್ತಿ ದೊರೆಯಿತು ಎಂದರೆ, ದೇಹ, ಮನಸ್ಸು, ಆತ್ಮ ಎಲ್ಲಾ ಶುದ್ಧವಾಗಿಬಿಡುತ್ತವೆ. ಗೌರಾಂಗ ಮತ್ತು ನಿತಾಯಿ ಆಚಂಡಾ-ಲಾದಿಯಾಗಿ ಎಲ್ಲರಿಗೂ ಭಗವನ್ನಾಮವನ್ನು ಕೊಡಲಾರಂಭಿಸಿದರು. ಹೃದಯದಲ್ಲಿ ಭಕ್ತಿ ಇಲ್ಲದೆ ಇತ್ತು ಎಂದರೆ, ಬ್ರಾಹ್ಮಣ ಬ್ರಾಹ್ಮಣನಲ್ಲ. ಹೃದಯದಲ್ಲಿ ಅದು ಇತ್ತು ಎಂದರೆ ಚಂಡಾಲ ಚಂಡಾಲನಲ್ಲ. ಭಕ್ತಿಯೊಂದಿತ್ತು ಎಂದರೆ ಅಸ್ಪೃಶ್ಯ ಜಾತಿಯೂ ಶುದ್ಧ, ಪವಿತ್ರ ಆಗಿಬಿಡುತ್ತದೆ."

ಶ್ರೀರಾಮಕೃಷ್ಣರು ಸಂಸಾರದಲ್ಲಿ ಬದ್ಧರಾಗಿರುವ ಜೀವಿಗಳ ಮಾತೆತ್ತಿ ಹೇಳುತ್ತಿದಾರೆ: "ಅವರನ್ನು ರೇಷ್ಮೆಹುಳುವಿಗೆ ಹೋಲಿಸಬಹುದು. ಅದು ಇಚ್ಛೆ ಪಟ್ಟರೆ ತನ್ನ ಗೂಡನ್ನು ಕತ್ತರಿಸಿ ಹೊರಕ್ಕೆ ಬರಬಲ್ಲದು. ಆದರೆ ಬಹಳ ಪ್ರಯಾಸಪಟ್ಟು ತಾನೇ ಗೂಡನ್ನು ಕಟ್ಟಿರುವುದರಿಂದ ಅದು ಹಾಗೆ ಮಾಡಲಿಚ್ಛಿಸದು, ಅದು ಅಲ್ಲೇ ಸಾಯುತ್ತದೆ. ಮತ್ತೆ ಅವರನ್ನು ಬೋನಿಗೆ ನುಗ್ಗಿದ ಮೀನಿಗೆ ಹೋಲಿಸಬಹುದು. ಅದು ಬೋನಿನೊಳಕ್ಕೆ ಹೋದ ದಾರಿಯಲ್ಲೇ ಹಿಂದಿರುಗಿ ಬರಲು ಅವಕಾಶವಿದೆ. ಆದರೆ 'ಕಲ ಕಲ' ಎಂಬ ನೀರಿನ ಮಧುರ ಶಬ್ದ ಕೇಳುತ್ತ ಉಳಿದ ಮೀನುಗಳೊಡನೆ ಕ್ರೀಡಿಸುವುದರಲ್ಲೇ ಎಲ್ಲವನ್ನೂ ಮರೆತುಬಿಡುತ್ತದೆ. ಹೊರಕ್ಕೆ ಬರಲು ಪ್ರಯತ್ನವನ್ನೇ ಪಡೋದಿಲ್ಲ. ಮಕ್ಕಳು-ಮರಿಗಳ ತೊದಲು ನುಡಿಯೇ ನೀರಿನ 'ಕಲ ಕಲ' ಎಂಬ ಮಧುರ ಶಬ್ದ. ಉಳಿದ ಮೀನುಗಳೇ ಬಂಧುಬಾಂಧವರು. ಆದರೂ ಎಲ್ಲೋ ಒಂದೆರಡು ಅಲ್ಲಿಂದ ಓಡಿ ಹೊರಕ್ಕೆ ಬಂದುಬಿಡುತ್ತವೆ. ಅವೇ ಮುಕ್ತಜೀವಿಗಳು."

ಪರಮಹಂಸರು ಈಗ ಹಾಡುತ್ತಿದಾರೆ:

**ತಾಯ ಮಾಯದ ಬಲೆಯು ಹರಹಿದೆ**
**ಮೂರು ಲೋಕದ ಅಗಲಕೆ,**

ಬ್ರಹ್ಮ ವಿಷ್ಣುಗಳೆಲ್ಲ ಮೂರ್ಛಿತ-
ರಾಗಿ ಸಂದರು ಮಾಯೆಗೆ!
ಇನ್ನು ಮನುಜರ ಪಾಡು ಏನಿದೆ,
ನಮಗೆ ಎಲ್ಲಿದೆ ಬಿಡುಗಡೆ?
ಬಲೆಗೆ ಸಿಲುಕಿದ ಮೀನಿನಂದದಿ
ಮನುಜ ಕುಲವಿಲ್ಲಲೆದಿದೆ
ತನ್ನ ನೂಲೊಳು ತಾನೆ ಸಿಲುಕಿದ
ತೆರಣಿ ಹುಳುವಿನ ತೆರನಿದೆ!

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಜೀವವನ್ನು ಒಂದು ವಿಧದ ಧಾನ್ಯಕ್ಕೆ ಹೋಲಿಸಬಹುದು. ಅದನ್ನು ಬೀಸೋ ಕಲ್ಲಿಗೆ ಸುರಿದಿದೆ ಅಂತ ಇಟ್ಟುಕೊಳ್ಳಿ. ಇನ್ನೇನು ಅದು ಒಡೆದು ಚೂರ್ಣವಾಗಿ ಬಿಡುವುದರಲ್ಲಿದೆ. ಆದರೆ ಯಾವ ಕಾಳು ಗೂಟದ ಹತ್ತಿರವೇ ಇರುತ್ತವೊ ಅವು ಒಡೆದು ಚೂರ್ಣವಾಗಿಹೋಗುವುದಿಲ್ಲ. ಆದ್ದರಿಂದ ಜೀವ ಗೂಟಕ್ಕೆ ಎಂದರೆ ಭಗವಂತನಿಗೆ ಶರಣಾಗತನಾಗಬೇಕು. ಆತನನ್ನು ಕರೆ. ಆತನ ನಾಮಗುಣಕೀರ್ತನೆ ಮಾಡು. ಆಗ ಮುಕ್ತಿ. ಇಲ್ಲದಿದ್ದರೆ ಮೃತ್ಯು ಎಂಬ ಬೀಸೋ ಕಲ್ಲಿನಿಂದ ಬೀಸಲ್ಪಟ್ಟು ಒಡೆದು ಚೂರ್ಣವಾಗಿಹೋಗಿ ಬಿಡುವೆ."

ಪರಮಹಂಸರು ಮತ್ತೆ ಹಾಡುತ್ತಿದಾರೆ

ಓ ತಾಯಿ, ಓ ತಾಯಿ, ಮುಳುಗುತಿದೆ ನೌಕೆ
ಈ ಜಗದ ಕತ್ತಲಿನ ಕಡಲ ತೆರೆ ತಳಕೆ!
ಸುತ್ತಮುತ್ತಲಿನಿಂದ ಮಾಯಮೋಹದ ಗಾಳಿ
ಬೀಸಿ ದಾಳಿಯ ಮಾಡಿ ಘೋರಾಡಿದೆ!
ಮನವಿಲ್ಲಿ ಮಂಕಾಯ್ತು, ಅರಿವರ್ಗ ಬಲವಾಯ್ತು,
ಹುಟ್ಟೊಡೆದು ಪಟ ಹರಿದು ಮುರಿದುಬಿತ್ತು.
ನಿಷ್ಕರುಣ ಗಾಳಿಯಲಿ ನನ್ನ ದೋಣಿಯು ಬಂದು
ಇಂದು ಈ ಗತಿಯಲ್ಲಿ ಸಿಕ್ಕುದಾಯ್ತು!

ಇದೊ ನುಗ್ಗುತಿದೆ ನೋಡು, ದೋಣಿಯೊಳಗಡೆ ನೀರು;
ಹೇಳು ನಾನಿನ್ನೀಗ ಮಾಳ್ಪುದೇನು?

ಸೋತ ಕಣ್ಣಿನ ಸುತ್ತ ಕತ್ತಲೆಯ ಪರಿವಾರ;
ನಿನ್ನ ನಾಮವೆ ನನಗೆ ತೇಲೊಟ್ಟಲು !

ವಿಶ್ವಾಸಬಾಬು ಬಹಳ ಹೊತ್ತಿನವರೆಗೆ ಕೊಠಡಿಯಲ್ಲಿ ಕುಳಿತಿದ್ದು ಈಗ ಎದ್ದು ಹೊರಟುಹೋದ. ಆತ ಒಳ್ಳೆ ಧನಿಕನಾಗಿದ್ದ. ಆದರೆ ನೀತಿಬಾಹಿರನಾಗಿ ವರ್ತಿಸಿ ಎಲ್ಲವನ್ನೂ ಕಳೆದುಕೊಂಡುಬಿಟ್ಟಿದಾನೆ. ಈಗ ಆತ ತನ್ನ ಹೆಂಡತಿ ಮಕ್ಕಳು ಇವರ ಕಡೆ ಗಮನವನ್ನೇ ಕೊಡುತ್ತಿಲ್ಲ. ಆತನ ಮಾತೆತ್ತಿ ಪರಮಹಂಸರು ಹೇಳುತ್ತಿದಾರೆ: "ಆತನದು ದೌರ್ಭಾಗ್ಯ ನೀಚ ಜನ್ಮ. ಗೃಹಸ್ಥನಿಗೆ ಕರ್ತವ್ಯವಿದೆ; ಋಣವಿದೆ. ಆತ ದೇವ-ಋಣ, ಋಷಿ-ಋಣ ಇವನ್ನು ತೀರಿಸಬೇಕಾಗಿರುವುದಲ್ಲದೆ ಹೆಂಡತಿಯ ಋಣವನ್ನೂ ತೀರಿಸಬೇಕಾಗಿದೆ. ಹೆಂಡತಿ ಪತಿವ್ರತೆಯಾಗಿದ್ದರೆ ಗಂಡ ಆಕೆಯನ್ನು ಪಾಲಿಸಿಕೊಂಡುಬರಬೇಕು. ಮಕ್ಕಳು ವಯಸ್ಕರಾಗುವವರೆಗೆ ಅವರನ್ನು ಬೆಳಸಬೇಕು. ಕೇವಲ ಸನ್ಯಾಸಿ ಮಾತ್ರ ಸಂಚಯಮಾಡಿಡಕೂಡದು. ಹಕ್ಕಿ ಮತ್ತು ಸನ್ಯಾಸಿ ಸಂಚಯಮಾಡಿಡೋದಿಲ್ಲ. ಆದರೆ ಹಕ್ಕಿಗೆ ಮರಿಯಾದರೆ ಆಗ ಅದು ಸಂಚಯಮಾಡಿಡುತ್ತದೆ. ತನ್ನ ಮರಿಗಳಿಗಾಗಿ ಕೊಕ್ಕಿನೊಳಗೆ ಆಹಾರ ಶೇಖರಿಸಿಕೊಂಡುಬರುತ್ತದೆ."

ಬಲರಾಮ: "ಈಗ ವಿಶ್ವಾಸಬಾಬುವಿಗೆ ಸಾಧುಸಂಗ ಮಾಡಬೇಕು ಅಂತ ಇಚ್ಛೆ."

ಶ್ರೀರಾಮಕೃಷ್ಣರು ನಗುತ್ತ: "ಸನ್ಯಾಸಿಯ ಕಮಂಡಲು ಆತನೊಡನೆ ನಾಲ್ಕು ಧಾಮಗಳಿಗೂ—ಬದರಿ, ದ್ವಾರಕ, ರಾಮೇಶ್ವರ, ಪುರಿ—ಹೋಗಿಬರುತ್ತದೆ. ಆದರೆ ಹಿಂದೆ ಯಾವ ರೀತಿಯಾಗಿ ಕಹಿಯಾಗಿತ್ತೊ ಹಾಗೇ ಕಹಿಯಾಗಿ ಇರುತ್ತದೆ. ಮಲಯ ಹವಾ ತಗುಲಿದ ಗಿಡಗಳೆಲ್ಲಾ ಚಂದನ ಗಿಡಗಳಾಗಿಬಿಡುತ್ತವೆ. ಆದರೆ ಹತ್ತಿಯ ಗಿಡ, ಅಶ್ವತ್ಥವೃಕ್ಷ, ಅಮಟೆಕಾಯಿಯ ಮರ ಇವು ಮಾತ್ರ ಚಂದನ ಗಿಡಗಳಾಗಿ ಪರಿವರ್ತನೆ ಹೊಂದೋದಿಲ್ಲ.

"ಕೆಲಕೆಲವರು ಸಾಧುಸಂಗ ಮಾಡುತ್ತಾರೆ, ಗಾಂಜಾ ಕುಡಿಯೋಕೆ. (ನಗು.) ಸಾಧುಗಳು ಗಾಂಜಾ ಕುಡಿಯೋ ಅಭ್ಯಾಸ ಇಟ್ಟುಕೊಂಡಿರೋದರಿಂದ ಜನರು ಅವರ ಹತ್ತಿರಕ್ಕೆ ಬಂದು ಅವರಿಗೆ ಗಾಂಜಾ ತಯಾರುಮಾಡಿಕೊಟ್ಟು ತಾವೂ ಅವರ ಪ್ರಸಾದ ಸ್ವೀಕರಿಸುತ್ತಾರೆ." (ಎಲ್ಲರೂ ನಗುತ್ತಾರೆ.)

೧೬ ನೆ ನೊವೆಂಬರ್ ೧೮೮೩, ಕಾರ್ತಿಕ ಶುಕ್ಲ ಷಷ್ಠಿ, ಗುರುವಾರ.

ಶ್ರೀರಾಮಕೃಷ್ಣಪರಮಹಂಸರು ಇಂದಿನ ಅಪರಾಹ್ನವೇ ಕಲ್ಕತ್ತಕ್ಕೆ ಬಂದು, ಈಗ ಸಾಯಂಕಾಲ ಸಿಮೂಲಿಯದಲ್ಲಿ ವಾಸಿಸುತ್ತಿರುವ ರಾಜ ಮೋಹನನ ಮನೆಗೆ ಬಂದಿದಾರೆ. ಅವರ ಕಿವಿಗೆ ಬಿದ್ದಿತ್ತು, ನರೇಂದ್ರನೇ ಮೊದಲಾದ ಯುವಕರು ಒಟ್ಟುಗೂಡಿ ಬ್ರಾಹ್ಮಸಮಾಜದ ರೀತಿಯಾಗಿ ಇಲ್ಲಿ ಉಪಾಸನೆ ನಡೆಸುತ್ತಿದಾರೆ ಎಂಬುದು. ಅದನ್ನು ನೋಡಬೇಕು ಅಂತ ಅವರಿಗೆ ಇಚ್ಛೆ ಇತ್ತು. ಅದಕ್ಕಾಗಿ ಮಾಸ್ಟರ್ ಮೊದಲಾದ ಭಕ್ತರೊಡನೆ ಇಲ್ಲಿಗೆ ಬಂದಿದಾರೆ. ರಾಜಮೋಹನ ಹಿರಿಯ ಬ್ರಾಹ್ಮಭಕ್ತ.

ಪರಮಹಂಸರಿಗೆ ನರೇಂದ್ರನನ್ನು ಕಂಡು ಬಹಳ ಆನಂದವಾಗಿಬಿಟ್ಟಿತು. ಅವರು ಅವನಿಗೆ ಹೇಳಿದರು: "ನಿಮ್ಮ ಉಪಾಸನೆ ನೋಡಬೇಕು ಅಂತ ನನಗೆ ಇಚ್ಛೆಯಿದೆ." ನರೇಂದ್ರ ಹಾಡಲಾರಂಭಿಸಿದ. ಆ ಹುಡುಗರಲ್ಲಿ ಒಬ್ಬ ಉಪಾಸನೆ ನಡಸಲಾರಂಭಿಸಿದ. ಆತ ಪ್ರಾರ್ಥನೆ ಮಾಡುತ್ತಿದಾನೆ: "ಹೇ ಭಗವಂತ, ಎಲ್ಲವನ್ನೂ ತ್ಯಾಗಮಾಡಿ ನಿನ್ನಲ್ಲಿ ನಾವು ಮಗ್ನರಾಗುವಂತೆ ಮಾಡಿಬಿಡು." ಬಹುಶಃ ಪರಮಹಂಸರನ್ನು ನೋಡಿ ಆತನಿಗೆ ಉದ್ದೀಪನವಾಗಿರಬೇಕು. ಅದಕ್ಕಾಗೇ ಆತ ಸರ್ವತ್ಯಾಗದ ಸಂಬಂಧವಾಗಿ ಪ್ರಾರ್ಥನೆಮಾಡಿದ ಅಂತ ಕಾಣುತ್ತೆ. ಪರಮಹಂಸರು ತಮಗೆ ತಾವೇ ಮೆತ್ತಗೆ ಹೇಳಿಕೊಂಡರು: "ಬಹುಶಃ ಅವನಿಗೆ ಅದಾಗಿರಬೇಕು!"

ರಾಜಮೋಹನ ಪರಮಹಂಸರಿಗೆ ಉಪಾಹಾರ ಮಾಡಿಸಿದ.

೧೮ ನೆ ನೊವೆಂಬರ್ ೧೮೮೩, ಕಾರ್ತಿಕ ಶುಕ್ಲ ನವಮಿ, ಭಾನುವಾರ.

ಈ ದಿನ ಜಗದ್ಧಾತ್ರಿಯ ಪೂಜೆ. ಸುರೇಂದ್ರ ಪರಮಹಂಸರನ್ನು ಕಲ್ಕತ್ತದಲ್ಲಿರುವ ತನ್ನ ಮನೆಗೆ ಆಹ್ವಾನಿಸಿದಾನೆ. ಆದರೆ ಮೊದಲು ಅವರು ಮನಮೋಹನನ ಮನೆಗೆ ಬಂದಿದಾರೆ.

ಪರಮಹಂಸರು ಮನಮೋಹನನ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಅವರು ಹೇಳುತ್ತಿದಾರೆ: "ಹಸು, ಹಿಂಡಿ ತವುಡು ಹಾಕಿದ ಕಲಗಚ್ಚನ್ನು ಬಹಳವಾಗಿ ಪ್ರೀತಿಸುವಂತೆ ಭಗವಂತ ವಿನೀತರ, ದೀನರ ಭಕ್ತಿಯನ್ನು ಬಹಳವಾಗಿ ಪ್ರೀತಿಸುತ್ತಾನೆ. ದುರ್ಯೋಧನ ತನ್ನ ವಿಪುಲ ಹಣ, ಐಶ್ವರ್ಯ ಇವುಗಳ ವೈಭವವನ್ನು ಶ್ರೀಕೃಷ್ಣನ ಮುಂದೆ ಪ್ರದರ್ಶಿಸಲಾರಂಭಿಸಿದ. ಆದರೆ ಶ್ರೀಕೃಷ್ಣ ಆತನ ಆತಿಥ್ಯವನ್ನು ಸ್ವೀಕರಿಸದೆ ಬಡವ

ವಿದುರನ ಆತಿಥ್ಯವನ್ನು ಸ್ವೀಕರಿಸಿದ. ಹಸು ತನ್ನ ಕರುವಿನ ಕಡೆಗೆ ಓಡಿ ಓಡಿ ಹೋಗುವ ಹಾಗೆ ಭಗವಂತ ಭಕ್ತರ ಕಡೆಗೆ ಓಡಿ ಓಡಿ ಹೋಗುತ್ತಾನೆ.''

ಪರಮಹಂಸರು ಹಾಡುತ್ತಿದಾರೆ:

ಪರಮಯೋಗಿಗಳಿಲ್ಲ ಯುಗ ಯುಗ ತಪವ ಗೈವರು ಪ್ರೇಮಕೆ;
ಪ್ರೇಮವೆಚ್ಚರಗೊಳಲು ಎದೆಯೊಳು, ಸೂಜಿಗಲ್ಲೆಳೆವಂತೆ ಸೂಜಿಯ
ದೇವನೆಳೆವನು ಭಕ್ತರಾತ್ಮವ ತನ್ನ ಪ್ರೇಮದ ನಿಲಯಕೆ!

ಬಳಿಕ ಹೇಳುತ್ತಿದಾರೆ: ''ಶ್ರೀಕೃಷ್ಣನ ಹೆಸರು ಕಿವಿಗೆ ಬಿದ್ದೊಡನೆಯೆ ಚೈತನ್ಯದೇವನ ಕಣ್ಣುಗಳಿಂದ ಪ್ರೇಮಾಶ್ರು ಸುರಿಯುತ್ತಿತ್ತು. ಭಗವಂತನೇ ನಿಜವಾದ ವಸ್ತು; ಉಳಿದುದೆಲ್ಲಾ ಅವಸ್ತು. ಮನುಷ್ಯ ಇಚ್ಛಿಪಟ್ಟರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಲ್ಲ, ಆದರೆ ಏನುಮಾಡುವುದು ಆತ ಕಾಮಕಾಂಚನಗಳ ಭೋಗದಲ್ಲೇ ಮತ್ತನಾಗಿದಾನೆ. ಹಾವಿನ ತಲೆಯ ಮೇಲೆ ರತ್ನವಿದೆ, ಆದರೂ ಅದು ಕಪ್ಪೆಯನ್ನು ತಿಂದೇ ಸಾಯುತ್ತದೆ.

''ಭಕ್ತಿಯೇ ಸಾರವಸ್ತು. ವಿಚಾರದ ಮೂಲಕ ಯಾರು ತಾನೆ ಭಗವಂತನನ್ನು ಅರಿಯಬಲ್ಲರು? ನನಗೆ ಬೇಕಾಗಿರುವುದು ಭಕ್ತಿ. ಆತನ ಅನಂತ ಐಶ್ವರ್ಯದ ಸಂಬಂಧವಾಗಿ ಅರಿತುಕೊಳ್ಳಬೇಕಾದ ಆವಶ್ಯಕತೆ ಏನಿದೆ ನನಗೆ? ಒಂದು ಸೀಸೆ ಮದ್ಯವೇ ನನ್ನನ್ನು ಮತ್ತನನ್ನಾಗಿ ಮಾಡುವಾಗ ಇನ್ನು ಸೇಂದಿಯ ಅಂಗಡಿಯಲ್ಲಿ ಎಷ್ಟು ಸೀಪಾಯಿ ಮದ್ಯವಿದೆ ಎಂಬುದನ್ನು ಅರಿತುಕೊಳ್ಳುವುದರ ಆವಶ್ಯಕತೆ ಏನಿದೆ ನನಗೆ? ಒಂದು ತಂಬಿಗೆ ನೀರೇ ನನ್ನ ತೃಷೆಯನ್ನು ಇಂಗಿಸಿಬಿಡಬಲ್ಲದಾದ್ದರಿಂದ ಈ ಜಗತ್ತಿನಲ್ಲಿ ಒಟ್ಟು ಎಷ್ಟು ಪರಿಮಾಣ ನೀರು ಇದೆ ಎಂಬುದನ್ನು ಅರಿಯುವ ಆವಶ್ಯಕತೆಯೇನಿರದು.''

ಈಗ ಪರಮಹಂಸರು ಸುರೇಂದ್ರನ ಮನೆಗೆ ಬಂದು ಬೈಠಕ್‌ಖಾನೆಯಲ್ಲಿ ಕುಳಿತುಕೊಂಡಿದಾರೆ. ಅನೇಕ ಮಂದಿ ಭಕ್ತರು ಸುತ್ತಲೂ ಕುಳಿತುಕೊಂಡಿದಾರೆ. ಜಡ್ಜಿಯಾಗಿರುವ ಸುರೇಂದ್ರನ ಅಣ್ಣನೂ ಬಂದು ಕುಳಿತಿದಾನೆ.

ಶ್ರೀರಾಮಕೃಷ್ಣರು ಸುರೇಂದ್ರನ ಅಣ್ಣನಿಗೆ: ''ನೀವು ಒಬ್ಬ ಜಡ್ಜಿಯಾಗಿದೀರಿ. ಅದು ಬಹಳ ಒಳ್ಳೆಯದೆ. ಆದರೆ ತಿಳಿದುಕೊಂಡಿರಬೇಕು ಎಲ್ಲವೂ ಭಗವಂತನ ಶಕ್ತಿಯಿಂದ ಘಟಿಸುತ್ತದೆ ಎಂಬುದನ್ನ. ಉತ್ತಮ

ಪದವಿಯನ್ನ ಆತನೇ ಕೊಟ್ಟಿದಾನೆ; ಆದ್ದರಿಂದ ನೀವು ಜಡ್ಜಿಯಾಗಿದೀರಿ. ಜನ ಭಾವಿಸುತ್ತಾರೆ ತಾವು ಬಹಳ ದೊಡ್ಡವರು ಎಂಬುದಾಗಿ. ಚಾವಣಿಯ ನೀರು ಸಿಂಹದ ತಲೆಯಾಕಾರದ ನಳಿಕೆಯಿಂದ ಹೊರಕ್ಕೆ ಬರುತ್ತದೆ. ಕಣ್ಣಿಗೆ ಕಾಣಿಸುತ್ತದೆ ಸಿಂಹ ತನ್ನ ಬಾಯಿಂದ ನೀರನ್ನು ಹೊರಕ್ಕೆ ತರುತ್ತಿರುವಂತೆ. ಆದರೆ ನೋಡಿ ಆ ನೀರು ಎಲ್ಲಿಂದ ಬರುತ್ತೆ ಎಂಬುದನ್ನ! ಆಕಾಶ ಮೇಘ ಕಟ್ಟಿ ಚಾವಣಿಯ ಮೇಲೆ ಮಳೆ ಸುರಿಸುತ್ತದೆ; ಬಳಿಕ ನೀರು ಕೊಳವೆಯ ಮೂಲಕ ಹರಿದು ಕಟ್ಟಕಡೆಯಲ್ಲಿ ಸಿಂಹಾಕಾರದ ನಳಿಕೆಯ ಮೂಲಕ ಹೊರಕ್ಕೆ ಬರುತ್ತದೆ."

ಸುರೇಂದ್ರನ ಅಣ್ಣ: "ಬ್ರಾಹ್ಮಸಮಾಜ ಪ್ರಚಾರಮಾಡುತ್ತಿದೆ, ಹೆಂಗಸರಿಗೆ ಸ್ವಾಧೀನತೆ ಕೊಡಬೇಕು, ಜಾತಿಭೇದವನ್ನು ನಿರ್ಮೂಲಮಾಡಬೇಕು ಎಂಬುದಾಗಿ. ಇವುಗಳ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು?"

ಶ್ರೀರಾಮಕೃಷ್ಣರು: "ಭಗವಂತನಲ್ಲಿ ಹೊಸದಾಗಿ ಜನರಿಗೆ ಅನುರಾಗ ಉಂಟಾಗಿದ್ದರೆ ಹಾಗನಿಸುತ್ತದೆ. ಬಿರುಗಾಳಿ ಬಂತು ಎಂದರೆ ದೂಳು ಏಳುತ್ತದೆ. ಆಗ ಅಮಟೆಕಾಯಿಯ ಮರ ಯಾವುದು, ಹುಣಿಸೆ ಮರ ಯಾವುದು, ಮಾವಿನ ಮರ ಯಾವುದು ಎಂಬುದನ್ನು ಪ್ರತ್ಯೇಕಿಸಲಾಗೋದಿಲ್ಲ. ಆದರೆ ಬಿರುಗಾಳಿ ನಿಂತುಹೋದನಂತರ ಎಲ್ಲವೂ ಸ್ಪಷ್ಟವಾಗಿ ತೋರಿಬರುತ್ತವೆ. ನವಾನುರಾಗದ ಬಿರುಗಾಳಿ ನಿಂತುಹೋದನಂತರ ಕ್ರಮೇಣ ಅರ್ಥವಾಗುತ್ತದೆ ನಿಜವಾಗಿ ಭಗವಂತನೇ ಶ್ರೇಯಸ್ಕರ ನಿತ್ಯವಸ್ತು ಉಳಿದುದೆಲ್ಲಾ ಅವಸ್ತು ಎಂಬುದಾಗಿ. ಸಾಧುಸಂಗ ತಪಸ್ಸು ಇವನ್ನು ಮಾಡದಿದ್ದರೆ ಇದನ್ನು ಗ್ರಹಿಸಲಾಗುವುದಿಲ್ಲ. ಮೃದಂಗದ ಶಬ್ದವನ್ನು ಕೇವಲ ಬಾಯಿಂದ ಮಾತ್ರ ಹೊರಡಿಸಿದರೆ ಏನು ಪ್ರಯೋಜನ? ಅದನ್ನು ಮೃದಂಗದ ಮೂಲಕ ಹೊರಡಿಸುವುದು ಬಹಳ ಕಠಿನ. ಕೇವಲ ಲೆಕ್ಚರ್‌ನಿಂದಲೇ ಏನು ಪ್ರಯೋಜನವಾದೀತು? ತಪಸ್ಸುಮಾಡಬೇಕು. ಆಗ ಗ್ರಹಿಸಲು ಸಾಧ್ಯವಾಗುತ್ತದೆ.

"ಜಾತಿಭೇದದ ವಿಷಯವಾಗಿ ಕೇಳಿದೆಯಲ್ಲವೆ? ಅದನ್ನು ನಿರ್ಮೂಲ ಮಾಡಲು ಇರುವುದು ಒಂದೇ ಒಂದು ಮಾರ್ಗ. ಅದೇ ಭಕ್ತಿಮಾರ್ಗ. ಭಕ್ತರಿಗೆ ಜಾತಿ ಎಂಬುದೇ ಇಲ್ಲ. ಹೃದಯದಲ್ಲಿ ಭಕ್ತಿ ಅಂಕುರವಾಗಿ ಬಿಟ್ಟಿತು ಎಂದರೆ ಅಸ್ಪೃಶ್ಯ ಶುದ್ಧನಾಗಿಬಿಡುತ್ತಾನೆ—ಚಂಡಾಲ,

ಚಂಡಾಲನಾಗಿ ಉಳಿದುಕೊಳ್ಳುವುದಿಲ್ಲ. ಶ್ರೀ ಚೈತನ್ಯದೇವ ಆಚಂಡಾಲಾದಿಯಾಗಿ ಎಲ್ಲರನ್ನೂ ಆಲಿಂಗನಮಾಡಿಕೊಂಡ.

"ಬ್ರಾಹ್ಮಸಮಾಜದ ಅನುಯಾಯಿಗಳು ಭಗವನ್ನಾಮಸಂಕೀರ್ತನೆ ಮಾಡುತ್ತಾರೆ. ಅದು ಬಹಳ ಒಳ್ಳೆಯದು. ವ್ಯಾಕುಲರಾಗಿ ಕರೆದರೆ ಭಗವಂತನ ಕೃಪೆ ದೊರೆಯುತ್ತೆ, ಆತನ ಸಾಕ್ಷಾತ್ಕಾರ ದೊರೆತುಬಿಡುತ್ತೆ. ಎಲ್ಲಾ ಮಾರ್ಗಗಳಿಂದಲೂ ಆತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಒಬ್ಬನೇ ಭಗವಂತನನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ, ಅಷ್ಟೆ."

ಸುರೇಂದ್ರನ ಅಣ್ಣ: "ತಿಯಾಸೊಫಿ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು?"

ಶ್ರೀರಾಮಕೃಷ್ಣರು: "ಅದು ಅಲೌಕಿಕ ಶಕ್ತಿಯನ್ನು ದೊರಕಿಸಿಕೊಡುತ್ತದೆ ಅಂತ ಕೇಳಿದೇನೆ. ಒಂದು ಮನೆಯಲ್ಲಿ ಒಬ್ಬ ಪಿಶಾಚಸಿದ್ಧ ಇದ್ದ. ಆತನಿಗೆ ಪಿಶಾಚಿ ಏನೇನೊ ವಸ್ತುಗಳನ್ನು ತಂದುಕೊಡುತ್ತಿತ್ತು. ಅಲೌಕಿಕ ಶಕ್ತಿ ನನಗೇಕೆ? ಅದರಿಂದ ಭಗವಂತನ ಸಾಕ್ಷಾತ್ಕಾರ ದೊರಕುವುದೆ? ಭಗವಂತನ ಸಾಕ್ಷಾತ್ಕಾರ ದೊರೆಯದೆ ಹೋಯಿತು ಎಂದರೆ, ಆಗ ಪ್ರತಿಯೊಂದೂ ಮಿಥ್ಯೆಯಾಗಿಬಿಡುತ್ತದೆ."

ನೊವೆಂಬರ್ ೧೮೮೨.

ಶ್ರೀರಾಮಕೃಷ್ಣ ಪರಮಹಂಸರು ಕಲ್ಕತ್ತದಲ್ಲಿರುವ ಮಣಿಲಾಲ ಮಲ್ಲಿಕನ ಮನೆಗೆ ಸಾಯಂಕಾಲ ನಾಲ್ಕು ಘಂಟೆ ಸಮಯಕ್ಕೆ ಶುಭಾಗಮನ ಮಾಡಿದಾರೆ. ಇಂದು ಈತನ ಮನೆಯಲ್ಲಿ ಬ್ರಾಹ್ಮಸಮಾಜದ ವಾರ್ಷಿಕೋತ್ಸವ. ವಿಜಯಕೃಷ್ಣಗೋಸ್ವಾಮಿ ಮತ್ತು ಅನೇಕ ಬ್ರಾಹ್ಮಭಕ್ತರು ಬಂದಿದಾರೆ. ಮಾಸ್ಟರ್ ಮೊದಲಾದವರೂ ಬಂದಿದಾರೆ. ಈ ಉತ್ಸವವನ್ನು ಬಹಳ ಯಶಸ್ವಿಯಾಗಿ ನೆರವೇರಿಸಲು ಮನೆಯ ಯಜಮಾನ ಬಹಳ ಒಳ್ಳೆ ವ್ಯವಸ್ಥೆ ಮಾಡಿದಾನೆ. ಪ್ರಹ್ಲಾದಚರಿತ್ರೆಯ ಹರಿಕಥೆ ನಡೆದನಂತರ ವಿಜಯ ಇಂದಿನ ಉಪಾಸನೆ ನಡಸುತ್ತಾನೆ.

ಈಗ ಭಾಗವತರು ಹರಿಕಥೆ ಮಾಡಲಾರಂಭಿಸಿದರು. ಹೇಳುತ್ತಿದಾರೆ: "ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪು ಹರಿಯ ನಿಂದೆಯನ್ನು ಮಾಡುತ್ತ ಪ್ರಹ್ಲಾದನನ್ನು ಪದೇ ಪದೇ ಚಿತ್ರಹಿಂಸೆಗೆ ಒಳಪಡಿಸುತ್ತಿದಾನೆ. ಪ್ರಹ್ಲಾದ ಕೈಮುಗಿದು ಹರಿಗೆ ಪ್ರಾರ್ಥನೆಮಾಡುತ್ತ ಹೇಳುತ್ತಿದಾನೆ: 'ಹೇ ಹರಿ, ನನ್ನ ಪಿತನಿಗೆ ಸುಮತಿಯನ್ನು ಕರುಣಿಸು' ಎಂಬುದಾಗಿ."

ಇದನ್ನು ಕೇಳಿ ಪರಮಹಂಸರು ಅಳಲಾರಂಭಿಸಿದಾರೆ. ಈಗ ಅವರು ಭಾವಸ್ಥರಾಗಿಬಿಟ್ಟಿದಾರೆ. ಸ್ವಲ್ಪ ಹೊತ್ತು ಆ ಅವಸ್ಥೆಯಲ್ಲೇ ಇದ್ದು ಈಗ ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಭಕ್ತಿಯೇ ಸಾರವಸ್ತು. ಸರ್ವದಾ ಭಗವಂತನ ನಾಮಗುಣಕೀರ್ತನೆ ಮಾಡುತ್ತ ಮಾಡುತ್ತ ಇದ್ದರೆ ಭಕ್ತಿ ದೊರೆತು ಬಿಡುತ್ತದೆ. ಆಹಾ! ಶಿವನಾಥ ಎಂಥಾ ಭಕ್ತ! ಸಕ್ಕರೆ ರಸದಲ್ಲಿ ನೆಂದ ಛಾಣಾದೊಡೆಯ ಹಾಗೆ ಆತ ಭಕ್ತಿರಸದಲ್ಲಿ ನೆಂದುಹೋಗಿಬಿಟ್ಟಿದಾನೆ.

"'ನನ್ನ ಧರ್ಮವೇ ಸರಿಯಾದ್ದು, ಉಳಿದವರದೆಲ್ಲಾ ತಪ್ಪಾದ್ದು' ಎಂಬ ಭಾವನೆ ಒಳ್ಳೆಯದಲ್ಲ. ಎಲ್ಲಾ ಮಾರ್ಗಗಳಿಂದಲೂ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಹೃತ್ಪೂರ್ವಕ ವ್ಯಾಕುಲತೆ ಇತ್ತು ಎಂದರೆ, ದೊರೆತುಬಿಡುತ್ತದೆ. ಮಾರ್ಗಗಳು ಅನೇಕ. ಹಾಗೇ ಮತಗಳೂ ಅನೇಕ.

"ನೋಡಿ, ನಾವು ಭಗವಂತನನ್ನು ನೋಡಬಹುದು. ಆತ ಅವಾಙ್ಮಾನಸಗೋಚರ ಎಂಬುದಾಗಿ ವೇದದಲ್ಲಿ ಹೇಳಿದೆ. ಇದರ ಅರ್ಥ ವಿಷಯಾಸಕ್ತ ಮನಸ್ಸಿಗೆ ಅಗೋಚರ ಎಂಬುದಾಗಿ. ವೈಷ್ಣವಚರಣ ಹೇಳುತ್ತಿದ್ದ: 'ಆತ ಶುದ್ಧ ಮನಸ್ಸಿಗೆ, ಶುದ್ಧ ಬುದ್ಧಿಗೆ ಗೋಚರ' ಎಂಬುದಾಗಿ. ಆದ್ದರಿಂದಲೇ ಸಾಧುಸಂಗ, ಪ್ರಾರ್ಥನೆ, ಗುರುವಿನಿಂದ ಉಪದೇಶ ಇವುಗಳೆಲ್ಲದರ ಆವಶ್ಯಕತೆ ಇರುವುದು. ಆಗ ಮಾತ್ರವೇ ಚಿತ್ತಶುದ್ಧಿ ಉಂಟಾಗುತ್ತೆ. ಆಗ ಮಾತ್ರವೇ ಆತನ ದರ್ಶನ ದೊರೆಯುತ್ತೆ. ಬಗ್ಗಡದ ನೀರಿಗೆ ಶುದ್ಧೀಕರಣ ವಸ್ತುವನ್ನು ಹಾಕಿದರೆ ಆಗ ಅದು ಶುದ್ಧವಾಗುತ್ತದೆ. ಆಗ ಅದರಲ್ಲಿ ಮುಖ ಕಾಣುತ್ತದೆ. ಕೊಳಕಾಗಿರುವ ಕನ್ನಡಿಯಲ್ಲಿ ಮುಖ ನೋಡಿಕೊಳ್ಳಲಾಗುವುದಿಲ್ಲ.

"ಚಿತ್ತಶುದ್ಧಿಯಾದನಂತರ ಭಕ್ತಿ ಉಂಟಾಗುತ್ತದೆ. ಆಗ ಮಾತ್ರವೇ ಭಗವಂತನ ಕೃಪೆಯಿಂದ ಆತನ ದರ್ಶನ ದೊರೆಯುತ್ತದೆ. ದರ್ಶನ ದೊರೆತ ನಂತರ ಆತನಿಂದ ಆದೇಶ ದೊರೆತರೆ, ಆಗ ಲೋಕಶಿಕ್ಷಣಕಾರ್ಯವನ್ನು ಮಾಡಲು ಸಾಧ್ಯ. ಅದಕ್ಕಿಂತ ಮುಂಚೆ ಲೆಕ್ಚರ್ ಕೊಡೋದು ಒಳ್ಳೆಯದಲ್ಲ. ಇದರ ಸಂಬಂಧವಾಗಿ ಒಂದು ಹಾಡು ಇದೆ. ಅದು ಹೇಳುತ್ತೆ:

ಮೂರ್ತಿಯನು ನಿಲಿಸಿಲ್ಲ
ಗುಡಿಯ ಪೀಠದಲಿ,
ಆದರೂ ಶಂಖವನು ಊದುತಿರುವೆ! . . .

"ಮೊದಲು ಹೃದಯಮಂದಿರವನ್ನು ಚೊಕ್ಕಟಮಾಡಬೇಕು. ಬಳಿಕ ವಿಗ್ರಹವನ್ನು ಪ್ರತಿಷ್ಠಾಪನೆಮಾಡಿ ಪೂಜೆಗೆ ವ್ಯವಸ್ಥೆ ಮಾಡಬೇಕು. ಏನಂದರೆ ಏನೂ ಮಾಡಿಲ್ಲ, ಸುಮ್ಮನೆ 'ಭ್ಞೋ! ಭ್ಞೋ!' ಅಂತ ಶಂಖ ಊದಿದರೆ ಏನಾದ ಹಾಗಾಯಿತು?"

ವಿಜಯ ವೇದಿಕೆಯ ಮೇಲೆ ಕುಳಿತು ಬ್ರಾಹ್ಮಸಮಾಜದ ಪದ್ಧತಿಗನುಸಾರ ಉಪಾಸನೆ ನಡಸುತ್ತಿದಾನೆ. ಅದನ್ನು ಮುಗಿಸಿ ಈಗ ಪರಮಹಂಸರ ಹತ್ತಿರ ಬಂದು ಕುಳಿತುಕೊಂಡ.

ಶ್ರೀರಾಮಕೃಷ್ಣರು ವಿಜಯನಿಗೆ: "ನೀವು ಅಷ್ಟೊಂದಾಗಿ, 'ಪಾಪ, ಪಾಪ' ಅಂತ ಹೇಳುತ್ತಲೇ ಇರುತ್ತೀರಲ್ಲ ಏಕೆ? ಒಂದು ನೂರು ಸಲ, 'ನಾನು ಪಾಪಿ, ನಾನು ಪಾಪಿ' ಎಂದು ಹೇಳಿದ್ದೆ ಆದರೆ, ವ್ಯಕ್ತಿ ಹಾಗೇ ಆಗಿಬಿಡುತ್ತಾನೆ. ವ್ಯಕ್ತಿ ಅಂಥ ದೃಢವಿಶ್ವಾಸವುಳ್ಳವನಾಗಿರಬೇಕು, ಆತನಿಗೆ ಹೇಳಲು ಸಾಧ್ಯವಾಗಬೇಕು: 'ಏನು? ನಾನು ಭಗವಂತನ ಹೆಸರನ್ನು ಜಪಿಸುತ್ತಿದೇನೆ; ನನ್ನಲ್ಲಿ ಇನ್ನು ಪಾಪ ಅಂದರೆ?' ಭಗವಂತ ನಮ್ಮ ತಂದೆ ತಾಯಿ. ಆತನಿಗೆ ಹೇಳು: 'ಹೇ ಭಗವಂತ, ನಿಜ ನಾನು ಪಾಪಕಾರ್ಯಗಳನ್ನು ಮಾಡಿದೇನೆ. ಆದರೆ ಇನ್ನು ಮೇಲೆ ಮಾಡುವುದಿಲ್ಲ.' ಆತನ ನಾಮ ಜಪಿಸಿ ಅದರ ಮಹತ್ತಿನಿಂದ ದೇಹ ಮನಸ್ಸನ್ನು ಪವಿತ್ರಗೊಳಿಸು—ನಿನ್ನ ನಾಲಗೆಯನ್ನು ಪವಿತ್ರಗೊಳಿಸು."

ಡಿಸೆಂಬರ್ ೧೮೮೩.

ಪರಮಹಂಸರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಕುಳಿತು ಭಕ್ತರೊಡನೆ ಮಾತುಕತೆಯಾಡುತ್ತಿದಾರೆ. ಈಗ ವೇಳೆ ಅಪರಾಹ್ನ. ಬಾಬುರಾಮ, ರಾಮದಯಾಲ, ಮಾಸ್ಟರ್ ಇವರೂ ಅಲ್ಲಿ ಕುಳಿತಿದಾರೆ. ಇವರು ಮೂವರೂ ಇಂದಿನ ರಾತ್ರಿಯನ್ನು ಪರಮಹಂಸರೊಡನೆ ಕಳೆಯಲು ನಿಶ್ಚಯಿಸಿದಾರೆ. ಕ್ರಿಸ್‌ಮಸ್ ರಜಾ ಬಂದಿರುವುದರಿಂದ ಮಾಸ್ಟರ್ ಮಾರನೆ ದಿನವನ್ನೂ ಪರಮಹಂಸರೊಡನೆ ಕಳೆಯಬೇಕೆಂದಿದಾನೆ. ಬಾಬುರಾಮನಿಗೆ ಪರಮಹಂಸರ ಪರಿಚಯವಾದ್ದು ಈಗೆಲ್ಲೋ ಕೆಲವು ದಿನಗಳ ಹಿಂದೆ ಮಾತ್ರ.

ಶ್ರೀರಾಮಕೃಷ್ಣರು ಭಕ್ತರಿಗೆ: "ಭಗವಂತನೇ ಎಲ್ಲಕ್ಕೂ ಕರ್ತ ಎಂಬ ಜ್ಞಾನೋದಯವಾಗಿಬಿಟ್ಟಿತು ಎಂದರೆ, ಮನುಷ್ಯ ಜೀವನ್ಮುಕ್ತನಾಗಿಬಿಡುತ್ತಾನೆ. ಒಮ್ಮೆ ಕೇಶವಚಂದ್ರಸೇನ ಶಂಭುಮಲ್ಲಿಕನೊಡನೆ

ಇಲ್ಲಿಗೆ ಬಂದ. ನಾನು ಆತನಿಗೆ ಹೇಳಿದೆ: 'ಮರದ ಎಲೆ ಕೂಡ ಆತನ ಇಚ್ಛೆಯಿಲ್ಲದೆ ಅಲುಗಲಾರದು' ಎಂಬುದಾಗಿ. ಸ್ವಾಧೀನ ಇಚ್ಛೆ (ಫ್ರೀ ವಿಲ್) ಎಂಬುದು ಎಲ್ಲಿದೆ? ಎಲ್ಲವೂ ಭಗವಂತನಧೀನ. ತೋತಾಪುರಿ ಒಳ್ಳೆ ದೊಡ್ಡ ಜ್ಞಾನಿ. ಆದರೂ ಆತ ನೀರಿನಲ್ಲಿ ಮುಳುಗಿ ಪ್ರಾಣ ಕಳೆದುಕೊಳ್ಳಲು ಯತ್ನಿಸಿದ್ದ. ಇಲ್ಲಿ ಆತ ಹನ್ನೊಂದು ತಿಂಗಳು ಇದ್ದ. ಒಮ್ಮೆ ಆಗ ಆತನಿಗೆ ಹೊಟ್ಟೆ ಬೇನೆ ಬಂದಿತ್ತು. ಹೊಟ್ಟೆ ನೋವನ್ನು ತಡೆಯಲಾರದೆ ಗಂಗೆಯಲ್ಲಿ ಮುಳುಗಿ ಸಾಯಲು ಯತ್ನಿಸಿದ. ಆಗ ಘಟ್ಟದ ಹತ್ತಿರ ನೀರು ಆಳವಾಗೇ ಇರಲಿಲ್ಲ. ಆತ ನದಿಯಲ್ಲಿ ಎಷ್ಟು ದೂರ ಹೋದರೂ ಮಂಡಿಯುದ್ದಕ್ಕಿಂತ ಅಧಿಕವಾಗಿ ನೀರು ಎಲ್ಲೂ ಬರಲೇ ಇಲ್ಲ. ಆಗ ಆತನಿಗೆ ಅದರ ರಹಸ್ಯ[1] ಅರ್ಥವಾಯಿತು. ಆಗ ಹಿಂದಿರುಗಿ ಬಂದ. ಒಮ್ಮೆ ನನಗೆ ಬಹಳವಾಗಿ ವಾಯು ವೃದ್ಧಿಯಾಗಿಬಿಟ್ಟಿತು. ಅದನ್ನು ತಡೆಯಲಾರದೆ ಚೂರಿಯಿಂದ ಕತ್ತು ಕೊಯ್ದುಕೊಳ್ಳಲು ಯತ್ನಿಸಿದ್ದೆ. ಅದಕ್ಕಾಗೆ ನಾನು ಹೇಳುವುದು: 'ಹೇ ತಾಯೆ, ನಾನು ಯಂತ್ರ, ನೀನು ಯಂತ್ರಿ; ನಾನು ರಥ, ನೀನು ರಥಿ. ಚಲಿಸಿದಂತೆ ಚಲಿಸುತ್ತೇನೆ; ಮಾಡಿಸಿದಂತೆ ಮಾಡುತ್ತೇನೆ.' "

ಭಕ್ತರು ಪರಮಹಂಸರ ಕೊಠಡಿಯಲ್ಲಿ ಹಾಡಲಾರಂಭಿಸಿದಾರೆ:

ಹೃದಯಬೃಂದಾವನದಿ ಬಂದು ಮನೆ ಮಾಡಯ್ಯ ಕಮಲಾಪತೀ,
ಓಹೊ, ಭಕ್ತಿಪ್ರಿಯನೆ ನನ್ನ ಭಕ್ತಿಯೆ ನಿನಗೆ ರಾಧಾಸತೀ.
ನನ್ನ ದೇಹವೆ ನಿನ್ನ ನಂದಗೋಕುಲವಯ್ಯ
ನನ್ನ ನೇಹವೆ ನಿನಗೆ ಶ್ರೀ ಯಶೋದೆ,
ನನ್ನ ಮುಕ್ತಿಯ ಬಯಕೆ ಗೋಪನಾರಿಯರಯ್ಯ
ಬಾ ಇಲ್ಲಿ ನೆಲಸಯ್ಯ, ಇದು ನಿನ್ನದೇ.

ಇದನೆತ್ತಿ ಬಿಸುಡಯ್ಯ, ನೋಡು ಬಿದ್ದಿದೆ ಇಲ್ಲಿ
ನನ್ನ ಪಾಪದ ಭಾರ ಗೋವರ್ಧನ;
ಕಂಸ ಚರರಾಗಿರುವ ಅರಿವರ್ಗಗಳ ಕೊಂದು
ನನ್ನೊಳಗೆ ನೆಲಸಯ್ಯ ಜನಾರ್ದನ!

---

1. "ಸಾಯುವುದು ಕೂಡ ಮನುಷ್ಯನ ಕೈಯಲ್ಲಿ ಇಲ್ಲ. ಎಲ್ಲವೂ ಭಗವತಿಯ ಅಧೀನ" ಎಂಬುದಾಗಿ ಆತನಿಗೆ ಅನುಭವವಾಯಿತು.

ನನ್ನ ಮನಸಿನ ಬಯಲ ಹುಲ್ಲುಗಾವಲ ಚರಿಸು,
ನಿನ್ನ ಕರುಣೆಯು ಕೊಳಲ ಸವಿರಾಗದೊಳಗೆನ್ನ
ಮನದ ಧೇನುವ ನಿನ್ನ ವಶವ ಪಡಿಸು.
ನನ್ನ ಹೃದಯದ ಕರೆಯು ಯಮುನಾ ನದೀ ತಟದಿ
ನನ್ನ ಬಯಕೆಯು ವೃಕ್ಷದಡಿಗೆ ನೆಲಸು.
ಅಲ್ಲಿ ಬೃಂದಾವನದಿ ರಾಖಲನ ಪ್ರೇಮವೇ
ನಿನ್ನನೀ ತೆರದಲ್ಲಿ ಬಂಧಿಸಿರಲು,
ಆ ಅಲ್ಲಿ ನನ್ನನೂ ಗೊಲ್ಲನಾಗಿಸು ದೇವ,
ಎಂದು ಈ ದಾಶರಥಿ ಬೇಡುತಿಹನು.

ಅವರು ಮತ್ತೆ ಹಾಡುತ್ತಿದಾರೆ:

ಈ ಪ್ರಾಣಪಂಜರದಿ ಕುಳಿತು ಹಾಡುವ ಹಕ್ಕಿ,
ಅವನ ವಿಭುಗುಣಗಳನು ಕುರಿತು ಹಾಡು.
ಶ್ರೀ ಬ್ರಹ್ಮಕಲ್ಪತರು ಮೂಲದಲಿ ನೀ ಕುಳಿತು
ಪುರುಷಾರ್ಥ ಫಲಗಳನು ಸವಿದುನೋಡು.
'ಅವನೆ ಸಿತ್ಯಾನಂದ, ಅವನೆ ಆತ್ಮದ ಅಮೃತ'—
ಎಂದು ನೀ ನಿತ್ಯವೂ ಹೊಗಳು, ಹಾಡು,
ಅಚ್ಚರಿಯನುಕ್ಕಿಸುವ ನನ್ನ ಜೀವದ ಹಕ್ಕಿ
ಅವನಿಗೆಂದೇ ಬರಲಿ ನಿನ್ನ ಹಾಡು ;
ಮಳೆಹನಿಗೆ ಚಾತಕವು ಕಾತರಿಸುವಂದದಲಿ
ಅವನ ಕೃಪೆಯನು ನಿರುತ ಬೇಡಿನೋಡು.

ನಂದನ ತೋಟದ ಶ್ರೀನಾಥಮಿತ್ರ ತನ್ನ ಬಂಧುಗಳೊಡನೆ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಆತನ ಕಡೆ ನೋಡಿ ಹೇಳುತ್ತಿದಾರೆ: "ಗಾಜಿನ ಬಾಗಿಲ ಮೂಲಕ ಕೊಠಡಿಯ ಒಳಗಿರೋದೆಲ್ಲ ಕಾಣಬರೋ ಹಾಗೆ, ಈತನ ಕಣ್ಣಿನ ಮೂಲಕ ಈತನ ಅಂತರ್ಯವೆಲ್ಲಾ ತೋರಿಬರುತ್ತಿದೆ." ಈತ ಮತ್ತು ಈತನ ಸಹೋದರರೆಲ್ಲರೂ ಕೂಡಿ ಪ್ರತಿವರ್ಷವೂ ತಮ್ಮ ಮನೆಯಲ್ಲಿ ಬ್ರಾಹ್ಮಸಮಾಜದ ವಾರ್ಷಿಕೋತ್ಸವವನ್ನು ನಡಸಿಕೊಂಡುಬರುತ್ತಿದಾರೆ. ಪರಮಹಂಸರು ಈ ಉತ್ಸವಗಳಲ್ಲಿ ಅನೇಕ ಸಲ ಭಾಗಿಗಳಾಗಿದ್ದರು.

ದೇವಾಲಯಗಳಲ್ಲಿ ಸಾಯಂ ಮಂಗಳಾರತಿ ಆರಂಭವಾಯಿತು. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಭಗವಂತನ ಧ್ಯಾನ

ಮಾಡುತ್ತಿದಾರೆ. ಕ್ರಮೇಣ ಭಾವಾವಿಷ್ಟರಾಗಿಬಿಟ್ಟರು. ಭಾವ ಉಪಶಮನವಾದನಂತರ ಹೇಳುತ್ತಿದಾರೆ: "ತಾಯೆ, ಆತನನ್ನೂ ಆಕರ್ಷಿಸಿಬಿಡು. ಆತ ಬಹಳ ದೀನ ಮತ್ತು ನಮ್ರ. ಬಂದು ಹೋಗಿ ನಿನ್ನ ದರ್ಶನ ಮಾಡುತ್ತಿದಾನೆ." ಪರಮಹಂಸರು ಬಾಬುರಾಮನ ಸಂಬಂಧವಾಗಿಯೇನು ಹಾಗೆ ಹೇಳುತ್ತಿದ್ದುದು?

ಶ್ರೀರಾಮಕೃಷ್ಣರು ವಿವಿಧ ಸಮಾಧಿಗಳ ಸಂಬಂಧವಾಗಿ ಸ್ವಲ್ಪ ಹೊತ್ತು ಭಕ್ತರಿಗೆ ವಿವರಿಸಿದರು. ಈಗ ಜೀವನದ ಸುಖದುಃಖದ ಸಂಬಂಧವಾಗಿ ಮಾತುಕತೆ ಆರಂಭವಾಯಿತು. ಭಗವಂತ ಈ ಜಗತ್ತಿನಲ್ಲಿ ಇಷ್ಟೊಂದು ದುಃಖವನ್ನು ಏಕೆ ಸೃಷ್ಟಿಸಿದಾನೆ?

ಮಾಸ್ಟರ್: "ಒಮ್ಮೆ ವಿದ್ಯಾಸಾಗರ ಸಿಟ್ಟುಗೊಂಡು ಹೇಳಿದರು: 'ಏಕೆ ಭಗವಂತನನ್ನು ಕರೆಯಬೇಕು? ಹಾಗೇ ನೋಡು. ಚಂಗೇಸ್‌ಖಾನ್ ಲೂಟಿ-ಗೀಟಿ ಆರಂಭಮಾಡಿದಾಗ ಅನೇಕರನ್ನು ಸೆರೆಹಿಡಿದ. ಕೈದಿಗಳ ಸಂಖ್ಯೆ ಕ್ರಮೇಣ ಒಂದು ಲಕ್ಷದವರೆಗೂ ಏರಿತು. ಆಗ ಸೇನಾಪತಿ ಬಂದು ಆತನಿಗೆ ತಿಳಿಸಿದ: "ಮಹಾಶಯ, ಇವರಿಗೆಲ್ಲ ಅನ್ನ ಹಾಕುವುದು ಹೇಗೆ? ಇವರನ್ನು ನಮ್ಮ ಹತ್ತಿರ ಇಟ್ಟುಕೊಳ್ಳುವುದೂ ವಿಪತ್ಕಾರಿಯೆ. ಇವರನ್ನು ಸುಮ್ಮನೆ ಬಿಟ್ಟುಬಿಟ್ಟರೂ ವಿಪತ್ತಿಗೆ ಒಳಗಾಗಬೇಕಾಗುತ್ತೆ. ಏನುಮಾಡೋಣ ಈಗ?" ಆಗ ಚಂಗೇಸ್‌ಖಾನ್ ಹೇಳಿದ: "ಆದ್ದರಿಂದ ಇನ್ನೇನು ಮಾಡುವುದು? ಎಲ್ಲರನ್ನೂ ಕೊಂದುಹಾಕಿಬಿಡು." ಒಡನೆ ಹುಕುಮ್ ಆಗಿಬಿಟ್ಟಿತು, "ಕಚ್, ಕಚ್" ಅಂತ ಎಲ್ಲರನ್ನೂ ಕತ್ತರಿಸಿ ಹಾಕಿಬಿಡುವ ಹಾಗೆ. ಭಗವಂತ ಈ ಹತ್ಯೆಯನ್ನು ನೋಡಿದ ತಾನೆ? ಅದನ್ನು ತಡೆಗಟ್ಟಲು ಯಾವ ಪ್ರಯತ್ನವನ್ನೂ ಆತ ಮಾಡಲೇ ಇಲ್ಲ. ಆದ್ದರಿಂದ ಆತ ಇದ್ದರೂ ಒಂದೆ ಸತ್ತರೂ ಒಂದೆ. ನನಗೆ ಅಂಥವನ ಆವಶ್ಯಕತೆಯೇ ನಿಲ್ಲ. ಅಂಥವನಿಂದ ನನಗೆ ಯಾವ ಉಪಕಾರವೂ ಆಗುವ ಹಾಗಿಲ್ಲ.' "

ಶ್ರೀರಾಮಕೃಷ್ಣರು: "ಭಗವಂತನ ಕಾರ್ಯವನ್ನ, ಅಂದರೆ ಆತ ಯಾವ ಉದ್ದೇಶದಿಂದ ಏನು ಮಾಡುತ್ತಾನೆ ಎಂಬುದನ್ನ ಅರಿಯಲು ಸಾಧ್ಯವೇ? ಆತ ಸೃಷ್ಟಿ, ಪಾಲನೆ, ಸಂಹಾರ ಎಲ್ಲವನ್ನೂ ಮಾಡುತ್ತಿದಾನೆ. ಆತ ಏತಕ್ಕೆ ಸಂಹಾರಮಾಡುತ್ತಾನೆ ಎಂಬುದನ್ನು ನಮಗೆ ಅರಿತುಕೊಳ್ಳಲು ಸಾಧ್ಯವೆ? ನಾನು ಭಗವತಿಗೆ ಹೇಳುತ್ತೇನೆ: 'ಹೇ ತಾಯೆ, ನನಗೆ ಅದನ್ನ ಅರಿತುಕೊಳ್ಳುವ ಆವಶ್ಯಕತೆಯೇನೂ ಇಲ್ಲ.

ದಯವಿಟ್ಟು ನಿನ್ನ ಪಾದಪದ್ಮಗಳಲ್ಲಿ ನನಗೆ ಭಕ್ತಿ ನೀಡು.' ಮಾನವ ಜನ್ಮದ ಉದ್ದೇಶ ಭಕ್ತಿಯನ್ನು ದೊರಕಿಸಿಕೊಳ್ಳುವುದೇ. ಉಳಿದವುಗಳ ಸಂಬಂಧವಾಗಿ ನಮಗೆ ಯಾವುದು ಶ್ರೇಯಸ್ಕರವಾದ್ದು ಎಂಬುದು ತಾಯಿಗೇ ಚೆನ್ನಾಗಿ ಗೊತ್ತು. ನಾನು ತೋಟಕ್ಕೆ ಬಂದಿರುವುದು ಮಾವಿನ ಹಣ್ಣು ತಿನ್ನುವುದಕ್ಕೆ. ಮರಗಳೆಷ್ಟಿವೆ, ಕೊಂಬೆಗಳೆಷ್ಟಿವೆ, ಎಷ್ಟೊಂದು ಕೋಟಿ ಎಲೆಗಳಿವೆ ಇವುಗಳ ಲೆಕ್ಕಾಚಾರ ನನಗೇಕೆ? ನಾನು ಕೇವಲ ಮಾವಿನ ಹಣ್ಣು ಮಾತ್ರ ತಿನ್ನುತ್ತೇನೆ; ಮರ ಕೊಂಬೆ ಎಲೆಗಳ ಲೆಕ್ಕಾಚಾರ ನನಗೆ ಬೇಕಾಗಿಲ್ಲ."

ಪರಮಹಂಸರ ಕೊಠಡಿಯಲ್ಲೆ ನೆಲದ ಮೇಲೆ ಬಾಬುರಾಮ, ಮಾಸ್ಟರ್, ರಾಮದಯಾಲ ಈಗ ಮಲಗಿಕೊಳ್ಳುತ್ತಿದಾರೆ.

ಘಂಟೆ ರಾತ್ರಿ ಎರಡೊ ಮೂರೊ ಇರಬೇಕು. ದೀಪವನ್ನು ಆರಿಸಿಬಿಟ್ಟಿದೆ. ಪರಮಹಂಸರು ತಮ್ಮ ಹಾಸಿಗೆ ಮೇಲೆ ಕುಳಿತೇ ಭಕ್ತರೊಡನೆ ಆಗಾಗ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ನೋಡಿ, ದಯೆ ಮತ್ತು ಮಾಯೆ ಇವೆರಡೂ ಪ್ರತ್ಯೇಕ ಪ್ರತ್ಯೇಕವಾದುವು. ಮಾಯೆ ಎಂದರೆ, ಆತ್ಮೀಯ ಮಮತೆ. ಉದಾಹರಣೆಗೆ ತಂದೆ ತಾಯಿ, ಸೋದರ ಸೋದರಿ, ಹೆಂಡತಿ ಮಕ್ಕಳು ಇವರ ಮೇಲೆ ಇಟ್ಟಿರುವ ಪ್ರೀತಿ. ದಯೆ ಎಂಬುದು ಸರ್ವಭೂತಗಳಲ್ಲಿಯೂ ಇಟ್ಟಿರುವ ಪ್ರೀತಿ; ಸಮದೃಷ್ಟಿ. ಯಾರಲ್ಲಾದರೂ ದಯೆ ಕಂಡುಬರುವುದಾದರೆ, ಉದಾಹರಣೆಗೆ ವಿದ್ಯಾಸಾಗರ, ಆಗ ಅರಿತುಕೊಳ್ಳಬೇಕು ಅದು ಭಗವಂತನ ದಯೆ ಎಂಬುದಾಗಿ. ದಯೆಯಿಂದ ಎಲ್ಲಾ ಭೂತಗಳ ಸೇವೆ ಸಾಧ್ಯ. ಮಾಯೆಯೂ ಭಗವಂತನಿಗೆ ಸೇರಿದುದೆ. ಮಾಯೆಯಿಂದ ಭಗವಂತ ಆತ್ಮೀಯರ ಸೇವೆಯನ್ನು ಮಾಡುವಂತೆ ಮನುಷ್ಯನನ್ನು ಪ್ರೇರೇಪಿಸುತ್ತಾನೆ. ಆದರೆ ಇದನ್ನ ಚೆನ್ನಾಗಿ ಜ್ಞಾಪಕದಲ್ಲಿಡಬೇಕು: ಮಾಯೆ ನಮ್ಮನ್ನು ಅಜ್ಞಾನದಿಂದ ಆವೃತರಾಗುವಂತೆ, ಬಂಧನಕ್ಕೆ ಸಿಲುಕುವಂತೆ ಮಾಡಿಬಿಡುತ್ತದೆ; ಆದರೆ ದಯೆ ಕ್ರಮೇಣ ನಮಗೆ ಚಿತ್ತಶುದ್ಧಿಯನ್ನು ತಂದು ನಮ್ಮನ್ನು ಮುಕ್ತರನ್ನಾಗಿ ಮಾಡುತ್ತದೆ.

"ಚಿತ್ತಶುದ್ಧಿ ಆಗದ ಹೊರತು ಭಗವಂತನ ದರ್ಶನ ದೊರೆಯುವ ಹಾಗಿಲ್ಲ. ಕಾಮ, ಕ್ರೋಧ, ಲೋಭ ಇವನ್ನೆಲ್ಲ ಜಯಿಸಿದರೆ ಮಾತ್ರ

ಆತನ ಕೃಪೆ ಒದಗುತ್ತದೆ; ಆತನ ದರ್ಶನ ದೊರೆಯುತ್ತದೆ. ಕಾಮವನ್ನು ಜಯಿಸಲು ನಾನೂ ಏನೇನೊ ಸಾಧನೆ ಮಾಡಬೇಕಾಯಿತು.

"ನನ್ನ ಹತ್ತೊ ಹನ್ನೊಂದೊ ವಯಸ್ಸಿನಲ್ಲಿ ನಾನು ಊರಿನಲ್ಲಿ ಇದ್ದಾಗ ನನಗೆ ಸಮಾಧಿಯ ಅನುಭವ ದೊರೆಯಿತು. ಗದ್ದೆ ಬಯಲಿನಲ್ಲಿ ಹೋಗುತ್ತ ಹೋಗುತ್ತ ಇದ್ದಾಗ, ಏನೊ ಒಂದನ್ನು ನೋಡಿ ವಿಹ್ವಲನಾಗಿಬಿಟ್ಟೆ. ಭಗವಂತನ ದರ್ಶನ ದೊರೆತಿರುವುದಕ್ಕೆ ಕೆಲವು ಲಕ್ಷಣಗಳಿವೆ. ಜ್ಯೋತಿ ಕಾಣಿಸಿಕೊಳ್ಳುತ್ತೆ, ಆನಂದ ಉಂಟಾಗುತ್ತೆ, ಎದೆಯ ಒಳಗೆ ಮಹಾವಾಯು ಆಕಾಶಬಾಣದ ಹಾಗೆ 'ಸುರ್, ಸುರ್' ಅಂತ ಮೇಲಕ್ಕೆ ಹತ್ತಲಾರಂಭಿಸುತ್ತದೆ."

ಬೆಳಗಾದ ಮೇಲೆ ಬಾಬುರಾಮ ಮತ್ತು ರಾಮದಯಾಲ ಹಿಂದಿರುಗಿ ಮನೆಗೆ ಹೊರಟುಹೋದರು. ಮಾಸ್ಟರ್ ಇಂದಿನ ಹಗಲು ಮತ್ತು ರಾತ್ರಿಯನ್ನು ಪರಮಹಂಸರೊಡನೆ ಕಳೆದ.

**ಡಿಸೆಂಬರ್ ೧೮೮೩.**

ಅಪರಾಹ್ನದ ವೇಳೆ. ಪರಮಹಂಸರು ತಮ್ಮ ಕೊಠಡಿಯಲ್ಲಿ ಮಾಸ್ಟರ್ ಮತ್ತು ಒಬ್ಬಿಬ್ಬರು ಭಕ್ತರೊಡನೆ ಕುಳಿತುಕೊಂಡಿದಾರೆ. ಕೆಲವು ಮಂದಿ ಮಾರ್ವಾಡಿ ಭಕ್ತರು ಬಂದು ಪರಮಹಂಸರಿಗೆ ಪ್ರಣಾಮಮಾಡಿದರು. ಅವರು ಪರಮಹಂಸರನ್ನು ತಮಗೆ ಸ್ವಲ್ಪ ಉಪದೇಶ ಮಾಡಬೇಕು ಎಂಬುದಾಗಿ ಕೇಳಿಕೊಂಡರು. ಪರಮಹಂಸರು ನಗುತ್ತಿದಾರೆ.

ಶ್ರೀರಾಮಕೃಷ್ಣರು ಮಾರ್ವಾಡಿ ಭಕ್ತರಿಗೆ: "ನೋಡಿ, 'ನಾನು' 'ನನ್ನದು' ಎಂಬುದೇ ಅಜ್ಞಾನ. ಆದರೆ, 'ಹೇ ಭಗವಂತ, ನೀನೇ ಕರ್ತ; ಎಲ್ಲವೂ ನಿನಗೆ ಸೇರಿದವೆ' ಎಂದು ಭಾವಿಸುವುದೇ ಜ್ಞಾನದ ಚಿಹ್ನೆ. ಜೊತೆಗೆ 'ನನ್ನದು' ಎಂದು ಹೇಳೋ ಬಗೆ ಹೇಗೆ? ತೋಟದ ಸೂಪರಿಂಟೆಂಡೆಂಟ್ ಹೇಳುತ್ತಾನೆ: 'ಇದು ನಮ್ಮ ತೋಟ.' ಆದರೆ ಆತನ ಯಾವುದೊ ಒಂದು ತಪ್ಪಿಗಾಗಿ ಆತನನ್ನು ತೋಟದ ಯಜಮಾನ ವಜಾ ಮಾಡಿಬಿಟ್ಟದ್ದೇ ಆದರೆ, ಆಗ ಆತ ತನ್ನ ಮಾವಿನ ಮರದ ಸಂದೂಕವನ್ನು ಹೊರಕ್ಕೆ ತೆಗೆದುಕೊಂಡು ಹೋಗುವುದಕ್ಕೂ ಸಾಹಸಪಡಲಾರದವನಾಗಿ ಬಿಡುತ್ತಾನೆ. ಕಾಮ, ಕ್ರೋಧ ಮೊದಲಾದುವು ನಮ್ಮನ್ನು ಬಿಟ್ಟುಹೋಗ ತಕ್ಕವಲ್ಲ. ಅವನ್ನು ಭಗವಂತನ ಕಡೆಗೆ ತಿರುಗಿಸಿಬಿಡಿ. ಆಸೆಪಡಬೇಕಾಗಿದ್ದರೆ, ಲೋಭಪಡಬೇಕಾಗಿದ್ದರೆ ಭಗವಂತನ ಸಾಕ್ಷಾತ್ಕಾರಕ್ಕಾಗಿ

ಆಸೆಪಡಿ, ಲೋಭಪಡಿ. ವಿವೇಚನೆಯ ಮೂಲಕ ಅವನ್ನು ಭಗವಂತನ ಕಡೆಗೆ ಅಟ್ಟಿಬಿಡಿ. ಆನೆ ಬೇರೆಯವರ ಬಾಳೆ ತೋಟದ ಕಡೆ ಸೊಂಡಿಲು ನೀಡಿದರೆ, ಮಾವಟಿಗ ಅಂಕುಶದಿಂದ ಅದನ್ನು ತಿವಿಯುತ್ತಾನೆ.

"ನೀವೆಲ್ಲಾ ವ್ಯಾಪಾರಿಗಳು. ನಿಮ್ಮ ವ್ಯಾಪಾರವನ್ನು ಕ್ರಮೇಣ ಹೇಗೆ ಉನ್ನತಿಗೆ ತರಬೇಕು ಎಂಬುದು ನಿಮಗೆ ಚೆನ್ನಾಗಿ ಗೊತ್ತಿದೆ. ಮೊಟ್ಟ ಮೊದಲು ನಿಮ್ಮಲ್ಲಿ ಕೆಲವರು ಹರಳೆಣ್ಣೆ ಮಿಲ್ಲು ಇಡುತ್ತೀರಿ. ಸ್ವಲ್ಪ ಹೆಚ್ಚು ದುಡ್ಡು ಸಂಪಾದನೆ ಆಯಿತು ಎಂದರೆ, ಜವಳಿ ಅಂಗಡಿ ಇಡುತ್ತೀರಿ. ಹಾಗೇನೆ ಭಗವಂತನ ಮಾರ್ಗದಲ್ಲೂ ಮುಂದುವರಿಯಬೇಕು. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವಂತನನ್ನು ಸ್ವಲ್ಪ ತೀವ್ರತೆಯಿಂದ ಕರೆಯಲು ನಿಮಗೆ ಸಾಧ್ಯ ಆದರೂ ಆಗಬಹುದು.

"ಆದರೆ ಒಂದು ವಿಷಯ. ಕಾಲ ಬಾರದೆ ಏನೂ ಆಗೋದಿಲ್ಲ. ಕೆಲಕೆಲವರು ಭೋಗಿಸಬೇಕಾದ್ದು, ಮಾಡಬೇಕಾದ್ದು ಬಹಳವಾಗಿ ಉಳಿದು ಕೊಂಡಿರುತ್ತದೆ; ಆದ್ದರಿಂದ ಅವರು ಭಗವಂತನ ಕಡೆಗೆ ತಿರುಗಬೇಕಾದರೆ ಸ್ವಲ್ಪ ಹೆಚ್ಚು ಸಮಯವೇ ಬೇಕಾಗುತ್ತದೆ. ಕುರು ಇನ್ನೂ ಕಾಯಿಯಾಗಿ ರೋವಾಗ ಅದಕ್ಕೆ ಶಸ್ತ್ರಚಿಕಿತ್ಸೆ ಮಾಡಿಸಿದರೆ ಅದು ವಿಪರೀತಕ್ಕಿಟ್ಟು ಕೊಳ್ಳುತ್ತದೆ. ಅದು ಹಣ್ಣಾಗಿ ಮೊಳೆ ಬಂದರೆ ಆಗ ಡಾಕ್ಟರ್ ಶಸ್ತ್ರ ಚಿಕಿತ್ಸೆ ಮಾಡುತ್ತಾನೆ. ಒಮ್ಮೆ ಒಂದು ಮಗು ತನ್ನ ತಾಯಿಗೆ ಹೇಳಿತು: 'ಅಮ್ಮ, ನನಗೆ ಈಗ ನಿದ್ದೆ ಬರುತ್ತಿದೆ. ನನಗೆ ದೇಹಬಾಧೆ ಆದಾಗ ದಯವಿಟ್ಟು ನನ್ನನ್ನು ಎಬ್ಬಿಸಿಬಿಡು.' ತಾಯಿ ಉತ್ತರವಿತ್ತಳು: 'ಮಗು, ದೇಹಬಾಧೆಯೇ ನಿನ್ನನ್ನು ಎಬ್ಬಿಸಿಬಿಡುತ್ತದೆ. ನಾನು ಏಳಿಸಬೇಕಾದ ಆವಶ್ಯಕತೆಯೇನಿರೋದಿಲ್ಲ.'"

ಮಾರ್ವಾಡಿ ಭಕ್ತರು ಪರಮಹಂಸರಿಗಾಗಿ ಆಗಾಗ ಹಣ್ಣುಹಂಪಲ, ಕಲ್ಲುಸಕ್ಕರೆ, ಸಿಹಿತಿಂಡಿ ಇವೇ ಮೊದಲಾದುವನ್ನು ತರುತ್ತಿದ್ದರು. ಆದರೆ ಅವರಿಗೆ ಅವನ್ನು ತಿನ್ನಲು ಬಹುಮಟ್ಟಿಗೆ ಆಗುತ್ತಲೇ ಇರಲಿಲ್ಲ. ಅವರು ಹೇಳುತ್ತಿದ್ದರು: "ಅವರು ಬಹಳವಾಗಿ ಸುಳ್ಳು ಹೇಳಿ ದುಡ್ಡು ಸಂಪಾದನೆ ಮಾಡುತ್ತಾರೆ. ಅವರು ತರುವುದನ್ನ ನನ್ನ ಕೈಯಲ್ಲಿ ತಿನ್ನಲಾಗುತ್ತಿಲ್ಲ." ಅವರು ಮಾರ್ವಾಡಿಗಳಿಗೆ ಹೇಳುತ್ತಿದಾರೆ: "ನೋಡಿ, ವ್ಯಾಪಾರದಲ್ಲಿ ಪೂರ್ಣ ಸತ್ಯವಾದಿಯಾಗಿರಲಾಗುವುದಿಲ್ಲ. ಅದರಲ್ಲಿ ಏರು ಇಳಿತ ಇವೆ. ನಾನಕ್ ಹೇಳಿದಾನೆ: 'ಅಸಾಧುಗಳ ಅನ್ನ ತಿನ್ನಲು ನಾನು ಯತ್ನಿಸಿದಾಗ

ಅದೆಲ್ಲಾ ರಕ್ತಮಯವಾಗಿ ಕಂಡಿತು' ಎಂಬುದಾಗಿ. ಸಾಧುಗಳಿಗೆ ಶುದ್ಧ ವಸ್ತುಗಳನ್ನು ಅರ್ಪಿಸಬೇಕು. ಮಿಥ್ಯಾಚಾರದಿಂದ ಆರ್ಜಿಸಿದ ವಸ್ತುಗಳನ್ನು ಅವರಿಗೆ ಕೊಡಬಾರದು. ಸತ್ಯಪಥಾವಲಂಬಿಯಾದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಯಾವಾಗಲೂ ಆತನ ನಾಮವನ್ನು ಜಪಿಸುತ್ತಿರಬೇಕು. ಕೆಲಸದ ಸಮಯದಲ್ಲಿ ಕೂಡ ಮನಸ್ಸನ್ನು ಆತನ ಅಡಿದಾವರೆಗಳಲ್ಲಿ ನೆಲಸಿರುವಂತೆ ಮಾಡಬೇಕು. ಉದಾಹರಣೆಗೆ, ಒಬ್ಬನಿಗೆ ಬೆನ್ನುಫಣಿ ಎದ್ದಿದೆ ಅಂತ ಇಟ್ಟುಕೊಳ್ಳಿ. ಆತ ಎಲ್ಲಾ ಕೆಲಸಗಳನ್ನೂ ಮಾಡುತ್ತಾನೆ, ಆದರೆ ಆತನ ಮನಸ್ಸು ಮಾತ್ರ ಸರ್ವದಾ ಬೆನ್ನುಫಣಿಯ ಮೇಲೇ ನೆಲಸಿರುತ್ತದೆ. ರಾಮನಾಮವನ್ನು ಜಪಿಸುವುದು ಬಹಳ ಒಳ್ಳೆಯದು. 'ಯಾವ ರಾಮ, ದಶರಥನ ಪುತ್ರನೊ, ಆತನೇ ಈ ಜಗತ್ತನ್ನು ಸೃಷ್ಟಿಸಿದಾನೆ. ಮತ್ತೆ ಆತ ಸರ್ವಭೂತಗಳಲ್ಲೂ ಇದಾನೆ. ಆತ ನಮಗೆ ಅತ್ಯಂತ ಸಮೀಪದಲ್ಲಿ ಇದಾನೆ; ಒಳಗೂ ಇದಾನೆ, ಹೊರಗೂ ಇದಾನೆ.' "



Sri Ramakrishna's Room
ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಕೋಣೆ

೭

# ಶ್ರೀ ರಾಮಕೃಷ್ಣರು ಮತ್ತು ವಿಜಯಗೋಸ್ವಾಮಿ

೧೪ ನೆ ಡಿಸೆಂಬರ್ ೧೮೮೨, ಮಾರ್ಗಶಿರ ಶುಕ್ಲ ಚತುರ್ಥಿ, ಗುರುವಾರ.

ಶ್ರೀರಾಮಕೃಷ್ಣಪರಮಹಂಸರು ಮಧ್ಯಾಹ್ನದ ಊಟವಾದ ಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ದಕ್ಷಿಣೇಶ್ವರದಲ್ಲಿ ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ವಿಜಯ, ಬಲರಾಮ, ಮಾಸ್ಟರ್ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಪರಮಹಂಸರ ಎದುರಿಗೆ ನೆಲದ ಮೇಲೆ ಕುಳಿತುಕೊಂಡಿದಾರೆ. ಬಾಗಿಲಿನ ಮೂಲಕ ಗಂಗಾ ನದಿಯೂ ಅವರ ಕಣ್ಣಿಗೆ ಬೀಳುತ್ತಿದೆ. ಚಳಿಗಾಲವಾದ್ದರಿಂದ ಎಲ್ಲರೂ ಉಣ್ಣೆ ಬಟ್ಟೆಗಳನ್ನು ಹಾಕಿಕೊಂಡಿದಾರೆ. ವಿಜಯನಿಗೆ ಆಗಾಗ ಹೊಟ್ಟೆಶೂಲೆ ಬರುತ್ತಿದ್ದುದರಿಂದ ಆತ ಜೊತೆಯಲ್ಲಿ ಔಷಧವನ್ನೂ ತೆಗೆದುಕೊಂಡುಬಂದಿದಾನೆ.

ವಿಜಯ ಸಾಧಾರಣಬ್ರಾಹ್ಮಸಮಾಜದ ವೇತನ ಪಡೆಯುತ್ತಿರುವ ಆಚಾರ್ಯರಲ್ಲಿ ಒಬ್ಬ. ಆದರೆ ಈಗ ಈತನಿಗೂ ಸಮಾಜದ ಮುಖ್ಯಸ್ಥರಿಗೂ ಅನೇಕ ವಿಷಯಗಳಲ್ಲಿ ಮತಭೇದ ಬಂದುಬಿಟ್ಟಿದೆ. ಈತ, ದಯೆ ನಡತೆ ಶೀಲ ಭಗವದ್ಭಕ್ತಿ ಇವುಗಳಲ್ಲಿ ಬಹಳ ಹೆಸರನ್ನು ಗಳಿಸಿರುವ ಶ್ರೀ ಚೈತನ್ಯ ದೇವನ ಪರಮಸ್ನೇಹಿತ ಅದ್ವೈತ ಗೋಸ್ವಾಮಿಯ ವಂಶದಲ್ಲಿ ಜನ್ಮ ತಳೆದಿದಾನೆ. ಆದ್ದರಿಂದ ಆ ವಂಶದ ರಕ್ತ ಈತನ ನರನಾಡಿಗಳಲ್ಲಿ ಹರಿಯುತ್ತಿದೆ. ವಿಜಯ ಬ್ರಾಹ್ಮಸಮಾಜದ ಅನುಯಾಯಿಯಾಗಿರುವುದರಿಂದ ನಿರಾಕಾರ ಬ್ರಹ್ಮನ ಮೇಲೇನೊ ಧ್ಯಾನ ಮಾಡುತ್ತ ಇದಾನೆ, ಆದರೆ ವಂಶ ಪಾರಂಪರ್ಯದಿಂದ ಬಂದ ಭಕ್ತಿ ಆತನ ಅಂತರ್ಯದಲ್ಲಿ ಹುದುಗಿಕೊಂಡು ವ್ಯಕ್ತಗೊಳ್ಳಲು ಸುಸಮಯಕ್ಕಾಗಿ ಕಾದುಕುಳಿತಿದೆ. ಆದ್ದರಿಂದ ಪರಮಹಂಸರು ದೇವದುರ್ಲಭ ಭಗವತ್ಪ್ರೇಮದಿಂದ ತುಂಬಿತುಳುಕಾಡುತ್ತ ಭಗವದುನ್ಮತ್ತರಾಗಿರುವುದನ್ನು ನೋಡಿ ಆತ ಮುಗ್ಧನಾಗಿಹೋಗಿ ಆಗಾಗ ಬಂದು ಅವರ ಸಹವಾಸ ಮಾಡುತ್ತಿದಾನೆ. ಅವರ ಬಾಯಿಂದ ಬರುವುದೆಲ್ಲವೂ ಅಮೃತಧಾರೆಯೇ ಎಂದು ಆತ ಭಾವಿಸುತ್ತಿದಾನೆ. ಪರಮಹಂಸರು ಭಗವತ್ಪ್ರೇಮದಿಂದ ಬಾಲಕನ ಹಾಗೆ ನರ್ತಿಸುತ್ತಿರುವುದನ್ನು ಕಂಡಾಗಲೆಲ್ಲಾ ವಿಜಯನೂ ಅವರೊಡನೆ ಬೆರೆತು ನರ್ತಿಸುತ್ತಾನೆ.

ಭಾನು ಭಾನುವಾರ ಅನೇಕ ಮಂದಿ ಭಕ್ತರು ಪರಮಹಂಸರನ್ನು ದರ್ಶಿಸಲು ಬರುತ್ತಾರೆ. ಆದ್ದರಿಂದ ಯಾರು ಅವರೊಡನೆ ಅನ್ಯೋನ್ಯ ವಾಗಿ ಬೆರೆಯಬೇಕು ಅಂತ ಇದಾರೊ ಅವರು ಉಳಿದ ಬಿಡುದಿನಗಳಲ್ಲಿ ಇಲ್ಲಿಗೆ ಬರುತ್ತಿದಾರೆ.

ಏಡೆದೇರ್ ಎಂಬ ಗ್ರಾಮದಲ್ಲಿ ವಾಸವಾಗಿದ್ದ ವಿಷ್ಣು ಎಂಬ ಹುಡುಗ ಚೂರಿಯಿಂದ ಕತ್ತು ಕೊಯ್ದುಕೊಂಡು ಆತ್ಮಹತ್ಯೆ ಮಾಡಿಕೊಂಡುಬಿಟ್ಟ. ಈಗ ಮಾತು ಆತನ ಸಂಬಂಧವಾಗಿ ಆರಂಭವಾಯಿತು.

ಶ್ರೀರಾಮಕೃಷ್ಣರು: "ಆ ಹುಡುಗ ಆತ್ಮಹತ್ಯೆ ಮಾಡಿಕೊಂಡು ಬಿಟ್ಟಿದ್ದನ್ನು ಕೇಳಿ ನನ್ನ ಮನಸ್ಸು ಕೆಟ್ಟುಹೋಗಿಬಿಟ್ಟಿದೆ. ಸ್ಕೂಲಿನಲ್ಲಿ ಓದುತ್ತಿದ್ದ. ಆಗಾಗ ಇಲ್ಲಿಗೆ ಬರುತ್ತಿದ್ದ ಮತ್ತು ಹೇಳುತ್ತಿದ್ದ, ಸಂಸಾರ ತನಗೆ ರುಚಿಸುತ್ತಿಲ್ಲ ಎಂಬುದಾಗಿ. ಒಮ್ಮೆ ಪಶ್ಚಿಮ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಕೆಲವು ದಿನವನ್ನು ತನ್ನ ಸಂಬಂಧಿಗಳೊಡನೆ ಕಳೆದ. ಅಲ್ಲಿ ಹುಲ್ಲು ಗಾವಲು, ಕಾಡು, ಬೆಟ್ಟ ಇವುಗಳ ಕಡೆ ಹೋಗಿ ಏಕಾಂತದಲ್ಲಿ ಧ್ಯಾನ ಮಾಡುತ್ತಿದ್ದ. ತನಗೆ ಅನೇಕ ಭಗವದ್ರೂಪದರ್ಶನ ಆಗಿದೆ ಎಂಬುದಾಗಿ ಒಮ್ಮೆ ನನಗೆ ತಿಳಿಸಿದ್ದ.

"ಬಹುಶಃ ಇದು ಆತನ ಕೊನೆ ಜನ್ಮ ಆಗಿರಬೇಕು. ಹಿಂದಿನ ಜನ್ಮಗಳಲ್ಲಿ ಆತ ಬಹಳವಾಗಿ ಸಾಧನೆ ಮಾಡಿದ್ದ ಅಂತ ಕಾಣುತ್ತೆ. ಎಲ್ಲೊ ಸ್ವಲ್ಪ ಬಾಕಿ ಉಳಿದುಕೊಂಡಿದ್ದಿರಬೇಕು. ಅದು ಈ ಜನ್ಮದಲ್ಲಿ ಮುಗಿದು ಹೋಗಿಬಿಟ್ಟಿತು.

"ಪೂರ್ವಜನ್ಮದ ಸಂಸ್ಕಾರವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇದರ ಸಂಬಂಧವಾಗಿ ಶವಸಾಧನೆ ಮಾಡುತ್ತಿದ್ದ ಒಬ್ಬನ ಕಥೆ ಕೇಳಿದೇನೆ. ಆತ ದಟ್ಟ ಕಾಡಿಗೆ ಹೋಗಿ ಭಗವತಿಯ ಆರಾಧನೆ ನಡೆಸುತ್ತಿದ್ದ. ಮೊದಲು ಆತನಿಗೆ ಬಹಳ ಭಯಂಕರ ದರ್ಶನಗಳೆಲ್ಲಾ ಆದುವು. ಕೊನೆಗೆ ಒಂದು ಹುಲಿ ಬಂದು ಆತನನ್ನು ಹಿಡಿದು ಕೊಂದುಹಾಕಿಬಿಟ್ಟಿತು. ಆ ಮಾರ್ಗ ವಾಗಿ ಹೋಗುತ್ತಿದ್ದ ಒಬ್ಬ ಮನುಷ್ಯ ಹುಲಿಯನ್ನು ಕಂಡು ಮರ ಹತ್ತಿ ಬಿಟ್ಟಿದ್ದ. ಶವ ಮತ್ತು ಅದರ ಪೂಜೆಗೆ ಬೇಕಾದ ಅನೇಕ ಪೂಜಾ ಸಲಕರಣೆ ಗಳು ಅಲ್ಲಿ ಸಿದ್ಧವಾಗಿರುವುದನ್ನು ನೋಡಿ, ಮರದಿಂದಿಳಿದುಬಂದು ಆಚಮನ ಮಾಡಿ ಶವದ ಮೇಲೆ ಕುಳಿತುಕೊಂಡುಬಿಟ್ಟ. ಸ್ವಲ್ಪ ಜಪ-ತಪ ಮಾಡು ವುದರೊಳಗೇ ಭಗವತಿ ಸಾಕ್ಷಾತ್ಕಾರಳಾಗಿ ಆತನಿಗೆ ಹೇಳಿದಳು: 'ಮಗು,

ನಾನು ನಿನ್ನ ತಪಸ್ಸನ್ನು ಬಹಳವಾಗಿ ಮೆಚ್ಚಿದೇನೆ. ಯಾವ ವರ ಬೇಕಾದರೂ ಕೇಳು.' ಭಗವತಿಯ ಪಾದಪದ್ಮಗಳಿಗೆ ಪ್ರಣಾಮಮಾಡಿ ಆತ ಹೇಳಿದ: 'ಹೇ ತಾಯೆ, ನಿನಗೊಂದು ಪ್ರಶ್ನೆ ಹಾಕಬೇಕೆಂದಿದೇನೆ. ನಿನ್ನ ಕಾರ್ಯ ನೋಡಿ ನಾನು ಬಹಳವಾಗಿ ಆಶ್ಚರ್ಯಚಕಿತನಾಗಿಬಿಟ್ಟಿದೇನೆ. ಆ ಮನುಷ್ಯ ಅಷ್ಟೊಂದು ಕಷ್ಟ ತೆಗೆದುಕೊಂಡು, ಇಷ್ಟೊಂದು ಪೂಜಾ ಸಾಮಗ್ರಿಗಳನ್ನೆಲ್ಲಾ ಹವಣಿಸಿಕೊಂಡು ಬಹಳ ಕಾಲ ನಿನ್ನನ್ನು ಪೂಜಿಸಿದ. ಆದರೂ ನೀನು ಆತನ ಮೇಲೆ ದಯೆ ತೋರಲೇ ಇಲ್ಲ! ಆದರೆ ನನಗೆ ಏನಂದರೆ ಏನೂ ಗೊತ್ತಿಲ್ಲ; ನಾನು ಭಜನಹೀನ, ಸಾಧನಹೀನ, ಜ್ಞಾನಹೀನ, ಭಕ್ತಿಹೀನ. ಆದರೂ ನನ್ನ ಮೇಲೆ ಇಷ್ಟೊಂದು ಕೃಪೆ ತೋರಿಬಿಟ್ಟೆಯಲ್ಲ!' ಭಗವತಿ ನಗುತ್ತ ನಗುತ್ತ ಹೇಳಿದಳು: 'ಮಗು, ನಿನಗೆ ನಿನ್ನ ಹಿಂದಿನ ಜನ್ಮಗಳ ಜ್ಞಾಪಕ ಇಲ್ಲ. ನೀನು ನನಗಾಗಿ ಅನೇಕ ಜನ್ಮಗಳಲ್ಲಿ ತಪಸ್ಸು ಮಾಡಿದೀಯೆ. ಆ ತಪಸ್ಸಿನ ಬಲದಿಂದ ಈ ಅನುಕೂಲತೆಗಳೆಲ್ಲಾ ದೊರೆತು ನಿನಗೆ ನನ್ನ ದರ್ಶನ ದೊರೆತಿದೆ. ಈಗ ಯಾವ ವರ ಬೇಕು ಕೇಳು.' "

ಒಬ್ಬ ಭಕ್ತ: "ಅವನು ಆತ್ಮಹತ್ಯೆ ಮಾಡಿಕೊಂಡಿದ್ದನ್ನು ಕೇಳಿ ನನಗೆ ಭಯ ಆಗುತ್ತದೆ."

ಶ್ರೀರಾಮಕೃಷ್ಣರು: "ಆತ್ಮಹತ್ಯೆ ನಿಸ್ಸಂದೇಹವಾಗಿಯೂ ಮಹಾ ಪಾಪಕಾರ್ಯವೇ. ಮತ್ತೆ ಮತ್ತೆ ಜನ್ಮವೆತ್ತಿ ಈ ಸಂಸಾರದ ಕೋಟಲೆಗಳನ್ನು ಅನುಭವಿಸಬೇಕಾಗುತ್ತದೆ.

"ಆದರೆ ಯಾರೇ ಆಗಲಿ ಭಗವಂತನ ದರ್ಶನ ದೊರೆತನಂತರ ಶರೀರವನ್ನು ತ್ಯಜಿಸಿಬಿಟ್ಟದ್ದೇ ಆದರೆ ಆತ್ಮಹತ್ಯೆಯಾಗಲಾರದು. ಆ ರೀತಿಯಾಗಿ ಶರೀರ ತ್ಯಾಗಮಾಡುವುದು ತಪ್ಪೇನೂ ಅಲ್ಲ. ಬ್ರಹ್ಮಜ್ಞಾನವನ್ನು ಹೊಂದಿದನಂತರ ಕೆಲಕೆಲವರು ಶರೀರವನ್ನು ತ್ಯಜಿಸಿಬಿಡುತ್ತಾರೆ. ಜೇಡಿ ಮಣ್ಣಿನ ಅಚ್ಚಿನಲ್ಲಿ ಚಿನ್ನದ ಪ್ರತಿಮೆಯನ್ನು ಎರಕಹೊಯ್ದನಂತರ ಆ ಅಚ್ಚನ್ನು ಬೇಕಾದರೆ ಹಾಗೇ ಇಡಬಹುದು ಇಲ್ಲದಿದ್ದರೆ ಒಡೆದುಹಾಕಿ ಬಿಡಬಹುದು.

"ಅನೇಕ ವರ್ಷಗಳ ಹಿಂದೆ ಗೋಪಾಲಸೇನ ಎಂಬ ಹೆಸರಿನ ಇಪ್ಪತ್ತು ವರ್ಷದ ಒಬ್ಬ ಯುವಕ ಇಲ್ಲಿಗೆ ಬರುತ್ತಿದ್ದ. ನನ್ನ ಎದುರಿನಲ್ಲಿ ಆತನಿಗೆ ಅಷ್ಟೊಂದಾಗಿ ಭಾವ ಬಂದುಬಿಡುತ್ತಿತ್ತು, ಕೆಳಕ್ಕೆ ಬಿದ್ದು ಕೈ

ಕಾಲು ಮುರಿದುಕೊಳ್ಳದೆ ಇರಲಿ ಎಂದು ಹೃದೆ ಆತನನ್ನು ಹಿಡಿದುಕೊಳ್ಳ ಬೇಕಾಗುತ್ತಿತ್ತು. ಆ ಯುವಕ ಒಂದು ದಿನ ಇದ್ದಕ್ಕಿದ್ದಹಾಗೆ ನನ್ನ ಕಾಲು ಹಿಡಿದುಕೊಂಡು ಹೇಳಿದ: 'ಮತ್ತೆ ನಾನು ನಿಮ್ಮ ದರ್ಶನಕ್ಕಾಗಿ ಬರಲಾಗುವುದಿಲ್ಲ. ನಮಸ್ತೆ.' ಕೆಲವು ದಿನಗಳಲ್ಲೇ ಕೇಳಿದೆ, ಆತ ಶರೀರ ತ್ಯಾಗ ಮಾಡಿಬಿಟ್ಟ ಎಂಬುದಾಗಿ.

"ಜೀವರಲ್ಲಿ ನಾಲ್ಕು ದರ್ಜೆಯವರಿದಾರೆ ಎಂಬುದಾಗಿ ಶಾಸ್ತ್ರದಲ್ಲಿ ಹೇಳಿದೆ—ಬದ್ಧ, ಮುಮುಕ್ಷು, ಮುಕ್ತ, ನಿತ್ಯ.

"ಈ ಜಗತ್ತು ಮೀನು ಬಲೆ ಇದ್ದ ಹಾಗೆ, ಜೀವ ಮೀನು ಇದ್ದ ಹಾಗೆ, ಭಗವಂತ— ಯಾರ ಮಾಯೆಯಿಂದ ಈ ಜಗತ್ತು ಸೃಷ್ಟವಾಗಿ ದೆಯೊ—ಬೆಸ್ತ ಇದ್ದ ಹಾಗೆ. ಬೆಸ್ತನ ಬಲೆಗೆ ಮೀನು ಬಿದ್ದಾಗ ಕೆಲವು ಮೀನು ಬಲೆಯನ್ನು ಕತ್ತರಿಸಿ ಓಡಿಹೋಗಲು, ಅಂದರೆ ಬಂಧನದಿಂದ ಪಾರಾಗಲು ಯತ್ನಿಸುತ್ತವೆ. ಇವನ್ನೇ ಮುಮುಕ್ಷು ಜೀವಕ್ಕೆ ಹೋಲಿಸ ಬಹುದು. ಬಂಧನದಿಂದ ಪಾರಾಗಲು ಯತ್ನಿಸಿದ ಮೀನುಗಳಲ್ಲಿ ಎಲ್ಲವೂ ಪಾರಾಗಿಬಿಡಲಾರವು. ಎಲ್ಲೊ ಮೂರೊ ನಾಲ್ಕೊ ಮೀನು 'ದಬಕ್' ಅಂತ ಶಬ್ದಮಾಡಿ ಓಡಿಹೋಗುತ್ತವೆ. ಆಗ ಜನ ಹೇಳುತ್ತಾರೆ: 'ಓ, ಅಲ್ಲಿ ಒಂದು ಬಹಳ ದೊಡ್ಡದು ಓಡಿಹೋಗುತ್ತಿದೆ!' ಈ ಮೂರೊ ನಾಲ್ಕೊ ಮೀನುಗಳನ್ನು ಮುಕ್ತಜೀವರಿಗೆ ಹೋಲಿಸಬಹುದು. ಕೆಲವು ಮೀನು ಸ್ವಾಭಾವಿಕವಾಗೇ ಅಷ್ಟು ಎಚ್ಚರಿಕೆಯುಳ್ಳವು, ಅವು ಎಂದಿಗೂ ಬಲೆಗೆ ಬೀಳುವುದೇ ಇಲ್ಲ; ನಾರದನೇ ಮೊದಲಾದ ನಿತ್ಯಜೀವರು ಎಂದಿಗೂ ಈ ಸಂಸಾರದ ಬಲೆಗೆ ಬೀಳುವುದೇ ಇಲ್ಲ. ಆದರೆ ಮೀನುಗಳಲ್ಲಿ ಅಧಿಕಾಂಶ ಬಲೆಗೆ ಬೀಳುತ್ತವೆ; ಆದರೂ ಅವಕ್ಕೆ ತಾವು ಬಲೆಗೆ ಬಿದ್ದಿರುವುದರ ಮತ್ತು ಒಡನೆ ಸಾಯಬೇಕಾಗಿರುವುದರ ಪ್ರಜ್ಞೆಯೇ ಇರುವುದಿಲ್ಲ. ಬಲೆಗೆ ಬಿದ್ದೊಡನೆಯೆ ಅವು ನೇರವಾಗಿ ಬಲೆಯೊಡನೆ ಓಡಿಹೋಗಿ ಬದಿಯನ್ನು ಹೊಕ್ಕು ತಮ್ಮನ್ನು ಮರೆಮಾಜಿಕೊಳ್ಳಲು ಪ್ರಯತ್ನಮಾಡುತ್ತವೆ. ಬಂಧನ ದಿಂದ ಪಾರಾಗಲು ಸ್ವಲ್ಪವೂ ಪ್ರಯತ್ನಮಾಡೋದಿಲ್ಲ. ಅದಕ್ಕೆ ಬದಲು ಬದಿಯ ಇನ್ನೂ ಆಳಕ್ಕೆ ಹೊಗುತ್ತವೆ. ಇವನ್ನೇ ಬದ್ಧಜೀವರಿಗೆ ಹೋಲಿಸಬಹುದು. ಈ ಮೀನು ಬಲೆಗೆ ಸಿಕ್ಕಿಬಿದ್ದಿವೆ, ಆದರೂ ಇವು ಭಾವಿಸುತ್ತವೆ ತಾವು ಸುರಕ್ಷಿತವಾಗಿದೇವೆ ಎಂಬುದಾಗಿ. ಬದ್ಧಜೀವರು ಜಗತ್ತಿನಲ್ಲಿ, ಎಂದರೆ ಕಾಮಕಾಂಚನದಲ್ಲಿ ಆಸಕ್ತರಾಗಿಬಿಟ್ಟದಾರೆ; ಕಳಂಕ

ಸಾಗರದಲ್ಲಿ ಬಹಳವಾಗಿ ಮಗ್ನರಾಗಿಬಿಟ್ಟಿದಾರೆ. ಆದರೂ ಭಾವಿಸುತ್ತಾರೆ ತಾವು ಸೌಖ್ಯದಿಂದಿದೇವೆ ಎಂಬುದಾಗಿ. ಮುಮುಕ್ಷುಗಳಿಗೆ ಮತ್ತು ಮುಕ್ತರಿಗೆ ಈ ಜಗತ್ತು ದೊಡ್ಡ ಆಳವಾದ ಬಾವಿಯ ಹಾಗೆ ಕಾಣುತ್ತದೆ; ಹೇಯವಾಗಿ ಕಾಣುತ್ತದೆ. ಅದಕ್ಕಾಗೇ ಕೆಲಕೆಲವರು ಬ್ರಹ್ಮಜ್ಞಾನ ದೊರೆತನಂತರ, ಭಗವಂತನ ಸಾಕ್ಷಾತ್ಕಾರ ದೊರೆತನಂತರ ಶರೀರವನ್ನು ತ್ಯಜಿಸಿಬಿಡುತ್ತಾರೆ. ಆದರೆ ಆ ವಿಧದ ಶರೀರತ್ಯಾಗ ಬಹಳ ದೂರದ ಮಾತು.

"ಬದ್ಧಜೀವರು — ಈ ಜಗತ್ತಿಗೆ ಕಟ್ಟುಬಿದ್ದ ಜೀವರು — ಏನು ಮಾಡಿದರೂ ಎಚ್ಚರಗೊಳ್ಳರು. ಅವರು ಎಷ್ಟೊಂದು ದುಃಖ, ಶೋಕ ಇವುಗಳಿಗೆ ತುತ್ತಾಗುತ್ತಾರೆ; ಎಷ್ಟೊಂದು ವಿಪತ್ತುಗಳಿಗೆ ಸಿಕ್ಕಿಕೊಳ್ಳುತ್ತಾರೆ! ಆದರೂ ಅವರು ಎಚ್ಚರಗೊಳ್ಳರು.

"ಒಂಟೆಗೆ ನೆಗ್ಗಲು ಮುಳ್ಳು ಕಂಡರೆ ಬಹಳ ಪ್ರೀತಿ. ಅದು ಅದನ್ನು ಅಧಿಕವಾಗಿ ತಿಂದಂತೆಲ್ಲ ಅದರ ಬಾಯಿಂದ ರಕ್ತ ಸುಮ್ಮನೆ ಧಾರಾಕಾರವಾಗಿ ಹರಿಯಲಾರಂಭಿಸುತ್ತದೆ. ಆದರೂ ಅದಕ್ಕೆ ಆ ಮುಳ್ಳೇ ಬೇಕು. ಅದನ್ನು ತಿನ್ನುವುದನ್ನು ಎಂದಿಗೂ ಬಿಡದು. ಸಂಸಾರಿಗಳು ಬಹಳವಾಗಿ ಶೋಕ, ತಾಪ ಇವುಗಳಿಂದ ಬೆಂದು ಬೆಂಡಾಗುತ್ತಾರೆ. ಆದರೂ ಕೆಲವು ದಿನಗಳಲ್ಲೇ ಎಲ್ಲವನ್ನೂ ಮರೆತು ಎಂದಿನ ಮೂರ್ತಿಗಳೇ ಆಗಿಬಿಡುತ್ತಾರೆ. ಹೆಂಡತಿ ಸತ್ತುಹೋಗಿಬಿಟ್ಟಳು ಅಥವಾ ಬೇರೊಬ್ಬನನ್ನ ಕಟ್ಟಿಕೊಂಡು ಹೋಗಿಬಿಟ್ಟಳು ಅಂತ ಇಟ್ಟುಕೊ. ಆದರೂ ಆತ ಮತ್ತೆ ವಿವಾಹವಾಗುತ್ತಾನೆ.

"ಅಥವಾ ಉದಾಹರಣೆಗೆ ಮಗುವನ್ನು ಕಳೆದುಕೊಂಡ ತಾಯಿಯನ್ನು ತೆಗೆದುಕೊ. ಅವಳು ಎಷ್ಟೊಂದು ದುಃಖಪಡುತ್ತಾಳೆ ಏನುಕತೆ! ಆದರೇನು ಕೆಲವು ದಿನಗಳಲ್ಲೆ ಅದನ್ನೆಲ್ಲಾ ಮರೆತುಬಿಡುತ್ತಾಳೆ. ಈಗ ಎಲ್ಲೊ ಕೆಲವುದಿನದ ಹಿಂದೆಯೇ ಅಷ್ಟೊಂದು ದುಃಖಾಕ್ರಾಂತಳಾಗಿ ಕಂಗೆಟ್ಟಿದ್ದ ಆ ತಾಯೇ ಮತ್ತೆ ತಲೆ-ಗಿಲೆ ಬಾಚಿಕೊಂಡು, ಒಡವೆ-ವಸ್ತ್ರ ಹಾಕಿಕೊಂಡು ಸಿಂಗರಿಸಿಕೊಳ್ಳುತ್ತಾಳೆ! ಸಂಸಾರಿಗಳು ತಮ್ಮ ಮಗಳ ಮದುವೆಗಾಗಿ ಇದ್ದುಬದ್ದುದನ್ನೆಲ್ಲ ಖರ್ಚುಮಾಡಿ ದಿವಾಳಿಗಳಾಗುತ್ತಾರೆ. ಆದರೂ ವರ್ಷವರ್ಷವೂ ಮಕ್ಕಳನ್ನು ಹೆರುತ್ತಲೇ ಇರುತ್ತಾರೆ. ಜನ ಕೋರ್ಟು ಹತ್ತಿ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ, ಆದರೂ ಅವರು ಕೋರ್ಟು ಹತ್ತು

ವುದನ್ನು ಎಂದಿಗೂ ಬಿಡರು. ಜನರಿಗೆ, ತಾವು ಆಗಲೆ ಪಡೆದುಕೊಂಡಿರುವ ಮಕ್ಕಳಿಗೇ ಅನ್ನಹಾಕಲು, ಬಟ್ಟೆಬರೆ ಒದಗಿಸಲು ಒಳ್ಳೆ ವಸತಿ ಕಲ್ಪಿಸಿ ಕೊಡಲು ಸಾಧ್ಯವಿಲ್ಲ; ಆದರೂ ವರ್ಷ ವರ್ಷವೂ ಮಕ್ಕಳನ್ನು ಪಡೆದು ಕೊಳ್ಳುತ್ತಲೇ ಇರುತ್ತಾರೆ.

"ಪ್ರಾಪಂಚಿಕರನ್ನು ಹೆಗ್ಗಣ ನುಂಗಲು ಪ್ರಯತ್ನಿಸಿದ ಹಾವಿಗೆ ಹೋಲಿಸಬಹುದು. ಅದು ಅದನ್ನು ನುಂಗಲೂ ಆರದು ಬಿಡಲೂ ಆರದು. ಅಮಟೆಕಾಯಿಯಲ್ಲಿ ಕೇವಲ ಸಿಪ್ಪೆ ಬೀಜ ಮಾತ್ರ ಇರೋ ಹಾಗೆ, ಈ ಸಂಸಾರದಲ್ಲಿ ಯಾವ ಸಾರವೂ ಇಲ್ಲ ಎಂಬುದಾಗಿ ಬದ್ಧಜೀವರಿಗೆ ತೋರ ಬಹುದು, ಆದರೂ ಅವರು ಅದನ್ನು ಬಿಡಲಾರರು. ಅದನ್ನು ಬಿಟ್ಟು ಭಗವಂತನ ಕಡೆಗೆ ಮನಸ್ಸು ತಿರುಗಿಸಲಾರರು.

"ನಾನು ಒಮ್ಮೆ ಕೇಶವಸೇನನ ಒಬ್ಬ ಸಂಬಂಧಿಯನ್ನು ನೋಡಿದೆ. ಆಗಲೆ ಐವತ್ತು ವರ್ಷವಾಗಿದ್ದರೂ ಇಸ್ಪೀಟು ಆಡುತ್ತ ಕುಳಿತಿದ್ದ. ಭಗವಂತನ ಧ್ಯಾನಕ್ಕೆ ಇನ್ನೂ ಸಮಯ ಬಂದಿಲ್ಲ ಅಂತ ಕಾಣುತ್ತೆ ಆತನಿಗೆ!

"ಬದ್ಧಜೀವರಿಗೆ ಇನ್ನೊಂದು ಸ್ವಭಾವ ಇದೆ. ಅವರಿಗೆ ಪ್ರಾಪಂಚಿಕ ವಾತಾವರಣವನ್ನು ತಪ್ಪಿಸಿ, ಆಧ್ಯಾತ್ಮಿಕ ವಾತಾವರಣವನ್ನು ಕಲ್ಪಿಸಿ ಕೊಡುವುದಾದರೆ ಹಾಗೇ ಕೃಶವಾಗಿ ಕೃಶವಾಗಿ ಸತ್ತೇಹೋಗಿಬಿಡುತ್ತಾರೆ. ಮಲದ ಹುಳುವಿಗೆ ಮಲವನ್ನು ಕಂಡರೇ ಆನಂದ. ಅಲ್ಲೇ ಅದು ಹೃಷ್ಟಪುಷ್ಟವಾಗಿ ಬೆಳೆಯುತ್ತದೆ. ಅದನ್ನು ತಂದು ಅನ್ನದ ತಪ್ಪಲೆಯಲ್ಲಿ ಇಟ್ಟದ್ದೇ ಆದರೆ ಅದು ಅಲ್ಲಿ ಸತ್ತೇಹೋಗುತ್ತದೆ."

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ.

ವಿಜಯ: "ಬದ್ಧಜೀವನ ಮನಸ್ಸು ಯಾವ ಅವಸ್ಥೆಯನ್ನು ಮುಟ್ಟಿ ದರೆ ಆತನಿಗೆ ಮುಕ್ತಿ ದೊರಕಬಹುದು?"

ಶ್ರೀರಾಮಕೃಷ್ಣರು: "ಭಗವಂತನ ಕೃಪೆಯಿಂದ ಆತನಲ್ಲಿ ತೀವ್ರ ವೈರಾಗ್ಯ ಉಂಟಾದದ್ದೇ ಆದರೆ, ಆಗ ಆತ ಕಾಮಕಾಂಚನಾಸಕ್ತಿಗಳಿಂದ ಮುಕ್ತನಾಗಬಲ್ಲ. ಯಾವುದಕ್ಕೆ ತೀವ್ರ ವೈರಾಗ್ಯ ಅಂತ ಹೆಸರು? ಮಂದ ವೈರಾಗ್ಯವಿರುವವನು ಹೇಳುತ್ತಾನೆ: 'ಎಲ್ಲಾ ಸಕಾಲಕ್ಕೆ ನಿಧಾನವಾಗಿ ಬರಲಿ; ಈಗ ಸದ್ಯ ನಾನು ಸುಮ್ಮನೆ ಭಗವಂತನ ನಾಮಜಪ ಮಾಡು ತ್ತಿರುತ್ತೇನೆ.' ಆದರೆ ಯಾರಲ್ಲಿ ತೀವ್ರ ವೈರಾಗ್ಯ ಉಂಟಾಗಿದೆಯೊ, ಆತ ಹೇಗೆ ತಾಯಿ ತನ್ನ ಮಗುವಿಗಾಗಿ ಬಹಳವಾಗಿ ವ್ಯಾಕುಲಳಾಗಿರುತ್ತಾಳೊ

ಹಾಗೇ ಭಗವಂತನಿಗಾಗಿ ಬಹಳವಾಗಿ ವ್ಯಾಕುಲಪಡುತ್ತಿರುತ್ತಾನೆ. ತೀವ್ರ ವೈರಾಗ್ಯವುಳ್ಳವನಿಗೆ ಭಗವಂತನ ಹೊರತು ಇನ್ನು ಏನೂ ಬೇಕೆನಿಸುವುದಿಲ್ಲ. ಆತನಿಗೆ ಈ ಸಂಸಾರ ಒಂದು ದೊಡ್ಡ ಬಾವಿಯ ಹಾಗೆ ಕಾಣುತ್ತದೆ; ಅನಿಸುತ್ತದೆ, ಇದರಲ್ಲಿ ಮುಳುಗಿಹೋಗಿಬಿಡುತ್ತಿದೇನಲ್ಲ ಎಂಬುದಾಗಿ. ಸ್ವಬಾಂಧವರು ಕಾಳಸರ್ಪಗಳ ಹಾಗೆ ಕಂಡುಬರುತ್ತಾರೆ; ಅವರಿಂದ ತಪ್ಪಿಸಿಕೊಂಡು ಓಡಿಹೋಗಲು ಇಚ್ಛೆಯಾಗುತ್ತದೆ. ಆತ ಕೊನೆಗೆ ಓಡಿಯೂ ಹೋಗುತ್ತಾನೆ. 'ಮನೆಯಲ್ಲಿ ಸುವ್ಯವಸ್ಥೆಮಾಡಿಬಿಟ್ಟು ಬಳಿಕ ಭಗವಚ್ಚಿಂತನೆ ಮಾಡೋಣ' ಎಂದು ಆತ ಎಂದಿಗೂ ಯೋಚಿಸುವುದೇ ಇಲ್ಲ. ಅಂತರ್ಯದಲ್ಲಿ ಆತನಿಗೆ ಒಳ್ಳೆ ಬಲ ಇದೆ.

"ತೀವ್ರ ವೈರಾಗ್ಯದ ಸಂಬಂಧವಾಗಿ ಒಂದು ಕಥೆ ಕೇಳು. ಒಂದು ದೇಶದಲ್ಲಿ ಅನಾವೃಷ್ಟಿಯಾಗಿತ್ತು. ರೈತರು ಬಹಳ ದೂರದಿಂದ ನೀರು ತರಲು ಕಾಲುವೆ ತೋಡಲಾರಂಭಿಸಿದರು. ಒಬ್ಬ ರೈತ ಒಳ್ಳೆ ದೃಢಸಂಕಲ್ಪ ಶಾಲಿ. ಒಂದು ದಿನ ಪ್ರತಿಜ್ಞೆಮಾಡಿಕೊಂಡ, ನದಿಯಿಂದ ತನ್ನ ಜಮೀನಿನ ವರೆಗೆ ಕಾಲುವೆ ತೋಡಿ ನೀರು ತರುವವರೆಗೆ ಹಿಡಿದ ಗುದ್ದಲಿಯನ್ನು ಬಿಡುವುದೇ ಇಲ್ಲ ಎಂಬುದಾಗಿ. ಅಗೆಯಲು ಶುರುಮಾಡಿದ. ಸ್ನಾನಕ್ಕೆ ಸಮಯ ಆಯಿತು. ಹೆಂಡತಿ ಮಗಳ ಕೈಯಲ್ಲಿ ಎಣ್ಣೆ ಕೊಟ್ಟು ಕಳುಹಿಸಿದಳು. ಮಗಳು ಬಂದು ಹೇಳಿದಳು: 'ಅಪ್ಪ, ಸ್ನಾನಕ್ಕೆ ಸಮಯವಾಗಿದೆ. ಎಣ್ಣೆ ಹಚ್ಚಿಕೊಂಡು ಸ್ನಾನಮಾಡಿ.' ಆತ ಗುಡುಗಿದ: 'ಹೋಗು ಇಲ್ಲಿಂದ! ನನ್ನ ಕೆಲಸ ಇನ್ನೂ ಮುಗಿದಿಲ್ಲ.' ಆಗಲೆ ಸಮಯ ಅಪರಾಹ್ನ ಒಂದು, ಇನ್ನೂ ಕೆಲಸಮಾಡುತ್ತಲೇ ಇದಾನೆ. ಸ್ನಾನದ ಯೋಚನೆಯೇ ಇಲ್ಲ. ಬಳಿಕ ಹೆಂಡತಿ ಬಂದು ಹೇಳಿದಳು: 'ಇನ್ನೂ ನೀವು ಸ್ನಾನವನ್ನೇ ಮುಗಿಸಿಲ್ಲವಲ್ಲ? ಅಡಿಗೆಯೆಲ್ಲಾ ಆರಿಹೋಗಿಬಿಡುತ್ತಾ ಇವೆ. ಯಾವಾಗ ನೋಡಿದರೂ ನಿಮ್ಮದು ಹಿಡಿದಿದ್ದೇ ಹಠ. ಉಳಿದುದನ್ನ ನಾಳೆ ಮಾಡಿದ ರಾಯಿತು, ಇಲ್ಲವೆ ಊಟ ಮುಗಿಸಿ ಮಾಡಿದರಾಯಿತು.' ಆಕೆಯನ್ನು ಚೆನ್ನಾಗಿ ಬಯ್ದು ಗುದ್ದಲಿ ಹಿಡಿದುಕೊಂಡು ಅಟ್ಟಿಸಿಕೊಂಡುಹೋಗುತ್ತ ಕಿರಿಚಲಾರಂಭಿಸಿದ: 'ನಿನಗೇನು ಬುದ್ಧಿ-ಗಿದ್ಧಿ ಎಂಬುದು ಎಳ್ಳಷ್ಟೂ ಇಲ್ಲವೆ? ಮಳೆ ಬರಲಿಲ್ಲ. ಬೆಳೆಯೆಲ್ಲಾ ಒಣಗಿಹೋಗುತ್ತಿದೆ. ಮಕ್ಕಳು ಮರಿ ಏನು ತಿನ್ನಬೇಕು? ನೀವೆಲ್ಲಾ ಹೊಟ್ಟೆಗಿಲ್ಲದೆ ಸತ್ತುಹೋಗಿಬಿಡುವಿರಿ. ಜಮೀನಿಗೆ ಇಂದು ನೀರು ತರುವುದಕ್ಕಿಂತ ಮುಂಚೆ ಸ್ನಾನ, ಊಟ

ಯಾವುದರ ಯೋಚನೆಯನ್ನೂ ಮಾಡುವುದೇ ಇಲ್ಲ ಎಂದು ಪ್ರತಿಜ್ಞೆಮಾಡಿ ಕೊಂಡುಬಿಟ್ಟಿದೇನೆ.' ಹೆಂಡತಿ ಆತನ ಸ್ವರೂಪ ನೋಡಿ ಹೆದರಿ ಸುಮ್ಮನೆ ಓಡಿದ್ದೂ ಓಡಿದ್ದೆ. ರೈತ ಬೆನ್ನುಮುರಿಯುವವರೆಗೆ ಇಡೀ ದಿನವೆಲ್ಲ ಕೆಲಸ ಮಾಡಿ ಸಾಯಂಕಾಲದ ಹೊತ್ತಿಗೆ ತನ್ನ ಜಮೀನಿಂದ ನದಿಯವರೆಗೆ ಕಾಲುವೆ ತೋಡಿ ಮುಗಿಸೇಬಿಟ್ಟ. ಬಳಿಕ ಒಂದು ಕಡೆ ಕುಳಿತುಕೊಂಡು ನದಿ ನೀರು ತನ್ನ ಜಮೀನಿಗೆ 'ಕಲ, ಕಲ' ಅಂತ ಶಬ್ದಮಾಡಿಕೊಂಡು ನುಗ್ಗುತ್ತಿರುವುದನ್ನು ನೋಡಲಾರಂಭಿಸಿದ. ಆಗ ಆತನ ಮನಸ್ಸು ಶಾಂತಿ ಯಿಂದ ಮತ್ತು ಪೂರ್ಣ ಆನಂದದಿಂದ ತುಂಬಿತುಳುಕಾಡಲಾರಂಭಿಸಿತು. ಬಳಿಕ ಮನೆಗೆ ಹೋಗಿ ಹೆಂಡತಿಯನ್ನು ಕರೆದು ಹೇಳಿದ: 'ಈಗ ಎಣ್ಣೆ ತಂದುಕೊಡು; ಗುಡುಗುಡಿ ಸಿದ್ಧಪಡಿಸು.' ನಿಶ್ಚಿಂತೆಯಿಂದ ಸ್ನಾನ, ಊಟ ಮುಗಿಸಿ ಮಲಗಿಕೊಂಡು ಮನೆ ಸೂರು ಕಿತ್ತುಹೋಗೋ ಹಾಗೆ ಗೊರಕೆ ಹೊಡೆಯಲಾರಂಭಿಸಿದ. ಈ ವಿಧದ ದೃಢಸಂಕಲ್ಪವೇ ತೀವ್ರ ವೈರಾಗ್ಯದ ಉಪಮೆ.

"ಇನ್ನೊಬ್ಬ ರೈತನೂ ತನ್ನ ಜಮೀನಿಗೆ ನೀರು ತರಲು ಕಾಲುವೆ ತೆಗೆಯುತ್ತಿದ್ದ. ಆತನ ಹೆಂಡತಿಯೂ ಜಮೀನಿನ ಹತ್ತಿರಕ್ಕೆ ಬಂದು ಹೇಳಿ ದಳು: 'ಆಗಲೆ ಬಹಳವಾಗಿ ಹೊತ್ತಾಗಿಬಿಟ್ಟಿದೆ. ಸಾಕು, ಸಾಕು, ಬನ್ನಿ. ಮಿತಿ ಮೀರಿ ಕೆಲಸಮಾಡುವುದು ಒಳ್ಳೆಯದೇನಲ್ಲ.' ಆತ ವಿಶೇಷವಾಗಿ ಏನೂ ಅಸಮ್ಮತಿ ತೋರಿಸದೆ, ಗುದ್ದಲಿಯನ್ನು ಒಂದು ಕಡೆಗಿಟ್ಟು ಹೆಂಡತಿಗೆ ಹೇಳಿದ: 'ಆಗಲಿ, ನಿನ್ನ ಮಾತಿನಂತೇ ಆಗಲಿ. ನಡೆ ಹೋಗೋಣ.' (ಎಲ್ಲರೂ ನಗುತ್ತಾರೆ.) ಆತನಿಗೆ ತನ್ನ ಜಮೀನಿಗೆ ನೀರು ತರಲಾಗಲೇ ಇಲ್ಲ. ಇದು ಮಂದ ವೈರಾಗ್ಯದ ಉಪಮೆ.

"ಒಳ್ಳೆ ದೃಢಸಂಕಲ್ಪವಿಲ್ಲದಿದ್ದರೆ ಯಾವ ರೀತಿಯಾಗಿ ರೈತ ತನ್ನ ಜಮೀನಿಗೆ ನೀರು ತರಲಾರನೊ ಹಾಗೇ ತೀವ್ರ ವೈರಾಗ್ಯವಿಲ್ಲದಿದ್ದರೆ ಮನುಷ್ಯ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾರ. (ವಿಜಯನಿಗೆ) ಹಿಂದೆ ನೀನು ಬಹಳವಾಗಿ ಇಲ್ಲಿಗೆ ಬರುತ್ತಿದ್ದೆ. ಈಗ ಏಕೆ ಹಾಗೆ ಬರುತ್ತಿಲ್ಲವಲ್ಲ ?"

ವಿಜಯ: "ನನಗೇನೊ ಬರಬೇಕು ಎಂಬುದಾಗಿ ಬಹಳವಾಗಿ ಇಚ್ಛೆಯಿದೆ, ಆದರೆ ನಾನು ಸ್ವಾಧೀನನಲ್ಲ. ಬ್ರಾಹ್ಮಸಮಾಜದಲ್ಲಿ ಕೆಲ ಸಕ್ಕೆ ಒಪ್ಪಿಕೊಂಡಿದೇನೆ."

ಶ್ರೀರಾಮಕೃಷ್ಣರು: "ಕಾಮಕಾಂಚನ ಮನುಷ್ಯನನ್ನು ಬಂಧಿಸಿ ಆತನ ಸ್ವಾಧೀನತೆಯನ್ನು ಕಸಿದುಕೊಂಡುಬಿಡುತ್ತವೆ. ಕಾಮದ ದೆಸೆಯಿಂದಲೇ ಕಾಂಚನ ಬೇಕಾಗುತ್ತದೆ. ಕಾಮದ ದೆಸೆಯಿಂದಲೇ ಪರರ ದಾಸತ್ವಕ್ಕೆ ಇಳಿದು ಸ್ವಾಧೀನತೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಆಗ ಸ್ವಂತ ಇಚ್ಛೆಯಂತೆ ಏನನ್ನೂ ಮಾಡಲಾಗೋದಿಲ್ಲ.

"ಜಯಪುರದ ಗೋವಿಂದದೇವಾಲಯದ ಅರ್ಚಕರು ಮೊದ ಮೊದಲು ವಿವಾಹ ಮಾಡಿಕೊಳ್ಳುತ್ತಿರಲಿಲ್ಲ. ಆಗ ಅವರು ಬಹಳ ತೇಜಸ್ವಿಗಳಾಗಿರುತ್ತಿದ್ದರು. ಒಮ್ಮೆ ರಾಜ ಅವರಿಗಾಗಿ ಕರೆಕಳುಹಿಸಿದ. ಅವರು ಹೋಗದೆ ದೂತನಿಗೆ ತಿಳಿಸಿದರು: 'ರಾಜನನ್ನೇ ಇಲ್ಲಿಗೆ ಬರುವಂತೆ ಹೇಳು.' ದೊರೆ ಮತ್ತು ಆತನ ಮಂತ್ರಿಗಳು ಸಮಾಲೋಚನೆ ನಡಸಿ ಆ ಅರ್ಚಕರಿಗೆಲ್ಲಾ ವಿವಾಹಮಾಡಿಸಿದರು. ಅಲ್ಲಿಂದಾಚೆಗೆ ಅವರಿಗಾಗಿ ಕರೆಕಳುಹಿಸುವ ಆವಶ್ಯಕತೆಯೇ ದೊರೆಗೆ ಬರಲಿಲ್ಲ. ತಮ್ಮಷ್ಟಕ್ಕೆ ತಾವೇ ಬರಲಾರಂಭಿಸಿದರು. ಬಂದು ಹೇಳುತ್ತಿದ್ದರು: 'ಮಹಾರಾಜ, ನಿಮಗೆ ಆಶೀರ್ವಾದ ಮಾಡಲು ಬಂದಿದೇವೆ. ನಿರ್ಮಾಲ್ಯ ತಂದಿದೇವೆ, ದಯವಿಟ್ಟು ಸ್ವೀಕರಿಸಿ.' ಈ ದಿನ ಮನೆಯ ಶಂಕುಸ್ಥಾಪನೆ, ಈ ದಿನ ಮಗುವಿಗೆ ಅನ್ನಪ್ರಾಶನ, ಈ ದಿನ ಮಗುವಿಗೆ ಅಕ್ಷರಾಭ್ಯಾಸ ಹೀಗೇ ಏನೇನೋ ನೆಪ ತೆಗೆದುಕೊಂಡು ರಾಜನನ್ನು ಸಮೀಪಿಸಲಾರಂಭಿಸಿದರು.

"ಸಾವಿರದ ಇನ್ನೂರು 'ನೇಡರ[1]' ಸಾವಿರದ ಮುನ್ನೂರು 'ನೇಡಿಯರ[2]' ಒಂದು ಕಥೆ ಇದೆ. ನಿತ್ಯಾನಂದಗೋಸ್ವಾಮಿಯ ಮಗ ವೀರಭದ್ರನಿಗೆ ಸಾವಿರದ ಮುನ್ನೂರು ಮಂದಿ ನೇಡ ಶಿಷ್ಯರಿದ್ದರು. ಅವರೆಲ್ಲರೂ ಸಿದ್ಧಪುರುಷರಾಗಿಬಿಟ್ಟದ್ದರಿಂದ ವೀರಭದ್ರನಿಗೆ ಭಯ ಬಂತು. ಆತ ಯೋಚಿಸಲಾರಂಭಿಸಿದ: 'ಇವರು ಸಿದ್ಧಪುರುಷರಾಗಿಬಿಟ್ಟಿದಾರೆ. ಇವರ ಬಾಯಿಂದ ಬರುವುದೆಲ್ಲವೂ ಫಲಿಸಿಬಿಡುತ್ತದೆ. ಇವರು ಹೋದ ಕಡೆಯಲ್ಲೆಲ್ಲಾ ಜನ ಭಯಪಡಬೇಕಾಗುತ್ತದೆ; ಏಕೆಂದರೆ ಜನ ತಿಳಿಯದೆ ಇವರಿಗೆ ಅಪರಾಧ ಮಾಡಿದ್ದೇ ಆದರೆ ಅವರಿಗೆ ಅನಿಷ್ಟ ಉಂಟಾಗುತ್ತದೆ.' ಹೀಗೆಲ್ಲಾ ಯೋಚಿಸಿ ವೀರಭದ್ರ ಅವರನ್ನು ಕರೆದು ಹೇಳಿದ: 'ನೀವು ಗಂಗೆಗೆ ಹೋಗಿ ಸಂಧ್ಯಾವಂದನೆ ಆಹ್ನಿಕ ಇವನ್ನೆಲ್ಲಾ ಮುಗಿಸಿಕೊಂಡು

1. ವೈಷ್ಣವ ಸನ್ಯಾಸಿಗಳು.
2. ವೈಷ್ಣವ ಸನ್ಯಾಸಿನಿಯರು.

ಬಂದು ನನ್ನನ್ನು ನೋಡಿ.' ನೇಡರು ಅಂಥಾ ಆಧ್ಯಾತ್ಮಿಕ ಉನ್ನತಿಯನ್ನು ಹೊಂದಿದ್ದರು, ಧ್ಯಾನ ಮಾಡುತ್ತ ಮಾಡುತ್ತ ಸಮಾಧಿಸ್ಥರಾಗಿಬಿಡುತ್ತಿದ್ದರು. ಗಂಗೆಯಲ್ಲಿ ಉಬ್ಬರ ಬಂದು ಅವರ ತಲೆಯ ಮೇಲೆ ಹರಿದು ಹೋದರೂ ಅವರಿಗೆ ಬಾಹ್ಯಪ್ರಜ್ಞೆಯೇ ಉಂಟಾಗುತ್ತಿರಲಿಲ್ಲ. ಬಳಿಕ ಇಳಿತವಾದಾಗಲೂ ಅವರು ಇನ್ನೂ ಧ್ಯಾನಸ್ಥರಾಗೇ ಇರುತ್ತಿದ್ದರು.

"ಈ ಸಾವಿರದ ಮುನ್ನೂರು ನೇಡರಲ್ಲಿ ನೂರು ಮಂದಿ ನೇಡರು ಊಹಿಸಿಕೊಂಡುಬಿಟ್ಟರು ವೀರಭದ್ರ ತಮಗೇನು ಹೇಳಬಹುದು ಎಂಬುದನ್ನ. ಗುರುವಿನ ಮಾತನ್ನು ಶಿಷ್ಯ ಮೀರಕೂಡದು. ಅದಕ್ಕಾಗಿ ಅವರು ಗುರು ತಮಗಾಗಿ ಕರೆಕಳುಹಲು ಮುನ್ನವೇ ಬೇರೆ ಕಡೆಗೆ ಹೊರಟುಹೋಗಿಬಿಟ್ಟರು. ಅವರು ಆತನನ್ನು ಸಂಧಿಸ ಹೋಗಲಿಲ್ಲ. ಉಳಿದ ಒಂದು ಸಾವಿರದ ಇನ್ನೂರು ನೇಡರು ಹೋಗಿ ಗುರುವನ್ನು ಕಂಡರು. ವೀರಭದ್ರ ಅವರಿಗೆ ಹೇಳಿದ: 'ಈ ಸಾವಿರದ ಮುನ್ನೂರು ಜನ ನೇಡಿಯರು ನಿಮ್ಮ ಸೇವೆ ಮಾಡಿಕೊಂಡಿರುತ್ತಾರೆ. ನೀವು ಇವರನ್ನು ಮದುವೆಯಾಗಬೇಕು.' ಅವರು ಹೇಳಿದರು: 'ಅಪ್ಪಣೆ; ಆದರೆ ನಮ್ಮಲ್ಲಿ ಒಂದು ನೂರು ಮಂದಿ ಎಲ್ಲಿಗೊ ಹೊರಟುಹೋಗಿಬಿಟ್ಟಿದಾರೆ.' ಬಳಿಕ ಆ ಸಾವಿರದ ಇನ್ನೂರು ನೇಡರೂ ಒಬ್ಬೊಬ್ಬ ನೇಡಿಯ ಕೈ ಹಿಡಿದು ಬದುಕಲಾರಂಭಿಸಿದರು. ಅನಂತರ ಅವರಲ್ಲಿ ಆ ತೇಜಸ್ಸೂ ಉಳಿಯಲಿಲ್ಲ, ಆ ತಪಸ್ಸಿನ ಬಲವೂ ಉಳಿಯಲಿಲ್ಲ. ಹೆಂಗಸಿನ ಸಹವಾಸದಿಂದ ಸ್ವಾತಂತ್ರ್ಯವನ್ನು ಕಳೆದುಕೊಂಡದ್ದರಿಂದ ತಪಸ್ಸಿನ ಬಲವೂ ಕುಗ್ಗಿಹೋಯಿತು.

(ವಿಜಯನಿಗೆ) "ಪರರ ದಾಸತ್ವಕ್ಕೆ ಇಳಿದರೆ ಎಷ್ಟು ಎಷ್ಟು ಆಳಕ್ಕೆ ಇಳಿದುಹೋಗಬೇಕಾಗುತ್ತದೆ ಎಂಬುದು ನಿಮಗೇ ತೋರಿಬರುತ್ತಿದೆ. ಮತ್ತೆ ಹಾಗೇ ನೋಡು, ವಿಶ್ವವಿದ್ಯಾನಿಲಯದ ಅನೇಕ ಡಿಗ್ರಿಗಳನ್ನು ಪಡೆದುಕೊಂಡಿರೋ ಒಳ್ಳೆ ಇಂಗ್ಲಿಷು ವ್ಯಾಸಂಗಮಾಡಿರೋ ಅನೇಕ ಮಂದಿ ವಿದ್ವಾಂಸರು ಆಂಗ್ಲ ದಣಿಗಳ ಕೈಕೆಳಗೆ ಕೆಲಸಕ್ಕೆ ಒಪ್ಪಿಕೊಂಡು ದಿನವೂ ಅವರ ಬೂಟ್ಸಿ ಕಾಲಿನ ಒದೆತ ತಿನ್ನುತ್ತಿರುವುದನ್ನ! ಇದಕ್ಕೆಲ್ಲಾ ಮುಖ್ಯ ಕಾರಣ ಹೆಂಗಸು. ವಿವಾಹವಾಗಿ ಸಂಸಾರದ ಅಂಗಡಿಯನ್ನು ತೆರೆದುಬಿಟ್ಟಿದಾರೆ. ಇಚ್ಛೆಪಟ್ಟರೂ ಈಗ ಅದನ್ನು ಮುಚ್ಚುವ ಹಾಗಿಲ್ಲ. ಆದ್ದರಿಂದಲೇ ಅವರು ಅಷ್ಟೊಂದು ಒದೆತ, ಹೊಡೆತ ಮತ್ತು ಇನ್ನೂ

ಏನೇನೊ ಅಪಮಾನಗಳನ್ನು ಅನುಭವಿಸಬೇಕಾಗಿದೆ; ದಾಸತ್ವದ ಯಮ-ಯಾತನೆಯನ್ನು ಸಹಿಸಬೇಕಾಗಿದೆ.

"ಒಮ್ಮೆ ತೀವ್ರ ವೈರಾಗ್ಯದಿಂದ ಭಗವಂತನ ಸಾಕ್ಷಾತ್ಕಾರವನ್ನ ಪಡೆದುಕೊಂಡುಬಿಟ್ಟದ್ದೇ ಆದರೆ ಒಳಿಕ ಹೃದಯದಲ್ಲಿ ಸ್ತ್ರೀಯ ಮೇಲಿನ ಆಸಕ್ತಿ ಉಳಿದುಕೊಂಡಿರದು. ಒಂದು ಪಕ್ಷ ಆತ ಸಂಸಾರದಲ್ಲಿರಬೇಕಾಗಿ ಬಂದರೂ ಆತನಲ್ಲಿ ಸ್ತ್ರೀಯ ಮೇಲಿನ ಆಸಕ್ತಿ ಇರೋದಿಲ್ಲ, ಅವರ ಭಯ ಲೇಶಮಾತ್ರವೂ ಇರೋದಿಲ್ಲ. ಎರಡು ಸೂಜಿಗಲ್ಲು—ಒಂದು ದೊಡ್ಡದು, ಒಂದು ಚಿಕ್ಕದು ಹತ್ತಿರ ಇವೆ ಅಂತ ಇಟ್ಟುಕೊ. ಆಗ ಅವುಗಳಲ್ಲಿ ಯಾವುದು ಲೋಹವನ್ನು ಸೆಳೆದುಕೊಳ್ಳುತ್ತದೆ? ದೊಡ್ಡದೇನೇ ನಿಸ್ಸಂದೇಹವಾಗಿ. ಭಗವಂತನೇ ದೊಡ್ಡ ಸೂಜಿಗಲ್ಲು. ಆತನಿಗೆ ಹೋಲಿಸಿದರೆ ಹೆಂಗಸು ಬಹಳ ಚಿಕ್ಕ ಸೂಜಿಗಲ್ಲು. ಆದ್ದರಿಂದ ಹೆಂಗಸು ಏನುಮಾಡ ಬಲ್ಲಳು?"

ಒಬ್ಬ ಭಕ್ತ: "ಮಹಾಶಯರೆ, ಹಾಗಾದರೆ ನಾವು ಹೆಂಗಸರನ್ನು ದ್ವೇಷಿಸಬೇಕೆ?"

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರವನ್ನು ಪಡೆದು ಕೊಂಡ ವ್ಯಕ್ತಿ ಹೆಂಗಸನ್ನು ಕಾಮದ ಕಣ್ಣಿನಿಂದ ನೋಡುವುದಿಲ್ಲ; ಆದ್ದರಿಂದ ಆಕೆಯನ್ನು ಕಂಡರೆ ಆತನಿಗೆ ಹೆದರಿಕೆಯಾಗೋದಿಲ್ಲ. ಆತನ ಕಣ್ಣಿಗೆ ಸ್ಪಷ್ಟವಾಗಿ ಕಂಡುಬರುತ್ತದೆ, ಹೆಂಗಸು ಬ್ರಹ್ಮಮಯಿಯ ಅಂಶ ಎಂಬುದು. ಆಕೆಯನ್ನು ಸಾಕ್ಷಾತ್ ಭಗವತಿಯೇ ಎಂಬುದಾಗಿ ಆತ ಪೂಜೆಮಾಡುತ್ತಾನೆ.

(ವಿಜಯನಿಗೆ) "ಆಗಾಗ ಇಲ್ಲಿಗೆ ಬಂದುಹೋಗುತ್ತಿರು. ನಿನ್ನನ್ನು ನೋಡಬೇಕೆಂಬ ಇಚ್ಛೆ ನನಗೆ ಬಹಳವಾಗಿ ಇದೆ."

ವಿಜಯ: "ನನಗೆ ಬ್ರಾಹ್ಮಸಮಾಜದಲ್ಲಿ ಬಹಳ ಕೆಲಸ ಇದೆ; ಆದ್ದರಿಂದ ಸರ್ವದಾ ಇಲ್ಲಿಗೆ ಬರಲಾಗುತ್ತಿಲ್ಲ. ಆದರೆ ಸಮಯ ದೊರೆತಾಗಲೆಲ್ಲ ಖಂಡಿತ ಬರುತ್ತೇನೆ."

ಶ್ರೀರಾಮಕೃಷ್ಣರು ವಿಜಯನಿಗೆ: "ನೋಡು, ಆಚಾರ್ಯನ ಕೆಲಸ ಬಹಳ ಕಠಿನವಾದ್ದು. ಭಗವಂತನಿಂದ ನೇರವಾಗಿ ಆದೇಶ ಬಾರದ ಹೊರತು ಲೋಕಶಿಕ್ಷಣ ಸಾಧ್ಯವಿಲ್ಲ. ಆದೇಶವಿಲ್ಲದೆ ಉಪದೇಶ ಕೊಟ್ಟದ್ದೇ ಆದರೆ ಅದಕ್ಕೆ ಯಾರೂ ಕಿವಿಗೊಡರು. ಅಂಥ ಉಪದೇಶಗಳಲ್ಲಿ ಯಾವ

ಶಕ್ತಿಯೂ ಇರದು. ಸಾಧನೆಯಿಂದಾಗಲಿ ಅಥವಾ ಬೇರೆ ಯಾವ ಮಾರ್ಗದಿಂದಾಗಲಿ ಮೊದಲು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕು. ಬಳಿಕ ಆತನ ಆದೇಶವನ್ನು ಪಡೆದುಕೊಂಡು ಲೆಕ್ಚರ್ ಕೊಡಬೇಕು.

"ಆತನ ಆದೇಶವನ್ನು ಪಡೆದುಕೊಂಡನಂತರ ಎಲ್ಲಿ ಅಂದರೆ ಅಲ್ಲಿ ಆಚಾರ್ಯನ ಕೆಲಸ ಮಾಡಬಹುದು, ಲೆಕ್ಚರ್ ಕೊಡಬಹುದು. ಯಾರಿಗೆ ಭಗವಂತನಿಂದ ಆದೇಶ ದೊರೆಯುತ್ತದೊ, ಆತನಿಗೆ ಆತನಿಂದ ಶಕ್ತಿಯೂ ಬರುತ್ತದೆ. ಆಗ ಮಾತ್ರವೇ ಆತ ಆಚಾರ್ಯನ ಈ ಮಹಾ ಕಠಿನ ಕೆಲಸವನ್ನು ಯಶಸ್ವಿಯಾಗಿ ಮಾಡಬಲ್ಲ.

"ಒಬ್ಬ ಸಾಮಾನ್ಯ ಗುತ್ತಿಗೆದಾರ ಒಬ್ಬ ದೊಡ್ಡ ಜಮೀನುದಾರನೊಡನೆ ಹೈಕೋರ್ಟಿನಲ್ಲಿ ವ್ಯಾಜ್ಯವಾಡತೊಡಗಿದ. ಆಗ ಜನರಿಗೆ ಗೊತ್ತಾಯಿತು, ಆ ಗುತ್ತಿಗೆದಾರನ ಹಿಂದೆ ಯಾರೊ ಒಬ್ಬ ಬಲಶಾಲಿ ನಿಂತಿದ್ದಾನೆ; ಬಹುಶಃ ಇನ್ನೊಬ್ಬ ದೊಡ್ಡ ಜಮೀನುದಾರನೇ ಹಿಂದೆ ನಿಂತುಕೊಂಡು ಕೇಸು ನಡೆಸುತ್ತಿರಬೇಕು ಅಂತ. ಮನುಷ್ಯ ಸಾಮಾನ್ಯ ಜೀವ. ನೇರವಾಗಿ ಭಗವಂತನಿಂದ ಶಕ್ತಿಯನ್ನು ಪಡೆದುಕೊಳ್ಳದೆ ಮಹಾ ಕಠಿನ ಕೆಲಸವಾದ ಆಚಾರ್ಯನ ಕಾರ್ಯವನ್ನ ಆತ ಎಂದಿಗೂ ಮಾಡಲಾರ."

ವಿಜಯ: "ಮಹಾಶಯರೆ, ಬ್ರಾಹ್ಮಸಮಾಜದಲ್ಲಿ ನಡೆಯುವ ಉಪದೇಶಾದಿಗಳಿಂದ ಜನರ ಉದ್ಧಾರ ಆಗುವುದಿಲ್ಲವೇನು?"

ಶ್ರೀರಾಮಕೃಷ್ಣರು: "ಒಬ್ಬ ಇನ್ನೊಬ್ಬನನ್ನು ಸಂಸಾರಬಂಧನದಿಂದ ಮುಕ್ತನನ್ನಾಗಿ ಮಾಡಲು ಸಾಧ್ಯವೆ? ಈ ಭುವನಮೋಹಿನಿ ಮಾಯೆ ಯಾರದೊ ಆತನೇ ಅದರಿಂದ ಮನುಷ್ಯರನ್ನು ಮುಕ್ತರನ್ನಾಗಿ ಮಾಡಬಲ್ಲ. ಸಚ್ಚಿದಾನಂದ ಗುರುವೊಬ್ಬನನ್ನು ಬಿಟ್ಟರೆ ಬೇರೆ ಯಾರೂ ಶರಣ್ಯರೇ ಇಲ್ಲ. ಯಾರು ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡಿಲ್ಲವೊ, ಯಾರಿಗೆ ಆತನಿಂದ ಆದೇಶ ದೊರೆತಿಲ್ಲವೊ, ಯಾರು ಭಗವಂತನ ಶಕ್ತಿಯಿಂದ ಶಕ್ತಿಯುತರಾಗಿಲ್ಲವೊ ಅವರ ಕೈಯಲ್ಲಿ ಜೀವರ ಭವಬಂಧನವನ್ನು ಬಿಡಿಸಲು ಎಂದಿಗಾದರೂ ಸಾಧ್ಯವಾಗುವುದೇ?

"ಒಂದು ದಿನ ನಾನು ಪಂಚವಟಿಯ ಮಾರ್ಗವಾಗಿ ಸರ್ವೆ ಮರಗಳ ತೋಪಿನ ಕಡೆಗೆ ಹೋಗುತ್ತಿದ್ದಾಗ ಒಂದು ಗೂಳಿಗಪ್ಪೆ ಬಹಳವಾಗಿ ಕೂಗುತ್ತಿದ್ದುದು ಕಿವಿಗೆ ಬಿತ್ತು. ಅದನ್ನು ಹಾವು ಹಿಡಿದಿರಬೇಕು ಅಂತ ಭಾವಿಸಿದೆ. ತೋಪಿನಲ್ಲಿ ಸ್ವಲ್ಪ ಹೊತ್ತು ಇದ್ದು, ಬಳಿಕ ಹಿಂದಿರುಗಿ ಪಂಚವಟಿಗೆ ಬಂದಾ

ಗಲೂ ಅದು ಗಟ್ಟಿಯಾಗಿ ಕೂಗುತ್ತಲೇ ಇತ್ತು. ಏನು ಸಮಾಚಾರ ಎಂಬುದಾಗಿ ಹುಡುಕಿನೋಡಿದೆ. ನೋಡುತ್ತೇನೆ, ಒಂದು ನೀರು-ಹಾವು ಅದನ್ನು ಹಿಡಿದುಕೊಂಡಿದೆ. ಹಾವಿನ ಕೈಯಲ್ಲಿ ಅದನ್ನು ನುಂಗುವುದಕ್ಕೂ ಆಗುತ್ತಿಲ್ಲ, ಉಗುಳುವುದಕ್ಕೂ ಆಗುತ್ತಿಲ್ಲ. ಆದ್ದರಿಂದ ಕಪ್ಪೆಗೆ ತಾಳಲಾರದ ಸಂಕಟ. ಆಗ ಯೋಚನೆ ಬಂತು, ಆದನ್ನೇನಾದರು ನಾಗರ ಹಾವು ಹಿಡಿದಿದ್ದೇ ಆಗಿದ್ದರೆ ಅತಿ ಹೆಚ್ಚೆಂದರೆ ಅದು ಮೂರು ಸಲ ಕೂಗುವುದ ರೊಳಗೇ ಅದರ ಆಟ ಮುಗಿದು ಹೋಗುತ್ತಿತ್ತು. ಆದರೆ ಅದು ಕೇವಲ ನೀರು-ಹಾವು ಆಗಿದ್ದುದರಿಂದ ಅದಕ್ಕೂ ಪ್ರಾಣಸಂಕಟ, ಕಪ್ಪೆಗೂ ಪ್ರಾಣ ಸಂಕಟ. ಸದ್ಗುರುವಿನ ಕೈಗೆ ಸಿಕ್ಕಿದ್ದೇ ಆದರೆ ಜೀವರ 'ಅಹಂ' ಎಂಬುದು ಮೂರು ಸಲ ಕೂಗಿಕೊಳ್ಳುವುದರಲ್ಲೇ, ಅದರ ಹುಟ್ಟು ಅಡಗಿಹೋಗುತ್ತದೆ. ಆದರೆ ಗುರು 'ಅಪಕ್ವ' ಮನುಷ್ಯನಾಗಿದ್ದರೆ ಆತನಿಗೂ ಪ್ರಾಣಸಂಕಟ, ಶಿಷ್ಯನಿಗೂ ಪ್ರಾಣಸಂಕಟ. ಶಿಷ್ಯನ ಅಹಂಕಾರವೂ ನಾಶವಾಗುವ ಹಾಗಿಲ್ಲ; ಭವಬಂಧನವೂ ಕಡಿದುಹೋಗುವ ಹಾಗಿಲ್ಲ. ಶಿಷ್ಯ 'ಅಪಕ್ವ' ಗುರುವಿನ ಕೈಗೆ ಬಿದ್ದುದೇ ಆದರೆ ಆತನಿಗೆ ಮುಕ್ತಿ ದೊರಕದು."

ವಿಜಯ: "ಮಹಾಶಯರೆ, ಏಕೆ ಹೀಗೆ ನಾವು ಬದ್ಧರಾಗಿಬಿಟ್ಟಿ ದೇವೆ? ನಾವು ಏಕೆ ಭಗವಂತನನ್ನು ನೋಡಲಾಗುತ್ತಿಲ್ಲ?"

ಶ್ರೀರಾಮಕೃಷ್ಣರು: "ಜೀವರ 'ಅಹಂ' ಎಂಬುದೇ ಮಾಯೆ. ಈ 'ಅಹಂ' ಎಂಬುದು ಎಲ್ಲವನ್ನೂ ಮರಸಿ ಇಟ್ಟುಬಿಟ್ಟಿದೆ. 'ಈ "ಅಹಂ" ಎಂಬುದು ಸತ್ತಿತು ಎಂದರೆ ಎಲ್ಲಾ ತೊಂದರೆಗಳೂ ಕೊನೆಗಾಣುವುವು.' ಭಗವಂತನ ಕೃಪೆಯಿಂದ ತಾನು ಅಕರ್ತ ಎಂಬ ಬೋಧೆ ವ್ಯಕ್ತಿಗೆ ಬಂದು ಬಿಟ್ಟಿದ್ದೇ ಆದರೆ, ಆತ ಜೀವನ್ಮುಕ್ತನಾಗಿಬಿಡುತ್ತಾನೆ. ಬಳಿಕ ಅವನಿಗೆ ಯಾವ ಹೆದರಿಕೆಯೂ ಇರದು.

"ಈ ಮಾಯೆ, ಅಂದರೆ 'ಅಹಂ' ಎಂಬುದು, ಒಂದು ಚೂರು ಮೋಡವಿದ್ದ ಹಾಗೆ. ಈ ಚೂರು ಮೋಡದ ದೆಸೆಯಿಂದ ಸೂರ್ಯನನ್ನು ನೋಡಲಾಗುತ್ತಿಲ್ಲ; ಅದು ಸರಿದುಹೋದೊಡನೆಯೇ ಸೂರ್ಯ ಕಾಣಿಸಿ ಕೊಳ್ಳುತ್ತಾನೆ. ಗುರುವಿನ ಕೃಪೆಯಿಂದ ಈ 'ಅಹಂ' ಎಂಬುದು ನಾಶ ವಾಯಿತು ಎಂದರೆ ಭಗವಂತನ ದರ್ಶನ ದೊರೆತುಬಿಡುತ್ತದೆ.

"ಸಾಕ್ಷಾತ್ ಭಗವಂತನೇ ಆದ ಶ್ರೀರಾಮಚಂದ್ರ ಲಕ್ಷ್ಮಣನ ಮುಂದೆ ಕೇವಲ ಎರಡೂವರೆ ಮೊಳ ದೂರದಲ್ಲಿ ನಡೆದುಹೋಗುತ್ತಿದ್ದ.

ಅವರಿಬ್ಬರ ಮಧ್ಯೆ ಸೀತೆಯ ರೂಪವನ್ನು ಧರಿಸಿದ್ದ ಮಾಯೆ ನಡೆದುಹೋಗುತ್ತಿದ್ದುದರಿಂದ ಲಕ್ಷ್ಮಣನ ರೂಪವನ್ನು ಧರಿಸಿದ್ದ ಜೀವ ಆ ಭಗವಂತನನ್ನು ನೋಡಲಾಗುತ್ತಿರಲಿಲ್ಲ. ಇಲ್ಲಿ ನೋಡು: ಈ ಚೌಕವನ್ನು ನನ್ನ ಮುಖದ ಮುಂದೆ ಹಿಡಿದುಕೊಳ್ಳುತ್ತೇನೆ. ನಾನು ಮಾತ್ರ ನಿನ್ನ ಹತ್ತಿರದಲ್ಲೇ ಇದ್ದರೂ ನೀನು ಮಾತ್ರ ನನ್ನನ್ನು ನೋಡಲಾಗುತ್ತಿಲ್ಲ. ಇದೇ ರೀತಿಯಾಗಿ ಭಗವಂತ ಎಲ್ಲಕ್ಕಿಂತಲೂ ಹತ್ತಿರದಲ್ಲೇ ಇದಾನೆ. ಆದರೂ ಈ ಮಾಯೆಯ ಆವರಣದ ದೆಸೆಯಿಂದ ಆತನನ್ನು ನೋಡಲಾಗುತ್ತಿಲ್ಲ.

"ಜೀವ ಸಚ್ಚಿದಾನಂದನೇ ಅಲ್ಲದೆ ಇನ್ನು ಬೇರೆ ಏನೂ ಅಲ್ಲ. ಆದರೆ ಈ ಮಾಯೆ, ಎಂದರೆ ಅಹಂಕಾರ ಅನೇಕ ಉಪಾಧಿಗಳನ್ನು ಸೃಷ್ಟಿಸಿರೋದರಿಂದ ಆತ ತನ್ನ ನಿಜಸ್ವರೂಪವನ್ನು ಮರೆತುಬಿಟ್ಟಿದಾನೆ.

"ಪ್ರತಿಯೊಂದು ಉಪಾಧಿಯೂ ಮನುಷ್ಯನ ಸ್ವಭಾವವನ್ನು ಬದಲಾಯಿಸಿಬಿಡುತ್ತದೆ. ಆತನೇನಾದರು ಕರಿ ಅಂಚಿನ ಪಂಚೆ ಉಟ್ಟುಕೊಂಡ ಎಂದರೆ, ಹೇಳದೆ ಕೇಳದೆ ಆತನ ಬಾಯಿಂದ ನಿಧುಬಾಬುವಿನ ಪ್ರಣಯ ಗೀತೆಗಳು ಹೊರಬರಲಾರಂಭಿಸುತ್ತವೆ. ಬಳಿಕ ಇಸ್ಪೀಟು ಆಡುವುದು, ಗಾಳಿ ಸಂಚಾರಕ್ಕೆ ಹೋದಾಗ ವಾಕಿಂಗ್ ಸ್ಟಿಕ್ ಹಿಡಿದುಕೊಂಡು ಹೋಗುವುದು ಇವೆಲ್ಲಾ ಶುರುವಾಗಿಬಿಡುತ್ತವೆ. ರೋಗಿಷ್ಠ ಮನುಷ್ಯ ಕಾಲಿಗೆ ಬೂಟ್ಸ್-ಗೀಟ್ಸ್ ಹಾಕಿಕೊಂಡುಬಿಟ್ಟಿದ್ದೇ ಆದರೆ ಆತನೂ ಸಿಳ್ಳು ಹಾಕಲು ಶುರುಮಾಡಿಬಿಡುತ್ತಾನೆ. ಹಂತ ಹತ್ತುವಾಗ ಇಂಗ್ಲಿಷಿನವರ ಹಾಗೆ ನೆಗೆದು ನೆಗೆದು ಹತ್ತುತ್ತಾನೆ. ಕೈಯಲ್ಲಿ ಲೇಖನಿ ಇದ್ದುದೇ ಆದರೆ, ಅದರ ಪ್ರಭಾವ ಅಂಥದು ಹಾಗೇ ಒಂದು ಚೂರು-ಪಾರು ಕಾಗದ ಸಿಕ್ಕಿತು ಎಂದರೆ ಮನುಷ್ಯ ಅದರ ಮೇಲೆ ಏನಾದರೂ ಒಂದನ್ನು ಗೀಚಲೇಬೇಕು!

"ಹಣವೂ ಒಂದು ದೊಡ್ಡ ಉಪಾಧಿ. ಹಣ ಕೈಗೆ ಬಂತು ಎಂದರೆ ಮನುಷ್ಯ ಬದಲಾವಣೆ ಹೊಂದಿಬಿಡುತ್ತಾನೆ! ಆತ ಹಿಂದಿನ ಮನುಷ್ಯನೇ ಅಲ್ಲದವನಾಗಿಬಿಡುತ್ತಾನೆ. ಒಬ್ಬ ಬ್ರಾಹ್ಮಣ ಇಲ್ಲಿಗೆ ಬಂದು ಹೋಗುವುದು ಮಾಡುತ್ತಿದ್ದ. ಹೊರಗಡೆ ನೋಡುವುದಕ್ಕೆ ಬಹಳ ವಿನಯಿಯಾಗಿದ್ದ. ಒಂದು ದಿನ ನಾನು ಹೃದೂನೊಡನೆ ಕೊನ್ನಗರಕ್ಕೆ ಹೋದೆ. ನಾವು ನೌಕೆಯಿಂದ ಇಳಿಯುವುದೇ ತಡ ಆ ಬ್ರಾಹ್ಮಣ ಗಂಗಾ ದಡದಲ್ಲಿ ಕುಳಿತಿರುವುದು ಕಣ್ಣಿಗೆ ಬಿತ್ತು. ಬಹುಶಃ ಗಾಳಿ ಸೇವಿಸುತ್ತ ಕುಳಿತಿದ್ದಿರಬೇಕು. ನಮ್ಮನ್ನು ಕಂಡು ಆತ ಕೂಗಲಾರಂಭಿಸಿದ: 'ಏನು, ಅರ್ಚಕರೋ!

ಹೇಗಿದ್ದೀರಿ?' ಆತನ ಮಾತಿನ ಸ್ವರ ಕೇಳಿ ನಾನು ಹೃದೂಗೆ ಹೇಳಿದೆ: 'ಓ ಹೃದೂ, ಈತನಿಗೆ ಹಣ ದೊರೆತಿರಬೇಕು. ಅದಕ್ಕಾಗಿ ಈತ ಹೀಗೆ ಮಾತಾಡುತ್ತಿದ್ದಾನೆ.' ಹೃದು ನಗಲಾರಂಭಿಸಿದ.

"ಒಂದು ಕಪ್ಪೆ ತನ್ನ ಬಿಲದಲ್ಲಿ ಒಂದು ರೂಪಾಯಿಯನ್ನು ಇಟ್ಟು ಕೊಂಡಿತ್ತು. ಒಂದು ದಿನ ಒಂದು ಆನೆ ಆ ಬಿಲವನ್ನು ದಾಟಿ ಹೋಗು ತ್ತಿತ್ತು. ಆಗ ಕಪ್ಪೆ ಕೋಪದಿಂದ ಬಿಲದ ಹೊರಕ್ಕೆ ಬಂದು ತನ್ನ ತೊಡೆ ತಟ್ಟುತ್ತ ಆನೆಯನ್ನು ಗದರಿಸಿತು: 'ಏನಿದು? ನನ್ನ ಬಿಲ ದಾಟಿಹೋಗು ವಷ್ಟು ಕೆಚ್ಚು ನಿನಗೆ?' ಹಾಗೇ ನೋಡು ಹಣದ ಮದವನ್ನ!

"ಬ್ರಹ್ಮಜ್ಞಾನ ದೊರೆಯಿತು ಎಂದರೆ ಅಹಂಕಾರ ಹೊರಟುಹೋಗುವ ಸಂಭವ. ಬ್ರಹ್ಮಜ್ಞಾನ ದೊರೆತನಂತರ ಮನುಷ್ಯ ಸಮಾಧಿಸ್ಥನಾಗು ತ್ತಾನೆ. ಆಗ ಆತನ 'ಅಹಂ' ಎಂಬುದು ಹೊರಟುಹೋಗುತ್ತದೆ. ಆದರೆ ಆ ವಿಧದ ಜ್ಞಾನ ಸುಲಭಸಾಧ್ಯವಲ್ಲ.

"ವೇದದಲ್ಲಿ ಹೇಳಿದೆ, ಮನಸ್ಸು ಸಪ್ತಮ ಭೂಮಿಕೆಯನ್ನು ಮುಟ್ಟಿತು ಎಂದರೆ, ಮನುಷ್ಯನಿಗೆ ಸಮಾಧಿಯುಂಟಾಗುತ್ತದೆ ಎಂಬುದಾಗಿ. ಸಮಾಧಿ ದೊರೆತನಂತರವೇ 'ಅಹಂ' ಎಂಬುದು ಹೊರಟುಹೋಗುವ ಸಂಭವ. ಮನುಷ್ಯನ ಮನಸ್ಸು ಸಾಮಾನ್ಯವಾಗಿ ಎಲ್ಲಿ ನೆಲಸಿರುತ್ತದೆ ಗೊತ್ತೆ? ಮೊದಲನೆ ಮೂರು ಭೂಮಿಕೆಗಳಲ್ಲಿ—ಲಿಂಗ, ಗುಹ್ಯ, ನಾಭಿ ಇವುಗಳಲ್ಲಿ. ಆಗ ಮನಸ್ಸಿನ ಆಸಕ್ತಿ ಕೇವಲ ಸಂಸಾರದಲ್ಲಿ, ಕಾಮ ಕಾಂಚನದಲ್ಲಿ. ಮನಸ್ಸು ಹೃದಯ ಭೂಮಿಕೆಗೆ ಹತ್ತಿ ನೆಲಸಿದಾಗ ಅದಕ್ಕೆ ಭಗವಜ್ಜ್ಯೋತಿಯ ದರ್ಶನ ಆಗುತ್ತದೆ. ಮನುಷ್ಯ ಆ ಜ್ಯೋತಿಯನ್ನು ದರ್ಶಿಸಿದಾಗ ವಿಸ್ಮಯಗೊಂಡು ಹೇಳುತ್ತಾನೆ: 'ಆಹ! ಏನಿದು? ಏನಿದು?' ಬಳಿಕ ಕಂಠದ ಭೂಮಿಕೆ. ಅಲ್ಲಿಗೆ ಮನಸ್ಸು ಹತ್ತಿ ನೆಲಸಿ ದಾಗ ಕೇವಲ ಭಗವದ್ವಿಷಯವಾಗಿ ಕೇಳಲು ಮಾತಾಡಲು ಇಚ್ಛೆಯಾಗು ತ್ತದೆ. ಲಲಾಟಕ್ಕೆ, ಎಂದರೆ ಭ್ರೂಮಧ್ಯಕ್ಕೆ ಮನಸ್ಸು ಹತ್ತಿ ನೆಲಸಿದರೆ, ಆಗ ಸಚ್ಚಿದಾನಂದನ ರೂಪದರ್ಶನ ಆಗುತ್ತದೆ. ಆತನನ್ನು ಸ್ಪರ್ಶಿಸಲು ಮತ್ತು ಆಲಿಂಗನ ಮಾಡಿಕೊಳ್ಳಲು ಇಚ್ಛೆಯಾಗುತ್ತದೆ. ಆದರೆ ಅದು ಸಾಧ್ಯವಾಗೋದಿಲ್ಲ. ಇದು ಲಾಟೀನಿನ ಒಳಗಿರುವ ಬೆಳಕಿನ ಹಾಗೆ. ಅದನ್ನು ನೋಡಬಹುದೇ ವಿನಾ ಸ್ಪರ್ಶಮಾಡಲಾಗೋದಿಲ್ಲ. ಮುಟ್ಟಿ ಬಿಡೋಣ ಮುಟ್ಟಿಬಿಡೋಣ ಅಂತ ಅನ್ನಿಸುತ್ತದೆ, ಆದರೆ ಮುಟ್ಟಿ

ಲಾಗೋದಿಲ್ಲ. ಮನಸ್ಸು ಸಪ್ತಮ ಭೂಮಿಕೆಯನ್ನು ಮುಟ್ಟಿದಾಗ 'ಅಹಂ' ಎಂಬುದು ಉಳಿದಿರದು. ಮನುಷ್ಯ ಸಮಾಧಿಸ್ಥನಾಗುತ್ತಾನೆ."

ವಿಜಯ: "ಏಳನೆ ಭೂಮಿಕೆಯನ್ನು ಮುಟ್ಟಿ ಬ್ರಹ್ಮಜ್ಞಾನವನ್ನು ಪಡೆದುಕೊಂಡನಂತರ ಮನುಷ್ಯನಿಗೆ ಏನು ಕಾಣಬರುತ್ತದೆ ?"

ಶ್ರೀರಾಮಕೃಷ್ಣರು: "ಸಪ್ತಮ ಭೂಮಿಕೆಯನ್ನು ಮುಟ್ಟಿದನಂತರ ಅಲ್ಲಿ ಏನಾಗುತ್ತದೆ ಎಂಬುದನ್ನು ಬಾಯಿಂದ ವರ್ಣನೆಮಾಡಲಾಗೋದಿಲ್ಲ.

"ಜಹಜು ಒಮ್ಮೆ ಸಮುದ್ರದ 'ಕಪ್ಪು ನೀರಿನ' ಕಡೆ ಹೋಯಿತು ಎಂದರೆ ಮತ್ತೆ ಅದು ಹಿಂದಿರುಗದು. ಬಳಿಕ ಅದರ ಸುದ್ದಿಸಮಾಚಾರವೇ ಗೊತ್ತಾಗದು. ಆದ್ದರಿಂದ ಜಹಜು ನಮಗೆ ಸಮುದ್ರದ ಸಮಾಚಾರ ಕೊಡಲಾರದು.

"ಒಮ್ಮೆ ಉಪ್ಪಿನ ಬೊಂಬೆಯೊಂದು ಸಮುದ್ರದ ಆಳವನ್ನು ಅಳೆಯಲು ಹೋಯಿತು. ಅದು ಸಮುದ್ರಕ್ಕೆ ಕಾಲು ಹಾಕುವುದೇ ತಡ ಒಡನೆಯೇ ಕರಗಿಹೋಗಿಬಿಟ್ಟಿತು. ಈಗ ಸಮುದ್ರ ಎಷ್ಟು ಆಳವಾಗಿದೆ ಎಂಬುದನ್ನು ತಿಳಿಸಲು ಯಾರು ಉಳಿದುಕೊಂಡಿದಾರೆ ? ಯಾವುದು ಅದನ್ನು ನಮಗೆ ತಿಳಿಸಬಹುದಾಗಿತ್ತೊ ಅದೇ ಸಮುದ್ರದಲ್ಲಿ ಕರಗಿಹೋಗಿ ಬಿಟ್ಟಿತು. ಸಪ್ತಮ ಭೂಮಿಕೆಯಲ್ಲಿ ಮನಸ್ಸು ನಾಶವಾಗಿಬಿಡುತ್ತದೆ; ಸಮಾಧಿಯುಂಟಾಗುತ್ತದೆ. ಅಲ್ಲಿ ಏನು ಅನುಭವ ದೊರೆಯುತ್ತೊ ಅದನ್ನು ಮಾತಿನಿಂದ ವರ್ಣನೆಮಾಡಲಾಗೋದಿಲ್ಲ.

"ಯಾವ 'ಅಹಂ' ಮನುಷ್ಯನನ್ನು ಸಂಸಾರಿಯನ್ನಾಗಿ, ಕಾಮ ಕಾಂಚನಾಸಕ್ತನನ್ನಾಗಿ ಮಾಡುವುದೊ ಅದು 'ಕೆಟ್ಟ ಅಹಂ.' ಜೀವನಿಗು ಆತ್ಮನಿಗು ಪ್ರಭೇದ ಉಂಟಾಗಿರುವುದು ಈ 'ಅಹಂ' ಎಂಬುದು ಮಧ್ಯೆ ನಿಂತುಕೊಂಡಿರುವುದರಿಂದ. ನೀರಿನ ಮೇಲೆ ಒಂದು ದೊಣ್ಣೆ ಎಸೆದರೆ ನೀರು ಇಬ್ಭಾಗವಾಗಿರುವ ಹಾಗೆ ಕಾಣುತ್ತದೆ. ನಿಜವಾಗಿ ಅಲ್ಲಿ ಇರುವುದು ಒಂದೇ ಜಲರಾಶಿ. ಆ ದೊಣ್ಣೆ ದೆಸೆಯಿಂದ ಎರಡಾಗಿ ತೋರ್ಪಡಿಸಿಕೊಳ್ಳುತ್ತದೆ. ಈ 'ಅಹಂ' ಎಂಬುದೇ ಆ ದೊಣ್ಣೆ. ಆ ದೊಣ್ಣೆಯನ್ನು ತೆಗೆದುಹಾಕಿಬಿಟ್ಟರೆ, ಬಳಿಕ ಎಂದಿನ ಒಂದೇ ಜಲರಾಶಿ ಉಳಿದುಕೊಳ್ಳುತ್ತದೆ.

"ಈ 'ಕೆಟ್ಟ ಅಹಂ' ಎಂಬುದು ಯಾವುದು ? ಯಾವುದು ಹೇಳುತ್ತದೊ: 'ಏನು ? ನಾನಾರು ಎಂಬುದು ಗೊತ್ತಿಲ್ಲ? ನನ್ನ ಹತ್ತಿರ

ಎಷ್ಟೊಂದು ಹಣ ಇದೆ! ನನಗಿಂತಲೂ ದೊಡ್ಡ ಧನಿಕರು ಯಾರಾದರೂ ಇದ್ದಾರೆಯೇನು?' ಎಂದು. ಅಂಥ ಮನುಷ್ಯನಿಂದ ಕಳ್ಳ, ಹೆಚ್ಚಾಗೇನು ಬೇಡ ಕೇವಲ ಒಂದು ಹತ್ತು ರೂಪಾಯಿ ಕದ್ದುಬಿಟ್ಟರೇ ಸಾಕು, ಮೊದಲು ಆತ ಅವನಿಂದ ಹಣ ಕಿತ್ತುಕೊಂಡು, ನಂತರ ಚರ್ಮ ಸುಲಿದು ಹೋಗುವವರೆಗೆ ಚೆನ್ನಾಗಿ ಹೊಡೆಯುತ್ತಾನೆ. ಅದು ಅಷ್ಟಕ್ಕೇ ಮುಗಿದುಹೋಗೋ ಹಾಗಿಲ್ಲ; ಆತನನ್ನು ಪೊಲೀಸಿನವರ ವಶಕ್ಕೆ ಒಪ್ಪಿಸಿ ಕೊನೆಗೆ ಜೈಲಿಗೆ ಕಳುಹಿಸುತ್ತಾನೆ. ಆ 'ಕೆಟ್ಟ ಅಹಂ' ಹೇಳುತ್ತದೆ: 'ಆ ನೀಚನಿಗೆ ಗೊತ್ತಿರಲಿಲ್ಲ ತಾನು ಯಾರಿಂದ ಕದಿಯುತ್ತಿದೇನೆ ಎಂಬುದು. ನೋಡಿದೆಯಾ, ನನ್ನಿಂದ ಹತ್ತು ರೂಪಾಯಿ ಕದ್ದುಬಿಟ್ಟಿದ್ದನಲ್ಲ! ಎಷ್ಟು ಧೈರ್ಯವಿರಬೇಕು ಅವನಿಗೆ?'"

ವಿಜಯ: "ಈ 'ಅಹಂ' ಹೋಗದವರೆಗೂ ಸಂಸಾರಾಸಕ್ತಿ ಹೋಗದೆ ಇದ್ದರೆ, ಸಮಾಧಿ ದೊರೆಯದೆ ಇದ್ದರೆ, ಸಮಾಧಿಯನ್ನು ದೊರಕಿಸಿಕೊಳ್ಳಲು ಬ್ರಹ್ಮಜ್ಞಾನವನ್ನು ಅವಲಂಬಿಸುವುದೇ ಮೇಲು ಅಂತ ಕಾಣುತ್ತೆ. ಭಕ್ತಿಯೋಗದಲ್ಲಿ 'ಅಹಂ' ಉಳಿದುಕೊಳ್ಳುವುದಾದರೆ ಜ್ಞಾನಯೋಗವೇ ಮೇಲು."

ಶ್ರೀರಾಮಕೃಷ್ಣರು: "ಎಲ್ಲೋ ಕೆಲವರಿಗೆ ಮಾತ್ರ ಸಮಾಧಿ ಯುಂಟಾಗಿ ಈ 'ಅಹಂ' ಎಂಬುದು ಹೊರಟುಹೋಗುವುದೇನೊ ನಿಜ; ಆದರೆ ಇದು ಪ್ರಾಯಿಕವಾಗಿ ಹೋಗುವುದಿಲ್ಲ. ಸಾವಿರ ವಿಚಾರ ಮಾಡು 'ಅಹಂ' ತಿರುತಿರುಗಿ ಬಂದುಬಿಡುತ್ತದೆ. ಇಂದು ಅಶ್ವತ್ಥ ವೃಕ್ಷವನ್ನು ಚೆನ್ನಾಗಿ ಬುಡದವರೆಗೆ ಕತ್ತರಿಸಿಹಾಕಿಬಿಟ್ಟು ನಾರನೆ ದಿನ ಹೋಗಿನೋಡಿ ದರೆ ಆಗಲೇ ಅದು ಚಿಗುರಿಬಿಟ್ಟಿರುತ್ತದೆ. ಈ 'ಅಹಂ' ಎಂಬುದು ಬಡಪಟ್ಟಿಗೆ ಹೋಗುವುದಿಲ್ಲವೆಂದರೆ, ಈ ನೀಚಮುಂಡೇದು 'ದಾಸ ಅಹಂ' ಆಗೇ ಉಳಿದುಕೊಂಡಿರಲಿ. ನೀನು ಬದುಕಿಕೊಂಡಿರುವವರೆಗೆ, 'ಹೇ ಭಗವಂತ, ನೀನು ಪ್ರಭು ನಾನು ದಾಸ' ಎಂಬ ಭಾವದಿಂದ ಬದುಕಿಕೊಂಡಿರು. 'ನಾನು ದಾಸ', 'ನಾನು ಭಕ್ತ' ಎಂಬ 'ಅಹಂ' ಕೆಡುಕಾದ 'ಅಹಂ' ಏನಲ್ಲ. ಸಿಹಿ ತಿಂದರೆ ಹೊಟ್ಟೆಯಲ್ಲಿ ಹುಳಿ ಅಧಿಕವಾಗುವುದೇನೊ ನಿಜ, ಆದರೆ ಕಲ್ಲುಸಕ್ಕರೆ ಸಿಹಿ ಪದಾರ್ಥಗಳ ಗುಂಪಿಗೆ ಸೇರಿಲ್ಲ.

"ಜ್ಞಾನಯೋಗ ಬಹಳ ಕಠಿನವಾದ್ದು. ದೇಹಾತ್ಮಬುದ್ಧಿ ಹೋಗದ ಹೊರತು ಜ್ಞಾನ ಉಂಟಾಗೋದಿಲ್ಲ. ಕಲಿಯುಗದಲ್ಲಿ ಅನ್ನಗತಪ್ರಾಣ. ದೇಹಾತ್ಮಬುದ್ಧಿ, ಅಹಂಬುದ್ಧಿ ಹೋಗದು. ಆದ್ದರಿಂದ ಈ ಯುಗಕ್ಕೆ ಭಕ್ತಿಯೋಗವೇ ಔಷಧ. ಇದು ಬಹಳ ಸುಲಭವಾದ ಮಾರ್ಗ. ಹೃತ್ಪೂರ್ವಕ ವ್ಯಾಕುಲತೆಯಿಂದ ಆತನ ನಾಮಗುಣಕೀರ್ತನೆ ಮಾಡು, ಪ್ರಾರ್ಥನೆ ಮಾಡು, ಆತ ದೊರೆತುಬಿಡುತ್ತಾನೆ. ಇದರಲ್ಲಿ ಯಾವ ಸಂದೇಹವೂ ಇಲ್ಲ.

"ಒಂದು ಗಳುವಿನ ತುಂಡು ತೆಗೆದುಕೊಂಡು ನೀರಿನ ಮೇಲೆ ಒಂದು ಗೆರೆ ಎಳೆದೆ ಅಂತ ಇಟ್ಟುಕೊ. ನೀರು ಇಬ್ಭಾಗವಾದ ಹಾಗೆ ಕಾಣುತ್ತದೆ' ಆದರೆ ಆ ಗೆರೆ ಹೆಚ್ಚು ಹೊತ್ತು ನಿಲ್ಲದು. 'ದಾಸ ಅಹಂ', 'ಭಕ್ತ ಅಹಂ', 'ಬಾಲಕ ಅಹಂ' ಇವು 'ಅಹಂ' ನ ಗೆರೆ ಮಾತ್ರ."

ವಿಜಯ: "ಮಹಾಶಯರೆ, ನೀವು 'ಕೆಟ್ಟ ಅಹಂ' ತ್ಯಜಿಸುವಂತೆ ಬೋಧೆ ಮಾಡುತ್ತಿದೀರಿ. 'ದಾಸ ಅಹಂ' ನಿಂದ ಕೆಡುಕೇನು ಆಗುವುದಿಲ್ಲ ತಾನೆ?"

ಶ್ರೀರಾಮಕೃಷ್ಣರು: "ಹೌದು, 'ದಾಸ ಅಹಂ', ಎಂದರೆ ನಾನು ಭಗವಂತನ ದಾಸ, ನಾನು ಆತನ ಭಕ್ತ ಎಂಬ ಭಾವ ಕೆಡುಕಾದುದೇನಲ್ಲ. ಅದಕ್ಕೆ ಬದಲು ಅದು ಭಗವಂತನ ಸಾಕ್ಷಾತ್ಕಾರಮಾಡಿಕೊಳ್ಳಲು ಸಹಾಯ ಮಾಡುತ್ತದೆ."

ವಿಜಯ: "ಒಳ್ಳೇದು, ಯಾರ 'ಅಹಂ' 'ದಾಸ ಅಹಂ' ಆಗಿರುವುದೊ ಅವರ ಕಾಮಕ್ರೋಧಾದಿಗಳ ಸಮಾಚಾರವೇನು?"

ಶ್ರೀರಾಮಕೃಷ್ಣರು: "ಮನುಷ್ಯನಿಗೆ ನಿಜವಾಗಿ ಆ ಭಾವ ಬಂದಿರುವುದಾದರೆ, ಆತನಲ್ಲಿ ಕಾಮಕ್ರೋಧಾದಿಗಳ ಕೇವಲ ಸೋಗು ಉಳಿದುಕೊಳ್ಳುತ್ತದೆ. ಭಗವಂತನ ಸಾಕ್ಷಾತ್ಕಾರ ದೊರೆತನಂತರ ಆತನಲ್ಲಿ 'ದಾಸ ಅಹಂ' ಅಥವಾ 'ಭಕ್ತ ಅಹಂ' ಉಳಿದುಕೊಂಡರೆ ಆತ ಯಾರಿಗೂ ಕೆಡಕನ್ನು ತರಲಾರ. ಕತ್ತಿ ಸ್ಪರ್ಶಮಣಿಯನ್ನು ಮುಟ್ಟಿದನಂತರ ಚಿನ್ನವಾಗಿಬಿಡುತ್ತದೆ. ಕತ್ತಿಯ ಆಕಾರವೇನೊ ಹಾಗೇ ಉಳಿದುಕೊಳ್ಳುತ್ತದೆ, ಆದರೆ ಅದು ಯಾವುದನ್ನೂ ಕತ್ತರಿಸಲಾರದು.

"ತೆಂಗಿನ ಮರದ ಮಟ್ಟೆ ಒಣಗಿ ಕೆಳಕ್ಕೆ ಬಿದ್ದುಹೋಯಿತು ಎಂದರೆ, ಅದು ಒಂದು ಗುರುತನ್ನು ಬಿಡುತ್ತದೆ. ಆ ಗುರುತು ಹೇಳುತ್ತದೆ, ಒಮ್ಮೆ

ಅಲ್ಲಿ ಒಂದು ಮಟ್ಟೆ ಇತ್ತು ಎಂಬುದಾಗಿ. ಅದೇ ರೀತಿಯಾಗಿ ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಅವರ 'ಅಹಂ'ನ ಗುರುತು ಮಾತ್ರ ನಿಲ್ಲುತ್ತದೆ; ಕಾಮಕ್ರೋಧಾದಿಗಳ ಆಕಾರ ಮಾತ್ರ ಇರುತ್ತದೆ. ಆತ ಮಗುವಿನಂತಾಗಿಬಿಡುತ್ತಾನೆ. ಮಗುವಿಗೆ ಸತ್ತ್ವರಜಸ್ತಮೋಗುಣಗಳ ಸ್ಪರ್ಶ ಸ್ವಲ್ಪವೂ ಇಲ್ಲ. ಅದಕ್ಕೆ ಯಾವುದಾದರೂ ಒಂದು ವಸ್ತುವಿನ ಮೇಲೆ ಆಸಕ್ತಿ ಉಂಟಾಗಲು ಎಷ್ಟು ಸಮಯ ಬೇಕೋ, ಅಷ್ಟೇ ಸಮಯ ಸಾಕು ಅದರ ಮೇಲೆ ನಿರಾಸಕ್ತಿ ಉಂಟಾಗಲು ಕೂಡ. ಅದಕ್ಕೆ ಅರ್ಧಾಣೆ ಗೊಂಬೆ ಕೊಟ್ಟು ಐದು ರೂಪಾಯಿನ ಪಂಚೆ ಕಸಿದುಕೊಳ್ಳಬಹುದು. ಮೊದಲೇನೊ ಅದು ಬಹಳ ಆಸಕ್ತಿಯಿಂದ ಹೇಳುತ್ತದೆ: 'ಉಹ್ಞೂ, ನಾನು ಕೊಡೋದಿಲ್ಲ, ನನಗೆ ನಮ್ಮ ತಂದೆ ತಂದುಕೊಟ್ಟಿದಾನೆ.' ಮಗುವಿನ ಕಣ್ಣಿಗೆ ಎಲ್ಲರೂ ಒಂದೇ—ಇವನು ದೊಡ್ಡವನು ಅವನು ಚಿಕ್ಕವನು ಎಂಬ ಭೇದ-ಭಾವನೆ ಇಲ್ಲ. ಅದಕ್ಕಾಗಿ ಜಾತಿ-ಗೀತಿಯ ಸಮಾಚಾರ ಅದರ ತಲೆಗೇ ಹತ್ತದು. ತಾಯಿಯೇನಾದರು ಒಬ್ಬನನ್ನು ತೋರಿಸಿ, ಆತ ನಿನಗೆ ಅಣ್ಣ ನಾಗಬೇಕು ಎಂದು ಹೇಳಿಬಿಟ್ಟರೆ, ಆತ ಕಮ್ಮಾರಜಾತಿಯವನಾಗಿದ್ದರೂ ಸರಿಯೆ ಆತನ ಎಲೆಯಲ್ಲೇ ಕುಳಿತು ಊಟಮಾಡಿಬಿಡುತ್ತದೆ. ಮಗುವಿನಲ್ಲಿ ದ್ವೇಷ ಎಂಬುದು ಇಲ್ಲವೇ ಇಲ್ಲ. ಶುಚಿ-ಅಶುಚಿಯ ಬೋಧೆಯೇ ಅದಕ್ಕಿಲ್ಲ. ಬಹಿರ್ದೇಶಕ್ಕೆ ಹೋಗಿ ಕೈಗೆ ಮೃತ್ತಿಕೆ ಹಚ್ಚೋ ಬಾಬೇ ಇಲ್ಲ ಅದಕ್ಕೆ.

"ಕೆಲಕೆಲವರು ಸಮಾಧಿ ದೊರೆತನಂತರವೂ 'ಭಕ್ತ ಅಹಂ' ಅಥವಾ 'ದಾಸ ಅಹಂ' ಇವನ್ನು ಇಟ್ಟುಕೊಂಡಿರುತ್ತಾರೆ. ಭಕ್ತ 'ಭಕ್ತ ಅಹಂ' ಇಟ್ಟುಕೊಂಡಿರುತ್ತಾನೆ. ಆತ ಹೇಳುತ್ತಾನೆ: 'ಹೇ ಭಗವಂತ, ನೀನು ಪ್ರಭು, ನಾನು ದಾಸ; ನೀನು ಭಗವಂತ, ನಾನು ಭಕ್ತ.' ಭಗವಂತನ ಸಾಕ್ಷಾತ್ಕಾರ ದೊರೆತನಂತರವೂ ಈ ಭಾವ ಆತನಲ್ಲಿರುತ್ತದೆ. ಆತನ 'ಅಹಂ' ಪೂರ್ಣವಾಗಿ ಹೊರಟುಹೋಗದು. ಈ ವಿಧದ ಭಾವವನ್ನು ಕಾರ್ಯತಃ ಆಚರಣೆಗೆ ತರುತ್ತ ತರುತ್ತ ಕೊನೆಗೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಇದಕ್ಕೇ ಭಕ್ತಿಯೋಗ ಅಂತ ಹೆಸರು.

"ಭಕ್ತಿಮಾರ್ಗವನ್ನು ಅನುಸರಿಸಿ ಮುಂದುವರಿದರೆ ಬ್ರಹ್ಮಜ್ಞಾನವನ್ನೂ ಪಡೆದುಕೊಂಡುಬಿಡಬಹುದು. ಭಗವಂತ ಸರ್ವಶಕ್ತಿಮಾನ್. ಆತ ಇಚ್ಛೆಪಟ್ಟರೆ ತನ್ನ ಭಕ್ತನಿಗೆ ಬ್ರಹ್ಮಜ್ಞಾನವನ್ನೂ ಕೊಡಬಲ್ಲ. ಆದರೆ

ಭಕ್ತನಿಗೆ ಪ್ರಾಯಿಕವಾಗಿ ಬ್ರಹ್ಮಜ್ಞಾನ ಬೇಕೆಂದೆನಿಸುವುದಿಲ್ಲ. ಆತ, 'ನಾನು ದಾಸ, ನೀನು ಪ್ರಭು; ನಾನು ಮಗು, ನೀನು ತಾಯಿ' ಎಂಬ ಈ ಭಾವದಿಂದಿರಲು ಇಚ್ಛೆಪಡುತ್ತಾನೆ."

ವಿಜಯ: "ವೇದಾಂತ ವಿಚಾರ ಮಾಡುವವರೂ ಆತನನ್ನೇ ಕೊನೆಗೆ ಸಾಕ್ಷಾತ್ಕಾರಮಾಡಿಕೊಳ್ಳುತ್ತಾರಲ್ಲವೆ?"

ಶ್ರೀರಾಮಕೃಷ್ಣರು: "ಹೌದು, ವಿಚಾರಮಾರ್ಗದಿಂದಲೂ ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ಇದಕ್ಕೇ ಜ್ಞಾನಯೋಗ ಅಂತ ಹೆಸರು. ವಿಚಾರಮಾರ್ಗ ಬಹಳ ಕಠಿನವಾದ್ದು. ನಾನಾಗಲೆ ನಿನಗೆ ಸಪ್ತಭೂಮಿಕೆಗಳ ವಿಷಯವಾಗಿ ತಿಳಿಸಿದೇನೆ. ಮನಸ್ಸು ಸಪ್ತಮ ಭೂಮಿಕೆಯನ್ನು ಮುಟ್ಟಿದಾಗ ಸಮಾಧಿಯುಂಟಾಗುತ್ತದೆ. ಬ್ರಹ್ಮ ಸತ್ಯ ಜಗನ್ಮಿಥ್ಯಾ ಎಂಬ ದೃಢಜ್ಞಾನ ಉಂಟಾದುದೇ ಆದರೆ ಮನಸ್ಸು ಲಯ ಹೊಂದಿಬಿಡುತ್ತದೆ; ಸಮಾಧಿಯುಂಟಾಗುತ್ತದೆ. ಆದರೆ ಈ ಕಲಿಯುಗದಲ್ಲಿ ಅನ್ನಗತಪ್ರಾಣ. 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಬೋಧೆ ಎಲ್ಲಿ ಸಾಧ್ಯವಾದೀತು? ಆ ಅರಿವು ದೇಹಬುದ್ಧಿ ಹೋಗದ ಹೊರತು ಉಂಟಾಗದು. 'ನಾನು ದೇಹವಲ್ಲ, ನಾನು ಮನಸ್ಸಲ್ಲ, ನಾನು ಚತುರ್ವಿಂಶತಿ ತತ್ತ್ವ ಅಲ್ಲ; ನಾನು ಸುಖದುಃಖಗಳಿಗತೀತ, ನನಗೆಲ್ಲಿಯ ರೋಗ, ಶೋಕ, ಮುಪ್ಪು, ಮೃತ್ಯು?' ಎಂಬ ಬೋಧೆ ಕಲಿಯುಗದಲ್ಲಿ ಉಂಟಾಗುವುದು ಬಹಳ ಕಠಿನ. ವಿಚಾರ ಎಷ್ಟೇ ಮಾಡು ದೇಹಾತ್ಮಬುದ್ಧಿ ಯಾವುದೊ ಮೂಲೆಯಿಂದ ನುಸಿದುಕೊಂಡು ಒಳಕ್ಕೆ ನುಗ್ಗಿಬಿಡುತ್ತದೆ. ಅಶ್ವತ್ಥ ವೃಕ್ಷವನ್ನು ಇಂದು ನೆಲಮಟ್ಟದವರೆಗೂ ಕತ್ತರಿಸಿಹಾಕಿ ಅದು ಇನ್ನೇನು ಸತ್ತು ಹೋಯಿತು ಎಂದು ಭಾವಿಸಿ ಮಾರನೆ ದಿನ ಹೋಗಿ ನೋಡಿದರೆ ಆಗಲೆ ಅದು ಚಿಗುರಿಬಿಟ್ಟಿರುತ್ತದೆ. ದೇಹಾಭಿಮಾನ ಹೋಗುವುದಿಲ್ಲ; ಆದ್ದರಿಂದ ಭಕ್ತಿಯೋಗವೇ ಈ ಯುಗಕ್ಕೆ ಒಳ್ಳೆಯದು. ಇದು ಬಹಳ ಸಹಜವಾದ್ದು.

"'ಸಕ್ಕರೆಯಾಗಲು ಇಚ್ಛೆಯಿಲ್ಲ; ಸಕ್ಕರೆ ತಿನ್ನಲು ಇಚ್ಛೆ.' ನನಗೆ ಎಂದಿಗೂ ಇಚ್ಛೆಯಾಗುವುದಿಲ್ಲ, 'ನಾನು ಬ್ರಹ್ಮ' ಅಂತ ಹೇಳಲು. ನಾನು ಹೇಳುತ್ತೇನೆ: 'ನೀನು ಭಗವಂತ, ನಾನು ನಿನ್ನ ದಾಸ.' ಐದನೆ ಮತ್ತು ಆರನೆ ಭೂಮಿಕೆಗಳ ಮಧ್ಯೆ ಮನಸ್ಸಿನ ದೋಣಿ ಜೂಜು ನಡಸುವುದು ಬಹಳ ಒಳ್ಳೆಯದು. ಆರನೆ ಭೂಮಿಕೆಯನ್ನು ದಾಟಿ ಏಳನೆ ಭೂಮಿಕೆಯಲ್ಲಿ ಹೆಚ್ಚು ಹೊತ್ತು ಇರಲು ನನಗೆ ಇಚ್ಛೆಯಿಲ್ಲ. ನನಗೆ ಆತನ

ನಾಮಗುಣಕೀರ್ತನೆ ಮಾಡಿಕೊಂಡಿರಬೇಕೆಂಬ ಇಚ್ಛೆ. ಸೇವ್ಯ ಸೇವಕ ಭಾವ ಬಹಳ ಒಳ್ಳೆಯದು. ಮತ್ತೆ ನೋಡು, ಅಲೆ ಗಂಗೆಯದು ಎಂದು ಜನ ಹೇಳುತ್ತಾರೆಯೇ ಹೊರತು ಗಂಗೆ ಅಲೆಯದು ಎಂದು ಯಾರೂ ಹೇಳುವುದಿಲ್ಲ. 'ನಾನೇ ಅವನು' ಎಂಬ ಭಾವ ಒಳ್ಳೆಯದಲ್ಲ. ದೇಹಾತ್ಮ-ಬುದ್ಧಿ ಇನ್ನೂ ಇರುವಾಗಲೆ ಮನುಷ್ಯ ಹೀಗೆ ಭಾವಿಸಿದರೆ ಆತನಿಗೆ ವಿಶೇಷ ಹಾನಿ ಬಂದೊದಗುತ್ತದೆ. ಆತ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯ ಲಾರದೆ ಕ್ರಮೇಣ ಅಧಃಪತನಕ್ಕೆ ಇಳಿದುಬಿಡುತ್ತಾನೆ. ಪರರನ್ನೂ ಮೋಸಗೊಳಿಸುತ್ತಾನೆ, ತಾನೂ ಮೋಸಹೋಗುತ್ತಾನೆ. ಆತನಿಗೆ ತನ್ನ ಮಾನಸಿಕ ಅವಸ್ಥೆ ಏನು ಎಂಬುದನ್ನ ಅರಿತುಕೊಳ್ಳಲಾಗುವುದಿಲ್ಲ.

"ಆದರೆ ಕಾಟಾಚಾರದ ಭಕ್ತಿಯಿಂದ ಭಗವಂತನನ್ನು ಪಡೆಯ ಲಾಗೋದಿಲ್ಲ. ಪ್ರೇಮಭಕ್ತಿಯಿಲ್ಲದೆ ಆತನ ಸಾಕ್ಷಾತ್ಕಾರ ಮಾಡಿಕೊಳ್ಳ ಲಾಗೋದಿಲ್ಲ. ಪ್ರೇಮಭಕ್ತಿಗೆ ಇನ್ನೊಂದು ಹೆಸರು 'ರಾಗಭಕ್ತಿ' ಅಂತ. ಪ್ರೇಮ, ಅನುರಾಗ ಇಲ್ಲದೆ ಭಗವಂತನ ಸಾಕ್ಷಾತ್ಕಾರ ದೊರೆಯದು. ಭಗವಂತನಲ್ಲಿ ಪ್ರೀತಿ ಉಂಟಾಗದ ಹೊರತು ಆತನನ್ನು ಸಾಕ್ಷಾತ್ಕಾರಮಾಡಿ ಕೊಳ್ಳಲಾಗೋದಿಲ್ಲ.

"ಇನ್ನೊಂದು ವಿಧದ ಭಕ್ತಿ ಇದೆ. ಅದರ ಹೆಸರು 'ವೈಧೀಭಕ್ತಿ' ಅಂತ. ಅದರ ಪ್ರಕಾರ ಕೆಲವು ನಿರ್ದಿಷ್ಟ ಸಲ ಜಪಮಾಡಬೇಕು, ಉಪ ವಾಸವಿರಬೇಕು, ತೀರ್ಥಯಾತ್ರೆಗೆ ಹೋಗಬೇಕು, ನಿರ್ದಿಷ್ಟ ಉಪಚಾರ ಗಳಿಂದ ಪೂಜೆಮಾಡಬೇಕು, ನಿಯಮಿತ ಬಲಿದಾನಕೊಡಬೇಕು ಇತ್ಯಾದಿ. ಇವೆಲ್ಲವನ್ನೂ ಬಹಳವಾಗಿ ಮಾಡುತ್ತ ಮಾಡುತ್ತ ಬಂದರೆ, ಕ್ರಮೇಣ ರಾಗಭಕ್ತಿ ಉಂಟಾಗುತ್ತದೆ. ಈ ರಾಗಭಕ್ತಿ ಉಂಟಾಗದ ಹೊರತು ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲ. ಆತನ ಮೇಲೆ ಪ್ರೀತಿ ಉಂಟಾಗಬೇಕು. ಸಾಂಸಾರಿಕಬುದ್ಧಿ ಸಂಪೂರ್ಣವಾಗಿ ತೊಲಗಿಹೋಗಿ ನೂರಕ್ಕೆ ನೂರು ಭಾಗ ಮನಸ್ಸು ಆತನಲ್ಲಿ ನೆಲಸಬೇಕು. ಆಗ ಮಾತ್ರವೇ ಆತನ ಸಾಕ್ಷಾತ್ಕಾರ ದೊರೆಯುತ್ತದೆ.

"ಆದರೆ ಕೆಲಕೆಲವರಿಗೆ ರಾಗಭಕ್ತಿ ತಾನಾಗೇ ಉಂಟಾಗಿಬಿಡುತ್ತದೆ. ಅವರಲ್ಲಿ ಅದು ಸ್ವತಸ್ಸಿದ್ಧವಾಗಿದೆ. ಬಾಲ್ಯಕಾಲದಿಂದಲೇ ಅದು ಅವರಲ್ಲಿ ಇದೆ. ಚಿಕ್ಕ ವಯಸ್ಸಿನಲ್ಲೇ ಅವರು ಭಗವಂತನಿಗಾಗಿ ಅಳಲಾರಂಭಿ ಸುತ್ತಾರೆ. ಉದಾಹರಣೆಗೆ ಪ್ರಹ್ಲಾದ. ವೈಧೀಭಕ್ತಿ, ಗಾಳಿ ಬೀಸಿಕೊಳ್ಳಲು

ಬೇಕಾಗುವ ಬೀಸಣಿಗೆಯ ಹಾಗೆ. ಗಾಳಿ ಬೀಸಿಕೊಳ್ಳಬೇಕಾದರೆ ಬೀಸಣಿಗೆ ಬೇಕು. ಭಗವಂತನಲ್ಲಿ ಪ್ರೀತಿಯುಂಟಾಗುತ್ತದೆ ಎಂದು ಜಪ, ತಪ, ಉಪವಾಸ ಇವುಗಳನ್ನೆಲ್ಲಾ ಜನ ಮಾಡುತ್ತಾರೆ. ಆದರೆ ದಕ್ಷಿಣದ ಗಾಳಿ ತಾನಾಗೇ ಬೀಸಲಾರಂಭಿಸಿದರೆ ಅವರು ಬೀಸಣಿಗೆಯನ್ನ ಒಂದು ಕಡೆಗೆ ಬಿಸಾಡಿಬಿಡುತ್ತಾರೆ. ಭಗವಂತನಲ್ಲಿ ಅನುರಾಗ ಪ್ರೇಮ ತಾನಾಗೇ ಉದಯವಾಯಿತು ಎಂದರೆ, ಜಪತಪಾದಿ ಕರ್ಮ ನಿಂತುಹೋಗುತ್ತವೆ. ಭಗವತ್ಪ್ರೇಮದಲ್ಲಿ ಮತ್ತರಾದನಂತರ ವೈಧೀಕರ್ಮವನ್ನ ಯಾರು ತಾನೆ ಮಾಡುತ್ತಾರೆ?

"ಭಗವಂತನಲ್ಲಿ ಪ್ರೀತಿ ಉದಯವಾಗದವರೆಗೆ ಭಕ್ತಿ ಹಸಿಯದಾ। ರುತ್ತದೆ. ಅದು ಉಂಟಾಗಿಬಿಟ್ಟಿತು ಎಂದರೆ ಭಕ್ತಿ ಪಕ್ವಭಕ್ತಿಯಾ ೯ ಬಿಡುತ್ತದೆ.

"ಯಾರ ಭಕ್ತಿ ಇನ್ನೂ ಹಸಿಯೊ ಆತ ಭಗವತ್ಕಥಾ, ಉಪದೇಶ ಇವನ್ನು ಗ್ರಹಿಸಲಾರ; ಆದರೆ ಅದು ಪಕ್ವವಾಯಿತು ಎಂದರೆ ಗ್ರಹಿಸಬಲ್ಲ. ಫೊಟಾಗ್ರಾಫರ್‌ನ ಗಾಜಿನ ಮೇಲೆ ಬೆಳ್ಳಿಯ ಉಪ್ಪನ್ನು (ಸಿಲ್ವರ್ ನೈಟ್ರೇಟ್) ಸವರಿದ್ದರೆ ಅದರ ಮೇಲೆ ಬಿದ್ದ ಪ್ರತಿಬಿಂಬ ಹಾಗೇ ಉಳಿದುಕೊಳ್ಳುತ್ತದೆ. ಆದರೆ ಬರೀ ಗಾಜಿನ ಮೇಲೆ ಸಹಸ್ರಾರು ಪ್ರತಿಬಿಂಬ ಬೀಳಲಿ ಅವೊಂದೂ ನಿಲ್ಲುವುದಿಲ್ಲ. ವಸ್ತು ಅಲ್ಲಿಂದ ಸರಿದುಹೋಯಿತು ಎಂದರೆ ಅದು ಎಂದಿದ್ದಂತೇ ಇರುತ್ತದೆ. ಭಗವಂತನಲ್ಲಿ ಪ್ರೀತಿ ಇಲ್ಲದೆ ಇತ್ತು ಎಂದರೆ, ಉಪದೇಶವನ್ನು ಗ್ರಹಿಸಲಾಗೋದಿಲ್ಲ."

ವಿಜಯ: "ಮಹಾಶಯರೆ, ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳಲು, ಆತನ ದರ್ಶನ ಹೊಂದಲು ಕೇವಲ ಭಕ್ತಿಯೇ ಸಾಕೆ?"

ಶ್ರೀರಾಮಕೃಷ್ಣರು: "ಹೌದು, ಭಕ್ತಿಯ ಮೂಲಕವೇ ಆತನ ದರ್ಶನ ಪಡೆಯಬಹುದು. ಆದರೆ ಅದು ಪಕ್ವ-ಭಕ್ತಿ, ಪ್ರೇಮ-ಭಕ್ತಿ, ರಾಗ-ಭಕ್ತಿ ಆಗಿರಬೇಕು. ಆ ಭಕ್ತಿ ಉಂಟಾಯಿತು ಎಂದರೆ ತಾಯಿ ಮಗುವನ್ನು ಪ್ರೀತಿಸುವಂತೆ, ಮಗು ತಾಯಿಯನ್ನು ಪ್ರೀತಿಸುವಂತೆ, ಸತಿ ಪತಿಯನ್ನು ಪ್ರೀತಿಸುವಂತೆ ಭಕ್ತ ಭಗವಂತನನ್ನು ಪ್ರೀತಿಸುತ್ತಾನೆ.

"ಈ ಪ್ರೀತಿ, ಈ ರಾಗ-ಭಕ್ತಿ ಉಂಟಾಯಿತು ಎಂದರೆ ಹೆಂಡತಿ, ಮಕ್ಕಳು, ಸ್ವಬಾಂಧವರು ಇವರ ಮೇಲೆ ಮನುಷ್ಯನಿಗಿರುವ ಮಾಯಾ ಪ್ರೇರಿತ ಆಕರ್ಷಣೆ ಇರದು. ಅವರ ಕಡೆಗೆ ಆತನಲ್ಲಿ ದಯೆ ಮಾತ್ರ

ಉಳಿದಿರುತ್ತದೆ. ಈ ಜಗತ್ತು ವಿದೇಶವಾಗಿ ತೋರಿಬರುತ್ತದೆ; ಕೇವಲ ಕರ್ಮಭೂಮಿಯಾಗಿ ಕಂಡುಬರುತ್ತದೆ. ಇದು ಹಳ್ಳಿಯಲ್ಲಿ ಸ್ವಂತ ಮನೆಯಿದ್ದು ಕಲ್ಕತ್ತಕ್ಕೆ ಕೆಲಸಕ್ಕೆ ಬರೋ ಹಾಗೆ. ಹಾಗೆ ಬಂದವರು ಕೆಲಸದ ಸಲುವಾಗಿ ಬಾಡಿಗೆ ಮನೆ ಮಾಡಿಕೊಳ್ಳಬೇಕಾಗುತ್ತದೆ. ಭಗವಂತನಲ್ಲಿ ಪ್ರೀತಿಯುಂಟಾಯಿತು ಎಂದರೆ, ಸಂಸಾರಾಸಕ್ತಿ, ವಿಷಯಬುದ್ಧಿ ಒಮ್ಮೆಗೇ ತೊಲಗಿಹೋಗುತ್ತವೆ.

"ವಿಷಯಬುದ್ಧಿ ಲೇಶಮಾತ್ರವಿದ್ದರೂ ಭಗವಂತನ ದರ್ಶನ ದೊರೆಯೋದಿಲ್ಲ. ಬೆಂಕಿ ಕಡ್ಡಿ ಒದ್ದೆಯಾಗಿತ್ತು ಎಂದರೆ ಒಂದು ಸಾವಿರ ಕಡ್ಡಿ ಗೀಚು, ಒಂದೂ ಹೊತ್ತಿಕೊಳ್ಳುವುದೇ ಇಲ್ಲ. ಕೇವಲ ಒಂದು ರಾಶಿ ಬೆಂಕಿ ಕಡ್ಡಿಯ ನಷ್ಟ, ಅಷ್ಟೆ. ವಿಷಯಾಸಕ್ತ ಮನಸ್ಸು ನೆನೆದ ಬೆಂಕಿ ಕಡ್ಡಿ. ಒಮ್ಮೆ ಶ್ರೀಮತಿ (ರಾಧೆ) ತನ್ನ ಸಖಿಯರಿಗೆ ಹೇಳಿದಳು ತನ್ನ ಕಣ್ಣಿಗೆ ಎಲ್ಲವೂ ಕೃಷ್ಣಮಯವಾಗಿ ಕಾಣುತ್ತಿದೆ ಎಂಬುದಾಗಿ. ಸಖಿಯರು ಹೇಳಿದರು: 'ಎಲ್ಲಿ, ನಮಗೆ ಹಾಗೆ ಕಾಣುತ್ತಿಲ್ಲವಲ್ಲ! ನಿನಗೇನು ಬುದ್ಧಿಭ್ರಮಣೆಯಾಗಿದೆಯೇ?' ಶ್ರೀಮತಿ ಹೇಳಿದಳು: 'ಸಖಿಯರೆ, ಅನುರಾಗವೆಂಬ ಅಂಜನವನ್ನು ಕಣ್ಣಿಗೆ ಹಚ್ಚಿಕೊಳ್ಳಿ. ಆಗ ನಿಮಗೆ ಆತ ಕಾಣುತ್ತಾನೆ.'

(ವಿಜಯನಿಗೆ) "ನಿಮ್ಮ ಬ್ರಾಹ್ಮಸಮಾಜದ ಒಂದು ಹಾಡಿನಲ್ಲಿ ಹೇಳಿದೆ:

ಅನುರಾಗಕಲ್ಲದೆಯೆ
ಒಲಿಯುದಿಹ ಪ್ರಭು ನೀನು!
ಯಜ್ಞಯಾಗಗಳಿಂದ ಇನ್ನು ಫಲವೇನು?

"ಈ ಅನುರಾಗ, ಈ ಪ್ರೇಮ, ಈ ಪಕ್ವಭಕ್ತಿ, ಈ ಪ್ರೀತಿ ಒಮ್ಮೆ ಉಂಟಾಯಿತು ಎಂದರೆ ಭಗವಂತನನ್ನು ಆತನ ಸಾಕಾರ ನಿರಾಕಾರ ರೂಪಗಳೆರಡರಲ್ಲೂ ನೋಡಬಹುದು."

ವಿಜಯ: "ಭಗವಂತನ ದರ್ಶನವನ್ನು ಪಡೆಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಚಿತ್ತಶುದ್ಧಿ ಆಗದೆ ಇತ್ತು ಎಂದರೆ, ಪಡೆಯಲಾಗೋದಿಲ್ಲ. ಕಾಮಕಾಂಚನಾಸಕ್ತಿಯಿಂದ ಮನಸ್ಸು ಮಲಿನವಾಗಿಬಿಟ್ಟಿದೆ—ಕೊಳೆಯಿಂದ ತುಂಬಿದೆ. ಸೂಜಿ ಮಣ್ಣಿನಿಂದ ಆವೃತವಾಗಿದ್ದರೆ ಆಗ ಸೂಜಿಗಲ್ಲು ಅದನ್ನು ಎಳೆಯಲಾರದು. ಆ ಮಣ್ಣನ್ನು ತೊಳೆದು

ಬಿಟ್ಟಿದ್ದೇ ಆದರೆ, ಒಡನೆ ಸೂಜಿಗಲ್ಲು ಅದನ್ನು ಎಳೆದುಬಿಡುತ್ತದೆ. ಅದೇ ರೀತಿಯಾಗಿ ಮನಸ್ಸಿನ ಕೊಳಕನ್ನು ಕಣ್ಣೀರಿನಿಂದ ತೊಳೆದುಬಿಡಬಹುದು. ಯಾರೇ ಆಗಲಿ, 'ಹೇ ಭಗವಂತ, ಮತ್ತೆ ನಾನು ಅಂಥ ಕಾರ್ಯಗಳನ್ನು ಮಾಡೋದಿಲ್ಲ' ಅಂತ ಹೇಳಿ ಅನುತಾಪದಿಂದ ಅತ್ತುದೇ ಆದರೆ, ಕೊಳೆ ತೊಳೆದುಹೋಗುತ್ತದೆ. ಆಗ ಭಗವದ್ರೂಪದ ಸೂಜಿಗಲ್ಲು ಮನಸ್ಸೆಂಬ ಸೂಜಿಯನ್ನು ಎಳೆದುಕೊಂಡುಬಿಡುತ್ತದೆ. ಆಗ ಸಮಾಧಿಯುಂಟಾಗುತ್ತದೆ, ಭಗವಂತನ ದರ್ಶನ ದೊರೆಯುತ್ತದೆ.

"ಆದರೆ ಸಾವಿರ ಪ್ರಯತ್ನ ಮಾಡು ಭಗವಂತನ ಕೃಪೆ ಇಲ್ಲದೆ ಏನೂ ಆಗದು. ಆತನ ಕೃಪೆ ಇಲ್ಲದಿದ್ದರೆ ಆತನ ದರ್ಶನ ಮಾಡಲಾಗೋದಿಲ್ಲ. ಆತನ ಕೃಪೆ ಸುಲಭದಲ್ಲಿ ದೊರೆತುಬಿಡುವುದೆ? 'ಅಹಂ' ಅನ್ನು ಒಮ್ಮೆಗೇ ತ್ಯಜಿಸಿಬಿಡಬೇಕಾಗುತ್ತದೆ. 'ನಾನು ಕರ್ತ' ಎಂಬ ಭಾವನೆ ಇತ್ತು ಎಂದರೆ, ಭಗವಂತನ ದರ್ಶನ ದೊರೆಯುವುದಿಲ್ಲ. ಮನೆಯ ಉಗ್ರಾಣ ವನ್ನು ಒಬ್ಬ ನೋಡಿಕೊಳ್ಳುತ್ತಿದಾನೆ ಅಂತ ಇಟ್ಟುಕೊ. ಒಬ್ಬ ಹೋಗಿ ಯಜಮಾನನನ್ನು ಕಂಡು ಹೇಳಿದರೆ: 'ಮಹಾಶಯರೆ, ದಯವಿಟ್ಟು ತಾವು ಉಗ್ರಾಣಕ್ಕೆ ಬಂದು ಸಾಮಾನು ತೆಗೆದುಕೊಡಿ', ಆತ ಹೇಳುತ್ತಾನೆ: 'ಉಗ್ರಾಣ ನೋಡಿಕೊಳ್ಳುವವನು ಆಗಲೆ ಒಬ್ಬ ಇದಾನೆ. ಅಲ್ಲಿಗೆ ಬಂದು ನಾನೇನು ಮಾಡಲಿ?'

"ಯಾರು, ತಾನೇ ತನ್ನನ್ನು ಯಜಮಾನ ಅಂತ ಭಾವಿಸಿಕೊಂಡಿ ದಾನೊ ಆತನ ಹೃದಯಕ್ಕೆ ಭಗವಂತ ಸುಲಭದಲ್ಲಿ ಬರಲೊಲ್ಲ. ಆದರೆ ಆತನ ಕೃಪೆ ದೊರೆತೊಡನೇ ಆತನ ದರ್ಶನ ದೊರೆಯುತ್ತದೆ. ಆತ ಜ್ಞಾನ-ಸೂರ್ಯ. ಕೇವಲ ಆತನ ಒಂದು ಕಿರಣವೇ ಈ ಜಗತ್ತಿಗೆ ಜ್ಞಾನದ ಬೆಳಕನ್ನು ಕೊಟ್ಟಿದೆ. ಆದ್ದರಿಂದಲೇ ನಮಗೆ ಒಬ್ಬರನ್ನೊಬ್ಬರು ಅರಿತು ಕೊಳ್ಳಲು ಮತ್ತು ವಿವಿಧ ಜ್ಞಾನವನ್ನು ಸಂಪಾದಿಸಿಕೊಳ್ಳಲು ಸಾಧ್ಯವಾ ಗುತ್ತಿರುವುದು. ಆತ ತನ್ನ ಬೆಳಕನ್ನು ತಾನೇ ತನ್ನ ಮುಖದ ಮೇಲೆ ಬೀಳಿಸಿಕೊಂಡಿದ್ದೇ ಆದರೆ, ಆಗ ಮಾತ್ರ ಆತನ ದರ್ಶನ ಪಡೆಯಬಹುದು.

"ಸಾರ್ಜಂಟು ರಾತ್ರಿವೇಳೆ ಕತ್ತಲೆ ಕಾಲದಲ್ಲಿ ಕೈಯಲ್ಲಿ ಲಾಟೀನು ಹಿಡಿದು ಕಾವಲು ಕಾಯುತ್ತಾ ಸುತ್ತಾಡುತ್ತಾನೆ. ಆತನ ಮುಖ ಯಾರಿಗೂ ಕಾಣಬರುವುದಿಲ್ಲ; ಆದರೆ ಆ ಲಾಟೀನಿನ ಬೆಳಕಿನಿಂದ ಆತ ಎಲ್ಲರ ಮುಖವನ್ನೂ ನೋಡಬಲ್ಲ; ಉಳಿದವರೂ ಒಬ್ಬರನ್ನೊಬ್ಬರು ನೋಡ

ಬಲ್ಲರು. ಒಂದು ಪಕ್ಷ ಯಾರಾದರು ಸಾರ್ಜಂಟನ್ನು ನೋಡ ಬೇಕೆಂದಿದ್ದರೆ ಆತ ಆತನನ್ನು ಪ್ರಾರ್ಥನೆಮಾಡಿಕೊಳ್ಳಬೇಕು: 'ಮಹಾ ಶಯ, ಕೃಪೆಯಿಟ್ಟು ಬೆಳಕನ್ನು ನಿಮ್ಮ ಮುಖದ ಮೇಲೆ ತಿರುಗಿಸಿಕೊಳ್ಳಿ. ನಿಮ್ಮನ್ನು ನೋಡಬೇಕು ಅಂತ ಇದೇನೆ.' ಅದೇ ರೀತಿಯಾಗಿ ಭಗವಂತ ನಲ್ಲಿ ಪ್ರಾರ್ಥನೆಮಾಡಬೇಕು: 'ಹೇ ಪ್ರಭು, ಕೃಪೆಮಾಡಿ ಜ್ಞಾನದ ಬೆಳಕನ್ನು ನಿನ್ನ ಮೇಲೆ ಬೀಳಿಸಿಕೊ. ನಿನ್ನ ದರ್ಶನಮಾಡಬೇಕೆಂದಿದೇನೆ.'

"ಮನೆಯಲ್ಲಿ ಬೆಳಕು ಇಲ್ಲದೆ ಇತ್ತು ಎಂದರೆ ಅದು ದಾರಿದ್ರ್ಯದ ಲಕ್ಷಣ. ಆದ್ದರಿಂದ ಹೃದಯಮಧ್ಯದಲ್ಲಿ ಜ್ಞಾನದೀಪವನ್ನು ಹಚ್ಚಿ ಇಡಬೇಕು. ಒಂದು ಹಾಡಿನಲ್ಲಿ ಹೇಳಿರೋ ಹಾಗೆ:

ಹೃದಯಮಂದಿರದಲ್ಲಿ ಜ್ಞಾನದೀವಿಗೆ ಹಚ್ಚಿ
ಬ್ರಹ್ಮಮಯಿ ಮಾತಾಯ ಮುಖವ ನೋಡು!"

ವಿಜಯ ತನ್ನೊಡನೆ ಔಷಧ ತಂದಿದಾನೆ. ಅದನ್ನು ಸೇವಿಸಲು ಆತನಿಗೆ ಸ್ವಲ್ಪ ನೀರು ಬೇಕಾಗಿತ್ತು. ಪರಮಹಂಸರು ಒಬ್ಬ ಭಕ್ತನಿಗೆ ಹೇಳಿದರು, ಆತನಿಗೆ ನೀರು ತಂದುಕೊಡುವಂತೆ. ಪರಮಹಂಸರು ಅಹೇತುಕಕೃಪಾಸಿಂಧು. ವಿಜಯನಿಗೆ ಬಹಳವಾಗಿ ಬಡತನವಿದ್ದುದರಿಂದ ಪರಮಹಂಸರು ಆತನ ದೋಣಿ ಮತ್ತು ಗಾಡಿ ಬಾಡಿಗೆಗಳ ವ್ಯವಸ್ಥೆ ಮಾಡಿದಾರೆ. ವಿಜಯ, ಬಲರಾಮವಸು, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ದೋಣಿಯಲ್ಲಿ ಕುಳಿತು ಕಲ್ಕತ್ತಕ್ಕೆ ಹೊರಟರು.

೧ನೆ ಜನವರಿ ೧೮೮೩, ಮಾರ್ಗಶಿರ ಕೃಷ್ಣ ಅಷ್ಟಮಿ, ಸೋಮವಾರ.

ಶ್ರೀರಾಮಕೃಷ್ಣರು ಕಾಳೀದೇವಾಲಯದ ತಮ್ಮ ಕೊಠಡಿಯಲ್ಲಿ ನೆಲದ ಮೇಲೆ ಹಾಸಿದ್ದ ಮಂದಲಿಗೆ ಮೇಲೆ ಕುಳಿತಿದಾರೆ. ಘಂಟೆ ಬೆಳಗಿನ ಎಂಟು. ಚಳಿಗಾಲವಾದ್ದರಿಂದ ಮುಖಮಲ್ ಶಾಲನ್ನು ಹೊದ್ದುಕೊಂಡಿ ದಾರೆ. ಪ್ರಾಣಕೃಷ್ಣ, ಮಾಸ್ಟರ್ ಅವರ ಮುಂದೆ ಕುಳಿತುಕೊಂಡಿದಾರೆ. ರಾಖಾಲನೂ ಕೊಠಡಿಯಲ್ಲಿ ಕುಳಿತಿದಾನೆ. ಪ್ರಾಣಕೃಷ್ಣ ಸರ್ಕಾರದ ಒಂದು ದೊಡ್ಡ ಹುದ್ದೆಯಲ್ಲಿದಾನೆ. ಕಲ್ಕತ್ತದಲ್ಲಿ ವಾಸವಾಗಿದಾನೆ. ಆತನಿಗೆ ಮೊದಲನೆ ಹೆಂಡತಿಯಲ್ಲಿ ಮಕ್ಕಳು ಇಲ್ಲದೆ ಇದ್ದುದರಿಂದ, ಆಕೆಯ ಅನುಮತಿ ಪಡೆದು ಎರಡನೆ ಹೆಂಡತಿಯನ್ನು ಮದುವೆಯಾಗಿದಾನೆ. ಎರಡನೆ ಹೆಂಡತಿಯಲ್ಲಿ ಆತನಿಗೆ ಒಬ್ಬ ಮಗ ಇದಾನೆ. ಆತ ಸ್ವಲ್ಪ ದಪ್ಪವಾಗಿದ್ದು ದರಿಂದ ಪರಮಹಂಸರು ಆತನನ್ನು ಸಂಬೋಧಿಸುತ್ತಿದ್ದರು: "ದಡಿಯ

ಬ್ರಾಹ್ಮಣ" ಎಂಬುದಾಗಿ. ಪರಮಹಂಸರನ್ನು ಕಂಡರೆ ಆತನಿಗೆ ವಿಶೇಷ ಗೌರವ. ಗೃಹಸ್ಥನಾದರೂ ಪ್ರಾಣಕೃಷ್ಣನಿಗೆ ವೇದಾಂತ ವಿಚಾರದಲ್ಲಿ ಬಹಳ ಪ್ರೀತಿ. ಆತ ಹೇಳುತ್ತಾನೆ: "ಬ್ರಹ್ಮ ಸತ್ಯ ಜಗನ್ಮಿಥ್ಯಾ. ಅವನೇ ನಾನು, ಅಂದರೆ 'ಸೋऽಹಮ್'." ಪರಮಹಂಸರು ಆತನಿಗೆ ಹೇಳುತ್ತಿದ್ದರು: "ಕಲಿಯುಗದಲ್ಲಿ ಅನ್ನಗತಪ್ರಾಣ. ಆದ್ದರಿಂದ ಈ ಯುಗಕ್ಕೆ ಶ್ರೇಯಸ್ಕರವಾದ್ದು ನಾರದೀಯ ಭಕ್ತಿ."

ಒಬ್ಬ ಭಕ್ತ ಪರಮಹಂಸರಿಗೆಂದು ಒಂದು ಕುಕ್ಕೆ ಜಿಲೇಬಿ ತಂದಿದ್ದ. ಅದನ್ನು ಪರಮಹಂಸರು ತಮ್ಮ ಹತ್ತಿರ ಇಟ್ಟುಕೊಂಡಿದಾರೆ. ಅದರಿಂದ ಒಂದು ಚೂರು ತೆಗೆದುಕೊಂಡು ನಗುತ್ತ ಪ್ರಾಣಕೃಷ್ಣನಿಗೆ ಹೇಳುತ್ತಿದಾರೆ: "ನೋಡು, ನಾನು ಭಗವತಿಯ ಹೆಸರು ಹೇಳುತ್ತಿರುವುದರಿಂದ ಇವೆಲ್ಲಾ ತಿನ್ನುವುದಕ್ಕೆ ದೊರೆಯುತ್ತಿವೆ. (ನಗು.) ಆದರೆ ಆಕೆ ಸೋರೆಕಾಯಿ ಕುಂಬಳಕಾಯಿ ಇಂಥ ಫಲಗಳನ್ನ ಕೊಡುವುದಿಲ್ಲ. ಆಕೆ ಅಮೃತಫಲಗಳನ್ನ—ಜ್ಞಾನ, ಪ್ರೇಮ, ವಿವೇಕ, ವೈರಾಗ್ಯ ಫಲಗಳನ್ನ ಕೊಡುತ್ತಾಳೆ."

ಏಳೊ ಎಂಟೊ ವರ್ಷದ ಒಬ್ಬ ಹುಡುಗ ಕೊಠಡಿಯನ್ನು ಪ್ರವೇಶ ಮಾಡಿದ. ಪರಮಹಂಸರಿಗೂ ಬಾಲಕಾವಸ್ಥೆ ಬಂದುಬಿಟ್ಟದೆ. ಒಬ್ಬ ಹುಡುಗ ಇನ್ನೊಬ್ಬ ಹುಡುಗನನ್ನು ಕಂಡು ಆತ ಎಲ್ಲಿ ತನ್ನ ಹತ್ತಿರವಿರುವ ತಿಂಡಿಯನ್ನು ಕಿತ್ತುಕೊಂಡು ತಿಂದುಬಿಡುವನೊ ಏನೊ ಎಂದು ಅದನ್ನು ಕೈಯಿಂದ ಮುಚ್ಚಿಕೊಳ್ಳುವ ಹಾಗೆ ಪರಮಹಂಸರೂ ತಮ್ಮ ಕೈಗಳಿಂದ ಗೂಡೆಯನ್ನು ಮುಚ್ಚಿಕೊಂಡರು. ಈಗ ಕ್ರಮೇಣ ಅದನ್ನು ತಮ್ಮ ಪಕ್ಕಕ್ಕೆ ಸರಿಸುತ್ತಿದಾರೆ.

ಇದ್ದಕ್ಕಿದ್ದ ಹಾಗೆ ಪರಮಹಂಸರು ಸಮಾಧಿಸ್ಥರಾಗಿಬಿಟ್ಟದಾರೆ. ದೇಹ ಅಲುಗುತ್ತಿಲ್ಲ. ಚಕ್ಷು ಸ್ಪಂದಹೀನವಾಗಿವೆ. ಉಸಿರಾಡುತ್ತಿದಾರೊ ಇಲ್ಲವೊ ಎಂಬುದು ಗೊತ್ತಾಗುತ್ತಿಲ್ಲ. ಬಹಳ ಹೊತ್ತಾದನಂತರ ದೀರ್ಘ ನಿಶ್ವಾಸ ಬಿಟ್ಟರು. ಅದು ತೋರಿಸಿತು ಅವರು ಮತ್ತೆ ಈ ಇಂದ್ರಿಯ ರಾಜ್ಯಕ್ಕೆ ಬರುತ್ತಿದಾರೆ ಎಂಬುದನ್ನ.

ಶ್ರೀರಾಮಕೃಷ್ಣರು ಪ್ರಾಣಕೃಷ್ಣನಿಗೆ: "ಭಗವತಿ ಸಾಕಾರಳೇ ಅಲ್ಲ ನಿರಾಕಾರಳೂ ಕೂಡ. ಆಕೆಯ ರೂಪವನ್ನು ದರ್ಶನಮಾಡಲು ಸಾಧ್ಯ. ಭಾವಭಕ್ತಿಗಳಿಂದ ಆಕೆಯ ಅತುಲನೀಯ ರೂಪವನ್ನು ದರ್ಶನಮಾಡಲು ಸಾಧ್ಯ. ಭಗವತಿ ವಿವಿಧ ರೂಪಗಳಿಂದ ದರ್ಶನವೀಯುತ್ತಾಳೆ.

"ನಾನು ಆಕೆಯನ್ನು ನಿನ್ನೆ ನೋಡಿದೆ. ಅಂಚು ಹೊಲಿಯದ ಕಾಷಾಯ ಉಡುಪು ಹಾಕಿಕೊಂಡಿದ್ದಳು. ನನ್ನೊಡನೆ ಮಾತಾಡಿದಳು.

"ಆಕೆ ಇನ್ನೊಂದು ದಿನ ಆರೇಳು ವರ್ಷದ ಮುಸಲ್ಮಾನ ಹುಡುಗಿಯ ರೂಪ ಧರಿಸಿ ನನ್ನನ್ನು ಸಮೀಪಿಸಿದಳು. ಹಣೆಗೆ ತಿಲಕ, ಆದರೆ ದಿಗಂಬರಿ. ನನ್ನೊಡನೆ ಸುತ್ತಾಡುತ್ತ ತಮಾಷೆಮಾಡಲಾರಂಭಿಸಿದಳು.

"ಹೃದೂನ ಮನೆಯಲ್ಲಿ ನನಗೆ ಗೌರಾಂಗನ ದರ್ಶನವಾಯಿತು. ಕಪ್ಪು ಅಂಚಿನ ಪಂಚೆ ಉಟ್ಟುಕೊಂಡಿದ್ದ.

"ಹಲಧಾರಿ ಹೇಳುತ್ತಿದ್ದ, ಭಗವಂತ ಭಾವ ಅಭಾವಗಳಿಗೆ ಅತೀತ ಎಂಬುದಾಗಿ. ನಾನು ಹೋಗಿ ಆತ ಹೇಳಿದುದನ್ನು ಭಗವತಿಗೆ ತಿಳಿಸಿ ಆಕೆಯನ್ನು ಕೇಳಿದೆ: 'ತಾಯೆ, ಹಾಗಾದರೆ ಭಗವದ್ರೂಪಗಳೆಲ್ಲ ಮಿಥ್ಯೆಯೇನು?' ಭಗವತಿ ರತಿ ತಾಯಿಯ ವೇಷ ಧರಿಸಿ ನನ್ನನ್ನು ಸಮೀಪಿಸಿ ಹೇಳಿದಳು: 'ನೀನು ಭಾವದಲ್ಲೇ[1] ಇರು.' ನಾನು ಇದನ್ನು ಹಲಧಾರಿಗೆ ತಿಳಿಸಿದೆ. ಒಮ್ಮೊಮ್ಮೆ ನಾನು ಆಕೆಯ ಈ ಆದೇಶವನ್ನು ಮರೆತು ಕಷ್ಟಕ್ಕೀಡಾಗುತ್ತಿದೇನೆ. ಒಮ್ಮೆ ನಾನು ಹಲ್ಲು ಮುರಿದುಕೊಂಡೆ, ಭಾವದಲ್ಲಿ ಇಲ್ಲದೆ ಇದ್ದುದರಿಂದ. ಆದ್ದರಿಂದ ದೈವವಾಣಿಯೇ ಆಗಲಿ ಅಥವಾ ಯಾವುದಾದರೊಂದು ಪ್ರತ್ಯಕ್ಷ ಅನುಭವವೇ ಆಗಲಿ, ಆಕೆಯ ಆದೇಶಕ್ಕೆ ವಿರುದ್ಧವಾಗಿ ಆಗದವರೆಗೆ ಭಾವದಲ್ಲೇ ಇರುತ್ತೇನೆ—ಭಕ್ತನಾಗೇ ಉಳಿಯುತ್ತೇನೆ. ಏನು ಹೇಳುತ್ತೀಯೆ?"

ಪ್ರಾಣಕೃಷ್ಣ: "ಹೌದು, ಅದು ಸರಿ."

ಶ್ರೀರಾಮಕೃಷ್ಣರು: "ಆದರೆ ಎಲ್ಲರನ್ನೂ ಬಿಟ್ಟು ಅದರ ಸಂಬಂಧವಾಗಿ ನಿನ್ನನ್ನೇಕೆ ನಾನು ಕೇಳಬೇಕು? ನನ್ನ ಅಂತರ್ಯದಲ್ಲಿ ಏನೋ ಒಂದು ಇದೆ. ಅದು ನನ್ನನ್ನು ಹಿಡಿದುಕೊಂಡು ಹೀಗೆಲ್ಲಾ ಮಾಡಿಸುತ್ತಿದೆ. ಆಗಾಗ ನನಗೆ ದೇವಭಾವ ಬಂದುಬಿಡುತ್ತಿತ್ತು. ಆಗ ನನಗೆ ಪೂಜೆ ನಡೆಯದೆ ಇತ್ತು ಎಂದರೆ ಶಾಂತಿಯಿಂದ ಇರಲಾಗುತ್ತಿರಲಿಲ್ಲ.

"ನಾನು ಯಂತ್ರ ಭಗವತಿ ಯಂತ್ರಿ. ಆಕೆ ಮಾಡಿಸಿದಂತೆ ಮಾಡುತ್ತೇನೆ, ಹೇಳಿಸಿದಂತೆ ಹೇಳುತ್ತೇನೆ.

---

1. ಇದು ಸಾಕಾರಕ್ಕೂ ನಿರಾಕಾರಕ್ಕೂ ಮಧ್ಯೆ ಇರುವ ಒಂದು ಅದ್ಭುತ ಅವಸ್ಥೆ. ಈ ಅವಸ್ಥೆಯಲ್ಲಿ ಸಾಕಾರ ನಿರಾಕಾರ ಎರಡೂ ಸತ್ಯ ಎಂಬ ಬೋಧೆಯಾಗುತ್ತದೆ.

ಇಂಥ ತಾಯಿಯ ನಾಮನೌಕೆಯ ಹಿಡಿದು ಭವಸಾಗರದೊಳು
ತೇಲಿ ನಡೆಯಿರಿ ಎಂದು ನುಡಿವನು ಭಕ್ತ ರಾಮಪ್ರಸಾದನು !

"ಇದು ಸುಂಟರಗಾಳಿಗೆ ಸಿಕ್ಕಿದ ಎಂಜಲೆಲೆಯ ಹಾಗೆ. ಅದು ಗಾಳಿ ಬೀಸಿದ ಹಾಗೆ, ಕೆಲವು ವೇಳೆ ಒಳ್ಳೆ ಸ್ಥಳಗಳಿಗೆ ಹೋಗಿಬೀಳುತ್ತದೆ, ಇನ್ನು ಕೆಲವು ವೇಳೆ ಚರಂಡಿಗೆ ಹೋಗಿಬೀಳುತ್ತದೆ.

"ಆ ಕಥೆಯಲ್ಲಿ ನೆಯ್ಗೆಯವನು ಹೇಳಿದ ಹಾಗೆ: 'ರಾಮನ ಇಚ್ಛೆಯಿಂದ ಕಳ್ಳತನವಾಯಿತು. ರಾಮನ ಇಚ್ಛೆಯಿಂದ ಪೊಲೀಸಿನವರು ನನ್ನನ್ನು ಹಿಡಿದರು. ಮತ್ತೆ ಅವರು ರಾಮನ ಇಚ್ಛೆಯಿಂದಲೇ ನನ್ನನ್ನು ಬಿಟ್ಟುಬಿಟ್ಟರು.'

"ಒಮ್ಮೆ ಹನುಮಂತ ರಾಮನಿಗೆ ಹೇಳಿದ: 'ಹೇ ರಾಮ, ನಾನು ನಿನ್ನಲ್ಲಿ ಶರಣಾಗತ, ಶರಣಾಗತ. ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿಯುಂಟಾಗುವಂತೆಯೂ, ನಿನ್ನ ಭುವನಮೋಹಿನಿ ಮಾಯೆಯಿಂದ ನಾನು ಮುಗ್ಧನಾಗದೆ ಇರುವಂತೆಯೂ ಆಶೀರ್ವಾದಮಾಡು.'

"ಒಮ್ಮೆ ಸಾಯುತ್ತಿರೋ ಗೂಳಿ ಕಪ್ಪೆ ರಾಮನಿಗೆ ಹೇಳಿತು: 'ಹೇ ರಾಮ, ಸರ್ಪ ನನ್ನನ್ನು ಹಿಡಿದಾಗ ನಾನು ಕೂಗಿಕೊಳ್ಳುತ್ತೇನೆ: "ಓ ರಾಮ, ನನ್ನನ್ನು ರಕ್ಷಿಸು" ಎಂಬುದಾಗಿ. ಆದರೆ ಈಗ ನಾನು ನಿನ್ನ ಬಿಲ್ಲಿನ ಮೊನೆಯ ತಿವಿತಕ್ಕೆ ಸಿಕ್ಕಿ ಸತ್ತುಹೋಗುವುದರಲ್ಲಿದೇನೆ. ಅದಕ್ಕಾಗಿ ಸುಮ್ಮನೆ ಇದೇನೆ.'

"ನಾನು ಈಗ ನಿನ್ನನ್ನು ನೋಡುತ್ತಿರುವಂತೆ ಹಿಂದೆ ಇದೇ ಕಣ್ಣುಗಳಿಂದ ಭಗವಂತನನ್ನು ಪ್ರತ್ಯಕ್ಷವಾಗಿ ದರ್ಶನಮಾಡುತ್ತಿದ್ದೆ. ಈಗ ಭಾವಾವಸ್ಥೆಯಲ್ಲಿ ಮಾತ್ರ ಆತನ ದರ್ಶನ ದೊರೆಯುತ್ತಿದೆ.

"ಭಗವಂತನ ಸಾಕ್ಷಾತ್ಕಾರ ದೊರೆಯಿತು ಎಂದರೆ ಮಗುವಿನ ಸ್ವಭಾವ ಬಂದುಬಿಡುತ್ತದೆ. ಯಾರು ಯಾರ ಚಿಂತನೆಯನ್ನು ಮಾಡುತ್ತಾರೊ ಅವರಿಗೆ ಅವರ ಸತ್ತ್ವ ಬಂದುಬಿಡುತ್ತದೆ. ಭಗವಂತನ ಸ್ವಭಾವ ಮಗುವಿನ ಹಾಗೆ. ಮಗು ಆಟದ ಮನೆ ಕಟ್ಟಿ ಮತ್ತೆ ಅದನ್ನು ತುಳಿದು ಹಾಕುವಂತೆ ಭಗವಂತನೂ ಸೃಷ್ಟಿಸ್ಥಿತಿಪ್ರಳಯಗಳ ಸಂಬಂಧವಾಗಿ ಹಾಗೇ ವರ್ತಿಸುತ್ತಾನೆ. ಮಗು ಯಾವ ರೀತಿಯಾಗಿ ಯಾವ ಗುಣಕ್ಕೂ ಕಟ್ಟು ಬಿದ್ದಿಲ್ಲವೊ, ಅದೇ ರೀತಿಯಾಗಿ ಭಗವಂತ ಸತ್ತ್ವರಜಸ್ತಮೋಗುಣಗಳಿಗತೀತನಾಗಿದಾನೆ. ಅದಕ್ಕಾಗೇ ಮಕ್ಕಳ ಸ್ವಭಾವ ತಮಗೆ ಬರಲೆಂದು

ಪರಮಹಂಸರು ತಮ್ಮೊಡನೆ ಹತ್ತು ಹದಿನೈದು ಮಕ್ಕಳನ್ನು ಇಟ್ಟುಕೊಂಡಿರುತ್ತಾರೆ.''

ಅಗರಪಾರದ ಇಪ್ಪತ್ತೊ ಇಪ್ಪತ್ತೆರಡೊ ವಯಸ್ಸಿನ ಒಬ್ಬ ಹುಡುಗ ಬಂದು ನೆಲದ ಮೇಲೆ ಕುಳಿತಿದಾನೆ. ಆತ ಕಾಳೀದೇವಾಲಯಕ್ಕೆ ಬಂದಾಗಲೆಲ್ಲಾ ಪರಮಹಂಸರನ್ನು ಸನ್ನೆಮಾಡಿ ನಿರ್ಜನಪ್ರದೇಶಕ್ಕೆ ಕರೆದುಕೊಂಡು ಹೋಗಿ ಪಿಸುಗುಟ್ಟುತ್ತ ತನ್ನ ಮನಸ್ಸನ್ನು ತೋಡಿಕೊಳ್ಳುತ್ತಿದ್ದ. ಆತ ಹೊಸದಾಗಿ ಬಂದುಹೋಗುತ್ತಿದಾನೆ. ಇಂದು ಆ ಹುಡುಗ ಪರಮಹಂಸರ ಬಳಿಯಲ್ಲೇ ನೆಲದ ಮೇಲೆ ಕುಳಿತಿದಾನೆ.

ಶ್ರೀರಾಮಕೃಷ್ಣರು ಆ ಯುವಕನಿಗೆ: ''ಪರರ ಗುಣವನ್ನು ಆರೋಪಿಸಿಕೊಂಡುದೇ ಆದರೆ, ಮನುಷ್ಯ ಬದಲಾವಣೆ ಹೊಂದಿಬಿಡಬಲ್ಲ. ಪ್ರಕೃತಿಯ ಭಾವವನ್ನು ಆರೋಪಿಸಿಕೊಂಡರೆ ಕ್ರಮೇಣ ಕಾಮಾದಿ ರಿಪುಗಳು ನಾಶವಾಗಿಹೋಗುತ್ತವೆ. ನಡೆ ನುಡಿ ಎಲ್ಲಾ ಹೆಂಗಸರ ಹಾಗೇ ಆಗಿಬಿಡುತ್ತವೆ. ನಾಟಕದಲ್ಲಿ ಹೆಂಗಸಿನ ಪಾತ್ರ ವಹಿಸುವವರನ್ನು ನೋಡಿದೇನೆ, ಅವರು ಸ್ನಾನಮಾಡುವಾಗ ಹೆಂಗಸರ ಹಾಗೆ ಹಲ್ಲು ಉಜ್ಜುತ್ತಾರೆ, ಮಾತುಕತೆಯಾಡುತ್ತಾರೆ. ನೀನು ಮತ್ತೆ ಶನಿವಾರವೊ ಮಂಗಳವಾರವೊ ಇಲ್ಲಿಗೆ ಬಾ.

(ಪ್ರಾಣಕೃಷ್ಣನಿಗೆ) ''ಬ್ರಹ್ಮ ಶಕ್ತಿ ಅಭೇದ. ಶಕ್ತಿಯನ್ನು ಒಪ್ಪದೆ ಇತ್ತು ಎಂದರೆ, ಈ ಜಗತ್ತು ಮಿಥ್ಯೆಯಾಗಿಬಿಡುತ್ತದೆ. ನಾನು, ನೀನು, ಮನೆ, ಮಠ, ಹೆಂಡತಿ, ಮಕ್ಕಳು ಎಲ್ಲಾ ಮಿಥ್ಯೆಯಾಗಿಬಿಡುತ್ತವೆ. ಆದ್ಯಾಶಕ್ತಿ ಆಧಾರವಾಗಿರುವುದರಿಂದ ಈ ಜಗತ್ತು ನಿಂತುಕೊಂಡಿದೆ. ಆಸರೆ ಕೋಲು ಇಲ್ಲದೆ ಇತ್ತು ಎಂದರೆ, ಆಧಾರಕಟ್ಟು ಆಗುವ ಹಾಗಿಲ್ಲ. ಆಧಾರ ಕಟ್ಟು ಇಲ್ಲದೆ ಇತ್ತು ಎಂದರೆ, ಸುಂದರ ದುರ್ಗಾ ಪ್ರತಿಮೆ ಆಗೋ ಹಾಗೇ ಇಲ್ಲ.

''ವಿಷಯಬುದ್ಧಿಯನ್ನು ತ್ಯಜಿಸದ ಹೊರತು ಆತ್ಮಜಾಗೃತಿ ಉಂಟಾಗದು—ಭಗವಂತನ ಸಾಕ್ಷಾತ್ಕಾರ ದೊರೆಯದು. ವಿಷಯಬುದ್ಧಿ ಲೇಶ ಮಾತ್ರವಿತ್ತು ಎಂದರೂ ಮನುಷ್ಯ ಕಪಟಿಯಾಗಿಬಿಡುತ್ತಾನೆ. ಸರಳತೆ ಇಲ್ಲದೆ ಇತ್ತು ಎಂದರೆ ಭಗವಂತನ ಸಾಕ್ಷಾತ್ಕಾರ ದೊರೆಯದು.

ಮರೆಮೋಸಗಳ ತಳ್ಳು; ಒಳಗೆ ಭಕ್ತಿಯ ಬೆಳಸು,
ನಿಸ್ವಾರ್ಥ ಸೇವೆಯಲಿ ಪೂಜೆಯನು ನಡಸು,
ಆಗ ಶ್ರೀ ರಘುರಾಮ ದರುಶನವು ನಿನಗೆ!

ಯಾರು ಪ್ರಾಪಂಚಿಕ ಕೆಲಸಗಳನ್ನು, ಎಂದರೆ ಆಫೀಸಿನ ಕೆಲಸ, ವ್ಯಾಪಾರ ಇತ್ಯಾದಿಗಳನ್ನು ಮಾಡುತ್ತಾರೊ ಅವರೂ ಸತ್ಯವಾದಿಗಳಾಗಿರಬೇಕು. ಸತ್ಯವಚನ ಕಲಿಯ ತಪಸ್ಸು."

ಪ್ರಾಣಕೃಷ್ಣ: "ಹೌದು ಮಹಾನಿರ್ವಾಣತಂತ್ರದಲ್ಲಿ ಹೇಳಿದೆ: 'ಹೇ ಮಹೇಶಿ, ಈ ಕೌಲಧರ್ಮದಲ್ಲಿ ಸತ್ಯವಾದಿಯಾಗಿಯೂ, ಜಿತೇಂದ್ರಿಯನಾಗಿಯೂ, ಪರೋಪಕಾರನಿರತನಾಗಿಯೂ, ನಿರ್ವಿಕಾರನಾಗಿಯೂ, ಸದಾಶಯನಾಗಿಯೂ ಇರಬೇಕು ಎಂಬುದಾಗಿ ವಿಧಿ ಇದೆ.'"

ಶ್ರೀರಾಮಕೃಷ್ಣರು: "ಒಳ್ಳೆಯದೆ. ಆದರೆ ಈ ಭಾವನೆಗಳೆಲ್ಲ ರಕ್ತಗತವಾಗೋ ಹಾಗೆ ಮಾಡಿಕೊಳ್ಳಬೇಕು."

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಭಾವಾವಿಷ್ಟರಾಗಿ ರಾಖಾಲನ ಕಡೆ ನೋಡುತ್ತಿದಾರೆ. ಹಾಗೇ ಆತನನ್ನು ನೋಡುತ್ತ ನೋಡುತ್ತ ಇದ್ದಂತೆ ವಾತ್ಸಲ್ಯಭಾವದಿಂದ ತುಂಬಿತುಳುಕಾಡಲಾರಂಭಿಸಿದರು. ಅಂಗಾಂಗಗಳೆಲ್ಲ ಪುಲಕಿತಗೊಳ್ಳಲಾರಂಭಿಸಿದುವು. ಕಣ್ಣುಬಿಟ್ಟು ನೋಡುವುದರಲ್ಲೇ ಸಮಾಧಿಸ್ಥರಾಗಿಬಿಟ್ಟಿದಾರೆ. ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿಯೂ ನಿಸ್ತಬ್ಧರಾಗಿಯೂ ಕುಳಿತು ಪರಮಹಂಸರನ್ನು ದೃಷ್ಟಿಸಿನೋಡುತ್ತಿದಾರೆ.

ಕಿಂಚಿತ್ ಪ್ರಕೃತಿಸ್ಥರಾಗಿ ಪರಮಹಂಸರು ಹೇಳುತ್ತಿದಾರೆ: "ರಾಖಾಲನನ್ನು ನೋಡಿ ನನಗೇಕೆ ಉದ್ದೀಪನ ಆಗಿಬಿಟ್ಟಿತು? ಭಗವಂತನ ಕಡೆಗೆ ಮುಂದುವರಿದಂತೆಲ್ಲ ಆತನ ಐಶ್ವರ್ಯ ಕಡಮೆಕಡಮೆಯಾಗಿ ಕಾಣಬರಲಾರಂಭಿಸುತ್ತದೆ. ಸಾಧಕನಿಗೆ ಮೊತ್ತಮೊದಲು ದೊರೆಯುತ್ತದೆ, ಹತ್ತು ಭುಜಗಳುಳ್ಳ ಭಗವತಿಯ ದರ್ಶನ. ಆ ಮೂರ್ತಿಯಲ್ಲಿ ಐಶ್ವರ್ಯ ಬಹಳವಾಗಿ ವ್ಯಕ್ತವಾಗಿರುತ್ತದೆ. ಅನಂತರ ಎರಡು ಭುಜಗಳುಳ್ಳ ದೇವಿಯ ದರ್ಶನ. ಆ ಮೂರ್ತಿಗೆ ವಿವಿಧ ಅಸ್ತ್ರಶಸ್ತ್ರಗಳನ್ನು ಹಿಡಿದಿರೋ ಹತ್ತು ಕೈಗಳಿರುವುದಿಲ್ಲ. ಬಳಿಕ ಗೋಪಾಲಮೂರ್ತಿಯ ದರ್ಶನ ದೊರೆಯುತ್ತದೆ. ಅದರಲ್ಲಿ ಯಾವ ಐಶ್ವರ್ಯವೂ ಇರುವುದಿಲ್ಲ. ಅದು ಕೇವಲ ಹಾಲುಹಸುಳೆಯ ಮೂರ್ತಿ. ಇವುಗಳಿಂದಾಚೆಗೂ ಕೆಲವು ದರ್ಶನಗಳಾಗುತ್ತವೆ. ಬಳಿಕ ಸಾಧಕನಿಗೆ ಕೇವಲ ಜ್ಯೋತಿಯ ದರ್ಶನ ಆಗುತ್ತದೆ.

"ಭಗವಂತನ ಸಾಕ್ಷಾತ್ಕಾರ ಪಡೆದನಂತರ, ಸಮಾಧಿಯಲ್ಲಿ ಆತ ನೊಡನೆ ಐಕ್ಯವಾದನಂತರ, ಜ್ಞಾನ, ವಿಚಾರ ಎಲ್ಲ ನಿಂತುಹೋಗಿ ಬಿಡುತ್ತವೆ. ಜ್ಞಾನ, ವಿಚಾರ ಎಲ್ಲಿಯವರೆಗೆ ಇರುತ್ತೆ? ಬಹುತ್ವದ ಜ್ಞಾನ ವಿರುವವರೆಗೆ—ಜೀವ, ಜಗತ್ತು, ನಾನು, ನೀನು ಇವೇ ಮೊದಲಾದುವುಗಳ ಬೋಧೆ ಇರುವವರೆಗೆ. ಯಾವಾಗ ಸರಿಯಾಗಿ ಏಕತೆಯ ಜ್ಞಾನ ದೊರೆಯು ವುದೊ ಆಗ ಸಾಧಕ ಶಾಂತನಾಗಿಬಿಡುತ್ತಾನೆ. ಉದಾಹರಣೆಗೆ ತ್ರೈಲಿಂಗಸ್ವಾಮಿ.

"ಬ್ರಾಹ್ಮಣರ ಸಂತರ್ಪಣೆಯನ್ನು ನೀನು ನೋಡಿಲ್ಲವೆ? ಮೊದ ಮೊದಲು ಬಹಳ ಗದ್ದಲವಿರುತ್ತದೆ. ಹೊಟ್ಟೆ ತುಂಬುತ್ತ ತುಂಬುತ್ತ ಗದ್ದಲ ಕಡಮೆಯಾಗುತ್ತದೆ. ಲಾಡು, ಪಾಯಸ ಮುಗಿದ ಮೇಲೆ ಕಟ್ಟ ಕಡೆಯದಾಗಿ ಮಜ್ಜಿಗೆ ಅನ್ನ ಬಡಿಸಿದಾಗ ಕೇವಲ 'ಸುಪ್, ಸುಪ್' ಎಂಬ ಶಬ್ದವೇ ಕೇಳಬರಲಾರಂಭಿಸುತ್ತದೆ. ಆ ಬಳಿಕ ನಿದ್ರೆ—ಸಮಾಧಿ. ಆಗ ಯಾವ ಗದ್ದಲವೂ ಇರದು.

(ಮಾಸ್ಟರಿಗೆ ಮತ್ತು ಪ್ರಾಣಕೃಷ್ಣನಿಗೆ) "ಅನೇಕರು ಬ್ರಹ್ಮಜ್ಞಾನದ ವಿಷಯವಾಗಿ ಮಾತಾಡುತ್ತಾರೆ, ಆದರೆ ಅವರ ಮನಸ್ಸು ಪ್ರಾಪಂಚಿಕ ವಸ್ತು ಗಳ ಕಡೆಗೆ—ಮನೆ, ಮಠ, ಹಣ, ಕೀರ್ತಿ, ಇಂದ್ರಿಯಸುಖ ಇವುಗಳ ಕಡೆಗೆ ಹರಿದುಹೋಗುತ್ತಿರುತ್ತದೆ. ಸ್ಮಾರಕಸ್ತಂಭದ[1] ಕೆಳಗಡೆ ನಿಂತಿರುವವರೆಗೆ ಗಾಡಿ, ಕುದುರೆ, ಆಂಗ್ಲ ಪುರುಷರು ಮತ್ತು ಮಹಿಳೆಯರು ಇತ್ಯಾದಿಗಳನ್ನ ನೋಡಬಹುದು. ಆದರೆ ಅದರ ಮೇಲಕ್ಕೆ ಹತ್ತಿದರೆ ಆಗ ಕಾಣುತ್ತದೆ, ಆಕಾಶ ಮತ್ತು ಸಮುದ್ರ ಸುಮ್ಮನೆ ವಿಶಾಲವಾಗಿ ಹಬ್ಬಿಕೊಂಡಿರುವುದು. ಆಗ ಮನೆ, ಕುದುರೆ, ಗಾಡಿ, ಮನುಷ್ಯರು ಇವು ಯಾವೂ ಹಿಡಿಸವು. ಅವೆಲ್ಲಾ ಇರುವೆಗಳ ಹಾಗೆ ಕಾಣುತ್ತವೆ.

"ಬ್ರಹ್ಮಜ್ಞಾನ ದೊರೆಯಿತು ಎಂದರೆ, ಸಂಸಾರಾಸಕ್ತಿ, ಕಾಮ-ಕಾಂಚನದಲ್ಲಿ ಉತ್ಸಾಹ ಇವೆಲ್ಲಾ ಹೊರಟುಹೋಗುತ್ತವೆ. ಎಲ್ಲವೂ ಶಾಂತಮಯವಾಗಿಬಿಡುತ್ತವೆ. ಸೌದೆ ಉರಿಯುವಾಗ ಅದು 'ಪಟ್, ಪಟ್' ಅಂತ ಶಬ್ದಮಾಡುತ್ತದೆ, ಉರಿಯನ್ನೂ ನೋಡಬಹುದು. ಆದರೆ ಅದು ಉರಿದು ಕೇವಲ ಬೂದಿ ಉಳಿದುಕೊಂಡಾಗ ಯಾವ ಶಬ್ದವೂ ಇರದು.

1. ಕಲ್ಕತ್ತದಲ್ಲಿರುವ ಆಕ್ಟರ್‌ಲೋನಿ ಮಾನ್ಯುಮೆಂಟ್ (ಸ್ಮಾರಕಸ್ತಂಭ).

ಆಸಕ್ತಿ ಹೋಯಿತು ಎಂದರೆ ಉತ್ಸಾಹವೂ ಹೊರಟುಹೋಗುತ್ತದೆ. ಕೊನೆಗೆ ಶಾಂತಿ.

"ಭಗವಂತನ ಸಮೀಪಕ್ಕೆ ಮುಂದು ಮುಂದುವರಿದಂತೆಲ್ಲ ಶಾಂತಿಯೂ ಅಧಿಕಾಧಿಕವಾಗುತ್ತಾ ಬರುತ್ತದೆ. ಶಾಂತಿಃ, ಶಾಂತಿಃ, ಶಾಂತಿಃ, ಪ್ರಶಾಂತಿಃ! ಗಂಗೆಯ ಹತ್ತಿರಕ್ಕೆ ಮುಂದು ಮುಂದುವರಿದಂತೆಲ್ಲ ತಂಪೂ ಹೆಚ್ಚುಹೆಚ್ಚಾಗುತ್ತಾ ಬರುತ್ತದೆ. ಸ್ನಾನಮಾಡಿದರೆ ಇನ್ನೂ ಹೆಚ್ಚಿನ ಹಿತ.

"ಜೀವ, ಜಗತ್ತು, ಚತುರ್ವಿಂಶತಿತತ್ತ್ವ ಇವೆಲ್ಲಾ ಭಗವಂತನಿರುವುದರಿಂದ ಇದ್ದುಕೊಂಡಿವೆ. ಆತನನ್ನು ಬಿಟ್ಟುಬಿಟ್ಟರೆ ಯಾವೂ ಇರವು. ಒಂದು ಎನ್ನುವ ಸಂಖ್ಯೆಯ ಪಕ್ಕದಲ್ಲಿ ಸೊನ್ನೆಗಳನ್ನು ಬರೆಯುತ್ತಾಹೋದರೆ ಸಂಖ್ಯೆ ದೊಡ್ಡ ದೊಡ್ಡದಾಗುತ್ತಾ ಬರುತ್ತದೆ; ಆದರೆ ಆ ಒಂದನ್ನು ಅಳಿಸಿಬಿಡು, ಆಗ ಸೊನ್ನೆಗಳಿಗೆ ಯಾವ ಬೆಲೆಯೂ ಇರದು."

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಬ್ರಹ್ಮಜ್ಞಾನ ದೊರೆತನಂತರ, ಸಮಾಧಿ ದೊರೆತನಂತರ ಕೆಲಕೆಲವರು ಕೆಳಕ್ಕೆ ಇಳಿದು ಬಂದು 'ವಿದ್ಯಾ ಅಹಂ', 'ಭಕ್ತಿ ಅಹಂ' ಇಟ್ಟುಕೊಂಡಿರುತ್ತಾರೆ. ಇದು ಸಂತೆ ಮುಗಿದುಹೋದನಂತರವೂ ಕೆಲಕೆಲವರು ತಮ್ಮ ಖುಶಿಯಿಂದ ಸಂತೆಯಲ್ಲಿ ಕುಳಿತಿರೋ ಹಾಗೆ. ಉದಾಹರಣೆಗೆ ನಾರದಾದಿಗಳು. ಇವರು ಲೋಕಶಿಕ್ಷಣಾರ್ಥವಾಗಿ 'ಭಕ್ತಿ ಅಹಂ' ಇಟ್ಟುಕೊಂಡಿರುತ್ತಾರೆ. ಶ್ರೀ ಶಂಕರಾಚಾರ್ಯರು ಇದೇ ಕಾರ್ಯಕ್ಕಾಗಿ 'ವಿದ್ಯಾ ಅಹಂ' ಇಟ್ಟುಕೊಂಡಿದ್ದರು.

"ಪ್ರಾಪಂಚಿಕ ಆಸಕ್ತಿ ಲೇಶಮಾತ್ರವಿದ್ದರೂ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾಗೋದಿಲ್ಲ. ದಾರದ ಮೊನೆಗೆ ಅಡ್ಡೆಳೆ ಅಂಟಿಕೊಂಡಿದ್ದರೆ ಅದನ್ನು ಸೂಜಿಗೆ ಪೋಣಿಸಲಾಗೋದಿಲ್ಲ.

"ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನ ಕಾಮಕ್ರೋಧಾದಿಗಳು ನಾಮಮಾತ್ರಕ್ಕೆ ಇರುತ್ತವೆ. ಅವು ಸುಟ್ಟ ಹಗ್ಗದ ಹಾಗೆ. ಅದು ನೋಡುವುದಕ್ಕೇನೊ ಹಗ್ಗದ ಹಾಗೆ ಕಾಣುತ್ತದೆ, ಆದರೆ ಊದಿದರೆ ಎಲ್ಲಾ ಹಾರಿಹೋಗಿಬಿಡುತ್ತದೆ.

"ಮನಸ್ಸಿನಲ್ಲಿ ಪ್ರಪಂಚಾಸಕ್ತಿ ಶೂನ್ಯವಾಗಿಬಿಟ್ಟೊಡನೇ ಭಗವಂತನ ದರ್ಶನ ದೊರೆತುಬಿಡುತ್ತದೆ. ಶುದ್ಧ ಮನಸ್ಸಿನಲ್ಲಿ ಮೂಡುವುದೆಲ್ಲವೂ ಭಗವಂತನ ವಾಣಿಯೇ. ಯಾವುದು ಶುದ್ಧ ಮನಸ್ಸೋ, ಅದೇ ಶುದ್ಧ

ಬುದ್ಧಿ, ಅದೇ ಶುದ್ಧ ಆತ್ಮ; ಏಕೆಂದರೆ ಭಗವಂತನೊಬ್ಬನನ್ನು ಹೊರತು ಶುದ್ಧವಾದ ವಸ್ತು ಬೇರೊಂದಿಲ್ಲ. ಆದರೆ ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡುಬಿಟ್ಟರೆ ಆದರೆ, ಧರ್ಮಾಧರ್ಮಗಳಿಗೆ ಅತೀತವಾಗಿ ಬಿಡಬಹುದು."

ಈಗ ಪರಮಹಂಸರು ತಮ್ಮ ದೇವದುರ್ಲಭ ಕಂಠದಿಂದ ಹಾಡ ಲಾರಂಭಿಸಿದಾರೆ:

ಸುಮ್ಮನೆ ತಿರುಗಾಟಕೆ ಬಾ ಮನವೇ
ಶ್ರೀ ಕಾಳೀ ಸುರತರುವಿರುವೆಡೆಗೆ! . . . (ಉ. ೭೩೬)

ಪರಮಹಂಸರು ತಮ್ಮ ಕೊಠಡಿಯ ಆಗ್ನೇಯ ವರಾಂಡಕ್ಕೆ ಹೋಗಿ ಕುಳಿತುಕೊಂಡರು. ಪ್ರಾಣಕೃಷ್ಣ ಮತ್ತು ಉಳಿದ ಭಕ್ತರೂ ಅಲ್ಲಿಗೆ ಹೋಗಿ ಕುಳಿತುಕೊಂಡರು. ಹಾಜರಾ ಕೂಡ ಅಲ್ಲಿ ಕುಳಿತಿದಾನೆ. ಪರಮಹಂಸರು ನಗುನಗುತ್ತ, ಪ್ರಾಣಕೃಷ್ಣನಿಗೆ ಹೇಳುತ್ತಿದಾರೆ: "ಹಾಜರಾ ಸ್ವಲ್ಪವೂ ಕಡಮೆಯೇನಲ್ಲ. ಇದು[1] ಒಂದು ದೊಡ್ಡ ದರ್ಗಾ[2] ಆದರೆ, ಹಾಜರಾ ಒಂದು ಚಿಕ್ಕ ದರ್ಗಾ." ಈ ಮಾತು ಕೇಳಿ ಎಲ್ಲರೂ ನಗುತ್ತಿದಾರೆ. ನವಕುಮಾರ ಎಂಬುವನು ಬಾಗಿಲ ಹತ್ತಿರಕ್ಕೆ ಬಂದು ಭಕ್ತರು ಕುಳಿತಿರುವುದನ್ನು ನೋಡಿ ಹಿಂದಿರುಗಿ ಹೊರಟುಹೋದ. "ಅಹಂಕಾರದ ಮುದ್ದೆ!" ಎಂಬುದಾಗಿ ಪರಮಹಂಸರು ಹೇಳಿದರು.

ಘಂಟೆ ಬೆಳಗಿನ ಒಂಬತ್ತೂವರೆ. ಪ್ರಾಣಕೃಷ್ಣ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಅನಂತರ ಒಬ್ಬ ಬೈರಾಗಿ ಗೋಪೀಯಂತ್ರವೆಂಬ ಹೆಸರಿನ ಒಂದು ತಂತೀವಾದ್ಯ ಬಾಜಿಸುತ್ತಾ ಹಾಡಲಾರಂಭಿಸಿದ. ಪರಮಹಂಸರು ಆತನ ಹಾಡುಗಳನ್ನು ಕೇಳುತ್ತಿದ್ದ ಹಾಗೇ, ಕೇದಾರಚಟ್ಟೋಪಾಧ್ಯಾಯ ಆಫೀಸಿನ ಉಡಿಗೆ ತೊಟ್ಟೇ ಕೊಠಡಿ ಯನ್ನು ಪ್ರವೇಶಿಸಿದ. ಕಿವಿಗೆ ಭಗವತ್ಸಂಬಂಧವಾದ ಮಾತುಕತೆ ಬಿತ್ತು ಎಂದರೇ ಆತನ ಕಣ್ಣುಗಳಲ್ಲಿ ಪ್ರೇಮಾಶ್ರು ಸುರಿಯಲಾರಂಭಿಸುತ್ತದೆ. ಒಳ್ಳೆ ಪ್ರೇಮಿ. ಅಂತರ್ಯದಲ್ಲಿ ಗೋಪೀಭಾವ.

ಕೇದಾರಚಟ್ಟೋಪಾಧ್ಯಾಯ ಕಣ್ಣಿಗೆ ಬೀಳುವುದೇ ತಡ ಒಮ್ಮೆಗೇ ಪರಮಹಂಸರಿಗೆ ಬೃಂದಾವನ ಲೀಲೆಯ ಉದ್ದೀಪನವಾಗಿಬಿಟ್ಟಿತು.

1. ತಮ್ಮನ್ನು ಸೂಚಿಸಿ.

2. ಪ್ರಖ್ಯಾತ ಮಹಮ್ಮದೀಯ ಸಂತನ ಗೋರಿ.

ಪ್ರೇಮದಿಂದ ಮತ್ತರಾಗಿ ಎದ್ದು ನಿಂತುಕೊಂಡು ಕೇದಾರನನ್ನು ಸಂಬೋಧಿಸಿ ಹಾಡಲಾರಂಭಿಸಿದಾರೆ:

ಹೃದಯವಲ್ಲಭನಿರುವ ಕದಂಬವನವೆನ್ನುವುದು
ಇನ್ನೆಷ್ಟು ದೂರವಿದೆ ಹೇಳು ಕೆಳದೀ ?
ಕೃಷ್ಣಗಂಧವು ಇದೆಕೊ ಇಲ್ಲಿಗೂ ಬೀಸುತಿದೆ!
ನಡೆಯಲಾರೆನು ಮುಂದೆ; ಸೋತಿರುವೆನು.

ಪರಮಹಂಸರು ಶ್ರೀ ರಾಧೆಯ ಭಾವವನ್ನು ಆರೋಪಿಸಿಕೊಂಡು ಈ ಹಾಡನ್ನು ಹಾಡುತ್ತ ಹಾಡುತ್ತ ಗಾಢಸಮಾಧಿಸ್ಥರಾಗಿಬಿಟ್ಟಿದಾರೆ. ಪಟದ ಮೇಲಿನ ಚಿತ್ರದ ಹಾಗೆ ನಿಂತುಕೊಂಡಿದಾರೆ. ಅವರ ಎರಡು ಕಡೆಗಣ್ಣುಗಳಿಂದಲೂ ಆನಂದಾಶ್ರು ಸುರಿಯುತ್ತಿದೆ.

ಕೇದಾರ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿ ಅವರ ಪಾದವನ್ನು ಸ್ಪರ್ಶಿಸಿದನಂತರ ಒಂದು ಸ್ತೋತ್ರವನ್ನು ಹೇಳಲಾರಂಭಿಸಿದ:

ಹೃದಯಕಮಲಮಧ್ಯೇ ನಿರ್ವಿಶೇಷಂ ನಿರೀಹಂ,
ಹರಿಹರ ವಿಧಿವೇದ್ಯಂ ಯೋಗಿಭಿರ್ಧ್ಯಾನಗಮ್ಯಮ್। . . . (ಉ.೩೩೨)

ಸ್ವಲ್ಪ ಹೊತ್ತಾದನಂತರ ಪರಮಹಂಸರು ಪ್ರಕೃತಿಸ್ಥರಾದರು. ಅನಂತರ ಕೇದಾರ ಅವರಿಂದ ಬೀಳ್ಕೊಂಡು ಕಲ್ಕತ್ತದಲ್ಲಿರುವ ತನ್ನ ಆಫೀಸಿಗೆ ಹಿಂದಿರುಗಿ ಹೊರಟುಹೋದ.

ಮಧ್ಯಾಹ್ನ ಹನ್ನೆರಡು ಘಂಟೆಗೆ ರಾಮಲಾಲ, ಒಂದು ತಟ್ಟೆ ಭಗವತಿ ಕಾಳಿಯ ಪ್ರಸಾದ ತೆಗೆದುಕೊಂಡು ಬಂದು ಪರಮಹಂಸರಿಗೆ ಕೊಟ್ಟ. ಮಗುವಿನ ಹಾಗೆ ಪ್ರತಿಯೊಂದು ಬಗೆಯನ್ನೂ ಸ್ವಲ್ಪ ಸ್ವಲ್ಪವಾಗಿ ತಿಂದರು.

ಅಪರಾಹ್ನ ಮೂರು ಘಂಟೆ ಸಮಯಕ್ಕೆ ಕೆಲವು ಮಂದಿ ಮಾರ್ವಾಡಿ ಭಕ್ತರು ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಕೊಠಡಿಯಲ್ಲಿ ರಾಖಾಲ ಮತ್ತು ಮಾಸ್ಟರೂ ಕುಳಿತಿದಾರೆ.

ಒಬ್ಬ ಮಾರ್ವಾಡಿ ಭಕ್ತ: "ಮಹಾರಾಜ್, ನಮಗೆ ಉಪಾಯ ವೇನು ?"

ಶ್ರೀರಾಮಕೃಷ್ಣರು: "ಎರಡು ಮಾರ್ಗಗಳಿವೆ—ವಿಚಾರಮಾರ್ಗ ಮತ್ತು ಅನುರಾಗ ಅಥವಾ ಭಕ್ತಿಮಾರ್ಗ. ವಿಚಾರವೆಂದರೆ ಸದಸದ್ವಿಚಾರ. ಏಕಮಾತ್ರ ಸತ್, ಎಂದರೆ ನಿತ್ಯವಸ್ತು ಭಗವಂತ ಮಾತ್ರ; ಉಳಿದುದೆಲ್ಲಾ

ಅಸತ್, ಎಂದರೆ ಅನಿತ್ಯವಸ್ತು. ಕೇವಲ ಐಂದ್ರಜಾಲಿಕನೇ ಸತ್ಯ; ಆತನ ಇಂದ್ರಜಾಲ ಮಿಥ್ಯೆ. ಇದಕ್ಕೇ ವಿಚಾರ ಅಂತ ಹೆಸರು.

"ವಿವೇಕ ವೈರಾಗ್ಯ. ಸದಸದ್ವಿಚಾರಕ್ಕೇ 'ವಿವೇಕ' ಅಂತ ಹೆಸರು. ವೈರಾಗ್ಯವೆಂದರೆ ಪ್ರಾಪಂಚಿಕ ವಸ್ತುಗಳ ಕಡೆ ವಿರಕ್ತಿ. ಇವು ಒಮ್ಮೆಗೇ ದೊರೆತುಬಿಡೋದಿಲ್ಲ—ದಿನವೂ ಅಭ್ಯಾಸಮಾಡಬೇಕು. ಮೊದಲು ಕಾಮಕಾಂಚನತ್ಯಾಗವನ್ನ ಮಾನಸಿಕವಾಗಿ ಮಾಡಬೇಕು. ಬಳಿಕ ಭಗವತ್ ಕೃಪೆಯಿಂದ ಮಾನಸಿಕವಾಗಿಯೂ ಬಾಹ್ಯಿಕವಾಗಿಯೂ ತ್ಯಾಗ ಮಾಡಲು ಆಗುತ್ತದೆ. ಕಲ್ಕತ್ತದ ಜನರಿಗೆ ಹೇಳುವಂತೆಯೇ ಇಲ್ಲ, ಎಲ್ಲ ವನ್ನೂ ಭಗವಂತನಿಗಾಗಿ ತ್ಯಾಗಮಾಡಿಬಿಡಿ ಎಂಬುದಾಗಿ. ಅವರಿಗೆ ಹೇಳಬೇಕು, ಮಾನಸಿಕವಾಗಿ ತ್ಯಾಗಮಾಡಿ ಅಂತ.

"ಅಭ್ಯಾಸಯೋಗದಿಂದ ಕಾಮಕಾಂಚನಾಸಕ್ತಿಯನ್ನು ತ್ಯಾಗ ಮಾಡಲು ಸಾಧ್ಯ. ಗೀತೆಯಲ್ಲಿ ಹೀಗೆಂದು ಹೇಳಿದೆ: ಅಭ್ಯಾಸದಿಂದ ಮನಸ್ಸು ಅಸಾಧಾರಣ ಶಕ್ತಿಯನ್ನು ಗಳಿಸಿಕೊಳ್ಳುತ್ತದೆ. ಆಗ ಇಂದ್ರಿಯ ಸಂಯಮ ಮಾಡಲು — ಕಾಮಕ್ರೋಧಾದಿಗಳನ್ನು ವಶಪಡಿಸಿಕೊಳ್ಳಲು ಕಷ್ಟವಾಗೋದಿಲ್ಲ. ಅಂಥ ಮನುಷ್ಯ ಆಮೆಯಂತೆ ವರ್ತಿಸುತ್ತಾನೆ. ಆಮೆ ಒಮ್ಮೆ ತನ್ನ ಕೈ ಕಾಲುಗಳನ್ನು ಒಳಕ್ಕೆ ಸೆಳೆದುಕೊಂಡಿತೆಂದರೆ ಮತ್ತೆ ಅದು ಹೊರಕ್ಕೆ ಬಿಡದು; ಕೊಡಲಿ ತೆಗೆದುಕೊಂಡು ಅದನ್ನು ಚೂರು ಚೂರು ಮಾಡಿದರೂ ಅದು ಅವನ್ನು ಹೊರಕ್ಕೆ ಬಿಡದು."

ಮಾರ್ವಾಡಿ ಭಕ್ತ: "ಮಹಾರಾಜ್, ಎರಡು ಮಾರ್ಗ ಇವೆ ಅಂತ ಹೇಳಿದಿರಿ. ಇನ್ನೊಂದು ಮಾರ್ಗವಾವುದು?"

ಶ್ರೀರಾಮಕೃಷ್ಣರು: "ಅನುರಾಗ ಅಥವಾ ಭಕ್ತಿಮಾರ್ಗ. ವ್ಯಾಕುಲ ಹೃದಯದಿಂದ ಭಗವಂತನಿಗಾಗಿ ನಿರ್ಜನಪ್ರದೇಶದಲ್ಲಿ ಏಕಾಂತವಾಗಿ ಅಳು; ದರ್ಶನಕೊಡಬೇಕೆಂದು ಪ್ರಾರ್ಥಿಸು.

ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ?
ನಿನ್ನ ತೊರೆದವಳೆಂತು ಇರಬಲ್ಲಳೊ?"

ಮಾರ್ವಾಡಿ ಭಕ್ತ: "ಮಹಾರಾಜ್, ಸಾಕಾರಪೂಜೆ ಅಂದರೆ ಏನು? ನಿರಾಕಾರ ನಿರ್ಗುಣ ಪೂಜೆ ಅಂದರೆ ಏನು?"

ಶ್ರೀರಾಮಕೃಷ್ಣರು: "ತಂದೆಯ ಭಾವಚಿತ್ರ ತಂದೆಯನ್ನು ಜ್ಞಾಪಕಕ್ಕೆ ತರುವಂತೆ, ಪ್ರತಿಮಾ ಪೂಜೆ ಮಾಡುತ್ತ ಮಾಡುತ್ತ ಮುಂದುವರಿದರೆ ಸತ್ಯದ ರೂಪ ಉದ್ದೀಪನವಾಗುತ್ತದೆ.

"ಸಾಕಾರ ರೂಪ ಹೇಗೆ ಗೊತ್ತೆ? ಜಲರಾಶಿಯ ಮಧ್ಯದಿಂದ ಗುಳ್ಳೆಗಳು ಏಳುವಂತೆ, ಮಹಾಚಿದಾಕಾಶದಿಂದ ಒಂದೊಂದು ಭಗವದ್ರೂಪ ಏಳುವುದನ್ನು ನೋಡಬಹುದು. ಅವತಾರ ಈ ರೂಪಗಳಲ್ಲಿ ಒಂದು. ಅವತಾರ ಲೀಲೆ, ಆ ಆದ್ಯಾಶಕ್ತಿಯ ಕ್ರೀಡೆಯೇ.

"ಪಾಂಡಿತ್ಯದಲ್ಲಿ ತಾನೆ ಏನಿದೆ? ವ್ಯಾಕುಲತೆಯಿಂದ ಭಗವಂತನನ್ನು ಕರೆದರೆ ಆತನ ದರ್ಶನ ಪಡೆಯಬಹುದು. ಅನೇಕ ವಿಷಯಗಳನ್ನು ತಿಳಿದುಕೊಳ್ಳುವುದರ ಆವಶ್ಯಕತೆಯೇನಿಲ್ಲ.

"ಆಚಾರ್ಯಪುರುಷ ಮಾತ್ರ ಅನೇಕ ವಿಷಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಪರರನ್ನು ವಧಿಸಬೇಕಾದರೆ ಕತ್ತಿ, ಗುರಾಣಿ ಬೇಕು; ತನ್ನನ್ನು ತಾನೇ ಕೊಂದುಕೊಳ್ಳಬೇಕಾದರೆ ಒಂದು ಸೂಜಿ ಅಥವಾ ಉಗುರುಗತ್ತಿಯೇ ಸಾಕು.

"'ನಾನು' ಎಂಬುದು ಏನು ಎಂದು ಹುಡುಕುತ್ತಾ ಹುಡುಕುತ್ತಾ ಹೋದರೆ, ಕೊನೆಗೆ ಭಗವಂತನೇ ದೊರೆತುಬಿಡುತ್ತಾನೆ. ಈ 'ನಾನು' ಎಂಬುದು ಮಾಂಸವೆ, ಮೂಳೆಯೆ, ರಕ್ತವೆ, ಮಜ್ಜವೆ? ಅಥವಾ ಮನಸ್ಸೆ, ಬುದ್ಧಿಯೆ? ಹಾಗೆ ವಿಚಾರಮಾಡುತ್ತಾ ಮುಂದುವರಿದರೆ ಕೊನೆಗೆ ಗೊತ್ತಾಗುತ್ತದೆ, 'ನಾನು' ಎಂಬುದು ಇದೊಂದೂ ಅಲ್ಲ ಎಂಬುದಾಗಿ. ಇದೇ 'ನೇತಿ, ನೇತಿ' ಮಾರ್ಗ. ಆತ್ಮನನ್ನು ಹಿಡಿಯಲೇ ಆಗಲಿ, ಸ್ಪರ್ಶಿಸಲೇ ಆಗಲಿ ಆಗುವ ಹಾಗಿಲ್ಲ. ಆತ ನಿರ್ಗುಣ—ನಿರುಪಾಧಿಕ.

"ಆದರೆ ಭಕ್ತಿಪಥದ ದೃಷ್ಟಿಯಿಂದ ಭಗವಂತ ಸಗುಣ. ಭಕ್ತನಿಗೆ ಚಿನ್ಮಯಶ್ಯಾಮ, ಚಿನ್ಮಯಧಾಮ, ಎಲ್ಲವೂ ಚಿನ್ಮಯ."

ಮಾರ್ವಾಡಿ ಭಕ್ತರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡರು.

ಸಂಜೆಯಾಗಿದೆ. ಪರಮಹಂಸರು ಗಂಗಾದರ್ಶನ ಮಾಡುತ್ತಿದ್ದಾರೆ. ಕೊಠಡಿಗೆ ದೀಪ ಹಚ್ಚಿದೆ. ಪರಮಹಂಸರು ಜಗನ್ಮಾತೆಯ ನಾಮಜಪ ಮಾಡುತ್ತ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದ್ದಾರೆ. ದೇವಾಲಯಗಳಲ್ಲಿ ಸಾಯಂ ಮಂಗಳಾರತಿ ಶುರುವಾಯಿತು. ಗಂಟೆ ಜಾಗಟೆಗಳ ನಿನಾದ ಗಂಗೆಯ ಮರ್ಮರ ಧ್ವನಿಯೊಡನೆ ಬೆರೆತು ಬಹಳ ಸೊಗಸಾಗಿ ಕೇಳಿಬರುತ್ತಿದೆ. ಶಾಂತಿ ಮತ್ತು ಆನಂದ ಎಲ್ಲೆಲ್ಲೂ ತುಂಬಿತುಳುಕಾಡುತ್ತಿದೆ.

---

೮

# ದಕ್ಷಿಣೇಶ್ವರದಲ್ಲಿ ಶ್ರೀ ರಾಮಕೃಷ್ಣರ ಜನ್ಮಮಹೋತ್ಸವ

೧೮ ನೆ ಫೆಬ್ರುವರಿ ೧೮೮೩, ಮಾಘ ಶುಕ್ಲ ದ್ವಾದಶಿ, ಭಾನುವಾರ.

ಶ್ರೀರಾಮಕೃಷ್ಣಪರಮಹಂಸರು ಕಲ್ಕತ್ತದ ಹತ್ತಿರವಿರುವ ಬೇಲಘರದ ಗೋವಿಂದಮುಖ್ಯೋಪಾಧ್ಯಾಯನ ಮನೆಗೆ ಬಂದಿದಾರೆ. ನರೇಂದ್ರ, ರಾಮ ಇವರೇ ಮೊದಲಾದ ಭಕ್ತರೂ ಅಲ್ಲದೆ ಗೋವಿಂದನ ನೆರೆಹೊರೆಯವರೂ ಬಂದು ಸೇರಿದಾರೆ. ಇಲ್ಲಿಗೆ ಬಂದ ಸ್ವಲ್ಪಹೊತ್ತಿನ ಮೇಲೆ ಪರಮಹಂಸರು ನರೇಂದ್ರನೇ ಮೊದಲಾದವರೊಡನೆ ಹಾಡುತ್ತ ನರ್ತನ ಮಾಡಿದರು. ಕೀರ್ತನೆ ಮುಗಿದನಂತರ ಎಲ್ಲರೂ ಕುಳಿತುಕೊಂಡಿದಾರೆ. ಈಗ ಅನೇಕರು ಒಬ್ಬೊಬ್ಬರಾಗಿ ಎದ್ದುಬಂದು ಪರಮಹಂಸರಿಗೆ ಪ್ರಣಾಮ ಮಾಡುತ್ತಿದಾರೆ. ಪರಮಹಂಸರು ಹೇಳುತ್ತಿದಾರೆ: "ನನಗೇಕೆ? ಭಗವಂತನಿಗೆ ಪ್ರಣಾಮಮಾಡಿ."

ಪರಮಹಂಸರು ಮತ್ತೆ ಈಗ ಹೇಳುತ್ತಿದಾರೆ: "ಭಗವಂತನೇ ಎಲ್ಲವೂ ಆಗಿದಾನೆ. ಆದರೆ ಕೆಲವು ವಸ್ತುಗಳಲ್ಲಿ ಮಾತ್ರ ವಿಶೇಷವಾಗಿ ವ್ಯಕ್ತವಾಗಿದಾನೆ. ಉದಾಹರಣೆಗೆ ಸಾಧುಗಳಲ್ಲಿ. ಹಾಗಾದರೆ ದುಷ್ಟರಿದಾರಲ್ಲ, ಹುಲಿಸಿಂಹಗಳಿವೆಯಲ್ಲ ಎಂಬುದಾಗಿ ನೀನು ಕೇಳಬಹುದು. ಹೌದು, ನಿಜ. ಆದರೆ 'ಹುಲಿ ಭಗವಂತನನ್ನ' ಆಲಿಂಗನಮಾಡಿಕೊಳ್ಳಲು ಪ್ರಯತ್ನಿಸಬಾರದು. ದೂರದಿಂದಲೇ ಅದಕ್ಕೆ ಪ್ರಣಾಮಮಾಡಿ ಹೊರಟು ಬಂದುಬಿಡಬೇಕು. ಉದಾಹರಣೆಗೆ ನೀರನ್ನು ತೆಗೆದುಕೊ. ಕೆಲವು ನೀರನ್ನು ಕುಡಿಯಬಹುದು, ಇನ್ನು ಕೆಲವನ್ನು ಪೂಜೆಗೆ ಉಪಯೋಗಿಸಬಹುದು, ಮತ್ತೆ ಕೆಲವನ್ನು ಸ್ನಾನಕ್ಕೆ ಉಪಯೋಗಿಸಬಹುದು, ಮತ್ತೂ ಕೆಲವನ್ನು ಮುಸರೆ-ಗಿಸರೆ ತಿಕ್ಕಲು ಮಾತ್ರ ಉಪಯೋಗಿಸಬಹುದು."

ಒಬ್ಬ ನೆರೆಯವ: "ವೇದಾಂತಮತ ಏನು ಹೇಳುತ್ತದೆ?"

ಶ್ರೀರಾಮಕೃಷ್ಣರು: "ವೇದಾಂತವಾದಿಗಳು ಹೇಳುತ್ತಾರೆ, 'ಸೋಽಹಮ್', ಎಂದರೆ 'ನಾನೇ ಭಗವಂತ.' ಬ್ರಹ್ಮ ಸತ್ಯ, ಜಗನ್ಮಿಥ್ಯಾ. 'ನಾನು' ಎಂಬುದೂ ಮಿಥ್ಯಾ. ಕೇವಲ ಆ ಪರಬ್ರಹ್ಮ ಮಾತ್ರ ಇದ್ದುಕೊಂಡಿದಾನೆ.

"ಆದರೆ 'ಅಹಂ' ಎಂಬುದು ಹೋಗೋದಿಲ್ಲವಾದ್ದರಿಂದ, 'ನಾನು ಭಗವಂತನ ದಾಸ, ಭಗವಂತನ ಪುತ್ರ, ಭಗವಂತನ ಭಕ್ತ' ಎಂಬ ಭಾವ ಬಹಳ ಒಳ್ಳೆಯದು.

"ಕಲಿಯುಗಕ್ಕೆ ಭಕ್ತಿಯೋಗವೇ ಶ್ರೇಯಸ್ಕರವಾದ್ದು. ಭಕ್ತಿಯಿಂದಲೇ ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ದೇಹ-ಬುದ್ಧಿ ಇತ್ತು ಎಂದರೆ ವಿಷಯಬುದ್ಧಿ ಇದ್ದೇ ಇರುತ್ತದೆ. ರೂಪ, ರಸ, ಗಂಧ, ಸ್ಪರ್ಶ, ಶಬ್ದ — ಇವು ವಿಷಯಗಳು. ವಿಷಯಬುದ್ಧಿ ಹೋಗಬೇಕಾದರೆ ಬಹಳ ಕಷ್ಟ. ವಿಷಯಬುದ್ಧಿ ಇರೋವರೆಗೆ 'ಸೋಽಹಮ್' ಭಾವ ಉಂಟಾಗದು.

"ತ್ಯಾಗಿಗಳಿಗೆ ವಿಷಯಬುದ್ಧಿ ಬಹಳ ಕಡಮೆ. ಸಂಸಾರಿಗಳು ಸರ್ವದಾ ವಿಷಯಚಿಂತನೆಯಲ್ಲೇ ನಿರತರಾಗಿರುತ್ತಾರೆ. ಆದ್ದರಿಂದ ಅವರಿಗೆ 'ದಾಸೋಽಹಮ್' ಭಾವ."

ನೆರೆಯವ: "ನಾವು ಪಾಪಿಗಳು. ನಮಗೆ ಗತಿ ಏನು?"

ಶ್ರೀರಾಮಕೃಷ್ಣರು: "ಭಗವಂತನ ನಾಮಗುಣಕೀರ್ತನೆ ಮಾಡಿದ್ದೇ ಆದರೆ ದೇಹಕ್ಕೆ ಸಂಬಂಧಪಟ್ಟ ಪಾಪಗಳೆಲ್ಲಾ ಕಾಲಿಗೆ ಬುದ್ಧಿಹೇಳುತ್ತವೆ. ದೇಹವೆಂಬ ವೃಕ್ಷದಲ್ಲಿ ಪಾಪವೆಂಬ ಹಕ್ಕಿಗಳು ಕುಳಿತುಕೊಳ್ಳುತ್ತವೆ. ಭಗವಂತನ ನಾಮಗುಣಕೀರ್ತನೆ ಮಾಡುವುದೇ ಕೈ ಚಪ್ಪಾಳೆ ಹೊಡೆದ ಹಾಗೆ. ಕೈ ಚಪ್ಪಾಳೆ ಹಾಕಿದೊಡನೇ ಮರಗಳಿಂದ ಎಲ್ಲಾ ಹಕ್ಕಿಗಳು ಓಡಿಹೋಗೋ ಹಾಗೆ, ಭಗವಂತನ ನಾಮಗುಣಕೀರ್ತನೆ ಮಾಡಿದೊಡನೇ ಎಲ್ಲಾ ಪಾಪಗಳೂ ಕಂಬಿಕೀಳುತ್ತವೆ.

"ಮತ್ತೆ ನೋಡು, ಹುಲ್ಲುಗಾವಲಿನಲ್ಲಿ ತೆಗೆದಿರೋ ಕುಂಟೆಯ ನೀರು ಸೂರ್ಯನ ತಾಪದಿಂದ ತನ್ನಷ್ಟಕ್ಕೆ ತಾನೇ ಇಂಗಿಹೋಗಿಬಿಡುತ್ತದೆ. ಅದೇ ರೀತಿಯಾಗಿ ಪಾಪ-ಪುಷ್ಕರಣಿಯ ನೀರು ಭಗವಂತನ ನಾಮಗುಣಕೀರ್ತನೆಯಿಂದ ತನ್ನಷ್ಟಕ್ಕೆ ತಾನೇ ಇಂಗಿಹೋಗಿಬಿಡುತ್ತದೆ.

"ಪ್ರತಿದಿನವೂ ಅಭ್ಯಾಸಮಾಡುತ್ತಿರಬೇಕು. ಅಂದು ಸರ್ಕಸ್ಸಿಗೆ ಹೋಗಿದ್ದೆ. ಅಲ್ಲಿ ನೋಡಿಬಂದೆ ಒಂದು ಕುದುರೆ ಬಹಳ ವೇಗವಾಗಿ ಓಡುತ್ತಿದ್ದುದನ್ನ ಮತ್ತು ಅದರ ಮೇಲೆ ಒಬ್ಬ ಇಂಗ್ಲಿಷು ಮಹಿಳೆ ಒಂಟಿ ಕಾಲಿನಲ್ಲಿ ನಿಂತುಕೊಂಡಿರುತ್ತಿದ್ದುದನ್ನ. ಹಾಗೆ ಮಾಡಬೇಕಾದರೆ ಆಕೆ ಎಷ್ಟು ಕಾಲ ಅಭ್ಯಾಸಮಾಡಿರಬೇಕು!

"ಹೋಗಲಿ, ಭಗವಂತನ ದರ್ಶನ ಬೇಕೆಂದು ಒಮ್ಮೆಯಾದರೂ ಅಳು.

"ಇವೆರಡೂ ಅದಕ್ಕೆ ಸಾಧನ: ಅಭ್ಯಾಸ ಮತ್ತು ಅನುರಾಗ, ಅಂದರೆ ಆತನ ದರ್ಶನ ಪಡೆಯಬೇಕೆಂಬ ವ್ಯಾಕುಲತೆ."

ಘಂಟೆ ಅಪರಾಹ್ನ ಒಂದು. ಪರಮಹಂಸರು ಭಕ್ತರೊಡನೆ ಊಟಕ್ಕೆ ಕುಳಿತಿದಾರೆ. ಒಬ್ಬ ಭಕ್ತ ಕೆಳಗಿನ ಪ್ರಾಂಗಣದಲ್ಲಿ ಹಾಡುತ್ತಿದಾನೆ:

ಏಳು ತಾಯಿ, ಏಳು ತಾಯಿ, ಎಷ್ಟುಕಾಲ ನಿದ್ದೆ ಗೈವೆ
ಮೂಲಾಧಾರ ಪದ್ಮದಿ!
ಏಳು ತಾಯಿ ಶಿವನಿರುವಾ ಸಾವಿರದಲ ಕಮಲವರಳ-
ಲೆನ್ನ ಶಿರೋಮಧ್ಯದಿ!
ಷಟ್‌ಚಕ್ರವ ಭೇದಿಸಮ್ಮ
ಮನದ ವ್ಯಥೆಯ ನೀಗಿಸಮ್ಮ
ಓ ಚೇತನ ರೂಪಿಣಿ!

ಈ ಹಾಡನ್ನು ಕೇಳಿ ಪರಮಹಂಸರು ಸಮಾಧಿಸ್ಥರಾಗಿಬಿಟ್ಟರು. ಇಡೀ ಶರೀರ ಸ್ಥಿರವಾಗಿಬಿಟ್ಟಿದೆ. ಕೈ ಎಲೆಯ ಮುಂದೆ ಇಟ್ಟದ್ದು ಇಟ್ಟ ಹಾಗೇ ನಿಂತಿದೆ. ಊಟಮಾಡುವುದು ನಿಂತುಹೋಗಿಬಿಟ್ಟಿತು. ಬಹಳ ಹೊತ್ತಾದನಂತರ ಕಿಂಚಿತ್ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ: "ನಾನು ಕೆಳಕ್ಕೆ ಇಳಿದುಹೋಗಬೇಕು, ನಾನು ಕೆಳಕ್ಕೆ ಇಳಿದುಹೋಗಬೇಕು." ಒಬ್ಬ ಭಕ್ತ ಅವರನ್ನು ಬಹಳ ಎಚ್ಚರಿಕೆಯಿಂದ ಕೆಳಕ್ಕೆ ಇಳಿಸಿಕೊಂಡು ಹೋಗುತ್ತಿದಾನೆ. ಇನ್ನೂ ಭಾವಾವಿಷ್ಟರಾಗೇ ಗಾಯಕನ ಹತ್ತಿರ ಹೋಗಿ ಕುಳಿತುಕೊಂಡರು. ಅಷ್ಟರಲ್ಲಿ ಹಾಡೂ ಮುಗಿಯಿತು. ಪರಮಹಂಸರು ಆತನನ್ನು ವಿನಯದಿಂದ ಕೇಳಿಕೊಳ್ಳುತ್ತಿದಾರೆ: "ಬಾಬು, ಮತ್ತೊಮ್ಮೆ ಭಗವತಿಯ ಹಾಡು ಕೇಳಬೇಕೆಂದಿದೇನೆ."

ಗಾಯಕ ಹಾಡಲಾರಂಭಿಸಿದ:

ಏಳು ತಾಯಿ, ಏಳು ತಾಯಿ, ಎಷ್ಟುಕಾಲ ನಿದ್ದೆ ಗೈವೆ
ಮೂಲಾಧಾರ ಪದ್ಮದಿ!...

ಹಾಡನ್ನು ಕೇಳುತ್ತ ಕೇಳುತ್ತಲೇ ಪರಮಹಂಸರು ಮತ್ತೆ ಸಮಾಧಿಸ್ಥರಾಗಿಬಿಟ್ಟರು.

೨೫ನೆ ಫೆಬ್ರುವರಿ ೧೮೮೩, ಭಾನುವಾರ.

ಮಧ್ಯಾಹ್ನದ ಊಟವಾದನಂತರ ಪರಮಹಂಸರು ಭಕ್ತರೊಡನೆ ಕುಳಿತು ಮಾತುಕತೆ ಆಡುತ್ತಿದಾರೆ. ರಾಮ, ಕೇದಾರ, ನಿತ್ಯಗೋಪಾಲ, ಮಾಸ್ಟರ್ ಮತ್ತು ಇನ್ನೂ ಕೆಲವರು ಕಲ್ಕತ್ತದಿಂದ ಬಂದಿದಾರೆ. ರಾಖಾಲ, ಹರೀಶ, ಲಾಟು, ಹಾಜರಾ ಈಗ ಸ್ವಲ್ಪ ಕಾಲದಿಂದ ಪರಮಹಂಸರೊಡನೇ ಇದಾರೆ. ವಿಶ್ವವಿದ್ಯಾನಿಲಯದ ನಾಲ್ಕು ಡಿಗ್ರಿಗಳನ್ನು ಪಡೆದುಕೊಂಡು ಸರ್ಕಾರದ ಹುದ್ದೆಯಲ್ಲಿರುವ ಚೌಧುರಿಯೂ ಬಂದಿದಾನೆ. ಆತ ಸ್ವಲ್ಪ ಕಾಲದ ಹಿಂದೆ ಪತ್ನಿಯನ್ನು ಕಳೆದುಕೊಂಡದ್ದರಿಂದ ಶಾಂತಿಗಾಗಿ ಆಗಾಗ ಪರಮಹಂಸರ ದರ್ಶನಕ್ಕೆ ಬರುತ್ತಿದಾನೆ.

ಶ್ರೀರಾಮಕೃಷ್ಣರು ರಾಮ ಮತ್ತು ಉಳಿದ ಭಕ್ತರಿಗೆ: "ರಾಖಾಲ, ನರೇಂದ್ರ ಭವನಾಥ ಇವರು ನಿತ್ಯಸಿದ್ಧರು. ಹುಟ್ಟಿದಂದಿನಿಂದಲೂ ಆತ್ಮ ಜಾಗೃತಿಯುಳ್ಳವರಾಗಿದಾರೆ. ಲೋಕಶಿಕ್ಷಣಕ್ಕಾಗೇ ಜನ್ಮಧಾರಣೆ ಮಾಡಿದಾರೆ.

"ಕೃಪಾಸಿದ್ಧರು ಎಂಬ ಹೆಸರಿನ ಇನ್ನೊಂದು ಗುಂಪಿನವರಿದಾರೆ. ಅವರಿಗೆ ಇದ್ದಕ್ಕಿದ್ದಹಾಗೆ ಭಗವಂತನ ಕೃಪೆ ದೊರೆತು ಆತನ ದರ್ಶನ ಮತ್ತು ಜ್ಞಾನ ದೊರೆತುಬಿಡುತ್ತವೆ. ಉದಾಹರಣೆಗೆ ಸಾವಿರಾರು ವರ್ಷ ಗಳಿಂದ ಕತ್ತಲೆ ತುಂಬಿಕೊಂಡಿದ್ದ ಕೋಣೆಯನ್ನು ತೆಗೆದುಕೊಳ್ಳಿ. ಅಲ್ಲಿಗೆ ಬೆಳಕು ತೆಗೆದುಕೊಂಡು ಹೋದರೆ, ಅದು ಒಡನೇ ಬೆಳಗಲಾರಂಭಿಸು ತ್ತದೆಯೇ ವಿನಾ ಕಿಂಚಿತ್ ಕಿಂಚಿತ್ತಾಗಿ ಅಲ್ಲ.

"ಯಾರು ಸಂಸಾರಿಗಳೊ ಅವರು ಸಾಧನೆಯಲ್ಲಿ ತೊಡಗಬೇಕು. ನಿರ್ಜನಪ್ರದೇಶಕ್ಕೆ ಹೋಗಿ ವ್ಯಾಕುಲಹೃದಯದಿಂದ ಭಗವಂತನನ್ನ ಕರೆಯ ಬೇಕು. (ಚೌಧುರಿಗೆ) ಪಾಂಡಿತ್ಯದಿಂದ ಆತನ ಸಾಕ್ಷಾತ್ಕಾರವನ್ನು ಪಡೆಯ ಲಾಗೋದಿಲ್ಲ. ವಿಚಾರದ ಮೂಲಕ ಯಾರು ತಾನೆ ಆತನ ಆದ್ಯಂತವನ್ನು ಅರಿತುಕೊಳ್ಳಬಲ್ಲರು? ಯಾವುದರಿಂದ ಆತನ ಪಾದಪದ್ಮಗಳಲ್ಲಿ ಭಕ್ತಿ ಯುಂಟಾಗುವುದೊ ಅದಕ್ಕಾಗಿ ಎಲ್ಲರೂ ಪ್ರಯತ್ನಮಾಡಬೇಕು.

"ಆತನ ಐಶ್ವರ್ಯ ಸುಮ್ಮನೆ ಅನಂತವಾದ್ದು. ಎಷ್ಟೂಂತ ಅರಿತುಕೊಳ್ಳಲಾದೀತು? ಆತನ ಕಾರ್ಯವನ್ನು ಎಂದಿಗಾದರೂ ಅರಿತು ಕೊಳ್ಳಲು ಸಾಧ್ಯವಾದೀತೆ?

"ಭೀಷ್ಮದೇವ ಸಾಕ್ಷಾತ್ ಅಷ್ಟವಸುಗಳಲ್ಲಿ ಒಬ್ಬ. ಆತನೂ ಶರಶಯ್ಯೆಯಲ್ಲಿ ಮಲಗಿ ಅಳಲಾರಂಭಿಸಿದ. ಆತ ಹೇಳಿದ: 'ಏನಾಶ್ಚರ್ಯ ಇದು! ಪಾಂಡವರೊಡನೆ ಸರ್ವದಾ ಸಾಕ್ಷಾತ್ ಭಗವಂತನೇ ಸ್ವಯಂ ಇದಾನೆ. ಆದರೂ ಅವರ ದುಃಖ ವಿಪತ್ತುಗಳಿಗೆ ಕೊನೆಯೇ ಇಲ್ಲವಲ್ಲ!' ಭಗವಂತನ ಕಾರ್ಯವನ್ನ ಯಾರು ತಾನೆ ಅರಿತುಕೊಳ್ಳಬಲ್ಲರು?

"ಕೆಲವರು ಭಾವಿಸುತ್ತಾರೆ: 'ನಾವು ಸಾಧನೆ ಭಜನೆ ಮಾಡಿಬಿಟ್ಟಿದೇವೆ. ನಾವು ಕೃತಾರ್ಥರಾಗಿಬಿಟ್ಟೆವು.' ಆದರೆ ಸೋಲು ಗೆಲುವು ಎಲ್ಲವೂ ಆತನ ಕೈಯಲ್ಲಿ. ಇಲ್ಲಿ ಒಬ್ಬ ವೇಶ್ಯೆ ಕೊನೆಯ ಉಸಿರಿನವರೆಗೂ ಪೂರ್ಣ ಪ್ರಜ್ಞೆಯಿಂದಿದ್ದು ಗಂಗಾಪ್ರಾಪ್ತಿಯನ್ನು ಹೊಂದಿದಳು."

ಚೌಧುರಿ: "ಭಗವದ್ದರ್ಶನ ಪಡೆಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಈ ಕಣ್ಣುಗಳಿಂದ ಭಗವಂತನನ್ನು ನೋಡಲಾಗೋದಿಲ್ಲ. ಆತ ದಿವ್ಯಚಕ್ಷು ಕೊಡುತ್ತಾನೆ; ಆಗ ಮಾತ್ರವೇ ನೋಡಬಹುದು. ಭಗವಂತ ತನ್ನ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಲೋಸುಗ ಆತನಿಗೆ ದಿವ್ಯಚಕ್ಷು ಕೊಟ್ಟ.

"ನಿಮ್ಮ ತತ್ತ್ವಶಾಸ್ತ್ರ ಕೇವಲ ಊಹಾಪೋಹದಿಂದ ತುಂಬಿದೆ. ಕೇವಲ ವಿಚಾರದಲ್ಲೇ ತೊಡಗುತ್ತದೆ. ಹಾಗೆ ಮಾಡುವುದರಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲಾಗೋದಿಲ್ಲ.

"ರಾಗಭಕ್ತಿ, ಎಂದರೆ ಅನುರಾಗ ಸಹಿತವಾದ ಭಕ್ತಿ ಉಂಟಾಯಿತು ಎಂದರೆ ಭಗವಂತನ ಹೃದಯ ಸುಮ್ಮನೆ ಇದ್ದುಕೊಂಡಿರಲಾರದು. ತನ್ನ ಭಕ್ತರ ಭಕ್ತಿ ಕಂಡರೆ ಆತನಿಗೆ ಎಷ್ಟು ಪ್ರೀತಿ ಗೊತ್ತೆ? ಹಸುವಿಗೆ ಹಿಂಡಿಯೊಡನೆ ನೆನಸಿದ ನೆಲ್ಲು ಹುಲ್ಲು ಕಂಡರೆ ಎಷ್ಟು ಪ್ರೀತಿಯೋ ಅಷ್ಟು. ಅದು 'ಗಬ, ಗಬ' ಅಂತ ತಿಂದುಬಿಡುತ್ತದೆ.

"ರಾಗಭಕ್ತಿ ಎಂಬುದು ಶುದ್ಧಭಕ್ತಿ, ಅಹೇತುಕಭಕ್ತಿ. ಉದಾಹರಣೆಗೆ ಪ್ರಹ್ಲಾದನದು. ಒಂದುಪಕ್ಷ ನೀನು ಒಬ್ಬ ದೊಡ್ಡ ಧನಿಕನ ಹತ್ತಿರಕ್ಕೆ ದಿವಸವೂ ಹೋಗುತ್ತಿದೀಯೆ, ಆದರೆ ಅವನಿಂದ ನೀನು ಮಾತ್ರ ಏನನ್ನೂ ಅಪೇಕ್ಷಿಸುತ್ತಿಲ್ಲ; ಸುಮ್ಮನೆ ಆತನ ದರ್ಶನ ಪಡೆಯಲು ಮಾತ್ರ ಹೋಗುತ್ತಿದೀಯೆ ಅಂತ ಇಟ್ಟುಕೊ. ಆತನೇನಾದರು ನಿನಗೆ ಉಪಕಾರ ಮಾಡಲು ಮುಂದೆಬಂದರೆ ನೀನು ಹೇಳುತ್ತೀಯೆ: 'ದಯವಿಟ್ಟು ಕಷ್ಟ ತೆಗೆದುಕೊಳ್ಳಬೇಡಿ. ನನಗೇನೂ ಬೇಕಾಗಿಲ್ಲ. ತಮ್ಮ ದರ್ಶನ ಪಡೆಯಲು

ಮಾತ್ರ ಬರುತ್ತಿದೇನೆ.' ಇದಕ್ಕೇ ಅಹೇತುಕ ಭಕ್ತಿ ಅಂತ ಹೆಸರು. ನಿನಗೆ ಭಗವಂತನಿಂದ ಏನೂ ಬೇಕಾಗಿಲ್ಲ. ಸುಮ್ಮನೆ ನೀನು ಆತನನ್ನು ಪ್ರೀತಿಸುತ್ತೀಯೆ."

ಹೀಗೆಂದು ಹೇಳಿ ಪರಮಹಂಸರು ಹಾಡಲಾರಂಭಿಸಿದಾರೆ:

ಮುಕ್ತಿಪದವನು ನೀಡಲೆನಗೆ ಮನವಿದ್ದರೂ
ಶುದ್ಧ ಭಕ್ತಿಯ ಕೊಡಲು ಹಿಂಜರಿವೆನು.
ಪರಿಶುದ್ಧ ಪ್ರೇಮವನು ಪಡೆದ ಆ ಜಗವಂದ್ಯ
ಮೂರು ಲೋಕವ ಮೆಟ್ಟಿ ನಿಲ್ಲುವವನು ! . . .

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಮುಖ್ಯವಾಗಿ ಭಗವಂತನಲ್ಲಿ ರಾಗಾನುಭಕ್ತಿ ಬೆಳಸಿಕೊಳ್ಳಬೇಕು, ವಿವೇಕವೈರಾಗ್ಯಗಳನ್ನು ಅಭಿವೃದ್ಧಿಗೊಳಿಸಿಕೊಳ್ಳಬೇಕು."

ಚೌಧುರಿ: "ಮಹಾಶಯರೆ, ಗುರುವಿಲ್ಲದೆ ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲವೆ? "

ಶ್ರೀರಾಮಕೃಷ್ಣರು: "ಸಚ್ಚಿದಾನಂದನೇ ಗುರು. ಶವಸಾಧನೆ ಮಾಡಿ ಇನ್ನೇನು ಇಷ್ಟದರ್ಶನವಾಗುತ್ತೆ ಎನ್ನುವಾಗ ಗುರು ಕಾಣಿಸಿಕೊಂಡು ಸಾಧಕನಿಗೆ ಹೇಳುತ್ತಾನೆ: 'ನೋಡಲ್ಲಿ! ನಿನ್ನಿಷ್ಟದೇವನನ್ನು ನೋಡಲ್ಲಿ.' ಬಳಿಕ ಗುರು ಇಷ್ಟದೇವನಲ್ಲಿ ಲೀನವಾಗಿಬಿಡುತ್ತಾನೆ. ಯಾರು ಗುರುವೊ ಆತನೇ ಇಷ್ಟದೇವ. ಗುರು ಭಗವಂತನೆಡೆಗೆ ಕೊಂಡೊಯ್ವ ದಾರ. ಹೆಂಗಸರು ಅನಂತನವ್ರತ ಆಚರಿಸುತ್ತಾರೆ. ಆದರೆ ಅವರು ಪೂಜೆಮಾಡುವುದು ವಿಷ್ಣುವನ್ನ. ಆತನ ಮೂಲಕವೇ ಭಗವಂತನ ಅನಂತತೆಯನ್ನು ಪೂಜೆಮಾಡುತ್ತಾರೆ.

(ರಾಮ ಮತ್ತು ಉಳಿದ ಭಕ್ತರಿಗೆ) "ಯಾವ ಮೂರ್ತಿಯ ಮೇಲೆ ಧ್ಯಾನಮಾಡಬೇಕು ಎಂಬುದಾಗಿ ನೀವು ಕೇಳುವುದಾದರೆ, ನನ್ನ ಉತ್ತರ: ಯಾವ ಮೂರ್ತಿ ನಿಮಗೆ ಹಿಡಿಸುತ್ತದೊ ಅದರ ಮೇಲೆ; ಆದರೆ ಎಲ್ಲಾ ಮೂರ್ತಿಗಳೂ ಒಂದೇ ಭಗವಂತನ ವಿವಿಧ ರೂಪ ಎಂಬುದನ್ನು ಮಾತ್ರ ಚೆನ್ನಾಗಿ ಮನಸ್ಸಿಗೆ ಒತ್ತಿ ತಿಳಿಸಿ.

"ಯಾರ ಮೇಲೂ ದ್ವೇಷ ಇಟ್ಟುಕೊಂಡಿರಕೂಡದು. ಶಿವ, ಕಾಳಿ, ಹರಿ ಎಲ್ಲರೂ ಒಂದೇ ಭಗವಂತನ ಭಿನ್ನ ಭಿನ್ನ ರೂಪ ಮಾತ್ರ. ಇದನ್ನು ಯಾರು ಅರಿತುಕೊಂಡಿದಾನೊ ಆತನೇ ಧನ್ಯ.

ಹೊರಗೆ ಶೈವ; ಒಳಗೆ ಶಾಕ್ತ;
ಮುಖದಿ ಹರಿಯ ನುತಿಪನು!

"ಒಂದು ಕಿಂಚಿತ್ತೂ ಕಾಮಕ್ರೋಧಾದಿಗಳು ಇಲ್ಲದೆ 'ಇದ್ದುವು ಎಂದರೆ ಶರೀರ ಬದುಕಿರದು. ಆದ್ದರಿಂದ ಅವು ಕೇವಲ ಕನಿಷ್ಠಪ್ರಮಾಣ ದಲ್ಲಿರುವಂತೆ ನೋಡಿಕೊಳ್ಳಬೇಕು."

ಕೇದಾರನ ಕಡೆ ನೋಡಿ ಪರಮಹಂಸರು ಹೇಳುತ್ತಿದಾರೆ: "ಈತ ಸರಿ. ನಿತ್ಯವನ್ನೂ ಒಪ್ಪುತ್ತಾನೆ, ಲೀಲೆಯನ್ನೂ ಒಪ್ಪುತ್ತಾನೆ. ಈತ ಬ್ರಹ್ಮನನ್ನು ಒಪ್ಪಿಕೊಳ್ಳುವುದೇ ಅಲ್ಲದೆ ದೇವಲೀಲೆ, ಮಾನುಷಲೀಲೆಗಳನ್ನು ಕೂಡ!"

ಕೇದಾರನ ದೃಷ್ಟಿಯಿಂದ ರಾಮಕೃಷ್ಣಪರಮಹಂಸರು ಅಂಥ ಒಂದು ಅವತಾರ.

ನಿತ್ಯಗೋಪಾಲನ ಕಡೆ ದೃಷ್ಟಿಹಾಕಿ ಪರಮಹಂಸರು ಹೇಳುತ್ತಿದಾರೆ: "ಈತ ಬಹಳ ಉನ್ನತ ಅವಸ್ಥೆಯಲ್ಲಿದಾನೆ.

(ನಿತ್ಯಗೋಪಾಲನಿಗೆ) "ನೀನು ಅಲ್ಲಿಗೆ ಬಹಳವಾಗಿ ಹೋಗಬೇಡ. ಬೇಕಾದರೆ ಅಪರೂಪಕ್ಕೆ ಒಮ್ಮೆ ಹೋಗು. ಭಕ್ತೆಯಾಗಿರಬಹುದು, ಆದರೆ ಆಕೆ ಹೆಂಗಸು ಎಂಬುದನ್ನ ಮರೆಯಬೇಡ. ಆದ್ದರಿಂದ ಎಚ್ಚರಿಕೆ!

"ಸನ್ಯಾಸಿಗಳಿಗೆ ಬಹಳ ಕಠಿನ ನಿಯಮ. ಹೆಂಗಸರ ಚಿತ್ರಪಟ ಕೂಡ ನೋಡಕೂಡದು. ಆದರೆ ಇದು ಸಂಸಾರಿಗಳಿಗಲ್ಲ. ಹೆಂಗಸು ಒಳ್ಳೆ ದೊಡ್ಡ ಭಕ್ತೆಯಾಗಿದ್ದರೂ ಸಾಧಕ ಆಕೆಯೊಡನೆ ಬೆರೆಯಕೂಡದು. ಜಿತೇಂದ್ರಿಯನಾಗಿದ್ದರೂ ಲೋಕಶಿಕ್ಷಣಾರ್ಥವಾಗಿ ಸನ್ಯಾಸಿ ಹಾಗೆ ವರ್ತಿಸಬೇಕಾಗುತ್ತದೆ.

"ಸನ್ಯಾಸಿಯ ನೂರಕ್ಕೆ ನೂರು ಭಾಗ ತ್ಯಾಗ ಕಣ್ಣಿಗೆ ಬಿದ್ದರೆ ತಾನೆ ಸಂಸಾರಿಗಳು ತ್ಯಾಗಿಗಳಾಗಲು ಪ್ರಯತ್ನಿಸುತ್ತಾರೆ; ಇಲ್ಲದಿದ್ದರೆ ಅವರು ಇನ್ನೂ ಆಳ ಆಳಕ್ಕೆ ಮುಳುಗಿಹೋಗಿಬಿಡುತ್ತಾರೆ. ಸನ್ಯಾಸಿ ಜಗದ್ಗುರು."

**೯ ನೆ ಮಾರ್ಚ್ ೧೮೮೪, ಮಾಘ ಅಮಾವಾಸ್ಯೆ, ಶುಕ್ರವಾರ.**

ಪರಮಹಂಸರು ತಮ್ಮ ಕೊಠಡಿಯಲ್ಲಿ ರಾಖಾಲ, ಮಾಸ್ಟರ್ ಮೊದ ಲಾದ ಕೆಲವು ಮಂದಿ ಭಕ್ತರೊಡನೆ ಕುಳಿತುಕೊಂಡಿದಾರೆ. ಘಂಟೆ ಸುಮಾರು ಬೆಳಗಿನ ಒಂಬತ್ತು ಇರಬೇಕು. ಇಂದು ಅಮಾವಾಸ್ಯೆ. ಅವರಿಗೆ ಅಮಾ ವಾಸ್ಯೆಯ ದಿನ ಸರ್ವದಾ ಜಗನ್ಮಾತೆಯ ಉದ್ದೀಪನ ಆಗುತ್ತಿರುತ್ತದೆ. ಆದ್ದ

ರಿಂದ ಇಂದೂ ಮತ್ತೆ ಮತ್ತೆ ಭಗವತಿಯ ಉದ್ದೀಪನ ಆಗುತ್ತಿದೆ. ಅವರು ಭಕ್ತರಿಗೆ ಹೇಳುತ್ತಿದಾರೆ: "ಭಗವಂತನೇ ವಸ್ತು, ಉಳಿದುದೆಲ್ಲ ಅವಸ್ತು. ಭಗವತಿ ಎಲ್ಲರನ್ನೂ ತನ್ನ ಮಹಾಮಾಯೆಯಿಂದ ಮುಗ್ಧರನ್ನಾಗಿ ಮಾಡಿಟ್ಟಿದಾಳೆ. ಮನುಷ್ಯರ ಕಡೆ ನೋಡು. ಬದ್ಧಜೀವರೇ ಅಧಿಕವಾಗಿದಾರೆ. ಅವರು ಬಹಳವಾಗಿ ಕಷ್ಟ ದುಃಖಕ್ಕೆ ಈಡಾಗುತ್ತಾರೆ, ಆದರೂ ಅದೇ ಕಾಮಕಾಂಚನದಲ್ಲೇ ಆಸಕ್ತಿ. ಒಂಟೆ ನೆಗ್ಗಿಲುಮುಳ್ಳು ತಿನ್ನುತ್ತದೆ, ಅದರ ಬಾಯಿಂದ ರಕ್ತ ಧಾರಾಕಾರವಾಗಿ ಹರಿಯುತ್ತದೆ; ಆದರೂ ಅದು ಮತ್ತೆ ಅದೇ ಮುಳ್ಳನ್ನು ತಿನ್ನುತ್ತದೆ. ಹೆರಿಗೆ ಸಮಯದಲ್ಲಿ ನೋವು ತಾಳಲಾರದೆ ಹೆಂಗಸರು ಸಂಕಲ್ಪಮಾಡಿಕೊಳ್ಳುತ್ತಾರೆ: 'ಅಯ್ಯೋ! ಏನು ಕಷ್ಟವಪ್ಪ ಇದು. ಬೇಕಾದ್ದಾಗಲಿ, ಇನ್ನೆಂದಿಗೂ ಪತಿಯ ಸಹವಾಸ ಮಾಡೋದಿಲ್ಲ.' ಆದರೆ ಮತ್ತೆ ಎಲ್ಲವನ್ನೂ ಮರೆತುಬಿಡುತ್ತಾರೆ.

"ಕಣ್ತೆರೆದು ನೋಡು, ಯಾರೂ ಭಗವಂತನಿಗಾಗಿ ಹುಡುಕುತ್ತಿಲ್ಲ. ಅನಾನಾಸ್ ಹಣ್ಣು ಬಿಸಾಡಿ ಜನ ಅದರ ಎಲೆ ತಿನ್ನುತ್ತಿದಾರೆ."

ಒಬ್ಬ ಭಕ್ತ: "ಒಳ್ಳೇದು, ಭಗವಂತ ಈ ಸಂಸಾರಕ್ಕೆ ಏಕೆ ನಮ್ಮನ್ನು ದಬ್ಬಿ ಇಟ್ಟಿದಾನೆ?"

ಶ್ರೀರಾಮಕೃಷ್ಣರು: "ಸಂಸಾರ ಕರ್ಮಕ್ಷೇತ್ರ. ಕರ್ಮ ಮಾಡುತ್ತ ಮಾಡುತ್ತ ಜ್ಞಾನೋದಯವಾಗಿಬಿಡುತ್ತದೆ. ಗುರು, ಶಿಷ್ಯನಿಗೆ ಕೆಲವು ಕೆಲಸಗಳನ್ನ ಮಾಡೋ ಹಾಗೆ ಇನ್ನು ಕೆಲವನ್ನ ಮಾಡದೆ ಇರೋ ಹಾಗೆ ಉಪದೇಶವೀಯುತ್ತಾನೆ. ಮತ್ತೆ ಆತ ನಿಷ್ಕಾಮಕರ್ಮದ ಸಂಬಂಧವಾಗೂ ಉಪದೇಶವೀಯುತ್ತಾನೆ. ಕರ್ಮ ಮಾಡುತ್ತ ಮಾಡುತ್ತ ಮನಸ್ಸಿನ ಕೊಳೆ ತೊಳೆದುಹೋಗಿಬಿಡುತ್ತದೆ. ಇದು ಒಳ್ಳೆ ಡಾಕ್ಟರ ಕೈಗೆ ಬಿದ್ದದ್ದೇ ಆದರೆ ಔಷಧ ಕುಡಿಯುತ್ತ ಕುಡಿಯುತ್ತ ರೋಗ ಹೊರಟುಹೋಗುವ ಹಾಗೆ.

"ಏಕೆ ಭಗವಂತ ನಮ್ಮನ್ನು ಸಂಸಾರದಿಂದ ಬಿಡುಗಡೆಮಾಡುತ್ತಿಲ್ಲ, ಗೊತ್ತೆ? ಮೊದಲು ರೋಗ ಗುಣ ಆಗಬೇಕು, ಬಳಿಕ ಬಿಡುಗಡೆ. ಕಾಮಕಾಂಚನವನ್ನು ಭೋಗಿಸಬೇಕೆಂಬ ಇಚ್ಛೆ ಹೊರಟುಹೋದೊಡನೇ ನಮ್ಮನ್ನು ಬಿಡುಗಡೆಮಾಡಿಬಿಡುತ್ತಾನೆ. ಒಮ್ಮೆ ಹೋಗಿ ಆಸ್ಪತ್ರೆಗೆ ದಾಖಲಾದೆ ಎಂದರೆ ಮತ್ತೆ ಓಡಿಬರಲಾಗೋದಿಲ್ಲ. ರೋಗದ ಕೊಸರು ಸ್ವಲ್ಪ ಇದ್ದರೂ ಡಾಕ್ಟರು ಬಿಟ್ಟುಕೊಡೋದಿಲ್ಲ."

ಈಗ ಕೆಲವು ಕಾಲದಿಂದ ಪರಮಹಂಸರು ಯಶೋದೆಯಂತೆ ವಾತ್ಸಲ್ಯಭಾವದಿಂದ ತುಂಬಿತುಳುಕಾಡುತ್ತಿದಾರೆ. ಆದ್ದರಿಂದ ಅವರು ರಾಖಾಲನನ್ನು ತಮ್ಮ ಹತ್ತಿರವೇ ಇಟ್ಟುಕೊಂಡಿದಾರೆ. ರಾಖಾಲ ಪರಮ-ಹಂಸರನ್ನು ಗೋಪಾಲಭಾವದಿಂದ ನೋಡುತ್ತಿದಾನೆ. ಮಗು ಹಾಲು ಕುಡಿಯುವಾಗ ತಾಯನ್ನು ಒರಗಿ ಕುಳಿತುಕೊಳ್ಳುವ ರೀತಿಯಾಗಿ ರಾಖಾಲನೂ ಆಗಾಗ ಪರಮಹಂಸರ ತೊಡೆಯ ಮೇಲೆ ಹೋಗಿ ಕುಳಿತು ಕೊಳ್ಳುತ್ತಿರುತ್ತಾನೆ.

ರಾಖಾಲ ಆ ರೀತಿಯಾಗಿ ಈಗ ಪರಮಹಂಸರ ತೊಡೆಯ ಮೇಲೆ ಕುಳಿತಿದ್ದಾಗ ಒಬ್ಬ ಬಂದು ತಿಳಿಸಿದ, ಗಂಗೆಯಲ್ಲಿ ದೊಡ್ಡ ಉಬ್ಬರ ಬರುತ್ತಿದೆ ಎಂಬುದಾಗಿ. ಪರಮಹಂಸರು, ರಾಖಾಲ, ಮಾಸ್ಟರು ಎಲ್ಲರೂ ಅದನ್ನು ನೋಡಲು ಪಂಚವಟಿಯ ಕಡೆಗೆ ಸುಮ್ಮನೆ ಓಡಲಾರಂಭಿಸಿದರು. ಆ ಉಬ್ಬರಕ್ಕೆ ಸಿಕ್ಕಿ ಒಂದು ದೋಣಿ ಸುಮ್ಮನೆ ಹೊಯ್ದಾಡುತ್ತಿರುವುದನ್ನು ನೋಡಿ ಪರಮಹಂಸರು ಕೂಗಿಕೊಳ್ಳುತ್ತಿದಾರೆ: "ಅಲ್ಲಿ ನೋಡು! ಅಲ್ಲಿ ನೋಡು! ಭಗವಂತನ ಕೃಪೆಯಿಂದ ಅದಕ್ಕೇನೂ ಆಗದೆ ಇರಲಿ."

ಈಗ ಎಲ್ಲರೂ ಪಂಚವಟಿಯಲ್ಲಿ ಕುಳಿತುಕೊಂಡಿದಾರೆ. ಉಬ್ಬರ ವಿಳಿತಕ್ಕೆ ಕಾರಣ ಏನು ಎಂಬುದಾಗಿ ಪರಮಹಂಸರು ಮಾಸ್ಟರನ್ನು ಕೇಳಿದರು. ಮಾಸ್ಟರ್ ನೆಲದ ಮೇಲೆ ಸೂರ್ಯ, ಚಂದ್ರ, ಭೂಮಿಗಳ ನಕ್ಷೆ ಬರೆದು ಗುರುತ್ವಾಕರ್ಷಣೆ ಎಂದರೇನು; ಉಬ್ಬರವಿಳಿತ, ಪೂರ್ಣಿಮೆ ಅಮಾವಾಸ್ಯೆ, ಗ್ರಹಣ ಇವೆಲ್ಲ ಹೇಗಾಗುತ್ತೆ ಎಂಬುವುಗಳ ವಿಷಯವಾಗಿ ವಿವರಿಸಲಾರಂಭಿಸಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಹೋಗು! ನನಗೊಂದೂ ಅರ್ಥ ವಾಗುತ್ತಿಲ್ಲ. ತಲೆ ತಿರುಗಲಾರಂಭಿಸುತ್ತಿದೆ. ತಲೆ ನೋಯಲಾರಂಭಿಸಿದೆ. ಒಳ್ಳೇದು ಅಷ್ಟೊಂದು ದೂರದಲ್ಲಿರೋ ವಸ್ತುಗಳ ಸಂಬಂಧವಾಗಿ ಅರಿತ ಬಗೆ ಹೇಗೆ?

"ನೋಡು ನಾನು ಚಿಕ್ಕವನಾಗಿದ್ದಾಗ ಚೆನ್ನಾಗಿ ಚಿತ್ರ ಬರೆಯಲು ಆಗುತ್ತಿತ್ತು; ಆದರೆ ಲೆಕ್ಕ ಮಾತ್ರ ನನಗೆ ತಲೆನೋವು ತರುತ್ತಿತ್ತು. ಸಾಮಾನ್ಯ ಲೆಕ್ಕವನ್ನು ಕಲಿತುಕೊಳ್ಳಲೂ ನನ್ನ ಕೈಯಲ್ಲಾಗಲಿಲ್ಲ."

ಈಗ ಪರಮಹಂಸರು ಹಿಂದಿರುಗಿ ತಮ್ಮ ಕೊಠಡಿಗೆ ಬಂದಿದಾರೆ. ಗೋಡೆಗೆ ತೂಗಹಾಕಿದ್ದ ಯಶೋದೆಯ ಚಿತ್ರ ನೋಡಿ ಹೇಳುತ್ತಿದಾರೆ:

"ಚಿತ್ರ ಚೆನ್ನಾಗಿ ಬಂದಿಲ್ಲ. ಆಕೆ ಹೂವಾಡಿಗಿತ್ತಿಯ ಹಾಗೆ ಕಾಣು ತ್ತಿದಾಳೆ."

ಮಧ್ಯಾಹ್ನದ ಊಟವಾದನಂತರ ಪರಮಹಂಸರು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡರು. ಅಧರಸೇನ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಕ್ರಮೇಣ ಬಂದು ಸೇರಲಾರಂಭಿಸಿದರು. ಅಧರಸೇನ ಪರಮಹಂಸರನ್ನು ದರ್ಶನ ಮಾಡಿದ್ದು ಇದೇ ಮೊದಲನೆ ಸಲ. ಆತನಿಗೆ ಮನೆ ಕಲ್ಕತ್ತದಲ್ಲಿ ಇದೆ. ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಆಗಿದಾನೆ. ವಯಸ್ಸು ಮೂವತ್ತರ ಹತ್ತಿರ.

ಅಧರಸೇನ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ನನ್ನದೊಂದು ಪ್ರಶ್ನೆ. ದೇವರ ಮುಂದೆ ಬಲಿಕೊಡುವುದು ಒಳ್ಳೆಯದೆ? ಜೀವಹಿಂಸೆ ಮಾಡಿದ ಹಾಗೇ ಆಗುತ್ತದೆಯಲ್ಲ?"

ಶ್ರೀರಾಮಕೃಷ್ಣರು: "ವಿಶೇಷ ಸಂದರ್ಭಗಳಲ್ಲಿ ಬಲಿ ಕೊಡಲು ಶಾಸ್ತ್ರ ಅನುಮತಿ ಇತ್ತಿದೆ. ವಿಧಿವತ್ ಬಲಿ ದೋಷವಾದ್ದೇನಲ್ಲ. ಉದಾಹರಣೆಗೆ ಅಷ್ಟಮಿ ತಿಥಿಗಳಲ್ಲಿ ಹೋತನ ಬಲಿ.

"ನಾನು ಈಗ ಅಂಥ ಮಾನಸಿಕ ಅವಸ್ಥೆಯಲ್ಲಿದೇನೆ, ನಿಂತುಕೊಂಡು ಬಲಿಕೊಡುವುದನ್ನು ನೋಡಲಾಗುತ್ತಿಲ್ಲ. ಭಗವತಿಗೆ ಅರ್ಪಿಸಿದ ಮಾಂಸ ವನ್ನು ಈಗ ತಿನ್ನಲಾಗುತ್ತಿಲ್ಲ. ಭಗವತಿ ಕೋಪಿಸಿಕೊಂಡುಬಿಡುವಳೊ ಏನೊ ಎಂದು ಹೆದರಿ ಅದನ್ನು ಮೊದಲು ಬೆರಳಿನಿಂದ ಮುಟ್ಟಿ ಬಳಿಕ ತಲೆಗೆ ಸವರಿಕೊಳ್ಳುತ್ತೇನೆ.

"ಮತ್ತೆ ನನಗೆ ಅಂಥಾ ಮಾನಸಿಕ ಅವಸ್ಥೆ ಬರುತ್ತದೆ ಆಗ ಸರ್ವ ಭೂತಗಳಲ್ಲೂ ಭಗವಂತನಿರುವುದು ಕಾಣಬರುತ್ತದೆ—ಇರುವೆಗಳಲ್ಲಿ ಕೂಡ. ಆ ಅವಸ್ಥೆಯಲ್ಲಿ ಯಾವುದಾದರೂ ಜೀವಿ ಸತ್ತುಹೋಯಿತು ಎಂದರೆ ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತೇನೆ, ಆತ್ಮ ಜನ್ಮಮೃತ್ಯುಗಳಿಗೆ ಅತೀತವಾದ್ದರಿಂದ, ನಾಶ ಹೊಂದಿದ್ದು ಕೇವಲ ದೇಹ ಮಾತ್ರ ಎಂಬುದಾಗಿ.

"ಹೆಚ್ಚಾಗಿ ವಿಚಾರದಲ್ಲಿ ತೊಡಗುವುದು ಶ್ರೇಯಸ್ಕರವಲ್ಲ; ಭಗ ವತಿಯ ಪಾದಪದ್ಮಗಳಲ್ಲಿ ಭಕ್ತಿ ಇದ್ದರೆ ಅದೇ ಯಥೇಷ್ಟ. ಅಧಿಕವಾಗಿ ವಿಚಾರದಲ್ಲಿ ತೊಡಗಿದರೆ ಮನಸ್ಸಿನೊಳಗೆ ಎಲ್ಲಾ ಕಲಸಿಕೊಂಡುಬಿಡುತ್ತದೆ. ಕೆರೆಯ ಮೇಲ್ಭಾಗದಲ್ಲಿ ನೀರನ್ನು ತುಂಬಿಕೊಂಡರೆ ಅದು ಶುದ್ಧವಾಗಿ

ರುತ್ತದೆ. ಕೈಯನ್ನು ಆಳಕ್ಕೆ ಹಾಕಿ ಕಲಕಿದರೆ ನೀರು ಬಗ್ಗಡವಾಗುತ್ತದೆ. ಆದ್ದರಿಂದ ಭಗವಂತನನ್ನು ಭಕ್ತಿಗಾಗಿ ಪ್ರಾರ್ಥನೆ ಮಾಡಿಕೊ.

"ಧ್ರುವನದು ಸಕಾಮ ಭಕ್ತಿ. ರಾಜ್ಯಪ್ರಾಪ್ತಿಗಾಗಿ ತಪಸ್ಸು ಮಾಡಿದ. ಆದರೆ ಪ್ರಹ್ಲಾದನದು ಅಹೇತುಕ ಭಕ್ತಿ."

ಒಬ್ಬ ಭಕ್ತ: "ಭಗವಂತನ ಸಾಕ್ಷಾತ್ಕಾರ ಪಡೆಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಆ ವಿಧದ ಭಕ್ತಿಯ ಮೂಲಕ. ಆದರೆ ಭಗವಂತನನ್ನು ಬಲಾತ್ಕರಿಸಿ ಕೇಳಬೇಕು. ಹೇಳುವಂತಿರಬೇಕು: 'ಹೇ ಭಗವಂತ, ಏನು ನೀನು ದರ್ಶನ ಕೊಡೋದಿಲ್ಲವೆ? ಇಗೋ ನೋಡು, ಕೊರಳಿಗೆ ಕತ್ತಿ ಹಾಕಿಕೊಳ್ಳುತ್ತೇನೆ.' ಇದಕ್ಕೇ ಭಕ್ತಿಯ ತಮಸ್ಸು ಅಂತ ಹೆಸರು."

ಭಕ್ತ: "ಭಗವಂತನನ್ನು ನೋಡಲು ಸಾಧ್ಯವೆ?"

ಶ್ರೀರಾಮಕೃಷ್ಣರು: "ಹೌದು, ಖಂಡಿತವಾಗಿಯೂ. ಸಾಕಾರ ನಿರಾಕಾರ ಎರಡು ರೂಪದಲ್ಲೂ. ಭಗವಂತನನ್ನು ಸಾಕಾರ ರೂಪದಲ್ಲಿ ಎಂದರೆ ಚಿನ್ಮಯ ರೂಪದಲ್ಲಿ ದರ್ಶನ ಮಾಡಬಹುದು. ಮನುಷ್ಯನಲ್ಲೂ ಆತನನ್ನು ಪ್ರತ್ಯಕ್ಷವಾಗಿ ನೋಡಬಹುದು. ಅವತಾರಪುರುಷನನ್ನು ನೋಡಿದ್ದೇ ಆದರೆ ಭಗವಂತನನ್ನೇ ನೋಡಿದ ಹಾಗೆ. ಭಗವಂತ ಯುಗ ಯುಗದಲ್ಲೂ ಮಾನುಷ ರೂಪ ಧರಿಸಿ ಅವತರಿಸುತ್ತಾನೆ."

೧೧ನೆ ಮಾರ್ಚ್ ೧೮೮೩, ಫಾಲ್ಗುಣ ಶುಕ್ಲ ದ್ವಿತೀಯ, ಭಾನುವಾರ.

ಇಂದು ಪರಮಹಂಸರು ಹುಟ್ಟಿದ ದಿನ. ಅವರ ಅಂತರಂಗ ಭಕ್ತರು ಅವರ ಜನ್ಮಮಹೋತ್ಸವವನ್ನು ಕಾಳೀದೇವಾಲಯದಲ್ಲಿ ನಡಸಬೇಕೆಂದು ನಿಶ್ಚಯಮಾಡಿಕೊಂಡಿದಾರೆ.

ಭಕ್ತರು ಪ್ರಾತಃಕಾಲದಿಂದಲೇ ಒಬ್ಬೊಬ್ಬರಾಗಿ ಬಂದು ಸೇರುತ್ತಿದಾರೆ. ದೇವಾಲಯಗಳಲ್ಲಿ ಸುಪ್ರಭಾತ ಮಂಗಳಾರತಿ ಮುಗಿದನಂತರ ನಹಬತ್ ಖಾನೆಯಿಂದ ಉದಯರಾಗದ ಮಧುರ ಸ್ವರ ಕೇಳಿಬರುತ್ತಿದೆ. ವಸಂತಕಾಲವಾದ್ದರಿಂದ ವೃಕ್ಷ, ಲತೆ, ಬಳ್ಳಿಗಳೆಲ್ಲಾ ಚಿಗುರು ಹೂವು ಗಳಿಂದ ಕೂಡಿ ಹೊಸ ಉಡಿಗೆ-ತೊಡಿಗೆಗಳನ್ನು ತೊಟ್ಟುಕೊಂಡಿವೆ. ಇಂದಿನ ದಿನ ಒಂದು ದೊಡ್ಡ ಭಾಗ್ಯೋದಯ ದಿನವಾದ್ದರಿಂದ ಭಕ್ತರ

ಹೃದಯ ಆನಂದದಿಂದ ತುಂಬಿ ನಲಿದಾಡುತ್ತಿದೆ. ಯಾವ ಕಡೆಗೆ ದೃಷ್ಟಿ ಹಾಕಿದರೂ ಆನಂದವೆಂಬುದು ಚಿಮ್ಮಿ ಹೊರಹೊಮ್ಮುತ್ತಿದೆ.

ಮಾಸ್ಟರ್ ಪ್ರಾತಃಕಾಲವೇ ಬಂದು ನೋಡಿದಾಗ ಪರಮಹಂಸರು ಆನಂದದಿಂದ ಭವನಾಥ, ರಾಖಾಲ, ಕಾಳೀಕೃಷ್ಣ ಇವರೊಡನೆ ಮಾತು ಕತೆಯಾಡುತ್ತಿರುವುದು ಕಣ್ಣಿಗೆ ಬಿತ್ತು. ಮಾಸ್ಟರ್ ಕೊಠಡಿಗೆ ಬಂದೊಡನೆ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಬಂದೆಯಾ? ಬಹಳ ಸಂತೋಷ.

(ಭಕ್ತರಿಗೆ) "ಲಜ್ಜೆ, ದ್ವೇಷ, ಭಯ, ಇವು ಮೂರೂ ಇರಕೂಡದು. ಈ ದಿನ ಇಲ್ಲಿ ಆನಂದ ಬಹಳವಾಗಿ ತುಂಬಿತುಳುಕಾಡಲಾರಂಭಿಸುತ್ತದೆ. ಆದರೆ ಯಾವ ನೀಚರು ಭಗವನ್ನಾಮದಿಂದ ಮತ್ತರಾಗಿ ನೃತ್ಯ ಗೀತಗಳಲ್ಲಿ ಭಾಗವಹಿಸಲೊಲ್ಲರೊ ಅವರಿಗೆ ಎಂದಿಗೂ ಭಗವಂತನ ಸಾಕ್ಷಾತ್ಕಾರ ದೊರಕದು. ಭಗವದ್ವಿಷಯವಾಗಿ ಲಜ್ಜೆಯೇಕೆ, ಭಯವೇಕೆ? ಈಗ ನೀವು ಎಲ್ಲರೂ ಹಾಡಿ."

ಭವನಾಥ ಮತ್ತು ಆತನ ಸ್ನೇಹಿತ ಕಾಳೀಕೃಷ್ಣ ಹಾಡಲಾರಂಭಿಸಿದಾರೆ:

ಧನ್ಯ ಧನ್ಯವಿದೇ ಸುದಿನ
ನಾವೆಲ್ಲರು ಸೇರುವ,
ಪುಣ್ಯಭೂಮಿ ಭಾರತಿಯಲಿ
ನಿನ್ನ ಸತ್ಯಧರ್ಮಗಳನು
ಈ ದಿನವೇ ಸಾರುವ.

ಎದೆ ಎದೆಯೂ ನಿನ್ನ ಧಾಮ;
ನಿನ್ನ ಪುಣ್ಯ ಮಧುರ ನಾಮ
ದಿಗ್ದೆಸೆಗಳ ತುಂಬಿದೆ!
ಭಕ್ತವೃಂದ ನಿನ್ನಪಾರ
ಮಹಿಮೆಯನ್ನು ಸಾರಿದೆ.

ನಾವೆಂದಿಗು ಬಯಸೆವಯ್ಯ
ಜನಧನಾದಿ ಗೌರವ,
ನಮಗಿಲ್ಲವೊ ಅನ್ಯ ಕಾಮ;

ಆರ್ತರಾಗಿ ಬಂದೆವಿಲ್ಲಿ
ನಂಬಿ ನಿನ್ನ ಪಾದವ!
ನಿನ್ನ ಪಾದ ಅಮೃತ ನಿಲಯ
ನಮಗಿಲ್ಲವೊ ಮರಣದ ಭಯ
ಜಯತು ಜಯತು—ನಿರ್ಭಯಾ!

ಪರಮಹಂಸರು ಅಂಜಲಿಬದ್ಧರಾಗಿ ಕುಳಿತು ಈ ಹಾಡನ್ನು ಕೇಳು ಕೇಳುತ್ತಿದ್ದ ಹಾಗೇ ಅವರ ಮನಸ್ಸು ಭಾವರಾಜ್ಯಕ್ಕೆ ಹೋಗಿ ಅಲ್ಲಿ ವಿಹರಿಸಲಾರಂಭಿಸಿದೆ. ಪರಮಹಂಸರ ಮನಸ್ಸು ಒಣಗಿದ ಬೆಂಕಿ ಕಡ್ಡಿಯ ಹಾಗೆ. ಅದು ಗೀಚಿದೊಡನೇ ಹೊತ್ತಿಕೊಂಡುಬಿಡುತ್ತದೆ. ಅವರು ಬಹಳ ಹೊತ್ತಿನವರೆಗೆ ಧ್ಯಾನಸ್ಥರಾಗೇ ಇದ್ದುಬಿಟ್ಟರು. ಸ್ವಲ್ಪ ಹೊತ್ತಾದನಂತರ ಕಾಳೀಕೃಷ್ಣ ಭವನಾಥನ ಕಿವಿಗೆ ಏನನ್ನೊ ಪಿಸುಗುಟ್ಟಿದ. ಅನಂತರ ಆತ ಪರಮಹಂಸರಿಗೆ ಪ್ರಣಾಮಮಾಡಿ ಹೊರಡಲು ಸಿದ್ಧನಾದ. ಪರಮಹಂಸರು ವಿಸ್ಮಯಗೊಂಡು ಆತನನ್ನು ಕೇಳುತ್ತಿದಾರೆ: "ಎಲ್ಲಿಗೆ ಹೋಗುತ್ತಿದೀಯೆ?"

ಭವನಾಥ: "ಆತನಿಗೆ ಸ್ವಲ್ಪ ಕೆಲಸ ಇದೆ. ಅದಕ್ಕಾಗಿ ಹೋಗುತ್ತಿದಾನೆ."

ಶ್ರೀರಾಮಕೃಷ್ಣರು: "ಏನದು?"

ಭವನಾಥ: "ವರಾಹನಗರದಲ್ಲಿರುವ ಶ್ರಮಜೀವಿಗಳ ಶಿಕ್ಷಣಾಲಯಕ್ಕೆ ಹೋಗುತ್ತಿದಾನೆ."

ಶ್ರೀರಾಮಕೃಷ್ಣರು: "ಇದು ಆತನ ದುರದೃಷ್ಟ. ಇಂದು ಇಲ್ಲಿ ಆನಂದವಾಹಿನಿಯೇ ಹರಿಯಲಾರಂಭಿಸುತ್ತದೆ. ಅದರಲ್ಲಿ ಆತ ಭಾಗಿಯಾಗಬಹುದಾಗಿತ್ತು. ಎಂಥ ದುರದೃಷ್ಟಶಾಲಿ!"

ಪರಮಹಂಸರ ಶರೀರಾರೋಗ್ಯ ಸರಿಯಾಗಿಲ್ಲ. ಆದ್ದರಿಂದ ಅವರು ಗಂಗಾ ನದಿಗೆ ಹೋಗಿ ಸ್ನಾನಮಾಡಲಿಲ್ಲ. ಅಲ್ಲಿಂದ ಕೆಲವು ಬಿಂದಿಗೆ ನೀರು ತರಿಸಿಕೊಂಡು ತಮ್ಮ ಕೊಠಡಿಯ ಪೂರ್ವ ವರಾಂಡದಲ್ಲೇ ಸ್ನಾನದ ಶಾಸ್ತ್ರ ಮುಗಿಸಿದರು.

ಸ್ನಾನದನಂತರ ಮಡಿವಸ್ತ್ರಗಳನ್ನುಟ್ಟು ಭಗವತಿಯ ನಾಮವನ್ನು ಜಪಿಸುತ್ತ ಒಬ್ಬಿಬ್ಬರು ಭಕ್ತರನ್ನು ಜೊತೆಯಲ್ಲಿ ಕರೆದುಕೊಂಡು ಅಂಗಳಕ್ಕೆ ಇಳಿದು ಕಾಳೀದೇವಾಲಯಾಭಿಮುಖರಾಗಿ ಬರುತ್ತಿದಾರೆ. ಹಕ್ಕಿ ಕಾವಿಗೆ

ಕುಳಿತಿರುವಾಗ ಅದು ಯಾವ ದೃಷ್ಟಿಯುಳ್ಳದ್ದಾಗಿರುವುದೊ ಅದೇ ರೀತಿಯ ದೃಷ್ಟಿಯುಳ್ಳವರಾಗಿ ನಡೆಯುತ್ತಿದಾರೆ.

ದೇವಾಲಯವನ್ನು ಪ್ರವೇಶಿಸಿದನಂತರ ಭಗವತಿಗೆ ಪ್ರಣಾಮಮಾಡಿ ಪೂಜೆಮಾಡುತ್ತಿದಾರೆ. ಅವರಿಗೆ ಪೂಜೆಯ ಯಾವ ನಿಯಮವೂ ಇಲ್ಲ. ಗಂಧಪುಷ್ಪಗಳನ್ನು ಕೆಲವು ವೇಳೆ ಭಗವತಿಯ ಪಾದಗಳಿಗೆ ಅರ್ಪಿಸುತ್ತಿದಾರೆ, ಇನ್ನು ಕೆಲವು ವೇಳೆ ತಮ್ಮ ತಲೆಯ ಮೇಲೇ ಇಟ್ಟುಕೊಳ್ಳುತ್ತಿದಾರೆ. ಈ ರೀತಿಯಾಗಿ ತಮಗಿಚ್ಛೆಬಂದಂತೆ ಭಗವತಿಯ ಪೂಜೆ ಮುಗಿಸಿ ಭಗವತಿಗೆ ಅರ್ಪಿಸಿದ ಎಳನೀರನ್ನು ಕೊಠಡಿಗೆ ತೆಗೆದುಕೊಂಡುಬರುವಂತೆ ಭವನಾಥನಿಗೆ ಹೇಳಿದರು. ಹಿಂದಿರುಗುವಾಗ ವಿಷ್ಣುದೇವಾಲಯಕ್ಕೆ ಹೋಗಿ ರಾಧಾ ಕೃಷ್ಣರ ದರ್ಶನಮಾಡಿದರು.

ಈಗ ಕೊಠಡಿಗೆ ಹಿಂದಿರುಗಿಬಂದು ನೋಡುತ್ತಾರೆ, ರಾಮ, ನಿತ್ಯ ಗೋಪಾಲ, ಕೇದಾರ ಇವರೇ ಮೊದಲಾದ ಇನ್ನೂ ಅನೇಕ ಮಂದಿ ಭಕ್ತರು ಬಂದು ಸೇರಿಬಿಟ್ಟಿದಾರೆ. ಅವರೆಲ್ಲರೂ ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಿದಾರೆ. ಪರಮಹಂಸರು ಅವರ ಕ್ಷೇಮಸಮಾಚಾರ ವಿಚಾರಿಸುತ್ತಿದಾರೆ.

ಪರಮಹಂಸರು ನಿತ್ಯಗೋಪಾಲನನ್ನು ಕೇಳಿದರು: "ಈಗ ಏನಾದರೂ ಸ್ವಲ್ಪ ತಿನ್ನುತ್ತೀಯ?" ಆತ ಉತ್ತರವಿತ್ತ: "ಹೌದು, ತಿನ್ನುತ್ತೇನೆ." ಆತನಿಗೆ ವಯಸ್ಸು ಇಪ್ಪತ್ತುಮೂರೊ— ಇಪ್ಪತ್ತುನಾಲ್ಕೊ. ಇನ್ನೂ ವಿವಾಹವಾಗಿಲ್ಲ. ಬಾಲಕನ ಅವಸ್ಥೆಯಲ್ಲಿದಾನೆ. ಸರ್ವದಾ ಭಾವರಾಜ್ಯದಲ್ಲೇ ಮುಳುಗಿರುತ್ತಾನೆ. ಆತ ಕೆಲವು ವೇಳೆ ಒಬ್ಬನೇ ಇನ್ನು ಕೆಲವು ವೇಳೆ ರಾಮನೊಡನೆ ಪರಮಹಂಸರ ದರ್ಶನಪಡೆಯಲು ಬರುತ್ತಿದಾನೆ. ಪರಮಹಂಸರು ಆತನ ಆಧ್ಯಾತ್ಮಿಕ ಉನ್ನತಿ ನೋಡಿ ಆತನನ್ನು ಬಹಳವಾಗಿ ಪ್ರೀತಿಸುತ್ತಿದಾರೆ. ಆಗಾಗ ಪರಮಹಂಸರು ಆತನದು ಪರಮಹಂಸಾವಸ್ಥೆ ಎಂಬುದಾಗಿ ಹೇಳುತ್ತಿದ್ದರು.

ನಿತ್ಯಗೋಪಾಲ ಪ್ರಸಾದವನ್ನು ತಿಂದು ಮುಗಿಸಿದನಂತರ ಪರಮಹಂಸರು ಆತನನ್ನು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ ಏನೇನೊ ಉಪದೇಶವಿತ್ತರು.

ಸುಮಾರು ಇಪ್ಪತ್ತೆರಡು—ಇಪ್ಪತ್ತುಮೂರು ವಯಸ್ಸಿನ ಒಬ್ಬ ದೊಡ್ಡ ಭಕ್ತೆ ಅಡಿಗಡಿಗೆ ಪರಮಹಂಸರ ದರ್ಶನ ಪಡೆಯಲು ಬರುತ್ತಿದಾಳೆ. ಆಕೆ

ಪರಮಹಂಸರನ್ನು ಬಹಳ ಶ್ರದ್ಧಾಭಕ್ತಿಯಿಂದ ಕಾಣುತ್ತಿದಾಳೆ. ಆಕೆ ನಿತ್ಯಗೋಪಾಲನ ಅದ್ಭುತ ಭಾವಾವಸ್ಥೆಯನ್ನು ನೋಡಿ ಆತನನ್ನು ಸಂತಾನ ಭಾವದಿಂದ ನೋಡುತ್ತ ಅಡಿಗಡಿಗೆ ಆತನನ್ನು ತನ್ನ ಮನೆಗೆ ಕರಸಿಕೊಳ್ಳು ತ್ತಿದಾಳೆ.

ಶ್ರೀರಾಮಕೃಷ್ಣರು ನಿತ್ಯಗೋಪಾಲನಿಗೆ: "ನೀನು ಅಲ್ಲಿಗೆ ಹೋಗು ತ್ತಿದೀಯೊ?"

ನಿತ್ಯಗೋಪಾಲ ಬಾಲಕನ ಹಾಗೆ: "ಹೌದು, ಹೋಗುತ್ತಿದೇನೆ. ಕರೆದುಕೊಂಡು ಹೋಗುತ್ತಾಳೆ."

ಶ್ರೀರಾಮಕೃಷ್ಣರು: "ಸಾಧು, ಎಚ್ಚರಿಕೆ! ಎಲ್ಲೊ ಅಪರೂಪಕ್ಕೆ ಒಮ್ಮೆ ಹೋಗು. ಅಡಿಗಡಿಗೆ ಹೋಗಬೇಡ—ಬಲೆಗೆ ಬಿದ್ದುಬಿಡುತ್ತೀಯೆ. ಕಾಮಕಾಂಚನವೇ ಮಾಯೆ. ಸಾಧು ಹೆಂಗಸಿನಿಂದ ಬಹಳ ದೂರದಲ್ಲೇ ಇರಬೇಕು. ಅಲ್ಲಿ ಎಲ್ಲರೂ ಮುಳುಗಿ ಹೋಗುತ್ತಾರೆ. 'ಆ ಸುಳಿಯಲ್ಲಿ ಬ್ರಹ್ಮ ವಿಷ್ಣುಗಳೇ ಬಿದ್ದುಹೋಗಿ ಪ್ರಾಣಸಂಕಟಪಡುತ್ತಿದಾರೆ.'"

ನಿತ್ಯಗೋಪಾಲ ಎಲ್ಲವನ್ನೂ ಕೇಳಿದ.

ಮಾಸ್ಟರ್ ತನಗೆ ತಾನೆ: "ಏನಾಶ್ಚರ್ಯ! ಈತನಿಗೆ ಪರಮ ಹಂಸಾವಸ್ಥೆಯುಂಟಾಗಿದೆ. ಹೀಗೆಂದು ಪರಮಹಂಸರು ಆಗಾಗ ಹೇಳುತ್ತಿದಾರೆ. ಈ ಉಚ್ಚ ಅವಸ್ಥೆ ಮುಟ್ಟಿದ ಮೇಲೂ ಕೆಳಕ್ಕೆ ಬೀಳುವ ಸಂಭವವಿರುವುದೆ? ಸಾಧುಗಳಿಗೆ ಎಂಥಾ ಕಠಿನ ನಿಯಮ! ಸಾಧು ಹೆಂಗಸಿನೊಡನೆ ಅನ್ಯೋನ್ಯವಾಗಿ ಬೆರೆತರೆ ಆತ ಕೆಳಕ್ಕೆ ಬಿದ್ದುಹೋಗುವ ಸಂಭವ! ಇಂಥ ಉಚ್ಚ ಆದರ್ಶ ಇಲ್ಲದೆ ಇತ್ತು ಎಂದರೆ ಜೀವರ ಉದ್ಧಾರ ಯಾವರೀತಿಯಾಗಿ ತಾನೆ ಆಗಬಲ್ಲದು? ಈ ಹೆಂಗಸು ಭಕ್ತಿಮತಿ; ಆದರೂ ಕೆಳಕ್ಕೆ ಬೀಳುವ ಸಂಭವ! ಈಗ ನನಗೆ ಅರ್ಥವಾಗುತ್ತಿದೆ ಶ್ರೀ ಚೈತನ್ಯದೇವ ಏಕೆ ತನ್ನ ಚಿಕ್ಕ ಶಿಷ್ಯ ಹರಿದಾಸನಿಗೆ ಅಂಥ ಕಠಿನ ಶಿಕ್ಷೆ ವಿಧಿಸಿದ ಎಂಬುದು. ಶ್ರೀ ಚೈತನ್ಯದೇವ ಕೂಡದು ಎಂದು ಹೇಳಿದ್ದರೂ ಹರಿದಾಸ ಒಬ್ಬ ವಿಧವೆ ಭಕ್ತೆಯೊಡನೆ ಮಾತುಕತೆಯಾಡಿದ. ಆದರೆ ಹರಿದಾಸ ಸನ್ಯಾಸಿ. ಆದ್ದ ರಿಂದ ಶ್ರೀ ಚೈತನ್ಯದೇವ ಆತನನ್ನು ಬಹಿಷ್ಕರಿಸಿಬಿಟ್ಟ. ಎಂಥ ಶಿಕ್ಷೆ! ಸನ್ಯಾಸಿಗೆ ಎಂಥ ಕಠಿನ ನಿಯಮ! ಆಹ, ಈ ನಿತ್ಯಗೋಪಾಲನ ಮೇಲೆ ಪರಮಹಂಸರಿಗೆ ಎಷ್ಟೊಂದು ಪ್ರೀತಿ! ಮುಂದೆ ವಿಪತ್ತಿಗೆ ಬೀಳದೆ ಇರಲಿ ಎಂದು ಈಗಿನಿಂದಲೇ ಆತನಿಗೆ ಎಚ್ಚರಿಕೆ ಕೊಡುತ್ತಿದಾರೆ."

"ಸಾಧು, ಎಚ್ಚರಿಕೆ!" ಎಂಬ ಮೇಘಗಂಭೀರಧ್ವನಿ ಭಕ್ತರ ಕಿವಿ ಯಲ್ಲಿ ಮತ್ತೆ ಮತ್ತೆ ಅನುರಣಿತವಾಗುತ್ತಲೇ ಇದೆ.

ಈಗ ಪರಮಹಂಸರು ಭಕ್ತರೊಡನೆ ತಮ್ಮ ಕೊಠಡಿಯ ಈಶಾನ್ಯ ವರಾಂಡಕ್ಕೆ ಬಂದಿದಾರೆ. ಭಕ್ತರ ಮಧ್ಯೆ ಒಬ್ಬ ಗೃಹಸ್ಥ, ದಕ್ಷಿಣೇಶ್ವರ ನಿವಾಸಿ ಕುಳಿತಿದಾನೆ. ಆತ ಮನೆಯಲ್ಲಿ ವೇದಾಂತಾಧ್ಯಯನ ಮಾಡುತ್ತಿ ದಾನೆ. ಆತ ಪರಮಹಂಸರೆದುರಿಗೆ ಕೇದಾರನೊಡನೆ ಶಬ್ದ ಬ್ರಹ್ಮದ ವಿಷಯವಾಗಿ ಸಂಭಾಷಿಸುತ್ತಿದಾನೆ. ಆತ ಹೇಳಿದ: "ಈ ಅನಾಹತ ಶಬ್ದ ಸರ್ವದಾ ಒಳಗೆ ಹೊರಗೆ ಆಗುತ್ತಿರುತ್ತದೆ."

ಶ್ರೀರಾಮಕೃಷ್ಣರು: "ಬರೀ ಶಬ್ದಕ್ಕೇ ಯಾವ ಬೆಲೆಯೂ ಇಲ್ಲ. ಅದು ಬೇರೊಂದನ್ನು ಸೂಚಿಸುತ್ತದೆ. ಕೇವಲ ನಿನ್ನ ಹೆಸರೇ ನನಗೆ ಆನಂದ ತರಬಲ್ಲದೆ? ನಿನ್ನನ್ನು ನೋಡದವರೆಗೆ ಪೂರ್ಣ ಆನಂದ ದೊರೆಯೋದಿಲ್ಲ."

ಗೃಹಸ್ಥ: "ಈ ಶಬ್ದವೇ ಬ್ರಹ್ಮ. ಇದೇ ಅನಾಹತ ಶಬ್ದ."

ಶ್ರೀರಾಮಕೃಷ್ಣರು ಕೇದಾರನಿಗೆ: "ಏನು, ಅರ್ಥವಾಯಿತೆ? ಈತನದು ಋಷಿಗಳ ಮತ. ಋಷಿಗಳು ರಾಮಚಂದ್ರನಿಗೆ ಹೇಳಿದರು: 'ಹೇ ರಾಮ, ನಮಗೆ ಗೊತ್ತಿದೆ ನೀನು ದಶರಥನ ಪುತ್ರ ಎಂಬುದು. ನೀನು ಒಬ್ಬ ಅವತಾರಪುರುಷನೆಂದು ತಿಳಿದು ಭಾರದ್ವಾಜಾದಿ ಋಷಿಗಳು ನಿನ್ನನ್ನು ಪೂಜಿಸುತ್ತಿದಾರೆ. ನಮಗೆ ಕೇವಲ ಅಖಂಡ ಸಚ್ಚಿದಾನಂದನೇ ಬೇಕು.' ಈ ಮಾತುಗಳನ್ನು ಕೇಳಿ ರಾಮಚಂದ್ರ ನಗುತ್ತ ಹೊರಟು ಹೋದ."

ಕೇದಾರ: "ಆ ಋಷಿಗಳ ಕೈಯಲ್ಲಿ ಶ್ರೀರಾಮಚಂದ್ರ ಅವತಾರ ಪುರುಷ ಎಂಬುದನ್ನು ಅರಿತುಕೊಳ್ಳಲಾಗಲಿಲ್ಲ. ಆದ್ದರಿಂದ ಅವರು ದಡ್ಡರಿದ್ದಿರಬೇಕು."

ಶ್ರೀರಾಮಕೃಷ್ಣರು ಗಂಭೀರಮುದ್ರೆಯಿಂದ: "ನೀನು ಹಾಗೆ ಎಂದಿಗೂ ಹೇಳಕೂಡದು. ಜನರು ಭಗವಂತನನ್ನು ತಮ್ಮ ತಮ್ಮ ರುಚಿ ಭಾವಗಳಿಗನುಸಾರ ಪೂಜೆಮಾಡುತ್ತಾರೆ. ಇದು ಮನೆಗೆ ಒಂದು ಮೀನು ತಂದು ಅದನ್ನೇ ತಾಯಿ ವಿವಿಧ ರೀತಿಯಲ್ಲಿ ಅಡಿಗೆ ಮಾಡಿ ಮಕ್ಕಳಿಗೆ ಬಡಿಸೋ ಹಾಗೆ. ಕೆಲವಕ್ಕೆ ಪಲಾವು ಮಾಡಿ ಬಡಿಸುತ್ತಾಳೆ. ಆದರೆ ಎಲ್ಲಾ ಮಕ್ಕಳೂ ಅದನ್ನು ಅರಗಿಸಿಕೊಳ್ಳಲಾರವು. ಜೀರ್ಣಶಕ್ತಿ ಕಡಮೆ

ಇರೋ ಮಕ್ಕಳಿಗೆ ಆಕೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ಇನ್ನು ಕೆಲವಕ್ಕೆ ಮೀನಿನ ಬಜ್ಜಿ, ಮೀನಿನ ಗೊಜ್ಜು ಕಂಡರೆ ಇಷ್ಟ. ಎಲ್ಲಾ ಜೀರ್ಣಶಕ್ತಿ ಮತ್ತು ರುಚಿಯನ್ನು ಅವಲಂಬಿಸಿದೆ.

"ಋಷಿಗಳು ಜ್ಞಾನಮಾರ್ಗಿಗಳಾಗಿದ್ದರು. ಆದ್ದರಿಂದ ಅವರು ಅಖಂಡ ಸಚ್ಚಿದಾನಂದನಿಗಾಗಿ ಹುಡುಕುತ್ತಿದ್ದರು. ಆದರೆ ಭಕ್ತರಿಗೆ ಭಕ್ತಿಯನ್ನು ಆಸ್ವಾದಿಸಬೇಕೆಂಬ ಇಚ್ಛೆ. ಆದ್ದರಿಂದ ಅವರಿಗೆ ಅವತಾರ ಪುರುಷ ಬೇಕು. ಭಗವಂತನ ಸಾಕ್ಷಾತ್ಕಾರ ದೊರೆಯಿತು ಎಂದರೆ ಮನಸ್ಸಿನ ಅಂಧಕಾರ ನಾಶವಾಗಿಬಿಡುತ್ತದೆ. ಪುರಾಣದಲ್ಲಿ ಹೇಳಿದೆ, ರಾಮಚಂದ್ರ ಸಭೆಗೆ ಬಂದಾಗ ಶತ ಸೂರ್ಯರು ಉದಯವಾದಂತಾಯಿತು ಎಂಬುದಾಗಿ, ಹಾಗಾದರೆ ಸಭಿಕರೆಲ್ಲ ಏಕೆ ಸುಟ್ಟು ಭಸ್ಮವಾಗಿಬಿಡಲಿಲ್ಲ? ಅದಕ್ಕೆ ಕಾರಣ. ಆತನ ಜ್ಯೋತಿ ಜಡ ಜ್ಯೋತಿ ಅಲ್ಲ. ಸೂರ್ಯೋದಯವಾದೊಡನೆ ಪದ್ಮಗಳು ಅರಳೋ ಹಾಗೆ ಇಡೀ ಸಭಿಕರ ಹೃತ್ಪದ್ಮ ಅರಳಲಾರಂಭಿಸಿದುವು."

ಪರಮಹಂಸರು ಈ ಮಾತುಕತೆಗಳನ್ನು ಭಕ್ತರ ಹತ್ತಿರ ನಿಂತು ಆಡುತ್ತಿದ್ದರು. ಮಾತಾಡುತ್ತ ಇದ್ದಹಾಗೆ ಅವರ ಮನಸ್ಸು ಬಾಹ್ಯ ಜಗತ್ತನ್ನು ಬಿಟ್ಟು ಅಂತರ್ಯ ರಾಜ್ಯಕ್ಕೆ ಹೊರಟುಹೋಯಿತು "ಹೃತ್ಪದ್ಮ ಅರಳಲಾರಂಭಿಸಿದುವು" ಎಂಬ ಮಾತು ಅವರ ಬಾಯಿಂದ ಬೀಳುವುದೇ ತಡ ಸಮಾಧಿಸ್ಥರಾಗಿಬಿಟ್ಟರು. ನಿಂತುಕೊಂಡೇ ಇದಾರೆ, ಆದರೆ ಚಿತ್ರದ ಬೊಂಬೆಯ ಹಾಗೆ ಬಾಹ್ಯಜ್ಞಾನಶೂನ್ಯರಾಗಿ. ಮುಖ ಉಜ್ಜ್ವಲವಾಗಿದೆ; ಮುಗುಳುನಗೆ ಬೀರುತ್ತಿದೆ.

ಪರಮಹಂಸರು ಬಹಳ ಹೊತ್ತಾದನಂತರ ಪ್ರಕೃತಿಸ್ಥರಾಗುತ್ತಿದಾರೆ. ಈಗ ಪರಮಹಂಸರು ದೀರ್ಘ ನಿಶ್ವಾಸ ಬಿಟ್ಟು ರಾಮನಾಮವನ್ನು ಆವೃತ್ತಿ ಮಾಡುತ್ತಿದಾರೆ. ಪ್ರತಿಯೊಂದು ಪದವೂ ಅಮೃತವನ್ನೇ ಭಕ್ತರ ಹೃದಯಕ್ಕೆ ವರ್ಷಿಸುತ್ತಿದೆಯೊ ಏನೊ ಎಂಬಂತಿದೆ. ಈಗ ಪರಮಹಂಸರು ಕೆಳಕ್ಕೆ ಕುಳಿತುಕೊಂಡರು. ಭಕ್ತರೂ ಅವರ ಸುತ್ತ ಕುಳಿತುಕೊಳ್ಳುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಅವತಾರಪುರುಷ ಅವತರಿಸಿ ಬಂದಾಗ ಅದು ಸಾಮಾನ್ಯ ಜನರಿಗೆ ಗೊತ್ತಾಗೋದಿಲ್ಲ;—ರಹಸ್ಯವಾಗಿ ಬರುತ್ತಾನೆ. ಎಲ್ಲೊ ಒಂದು ಐದಾರು ಮಂದಿ ಅಂತರಂಗ ಭಕ್ತರು ಮಾತ್ರ ಆತನನ್ನು ಗುರುತಿಸಬಲ್ಲರು. ರಾಮ ಪೂರ್ಣಬ್ರಹ್ಮ, ಪೂರ್ಣ ಅವತಾರ ಎಂಬುದು ಕೇವಲ ಹನ್ನೆರಡು ಜನ ಋಷಿಗಳಿಗೆ ಮಾತ್ರ

ಗೊತ್ತಿತ್ತು. ಉಳಿದ ಋಷಿಗಳು ಆತನಿಗೆ ಹೇಳಿದರು: 'ಹೇ ರಾಮ, ನೀನು ದಶರಥನ ಪುತ್ರ ಎಂಬುದಾಗಿ ಮಾತ್ರ ನಮಗೆ ಗೊತ್ತಿದೆ.'

"ಅಖಂಡ ಸಚ್ಚಿದಾನಂದವನ್ನು ಏನು ಎಲ್ಲರೂ ಗ್ರಹಿಸಬಲ್ಲರೆ? ಆದರೆ ಯಾರು ನಿತ್ಯವನ್ನು ಮುಟ್ಟಿದನಂತರ ವಿಲಾಸಕ್ಕಾಗಿ ಲೀಲೆಯಲ್ಲಿ ಇರುತ್ತಾರೊ ಅವರದೇ ಪಕ್ವ ಭಕ್ತಿ. ಇಂಗ್ಲೆಂಡಿಗೆ ಹೋಗಿ ರಾಣಿಯನ್ನು ನೋಡಿ ಬಂದವರು ಮಾತ್ರವೇ ಆಕೆಯ ನಡೆ ನುಡಿ ವ್ಯವಹಾರಗಳನ್ನು ವರ್ಣಿಸ ಬಲ್ಲರು. ಆಗ ಮಾತ್ರವೇ ಅವರ ವರ್ಣನೆ ಯಥಾರ್ಥವಾಗಿರುತ್ತದೆ. ಭಾರದ್ವಾಜಾದಿ ಋಷಿಗಳು ರಾಮನನ್ನು ಸ್ತೋತ್ರಮಾಡಿದರು: 'ಹೇ ರಾಮ, ನೀನೇ ಅಖಂಡ ಸಚ್ಚಿದಾನಂದ. ನೀನು ನಮ್ಮ ಹತ್ತಿರಕ್ಕೆ ಮನುಷ್ಯ ರೂಪ ಧರಿಸಿ ಬಂದಿದೀಯೆ. ನೀನೇ ನಿನ್ನನ್ನು ನಿನ್ನ ಮಾಯೆಯಿಂದ ಮುಚ್ಚಿಕೊಂಡಿರುವುದರಿಂದ ಮನುಷ್ಯನಾಗಿ ಕಾಣಬರುತ್ತಿದೀಯೆ.' ಈ ಋಷಿಗಳು ರಾಮನ ಪರಮ ಭಕ್ತರು. ಇವರದು ಪಕ್ವ ಭಕ್ತಿ."

ಸ್ವಲ್ಪ ಹೊತ್ತಿನಲ್ಲೇ ಕೊನ್ನಗರದ ಭಕ್ತರು ಮೃದಂಗ ತಾಳಗಳೊಡನೆ ಸಂಕೀರ್ತನೆ ಮಾಡುತ್ತ ಮಾಡುತ್ತ ಉದ್ಯಾನವನವನ್ನು ಮುಟ್ಟಿದರು. ಅವರು ಪರಮಹಂಸರ ಕೊಠಡಿಯ ಈಶಾನ್ಯ ವರಾಂಡವನ್ನು ಮುಟ್ಟುವುದೇ ತಡ ಪರಮಹಂಸರೂ ಅವರೊಡನೆ ಸೇರಿ ಪ್ರೇಮೋನ್ಮತ್ತತೆಯಿಂದ ನರ್ತಿಸುತ್ತ ಸಂಕೀರ್ತನೆ ಮಾಡುತ್ತಿದಾರೆ. ಆಗಾಗ ಸಮಾಧಿಸ್ಥರಾಗುತ್ತಿದಾರೆ—ಚಿತ್ರಪಟದ ಗೊಂಬೆಯೋಪಾದಿಯಲ್ಲಿ ನಿಂತುಕೊಂಡೇ. ಅವರು ಒಮ್ಮೆ ಆ ಅವಸ್ಥೆಯಲ್ಲಿ ಇದ್ದಾಗ ಭಕ್ತರು ಅವರ ಕೊರಳಿಗೆ ಮಲ್ಲಿಗೆ ಹೂವಿನ ದಪ್ಪದೊಂದು ಹಾರ ಹಾಕಿದರು. ಭಕ್ತರಿಗೆ ತೋರಿತು ಸಾಕ್ಷಾತ್ ಗೌರಾಂಗದೇವನೇ ತಮ್ಮ ಎದುರಿಗೆ ನಿಂತಿರುವನೊ ಏನೊ ಎಂಬಂತೆ. ಪರಮಹಂಸರು ಗಭೀರ ಭಾವಸಮಾಧಿಸ್ಥರಾಗಿದಾರೆ. ಪರಮಹಂಸರಿಗೂ ಗೌರಾಂಗನ ಹಾಗೆ ಮೂರು ಅವಸ್ಥೆಗಳು ಒಂದಾದಮೇಲೊಂದು ಬರುತ್ತವೆ. ಕೆಲವು ವೇಳೆ ಅವರು ಅಂತರ್ದಶಾವಸ್ಥೆಯಲ್ಲಿರುತ್ತಾರೆ. ಆಗ ಚಿತ್ರಪಟದ ಗೊಂಬೆಯೋಪಾದಿಯಲ್ಲಿ ಜಡರಾಗಿಯೂ ಬಾಹ್ಯಜ್ಞಾನಶೂನ್ಯರಾಗಿಯೂ ಇರುತ್ತಾರೆ. ಆಗ ಅವರು ಪ್ರೇಮಾವಿಷ್ಟರಾಗಿ ನರ್ತಿಸುತ್ತಿರುತ್ತಾರೆ. ಮತ್ತೆ ಕೆಲವು ವೇಳೆ ಬಾಹ್ಯದಶಾವಸ್ಥೆಯಲ್ಲಿರುತ್ತಾರೆ. ಆಗ ಭಕ್ತರೊಡನೆ ಸಂಕೀರ್ತನೆ ಮಾಡುತ್ತಿರುತ್ತಾರೆ. ಪರಮಹಂಸರು ಸಮಾಧಿಸ್ಥರಾಗಿ ಸ್ಥಿರವಾಗಿ ನಿಂತುಕೊಂಡಿರುವುದು, ಅವರ ಕೊರಳಲ್ಲಿ ಒಳ್ಳೆ ಸುವಾಸನೆ

ಬೀರುತ್ತಿರುವ ಮಲ್ಲಿಗೆ ಹೂವಿನ ಹಾರ ನೇತಾಡುತ್ತಿರುವುದು, ಅವರ ಚಂದ್ರವದನ ಪ್ರೇಮಾನುರಂಜಿತವಾಗಿರುವುದು, ಭಕ್ತರು ಅವರ ಸುತ್ತಲೂ ನರ್ತಿಸುತ್ತ ಹಾಡುತ್ತಿರುವುದು ಈ ದೃಶ್ಯಗಳೆಲ್ಲ ದೇವದುರ್ಲಭವಾದು ವಾಗಿ ಕಂಡುಬಂದುವು.

ಈಗ ಮಧ್ಯಾಹ್ನದ ಊಟಕ್ಕೆ ಸಮಯ ಆಯಿತು. ಪರಮಹಂಸರು ಹೊಸ ಪೀತಾಂಬರಉಟ್ಟು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿ ದಾರೆ. ಪೀತಾಂಬರಧಾರಿಗಳಾದ ಆ ಆನಂದಮಯ ಮಹಾಪುರುಷರ ಜ್ಯೋತಿರ್ಮಯ ಭಕ್ತಚಿತ್ತವಿನೋದಕಾರಿ ಅಪರೂಪ ರೂಪನ್ನು ಭಕ್ತರು ದರ್ಶನಮಾಡುತ್ತ ಕುಳಿತಿದಾರೆ. ಆ ದೇವದುರ್ಲಭ ಪವಿತ್ರ ಮೋಹನ ಮೂರ್ತಿಯನ್ನು ಎಷ್ಟು ಹೊತ್ತು ನೋಡಿದರೂ ಕಣ್ಣುಗಳಿಗೆ ತೃಪ್ತಿ ದೊರೆಯುತ್ತಿಲ್ಲ. ಅವು ಮತ್ತೆ ಮತ್ತೆ ನೋಡಬೇಕು, ಆ ರೂಪಸಾಗರದಲ್ಲಿ ಲೀನವಾಗಿ ಹೋಗಬೇಕು ಅನ್ನುತ್ತಲೇ ಇವೆ.

ಊಟವಾದನಂತರ ಪರಮಹಂಸರು ಸ್ವಲ್ಪ ಹೊತ್ತು ಚಿಕ್ಕ ಮಂಚದ ಮೇಲೆ ವಿಶ್ರಮಿಸಿಕೊಂಡರು. ಕೊಠಡಿಯಲ್ಲಿ ಭಕ್ತರ ಗುಂಪು ಅಧಿಕವಾಗ ಲಾರಂಭಿಸಿತು. ಹೊರಗೆ ವರಾಂಡಗಳಲ್ಲೂ ತುಂಬಿದಾರೆ. ಕೇದಾರ, ಸುರೇಶ, ರಾಮ, ಮನಮೋಹನ, ಗಿರೀಂದ್ರ, ರಾಖಾಲ, ಭವನಾಥ, ಮಾಸ್ಟರ್ ಮೊದಲಾದವರೂ ಕೊಠಡಿಯಲ್ಲಿ ಕುಳಿತಿದಾರೆ.

ಒಬ್ಬ ವೈಷ್ಣವ ಗೋಸ್ವಾಮಿ ಕೊಠಡಿಯಲ್ಲಿ ಕುಳಿತುಕೊಂಡಿದಾನೆ. ಪರಮಹಂಸರು ಆತನಿಗೆ ಪ್ರಶ್ನೆ ಹಾಕಿದರು: "ಒಳ್ಳೆಯದು, ನೀನು ಏನು ಹೇಳುತ್ತೀಯೆ? ಮಾರ್ಗವೇನು?"

ಗೋಸ್ವಾಮಿ: "ಮಹಾಶಯರೆ, ಕೇವಲ ನಾಮವೇ ಸಾಕು. ಕಲಿ ಯುಗದಲ್ಲಿ ನಾಮ ಮಾಹಾತ್ಮ್ಯ."

ಶ್ರೀರಾಮಕೃಷ್ಣರು: "ಹೌದು, ನಾಮದಲ್ಲಿ ಒಳ್ಳೆ ಮಾಹಾತ್ಮ್ಯ ಇರು ವುದೇನೊ ನಿಜ. ಆದರೆ ಅನುರಾಗವಿಲ್ಲದಿದ್ದರೆ ಏನು ದೊರೆಯುತ್ತದೆ? ಭಗವಂತನಿಗಾಗಿ ಪ್ರಾಣ ಸುಮ್ಮನೆ ವ್ಯಾಕುಲಪಡಬೇಕು. ನಾಮವನ್ನೇನೊ ಸುಮ್ಮನೆ ಉಚ್ಚರಿಸುತ್ತ ಕಾಮಕಾಂಚನಗಳಲ್ಲಿ ಮನಸ್ಸಿಟ್ಟಿದ್ದರೆ ಭಗವಂತನ ಸಾಕ್ಷಾತ್ಕಾರ ದೊರೆಯುವುದೆ? ಚೇಳು ಅಥವಾ ಜೇಡರ ಹುಳುಗಳ ಕಡಿತದ ನೋವು ಕೇವಲ ಮಂತ್ರದಿಂದಲೇ ಇಳಿದುಹೋಗೋದಿಲ್ಲ. ಬೆರಣಿಯ ಹೊಗೆ ಕೊಡಬೇಕು."

ಗೋಸ್ವಾಮಿ: "ಹಾಗಾದರೆ ಅಜಾಮಿಳ? ಆತ ಮಹಾ ಪಾತಕಿ. ಆತ ಮಾಡದ ಪಾಪವೇ ಇಲ್ಲ. ಆದರೆ ಸಾಯೋವಾಗ ನಾರಾಯಣನೆಂಬ ಹೆಸರಿನ ತನ್ನ ಮಗನನ್ನು ಕೂಗಿದ ಮಾತ್ರದಿಂದಲೇ ಆತ ಉದ್ಧಾರವಾಗಿ ಬಿಟ್ಟ."

ಶ್ರೀರಾಮಕೃಷ್ಣರು: "ಬಹುಶಃ ಅಜಾಮಿಳ ಹಿಂದಿನ ಜನ್ಮಗಳಲ್ಲಿ ಬಹಳವಾಗಿ ತಪಸ್ಸು ಮಾಡಿರಬೇಕು. ಕೊನೆ ಜನ್ಮದಲ್ಲೂ ಆತ ಒಮ್ಮೆ ತಪಸ್ಸುಮಾಡಿದ ಎಂಬುದಾಗಿ ಒಂದು ಕಡೆ ಹೇಳಿದೆ; ಅದೂ ಅಲ್ಲದೆ ಅದು ಆತನ ಅವಸಾನ ಕಾಲ. ಆನೆಗೆ ಮೈ ತೊಳೆದು ಸ್ನಾನಮಾಡಿಸೋದ ರಿಂದಾಗೋ ಪ್ರಯೋಜನವೇನು? ಅದು ಮತ್ತೆ ದೂಳು, ಬಗ್ಗಡ, ಬದಿ ಹೊಯ್ದುಕೊಂಡು ಎಂದಿನಂತೇ ಆಗಿಬಿಡುತ್ತದೆ. ಆದರೆ ಅದು ಗಜಶಾಲೆ ಯನ್ನು ಪ್ರವೇಶಿಸುವ ಮುನ್ನ ಚೆನ್ನಾಗಿ ಮೈ ತೊಳೆದು ಸ್ನಾನಮಾಡಿಸಿ ಬಿಟ್ಟರೆ ಸ್ವಚ್ಛವಾಗೇ ಇರುತ್ತದೆ.

"ಭಗವನ್ನಾಮೋಚ್ಚಾರಣೆಯಿಂದ ಮನುಷ್ಯ ಒಮ್ಮೆ ಶುದ್ಧನೇನೊ ಆದ ಅಂತ ಇಟ್ಟುಕೊ. ಆದರೆ ಮತ್ತೆ ಆತ ಅನೇಕ ಪಾಪಕಾರ್ಯಗಳಲ್ಲಿ ತೊಡಗಿಬಿಡುತ್ತಾನೆ. ಆತನದು ದುರ್ಬಲ ಮನಸ್ಸು. ಮತ್ತೆ ಪಾಪ ಕಾರ್ಯಗಳನ್ನು ಮಾಡೋದಿಲ್ಲ ಎಂದು ಪ್ರತಿಜ್ಞೆಮಾಡಲಾರ. ಗಂಗಾಸ್ನಾನ ದಿಂದ ಎಲ್ಲಾ ಪಾಪಗಳೂ ಹೋಗುವುದೇನೊ ನಿಜ; ಆದರೆ ಹೋದರೇನು? ಜನ ಹೇಳುತ್ತಾರೆ, ಪಾಪಗಳೆಲ್ಲಾ ಗಂಗೆ ದಡದಲ್ಲಿರೋ ಮರಗಳ ಮೇಲೆ ಕುಳಿತಿರುತ್ತವೆ. ಗಂಗಾಸ್ನಾನ ಮಾಡಿ ಮನುಷ್ಯ ಹಿಂದಿರುಗಿ ದಡ ಹತ್ತಿದ ಎಂದೊಡನೇ, ಆತನ ಹಿಂದಿನ ಪಾಪಗಳು ಮರಗಳಿಂದ ಹಾರಿ ಮತ್ತೆ ಆತನ ಹೆಗಲು ಹತ್ತಿಬಿಡುತ್ತವೆ. (ಎಲ್ಲರೂ ನಗುತ್ತಾರೆ.) ಆ ಹಿಂದಿನ ಪಾಪಗಳು ಮತ್ತೆ ಆತನನ್ನು ಹಿಡಿದುಕೊಂಡುಬಿಡುತ್ತವೆ. ಸ್ನಾನಮಾಡಿ ಒಂದೆರಡು ಹೆಜ್ಜೆ ಇಡುವುದರಲ್ಲೇ ಅವು ಆತನ ಹೆಗಲು ಹತ್ತಿಬಿಡುತ್ತವೆ.

"ಅದಕ್ಕಾಗೇ ನಾನು ಹೇಳುವುದು, ಭಗವನ್ನಾಮೋಚ್ಚಾರಣೆಯನ್ನೂ ಮಾಡಿ, ಜೊತೆಗೆ ಆತನಲ್ಲಿ ನಿಮಗೆ ಅನುರಾಗ ಉಂಟಾಗುವಂತೆ ಕರುಣಿಸ ಬೇಕೆಂದೂ ಆತನಿಗೆ ಪ್ರಾರ್ಥನೆಮಾಡಿ. ಭಗವಂತನನ್ನು ಪ್ರಾರ್ಥಿಸಿಕೊಳ್ಳಿ, ಈ ಎರಡು ದಿನದ ಬಾಳಿನ ಹಣ, ಕೀರ್ತಿ, ದೇಹಸುಖ ಇವುಗಳ ಮೇಲಿನ ಆಸಕ್ತಿ ದಿನದಿನಕ್ಕೂ ಕಡಮೆ ಕಡಮೆಯಾಗುತ್ತಾ ಬರುವಂತೆ ಕರುಣಿಸ ಬೇಕೆಂದು.

(ಗೋಸ್ವಾಮಿಗೆ) "ಅಂತರಂಗ ಶುದ್ಧವಾಗಿತ್ತು ಎಂದರೆ, ಎಲ್ಲಾ ಧರ್ಮಗಳ ಮೂಲಕವೂ ಭಗವಂತನನ್ನು ಪಡೆದುಕೊಳ್ಳಬಹುದು. ವೈಷ್ಣವರಿಗೂ ಭಗವಂತ ದೊರೆಯುತ್ತಾನೆ, ಶಾಕ್ತರಿಗೂ ದೊರೆಯುತ್ತಾನೆ, ವೇದಾಂತವಾದಿಗಳಿಗೂ ದೊರೆಯುತ್ತಾನೆ, ಬ್ರಾಹ್ಮಭಕ್ತರಿಗೂ ದೊರೆಯುತ್ತಾನೆ, ಮುಸಲ್ಮಾನ ಕ್ರಿಶ್ಚಿಯನ್ನರಿಗೂ ಆತ ದೊರೆಯುತ್ತಾನೆ. ಹೃತ್ಪೂರ್ವಕ ಮನಸ್ಸು ಇತ್ತು ಎಂದರೆ, ಎಲ್ಲರಿಗೂ ಆತ ದೊರೆಯುತ್ತಾನೆ.

"ಕೆಲಕೆಲವರು ಜಗಳವಾಡುತ್ತಾರೆ: 'ನಮ್ಮ ಶ್ರೀಕೃಷ್ಣನನ್ನು ಭಜಿಸದಿದ್ದರೆ ಏನೂ ದೊರೆಯದು', ಅಥವಾ, 'ನಮ್ಮ ಭಗವತಿ ಕಾಳಿಯನ್ನು ಭಜಿಸದಿದ್ದರೆ ಏನೂ ದೊರೆಯದು', ಅಥವಾ, 'ಕ್ರಿಸ್ತಧರ್ಮವನ್ನು ಒಪ್ಪಿಕೊಳ್ಳಲಿಲ್ಲ ಎಂದರೆ, ಯಾರೂ ಉದ್ಧಾರವಾಗೋ ಹಾಗೇ ಇಲ್ಲ.' ಇದು ಶುದ್ಧ ಮತಾಂಧಶ್ರದ್ಧೆಯೇ. 'ನನ್ನ ಧರ್ಮವೇ ಸರಿ, ಉಳಿದವರದೆಲ್ಲಾ ತಪ್ಪು' ಎಂದು ಹೇಳುವುದು ಬಹಳ ಕೆಟ್ಟದ್ದು. ಭಗವಂತನನ್ನು ವಿವಿಧ ಮಾರ್ಗಗಳಿಂದ ಮುಟ್ಟಬಹುದು.

"ಇನ್ನು ಕೆಲವರು ಹೇಳುತ್ತಾರೆ, ಭಗವಂತ ಸಾಕಾರನೇ; ನಿರಾಕಾರನಲ್ಲ ಎಂಬುದಾಗಿ. ಇದಕ್ಕಾಗಿ ಅವರು ಜಗಳ ಆರಂಭಿಸುತ್ತಾರೆ. ವೈಷ್ಣವರು ಈ ರೀತಿಯಾಗಿ ವೇದಾಂತವಾದಿಗಳೊಡನೆ ಜಗಳ ಕಾಯುತ್ತಾರೆ.

"ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡಿದ್ದರೆ ಮಾತ್ರ ಆತನ ಸಂಬಂಧವಾಗಿ ಯಥಾರ್ಥವಾಗಿ ಹೇಳಬಹುದು. ಯಾರಿಗೆ ಭಗವಂತನ ಸಾಕ್ಷಾತ್ಕಾರ ಆಗಿದೆಯೊ ಆತನಿಗೆ ಚೆನ್ನಾಗಿ ಗೊತ್ತಿದೆ, ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು ಎಂಬುದು. ಆತ ಇನ್ನೂ ಏನೇನು ಆಗಿದಾನೊ ಅದನ್ನು ಹೇಳಲಾಗೋದಿಲ್ಲ.

"ಒಮ್ಮೆ ಕೆಲವು ಮಂದಿ ಕುರುಡರು ಒಂದು ಆನೆಯ ಹತ್ತಿರಕ್ಕೆ ಬಂದು ಸೇರಿದರು. ಯಾರೊ ಒಬ್ಬ ಅವರಿಗೆ ತಿಳಿಸಿದ, ಆ ಪ್ರಾಣಿಯ ಹೆಸರು ಆನೆ ಎಂಬುದಾಗಿ. ಆನೆ ಅವರಿಗೆ ಹೇಗೆ ತೋರಿಬರುತ್ತೆ ಎಂದು ಆ ಕುರುಡರಿಗೆ ಪ್ರಶ್ನೆ ಹಾಕಲಾಗಿ ಅವರು ಅದನ್ನು ಮುಟ್ಟಿನೋಡಲಾರಂಭಿಸಿದರು. ಒಬ್ಬ ಹೇಳಿದ, ಆನೆ ಕಂಬದ ಹಾಗೆ ಇದೆ ಎಂದು; ಆತ ಅದರ ಕಾಲನ್ನು ಮಾತ್ರ ಮುಟ್ಟಿನೋಡಿದ್ದ. ಇನ್ನೊಬ್ಬ ಹೇಳಿದ, ಅದು ಮೊರದ ಹಾಗೆ ಇದೆ ಅಂತ; ಆತ ಅದರ ಕಿವಿಯನ್ನು ಮಾತ್ರ ಮುಟ್ಟಿನೋಡಿದ್ದ. ಈ ರೀತಿಯಾಗಿ ಸೊಂಡಿಲು, ಹೊಟ್ಟೆ ಇತ್ಯಾದಿ ಮುಟ್ಟಿದವರು ಬೇರೆ ಬೇರೆ

ರೀತಿಯಾಗಿ ಹೇಳಲಾರಂಭಿಸಿದರು. ಇವರ ಹಾಗೆ ಯಾರಾರು ಭಗವಂತನನ್ನು ಯಾವಾವ ರೀತಿಯಾಗಿ ನೋಡಿದಾರೊ ಅವರು ಭಾವಿಸುತ್ತಾರೆ, ಭಗವಂತ ತಾವು ನೋಡಿದ ರೀತಿಯಲ್ಲಿ ಅಲ್ಲದೆ ಬೇರೆ ಯಾವ ರೀತಿಯಲ್ಲೂ ಇಲ್ಲವೇ ಇಲ್ಲ ಎಂಬುದಾಗಿ.

(ಗೋಸ್ವಾಮಿಗೆ) "ಭಗವಂತ ಕೇವಲ ಸಾಕಾರ ಅಂತ ಹೇಳಿಬಿಟ್ಟರೇ ಹೇಗಾದೀತು? ಭಗವಂತ ಶ್ರೀಕೃಷ್ಣನ ರೂಪದಲ್ಲಿ ಬಂದಿದ್ದ ಹಾಗೆ, ಮನುಷ್ಯದೇಹ ಧಾರಣೆಮಾಡಿಕೊಂಡುಬರುತ್ತಾನೆ ಎಂಬುದು ಖಂಡಿತ ಸತ್ಯ; ವಿವಿಧ ರೂಪಗಳನ್ನು ಧರಿಸಿ ಭಕ್ತರಿಗೆ ಗೋಚರನಾಗುತ್ತಾನೆ ಎಂಬುದೂ ಸತ್ಯ. ಆದರೆ ಆತ ನಿರಾಕಾರ ಎಂಬುದೂ ಸತ್ಯ; ಆತ ಅಖಂಡ ಸಚ್ಚಿದಾನಂದ ಬ್ರಹ್ಮ. ವೇದದಲ್ಲಿ ಹೇಳಿದೆ, ಆತ ಸಾಕಾರ ನಿರಾಕಾರ ಎರಡೂ ಎಂದು. ಅದರಲ್ಲಿ ಹೇಳಿದೆ, ಆತ ಸಗುಣನೂ ಹೌದು, ನಿರ್ಗುಣನೂ ಹೌದು ಎಂದು.

"ಇದು ಹೇಗೆ ಗೊತ್ತೆ? ಸಚ್ಚಿದಾನಂದ, ಅನಂತ ಸಾಗರವಿದ್ದ ಹಾಗೆ. ಶೈತ್ಯದ ದೆಸೆಯಿಂದ ಸಾಗರದ ನೀರು ಹಿಮ ಕಟ್ಟಿ ವಿವಿಧ ಹಿಮಗಡ್ಡೆಗಳ ರೂಪ ತಾಳಿ ಸಾಗರದ ನೀರಿನಲ್ಲಿ ತೇಲಾಡುತ್ತಿರುತ್ತದೆ. ಅದೇ ರೀತಿಯಾಗಿ ಭಕ್ತಿ ಎಂಬ ಶೈತ್ಯದ ದೆಸೆಯಿಂದ ಸಚ್ಚಿದಾನಂದ ಸಾಗರದಲ್ಲಿ ಭಗವಂತನ ಅನೇಕ ರೂಪಗಳನ್ನು ನೋಡಬಹುದು. ಆಕಾರಗಳು ಭಕ್ತರಿಗಾಗಿ ಮಾತ್ರವೇ. ಆದರೆ ಜ್ಞಾನಸೂರ್ಯ ಉದಯಿಸಿದ ಎಂದರೆ ಹಿಮಗಡ್ಡೆಗಳೆಲ್ಲಾ ಕರಗಿ ಎಂದಿನ ನೀರಾಗುತ್ತವೆ. ಮೇಲೆ ನೀರು ಕೆಳಗೆ ನೀರು, ಎಲ್ಲೆಲ್ಲೂ ನೀರೇ ನೀರು. ಇದಕ್ಕಾಗೇ ಶ್ರೀಮದ್ಭಾಗವತದ ಒಂದು ಸ್ತೋತ್ರ ಹೇಳುತ್ತದೆ: 'ಹೇ ಭಗವಂತ, ನೀನೇ ನಿರಾಕಾರ. ನಮ್ಮ ಮುಂದೆ ನೀನು ಮನುಷ್ಯ ರೂಪ ಧರಿಸಿ ಸುತ್ತಾಡುತ್ತಿದೀಯೆ; ಆದರೆ ವೇದದಲ್ಲಿ ನಿನ್ನನ್ನೇ ವಾಙ್ಮನಾತೀತ ಎಂಬುದಾಗಿ ಹೇಳಿದೆ.'

"ಆದರೆ ನೀನು ಹೇಳಬಹುದು ಕೆಲಕೆಲವು ಭಕ್ತರಿಗಾಗಿ ಭಗವಂತ ನಿತ್ಯ ಸಾಕಾರ ರೂಪ ತಾಳುತ್ತಾನೆ ಎಂಬುದಾಗಿ. ಸಾಗರದಲ್ಲಿ ಕೆಲವು ಸ್ಥಳಗಳಿವೆ, ಅಲ್ಲಿ ಹಿಮಗಡ್ಡೆ ಕರಗುವುದೇ ಇಲ್ಲ. ಅಲ್ಲಿ ಅದು ಸ್ಫಟಿಕಾಕಾರವನ್ನು ತಾಳುತ್ತದೆ."

ಕೇದಾರ: "ವ್ಯಾಸಮಹರ್ಷಿ ತನ್ನ ಮೂರು ಅಪರಾಧಕ್ಕಾಗಿ ಭಗವಂತನಿಂದ ಕ್ಷಮೆ ಬೇಡಿದ ಎಂಬುದಾಗಿ ಭಾಗವತದಲ್ಲಿ ಹೇಳಿದೆ.

ಆತ ಅದರಲ್ಲಿ ಪ್ರಾರ್ಥನೆ ಮಾಡಿದಾನೆ: 'ಹೇ ಭಗವಂತ, ನೀನು ನಿರಾಕಾರ, ಆದರೆ ನಾನು ನನ್ನ ಧ್ಯಾನದ ಸಮಯದಲ್ಲಿ ನಿನಗೆ ಸಾಕಾರ ರೂಪ ಕಲ್ಪಿಸಿ ಕೊಂಡಿದೇನೆ; ನೀನು ವಾಗತೀತ, ಆದರೆ ನಾನು ನಿನ್ನನ್ನು ಸ್ತುತಿಸಿದೇನೆ; ನೀನು ಸರ್ವವ್ಯಾಪಿ, ಆದರೆ ನಾನು ಪವಿತ್ರ ಸ್ಥಳಗಳಿಗೆ ತೀರ್ಥಯಾತ್ರೆಗಾಗಿ ಹೋಗಿದೇನೆ. ಹೇ ಭಗವಂತ, ಕೃಪೆಮಾಡಿ ನನ್ನ ಈ ಮೂರು ಅಪರಾಧಗಳನ್ನು ಕ್ಷಮಿಸಿಬಿಡು.'"

ಶ್ರೀರಾಮಕೃಷ್ಣರು: "ಹೌದು, ಭಗವಂತ ಸಾಕಾರನೂ ಹೌದು ನಿರಾಕಾರನೂ ಹೌದು. ಮತ್ತೆ ಆತ ಸಾಕಾರ ನಿರಾಕಾರಗಳಿಗತೀತನೂ ಹೌದು. ಆತ ಇದೇ ಅಂತ ಹೇಳಲಾಗೋದಿಲ್ಲ."

ರಾಖಾಲನ ತಂದೆ ಕೊಠಡಿಯಲ್ಲಿ ಕುಳಿತುಕೊಂಡಿದಾನೆ. ಈಗ ಕೆಲವು ದಿನಗಳಿಂದ ರಾಖಾಲ ಪರಮಹಂಸರೊಡನೇ ಇದಾನೆ. ರಾಖಾಲನ ತಾಯಿ ಸತ್ತ ಬಳಿಕ ಆತನ ತಂದೆ ದ್ವಿತೀಯ ವಿವಾಹ ಮಾಡಿಕೊಂಡಿದಾನೆ. ರಾಖಾಲ ಇಲ್ಲೇ ಇರುವುದರಿಂದ ಆತನನ್ನು ನೋಡಲು ಆತ ಅಡಿಗಡಿಗೆ ಬರುತ್ತಿದಾನೆ. ರಾಖಾಲ ಇಲ್ಲೇ ಇರುವುದನ್ನು ನೋಡಿ ಆತ ವಿಶೇಷವಾಗಿ ಏನೂ ಬೇಡ ಅಂತ ಹೇಳಲಿಲ್ಲ. ಆತ ಒಳ್ಳೆ ಧನಿಕ ಪ್ರಾಪಂಚಿಕನಾದ್ದರಿಂದ ಆಗಾಗ ಕೋರ್ಟುಕಚೇರಿಗಳಿಗೆ ಹತ್ತುತ್ತಲೇ ಇರಬೇಕಾಗಿತ್ತು. ಪರಮಹಂಸರನ್ನು ನೋಡಲು ಅನೇಕ ಮಂದಿ ವಕೀಲರು, ಡೆಪ್ಯುಟಿ ಮ್ಯಾಜಿಸ್ಟ್ರೇಟರುಗಳು ಬರುತ್ತಿದ್ದುದರಿಂದ ಅವರೊಡನೆ ಸಮಾಲೋಚಿಸಲೂ ಆಗಾಗ ಬರುತ್ತಿದಾನೆ. ಅವರಿಂದ ಆತನಿಗೆ ಪ್ರಾಪಂಚಿಕ ಕಾರ್ಯಗಳ ಸಂಬಂಧವಾಗಿ ಅನೇಕ ಒಳ್ಳೆಯ ಸಹಾಯಕಾರಿ ಸಲಹೆಗಳು ದೊರೆಯುತ್ತಿವೆ.

ಪರಮಹಂಸರು ಆಗಾಗ ರಾಖಾಲನ ತಂದೆಯ ಕಡೆ ದೃಷ್ಟಿಹಾಕುತ್ತಿದಾರೆ. ಅವರ ಇಚ್ಛೆ ರಾಖಾಲ ಕಾಯಂ ಆಗಿ ತಮ್ಮೊಡನೇ ದಕ್ಷಿಣೇಶ್ವರ ದಲ್ಲಿ ಇದ್ದುಬಿಡಬೇಕೆಂದು.

ಶ್ರೀರಾಮಕೃಷ್ಣರು ರಾಖಾಲನ ತಂದೆಗೆ ಮತ್ತು ಭಕ್ತರಿಗೆ: "ಆಹ, ರಾಖಾಲ ಈಗ ಕೆಲವು ಕಾಲದಿಂದ ಎಂಥ ಒಳ್ಳೆ ಗುಣಗಳನ್ನು ಬೆಳಸಿ ಕೊಂಡುಬಿಟ್ಟಿದಾನೆ! ಆತನ ಮುಖವನ್ನು ದೃಷ್ಟಿಸಿ ನೋಡಿ—ಆಗಾಗ ತುಟಿಗಳು ಅಲುಗುತ್ತಿರುತ್ತವೆ. ಅಂತರ್ಯದಲ್ಲಿ ಆತ ಭಗವನ್ನಾಮೋಚ್ಚಾರಣೆ ಮಾಡುತ್ತಿರುವುದರಿಂದ ಆತನ ತುಟಿಗಳು ಅಲುಗುತ್ತಿರುತ್ತವೆ.

"ಈ ವಿಧದ ಹುಡುಗರು ನಿತ್ಯ ಸಿದ್ಧರ ಗುಂಪಿಗೆ ಸೇರಿದವರು. ಬ್ರಹ್ಮ ಜ್ಞಾನವಿಟ್ಟುಕೊಂಡೇ ಜನ್ಮ ತಳೆದಿದ್ದಾರೆ. ಸ್ವಲ್ಪ ವಯಸ್ಸಾಯಿತು ಎಂದರೇ ಇವರಿಗೆ ಗೊತ್ತಾಗಿಬಿಡುತ್ತದೆ ಸಂಸಾರದ ಸ್ಪರ್ಶವೇನಾದರೂ ಶರೀರಕ್ಕೆ ತಾಕಿತು ಎಂದರೆ ಬದುಕೋ ಹಾಗಿಲ್ಲ ಎಂಬುದಾಗಿ. ವೇದದಲ್ಲಿ ಹೋಮಾ ಪಕ್ಷಿಯ ಕಥೆ ಇದೆ. ಆ ಹಕ್ಕಿ ಆಕಾಶದಲ್ಲೇ ವಾಸವಾಗಿರುತ್ತದೆ. ಭೂಮಿಯ ಮೇಲಕ್ಕೆ ಎಂದಿಗೂ ಇಳಿದು ಬಾರದು. ಅದು ಆಕಾಶದಲ್ಲೇ ಮೊಟ್ಟೆ ಇಡುತ್ತದೆ. ಆ ಮೊಟ್ಟೆ ಬೀಳುತ್ತಲೇ ಇರುತ್ತದೆ. ಆ ಹಕ್ಕಿ ಅಷ್ಟು ಎತ್ತರದಲ್ಲಿ ವಾಸಿಸುತ್ತದೆ, ಮೊಟ್ಟೆ ಬೀಳುತ್ತ ಬೀಳುತ್ತಲೇ ಬಿರಿದು ಮರಿಯಾಗುತ್ತದೆ. ಬಳಿಕ ಮರಿ ಬೀಳಲಾರಂಭಿಸುತ್ತದೆ. ಆ ಮರಿ ಇನ್ನೂ ಅಷ್ಟು ಎತ್ತರದಲ್ಲಿ ಬೀಳುತ್ತಿರುತ್ತದೆ, ಅದು ಬೀಳುತ್ತ ಬೀಳುತ್ತ ಅದಕ್ಕೆ ರೆಕ್ಕೆ ಹುಟ್ಟುತ್ತವೆ, ಕಣ್ಣು ತೆರೆಯುತ್ತವೆ. ಆಗ ಅದರ ಅರಿವಿಗೆ ಬರುತ್ತದೆ, ತಾನು ಭೂಮಿಯ ಮೇಲೆ ಇನ್ನೇನು ಬೀಳುವುದರಲ್ಲಿದೇನೆ; ಬಿದ್ದರೆ ಒಡನೇ ಮೃತ್ಯು ಎಂಬುದಾಗಿ. ಭೂಮಿ ಕಣ್ಣಿಗೆ ಬಿತ್ತೊ ಇಲ್ಲವೊ ಒಡನೆ ಮೇಲಕ್ಕೆ ತಿರುಗಿ 'ಸೊಯ್ಞ್' ಅಂತ ತಾಯ ಕಡೆಗೆ ಹಾರಿಹೋಗುತ್ತದೆ. ಆಗ ಅದರ ಏಕಮಾತ್ರ ಗುರಿ ತಾಯನ್ನು ಮುಟ್ಟುವುದು.

"ಈ ಹುಡುಗರೆಲ್ಲ ಆ ಹಕ್ಕಿಯ ಹಾಗೆ. ಬಾಲ್ಯದಿಂದಲೇ ಸಂಸಾರ ಕಂಡರೆ ಭಯ. ಇವರ ಒಂದೇ ಒಂದು ಚಿಂತನೆ ಯಾವ ರೀತಿಯಾಗಿ ಭಗವತಿಯನ್ನು ಮುಟ್ಟುವುದು, ಯಾವ ರೀತಿಯಾಗಿ ಭಗವಂತನ ಸಾಕ್ಷಾತ್ಕಾರ ಪಡೆಯುವುದು ಎಂಬುದಾಗಿ.

"ನೀವು ಕೇಳಬಹುದು: 'ಪ್ರಾಪಂಚಿಕರ ಹೊಟ್ಟೆಯಲ್ಲಿ ಹುಟ್ಟಿ, ಪ್ರಾಪಂಚಿಕರ ಸಹವಾಸದಲ್ಲಿ ಬೆಳೆದು ಇಂಥ ಭಕ್ತಿ, ಇಂಥ ಜ್ಞಾನ ಇವರಿಗೆ ಬಂದಿರೋ ಬಗೆ ಹೇಗೆ?' ಇದಕ್ಕೆ ವಿವರಣೆ ಕೊಡಬಹುದು. ಒಂದು ಪಕ್ಷ ತಿಪ್ಪೆ ಗುಂಡಿಗೆ ಬಟಾಣಿ ಕಾಳು ಬಿದ್ದರೆ ಅಲ್ಲೂ ಅದು ಬಟಾಣಿ ಗಿಡವಾಗೇ ಹುಟ್ಟುತ್ತದೆ. ಆ ಗಿಡದ ಬಟಾಣಿ ಕಾಳೂ ಎಷ್ಟೋ ಉಪಯೋಗಕ್ಕೆ ಬರುತ್ತವೆ. ಬಟಾಣಿ ತಿಪ್ಪೆಗುಂಡಿಗೆ ಬಿದ್ದುಬಿಟ್ಟದ್ದರಿಂದ ಅದು ಅಲ್ಲಿ ಬೇರೆ ಗಿಡವಾಗಿ ಹುಟ್ಟಿಬಿಟ್ಟೀತೆ?

"ಆಹಾ, ರಾಖಾಲ ಈಗ ಎಂಥ ಗುಣಶಾಲಿಯಾಗಿಬಿಟ್ಟಿದಾನೆ! ಆತ ಹಾಗೆ ಏಕೆ ಆಗಬಾರದು? ಸುವರ್ಣಗಡ್ಡೆ ಒಳ್ಳೆಯದಾಗಿದ್ದರೆ ಅದರ

ಮೊಳಕೆಯೂ ಒಳ್ಳೆಯದಾಗಿರುತ್ತದೆ. (ಎಲ್ಲರೂ ನಗುತ್ತಾರೆ.) ತಂದೆಯಂತೆ ಮಗ."

ಮಾಸ್ಟರ್ ಏಕಾಂತದಲ್ಲಿ ಗಿರೀಂದ್ರನಿಗೆ: "ಭಗವಂತನ ಸಾಕಾರ ನಿರಾಕಾರದ ಸಂಬಂಧವಾಗಿ ಇವರು ಎಷ್ಟು ಚೆನ್ನಾಗಿ ವಿವರಿಸಿ ತಿಳಿಸಿದರು! ವೈಷ್ಣವರು ಭಗವಂತ ಕೇವಲ ಸಾಕಾರ ಅಂತಲೇ ಹೇಳುತ್ತಾರೆ ಅಂತ ಕಾಣುತ್ತೆ?"

ಗಿರೀಂದ್ರ: "ಹಾಗೇ ಅಂತ ಕಾಣುತ್ತೆ. ಅವರು ಒಂದೇ ಸ್ವರದವರು:"

ಮಾಸ್ಟರ್: "ಭಗವಂತ 'ನಿತ್ಯ ಸಾಕಾರ' ಅಂತ ಹೇಳಿದರಲ್ಲ ಅದು ನಿನಗೆ ಅರ್ಥವಾಯಿತೆ? ಆ ಸ್ಫಟಿಕದ ವಿಷಯ? ಅದು ನನಗೆ ಸರಿಯಾಗಿ ಅರ್ಥವಾಗಲಿಲ್ಲ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಏನು ಸಮಾಚಾರ? ಏನು ಮಾತಾಡಿಕೊಳ್ಳುತ್ತಿದೀರಿ?"

ಮಾಸ್ಟರ್ ಮತ್ತು ಗಿರೀಂದ್ರ ನಕ್ಕು ಸುಮ್ಮನಿದ್ದುಬಿಟ್ಟರು.

ಅಪರಾಹ್ನ. ಭಕ್ತರು ಪಂಚವಟಿಯಲ್ಲಿ ಹಾಡುತ್ತಿದಾರೆ. ಪರಮಹಂಸರೂ ಅವರೊಡನೆ ಸೇರಿ ಹಾಡಲಾರಂಭಿಸಿದಾರೆ. ಎಲ್ಲರೂ ಕೂಡಿ ಭಗವತಿಯ ಸಂಬಂಧವಾಗಿ ಹಾಡುತ್ತಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯುಂ ಭರದಿ . . .
(ಉ. ೯೭೬)

ಹಾಡುವುದು ಮುಂದುವರಿಯಿತು. ಪರಮಹಂಸರು ಭಕ್ತರೊಡನೆ ನರ್ತಿಸುತ್ತಿದಾರೆ. ಭಕ್ತರು ಹಾಡುತ್ತಿದಾರೆ:

ಸಾಗುತಿಹುದು ಚಿತ್ತಭೃಂಗ
ಕಾಳೀಪದ ನೀಲ ಕಮಲ ಮಧುಪಾನದ ಆಸೆಗೆ! . . . (ಉ. ೧೩೫)

ಕೀರ್ತನೆ ಮುಂದುವರಿಯುತ್ತಿದೆ:

ನಿನ್ನದೇ ಈ ಯಂತ್ರ? ಎಂಟು ಗೇಣಿನ ಬೊಂಬೆ!
ಯಾವ ಆಟಕೆ ಇದನು ನೀ ಮಾಡಿದೆ?
ಒಡಲ ಯಂತ್ರದೊಳಡಗಿ ಅದರ ಸೂತ್ರವ ಹಿಡಿದು
ನೀನೆ ಈ ಜೀವವನು ನಡಸುತಿರುವೆ!

ಅದನರಿಯದೀ ಯಂತ್ರ ತಾನೆ ನಡೆಯುವೆನೆಂಬ
ಮಮಕಾರ ಭ್ರಾಂತಿಯಲಿ ಸಾಗುತ್ತಿದೆ.
ನೀನೆ ಚಾಲಕಶಕ್ತಿ—ಎಂದರಿತ ಜೀವಕ್ಕೆ
ಯಂತ್ರಭಾವವು ಮತ್ತೆ ಉಳಿವುದುಂಟೆ?
ಆದರೂ ಹಲಕೆಲವು ಯಂತ್ರಗಳು ಕಾಳಿಯನು
ಪ್ರೇಮಸೂತ್ರದಿ ಕಟ್ಟಿ ಸಾಗುತ್ತಿವೆ!

ಇಂದು ಎಲ್ಲರ ಹೃದಯದಲ್ಲೂ ಆನಂದ ಸುಮ್ಮನೆ ಉಕ್ಕಿ ಉಕ್ಕಿ ಹರಿಯುತ್ತಿದೆ.

ಪರಮಹಂಸರು ಪಂಚವಟಿಯಿಂದ ಎದ್ದು ತಮ್ಮ ಕೊಠಡಿಗೆ ಬರುತ್ತಿದಾರೆ. ಮಾಸ್ಟರ್ ಅವರನ್ನು ಹಿಂಬಾಲಿಸುತ್ತಿದಾನೆ. ಬಕುಳ ವೃಕ್ಷದ ಹತ್ತಿರಕ್ಕೆ ಬಂದಾಗ ತ್ರೈಲೋಕ್ಯನನ್ನು ಸಂಧಿಸಿದರು. ಆತ ಪರಮಹಂಸರಿಗೆ ಪ್ರಣಾಮಮಾಡಿದ.

ಶ್ರೀರಾಮಕೃಷ್ಣರು: "ಅವರು ಪಂಚವಟಿಯಲ್ಲಿ ಹಾಡುತ್ತಿದಾರೆ. ಅಲ್ಲಿಗೆ ಹೋಗೋದಿಲ್ಲವೆ?"

ತ್ರೈಲೋಕ್ಯ: "ನಾನು ಅಲ್ಲಿಗೆ ಹೋಗಿ ಏನುಮಾಡಲಿ?"

ಶ್ರೀರಾಮಕೃಷ್ಣರು: "ಏಕೆ, ಕುಳಿತು ಆನಂದಪಡು."

ತ್ರೈಲೋಕ್ಯ: "ಒಮ್ಮೆ ಆಗಲೇ ಅಲ್ಲಿಗೆ ಹೋಗಿದ್ದೆ."

ಶ್ರೀರಾಮಕೃಷ್ಣರು: "ಒಳ್ಳೇದು, ಒಳ್ಳೇದು! ಹಾಗಾದರೆ ಸರಿ."

ಈಗ ಸಾಯಂಕಾಲ ಆರು. ಪರಮಹಂಸರು ಭಕ್ತರೊಡನೆ ತಮ್ಮ ಕೊಠಡಿಯ ಆಗ್ನೇಯ ವರಾಂಡದಲ್ಲಿ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಸಂಸಾರವನ್ನು ತ್ಯಜಿಸಿದ ಸಾಧು ಭಗವನ್ನಾಮವನ್ನು ಜಪಿಸೇ ಜಪಿಸುತ್ತಾನೆ. ಆತ ಹಾಗೆ ಮಾಡಬೇಕಾದ್ದೆ. ಆತನಿಗೆ ಬೇರೇನೂ ಕೆಲಸವೇ ಇಲ್ಲ. ಆತ ಭಗವಚ್ಚಿಂತನೆ ಮಾಡುತ್ತಿದ್ದರೆ ಅದು ಒಂದು ಆಶ್ಚರ್ಯವಾದ ವಿಷಯವೇನಲ್ಲ. ಆತ ಭಗವಚ್ಚಿಂತನೆ ಮಾಡದೆ ಇದ್ದ ಎಂದರೆ, ಭಗವನ್ನಾಮೋಚ್ಚಾರಣೆ ಮಾಡದೆ ಇದ್ದ ಎಂದರೆ, ಆಗ ಜನ ಆತನನ್ನು ನಿಂದಿಸುತ್ತಾರೆ.

"ಆದರೆ ಸಂಸಾರಿ ಭಗವನ್ನಾಮ ಜಪಮಾಡಿದರೆ ಅದೀಗ ಒಂದು ದೊಡ್ಡ ವಿಷಯ. ಜನಕರಾಜನನ್ನು ನೆನಸಿಕೊಳ್ಳಿ. ಆತ ಎಂಥ ಸಾಹಸಿ! ಆತ ಎರಡು ಕತ್ತಿಗಳ ವರಸೆ ಮಾಡುತ್ತಿದ್ದ: ಒಂದು ಜ್ಞಾನದ್ದು,

ಇನ್ನೊಂದು ಕರ್ಮದ್ದು. ಒಂದು ಕಡೆ ಪೂರ್ಣ ಬ್ರಹ್ಮಜ್ಞಾನಿಯಾಗಿದ್ದ, ಇನ್ನೊಂದು ಕಡೆ ಈ ಜಗತ್ತಿನ ಕೆಲಸಕಾರ್ಯಗಳನ್ನೂ ಮಾಡುತ್ತಿದ್ದ. ಶೀಲಭ್ರಷ್ಟಳಾದ ಹೆಂಗಸು ಸಂಸಾರದ ಎಲ್ಲಾ ಕೆಲಸಗಳನ್ನೂ ಚಾಚೂ ತಪ್ಪದೆ ಮಾಡುತ್ತಾಳೆ, ಆದರೆ ಅವಳ ಮನಸ್ಸೆಲ್ಲಾ ಸರ್ವದಾ ಉಪಪತಿಯ ಮೇಲೇ ನೆಲಸಿರುತ್ತದೆ.

"ಯಾವಾಗಲೂ ಸಾಧುಸಂಗ ಇದ್ದೇ ಇರಬೇಕು. ಸಾಧು ಭಗವಂತನ ಪರಿಚಯ ಮಾಡಿಕೊಟ್ಟುಬಿಡುತ್ತಾನೆ."

ಕೇದಾರ: "ಹೌದು. ಮಹಾಪುರುಷ ಜೀವರ ಉದ್ಧಾರಕ್ಕಾಗಿ ಜನ್ಮತಳೆಯುತ್ತಾನೆ. ರೈಲ್ವೆ ಎಂಜಿನ್ ಅನೇಕ ಗಾಡಿಗಳನ್ನು ಎಳೆದು ಕೊಂಡು ಹೋಗಿಬಿಡೋ ಹಾಗೆ ಆತ ಅನೇಕರನ್ನ ಭಗವಂತನ ಕಡೆಗೆ ಕರೆದೊಯ್ದುಬಿಡುತ್ತಾನೆ. ಅಥವಾ ಆತನನ್ನ ನದಿಗೆ ಅಥವಾ ಸರೋವರಕ್ಕೆ ಹೋಲಿಸಬಹುದು. ಅದು ಎಷ್ಟೊಂದು ಜನರ ಬಾಯಾರಿಕೆಯನ್ನು ಇಂಗಿಸುತ್ತದೆ!"

ಭಕ್ತರು ಮನೆಗೆ ಹಿಂದಿರುಗಲು ಸಿದ್ಧರಾಗಿದಾರೆ. ಒಬ್ಬೊಬ್ಬರಾಗಿ ಎಲ್ಲರೂ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿ ಅವರ ಪಾದ ಧೂಳಿಯನ್ನು ತೆಗೆದುಕೊಂಡರು. ಭವನಾಥನನ್ನು ನೋಡಿ ಪರಮಹಂಸರು ಹೇಳುತ್ತಿದಾರೆ: "ನೀನೂ ಇಂದೇ ಹೋಗಬೇಡ. ನಿನ್ನನ್ನು ನೋಡಿದರೇ ನನಗೆ ಉದ್ದೀಪನವಾಗುತ್ತದೆ." ಭವನಾಥ ಇನ್ನೂ ಸಂಸಾರಕ್ಕೆ ಕಾಲು ಹಾಕಿಲ್ಲ. ವಯಸ್ಸು ಹತ್ತೊಂಬತ್ತೊ ಇಪ್ಪತ್ತೊ. ಗೌರವರ್ಣ, ಸುಂದರ ದೇಹ. ಭಗವನ್ನಾಮ ಆತನ ಕಿವಿಗೆ ಬಿತ್ತು ಎಂದರೆ, ಆತನ ಕಣ್ಣುಗಳಿಂದ ಪ್ರೇಮಾಶ್ರು ಸುರಿಯುತ್ತದೆ. ಪರಮಹಂಸರು ಆತನನ್ನು ಸಾಕ್ಷಾತ್ ನಾರಾಯಣನೆ ಏನೊ ಎಂಬಂತೆ ನೋಡುತ್ತಿದಾರೆ.

೨೯ನೆ ಮಾರ್ಚ್ ೧೮೮೩, ಫಾಲ್ಗುಣ ಕೃಷ್ಣ ಪಂಚಮಿ, ಗುರುವಾರ.

ಪರಮಹಂಸರು ಮಧ್ಯಾಹ್ನದ ಊಟದನಂತರ ಸ್ವಲ್ಪಹೊತ್ತು ವಿಶ್ರಮಿಸಿಕೊಂಡರು. ಅಷ್ಟರಲ್ಲಿ ಕೆಲವು ಮಂದಿ ಭಕ್ತರು ಕಲ್ಕತ್ತದಿಂದ ಬಂದು ಸೇರಿದರು. ಅವರ ಮಧ್ಯೆ ಅಮೃತ ಮತ್ತು ಹೆಸರಾಂತ ಬ್ರಾಹ್ಮ ಸಮಾಜದ ಅನುಯಾಯಿ ತ್ರೈಲೋಕ್ಯ ಕುಳಿತಿದಾರೆ.

ರಾಖಾಲನ ಶರೀರಾರೋಗ್ಯ ಸರಿಯಾಗಿಲ್ಲ. ಅದಕ್ಕಾಗಿ ಪರಮ ಹಂಸರು ಬಹಳವಾಗಿ ಚಿಂತಿಸುತ್ತ ಭಕ್ತರಿಗೆ ಹೇಳುತ್ತಿದಾರೆ: "ಅಲ್ಲಿ

ನೋಡಿ, ರಾಖಾಲನಿಗೆ ದೇಹ ಸೌಖ್ಯವಿಲ್ಲ. ಸೋಡ ಕುಡಿದರೆ ಆತನಿಗೆ ಒಳ್ಳೆಯದಾಗುತ್ತದೆಯೇ? ಏನು ಮಾಡಲಿ ನಾನು ಈಗ? ರಾಖಾಲ, ನೀನು ಜಗನ್ನಾಥ ಪ್ರಸಾದ ತಿನ್ನು.''

ಪರಮಹಂಸರು ಹೀಗೆ ಹೇಳುತ್ತ ಹೇಳುತ್ತ ಇದ್ದ ಹಾಗೇ ಅವರಲ್ಲಿ ಒಂದು ಅದ್ಭುತ ಪರಿವರ್ತನೆ ತೋರಿಬರಲಾರಂಭಿಸಿತು. ಅವರು ರಾಖಾಲನನ್ನು ವಾತ್ಸಲ್ಯಭಾವದಿಂದ ನೋಡುತ್ತ ಪ್ರೇಮೋನ್ಮತ್ತರಾಗಿ "ಗೋವಿಂದ", "ಗೋವಿಂದ" ಎಂದು ಸಂಬೋಧಿಸಿದರು. ಅವರು ರಾಖಾಲನಲ್ಲಿ ಸಾಕ್ಷಾತ್ ನಾರಾಯಣನನ್ನೇ ನೋಡಿದರೇನು? ರಾಖಾಲ ಕಾಮಕಾಂಚನ ತ್ಯಾಗಿ ಶುದ್ಧಾತ್ಮ ಬಾಲಭಕ್ತ. ಪರಮಹಂಸರು ಭಗವತ್ಪ್ರೇಮದಿಂದ ಹಗಲಿರುಳೂ ಉನ್ಮತ್ತರು. ಬಾಲಕನಾದ ಶ್ರೀಕೃಷ್ಣನನ್ನು ನೋಡಿ ಯಶೋದೆಗೆ ಯಾವ ಭಾವ ಉಂಟಾಗುತ್ತಿತ್ತೋ, ಅದೇ ಭಾವ ರಾಖಾಲನನ್ನು ನೋಡಿ ಪರಮಹಂಸರಿಗೆ ಉಂಟಾಗಿರಬೇಕು. ಪರಮಹಂಸರು "ಗೋವಿಂದ", "ಗೋವಿಂದ" ಅಂತ ಹೇಳುತ್ತ ಗಾಢ ಸಮಾಧಿಸ್ಥರಾಗಿಬಿಟ್ಟರು. ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿ ಅವರನ್ನೇ ದೃಷ್ಟಿಸಿ ನೋಡುತ್ತಿದಾರೆ. ಪರಮಹಂಸರ ಶರೀರ ಚಿತ್ರದ ಗೊಂಬೆಯಂತೆ ಸ್ಥಿರವಾಗಿಬಿಟ್ಟದೆ. ಇಂದ್ರಿಯ ಸಮೂಹಗಳೆಲ್ಲ ತಮ್ಮ ತಮ್ಮ ಕೆಲಸಗಳಿಗೆ ರಾಜೀನಾಮೆ ಕೊಟ್ಟುಬಿಟ್ಟವೆ. ದೃಷ್ಟಿ ನಾಸಿಕಾಗ್ರದಲ್ಲಿ ಸ್ಥಿರವಾಗಿಬಿಟ್ಟದೆ. ಉಸಿರಾಡುವುದು ನಿಂತುಹೋದಂತೆಯೇ ಇದೆ. ಅವರ ಆತ್ಮಪಕ್ಷಿ ಬಹುಶಃ ಚಿದಾಕಾಶದಲ್ಲಿ ಸಂಚರಿಸುತ್ತಿದೆ ಅಂತ ಕಾಣುತ್ತೆ!

ಕಾಷಾಯವಸ್ತ್ರಧಾರಿಯಾದ ಒಬ್ಬ ಅಪರಿಚಿತ ಬಂಗಾಳಿ ವ್ಯಕ್ತಿ ಕೊಠಡಿಯನ್ನು ಪ್ರವೇಶಿಸಿ ಒಂದು ಕಡೆ ಕುಳಿತುಕೊಂಡ. ಪರಮಹಂಸರು ಕ್ರಮಕ್ರಮೇಣ ಪ್ರಕೃತಿಸ್ಥರಾಗುತ್ತಿದಾರೆ. ಭಾವಸ್ಥರಾಗೇ ತಮಗೆ ತಾವೇ ಮಾತಾಡಿಕೊಳ್ಳುತ್ತಿದಾರೆ.

ಶ್ರೀರಾಮಕೃಷ್ಣರು ಕಾಷಾಯವಸ್ತ್ರ ನೋಡಿ: "ಈ ಕಾಷಾಯವಸ್ತ್ರ ಏಕೆ? ಇದೊಂದು ಧರಿಸಿದರೆ ಎಲ್ಲಾ ಮುಗಿದ ಹಾಗೆಯೋ? ಒಬ್ಬ ಒಮ್ಮೆ ಹೇಳಿದ: 'ಈಗ ಚಂಡೀಪಠನೆ ಬಿಟ್ಟು ಮದ್ದಲೆ ಬಾಜಿಸುತ್ತಿದೇನೆ.' ಹಿಂದೆ ಚಂಡೀಪಠನೆ ಮಾಡುತ್ತಿದ್ದವನು ಈಗ ಮದ್ದಲೆ ಬಾಜಿಸುತ್ತಿದಾನೆ. (ಎಲ್ಲರೂ ನಗುತ್ತಿದಾರೆ.)

"ವೈರಾಗ್ಯದಲ್ಲಿ ಮೂರು ನಾಲ್ಕು ವಿಧ. ಸಂಸಾರದ ಬೇಗೆಯಲ್ಲಿ ಬೆಂದು ಕಾಷಾಯವಸ್ತ್ರ ಧರಿಸುವುದು; ಇದು ಹೆಚ್ಚು ಕಾಲ ನಿಲ್ಲದು. ಬಹುಶಃ ಒಬ್ಬ ವ್ಯಕ್ತಿಗೆ ಯಾವ ಕೆಲಸವೂ ಸಿಕ್ಕಲಿಲ್ಲ ಅಂತ ಇಟ್ಟುಕೊ. ಆತ ಕಾಷಾಯವಸ್ತ್ರ ಧರಿಸಿ ಕಾಶಿಗೆ ಹೋಗಿಬಿಡುತ್ತಾನೆ. ಮೂರು ತಿಂಗಳ ನಂತರ ಮನೆಗೆ ಬರೆಯುತ್ತಾನೆ: 'ನನಗೊಂದು ಕೆಲಸ ಸಿಕ್ಕಿದೆ. ಇನ್ನು ಸ್ವಲ್ಪ ದಿನಗಳಲ್ಲೇ ಊರಿಗೆ ಬರುತ್ತೇನೆ. ಇನ್ನು ನೀವು ನನ್ನ ಸಂಬಂಧ ವಾಗಿ ಚಿಂತಿಸಬೇಕಾಗಿಲ್ಲ.' ಬೇರೊಬ್ಬ ವ್ಯಕ್ತಿಗೆ ಎಲ್ಲವೂ ಇದೆ; ಯಾವು ದರ ಅಭಾವವೂ ಇಲ್ಲ. ಆದರೂ ಆತನಿಗೆ ಅವೊಂದೂ ಬೇಕಾಗಿಲ್ಲ. ಭಗ ವಂತನ ಸಾಕ್ಷಾತ್ಕಾರಕ್ಕಾಗಿ ಏಕಾಕಿಯಾಗಿ ಅಳುತ್ತಾನೆ. ಇದೇ ಯಥಾರ್ಥ ವೈರಾಗ್ಯ.

"ಸೋಗು ಸ್ವಲ್ಪವೂ ಒಳ್ಳೆಯದಲ್ಲ. ಮಿಥ್ಯಾ ವೇಷ ಖಂಡಿತ ಒಳ್ಳೆಯದಲ್ಲ. ಹೊರಗಿನ ವೇಷಕ್ಕೆ ತಕ್ಕಂತೆ ಆಂತರ್ಯದಲ್ಲಿನ ಭಾವನೆ ಅನುರೂಪವಾಗಿರದಿದ್ದರೆ ಕ್ರಮೇಣ ಅಧೋಗತಿಗೆ ಇಳಿದುಬಿಡಬೇಕಾಗು ತ್ತದೆ. ಸುಳ್ಳು ಹೇಳುತ್ತ ಹೇಳುತ್ತ ಕಪಟಿಯಾಗಿ ವ್ಯವಹರಿಸುತ್ತ ವ್ಯವ ಹರಿಸುತ್ತ ಕೊನೆಗೆ ಮನುಷ್ಯ ಭಯಭಕ್ತಿಗಳನ್ನೇ ಕಳೆದುಕೊಂಡುಬಿಡು ತ್ತಾನೆ. ಮನಸ್ಸಿನಲ್ಲಿ ಪ್ರಾಪಂಚಿಕಾಸಕ್ತಿ ಇದೆ, ಆಗಾಗ ಪತನವೂ ಆಗು ತ್ತಿದೆ, ಹೊರಗೆ ಮಾತ್ರ ಕಾಷಾಯವಸ್ತ್ರ—ಇದು ಎಷ್ಟು ಭೀಕರವಾದ್ದು! ಇದಕ್ಕೆ ಬದಲು ಬಿಳೀವಸ್ತ್ರವೇ ಮೇಲು.

"ಅಷ್ಟೇಕೆ, ಯಾರು ಸನ್ಮಾರ್ಗಿಗಳೊ ಅವರು ಅಭಿನಯದಲ್ಲಿ ಕೂಡ ಸುಳ್ಳು ಹೇಳುವುದನ್ನೇ ಆಗಲಿ ಅಥವಾ ಮಿಥ್ಯಾವ್ಯವಹಾರವನ್ನೇ ಆಗಲಿ ಮಾಡಕೂಡದು. ಒಮ್ಮೆ ನಾನು ಕೇಶವಸೇನನ ಮನೆಗೆ 'ನವ-ಬೃಂದಾವನ' ಎಂಬ ನಾಟಕ ನೋಡಲು ಹೋಗಿದ್ದೆ. ರಂಗಸ್ಥಳಕ್ಕೆ ಏನೊ ಒಂದನ್ನು ತಂದು 'ಕ್ರಾಸ್' ಅಂತ ಹೇಳಿದರು. ಬಳಿಕ ನೀರು ಪ್ರೋಕ್ಷಣೆ ಮಾಡಿ 'ಶಾಂತಿಜಲ' ಅಂತ ಹೇಳಿದರು. ಒಬ್ಬ, ಕುಡುಕನ ವೇಷ ಧರಿಸಿ ಕುಡುಕನಂತೆ ವರ್ತಿಸುತ್ತಿದ್ದುದನ್ನು ನೋಡಿದೆ."

ಒಬ್ಬ ಬ್ರಾಹ್ಮಭಕ್ತ: "ಆತ ಕು—ಬಾಬು."

ಶ್ರೀರಾಮಕೃಷ್ಣರು: "ಆ ರೀತಿಯ ವೇಷ ಧರಿಸುವುದು ಭಕ್ತನಿಗೆ ಒಳ್ಳೆಯದಲ್ಲ. ಮನಸ್ಸನ್ನು ಅಂಥವುಗಳ ಮೇಲೆ ಹೆಚ್ಚು ಕಾಲ ಇಟ್ಟರೆ ಅದು ಕೆಟ್ಟುಹೋಗಿಬಿಡುತ್ತದೆ. ಮನಸ್ಸು ಅಗಸನ ಮನೆಯಿಂದ ಬಂದ

ಮಡಿಯ ಹಾಗೆ; ಅದನ್ನು ಯಾವ ಬಣ್ಣಕ್ಕೆ ಅದ್ದಿದರೂ ಅದು ಆ ಬಣ್ಣವನ್ನು ಹಿಡಿದುಕೊಂಡುಬಿಡುತ್ತದೆ. ಸುಳ್ಳು ತಟವಟಗಳಲ್ಲಿ ಹೆಚ್ಚುಕಾಲ ಮುಳುಗಿಸಿ ಇಟ್ಟರೆ ಅದಕ್ಕೆ ಸುಳ್ಳು ತಟವಟಗಳ ಬಣ್ಣ ಹತ್ತಿಕೊಂಡುಬಿಡುತ್ತದೆ.

"ಇನ್ನೊಂದು ದಿನ 'ನಿಮಾಯಿಯ ಸನ್ಯಾಸ' ಎಂಬ ನಾಟಕ ನೋಡಲು ಕೇಶವಸೇನನ ಮನೆಗೆ ಹೋಗಿದ್ದೆ. ಕೇಶವಸೇನನ ಕೆಲವು ಮಂದಿ ಹೊಗಳುಭಟ್ಟ ಶಿಷ್ಯರು ಅಲ್ಲಿ ಸೇರಿಕೊಂಡುಬಿಟ್ಟು ಇಡೀ ನಾಟಕವನ್ನು ಕೆಡಿಸಿಬಿಟ್ಟರು. ಅವರಲ್ಲಿ ಒಬ್ಬ ಕೇಶವನನ್ನು ಹೊಗಳಿದ: 'ನೀವು ಕಲಿಯುಗದ ಚೈತನ್ಯಮಹಾಪ್ರಭು.' ಆಗ ಕೇಶವ ನನ್ನನ್ನು ತೋರಿಸಿ ನಗುತ್ತ ನಗುತ್ತ ಹೇಳಿದ: 'ಹಾಗಾದರೆ, ಅವರು?' ನಾನು ಹೇಳಿದೆ: 'ಏಕೆ, ನಾನು ನಿಮ್ಮ ದಾಸಾನುದಾಸ; ರೇಣುವಿನ ರೇಣು.' ಕೇಶವನಿಗೆ ಲೋಕಮಾನ್ಯನಾಗಬೇಕೆಂಬ ಇಚ್ಛೆ ಇತ್ತು.

(ಅಮೃತ ಮತ್ತು ತ್ರೈಲೋಕ್ಯರಿಗೆ) "ನರೇಂದ್ರ, ರಾಖಾಲ—ಗೀಖಾಲ ಈ ಹುಡುಗರೆಲ್ಲ ನಿತ್ಯಸಿದ್ಧರು. ಇವರು ಜನ್ಮಜನ್ಮದಲ್ಲಿಯೂ ಭಗವದ್ಭಕ್ತರು. ಅನೇಕರಿಗೆ ಎಷ್ಟೋ ಸಾಧನೆ-ಗೀಧನೆ ಮಾಡಿದನಂತರ ಸ್ವಲ್ಪ ಭಕ್ತಿ ಉಂಟಾಗುತ್ತದೆ. ಆದರೆ ಇವರಿಗೆ ಆಜನ್ಮದಿಂದಲೇ ಭಗವಂತನನ್ನು ಕಂಡರೆ ಪ್ರೀತಿ. ಇವರು ಒಡೆದುಮೂಡಿದ ಲಿಂಗಗಳು, ನೆಟ್ಟ ಲಿಂಗಗಳಲ್ಲ.

"ನಿತ್ಯಸಿದ್ಧರ ಗುಂಪೇ ಬೇರೆ. ಎಲ್ಲಾ ಹಕ್ಕಿಗಳ ಕೊಕ್ಕು ಬಾಗಿರೋದಿಲ್ಲ. ಇವರು ಎಂದೂ ಸಂಸಾರದಲ್ಲಿ ಆಸಕ್ತರಾದವರಲ್ಲ. ಉದಾಹರಣೆಗೆ ಪ್ರಹ್ಲಾದ.

"ಸಾಧಾರಣ ಜನರು ಸಾಧನೆ ಮಾಡುತ್ತಾರೆ, ಭಗವಂತನನ್ನು ಪ್ರೀತಿಸಿಯೂ ಪ್ರೀತಿಸುತ್ತಾರೆ; ಆದರೂ ಸಂಸಾರದಲ್ಲೂ ಆಸಕ್ತರಾಗುತ್ತಾರೆ, ಕಾಮಕಾಂಚನದಿಂದಲೂ ಮುಗ್ಧರಾಗುತ್ತಾರೆ. ಅವರು ಸಾಮಾನ್ಯ ನೊಣದ ಹಾಗೆ. ಅದು ಹೂವಿನ ಮೇಲೂ ಕುಳಿತುಕೊಳ್ಳುತ್ತದೆ, ಸಿಹಿ ತಿಂಡಿಗಳ ಮೇಲೂ ಕುಳಿತುಕೊಳ್ಳುತ್ತದೆ, ಕೊನೆಗೆ ಹೇಸಿಗೆ ಮೇಲೂ ಕುಳಿತುಕೊಳ್ಳುತ್ತದೆ.

"ಆದರೆ ನಿತ್ಯಸಿದ್ಧರು ಜೇನು ನೊಣದ ಹಾಗೆ. ಅದು ಕೇವಲ ಹೂವಿನ ಮೇಲೆ ಕುಳಿತು ಮಧುಪಾನ ಮಾಡುತ್ತದೆ. ನಿತ್ಯಸಿದ್ಧ ಭಗವದ್ರಸ

ವನ್ನು ಮಾತ್ರ ಪಾನಮಾಡುತ್ತಾನೆ. ಆತ ಎಂದಿಗೂ ವಿಷಯರಸದ ಕಡೆಗೆ ಹೋಗೋದಿಲ್ಲ.

"ನಿತ್ಯಸಿದ್ಧರ ಭಕ್ತಿ ಸಾಧನೆ-ಗೀಧನೆ ಮಾಡಿದರೆ ಉಂಟಾಗುತ್ತದೆಯಲ್ಲ ಅದು ಆ ತರದ್ದಲ್ಲ. ಇಷ್ಟೊಂದು ಜಪ, ಇಷ್ಟೊಂದು ಧ್ಯಾನ ಮಾಡಬೇಕು, ಈ ರೀತಿಯಾಗಿ ಪೂಜೆಮಾಡಬೇಕು ಇವೆಲ್ಲಾ 'ವಿಧಿವತ್' ಭಕ್ತಿಗೆ ಸೇರಿವೆ. ಇದು ಗದ್ದೆಗೆ ಪೈರು ಹಾಕಿದ್ದರೆ ಅದನ್ನು ದಾಟಬೇಕಾದರೆ ತೆವರಿ ಮೇಲೆ ಸುತ್ತಿ ಸುತ್ತಿ ನಡೆದುಹೋಗಬೇಕಾಗಿಬರೋ ಹಾಗೆ. ಅಥವಾ ಹತ್ತಿರವೇ ಇರೋ ಹಳ್ಳಿಯನ್ನ ದೋಣಿಯಲ್ಲಿ ಕುಳಿತು ಸೊಟ್ಟಸೊಟ್ಟವಾಗಿ ಸುತ್ತಿ ಹರಿಯುತ್ತಿರುವ ನದಿಯ ಮೂಲಕ ತಲುಪಬೇಕಾಗಿಬರೋ ಹಾಗೆ.

"ರಾಗಭಕ್ತಿ, ಪ್ರೇಮಭಕ್ತಿ, ಭಗವಂತ ತನ್ನವನೇ ಎಂಬ ಪ್ರೀತಿ ಉಂಟಾಯಿತು ಎಂದರೆ, ಆಗ ವಿಧಿನಿಯಮಗಳಾವೂ ಬೇಕಾಗೋದಿಲ್ಲ. ಆಗ ಅದು ಕೊಯ್ಲಾದ ಗದ್ದೆಗಳ ಮೇಲೆ ಹಾದುಹೋದ ಹಾಗೆ. ತೆವರಿ ಮೇಲೆ ನಡೆದುಕೊಂಡು ಹೋಗಬೇಕಾಗಿರೋದಿಲ್ಲ. ಯಾವ ದಿಕ್ಕಿಗೆ ಬೇಕಾದರೂ ನೇರವಾಗಿ ಹೋದರೇ ಆಯಿತು.

"ಪ್ರವಾಹ ಬಂತು ಎಂದರೆ ಮತ್ತೆ ಸೊಟ್ಟ ಸೊಟ್ಟವಾಗಿ ತಿರುಗಿಕೊಂಡು ಹರಿಯುತ್ತಿರುವ ನದಿಯ ಮೂಲಕ ಹಾದುಹೋಗಬೇಕಾಗಿರೋದಿಲ್ಲ. ಆಗ ಗದ್ದೆಗಳ ಮೇಲೆಲ್ಲಾ ಒಂದು ಜಲ್ಲೆ ಉದ್ದದ ನೀರು. ನೇರವಾಗಿ ದೋಣಿ ನಡಸಿಕೊಂಡು ಹೋಗಿಬಿಟ್ಟರೇ ಮುಗಿಯಿತು.

"ಈ ರಾಗಭಕ್ತಿ, ಅನುರಾಗ, ಪ್ರೀತಿ ಬಾರದೆ ಇತ್ತು ಎಂದರೆ ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲ."

ಅಮೃತ: "ಮಹಾಶಯರೆ, ನಿಮಗೆ ಸಮಾಧಿ ಅವಸ್ಥೆಯಲ್ಲಿ ಏನು ಬೋಧೆಯಾಗುತ್ತದೆ?"

ಶ್ರೀರಾಮಕೃಷ್ಣರು: "ಕೀಟ ಭ್ರಮರದ ಮೇಲೆ ಚಿಂತಿಸುತ್ತ ಕೊನೆಗೆ ಭ್ರಮರವೇ ಆಗಿಬಿಡುತ್ತದೆ ಎಂಬುದನ್ನು ನೀನು ಕೇಳಿರಬೇಕು. ನನಗೆ ಆಗ ಹೇಗನಿಸುತ್ತದೆ ಗೊತ್ತೆ? ಪಾತ್ರೆಯಲ್ಲಿ ಇಟ್ಟಿದ್ದ ಮೀನನ್ನು ಗಂಗೆಗೆ ಬಿಟ್ಟರೆ ಅದಕ್ಕೆ ಹೇಗೊ ಹಾಗೆ."

ಅಮೃತ: "ಆಗ 'ಅಹಂ' ಒಂದು ಕಿಂಚಿತ್ತೂ ಉಳಿದುಕೊಳ್ಳದೇ?"

ಶ್ರೀರಾಮಕೃಷ್ಣರು: "ಹೌದು, ನನ್ನಲ್ಲಿ ಪ್ರಾಯಿಕವಾಗಿ ಕಿಂಚಿತ್ 'ಅಹಂ' ಉಳಿದುಕೊಂಡಿರುತ್ತದೆ. ಚಿನ್ನದ ಗಟ್ಟಿಯನ್ನು ಒರೆಗಲ್ಲಿನ

ಮೇಲೆ ಎಷ್ಟೇ ಉಜ್ಜಿದರೂ ಕೊನೆಗೆ ಒಂದು ಕಿಂಚಿತ್ ಭಾಗ ಕೈಯಲ್ಲಿ ಉಳಿದೇ ಉಳಿದುಕೊಳ್ಳುತ್ತದೆ. ಮತ್ತೆ ಉದಾಹರಣೆಗೆ ದೊಡ್ಡ ಬೆಂಕಿಯನ್ನು ತೆಗೆದುಕೊ; 'ಅಹಂ' ಎಂಬುದು ಅದರ ಒಂದು ಕಿಡಿ ಇದ್ದ ಹಾಗೆ. ಸಮಾಧಿಯಲ್ಲಿ ಬಾಹ್ಯಜ್ಞಾನ ಹೊರಟುಹೋಗುತ್ತದೆ; ಆದರೆ ಭಗವಂತ ಪ್ರಾಯಿಕವಾಗಿ ಕಿಂಚಿತ್ 'ಅಹಂ' ಉಳಿಸಿಡುತ್ತಾನೆ—ವಿಲಾಸಕ್ಕೋಸ್ಕರ. 'ನಾನು', 'ನೀನು' ಎಂಬ ಭೇದಬುದ್ಧಿ ಉಳಿದರೆ ತಾನೆ ಆಸ್ವಾದನೆ ಸಾಧ್ಯ.

"ಕೆಲವು ವೇಳೆ ಭಗವಂತ ಆ ಕಿಂಚಿತ್ 'ಅಹಂ' ಅನ್ನೂ ನಿರ್ಮೂಲ ಮಾಡಿಬಿಡುತ್ತಾನೆ. ಆಗ ನಿರ್ವಿಕಲ್ಪ ಸಮಾಧಿ, ಜಡ ಸಮಾಧಿ ಉಂಟಾಗುತ್ತದೆ. ಆಗ ದೊರೆಯೋ ಅನುಭವವನ್ನ ಬಾಯಿಂದ ಹೇಳಲಾಗೋದಿಲ್ಲ. ಒಂದು ಉಪ್ಪಿನ ಬೊಂಬೆ ಸಮುದ್ರದ ಆಳ ಕಂಡುಹಿಡಿಯಲು ಹೋಯಿತು. ಸ್ವಲ್ಪ ಇಳಿಯುವುದರೊಳಗೇ ಅದು ಕರಗಿಹೋಗಿಬಿಟ್ಟಿತು. ಸಮುದ್ರದೊಡನೆ ಒಂದಾಗಿಬಿಟ್ಟಿತು. ಆಗ ಸಮುದ್ರದಿಂದ ಹೊರಕ್ಕೆ ಬಂದು ಸಮುದ್ರ ಎಷ್ಟು ಆಳ ಎಂಬುದಾಗಿ ತಿಳಿಸಲು ಯಾರು ತಾನೆ ಉಳಿದುಕೊಂಡಿರುತ್ತಾರೆ?"



೯

# ಬ್ರಾಹ್ಮಭಕ್ತರಿಗೆ ಉಪದೇಶ

೭ ನೆ ಏಪ್ರಿಲ್ ೧೮೮೩, ಚೈತ್ರ ಅಮಾವಾಸ್ಯೆ, ಶನಿವಾರ.

ಪರಮಹಂಸರು ಭವನಾಥ, ರಾಖಾಲ, ಮಾಸ್ಟರ್ ಇವರೇ ಮೊದಲಾದವರೊಡನೆ ಕಲ್ಕತ್ತದಲ್ಲಿರುವ ಬಲರಾಮನ ಮನೆಗೆ ಬಂದಿದಾರೆ. ಬಲರಾಮ ಪರಮಹಂಸರ ಇಚ್ಛೆಗನುಸಾರ ಕೆಲವು ಮಂದಿ ಯುವಕರನ್ನು ಊಟಕ್ಕೆ ಕರೆದಿದಾನೆ. ಪರಮಹಂಸರು ಅನೇಕ ವೇಳೆ ಆತನಿಗೆ ಹೇಳಿದ್ದರು: "ಆಗಾಗ ಈ ಹುಡುಗರನ್ನು ಮನೆಗೆ ಕರೆದುಕೊಂಡುಹೋಗಿ ಅನ್ನ ಹಾಕು; ಅದರಿಂದ ಅನೇಕ ಸಾಧುಗಳಿಗೆ ಅನ್ನ ಹಾಕಿದ ಪುಣ್ಯ ಬರುತ್ತದೆ" ಎಂಬುದಾಗಿ. ಪರಮಹಂಸರು ತಮ್ಮ ಯುವಕ ಶಿಷ್ಯರನ್ನು ಕಾಮಕಾಂಚನ ಸ್ಪರ್ಶವಿಹೀನರಾದ ಭಗವಂತನ ಅಂಶಗಳೇ ಎಂಬುದಾಗಿ ಭಾವಿಸುತ್ತಿದ್ದರು.

ಕೆಲವು ದಿನಗಳ ಹಿಂದೆ ಪರಮಹಂಸರು "ನವಬೃಂದಾವನ" ಎಂಬ ನಾಟಕ ನೋಡಲು ಕೇಶವಸೇನನ ಮನೆಗೆ ಹೋಗಿದ್ದರು. ನರೇಂದ್ರ, ರಾಖಾಲ ಅವರನ್ನು ಹಿಂಬಾಲಿಸಿದ್ದರು. ನರೇಂದ್ರನೂ ಆ ನಾಟಕದಲ್ಲಿ ಪಾರ್ಟು ತೆಗೆದುಕೊಂಡಿದ್ದ. ಕೇಶವಸೇನ ಅದರಲ್ಲಿ ಪವಹಾರಿಬಾಬನ ಪಾರ್ಟು ತೆಗೆದುಕೊಂಡಿದ್ದ.

ಶ್ರೀರಾಮಕೃಷ್ಣರು: "ಕೇಶವಸೇನ ಸಾಧುವಿನ ವೇಷ ಧರಿಸಿ ರಂಗಭೂಮಿಯಲ್ಲಿ ಶಾಂತಿ ಜಲವನ್ನು ಪ್ರೋಕ್ಷಿಸಲು ಆರಂಭಿಸಿದ. ಅದು ನನಗೆ ಸರಿ ಅಂತ ತೋರಲಿಲ್ಲ. ಅಭಿನಯ ಮುಗಿದ ಮೇಲೆ 'ಶಾಂತಿಜಲ' ಪ್ರೋಕ್ಷಿಸುವುದೆ!

"ಇನ್ನೊಬ್ಬ (ಕು—ಬಾಬು) ಪಾಪಪುರುಷನ ಪಾರ್ಟು ತೆಗೆದುಕೊಂಡಿದ್ದ. ಆ ರೀತಿಯ ಪಾರ್ಟು ತೆಗೆದುಕೊಳ್ಳುವುದು ಒಳ್ಳೆಯದಲ್ಲ. ಯಾರೂ ಪಾಪಕಾರ್ಯಗಳನ್ನ ಮಾಡಕೂಡದು—ಪಾಪಿಯಂತೆ ಅಭಿನಯಿಸುವುದೂ ಶ್ರೇಯಸ್ಕರವಲ್ಲ."

ನರೇಂದ್ರನಿಗೆ ಶರೀರಾರೋಗ್ಯ ಸರಿಯಾಗಿಲ್ಲ. ಆದರೆ ಪರಮಹಂಸರಿಗೆ ಆತನ ಬಾಯಿಂದ ಹಾಡು ಕೇಳಬೇಕೆಂಬುದಾಗಿ ಬಹಳವಾಗಿ ಇಚ್ಛೆ

ಯುಂಟಾಗಿಬಿಟ್ಟಿದೆ. ಆದ್ದರಿಂದ ನರೇಂದ್ರ ಪರಮಹಂಸರ ಇಚ್ಛೆಗನುಸಾರ ತಂಬೂರಿ ಹಿಡಿದು ಹಾಡಲಾರಂಭಿಸಿದ:

ಈ ಪ್ರಾಣಪಂಜರದಿ ಕುಳಿತು ಹಾಡುವ ಹಕ್ಕಿ,
ಅವನ ವಿಭುಗುಣಗಳನು ಕುರಿತು ಹಾಡು. . . .

ಬಳಿಕ ಹಾಡಿದ:

ವಿಶ್ವಭುವನರಂಜನ ಬ್ರಹ್ಮ ಪರಮಜ್ಯೋತಿ
ಅನಾದಿದೇವ ಜಗಪತಿ ಪ್ರಾಣಾಧಿಕ ಮೂರುತಿ.

ಮತ್ತೆ:

ದರುಶನವ ನೀಡಯ್ಯ ರಾಜರಾಜೇಶ್ವರನೆ
ನಿನ್ನ ಕರುಣೆಯ ಬೇಡಿ ಬಂದಿರುವೆನು. . . . (ಉ. ೬೪೯)

ನರೇಂದ್ರ ಮುಂದುವರಿಸುತ್ತಿದಾನೆ:

ಬಾನ ತಳಿಗೆಯೊಳಿಟ್ಟ ಹಣತೆಗಳ ರೀತಿಯಲಿ
ರವಿಶಶಿಗಳಾರತಿಯ ಬೆಳಗುತಿರಲು, . . . (ಉ. ೪೭೦)

ಮತ್ತೆ ಆತ ಹಾಡುತ್ತಿದಾನೆ:

ಉದಯಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು
ಪ್ರೇಮಸಿಂಧು ಉಕ್ಕಿ ಹರಿದು ಲೋಕಗಳೇ ನಾಂದು! . . .
(ಉ. ೩೬)

ಬಳಿಕ ಪರಮಹಂಸರ ಆಜ್ಞಾನುಸಾರ ಭವನಾಥ ಹಾಡುತ್ತಿದಾನೆ:

ನೀನೆ ದಯಾಮಯ, ಇನ್ನಾರಿರುವರು ನಿನ್ನಂದದ ಹಿತಕಾರಿ?
ನೋವುನಲಿವಿನಲಿ ಸಮೀಪಬಂಧುವು, ಶೋಕತಾಪಭಯಹಾರಿ.
ಸಂಕಟಪೂರಿತ ಮೋಹಭವಾರ್ಣವದುತ್ತರಣಕೆ ನೀ ಸಹಕಾರಿ
ಪ್ರಸನ್ನವಾಗಿಸು ಈ ಬಿರುಗಾಳಿಯ, ರಿಪುದಲವಿಪ್ಲವಕಾರೀ!
ಪಾಪದಹನ ಪರಿತಾಪವನಾರಿಸು, ವರ್ಷಿಸು ಶೀತಲವಾರಿ;
ಎಲ್ಲರು ತ್ಯಜಿಸುವ ಅಂತಿಮಕಾಲದಿ ನೀನೇ ಆಶ್ರಯಕಾರಿ!

ನರೇಂದ್ರ ಭವನಾಥನನ್ನು ಉದ್ದೇಶಿಸಿ ಪರಮಹಂಸರಿಗೆ ಹೇಳುತ್ತಿದಾನೆ: "ಈತ ಮೀನು ಎಲೆಯಡಿಕೆ ತ್ಯಾಗಮಾಡಿಬಿಟ್ಟಿದಾನೆ."

ಶ್ರೀರಾಮಕೃಷ್ಣರು: "ಏಕೆ ಹಾಗೆ? ಅವು ಏನುಮಾಡಿದುವು? ಅವು ಕೆಡುಕಾದುವೇನಲ್ಲ. ಕಾಮಕಾಂಚನ ತ್ಯಾಗವೇ ತ್ಯಾಗ.

"ರಾಖಾಲನೆಲ್ಲಿ?"

ಒಬ್ಬ ಭಕ್ತ: "ಆತ ನಿದ್ದೆಮಾಡುತ್ತಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಒಬ್ಬ ಚಾಪೆಯನ್ನು ಕಂಕುಳಲ್ಲಿ ಇರುಕಿಕೊಂಡು ಬಯಲು ನಾಟಕ ನೋಡಲು ಹೋದ. ನಾಟಕ ಶುರುವಾಗಲು ಇನ್ನೂ ಸಮಯ ಬೇಕು ಎಂಬುದನ್ನು ಕೇಳಿ ಚಾಪೆ ಹಾಸಿ ಮಲಗಿಕೊಂಡ. ಎದ್ದಾಗ ನೋಡುತ್ತಾನೆ ಎಲ್ಲಾ ಮುಗಿದುಹೋಗಿಬಿಟ್ಟಿದೆ. (ಎಲ್ಲರೂ ನಗುತ್ತಿದಾರೆ.) ಬಳಿಕ ಅವನು ಮತ್ತೆ ಚಾಪೆಯನ್ನು ಕಂಕುಳಿಗೆ ಹಾಕಿಕೊಂಡು ಮನೆಗೆ ಹಿಂದಿರುಗಿದ."

ರಾಮದಯಾಳು ಬಹಳವಾಗಿ ರೋಗಗ್ರಸ್ತನಾಗಿದಾನೆ. ಆತ ಇನ್ನೊಂದು ಕೊಠಡಿಯಲ್ಲಿ ಮಲಗಿಕೊಂಡಿದ್ದ. ಪರಮಹಂಸರು ಅಲ್ಲಿಗೆ ಹೋಗಿ ಆತನ ದೇಹಾರೋಗ್ಯ ವಿಚಾರಿಸುತ್ತಿದಾರೆ.

ಘಂಟೆ ಅಪರಾಹ್ನ ನಾಲ್ಕು. ಕೆಲವು ಮಂದಿ ಬ್ರಾಹ್ಮಭಕ್ತರು ಬಂದಿದಾರೆ. ಪರಮಹಂಸರು ಅವರೊಡನೆ ಮಾತುಕತೆ ಆಡುತ್ತಿದಾರೆ.

ಒಬ್ಬ ಬ್ರಾಹ್ಮಭಕ್ತ: "ಮಹಾಶಯರೆ, ಪಂಚದಶಿ ಓದಿದೀರೇನು?"

ಶ್ರೀರಾಮಕೃಷ್ಣರು: "ಮೊದಮೊದಲು ಇಂಥ ಪುಸ್ತಕಗಳು ಏನು ಹೇಳುತ್ತವೆ ಎಂಬುದನ್ನು ತಿಳಿದುಕೊಂಡು ವಿಚಾರದಲ್ಲಿ ತೊಡಗಬೇಕು. ಬಳಿಕ—

ಅಂತರಂಗದಲಿ ಶ್ರೀ ಘನಶ್ಯಾಮೆಯ
ಆದರಿಸೆಲೆ ಮನವೇ.
ನಮ್ಮಿಬ್ಬರ ಹೊರತಿನ್ನಾರೂ ತಿಳಿಯದ
ರೀತಿಯೊಳವಳೆಡೆ ಸಾಗುವೆವೇ!

"ಸಾಧನೆಯ ಅವಸ್ಥೆಯಲ್ಲಿ ಅವು ಏನು ಹೇಳುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಭಗವಂತನ ಸಾಕ್ಷಾತ್ಕಾರ ದೊರೆತನಂತರ ಜ್ಞಾನದ ಅಭಾವವಿರದು. ಬಳಿಕ ಭಗವತಿ ಜ್ಞಾನರಾಶಿಯನ್ನು ನೂಕಿ ಕೊಡುತ್ತಲೇ ಇರುತ್ತಾಳೆ.

"ಮಗು ಬರೆಯಲು ಆರಂಭಿಸಿದಾಗ ಮೊದಮೊದಲು ಅಕ್ಷರವಾದ ಮೇಲೆ ಅಕ್ಷರವನ್ನು ನೋಡಿ ನೋಡಿ ಬರೆಯಬೇಕಾಗುತ್ತದೆ. ಆದರೆ ಕ್ರಮೇಣ ಅದು ನೀರು ಕುಡಿದ ಹಾಗೆ ಬರೆದುಕೊಂಡು ಹೋಗಿಬಿಡುತ್ತದೆ.

"ಚಿನ್ನ ಕರಗಿಸುವಾಗ ಬಹಳ ಚಟುವಟಿಕೆಯಿಂದ ಕೆಲಸ ಮಾಡಬೇಕು. ಒಂದು ಕೈಯಲ್ಲಿ ತಿದಿ, ಇನ್ನೊಂದು ಕೈಯಲ್ಲಿ ಬೀಸಣಿಗೆ,

ಬಾಯಲ್ಲಿ ಊದುಕೊಳವೆ— ಚಿನ್ನ ಕರಗದವರೆಗೆ. ಕರಗಿದನಂತರ ಅಚ್ಚಿಗೆ ಸುರಿದ ಒಡನೇ ನಿಶ್ಚಿಂತೆ.

"ಶಾಸ್ತ್ರಗಳನ್ನ ಕೇವಲ ಓದಿಬಿಟ್ಟರೇ ಸಾಕಾಗೋದಿಲ್ಲ. ಕಾಮ ಕಾಂಚನಾಸಕ್ತಿ ಇತ್ತು ಎಂದರೆ ಶಾಸ್ತ್ರಗಳ ಮರ್ಮ ತಿಳಿದುಕೊಳ್ಳಲು ಅದು ಬಿಟ್ಟುಕೊಡುವುದಿಲ್ಲ. ಸಂಸಾರಾಸಕ್ತಿಯ ದೆಸೆಯಿಂದ ಜ್ಞಾನ ಲೋಪವಾಗಿ ಬಿಡುತ್ತದೆ.

ಅತುಲ ಆಸಕ್ತಿಯಲಿ ಕಾವ್ಯನಾಟ್ಯಾದಿಗಳ
ಒಂದಿಸಿತು ಬಿಡದೆ ನಾ ಕಲಿತಿದ್ದರೂ
ಶ್ರೀಕೃಷ್ಣನೊಲವಿನಲಿ ಸೆರೆಯಾಗಿ ನಾನಿಂದು
ಆ ಎಲ್ಲ ಕಲಿಕೆಗಳ ಮರೆತಿರುವೆನು !

"ಕೇಶವಸೇನ ಯೋಗಿ ಭೋಗಿ ಎರಡೂ. ಸಂಸಾರದಲ್ಲಿದ್ದರೂ ಭಗವಂತನ ಕಡೆಗೆ ಮನಸ್ಸು ಇಟ್ಟಿದಾನೆ."

ಒಬ್ಬ ಭಕ್ತ ಕಲ್ಕತ್ತ ವಿಶ್ವವಿದ್ಯಾನಿಲಯದ ಪಟ್ಟಪ್ರದಾನ ಸಭೆಯ (ಕಾನ್ವೊಕೇಷನ್ ಅಸೆಂಬ್ಲಿಯ) ಸಂಬಂಧವಾಗಿ ವರ್ಣಿಸುತ್ತ ಹೇಳಿದ, ಅದು ಒಂದು ಲೋಕಾರಣ್ಯವೇ ಆಗಿ ಕಂಡಿತು ಎಂಬುದಾಗಿ.

ಶ್ರೀರಾಮಕೃಷ್ಣರು: "ಅನೇಕ ಜನ ಒಟ್ಟಿಗೆ ಸೇರಿರುವುದನ್ನು ಕಂಡರೆ ನನಗೆ ಉದ್ದೀಪನವಾಗಿಬಿಡುತ್ತದೆ. ನಾನು ಅದನ್ನು ನೋಡಿದ್ದರೆ ಭಾವೋದ್ರೇಕವಾಗಿಬಿಡುತ್ತಿತ್ತು."

೮ನೆ ಏಪ್ರಿಲ್ ೧೮೮೩, ಚೈತ್ರ ಶುಕ್ಲ ಪಾಡ್ಯಮಿ, ಭಾನುವಾರ.

ಪರಮಹಂಸರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಬಾಲಕ ನೋಪಾದಿಯಲ್ಲಿ ಕುಳಿತುಕೊಂಡಿದಾರೆ. ಅವರ ಹತ್ತಿರ ಇನ್ನೊಬ್ಬ ಹುಡುಗ—ರಾಖಾಲ—ಕುಳಿತುಕೊಂಡಿದಾನೆ. ಮಾಸ್ಟರ್ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಪರಮ ಹಂಸರ ಅಣ್ಣನ ಮಗ ರಾಮಲಾಲನೂ ಕೊಠಡಿಯಲ್ಲಿ ಕುಳಿತಿದಾನೆ. ಕಿಶೋರಿ, ಮಣಿಲಾಲಮಲ್ಲಿಕ ಇವರೇ ಮೊದಲಾದ ಭಕ್ತರು ಕ್ರಮಕ್ರಮೇಣ ಬಂದು ಸೇರಿದರು.

ಮಣಿಮಲ್ಲಿಕ ಒಬ್ಬ ವ್ಯಾಪಾರಿ. ಕಾಶಿಯಲ್ಲಿ ಆತನಿಗೆ ಒಂದು ಬಂಗಲೆ ಇದೆ. ಈಗತಾನೆ ಅಲ್ಲಿಗೆ ಹೋಗಿಬಂದಿದಾನೆ.

ಶ್ರೀರಾಮಕೃಷ್ಣರು: "ನೀನು ಕಾಶಿಗೆ ಹೋಗಿದ್ದೆಯಲ್ಲ, ಅಲ್ಲಿ ಯಾರಾದರೂ ಸಾಧುಗಳನ್ನು ದರ್ಶನಮಾಡಿ ಬಂದೆಯಾ?"

ಮಣಿಲಾಲ: "ಹೌದು. ತ್ರೈಲಿಂಗಸ್ವಾಮಿ, ಭಾಸ್ಕರಾನಂದ ಇವರೇ ಮೊದಲಾದವರನ್ನು ನೋಡಿ ಬಂದೆ."

ಶ್ರೀರಾಮಕೃಷ್ಣರು: "ಅವರ ವಿಷಯವಾಗಿ ನಮಗೆ ಸ್ವಲ್ಪ ತಿಳಿಸು."

ಮಣಿಲಾಲ: "ತ್ರೈಲಿಂಗಸ್ವಾಮಿ ಹಿಂದೆ ಇದ್ದ ಸ್ಥಳದಲ್ಲೇ— ಮಣಿ ಕರ್ಣಿಕ ಘಟ್ಟದಲ್ಲಿ ಆ ವೇಣೀಮಾಧವ ಮಿನರೆಟ್ ಹತ್ತಿರ— ಇದಾರೆ. ಜನ ಹೇಳುತ್ತಿದಾರೆ: ಹಿಂದೆ ಇವರು ಉಚ್ಚ ಅವಸ್ಥೆಯಲ್ಲಿ ಇದ್ದರು. ಬಹಳ ಬಹಳ ಅದ್ಭುತ ಪವಾಡಗಳನ್ನು ಮಾಡಿತೋರಿಸಲು ಶಕ್ತರಾಗಿದ್ದರು. ಈಗ ಆ ಶಕ್ತಿ ಕಡಮೆಯಾಗಿಬಿಟ್ಟಿದೆ."

ಶ್ರೀರಾಮಕೃಷ್ಣರು: "ಇವುಗಳೆಲ್ಲ ಪ್ರಾಪಂಚಿಕರ ದೋಷಾ ರೋಪಣೆ."

ಮಣಿಲಾಲ: "ಭಾಸ್ಕರಾನಂದ ಎಲ್ಲರೊಡನೆಯೂ ಬೆರೆಯುತ್ತಾರೆ. ಇವರು ತ್ರೈಲಿಂಗಸ್ವಾಮಿಗಳಂತಲ್ಲ—ಶುದ್ಧಾಂಗ ಮೌನಿಗಳಲ್ಲ."

ಶ್ರೀರಾಮಕೃಷ್ಣರು: "ಭಾಸ್ಕರಾನಂದರೊಡನೆ ನೀನು ಮಾತುಕತೆ ಆಡಿದೆಯೇನು?"

ಮಣಿಲಾಲ: "ಹೌದು. ಬಹಳ ಹೊತ್ತು. ಪಾಪಪುಣ್ಯಗಳ ಸಂಬಂಧವಾಗಿಯೂ ಮಾತುಕತೆ ನಡೆಯಿತು. ಅವರು ನನಗೆ ಹೇಳಿದರು: 'ಪಾಪಮಾರ್ಗದಲ್ಲಿ ಹೋಗಬೇಡ. ಪಾಪಚಿಂತನೆ ಮಾಡಬೇಡ. ಈ ರೀತಿ ಯಾಗಿ ನಾವು ನಡೆದುಕೊಳ್ಳಬೇಕೆಂಬುದೇ ಭಗವಂತನ ಇಚ್ಛೆ. ಕೇವಲ ಪುಣ್ಯ ಕೆಲಸಗಳನ್ನೇ ಮಾಡು.'"

ಶ್ರೀರಾಮಕೃಷ್ಣರು: "ಹೌದು, ಇದೂ ಒಂದು ದಾರಿ ಪ್ರಾಪಂಚಿಕ ರಿಗೆ. ಯಾರಲ್ಲಿ ಆತ್ಮಜಾಗೃತಿಯುಂಟಾಗಿದೆಯೊ, ಯಾರಿಗೆ ಭಗವಂತ ನೊಬ್ಬನೆ ಸತ್ ಉಳಿದುದೆಲ್ಲಾ ಅಸತ್ ಎಂದರೆ ಅನಿತ್ಯ ಎಂಬ ಬೋಧೆ ಯಾಗಿರುವುದೊ ಅವರ ಭಾವವೇ ಬೇರೆ. ಅವರಿಗೆ ಗೊತ್ತಿದೆ, ಭಗವಂತ ನೊಬ್ಬನೇ ಏಕಮಾತ್ರ ಕರ್ತ ಉಳಿದವರೆಲ್ಲಾ ಅಕರ್ತರು ಎಂಬುದಾಗಿ.

"ಯಾರಿಗೆ ಆತ್ಮಜಾಗೃತಿ ಉಂಟಾಗಿದೆಯೊ ಅವರ ಕಾಲು ತಪ್ಪು ಹೆಜ್ಜೆಯನ್ನಿಡೋದಿಲ್ಲ. ಅವರು ವಿಚಾರ-ಗಿಚಾರ ಮಾಡಿ ಪಾಪಕಾರ್ಯ ಗಳನ್ನು ತ್ಯಾಗಮಾಡಬೇಕಾಗಿರೋದಿಲ್ಲ. ಅವರಿಗೆ ಭಗವಂತನ ಮೇಲೆ

ಅಷ್ಟೊಂದು ಪ್ರೀತಿ, ಅವರು ಯಾವ ಕರ್ಮ ಮಾಡಿದರೂ ಅದು ಸತ್ಕರ್ಮವೇ ಆಗಿರುತ್ತೆ. ಅವರಿಗೆ ಚೆನ್ನಾಗಿ ಗೊತ್ತಿದೆ ಕರ್ಮಗಳ ಕರ್ತೃ ತಾವಲ್ಲ, ತಾವು ಕೇವಲ ಭಗವಂತನ ದಾಸರು ಎಂಬುದಾಗಿ. ಅವರು ಸತತ ಭಾವಿಸುತ್ತಾರೆ: 'ನಾನು ಯಂತ್ರ, ಆತ ಯಾಂತ್ರಿಕ. ಆತ ಮಾಡಿಸಿದ ಹಾಗೆ ಮಾಡುತ್ತೇನೆ, ನುಡಿಸಿದ ಹಾಗೆ ನುಡಿಯುತ್ತೇನೆ, ಚಲಿಸಿದ ಹಾಗೆ ಚಲಿಸುತ್ತೇನೆ.'

"ಯಾರಿಗೆ ಆತ್ಮಜಾಗೃತಿ ಉಂಟಾಗಿಬಿಟ್ಟಿದೆಯೊ ಅವರು ಪಾಪಪುಣ್ಯಗಳಿಗತೀತರು. ಅವರ ಕಣ್ಣಿಗೆ ಬೀಳುತ್ತದೆ ಭಗವಂತನೇ ಎಲ್ಲವನ್ನೂ ಮಾಡುತ್ತಿರುವುದು.

"ಒಂದು ಜಾಗದಲ್ಲಿ ಒಂದು ಆಶ್ರಮ ಇತ್ತು. ಅಲ್ಲಿನ ಸಾಧುಗಳು ದಿನವೂ ಮಧುಕರಿಗೆ ಹೋಗುತ್ತಿದ್ದರು. ಒಂದು ದಿನ ಒಬ್ಬ ಸಾಧು ಮಧುಕರಿಗೆ ಹೋಗಿದ್ದಾಗ ಒಬ್ಬ ಜಮೀನುದಾರ ಒಬ್ಬನನ್ನು ಬಹಳವಾಗಿ ಹೊಡೆಯುತ್ತಿದ್ದುದನ್ನು ನೋಡಿದ. ಸಾಧು ಒಳ್ಳೆ ಪರಮದಯಾಳು. ಆತ ಅಡ್ಡಲಾಗಿ ಬಂದು ಹೊಡೆಯಬೇಡವೆಂದು ಹೇಳಿದ. ಆ ಜಮೀನುದಾರನ ಕೋಪ ಬಹಳವಾಗಿ ಕೆರಳಿತ್ತು. ಅದನ್ನು ಆತ ಆ ಬಡ ಸಾಧುವಿನ ಕಡೆಗೆ ತಿರುಗಿಸಿದ. ಆತ ಆ ರೀತಿಯಾಗಿ ಹೊಡೆದ, ಸಾಧು ಪ್ರಜ್ಞೆ ತಪ್ಪಿದವನಾಗಿ ನೆಲಕ್ಕೆ ಬಿದ್ದ! ಯಾರೊ ಬಂದು ಈ ಸಮಾಚಾರವನ್ನು ಆಶ್ರಮಕ್ಕೆ ತಿಳಿಸಿದರು. ಸಾಧುಗಳು ಓಡಿಬಂದು ನೋಡುತ್ತಾರೆ ತಮ್ಮ ಸೋದರ ಪ್ರಜ್ಞೆ ತಪ್ಪಿ ಬಿದ್ದಿದಾನೆ. ಅವರಲ್ಲಿ ನಾಲ್ಕೈದು ಜನ ಸೇರಿಕೊಂಡು ಆತನನ್ನು ಆಶ್ರಮಕ್ಕೆ ಎತ್ತಿಕೊಂಡುಹೋಗಿ ಹಾಸಿಗೆ ಮೇಲೆ ಮಲಗಿಸಿದರು. ಆತನಿಗೆ ಇನ್ನೂ ಪ್ರಜ್ಞೆ ಬಂದಿರಲಿಲ್ಲ. ಉಳಿದ ಸಾಧುಗಳು ಚಿಂತಾಕ್ರಾಂತರಾಗಿ ಆತನ ಸುತ್ತಲೂ ಕುಳಿತುಕೊಂಡರು; ಕೆಲವರು ಆತನಿಗೆ ಗಾಳಿ ಬೀಸಲಾರಂಭಿಸಿದರು. ಅವರಲ್ಲಿ ಒಬ್ಬ ಸಲಹೆ ಇತ್ತ, ಬಾಯಿಗೆ ಸ್ವಲ್ಪ ಹಾಲು ಬಿಡುವುದು ಒಳ್ಳೆಯದು ಎಂದು. ಬಾಯಿಗೆ ಹಾಲು ಬಿಡುತ್ತ ಬಿಡುತ್ತ ಆ ಸಾಧು ಚೇತರಿಸಿಕೊಳ್ಳಲಾರಂಭಿಸಿದ. ಕಣ್ಣುಬಿಟ್ಟು ದಿಟ್ಟಿಸಿ ನೋಡಲಾರಂಭಿಸಿದ. ಒಬ್ಬ ಸಾಧು ಹೇಳಿದ: 'ಎಲ್ಲಿ ನೋಡೋಣ, ಜ್ಞಾನ ಬಂದಿದೆಯೆ ಇಲ್ಲವೆ; ನಮ್ಮನ್ನು ಗುರುತಿಸುತ್ತಾನೆಯೆ ಇಲ್ಲವೆ.' ಆಗ ಆತ ಗಟ್ಟಿಯಾಗಿ ಕೂಗಿ ಕೇಳಿದ: 'ಮಹಾರಾಜ್, ನಿಮಗೆ ಹಾಲು ಯಾರು ಕುಡಿಸುತ್ತಾ ಇದಾರೆ?' ಆ ಸಾಧು ಮೆತ್ತ ಮೆತ್ತಗೆ ಉಸಿರೆಳೆದು ಉತ್ತರವಿತ್ತ: 'ಸೋದರ, ಯಾರು

ನನ್ನನ್ನು ಬಡಿದುಹಾಕಿದನೊ ಆತನೇ ಈಗ ಹಾಲು ಕುಡಿಸುತ್ತಿದಾನೆ.'

"ಭಗವಂತನ ಸಾಕ್ಷಾತ್ಕಾರ ದೊರೆಯದ ಹೊರತು ಈ ರೀತಿಯ ಮಾನಸಿಕ ಅವಸ್ಥೆ ಉಂಟಾಗದು."

ಮಣಿಲಾಲ: "ಮಹಾರಾಜ್, ಈಗ ನೀವು ತಿಳಿಸಿದಿರಲ್ಲ ಅದು ಉಚ್ಚ ಅವಸ್ಥೆಗೆ ಸೇರಿದ ಮನುಷ್ಯನಿಗೆ ಅನ್ವಯಿಸತಕ್ಕದ್ದು. ಭಾಸ್ಕರಾನಂದರೊಡನೆ ಹೀಗೆ ಏನೇನೊ ಮಾತುಕತೆ ನಡೆಯಿತು."

ಶ್ರೀರಾಮಕೃಷ್ಣರು: "ಆತ ಯಾರ ಮನೆಯಲ್ಲಾದರೂ ಇದಾನೆಯೆ?"

ಮಣಿಲಾಲ: "ಹೌದು, ಒಬ್ಬ ಭಕ್ತನ ಮನೆಯಲ್ಲಿ."

ಶ್ರೀರಾಮಕೃಷ್ಣರು: "ವಯಸ್ಸೆಷ್ಟು?"

ಮಣಿಲಾಲ: "ಐವತ್ತೈದು ಇರಬಹುದು."

ಶ್ರೀರಾಮಕೃಷ್ಣರು: "ಇನ್ನೇನಾದರೂ ಮಾತುಕತೆ ನಡೆಯಿತೆ?"

ಮಣಿಲಾಲ: "ಭಕ್ತಿಯನ್ನು ಬೆಳಸಿಕೊಳ್ಳುವುದು ಹೇಗೆ ಎಂದು ಪ್ರಶ್ನಿಸಿದೆ. ಅವರು ಹೇಳಿದರು: 'ಭಗವನ್ನಾಮಜಪ ಮಾಡು. ರಾಮ ನಾಮಜಪ ಮಾಡು.'"

ಶ್ರೀರಾಮಕೃಷ್ಣರು: "ಇದು ಬಹಳ ಒಳ್ಳೆ ಬುದ್ಧಿವಾದ."

ಕಾಳೀದೇವಾಲಯದ ಎಲ್ಲಾ ದೇವಾಲಯಗಳಲ್ಲೂ ಮಧ್ಯಾಹ್ನದ ಪೂಜೆ ಮುಗಿದು ಭೋಗಾರತಿಯ ಗಂಟೆಗಳ ಶಬ್ದ ಕೇಳಿಬರಲಾರಂಭಿಸಿತು. ಬೇಸಗೆಯ ಮಧ್ಯಾಹ್ನವಾದ್ದರಿಂದ ಸೂರ್ಯ ಬಹಳ ತೀಕ್ಷ್ಣವಾಗಿದಾನೆ. ಗಂಗೆಯಲ್ಲಿ ಉಬ್ಬರ ಬರಲಾರಂಭಿಸಿದೆ. ದಕ್ಷಿಣ ದಿಕ್ಕಿನಿಂದ ಗಾಳಿ ಬೀಸುತ್ತಿದೆ. ಪರಮಹಂಸರು ಊಟ ಮುಗಿಸಿ ವಿಶ್ರಮಿಸಿಕೊಳ್ಳುತ್ತಿದಾರೆ.

ರಾಖಾಲನ ಊರು ಇರುವುದು ಬಸಿರಹಾಟನ ಹತ್ತಿರ. ಗ್ರೀಷ್ಮ ಋತುವಿನಲ್ಲಿ ನೀರಿಗೆ ಬಹಳ ಕಷ್ಟ.

ಶ್ರೀರಾಮಕೃಷ್ಣರು ಮಣಿಲಾಲನಿಗೆ: "ರಾಖಾಲ ಹೇಳುತ್ತಿದಾನೆ, ಅವರ ಊರಿನಲ್ಲಿ ನೀರಿನ ಅಭಾವ ಬಹಳ ಅಧಿಕ ಎಂಬುದಾಗಿ. ನೀನು ಏಕೆ ಅಲ್ಲಿ ಒಂದು ಕೊಳ ತೋಡಿಸಬಾರದು? ಅದು ಬಹಳ ಜನರಿಗೆ ಉಪಕಾರ ಮಾಡಿದಂತಾಗುತ್ತದೆ. (ನಗುತ್ತ) ನಿನ್ನಲ್ಲಿ ತುಂಬಾ ಹಣ ಇದೆ. ಇಟ್ಟುಕೊಂಡು ಏನುಮಾಡುತ್ತೀಯೆ? ಆದರೆ ಕೇಳಿದೇನೆ, ಗಾಣಿಗರು ತುಂಬಾ ಲೆಕ್ಕಾಚಾರ ಬುದ್ಧಿಯುಳ್ಳವರು ಎಂಬುದಾಗಿ." (ಎಲ್ಲರೂ ನಗುತ್ತಾರೆ.)

ಮಣಿಲಾಲ ನಿಜವಾಗಿಯೂ ಲೆಕ್ಕಾಚಾರ ಬುದ್ಧಿಯುಳ್ಳವನೇ. ಅವನಲ್ಲಿ ಹಣದ ಅಭಾವವೇನಿರಲಿಲ್ಲ. ಈಗ ಕೆಲವು ಕಾಲದ ಹಿಂದೆ ಬಡ ವಿದ್ಯಾರ್ಥಿಗಳ ಪೋಷಣೆಗಾಗಿ ಇಪ್ಪತ್ತೈದು ಸಾವಿರ ರೂಪಾಯಿಯ ಶಾಶ್ವತ ವರಮಾನ ದಾನ (ಎಂಡೌಮೆಂಟ್) ಮಾಡಿದಾನೆ.

ಮಣಿಲಾಲ ಪರಮಹಂಸರು ತನ್ನ ಜಾತಿಯ ಸಂಬಂಧವಾಗಿ ಆಡಿದ ಮಾತುಗಳಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಆದರೆ ಸ್ವಲ್ಪ ಹೊತ್ತಾದ ಮೇಲೆ ಆ ಮಾತು ಈ ಮಾತು ಆಡುತ್ತ ತನ್ನ ಜಾತಿಯ ಸಂಬಂಧವಾಗಿ ಮಾತೆತ್ತಿ ಹೇಳಿದ: "ಮಹಾಶಯರೆ, ಕೊಳ ತೋಡಿಸುವ ವಿಷಯವಾಗಿ ಹೇಳಿದಿರಿ. ಅಷ್ಟಕ್ಕೆ ಮಾತು ನಿಲ್ಲಿಸಿಬಿಟ್ಟಿದ್ದರೇ ಚೆನ್ನಾಗಿತ್ತು. ಗಾಣಿಗ-ಗೀಣಿಗ ಈ ಮಾತುಗಳೆಲ್ಲ ಏಕೆ?"

ಭಕ್ತರು ತಮ್ಮೊಳಗೆ ತಾವೇ ನಗುತ್ತಿದಾರೆ. ಪರಮಹಂಸರೂ ನಗುತ್ತಿದಾರೆ.

ಸ್ವಲ್ಪ ಹೊತ್ತಾದ ಮೇಲೆ ಕೆಲವು ಮಂದಿ ಹಿರಿಯ ಬ್ರಾಹ್ಮಭಕ್ತರು ಕೊಠಡಿಯನ್ನು ಪ್ರವೇಶಿಸಿದರು. ಕೊಠಡಿ ಭಕ್ತರಿಂದ ತುಂಬಿದೆ. ಪರಮಹಂಸರು ಉತ್ತರಾಭಿಮುಖವಾಗಿ ತಮ್ಮ ಹಾಸಿಗೆ ಮೇಲೆ ಕುಳಿತಿದಾರೆ. ನಗುತ್ತ ಬಹಳ ಆನಂದದಿಂದ ಬ್ರಾಹ್ಮಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ನೀವು 'ಪ್ರೇಮ', 'ಪ್ರೇಮ' ಅನ್ನುತ್ತಲೇ ಇರುತ್ತೀರಿ. ಅದೇನು ಮೂರು ಕಾಸಿಗೆ ಸಿಕ್ಕತಕ್ಕದ್ದೇ? ಚೈತನ್ಯದೇವನಲ್ಲಿ ಪ್ರೇಮ ಉಂಟಾಗಿತ್ತು. ಅದಕ್ಕೆ ಎರಡು ವಿಶೇಷ ಗುಣಗಳಿವೆ. ಮೊದಲನೆಯದು—ಅದು ಈ ಜಗತ್ತನ್ನು ಮರೆಯುವಂತೆ ಮಾಡುತ್ತದೆ. ಭಗವಂತನನ್ನು ಕಂಡರೆ ಅಷ್ಟೊಂದು ಪ್ರೀತಿ, ಭಕ್ತ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತಾನೆ. ಚೈತನ್ಯದೇವ 'ವನ ನೋಡಿ ಅದೇ ಬೃಂದಾವನ ಅಂತ ಭಾವಿಸಿದ, ಸಮುದ್ರ ನೋಡಿ ಅದೇ ಯಮುನೆ ಅಂತ ಭಾವಿಸಿದ.' ಎರಡನೆಯದು—ಸ್ವಂತ ದೇಹ ಪ್ರತಿಯೊಬ್ಬನಿಗೂ ಬಹಳ ಪ್ರಿಯವಾದ ವಸ್ತು. ಅದರ ಮೇಲೂ ಮಮತೆ ಇರುವುದಿಲ್ಲ. ದೇಹಾತ್ಮಬುದ್ಧಿ ಆತನನ್ನು ಒಮ್ಮೆಗೇ ಬಿಟ್ಟು ತೊಲಗಿಹೋಗಿರುತ್ತೆ.

"ಭಗವಂತನ ಸಾಕ್ಷಾತ್ಕಾರ ದೊರೆತಿರುವುದಕ್ಕೆ ಕೆಲವು ಚಿಹ್ನೆಗಳಿವೆ. ಯಾರಲ್ಲಿ ಅನುರಾಗದ ಸಂಪತ್ತು ವಿಶೇಷವಾಗಿ ವ್ಯಕ್ತವಾಗಿದೆಯೊ ಅವರು

ಭಗವಂತನ ಸಾಕ್ಷಾತ್ಕಾರಕ್ಕಾಗಿ ಇನ್ನು ಹೆಚ್ಚು ಕಾಲ ಕಾಯಬೇಕಾಗಿರೋದಿಲ್ಲ. ಅನುರಾಗದ ಸಂಪತ್ತು ಯಾವ್ಯಾವು? ವಿವೇಕ, ವೈರಾಗ್ಯ, ಭೂತ-ದಯೆ, ಸಾಧುಸೇವೆ, ಸಾಧುಸಂಗ, ಭಗವನ್ನಾಮಗುಣಕೀರ್ತನೆ, ಸತ್ಯ-ವಚನ ಇವೇ ಮೊದಲಾದುವು. ಇವೆಲ್ಲಾ ಸಾಧಕನಲ್ಲಿ ಇರುವುದು ಕಂಡು ಬಂದರೆ ನಿಸ್ಸಂದೇಹವಾಗಿ ಹೇಳಿಬಿಡಬಹುದು ಆತನ ಭಗವತ್ಸಾಕ್ಷಾತ್ಕಾರಕ್ಕೆ ಇನ್ನು ಹೆಚ್ಚು ವಿಳಂಬವೇನಿಲ್ಲ ಎಂಬುದಾಗಿ.

"ಸೇವಕನ ಮನೆಯ ವ್ಯವಸ್ಥೆಯೇ ನಿಸ್ಸಂದೇಹವಾಗಿ ತಿಳಿಸಿಬಿಡುತ್ತದೆ ಅಲ್ಲಿಗೆ ಆತನ ಯಜಮಾನ ಭೇಟಿಕೊಡುವನೆ ಇಲ್ಲವೆ ಎಂಬುದನ್ನ. ಮೊದಲನೆಯದಾಗಿ, ಆಳಿನ ಮನೆಯ ಸುತ್ತಲೂ ಬೆಳೆದಿದ್ದ ಕಾಡೆಲ್ಲಾ ಹೋಗಿ ಸ್ವಚ್ಛವಾಗಿ ಕಾಣುತ್ತೆ. ಎರಡನೆಯದಾಗಿ, ಮನೆಯ ಒಳಗೆಲ್ಲಾ ಸಾರಿಸಿ ಗುಡಿಸಿ ಮಾಡಿ ಅಲಂಕಾರ ಮಾಡಿರುತ್ತೆ. ಮೂರನೆಯದಾಗಿ, ಅಂಗಳ-ಗಿಂಗಳವೆಲ್ಲ ಪರಿಷ್ಕಾರ ಪರಿಚ್ಛಿನ್ನವಾಗಿರುತ್ತೆ. ಕೊನೆಯಲ್ಲಿ, ಯಜಮಾನನೇ ಅಲ್ಲಿಗೆ ತನ್ನ ರತ್ನಗಂಬಳಿ, ಗುಡುಗುಡಿ, ಇನ್ನೂ ಏನೇನೊ ವಸ್ತುಗಳನ್ನು ಕಳುಹಿಸಿಕೊಡುತ್ತಾನೆ. ಇವೆಲ್ಲಾ ಬರುತ್ತಿರುವುದು ಕಣ್ಣಿಗೆ ಬಿತ್ತು ಎಂದರೆ, ಜನ ನಿಸ್ಸಂದೇಹವಾಗಿ ಭಾವಿಸಿಕೊಳ್ಳುತ್ತಾರೆ ಯಜಮಾನ ಈ ಮನೆಗೆ ಇನ್ನೇನು ಭೇಟಿಕೊಡುವುದರಲ್ಲಿದಾನೆ ಎಂಬುದಾಗಿ."

ಒಬ್ಬ ಭಕ್ತ: "ಮೊದಲು ವಿಚಾರದಲ್ಲಿ ತೊಡಗಿ ಬಳಿಕ ಇಂದ್ರಿಯ ನಿಗ್ರಹ ಕಾರ್ಯಕ್ಕೆ ಕೈ ಹಚ್ಚಬೇಕೇ?"

ಶ್ರೀರಾಮಕೃಷ್ಣರು: "ಅದೂ ಒಂದು ಮಾರ್ಗ—ವಿಚಾರ ಮಾರ್ಗ. ಭಕ್ತಿಮಾರ್ಗದಿಂದಲೂ ಅಂತರಿಂದ್ರಿಯನಿಗ್ರಹ ತನಗೆ ತಾನೇ ಆಗುತ್ತದೆ; ಸಹಜವಾಗಿ ಆಗುತ್ತದೆ. ಭಗವಂತನಲ್ಲಿ ಪ್ರೀತಿ ಅಧಿಕವಾದಷ್ಟೂ ಇಂದ್ರಿಯಸುಖ ಸಪ್ಪೆಯಾಗಿ ತೋರಿಬರಲಾರಂಭಿಸುತ್ತದೆ. ತಂದೆತಾಯಿಗಳು ಎಂದು ತಮ್ಮ ಮಗುವನ್ನು ಕಳೆದುಕೊಂಡು ದುಃಖಾಕ್ರಾಂತರಾಗಿದಾರೊ, ಅಂದೇ ಅವರನ್ನು ವಿಷಯಸುಖ ಆಕರ್ಷಿಸಬಲ್ಲದೇ?"

ಭಕ್ತ: "ಭಗವಂತನನ್ನು ಪ್ರೀತಿಸಲಾಗುತ್ತಿಲ್ಲವಲ್ಲ ಏನು ಮಾಡಲಿ?"

ಶ್ರೀರಾಮಕೃಷ್ಣರು: "ಆತನ ನಾಮೋಚ್ಚಾರಣೆ ಮಾಡಿದರೆ ಎಲ್ಲಾ ಪಾಪಗಳೂ ತೊಲಗಿಹೋಗುತ್ತವೆ. ಕಾಮ, ಕ್ರೋಧ, ದೇಹಸುಖ, ಇಚ್ಛೆ ಇತ್ಯಾದಿ ಎಲ್ಲಾ ಕಾಲಿಗೆ ಬುದ್ಧಿ ಹೇಳುತ್ತವೆ."

ಭಕ್ತ : "ಆತನ ನಾಮದಲ್ಲಿ ಅಭಿರುಚಿ ಪಡೆಯಲು ಏನುಮಾಡಲಿ?"

ಶ್ರೀರಾಮಕೃಷ್ಣರು: "ಆತನ ನಾಮದಲ್ಲಿ ಅಭಿರುಚಿ ಉಂಟಾಗುವಂತೆ ವ್ಯಾಕುಲನಾಗಿ ಆತನಿಗೆ ಪ್ರಾರ್ಥನೆಮಾಡು. ಆತ ಸಕಲಾಭೀಷ್ಟ ದಾಯಕ. ನಿಶ್ಚಯವಾಗೂ ಪೂರ್ಣಮಾಡಿಕೊಡುತ್ತಾನೆ."

ಹೀಗೆಂದು ಹೇಳಿ ಪರಮಹಂಸರು ಜೀವಿಗಳ ದುಃಖವನ್ನು ನೋಡಿ ಸಹಿಸಲಾರದೆ ಅವರಿಗೆ ಕೃಪೆಮಾಡುವಂತೆ ಅವರ ಪರವಾಗಿ ಭಗವತಿಯನ್ನು ತಮ್ಮ ಸುಮಧುರ ಕಂಠದಿಂದ ಪ್ರಾರ್ಥನೆ ಮಾಡುತ್ತಿದಾರೆ:

ನಾನಾರ ದೂಷಿಸಲಿ, ನಾನೆ ತೋಡಿದ ಕೂಪ-
ದಾಳದಲಿ ನಾನಾಗಿ ಮುಳುಗುತಿಹೆನು!
ಅರಿವರ್ಗಗಳ ಹಿಡಿದು ನಿನ್ನ ಸುಕ್ಷೇತ್ರದಲಿ
ನಾನೆ ಈ ಬಾವಿಯನು ತೋಡಿರುವೆನು,
ಕಾಲರೂಪದ ಕರಿಯ ನೀರೆದ್ದು ನುಗ್ಗುತಿದೆ
ಓ ತಾಯಿ ನಾ ನಿನಗೆ ಶರಣೆನುವೆನು.

ನಾನೆಯೇ ನನಗೆ ಹಗೆ; ಹೇಗೆ ತಡೆಯಲಿ ಹೇಳು
ಮೇಲೆದ್ದು ನುಗ್ಗುವೀ ಕಾಳ ಜಲವ?
ನನ್ನ ಎದೆಯುದ್ದಕೂ ತುಂಬಿಕೊಂಡಿತು ನೀರು;
ನೀನಿಲ್ಲದಿನ್ನಾರು ರಕ್ಷಿಸುವರು?
ನೀನೊಬ್ಬಳೇ ರಕ್ಷೆ, ನಿನ್ನೊಳಗೆ ಈ ಭಿಕ್ಷೆ;
ದಾಟಿಸಾಚೆಯ ದಡಕೆ ಈ ಶಿಶುವನು.

ಪರಮಹಂಸರು ಮತ್ತೆ ಹಾಡುತ್ತಿದಾರೆ:

ಇರುವುದೊಂದೆ ವಿಕಾರ;
ನಿನ್ನ ಪದಕಮಲಗಳ ಕೃಪೆಯಲ್ಲದಿನ್ನಿಲ್ಲ
ಬೇರೆ ಪರಿಹಾರ.

ಅಲ್ಪ ಗೌರವ ದಾಹ; ಧನಜನ ತೃಷ್ಣೆ; ಮಮಕಾರಮೋಹಗಳು
ಹಿಂಗಲಿಲ್ಲ.
ನಾನು ಉಳಿಯುವುದೆಂತೊ ತಿಳಿಯಲಿಲ್ಲ.

ತುಚ್ಛ ವಿಷಯಾಲಾಪದಲ್ಲಿ ಮಾನಸ ಮಗ್ನ;
ಮಾಯ ನಿದ್ರಾಲೋಲ ಸುಪ್ತ ನೇತ್ರ.
ಉದರವಾಯಿತು ಹಿಂಸೆ ಕ್ರೌರ್ಯಗಳ ಪಾತ್ರ!

ಅರ್ಥವಿಲ್ಲದ ತೆರದಿ ಏಕೆ ಭ್ರಮಿಸುವೆ ನಾನು?
ನಿನ್ನ ನಾಮವು ಕೂಡ ರುಚಿಸದಲ್ಲ!
ಹಗಲಿರುಳು ರೋಗದಲಿ ನರಳುತಿರುವೆನು ನಾನು,
ಇದರ ಪರಿಹಾರವೇ ಕಾಣದಲ್ಲ!

ಬಳಿಕ ಶ್ರೀರಾಮಕೃಷ್ಣರು ಹೇಳುತ್ತಿದಾರೆ: " 'ನಿನ್ನ ನಾಮದಲ್ಲಿ ನನಗೆ ಅರುಚಿ.' ವಿಷಮಶೀತಜ್ವರದ ರೋಗಿಗೆ ಆಹಾರದಲ್ಲಿ ರುಚಿಯೇ ಇಲ್ಲದೆ ಹೋಯಿತು ಎಂದರೆ ಆತ ಬದುಕುವಂತೆಯೇ ಇಲ್ಲ; ಆದರೆ ಲೇಶಮಾತ್ರವಾದರೂ ರುಚಿ ಇದ್ದದ್ದೇ ಆದರೆ ಅವನ ಸಂಬಂಧವಾಗಿ ಆಸೆಯನ್ನು ಬಿಟ್ಟುಬಿಡಬೇಕಾಗಿಲ್ಲ. ಆದ್ದರಿಂದ ಆತನ ನಾಮದಲ್ಲಿ ರುಚಿ ಬೆಳಸಿಕೊಳ್ಳಬೇಕು. ಭಗವನ್ನಾಮವನ್ನು ಜಪಿಸಬೇಕು—ದುರ್ಗಾನಾಮವೊ, ಕೃಷ್ಣನಾಮವೊ, ಶಿವನಾಮವೊ ಯಾವುದಾದರೂ ಸರಿಯೆ. ನಾಮಜಪ ಮಾಡುತ್ತ ಮಾಡುತ್ತ ದಿನದಿನಕ್ಕೂ ಅನುರಾಗ ವೃದ್ಧಿಯಾಗುತ್ತ ವೃದ್ಧಿಯಾಗುತ್ತ ಬರುತ್ತಿದ್ದರೆ, ಆನಂದ ದೊರಕುತ್ತಿದ್ದರೆ, ಇನ್ನು ಹೆದರಿಕೊಳ್ಳಬೇಕಾದ್ದೇ ನಿರೋದಿಲ್ಲ. ವಿಷಮಶೀತಜ್ವರ ಗುಣವಾಗೇ ಆಗುತ್ತದೆ; ಭಗವಂತನ ಕೃಪೆ ದೊರತೇ ದೊರೆಯುತ್ತದೆ.

" 'ಭಾವಕ್ಕೆ ತಕ್ಕಂತೆ ಲಾಭ.' ಇಬ್ಬರು ಸ್ನೇಹಿತರು ಒಂದು ಬೀದಿಯಲ್ಲಿ ನಡೆದುಹೋಗುತ್ತಿದ್ದರು. ಅಲ್ಲಿ ಒಂದು ಕಡೆ ಭಾಗವತಶ್ರವಣ ಆಗುತ್ತಿತ್ತು. ಒಬ್ಬ ಇನ್ನೊಬ್ಬನಿಗೆ ಹೇಳಿದ: 'ಬಾ ಒಳಕ್ಕೆ ಹೋಗೋಣ. ಸ್ವಲ್ಪ ಭಾಗವತ ಕೇಳೋಣ.' ಹಾಗೆಂದು ಹೇಳಿ ಆತ ಒಳಕ್ಕೆ ಹೋಗಿ ಕುಳಿತುಕೊಂಡ. ಇನ್ನೊಬ್ಬ ಹಾಗೇ ಇಣಿಕಿನೋಡಿಬಿಟ್ಟು ಅಲ್ಲಿಂದ ಹೊರಟುಹೋಗಿ ಒಬ್ಬ ವೇಶ್ಯೆಯ ಮನೆಯನ್ನು ಪ್ರವೇಶಿಸಿದ. ಆದರೆ ಸ್ವಲ್ಪ ಹೊತ್ತಿನಲ್ಲೇ ಆತನ ಮನಸ್ಸಿನಲ್ಲಿ ಜುಗುಪ್ಸೆಯುಂಟಾಗಿ ತನ್ನನ್ನು ತಾನೇ ಬಯ್ದುಕೊಳ್ಳಲಾರಂಭಿಸಿದ: 'ಥೆ, ನನ್ನದು ಎಂಥ ನಡತೆ! ನನ್ನ ಸ್ನೇಹಿತ ಭಾಗವತ ಕೇಳುತ್ತಿದಾನೆ; ಆದರೆ ನಾನು ಯಾವ ಸ್ಥಳಕ್ಕೆ ಬಂದಿದೇನೆ!' ಅತ್ತ ಭಾಗವತ ಕೇಳುತ್ತಿದ್ದವನಿಗೂ ಬೇಜಾರಾಗಿ ಹೋಯಿತು. ಆತನೂ ತನ್ನನ್ನು ತಾನೇ ನಿಂದಿಸಿಕೊಳ್ಳಲಾರಂಭಿಸಿದ: 'ನಾನು ಎಂಥ ತಿಳಿಗೇಡಿ! ಈತ ಏನೇನನ್ನೊ ಸುಮ್ಮನೆ ಬಗುಳುತ್ತಿದಾನೆ, ನಾನು ಸುಮ್ಮನೆ ಮೂಕನಾಗಿ ಕುಳಿತಿದೇನೆ. ಆದರೆ ನನ್ನ ಸ್ನೇಹಿತ ಅಲ್ಲಿ ಎಷ್ಟು ಆಮೋದ ಆಹ್ಲಾದಗಳಲ್ಲಿ ತೊಡಗಿರಬೇಕು, ಏನು ಕತೆ!' ಇವರು

ಸತ್ತಾಗ ಭಾಗವತ ಕೇಳುತ್ತಿದ್ದವನನ್ನು ಯಮದೂತರು ನರಕಕ್ಕೆ ಎಳೆದು ಕೊಂಡುಹೋದರು, ವೇಶ್ಯೆಯ ಮನೆಗೆ ಹೋಗಿದ್ದವನನ್ನು ವಿಷ್ಣುದೂತರು ವೈಕುಂಠಕ್ಕೆ ಕರೆದುಕೊಂಡುಹೋದರು.

"ಭಗವಂತ ಹೃದಯ ನೋಡುತ್ತಾನೆಯೇ ವಿನಾ ಯಾರಾರು ಏನೇನು ಕೆಲಸಮಾಡುತ್ತಿದಾರೆ ಎಲ್ಲೆಲ್ಲಿ ಇದಾರೆ ಎಂಬುದರ ಕಡೆ ಗಮನ ಕೊಡೋದಿಲ್ಲ. 'ಜನಾರ್ದನ ಭಾವಗ್ರಾಹಿ.'

"ಕರ್ತಾಭಜ ಸಂಪ್ರದಾಯದ ಗುರು ಮಂತ್ರೋಪದೇಶಮಾಡುವಾಗ ಶಿಷ್ಯನಿಗೆ ಹೇಳುತ್ತಾನೆ: 'ಈಗ ಎಲ್ಲವೂ ನಿನ್ನ ಮನಸ್ಸನ್ನು ಅವಲಂಬಿಸಿದೆ.' ಈ ಸಂಪ್ರದಾಯದ ಪ್ರಕಾರ, 'ಯಾರಿಗೆ ಒಳ್ಳೆ ಮನಸ್ಸಿದೆಯೊ ಅವರಿಗೆ ಒಳ್ಳೆ ಮಾರ್ಗವೂ ದೊರೆಯುತ್ತದೆ, ಒಳ್ಳೆ ಫಲವೂ ದೊರೆಯುತ್ತದೆ.' ಮನಸ್ಸಿನ ಬಲದಿಂದ ಹನುಮಂತ ಸಮುದ್ರವನ್ನು ದಾಟಿಬಿಟ್ಟ. 'ನಾನು ರಾಮದಾಸ; ರಾಮನಾಮ ಜಪಿಸುತ್ತಿದೇನೆ. ನನ್ನ ಕೈಯಲ್ಲಿ ಏನುತಾನೆ ಸಾಧ್ಯವಿಲ್ಲ?'—ಎಂಬುದಾಗಿತ್ತು ಹನುಮಂತನ ವಿಶ್ವಾಸ.

"ಅಹಂಕಾರವಿರೋವರೆಗೆ ಅಜ್ಞಾನ ಇದ್ದೇ ಇರುತ್ತದೆ. ಅಹಂಕಾರ ಹೋಯಿತು ಎಂದರೆ ಮುಕ್ತಿ ದೊರೆಯೋ ಹಾಗಿಲ್ಲ. 'ಹೇ ಭಗವಂತ, ನೀನೇ ಕರ್ತ, ನಾನು ಅಕರ್ತ'— ಎಂಬುದೇ ಜ್ಞಾನ.

"ನಮ್ರತೆ ಇತ್ತು ಎಂದರೆ ಉನ್ನತಿ ಉಂಟಾಗುತ್ತದೆ. ಚಾತಕ ಪಕ್ಷಿ ತಗ್ಗು ಪ್ರದೇಶಗಳಲ್ಲಿ ಗೂಡು ಕಟ್ಟುತ್ತದೆ, ಆದರೆ ಅದು ಹಾರಬಲ್ಲದು ಬಹಳ ಎತ್ತರಕ್ಕೆ. ದಿಣ್ಣೆ ಮೇಲೆ ಬೆಳೆ ಬೆಳೆಯಲಾಗೋದಿಲ್ಲ; ತಗ್ಗು ಪ್ರದೇಶದಲ್ಲಿ ನೀರು ಶೇಖರವಾಗುವುದರಿಂದ ಬೆಳೆ ಸಾಧ್ಯವಾಗುತ್ತದೆ.

"ಸ್ವಲ್ಪ ಶ್ರಮ ತೆಗೆದುಕೊಂಡು ಸತ್ಸಂಗ ಮಾಡಬೇಕು. ಮನೆಯಲ್ಲಿ ಮನುಷ್ಯನ ಕಿವಿಗೆ ಬೀಳುವುದು ಕೇವಲ ಪ್ರಾಪಂಚಿಕ ಮಾತು. ರೋಗ ತಗುಲಿಕೊಂಡೇ ಇರುತ್ತದೆ. ಪಂಜರದ ಗಿಳಿ ಅಡ್ಡಗಡ್ಡಿಯ ಮೇಲೆ ಕುಳಿತು, 'ರಾಮ! ರಾಮ!' ಅಂತ ಹೇಳುತ್ತಿರುತ್ತದೆ. ಆದರೆ ಅದನ್ನು ಕಾಡಿಗೆ ಬಿಟ್ಟುಬಿಡು ಮತ್ತೆ ಅದು 'ಕ್ಯಾ, ಕ್ಯಾ' ಅಂತ ಕೂಗಲಾರಂಭಿಸುತ್ತದೆ.

"ಕೈಯಲ್ಲಿ ಹಣವಿದ್ದ ಮಾತ್ರಕ್ಕೇ ಜನ ದೊಡ್ಡವರಾಗೋದಿಲ್ಲ. ದೊಡ್ಡ ಮನುಷ್ಯನ ಮನೆ ಇದು ಎಂದು ಹೇಳುವುದಕ್ಕೆ ಒಂದು ಕುರುಹು, ಆತನ ಮನೆಯ ಎಲ್ಲಾ ಕೊಠಡಿಗಳಲ್ಲೂ ದೀಪ ಉರಿಯುತ್ತಿರುತ್ತದೆ. ಬಡವರು ಅಷ್ಟೊಂದು ಎಣ್ಣೆ ಖರ್ಚುಮಾಡಲಾರರು. ಆದ್ದರಿಂದ ಅವರು

ಅನೇಕ ದೀಪಗಳನ್ನು ಉರಿಸಲಾರರು. ಈ ದೇಹ ಮಂದಿರವನ್ನು ಅಂಧಕಾರದಲ್ಲಿ ಇರಿಸಕೂಡದು; ಅದನ್ನು ಜ್ಞಾನದೀಪದಿಂದ ಬೆಳಗಿಸಬೇಕು.

ಹೃದಯ ಮಂದಿರದಲ್ಲಿ ಜ್ಞಾನದೀವಿಗೆ ಹಚ್ಚಿ
ಬ್ರಹ್ಮಮಯಿ ಮಾತಾಯ ಮುಖವ ನೋಡು!

"ಎಲ್ಲರಿಗೂ ಬ್ರಹ್ಮಜ್ಞಾನ ಸಾಧ್ಯ. ಜೀವಾತ್ಮ ಪರಮಾತ್ಮ ಎಂಬ ಎರಡು ವಸ್ತುಗಳು ಇವೆ. ಪ್ರಾರ್ಥನೆಯಿಂದ ಜೀವಾತ್ಮ ಪರಮಾತ್ಮನೊಡನೆ ಐಕ್ಯವಾಗಲು ಸಾಧ್ಯ. ಗ್ಯಾಸ್ ಕಂಪನಿಯವರು ಪ್ರತಿಯೊಂದು ಮನೆಗೂ ತಮ್ಮ ಕೊಳವೆಯನ್ನು ಕೂಡಿಸಿದಾರೆ. ಗ್ಯಾಸನ್ನು ಕಂಪನಿಯಿಂದ ಪಡೆದುಕೊಳ್ಳಬಹುದು. ಕಂಪನಿಗೆ ಒಂದು ಅರ್ಜಿ ಹಾಕಿಕೊಂಡರೆ ಅವರು ಗ್ಯಾಸ್ ಸರಬರಾಜು ಮಾಡುತ್ತಾರೆ. ಬಳಿಕ ಮನೆಗಳಲ್ಲಿ ದೀಪ ಹೊತ್ತಿಸಿಕೊಳ್ಳಬಹುದು.

"ಕೆಲವರಲ್ಲಿ ಆಗಲೆ ಆತ್ಮಜಾಗೃತಿ ಉಂಟಾಗಿಬಿಟ್ಟಿರುತ್ತೆ; ಅವರಲ್ಲಿ ಒಂದು ವಿಶೇಷ ಗುಣ ನೋಡಬಹುದು. ಭಗವತ್ಸಂಬಂಧವಾದ ಮಾತುಕತೆ ವಿನಾ ಬೇರೆ ಏನೂ ಅವರಿಗೆ ರುಚಿಸದು. ಅವರು ಚಾತಕ ಪಕ್ಷಿಯ ಹಾಗೆ. ಏಳು ಸಮುದ್ರಗಳಲ್ಲಿ, ಗಂಗೆಯಲ್ಲಿ, ಯಮುನೆಯಲ್ಲಿ, ಉಳಿದ ನದಿಗಳಲ್ಲಿ ನೀರು ಸುಮ್ಮನೆ ತುಂಬಿದೆ; ಅದಕ್ಕೆ ಬೇಕಾಗಿರೋದು ಮಳೆ ನೀರು. ನೀರಡಿಕೆಯಿಂದ ಗಂಟಲು ಒಣಗಿ ಸಾಯುತ್ತಿದ್ದರೂ ಅದು ಬೇರೆ ಯಾವ ನೀರನ್ನೂ ಕುಡಿಯದು."

ಕೆಲವು ಹಾಡುಗಳನ್ನು ಕೇಳಬೇಕು ಅಂತ ಪರಮಹಂಸರಿಗೆ ಇಚ್ಛೆಯಾಯಿತು. ರಾಮಲಾಲ ಮತ್ತು ಕಾಳೀದೇವಾಲಯದ ಒಬ್ಬ ಬ್ರಾಹ್ಮಣ ಉದ್ಯೋಗಿ ಹಾಡುತ್ತಿದಾರೆ:

ಹೃದಯ ಬೃಂದಾವನದಿ ಬಂದು ಮನೆ ಮಾಡಯ್ಯ ಕಮಲಾಪತೀ,
ಓಹೊ ಭಕ್ತಪ್ರಿಯನೆ ನನ್ನ ಭಕ್ತಿಯೆ ನಿನಗೆ ರಾಧಾಸತೀ....

ಮತ್ತೆ:

ಅಧರದಿ ನಸುನಗೆ, ಕರದಲಿ ಕೊಳಲು;
ತನುಕಾಂತಿಗೆ ಜಗವಚ್ಚರಿಗೊಳಲು
ಬರುವೀ ಶ್ಯಾಮನ ಬಣ್ಣಕೆ ನಾಚಿ
ನವನೀರದವೇ ಕರಗುತಿದೆ!
ಮಯ್ಯ ಮುಚ್ಚಿರುವ ಪೀತಾಂಬರವು

ಮುಗಿಲೊಳು ಹೊಳೆಯುವ ಮಿಂಚಿಗು ಮಿಗಿಲು;
ಹೃದಯ ಸರೋಜದ ಶ್ರೀ ವನಮಾಲೆ
ಚರಣವ ಚುಂಬಿಸಿ ತೂಗುತಿದೆ!
ಅದೊ ನೋಡಾ ಪ್ರಭು ನಿಂತಿಹನಲ್ಲಿ
ಯಮುನಾ ತೀರದಿ ತಿಂಗಳ ಚೆಲ್ಲಿ!
ಕೊಳಲನ್ನೂದಲು ನಂದಕುಲೇಂದು
ಜಗಜಗವೇ ಮರುಳಾಗುತಿದೆ!
ಮನೆ ಮನೆಯೊಳಗಿನ ಗೋಪೀ ಜನಮನ
ಮನೆಯ ತೊರೆವವೊಲು ಈ ಶ್ರೀಕೃಷ್ಣನ
ಕೊಳಲಿನ ಇನಿದನಿ ಕರೆಯುತಿದೆ!
ಇದೊ ನನ್ನೆದೆಗುಡಿಯೊಳಗೂ ಬಂದನು
ಪ್ರಾಣ-ಬುದ್ಧಿ-ಮನವೆಲ್ಲವ ಕದ್ದನು
ಕೊಳಲಿಂಚರವನು ತುಂಬಿದನು!
ನಾನೀ ವ್ಯಥೆಯನು ನಿನಗೆಂತೊರೆಯಲಿ?
ಓವೋ ಪ್ರಿಯಸಖಿ ಯಮುನಾ ತಟದಲಿ
ಕೊಡವನು ತುಂಬಲು ನೀನೂ ನಡೆದರೆ
ನಿನಗೀ ವ್ಯಥೆಯರಿವಾಗುವುದು!

ಮತ್ತೆ ಹಾಡುತ್ತಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯು ಭರದಿ...

(ಉ. ೯೭೬)

ಶ್ರೀರಾಮಕೃಷ್ಣರು ಭಕ್ತರಿಗೆ: "ಹುಲಿ ಉಳಿದ ಮೃಗಗಳನ್ನು 'ಗಪ, ಗಪ' ಅಂತ ತಿಂದುಬಿಡೋ ಹಾಗೆ ಅನುರಾಗವೆಂಬ ಹುಲಿ ಕಾಮಕ್ರೋಧಗಳೆಂಬ ರಿಪುಗಳನ್ನ ತಿಂದುಹಾಕಿಬಿಡುತ್ತದೆ. ಒಮ್ಮೆ ಹೃದಯದಲ್ಲಿ ಅನುರಾಗ ಉಂಟಾಗಿಬಿಟ್ಟಿತು ಎಂದರೆ ಮತ್ತೆ ಅಲ್ಲಿ ಕಾಮಕ್ರೋಧಾದಿಗಳು ನಿಲ್ಲವು. ಗೋಪಿಯರಿಗೆ ಕೃಷ್ಣನಲ್ಲಿ ಅನುರಾಗವಿದ್ದುದರಿಂದ ಅವರಿಗೆ ಈ ಅವಸ್ಥೆ ಬಂದಿತ್ತು.

"ಮತ್ತೆ ಇದೆ 'ಅನುರಾಗ-ಅಂಜನ' ಎಂಬುದು. ರಾಧೆ ತನ್ನ ಸಖಿಯರಿಗೆ ಹೇಳಿದಳು: 'ಸಖಿಯರೇ, ಎಲ್ಲವೂ ನನಗೆ ಕೃಷ್ಣಮಯವಾಗಿ

ಕಾಣುತ್ತಿದೆ.' ಅವರು ಉತ್ತರವಿತ್ತರು: 'ಸಖಿ, ನೀನು ಅನುರಾಗವೆಂಬ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡಿದೀಯೆ; ಆದ್ದರಿಂದ ನಿನಗೆ ಹಾಗೆ ಕಾಣುತ್ತಿದೆ.'

"ಜನ ಹೇಳುತ್ತಾರೆ, ಕಪ್ಪೆಯ ತಲೆಬೂದಿಯಿಂದ ತಯಾರಿಸಿದ ಕಾಡಿಗೆಯನ್ನ ಕಣ್ಣಿಗೆ ಹಚ್ಚಿಕೊಂಡರೆ, ಎಲ್ಲವೂ ಸರ್ಪಮಯವಾಗಿ ಕಾಣುತ್ತದೆ ಎಂಬುದಾಗಿ.

"ಯಾರು ಕಾಮಕಾಂಚನಗಳಲ್ಲೇ ನಿರತರಾಗಿದಾರೊ, ಭಗವಂತನ ಕಡೆಗೆ ಒಂದಿನಿತೂ ಮನಸ್ಸು ಕೊಡೋದಿಲ್ಲವೊ ಅವರೇ ಬದ್ಧಜೀವರು. ಅವರಿಂದ ಮಹತ್ಕಾರ್ಯವೇನಾದರೂ ಸಾಧ್ಯವಾಗಬಲ್ಲದೆ? ಅವರು ಕಾಗೆ ಕುಟುಕಿದ ಮಾವಿನ ಹಣ್ಣಿನ ಹಾಗೆ. ದೇವರಿಗಂತೂ ಅರ್ಪಿಸಲಾಗೋದಿಲ್ಲ; ಮನುಷ್ಯರೂ ಹಿಂಜರಿಯುತ್ತಾರೆ.

"ಬದ್ಧಜೀವ, ಅಂದರೆ ಸಂಸಾರಿಜೀವ ರೇಷ್ಮೆಹುಳುವಿನ ಹಾಗೆ. ಇಚ್ಛೆಪಟ್ಟರೆ ಅದು ತನ್ನ ಗೂಡನ್ನು ಕತ್ತರಿಸಿ ಹೊರಕ್ಕೆ ಬರಬಲ್ಲದು. ಆದರೆ ಅದು ತಾನೇ ಅದನ್ನು ನಿರ್ಮಿಸಿರುವುದರಿಂದ ಮೋಹ ಅಡ್ಡಲಾಗಿ ಬಂದು ನಿಂತುಕೊಳ್ಳುತ್ತದೆ. ಕೊನೆಗೆ ಅಲ್ಲೇ ಅದಕ್ಕೆ ಮೃತ್ಯು.

"ಮುಕ್ತಜೀವ ಕಾಮಕಾಂಚನಗಳ ವಶ ಅಲ್ಲ. ಕೆಲಕೆಲವು ರೇಷ್ಮೆಹುಳು ತಾವು ಅಷ್ಟೊಂದು ಶ್ರಮವಹಿಸಿ ಕಟ್ಟಿದ್ದ ಗೂಡುಗಳನ್ನೂ ಕತ್ತರಿಸಿ ಹೊರಕ್ಕೆ ಬಂದುಬಿಡುತ್ತವೆ. ಆದರೆ ಅಂಥವೆಲ್ಲೊ ಒಂದೆರಡು.

"ಮಾಯೆ ಜೀವರನ್ನು ಮುಗ್ಧಗೊಳಿಸಿ ತನ್ನ ಬಂಧನದಲ್ಲಿ ಇಟ್ಟುಕೊಳ್ಳುತ್ತದೆ. ಎಲ್ಲೊ ಕೆಲವರಿಗೆ ಮಾತ್ರ ಬ್ರಹ್ಮಜ್ಞಾನ ದೊರೆಯುತ್ತದೆ. ಅವರು ಮಾಯೆಯ ಇಂದ್ರಜಾಲದಿಂದ ಮೋಹಿತರಾಗೋದಿಲ್ಲ; ಕಾಮಕಾಂಚನಗಳಿಗೆ ವಶರಾಗೋದಿಲ್ಲ.

"ಸಿದ್ಧರಲ್ಲಿ ಎರಡು ವಿಧ: ಸಾಧನ-ಸಿದ್ಧರು, ಕೃಪಾ-ಸಿದ್ಧರು. ಕೆಲಕೆಲವು ಮಂದಿ ರೈತರು ಬಹಳವಾಗಿ ದುಡಿದು ತಮ್ಮ ತಮ್ಮ ಗದ್ದೆಗಳಿಗೆ ನೀರು ಹಾಯಿಸುತ್ತಾರೆ. ಹಾಗೆ ಮಾಡಿದರೇ ಅವರು ಬೆಳೆ ಬೆಳೆಯಲು ಸಾಧ್ಯ. ಇನ್ನು ಕೆಲವರಿಗೆ ನೀರು ಹಾಯಿಸುವ ಆವಶ್ಯಕತೆಯೇ ಇರದು; ಮಳೆಯ ನೀರೇ ಯಥೇಷ್ಟ. ಅವರು ದುಡಿದು ನೀರು ಹಾಯಿಸಬೇಕಾಗಿರುವುದಿಲ್ಲ. ಈ ಮಾಯೆಯ ಹಿಡಿತದಿಂದ ಬಿಡಿಸಿಕೊಳ್ಳಬೇಕಾದರೆ ಬಹಳ

ಕಷ್ಟ ತೆಗೆದುಕೊಂಡು ಸಾಧನೆ ಮಾಡಬೇಕು. ಕೃಪಾ-ಸಿದ್ಧರು ಕಷ್ಟ ತೆಗೆದುಕೊಳ್ಳಬೇಕಾಗಿರೋದಿಲ್ಲ. ಆದರೆ ಅಂಥವರು ಬಹಳ ವಿರಳ.

"ಮತ್ತೆ ನಿತ್ಯ-ಸಿದ್ಧರಿದಾರೆ. ಇವರು ಆತ್ಮಜಾಗೃತಿಯನ್ನು ಹೊಂದೇ ಪ್ರತಿಯೊಂದು ಸಲವೂ ಜನ್ಮವೆತ್ತುತ್ತಾರೆ. ಇವರನ್ನು ಮುಚ್ಚಿಹೋಗಿರುವ ಬುಗ್ಗೆಗಳಿಗೆ ಹೋಲಿಸಬಹುದು. ಕೊಳಾಯಿಗಾರ ತೋಟದಲ್ಲಿ ಅಲ್ಲಿ ಇಲ್ಲಿ ಅಗೆಯುತ್ತಿರುವಾಗ ಅಕಸ್ಮಾತ್ತಾಗಿ ಆತ ಬುಗ್ಗೆಯ ತಡೆಯನ್ನು ತೆಗೆದು ಹಾಕಿಬಿಡಬಹುದು. ಆಗ ನೀರು 'ಭರ್, ಭರ್' ಅಂತ ಹೊರಕ್ಕೆ ನುಗ್ಗಿ ಬರುತ್ತದೆ. ಹಾಗೆ ನಿತ್ಯ-ಸಿದ್ಧರ ಪ್ರಥಮಾನುರಾಗ ವ್ಯಕ್ತವಾದಾಗ ಜನ ಆಶ್ಚರ್ಯಚಕಿತರಾಗಿ ಹೇಳುತ್ತಾರೆ: 'ಇಷ್ಟೊಂದು ಭಕ್ತಿ, ವೈರಾಗ್ಯ, ಪ್ರೇಮ ಎಲ್ಲಿ ಇತ್ತು?'"

ಮಾತುಕತೆ ಗೋಪಿಯರ ಅನುರಾಗದ ಸಂಬಂಧವಾಗಿ ಆರಂಭವಾಯಿತು. ರಾಮಲಾಲ ಹಾಡುತ್ತಿದಾನೆ:

ನೀನೆನ್ನ ಸರ್ವಸ್ವ, ನನ್ನ ಜೀವದ ಜೀವ, ನನ್ನೊಳಗಿನೊಳಗು.
ನಿನ್ನ ಹೊರತೆನಗಾರು ನನ್ನವರು ಇಲ್ಲವೋ ಮೂಲೋಕದೊಳಗೂ! . . .
(ಉ. ೬೮)

ಶ್ರೀರಾಮಕೃಷ್ಣರು ಭಕ್ತರಿಗೆ: "ಆಹಾ! ಎಷ್ಟು ಸುಂದರವಾದ ಹಾಡು! 'ನೀನೆನ್ನ ಸರ್ವಸ್ವ.'"

ತಮ್ಮ ಪ್ರಾಣವಲ್ಲಭನಾದ ಶ್ರೀಕೃಷ್ಣನ ವಿರಹದಿಂದ ಗೋಪಿಯರ ಹೃದಯ ಯಾವ ರೀತಿಯಾಗಿ ಪರಿತಪಿಸುತ್ತಿತ್ತು ಎಂಬುದನ್ನು—ವರ್ಣಿಸುವ ಒಂದು ಹಾಡನ್ನು ರಾಮಲಾಲ ಹಾಡಲಾರಂಭಿಸಿದ:[1]

ತಡೆಯದಿರಿ, ತಡೆಯದಿರಿ ರಥಚಕ್ರಗಳನು;
ಚಕ್ರದಿಂದೀ ರಥವು ಮುನ್ನಡೆವುದೇನು?
ಯಾವ ಚಕ್ರಿಯ ಇಚ್ಛೆಗೀ ಲೋಕಚಕ್ರ
ನಡೆಯುವುದೊ, ಅವನಿಚ್ಛೆ ನಡಸುವುದು ಇದನೂ!

ಹಾಡನ್ನು ಕೇಳುತ್ತ ಕೇಳುತ್ತ ಪರಮಹಂಸರು ಗಾಢಸಮಾಧಿಸ್ಥರಾಗಿದಾರೆ. ಕೈ ಜೋಡಿಸಿ ಕುಳಿತುಕೊಂಡಿದಾರೆ—ಅವರ ಭಾವಚಿತ್ರದಲ್ಲಿ

1. ಒಮ್ಮೆಗೇ ಮಥುರೆಗೆ ಹೊರಟುಹೋಗಲು ಶ್ರೀಕೃಷ್ಣ ಅಕ್ರೂರನೊಡನೆ ರಥ ಹತ್ತಿದಾಗ ಗೋಪಿಯರು ರಥದ ಚಕ್ರಗಳನ್ನು ಬಿಗಿದಪ್ಪಿ ಅದು ಚಲಿಸಲು ಬಿಟ್ಟುಕೊಡಲಿಲ್ಲ.

ಕಾಣಬರುವ ಹಾಗೆ. ಅವರ ಕಡೆಗಣ್ಣುಗಳಿಂದ ಪ್ರೇಮಾಶ್ರು ಸುರಿಯುತ್ತಿದೆ. ಬಹಳ ಹೊತ್ತಾದ ಮೇಲೆ ಪ್ರಕೃತಿಸ್ಥರಾಗುತ್ತಿದಾರೆ. ಅವರು ಏನೇನನ್ನೊ ಮಟಗುಟ್ಟುತ್ತಿದಾರೆ. ಎಲ್ಲೊ ಅಲ್ಲೊಂದು ಇಲ್ಲೊಂದು ಪದ ಭಕ್ತರ ಕಿವಿಗೆ ಬೀಳುತ್ತಿದೆ. ಅವರು ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: "ನೀನೇ ನಾನು, ನಾನೇ ನೀನು—ನೀನು ತಿನ್ನು—ನೀನು—ನಾನು ತಿನ್ನುತ್ತೇನೆ! . . . ಆದರೆ ಒಳ್ಳೆಕೆಲಸ ಮಾಡುತ್ತಿದೀಯೆ!"

ಹಾಗೇ ಮಟಗುಟ್ಟುವುದನ್ನು ಮುಂದುವರಿಸುತ್ತ ಪರಮಹಂಸರು ಹೇಳುತ್ತಿದಾರೆ: "ಕಾಮಾಲೆ ರೋಗದವನ ಹಾಗೆ ಎಲ್ಲಾ ಕಾಣಬರುತ್ತಿದೆ! ಯಾವ ದಿಕ್ಕಿಗೆ ತಿರುಗಿ ನೋಡಿದರೂ ನೀನೇ ನನ್ನ ಕಣ್ಣಿಗೆ! ಹೇ ಕೃಷ್ಣ! ಹೇ ದೀನಬಂಧು! ಗೋವಿಂದ! ಪ್ರಾಣವಲ್ಲಭ! ಗೋವಿಂದ!"

ಪರಮಹಂಸರು "ಪ್ರಾಣವಲ್ಲಭ!", "ಗೋವಿಂದ!" ಎಂಬುದಾಗಿ ಹೇಳಿದೊಡನೇ ಮತ್ತೆ ಸಮಾಧಿಸ್ಥರಾಗಿಬಿಟ್ಟರು. ಕೊಠಡಿ ನಿಶ್ಶಬ್ದವಾಗಿದೆ. ಭಕ್ತರೆಲ್ಲರೂ ಮಹಾಭಾವಮಯ ಪರಮಹಂಸರನ್ನು ತಮ್ಮ ಅತೃಪ್ತ ನಯನಗಳಿಂದ ಮತ್ತೆ ಮತ್ತೆ ದಿಟ್ಟಿಸಿ ನೋಡುತ್ತಿದಾರೆ.

ಅಧರಸೇನ ತನ್ನ ಕೆಲವು ಮಂದಿ ಸ್ನೇಹಿತರೊಡನೆ ಕೊಠಡಿಯನ್ನು ಪ್ರವೇಶಿಸಿದ. ಆತ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್. ವಯಸ್ಸು ಸುಮಾರು ಮೂವತ್ತು. ಇದು ಆತನ ಎರಡನೆ ಭೇಟಿ. ಅಧರನ ಸ್ನೇಹಿತ ಶಾರದಾ-ಚರಣ ಸ್ಕೂಲುಗಳ ಡೆಪ್ಯುಟಿ ಇನ್ಸ್ಪೆಕ್ಟರಾಗಿದ್ದು ಈಗ ವಿಶ್ರಾಂತಿ ವೇತನ ಪಡೆಯುತ್ತಿದಾನೆ. ಆತ ಈಗ ವಿಶೇಷವಾಗಿ ಧ್ಯಾನ ಭಜನೆಗಳಲ್ಲೇ ತನ್ನ ಕಾಲವನ್ನು ಕಳೆಯುತ್ತಿದಾನೆ. ಸ್ವಲ್ಪ ಕಾಲದ ಹಿಂದೆ ಆತ ತನ್ನ ಹಿರಿಯ ಮಗನನ್ನು ಕಳೆದುಕೊಂಡುಬಿಟ್ಟದ್ದರಿಂದ ಪುತ್ರಶೋಕವನ್ನು ತಾಳಲಾರದೆ ಬಹಳವಾಗಿ ಕಂಗೆಟ್ಟುಹೋಗಿದಾನೆ. ಆತನಿಗೆ ಮನಶ್ಶಾಂತಿ ದೊರಕಿಸಿ ಕೊಡಲೋಸುಗ ಅಧರಸೇನ ಆತನನ್ನು ಪರಮಹಂಸರ ಹತ್ತಿರಕ್ಕೆ ಕರೆದುಕೊಂಡು ಬಂದಿದಾನೆ.

ಪರಮಹಂಸರು ಪ್ರಕೃತಿಸ್ಥರಾಗಿ ನೋಡುತ್ತಾರೆ, ತಮ್ಮ ಕೊಠಡಿಯ ತುಂಬ ಜನ ತುಂಬಿಕೊಂಡು ತಮ್ಮನ್ನು ಏಕದೃಷ್ಟಿಯಿಂದ ನೋಡುತ್ತಿದಾರೆ. ಆಗ ಅವರು ತಮಗೆ ತಾವೇ ಏನನ್ನೊ ಹೇಳಿಕೊಳ್ಳುತ್ತಿದಾರೆ.

ಬಳಿಕ ಭಕ್ತರನ್ನು ಸಂಬೋಧಿಸಿ ಪರಮಹಂಸರು ಹೇಳುತ್ತಿದಾರೆ: "ಪ್ರಾಪಂಚಿಕರ ಭಗವತ್ಸಂಬಂಧವಾದ ವಿವೇಚನೆ ಎಲ್ಲೊ ಅಪರೂಪಕ್ಕೆ

ಒಮ್ಮೊಮ್ಮೆ ಅವರಲ್ಲಿ ವ್ಯಕ್ತವಾಗುತ್ತದೆ. ಅದನ್ನ ದೀಪದ ಶಿಖೆಗೆ ಹೋಲಿಸಬಹುದು. ಇಲ್ಲ ಇಲ್ಲ, ಗೋಡೆಯ ಕಂಡಿಯಿಂದ ಬರೋ ಸೂರ್ಯನ ಒಂದೇ ಒಂದು ಕಿರಣಕ್ಕೆ ಹೋಲಿಸಬಹುದು. ಪ್ರಾಪಂಚಿಕರು ಭಗವನ್ನಾಮವನ್ನೇನೊ ಜಪಿಸುತ್ತಾರೆ, ಆದರೆ ಅನುರಾಗವನ್ನು ಮಾತ್ರ ಕೇಳಲೇಬೇಡಿ. ಇದು ಮಕ್ಕಳು ತಮ್ಮ ಜಗಳದಲ್ಲಿ 'ದೇವರಾಣೆಗೂ' ಎಂದು ಹೇಳೋ ಹಾಗೆ. ಅವು ಆ ರೀತಿಯಾಗಿ ಆಣೆ ತೆಗೆದುಕೊಳ್ಳುವುದನ್ನು ಕಲಿತುಕೊಂಡದ್ದು, ತಮ್ಮ ಚಿಕ್ಕಮ್ಮ ದೊಡ್ಡಮ್ಮಂದಿರ ಜಗಳ ಕೇಳಿ.

"ಪ್ರಾಪಂಚಿಕರಲ್ಲಿ ಒಂದು ಹಿಡಿತ ಎಂಬುದೇ ಇಲ್ಲ. ಆದರೆ ಆಗಲಿ, ಹೋದರೆ ಹೋಗಲಿ ಎಂಬ ಮನೋಭಾವ. ನೀರು ಬೇಕಾದಾಗ ಬಾವಿ ತೋಡುತ್ತಾರೆ. ಹಾಗೆ ತೋಡುತ್ತಿರೋವಾಗ ಅರೆಯೇನಾದರೂ ಸಿಕ್ಕಿತು ಎಂದರೆ, ಆ ಸ್ಥಳವನ್ನ ಹಾಗೇ ಬಿಟ್ಟು ಬೇರೆ ಕಡೆ ತೋಡುತ್ತಾರೆ. ಅಲ್ಲಿ ಮರಳೇ ದೊರೆಯಲಾರಂಭಿಸಿತು ಎಂದರೆ, ಆ ಸ್ಥಳವನ್ನೂ ಬಿಟ್ಟುಬಿಡುತ್ತಾರೆ. ಮೊದಲು ಎಲ್ಲಿ ತೋಡಲು ಆರಂಭಿಸಿದರೊ ಅಲ್ಲೇ ಪಟ್ಟಿನಿಂದ ಆ ಕೆಲಸ ವನ್ನು ಮುಂದುವರಿಸದಿದ್ದರೆ ಅವರಿಗೆ ನೀರು ದೊರೆಯೋ ಬಗೆ ಹೇಗೆ?

"ಮನುಷ್ಯ ತಾನು ಬಿತ್ತಿದ್ದನ್ನು ತಾನೇ ಕೊಯ್ಯಬೇಕಾಗುತ್ತದೆ. ಅದಕ್ಕಾಗಿ ಈ ಹಾಡು ಹೇಳುತ್ತದೆ:

> ನಾನಾರ ದೂಷಿಸಲಿ, ನಾನೆ ತೋಡಿದ ಕೂಪ-
> ದಾಳದಲಿ ನಾನಾಗಿ ಮುಳುಗುತಿಹೆನು!...

"'ನಾನು', 'ನನ್ನದು' ಎಂಬುದೇ ಅಜ್ಞಾನ. ವಿಚಾರ ಮಾಡುತ್ತಾ ಹೋದರೆ ಈ 'ನಾನು' ಎಂಬುದು ಆತ್ಮವಲ್ಲದೆ ಬೇರೇನೂ ಅಲ್ಲ ಎಂಬ ಅರಿವು ಉಂಟಾಗುತ್ತದೆ. ವಿಚಾರಮಾಡಿ ನೋಡು—ನೀನು ಶರೀರವೆ, ಮೂಳೆಯೆ, ಮಾಂಸವೆ ಅಥವಾ ಬೇರೇನಾದರೂ ಆಗಿದೀಯಾ ಎಂಬುದನ್ನ. ಕೊನೆಗೆ ನಿನಗೆ ಅರ್ಥವಾಗುತ್ತೆ ಅವೊಂದೂ ನೀನಲ್ಲ, ನಿನಗೆ ಯಾವ ಉಪಾಧಿಯೂ ಇಲ್ಲ ಎಂಬುದಾಗಿ. ಬಳಿಕ ನಿನ್ನ ಅನುಭವಕ್ಕೆ ಬರುತ್ತದೆ, ನೀನು ಯಾವ ಕಾರ್ಯವನ್ನೂ ಮಾಡಿದವನಲ್ಲ, ನಿನ್ನಲ್ಲಿ ಯಾವ ದೋಷವೂ ಇಲ್ಲ ಗುಣವೂ ಇಲ್ಲ, ನೀನು ಪಾಪಪುಣ್ಯಗಳಿಗತೀತ ಎಂಬುದಾಗಿ.

"ಅಜ್ಞಾನವಶದಿಂದ ಮನುಷ್ಯ ಹೇಳುತ್ತಾನೆ: 'ಇದು ಚಿನ್ನ ಅದು ಹಿತ್ತಾಳೆ' ಎಂಬುದಾಗಿ. ಆದರೆ ಜ್ಞಾನಿ ಹೇಳುತ್ತಾನೆ: 'ಎಲ್ಲವೂ ಚಿನ್ನ' ಅಂತ.

"ಭಗವಂತನ ದರ್ಶನವಾದೊಡನೆ ವಿಚಾರ ನಿಂತುಹೋಗುತ್ತದೆ. ಆದರೆ ಕೆಲಕೆಲವರು ಭಗವಂತನ ದರ್ಶನವಾದ ಮೇಲೂ ವಿಚಾರದಲ್ಲಿ ತೊಡಗುವುದುಂಟು. ಮತ್ತೆ ಕೆಲವರು ಭಕ್ತರಾಗೇ ಉಳಿದು ಆತನ ನಾಮ ಗುಣಕೀರ್ತನೆ ಮಾಡುವುದುಂಟು.

"ಮಗು ಎಷ್ಟು ಹೊತ್ತಿನವರೆಗೆ ಅಳುತ್ತದೆ? ಸ್ತನ ದೊರೆಯದ ವರೆಗೆ. ಅದು ದೊರೆತ ಒಡನೇ ಅಳು-ಗಿಳು ಎಲ್ಲಾ ನಿಂತುಹೋಗಿಬಿಡುತ್ತವೆ. ಬಳಿಕ ಆನಂದವಿಂದ ಹಿಗ್ಗುತ್ತದೆ. ಆನಂದದಿಂದ ತಾಯ ಸ್ತನದಿಂದ ಹಾಲು ಕುಡಿಯಲಾರಂಭಿಸುತ್ತದೆ. ಆದರೆ ಇದೂ ನಿಜ. ಕುಡಿಯುತ್ತ ಕುಡಿಯುತ್ತ ಇದ್ದ ಹಾಗೆ ಒಮ್ಮೊಮ್ಮೆ ಆಟವಾಡುವುದು, ನಗುವುದು ಎಲ್ಲಾ ಮಾಡುತ್ತೆ.

"ಎಲ್ಲವೂ ಭಗವಂತನೇ ಆಗಿದಾನೆ. ಆದರೆ ಆತ ಮನುಷ್ಯನಲ್ಲಿ ವಿಶೇಷವಾಗಿ ವ್ಯಕ್ತವಾಗಿದಾನೆ. ಯಾರಲ್ಲಿ ಬಾಲಕನಂಥ ಶುದ್ಧ ಹೃದಯ ವಿದೆಯೊ, ಯಾರು ಪ್ರೇಮೋನ್ಮತ್ತನಾಗಿ ನಗುವನೊ, ಅಳುವನೊ, ನರ್ತಿಸುವನೊ, ಹಾಡುವನೊ ಅಂಥವನಲ್ಲಿ ಭಗವಂತ ತಾನೇ ಸಾಕ್ಷಾತ್ತಾಗಿ ಇರುತ್ತಾನೆ."

ಈ ಸಲ ಪರಮಹಂಸರಿಗೆ ಅಧರನ ಪರಿಚಯ ಇನ್ನೂ ಹೆಚ್ಚಾಗಿ ಆಯಿತು. ಆತ ತನ್ನ ಸ್ನೇಹಿತನ ದುಃಖಕ್ಕೆ ಕಾರಣ ಏನು ಎಂಬುದನ್ನು ಪರಮಹಂಸರಿಗೆ ತಿಳಿಸಿದ. ಪರಮಹಂಸರು ಈಗ ತಮಗೆ ತಾವೇ ಹಾಡಿ ಕೊಳ್ಳುತ್ತಿರುವಂತೆ ಒಂದು ಹಾಡನ್ನು ಹಾಡುತ್ತಿದಾರೆ:

ಕೈದುಗೊಳು, ಕೈದುಗೊಳು; ಮನೆಯ ಸುತ್ತಲು ಮೃತ್ಯು
ನಿಂತು ರಣಭೇರಿಯನು ಹೊಡೆಯುತ್ತಿದೆ.
ಜ್ಞಾನತೂಣೀರವನು ಹೆಗಲಿಗೇರಿಸು; ಹತ್ತು
ಭಕ್ತಿಯ ರಥವ; ಸಮರ ಕರೆಯುತ್ತಿದೆ!
ಪ್ರೇಮಗುಣವನು ಬಿಗಿದು ನಿನ್ನ ರಸನೆಯ ಧನುವಿ-
ನಿಂದ ಬಿಡು ಶ್ರೀಕಾಳಿ ನಾಮಾಸ್ತ್ರವ!
ರಥರಥಿಕರತ್ತಿರಲಿ; ಭಾಗೀರಥೀ ತೀರ-
ದಲಿ ನಿಂತು ಗೆದ್ದುಬಾ ಈ ಸಮರವ!

ಬಳಿಕ ಹೇಳುತ್ತಿದಾರೆ: "ಮತ್ತೇನು ಮಾಡಬಲ್ಲೆ? ಮೃತ್ಯುವಿಗಾಗಿ ಸಿದ್ಧನಾಗು. ಮೃತ್ಯು ಮನೆಯನ್ನು ಪ್ರವೇಶಿಸಿದಾನೆ. ಭಗವಂತನ ನಾಮ

ವೆಂಬ ಅಸ್ತ್ರ ಹಿಡಿದು ಆತನೊಡನೆ ಯುದ್ಧಮಾಡಬೇಕಾಗಿದೆ. ಭಗವಂತನೇ ಕರ್ತ. ನಾನು ಹೇಳುತ್ತೇನೆ: 'ಹೇ ಭಗವಂತ, ನೀನು ಮಾಡಿಸಿದ ಹಾಗೆ ಮಾಡುತ್ತೇನೆ, ಹೇಳಿಸಿದಹಾಗೆ ಹೇಳುತ್ತೇನೆ. ನಾನು ಯಂತ್ರ, ನೀನು ಯಾಂತ್ರಿಕ. ನಾನು ಗೃಹ, ನೀನು ಗೃಹಪತಿ. ನಾನು ಗಾಡಿ, ನೀನು ಚಾಲಕ.' ಆತನಿಗೆ ವಕಾಲತ್ತು ವಹಿಸಿಬಿಡು. ಒಳ್ಳೆಯವರ ಮೇಲೆ ಭಾರ ಹಾಕಿಬಿಟ್ಟರೆ ಅವರು ಅಮಂಗಳ ತರೋದಿಲ್ಲ. ಭಗವಂತ ತನ್ನ ಇಚ್ಛೆ ಯಿದ್ದಂತೆ ನಡಸಲಿ.

"ಏನು, ದುಃಖ ಆಗಬೇಡ? ಪುತ್ರ ಆತ್ಮಜ. ರಾವಣನ ವಧೆ ಆಯಿತು. ಲಕ್ಷ್ಮಣ ಒಡನೇ ಅಲ್ಲಿಗೆ ಓಡಿಹೋಗಿ ನೋಡಿದ. ನೋಡು ತ್ತಾನೆ, ರಾವಣನ ಮೂಳೆಗಳಲ್ಲಿ ಛಿದ್ರವಿಲ್ಲದ ಜಾಗವೇ ಕಂಡುಬರಲಿಲ್ಲ. ಆಗ ಆತ ರಾಮನಿಗೆ ಹೇಳಿದ: 'ಹೇ ರಾಮ, ನಿನ್ನ ಬಾಣಗಳ ಮಹಿಮೆ ಎಷ್ಟು ಅದ್ಭುತವಾದ್ದು! ರಾವಣನ ಶರೀರದಲ್ಲಿ ಛಿದ್ರವಾಗದ ಜಾಗವೇ ಉಳಿದುಕೊಂಡಿಲ್ಲವಲ್ಲ!' ರಾಮ ಉತ್ತರವಿತ್ತ: 'ಸಹೋದರ, ಆತನ ಮೂಳೆಗಳಲ್ಲಿ ಕಾಣುತ್ತಾ ಇವೆಯಲ್ಲ ಛಿದ್ರಗಳು ಅವು ನನ್ನ ಬಾಣದಿಂದಾದು ವಲ್ಲ. ಪುತ್ರಶೋಕದಿಂದ ಆತನ ಮೂಳೆ ಜರ್ಜರಿತವಾಗಿಬಿಟ್ಟವೆ. ಈ ಛಿದ್ರಗಳೆಲ್ಲ ಆತನ ಶೋಕ ಎಷ್ಟರಮಟ್ಟನದು ಎಂಬುದನ್ನು ತೋರಿ ಸುತ್ತಿವೆ. ಪುತ್ರಶೋಕ ಮೂಳೆಯನ್ನೂ ಕೊರೆದುಬಿಟ್ಟದೆ.'

"ಆದರೆ ಮನೆ, ಹೆಂಡತಿ, ಮಕ್ಕಳು ಇವೆಲ್ಲಾ ಅನಿತ್ಯ—ಎರಡು ದಿನದವು, ತಾಳೆಮರವೇ ಕೇವಲ ಸತ್ಯವಾದ್ದು. ಅದರಿಂದ ಒಂದೆರಡು ಹಣ್ಣು ಕಳಚಿಕೊಂಡುವು. ಅದಕ್ಕೇಕೆ ಅಳಬೇಕು?

"ಭಗವಂತ ಈ ಮೂರು ಕೆಲಸ ಮಾಡುತ್ತಿದಾನೆ: ಸೃಷ್ಟಿ, ಸ್ಥಿತಿ, ಪ್ರಳಯ. ಮೃತ್ಯು ತಪ್ಪಿದ್ದಲ್ಲ. ಪ್ರಳಯವಾದಾಗ ಎಲ್ಲಾ ಧ್ವಂಸವಾಗಿ ಹೋಗುತ್ತವೆ. ಯಾವುದೂ ಉಳಿಯೋದಿಲ್ಲ. ಭಗವತಿ ಆಗ ಸೃಷ್ಟಿಗೆ ಬೇಕಾಗೋ ಬೀಜಗಳನ್ನು ಮಾತ್ರ ಶೇಖರಿಸಿ ಇಟ್ಟುಕೊಳ್ಳುತ್ತಾಳೆ. ಆಕೆ ಹೊಸದಾಗಿ ಸೃಷ್ಟಿ ಆರಂಭಿಸುವಾಗ ಅವುಗಳನ್ನೆಲ್ಲಾ ಹೊರಕ್ಕೆ ತೆಗೆ ಯುತ್ತಾಳೆ. ಗೃಹಿಣಿಯರು ಸೌತೆಕಾಯಿ ಬೀಜ, ಸಮುದ್ರದ ನೊರೆ, ನೀಲಿ ಗುಳಿಗೆ ಇನ್ನೂ ಏನೇನೊ ಚಿಕ್ಕ ಚಿಕ್ಕ ಪೊಟ್ಟಣಗಳನ್ನ ಒಂದು ಗುಡಾಣದಲ್ಲಿ ತುಂಬಿಟ್ಟುಕೊಂಡಿದ್ದು ಬೇಕಾದಾಗ ಹೊರಕ್ಕೆ ತೆಗೆಯೋ ದಿಲ್ಲವೆ, ಹಾಗೆ." (ಎಲ್ಲರೂ ನಗುತ್ತಾರೆ.)

ಪರಮಹಂಸರು ತಮ್ಮ ಕೊಠಡಿಯ ಉತ್ತರ ವರಾಂಡದಲ್ಲಿ ನಿಂತು ಕೊಂಡು ಅಧರಸೇನನೊಡನೆ ಮಾತುಕತೆಯಾಡುತ್ತಿದ್ದಾರೆ.

ಶ್ರೀರಾಮಕೃಷ್ಣರು : "ನೀನು ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್. ಈ ಹುದ್ದೆಯೂ ನಿನಗೆ ಭಗವಂತನ ಅನುಗ್ರಹದಿಂದ ದೊರೆತಿದೆ. ಆತನನ್ನು ಎಂದಿಗೂ ಮರೆಯಬೇಡ. ಆದರೆ ಒಂದಲ್ಲ ಒಂದು ದಿನ ಆ ಮಾರ್ಗವಾಗಿ[1] ಎಲ್ಲರೂ ಹೋಗಲೇಬೇಕು ಎಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿ ಇಟ್ಟುಕೊ. ಇಲ್ಲಿ ನಮ್ಮ ಬಾಳು ಎರಡು ದಿನದ್ದು ಮಾತ್ರ.

"ಈ ಜಗತ್ತು ಕರ್ಮಭೂಮಿ. ಇಲ್ಲಿಗೆ ನಾವು ಕೆಲವು ಕರ್ಮಗಳನ್ನು ಮಾಡಲೋಸುಗ ಬಂದಿದೇವೆ. ಜನ ಹಳ್ಳಿಗಳಲ್ಲಿ ವಾಸವಾಗಿದ್ದು ಕಲ್ಕತ್ತಕ್ಕೆ ಕೆಲಸಕ್ಕೆ ಬರೋದಿಲ್ಲವೆ, ಹಾಗೆ.

"ಇಲ್ಲಿ ಒಂದು ಸ್ವಲ್ಪ ಕೆಲಸ ಮಾಡಬೇಕಾದ್ದೆ. ಇದೂ ಒಂದು ವಿಧ ವಾದ ಸಾಧನೆಯೇ. ಆದಷ್ಟು ಬೇಗ ನಾವು ಮಾಡಬೇಕಾಗಿರೋ ಕರ್ಮ ಗಳನ್ನ ಮಾಡಿ ಮುಗಿಸಿಕೊಂಡುಬಿಡಬೇಕು. ಅಕ್ಕಸಾಲಿಗ ಚಿನ್ನ ಕರಗಿಸು ವಾಗ ಸಾಕಾದಷ್ಟು ಶಾಖವನ್ನು ಉತ್ಪತ್ತಿಮಾಡಲು ತಿದಿ, ಬೀಸಣಿಗೆ, ಊದುಕೊಳವೆ ಎಲ್ಲವನ್ನೂ ಉಪಯೋಗಿಸುತ್ತಾನೆ. ಚಿನ್ನವನ್ನು ಕರಗಿಸಿದ ನಂತರ ಹಾಯಾಗಿ ಕುಳಿತು ತನ್ನ ಸೇವಕರಿಗೆ ಹೇಳುತ್ತಾನೆ ಗುಡುಗುಡಿ ತಯಾರುಮಾಡುವಂತೆ. ಇದುವರೆಗೆ ಆತನ ಮುಖದಿಂದ ಬೆವರು ಸುರಿ ಯುತ್ತಿತ್ತು; ಈಗ ಆತ ತಂಬಾಕು ಸೇದಬಲ್ಲ.

"ಅಧಿಕವಾದ ಉತ್ಸಾಹ ಬೇಕು. ಆಗ ಸಾಧನೆ ಸಾಧ್ಯವಾಗುತ್ತೆ. ದೃಢಪ್ರತಿಜ್ಞೆ ಬೇಕು.

"ಭಗವಂತನ ನಾಮಬೀಜದಲ್ಲಿ ಬಹಳ ಶಕ್ತಿ ಇದೆ. ಅದು ಅವಿದ್ಯೆ ಯನ್ನು ನಾಶಮಾಡಿಬಿಡುತ್ತದೆ. ಸಾಮಾನ್ಯವಾಗಿ ಬೀಜವೂ ಮೃದು, ಅದರ ಮೊಳಕೆಯೂ ಮೃದು; ಆದರೂ ಅದು ಗಟ್ಟಿ ನೆಲವನ್ನು ಭೇದಿಸಿ ಬಿಡುತ್ತದೆ. ನೆಲ ಒಡೆದು ಮೊಳಕೆಗೆ ದಾರಿಮಾಡಿಕೊಟ್ಟುಬಿಡುತ್ತದೆ.

---

1. ಈ ಮಾತುಕತೆಗಳಾದ ಹದಿನೆಂಟು ತಿಂಗಳೊಳಗಾಗಿ ಅಧರಸೇನ ದೇಹ ತ್ಯಾಗಮಾಡಿಬಿಟ್ಟ. ಆ ಸಮಾಚಾರವನ್ನು ಕೇಳಿದಾಗ ಪರಮಹಂಸರು ಭಗವತಿಯ ಹತ್ತಿರ ಬಹಳ ಹೊತ್ತು ಅತ್ತರು. ಅಧರಸೇನ ಪರಮಹಂಸರ ಪರಮಭಕ್ತ. ಅವರು ಆತನನ್ನು ತಮ್ಮ ಆತ್ಮೀಯನೆಂದು ಪರಿಗಣಿಸಿದ್ದರು.

"ಕಾಮಕಾಂಚನಗಳ ಮಧ್ಯೆ ಬಹಳ ಕಾಲ ಇದ್ದುದೇ ಆದರೆ, ಅವು ಮನಸ್ಸನ್ನು ಚಲ್ಲಾಪಿಲ್ಲಿ ಮಾಡಿಬಿಡುತ್ತವೆ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಇರಬೇಕು. ಆದರೆ ಸನ್ಯಾಸಿಗಳು ಅಷ್ಟೊಂದಾಗಿ ಹೆದರಿಕೊಳ್ಳಬೇಕಾದ್ದೇನಿಲ್ಲ. ನಿಜವಾದ ಸನ್ಯಾಸಿ ಕಾಮಕಾಂಚನಗಳಿಂದ ಬಹಳ ದೂರದಲ್ಲೆ ಇರುತ್ತಾನೆ. ಆದ್ದರಿಂದ ಸಾಧನೆಯ ಮೂಲಕ ಆತ ಸರ್ವದಾ ಭಗವಂತನಲ್ಲಿ ತನ್ನ ಮನಸ್ಸನ್ನಿಡಬಲ್ಲ.

"ಸರ್ವದಾ ಭಗವಂತನಲ್ಲೇ ಮನಸ್ಸನ್ನಿಡಬಲ್ಲ ನಿಜವಾದ ತ್ಯಾಗಿಗಳನ್ನು ಜೇನುಹುಳುಗಳಿಗೆ ಹೋಲಿಸಬಹುದು. ಅವು ಕೇವಲ ಹೂವುಗಳ ಮೇಲೆ ಇಳಿದು ಮಧುಪಾನಮಾಡುತ್ತವೆ. ಯಾರು ಈ ಜಗತ್ತಿನಲ್ಲಿ ಕಾಮಕಾಂಚನಗಳ ಮಧ್ಯೆ ಇರುತ್ತಾರೊ ಅವರೂ ತಮ್ಮ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬಲ್ಲರು; ಆದರೆ ಕೆಲವು ವೇಳೆ ಅವರು ಕಾಮಕಾಂಚನಗಳ ಕಡೆಗೂ ಅದನ್ನು ತಿರುಗಿಸಿಬಿಡುತ್ತಾರೆ. ಅವರು ಈ ಸಾಧಾರಣ ನೊಣಗಳ ಹಾಗೆ. ಅವು ಸಿಹಿ ತಿಂಡಿಗಳ ಮೇಲೂ ಕೂರುತ್ತವೆ, ಕೊಳೆತು ನಾರುವ ಹುಣ್ಣುಗಳ ಮೇಲೂ ಕೂರುತ್ತವೆ, ಹೇಸಿಗೆಯ ಮೇಲೂ ಕೂರುತ್ತವೆ.

"ಭಗವಂತನಲ್ಲಿ ಸರ್ವದಾ ಮನಸ್ಸನ್ನಿಡು. ಮೊದಲು ಸ್ವಲ್ಪ ಶ್ರಮಿಸಬೇಕಾಗುತ್ತದೆ; ಕೊನೆಗೆ ವಿಶ್ರಾಂತಿ ವೇತನ ದೊರೆಯುತ್ತದೆ."

೧೫ ನೆ ಏಪ್ರಿಲ್ ೧೮೮೩, ಚೈತ್ರ ಶುಕ್ಲ ಅಷ್ಟಮಿ, ಭಾನುವಾರ.

ಪರಮಹಂಸರ ಪ್ರಿಯ ಶಿಷ್ಯರಲ್ಲೊಬ್ಬನಾದ ಸುರೇಂದ್ರ ಅವರನ್ನು ತನ್ನ ಮನೆಗೆ ಅನ್ನಪೂರ್ಣಾ ಪೂಜೆಯ ನಿಮಿತ್ತವಾಗಿ ಆಹ್ವಾನಿಸಿದಾನೆ. ತಮ್ಮ ಭಕ್ತರೊಡನೆ ಪರಮಹಂಸರು ಅಲ್ಲಿಗೆ ಬಂದಾಗ ಸಾಯಂಕಾಲ ಆರು. ಸುರೇಂದ್ರ ದೇವರ ಕೋಣೆಯಲ್ಲಿ ಭಗವತಿಯನ್ನು ಪೂಜೆಮಾಡಿದಾನೆ. ಆತ ಆಕೆಯ ಪಾದಪದ್ಮಗಳಿಗೆ ದಾಸವಾಳದ ಹೂವು ಮತ್ತು ಬಿಲ್ವದಳಗಳನ್ನು ಅರ್ಪಿಸಿದಾನೆ; ಕೊರಳಿಗೆ ಹೂವಿನ ಮಾಲೆಯನ್ನು ಹಾಕಿದಾನೆ. ಪರಮಹಂಸರು ಒಳಅಂಗಳಕ್ಕೆ ಬಂದು ದೇವಿಗೆ ಪ್ರಣಾಮ ಮಾಡಿದರು. ಅನಂತರ ಹೊರಅಂಗಳಕ್ಕೆ ಬಂದು ಭಕ್ತರೊಡನೆ ರತ್ನಗಂಬಳಿಯ ಮೇಲೆ ಕುಳಿತುಕೊಂಡರು. ಆ ರತ್ನಗಂಬಳಿಯ ಮೇಲೆ ಅಲ್ಲಲ್ಲಿ ಕೆಲವು ಒರಗುದಿಂಬುಗಳು ಬಿದ್ದಿದ್ದುವು. ಪರಮಹಂಸರಿಗೆ ಅವುಗಳಲ್ಲೊಂದನ್ನು ಕೊಟ್ಟಾಗ ಅವರು ಅದನ್ನು ಒಂದು ಕಡೆಗೆ ತಳ್ಳಿಬಿಟ್ಟರು.

ಶ್ರೀರಾಮಕೃಷ್ಣರು ಭಕ್ತರಿಗೆ: "ಒರಗುದಿಂಬು ಒರಗಿ ಕುಳಿತು ಕೊಳ್ಳುವುದು! ನೋಡಿ, ಅಭಿಮಾನ ತ್ಯಜಿಸುವುದೆಂದರೆ ಬಹಳ ಕಷ್ಟ. ವಿಚಾರಮಾಡಬಹುದು, ಅಹಂಕಾರವೆಂಬುದು ಏನೂ ಇಲ್ಲ ಎಂಬುದಾಗಿ; ಆದರೂ ಎಲ್ಲಿಂದಲೊ ಅದು ಬಂದುಬಿಡುತ್ತದೆ. ಆಡಿನ ತಲೆಯನ್ನ ಕತ್ತರಿಸಿದನಂತರವೂ ಅದರ ಅಂಗ ಪ್ರತ್ಯಂಗ ಸ್ವಲ್ಪ ಹೊತ್ತು ಅಲುಗಾಡುತ್ತಿರುತ್ತವೆ. ಸ್ವಪ್ನದಲ್ಲಿ ಏನೊ ಒಂದು ಭಯಂಕರ ಅನುಭವ ಆಯಿತು ಅಂತ ಇಟ್ಟುಕೊಳ್ಳಿ. ನಿದ್ದೆಯಿಂದ ಏಳುತ್ತೇವೆ, ಚೆನ್ನಾಗಿ ಎಚ್ಚರಗೊಂಡಿರುತ್ತೇವೆ, ಆದರೂ ಎದೆ ಮಾತ್ರ 'ಡಬ, ಡಬ' ಅಂತ ಇನ್ನೂ ಹೊಡೆದುಕೊಳ್ಳುತ್ತಿರುತ್ತದೆ. ಅಹಂಕಾರವೂ ಹಾಗೆ. ಹೊಡೆದೋಡಿಸಿದರೂ ಎಲ್ಲಿಂದಲೊ ಬಂದುಬಿಡುತ್ತದೆ. ಆಗ ಮನುಷ್ಯ ಹುಬ್ಬು ಗಂಟುಹಾಕಿಕೊಂಡವನಾಗಿ ಹೇಳುತ್ತಾನೆ: 'ಏನಿದು! ನನಗೆ ಗೌರವ ತೋರಿಸದೆ ಹೋದರಲ್ಲ!'"

ಕೇದಾರ: "'ಹುಲ್ಲಿಗಿಂತಲೂ ಕಡೆಯಾಗಿ, ಮರದಂತೆ ಸಹಿಷ್ಣುವಾಗಿ ಇರಬೇಕು.'"

ಶ್ರೀರಾಮಕೃಷ್ಣರು: "ನಾನು ಭಕ್ತರ ರೇಣುವಿನ ರೇಣು."

ವೈದ್ಯನಾಥ ಕೊಠಡಿಯನ್ನು ಪ್ರವೇಶಿಸಿದ. ಆತ ಒಳ್ಳೆ ವಿದ್ಯಾವಂತ. ಹೈಕೋರ್ಟಿನಲ್ಲಿ ವಕೀಲನಾಗಿದ್ದಾನೆ. ಆತ ಕೈ ಜೋಡಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ.

ಸುರೇಂದ್ರ ಶ್ರೀರಾಮಕೃಷ್ಣರಿಗೆ: "ಈತ ನನ್ನ ಸಂಬಂಧಿ."

ಶ್ರೀರಾಮಕೃಷ್ಣರು: "ಹಾಗೇನು? ಈತನಲ್ಲಿ ಒಳ್ಳೆ ಗುಣಗಳಿವೆ."

ಸುರೇಂದ್ರ: "ಈತ ನಿಮ್ಮನ್ನು ಏನೊ ಕೇಳಬೇಕಂತೆ. ಅದಕ್ಕಾಗಿ ಬಂದಿದಾನೆ."

ಶ್ರೀರಾಮಕೃಷ್ಣರು ವೈದ್ಯನಾಥನಿಗೆ: "ಏನೇನು ನಿನ್ನ ಕಣ್ಣಿಗೆ ಬೀಳುತ್ತಿರುವುವೊ ಎಲ್ಲವೂ ಭಗವಂತನ ಶಕ್ತಿಯಿಂದ ಉತ್ಪನ್ನವಾದುವೇ. ಆ ಶಕ್ತಿಯನ್ನು ಬಿಟ್ಟು ಯಾರೂ ಏನನ್ನೂ ಮಾಡೋ ಹಾಗಿಲ್ಲ. ಆದರೆ ಒಂದು ವಿಷಯ. ಆತನ ಶಕ್ತಿ ಎಲ್ಲರಲ್ಲೂ ಒಂದೇ ಸಮನಾಗಿ ವ್ಯಕ್ತವಾಗಿಲ್ಲ. ಒಮ್ಮೆ ವಿದ್ಯಾಸಾಗರ ನನ್ನನ್ನು ಕೇಳಿದ: 'ಏನು, ಭಗವಂತ ಕೆಲಕೆಲವರಿಗೆ ಹೆಚ್ಚು ಶಕ್ತಿ ಕೊಡುತ್ತಾನೇನು?' ನಾನು ಹೇಳಿದೆ: 'ಆತ ಹೆಚ್ಚು ಕಡಮೆ ಶಕ್ತಿ ಕೊಡದಿದ್ದ ಪಕ್ಷದಲ್ಲಿ, ನಿನ್ನನ್ನು ನೋಡಲು ನಾವೇಕೆ

ಇಲ್ಲಿಗೆ ಬಂದಿದೇವೆ? ನಿನಗೇನು ಎರಡು ಕೊಂಬು ಬೆಳೆದಿವೆಯೆ?' ಆದ್ದರಿಂದ ಭಗವಂತ ವಿಭುರೂಪದಿಂದಲೇನೊ ಸರ್ವ ಭೂತಗಳಲ್ಲಿಯೂ ಇದಾನೆ; ಆದರೆ ಶಕ್ತಿ ವಿಶೇಷತೆಯಿಂದ. ಇದು ನ್ಯಾಯಸಮ್ಮತವಾಗಿದೆ.''

ವೈದ್ಯನಾಥ: ''ಮಹಾಶಯರೆ, ನನಗೊಂದು ಸಂದೇಹವಿದೆ. ಜನ ಹೇಳುತ್ತಾರಲ್ಲ, ಸ್ವತಂತ್ರ ಇಚ್ಛೆಯೆಂಬುದೊಂದಿದೆ, ಮನುಷ್ಯ ತನ್ನ ಇಚ್ಛೆಗನುಸಾರ ಒಳ್ಳೆಯದನ್ನೂ ಮಾಡಬಲ್ಲ ಕೆಟ್ಟದ್ದನ್ನೂ ಮಾಡಬಲ್ಲ ಎಂಬುದಾಗಿ ಅದು ಸತ್ಯವೆ? ಸತ್ಯವಾಗಿಯೂ ನಾವು ಸ್ವತಂತ್ರರೇ?''

ಶ್ರೀರಾಮಕೃಷ್ಣರು: ''ಎಲ್ಲವೂ ಭಗವದಧೀನ. ಈ ಜಗಲ್ಲೀಲೆ ಆತನದೇ. ಆತ ವಿವಿಧ ವಸ್ತುಗಳನ್ನು ಸೃಷ್ಟಿಸಿದಾನೆ— ದೊಡ್ಡದು ಚಿಕ್ಕದು, ಬಲಿಷ್ಠವಾದ್ದು ದುರ್ಬಲವಾದ್ದು, ಒಳ್ಳೇದು ಕೆಟ್ಟದ್ದು, ಒಳ್ಳೆಯವರು ಕೆಟ್ಟವರು ಮೊದಲಾದುವನ್ನ. ಇವೆಲ್ಲಾ ಆತನ ಮಾಯೆ, ಆತನ ಕ್ರೀಡೆ. ನಿನ್ನ ಅನುಭವಕ್ಕೆ ಬಂದಿರಬೇಕು ತೋಟದಲ್ಲಿರೋ ಮರಗಿಡಗಳೆಲ್ಲಾ ಒಂದೇ ಜಾತಿಯವಲ್ಲ ಎಂಬುದು.

''ಭಗವಂತನ ಸಾಕ್ಷಾತ್ಕಾರವಾಗದವರೆಗೆ ಅನಿಸುತ್ತದೆ, ನಾವು ಸ್ವತಂತ್ರರು ಎಂಬುದಾಗಿ. ಈ ಭ್ರಮೆಯನ್ನು ಆತನೇ ಮನುಷ್ಯನಲ್ಲಿ ಇಟ್ಟಿದಾನೆ. ಇಲ್ಲದಿದ್ದರೆ ಪಾಪ ಪ್ರವೃತ್ತಿ ಬೆಳೆದುಬಿಡುತ್ತಿತ್ತು. ಮನುಷ್ಯ ಪಾಪಕ್ಕೆ ಹೆದರುತ್ತಿರಲಿಲ್ಲ. ಪಾಪಕಾರ್ಯಕ್ಕೆ ತಕ್ಕ ಶಾಸ್ತಿಯೇ ಇಲ್ಲದಂತಾಗಿಬಿಡುತ್ತಿತ್ತು.

''ಆದರೆ ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನ ಭಾವ ಏನು ಎಂಬುದು ಗೊತ್ತೆ? ಆತನಿಗೆ ಅನಿಸುತ್ತದೆ: 'ಹೇ ಭಗವಂತ, ನಾನು ಯಂತ್ರ, ನೀನು ಯಾಂತ್ರಿಕ. ನಾನು ಗೃಹ, ನೀನು ಗೃಹಪತಿ. ನಾನು ರಥ ನೀನು ರಥಿಕ. ಚಲಿಸಿದಂತೆ ಚಲಿಸುತ್ತೇನೆ; ನುಡಿಸಿದಂತೆ ನುಡಿಯುತ್ತೇನೆ.

(ವೈದ್ಯನಾಥನಿಗೆ) ''ತರ್ಕದಲ್ಲಿ ತೊಡಗುವುದು ಒಳ್ಳೆಯದಲ್ಲ. ಏನು ಹೇಳುತ್ತೀಯೆ?''

ವೈದ್ಯನಾಥ: ''ಹೌದು. ಜ್ಞಾನ ದೊರೆಯಿತು ಎಂದರೆ ಆ ಪ್ರವೃತ್ತಿ ಹೊರಟುಹೋಗುತ್ತದೆ.''

ಪರಮಹಂಸರು ತಮಗೆ ಗೊತ್ತಿದ್ದ ಒಂದು ಡಜನ್ ಇಂಗ್ಲಿಷ್

ಪದಗಳ ಕೋಶವನ್ನು ಉಪಯೋಗಿಸಿ ಹೇಳಿದರು: "ಥ್ಯಾಂಕ್ ಯೂ. (ನಿನಗೆ ವಂದನೆ.)" (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ವೈದ್ಯನಾಥನಿಗೆ: "ನಿನಗೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. ಭಗವಂತನ ವಿಷಯವಾಗಿ ಹೇಳಿದರೆ ಜನ ಅದನ್ನು ನಂಬುವುದಿಲ್ಲ. ಮಹಾಪುರುಷರಾರಾದರೂ ಹೇಳಿದರೆ ತಾವು ಭಗವಂತನನ್ನು ನೋಡಿರುವುದಾಗಿ, ಸಾಧಾರಣ ಜನರು ಅವರ ಮಾತಿಗೆ ಬೆಲೆ ಕೊಡುವುದಿಲ್ಲ. ಸಾಧಾರಣ ಜನ ಭಾವಿಸುತ್ತಾರೆ: 'ಇವರು ಭಗವಂತನನ್ನು ನೋಡಿರುವುದಾದರೆ, ನಮಗೆ ತೋರಿಸಿಕೊಡಲಿ ನೋಡೋಣ.' ಆದರೆ ಒಂದೇ ದಿನದೊಳಗೆ ನಾಡಿ ನೋಡುವುದನ್ನು ಕಲಿತುಕೊಳ್ಳಲಾಗುವುದೆ? ವೈದ್ಯನೊಡನೆ ಅನೇಕ ದಿನ ಸುಮ್ಮನೆ ಸುತ್ತಬೇಕು; ಆಗ ಅರಿತುಕೊಳ್ಳಬಹುದು ಯಾವುದು ವಾಯುವಿನ ನಾಡಿ, ಯಾವುದು ಪಿತ್ತದ ನಾಡಿ ಎಂಬುದನ್ನ. ನಾಡಿಯನ್ನು ನೋಡುವುದು ಯಾರ ಮುಖ್ಯ ವೃತ್ತಿಯಾಗಿರುವುದೊ ಅವರ ಸಂಗ ಮಾಡಬೇಕು.

"ಎಲ್ಲರಿಗೂ ಇದಿದು ಇಷ್ಟನೆ ನಂಬರ ನೂಲು ಅಂತ ಹೇಳಲು ಸಾಧ್ಯವೆ? ಯಾರು ನೂಲು ವ್ಯಾಪಾರಿಗಳೊ ಅವರು ಯಾವುದು ನಲವತ್ತನೆ ನಂಬರ ನೂಲು, ಯಾವುದು ನಲವತ್ತೊಂದನೆ ನಂಬರ ನೂಲು ಎಂಬುದನ್ನ ಒಡನೇ ಹೇಳಬಲ್ಲರು."

ಇನ್ನೇನು ಸಂಕೀರ್ತನೆ ಆರಂಭವಾಗುವುದರಲ್ಲಿದೆ. ಈಗ ಮೃದಂಗ ಬಾಜನ ಆಗುತ್ತಿದೆ. ಮೃದಂಗದ ಮಧುರ ಧ್ವನಿ ಶ್ರೀಗೌರಾಂಗನ ಪ್ರೇಮೋನ್ಮತ್ತಕಾರಿ ಸಂಕೀರ್ತನೆಯನ್ನು ಮನಸ್ಸಿಗೆ ತರಲಾರಂಭಿಸಿತು. ಪರಮಹಂಸರು ಭಾವಸ್ಥರಾಗುತ್ತಿದಾರೆ. ಆಗಾಗ ಮೃದಂಗ ಬಾಜಿಸುವವನ ಕಡೆ ದೃಷ್ಟಿಹಾಕುತ್ತ ಹೇಳುತ್ತಿದಾರೆ: "ಆಹಾ! ಆಹಾ! ನನಗೆ ರೋಮಾಂಚವಾಗುತ್ತಿದೆ."

ಗಾಯಕ ಕೇಳಿದ: "ದಯವಿಟ್ಟು ಹೇಳಿ ಯಾವುದನ್ನು ಹಾಡಬೇಕು ಎಂಬುದನ್ನ." ಶ್ರೀರಾಮಕೃಷ್ಣರು ವಿನಯದಿಂದ ಹೇಳಿದರು: "ಸಾಧ್ಯವಾದರೆ ಗೌರಾಂಗನ ಸಂಬಂಧವಾಗಿ."

ಸಂಕೀರ್ತನೆ ಆರಂಭವಾಯಿತು. ಅವರು ಶ್ರೀಗೌರಾಂಗನ ಸ್ವರ್ಗೀಯ ರೂಪದ ಸಂಬಂಧವಾಗಿ ಹಾಡಲಾರಂಭಿಸಿದರು:

ಶ್ರೀ ಗೌರಾಂಗನ ವದನದ ತೇಜವು
ಚಿನ್ನಕಿಂತ ಮಿಗಿಲು,
ಕೋಟಿಚಂದ್ರಸಮ ಕಾಂತಿಯು ಸುರಿವುದು
ಅವನು ಒಮ್ಮೆ ನಗಲು!

ಈಗ ಕೀರ್ತನಕಾರ ಆಶುಕವಿತೆಗಳನ್ನು ಮಾಡಿಕೊಡುತ್ತಿದಾನೆ. ಅವರು ಹಾಡುತ್ತಿದಾರೆ: "ಕಂಡೆ ಸಖೀ, ಕುಂದಿಲ್ಲದ ಕರೆಯಿಲ್ಲದ ಪೂರ್ಣ ಚಂದ್ರ ಬಿಂಬವ." "ಹೃದಯ ದೀಪ್ತ ರೂಪವ!" ಮತ್ತೆ ಕೀರ್ತನಕಾರ ಆಶುಕವಿತೆ ಮಾಡಿಕೊಡುತ್ತಿದಾನೆ: "ಕೋಟಿಚಂದ್ರ ಕಾಂತಿಯಿಂದ ರಂಜಿಸುತಿದೆ ಶ್ರೀಮುಖ!"

ಈ ಮಾತು ಕೇಳಿ ಪರಮಹಂಸರು ಗಾಢಸಮಾಧಿಸ್ಥರಾಗಿಬಿಟ್ಟಿದಾರೆ. ಕೀರ್ತನೆ ಮುಂದುವರಿಯುತ್ತಲೇ ಇದೆ. ಪರಮಹಂಸರು ಈಗ ಪ್ರಕೃತಿಸ್ಥರಾಗುತ್ತಿದಾರೆ. ಭಾವದಿಂದ ತುಂಬಿ ತುಳುಕಾಡುತ್ತ ಇದ್ದಕ್ಕಿದ್ದಹಾಗೆ ಎದ್ದು ನಿಂತುಕೊಂಡಿದಾರೆ. ಪ್ರೇಮೋನ್ಮತ್ತ ಗೋಪಿಯರ ಹಾಗೆ ಶ್ರೀಕೃಷ್ಣನ ರೂಪವರ್ಣನೆ ಮಾಡುತ್ತ ಮಾಡುತ್ತ ಕೀರ್ತನಕಾರರೊಡನೆ ಆಶುಕವಿತೆ ಮಾಡಿ ಹಾಡುತ್ತಿದಾರೆ: "ಯಾರದೇ ಸಖಿ—ದೋಷವಿದು—ಮತ್ತಾರದೇ!" "ಅವನಿಗಾಗಿಯೆ ಮರುಳುಗೊಳ್ಳುವ ನನ್ನ ಮನಸಿನ ದೋಷವೋ, ನನ್ನನೀತೆರ ಮರುಳುಗೊಳಿಸುವ ಅವನ ರೂಪದ ದೋಷವೊ?" "ಯಾರದೇ ಸಖಿ, ಯಾರದೇ ದೋಷವಿದು ಇನ್ನಾರದೇ?" "ಸಕಲ ಭುವನವಿದು ಶ್ಯಾಮಮಯೀ."

ಪರಮಹಂಸರು ನರ್ತಿಸುತ್ತ ಹಾಡುತ್ತಿದಾರೆ. ಭಕ್ತರು ಆಶ್ಚರ್ಯಚಕಿತರಾಗಿ ನೋಡುತ್ತಿದಾರೆ. ಕೀರ್ತನಕಾರ ಗೋಪಿಯರ ಉಕ್ತಿಯನ್ನು ಹಾಡುತ್ತಿದಾನೆ: "ನಿದ್ದೆ ಬೇಡವೆ ಮುರಳಿ—ನುಡಿಯದಿರು ನೀನು!" ಗಾಯಕರಲ್ಲಿ ಒಬ್ಬ ಒಂದು ನುಡಿ ಆಶುಕವಿತೆ ಮಾಡಿ ಹಾಡಲಾರಂಭಿಸಿದಾನೆ: "ನಿರಂತರವು ಶ್ರೀಕೃಷ್ಣನಧರದಲಿ ಮಲಗಿರಲು, ನಿದ್ರಿಪುದೆಂತೀ ಮುರಳಿ!"

ಪರಮಹಂಸರು ಕುಳಿತುಕೊಂಡಿದಾರೆ. ಹಾಡುವುದು ಮುಂದುವರಿಯುತ್ತಿದೆ. ಗಾಯಕರು ರಾಧೆಯ ಭಾವವನ್ನು ಆರೋಪಿಸಿಕೊಂಡು ಹಾಡುತ್ತಿದಾರೆ: "ಕಣ್ಣು ಕಾಣದು, ಕಿವಿಯು ಕೇಳದು, ಕಂಪು ಘ್ರಾಣಕೆ ಬಾರದು. ಸ್ತಬ್ಧವಾದುವು ಕರಣ; ಆದರು ಏಕೆ ಬದುಕಿಹೆ ತಿಳಿಯದು!—"

ಕೊನೆಗೆ ರಾಧಾ ಕೃಷ್ಣರ ಮಿಲನ ಕೀರ್ತನೆ ಆರಂಭವಾಯಿತು:

ರಾಧಾಕೃಷ್ಣರ ಮಧುರ ಮಿಲನವಿದೊ ನಿಧುವನದಿ!
ಅನುಪಮ ರೂಪರು, ಅನಂತ ಪ್ರೇಮದ ಮೂರ್ತಿಗಳು,
ಕಟ್ಟಕಡೆಯಲಿ ಒಂದಾಗಿರುವರು
ಈ ಅತಿಸುಂದರ ನಿಧುವನದಿ!

ಕನಕ ವರ್ಣದಲಿ ರಂಜಿಸೆ ರಾಧೆ
ನೀಲಮಣಿಯವೊಲು ಹೊಳೆವನು ಕೃಷ್ಣ!
ಒಂದೆಡೆ ತೂಗುತಲಿದೆ ವನಮಾಲೆ
ಮತ್ತೊಂದೆಡೆ ಕಂಠೀಹಾರ;
ಒಂದೆಡೆ ಶೋಭಿಸೆ ಕರ್ಣಕುಂಡಲವು
ಮತ್ತೊಂದೆಡೆ ರನ್ನದ ಬೆಂಡೋಲೆ.

ಒಂದು ಕಪಾಲದಿ ಉಜ್ಜ್ವಲ ಸೂರ್ಯ
ಮತ್ತೊಂದರೊಳು ನೂಡುವ ಚಂದ್ರ!
ಒಂದೆಡೆ ರಂಜಿಸೆ ಮಯೂರ ಪಿಂಛ
ಮತ್ತೊಂದೆಡೆ ತೂಗುತಲಿದೆ ಫಣಿವೇಣೀ.
ಓಹೋ ನೋಡಿರೆ, ರಾಧಾಕೃಷ್ಣರ
ಮಧುರ ಮಿಲನವಿದೊ ನಿಧುವನದಿ!

ಕೀರ್ತನೆ ಮುಗಿಯಿತು. ಪರಮಹಂಸರು. "ಭಾಗವತ—ಭಕ್ತ—ಭಗವಾನ್" ಎಂದು ಪದೇ ಪದೇ ಹೇಳುತ್ತ ಭಕ್ತರ ಕಡೆಗೆಲ್ಲಾ ತಿರುಗಿ ಸಾಷ್ಟಾಂಗಪ್ರಣಾಮ ಮಾಡುತ್ತಿದ್ದಾರೆ. ಈಗ ಕೀರ್ತನೆ ನಡೆದ ಸ್ಥಳದಿಂದ ದೂಳನ್ನು ತೆಗೆದುಕೊಂಡು ತಮ್ಮ ಹಣೆಗೆ ಹಚ್ಚಿಕೊಳ್ಳುತ್ತಿದ್ದಾರೆ.

ಈಗ ಘಂಟೆ ಸುಮಾರು ರಾತ್ರಿ ಒಂಬತ್ತೂವರೆ. ಸುರೇಂದ್ರ ಪರಮ-ಹಂಸರಿಗೂ ಭಕ್ತರಿಗೂ ತೃಪ್ತಿಯಾಗುವಂತೆ ಊಟಕ್ಕೆ ಬಡಿಸಿದ. ಪರಮಹಂಸರು ಈಗ ದಕ್ಷಿಣೇಶ್ವರಕ್ಕೆ ತೆರಳಬೇಕಾಗಿದೆ. ಅವರು ಸುರೇಂದ್ರ, ಉಳಿದ ಭಕ್ತರು ದೇವರಮನೆಗೆ ಬಂದು ಭಗವತಿ ಅನ್ನಪೂರ್ಣೆಯ ಮುಂದೆ ನಿಂತುಕೊಂಡಿದ್ದಾರೆ.

ಸುರೇಂದ್ರ ಶ್ರೀರಾಮಕೃಷ್ಣರಿಗೆ: "ಆದರೆ ಈ ದಿನ ಭಗವತಿಯ ಸಂಬಂಧವಾಗಿ ಯಾರೂ ಹಾಡಲೇ ಇಲ್ಲವಲ್ಲ."

ಶ್ರೀರಾಮಕೃಷ್ಣರು ದೇವಿಯ ಪ್ರತಿಮೆ ತೋರಿಸಿ: "ಆಹಾ! ದೇವರ ಮನೆ ಎಷ್ಟು ಚೆನ್ನಾಗಿ ಶೋಭಿಸುತ್ತಿದೆ! ಭಗವತಿಯ ಪ್ರಭೆ ಇಡೀ ಅಂಗಳವನ್ನು ಬೆಳಗುತ್ತಿರುವಂತೆ ತೋರಿಬರುತ್ತಿದೆ. ಈ ವಿಧದ ದರ್ಶನ ಮನಸ್ಸಿಗೆ ಎಷ್ಟು ಆನಂದಕರವಾಗಿದೆ! ಭೋಗೇಚ್ಛೆ, ಶೋಕ ಇವೆಲ್ಲಾ ಸುಮ್ಮನೆ ಕಂಬಿಕೀಳುತ್ತವೆ.

"ಆಧುನಿಕ ಬ್ರಹ್ಮಜ್ಞಾನಿಗಳು (ಬ್ರಾಹ್ಮಭಕ್ತರು), 'ಅಚಲಘನ' ಎಂದು ಹಾಡುತ್ತಾರೆ. ಆದರೆ ಅದು ನನಗೆ ನೀರಸವಾಗಿ ತೋರುತ್ತದೆ. ಆ ರೀತಿಯಾಗಿ ಹಾಡತಕ್ಕವರಿಗೆ ಸಕ್ಕರೆ ಪಾನಕ ದೊರತೇ ಇಲ್ಲ ಅಂತ ಕಾಣುತ್ತೆ. ಜೋನಿ ಬೆಲ್ಲದ ಪಾನಕದಲ್ಲೇ ತೃಪ್ತರಾಗಿಬಿಟ್ಟರೆ ಇನ್ನು ಅವರಿಗೆ ಸಕ್ಕರೆ ಪಾನಕದ ಇಚ್ಛೆಯಾಗುವುದೆಲ್ಲಿ ಬಂತು?

"ಹಾಗೆ ನೋಡಿ, ಈ ವಿಗ್ರಹ ನೋಡಿ ನಿಮಗೆಷ್ಟು ಆನಂದವಾಗುತ್ತಿದೆ. ಆದರೆ ಯಾರು, 'ನಿರಾಕಾರ, ನಿರಾಕಾರ' ಅಂತಾರೊ ಅವರಿಗೆ ಇಂಥದೇನೂ ದೊರೆಯೋದಿಲ್ಲ. ಅವರಿಗೆ ಒಳಗೂ ಆನಂದವಿಲ್ಲ ಹೊರಗೂ ಆನಂದವಿಲ್ಲ."

ಈಗ ಪರಮಹಂಸರು ಭಗವತಿಯ ಸಂಬಂಧವಾಗಿ ಹಾಡಲಾರಂಭಿಸಿದಾರೆ:

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು. . . . (ಉ. ೨೩)

ಮತ್ತೆ ಹಾಡುತ್ತಿದಾರೆ:

ನಮೋ ಗೌರಿ ನಾರಾಯಣಿ ಶ್ರೀದುರ್ಗಾಮಾಯಿ.
ನಿನ್ನಯ ಕೃಪೆ ಇಲ್ಲದಿರಲು ನಾನು ಕಾಣೆ ತಾಯಿ. . . . (ಉ. ೨೮)

ಪರಮಹಂಸರು ಮತ್ತೆ ಭಗವತಿಗೆ ಪ್ರಣಾಮಮಾಡುತ್ತಿದಾರೆ. ಮೆಟ್ಟಲಿನಿಂದ ಕೆಳಕ್ಕೆ ಇಳಿಯುವಾಗ ರಾಖಾಲನನ್ನು ಕೂಗಿ ಮೆತ್ತಗೆ ಕೇಳುತ್ತಿದಾರೆ: "ಏನು, ಮೆಟ್ಟು-ಗಿಟ್ಟು ಎಲ್ಲ ಇವೆಯೊ ಅಥವಾ ಯಾರಾದರೂ ಹಾರಿಸಿಬಿಟ್ಟಿದಾರೊ?"

ಪರಮಹಂಸರು ಗಾಡಿಗೆ ಹತ್ತಿ ಕುಳಿತುಕೊಂಡರು. ಸುರೇಂದ್ರ ಮತ್ತು ಉಳಿದ ಭಕ್ತರು ಅವರಿಗೆ ಪ್ರಣಾಮಮಾಡುತ್ತಿದಾರೆ. ಇನ್ನೂ ಚಂದ್ರನ ಬೆಳಕಿದೆ. ಗಾಡಿ ದಕ್ಷಿಣೇಶ್ವರದ ಕಡೆಗೆ ಹೊರಟಿತು.

*

## ೧೦

# ಶ್ರೀ ರಾಮಕೃಷ್ಣರು ಬ್ರಾಹ್ಮಭಕ್ತರೊಡನೆ (೨)

೨೨ನೆ ಏಪ್ರಿಲ್ ೧೮೮೩, ಚೈತ್ರ ಪೂರ್ಣಿಮೆ, ಭಾನುವಾರ.

ಶ್ರೀರಾಮಕೃಷ್ಣಪರಮಹಂಸರು ಕಲ್ಕತ್ತದ ಹತ್ತಿರವಿರುವ ವೇಣೀ ಮಾಧವಪಾಲನ ಉದ್ಯಾನವನಕ್ಕೆ ಬಂದಿದಾರೆ. ಇಂದು ಇಲ್ಲಿ ಬ್ರಾಹ್ಮ ಸಮಾಜದ ಷಾಣ್ಮಾಸಿಕ ಮಹೋತ್ಸವ. ಅನೇಕ ಬ್ರಾಹ್ಮಭಕ್ತರು ಬಂದು ನೆರೆದಿದಾರೆ. ಅವರೆಲ್ಲರೂ ಪರಮಹಂಸರ ಸುತ್ತ ಕುಳಿತು ಆಗಾಗ ಅವರಿಗೆ ಏನೇನೊ ಪ್ರಶ್ನೆ ಹಾಕುತ್ತಿದಾರೆ.

ಒಬ್ಬ ಬ್ರಾಹ್ಮಭಕ್ತ: "ಮಹಾಶಯರೆ, ಮಾರ್ಗವೇನು?"

ಶ್ರೀರಾಮಕೃಷ್ಣರು: "ಅನುರಾಗ, ಎಂದರೆ ಭಗವಂತನನ್ನು ಪ್ರೀತಿಸುವುದು, ಮತ್ತೆ ಪ್ರಾರ್ಥನೆ."

ಬ್ರಾಹ್ಮಭಕ್ತ: "ಯಾವುದನ್ನು ಅನುಸರಿಸಬೇಕು—ಅನುರಾಗವನ್ನೆ ಅಥವಾ ಪ್ರಾರ್ಥನೆಯನ್ನೆ?"

ಶ್ರೀರಾಮಕೃಷ್ಣರು: "ಮೊದಲು ಅನುರಾಗ, ಬಳಿಕ ಪ್ರಾರ್ಥನೆ."

ಪರಮಹಂಸರು ಹಾಡುತ್ತಿದಾರೆ:

ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ?
ನಿನ್ನ ತೊರೆದವಳೆಂತು ಇರಬಲ್ಲಳೊ? . . .

ಪರಮಹಂಸರು ಮಾತು ಮುಂದುವರಿಸಿ ಹೇಳುತ್ತಿದಾರೆ: "ಸತತ ಭಗವಂತನ ನಾಮಗುಣಕೀರ್ತನೆ ಮತ್ತು ಪಾರ್ಥನೆ ಮಾಡುತ್ತಿರಬೇಕು. ಹಳೆ ಚೆಂಬನ್ನ ದಿನವೂ ಬೆಳಗುತ್ತಿರಬೇಕು. ಎಲ್ಲೊ ಒಂದು ದಿನ ಬೆಳಗಿಬಿಟ್ಟರೆ ಏನಾದ ಹಾಗೆ ಆಯಿತು? ವಿವೇಕ ವೈರಾಗ್ಯಗಳಿಂದ ಒಡಗೂಡಿರಬೇಕು; ಈ ಸಂಸಾರ ಅನಿತ್ಯ ಎಂಬ ಜ್ಞಾನವನ್ನ ಮನಸ್ಸಿಗೆ ಚೆನ್ನಾಗಿ ಒತ್ತಬೇಕು."

ಬ್ರಾಹ್ಮಭಕ್ತ: "ಸಂಸಾರವನ್ನು ತ್ಯಜಿಸಿಬಿಡುವುದು ಒಳ್ಳೆಯದೆ?"

ಶ್ರೀರಾಮಕೃಷ್ಣರು: "ಎಲ್ಲರೂ ತ್ಯಜಿಸಬೇಕಾಗಿಲ್ಲ. ಯಾರ ಭೋಗೋಪಭೋಗಗಳು ಇನ್ನೂ ಕೊನೆಗಂಡಿಲ್ಲವೊ ಅವರು ತ್ಯಜಿಸಬೇಕಾಗಿಲ್ಲ. ಕೇವಲ ಎರಡಾಣೆ ಮದ್ಯ ಕುಡಿದರೆ ಮತ್ತನಾಗಲಾಗುವುದೆ?"

ಬ್ರಾಹ್ಮಭಕ್ತ : "ಹಾಗಾದರೆ ಅವರು ಸಾಂಸಾರಿಕ ಜೀವನ ನಡಸಿಕೊಂಡುಹೋಗಬೇಕೆ?"

ಶ್ರೀರಾಮಕೃಷ್ಣರು : "ಹೌದು, ಅವರು ಸಾಂಸಾರಿಕ ಕೆಲಸಕಾರ್ಯಗಳನ್ನ ನಿಷ್ಕಾಮಭಾವನೆಯಿಂದ ಮಾಡಲು ಪ್ರಯತ್ನಿಸಬೇಕು. ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣು ಬಿಡಿಸಬೇಕು. ಧನಿಕನ ಮನೆ ದಾಸಿ ಎಲ್ಲಾ ಕೆಲಸಗಳನ್ನೂ ಮಾಡುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ತನ್ನ ಊರಿನಲ್ಲೇ ನೆಲಸಿರುತ್ತದೆ. ಇದಕ್ಕೇ ನಿಷ್ಕಾಮಕರ್ಮ ಅಂತ ಹೆಸರು. ಇದಕ್ಕೇ ಮಾನಸಿಕ ತ್ಯಾಗ ಅಂತ ಹೆಸರು. ನೀವು ಮಾನಸಿಕವಾಗಿ ತ್ಯಾಗ ಮಾಡಬೇಕು. ಸನ್ಯಾಸಿ ಬಾಹ್ಯಿಕ ತ್ಯಾಗ, ಮಾನಸಿಕ ತ್ಯಾಗ ಎರಡನ್ನೂ ಮಾಡಬೇಕು."

ಬ್ರಾಹ್ಮಭಕ್ತ : "ಭೋಗಾಂತವಾಗಬೇಕು ಅಂದರೆ ಏನು?"

ಶ್ರೀರಾಮಕೃಷ್ಣರು : "ಕಾಮಕಾಂಚನಗಳ ಭೋಗ. ಯಾವ ಕೊಠಡಿಯಲ್ಲಿ ಹುಣಿಸೆ ಕಾಯಿನ ಉಪ್ಪಿನ ಕಾಯಿ, ನೀರಿನ ಗುಡಾಣ ಇವೆಯೊ ಅಲ್ಲೇ ವಿಷಮಶೀತಜ್ವರದ ರೋಗಿಯನ್ನು ಇಟ್ಟರೆ ಕಷ್ಟಕ್ಕಿಟ್ಟುಕೊಳ್ಳುತ್ತದೆ. ಧನ, ಕನಕ, ಕೀರ್ತಿ, ಸಂಭ್ರಮ, ದೇಹಸುಖ ಇವನ್ನೆಲ್ಲ ಒಮ್ಮೆ ಅನುಭೋಗಿಸದ ಹೊರತು, ಅಂದರೆ ಭೋಗಾಂತವಾಗದ ಹೊರತು ಅನೇಕರಿಗೆ ಹೃದಯದಲ್ಲಿ ಭಗವಂತನಿಗಾಗಿ ವ್ಯಾಕುಲತೆ ಉಂಟಾಗದು."

ಬ್ರಾಹ್ಮಭಕ್ತ : "ನಿಜವಾಗಿ ಕೆಟ್ಟವರಾರು—ಹೆಂಗಸೊ, ಗಂಡಸೊ?"

ಶ್ರೀರಾಮಕೃಷ್ಣರು : "ವಿದ್ಯಾರೂಪಿಣಿ ಹೆಂಗಸೂ ಇದಾಳೆ, ಅವಿದ್ಯಾರೂಪಿಣಿ ಹೆಂಗಸೂ ಇದಾಳೆ. ವಿದ್ಯಾರೂಪಿಣಿ ಹೆಂಗಸು ಭಗವಂತನ ಕಡೆಗೆ ಕರೆದೊಯ್ಯುತ್ತಾಳೆ; ಆದರೆ ಅವಿದ್ಯಾರೂಪಿಣಿ ಹೆಂಗಸು ಭಗವಂತನನ್ನು ಮರಸಿ ಸಂಸಾರದಲ್ಲಿ ಮುಳುಗಿಸಿಬಿಡುತ್ತಾಳೆ.

"ಭಗವಂತನ ಮಹಾಮಾಯೆಯಿಂದಲೇ ಈ ಜಗತ್ತು, ಈ ಸಂಸಾರ ಉದ್ಭವಿಸಿದೆ. ಮಹಾಮಾಯೆಯಲ್ಲಿ ವಿದ್ಯಾಮಾಯೆ ಅವಿದ್ಯಾಮಾಯೆ ಎರಡೂ ಇವೆ. ವಿದ್ಯಾಮಾಯೆಯನ್ನು ಅವಲಂಬಿಸಿದರೆ ಸಾಧುಸಂಗ, ಜ್ಞಾನ, ಭಕ್ತಿ, ಪ್ರೇಮ, ವೈರಾಗ್ಯ ಇವೆಲ್ಲಾ ಉಂಟಾಗುತ್ತವೆ. ಅವಿದ್ಯಾಮಾಯೆ ಎಂದರೆ ಪಂಚಭೂತಗಳು ಮತ್ತು ಪಂಚೇಂದ್ರಿಯಗಳ

ವಸ್ತುಗಳು — ರೂಪ, ರಸ, ಗಂಧ, ಸ್ಪರ್ಶ, ಶಬ್ದ. ಇವು ಭಗವಂತನನ್ನು ಮರಸಿಬಿಡುತ್ತವೆ."

ಬ್ರಾಹ್ಮಭಕ್ತ: "ಅವಿದ್ಯೆಯಿಂದ ಅಜ್ಞಾನವುಂಟಾಗುವುದಾದರೆ ಯಾಕೆ ಭಗವಂತ ಅದನ್ನು ಸೃಷ್ಟಿಸಿದ?"

ಶ್ರೀರಾಮಕೃಷ್ಣರು: "ಆತನ ಲೀಲೆ. ಕತ್ತಲೆ ಇಲ್ಲದೆ ಇತ್ತು ಎಂದರೆ ಬೆಳಕಿನ ಮಹಿಮೆಯನ್ನ ಅರಿಯಲಾಗೋದಿಲ್ಲ. ದುಃಖ ಇಲ್ಲದೆ ಇತ್ತು ಎಂದಗೆ ಸುಖ ಏನು ಎಂಬುದನ್ನ ಅರಿಯಲಾಗೋದಿಲ್ಲ. ಕೆಟ್ಟದ್ದು ಏನು ಎಂಬುದರ ಅರಿವು ಇದ್ದರೆತಾನೆ ಒಳ್ಳೆಯದು ಏನು ಎಂಬುದರ ಅರಿವು ಆಗಬೇಕಾದರೆ.

"ಮತ್ತೆ ಸಿಪ್ಪೆ ಇರುವುದರಿಂದ ತಾನೆ ಮಾವಿನಕಾಯಿ ಬೆಳೆಯುತ್ತದೆ ಮತ್ತು ಹಣ್ಣಾಗುತ್ತದೆ. ಮಾವಿನಕಾಯಿ ಪೂರ್ತಿ ಹಣ್ಣಾಗಿ ತಿನ್ನಲು ಸಿದ್ಧವಾಯಿತು ಎಂದರೆ ಆಗ ಸಿಪ್ಪೆ ಬಿಸಾಡಿಬಿಡಬೇಕಾಗುತ್ತದೆ. ಮಾಯಾ ರೂಪದ ಸಿಪ್ಪೆ ಇರುವುದರಿಂದ ಕ್ರಮೇಣ ಬ್ರಹ್ಮಜ್ಞಾನ ಸಾಧ್ಯ. ಮಾವಿನ ಕಾಯಿನ ಸಿಪ್ಪೆಯ ಹಾಗೆ ವಿದ್ಯಾ ಮಾಯೆ, ಅವಿದ್ಯಾ ಮಾಯೆ ಎರಡೂ ಆವಶ್ಯಕ."

ಬ್ರಾಹ್ಮಭಕ್ತ: "ಒಳ್ಳೇದು, ಸಾಕಾರ ಪೂಜೆ, ಅಂದರೆ ಮಣ್ಣಿನಿಂದ ಮಾಡಿದ ಭಗವಂತನ ಪ್ರತಿಮೆಗಳ ಪೂಜೆ ಒಳ್ಳೆಯದೆ?"

ಶ್ರೀರಾಮಕೃಷ್ಣರು: "ನೀವು ಸಾಕಾರವನ್ನ ಒಪ್ಪುತ್ತಿಲ್ಲ. ಅದು ಒಳ್ಳೆಯದೆ. ಮೂರ್ತಿಪೂಜೆ ನಿಮಗಲ್ಲ. ನಿಮಗೆ ಕೇವಲ ಭಾವ ಮಾತ್ರ. ನೀವು ಸಾಕಾರೋಪಾಸಕರ ವ್ಯಾಕುಲವನ್ನು ಅನುಕರಿಸಬೇಕು — ಶ್ರೀಕೃಷ್ಣನಲ್ಲಿ ರಾಧೆಗಿದ್ದ ಮನಸ್ಸೆಳತ, ಪ್ರೀತಿ ಇವನ್ನ. ಸಾಕಾರವಾದಿಗಳು ಭಗವತಿ ಕಾಳಿಯ ಅಥವಾ ಭಗವತಿ ದುರ್ಗೆಯ ಪೂಜೆಮಾಡುವಾಗ ಎಂಥ ವ್ಯಾಕುಲತೆಯಿಂದ, 'ಭಗವತಿ! ಭಗವತಿ!' ಅಂತ ಕರೆಯುತ್ತಾರೆ! ಎಷ್ಟೊಂದಾಗಿ ಭಗವತಿಯನ್ನು ಪ್ರೀತಿಸುತ್ತಾರೆ! ಅವರ ಆ ಭಾವವನ್ನು ನೀವು ಅನುಕರಿಸಬೇಕು. ನೀವೇನೂ ಮೂರ್ತಿಯನ್ನು ಪೂಜಿಸಬೇಕಾಗಿಲ್ಲ."

ಬ್ರಾಹ್ಮಭಕ್ತ: "ವೈರಾಗ್ಯ ಹೇಗೆ ಉಂಟಾಗುತ್ತೆ? ಎಲ್ಲರಿಗೂ ಏಕೆ ಅದು ಬರುವುದಿಲ್ಲ?"

ಶ್ರೀರಾಮಕೃಷ್ಣರು: "ಭೋಗತೃಪ್ತಿ ಕಟ್ಟುರೆಯಾಗದ ಹೊರತು

ವೈರಾಗ್ಯ ಉಂಟಾಗೋದಿಲ್ಲ. ಮಗುವಿಗೆ ತಿಂಡಿ ಕೊಟ್ರೋ ಅಥವಾ ಆಟದ ಸಾಮಾನು ಕೊಟ್ರೋ ಸುಲಭವಾಗಿ ಸಮಾಧಾನಗೊಳಿಸಿಬಿಡಬಹುದು. ಆದರೆ ಅದು ತಿಂಡಿಯನ್ನು ತಿಂದು ಮುಗಿಸಿದನಂತರ ಅಥವಾ ಆಟದ ಸಾಮಾನಿನೊಡನೆ ಆಟವಾಡಿ ಮುಗಿಸಿದನಂತರ ಅಳಲಾರಂಭಿಸುತ್ತದೆ: 'ನಾನು ತಾಯಿಯ ಹತ್ತಿರ ಹೋಗಬೇಕು' ಎಂಬುದಾಗಿ. ತಾಯಿಯ ಹತ್ತಿರಕ್ಕೆ ಕರೆದುಕೊಂಡು ಹೋಗಲಿಲ್ಲ ಎಂದರೆ ಕೋಪದಿಂದ ಆಟದ ಸಾಮಾನುಗಳನ್ನ 'ರೊಯ್ಯ್' ಅಂತ ಬಿಸಾಡಿ ತಾರಸ್ವರದಿಂದ ಕಿರಿಚ ಲಾರಂಭಿಸುತ್ತದೆ."

ಬ್ರಾಹ್ಮಭಕ್ತರು, ಗುರು ಬೇಕೆಂದು ವಾದಿಸತಕ್ಕವರ ವಿರೋಧಿಗಳು. ಅದಕ್ಕಾಗಿ ಬ್ರಾಹ್ಮಭಕ್ತ ಅದರ ಸಂಬಂಧವಾಗಿ ಈಗ ಪ್ರಶ್ನೆ ಹಾಕ ಲಾರಂಭಿಸಿದ.

ಬ್ರಾಹ್ಮಭಕ್ತ: "ಮಹಾಶಯರೆ, ಗುರುವಿಲ್ಲದೆ ಇದ್ದರೆ ಜ್ಞಾನ ದೊರೆಯೋದಿಲ್ಲವೆ?"

ಶ್ರೀರಾಮಕೃಷ್ಣರು: "ಕೇವಲ ಸಚ್ಚಿದಾನಂದನೆ ಗುರು. ಮನುಷ್ಯ ಗುರುವಿನ ಪಟ್ಟ ಧರಿಸಿ ಜನರಲ್ಲಿ ಆತ್ಮಜಾಗೃತಿಯನ್ನುಂಟುಮಾಡಿದ್ದೇ ಆದರೆ ಆಗ ತಿಳಿದುಕೊಳ್ಳಬೇಕು ಸಚ್ಚಿದಾನಂದನೇ ಆ ರೂಪ ಧರಿಸಿದಾನೆ ಎಂಬು ದಾಗಿ. ಗುರು ಒಬ್ಬ ಸ್ನೇಹಿತ ಇದ್ದ ಹಾಗೆ. ಆತ ಕೈ ಹಿಡಿದು ಕರೆದು ಕೊಂಡುಹೋಗುತ್ತಾನೆ. ಭಗವಂತನ ದರ್ಶನವಾದನಂತರ ಗುರು ಶಿಷ್ಯರ ಭೇದವಿರದು. 'ಅದು ಬಹಳ ತೊಡಕಿನ ಸನ್ನಿವೇಶವನ್ನು ಸೃಜಿಸುತ್ತದೆ. ಅಲ್ಲಿ ಗುರು ಶಿಷ್ಯರು ಒಬ್ಬರನ್ನೊಬ್ಬರು ಗುರುತಿಸಲಾರರು.' ಇದಕ್ಕಾಗೇ ಜನಕರಾಜ ಶುಕದೇವನಿಗೆ ಹೇಳಿದ: 'ನಿನಗೆ ಬ್ರಹ್ಮಜ್ಞಾನ ಬೇಕಾಗಿದ್ದರೆ ಮೊದಲು ಗುರುದಕ್ಷಿಣೆ ಕೊಡು.' ಏಕೆಂದರೆ, ಬ್ರಹ್ಮಜ್ಞಾನ ದೊರೆತ ನಂತರ ಈತ ಗುರು ತಾನು ಶಿಷ್ಯ ಎಂಬ ಭೇದಬುದ್ಧಿ ಇರದು. ಭಗವಂತನ ಸಾಕ್ಷಾತ್ಕಾರವಾಗದವರೆಗೆ ಮಾತ್ರ ಗುರು ಶಿಷ್ಯ ಸಂಬಂಧ."

ಕ್ರಮೇಣ ಸಾಯಂಕಾಲವಾಯಿತು. ಬ್ರಾಹ್ಮಭಕ್ತರಲ್ಲಿ ಕೆಲವರು ಪರಮಹಂಸರಿಗೆ ಹೇಳುತ್ತಿದಾರೆ: "ಬಹುಶಃ ಈಗ ನಿಮ್ಮ ಸಾಯಂ ಸಂಧ್ಯಾ ವಂದನೆಗೆ ಸಮಯ ಆಗಿರಬಹುದು."

ಶ್ರೀರಾಮಕೃಷ್ಣರು: "ಇಲ್ಲ, ಅಂಥದೇನಿಲ್ಲ. ಮೊದಮೊದಲು

ಅವನ್ನೆಲ್ಲಾ ಮಾಡಬೇಕಾಗುತ್ತದೆ. ಬಳಿಕ ಗಂಟೆ ಬಾರಿಸುವುದು, ವಿಧಿವತ್ ಪೂಜೆ ಇವೆಲ್ಲಾ ಬೇಕಾಗಿರೋದಿಲ್ಲ.''

ಸಾಯಂಕಾಲವಾದನಂತರ ಆದಿಸಮಾಜದ ಆಚಾರ್ಯ ಬೇಚಾರಾಮ ವೇದಿಕೆಯಲ್ಲಿ ಕುಳಿತು ಉಪಾಸನೆ ನಡಸಿದರು. ಆಗಾಗ ಬ್ರಾಹ್ಮ ಸಮಾಜದ ಹಾಡುಗಳು ಮತ್ತು ಉಪನಿಷತ್ಪಾಠಗಳು ನಡೆದುವು. ಉಪಾಸನೆ ಮುಗಿದನಂತರ ಆಚಾರ್ಯ ಬೇಚಾರಾಮ ಪರಮಹಂಸರೊಡನೆ ಕುಳಿತು ಕೊಂಡು ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: ''ನೋಡಿ, ನನಗನಿಸುತ್ತದೆ ನಿರಾಕಾರವೂ ಸತ್ಯ, ಸಾಕಾರವೂ ಸತ್ಯ ಎಂಬುದಾಗಿ. ನಿಮಗೆ?''

ಆಚಾರ್ಯ: ''ನಿರಾಕಾರ ಎಲೆಕ್ಟ್ರಿಕ್ ಕರೆಂಟ್ ಇದ್ದಹಾಗೆ. ಕಣ್ಣಿನಿಂದ ನೋಡಲಾಗುವುದಿಲ್ಲ, ಆದರೆ ಅದರ ಕಾರ್ಯ ನೋಡಬಹುದು.''

ಶ್ರೀರಾಮಕೃಷ್ಣರು: ''ಹೌದು, ಎರಡೂ ಸತ್ಯ. ಸಾಕಾರ ನಿರಾಕಾರ ಎರಡೂ ಸತ್ಯ. ಭಗವಂತ ಕೇವಲ ನಿರಾಕಾರ ಎಂಬುದು ಹೇಗೆ ಕಾಣುತ್ತೆ ಗೊತ್ತೆ? ಇದು ಓಲಗ ಊದುವಾಗ ಓಲಗದಲ್ಲಿ ಏಳು ರಂಧ್ರಗಳಿದ್ದರೂ ಒಬ್ಬ ಕೇವಲ 'ಪ್ನೋ' ಅಂತ ರಾಗ ಹೊರಡಿಸುತ್ತಾನಲ್ಲ ಹಾಗೆ. ಆದರೆ ಇನ್ನೊಬ್ಬನನ್ನು ನೋಡಿ, ಆತ ಎಷ್ಟೊಂದು ವಿಧದ ರಾಗ ರಾಗಿಣಿಗಳನ್ನು ಹೊರಡಿಸುತ್ತಾನೆ! ಅದೇ ರೀತಿಯಾಗಿ, ಹಾಗೇ ನೋಡಿ, ಸಾಕಾರವಾದಿಗಳು ಭಗವಂತನನ್ನು ಎಷ್ಟೊಂದು ಭಾವಗಳಿಂದ ಪೂಜಿಸಿ ಆನಂದಪಡುತ್ತಾರೆ! ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ—ಹೀಗೆ ನಾನಾ ಭಾವಗಳಿಂದ!

''ನೋಡಿ, ಮುಖ್ಯವಾಗಿ ಮಾಡಬೇಕಾದ್ದೇನೆಂದರೆ ಹೇಗಾದರೂ ಮಾಡಿ ಅಮೃತಕುಂಡಕ್ಕೆ ಬಿದ್ದುಬಿಡಬೇಕು. ಒಬ್ಬ ಸ್ತೋತ್ರಾದಿಗಳನ್ನು ಮಾಡಿ ಅದರೊಳಕ್ಕೆ ತಾನೇ ಧುಮುಕಬಹುದು, ಇನ್ನೊಬ್ಬನನ್ನ ಯಾರೊ ಕತ್ತು ಹಿಡಿದು ಅದರೊಳಕ್ಕೆ ನೂಕಿಬಿಡಬಹುದು. ಫಲ ಮಾತ್ರ ಇಬ್ಬರಿಗೂ ಒಂದೇ. ಇಬ್ಬರೂ ಅಮರರಾಗಿಬಿಡುತ್ತಾರೆ.

''ಬ್ರಾಹ್ಮಭಕ್ತರಿಗೆ ಸರಿಯಾದ್ದು ನೀರು ಹಿಮಗಡ್ಡೆಯ ಉಪಮೆ. ಸಚ್ಚಿದಾನಂದ ಅನಂತ ಜಲರಾಶಿ ಇದ್ದ ಹಾಗೆ. ಮಹಾಸಾಗರದ ನೀರು ಶೀತ ಪ್ರದೇಶದಲ್ಲಿ ಅಲ್ಲಲ್ಲಿ ಹಿಮಗಡ್ಡೆಗಳ ರೂಪ ತಾಳುತ್ತೆ. ಅದೇ ರೀತಿಯಾಗಿ ಭಕ್ತಿಯ ಶೈತ್ಯದಿಂದ ಅದೇ ಸಚ್ಚಿದಾನಂದ ಭಕ್ತರಿಗಾಗಿ ಸಾಕಾರ

ರೂಪ ತಾಳುತ್ತಾನೆ. ಋಷಿಗಳು ಆ ಅತೀಂದ್ರಿಯ ಚಿನ್ಮಯ ರೂಪವನ್ನು ದರ್ಶನ ಮಾಡಿ ಆತನೊಡನೆ ಮಾತುಕತೆ ಆಡಿದ್ದರು. ಭಕ್ತರಿಗೆ 'ಭಾಗವತೀ-ತನು' ಉಂಟಾಗಿ, 'ಪ್ರೇಮ ಶರೀರ' ಉಂಟಾಗಿ ಅವರಿಗೂ ಅದೇ ಚಿನ್ಮಯ ರೂಪ ದರ್ಶನವಾಗುತ್ತದೆ.

"ವೇದಗಳಲ್ಲಿ ಹೇಳಿದೆ, ಬ್ರಹ್ಮ ಅವಾಙ್ಮನಸಗೋಚರ ಎಂಬುದಾಗಿ. ಜ್ಞಾನಸೂರ್ಯನ ತಾಪದಿಂದ ಹಿಮಗಡ್ಡೆಯಂಥ ಭಗವಂತನ ಸಾಕಾರ ರೂಪ ಕರಗಿಹೋಗುತ್ತದೆ. ಬ್ರಹ್ಮಜ್ಞಾನ ದೊರೆತನಂತರ, ಅಂದರೆ ನಿರ್ವಿಕಲ್ಪಸಮಾಧಿ ದೊರೆತನಂತರ, ಅದರಲ್ಲಿ ಅದೇ ಅನಂತ ವಾಙ್ಮನಾತೀತ ಅರೂಪ ನಿರಾಕಾರ ಬ್ರಹ್ಮನ ದರ್ಶನ.

"ಪರಬ್ರಹ್ಮನ ಸ್ವರೂಪ ಏನು ಎಂಬುದಾಗಿ ಬಾಯಲ್ಲಿ ಹೇಳಲಾಗೋದಿಲ್ಲ. ಅದರ ಸಂಬಂಧವಾಗಿ ಮಾತೇ ಹೊರಡೋ ಹಾಗಿಲ್ಲ. ಅನಂತನನ್ನು ಯಾರು ತಾನೆ ಮಾತಿನಿಂದ ವರ್ಣಿಸಬಲ್ಲರು? ಹಕ್ಕಿ ಎಷ್ಟೇ ಎತ್ತರಕ್ಕೆ ಹಾರಿಹೋದರೂ, ಅದು ಹಾರಿಹೋಗಬೇಕಾದ ಎತ್ತರ ಇನ್ನೂ ಉಳಿದುಕೊಂಡೇ ಇರುತ್ತದೆ. ನೀವೇನು ಹೇಳುತ್ತೀರಿ?"

ಆಚಾರ್ಯ: "ಹೌದು, ವೇದಾಂತದಲ್ಲಿ ಹೀಗೇ ಹೇಳಿದೆ."

ಶ್ರೀರಾಮಕೃಷ್ಣರು: "ಒಮ್ಮೆ ಒಂದು ಉಪ್ಪಿನ ಬೊಂಬೆ ಸಾಗರದ ಆಳ ಕಂಡುಹಿಡಿಯಲು ಹೋಗಿತ್ತು. ಆದರೆ ಅದು ಹಿಂದಿರುಗಿಬಂದು ಯಾವ ವರದಿಯನ್ನೂ ಒಪ್ಪಿಸಲಿಲ್ಲ. ಕೆಲವರ ಅಭಿಮತ, ಶುಕದೇವ ಸಚ್ಚಿದಾನಂದ ಸಾಗರದ ದರ್ಶನ ಸ್ಪರ್ಶನ ಮಾಡಿದನೇ ವಿನಾ ಮುಳುಗು ಹಾಕಲಿಲ್ಲ ಎಂಬುದಾಗಿ.

"ನಾನು ಒಮ್ಮೆ ವಿದ್ಯಾಸಾಗರನಿಗೆ ಹೇಳಿದೆ: 'ಎಲ್ಲಾ ವಸ್ತುಗಳೂ ಎಂಜಲಾಗಿಬಿಟ್ಟಿವೆ, ಆದರೆ ಬ್ರಹ್ಮ ಮಾತ್ರ ಉಚ್ಛಿಷ್ಟವಸ್ತು ಆಗಿಲ್ಲ.' ಅಂದರೆ, ಬ್ರಹ್ಮ ಏನು ಎಂಬುದನ್ನ ವರ್ಣನೆಮಾಡಲು ಯಾರಿಗೂ ಸಾಧ್ಯವಾಗಿಲ್ಲ. ಮಾತಿನಿಂದ ಅದನ್ನು ವರ್ಣನೆ ಮಾಡಲು ಸಾಧ್ಯ ಆಯಿತು ಎಂದರೇ ಅದು ಉಚ್ಛಿಷ್ಟವಾಗಿಬಿಡುತ್ತದೆ. ವಿದ್ಯಾಸಾಗರ ದೊಡ್ಡ ಪಂಡಿತನಾದರೂ ನನ್ನ ಮಾತು ಕೇಳಿ ಅವನಿಗೆ ಬಹಳ ಆನಂದವಾಗಿಬಿಟ್ಟಿತು.

"ಕೇಳಿದೇನೆ: 'ಕೇದಾರನಾಥದ ಹತ್ತಿರ ಹಿಮಾವೃತ ಬೆಟ್ಟಗಳಿವೆ; ಹೆಚ್ಚು ಎತ್ತರಕ್ಕೆ ಹತ್ತಿದರೆ ಹಿಂದಿರುಗಿ ಬರೋ ಹಾಗಿಲ್ಲ' ಎಂಬುದಾಗಿ.

ಇನ್ನೂ ಎತ್ತರದಲ್ಲಿ ಏನೇನಿವೆ, ಅಲ್ಲಿಗೆ ಹೋದರೆ ಏನು ಅನುಭವ ದೊರೆ ಯುತ್ತೆ ಎಂಬುದನ್ನು ಅರಿಯಲು ಯಾರಾರು ಪ್ರಯತ್ನಪಟ್ಟರೊ ಅವರು ಯಾರೂ ಅಲ್ಲಿನ ವರದಿ ಒಪ್ಪಿಸಲು ಹಿಂದಿರುಗಿ ಬರಲಿಲ್ಲ.

"ಭಗವಂತನ ದರ್ಶನ ದೊರೆಯಿತು ಎಂದರೆ ಮನುಷ್ಯ ಆನಂದ ಪರವಶನಾಗಿಬಿಡುತ್ತಾನೆ, ಮೂಕನಾಗಿಬಿಡುತ್ತಾನೆ. ಯಾರು ತಾನೆ ಸುದ್ದಿ ಸಮಾಚಾರ ಕೊಡಬಲ್ಲರು? ಯಾರು ತಾನೆ ವಿವರಿಸಬಲ್ಲರು?

"ರಾಜ ವಾಸಿಸುವುದು ಏಳು ಹೆಬ್ಬಾಗಿಲುಗಳ ಆಚೆ. ಪ್ರತಿಯೊಂದು ಬಾಗಿಲ ಹತ್ತಿರವೂ ಒಬ್ಬೊಬ್ಬ ದೊಡ್ಡ ಐಶ್ವರ್ಯವಂತ ಕುಳಿತಿರುತ್ತಾನೆ. ಪ್ರತಿಯೊಂದು ಬಾಗಿಲ ಹತ್ತಿರವೂ ಶಿಷ್ಯ ಗುರುವನ್ನು ಕೇಳುತ್ತಾನೆ: 'ರಾಜ ಈತನೇ?' ಗುರು ಹೇಳುತ್ತಾನೆ: 'ಅಲ್ಲ. ನೇತಿ, ನೇತಿ.' ಶಿಷ್ಯ ಏಳನೆ ಬಾಗಿಲ ಹತ್ತಿರ ಹೋದಾಗ ಆತನ ಕಣ್ಣಿಗೆ ಏನು ದೃಶ್ಯ ಬೀಳುವುದೊ ಅದನ್ನು ನೋಡಿ ಒಮ್ಮೆಗೇ ದಂಗುಬಡಿದವನಾಗಿಬಿಡುತ್ತಾನೆ, ಆನಂದಪರ ವಶನಾಗಿಬಿಡುತ್ತಾನೆ. ಬಳಿಕ ಶಿಷ್ಯನಿಗೆ ಕೇಳಬೇಕಾಗಿಬರುವುದಿಲ್ಲ: 'ರಾಜ ಈತನೇ?' ಎಂಬುದಾಗಿ. ದರ್ಶನಮಾತ್ರದಿಂದಲೇ ಸಮಸ್ತ ಸಂದೇಹಗಳ ನಿವೃತ್ತಿ."

ಆಚಾರ್ಯ: "ಹೌದು, ವೇದಾಂತದಲ್ಲಿ ಹೀಗೇ ಹೇಳಿದೆ."

ಶ್ರೀರಾಮಕೃಷ್ಣರು: "ಯಾವಾಗ ಭಗವಂತ ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುತ್ತಾನೊ, ಆಗ ಆತನಿಗೇ ಸಗುಣಬ್ರಹ್ಮ ಅಥವಾ ಆದ್ಯಾಶಕ್ತಿ ಅಂತ ಹೆಸರು. ಯಾವಾಗ ಆತನನ್ನು ತ್ರಿಗುಣಾತೀತ ಎಂಬು ದಾಗಿ ಭಾವಿಸುತ್ತೇವೊ, ಆಗ ಆತನಿಗೆ ವಾಙ್ಮನಾತೀತ ನಿರ್ಗುಣಬ್ರಹ್ಮ ಅಂತ ಹೆಸರು—ಪರಬ್ರಹ್ಮ ಅಂತ ಹೆಸರು.

"ಮನುಷ್ಯ ಭಗವಂತನ ಮಾಯಾ ಬಲೆಗೆ ಸಿಕ್ಕಿ ತನ್ನ ಸ್ವಸ್ವರೂಪವನ್ನ ಮರೆತುಕೊಂಡುಬಿಡುತ್ತಾನೆ. ತಂದೆಯ ಅನಂತ ಐಶ್ವರ್ಯಕ್ಕೆ ತಾನು ಉತ್ತರಾಧಿಕಾರಿ ಎಂಬುದನ್ನು ಮರೆತುಬಿಡುತ್ತಾನೆ. ಆತನ ಮಾಯೆ ತ್ರಿಗುಣಮಯವಾದ್ದು. ಈ ಮೂರು ಗುಣಗಳೂ ದರೋಡೆಕಾರರೇ; ಸರ್ವಸ್ವವನ್ನೂ ಹರಣಮಾಡಿಬಿಡುತ್ತಾರೆ, ಸ್ವಸ್ವರೂಪವನ್ನು ಮರಸಿಬಿಡು ತ್ತಾರೆ. ಈ ಮೂರು ಗುಣಗಳಾವುವೆಂದರೆ—ಸತ್ತ್ವ, ರಜಸ್ಸು, ತಮಸ್ಸು. ಇವುಗಳಲ್ಲಿ ಕೇವಲ ಸತ್ತ್ವಗುಣ ಮಾತ್ರವೇ ಭಗವಂತನ ಕಡೆಗೆ ಹೋಗೋ

ಮಾರ್ಗವನ್ನು ತೋರಿಸಿಕೊಟ್ಟುಬಿಡುತ್ತದೆ. ಆದರೆ ಸತ್ತ್ವಗುಣವೂ ಮನುಷ್ಯನನ್ನು ಭಗವಂತನ ಸಮೀಪಕ್ಕೆ ಕರೆದುಕೊಂಡುಹೋಗಿಬಿಡಲಾರದು.

"ಒಂದು ಕಥೆ ಹೇಳುತ್ತೇನೆ ಕೇಳಿ. ಒಬ್ಬ ಧನಿಕ ಕಾಡಿನ ಮಾರ್ಗವಾಗಿ ಹೋಗುತ್ತಿದ್ದ. ಇದ್ದಕ್ಕಿದ್ದಹಾಗೆ ಮೂರು ಜನ ಡಕಾಯಿತರು ಆತನನ್ನು ಸುತ್ತುಗಟ್ಟಿ ಆತನ ಸರ್ವಸ್ವವನ್ನೂ ಕಸಿದುಕೊಂಡುಬಿಟ್ಟರು. ಆತನ ಹತ್ತಿರ ಇದ್ದುಬದ್ದುದನ್ನೆಲ್ಲಾ ಕಿತ್ತುಕೊಂಡನಂತರ ಒಬ್ಬ ಡಕಾಯಿತ ಹೇಳಿದ: 'ಇವನನ್ನೇಕೆ ಹಾಗೇ ಬಿಟ್ಟುಹೋಗಬೇಕು? ಕೊಂದು ಹಾಕಿಬಿಡೋಣ.' ಹೀಗೆಂದು ಹೇಳಿ ಆತನನ್ನು ಕತ್ತರಿಸಿ ಹಾಕಲು ಮುಂದುವರಿದ. ಎರಡನೆ ಡಕಾಯಿತ ಆತನನ್ನು ತಡೆದು ಹೇಳಿದ: 'ಇವನನ್ನೇಕೆ ಕೊಂದುಹಾಕಬೇಕು, ಪಾಪ. ಇವನ ಕೈ ಕಾಲು ಕಟ್ಟಿ ಇಲ್ಲೇ ಬಿಟ್ಟು ಹೋಗೋಣ. ಆಗ ಈತ ಪೊಲೀಸಿನವರಿಗೆ ಹೋಗಿ ಹೇಳಲಾರ.' ಹೀಗೆಂದು ಹೇಳಿ ಅವರು ಹಗ್ಗದಿಂದ ಧನಿಕನ ಕೈ ಕಾಲು ಕಟ್ಟಿ ಆತನನ್ನು ಅಲ್ಲೇ ಬಿಟ್ಟು ಹೊರಟುಹೋದರು.

"ಸ್ವಲ್ಪ ಹೊತ್ತಾದನಂತರ ಮೂರನೆ ಡಕಾಯಿತ ಧನಿಕನಿದ್ದಲ್ಲಿಗೆ ಹಿಂದಿರುಗಿಬಂದು ಹೇಳಿದ: 'ಅಯ್ಯೋ ಪಾಪ! ನಿನಗೆ ಬಹಳ ಕಷ್ಟವಾಗಿರಬೇಕು, ಅಲ್ಲವೆ? ನಾನು ನಿನ್ನ ಕೈ ಕಾಲು ಬಿಚ್ಚಿಹಾಕುತ್ತೇನೆ.' ಹಗ್ಗವನ್ನು ಬಿಚ್ಚಿಹಾಕಿದನಂತರ ಡಕಾಯಿತ ಧನಿಕನನ್ನು ಕಾಡಿನಿಂದ ಹೊರಕ್ಕೆ ಕರೆದುಕೊಂಡುಬಂದ. ಬಳಿಕ ರಾಜಮಾರ್ಗವನ್ನು ಸಮೀಪಿಸಿ ಆ ಡಕಾಯಿತ ಧನಿಕನಿಗೆ ಹೇಳಿದ: 'ಈ ಮಾರ್ಗವಾಗೇ ನೀನು ಮುಂದುವರಿ. ಯಾವ ತೊಂದರೆಯೂ ಇಲ್ಲದೆ ನಿನ್ನ ಮನೆಯನ್ನು ತಲುಪುತ್ತೀಯೆ.' ಆ ಧನಿಕ ಹೇಳಿದ: 'ಆದರೆ ನೀನೂ ನನ್ನೊಡನೆ ಬರಲೇಬೇಕು. ನೀನು ನನಗೆ ಎಷ್ಟೊಂದು ಉಪಕಾರ ಮಾಡಿದೀಯೆ ಏನು ಕತೆ! ನೀನು ನಮ್ಮ ಮನೆಗೆ ಬಂದದ್ದೇ ಆದರೆ ನಮಗೆಲ್ಲಾ ಬಹಳ ಆನಂದವಾಗಿಬಿಡುತ್ತದೆ.' ಡಕಾಯಿತ ಹೇಳಿದ: 'ಇಲ್ಲ, ನಾವು ಅಲ್ಲಿಗೆ ಬರೋ ಹಾಗಿಲ್ಲ. ಪೊಲೀಸಿನವರು ಹಿಡಿದುಕೊಂಡುಬಿಡುತ್ತಾರೆ.' ಆತ ಹೀಗೆಂದು ಹೇಳಿ ಧನಿಕನಿಗೆ ದಾರಿ ತೋರಿಸಿಬಿಟ್ಟು ಹೊರಟುಹೋದ.

"'ಇವನನ್ನೇಕೆ ಹಾಗೇ ಬಿಟ್ಟುಹೋಗಬೇಕು? ಕೊಂದು ಹಾಕಿಬಿಡೋಣ' ಎಂಬುದಾಗಿ ಹೇಳಿದ ಮೊದಲನೆ ಡಕಾಯಿತ ತಮಸ್ಸಿಗೆ ಉಪಮೆ. ತಮಸ್ಸು ನಾಶಮಾಡುತ್ತದೆ. ಎರಡನೆ ಡಕಾಯಿತ ರಜೋ

ಗುಣಕ್ಕೆ ಉಪಮೆ. ರಜಸ್ಸು ಮನುಷ್ಯನನ್ನು ಸಂಸಾರ ಬಂಧನಕ್ಕೆ ಸಿಲುಕಿಸಿ ವಿವಿಧ ಕಾರ್ಯಗಳಲ್ಲಿ ಆತನನ್ನು ತೊಡಗಿಸುತ್ತದೆ; ಭಗವಂತನನ್ನು ಮರೆಯುವಂತೆ ಮಾಡುತ್ತದೆ. ಕೇವಲ ಸತ್ತ್ವಗುಣ ಮಾತ್ರವೇ ಭಗವಂತನ ಕಡೆಗೆ ಹೋಗುವ ಮಾರ್ಗವನ್ನು ತೋರಿಸಿಕೊಡುತ್ತದೆ. ದಯೆ, ಧರ್ಮ, ಭಕ್ತಿ ಇವೆಲ್ಲಾ ಸತ್ತ್ವ ಗುಣದಿಂದ ಉಂಟಾಗುತ್ತವೆ. ಸತ್ತ್ವಗುಣ ಮೆಟ್ಟಿಲಸಾಲ ತುತ್ತತುದಿ ಮೆಟ್ಟಿಲು ಇದ್ದ ಹಾಗೆ. ಅದನ್ನು ಹತ್ತಿದೊಡನೇ ಚಾವಣಿ. ಮನುಷ್ಯನ ಸ್ವಧಾಮವೇ ಪರಬ್ರಹ್ಮ. ಮನುಷ್ಯ ತ್ರಿಗುಣಾತೀತನಾಗದ ಹೊರತು ಆತನಿಗೆ ಬ್ರಹ್ಮಜ್ಞಾನ ದೊರಕದು.''

ಆಚಾರ್ಯ: ''ನೀವು ನಮಗೆ ಬಹಳ ಒಳ್ಳೆ ವಿಷಯಗಳನ್ನು ತಿಳಿಸಿದಿರಿ.''

ಶ್ರೀರಾಮಕೃಷ್ಣರು ನಗುತ್ತ: ''ಭಕ್ತರ ಸ್ವಭಾವ ಏನು ಗೊತ್ತೆ? ಒಬ್ಬ ಭಕ್ತ ಇನ್ನೊಬ್ಬ ಭಕ್ತನನ್ನು ಸಂಧಿಸಿದಾಗ ಹೇಳುತ್ತಾನೆ: 'ನಾನು ಹೇಳುವುದನ್ನು ನೀನು ಕೇಳು, ನೀನು ಹೇಳುವುದನ್ನು ನಾನು ಕೇಳುತ್ತೇನೆ.' ನೀವು ಆಚಾರ್ಯಪುರುಷರು. ಎಷ್ಟೊಂದು ಜನಕ್ಕೆ ನೀವು ಶಿಕ್ಷಣ ಕೊಡುತ್ತೀರಿ ಏನುಕತೆ! ನೀವು ಜಹಜು ಆದರೆ ನಾವು ಮೀನು ಹಿಡಿಯುವ ದೋಣಿ.'' (ಎಲ್ಲರೂ ನಗುತ್ತಿದಾರೆ.)

೨ನೆ ಮೇ ೧೮೮೩, ಚೈತ್ರ ಕೃಷ್ಣ ದಶಮಿ, ಬುಧವಾರ.

ಪರಮಹಂಸರು ಮಾಸ್ಟರ್, ರಾಖಾಲ, ಇವರೇ ಮೊದಲಾದ ಭಕ್ತರೊಡನೆ ಸಾಯಂಕಾಲ ಐದು ಘಂಟೆ ಸಮಯಕ್ಕೆ ನಂದನವನದಲ್ಲಿರುವ ಬ್ರಾಹ್ಮಸಮಾಜ ಮಂದಿರಕ್ಕೆ ಬಂದಿದಾರೆ. ಅವರನ್ನು ಮೊದಲು ನೆಲ ಅಂತಸ್ತಿನಲ್ಲಿರುವ ಬೈಠಕ್‌ಖಾನೆಯಲ್ಲಿ ಕೂರಿಸಲಾಯಿತು. ಕ್ರಮೇಣ ಅನೇಕ ಬ್ರಾಹ್ಮಭಕ್ತರು ಅಲ್ಲಿಗೆ ಬಂದು ಕೂರಲಾರಂಭಿಸಿದರು. ರವೀಂದ್ರನಾಥ ಠಾಕುರರು ಮತ್ತು ಅವರ ಮನೆಗೆ ಸೇರಿದ ಇನ್ನೂ ಕೆಲವರು ಅಲ್ಲಿಗೆ ಬಂದು ಸೇರಿದರು.

ಈಗ ಪರಮಹಂಸರನ್ನು ಎರಡನೆ ಅಂತಸ್ತಿನಲ್ಲಿದ್ದ ಉಪಾಸನಾ ಮಂದಿರಕ್ಕೆ ಕರೆದುಕೊಂಡುಹೋಗಲಾಯಿತು. ವೇದಿಕೆಯನ್ನು ಆ ಮಂದಿರದ ಪೂರ್ವ ಭಾಗದಲ್ಲಿ ನಿರ್ಮಿಸಿದಾರೆ. ನೈರುತ್ಯ ಭಾಗದಲ್ಲಿ ಒಂದು ಇಂಗ್ಲಿಷು ವಾದ್ಯ (ಪಿಯಾನೊ) ಇಟ್ಟಿದಾರೆ. ಉತ್ತರ ಭಾಗದಲ್ಲಿ ಕೆಲವು

ಕುರ್ಚಿಗಳನ್ನು ಹಾಕಿದಾರೆ. ಮುಂಗತ್ತಲೆ ಸಮೀಪಿಸಿದೊಡನೆ ಉಪಾಸನೆ ಆರಂಭವಾಗುತ್ತದೆ.

ಪರಮಹಂಸರು ಉಪಾಸನಾಮಂದಿರವನ್ನು ಪ್ರವೇಶಿಸಿದೊಡನೇ ವೇದಿಕೆಗೆ ಪ್ರಣಾಮಮಾಡಿದರು. ಅದರ ಹತ್ತಿರವೇ ಕುಳಿತುಕೊಂಡ ನಂತರ ಮಾಸ್ಟರ್, ರಾಖಾಲನೇ ಮೊದಲಾದ ಭಕ್ತರಿಗೆ ಹೇಳುತ್ತಿದಾರೆ: "ನರೇಂದ್ರ ಒಮ್ಮೆ ನನ್ನನ್ನು ಕೇಳಿದ: 'ಸಮಾಜ ಮಂದಿರಕ್ಕೆ ಏಕೆ ಕೆಲಸ ಬಿಟ್ಟು ಪ್ರಣಾಮಮಾಡಲು ಹೋಗಬೇಕು?' ದೇವಾಲಯ ಕಣ್ಣಿಗೆ ಬಿತ್ತು ಎಂದರೆ, ಭಗವಂತನೇ ಜ್ಞಾಪಕಕ್ಕೆ ಬರುತ್ತಾನೆ— ಉದ್ದೀಪನವಾಗುತ್ತದೆ. ಎಲ್ಲಿ ಆತನ ಸಂಬಂಧವಾಗಿ ಮಾತುಕತೆ ನಡೆಯುವುದೊ, ಅಲ್ಲಿ ಆತನ ಆವಿರ್ಭಾವ ಆಗುತ್ತದೆ—ಎಲ್ಲಾ ತೀರ್ಥಗಳ ಪಾವಿತ್ರ್ಯತೆ ಅಲ್ಲಿ ನೆಲೆಗೊಳ್ಳುತ್ತದೆ. ಈ ವಿಧದ ಸ್ಥಳಗಳೆಲ್ಲಾ ಭಗವಂತನನ್ನೇ ಮನಸ್ಸಿಗೆ ತರುತ್ತವೆ.

"ಒಮ್ಮೆ ಒಬ್ಬ ಭಕ್ತ ಜಾಲಿಮರವನ್ನು ಕಂಡೊಡನೇ ಭಾವಾವಿಷ್ಟನಾಗಿಬಿಟ್ಟ. ರಾಧಾಕಾಂತದೇವಾಲಯದಲ್ಲಿ ಉಪಯೋಗಿಸುತ್ತಿರುವ ಕೊಡಲಿ ಕಾವು ಈ ಮರದ್ದೇ ಎಂಬ ಜ್ಞಾಪಕ ಆತನಿಗೆ ಉಂಟಾಗಿಬಿಟ್ಟಿತು. ಇನ್ನೊಬ್ಬ ಭಕ್ತನಿಗೆ ತನ್ನ ಗುರುವಿನ ಮೇಲೆ ಅಂಥಾ ಶ್ರದ್ಧಾಭಕ್ತಿ, ಆತನ ನೆರೆಹೊರೆಯವರು ಯಾರು ಕಣ್ಣಿಗೆ ಬಿದ್ದರೂ ಭಾವಾವಿಷ್ಟನಾಗಿಬಿಡುತ್ತಿದ್ದ. ಮೇಘ ಕಣ್ಣಿಗೆ ಬಿತ್ತು ಎಂದರೆ, ನೀಲಿವಸ್ತ್ರ ಕಣ್ಣಿಗೆ ಬಿತ್ತು ಎಂದರೆ, ಕೃಷ್ಣನ ಪಟ ಕಣ್ಣಿಗೆ ಬಿತ್ತು ಎಂದರೆ ಶ್ರೀಮತಿಗೆ (ರಾಧೆಗೆ) ಕೃಷ್ಣನ ಉದ್ದೀಪನವಾಗುತ್ತಿತ್ತು. ಆಕೆ ಇವನ್ನೆಲ್ಲಾ ನೋಡಿ ಉನ್ಮತ್ತಳಂತೆ, 'ಎಲ್ಲಿ ಕೃಷ್ಣ?' ಎಂದು ವ್ಯಾಕುಲಳಾಗಿಬಿಡುತ್ತಿದ್ದಳು."

ಘೋಷಾಲ: "ಉನ್ಮಾದ ಒಳ್ಳೆಯದಲ್ಲ."

ಶ್ರೀರಾಮಕೃಷ್ಣರು: "ಏಕೆ ಹಾಗೆ ಭಾವಿಸುತ್ತೀಯೆ? ಇದೇನು ವಿಷಯಚಿಂತನೆಯಿಂದ ಉಂಟಾದ ಉನ್ಮಾದವೆ, ಬುದ್ಧಿ ಕೆಟ್ಟುಹೋಗುವುದಕ್ಕೆ? ಈ ಅವಸ್ಥೆ ಭಗವಚ್ಚಿಂತನೆಯಿಂದ ಉಂಟಾಗುತ್ತೆ. ಪ್ರೇಮೋನ್ಮಾದ, ಜ್ಞಾನೋನ್ಮಾದ ಎಂಬುದು ನಿನ್ನ ಕಿವಿಗೆ ಬಿದ್ದೇ ಇಲ್ಲವೇ?"

ಒಬ್ಬ ಬ್ರಾಹ್ಮಭಕ್ತ: "ಏನು ಮಾಡಿದರೆ ಆತನ ಸಾಕ್ಷಾತ್ಕಾರ ಪಡೆದುಕೊಳ್ಳಬಹುದು?

ಶ್ರೀರಾಮಕೃಷ್ಣರು: "ಭಗವಂತನನ್ನು ಪ್ರೀತಿಸಿದರೆ, 'ಭಗವಂತನೇ ಸತ್ಯ, ಈ ಜಗತ್ತು ಅನಿತ್ಯ' ಎಂಬ ವಿಚಾರದಲ್ಲಿ ಸದಾ ತೊಡಗಿದ್ದರೆ. ಅಶ್ವತ್ಥ ವೃಕ್ಷವೇ ಸತ್ಯ—ಹಣ್ಣು ಎರಡು ದಿನದ್ದು."

ಬ್ರಾಹ್ಮಭಕ್ತ: "ಕಾಮಕ್ರೋಧಾದಿ ಅರಿಷಡ್ವರ್ಗಗಳೆಲ್ಲಾ ನಮ್ಮಲ್ಲಿ ತುಂಬಿವೆ. ಏನು ಮಾಡೋಣ ನಾವು?"

ಶ್ರೀರಾಮಕೃಷ್ಣರು: "ಈ ಅರಿಷಡ್ವರ್ಗಗಳನ್ನ ಭಗವಂತನ ಕಡೆಗೆ ತಿರುಗಿಸಿಬಿಡು. ಆತ್ಮನೊಡನೆ ವಿಲಾಸಿಸಬೇಕೆಂಬ ಕಾಮನೆ ಮಾಡಬೇಕು. ಯಾರು ಭಗವಂತನ ಮಾರ್ಗಕ್ಕೆ ತಡೆ ಒಡ್ಡುತ್ತಾರೊ ಅವರ ಮೇಲೆ ಕೋಪಿಸಿಕೊಳ್ಳಬೇಕು. ಆತನ ಸಾಕ್ಷಾತ್ಕಾರಕ್ಕಾಗಿ ಲೋಭಪಡಬೇಕು. 'ನಾನು, ನನ್ನದು' ಎಂಬುದನ್ನು ಬಿಡಲಾಗದಿದ್ದರೆ ಭಗವಂತನ ಸಂಬಂಧ ವಾಗಿ ಮಾತ್ರವೇ ಹಾಗೆ ಮಾಡಬೇಕು. ಅಹಂಕಾರ ಪಡಬೇಕಾಗಿದ್ದರೆ ವಿಭೀಷಣನ ಹಾಗೆ ವರ್ತಿಸಬೇಕು. ಆತ ಹೇಳಿದ: 'ನಾನು ಶ್ರೀರಾಮ ಚಂದ್ರನಿಗೆ ಸಾಷ್ಟಾಂಗಪ್ರಣಾಮ ಮಾಡಿದೇನೆ. ಈ ತಲೆಯಿಂದ ನಾನು ಬೇರೆ ಯಾರ ಪಾದವನ್ನೂ ಸ್ಪರ್ಶಮಾಡೋದಿಲ್ಲ.'"

ಬ್ರಾಹ್ಮಭಕ್ತ "ಭಗವಂತನೇ ಎಲ್ಲವನ್ನೂ ನನ್ನ ಕೈಯಿಂದ ಮಾಡಿಸು ತ್ತಿರುವುದಾದರೆ, ನಾನು ಪಾಪಕ್ಕೆ ಹೊಣೆಗಾರನಾಗೋದಿಲ್ಲವಲ್ಲ?"

ಶ್ರೀರಾಮಕೃಷ್ಣರು ನಗುತ್ತ: "ಹೌದು, ದುರ್ಯೋಧನನೂ ಹಾಗೇ ಹೇಳಿದ. ಆತ ಹೇಳಿದ: 'ಹೇ ಹೃಷೀಕೇಶ, ನೀನು ನನ್ನ ಹೃದಯದಲ್ಲಿ ಕುಳಿತು ಹೇಗೆ ಪ್ರೇರಿಸುತ್ತಿದೀಯೊ ಹಾಗೇ ನಾನು ವರ್ತಿಸುತ್ತಿದೇನೆ.' ಭಗವಂತನೇ ಕರ್ತ ತಾನು ಅಕರ್ತ ಎಂಬ ದೃಢ ವಿಶ್ವಾಸ ಯಾರಿಗೆ ಇದೆಯೊ ಆತನಿಂದ ಪಾಪಕಾರ್ಯ ಸಾಧ್ಯವಿಲ್ಲ. ಯಾರಿಗೆ ನರ್ತಿಸುವುದು ಚೆನ್ನಾಗಿ ಬರುತ್ತದೊ ಆತ ಎಂದಿಗೂ ತಾಳ ತಪ್ಪಿ ಹೆಜ್ಜೆ ಇಡೋದಿಲ್ಲ. ಅಂತರ್ಯ ಶುದ್ಧವಾಗದ ಹೊರತು ಭಗವಂತನಿದಾನೆ ಎಂಬ ಶ್ರದ್ಧೆಯೇ ಉಂಟಾಗದು."

ಪರಮಹಂಸರು ಉಪಾಸನಾಮಂದಿರದಲ್ಲಿ ನೆರೆದಿದ್ದ ಸಭಿಕರ ಕಡೆ ನೋಡಿ ಹೇಳುತ್ತಿದಾರೆ: "ಆಗಾಗ ಈ ರೀತಿಯಾಗಿ ಎಲ್ಲರೂ ಕಲೆತು ಭಗವಚ್ಚಿಂತನೆ ಮತ್ತು ಆತನ ನಾಮಗುಣಕೀರ್ತನೆ ಮಾಡುವುದು ಬಹಳ ಒಳ್ಳೆಯದು. ಆದರೆ ಪ್ರಾಪಂಚಿಕರ ಭಗವದನುರಾಗ ಬಹಳ ಕ್ಷಣಿಕ

ವಾದ್ದು. ಕೆಂಪಗೆ ಕಾದ ಬಾಣಲೆ ಮೇಲೆ ಒಂದು ತೊಟ್ಟು ನೀರು ಬಿದ್ದರೆ ಅದು ಇಂಗಿಹೋಗಲು ಎಷ್ಟು ಸಮಯ ಬೇಕೊ ಅಷ್ಟೆ."

ಇನ್ನೇನು ಉಪಾಸನೆ ಆರಂಭವಾಗಲಿದೆ. ಸಮಾಜಮಂದಿರ ಬ್ರಾಹ್ಮ ಭಕ್ತರಿಂದ ಪೂರ್ಣವಾಗಿ ತುಂಬಿದೆ. ಕೆಲವು ಮಂದಿ ಬ್ರಾಹ್ಮ ಮಹಿಳೆಯರು ಸಂಗೀತ ಪುಸ್ತಕವನ್ನು ಕೈಯಲ್ಲಿ ಹಿಡಿದು ಕುರ್ಚಿಗಳ ಮೇಲೆ ಕುಳಿತಿದಾರೆ. ಹಾರ್ಮೋನಿಯಮ್ ಮತ್ತು ಪಿಯಾನೊಗಳೊಡನೆ ಬ್ರಾಹ್ಮಸಮಾಜದ ಹಾಡುಗಳನ್ನು ಹಾಡಲಾರಂಭಿಸಿದರು. ಹಾಡುಗಳನ್ನು ಕೇಳಿ ಪರಮಹಂಸರಿಗೆ ಪರಮಸಂತೋಷವಾಗಿಬಿಟ್ಟಿದೆ. ಪ್ರಾರ್ಥನೆಯಾದನಂತರ ಉಪಾಸನೆ ಆರಂಭವಾಯಿತು. ಆಚಾರ್ಯರ ಒಂದು ಗುಂಪು ವೇದಿಕೆಯ ಮೇಲೆ ಕುಳಿತು ವೇದಮಂತ್ರೋಚ್ಚಾರಣೆ ಮಾಡಲಾರಂಭಿಸಿತು :

ಓಂ ಪಿತಾ ನೋಽಸಿ ಪಿತಾ ನೋ ಬೋಧಿ ।
ನಮಸ್ತೇಽಸ್ತು ಮಾ ಮಾ ಹಿಂಸೀಃ ॥ ( ಶುಕ್ಲ ಯಜುರ್ವೇದ ಸಂಹಿತಾ, XXXVII, ೨೦. )[x]

ಈಗ ಬ್ರಾಹ್ಮಭಕ್ತರು ಒಕ್ಕೊರಳಿನಿಂದ ಆಚಾರ್ಯರೊಡನೆ ಉಚ್ಚರಿಸಲಾರಂಭಿಸಿದರು :

ಓ ಸತ್ಯಂ ಜ್ಞಾನಮನಂತಂ ಬ್ರಹ್ಮ । ( ತೈತ್ತಿರೀಯ, ೨, ೧.)*
ಆನಂದರೂಪಮಮೃತಂ ಯದ್ವಿಭಾತಿ । ( ಮುಂಡಕ, ೨, ೨, ೭.)*
ಶಾಂತಂ ಶಿವಮದ್ವೈತಮ್ । ( ಮಾಂಡೂಕ್ಯ, ೭.)*
ಶುದ್ಧಮಪಾಪವಿದ್ಧಮ್ । ( ಈಶ, ೮.)*

ಈಗ ಆಚಾರ್ಯರ ಗುಂಪು ಸ್ತೋತ್ರಪಾಠ ಮಾಡುತ್ತಿದೆ:

ಓಂ ನಮಸ್ತೇ ಸತೇ ತೇ ಜಗತ್ಕಾರಣಾಯ ।
ನಮಸ್ತೇ ಚಿತೇ ಸರ್ವಲೋಕಾಶ್ರಯಾಯ . . . ‡

ಸ್ತೋತ್ರಪಾಠದನಂತರ ಆಚಾರ್ಯರ ಗುಂಪು ಪ್ರಾರ್ಥನೆಮಾಡಲಾರಂಭಿಸಿತು.

ಅಸತೋ ಮಾ ಸದ್ಗಮಯ ।
ತಮಸೋ ಮಾ ಜ್ಯೋತಿರ್ಗಮಯ । . . . ( ಉ. ೯೪೨ )

---

x ಇದರ ಸರಳಾನುವಾದಕ್ಕೆ ಪರಿಶಿಷ್ಟ ೧ ರಲ್ಲಿ ೧ ನ್ನು ನೋಡಿ.

* ಪರಿಶಿಷ್ಟ ೧ರಲ್ಲಿ ೨ನ್ನು ನೋಡಿ.

‡ ,, ,, ೩ನ್ನು ನೋಡಿ.

ಈ ಸ್ತೋತ್ರಾದಿ ಪಾಠಗಳನ್ನು ಕೇಳಿ ಪರಮಹಂಸರು ಭಾವಾವಿಷ್ಟ ರಾಗುತ್ತಿದಾರೆ. ಈಗ ಆ ಆಚಾರ್ಯರ ಗುಂಪಿನಲ್ಲೊಬ್ಬ ಪ್ರಬಂಧ ಓದುತ್ತಿದಾನೆ.

ಉಪಾಸನೆ ಮುಗಿಯಿತು. ಭಕ್ತರಲ್ಲನೇಕರು ವಾಯು ಸೇವನೆಗಾಗಿ ನೆಲ ಅಂತಸ್ತಿಗೊ ಅಥವಾ ಪ್ರಾಂಗಣಕ್ಕೊ ಹೋದರು. ರಾತ್ರಿಯ ಉಪಾಹಾರದ ವ್ಯವಸ್ಥೆ ನಡೆಯುತ್ತಿದೆ. ಆಗಲೆ ರಾತ್ರಿ ಒಂಬತ್ತು ಆಗಿ ಬಿಟ್ಟದೆ. ಪರಮಹಂಸರು ಹಿಂದಿರುಗಿ ದಕ್ಷಿಣೇಶ್ವರಕ್ಕೆ ಹೋಗಬೇಕಾಗಿದೆ. ಆತಿಥ್ಯಕಾರರು ಉಳಿದ ಅತಿಥಿಗಳೊಡನೇ ಅಷ್ಟೊಂದು ನಿರತರಾಗಿಬಿಟ್ಟಿ ದಾರೆ, ಅವರು ಪರಮಹಂಸರನ್ನು ಮರೆತೇ ಬಿಟ್ಟದಾರೆ.

ಶ್ರೀರಾಮಕೃಷ್ಣರು ರಾಖಾಲನೇ ಮೊದಲಾದವರಿಗೆ: "ಏನು ಸಮಾಚಾರ? ನಮ್ಮನ್ನು ಕೇಳೋರೇ ಇಲ್ಲವಲ್ಲ!"

ರಾಖಾಲ ಕೋಪದಿಂದ: "ಮಹಾಶಯರೆ, ಬನ್ನಿ—ದಕ್ಷಿಣೇಶ್ವರಕ್ಕೆ ಹೊರಟುಹೋಗೋಣ."

ಶ್ರೀರಾಮಕೃಷ್ಣರು ನಗುತ್ತ: "ಸುಮ್ಮನೆ ಕುಳಿತುಕೊ! ಗಾಡಿ ಬಾಡಿಗೆ ಮೂರು ರೂಪಾಯಿ ಎರಡು ಆಣೆ. ಅದನ್ನಾರು ಕೊಡುತ್ತಾರೆ? ಸುಮ್ಮನೆ ಸಿಟ್ಟುಗೊಂಡುಬಿಟ್ಟರೆ ಆಗುತ್ತದೆಯೆ? ಕೈಯಲ್ಲಿ ಒಂದು ಕಾಸಿಲ್ಲ, ಜಳ್ಳು ಬೆದರಿಕೆ ತೋರಿಸೋದು! ಜೊತೆಗೆ ಇಷ್ಟು ರಾತ್ರಿಯಲ್ಲಿ ಊಟಕ್ಕೆ ಎಲ್ಲಿಗೆ ಹೋಗೋದು?"

ಎಷ್ಟೋ ಹೊತ್ತಾದ ಮೇಲೆ ಎಲೆ ಹಾಕಾಗಿದೆ ಎಂಬ ಸುದ್ದಿ ಬಂತು. ಊಟಕ್ಕೆ ಎಲ್ಲರನ್ನೂ ಒಟ್ಟಿಗೆ ಎಳಿಸಿಬಿಟ್ಟರು. ಆ ನೂಕುನುಗ್ಗಲಿನಲ್ಲಿ ಪರಮಹಂಸರು ರಾಖಾಲನೇ ಮೊದಲಾದವರೊಡನೆ ಮುಂದುವರಿದು ಎರಡನೆ ಅಂತಸ್ತಿಗೆ ಬಂದರು. ಅಂಗಳ ಆಗಲೆ ಜನರಿಂದ ಭರ್ತಿಯಾಗಿ ಬಿಟ್ಟಿತ್ತು. ಪರಮಹಂಸರಿಗೆ ಜಾಗವೇ ದೊರೆಯಲಿಲ್ಲ. ಬಹಳ ಪ್ರಯಾಸ ಪಟ್ಟು ಪರಮಹಂಸರಿಗೆ ಯಾವುದೊ ಒಂದು ಮೂಲೆಯಲ್ಲಿ ಸ್ವಲ್ಪ ಸ್ಥಳ ಮಾಡಿದ್ದಾಯಿತು. ಆ ಸ್ಥಳದಲ್ಲಿ ದೂಳು ಸುಮ್ಮನೆ ತುಂಬಿತ್ತು. ಒಬ್ಬ ಬ್ರಾಹ್ಮಣ ಹೆಂಗಸು ಪಲ್ಯ ಬಡಿಸಿದಳು. ಪರಮಹಂಸರ ಕೈಯಲ್ಲಿ ಅದನ್ನು ತಿನ್ನಲಾಗಲಿಲ್ಲ. ಅವರು ಉಪ್ಪು ಅದ್ದಿಕೊಂಡೇ ಪೂರಿ ತಿಂದರು ಮತ್ತು ಸ್ವಲ್ಪ ಸಿಹಿ ತಿಂಡಿಯನ್ನು ತಿಂದರು.

ಪರಮಹಂಸರು ದಯಾಸಿಂಧು. ಆತಿಥ್ಯಕಾರರಿಗೆ ಇನ್ನೂ ಎಳೆ

ವಯಸ್ಸು; ಆದ್ದರಿಂದ ಆವರ ಮೇಲೆ ಹೇಗೆತಾನೆ ಅವರು ಕೋಪಿಸಿ ಕೊಂಡಾರು? ಅವರು ಉಪಾಹಾರ ತೆಗೆದುಕೊಳ್ಳದೆ ಹೊರಟುಹೋಗಿ ಬಿಟ್ಟಿದ್ದರೆ ಆತಿಥ್ಯಕಾರರ ಕುಟುಂಬಕ್ಕೆ ಅಮಂಗಳ ಉಂಟಾಗಿಬಿಡುತ್ತಿತ್ತು. ಭಗವಂತನ ಪ್ರೀತ್ಯರ್ಥವಾಗಿ ಈ ಉತ್ಸವವನ್ನು ಏರ್ಪಡಿಸಿದ್ದರಿಂದ ಏನೇ ಲೋಪದೋಷವಿದ್ದರೂ ಮನ್ನಿಸಬೇಕಾದ್ದೆ.

ಉಪಾಹಾರವಾದನಂತರ ಪರಮಹಂಸರು ಗಾಡಿಗೆ ಹತ್ತಿದರು; ಆದರೆ ಗಾಡಿ ಬಾಡಿಗೆ? ಆತಿಥ್ಯಕಾರ ಎಲ್ಲಿ ಹುಡುಕಿದರೂ ಕಣ್ಣಿಗೇ ಬೀಳುತ್ತಿಲ್ಲ. ಇದರ ಸಂಬಂಧವಾಗಿ ಪರಮಹಂಸರು ಒಂದು ದಿನ ಭಕ್ತರಿಗೆ ನಗು ನಗುತ್ತ ಹೇಳಿದರು: "ನಮ್ಮ ಹುಡುಗರು ಆತಿಥ್ಯಕಾರನನ್ನು ಹೇಗೊ ಪತ್ತೆಮಾಡಿ ಆತನನ್ನು ಗಾಡಿ ಬಾಡಿಗೆ ಕೇಳಿದರು. ಮೊದಲು ಅವನು ಕೊಡದೆ ಹೋದ. ಆದರೆ ಹುಡುಗರು ಕೊನೆಗೆ ಹೇಗೋ ಮಾಡಿ ಅವನಿಂದ ಮೂರು ರೂಪಾಯಿ ವಸೂಲು ಮಾಡಿದರು. ಉಳಿದ ಎರಡಾಣೆಯನ್ನು ಕೊಡದೆ ಹೋದ. ಆತ ಹೇಳಿದ: 'ಕೊಡೋದಿಲ್ಲ. ಹೋಗಿ, ಇಷ್ಟೇ ಸಾಕು.'"

೧೩ನೆ ಮೇ ೧೮೮೩, ವೈಶಾಖ ಶುಕ್ಲ ಸಪ್ತಮಿ, ಭಾನುವಾರ.

ಶ್ರೀರಾಮಕೃಷ್ಣರು ಕಲ್ಕತ್ತದಲ್ಲಿ ಕಾಂಸಾರಿಪಾರದ ಹರಿಭಕ್ತಿ ಪ್ರದಾಯಿನಿ ಸಭೆಗೆ ಬಂದಿದಾರೆ. ಇಂದು ಈ ಸಭೆಯ ವಾರ್ಷಿಕೋತ್ಸವ.

ಶ್ರೀಕೃಷ್ಣ ಬೃಂದಾವನದಲ್ಲಿ ನಡಸಿದ ಲೀಲೆಯ ಸಂಬಂಧವಾಗಿ ಸುಶ್ರಾವ್ಯವಾದ ಕೀರ್ತನೆ ಆರಂಭವಾಯಿತು. ಶ್ರೀಕೃಷ್ಣ ಚಂದ್ರಾವಳಿಯ ಮನೆಗೆ ಹೋದುದಕ್ಕಾಗಿ ಶ್ರೀಮತಿಗೆ (ರಾಧೆಗೆ) ಯಾವ ರೀತಿಯಾಗಿ ಮುನಿಸು ಬಂದುಬಿಟ್ಟಿತು ಎಂಬುದರ ಸಂಬಂಧವಾಗಿ ಈಗ ಕೀರ್ತನೆ ನಡೆ ಯುತ್ತಿದೆ. ರಾಧೆಯ ಸಖಿಯರು ಆಕೆಯನ್ನು ಸಮಾಧಾನಗೊಳಿಸಲೋಸುಗ ಆಕೆಗೆ ಹೇಳುತ್ತಿದಾರೆ: "ಶ್ರೀಮತಿ, ಏಕೆ ಮುನಿಸಿಕೊಂಡಿದೀಯೆ? ನೀನು ಶ್ರೀಕೃಷ್ಣನ ಸುಖಕ್ಕಾಗಿ ಹಾತೊರೆಯದೆ ನಿನ್ನ ಸುಖಕ್ಕಾಗೇ ಹಾತೊರೆ ಯುತ್ತಿರುವಂತೆ ಕಾಣುತ್ತಿದೆಯಲ್ಲ." ಶ್ರೀಮತಿ ಉತ್ತರವೀಯುತ್ತಾಳೆ: "ಆತ ಚಂದ್ರಾವಳಿಯ ಮನೆಗೆ ಹೋದುದಕ್ಕಾಗಿ ನನಗೆ ಸಿಟ್ಟು ಬಂದಿಲ್ಲ. ಎಲ್ಲಾ ಬಿಟ್ಟು, ಅಲ್ಲಿಗೆ ಏಕೆ ಹೋಗಬೇಕು? ಆಕೆಗೆ ಹೇಗೆ ಸೇವೆ ಮಾಡ ಬೇಕು ಎಂಬುದು ಗೊತ್ತಿಲ್ಲ."

೨೦ ನೆ ಮೇ ೧೮೮೪, ವೈಶಾಖ ಶುಕ್ಲ ಚತುರ್ದಶಿ, ಭಾನುವಾರ.

ಇಂದು ರಾಮಚಂದ್ರನ ಮನೆಯಲ್ಲಿ ಕೀರ್ತನೆ ನಡೆಯುತ್ತಿದೆ. ಪರಮಹಂಸರು ಅಲ್ಲಿಗೆ ಬಂದಿದಾರೆ. ಗಾಯಕ ವರ್ಣಿಸುತ್ತಿದಾನೆ, ಶ್ರೀಮತಿ ಶ್ರೀಕೃಷ್ಣನ ವಿರಹದಿಂದ ಯಾವ ರೀತಿಯಾಗಿ ದುಃಖಕ್ಕೆ ಈಡಾಗಿದಾಳೆ ಎಂಬುದನ್ನ:

ರಾಧೆ ತನ್ನ ಸಖಿಯರಿಗೆ ಹೇಳುತ್ತಿದಾಳೆ: "ನನ್ನ ಬಾಲ್ಯಾವಸ್ಥೆಯಿಂದಲೇ ಶ್ರೀಕೃಷ್ಣನ ದರ್ಶನ ಮಾಡಬೇಕೆಂದು ಬಹಳ ಕಾತರಳಾಗಿದ್ದೆ. ಶ್ರೀಕೃಷ್ಣನನ್ನು ಎಂದಿಗೆ ನೋಡೇನು ಎಂದು ದಿನಗಳನ್ನು ಎಣಿಸಿ ಎಣಿಸಿ ಬೆರಳ ಉಗುರು ಸವೆದು ಹೋಗಿವೆ. ನೋಡಿ, ಒಮ್ಮೆ ಆತ ನನಗೆ ಹೂವಿನ ಹಾರ ಕೊಟ್ಟ. ಅದು ಒಣಗಿಹೋಗಿಬಿಟ್ಟದೆ, ಆದರೂ ನಾನು ಅದನ್ನು ಬಿಸಾಡಿಬಿಟ್ಟಿಲ್ಲ. ಕೃಷ್ಣನೆಂಬ ಚಂದ್ರ ಎಲ್ಲಿರಮ್ಮ ಉದಯಿಸಿದಾನೆ? ನನ್ನ ಅಭಿಮಾನವೆಂಬ ರಾಹುವಿಗೆ ಹೆದರಿ ನನ್ನ ಹೃದಯಾಕಾಶವನ್ನು ಬಿಟ್ಟು ಹೊರಟು ಹೋಗಿದಾನೆಯೆ? ಅಯ್ಯೋ! ಆತನ ದರ್ಶನಮಾಡೋ ಸುಯೋಗ ಮತ್ತೊಮ್ಮೆ ದೊರಕುತ್ತದೆಯೆ? ಹೇ ಪ್ರಾಣವಲ್ಲಭ ಕೃಷ್ಣ, ನನ್ನ ಹೃದಯ ತಣಿದು ತೃಪ್ತಿಯಾಗುವಂತೆ ನಿನ್ನನ್ನು ನಾನು ಎಂದೂ ದರ್ಶನಮಾಡಲಾಗಲಿಲ್ಲವಲ್ಲ! ನನಗಿರುವುದು ಒಂದೇ ಒಂದು ಜೊತೆ ಕಣ್ಣು; ಅವು ರೆಪ್ಪೆ ಹೊಡೆಯುವುದರಿಂದ ನನಗೆ ನಿನ್ನ ಅನಿಮಿಷ ದರ್ಶನ ದೊರೆಯುತ್ತಿಲ್ಲ. ಸಾಲದುದಕ್ಕೆ ಪ್ರೇಮಾಶ್ರುವೂ ಧಾರಾಕಾರವಾಗಿ ಸುರಿಯುವುದರಿಂದ ನನ್ನ ಪ್ರಾಣ ವಲ್ಲಭನ ದರ್ಶನ ನನಗೆ ಸಾಕೆನಿಸುವಷ್ಟು ದೊರೆಯುತ್ತಿಲ್ಲ. ಆತನ ತಲೆಯ ಮೇಲಿರುವ ನವಿಲು ಗರಿ, ಸ್ಥಿರ ಮಿಂಚಿನಂತಿದೆ. ನವಿಲುಗಳು ಶ್ರೀಕೃಷ್ಣನ ನೀಲ ಮೇಘಸದೃಶ ರೂಪನ್ನು ಕಂಡು ಪುಕ್ಕ ಕೆದರಿ ಆನಂದದಿಂದ ನರ್ತಿಸುತ್ತಿದ್ದುವು. ಸಖಿಯರಾ, ಇನ್ನು ಈ ಪ್ರಾಣವನ್ನು ಉಳಿಸಿಕೊಂಡಿರಲಾರೆ. ನಾನು ಸತ್ತನಂತರ ಈ ದೇಹವನ್ನು ತೆಗೆದುಕೊಂಡುಹೋಗಿ ತಮಾಲ ವೃಕ್ಷದ ಒಂದು ಕೊಂಬೆಗೆ ಕಟ್ಟಿ ಬಿಡಿ; ಇದರ ಮೇಲೆ ಶ್ರೀಕೃಷ್ಣನಾಮವನ್ನು ಬರೆದುಬಿಡಿ."

ಶ್ರೀರಾಮಕೃಷ್ಣರು ಹೇಳುತ್ತಿದಾರೆ: "ಭಗವಂತನಿಗೂ ಆತನ ಹೆಸರಿಗೂ ಅಭೇದ. ಅದಕ್ಕಾಗೇ ರಾಧೆ ಹೇಳಿದಾಳೆ: 'ಶ್ರೀಕೃಷ್ಣನಿಗೂ ಆತನ ಹೆಸರಿಗೂ ಏನೂ ಭೇದವಿಲ್ಲ' ಎಂಬುದಾಗಿ.

೨೫ನೆ ಮೇ ೧೮೮೪, ಜ್ಯೇಷ್ಠ ಕೃಷ್ಣ ಪಂಚಮಿ, ಭಾನುವಾರ.

ಶ್ರೀರಾಮಕೃಷ್ಣರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಭಕ್ತರೊಡನೆ ಮಾತುಕತೆ ಆಡುತ್ತಿದಾರೆ. ಘಂಟೆ ಬೆಳಗಿನ ಒಂಬತ್ತು.

ಶ್ರೀರಾಮಕೃಷ್ಣರು ಮಾಸ್ಟರಿಗೆ ಮತ್ತು ಉಳಿದ ಭಕ್ತರಿಗೆ: "ವಿದ್ವೇಷ ಭಾವ ಒಳ್ಳೆಯದಲ್ಲ. ಶಾಕ್ತರು, ವೈಷ್ಣವರು, ವೇದಾಂತಿಗಳು ಪರಸ್ಪರ ಜಗಳಕಾಯುತ್ತಾರೆ. ಅದು ಒಳ್ಳೆಯದಲ್ಲ. ಪದ್ಮಲೋಚನ ವರ್ಧಮಾನ ರಾಜನ ಆಸ್ಥಾನಪಂಡಿತನಾಗಿದ್ದ. ಒಂದು ದಿನ ಸಭೆಯಲ್ಲಿ ವಿಚಾರ ಆರಂಭವಾಯಿತು, ಶಿವ ದೊಡ್ಡವನೊ, ವಿಷ್ಣು ದೊಡ್ಡವನೊ ಎಂದು. ಪದ್ಮಲೋಚನ ಒಳ್ಳೆ ಸೂಕ್ತವಾದ ಉತ್ತರ ಕೊಟ್ಟ. ಆತ ಹೇಳಿದ: 'ಇದರ ಸಂಬಂಧವಾಗಿ ನನಗೆ ಏನೂ ಗೊತ್ತಿಲ್ಲ. ನನಗೆ ಶಿವನ ಪರಿಚಯವೂ ಆಗಿಲ್ಲ, ವಿಷ್ಣುವಿನ ಪರಿಚಯವೂ ಆಗಿಲ್ಲ.' (ಎಲ್ಲರೂ ನಗುತ್ತಿದಾರೆ.)

"ವ್ಯಾಕುಲತೆ ಇತ್ತು ಎಂದರೆ ಎಲ್ಲಾ ಮಾರ್ಗದಿಂದಲೂ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು. ಆದರೆ ನಿಷ್ಠೆ ಬೇಕು. ನಿಷ್ಠಾಭಕ್ತಿಯ ಇನ್ನೊಂದು ಹೆಸರು ಅವ್ಯಭಿಚಾರ ಭಕ್ತಿ. ಇದು ಒಂದೇ ಬುಡವಿರುವ ಮರ ನೇರವಾಗಿ ಮೇಲಕ್ಕೆ ಬೆಳೆದುಹೋಗುವ ಹಾಗೆ. ವ್ಯಭಿಚಾರ ಭಕ್ತಿ ಬುಡದಿಂದಲೇ ನಾಲ್ಕೈದು ಕವಲಿರುವ ಹಾಗೆ. ಗೋಪಿಯರ ನಿಷ್ಠೆ ಅಂಥದು, ಅವರು ಹಳದಿ ಹೂವಿನ ಮಾಲೆ ಹಾಕಿಕೊಂಡಿದ್ದ, ಪೀತಾಂಬರ ಧಾರಿಯಾಗಿದ್ದ, ನವಿಲು ಗರಿಯ ಕಿರೀಟ ಇಟ್ಟುಕೊಂಡಿದ್ದ ಗೋವಳ ಕೃಷ್ಣನನ್ನು ಹೊರತು ಬೇರೆ ಯಾರನ್ನೂ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಮಥುರೆಯಲ್ಲಿ ರಾಜವೇಷಭೂಷಣನಾಗಿದ್ದ, ತಲೆಗೆ ರುಮಾಲು ಸುತ್ತಿದ್ದ ಕೃಷ್ಣನನ್ನು ಕಂಡೊಡನೇ ಗೋಪಿಯರು ತಮ್ಮ ಮುಖಕ್ಕೆ ಸೆರಗು ಎಳೆದುಕೊಂಡರು. ಅವರು ತಮ್ಮೊಳಗೇ ಮಾತಾಡಿಕೊಂಡರು: 'ಇವನಾರಪ್ಪ, ಇವನು? ಇವನೊಡನೆ ಮಾತುಕತೆಯಾಡಿ ನಾವು ಶ್ರೀಕೃಷ್ಣನಲ್ಲಿಟ್ಟಿರುವ ಏಕನಿಷ್ಠಾ ಪ್ರೀತಿಯನ್ನು ಕಳೆದುಕೊಳ್ಳೋಣವೇ?'

"ಸತಿ ಪತಿಯ ಮೇಲಿಟ್ಟಿರುವ ಪ್ರೀತಿಯೂ ನಿಷ್ಠಾಭಕ್ತಿಯ ನಿದರ್ಶನ. ಆಕೆ ತನ್ನ ಮೈದುನಂದಿರ ಊಟೋಪಚಾರ ಮೊದಲಾದುವುಗಳ ಕಡೆಗೂ ಗಮನವೀಯುತ್ತಾಳೆ, ಆದರೆ ತನ್ನ ಪತಿಯೊಡನೆ ವಿಶೇಷ ಸಂಬಂಧ ಇಟ್ಟುಕೊಂಡಿರುತ್ತಾಳೆ. ಅದೇ ರೀತಿಯಾಗಿ ಯಾರು ಬೇಕಾದರೂ ತಮ್ಮ ಸ್ವಧರ್ಮದಲ್ಲಿ ನಿಷ್ಠಾವಂತರಾಗಿರಬಹುದು; ಹಾಗೆಂದು ಅನ್ಯ ಧರ್ಮಗಳನ್ನು ದ್ವೇಷಿಸಕೂಡದು. ಅದಕ್ಕೆ ಬದಲು ಅವುಗಳ ಕಡೆಗೆ ಆದರ ತೋರಿಸಬೇಕು.

ಪರಮಹಂಸರು ಗಂಗಾಸ್ನಾನ ಮಾಡಿ ಕಾಳೀ ದೇವಾಲಯಕ್ಕೆ ಮಾಸ್ಟರೊಡನೆ ಬಂದಿದಾರೆ. ಅರ್ಚಕನ ಆಸನದ ಮೇಲೆ ಕುಳಿತು ಭಗವತಿಯ ಪಾದಗಳಿಗೆ ಹೂವು ಅರ್ಪಿಸಿದರು. ಆಗಾಗ ತಮ್ಮ ತಲೆಯ ಮೇಲೂ ಹೂವು ಇಟ್ಟುಕೊಳ್ಳುತ್ತ ಧ್ಯಾನದಲ್ಲಿ ತೊಡಗಿದಾರೆ.

ಬಹಳ ಹೊತ್ತಾದ ಮೇಲೆ ಮೇಲಕ್ಕೆ ಎದ್ದರು. ಈಗ ಭಾವದಿಂದ ತುಂಬಿತುಳುಕಾಡುತ್ತ ಭಗವತಿಯ ನಾಮೋಚ್ಚಾರಣೆ ಮಾಡುತ್ತ ನರ್ತಿಸುತ್ತಿದಾರೆ. ಮತ್ತೆ ಮತ್ತೆ ಹೇಳುತ್ತಿದಾರೆ: "ಹೇ ಭಗವತೀ! ಹೇ ವಿಪನ್ನಾಶಿನೀ! ಹೇ ದುಃಖದುರಿತ ನಿವಾರಿಣೀ!" ದೇಹಧಾರಣೆ ಮಾಡಿದ್ದೇ ಆದರೆ ವಿಪತ್ತು ದುಃಖ ಇವುಗಳಿಂದ ತಪ್ಪಿಸಿಕೊಳ್ಳಲಾಗೋದಿಲ್ಲ. ಬಹುಶಃ ಅವುಗಳಿಂದ ಪಾರಾಗಲು ಭಗವತಿಯನ್ನು "ವಿಪನ್ನಾಶಿನೀ" ಎಂಬ ಮಹಾ ಮಂತ್ರದಿಂದ ಸಂಬೋಧಿಸಿ ಆಕೆಯನ್ನು ವ್ಯಾಕುಲತೆಯಿಂದ ಕರೆಯಬೇಕು ಎಂಬುದಾಗಿ ಸೂಚಿಸುತ್ತಿದಾರೇನು?

ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಕುಳಿತಿದಾರೆ. ಕಳೆದ ಇಪ್ಪತ್ತುಮೂರು ಇಪ್ಪತ್ತುನಾಲ್ಕು ವರ್ಷಗಳಿಂದಲೂ ಪರಮಹಂಸರಿಗೆ ನಕುರ ಗೊತ್ತಿದಾನೆ. ಆತ ಗೌರಾಂಗನ ಭಕ್ತ. ಆತನಿಗೊಂದು ಚಿಕ್ಕ ಅಂಗಡಿ ಇದೆ. ಪರಮಹಂಸರು ತಾವು ಮೊದಮೊದಲು ಕಲ್ಕತ್ತಕ್ಕೆ ಬಂದಾಗ ಆತನ ಅಂಗಡಿಗೆ ಆಗಾಗ ಹೋಗುತ್ತಿದ್ದರು.

ಇನ್ನೂ ಭಾವಾವಿಷ್ಟರಾಗೇ ಪರಮಹಂಸರು ಹಾಡುತ್ತಿದಾರೆ:

ಸದಾನಂದಮಯಿ ಕಾಳೀ
ಪರಶಿವ ಮನಮೋಹಿನೀ! . . . (ಉ. ೧೩೧)

ಮತ್ತೆ ಹಾಡುತ್ತಿದಾರೆ:

ನೀನೆ ತಾರಕ ಶಕ್ತಿ ಓ ನನ್ನ ಜಗದಂಬ
ತ್ರಿಗುಣಾಧಾರ ಪರಾತ್ಪರಾ . . . . (ಉ. ೫೪೧)

ಪರಮಹಂಸರು ಭಗವತಿಯ ಸಂಬಂಧವಾಗಿ ಇನ್ನೂ ಕೆಲವು ಹಾಡುಗಳನ್ನು ಹಾಡಿದರು. ಈಗ ಭಕ್ತರಿಗೆ ಹೇಳುತ್ತಿದಾರೆ: "ಸಂಸಾರಿಗಳೆದುರಿಗೆ ಕೇವಲ ಈ ಜೀವನದ ದುಃಖದ ವಿಷಯವಾಗೇ ಮಾತಾಡುವುದು ಒಳ್ಳೆಯದಲ್ಲ. ಅವರಿಗೆ ಬೇಕಾಗಿದೆ ಆನಂದ. ಅನ್ನಾಭಾವವಿರತಕ್ಕವರೇನೊ ವಿಧಿಯಿಲ್ಲದೆ ಒಂದೆರಡು ದಿನ ಉಪವಾಸ ಮಾಡಿದರೂ ಮಾಡಬಲ್ಲರು. ಆದರೆ ಯಾರು ಆಹಾರ ಒಂದೆರಡು ನಿಮಿಷ ತಡವಾಗಿಬಿಟ್ಟರೇ ಬಹಳ

ಸಂಕಟಕ್ಕೊಳಗಾಗುತ್ತಾರೊ ಅವರ ಮುಂದೆ ಈ ಜೀವನದ ದುಃಖಕಷ್ಟಗಳ ಸಂಬಂಧವಾಗಿ ಮಾತಾಡುವುದು ಒಳ್ಳೆಯದಲ್ಲ. ವೈಷ್ಣವಚರಣ ಹೇಳುತ್ತಿದ್ದ: 'ಏಕೆ ಯಾವಾಗ ನೋಡಿದರೂ "ಪಾಪ! ಪಾಪ!" ಅಂತಿರೋದು? ಆನಂದಪಡಿ!'"

ಪರಮಹಂಸರು ಊಟವಾದನಂತರ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಹಾಗೇ ಮನೋಹರಗೋಸ್ವಾಮಿ ಕೊಠಡಿಯನ್ನು ಪ್ರವೇಶಿಸಿದ. ಆತ ಒಬ್ಬ ಕೀರ್ತನಕಾರ. ಆತ ಗೌರಾಂಗನ ಸಂಬಂಧವಾಗಿಯೂ ಮತ್ತು ಶ್ರೀಕೃಷ್ಣನ ಬೃಂದಾವನ ಲೀಲೆಯ ಸಂಬಂಧವಾಗಿಯೂ ಹಾಡಿದ. ಕೀರ್ತನೆ ಕೇಳುತ್ತ ಕೇಳುತ್ತ ಪರಮಹಂಸರು ಭಾವಾವಿಷ್ಟರಾಗಿಬಿಟ್ಟರು. ಅವರು ತಮ್ಮ ಷರಟನ್ನು ಹರಿದುಹಾಕಿಬಿಟ್ಟು ರಾಧೆಯ ಭಾವ ಆರೋಪಿಸಿಕೊಂಡು ಹೇಳುತ್ತಿದಾರೆ: "ಹೇ ಕೃಷ್ಣ, ಪ್ರಾಣನಾಥ! ಹೃದಯವಲ್ಲಭ! ಗೆಳತಿಯರಾ, ಕೃಷ್ಣನ್ನ ಕರೆದುಕೊಂಡುಬಂದು ನನ್ನ ಕೈಗೆ ಕೊಡಿ. ಆಗ ನೀವು ನನ್ನ ನಿಜವಾದ ಗೆಳತಿಯರಾಗುತ್ತೀರಿ. ಇಲ್ಲದಿದ್ದರೆ ನನ್ನನ್ನೇ ಅವನಲ್ಲಿಗೆ ಕರೆದುಕೊಂಡು ಹೋಗಿಬಿಡಿ. ಬಳಿಕ ನಾನು ನಿಮ್ಮ ಚಿರದಾಸಿಯಾಗಿಬಿಡುತ್ತೇನೆ."

ಪರಮಹಂಸರ ಮಹಾಭಾವಾವಸ್ಥೆಯನ್ನು ನೋಡಿ ಗೋಸ್ವಾಮಿ ಆಶ್ಚರ್ಯಚಕಿತನಾಗಿಬಿಟ್ಟಿದಾನೆ. ಆತ ಕೈ ಮುಗಿದುಕೊಂಡು ಹೇಳುತ್ತಿದಾನೆ: "ದಯವಿಟ್ಟು ನನ್ನ ವಿಷಯಬುದ್ಧಿಯನ್ನು ನಿರ್ಮೂಲ ಮಾಡಿಬಿಡಿ."

ಶ್ರೀರಾಮಕೃಷ್ಣರು: "ನೀನು ಮೊದಲು ಛತ್ರದಲ್ಲಿ ಸಾಮಾನು ಇಟ್ಟು ಬಳಿಕ ಪಟ್ಟಣ ನೋಡುತ್ತಿರೋ ಸಾಧುವಿನ ಹಾಗಿದೀಯೆ. ನೀನು ಒಳ್ಳೆ ದೊಡ್ಡ ರಸಿಕ. ನಿನ್ನಲ್ಲಿ ಬಹಳ ಒಳ್ಳೆ ಭಾವನೆಗಳಿವೆ."

ಗೋಸ್ವಾಮಿ: "ನಾನು ಕೇವಲ ಸಕ್ಕರೆ ಮೂಟೆ ಹೊತ್ತುಹೋಗುತ್ತಿರುವ ಎತ್ತಿನ ಹಾಗೆ. ಸಕ್ಕರೆ ರುಚಿ ನೋಡುವ ಸೌಭಾಗ್ಯ ಎಲ್ಲಿ ದೊರೆತಿದೆ ನನಗೆ?"

ಮತ್ತೆ ಕೀರ್ತನೆ ಮುಂದುವರಿಯುತ್ತಿದೆ. ಎಲ್ಲರೂ ಆನಂದದಿಂದ ತುಂಬಿತುಳುಕಾಡುತ್ತಿದಾರೆ.

**೨ನೆ ಜೂನ್ ೧೮೮೪, ಜ್ಯೇಷ್ಠ ಕೃಷ್ಣ ದ್ವಾದಶಿ, ಶನಿವಾರ.**

ಪರಮಹಂಸರು ದಕ್ಷಿಣೇಶ್ವರದಿಂದ ಹೊರಟು ಕಲ್ಕತ್ತಕ್ಕೆ ಗಾಡಿಯಲ್ಲಿ

ಬರುತ್ತಿದಾರೆ. ಅವರ ಜೊತೆಯಲ್ಲಿ ರಾಖಾಲ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ಇದಾರೆ. ಅವರು ಮೊದಲು ಬಲರಾಮನ ಮನೆಗೆ ಹೋಗಿ ಅನಂತರ ಅಧರಸೇನನ ಮನೆಗೆ ಹೋಗುತ್ತಾರೆ. ಬಳಿಕ ರಾಮನ ಮನೆಗೆ ಹೋಗುತ್ತಾರೆ. ಅಧರಸೇನನ ಮನೆಯಲ್ಲಿ ಕೀರ್ತನೆ ನಡೆಯುತ್ತದೆ. ರಾಮನ ಮನೆಯಲ್ಲಿ ಹರಿಕಥೆ ನಡೆಯುತ್ತದೆ.

ಗಾಡಿ ಮುಂದುವರಿಯುತ್ತಿದ್ದ ಹಾಗೆ ಪರಮಹಂಸರು ಭಕ್ತರಿಗೆ ಹೇಳುತ್ತಿದಾರೆ: "ನೋಡಿ, ಭಗವಂತನಲ್ಲಿ ಪ್ರೀತಿಯುಂಟಾದ್ರೇ ಆದರೆ, ಹುಲ್ಲುಗಾವಲಿನ ಬಾವಿ ಸೂರ್ಯನ ತಾಪದಿಂದ ಒಣಗಿಹೋಗೋ ಹಾಗೆ ಪಾಪ-ಗೀಪವೆಲ್ಲಾ ಸುಮ್ಮನೇ ಬತ್ತಿಹೋಗಿಬಿಡುತ್ತವೆ. ವಿಷಯಸುಖಗಳ ಮೇಲೆ, ಅಂದರೆ ಕಾಮಕಾಂಚನಗಳ ಮೇಲೆ ಪ್ರೀತಿ ಇತ್ತು ಎಂದರೆ ಅವು ಹಾಗಾಗೋದಿಲ್ಲ. ಹೃದಯದಲ್ಲಿ ವಿಷಯಾಸಕ್ತಿ ಇದ್ದುದೇ ಆದರೆ ಕೇವಲ ಸನ್ಯಾಸದಿಂದ ಯಾವ ಉಪಕಾರವೂ ಆಗದು. ಇದು ಉಗುಳನ್ನು ಉಗುಳಿ ಮತ್ತೆ ಅದನ್ನೇ ನುಂಗಿದ ಹಾಗಾಗುತ್ತದೆ."

ಕೆಲವು ನಿಮಿಷಗಳು ಸುಮ್ಮನೆ ಕುಳಿತಿದ್ದು ಮತ್ತೆ ಹೇಳುತ್ತಿದಾರೆ: "ಬ್ರಾಹ್ಮಸಮಾಜದವರು ಸಾಕಾರವನ್ನೊಪ್ಪುತ್ತಿಲ್ಲ. (ನಗುತ್ತ) ನರೇಂದ್ರ ಹೇಳುತ್ತಾನೆ: 'ಸಾಕಾರ ಭಗವಂತ ಕೇವಲ ಪುತ್ತಳಿಕೆ' ಎಂದು. ಆತ ಮತ್ತೆ ಹೇಳುತ್ತಾನೆ: 'ಏನು? ಅವರು (ಪರಮಹಂಸರು) ಇನ್ನೂ ಕಾಳೀದೇವಾಲಯಕ್ಕೆ ಹೋಗುತ್ತಿದಾರೆಯೆ!'"

ಪರಮಹಂಸರ ಗಾಡಿ ಬಲರಾಮನ ಮನೆಯನ್ನು ಮುಟ್ಟಿತು. ಬಲರಾಮ ಅವರನ್ನು ಎದುರುಗೊಂಡು ಒಳಕ್ಕೆ ಕರೆದುಕೊಂಡುಹೋದ. ಸುಮಾರು ಅಪರಾಹ್ನ ನಾಲ್ಕು ಘಂಟೆ ಸಮಯಕ್ಕೆ ನಂದನವನದ ಯಜ್ಞ-ನಾಥ ಪರಮಹಂಸರನ್ನು ತನ್ನ ಮನೆಗೆ ಆಹ್ವಾನಿಸಲು ಬಂದಿದಾನೆ. ಪರಮಹಂಸರು ಆತನಿಗೆ ತಿಳಿಸಿದರು, ತಮ್ಮ ದೇಹಸೌಖ್ಯ ಸರಿಯಾಗಿದ್ದರೆ ಬರುವುದಾಗಿ. ಯಜ್ಞನಾಥ ಹೊರಟುಹೋದನಂತರ ಪರಮಹಂಸರು ಇದ್ದಕ್ಕಿದ್ದಹಾಗೆ ಭಾವಾವಿಷ್ಟರಾಗಿಬಿಟ್ಟರು. ಅವರು ಭಗವತಿಗೆ ಹೇಳುತ್ತಿದಾರೆ: "ತಾಯಿ, ನಿಲ್ಲಿಸು! ಏನಿದೆಲ್ಲಾ ನೀನು ನನಗೆ ತೋರಿಸುತ್ತಾ ಇರೋದು? ಇವೆಲ್ಲಾ ಏಕೆ? ರಾಖಾಲ-ಗೀಖಾಲರ ಮೂಲಕ ತೋರಿಸುತ್ತಾ ಇದೀಯಲ್ಲ ಇವೆಲ್ಲಾ ಏನು? ರೂಪ-ಗೀಪವೆಲ್ಲಾ ಅದೃಶ್ಯವಾಗುತ್ತಿವೆ. ಆದರೆ, ತಾಯಿ, ಯಾರನ್ನ ಮನುಷ್ಯ ಅಂತ ಕರೆಯುತ್ತೇವೆಯೊ ಆತ

ಕೇವಲ ದಿಂಬಿನ ಚೀಲ; ಆತ ದಿಂಬಿನ ಚೀಲವಲ್ಲದೆ ಬೇರೆ ಏನೂ ಅಲ್ಲ. ಆತನಲ್ಲಿರುವ ಚೈತನ್ಯ ನಿನ್ನದೇ.

"ತಾಯೆ, ನವೀನ ಬ್ರಹ್ಮಜ್ಞಾನಿಗಳಿಗೆ (ಬ್ರಾಹ್ಮಸಮಾಜದವರಿಗೆ) ನಿನ್ನ ಆನಂದರಸ ದೊರೆತಿಲ್ಲ. ಅವರ ಕಣ್ಣಿನಲ್ಲಿ ಹರ್ಷವಿಲ್ಲ— ಹಾಗೇ ಮುಖದಲ್ಲೂ. ಪ್ರೇಮಭಕ್ತಿ ಉಂಟಾಗದವರೆಗೆ ಏನೂ ದೊರೆಯುವ ಹಾಗಿಲ್ಲ.

"ಹೇ ತಾಯೆ, ನಿನ್ನನ್ನು ನಾನು ಪ್ರಾರ್ಥನೆ ಮಾಡಿಕೊಂಡಿದ್ದೆ ನನ್ನಂಥ ಒಬ್ಬ ಜೊತೆಗಾರನನ್ನು ನನಗೆ ಕೊಡೋ ಹಾಗೆ. ಅದಕ್ಕಾಗೇ ನೀನು ರಾಖಾಲನನ್ನು ಕೊಟ್ಟಿರೋದು ಅಂತ ಕಾಣುತ್ತೆ!"

ಪರಮಹಂಸರು ಅಧರನ ಮನೆಗೆ ಬಂದಿದಾರೆ. ಕೀರ್ತನೆಗೆ ಸಿದ್ಧತೆ ನಡೆಯುತ್ತಿದೆ. ಅಧರಸೇನನ ನೆರೆಹೊರೆಯವರು ಮತ್ತು ಇನ್ನೂ ಅನೇಕ ಭಕ್ತರು ಪರಮಹಂಸರ ದರ್ಶನ ಪಡೆಯಲು ಬಂದಿದಾರೆ. ಅವರ ಅಮೃತ ವಾಣಿ ಕೇಳಲು ಎಲ್ಲರೂ ಕಾತರರಾಗಿ ಕುಳಿತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಸಂಸಾರ ಮುಕ್ತಿ ಎರಡೂ ಭಗವಂತನಿಚ್ಛೆಗನುಸಾರ. ಆತನೇ ಅಜ್ಞಾನದ ಹೊದ್ದಿಕೆ ಹೊದಿಸಿ ಮನುಷ್ಯನನ್ನು ಸಂಸಾರದಲ್ಲಿ ಇಟ್ಟಿದಾನೆ; ಬಳಿಕ ಆತನೇ ಇಚ್ಛೆಪಟ್ಟು ಆತನನ್ನು ತನ್ನ ಹತ್ತಿರಕ್ಕೆ ಕರಸಿಕೊಂಡಾಗ ಆತನಿಗೆ ಮುಕ್ತಿ ದೊರೆಯುತ್ತದೆ. ಇದು ಮಗು ಹೊರಗೆಲ್ಲೋ ಆಟಕ್ಕೆ ಹೋಗಿರುವಾಗ ಊಟದ ಸಮಯಕ್ಕೆ ತಾಯಿ ಅದನ್ನು ಕರೆಯೋ ಹಾಗೆ. ಮುಕ್ತಿಯ ಸಮಯ ಬಂತು ಎಂದರೆ, ಆಗ ಆತ ಮನುಷ್ಯನಿಗೆ ಸಾಧುಸಂಗ ದೊರಕಿಸಿಕೊಡುತ್ತಾನೆ. ಜೊತೆಗೆ ತನ್ನನ್ನು ಪಡೆದುಕೊಳ್ಳಲು ಬೇಕಾಗೋ ವ್ಯಾಕುಲತೆಯನ್ನೂ ಉಂಟುಮಾಡಿಕೊಡುತ್ತಾನೆ."

ನೆರೆಯವ: "ಮಹಾಶಯರೆ, ಯಾವ ವಿಧದ ವ್ಯಾಕುಲತೆ?"

ಶ್ರೀರಾಮಕೃಷ್ಣರು: "ಕೆಲಸ ಕಳೆದುಕೊಂಡ ಗುಮಾಸ್ತನ ವ್ಯಾಕುಲತೆಯ ಹಾಗೆ. ಆತ ದಿನವೂ ಆಫೀಸುಗಳಿಗೆಲ್ಲ ಅಲೆಯುತ್ತಲೇ ಇರುತ್ತಾನೆ—ಕೆಲಸ ಖಾಲಿ ಇದೆಯೆ ಎಂದು ವಿಚಾರಿಸುತ್ತ. ವ್ಯಾಕುಲತೆ ಉಂಟಾಯಿತು ಎಂದರೆ, ಮನುಷ್ಯ ಭಗವಂತನಿಗಾಗಿ ಸುಮ್ಮನೆ ಹಾತೊರೆಯುತ್ತಿರುತ್ತಾನೆ. ಎಲಡಿಕೆ ಅಗಿಯುತ್ತ, ಮೀಸೆ ಹುರಿಮಾಡುತ್ತ, ಯಾವ ಯೋಚನೆಯೂ ಇಲ್ಲದೆ ಕಾಲು ಮೇಲೆ ಕಾಲು ಹಾಕಿಕೊಂಡು

ಸುಖವಾಗಿ ಆರಾಮ-ಕುರ್ಚಿಯ ಮೇಲೆ ಕುಳಿತಿರೋ ಮೋಜುಗಾರನಿಗೆ ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲ.''

ನೆರೆಯವ: ''ಸಾಧುಸಂಗ ಮಾಡಿದರೆ ಈ ವ್ಯಾಕುಲತೆ ಉಂಟಾಗಿ ಬಿಡುತ್ತದೆಯೇ?''

ಶ್ರೀರಾಮಕೃಷ್ಣರು: ''ಹೌದು, ಸಾಧ್ಯ. ಆದರೆ ಪಾಷಂಡಿಗಳಿಗೆ ಉಂಟಾಗೋದಿಲ್ಲ. ಸಾಧುವಿನ ಕಮಂಡಲು ನಾಲ್ಕು ಧಾಮಗಳಿಗೂ ಆತನೊಡನೆ ಹೋಗಿಬರಬಹುದು, ಆದರೂ ಅದು ಹಿಂದೆ ಹೇಗೆ ಕಹಿಯಾಗಿತ್ತೊ ಹಾಗೇ ಕಹಿಯಾಗಿರುತ್ತದೆ.''

ಈಗ ಕೀರ್ತನೆ ಆರಂಭವಾಯಿತು. ಕೀರ್ತನಕಾರ ಶ್ರೀಕೃಷ್ಣನ ಬೃಂದಾವನ ಲೀಲೆಯ ಸಂಬಂಧವಾಗಿ ಹಾಡುತ್ತಿದಾನೆ:

ರಾಧೆ: ''ಸಖಿ, ನನ್ನ ಪ್ರಾಣ ಹೋಗುವುದರಲ್ಲಿದೆ. ನನ್ನ ಕೃಷ್ಣನನ್ನ ಕರೆದುಕೊಂಡುಬಂದುಕೊಡು.''

ಸಖಿ: ''ರಾಧೆ, ಶ್ರೀಕೃಷ್ಣ ಮೇಘ ಇನ್ನೇನು ಮಳೆಸುರಿಸುವುದರಲ್ಲಿತ್ತು. ಅದನ್ನು ನೀನೇ ನಿನ್ನ ಮುನಿಸೆಂಬ ಬಿರುಗಾಳಿಯಿಂದ ಚೆದರಿಸಿಬಿಟ್ಟೆ. ನೀನು ಕೃಷ್ಣನಿಗೆ ಸುಖ ಬಯಸುತ್ತಿಲ್ಲ ಅಂತ ಕಾಣುತ್ತೆ; ಹಾಗಿದ್ದರೆ ನೀನು ಏಕೆ ಮುನಿಸಿಕೊಳ್ಳುತ್ತಿದ್ದೆ?''

ರಾಧೆ: ''ಸಖಿ, ಈ ಹೆಮ್ಮೆ ನನ್ನದಲ್ಲ. ಯಾರು ನನ್ನನ್ನು ಹೆಮ್ಮೆಪಡುವಂತೆ ಮಾಡಿದನೊ ಆತನೊಡನೇ ನನ್ನ ಹೆಮ್ಮೆ ಹೊರಟುಹೋಗಿದೆ.''

ಕೀರ್ತನೆ ಮುಗಿದನಂತರ ಪರಮಹಂಸರು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: ''ಗೋಪಿಯರು ಶ್ರೀಕೃಷ್ಣನೊಡನೆ ಐಕ್ಯವಾಗಲು ಕಾತ್ಯಾಯಿನಿಯ ಪೂಜೆ ಮಾಡಿದರು. ಎಲ್ಲರೂ ಮಹಾಮಾಯೆ ಆದ್ಯಾಶಕ್ತಿಗೆ ಅಧೀನರು. ಅವತಾರಾದಿಗಳು ಕೂಡ ಮಾಯೆಯನ್ನು ಆಶ್ರಯಿಸಿ ತಮ್ಮ ಲೀಲೆಯನ್ನು ನಡಸುತ್ತಾರೆ. ಅದಕ್ಕಾಗೇ ಅವರು ಆದ್ಯಾಶಕ್ತಿಯನ್ನು ಪೂಜಿಸುವುದು. ನೋಡಿಲ್ಲವೆ, ರಾಮ ಸೀತೆಗಾಗಿ ಎಷ್ಟೊಂದು ಅತ್ತ? 'ಪಂಚಭೂತಗಳ ಕೈಗೆ ಸಿಕ್ಕಿ ಬ್ರಹ್ಮನೂ ಅಳುತ್ತಾನೆ.'

''ವಿಷ್ಣು ಹಿರಣ್ಯಾಕ್ಷನನ್ನು ಕೊಲ್ಲಲು ವರಾಹ ಅವತಾರವನ್ನು ತಾಳಿದ. ಆತನನ್ನು ಕೊಂದನಂತರ ವರಾಹ ತನ್ನ ಮಕ್ಕಳು ಮರಿ

ಗಳೊಡನೆ ಸುಖವಾಗಿ ಇದ್ದುಬಿಟ್ಟಿತು. ಅದು ತನ್ನ ನಿಜಸ್ವರೂಪ ಏನು ಎಂಬುದನ್ನು ಸಂಪೂರ್ಣವಾಗಿ ಮರೆತು ತನ್ನ ಮರಿಗಳಿಗೆ ಎದೆಕೊಡುತ್ತ ಆನಂದದ ಜೀವನ ನಡಸಿಕೊಂಡು ಹೋಗಲಾರಂಭಿಸಿತು. ದೇವತೆಗಳು ವಿಷ್ಣುವನ್ನು ತನ್ನ ಈ ಅಸಹ್ಯಕರವಾದ ಮೃಗದ ಜೀವನ ಬಿಟ್ಟು ದೇವ-ಲೋಕಕ್ಕೆ ಹಿಂದಿರುಗಿಬರಬೇಕೆಂದು ಎಷ್ಟು ಒತ್ತಾಯಪಡಿಸಿದರೂ ಆತ ಕಿವಿಗೊಡದೇಹೋದ. ದೇವತೆಗಳೆಲ್ಲಾ ಸಭೆ ಸೇರಿ ಒಂದು ನಿರ್ಧಾರಕ್ಕೆ ಬಂದು ಶಿವನನ್ನು ವರಾಹದ ಹತ್ತಿರಕ್ಕೆ ಕಳುಹಿಸಿದರು. ಶಿವ ಹಂದಿಯನ್ನು ಕೇಳಿದ: 'ನೀನು ನಿನ್ನ ನಿಜಸ್ವರೂಪವನ್ನು ಏಕೆ ಮರೆತುಬಿಟ್ಟಿದೀಯೆ?' ವಿಷ್ಣು ಆ ಹಂದಿಯ ರೂಪದಿಂದ ಉತ್ತರವಿತ್ತ: 'ಏಕೆ, ನಾನು ಇಲ್ಲೇ ಬಹಳ ಆನಂದದಿಂದಿದೇನಲ್ಲ.' ಆಗ ಶಿವ ತನ್ನ ತ್ರಿಶೂಲದಿಂದ ಆ ಹಂದಿಯ ಶರೀರವನ್ನು ಚೂರುಚೂರು ಮಾಡಿದ. ಅನಂತರವೇ ವಿಷ್ಣು ತನ್ನ ಸ್ವಧಾಮಕ್ಕೆ ಹಿಂದಿರುಗಿದ.''

ಪರಮಹಂಸರು ಅಧರಸೇನನ ಮನೆಯಿಂದ ಹೊರಟು ಈಗ ರಾಮಚಂದ್ರದತ್ತನ ಮನೆಗೆ ಬಂದಿದಾರೆ. ಈತ ಪರಮಹಂಸರ ಪ್ರಮುಖ ಗೃಹಸ್ಥ ಶಿಷ್ಯರಲ್ಲಿ ಒಬ್ಬ. ಕಲ್ಕತ್ತದಲ್ಲಿ ಇದೆ ಈತನಿಗೆ ಮನೆ. ಪರಮಹಂಸರು ಅವತಾರಪುರುಷರು ಎಂದು ಘೋಷಿಸಿದವರಲ್ಲಿ ಈತನೇ ಮೊದಲನೆಯವನು. ಪರಮಹಂಸರು ಅನೇಕ ಸಲ ಈತನ ಮನೆಗೆ ಬಂದಿದಾರೆ. ಈತನ ಶ್ರದ್ಧಾಭಕ್ತಿಯನ್ನು ಅನೇಕ ಸಲ ಹೊಗಳಿದಾರೆ. ಈತ ಅಂಥಾ ದಯಾಳು, ಪರಮಹಂಸರ ಕೆಲವು ಮಂದಿ ಶಿಷ್ಯರಿಗೆ ಈತನ ಮನೆಯೇ ತಮ್ಮ ಮನೆಯಾಗಿಬಿಟ್ಟಿತ್ತು.

ರಾಮ ಇಂದು ಒಂದು ವಿಶೇಷ ಉತ್ಸವವನ್ನು ಏರ್ಪಡಿಸಿದಾನೆ. ಚಿಕ್ಕ ಹೊರ ಅಂಗಳವನ್ನು ಬಹಳ ಚೆನ್ನಾಗಿ ಅಲಂಕರಿಸಿದಾನೆ. ಒಬ್ಬ ಭಾಗವತ ಪಂಡಿತ ಒಂದು ಎತ್ತರವಾದ ಪೀಠದ ಮೇಲೆ ಕುಳಿತು ಭಾಗವತ ಪ್ರವಚನ ಮಾಡುತ್ತಿದಾನೆ. ಪರಮಹಂಸರು ತನ್ನ ಮನೆಗೆ ಬಂದೊಡನೆ ರಾಮ ಅವರನ್ನು ಶ್ರದ್ಧಾಭಕ್ತಿಗಳಿಂದ ಎದುರುಗೊಂಡ. ಬಳಿಕ ಅವರನ್ನು ಕರೆದುಕೊಂಡುಹೋಗಿ ಭಾಗವತ ಪಂಡಿತನ ಹತ್ತಿರ ಕೂರಿಸಿದ. ರಾಮನಿಗೆ ಬಹಳ ಸಂತೋಷವಾಗಿಬಿಟ್ಟಿದೆ. ಭಾಗವತ ಪಂಡಿತ ಹರಿಶ್ಚಂದ್ರನ ಕಥೆಯನ್ನು ಪಠಿಸುತ್ತಿದಾನೆ:

ವಿಶ್ವಾಮಿತ್ರ ಹರಿಶ್ಚಂದ್ರನಿಗೆ ಹೇಳಿದ: "ಮಹಾರಾಜ, ನೀನು ಇಡೀ ಪೃಥಿವಿಯನ್ನು ನನಗೆ ದಾನಮಾಡಿಬಿಟ್ಟಿದೀಯೆ! ಆದ್ದರಿಂದ ನಿನಗೆ ಇಲ್ಲಿ ಎಲ್ಲೂ ಸ್ಥಾನವಿಲ್ಲ. ಆದರೆ ಕಾಶಿ ಮಹಾದೇವನಿಗೆ ಸೇರಿದ ಸ್ಥಳವಾದ್ದರಿಂದ ಬೇಕಾದರೆ ನೀನು ಅಲ್ಲಿಗೆ ಹೋಗಿ ಇರಬಹುದು. ಬಾ ನನ್ನೊಡನೆ; ನಿನ್ನನ್ನು, ನಿನ್ನ ಸಹಧರ್ಮಿಣಿ ಶೈಬ್ಯೆಯನ್ನು, ನಿನ್ನ ಪುತ್ರ ರೋಹಿತಾಶ್ವನನ್ನು ಅಲ್ಲಿಗೆ ಕರೆದುಕೊಂಡುಹೋಗಿ ಬಿಡುತ್ತೇನೆ. ಅಲ್ಲಿ ನೀನು ನನಗೆ ಕೊಡಬೇಕಾಗಿರುವ ದಕ್ಷಿಣೆಯನ್ನು ಸಂಪಾದಿಸಿ ಕೊಡುವೆಯಂತೆ." ಬಳಿಕ ರಾಜಕುಟುಂಬದವರು ವಿಶ್ವಾಮಿತ್ರರೊಡನೆ ಮುಂದು ವರಿದು ಕಾಶಿಯನ್ನು ತಲುಪಿ ವಿಶ್ವನಾಥನ ದರ್ಶನ ಪಡೆದರು.

ವಿಶ್ವನಾಥ ಎಂಬ ಪದ ಕಿವಿಗೆ ಬಿದ್ದೊಡನೇ ಪರಮಹಂಸರು ಒಮ್ಮೆಗೇ ಭಾವಾವಿಷ್ಟರಾಗಿಬಿಟ್ಟರು. ಅಸ್ಪಷ್ಟ ಸ್ವರದಿಂದ "ಶಿವ! ಶಿವ!" ಎಂದು ಉಚ್ಚರಿಸುತ್ತಿದಾರೆ.

ಭಾಗವತ ಪಂಡಿತ ಕಥೆ ಮುಂದುವರಿಸುತ್ತಿದಾನೆ:

ಹರಿಶ್ಚಂದ್ರನಿಗೆ ದಕ್ಷಿಣೆಯ ಹಣ ಸಂಪಾದಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಆತ ಒಬ್ಬ ಬ್ರಾಹ್ಮಣನಿಗೆ ತನ್ನ ಧರ್ಮಪತ್ನಿಯನ್ನು ಮಾರಬೇಕಾಯಿತು. ಶೈಬ್ಯೆಯ ಜೊತೆಯಲ್ಲೇ ರೋಹಿತಾಶ್ವ ಹೋಗಬೇಕಾಯಿತು. ಆ ಹಣವೂ ಸಾಲದೆಹೋದುದರಿಂದ ಹರಿಶ್ಚಂದ್ರ ತನ್ನನ್ನೂ ಒಬ್ಬ ಚಂಡಾಲನಿಗೆ ಮಾರಿಕೊಂಡ. ಆ ಚಂಡಾಲನಿಗೊಂದು ರುದ್ರಭೂಮಿ ಇತ್ತು. ಆತ ಹರಿಶ್ಚಂದ್ರನನ್ನು ಅದರ ಮೇಲ್ವಿಚಾರಕನನ್ನಾಗಿ ನೇಮಿಸಿದ.

ಒಂದು ದಿನ ರೋಹಿತಾಶ್ವ ತನ್ನ ಯಜಮಾನನಿಗಾಗಿ ಹೂವು ಕೊಯ್ಯುತ್ತಿದ್ದಾಗ ಒಂದು ಕಾಳಸರ್ಪ ಆತನನ್ನು ಕಡಿದುಬಿಟ್ಟಿತು. ಅಂದಿನ ರಾತ್ರಿಯೇ ಆತ ಸತ್ತುಹೋದ. ಈ ಹುಡುಗನ ಶವಸಂಸ್ಕಾರಮಾಡಲು ಆ ಮನೆಯ ಕಠೋರ ಹೃದಯಿಯಾದ ಬ್ರಾಹ್ಮಣ, ಶೈಬ್ಯೆಗೆ ಸ್ವಲ್ಪವೂ ಸಹಾಯ ನೀಡಲೇ ಇಲ್ಲ. ಆತ ಹಾಸಿಗೆಯನ್ನು ಬಿಟ್ಟು ಏಳಲೇ ಇಲ್ಲ. ಅಂದಿನ ರಾತ್ರಿ ಅಮಾವಾಸ್ಯೆಯ ಗಾಢಾಂಧಕಾರದಿಂದ ಕೂಡಿತ್ತು. ಸಾಲದುದಕ್ಕೆ ಬಿರುಗಾಳಿಮಳೆ ಬೇರೆ. ಮಿಂಚು 'ಫಳೀರ್ ಫಳೀರ್' ಅಂತ ಕಾರ್ಮುಗಿಲನ್ನು ಸುಮ್ಮನೆ ಸೀಳುತ್ತಿತ್ತು. ಶೈಬ್ಯೆ ಏಕಾಕಿಯಾಗೇ ತನ್ನ ಸತ್ತ ಮಗನ ಶರೀರವನ್ನು ಹೆಗಲ ಮೇಲೆ ಹಾಕಿಕೊಂಡು ಶ್ಮಶಾನಕ್ಕೆ ಹೊರಟಳು. ಶೈಬ್ಯೆ ಭಯಾಕುಲಳಾಗಿ, ಶೋಕಾಕುಲಳಾಗಿ ರೋದಿಸುತ್ತ ಮುಂದುವರಿಯುತ್ತಿದಾಳೆ. ಆಕೆ ರುದ್ರಭೂಮಿಯನ್ನು ಸಮೀಪಿಸಿದಾಗ ಅಲ್ಲಿ ಒಬ್ಬ ಚಂಡಾಲ ಆಕೆಯಿಂದ ನೆಲದಹಾಗ ಕೇಳುತ್ತಾನೆ. ತನ್ನ ಪತಿಯೇ ಆ

ವೇಷದಲ್ಲಿದಾನೆ ಎಂಬುದು ಆಕೆಗೆ ಗೊತ್ತಾಗಲಿಲ್ಲ. ಆಕೆಯ ಹತ್ತಿರ ಒಂದು ಕಾಸೂ ಇರಲಿಲ್ಲ. ತನ್ನ ದುಃಖಪರಂಪರೆಗಳನ್ನೆಲ್ಲಾ ನೆನಸಿಕೊಂಡು ಸುಮ್ಮನೆ ಗೋಳೋ ಅಂತ ಅಳಲಾರಂಭಿಸಿದಳು. ಅಂದಿನ ಗಾಢಾಂಧಕಾರವನ್ನು ಬೆಳಕು ಮಾಡುತ್ತಿದ್ದುದು ಕೇವಲ ಆ ಸುಡುಗಾಡಿನಲ್ಲಿ ಉರಿಯುತ್ತಿದ್ದ ಹೆಣಗಳ ಜ್ವಾಲೆಯೇ. ಆಕೆಯ ತಲೆ ಮೇಲೆ ಗುಡುಗು ಸುಮ್ಮನೆ ಆರ್ಭಟಿಸುತ್ತಿತ್ತು. ಎದುರುಗಡೆ ಕರಾಳರೂಪಿನ ಆ ಚಂಡಾಲ ನೆಲದಹಾಗ ಕೇಳುತ್ತಿದ್ದ. ಒಮ್ಮೆ ಮಹಾರಾಣಿಯಾಗಿದ್ದ ಶೈಭ್ಯೆ ಸತ್ತ ಮಗನನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ರುದ್ರಭೂಮಿಯಲ್ಲಿ ಕುಳಿತಿದಾಳೆ.

ರಾಜಕುಟುಂಬಕ್ಕೆ ಬಂದೊದಗಿದ ವಿಪತ್ತನ್ನು ನೋಡಿ ಅಲ್ಲಿ ನೆರೆದಿದ ಭಕ್ತರೆಲ್ಲರೂ ಸುಮ್ಮನೆ ಕಣ್ಣೀರು ಸುರಿಸುತ್ತಾ ಗೋಳಾಡಲಾರಂಭಿಸಿದರು. ಆಗ ಪರಮಹಂಸರು ಏನು ಮಾಡುತ್ತಿದ್ದರು? ಅವರು ಏಕಾಗ್ರಚಿತ್ತದಿಂದ ಪ್ರವಚನವನ್ನು ಕೇಳುತ್ತಿದ್ದರು. ಒಮ್ಮೆ ಮಾತ್ರ ಅವರ ಕಣ್ಣಿನಲ್ಲಿ ನೀರು ಬಂತು. ಕೂಡಲೆ ಅದನ್ನು ಒರಸಿಕೊಂಡುಬಿಟ್ಟರು.

ಭಾಗವತ ಪಂಡಿತ ಮುಂದುವರಿಸುತ್ತಿದಾನೆ:

ಶೈಭ್ಯೆ ಹಾಗೆ ರುದ್ರಭೂಮಿಯಲ್ಲಿ ಕುಳಿತು ಗೋಳೋ ಅಂತ ಅಳುತ್ತಿರುವಾಗ ಆಕೆ ತನ್ನ ಪತಿಯ ಹೆಸರನ್ನು ಹೊರಗೆಡಹುತ್ತಾಳೆ. ಆಗ ಹರಿಶ್ಚಂದ್ರ ಮತ್ತು ಶೈಭ್ಯೆ ಇಬ್ಬರೂ ಕೂಡ ರೋಹಿತಾಶ್ವನಿಗಾಗಿ ಅಳುತ್ತಾರೆ. ಇಷ್ಟು ದುರಿತ ಪರಂಪರೆಗಳಿಗೆ ಒಳಗಾದರೂ ಹರಿಶ್ಚಂದ್ರ ತಾನು ಮಾಡಿದ ದಾನಕ್ಕಾಗಿ ಒಮ್ಮೆಯೂ ಕಿಂಚಿತ್ತೂ ವ್ಯಥೆ ಸೂಚಿಸಲಿಲ್ಲ.

ಕೊನೆಗೆ ವಿಶ್ವಾಮಿತ್ರ ಅಲ್ಲಿಗೆ ಬರುವುದು, ರೋಹಿತಾಶ್ವ ಮತ್ತೆ ಬದುಕಿಕೊಳ್ಳುವುದು, ಎಲ್ಲರೂ ವಿಶ್ವೇಶ್ವರನ ದರ್ಶನಮಾಡುವುದು, ಹರಿಶ್ಚಂದ್ರನಿಗೆ ಮತ್ತೆ ರಾಜ್ಯಪ್ರಾಪ್ತಿಯಾಗುವುದು ಇವುಗಳ ಸಂಬಂಧವಾಗಿ ಪಠಿಸಿ ಭಾಗವತಪಂಡಿತ ಹರಿಶ್ಚಂದ್ರೋಪಾಖ್ಯಾನವನ್ನು ಸಮಾಪ್ತಿಮಾಡಿದ.

ಶ್ರೀರಾಮಕೃಷ್ಣರು ಉದ್ಧವ ಸಂವಾದವನ್ನು ಪಠನಮಾಡುವಂತೆ ಭಾಗವತ ಪಂಡಿತನಿಗೆ ಹೇಳಿದರು.

ಭಾಗವತ ಪಂಡಿತ ಪಠಿಸುತ್ತಿದಾನೆ:

ಉದ್ಧವ ಬೃಂದಾವನಕ್ಕೆ ಬಂದಾಗ ಗೋವಳರು ಮತ್ತು ಗೋಪಿಯರು ಅತ್ಯಾತುರತೆಯಿಂದ ಓಡಿಬಂದು ಆತನನ್ನು ಸಂಧಿಸಿ ಕೇಳಿದರು: "ನಮ್ಮ ಕೃಷ್ಣ ಹೇಗಿದಾನೆ? ಏನು ಆತ ನಮ್ಮನ್ನು ಸಂಪೂರ್ಣವಾಗಿ ಮರೆತುಬಿಟ್ಟನೆ? ನಮ್ಮನ್ನು ಎಂದಾದರೂ ಜ್ಞಾಪಿಸಿಕೊಳ್ಳುತ್ತಿರುವನೆ?" ಹೀಗೆಂದು ವಿಚಾರಿಸಿ ಅವರಲ್ಲಿ

ಕೆಲವರು ಸುಮ್ಮನೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದರು. ಇನ್ನು ಕೆಲವರು ಆತನನ್ನು ಬೃಂದಾವನದ ವಿವಿಧ ಸ್ಥಳಗಳಿಗೆ ಕರೆದುಕೊಂಡು ಹೋಗಿ ಹೇಳಲಾರಂಭಿಸಿದರು: "ಈ ಸ್ಥಳದಲ್ಲಿ ಶ್ರೀ ಕೃಷ್ಣ ಗೋವರ್ಧನಧಾರಣೆ ಮಾಡಿದ; ಇಲ್ಲಿ ಧೇನುಕಾಸುರನನ್ನು ವಧಿಸಿದ; ಇಲ್ಲಿ ಶಕಟಾಸುರನನ್ನು ಕೊಂದ; ಈ ಹುಲ್ಲುಗಾವಲಿನಲ್ಲಿ ಗೋವುಗಳನ್ನು ಮೇಯಿಸುತ್ತಿದ್ದ; ಯಮುನೆಯ ಈ ತೀರದಲ್ಲಿ ಗೋಪಿಯರೊಡನೆ ವಿಹರಿಸಿದ; ಇಲ್ಲಿ ಗೋವಳರೊಡನೆ ಆಟವಾಡಿದ; ಈ ಕುಂಜಗಳಲ್ಲೆಲ್ಲಾ ಗೋಪಿಯರೊಡನೆ ರಹಸ್ಯವಾಗಿ ಬೆರೆತ." ಉದ್ಧವ ಅವರಿಗೆ ಹೇಳಿದ: "ನೀವು ಕೃಷ್ಣನಿಗಾಗಿ ಇಷ್ಟೊಂದು ಕಾತರರಾಗಿಬಿಟ್ಟಿದೀರಲ್ಲ ಏಕೆ? ಆತ ಸರ್ವಭೂತಗಳಲ್ಲಿಯೂ ಇದಾನೆ. ಆತ ಸಾಕ್ಷಾತ್ ಭಗವಂತನೇ. ಆತ ಅಂತರ್ಯಾಮಿಯಾಗಿಲ್ಲದ ವಸ್ತುವೇ ಇಲ್ಲ." ಗೋಪಿಯರು ಹೇಳಿದರು: "ನಮಗೆ ಅದೊಂದೂ ಅರ್ಥವಾಗುತ್ತಿಲ್ಲ. ನಮಗೆ ಓದು-ಬರಹ ಏನೂ ಗೊತ್ತಿಲ್ಲ. ನಮಗೆ ಕೇವಲ ಬೃಂದಾವನದ ಕೃಷ್ಣ ಮಾತ್ರ ಗೊತ್ತು. ಇಲ್ಲಿ ಆತ ಅನೇಕ ವಿಧವಾಗಿ ಕ್ರೀಡಿಸಿ ಹೋಗಿದಾನೆ." ಉದ್ಧವ ಹೇಳಿದ: "ಆತ ಸಾಕ್ಷಾತ್ ಭಗವಂತನೇ. ಆತನ ಧ್ಯಾನಮಾಡಿದರೆ ಮತ್ತೆ ಜನ್ಮವೆತ್ತಬೇಕಾಗಿರೋದಿಲ್ಲ; ಮುಕ್ತಿ ದೊರೆತುಬಿಡುತ್ತದೆ." ಗೋಪಿಯರು ಹೇಳಿದರು: "ನಮಗೆ ಮುಕ್ತಿ-ಗಿಕ್ತಿ ಎಂಬ ವಿಷಯ ತಲೆಗೇ ಹತ್ತುವುದಿಲ್ಲ. ನಮಗೆ ನಮ್ಮ ಪ್ರಾಣಪ್ರಿಯನಾದ ಶ್ರೀಕೃಷ್ಣ ಮಾತ್ರ ಬೇಕು."

ಶ್ರೀರಾಮಕೃಷ್ಣರು ಈ ಸಂವಾದವನ್ನು ಏಕಾಗ್ರಚಿತ್ತದಿಂದ ಕೇಳಿದರು. ಬಳಿಕ ಹೇಳಿದರು: "ಹೌದು, ಗೋಪಿಯರು ಹೇಳಿದ್ದು ಸರಿ."

ಈಗ ಪರಮಹಂಸರು ತಮ್ಮ ಮಧುರವಾದ ಕಂಠದಿಂದ ಹಾಡುತ್ತಿದಾರೆ:

ಮುಕ್ತಿಪದವನು ನೀಡಲೆನಗೆ ಮನವಿದ್ದರೂ
ಶುದ್ಧಭಕ್ತಿಯ ಕೊಡಲು ಹಿಂಜರಿವೆನು.
ಪರಿಶುದ್ಧ ಪ್ರೇಮವನು ಪಡೆದ ಆ ಜಗವಂದ್ಯ
ಮೂರು ಲೋಕವ ಮೆಟ್ಟಿ ನಿಲ್ಲುವವನು.
ಕೇಳು ಚಂದ್ರಾವಳೀ, ದಿಟದೊಲವ ಬಣ್ಣಿಸುವೆ:
ಮುಕ್ತಿಗಿಂತಲು ಭಕ್ತಿ ಅಪರೂಪವು!
ಆ ಭಕ್ತಿಗೊಲಿದು ನಾ ಪಾತಾಳ ಲೋಕದಲಿ
ಬಲಿಯ ಬಾಗಿಲ ಕಾಯಲೊಪ್ಪಿರುವೆನು!

ಅಲ್ಲಿ ಬೃಂದಾವನದಿ ಅಂಥ ದಿಟದೊಲವಿಹುದು
ಗೋಪ-ಗೋಪಿಯರೆದೆಯು ಗುಟ್ಟಿನಲ್ಲಿ!
ಆ ಭಕ್ತಿಗಾಗಿಯೇ ನಂದಗೃಹದಲಿ ಬಳೆದು
ಆ ಭಾರವನು ಹೊತ್ತೆ ನಾ ತಲೆಯಲಿ!

ಶ್ರೀರಾಮಕೃಷ್ಣರು ಭಾಗವತ ಪಂಡಿತನಿಗೆ ಹೇಳಿದರು: "ಗೋಪಿಯರದು ಪ್ರೇಮ-ಭಕ್ತಿ, ಅವ್ಯಭಿಚಾರ-ಭಕ್ತಿ, ನಿಷ್ಠಾ-ಭಕ್ತಿ. ವ್ಯಭಿಚಾರ-ಭಕ್ತಿ ಎಂಬುದು ಯಾವುದು ಗೊತ್ತೆ? ಜ್ಞಾನಮಿಶ್ರ ಭಕ್ತಿ. ಉದಾಹರಣೆಗೆ: 'ಕೃಷ್ಣನೇ ಎಲ್ಲವೂ ಆಗಿದಾನೆ. ಆತನೇ ಪರಬ್ರಹ್ಮ. ಆತನೇ ರಾಮ, ಆತನೇ ಶಿವ, ಆತನೇ ಶಕ್ತಿ' ಎಂಬ ಭಾವನೆ. ಇದಿಷ್ಟು ಭಾಗ ಜ್ಞಾನ ಪ್ರೇಮ-ಭಕ್ತಿಯಲ್ಲಿ ಮಿಶ್ರಿತವಾಗಿಲ್ಲ. ಒಮ್ಮೆ ಹನುಮಂತ ದ್ವಾರಕೆಗೆ ಬಂದು ಕೇಳಿದ: 'ಸೀತಾರಾಮರನ್ನು ನೋಡಬೇಕು' ಎಂದು. ಶ್ರೀಕೃಷ್ಣ ರುಕ್ಮಿಣಿಗೆ ಹೇಳಿದ: 'ನೀನು ಸೀತೆ ರೂಪವನ್ನು ಧರಿಸಿಕೊ; ಇಲ್ಲದಿದ್ದರೆ ಹನುಮಂತ ನಮ್ಮನ್ನು ಸುಮ್ಮನೆ ಬಿಡುವುದಿಲ್ಲ.'

"ಒಮ್ಮೆ ಪಾಂಡವರು ರಾಜಸೂಯ ಯಾಗವನ್ನು ಮಾಡಿದರು. ಆಗ ರಾಜರೆಲ್ಲರೂ ಕೂಡಿ ಯುಧಿಷ್ಠಿರನನ್ನು ಸಿಂಹಾಸನದ ಮೇಲೆ ಕೂರಿಸಿ ಆತನಿಗೆ ಪ್ರಣಾಮಮಾಡಿದರು. ವಿಭೀಷಣ ಹೇಳಿದ: 'ನಾನು ಶ್ರೀಮನ್ನಾರಾಯಣನೊಬ್ಬನಿಗೆ ವಿನಾ ಬೇರೆ ಯಾರಿಗೂ ಪ್ರಣಾಮಮಾಡೋದಿಲ್ಲ' ಎಂದು. ಆಗ ಶ್ರೀಕೃಷ್ಣನೇ ಯುಧಿಷ್ಠಿರನಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಆಗ ಮಾತ್ರವೇ ವಿಭೀಷಣ ಕಿರೀಟ ಸಮೇತ ಯುಧಿಷ್ಠಿರನಿಗೆ ಸಾಷ್ಟಾಂಗಪ್ರಣಾಮ ಮಾಡಿದ.

"ನಿಷ್ಠಾ ಭಕ್ತಿ ಯಾವ ರೀತಿಯದು ಗೊತ್ತೆ? ಇದು ಮನೆಯಲ್ಲಿ ಸೊಸೆಯ ವ್ಯವಹಾರದ ಹಾಗೆ. ಆಕೆ ಭಾವ, ಮೈದುನ, ಮಾವ, ಗಂಡ ಎಲ್ಲರಿಗೂ ಕಾಲು ತೊಳೆಯುವುದಕ್ಕೆ ನೀರು, ಕೈ ಬಾಯಿ ಒರಸಿಕೊಳ್ಳುವುದಕ್ಕೆ ವಸ್ತ್ರ, ಕುಳಿತುಕೊಳ್ಳುವುದಕ್ಕೆ ಮಣೆ ಇನ್ನೂ ಏನೇನೊ ರೀತಿಯಾಗಿ ಸೇವೆಮಾಡುತ್ತಾಳೆ; ಆದರೆ ತನ್ನ ಪತಿಯೊಡನೆ ಬೇರೆ ಸಂಬಂಧ ಇಟ್ಟುಕೊಂಡಿರುತ್ತಾಳೆ.

"ಈ ಪ್ರೇಮ-ಭಕ್ತಿಯಲ್ಲಿ 'ಅಹಂಕಾರ', 'ಮಮಕಾರ' ಎರಡೂ ಇವೆ. ಯಶೋದೆ ಭಾವಿಸುತ್ತಿದ್ದಳು: 'ನಾನು ಗೋಪಾಲನ ಯೋಗ-ಕ್ಷೇಮ ನೋಡಿಕೊಳ್ಳದಿದ್ದರೆ, ಬೇರೆ ಯಾರು ತಾನೆ ನೋಡಿಕೊಳ್ಳಬಲ್ಲರು?

ನಾನು ನೋಡಿಕೊಳ್ಳದಿದ್ದರೆ ಅವನು ಕಾಯಿಲೆ ಬಿದ್ದುಬಿಡುತ್ತಾನೆ.' ಶ್ರೀಕೃಷ್ಣ ಸಾಕ್ಷಾತ್ ಭಗವಂತ ಎಂಬ ಬೋಧೆ ಯಶೋದೆಗಿರಲಿಲ್ಲ. ಎರಡನೆಯದು 'ಮಮಕಾರ'. ಭಗವಂತನನ್ನು ತನ್ನವನು ಎಂದು ಭಾವಿಸುವುದು — 'ನನ್ನ ಗೋಪಾಲ' ಎಂದು ಭಾವಿಸುವಿಕೆ. ಉದ್ಧವ ಯಶೋದೆಗೆ ತಿಳಿಸಿದ: 'ತಾಯೆ, ನಿಮ್ಮ ಕೃಷ್ಣ ಸಾಕ್ಷಾತ್ ಭಗವಂತನೇ; ಜಗಚ್ಚಿಂತಾಮಣಿಯೇ. ಆತ ಸಾಮಾನ್ಯ ಮನುಷ್ಯನಲ್ಲ.' ಯಶೋದೆ ಉತ್ತರವಿತ್ತಳು: 'ನೋಡಿಲ್ಲಿ, ನಾನು ಕೇಳಿದ್ದು ನಿಮ್ಮ ಚಿಂತಾಮಣಿಯ ವಿಷಯವಾಗಿ ಅಲ್ಲ, ನನ್ನ ಗೋಪಾಲ ಹೇಗಿದಾನೆ ಎಂಬುದಾಗಿ. ಚಿಂತಾಮಣಿಯನ್ನಲ್ಲ, ನನ್ನ ಗೋಪಾಲನ್ನ.'

"ಗೋಪಿಯರದು ಎಂಥಾ ನಿಷ್ಠೆ! ಅವರು ಮಥುರೆಗೆ ಹೋಗಿ ದ್ವಾರಪಾಲಕನನ್ನು ಬಹಳವಾಗಿ ಬೇಡಿಕೊಂಡು ಸಭಾಮಂದಿರವನ್ನು ಪ್ರವೇಶಮಾಡಿದರು. ದ್ವಾರಪಾಲಕ ಅವರನ್ನು ಶ್ರೀಕೃಷ್ಣನ ಹತ್ತಿರಕ್ಕೆ ಕರೆದುಕೊಂಡುಹೋದ. ಆದರೆ ಅಲ್ಲಿ ರುಮಾಲು ಸುತ್ತಿರುವ ಶ್ರೀಕೃಷ್ಣನನ್ನು ಕಂಡು ತಮ್ಮ ತಲೆ ತಗ್ಗಿಸಿ ತಮ್ಮೊಳಗೇ ಮಾತನಾಡಿಕೊಳ್ಳಲಾರಂಭಿಸಿದರು: 'ತಲೆಗೆ ರುಮಾಲು ಸುತ್ತಿ ಕುಳಿತಿದಾನಲ್ಲ, ಇವನಾರು? ಈತನೊಡನೆ ಮಾತುಕತೆಯಾಡಿ ಕೊನೆಗೆ ನಾವು ಶ್ರೀಕೃಷ್ಣನಲ್ಲಿಟ್ಟಿರುವ ನಿಷ್ಠಾಭಕ್ತಿಯನ್ನು ಕಳೆದುಕೊಳ್ಳೋಣವೇ? ಪೀತಾಂಬರಧಾರಿಯಾದ, ನವಿಲುಗರಿಯ ಕಿರೀಟ ಧರಿಸಿರುವ ನಮ್ಮ ಪ್ರಾಣವಲ್ಲಭ ಶ್ರೀಕೃಷ್ಣನೆಲ್ಲಿ?'

"ನೋಡಿದಿರೋ, ಗೋಪಿಯರ ನಿಷ್ಠೆ ಎಷ್ಟು ಅದ್ಭುತವಾದ್ದು! ಬೃಂದಾವನದವರ ಭಾವ ಬಹಳ ವಿಶೇಷವಾದ್ದು. ಕೇಳಿದೇನೆ, ದ್ವಾರಕೆಯ ಜನರು ಅರ್ಜುನನ ಸಖನಾದ ಶ್ರೀಕೃಷ್ಣನನ್ನು ಮಾತ್ರ ಪೂಜಿಸುತ್ತಾರೆ, ರಾಧೆಯನ್ನು ತಿರಸ್ಕರಿಸುತ್ತಾರೆ ಎಂಬುದಾಗಿ."

ಒಬ್ಬ ಭಕ್ತ: "ಯಾವುದು ಒಳ್ಳೆಯದು — ಜ್ಞಾನಮಿಶ್ರಿತ ಭಕ್ತಿಯೊ, ಪ್ರೇಮ-ಭಕ್ತಿಯೊ?"

ಶ್ರೀರಾಮಕೃಷ್ಣರು: "ಭಗವಂತನಲ್ಲಿ ಅತ್ಯಂತ ಗಾಢವಾದ ಭಕ್ತಿ ಅಂದರೆ, ಆತ ತನ್ನವನೇ ಎಂಬ ಜ್ಞಾನ ಉಂಟಾಗದವರೆಗೆ ಪ್ರೇಮ-ಭಕ್ತಿ ಉಂಟಾಗೋದಿಲ್ಲ.

"ಒಂದು ಕಥೆ ಕೇಳು. ಮೂರು ಜನ ಸ್ನೇಹಿತರು ಒಂದು ಕಾಡಿನಲ್ಲಿ ಹೋಗುತ್ತಿದ್ದರು. ಇದ್ದಕ್ಕಿದ್ದಹಾಗೆ ಒಂದು ಹುಲಿ ಬಂದು ಅಡ್ಡಲಾಯಿತು.

ಒಬ್ಬ ಹೇಳಿದ: 'ಗೆಳೆಯರಾ, ನಮ್ಮ ಗತಿ ಮುಗಿಯಿತು!' ಎರಡನೆಯ ವನು ಹೇಳಿದ: 'ಹಾಗೇಕೆ ಹೇಳುತ್ತೀಯೆ? ನಮ್ಮಗತಿ ಏಕೆ ಮುಗಿದು ಹೋದೀತು? ಬನ್ನಿ, ಭಗವಂತನನ್ನು ಪ್ರಾರ್ಥಿಸೋಣ.' ಮೂರನೆಯ ವನು ಹೇಳಿದ: 'ಇದಕ್ಕೆಲ್ಲ ಭಗವಂತನಿಗೇಕೆ ಕಷ್ಟಕೊಡಬೇಕು? ಬನ್ನಿ, ಈ ಮರ ಹತ್ತಿಬಿಡೋಣ.'

"'ನಮ್ಮ ಗತಿ ಮುಗಿಯಿತು' ಎಂದು ಹೇಳಿದವನಿಗೆ ಗೊತ್ತಿಲ್ಲ ಭಗ ವಂತ ನಮ್ಮ ರಕ್ಷಕ ಎಂಬುದು. 'ಭಗವಂತನನ್ನು ಪ್ರಾರ್ಥಿಸೋಣ' ಎಂಬುದಾಗಿ ಹೇಳಿದವ ಜ್ಞಾನಿ. ಆತನಿಗೆ ಗೊತ್ತಿದೆ, ಭಗವಂತ ಸೃಷ್ಟಿ ಸ್ಥಿತಿ ಪ್ರಳಯ ಮಾಡುತ್ತಾನೆ ಎಂಬುದಾಗಿ. ಆದರೆ ಯಾರು 'ಇದಕ್ಕೆಲ್ಲ ಭಗವಂತನಿಗೇಕೆ ಕಷ್ಟಕೊಡಬೇಕು? ಬನ್ನಿ ಈ ಮರ ಹತ್ತಿಬಿಡೋಣ' ಎಂಬುದಾಗಿ ಹೇಳಿದನೊ, ಆತನ ಹೃದಯದಲ್ಲಿ ಪ್ರೇಮ ಅಂಕುರಿಸಿದೆ, ಪ್ರೀತಿ ಹುಟ್ಟಿದೆ. ಪ್ರೇಮದ ಸ್ವಭಾವವೇ ಅಂಥದು, ಅದು ತನ್ನ ಪ್ರೀತಿ ಪಾತ್ರನಿಗಿಂತ ತಾನೇ ಬಲಶಾಲಿ ಎಂಬುದಾಗಿ ಭಾವಿಸುವಂತೆ ಮನುಷ್ಯ ನನ್ನು ಪ್ರೇರೇಪಿಸುತ್ತದೆ. ಪ್ರೀತಿಪಾತ್ರನಿಗೆ ಯಾವ ತೊಂದರೆಯೂ ಆಗದ ರೀತಿಯಲ್ಲಿ ಆತ ನೋಡಿಕೊಳ್ಳುತ್ತಾನೆ. ತನ್ನ ಪ್ರೀತಿಪಾತ್ರನ ಕಾಲಿಗೆ ಒಂದು ಮುಳ್ಳೂ ಮುರಿಯಕೂಡದು ಎಂಬುದೇ ಆತನ ಹಗಲಿರುಳ ಚಿಂತನೆ."

ರಾಮಚಂದ್ರದತ್ತ ಪರಮಹಂಸರಿಗೆ ಮತ್ತು ಭಕ್ತರೆಲ್ಲರಿಗೂ ಬಗೆ ಬಗೆಯ ಸಿಹಿ ತಿಂಡಿಗಳಿಂದ ಉಪಾಹಾರಮಾಡಿಸಿದ.



೧೧

## ದಕ್ಷಿಣೇಶ್ವರದಲ್ಲಿ ಭಕ್ತರೊಡನೆ (೧)

೪ ನೆ ಜೂನ್ ೧೮೮೩, ಜ್ಯೇಷ್ಠ ಕೃಷ್ಣ ಚತುರ್ದಶಿ, ಸೋಮವಾರ.

ಘಂಟೆ ಬೆಳಗಿನ ಒಂಬತ್ತು. ಭಕ್ತರು ಒಬ್ಬೊಬ್ಬರಾಗಿ ಬರಲಾರಂಭಿಸಿದಾರೆ. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯ ಪಶ್ಚಿಮ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಗಂಗೆಯ ಕಡೆ ತಿರುಗಿ ಕುಳಿತಿದಾರೆ. ಪರಮಹಂಸರೊಡನೇ ಹಿಂದಿನ ರಾತ್ರಿಯನ್ನು ಕಳೆದಿದ್ದ ಮಾಸ್ಟರ್ ಅವರ ಹತ್ತಿರ ಕುಳಿತಿದಾನೆ. ಬಲರಾಮ ಮತ್ತು ಇನ್ನೂ ಅನೇಕ ಭಕ್ತರು ವರಾಂಡದಲ್ಲಿ ಕುಳಿತಿದಾರೆ. ರಾಖಾಲ ನೆಲದ ಮೇಲೆ ಮಲಗಿಕೊಂಡು ತಲೆಯನ್ನು ಮಾತ್ರ ಪರಮಹಂಸರ ತೊಡೆಯ ಮೇಲೆ ಇಟ್ಟಿದಾನೆ. ಈಗ ಕೆಲವು ದಿನಗಳಿಂದ ಪರಮಹಂಸರು ರಾಖಾಲನನ್ನು ಸಾಕ್ಷಾತ್ ಬಾಲ ಗೋಪಾಲನೆಂದೇ ಪರಿಗಣಿಸುತ್ತಿದಾರೆ.

ತ್ರೈಲೋಕ್ಯ[1] ಕಾಳೀದೇವಾಲಯಕ್ಕೆ ತಮ್ಮ ಕೊಠಡಿಯ ಮುಂಭಾಗದ ರಸ್ತೆಯ ಮೂಲಕ ಬರುತ್ತಿರುವುದನ್ನು ಕಂಡು ಪರಮಹಂಸರು ರಾಖಾಲನಿಗೆ ಎದ್ದು ಕುಳಿತುಕೊಳ್ಳುವಂತೆ ಹೇಳಿದರು. ತ್ರೈಲೋಕ್ಯ ಪರಮಹಂಸರಿಗೆ ನಮಸ್ಕಾರಮಾಡಿದ.

ಶ್ರೀರಾಮಕೃಷ್ಣರು ತ್ರೈಲೋಕ್ಯನಿಗೆ: "ಏನು, ನಿನ್ನೆ ರಾತ್ರಿ ನಾಟಕ ನಡೆಯಲಿಲ್ಲವೆ?"

ತ್ರೈಲೋಕ್ಯ: "ಇಲ್ಲ. ಏರ್ಪಡಿಸಲು ಅನುಕೂಲವಾಗಲಿಲ್ಲ."

ಶ್ರೀರಾಮಕೃಷ್ಣರು: "ಈಗ ಆದದ್ದು ಆಗಿಹೋಯಿತು. ಮುಂದೆ ಈ ರೀತಿಯಾಗಿ ಎಂದಿಗೂ ಆಗದ ಹಾಗೆ ನೋಡಿಕೊ. ದೇವಾಲಯದ ಪದ್ಧತಿಯನ್ನು ಚಾಚೂ ತಪ್ಪದೆ ನಡಸಿಕೊಂಡುಹೋಗಬೇಕು."

ತ್ರೈಲೋಕ್ಯ ಒಪ್ಪಿಕೊಂಡು ದೇವಾಲಯದ ಕಡೆ ಮುಂದುವರಿದ. ಸ್ವಲ್ಪ ಹೊತ್ತಾದ ಮೇಲೆ ವಿಷ್ಣುದೇವಾಲಯದ ಅರ್ಚಕ, ರಾಮಚಟ್ಟೋಪಾಧ್ಯಾಯ ಪರಮಹಂಸರು ಕುಳಿತಿದ್ದ ಸ್ಥಳಕ್ಕೆ ಬಂದ.

---

1. ಮಥುರಬಾಬುವಿನ ಮಗ. ರಾಣಿ ರಾಸಮಣಿಗೆ ಮೊಮ್ಮಗನಾಗಬೇಕು. ಆತ ೧೮೭೧ ನೆ ಇಸವಿಯಲ್ಲಿ ದೇವಾಲಯದ ಯಜಮಾನನಾದ.

ಶ್ರೀರಾಮಕೃಷ್ಣರು: "ನೋಡು ರಾಮು, ಮತ್ತೆ ಎಂದಿಗೂ ನಾಟಕವನ್ನು ನಿಲ್ಲಿಸಕೂಡದು ಎಂದು ತ್ರೈಲೋಕ್ಯನಿಗೆ ಹೇಳಿದೆ. ಹಾಗೆ ನಾನು ಹೇಳಿದ್ದು ಸರಿತಾನೆ?"

ರಾಮು: "ಮಹಾಶಯರೆ, ಅದೇನು ತಪ್ಪಲ್ಲವಲ್ಲ? ಒಳ್ಳೇದೇ ಆಯಿತು. ಪದ್ಧತಿಗನುಸಾರ ನಡಸಿಕೊಂಡೇ ಬರಬೇಕು."

ಪರಮಹಂಸರು ಬಲರಾಮನಿಗೆ ಆತನ ಮಧ್ಯಾಹ್ನದ ಊಟವನ್ನು ಇಲ್ಲೇ ಮಾಡುವಂತೆ ಹೇಳಿದರು. ಊಟಕ್ಕೆ ಇನ್ನೂ ಸಮಯ ಆಗಿಲ್ಲ. ಪರಮಹಂಸರು ತಮ್ಮ ಸಾಧನಾವಸ್ಥೆಯ ಸಂಬಂಧವಾಗಿ ಭಕ್ತರಿಗೆ ತಿಳಿಸುತ್ತಿದಾರೆ. ರಾಖಾಲ, ಮಾಸ್ಟರ್, ರಾಮಲಾಲ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ಆಗಾಗ ಹಾಜರಾ ನನಗೆ ಬುದ್ಧಿವಾದ ಕೊಡುವುದಕ್ಕೆ ಬರುತ್ತಾನೆ. ಆತ ನನಗೆ ಹೇಳುತ್ತಾನೆ: 'ಈ ಹುಡುಗರ ಸಂಬಂಧವಾಗಿ ನೀವೇಕೆ ಅಷ್ಟೊಂದು ತಲೆಗೆ ಹಚ್ಚಿಕೊಳ್ಳುತ್ತಿದೀರಿ?' ಒಂದು ದಿನ ನಾನು ಗಾಡಿ ಮಾಡಿಕೊಂಡು ಬಲರಾಮನ ಮನೆಗೆ ಹೋಗುತ್ತಿದ್ದೆ. ಮಧ್ಯ ದಾರಿಯಲ್ಲಿ ಅದರ ಸಂಬಂಧವಾಗಿ ದೊಡ್ಡ ಯೋಚನೆಯೇ ಬಂದುಬಿಟ್ಟಿತು. ನಾನು ಭಗವತಿಗೆ ತಿಳಿಸಿದೆ: 'ತಾಯೆ, ಹಾಜರಾ ನಾನು ನರೇಂದ್ರನೇ ಮೊದಲಾದ ಯುವಕ ಭಕ್ತರ ಸಂಬಂಧವಾಗಿ ಹೆಚ್ಚಾಗಿ ಭಾವಿಸುತ್ತಿರುವುದನ್ನು ನೋಡಿ ನನಗೆ ಎಚ್ಚರಿಕೆ ಕೊಡುತ್ತಿದಾನೆ. ಭಗವಂತನನ್ನು ಮರೆತು ಈ ಹುಡುಗರ ಸಂಬಂಧವಾಗಿ ಏಕೆ ಅಷ್ಟೊಂದು ಭಾವಿಸುತ್ತಿದೀರಿ ಎಂದು ನನ್ನನ್ನು ಕೇಳುತ್ತಿದಾನೆ.' ಹೀಗೆಂದು ನಾನು ಭಗವತಿಗೆ ತಿಳಿಸುವುದೇ ತಡ, ತಾನೇ ಮಾನುಷ ರೂಪ ಧರಿಸಿರುವುದನ್ನ, ಶುದ್ಧಾತ್ಮರಲ್ಲಿ ವಿಶೇಷ ಸ್ಪಷ್ಟವಾಗಿ ವ್ಯಕ್ತವಾಗಿರುವುದನ್ನ ನನಗೆ ತೋರಿಸಿಕೊಟ್ಟಳು. ಈ ದರ್ಶನ ನನಗೆ ಸಮಾಧಿಯನ್ನು ತಂದಿತು. ಪ್ರಕೃತಿಸ್ಥನಾದನಂತರ ಹಾಜರಾನ ಮೇಲೆ ನನಗೆ ಕೋಪ ಬಂತು. ನನಗೆ ನಾನೇ ಹೇಳಿಕೊಂಡೆ: 'ಆ ದುರುಳ ನನ್ನ ಮನಸ್ಸು ಕೆಡಿಸಿಬಿಟ್ಟಿದ್ದನಲ್ಲ.' ಬಳಿಕ ಯೋಚನೆ ಬಂತು: 'ಅಯ್ಯೋ ಪಾಪ, ಆ ಬಡಪಾಯಿಯನ್ನೇಕೆ ನಿಂದಿಸಲಿ? ಆತನಿಗೆ ಇದೆಲ್ಲಾ ಅರ್ಥವಾಗುವ ಬಗೆ ಹೇಗೆ?'

"ಈ ಯುವಕರು ಸಾಕ್ಷಾತ್ ನಾರಾಯಣರೇ ಎಂಬುದು ನನಗೆ ಗೊತ್ತಿದೆ. ನಾನು ಮೊಟ್ಟಮೊದಲು ನರೇಂದ್ರನನ್ನು ನೋಡಿದಾಗಲೇ

ನನಗೆ ಕಂಡುಬಂತು ಆತನಲ್ಲಿ ದೇಹಬುದ್ಧಿಯೇ ಇಲ್ಲದಿರುವುದು. ಎದೆ ಮೇಲೆ ಕೈ ಇಡುವುದೇ ತಡ, ಬಾಹ್ಯಜ್ಞಾನಶೂನ್ಯನಾಗಿಬಿಟ್ಟ. ಪ್ರಜ್ಞೆ ಬಂದ ಮೇಲೆ ಕೂಗಿಕೊಳ್ಳಲಾರಂಭಿಸಿದ: 'ಏನಿದು? ಏನುಮಾಡಿಬಿಟ್ಟರಿ ನೀವು ನನಗೆ? ನನಗೆ ಮನೆಯಲ್ಲಿ ತಂದೆತಾಯಿಗಳಿದಾರೆ!' ಯದುಮಲ್ಲಿಕನ ಮನೆಯಲ್ಲೂ ಇದೇ ರೀತಿ ಆಯಿತು. ಕ್ರಮೇಣ ಆತನನ್ನು ನೋಡಬೇಕೆಂಬ ಆಕಾಂಕ್ಷೆ ಅಧಿಕಾಧಿಕವಾಗುತ್ತಾ ಬಂತು. ನನ್ನ ಪ್ರಾಣ ಸುಮ್ಮನೆ ಆತನಿಗಾಗಿ ಹಾತೊರೆಯಲಾರಂಭಿಸಿತು. ಆಗ ನಾನು ಭೋಲಾನಾಥನಿಗೆ[1] ತಿಳಿಸಿದೆ: 'ನೋಡು, ನನ್ನ ಮನಸ್ಸಿನಲ್ಲಿ ಹೀಗೇಕೆ ಆಗುತ್ತಿದೆ? ನರೇಂದ್ರನೆಂಬ ಹೆಸರಿನ ಒಬ್ಬ ಕಾಯಸ್ಥರ ಹುಡುಗನಿದಾನೆ. ಆತನಿಗಾಗಿ ಇಷ್ಟೊಂದು ವ್ಯಾಕುಲನಾಗಿದೇನಲ್ಲ ಏಕೆ?' ಭೋಲಾನಾಥ ತಿಳಿಸಿದ: 'ಇದಕ್ಕೆ ಉತ್ತರ ಮಹಾಭಾರತದಲ್ಲಿ ಇದೆ. ಸಮಾಧಿ ಪಡೆದವರು ಸಾಮಾನ್ಯ ಅವಸ್ಥೆಗೆ ಇಳಿದುಬಂದಾಗ ಸಾತ್ತ್ವಿಕರೊಡನೆ ಬೆರೆತು ಆನಂದಪಡುತ್ತಾರೆ. ಸಾತ್ತ್ವಿಕರನ್ನು ಕಂಡರೆ ಅವರ ಮನಸ್ಸಿಗೆ ಶಾಂತಿಯುಂಟಾಗುತ್ತದೆ.' ಈ ಮಾತು ಕೇಳಿ ನನ್ನ ಮನಸ್ಸಿಗೆ ಸಮಾಧಾನವಾಯಿತು. ಆಗಾಗ ನರೇಂದ್ರನನ್ನ ನೋಡಬೇಕು ಎಂಬುದಾಗಿ ಏಕಾಂತದಲ್ಲಿ ಕುಳಿತು ಅಳುತ್ತಿದ್ದೆ.

"ಅಹಹ, ಏನೇನವಸ್ಥೆ ಬಂದುಹೋಯಿತು! ಮೊದಲು ನನಗೆ ಈ ಅವಸ್ಥೆ ಬಂದಾಗ ಹಗಲು ಇರುಳು ಹೇಗೆ ಹೊರಟುಹೋಗುತ್ತಿದ್ದುವೊ ಗೊತ್ತಾಗುತ್ತಲೇ ಇರಲಿಲ್ಲ. ನನಗೆ ಹುಚ್ಚು ಹಿಡಿದಿದೆ ಎಂದು ಎಲ್ಲರೂ ಹೇಳತೊಡಗಿದರು. ಅದಕ್ಕಾಗಿ ನನಗೆ ವಿವಾಹಮಾಡಿದರು. ಆಗ ನನಗೆ ಉನ್ಮಾದ ಅವಸ್ಥೆ. ಮೊದಲು ನನ್ನ ಹೆಂಡತಿಯ ಸಂಬಂಧವಾಗಿ ಸ್ವಲ್ಪ ಯೋಚನೆ ಹತ್ತಿಕೊಂಡಿತು. ಕೊನೆಗೆ ಯೋಚಿಸಿದೆ, ಆಕೆಯೂ ಉಂಡೂ ತಿಂದೂ ನನ್ನ ಹಾಗೇ ಇರುತ್ತಾಳೆ.

"ಒಮ್ಮೆ ಮಾವನವರ ಮನೆಗೆ ಹೋಗಿದ್ದೆ. ಅಲ್ಲಿ ಬಹಳ ಒಳ್ಳೆ ಸಂಕೀರ್ತನೆಯ ವ್ಯವಸ್ಥೆ ಮಾಡಿದ್ದರು. ಅದು ಬಹಳ ಚೆನ್ನಾಗಿ ನಡೆಯಿತು. ನನ್ನ ಭವಿಷ್ಯದಲ್ಲಿ ಏನೇನಿದೆಯೊ ಎಂದು ಒಮ್ಮೊಮ್ಮೆ ಯೋಚಿಸುತ್ತಿದ್ದೆ. ನಾನು ಭಗವತಿಗೆ ಹೇಳುತ್ತಿದ್ದೆ: 'ಊರಿನ ಜಮೀನುದಾರ ನನಗೆ ಪುರಸ್ಕಾರ ತೋರಿಸುವುದಾದರೆ ನಾನು ಭಾವಿಸಿಕೊಳ್ಳುತ್ತೇನೆ ನನ್ನ ಆಧ್ಯಾತ್ಮಿಕ

1. ಕಾಳೀದೇವಾಲಯದ ಒಬ್ಬ ಗುಮಾಸ್ತ.

ಉನ್ನತಿ ಸತ್ಯವಾದ್ದು ಎಂದು.' ಅದಕ್ಕೆ ತಕ್ಕಂತೆ ಅವರೂ ತಾವಾಗೇ ಬಂದು ನನ್ನನ್ನು ಮಾತನಾಡಿಸಿದರು.

"ಆಹಾ, ಏನವಸ್ಥೆ ಬಂದಿತ್ತು! ಕಿಂಚಿತ್ ಭಾವಪ್ರೇರಣೆ ಆದರೇ ಸಾಕು ಒಮ್ಮೆಗೇ ಉದ್ದೀಪನವಾಗಿಬಿಡುತ್ತಿತ್ತು. ಒಮ್ಮೆ ನಾನು ಹದಿ ನಾಲ್ಕು ವರ್ಷದ ಒಬ್ಬ ಸುಂದರಿಯನ್ನು ಪೂಜೆಮಾಡಿದೆ. ಆಕೆ ಸಾಕ್ಷಾತ್ ಭಗವತಿಯೇ ಆಗಿ ಕಂಡಳು. ಒಂದು ರೂಪಾಯಿ ದಕ್ಷಿಣೆ ಕೊಟ್ಟು ಆಕೆಗೆ ಪ್ರಣಾಮಮಾಡಿದೆ. ಒಮ್ಮೆ ರಾಮಲೀಲೆ ಎಂಬ ನಾಟಕ ನೋಡಲು ಹೋಗಿದ್ದೆ. ಪಾರ್ಟು ವಹಿಸಿದ್ದವರು ಸಾಕ್ಷಾತ್ ಸೀತೆ, ರಾಮ, ಲಕ್ಷ್ಮಣ, ಹನುಮಂತ, ವಿಭೀಷಣರಾಗೇ ಕಂಡರು. ಬಳಿಕ ಆ ನಟ ನಟಿಯರನ್ನೆಲ್ಲಾ ಪೂಜೆಮಾಡಿದೆ.

"ಆ ಸಮಯದಲ್ಲಿ ಕುಮಾರಿಯರನ್ನು ಕರಸಿಕೊಂಡು ಅವರಿಗೆ ಪೂಜೆ ಮಾಡುತ್ತಿದ್ದೆ. ಅವರು ಸಾಕ್ಷಾತ್ ಭಗವತಿಯೇ ಆಗಿ ಕಾಣಿಸಿಕೊಳ್ಳು ತ್ತಿದ್ದರು.

"ಒಂದು ದಿನ ಒಬ್ಬ ಹೆಂಗಸು ನೀಲಿ ಬಣ್ಣದ ಸೀರೆ ಉಟ್ಟು ಬಕುಳ ಮರದ ಹತ್ತಿರ ನಿಂತಿದ್ದಳು. ಆಕೆ ವೇಶ್ಯೆ. ಒಡನೆಯೇ ನನಗೆ ಸೀತೆಯ ಉದ್ದೀಪನವಾಗಿಬಿಟ್ಟಿತು. ಆಕೆ ವೇಶ್ಯೆ ಎಂಬುದು ಮರೆತೇಹೋಯಿತು. ಸಾಕ್ಷಾತ್ ಸೀತೆಯೇ ಲಂಕೆಯಿಂದ ಬಿಡುಗಡೆಹೊಂದಿದವಳಾಗಿ ರಾಮ ನನ್ನು ಸಂಧಿಸಲು ಮುಂದುವರಿಯುತ್ತಿರುವಂತೆ ಕಂಡುಬಂದಳು. ಬಹಳ ಹೊತ್ತಿನವರೆಗೆ ಬಾಹ್ಯಜ್ಞಾನಶೂನ್ಯನಾಗಿ ಸಮಾಧಿಸ್ಥನಾಗಿದ್ದುಬಿಟ್ಟೆ.

"ಇನ್ನೊಂದು ದಿನ ಕಲ್ಕತ್ತದಲ್ಲಿರುವ ಮೈದಾನಕ್ಕೆ ಹಾಗೇ ಸುತ್ತಾಡಿ ಕೊಂಡುಬರಲು ಹೋದೆ. ಆಕಾಶಬುಟ್ಟಿ ಮೇಲಕ್ಕೆ ಹತ್ತಿಹೋಗುವುದನ್ನು ನೋಡಲು ಅನೇಕ ಜನ ಅಲ್ಲಿಗೆ ಬಂದು ನೆರೆದಿದ್ದರು. ಇದ್ದಕ್ಕಿದ್ದಹಾಗೆ ಒಂದು ಮರ ಒರಗಿಕೊಂಡು ತ್ರಿಭಂಗಿಯಾಗಿ ನಿಂತಿದ್ದ ಒಬ್ಬ ಆಂಗ್ಲ ಹುಡುಗನ ಕಡೆ ನನ್ನ ಕಣ್ಣು ಹೋಯಿತು. ಒಡನೆಯೇ ಶ್ರೀಕೃಷ್ಣನ ಉದ್ದೀಪನವಾಗಿಬಿಟ್ಟಿತು. ಸಮಾಧಿಸ್ಥನಾಗಿಬಿಟ್ಟೆ.

"ಒಮ್ಮೆ ಸಿಹೋರಿನಲ್ಲಿ ಗೋವಳರಿಗೆ ಪ್ರತಿಯೊಬ್ಬರ ಕೈಗೂ ಸಿಹಿ ತಿಂಡಿ ಕೊಟ್ಟೆ. ಅವರು ಸಾಕ್ಷಾತ್ ವ್ರಜದ ಗೋಪಾಲಕರಾಗೇ ಕಂಡು ಬಂದರು. ಬಳಿಕ ಅವರ ಕೈಯಿಂದಲೇ ನಾನೂ ತಿನ್ನಲಾರಂಭಿಸಿದೆ.

"ಆಗ ಪ್ರಾಯಿಕವಾಗಿ ನನಗೆ ಬಾಹ್ಯಪ್ರಜ್ಞೆಯೇ ಇರುತ್ತಿರಲಿಲ್ಲ. ಒಮ್ಮೆ ಮಥುರಬಾಬು ಜಾನಬಜಾರಿನಲ್ಲಿದ್ದ ತಮ್ಮ ಮನೆಗೆ ಕರೆದುಕೊಂಡು ಹೋಗಿ ಕೆಲವು ದಿನದ ಮಟ್ಟಿಗೆ ನನ್ನನ್ನು ಅಲ್ಲೇ ಇಟ್ಟುಕೊಂಡಿದ್ದ. ಆಗ ನಾನು ಭಗವತಿಯ ಸಾಕ್ಷಾತ್ ದಾಸಿಯೇ ಆಗಿರುವಂತೆ ನನಗೆ ಕಂಡು ಬಂತು. ಮನೆಯ ಹೆಂಗಸರಿಗೆ ನನ್ನನ್ನು ಕಂಡರೆ ಸ್ವಲ್ಪವೂ ಲಜ್ಜೆಯಾಗು ತ್ತಿರಲಿಲ್ಲ. ಬೇರೆ ಹೆಂಗಸನ್ನೇ ಆಗಲಿ ಚಿಕ್ಕ ಮಗುವನ್ನೇ ಆಗಲಿ ಕಂಡರೆ ಹೇಗೆ ಹೆಂಗಸರಿಗೆ ನಾಚಿಕೆ ಆಗೋದಿಲ್ಲವೊ ಹಾಗೇ ಅವರು ನನ್ನೊಡನೆ ವ್ಯವಹರಿಸುತ್ತಿದ್ದರು. ಮನೆಯ ದಾಸಿಯ ಜೊತೆಯಲ್ಲಿ ಹೋಗಿ ಮಥುರ ಬಾಬುವಿನ ಮಗಳನ್ನು ಆಕೆಯ ಗಂಡ ಮಲಗುತ್ತಿದ್ದ ಕೊಠಡಿಯಲ್ಲಿ ಬಿಟ್ಟು ಬರುತ್ತಿದ್ದೆ.

"ಈಗಲೂ ಭಾವಸ್ಫುರಣ ಸ್ವಲ್ಪವೇ ಸಾಕು ಉದ್ದೀಪನವಾಗಿ ಬಿಡುತ್ತದೆ. ರಾಖಾಲ ಪಿಟಿಪಿಟಿಗುಟ್ಟುತ್ತ ಜಪಮಾಡುತ್ತಿದ್ದ. ಆಗ ನಾನು ಸುಮ್ಮನೆ ಇರಲಾಗುತ್ತಿರಲಿಲ್ಲ. ಒಮ್ಮೆಗೇ ಭಗವದುದ್ದೀಪನವಾಗಿಬಿಟ್ಟು ಭಾವಪರವಶನಾಗಿಬಿಡುತ್ತಿದ್ದೆ."

ಪರಮಹಂಸರು ಪ್ರಕೃತಿಯ ಭಾವವನ್ನು ಆರೋಪಿಸಿಕೊಂಡಿದ್ದಾಗ ತಮಗೆ ದೊರೆತ ಅನುಭವಗಳನ್ನು ವರ್ಣನೆಮಾಡುತ್ತಾ ಮುಂದುವರಿದರು. ಅವರು ಹೇಳುತ್ತಿದಾರೆ: "ಒಮ್ಮೆ ನಾನು ಒಬ್ಬ ಕೀರ್ತನಕಾರನಿಗೆ ಕೀರ್ತನಕಾರ್ತಿಯ ಹಾವಭಾವಗಳನ್ನೆಲ್ಲ ಅಣಕಿಸಿ ತೋರಿಸಿದೆ. ಆತ ಹೇಳಿದ: 'ಇವೆಲ್ಲಾ ಚಾಚೂ ತಪ್ಪದೆ ಸರಿ. ಇವನ್ನೆಲ್ಲಾ ಎಲ್ಲಿ ಕಲಿತಿರಿ?'" ಪರಮಹಂಸರು ಈಗ ಮತ್ತೆ ಭಕ್ತರ ಮುಂದೆ ಅದನ್ನೇ ನಟಿಸಿ ತೋರಿ ಸುತ್ತಿದಾರೆ. ಅಲ್ಲಿದ್ದವರೆಲ್ಲ ಗಟ್ಟಿಯಾಗಿ ನಗಲಾರಂಭಿಸಿದಾರೆ.

ಮಧ್ಯಾಹ್ನದ ಊಟವಾದನಂತರ ಪರಮಹಂಸರು ಈಗ ವಿಶ್ರಮಿಸಿ ಕೊಳ್ಳುತ್ತಿದಾರೆ. ಬ್ರಾಹ್ಮಸಮಾಜದ ಅನುಯಾಯಿಯಾದ ಮಣಿಲಾಲ-ಮಲ್ಲಿಕ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡ. ಅವರಿನ್ನೂ ಹಾಸಿಗೆಯ ಮೇಲೆ ಮಲಗಿ ಕೊಂಡೇ ಇದಾರೆ. ಮಣಿಲಾಲ ಪರಮಹಂಸರಿಗೆ ಆಗಾಗ ಪ್ರಶ್ನೆ ಹಾಕು ತ್ತಲೇ ಇದಾನೆ. ಅವರೂ ಅರ್ಧ ಮಲಗಿ ಅರ್ಧ ಎಚ್ಚತ್ತು ಒಮ್ಮೊಮ್ಮೆ ಉತ್ತರ ಕೊಡುತ್ತಿದಾರೆ. ಮಣಿಲಾಲ ಹೇಳಿದ, ಶಿವನಾಥ ನಿತ್ಯಗೋಪಾಲ ನನ್ನು ಬಹಳವಾಗಿ ಹೊಗಳುತ್ತಿದಾನೆ ಎಂಬುದಾಗಿ. ಪರಮಹಂಸರು

ಇನ್ನೂ ನಿದ್ದೆಗಣ್ಣಿನಲ್ಲೆ ಕೇಳಿದರು, ಹಾಜರಾದ ಸಂಬಂಧವಾಗಿ ಅವರು ಏನು ಹೇಳುತ್ತಾರೆ ಅಂತ.

ಈಗ ಪರಮಹಂಸರು ತಮ್ಮ ಹಾಸಿಗೆ ಮೇಲೆ ಎದ್ದು ಕುಳಿತು ಭವನಾಥನ ಭಕ್ತಿಯ ಸಂಬಂಧವಾಗಿ ಮಣಿಲಾಲನಿಗೆ ತಿಳಿಸುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಆಹಾ, ಆತನದು ಎಂಥಾ ಭಾವ! ಅವನು ಹಾಡತೊಡಗುವುದೇ ತಡ, ಕಣ್ಣಿನಲ್ಲಿ ನೀರು ತುಂಬಿಕೊಂಡುಬಿಡುತ್ತದೆ. ಹರೀಶ ಆತನ ಕಣ್ಣಿಗೆ ಬಿದ್ದ ಅಂದರೇ ಆತನಲ್ಲಿ ಭಾವೋದ್ರೇಕವಾಗಿಬಿಡುತ್ತದೆ. ಹರೀಶ ಮನೆಯನ್ನು ಬಿಟ್ಟುಬಂದು ಆಗಾಗ ಇಲ್ಲಿ ಇರುವುದನ್ನು ನೋಡಿ ಹೇಳಿದ: 'ಈತ ಬಹಳ ಒಳ್ಳೆ ಅದೃಷ್ಟಶಾಲಿ.'"

ಶ್ರೀರಾಮಕೃಷ್ಣರು ಮಾಸ್ಟರನ್ನು ಕೇಳುತ್ತಿದ್ದಾರೆ: "ಒಳ್ಳೇದು, ಭಕ್ತಿಗೆ ಕಾರಣ ಏನು? ಭವನಾಥನೇ ಮೊದಲಾದ ಈ ಯುವಕರಿಗೆ ಉದ್ದೀಪನವಾಗಿಬಿಡುತ್ತಿದೆಯಲ್ಲ ಏಕೆ?" ಮಾಸ್ಟರ್ ಯಾವ ಉತ್ತರವನ್ನೂ ಕೊಡಲಿಲ್ಲ.

ಶ್ರೀರಾಮಕೃಷ್ಣರು: "ಸತ್ಯವೇನೆಂದರೆ, ಮನುಷ್ಯರು ನೋಡೋಕೇನೊ ಒಂದೇ ರೀತಿಯಾಗಿ ಕಾಣುತ್ತಾರೆ, ಆದರೆ ಕೆಲವರ ಅಂತರ್ಯದಲ್ಲಿ ಹಾಲು ಖೋವದಿಂದ ತಯಾರಿಸಿದ ಹೂರ್ಣ ತುಂಬಿರುತ್ತದೆ. ಕಡುಬುಗಳಲ್ಲಿ ಕೆಲವದರೊಳಗೆ ಉದ್ದಿನ ಹೂರ್ಣ ತುಂಬಿರುತ್ತದೆ, ಇನ್ನು ಕೆಲವದರೊಳಗೆ ಹಾಲು ಖೋವದ ಹೂರ್ಣ ತುಂಬಿರುತ್ತದೆ. ಆದರೆ ಹೊರಗೆ ನೋಡುವುದಕ್ಕೆ ಮಾತ್ರ ಎಲ್ಲಾ ಒಂದೇ ರೀತಿಯಾಗಿ ಕಾಣುತ್ತವೆ. ಭಗವಂತನನ್ನು ಅರಿಯಬೇಕೆಂಬ ಇಚ್ಛೆ, ಆತನಲ್ಲಿ ಪ್ರೇಮ-ಭಕ್ತಿ ಇವೇ ಮೊದಲಾದುವೇ ಹಾಲು ಖೋವದ ಹೂರ್ಣ."

ಈಗ ಪರಮಹಂಸರು ಭಕ್ತರಿಗೆ ಅಭಯ ನೀಡುತ್ತಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಕೆಲಕೆಲವರು ಭಾವಿಸುತ್ತಾರೆ: 'ನಾನು ಬದ್ಧ ಜೀವ. ನನಗೆ ಜ್ಞಾನ ಭಕ್ತಿ ದೊರೆಯೋದಿಲ್ಲ' ಎಂದು. ಗುರುವಿನ ಕೃಪೆ ದೊರೆತಿದ್ದೇ ಆದರೆ, ಸ್ವಲ್ಪವೂ ಹೆದರಬೇಕಾಗಿಲ್ಲ. ಒಮ್ಮೆ ಒಂದು ಹೆಣ್ಣು ಹುಲಿ ಒಂದು ಆಡು ಮಂದೆಯ ಮೇಲೆ ಬಿತ್ತು. ಅದು ತನ್ನ ಬೇಟೆಯ ಮೇಲೆ ನೆಗೆದಾಗ ಮರಿಹಾಕಿ ಸತ್ತುಹೋಯಿತು. ಬಳಿಕ ಮರಿ ಆಡುಗಳೊಡನೆ ಬೆಳೆಯತೊಡಗಿತು. ಅವು ಹುಲ್ಲು ಮೇಯುತ್ತಿದ್ದುವು; ಹುಲಿ ಮರಿಯೂ ಹಾಗೇ ಹುಲ್ಲು ಮೇಯುತ್ತಿತ್ತು. ಅವು 'ಬ್ಯಾ, ಬ್ಯಾ'

ಎಂದು ಅರಚುತ್ತಿದ್ದುವು; ಮರಿಯೂ ಹಾಗೇ 'ಬ್ಯಾ, ಬ್ಯಾ' ಅಂತ ಅರಚುತ್ತಿತ್ತು. ಕ್ರಮೇಣ ಹುಲಿಮರಿ ಬಹಳ ದೊಡ್ಡದಾಗಿ ಬೆಳೆಯಿತು. ಒಂದು ದಿನ ಅದೇ ಮಂದೆಯ ಮೇಲೆ ಇನ್ನೊಂದು ಹುಲಿ ಬಿದ್ದಿತು. ಆ ಮಂದೆಯೊಡನೆ ಹುಲ್ಲು ತಿನ್ನುವ ಹುಲಿ ಇರುವುದನ್ನು ಕಂಡು ಆ ಹುಲಿಗೆ ಬಹಳ ಆಶ್ಚರ್ಯವಾಯಿತು. ಅದು ಓಡಿ ಬಂದು ಆ ಹುಲ್ಲು ತಿನ್ನುತ್ತಿದ್ದ ಹುಲಿಯನ್ನು ಹಿಡಿದುಕೊಂಡಿತು. ಆಗ ಅದು 'ಬ್ಯಾ, ಬ್ಯಾ' ಅಂತ ಅರಚತೊಡಗಿತು. ಕಾಡಿನ ಹುಲಿ ಆ ಹುಲ್ಲು ತಿನ್ನೋ ಹುಲಿಯನ್ನು ನೀರಿನ ಹತ್ತಿರಕ್ಕೆ ಎಳೆದುಕೊಂಡುಹೋಗಿ ಹೇಳಿತು: 'ಅಲ್ಲಿ ನೋಡು, ನೀರಿನಲ್ಲಿ ನಿನ್ನ ಮುಖ ನೋಡು. ಅದು ನನ್ನದರ ಹಾಗೇ ಇದೆ. ಇಲ್ಲಿ ಒಂದು ಚೂರು ಮಾಂಸದ ತುಂಡು ಇದೆ. ತಿನ್ನು ಇದನ್ನ.' ಹೀಗೆಂದು ಹೇಳಿ ಬಲಾತ್ಕರಿಸಿ ಅದರ ಗಂಟಲೊಳಕ್ಕೆ ಆ ಮಾಂಸದ ತುಂಡನ್ನು ಹಾಕಿತು. ಅದು ಏನು ಮಾಡಿದರೂ ತಿನ್ನದೆ ಸುಮ್ಮನೆ 'ಬ್ಯಾ, ಬ್ಯಾ' ಅಂತ ಕಿರಿಚುತ್ತಲೇ ಇತ್ತು. ಕ್ರಮೇಣ ಅದಕ್ಕೆ ರಕ್ತದ ರುಚಿ ಸಿಕ್ಕಿ ಮಾಂಸವನ್ನು ತಿನ್ನಲಾರಂಭಿಸಿತು. ಆಗ ಕಾಡಿನ ಹುಲಿ ಹೇಳಿತು: 'ನೋಡಿದೆಯೊ ಈಗ ನನಗೂ ನಿನಗೂ ಯಾವ ಭೇದವೂ ಇಲ್ಲದಿರುವುದನ್ನ. ಈಗ ಬಾ, ಕಾಡಿಗೆ ನನ್ನೊಡನೆಯೇ ಬಂದುಬಿಡು.'

"ಆದ್ದರಿಂದ ಗುರುವಿನ ಕೃಪೆ ದೊರೆತುದೇ ಆದರೆ ಇನ್ನು ಹೆದರಬೇಕಾಗಿಲ್ಲ. ಆತ ತಿಳಿಸಿಕೊಡುತ್ತಾನೆ ನೀನು ಯಾರು, ನಿನ್ನ ಸ್ವರೂಪ ಏನು ಎಂಬುದನ್ನ.

"ಒಂದು ಸ್ವಲ್ಪ ಸಾಧನೆ ಮಾಡಿದರೇ ಗುರು ಎಲ್ಲವನ್ನೂ ವಿವರಿಸಿ ತಿಳಿಸಿಕೊಟ್ಟುಬಿಡುತ್ತಾನೆ. ಆಗ ಸಾಧಕನಿಗೇ ಗೊತ್ತಾಗುತ್ತದೆ ಯಾವುದು ಸತ್ಯವಾದ್ದು, ಯಾವುದು ಅಸತ್ಯವಾದ್ದು ಎಂಬುದು. ಭಗವಂತನೇ ಸತ್ಯ, ಈ ಜಗತ್ತು ಅನಿತ್ಯ.

"ಒಂದು ರಾತ್ರಿ ಒಬ್ಬ ಬೆಸ್ತ ಇನ್ನೊಬ್ಬನ ತೋಟಕ್ಕೆ ಹೇಳದೆ ಕೇಳದೆ ನುಗ್ಗಿ ಮೀನಿಗಾಗಿ ಅಲ್ಲಿದ್ದ ಕೊಳಕ್ಕೆ ತನ್ನ ಮೀನು ಬಲೆಯನ್ನು ಬೀಸಿದ. ಅದು ತೋಟದ ಯಜಮಾನನಿಗೆ ಗೊತ್ತಾಗಿ ಆತ ತೋಟದ ಸುತ್ತಲೂ ಆಳುಗಳನ್ನು ನಿಲ್ಲಿಸಿ ಪಂಜು-ಗಿಂಜು ಹೊತ್ತಿಸಿಕೊಂಡು ಆ ಕಳ್ಳನನ್ನು ತೋಟದಲ್ಲಿ ಹುಡುಕಲಾರಂಭಿಸಿದ. ಇದನ್ನು ಕಂಡು ಆ ಬೆಸ್ತ ಮೈಗೆಲ್ಲಾ ಬೂದಿ ಬಳಿದುಕೊಂಡು ಸಾಧುವಿನ ವೇಷ ಧರಿಸಿ ಒಂದು ಮರದ

ಕೆಳಗೆ ಕುಳಿತುಕೊಂಡುಬಿಟ್ಟ. ಆ ತೋಟದ ಯಜಮಾನ ಮತ್ತು ಆಳುಗಳು ಇಡೀ ತೋಟದಲ್ಲೆಲ್ಲಾ ಎಷ್ಟೊಂದು ಹುಡುಕಿದರೂ ಬೆಸ್ತ-ಗಿಸ್ತ ಯಾರೂ ಕಾಣಬರಲಿಲ್ಲ. ಒಬ್ಬ ಸಾಧು ಮೈಗೆ ಬೂದಿ ಬಳಿದುಕೊಂಡು ಒಂದು ಮರದ ಕೆಳಗೆ ಧ್ಯಾನಸ್ಥನಾಗಿದ್ದುದು ಮಾತ್ರ ಅವರ ಕಣ್ಣಿಗೆ ಬಿತ್ತು. ಮಾರನೆ ದಿನ ನೆರೆಹೊರೆಯಲ್ಲೆಲ್ಲಾ ಸುದ್ದಿ ಹಬ್ಬಿತು, ಒಬ್ಬ ದೊಡ್ಡ ಸಾಧು ಆ ತೋಟಕ್ಕೆ ಬಂದಿದಾನೆ ಎಂಬುದಾಗಿ. ಅನೇಕ ಜನ ಫಲಪುಷ್ಪಾದಿಗಳನ್ನೂ, ಸಿಹಿ ತಿಂಡಿಗಳನ್ನೂ ತೆಗೆದುಕೊಂಡು ಬಂದು ಆತನಿಗೆ ಅರ್ಪಿಸಿ ಪ್ರಣಾಮಮಾಡತೊಡಗಿದರು. ಅನೇಕರು ದುಡ್ಡು-ಕಾಸನ್ನೂ ಸಾಧುವಿಗೆ ಅರ್ಪಿಸತೊಡಗಿದರು. ಆ ಬೆಸ್ತ ಭಾವಿಸಲಾರಂಭಿಸಿದ: 'ಏನಾಶ್ಚರ್ಯ ಇದು! ನಾನು ನಿಜವಾದ ಸಾಧು ಅಲ್ಲ. ಆದರೂ ಜನ ನನಗೆ ಇಷ್ಟೊಂದು ಭಕ್ತಿ ತೋರಿಸುತ್ತಿದಾರೆ. ನಾನು ನಿಜವಾದ ಸಾಧು ಆದುದೇ ಆದರೆ ಖಂಡಿತವಾಗಿ ನನಗೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲವೇ ಇಲ್ಲ.'

"ಬೂಟಾಟಿಕೆಯ ಸಾಧನೆಯಿಂದಲೇ ಇಷ್ಟೊಂದು ಆತ್ಮಜಾಗೃತಿ ಉಂಟಾಗಿಬಿಡುವಾಗ, ಇನ್ನು ನಿಜವಾದ ಸಾಧನೆಯಿಂದ ಮಾತೇ ಎತ್ತಬೇಕಾಗಿಲ್ಲ. ಯಾವುದು ಸತ್ಯವಾದ್ದು ಯಾವುದು ಅಸತ್ಯವಾದ್ದು ಎಂಬುದು ಗೊತ್ತಾಗಿಬಿಡುತ್ತದೆ. ಭಗವಂತನೇ ಸತ್ಯ ಈ ಜಗತ್ತು ಅನಿತ್ಯ."

ಒಬ್ಬ ಭಕ್ತ ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: "ಈ ಜಗತ್ತು ಅನಿತ್ಯವಾದ್ದೆ. ಬೆಸ್ತನೇನೊ ಈ ಪ್ರಾಪಂಚಿಕ ಜೀವನವನ್ನು ತ್ಯಜಿಸಿ ಹೊರಟುಹೋದ. ಆದರೆ ಈ ಪ್ರಾಪಂಚಿಕ ಜೀವನ ನಡಸಿಕೊಂಡು ಹೋಗುತ್ತಿರುವವರ ಗತಿ ಏನಾಗಬೇಕು? ಅವರೂ ಅದನ್ನು ತ್ಯಜಿಸಬೇಕಾಗುವುದೇ?" ಪರಮಹಂಸರು ಅಹೇತುಕಕೃಪಾಸಿಂಧು. ಕೃಪಾಪೂರಿತ ಹೃದಯದಿಂದ ಹೇಳತೊಡಗಿದರು: "ಒಬ್ಬ ಗುಮಾಸ್ತನಿಗೆ ಜೈಲಾಯಿತು ಅಂತ ಇಟ್ಟುಕೊ. ಅಲ್ಲಿ ಆತ ಜೈಲಿನ ಜೀವನ ನಡಸಿಕೊಂಡು ಹೋಗಬೇಕಾಗುತ್ತದೆ. ಆದರೆ ಜೈಲಿನಿಂದ ಬಿಡುಗಡೆಹೊಂದಿ ಹಿಂದಿರುಗಿ ಬಂದ ಮೇಲೆ ಆತ 'ತಕತಕಥೈ' ಅಂತ ರಸ್ತೆಯಲ್ಲೆಲ್ಲಾ ಕುಣಿದಾಡುತ್ತ ಸುತ್ತಾಡುವನೇ? ಎಂದಿಗೂ ಇಲ್ಲ. ಮತ್ತೆ ಎಂದಿನ ಹಾಗೆ ಗುಮಾಸ್ತನ ಕೆಲಸ ಮಾಡಿಕೊಂಡೇ ಇರುತ್ತಾನೆ. ಗುರುವಿನ ಕೃಪೆಯಿಂದ ಬ್ರಹ್ಮಜ್ಞಾನ ದೊರೆತನಂತರ ಈ ಜಗತ್ತಿನಲ್ಲಿ ಜೀವನ್ಮುಕ್ತನಾಗಿ ಇರಲು ಸಾಧ್ಯವಾಗು-

ತ್ತದೆ.'' ಹೀಗೆಂದು ಹೇಳಿ ಪರಮಹಂಸರು ಸಂಸಾರಿಗಳಿಗೆ ಅಭಯ ವನ್ನಿತ್ತರು.

ಮಣಿಲಾಲ: "ಆಹ್ನಿಕಗಳನ್ನು ಮಾಡುವಾಗ ನಾನು ಭಗವಂತನನ್ನು ಎಲ್ಲಿ ಧ್ಯಾನಮಾಡಲಿ?''

ಶ್ರೀರಾಮಕೃಷ್ಣರು: "ಹೃದಯ ಬಹಳ ಪ್ರಶಸ್ತವಾದ ಸ್ಥಳ. ಅಲ್ಲಿ ಧ್ಯಾನಮಾಡು.''

ಮಣಿಲಾಲ ಬ್ರಾಹ್ಮಸಮಾಜಕ್ಕೆ ಸೇರಿದವನಾದ್ದರಿಂದ ನಿರಾಕಾರ ವಾದಿ. ಆತನನ್ನು ಸಂಬೋಧಿಸಿ ಪರಮಹಂಸರು ಹೇಳುತ್ತಿದಾರೆ: "ಕಬೀರ ಹೇಳುತ್ತಿದ್ದ: 'ಸಾಕಾರ ನನ್ನ ತಾಯಿ, ನಿರಾಕಾರ ನನ್ನ ತಂದೆ ಯಾರನ್ನ ತೆಗಳೋದು? ಯಾರನ್ನ ಹೊಗಳೋದು? ತಕ್ಕಡಿಯ ಎರಡು ಬಟ್ಟಲೂ ಒಂದೇ ಸಮತೂಕ.' ಹಲಧಾರಿ ಹಗಲುವೇಳೆ ಸಾಕಾರದ ಮೇಲೆ, ರಾತ್ರಿ ವೇಳೆ ನಿರಾಕಾರದ ಮೇಲೆ ಧ್ಯಾನಮಾಡುತ್ತಿದ್ದ. ಯಾವ ಭಾವವನ್ನು ಅನುಸರಿಸಿದರೂ ನಿಜವಾದ ಶ್ರದ್ಧೆ ಇತ್ತು ಎಂದರೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಸಾಕಾರದಲ್ಲಾದರೂ ಶ್ರದ್ಧೆ ಇರಲಿ, ನಿರಾಕಾರ ದಲ್ಲಾದರೂ ಶ್ರದ್ಧೆ ಇರಲಿ, ಆದರೆ ಅದು ಯಥಾರ್ಥವಾದ್ದಾಗಿರಬೇಕು. ಶಂಭುಮಲ್ಲಿಕ ಬಾಗ್‌ಬಜಾರಿನಿಂದ ಹೊರಟು ದಕ್ಷಿಣೇಶ್ವರದಲ್ಲಿದ್ದ ತನ್ನ ತೋಟದ ಮನೆಗೆ ದಿನವೂ ನಡೆದುಬರುತ್ತಿದ್ದ. ಒಂದು ದಿನ ಒಬ್ಬ ಸ್ನೇಹಿತ ಆತನಿಗೆ ಹೇಳಿದ: 'ಅಲ್ಲಿಂದ ಇಲ್ಲಿಗೆ ಬಹಳ ದೂರ. ಗಾಡಿ ಮಾಡಿಕೊಂಡು ಬರಬಾರದೆ? ದಾರಿಯಲ್ಲಿ ಏನಾದರೂ ಆಕಸ್ಮಿಕ ಸಂಭವಿಸಬಹುದು.' ಆಗ ಶಂಭುಮಲ್ಲಿಕ ರೇಗಿ ಕೆಂಪು ಮುಖ ಮಾಡಿಕೊಂಡು ಹೇಳಿದ: 'ಏನಂದೆ? ನಾನು ಭಗವಂತನ ನಾಮ ಜಪಿಸಿ ಮನೆಯಿಂದ ಹೊರಡುತ್ತೇನೆ! ಮತ್ತೆ ಆಕಸ್ಮಿಕ?' ಶ್ರದ್ಧೆಯಿಂದಲೇ ಎಲ್ಲವನ್ನೂ ದೊರಕಿಸಿಕೊಳ್ಳಬಹುದು. ನನಗೆ ನಾನೇ ಹೇಳಿಕೊಳ್ಳುತ್ತಿದ್ದೆ: 'ಆ ನಿರ್ದಿಷ್ಟ ವ್ಯಕ್ತಿಯನ್ನು ನಾನು ಸಂಧಿಸಲು ಸಾಧ್ಯವಾದರೆ, ಆ ಖಜಾಂಚಿ ಬಂದು ನನ್ನನ್ನು ನೋಡುವುದಾದರೆ ಆಗ ನಾನು ನನ್ನ ಅನುಭವಗಳೆಲ್ಲಾ ಸತ್ಯ ಅಂತ ತಿಳಿದುಕೊಳ್ಳುತ್ತೇನೆ' ಎಂದು. ನಾನು ಭಾವಿಸಿದ ಹಾಗೇ ಅದು ಆಗುತ್ತಿತ್ತು.''

ಮಾಸ್ಟರ್, ಆಂಗ್ಲರ ತರ್ಕ ಓದಿದಾನೆ. ತರ್ಕ ದೋಷದ ಅಧ್ಯಾಯ ದಲ್ಲಿ ಆತ ಓದಿದ್ದ, ಬೆಳಗಿನ ಜಾವ ಆಗುವ ಸ್ವಪ್ನ ನಿಜವಾಗುತ್ತೆ ಎಂಬು ದನ್ನ ಮೂಢನಂಬಿಕೆಯುಳ್ಳ ಜನ ಮಾತ್ರ ನಂಬುತ್ತಾರೆ ಎಂಬುದಾಗಿ.

ಅದಕ್ಕಾಗಿ ಆತ ಪರಮಹಂಸರನ್ನು ಕೇಳುತ್ತಿದಾನೆ: "ನಿಮ್ಮ ಭಾವನೆಗೆ ವ್ಯತಿರಿಕ್ತವಾಗಿ ಯಾವುದೂ ಆಗೇ ಇಲ್ಲವೇ?"

ಶ್ರೀರಾಮಕೃಷ್ಣರು: "ಇಲ್ಲ. ಆಗ ಎಲ್ಲವೂ ಹಾಗೇ ಆಗುತ್ತಿತ್ತು. ಆ ಸಮಯದಲ್ಲಿ ಭಗವನ್ನಾಮ ಜಪಿಸಿ ಇಂಥಿಂಥದು ಆಗುವುದೆಂದು ದೃಢ ವಿಶ್ವಾಸವಿಡುತ್ತಿದ್ದೆ. ಅದು ಹಾಗೇ ತಪ್ಪದೆ ಆಗಿಬಿಡುತ್ತಿತ್ತು. (ಮಣಿ-ಲಾಲನಿಗೆ) ಆದರೆ ನೋಡು, ಮನುಷ್ಯ ಸರಳ, ಉದಾರ ಆಗದೆ ಇದ್ದ ಎಂದರೆ ಈ ವಿಶ್ವಾಸ ಉಂಟಾಗದು. ಮೂಳೆಬಿಟ್ಟುಕೊಂಡಿರುವವರು, ಗುಳಿಗಣ್ಣಿನವರು, ಮೆಳ್ಳೆಗಣ್ಣಿನವರು, ಇವೇ ತರದ ಇನ್ನೂ ಅನೇಕ ವಿಧದ ಲಕ್ಷಣಗಳುಳ್ಳವರು ಇವರಿಗೆ ಸ್ವಾಭಾವಿಕವಾಗಿ ವಿಶ್ವಾಸ ಉಂಟಾಗದು. ಎಲ್ಲ ದಿಕ್ಕುಗಳಿಂದಲೂ ಅಪಶಕುನಗಳೇ ಆಗುತ್ತಿದ್ದರೆ ಮನುಷ್ಯ ಏನು ತಾನೆ ಮಾಡಬಲ್ಲ?"

ಮುಚ್ಚಂಜೆಯಾಯಿತು. ದಾಸಿ ಬಂದು ಕೊಠಡಿಗೆ ಧೂಪ ಹಾಕಿ ಹೋದಳು. ಮಣಿಲಾಲ ಮತ್ತು ಇನ್ನು ಕೆಲವರು ಕಲ್ಕತ್ತಕ್ಕೆ ಹೊರಟು ಹೋದರು. ಮಾಸ್ಟರ್ ಮತ್ತು ರಾಖಾಲ ಕೊಠಡಿಯಲ್ಲಿ ಕುಳಿತಿದಾರೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಭಗವತಿಯನ್ನು ಧ್ಯಾನಮಾಡುತ್ತಿದಾರೆ. ಕೊಠಡಿ ನಿಶ್ಶಬ್ದವಾಗಿದೆ.

ಸ್ವಲ್ಪ ಹೊತ್ತಾದನಂತರ ರಾಣಿ ರಾಸಮಣಿಯ ಮನೆಯ ಭಗವತಿ ಎಂಬ ಹೆಸರಿನ ಒಬ್ಬ ದಾಸಿ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದಳು. ಪರಮಹಂಸರು ಅವಳಿಗೆ ಕುಳಿತುಕೊಳ್ಳುವಂತೆ ಸಂಜ್ಞೆಮಾಡಿದರು. ಪರಮಹಂಸರಿಗೆ ಬಹಳ ಹಿಂದಿನಿಂದಲೂ ಆಕೆಯ ಪರಿಚಯ ಇದೆ. ಆಕೆ ತನ್ನ ಯೌವನದಲ್ಲಿ ಅಶ್ಲೀಲ ಜೀವನವನ್ನು ನಡಸಿದ್ದಳು; ಆದರೆ ಪರಮಹಂಸರು ದಯಾಸಾಗರರು, ಪತಿತಪಾವನರು. ಈಗ ಆಕೆಯೊಡನೆ ಹಿಂದಿನ ವಿಷಯವಾಗಿ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಈಗ ನಿನಗೆ ಆಗಲೆ ವಯಸ್ಸಾಗಿಬಿಟ್ಟಿದೆ. ನೀನು ಸಂಪಾದಿಸಿದ ಹಣವನ್ನೆಲ್ಲ ಸಾಧು ವೈಷ್ಣವರ ಸೇವೆಗಾಗಿ ಉಪಯೋಗಿಸುತ್ತಾ ಇದೀಯೆ ತಾನೆ?"

ಭಗವತಿ ಕಿಂಚಿತ್ ನಕ್ಕು: "ಅದನ್ನ ನಾನು ಹೇಗೆ ಹೇಳಲಿ?"

ಶ್ರೀರಾಮಕೃಷ್ಣರು: "ಕಾಶಿ, ಬೃಂದಾವನ ಇವಕ್ಕೆಲ್ಲ ಹೋಗಿ ಆಗಿದೆ ತಾನೆ?"

ಭಗವತಿ ಸ್ವಲ್ಪ ನಾಚಿ: "ಅದನ್ನ ನಾನು ಹೇಗೆ ಹೇಳಲಿ? ಒಂದು ಸ್ನಾನಘಟ್ಟ ಮಾಡಿಸಿಕೊಟ್ಟಿದೇನೆ. ಅದರ ಮೇಲೆ ನನ್ನ ಹೆಸರು ಕೆತ್ತಿದೆ."

ಶ್ರೀರಾಮಕೃಷ್ಣರು: "ನಿಜವಾಗೂ!"

ಭಗವತಿ: "ಹೌದು. 'ಶ್ರೀಮತಿ ಭಗವತಿ ದಾಸಿ' ಎಂಬುದಾಗಿ ನನ್ನ ಹೆಸರು ಬರೆದಿದೆ."

ಶ್ರೀರಾಮಕೃಷ್ಣರು ಸ್ವಲ್ಪ ನಕ್ಕು: "ಭೇಷ್! ಭೇಷ್!"

ಭಗವತಿಗೆ ಸ್ವಲ್ಪ ಧೈರ್ಯ ಬಂದು ಪರಮಹಂಸರ ಪಾದ ಮುಟ್ಟಿ ಪ್ರಣಾಮಮಾಡಿಬಿಟ್ಟಳು. ಚೇಳು ಕುಟುಕಿದವರ ಹಾಗೆ ಪರಮಹಂಸರು ಎದ್ದು ನಿಂತು ಕೂಗಿಕೊಂಡರು: "ಗೋವಿಂದ! ಗೋವಿಂದ!" ಎಂಬುದಾಗಿ. ಅವರ ಕೊಠಡಿಯ ಒಂದು ಮೂಲೆಯಲ್ಲಿ ದೊಡ್ಡದೊಂದು ಗುಡಾಣದ ತುಂಬ ಗಂಗಾನದಿ ನೀರು ತುಂಬಿರುತ್ತಿತ್ತು. ಉಸಿರು ಸಿಕ್ಕಿಕೊಂಡವರ ಹಾಗೆ ಎದ್ದು ಅಲ್ಲಿಗೆ ಓಡಿಹೋಗಿ ಆ ದಾಸಿ ಮುಟ್ಟಿದ ಜಾಗವನ್ನು ಗಂಗೆಯ ನೀರಿನಿಂದ ತೊಳೆಯತೊಡಗಿದರು. ಭಕ್ತರು ವಿಸ್ಮಯಗೊಂಡು ಈ ದೃಶ್ಯವನ್ನು ನೋಡುತ್ತಿದಾರೆ. ಭಗವತಿ ಸತ್ತವಳ ಹಾಗೆ ಕುಳಿತಿದಾಳೆ.

ಶ್ರೀರಾಮಕೃಷ್ಣರು ಆಕೆಯನ್ನು ಸಮಾಧಾನಪಡಿಸಿ ಕರುಣೆಯಿಂದ ಹೇಳುತ್ತಿದಾರೆ: "ನೀನು ಇನ್ನು ಮೇಲೆ ದೂರದಿಂದಲೇ ಪ್ರಣಾಮಮಾಡಿಬಿಡು." ಆಕೆಗೆ ಉಂಟಾದ ಮಾನಸಿಕ ವ್ಯಥೆಯನ್ನು ನಿರ್ಮೂಲಗೊಳಿಸಲು ಪರಮಹಂಸರು ತಾಯಿಯ ಹೃದಯದಿಂದ ಆಕೆಗೆ ಹೇಳುತ್ತಿದಾರೆ: "ಈ ಕೆಲವು ಹಾಡುಗಳನ್ನು ಕೇಳು."

ಈಗ ಪರಮಹಂಸರು ಭಗವತಿಯ ಸಂಬಂಧವಾಗಿ ಹಾಡುತ್ತಿದಾರೆ:

ಸಾಗುತಿಹುದು ಚಿತ್ತಭೃಂಗ
ಕಾಳೀಪದನೀಲಕಮಲ ಮಧುಪಾನದ ಆಸೆಗೆ! . . . (ಉ. ೧೩೫)

ಬಳಿಕ ಹಾಡುತ್ತಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯು ಭರದಿ . . .
(ಉ. ೯೭೬)

ಮತ್ತೆ :

ನಿನ್ನೊಳಗೇ ನೀನಿರು ಮನವೇ,
ಅನ್ಯಾಶ್ರಯದೊಳಗರಸದಿರು . . . . ( ಉ. ೧೭೧ )

೫ ನೆ ಜೂನ್ ೧೮೮೩, ಜ್ಯೇಷ್ಠ ಅಮಾವಾಸ್ಯೆ, ಮಂಗಳವಾರ.

ದಕ್ಷಿಣೇಶ್ವರ ದೇವಾಲಯದಲ್ಲಿ ರಾಖಾಲ ಹಾಜರಾ ಪರಮಹಂಸ ರೊಡನೇ ಇದ್ದುಕೊಂಡಿದಾರೆ. ಮಾಸ್ಟರೂ ಕಳೆದ ಭಾನುವಾರದಿಂದ ಇಲ್ಲೇ ಇದಾನೆ. ಇದು ಬಿಡಿ ದಿನವಾದ್ದರಿಂದ ಎಲ್ಲೋ ಕೆಲವು ಮಂದಿ ಭಕ್ತರು ಬಂದಿದಾರೆ. ಸಾಮಾನ್ಯವಾಗಿ ಭಾನುವಾರ ಮತ್ತು ರಜಾ ದಿನ ಗಳಲ್ಲಿ ಜನ ಹೆಚ್ಚಾಗಿ ಬರುತ್ತಾರೆ.

ಪರಮಹಂಸರು ಮಧ್ಯಾಹ್ನದ ಊಟವಾದನಂತರ ತಮ್ಮ ಪ್ರೇಮೋ ನ್ಮಾದ ಅವಸ್ಥೆಯ ಸಂಬಂಧವಾಗಿ ಇಂದೂ ಹೇಳುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಏನೇನು ಅವಸ್ಥೆ ಬಂದು ಹೋದುವು! ಆಗ ನಾನು ಇಲ್ಲಿ ಊಟಮಾಡುತ್ತಿರಲಿಲ್ಲ. ವರಾಹನಗರ ದಲ್ಲೋ, ದಕ್ಷಿಣೇಶ್ವರದಲ್ಲೋ, ಎಡೇದಲ್ಲೋ ಯಾರಾದರೂ ಒಬ್ಬ ಬ್ರಾಹ್ಮಣನ ಮನೆಗೆ ಹೋಗಿ ಝಾಂಡ ಹಾಕುತ್ತಿದ್ದೆ. ಹಾಗೆ ಹೋದಾಗ ಲೆಲ್ಲಾ ಸಾಮಾನ್ಯವಾಗಿ ಅದು ಅವೇಳೆಯೇ ಆಗಿರುತ್ತಿತ್ತು. ಮನೆಯ ಒಳಕ್ಕೆ ಹೋಗಿ ಒಂದು ಮಾತೂ ಆಡದೆ ಸುಮ್ಮನೆ ಕುಳಿತಿರುತ್ತಿದ್ದೆ. ಮನೆ ಯವರೇನಾದರು ನಾನೇಕೆ ಬಂದಿದೇನೆ ಎಂದು ಕೇಳಿದರೆ ಹೇಳಿಬಿಡುತ್ತಿದ್ದೆ: 'ಊಟ ಬೇಕು' ಎಂಬುದಾಗಿ. ಇನ್ನೇನೂ ಮಾತಾಡುತ್ತಿರಲಿಲ್ಲ. ಒಂದೊಂದು ದಿನ ಆಲಮ್‌ಬಜಾರಿನ ರಾಮಚಟ್ಟೋಪಾಧ್ಯಾಯನ ಮನೆಗೆ ಹೋಗುತ್ತಿದ್ದೆ. ಇನ್ನು ಕೆಲವು ದಿನ ದಕ್ಷಿಣೇಶ್ವರದ ಚೌಧುರಿಯ ಮನೆಗೆ ಹೋಗುತ್ತಿದ್ದೆ. ಆದರೆ ಚೌಧುರಿಯ ಮನೆ ಊಟ ನನಗೆ ರುಚಿಸುತ್ತಿರಲಿಲ್ಲ.

"ಒಂದು ದಿನ ನನ್ನನ್ನು ದೇವೇಂದ್ರನಾಥಠಾಕುರನ ಮನೆಗೆ ಕರೆದು ಕೊಂಡುಹೋಗುವಂತೆ ಮಥುರಬಾಬುವನ್ನು ಪಟ್ಟಾಗಿ ಹಿಡಿದೆ. ಆತನಿಗೆ ಹೇಳಿದೆ: 'ದೇವೇಂದ್ರ ಭಗವದ್ಭಕ್ತ. ಆತನನ್ನು ನೋಡಬೇಕು ಅಂತ ಅನಿಸುತ್ತಿದೆ. ಕರೆದುಕೊಂಡುಹೋಗುತ್ತೀಯ ನನ್ನನ್ನ?' ಮಥುರ ಬಾಬುವಿಗೆ ತನ್ನ ದೊಡ್ಡಸ್ತಿಕೆಯ ಅಭಿಮಾನ ಬಹಳ. ಆತ ಆಹ್ವಾನವಿಲ್ಲದೆ ಇನ್ನೊಬ್ಬರ ಮನೆಗೆ ಹೋಗೋ ಬಗೆ ಹೇಗೆ? ಮೊದಲು ಸ್ವಲ್ಪ ಹಿಂಜರಿದ.

ಬಳಿಕ ಹೇಳಿದ: 'ನಾನೂ ಅವನೂ ಹಿಂದೆ ಒಂದೇ ಕ್ಲಾಸಿನಲ್ಲಿ ಓದಿದವರು. ಆದ್ದರಿಂದ ಹೊರಡಿ, ಕರೆದುಕೊಂಡುಹೋಗುತ್ತೇನೆ.'

"ಒಂದು ದಿನ ಯಾರೊ ನನ್ನ ಕಿವಿಗೆ ಹಾಕಿದರು ಬಾಗ್ ಬಜಾರಿನ ಸೇತುವೆ ಹತ್ತಿರ ದೀನಮುಖ್ಯೋಪಾಧ್ಯಾಯ ಎಂಬ ಹೆಸರಿನ ಒಬ್ಬ ಭಕ್ತ ವಾಸವಾಗಿದಾನೆ ಎಂಬುದಾಗಿ. ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗ ಬೇಕು ಎಂಬುದಾಗಿ ಮತ್ತೆ ಮಥುರಬಾಬುವನ್ನು ಹಿಡಿದೆ. ಮಥುರಬಾಬು ವಿಧಿಯಿಲ್ಲದೆ ನನ್ನನ್ನು ಅಲ್ಲಿಗೆ ಕರೆದುಕೊಂಡುಹೋದ. ಆತನ ಮನೆ ಬಹಳ ಪುಟ್ಟದು. ದೊಡ್ಡದೊಂದು ಗಾಡಿ ಮಾಡಿಕೊಂಡು ಒಬ್ಬ ದೊಡ್ಡ ಮನುಷ್ಯ ಅವರ ಮನೆಗೆ ಬಂದಿರುವುದನ್ನು ನೋಡಿ ಅವರೂ ದಿಗ್ಭ್ರಮೆ ಹಿಡಿದವರಾಗಿ ತೋರಿಬಂದರು; ನಮಗೂ ಮುಖ ಒಂದು ಸ್ವಲ್ಪ ಸಣ್ಣಗಾಯಿತು. ಸಾಲದು ದಕ್ಕೆ ಅವರ ಮನೆಯಲ್ಲಿ ಉಪನಯನ ಬೇರೆ. ಎಲ್ಲಿ ಕೂರಿಸಿಯಾರು ನಮ್ಮನ್ನ? ನಾವು ಒಂದು ಪಕ್ಕದ ಕೊಠಡಿಗೆ ಪ್ರವೇಶಮಾಡುವುದರಲ್ಲಿ ದ್ದೆವು. ಹತ್ತಿರವಿದ್ದವರು ಕೂಗಿಕೊಂಡರು: 'ಒಳಗೆ ಹೆಂಗಸರು. ಹೋಗ ಬೇಡಿ.' ಬಹಳವಾಗಿ ಮುಖ ಚಿಕ್ಕದಾಯಿತು. ಹಿಂದಿರುಗುವಾಗ ಮಥುರ ಬಾಬು ಹೇಳಿದ: 'ಬಾಬಾ, ನೀವು ಹೇಳಿದ ಹಾಗೆ ನಾನು ಇನ್ನೆಂದಿಗೂ ಕೇಳುವುದಿಲ್ಲ.' ನಾನು ಸುಮ್ಮನೆ ನಕ್ಕುಬಿಟ್ಟೆ.

"ಓ, ಏನವಸ್ಥೆ ಬಂದುಹೋಯಿತಪ್ಪ! ಒಮ್ಮೆ ಕುಮಾರಸಿಂಗ್ ಎಂಬುವನು ಸಾಧುಗಳಿಗೆ ಭೋಜನ ಏರ್ಪಡಿಸಿ ನನ್ನನ್ನೂ ಆಹ್ವಾನಿಸಿದ. ಅಲ್ಲಿಗೆ ಹೋಗಿ ನೋಡುತ್ತೇನೆ, ಅನೇಕ ಜನ ಸಾಧುಗಳು ಬಂದುಬಿಟ್ಟಿದಾರೆ. ನಾನು ಅಲ್ಲಿ ಕುಳಿತುಕೊಂಡನಂತರ ನಾನಾರು, ಎಂತು ಎಂಬುದಾಗಿ ಸಾಧು ಗಳು ನನ್ನ ಮೇಲೆ ಪ್ರಶ್ನೆಗಳ ಸುರಿಮಳೆಯನ್ನೇ ಕರೆದರು. ಆಗ ಅನಿಸಿತು, ಅಲ್ಲಿಂದ ಎದ್ದುಹೋಗಿ ಬೇರೆ ಕಡೆ ಒಂಟಿಯಾಗಿ ಕುಳಿತುಕೊಂಡು ಬಿಡೋಣವೆ ಎಂದು. ಇಷ್ಟೊಂದು ಸುದ್ದಿ ಸಮಾಚಾರವೆಲ್ಲ ಇವರಿಗೇಕೆ ಎಂದನಿಸಿತು. ಎಲೆ ಹಾಕಿದೊಡನೇ ಎಲ್ಲರೂ ಊಟಕ್ಕೆ ಕುಳಿತರು. ಆಪೋಶನ ಮಂತ್ರ ಹೇಳುವುದಕ್ಕೆ ಮುಂಚೆಯೇ ನಾನು ಊಟಮಾಡಲು ಶುರುಮಾಡಿದೆ. ಸಾಧುಗಳಲ್ಲಿ ಅನೇಕರು ಹೇಳುತ್ತಿದ್ದುದು ಕಿವಿಗೆ ಬಿತ್ತು: 'ಛೆ! ಎಲ್ಲಿ ಮನುಷ್ಯ ಈತ?'"

ಘಂಟೆ ಸಾಯಂಕಾಲ ಐದು. ಪರಮಹಂಸರು ತಮ್ಮ ಕೊಠಡಿಯ ವರಾಂಡದ ಹಂತಗಳ ಮೇಲೆ ಕುಳಿತಿದಾರೆ. ರಾಖಾಲ, ಹಾಜರಾ,

ಮಾಸ್ಟರ್ ಅವರ ಹತ್ತಿರ ಕುಳಿತಿದಾರೆ. ಹಾಜರಾನ ಭಾವ "ಸೋಽಹಮ್", ಎಂದರೆ "ನಾನೇ ಬ್ರಹ್ಮ" ಎಂಬ ಭಾವ.

ಶ್ರೀರಾಮಕೃಷ್ಣರು ಹಾಜರಾನಿಗೆ: "ಹೌದು, ಭಗವಂತನೇ ಆಸ್ತಿಕನ ನಾಸ್ತಿಕನ, ಒಳ್ಳೆಯದರ ಕೆಟ್ಟದರ, ಸತ್‌ನ ಅಸತ್‌ನ ರೂಪಗಳಲ್ಲಿ ವ್ಯಕ್ತವಾಗಿದಾನೆ; ಜಾಗ್ರತ್ ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿಯೂ ಆತನೇ ಇದಾನೆ; ಮತ್ತೆ ಆತ ಇವುಗಳೆಲ್ಲಕ್ಕೂ ಅತೀತ ಎಂಬುವ ಅನುಭವ ದೊರೆತುದೇ ಆದರೆ ಎಲ್ಲಾ ಗೊಂದಲಗಳೂ, ತೊಡಕುಗಳೂ ಕೊನೆಗಾಣುತ್ತವೆ.

"ಒಬ್ಬ ರೈತನಿಗೆ ಮಕ್ಕಳೇ ಇಲ್ಲದೆ ಇದ್ದು ಮುಪ್ಪಿನಲ್ಲಿ ಒಂದು ಗಂಡು ಮಗು ಆಯಿತು. ಮಗುವನ್ನು ಬಹಳ ಪ್ರೀತಿಯಿಂದ ಸಾಕಲಾರಂಭಿಸಿದ. ಆ ಮಗು ಕ್ರಮೇಣ ದೊಡ್ಡ ಹುಡುಗನಾಗಿ ಬೆಳೆಯಿತು. ಒಂದು ದಿನ ರೈತ ಹೊಲದಲ್ಲಿ ಕೆಲಸ ಮಾಡುತ್ತಿದ್ದಾಗ ಒಬ್ಬ ಬಂದು ತಿಳಿಸಿದ: ನಿಮ್ಮ ಹುಡುಗನ ದೇಹಸ್ಥಿತಿ ಚಿಂತಾಜನಕ ಸ್ಥಿತಿಯಲ್ಲಿದೆ, ಆತ ಇನ್ನೇನು ಯಮಪುರಿಗೆ ಹೊರಡುವುದರಲ್ಲಿದಾನೆ ಎಂಬುದಾಗಿ. ಮನೆಗೆ ಹಿಂದಿರುಗಿ ಬಂದು ನೋಡುತ್ತಾನೆ, ಹುಡುಗ ಆಗಲೇ ಸತ್ತುಹೋಗಿಬಿಟ್ಟಿದಾನೆ. ಹೆಂಡತಿ ಎದೆ ಬಡಿದುಕೊಂಡು ಸುಮ್ಮನೆ ಅಳುತ್ತಿದಾಳೆ, ಆದರೆ ರೈತನ ಕಣ್ಣಿನಲ್ಲಿ ಮಾತ್ರ ಒಂದು ತೊಟ್ಟು ನೀರೂ ಇಲ್ಲ. ಆಕೆ ಇನ್ನೂ ಹೆಚ್ಚು ದುಃಖದಿಂದ ತನ್ನ ನೆರೆಯವರಿಗೆ ಹೇಳಿಕೊಳ್ಳತೊಡಗಿದಳು: 'ನೋಡಿ, ರತ್ನದಂಥ ಈ ನಮ್ಮ ಮಗ ಸತ್ತುಹೋಗಿಬಿಟ್ಟಿದಾನೆ, ಆದರೂ ಇವರ ಕಣ್ಣಿನಿಂದ ಒಂದು ತೊಟ್ಟು ನೀರೂ ಹೊರಬರುತ್ತಿಲ್ಲವಲ್ಲ!' ಬಹಳ ಹೊತ್ತಾದ ನಂತರ ರೈತ ತನ್ನ ಹೆಂಡತಿಗೆ ಹೇಳಿದ: 'ನಾನು ಏಕೆ ಅಳುತ್ತಿಲ್ಲ ಗೊತ್ತೆ? ನಿನ್ನೆ ರಾತ್ರೆ ನನಗೆ ಸ್ವಪ್ನ ಬಿತ್ತು, ನಾನು ದೊರೆಯಾಗಿರೋ ಹಾಗೆ ಮತ್ತು ಏಳು ಮಕ್ಕಳ ತಂದೆಯಾಗಿರೋ ಹಾಗೆ. ಅವರು ಸ್ಫುರದ್ರೂಪಿಗಳು ಮತ್ತು ಒಳ್ಳೆ ಗುಣಶಾಲಿಗಳು. ಕ್ರಮೇಣ ಬೆಳೆದು ವಿದ್ಯೆ, ಧರ್ಮ ಆರ್ಜನೆಮಾಡಿದರು. ಆಗ ಇದ್ದಕ್ಕಿದ್ದ ಹಾಗೆ ಎಚ್ಚರವಾಗಿಬಿಟ್ಟಿತು. ಯೋಚಿಸುತ್ತಾ ಇದೇನೆ, ಆ ನನ್ನ ಏಳು ಮಕ್ಕಳಿಗಾಗಿ ಅಳಲೊ ಅಥವಾ ನಿನ್ನ ಈ ಒಬ್ಬ ಮಗನಿಗಾಗಿ ಅಳಲೊ . . . .' ಜ್ಞಾನಿಗಳ ದೃಷ್ಟಿಯಿಂದ ಸ್ವಪ್ನಾವಸ್ಥೆ ಎಷ್ಟು ಸತ್ಯವಾದ್ದೊ, ಅಷ್ಟೇ ಸತ್ಯ ಜಾಗ್ರದವಸ್ಥೆ.

"ಕೇವಲ ಭಗವಂತನೊಬ್ಬನೇ ಕರ್ತ. ಎಲ್ಲವೂ ಆತನಿಚ್ಛೆಗನುಸಾರ ಘಟಿಸುತ್ತವೆ."

ಹಾಜರಾ: "ಆದರೆ, ಹಾಗೆಂದು ಅರಿತುಕೊಳ್ಳುವುದು ಬಹಳ ಕಷ್ಟ. ನಿದರ್ಶನಕ್ಕಾಗಿ ಭೂಕೈಲಾಸದ ಸಾಧುವನ್ನು ತೆಗೆದುಕೊಳ್ಳಿ. ಜನರು ಆತನನ್ನು ಎಷ್ಟು ಚಿತ್ರಹಿಂಸೆಗೆ ಒಳಪಡಿಸಿದರು, ಕೊನೆಗೆ ಒಂದು ವಿಧದಲ್ಲಿ ಕೊಂದೂ ಹಾಕಿದರು. ಆತ ಸಮಾಧಿಸ್ಥನಾಗಿದ್ದ. ಮೊದಲು ಆತನನ್ನು ನೆಲದಲ್ಲಿ ಹೂಳಿದರು, ಬಳಿಕ ನೀರಿನಲ್ಲಿ ಮುಳುಗಿಸಿದರು, ಅನಂತರ ಕೆಂಪಗೆ ಕಾದ ಕಬ್ಬಿಣದಿಂದ ಬರೆ ಹಾಕಿದರು. ಈ ರೀತಿಯಾಗೆಲ್ಲ ಮಾಡಿ ಕೊನೆಗೆ ಆತನಿಗೆ ಬಾಹ್ಯಪ್ರಜ್ಞೆ ಬರುವಂತೆ ಮಾಡಿದರು. ಈ ಎಲ್ಲಾ ಚಿತ್ರಹಿಂಸೆಯಿಂದ ಆತ ಕೊನೆಗೆ ದೇಹತ್ಯಾಗಮಾಡಿಬಿಟ್ಟ. ನೀವು ಹೇಳುವ ಹಾಗೆ ಆತ ಭಗವದಿಚ್ಛೆಯಿಂದ ದೇಹತ್ಯಾಗಮಾಡಿದರೂ ಜನರು ಕೊಟ್ಟ ಚಿತ್ರಹಿಂಸೆಗಳನ್ನೂ ಅನುಭವಿಸಬೇಕಾಯಿತು."

ಶ್ರೀರಾಮಕೃಷ್ಣರು: "ಮನುಷ್ಯ ತಾನು ಬಿತ್ತಿದ್ದರ ಫಲವನ್ನು ತಾನೇ ಕೊಯ್ಯಬೇಕು. ಆದರೆ ಆ ಸಾಧುವಿನ ದೇಹತ್ಯಾಗ ಮಾತ್ರ ಭಗವದಿಚ್ಛೆಯಿಂದಲೇ ಆಯಿತು ಅಂತ ಹೇಳಬೇಕು. ಕವಿರಾಜ ಬುಡ್ಡಿಗಳಲ್ಲಿ ಮಕರ-ಧ್ವಜ ತಯಾರುಮಾಡುತ್ತಾನೆ. ಅದರ ಸುತ್ತಲೂ ಜೇಡಿಮಣ್ಣು ಮೆತ್ತಿ ಉರಿ ಹಾಕುತ್ತಾನೆ. ಆ ಬುಡ್ಡಿಯಲ್ಲಿರುವ ಚಿನ್ನ ಕರಗಿ ಅದರೊಂದಿಗೆ ಹಾಕಿದ್ದ ಉಳಿದ ಔಷಧಗಳೊಡನೆ ಬೆರೆತು ಮಕರಧ್ವಜ ಆಗುತ್ತದೆ. ಬಳಿಕ ಕವಿರಾಜ ಆ ಬುಡ್ಡಿಯನ್ನು ಹೊರಕ್ಕೆ ತೆಗೆದು, ಎಚ್ಚರಿಕೆಯಿಂದ ಅದನ್ನು ಒಡೆದು ಮಕರಧ್ವಜವನ್ನು ಬೇರ್ಪಡಿಸಿಕೊಳ್ಳುತ್ತಾನೆ. ಔಷಧ ತಯಾರಾದ ನಂತರ ಆ ಬುಡ್ಡಿಯನ್ನ ಹಾಗೇ ಉಳಿಸಿಕೊಂಡರೆ ತಾನೆ ಏನು, ಒಡೆದು ಹಾಕಿದರೆ ತಾನೆ ಏನು? ಹಾಗೇ ಜನರೇನೊ ಭಾವಿಸಿಕೊಳ್ಳುತ್ತಾರೆ ಆ ಸಾಧುವನ್ನು ಕೊಂದುಹಾಕಿಬಿಟ್ಟರಲ್ಲ ಎಂದು. ಬಹುಶಃ ಆತನ ಅಂತರ್ಯ ಆಗಲೇ ಹಣ್ಣಾಗಿಬಿಟ್ಟಿರಬೇಕು. ಭಗವಂತನ ಸಾಕ್ಷಾತ್ಕಾರವಾದನಂತರ ಶರೀರ ಇದ್ದರೇನು, ಹೋದರೇನು?

"ಭೂಕೈಲಾಸ ಸಾಧು ಸಮಾಧಿಸ್ಥನಾಗಿದ್ದ. ಸಮಾಧಿಗಳಲ್ಲಿ ಅನೇಕ ಬಗೆ. ಒಮ್ಮೆ ಹೃಷೀಕೇಶದ ಸಾಧು ನನಗೆ ಹೇಳಿದ ಮಾತುಗಳಿಗೂ ನನ್ನ ಅನುಭವಗಳಿಗೂ ತಾಳೆಯಾಗಿಬಿಟ್ಟಿತು. ಕೆಲವು ವೇಳೆ ಕುಂಡಲಿನೀಶಕ್ತಿ ನನ್ನ ಶರೀರದೊಳಗೆ, ಇರುವೆಯ ಹಾಗೆ ಚಲಿಸುವುದು ನನ್ನ ಅನುಭವಕ್ಕೆ

ಬಂದಿದೆ. ಇನ್ನು ಕೆಲವು ವೇಳೆ ಅದು ಕಪಿ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ನೆಗೆಯೋ ಹಾಗೆ 'ಚಂಗ್, ಚಂಗ್' ಅಂತ ಚಲಿಸುವುದು ನನ್ನ ಅನುಭವಕ್ಕೆ ಬಂದಿದೆ. ಮತ್ತೆ ಕೆಲವು ವೇಳೆ ಅದು ಮೀನಿನ ಹಾಗೆ ಚಲಿಸುವುದನ್ನು ನೋಡಿದೇನೆ. ಅನುಭವ ಆಗಿರುವವರಿಗೆ ಮಾತ್ರವೇ ಇದು ಏನು ಎಂಬುದು ಗೊತ್ತಾಗಬೇಕಾದರೆ. ಸಮಾಧಿಯಲ್ಲಿ ಈ ಜಗತ್ತು ಮರೆತೇ ಹೋಗಿಬಿಡುತ್ತದೆ. ಮನಸ್ಸು ಅಲ್ಲಿಂದ ಸ್ವಲ್ಪ ಕೆಳಕ್ಕೆ ಇಳಿದ ನಂತರ ಹೇಳುತ್ತೇನೆ: 'ತಾಯೆ, ಇದರಿಂದ ನನ್ನನ್ನು ಮುಕ್ತನನ್ನಾಗಿ ಮಾಡು. ನನಗೆ ನಿನ್ನೊಡನೆ ಮಾತನಾಡಬೇಕು ಅಂತ ಇಚ್ಛೆ.'

"ಈಶ್ವರಕೋಟಿ ಹೊರತು ಬೇರೆ ಯಾರೂ ಸಮಾಧಿಯಿಂದ ಕೆಳಕ್ಕೆ ಇಳಿದುಬರಲಾರರು. ಸಾಮಾನ್ಯರಿಗೆ ಸಾಧನೆಯ ಬಲದಿಂದ ಸಮಾಧಿ ದೊರೆಯುತ್ತದೆ; ಆದರೆ ಅವರು ಹಿಂದಿರುಗಿ ಬರಲಾರರು. ಆದರೆ ಭಗವಂತನೇ ಮನುಷ್ಯದೇಹಧಾರಣೆ ಮಾಡಿ ಬಂದಾಗ, ಅವತರಿಸಿದಾಗ, ಜೀವಿಗಳ ಮುಕ್ತಿಯ ಬೀಗದ ಕೈ ಆತನ ಹತ್ತಿರ ಇರುತ್ತದೆ; ಆಗ ಆತ ಜನರ ಮಂಗಳಕ್ಕಾಗಿ ಸಮಾಧಿಯಿಂದ ಹಿಂದಿರುಗಿಬರುತ್ತಾನೆ."

ಮಾಸ್ಟರ್ ತನಗೆ ತಾನೆ: "ಹಾಗಾದರೆ ಪರಮಹಂಸರ ಕೈಯಲ್ಲಿ ಜೀವರ ಮುಕ್ತಿಯ ಬೀಗದ ಕೈ?"

ಹಾಜರಾ: "ಭಗವಂತನನ್ನು ತುಷ್ಟನನ್ನಾಗಿ ಮಾಡಿದರೇ ಯಥೇಷ್ಟ. ಅವತಾರಪುರುಷ ಇದ್ದರೂ ಒಂದೆ, ಇಲ್ಲದಿದ್ದರೂ ಒಂದೆ."

ಇಂದು ಅಮಾವಾಸ್ಯೆ. ಕ್ರಮೇಣ ಸಾಯಂಕಾಲವಾಗುತ್ತಿದೆ. ಕಗ್ಗತ್ತಲು ಮರಗಿಡಗಳನ್ನೆಲ್ಲಾ ಆವರಿಸುತ್ತಿದೆ. ದೇವಾಲಯಗಳಲ್ಲಿ ಎಲ್ಲೋ ಅಲ್ಲಿ ಇಲ್ಲಿ ಒಂದೊಂದು ದೀಪ ಕಣ್ಣಿಗೆ ಬೀಳುತ್ತಿವೆ. ಭಾಗೀರಥಿಯಲ್ಲಿ ಕಪ್ಪು ಆಕಾಶ ಪ್ರತಿಬಿಂಬಿತವಾಗುತ್ತಿದೆ.

ಪರಮಹಂಸರು ತಮ್ಮ ಕೊಠಡಿಯ ದಕ್ಷಿಣದಲ್ಲಿರುವ ವರಾಂಡಕ್ಕೆ ಹೋಗಿ ಕುಳಿತುಕೊಂಡಿದಾರೆ. ಪರಮಹಂಸರು ಸ್ವಾಭಾವಿಕವಾಗೇ ಭಾವಮಯರು. ಕಾಳಿಯ ನೆನಪನ್ನು ತರುವ ಈ ಕಗ್ಗತ್ತಲು ಅವರ ಭಾವವನ್ನು ಇನ್ನೂ ಗಾಢವಾದುದನ್ನಾಗಿ ಮಾಡಿಬಿಟ್ಟಿದೆ. ಆಗಾಗ ಪ್ರಣವೋಚ್ಚಾರಣೆ, ಭಗವತಿಯ ನಾಮೋಚ್ಚಾರಣೆ ಮಾಡುತ್ತಿದಾರೆ. ಈಗ ಮಂದಲಿಗೆ ಮೇಲೆ ಮಲಗಿಕೊಂಡು ಮಾಸ್ಟರಿಗೆ ಏನೇನೊ ಪಿಸುಗುಟ್ಟುತ್ತಿದಾರೆ.

ಶ್ರೀರಾಮಕೃಷ್ಣರು: "ನೋಡು, ಭಗವಂತನನ್ನ ನೋಡಬಹುದು.

ಅವನಿಗೆ ಆಗಿದೆ. ಆದರೆ ಬೇರೆ ಯಾರಿಗೂ ಹೇಳಬೇಡ. ನಿನಗೆ ಸಾಕಾರವೋ ಅಥವಾ ನಿರಾಕಾರವೋ ಯಾವುದು ರುಚಿಸುತ್ತದೆ?"

ಮಾಸ್ಟರ್: "ನೋಡಿ, ಈಗ ಕೆಲವು ಕಾಲದಿಂದ ನನಗೆ ನಿರಾಕಾರ ರುಚಿಸುತ್ತಿದೆ. ಆದರೆ ಈಗೀಗ ಸ್ವಲ್ಪ ಸ್ವಲ್ಪವಾಗಿ ಅರ್ಥವಾಗುತ್ತಿದೆ ಆತನೇ ಈ ಎಲ್ಲಾ ರೂಪಗಳನ್ನೂ ಧರಿಸಿದಾನೆ ಎಂಬುದಾಗಿ."

ಶ್ರೀರಾಮಕೃಷ್ಣರು: "ನೋಡು, ಒಂದು ದಿನ ನನ್ನನ್ನ ಬೇಲಘರದಲ್ಲಿರುವ ಮತಿಶೀಲನ ತೋಟದ ಮನೆಗೆ ಗಾಡಿ ಮಾಡಿಕೊಂಡು ಕರೆದುಕೊಂಡು ಹೋಗುತ್ತೀಯಾ? ಅಲ್ಲಿನ ಕೊಳದ ನೀರಿಗೆ ಪುರಿ ಹಾಕಿದೊಡನೇ ಎಲ್ಲಾ ಮೀನು ಅದನ್ನು ತಿನ್ನಲು ಮೇಲೆ ಬರುತ್ತವೆ. ಆಹಾ! ಅವು ನೀರಿನಲ್ಲಿ ಕ್ರೀಡಿಸುವುದನ್ನು ನೋಡಿದರೆ ನನಗೆ ಬಹಳ ಆನಂದವಾಗಿಬಿಡುತ್ತದೆ. ನಿನಗೂ ಅದು ಉದ್ದೀಪನವನ್ನು ತರುತ್ತದೆ. ನಿನಗೆ ಅನುಭವವಾಗುತ್ತದೆ, ಸಚ್ಚಿದಾನಂದಸಾಗರದಲ್ಲಿ ಆತ್ಮವೆಂಬ ಮೀನು ಕ್ರೀಡಿಸುತ್ತಿರುವುದೊ ಏನೊ ಎಂಬಂತೆ. ನಾನು ಒಂದು ದೊಡ್ಡ ಮೈದಾನದಲ್ಲಿ ನಿಂತುಕೊಂಡರೂ ಅದೇ ರೀತಿಯಾಗಿ ನನಗೆ ಭಗವದ್ಭಾವ ಬಂದುಬಿಡುತ್ತದೆ. ಆಗ ಮಡಕೆಯಲ್ಲಿ ಇದ್ದ ಮೀನು ಸರೋವರಕ್ಕೆ ಬಂದಿರುವ ಹಾಗೆ ಅನುಭವವಾಗುತ್ತದೆ.

"ಭಗವಂತನ ದರ್ಶನ ಆಗಬೇಕಾದರೆ ಸಾಧನೆ ಆವಶ್ಯಕ. ನಾನು ಅನೇಕ ಕಠೋರ ಸಾಧನೆಗಳನ್ನು ಮಾಡಬೇಕಾಗಿ ಬಂತು. ಬಿಲ್ವವೃಕ್ಷದ ಕೆಳಗೆ ಎಷ್ಟೊಂದು ಬಗೆಯ ಸಾಧನೆ ಮಾಡಿದೇನೆ! ಅದರ ಕೆಳಗೆ ಮಲಗಿ ಅಳುತ್ತಿದ್ದೆ: 'ಹೇ ಭಗವತಿ, ನನಗೆ ನಿನ್ನ ದರ್ಶನ ಕೊಡು' ಎಂಬುದಾಗಿ. ಕಣ್ಣೀರಿನಿಂದ ದೇಹ ಒದ್ದೆಯಾಗಿಬಿಡುತ್ತಿತ್ತು."

ಮಾಸ್ಟರ್: "ನೀವು ಅಷ್ಟೊಂದು ಸಾಧನೆಗಳನ್ನು ಮಾಡಿದಿರಿ, ಆದರೆ ಜನರಿಗೆ ಭಗವಂತ ಒಂದು ಕ್ಷಣದಲ್ಲೇ ದೊರೆತುಬಿಡಬೇಕು! ಮನೆಯ ಸುತ್ತ ಬರಿದೆ ಬೆರಳಗೆರೆ ಎಳೆದುಬಿಟ್ಟರೆ ಗೋಡೆ ಎದ್ದುಬಿಟ್ಟೀತೆ?"

ಶ್ರೀರಾಮಕೃಷ್ಣರು ನಗುತ್ತ: "ಅಮೃತ ಹೇಳುತ್ತಾನೆ, ಒಬ್ಬ ಬೆಂಕಿ ಹೊತ್ತಿಸಿದ ಅಂದರೆ ಒಂದಿಪ್ಪತ್ತು ಜನ ಬೆಂಕಿ ಕಾಯಿಸಿಕೊಳ್ಳಬಹುದು ಎಂಬುದಾಗಿ. ಒಂದು ವಿಷಯ. ನಿತ್ಯವನ್ನು ಮುಟ್ಟಿದನಂತರ ಲೀಲೆಯಲ್ಲಿ ಇರುವುದು ಮೇಲು."

ಟರ್: "ಒಮ್ಮೆ ನೀವು ಹೇಳಿದಿರಿ, ಲೀಲೆಗೆ ಇಳಿದುಬರುವುದು ಕ್ಕಾಗಿ ಎಂದು."

ಶ್ರೀರಾಮಕೃಷ್ಣರು: "ಅಲ್ಲ, ಅದು ಹಾಗಲ್ಲ. ಲೀಲೆ ಕೂಡ ಸತ್ಯ.

"ನೋಡು, ನೀನು ಇಲ್ಲಿಗೆ ಬರುವಾಗ ಏನಾದರೂ ಒಂದು ಕಾಸಿನ ದನ್ನು ಕೈಯಲ್ಲಿ ತೆಗೆದುಕೊಂಡು ಬಾ. ಅದನ್ನು ನಾನೇ ಹೇಳುವುದು ಸರಿಯಲ್ಲ. ಅಹಂಕಾರದಂತೆ ಕಾಣಬರಬಹುದು. ಅಧರಸೇನನಿಗೂ ಹೇಳಿದೇನೆ, ಒಂದು ಕಾಸಿನದು ಏನನ್ನಾದರೂ ತರುವಂತೆ. ಭವನಾಥನಿಗೆ ಹೇಳಿದೇನೆ, ಒಂದು ಕಾಸಿನ ಎಲಡಿಕೆ ತರುವಂತೆ. ಭವನಾಥನ ಭಕ್ತಿ ಎಷ್ಟು ಅದ್ಭುತವಾದ್ದು, ನೋಡಿದೀಯೆ ತಾನೆ? ನರೇಂದ್ರ ಭವನಾಥ—ನರನಾರಿಯರಿದ್ದ ಹಾಗೆ. ಭವನಾಥ ನರೇಂದ್ರನ ಅನುಚರ. ನರೇಂದ್ರನನ್ನ ಗಾಡಿ ಮಾಡಿಕೊಂಡು ಇಲ್ಲಿಗೆ ಕರೆದುಕೊಂಡು ಬಾ. ಜೊತೆಯಲ್ಲಿ ಸ್ವಲ್ಪ ಸಿಹಿ ತಿಂಡಿಯನ್ನೂ ತೆಗೆದುಕೊಂಡು ಬಾ. ಅದು ನಿನಗೆ ಶ್ರೇಯಸ್ಸನ್ನು ತರುತ್ತದೆ.

"ಜ್ಞಾನ, ಭಕ್ತಿ—ಎರಡೂ ಪಥಗಳೇ. ಭಕ್ತಿ ಮಾರ್ಗದಲ್ಲಿ ಸ್ವಲ್ಪ ಹೆಚ್ಚು ಬಾಹ್ಯಾಚಾರ ಬೇಕು. ಜ್ಞಾನ ಮಾರ್ಗಾವಲಂಬಿ ತಪ್ಪಿ ಅನಾಚಾರ ಮಾಡಿದರೆ, ಅದು ಜ್ಞಾನಾಗ್ನಿಯಲ್ಲಿ ಭಸ್ಮವಾಗಿಬಿಡುತ್ತದೆ. ಸುಮ್ಮನೆ ತಾನೇ ತಾನಾಗಿ ಉರಿಯುತ್ತಿರುವ ಬೆಂಕಿಯಲ್ಲಿ ಬಾಳೆ ಮರವನ್ನು ಬಿಸುಟರೂ ಅದೂ ಸುಟ್ಟು ಭಸ್ಮವಾಗಿಬಿಡುತ್ತದೆ.

"ಜ್ಞಾನಿಗಳ ಮಾರ್ಗ ವಿಚಾರಮಾರ್ಗ. ವಿಚಾರ ಮಾಡುತ್ತ ಮಾಡುತ್ತ ಒಮ್ಮೊಮ್ಮೆ ನಾಸ್ತಿಕ ಭಾವ ಬಂದುಬಿಡಬಹುದು. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಿಜವಾಗಿ ವ್ಯಾಕುಲನಾಗಿರುವ ಭಕ್ತನ ಹೃದಯವನ್ನ ನಾಸ್ತಿಕ ಭಾವನೆಗಳು ಹೊಕ್ಕರೂ, ಆತ ಭಗವಚ್ಚಿಂತನೆ ಮಾಡುವುದನ್ನು ಬಿಡೋದಿಲ್ಲ. ಯಾವ ರೈತನ ತಂದೆ, ತಾತ, ಮುತ್ತಾತ ಆರಂಬಗೆಲಸ ಮಾಡಿಕೊಂಡುಬಂದಿದಾರೊ, ಆತ ಒಂದು ವರ್ಷ ಅನಾವೃಷ್ಟಿಯಾಗಿ ಬಿಟ್ಟಿತು ಎಂದು ಆರಂಬಗೆಲಸವನ್ನೇ ಬಿಟ್ಟುಬಿಡೋದಿಲ್ಲ."

ಪರಮಹಂಸರು ಮಂದಲಿಗೆ ಮೇಲೆ ಒಂದು ದಿಂಬು ಹಾಕಿ ಮಲಗಿಕೊಂಡು ಮಾತು ಮುಂದುವರಿಸುತ್ತಿದಾರೆ. ಅವರು ಮಾಸ್ಟರಿಗೆ ಹೇಳುತ್ತಿದಾರೆ: "ನನ್ನ ಕಾಲು ಸ್ವಲ್ಪ ನೋಯುತ್ತಿದೆ. ಅವುಗಳ ಮೇಲೆ ಸ್ವಲ್ಪ ಕೈಯಾಡಿಸು." ಪರಮದಯಾಳುಗಳಾದ ಪರಮಹಂಸರು ತಮ್ಮ ಶಿಷ್ಯನಿಗೆ

ತಮ್ಮ ಪಾದಸೇವೆ ಮಾಡಲು ಈ ರೀತಿಯಾದ ಒಂದು ಸದವಕಾಶ ಕಲ್ಪಿಸಿ ಕೊಟ್ಟಿದಾರೆ.

೮ ನೆ ಜೂನ್ ೧೮೮೩, ಜ್ಯೇಷ್ಠ ಶುಕ್ಲ ತೃತೀಯ, ಶುಕ್ರವಾರ.

ಈಗ ಬೇಸಗೆ ಕಾಲ. ಕಾಳೀದೇವಾಲಯದಲ್ಲಿ ಸಾಯಂ ಮಂಗಳಾರತಿ ಮುಗಿದಿದೆ. ಪರಮಹಂಸರು ಭಗವತಿಯ ಎದುರು ನಿಂತು ಚಾಮರ ಬೀಸುತ್ತಿದಾರೆ.

ರಾಮ, ಕೇದಾರಚಟ್ಟೋಪಾಧ್ಯಾಯ, ತಾರಕ ಫಲಪುಷ್ಪಮೃಷ್ಟಾನ್ನಾದಿಗಳನ್ನು ತೆಗೆದುಕೊಂಡು ಕಲ್ಕತ್ತದಿಂದ ಬಂದಿದಾರೆ. ಕೇದಾರನಿಗೆ ವಯಸ್ಸು ಸುಮಾರು ಐವತ್ತು. ಆತ ಮೊದಲು ಬ್ರಾಹ್ಮಸಮಾಜದ ಅನುಯಾಯಿಯಾಗಿದ್ದು ಕ್ರಮೇಣ ಇತರ ಸಂಪ್ರದಾಯಗಳನ್ನೂ ಒಳ ಹೊಕ್ಕು ನೋಡಿ, ಕಟ್ಟಕಡೆಗೆ ಪರಮಹಂಸರ ಆಶ್ರಯ ಹೊಂದಿದಾನೆ. ಸರ್ಕಾರದ ಒಂದು ಆಫೀಸಿನಲ್ಲಿ ಕರಣಿಕನ ಕೆಲಸ ಮಾಡಿಕೊಂಡಿದಾನೆ. ಮನೆ ಕಲ್ಕತ್ತದಲ್ಲಿದೆ.

ತಾರಕನ ವಯಸ್ಸು ಇಪ್ಪತ್ತುನಾಲ್ಕು. ವಿವಾಹವಾಗಿದ್ದ. ಸ್ವಲ್ಪ ಕಾಲದನಂತರ ಆಕೆ ಸ್ವರ್ಗಸ್ಥಳಾದಳು. ಆತನಿಗೆ ಮನೆ ಬಾರಾಸಾತ್ ಗ್ರಾಮದಲ್ಲಿ. ಅದು ಕಲ್ಕತ್ತದಿಂದಲೇನು ಹೆಚ್ಚು ದೂರದಲ್ಲಿಲ್ಲ. ಆತನ ತಂದೆ ಒಬ್ಬ ಉಚ್ಚ ಮಟ್ಟದ ಸಾಧಕ. ಆತ ಪರಮಹಂಸರನ್ನು ಅನೇಕ ಸಲ ದರ್ಶನಮಾಡಿದಾನೆ. ತಾರಕ ಆಗಾಗ ರಾಮನ ಮನೆಗೆ ಹೋಗುತ್ತಲೇ ಇದಾನೆ. ರಾಮ ಮತ್ತು ನಿತ್ಯಗೋಪಾಲರೊಡನೆ ಆಗಾಗ ದಕ್ಷಿಣೇಶ್ವರಕ್ಕೆ ಬರುತ್ತಲೂ ಇದಾನೆ. ಈಗಲೂ ಒಂದು ವ್ಯಾಪಾರ ಸಂಸ್ಥೆಯ ಆಫೀಸಿನಲ್ಲಿ ಕೆಲಸಮಾಡುತ್ತಿದಾನೆ. ಆದರೆ ಜಗತ್ತಿನ ಕಡೆಗೆ ಒಂದು ಉತ್ಕಟ ಉದಾಸೀನ ಭಾವ.

ಪರಮಹಂಸರು ದೇವಾಲಯದಿಂದ ಹೊರಕ್ಕೆ ಬಂದೊಡನೆಯೆ ರಾಮ, ಮಾಸ್ಟರ್, ಕೇದಾರ, ತಾರಕನೇ ಮೊದಲಾದವರು ಹೊರಗಡೆ ನಿಂತು ಕೊಂಡಿರುವುದು ಅವರ ಕಣ್ಣಿಗೆ ಬಿತ್ತು. ಪರಮಹಂಸರು ತಾರಕನ ಗಲ್ಲ ಮುಟ್ಟಿ ಪ್ರೀತಿ ತೋರಿಸಿದರು. ಅವನನ್ನು ಕಂಡು ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ.

ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿದ ಮೇಲೆ ಭಾವಾವಿಷ್ಟರಾಗಿ ನೆಲದ ಮೇಲೆ ಎರಡು ಕಾಲುಗಳನ್ನೂ ನೀಡಿಕೊಂಡು ಕುಳಿತಿದಾರೆ.

ರಾಮು, ಕೇದಾರ ಇವರು ಪರಮಹಂಸರ ಪಾದಗಳನ್ನು ಹೂವು ಹಾರಗಳಿಂದ ಅಲಂಕಾರಮಾಡುತ್ತಿದಾರೆ. ಪರಮಹಂಸರು ಈಗ ಸಮಾಧಿಸ್ಥರಾಗಿ ಬಿಟ್ಟಿದಾರೆ.

ಕೇದಾರನಿಗೆ, ಯಾವುದೊ ಒಂದು ಸಂಪ್ರದಾಯದ ವಿಚಿತ್ರ ಅಭ್ಯಾಸದಲ್ಲಿ ನಂಬಿಕೆ. ಅದಕ್ಕಾಗಿ ಆತ ಪರಮಹಂಸರ ಹೆಬ್ಬೆರಳು ಹಿಡಿದು ಕುಳಿತುಕೊಂಡಿದಾನೆ. ಹಾಗೆ ಮಾಡಿದರೆ ತನ್ನಲ್ಲಿ ಶಕ್ತಿಸಂಚಾರ ವಾಗಿಬಿಡುವುದು ಎಂಬುದಾಗಿ ಆತ ನಂಬಿದಾನೆ. ಪರಮಹಂಸರು ಕಿಂಚಿತ್ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ: "ಹೇ ತಾಯಿ, ನನ್ನ ಹೆಬ್ಬೆರಳು ಹಿಡಿದುಕೊಂಡು ಆತ ನನಗೇನು ಮಾಡಬಲ್ಲ?" ಕೇದಾರ ಈಗ ನಮ್ರತೆಯಿಂದ ಕೈ ಮುಗಿದು ಕುಳಿತುಕೊಂಡ. ಇನ್ನೂ ಭಾವಾವಿಷ್ಟರಾಗೇ ಪರಮಹಂಸರು ಕೇದಾರನಿಗೆ ಹೇಳುತ್ತಿದಾರೆ: "ಇನ್ನೂ ನಿನ್ನ ಮನಸ್ಸು ಕಾಮಕಾಂಚನಗಳ ಕಡೆಗೆ ಹರಿಯುತ್ತಿದೆ. ಕೇವಲ ಮಾತಿನಲ್ಲಿ ಮಾತ್ರ ನನ್ನ ಮನಸ್ಸು ಆ ಕಡೆಗೆ ಹರಿಯುತ್ತಿಲ್ಲ ಅಂತ ಹೇಳಿಬಿಟ್ಟರೆ ಏನಾದ ಹಾಗಾಯಿತು? ಮುಂದುವರಿ. ಚಂದನದ ಕಾಡಿನಿಂದ ಆಚೆಗೆ ಇನ್ನೂ ಅನೇಕ ವಸ್ತುಗಳಿವೆ—ಬೆಳ್ಳಿಯ ಗಣಿ, ಚಿನ್ನದ ಗಣಿ, ಹೀರ ಮಾಣಿಕ್ಯಗಳ ಗಣಿ. ಎಲ್ಲೋ ಕಿಂಚಿತ್ ಉದ್ದೀಪನವಾಗಿಬಿಟ್ಟಿತು ಅಂದರೆ ಭಾವಿಸಬೇಡ ಎಲ್ಲಾ ದೊರೆತುಬಿಟ್ಟಿತು ಎಂದು." ಮತ್ತೆ ಭಾವಾವಿಷ್ಟರಾಗಿ ಪರಮ-ಹಂಸರು ಭಗವತಿಗೆ ಹೇಳುತ್ತಿದಾರೆ: "ತಾಯಿ, ಈತನನ್ನು ಸರಿಸಿಬಿಡು." ಇದನ್ನು ಕೇಳಿ ಕೇದಾರನ ಗಂಟಲು ಒಣಗಿಹೋಯಿತು. ಭಯದಿಂದ ನಡುಗುತ್ತ ರಾಮುನಿಗೆ ಹೇಳುತ್ತಿದಾನೆ: "ಪರಮಹಂಸರು ಏನೋ ಹೇಳು ತ್ತಿದಾರಲ್ಲ?"

ರಾಖಾಲನನ್ನು ಕಂಡು ಮತ್ತೆ ಪರಮಹಂಸರು ಭಾವಾವಿಷ್ಟರಾಗಿ ಬಿಟ್ಟಿದಾರೆ. ಆತನನ್ನು ಸಂಬೋಧಿಸಿ ಹೇಳುತ್ತಿದಾರೆ: "ನಾನು ಇಲ್ಲಿಗೆ ಬಂದು ಬಹಳಕಾಲ ಆಗಿಬಿಟ್ಟಿತು. ನೀನು ಯಾವಾಗ ಬಂದೆ?"

ಪರಮಹಂಸರು ತಾವು ಅವತಾರಪುರುಷರು ಮತ್ತು ರಾಖಾಲ ತಮ್ಮ ಸಹಾಯಕ ಮತ್ತು ಅಂತರಂಗ ಭಕ್ತ ಅಂತ ಸೂಚಿಸುತ್ತಿದಾರೇನು?

**೧೦ ನೆ ಜೂನ್ ೧೮೮೩, ಜ್ಯೇಷ್ಠ ಶುಕ್ಲ ಪಂಚಮಿ, ಭಾನುವಾರ.**

ಪರಮಹಂಸರು ರಾಖಾಲ, ಮಾಸ್ಟರ್, ಲಾಟು, ಕಿಶೋರಿ, ರಾಮು-ಲಾಲ, ಹಾಜರಾ ಮತ್ತು ಇನ್ನೂ ಕೆಲವು ಮಂದಿ ಭಕ್ತರೊಡನೆ ಕೊಠಡಿ

ಯಲ್ಲಿ ಕುಳಿತಿದಾರೆ. ಘಂಟೆ ಬೆಳಗಿನ ಹತ್ತು. ಅವರು ತಮ್ಮ ಎಳೆ ವಯಸ್ಸಿನ ಜೀವನವನ್ನು ಭಕ್ತರಿಗೆ ವರ್ಣನೆಮಾಡುತ್ತಿದಾರೆ.

ಶ್ರೀರಾಮಕೃಷ್ಣರು ಹೇಳುತ್ತಿದಾರೆ: "ನಾನು ಬಾಲ್ಯದಲ್ಲಿ ಕಾಮಾರ-ಪುಕುರದಲ್ಲಿದ್ದಾಗ ಅಲ್ಲಿನ ಗಂಡಸರು, ಹೆಂಗಸರು, ಎಲ್ಲರೂ ನನ್ನನ್ನು ಪ್ರೀತಿಸುತ್ತಿದ್ದರು. ನನ್ನ ಹಾಡು ಕಂಡರೆ ಎಲ್ಲರಿಗೂ ಇಷ್ಟ. ನನಗೆ ಜನರ ನಡೆ, ನುಡಿ, ವ್ಯವಹಾರಗಳನ್ನು ನಕಲಿಮಾಡಿ ತೋರಿಸಲು ಚೆನ್ನಾಗಿ ಬರುತ್ತಿತ್ತು. ಅವುಗಳಿಂದೆಲ್ಲ ಜನರ ಮನಸ್ಸನ್ನು ಸಂತೋಷಗೊಳಿಸುತ್ತಿದ್ದೆ. ಮನೆಗಳಲ್ಲಿ ಹೆಂಗಸರು ತಾವು ಮಾಡಿದ ತಿಂಡಿಯನ್ನು ನನಗಾಗಿ ಪ್ರತ್ಯೇಕ ವಾಗಿ ಇಡುತ್ತಿದ್ದರು. ಯಾರೂ ನನ್ನನ್ನು ಪರಕೀಯನೆಂದು ಭಾವಿಸುತ್ತಿರ ಲಿಲ್ಲ. ತಮ್ಮ ಮನೆ ಹುಡುಗನೊ ಏನೊ ಎಂಬಂತೆ ಕಾಣುತ್ತಿದ್ದರು.

"ನಾನು ಯಾವಾಗಲೂ ಆನಂದಭರಿತ ಪಾರಿವಾಳದಂತಿದ್ದೆ. ಆನಂದದಿಂದ ತುಂಬಿದ್ದ ಮನೆಗಳಿಗೆ ಮಾತ್ರ ಹೋಗಿಬರುತ್ತಿದ್ದೆ. ದುಃಖ ದುರಿತಗಳಿಂದ ಕೂಡಿದ ಮನೆಗಳ ಕಡೆ ಕಾಲಿಡುತ್ತಿರಲಿಲ್ಲ.

"ಊರಿನ ಒಬ್ಬಿಬ್ಬರು ಹುಡುಗರು ನನ್ನ ಪರಮ ಮಿತ್ರರಾಗಿದ್ದರು. ಇನ್ನು ಹಲವರೊಡನೆಯೂ ನಾನು ಬೆರೆಯುತ್ತಿದ್ದೆ; ಆದರೆ ಈಗ ಅವರು ಘೋರ ವಿಷಯಾಸಕ್ತರಾಗಿದಾರೆ. ಅವರಲ್ಲಿ ಕೆಲವರು ಆಗಾಗ ಇಲ್ಲಿಗೆ ಬಂದುಹೋಗುತ್ತಿದಾರೆ. ಅವರು ಹೇಳುತ್ತಾರೆ: 'ಹೇ ಭಗವಂತ! ಇವರು ಊರಿನ ಶಾಲೆಯಲ್ಲಿ ಹಿಂದೆ ಹೇಗಿದ್ದರೊ, ಹಾಗೇ ಇನ್ನೂ ಇದಾರಲ್ಲ!' ನಾನು ಶಾಲೆಗೆ ಹೋಗುತ್ತಿದ್ದಾಗ ಗಣಿತ ನನ್ನ ತಲೆಗೆ ಚಿಟ್ಟುಹಿಡಿಸಿಬಿಡು ತ್ತಿತ್ತು. ಆದರೆ ನನಗೆ ಚೆನ್ನಾಗಿ ಚಿತ್ರ ಬರೆಯಲು ಬರುತ್ತಿತ್ತು, ಚಿಕ್ಕ ಪುಟ್ಟ ದೇವದೇವಿಯರ ಮೂರ್ತಿಗಳನ್ನು ಮಾಡಲೂ ಚೆನ್ನಾಗಿ ಬರುತ್ತಿತ್ತು.

"ಅತಿಥಿಶಾಲೆ, ಅನ್ನಸತ್ರ ಇದ್ದ ಎಡೆಗಳಿಗೆ ಹೋಗಿ ಅಲ್ಲಿ ಘಂಟೆಗಳ ವರೆಗೆ ಕಾಲವನ್ನು ಕಳೆದುಬಿಡುತ್ತಿದ್ದೆ.

"ಎಲ್ಲೆಲ್ಲಿ ರಾಮಾಯಣ, ಭಾಗವತ ಇವುಗಳ ಪ್ರವಚನ ಆಗು ತ್ತಿತ್ತೊ ಅಲ್ಲಿಗೆಲ್ಲಾ ಹೋಗಿ ಕೊನೆಯುವರೆಗೂ ಇದ್ದು ಕೇಳಿಬರುತ್ತಿದ್ದೆ. ಭಾಗವತ ಪಂಡಿತನೇನಾದರೂ ಒಂದು ವಿಧವಾದ ಠೀವಿ-ಗೀವಿಯಿಂದ ಓದಿದರೆ ಅದನ್ನು ಅನುಕರಿಸಿ ಜನರ ಮನಸ್ಸನ್ನು ಆನಂದಗೊಳಿಸುತ್ತಿದ್ದೆ.

"ನನಗೆ ಹೆಂಗಸರ ಹಾವಭಾವಗಳನ್ನೆಲ್ಲಾ ಚೆನ್ನಾಗಿ ಅನುಕರಿಸಿ

ತೋರಿಸಲು ಬರುತ್ತಿತ್ತು. ಶೀಲಭ್ರಷ್ಟಳಾದ ಹೆಂಗಸು ಯಾರೆಂಬುದು ಸ್ಪಷ್ಟವಾಗಿ ಗೊತ್ತಾಗಿಬಿಡುತ್ತಿತ್ತು. ಶೀಲಭ್ರಷ್ಟರಾದ ವಿಧವೆಯರು ಬೈತಲೆ ತೆಗೆದುಕೊಂಡು ಸಿಂಗಾರ-ಗಿಂಗಾರ ಮಾಡಿಕೊಳ್ಳುತ್ತಾರೆ. ಅವರಿಗೆ ನಾಚಿಕೆ ಎಂಬುದು ಬಹಳ ಕಡಮೆ. ಅವರು ಕುಳಿತುಕೊಳ್ಳುವ ವಿಧಾನವೇ ಬೇರೆ! ಸಾಕು ಇಲ್ಲಿಗೇ. ಇನ್ನು ಪ್ರಾಪಂಚಿಕರ ವಿಷಯ ಮಾತನಾಡುವುದು ಬೇಡ.''

ಪರಮಹಂಸರು ರಾಮಲಾಲನಿಗೆ ಹಾಡುವಂತೆ ಹೇಳಿದರು. ಆತ ಹಾಡುತ್ತಿದಾನೆ:

ನಟ್ಟಿರುಳ ನಭದಂತೆ ಕಾಳಿಮಾ ತನುವಾಗಿ
ಧಾವಿಸುವ ನಾರಿ ಯಾರು? . . . (ಉ. ೧೩೫)

ಬಳಿಕ ರಾಮಲಾಲ ರಾವಣನ ವಧೆಯನ್ನು ನೋಡಿ ಮಂಡೋದರಿ ದುಃಖಪಡುತ್ತಿರುವುದರ ಸಂಬಂಧವಾಗಿ ಹಾಡಿದ. ಅದನ್ನು ಕೇಳಿ ಪರಮಹಂಸರ ಕಣ್ಣಿನಿಂದ ದುಃಖದ ನೀರು ಸುರಿಯುತ್ತಿದೆ. ಅವರು ಹೇಳುತ್ತಿದಾರೆ: ''ಒಮ್ಮೆ ನಾನು ಸರ್ವೆ ಮರಗಳ ಕಡೆಗೆ ಹೋಗಿದ್ದಾಗ ಗಂಗೆಯ ಕಡೆಯಿಂದ ಅಂಬಿಗರು ಇದೇ ಹಾಡನ್ನು ಹಾಡುತ್ತಿದ್ದುದು ಕೇಳಿಬಂತು. ಅಲ್ಲೇ ಕುಳಿತು ಬಹಳ ಹೊತ್ತಿನವರೆಗೆ ಅತ್ತೆ. ಅಲ್ಲಿಂದ ಜನರು ನನ್ನ ಕೈ ಹಿಡಿದುಕೊಂಡು ಕೊಠಡಿಗೆ ಕರೆತರಬೇಕಾಯಿತು.''

ಈಗ ರಾಮಲಾಲ, ಗೋಪಿಯರು ಶ್ರೀಕೃಷ್ಣನಲ್ಲಿ ಇಟ್ಟಿದ್ದ ಪ್ರೇಮದ ಸಂಬಂಧವಾಗಿ ಹಾಡಲಾರಂಭಿಸಿದ. ಅಕ್ರೂರ ಶ್ರೀಕೃಷ್ಣನನ್ನು ರಥದ ಮೇಲೆ ಕೂರಿಸಿಕೊಂಡು ಇನ್ನೇನು ಬೃಂದಾವನ ಬಿಟ್ಟು ಮಥುರೆಗೆ ಹೊರಡುವುದರಲ್ಲಿದ್ದಾಗ ಗೋಪಿಯರು ರಥವನ್ನು ಅಡ್ಡಗಟ್ಟಿಬಿಡುತ್ತಾರೆ. ಕೆಲವರು ಅದರ ಚಕ್ರ ಹಿಡಿದುಕೊಳ್ಳುತ್ತಾರೆ, ಇನ್ನು ಕೆಲವರು ಅದರ ಮುಂಭಾಗದಲ್ಲಿ ಅಡ್ಡಲಾಗಿ ಮಲಗಿಕೊಳ್ಳುತ್ತಾರೆ. ಶ್ರೀಕೃಷ್ಣ ತನ್ನ ಸ್ವಂತ ಇಚ್ಛೆಯಿಂದ ಹೋಗುತ್ತಿದಾನೆ ಎಂಬುದನ್ನು ಅರಿಯದೆ ಅವರೆಲ್ಲರೂ ಅಕ್ರೂರನಲ್ಲಿ ತಪ್ಪು ಕಂಡುಹಿಡಿಯುತ್ತಿದಾರೆ. ಅಕ್ರೂರ ನಿಜಸ್ಥಿತಿಯನ್ನು ವರ್ಣನೆ ಮಾಡುತ್ತಾನೆ.

ರಾಮಲಾಲ ಹಾಡುತ್ತಿದಾನೆ:

ತಡೆಯದಿರಿ, ತಡೆಯದಿರಿ ರಥಚಕ್ರಗಳನು,
ಚಕ್ರದಿಂದೀ ರಥವು ಮುನ್ನಡೆವುದೇನು? . . .

ಗೋಪಿಯರ ಸಂಬಂಧವಾಗಿ ಪರಮಹಂಸರು ಹೇಳುತ್ತಿದಾರೆ: "ಗೋಪಿಯರದು ಎಂಥಾ ಪ್ರೀತಿ, ಎಂಥಾ ಪ್ರೇಮ! ರಾಧೆ ಶ್ರೀಕೃಷ್ಣನ ಚಿತ್ರವನ್ನು ತನ್ನ ಕೈಯಿಂದಲೇ ಬರೆದಳು. ಆದರೆ ಅದಕ್ಕೆ ಆಕೆ ಕಾಲು ಬರೆಯಲಿಲ್ಲ, ಶ್ರೀಕೃಷ್ಣ ಎಲ್ಲಿ ಮಥುರೆಗೆ ನಡೆದು ಓಡಿಬಿಡುವನೊ ಎಂದು ಹೆದರಿ. ನಾನು ಈ ಹಾಡುಗಳನ್ನೆಲ್ಲಾ ಬಾಲ್ಯಕಾಲದಲ್ಲಿ ಬಹಳವಾಗಿ ಹಾಡುತ್ತಿದ್ದೆ. ಇಡೀ ನಾಟಕಗಳನ್ನೇ ಕಂಠಪಾಟ ಮಾಡಿಬಿಟ್ಟಿದ್ದೆ.

ಪರಮಹಂಸರು ಮಧ್ಯಾಹ್ನದ ಊಟವಾದನಂತರ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಸ್ವಲ್ಪಹೊತ್ತು ವಿಶ್ರಮಿಸಿಕೊಳ್ಳಲೂ ಅವರಿಗೆ ಇನ್ನೂ ಸಮಯ ದೊರೆತಿಲ್ಲ. ಭಕ್ತರು ಬಂದು ಸೇರಲಾರಂಭಿಸಿದರು. ಒಂದು ಗುಂಪು ಮಣಿರಾಮಪುರದಿಂದ ಬಂತು. ಇನ್ನೊಂದು ಬೇಲಘರದಿಂದ. ಭಕ್ತರಲ್ಲಿ ಕೆಲವರು ಹೇಳಿದರು: "ನಾವು ಅವೇಳೆಯಲ್ಲಿ ಬಂದು ನಿಮ್ಮ ವಿಶ್ರಾಂತಿಗೆ ಭಂಗ ತಂದಿದೇವೆ."

ಶ್ರೀರಾಮಕೃಷ್ಣರು; "ಇಲ್ಲ, ಇಲ್ಲ. ಅದು ಕೇವಲ ರಜೋಗುಣಿಗಳಿಗೆ ಮಾತ್ರ ಅನ್ವಯಿಸುತ್ತದೆ. ರಜೋಗುಣಿಯ ವಿಷಯವಾಗಿ ಜನ ಹೇಳುತ್ತಾರೆ: 'ಈಗ ಆತ ನಿದ್ರಾದೇವಿಯನ್ನು ಒಲಿಸಿಕೊಳ್ಳುವುದರಲ್ಲಿ ದಾನೆ.'"

ಮಣಿರಾಮಪುರದ ಭಕ್ತರು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುವ ಬಗೆ ಹೇಗೆ ಎಂಬುದಾಗಿ ಪರಮಹಂಸರಿಗೆ ಪ್ರಶ್ನೆಹಾಕಿದರು.

ಶ್ರೀರಾಮಕೃಷ್ಣರು: "ಸ್ವಲ್ಪ ಸಾಧನೆ ಭಜನೆ ಮಾಡಬೇಕು. ಹಾಲಿನಲ್ಲಿ ಬೆಣ್ಣೆ ಇದೆ ಎಂದು ಸುಮ್ಮನೆ ಹೇಳಿಬಿಟ್ಟರೇ ಸಾಕಾಗದು. ಹಾಲಿಗೆ ಹೆಪ್ಪು ಹಾಕಿ ಕಡೆದು ಬೆಣ್ಣೆ ತೆಗೆಯಬೇಕು. ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಧ್ಯಾನಮಾಡಿಬರಬೇಕು. ಕೆಲವು ಕಾಲ ನಿರ್ಜನಪ್ರದೇಶದಲ್ಲಿದ್ದು ಭಕ್ತಿಯನ್ನು ಸಂಪಾದಿಸಿಕೊಂಡನಂತರ ಇಚ್ಛೆಬಂದೆಡೆಯಲ್ಲಿ ಇರಬಹುದು. ಕಾಲಿಗೆ ಮೆಟ್ಟು ಹಾಕಿಕೊಂಡು ಅನಾಯಾಸದಿಂದ ಮುಳ್ಳು ಕಾಡಿನಲ್ಲಿ ನಡೆದುಹೋಗಿಬಿಡಬಹುದು.

"ಮುಖ್ಯವಾಗಿ ಬೇಕಾದ್ದು ಶ್ರದ್ಧೆ.

ಭಾವುಕನ ಭಾವದೊಲು ಅವನೊಳುದಿಸುವ ಒಲವು,
ಆ ಒಲವಿಗನುಸಾರ ಅವನು ಪಡೆಯುವ ಫಲವು;
ಶ್ರದ್ಧೆ ಎಲ್ಲಕು ಮೂಲ; . . .

ಶ್ರದ್ಧೆಯೊಂದು ಇದ್ದುಬಿಟ್ಟದ್ದೇ ಆದರೆ ಇನ್ನು ಯಾವುದಕ್ಕೂ ಹೆದರ ಬೇಕಾಗಿರೋದಿಲ್ಲ."

ಒಬ್ಬ ಭಕ್ತ: "ಮಹಾಶಯರೆ, ಗುರುವಿನ ಆವಶ್ಯಕತೆ ಇದೆಯೆ?"

ಶ್ರೀರಾಮಕೃಷ್ಣರು: "ಹೌದು, ಗುರು ಅನೇಕರಿಗೆ ಬೇಕಾಗುತ್ತಾನೆ. ಆದರೆ ಆತನ ವಾಕ್ಯದಲ್ಲಿ ಶ್ರದ್ಧೆಯಿಡಬೇಕು. ಗುರುವನ್ನು ಸಾಕ್ಷಾತ್ ಭಗವಂತನೇ ಎಂಬ ದೃಷ್ಟಿಯಿಂದ ನೋಡಿದಾಗ ಮಾತ್ರವೇ ಆಧ್ಯಾತ್ಮಿಕ ಉನ್ನತಿ ಉಂಟಾಗುತ್ತದೆ. ಅದಕ್ಕಾಗೇ ವೈಷ್ಣವರು ಹೇಳುವುದು: 'ಗುರು ಕೃಷ್ಣ ವೈಷ್ಣವ ಒಂದೇ' ಎಂದು.

"ಭಗವಂತನ ನಾಮೋಚ್ಚಾರಣೆಯನ್ನು ಸರ್ವದಾ ಮಾಡುತ್ತಿರ ಬೇಕು. ಕಲಿಯಲ್ಲಿ ನಾಮಮಾಹಾತ್ಮ್ಯ. ಈ ಯುಗದಲ್ಲಿ ಅನ್ನಗತಪ್ರಾಣ ವಾದ್ದರಿಂದ ಯೋಗಾಭ್ಯಾಸ ಸಾಧ್ಯವಿಲ್ಲ. ಆತನ ನಾಮೋಚ್ಚಾರಣೆ ಮಾಡುತ್ತ ಕೈ ತಾಳ ಹಾಕಿದರೆ ಪಾಪವೆಂಬ ಹಕ್ಕಿಗಳು ಹಾರಿಹೋಗಿ ಬಿಡುತ್ತವೆ.

"ಯಾವಾಗಲೂ ಸತ್ಸಂಗ ಮಾಡುತ್ತಿರಬೇಕು. ಗಂಗೆಯನ್ನು ಸಮೀಪಿಸಿದಷ್ಟೂ ತಂಪಾದ ಹವ ಜಾಸ್ತಿಯಾಗುತ್ತಾ ಬರುತ್ತದೆ. ಬೆಂಕಿ ಯನ್ನು ಸಮೀಪಿಸಿದಂತೆಲ್ಲಾ ತಾಪವೂ ಅಧಿಕವಾಗುತ್ತಾ ಬರುತ್ತದೆ.

"ಸೋಮಾರಿತನದಿಂದ, ಆಲಸ್ಯದಿಂದ ಏನೂ ದೊರೆಯದು. ಯಾರಿಗೆ ಈ ಪ್ರಾಪಂಚಿಕ ವಸ್ತುಗಳಲ್ಲಿ ಭೋಗಾಸಕ್ತಿ ಇರುವುದೊ ಅವರು ಆಧ್ಯಾತ್ಮಿಕ ಉನ್ನತಿಯ ಸಂಬಂಧವಾಗಿ ಹೇಳುತ್ತಾರೆ: 'ಆಗುತ್ತೆ; ಒಂದಲ್ಲ ಒಂದು ದಿನ ಭಗವಂತನನ್ನು ಪಡೆದುಕೊಳ್ಳುತ್ತೇವೆ.'

"ಒಮ್ಮೆ ನಾನು ಕೇಶವಸೇನನಿಗೆ ಹೇಳಿದೆ: 'ಮಗ ತನ್ನ ಹಿಸ್ಸೆಗಾಗಿ ವ್ಯಾಕುಲನಾಗಿದ್ದರೆ ಪ್ರಾಪ್ತವಯಸ್ಸಿಗೆ ಇನ್ನೂ ಮೂರು ವರ್ಷ ಇದೆ ಅನ್ನುವಾಗಲೇ ತಂದೆ ಆತನಿಗೆ ಹಿಸ್ಸೆ ಕೊಟ್ಟುಬಿಡುತ್ತಾನೆ. ಮಗು ಹಾಸಿಗೆ ಯಲ್ಲಿ ಮಲಗಿಕೊಂಡು ಉರುಟುಗೋಲು ಚೀಪುತ್ತಿರುವವರೆಗೆ ತಾಯಿ ಅಡಿಗೆ ಕೆಲಸ ಮಾಡುತ್ತಿರುತ್ತಾಳೆ. ಆದರೆ ಯಾವಾಗ ಮಗು ಉರುಟುಗೋಲು ಬಿಸಾಡಿ ಚೀತ್ಕಾರ ಮಾಡುತ್ತೊ, ಆಗ ಒಲೆ ಮೇಲೆ ಇದ್ದ ಅನ್ನದ ತಪ್ಪಲೆ ಕೆಳಕ್ಕೆ ಇಳಿಸಿ ಓಡಿಬಂದು ಮಗುವನ್ನು ಎತ್ತಿಕೊಂಡು ಸ್ತನ ಕೊಡುತ್ತಾಳೆ.' ಇದನ್ನೆಲ್ಲ ನಾನು ಕೇಶವಸೇನನಿಗೆ ಹೇಳಿದೆ.

"ಜನ ಹೇಳುತ್ತಾರೆ, ಈ ಕಲಿಯುಗದಲ್ಲಿ ಹೆಚ್ಚಾಗೇನು ಬೇಡ,

ಒಂದು ದಿನ, ಒಂದು ರಾತ್ರಿ ಭಗವಂತನಿಗಾಗಿ ಅತ್ತುಬಿಟ್ಟರೆ ಆತನ ದರ್ಶನ ದೊರೆತುಬಿಡುತ್ತದೆ ಎಂಬುದಾಗಿ.

"ಭಗವಂತನ ಮೇಲೆ ಸಿಟ್ಟುಗೊಂಡು ಹೇಳು: 'ನೀನು ನನ್ನನ್ನು ಸೃಷ್ಟಿಸಿದೀಯೆ. ನಿನ್ನ ದರ್ಶನವನ್ನು ನೀನು ನನಗೆ ಕೊಟ್ಟೇ ಕೊಡಬೇಕು.' ಸಂಸಾರದಲ್ಲಾದರೂ ಇರು ಅಥವಾ ಬೇರೆಲ್ಲಾದರೂ ಇರು ಮನಸ್ಸನ್ನು ಮಾತ್ರ ಸರ್ವದಾ ಭಗವಂತನಲ್ಲಿ ಇಟ್ಟಿರು. ವಿಷಯಾಸಕ್ತ ಮನಸ್ಸು ಒದ್ದೆ ಮುದ್ದೆಯಾದ ಬೆಂಕಿ ಕಡ್ಡಿ ಇದ್ದ ಹಾಗೆ. ಎಷ್ಟು ಉಜ್ಜಿದರೂ ಅದು ಹೊತ್ತಿ ಕೊಳ್ಳದು. ಏಕಲವ್ಯ ತನ್ನ ಗುರು ದ್ರೋಣಾಚಾರ್ಯರ ಮಣ್ಣಿನ ಪ್ರತಿಮೆ ಯನ್ನು ತನ್ನ ಮುಂದೆ ಇಟ್ಟುಕೊಂಡು ಧನುರ್ವಿದ್ಯೆಯನ್ನು ಕಲಿತುಕೊಂಡ.

"ಮುಂದೆ ಹೋಗು. ಸೌದೆ ಕತ್ತರಿಸುವವನು ಸಾಧುವಿನ ಆದೇಶದಂತೆ ಮುಂದುವರಿದು ಚಂದನ ವನ, ಬೆಳ್ಳಿಯ ಗಣಿ, ಚಿನ್ನದ ಗಣಿ ಇವನ್ನು ಕಂಡ; ಇನ್ನೂ ಮುಂದಕ್ಕೆ ಹೋಗಿ ಹೀರಮಾಣಿಕ್ಯಗಳ ಗಣಿಯನ್ನೂ ಕಂಡ.

"ಅಜ್ಞಾನಿಗಳನ್ನ ಮಣ್ಣಿನ ಮನೆಯ ಒಳಗೆ ವಾಸಿಸುವವರಿಗೆ ಹೋಲಿಸಬಹುದು. ಮನೆಯ ಒಳಗೂ ಸಾಕಾದಷ್ಟು ಬೆಳಕು ಇರೋದಿಲ್ಲ, ಹೊರಗಿರುವ ಯಾವ ವಸ್ತುವನ್ನೂ ನೋಡಲೂ ಆಗೋದಿಲ್ಲ. ಆದರೆ ಯಾರು ಜ್ಞಾನವನ್ನು ಪಡೆದುಕೊಂಡು ಸಂಸಾರದಲ್ಲಿ ಇರುತ್ತಾರೊ, ಅವರನ್ನ ಗಾಜಿನ ಮನೆಯಲ್ಲಿ ವಾಸಿಸುವವರಿಗೆ ಹೋಲಿಸಬಹುದು. ಅವರು ಒಳಗಿರುವುದನ್ನೂ ನೋಡಬಲ್ಲರು, ಹೊರಗಿರುವುದನ್ನೂ ನೋಡಬಲ್ಲರು.

"ಇರುವುದು 'ಏಕಮೇವಾದ್ವಿತೀಯಮ್' ಎಂದರೆ ಕೇವಲ ಒಂದೇ ಒಂದು. ಅದೇ ಪರಬ್ರಹ್ಮ. ಎಲ್ಲಿಯವರೆಗೆ ಭಗವಂತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟಿರುತ್ತಾನೊ, ಅಲ್ಲಿಯವರೆಗೆ ಆತ ನಮಗೆ ತೋರಿಸಿ ಕೊಳ್ಳುತ್ತಾನೆ, ತಾನು ಆದ್ಯಾಶಕ್ತಿಯ ರೂಪದಿಂದ ಸೃಷ್ಟಿಸ್ಥಿತಿಪ್ರಳಯ ಮಾಡುತ್ತಿರುವುದಾಗಿ.

"ಯಾರು ಬ್ರಹ್ಮನೊ ಆತನೇ ಆದ್ಯಾಶಕ್ತಿ. ಒಬ್ಬ ರಾಜ ಒಮ್ಮೆ ಒಬ್ಬ ಯೋಗಿಗೆ ಹೇಳಿದ, ತನಗೆ ಒಂದೇ ಒಂದು ಪದದಲ್ಲಿ ಬ್ರಹ್ಮ ಜ್ಞಾನ ದೊರಕಿಸಿಕೊಡಬೇಕು ಎಂಬುದಾಗಿ. ಯೋಗಿ ಉತ್ತರವಿತ್ತ: 'ಆಗಲಿ; ಒಂದು ಪದದಿಂದಲೇ ನಿನಗೆ ಬ್ರಹ್ಮಜ್ಞಾನ ದೊರಕಿಸಿಕೊಡು ತ್ತೇನೆ.' ಸ್ವಲ್ಪ ಹೊತ್ತಾದನಂತರ ಒಬ್ಬ ಮಂತ್ರವಾದಿ ದೊರೆಯ ಹತ್ತಿರಕ್ಕೆ

ಇದ್ದಕ್ಕಿದ್ದಹಾಗೆ ಬರುತ್ತಾನೆ. ದೊರೆಯ ಕಣ್ಣಿಗೆ ಬೀಳುತ್ತದೆ, ಆತ ಎರಡು ಬೆರಳುಗಳನ್ನು ಬಹಳ ವೇಗವಾಗಿ ತಿರುಗಿಸುತ್ತಿರುವುದು ಮತ್ತು ಹೇಳುತ್ತಿರುವುದು: 'ರಾಜ, ಇಲ್ಲಿ ನೋಡು! ಇಲ್ಲಿ ನೋಡು!' ದೊರೆ ಆಶ್ಚರ್ಯಚಕಿತನಾಗಿ ನೋಡಲಾರಂಭಿಸುತ್ತಾನೆ. ಹಾಗೆ ನೋಡುತ್ತಿದ್ದ ಹಾಗೇ ಕೆಲವು ನಿಮಿಷಗಳನಂತರ ಎರಡು ಬೆರಳೂ ಕೂಡಿ ಒಂದೇ ಒಂದು ಆಗಿಬಿಡುತ್ತವೆ. ಬಳಿಕ ಮಂತ್ರವಾದಿ ಆ ಒಂದೇ ಬೆರಳನ್ನು ಸುತ್ತುತ್ತ ಹೇಳುತ್ತಾನೆ: 'ರಾಜ, ಇಲ್ಲಿ ನೋಡು! ಇಲ್ಲಿ ನೋಡು! ಇದರ ಇಂಗಿತಾರ್ಥ ಮೊದಮೊದಲು ಬ್ರಹ್ಮ ಮತ್ತು ಆದ್ಯಾಶಕ್ತಿ ಎರಡು ವಸ್ತು ಎಂಬ ಬೋಧೆಯಾಗುತ್ತದೆ. ಆದರೆ ಬ್ರಹ್ಮಜ್ಞಾನ ದೊರೆತನಂತರ ಅವು ಎರಡು ಎಂಬ ಬೋಧೆಯಾಗದು. ಆಗ ಅಭೇದ ಎಂಬ ಬೋಧೆ—ಒಂದೇ ಎಂಬ ಬೋಧೆ. ಏಕಮೇವಾದ್ವಿತೀಯಮ್—ಅದ್ವೈತ ಎಂಬ ಬೋಧೆ.''

ಬೇಲಘರದ ಭಕ್ತರೊಡನೆ ಒಬ್ಬ ಗಾಯಕ ಬಂದಿರುವುದನ್ನು ನೋಡಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ಒಮ್ಮೆ ಆತನ ಹಾಡು ಕೇಳಿ ಪರಮಹಂಸರು ಸಮಾಧಿಸ್ಥರಾಗಿಬಿಟ್ಟಿದ್ದರು. ಪರಮಹಂಸರ ಇಚ್ಛೆಗನುಸಾರ ಆತ ಕೆಲವು ಹಾಡುಗಳನ್ನು ಹಾಡಿದ. ಅದರಲ್ಲಿ ಒಂದು ಕುಂಡಲಿನಿಯ ಜಾಗೃತಿಯ ಸಂಬಂಧವಾಗಿ ವರ್ಣನೆ ಮಾಡುತ್ತದೆ:

ಏಳು ತಾಯಿ, ಏಳು ತಾಯಿ, ಎಷ್ಟು ಕಾಲ ನಿದ್ದೆಗೈವೆ
ಮೂಲಾಧಾರ ಪದ್ಮದಿ!
ಏಳು ತಾಯಿ ಶಿವನಿರುವಾ ಸಾವಿರದಲ ಕಮಲವರಳ-
ಲೆನ್ನ ಶಿರೋಮಧ್ಯದಿ!
ಷಟ್ ಚಕ್ರವ ಭೇದಿಸಮ್ಮ
ಮನೆಯ ವ್ಯಥೆಯ ನೀಗಿಸಮ್ಮ
ಓ ಚೇತನ ರೂಪಿಣಿ!

ಶ್ರೀರಾಮಕೃಷ್ಣರು: ''ಈ ಹಾಡು ಷಟ್ಚಕ್ರಭೇದದ ವಿಷಯವಾಗಿ ವರ್ಣನೆಮಾಡುತ್ತದೆ. ಭಗವಂತ ಒಳಗೂ ಇದಾನೆ ಹೊರಗೂ ಇದಾನೆ. ಆತ ಅಂತರ್ಯದಲ್ಲಿದ್ದುಕೊಂಡು ಮನಸ್ಸು ವಿವಿಧ ಅವಸ್ಥೆ ತಾಳುವಂತೆ ಮಾಡುತ್ತಾನೆ. ಷಟ್ಚಕ್ರಗಳನ್ನು ಭೇದಿಸಿ ಮುಂದುವರಿದುದೇ ಆದರೆ ಜೀವಾತ್ಮ ಮಾಯಾ ರಾಜ್ಯವನ್ನು ಬಿಟ್ಟು ಪರಮಾತ್ಮನೊಡನೆ ಐಕ್ಯವಾಗಿಬಿಡುತ್ತಾನೆ. ಇದಕ್ಕೇ ಭಗವದ್ದರ್ಶನ ಅಂತ ಹೆಸರು.

"ಮಾಯೆ ಬಾಗಿಲನ್ನು ಬಿಟ್ಟು ನಿಲ್ಲದವರೆಗೆ ಭಗವಂತನ ದರ್ಶನ ದೊರೆಯೋದಿಲ್ಲ. ಒಮ್ಮೆ ರಾಮ, ಸೀತೆ, ಲಕ್ಷ್ಮಣ ಜೊತೆಯಲ್ಲಿ ನಡೆದು ಹೋಗುತ್ತಿದ್ದರು. ಮುಂದುಗಡೆ ರಾಮ, ಮಧ್ಯೆ ಸೀತೆ, ಹಿಂದುಗಡೆ ಲಕ್ಷ್ಮಣ. ಸೀತೆ ಮಧ್ಯೆ ಇದ್ದುದರಿಂದ ಲಕ್ಷ್ಮಣ ರಾಮನನ್ನು ನೋಡಲಾಗಲಿಲ್ಲ. ಅದೇ ರೀತಿಯಾಗಿ ಮಾಯೆ ಮಧ್ಯೆ ಇರುವುದರಿಂದ ಜೀವಾತ್ಮನಿಗೆ ಪರಮಾತ್ಮನ ದರ್ಶನ ದೊರೆಯುತ್ತಿಲ್ಲ. (ಮಣಿಮಲ್ಲಿಕನಿಗೆ) ಆದರೆ ಭಗವಂತ ಕೃಪೆಮಾಡಿದ ಅಂದರೆ, ಮಾಯೆ ಬಾಗಿಲು ಬಿಟ್ಟು ನಿಂತುಕೊಂಡುಬಿಡುತ್ತಾಳೆ. ಭೇಟಿಕಾರ ಬಾಗಿಲು ಎದುರು ಬಂದು ನಿಂತುಕೊಂಡರೆ ದ್ವಾರಪಾಲಕ ತನ್ನ ಯಜಮಾನನಿಗೆ ತಿಳಿಸುತ್ತಾನೆ: 'ಹುಕುಮ್ ಕೊಡಿ, ಒಳಕ್ಕೆ ಬಿಟ್ಟುಬಿಡುತ್ತೇವೆ.'

"ಎರಡು ದೃಷ್ಟಿಗಳಿವೆ—ಒಂದು ವೇದಾಂತದ್ದು, ಇನ್ನೊಂದು ಪುರಾಣದ್ದು. ವೇದಾಂತ ದೃಷ್ಟಿಯಿಂದ 'ಈ ಜಗತ್ತು ಮಾಯೆಯ ಚೌಕಟ್ಟಿನ ಮನೆ!' ಅಂದರೆ ಸ್ವಪ್ನದೋಪಾದಿಯಲ್ಲಿ ಮಿಥ್ಯೆಯಾದ್ದು. ಆದರೆ ಪುರಾಣ ದೃಷ್ಟಿಯಿಂದ, ಭಕ್ತಿಶಾಸ್ತ್ರ ದೃಷ್ಟಿಯಿಂದ, ಭಗವಂತನೇ ಚತುರ್ವಿಂಶತಿ ತತ್ತ್ವಗಳಾಗಿದಾನೆ. ಆತನನ್ನು ಒಳಗೂ ಹೊರಗೂ ಪೂಜೆ ಮಾಡಿ.

"ಎಲ್ಲಿಯವರೆಗೆ ಭಗವಂತ 'ಅಹಂ' ಎಂಬುದನ್ನ ನಮ್ಮಲ್ಲಿ ಇಟ್ಟಿರುತ್ತಾನೋ ಅಲ್ಲಿಯವರೆಗೆ ಎಲ್ಲವೂ ಇವೆ; ಈ ಜಗತ್ತನ್ನು ಸ್ವಪ್ನವತ್ ಅಂತ ಹೇಳೋ ಹಾಗಿಲ್ಲ. ಒಲೆಯಲ್ಲಿ ಬೆಂಕಿ ಉರಿಯುತ್ತಿದೆ; ಅದಕ್ಕಾಗಿ ತಪ್ಪಲೆಯಲ್ಲಿ ಅಕ್ಕಿ, ಬೇಳೆ, ಆಲೂಗಡ್ಡೆ, ಬದನೆಕಾಯಿ ಎಲ್ಲಾ ನೆಗೆಯುತ್ತಿರುತ್ತವೆ. ಅವು ನೆಗೆದಾಡುತ್ತಿರುತ್ತವೆ: 'ನಾವು ಇಲ್ಲಿದೇವೆ! ನಾವು ನೆಗೆದಾಡುತ್ತಿದೇವೆ!' ಎಂಬುದಾಗಿ ಹೇಳುತ್ತಿರುವುವೊ ಏನೊ ಎಂಬಂತೆ. ಈ ಶರೀರವೇ ತಪ್ಪಲೆ. ಮನಸ್ಸು ಬುದ್ಧಿಗಳೇ ನೀರು. ಇಂದ್ರಿಯ ವಿಷಯವಸ್ತುಗಳೇ ಅಕ್ಕಿ, ಬೇಳೆ, ಆಲೂಗಡ್ಡೆ, ಬದನೆಕಾಯಿ. 'ಅಹಂ' ಎಂಬುದೇ 'ನಾವು ನೆಗೆದಾಡುತ್ತಿದೇವೆ' ಎಂಬ ಅಭಿಮಾನ. ಸಚ್ಚಿದಾನಂದನೇ ಬೆಂಕಿ.

"ಅದಕ್ಕಾಗೇ ಭಕ್ತಿಶಾಸ್ತ್ರಗಳು ಈ ಜಗತ್ತನ್ನೇ 'ಆನಂದಭವನ' ಎಂಬುದಾಗಿ ವರ್ಣಿಸಿವೆ. ರಾಮಪ್ರಸಾದ ತನ್ನ ಹಾಡುಗಳೊಂದರಲ್ಲಿ ಹೇಳಿದಾನೆ: "ಈ ಜಗತ್ತು ಮಾಯೆಯ ಚೌಕಟ್ಟಿನ ಮನೆ!' ಎಂಬುದಾಗಿ.

ಇನ್ನೊಬ್ಬ ಭಕ್ತ ಅದಕ್ಕೆ ಉತ್ತರವಿತ್ತಿದಾನೆ: 'ಈ ಜಗತ್ತೇ ಆನಂದಭವನ!' ಅಂತ. ಒಂದು ಹೇಳಿಕೆ ಇದೆ: 'ಕಾಳಿಯ ಭಕ್ತ ಜೀವನ್ಮುಕ್ತ, ನಿತ್ಯಾನಂದ ಮಯ!' ಎಂಬುದಾಗಿ. ಭಕ್ತನ ದೃಷ್ಟಿಯಿಂದ ಯಾರು ಭಗವಂತನೊ ಆತನೇ ಮಾಯೆಯಾಗಿದಾನೆ. ಆತನೇ ಈ ಜೀವಜಗತ್ತಾಗಿದಾನೆ. ಭಕ್ತನ ದೃಷ್ಟಿಗೆ ಭಗವಂತ, ಮಾಯೆ, ಜೀವ, ಜಗತ್ತು ಎಲ್ಲವೂ ಒಂದೇ. ಕೆಲವು ಮಂದಿ ಭಕ್ತರ ಕಣ್ಣಿಗೆ ಎಲ್ಲವೂ ರಾಮಮಯ: ಎಲ್ಲವೂ ರಾಮನೇ ಆಗಿದಾನೆ. ಇನ್ನು ಕೆಲವು ಮಂದಿಗೆ ಎಲ್ಲವೂ ರಾಧಾಕೃಷ್ಣಮಯವಾಗಿ ಕಾಣುತ್ತದೆ. ಅವರ ದೃಷ್ಟಿಯಿಂದ ಶ್ರೀಕೃಷ್ಣನೇ ಚತುರ್ವಿಂಶತಿ ತತ್ತ್ವ ಆಗಿದಾನೆ. ಇದು ಹಸುರು ಕನ್ನಡಕ ಹಾಕಿಕೊಂಡರೆ ಎಲ್ಲವೂ ಹಸುರಾಗಿ ಕಾಣುವ ಹಾಗೆ.

"ಆದರೆ ಭಕ್ತಿದೃಷ್ಟಿಯಿಂದ ಶಕ್ತಿ ವಿಶೇಷತೆ ಇದೆ. ರಾಮನೇ ಎಲ್ಲವೂ ಆಗಿರುವುದೇನೋ ನಿಜ, ಆದರೆ ಕೆಲವುದರಲ್ಲಿ ಹೆಚ್ಚಾಗಿ ಇನ್ನು ಕೆಲವುದರಲ್ಲಿ ಕಡಮೆಯಾಗಿ ವ್ಯಕ್ತವಾಗಿದಾನೆ. ಅವತಾರಪುರುಷನಲ್ಲಿ ಒಂದು ವಿಧವಾದ ವ್ಯಕ್ತತೆ, ಜೀವನಲ್ಲಿ ಇನ್ನೊಂದು ವಿಧವಾದ ವ್ಯಕ್ತತೆ. ಅವತಾರಪುರುಷರಲ್ಲೂ ದೇಹಬುದ್ಧಿ ಇರುತ್ತದೆ. ಅವರ ಶರೀರಧಾರಣೆ ಮಾಯೆಯಿಂದ. ರಾಮ ಸೀತೆಗಾಗಿ ಅತ್ತ. ಆದರೆ ಮಕ್ಕಳು ಕಣ್ಣು ಮುಚ್ಚಾಲೆ ಆಟ ಆಡೋ ಹಾಗೆ ಅವತಾರಪುರುಷರು ತಮ್ಮ ಕಣ್ಣಿಗೆ ತಾವೇ ಇಚ್ಛೆಪಟ್ಟು ಬಟ್ಟೆ ಕಟ್ಟಿಕೊಳ್ಳುತಾರೆ. ಆದರೆ ತಾಯಿ ಕರೆದಳೂ ಅಂದರೆ ಮಕ್ಕಳು ಆಟ-ಗೀಟ ಎಲ್ಲವನ್ನೂ ನಿಲ್ಲಿಸಿಬಿಡುತ್ತವೆ. ಆದರೆ ಜೀವರ ವಿಷಯವೇ ಬೇರೆ. ಅವರ ಕಣ್ಣನ್ನು ಯಾವ ಬಟ್ಟೆಯಿಂದ ಕಟ್ಟಿದೆಯೊ ಅದರ ತುದಿಗಳನ್ನು ಎಂಟು ಸ್ಕ್ರೂ ಮೊಳೆಗಳಿಂದ ತಲೆಯ ಹಿಂಭಾಗಕ್ಕೆ ಸ್ಕ್ರೂ ಮಾಡಿದಂತಿದೆ. ಒಟ್ಟು ಎಂಟು ಪಾಶಗಳಿವೆ—ಲಜ್ಜೆ, ದ್ವೇಷ, ಭಯ, ಜಾತಿ, ಕುಲ, ಶೀಲ, ಶೋಕ, ಜುಗುಪ್ಸೆ. ಗುರುವಿಲ್ಲದೆ ಇವನ್ನು ನಿರ್ಮೂಲಮಾಡಲಾಗೋದಿಲ್ಲ."

ಒಬ್ಬ ಭಕ್ತ: "ಮಹಾಶಯರೆ, ನಮಗೆ ಆಶೀರ್ವಾದ ಮಾಡಿ."

ಶ್ರೀರಾಮಕೃಷ್ಣರು: "ಎಲ್ಲರ ಅಂತರ್ಯದಲ್ಲೂ ಭಗವಂತನಿದಾನೆ. ಆದರೆ ಗ್ಯಾಸ್ ಕಂಪನಿಗೆ ಅರ್ಜಿ ಹಾಕಿಕೊಳ್ಳಬೇಕು. ನಿಮ್ಮ ಮನೆಗೆ ಗ್ಯಾಸ್ ಸರಬರಾಜು ಆಗಿಬಿಡುತ್ತದೆ.

"ವ್ಯಾಕುಲನಾಗಿ ಪ್ರಾರ್ಥನೆ ಮಾಡಬೇಕು. ತಾಯಿಗೆ ಮಕ್ಕಳ

ಮೇಲಿರುವ ಆಕರ್ಷಣೆ, ಪತಿವ್ರತೆಗೆ ಪತಿಯ ಮೇಲಿರುವ ಆಕರ್ಷಣೆ, ಪ್ರಾಪಂಚಿಕನಿಗೆ ಪ್ರಾಪಂಚಿಕ ವಸ್ತುಗಳ ಮೇಲಿರುವ ಆಕರ್ಷಣೆ ಇವು ಮೂರನ್ನೂ ಏಕೀಕರಿಸಿ ಭಗವಂತನ ಕಡೆಗೆ ತಿರುಗಿಸುವುದಾದರೆ, ಆಗ ಆತನ ದರ್ಶನ ದೊರೆತುಬಿಡುತ್ತದೆ.

"ನಿಜವಾದ ಭಗವದ್ಭಕ್ತನಿಗೆ ಕೆಲವು ಲಕ್ಷಣಗಳಿವೆ. ಗಾರುಡಿಗನ ಹಾಡು ಕೇಳಿ ವಿಷಸರ್ಪ ಸ್ತಬ್ಧವಾಗಿಬಿಡೋ ಹಾಗೆ ಭಕ್ತ ಗುರುವಿನ ಉಪದೇಶ ಕೇಳಿ ಸ್ತಬ್ಧನಾಗಿಬಿಡುತ್ತಾನೆ. ಆದರೆ ಕಟ್ಟನ ಹಾವು ಹಾಗೆ ಮಾಡದು. ಇನ್ನೊಂದು ಲಕ್ಷಣ, ಆತನಿಗೆ ಚೆನ್ನಾದ ಗ್ರಹಣಶಕ್ತಿ ಇರುತ್ತದೆ. ಬರೀ ಗಾಜಿನ ಮೇಲೆ ವಸ್ತುವಿನ ಪ್ರತಿಬಿಂಬ ಏಳದು, ಆದರೆ ಬೆಳ್ಳಿಯ ಉಪ್ಪು ಸವರಿದ ಗಾಜಿನ ಮೇಲೆ ಅದು ಏಳುತ್ತದೆ. ಉದಾಹರಣೆಗೆ ಫೋಟಾಗ್ರಫಿ. ಭಕ್ತಿಯೇ ಬೆಳ್ಳಿಯ ಉಪ್ಪು. ಮತ್ತೊಂದು ಲಕ್ಷಣ, ಆತ ಜಿತೇಂದ್ರಿಯನಾಗಿರುತ್ತಾನೆ, ಕಾಮಜಯಿಯಾಗಿರುತ್ತಾನೆ. ಗೋಪಿಯರಿಗೆ ಕಾಮವೆಂಬುದೇ ಇರಲಿಲ್ಲ.

"ನೀವು ಸಂಸಾರದಲ್ಲಿದೀರಿ. ಅದರಿಂದೇನು ಮುಳುಗಿಹೋಗಿ ಬಿಟ್ಟದ್ದು? ಒಂದು ವಿಧದಲ್ಲಿ ಸಾಧನೆಗೆ ಇನ್ನೂ ಹೆಚ್ಚಿನ ಅನುಕೂಲ. ಇದು ಕೋಟೆಯೊಳಗೆ ನಿಂತು ಯುದ್ಧ ಮಾಡಿದ ಹಾಗೆ. ಶವಸಾಧನೆ ಮಾಡುವಾಗ ಒಮ್ಮೊಮ್ಮೆ ಶವ 'ಹಾ!' ಅಂತ ಬಾಯಿ ತೆರೆಯುತ್ತದೆ. ಆದಕ್ಕಾಗಿ ತಾಂತ್ರಿಕ ಸಾಧಕರು ಹತ್ತಿರ ಹುರಿಗಡಲೆ, ಪುರಿ ಇಟ್ಟುಕೊಂಡಿದ್ದು ಅದು ಬಾಯಿ ತೆರೆದಾಗಲೆಲ್ಲಾ ಅದಕ್ಕೆ ಅವನ್ನು ಹಾಕುತ್ತಿರುತ್ತಾರೆ. ಅದು ಬಾಯಿ ಮುಚ್ಚಿಕೊಂಡಿತು ಎಂದೊಡನೇ ನಿಶ್ಚಿಂತೆಯಿಂದ ಧ್ಯಾನದಲ್ಲಿ ತೊಡಗುತ್ತಾರೆ. ಅದೇ ರೀತಿಯಾಗಿ ಗೃಹಸ್ಥ, ಹೆಂಡತಿ ಮಕ್ಕಳು ಬಂಧು ಬಾಂಧವರನ್ನ ತುಷ್ಟಿಗೊಳಿಸಿ ಇಟ್ಟುಕೊಳ್ಳಬೇಕು. ಅವರ ಅನ್ನ ಬಟ್ಟೆಗೆ ವ್ಯವಸ್ಥೆ ಮಾಡಿಬಿಡಬೇಕು. ಬಳಿಕ ಸಾಧನೆ ಭಜನೆಗೆ ಅನುಕೂಲ ದೊರೆಯುತ್ತದೆ.

"ಯಾರಿಗೆ ಇನ್ನೂ ಭೋಗೇಚ್ಛೆ ಇದೆಯೊ ಅವರು ಸಂಸಾರದಲ್ಲಿದ್ದೇ ಭಗವಂತನನ್ನು ಕರೆಯಲಿ. ಅದಕ್ಕಾಗಿ ನಿತ್ಯಾನಂದ ಪ್ರಾಪಂಚಿಕರಿಗೆ ಅನುಮತಿಯಿತ್ತಿದ್ದ, ಮಾಗೂರು ಮೀನಿನ ಸಾರು ಕುಡಿಯುತ್ತ ಯುವತಿಯರೊಡನೆ ವಿಲಾಸಿಸುತ್ತ ಭಗವನ್ನಾಮೋಚ್ಚಾರಣೆ ಮಾಡೋ ಹಾಗೆ.

"ಆದರೆ ನಿಜವಾದ ಸನ್ಯಾಸಿಗಳ ವಿಷಯವೇ ಬೇರೆ. ಜೇನುಹುಳು ಹೂವನ್ನು ಬಿಟ್ಟು ಬೇರೆ ಯಾವುದರ ಮೇಲೂ ಕುಳಿತುಕೊಳ್ಳದು. ಚಾತಕ

ಪಕ್ಷಿಯ ಸುತ್ತಲೂ ಬೇಕಾದಷ್ಟು ನೀರು ಸುಮ್ಮನೆ ತುಂಬಿದೆ. ಅದು ಅದಾವುದನ್ನೂ ಮುಟ್ಟದು. ಅದು ಕೇವಲ ಸ್ವಾತೀನಕ್ಷತ್ರದ ಮಳೆಗಾಗಿ ಬಾಯಿತೆರೆದು ಕಾದಿರುತ್ತದೆ. ನಿಜವಾದ ಸನ್ಯಾಸಿ ಭಗವದಾನಂದವನ್ನು ಹೊರತು ಬೇರೆ ಯಾವುದನ್ನೂ ಅನುಭವಿಸುವುದಿಲ್ಲ. ಜೇನುಹುಳು ಕೇವಲ ಹೂವುಗಳ ಮೇಲೇ ಕುಳಿತುಕೊಳ್ಳುತ್ತದೆ. ನಿಜವಾದ ಸನ್ಯಾಸಿ ಜೇನು-ಹುಳುವಿನ ಹಾಗೆ. ಆದರೆ ಗೃಹಸ್ಥ ಸಾಮಾನ್ಯ ನೊಣದ ಹಾಗೆ. ಅದು ಸಿಹಿ ತಿಂಡಿ ಮೇಲೂ ಕುಳಿತುಕೊಳ್ಳುತ್ತದೆ, ಕೊಳೆತು ನಾರುವ ವ್ರಣದ ಮೇಲೂ ಕುಳಿತುಕೊಳ್ಳುತ್ತದೆ.

"ನೀವು ಇಷ್ಟೊಂದು ಶ್ರಮವಹಿಸಿ ಇಲ್ಲಿಗೆ ಬಂದಿದೀರಿ. ನೀವು ಭಗವಂತನಿಗಾಗಿ ಹುಡುಕುತ್ತಿರಬೇಕು. ಎಲ್ಲರೂ ತೋಟ ನೋಡಿಯೇ ತುಷ್ಟರಾಗಿಬಿಡುತ್ತಾರೆ. ಎಲ್ಲೋ ಒಬ್ಬಿಬ್ಬರು ತೋಟದ ಯಜಮಾನನನ್ನ ನೋಡಲು ಪ್ರಯತ್ನಮಾಡುತ್ತಾರೆ. ಜನರು ಈ ಜಗತ್ತಿನ ಸೌಂದರ್ಯದಲ್ಲೇ ಮಗ್ನರಾಗಿಬಿಡುತ್ತಾರೆ; ಇದರ ಕರ್ತನಿಗಾಗಿ ಹುಡುಕೋದಿಲ್ಲ.

(ಗಾಯಕನನ್ನು ತೋರಿಸಿ) "ಈತ ಸ್ವಲ್ಪ ಹೊತ್ತಿನ ಹಿಂದೆ ಷಟ್ಚಕ್ರಗಳ ಹಾಡನ್ನು ಹಾಡಿದ. ಅದು ಯೋಗದ ಸಂಬಂಧವಾಗಿ ವರ್ಣಿಸುತ್ತದೆ. ಯೋಗಗಳಲ್ಲಿ ಹಠಯೋಗ ಮತ್ತು ರಾಜಯೋಗ ಎಂಬ ಎರಡು ಯೋಗಗಳಿವೆ. ಹಠಯೋಗಿ ಈ ಶರೀರಕ್ಕೆ ಅನೇಕ ಬಗೆಯ ಕಸರತ್ ಕೊಡುತ್ತಾನೆ. ಆತನ ಉದ್ದೇಶ ಸಿದ್ಧಿ. ದೀರ್ಘಾಯುಸ್ಸು, ಅಷ್ಟಸಿದ್ಧಿ ಇವೇ ಮೊದಲಾದುವನ್ನು ಪಡೆದುಕೊಳ್ಳಬೇಕೆಂಬ ಉದ್ದೇಶದಿಂದ ಸಾಧನೆಯಲ್ಲಿ ತೊಡಗುತ್ತಾನೆ. ಆದರೆ ರಾಜಯೋಗದ ಉದ್ದೇಶ ಭಕ್ತಿ, ಪ್ರೇಮ, ಜ್ಞಾನ, ವೈರಾಗ್ಯ ಇವನ್ನು ಪಡೆದುಕೊಳ್ಳುವುದು. ಇವೆರಡರಲ್ಲಿ ರಾಜ ಯೋಗವೇ ಮೇಲು.

"ವೇದಾಂತದ ಸಪ್ತ ಭೂಮಿಕೆಗಳಿಗೂ ಯೋಗಶಾಸ್ತ್ರದ ಷಟ್ಚಕ್ರಗಳಿಗೂ ಬಹಳವಾಗಿ ಹೊಂದಿಕೆ ಇದೆ. ವೇದಾಂತದ ಮೊದಲ ಮೂರು ಭೂಮಿಕೆಗಳೇ ಯೋಗದ ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ ಚಕ್ರಗಳು. ಸಾಮಾನ್ಯರ ಮನಸ್ಸು ಈ ಮೂರು ಭೂಮಿಕೆಗಳಲ್ಲಿ, ಎಂದರೆ ಲಿಂಗ, ಗುಹ್ಯ, ನಾಭಿ ಇವುಗಳಲ್ಲಿ ನೆಲಸಿರುತ್ತದೆ. ಮನಸ್ಸು ಚತುರ್ಥ ಭೂಮಿಕೆಗೆ, ಅಂದರೆ ಅನಾಹತ ಪದ್ಮ ಚಕ್ರಕ್ಕೆ ಹತ್ತಿದರೆ ಅದಕ್ಕೆ ಜೀವಾತ್ಮ ದೀಪ ಶಿಖೆಯ ಹಾಗೆ ಕಾಣಬರುತ್ತದೆ. ಇದೂ ಅಲ್ಲದೆ ಅದಕ್ಕೆ ಜ್ಯೋತಿ

ದರ್ಶನವೂ ಆಗುತ್ತದೆ. ಆಗ ಸಾಧಕ ವಿಸ್ಮಿತನಾಗಿ ಹೇಳುತ್ತಾನೆ: 'ಅಹ! ಏನಿದು? ಅಹ! ಏನಿದು?'

"ಐದನೆ ಭೂಮಿಕೆಗೆ ಮನಸ್ಸು ಹತ್ತಿದಾಗ ಕೇವಲ ಭಗವತ್ಕಥೆ ಕೇಳಲು ಮಾತ್ರ ಇಚ್ಛೆಯಾಗುತ್ತದೆ. ಇದೇ ಯೋಗದ ವಿಶುದ್ಧ ಚಕ್ರ. ಆರನೆ ಭೂಮಿಕೆ ಮತ್ತು ಆಜ್ಞಾ ಚಕ್ರ ಎಂಬುವು ಎರಡೂ ಒಂದೇ. ಇಲ್ಲಿಗೆ ಮನಸ್ಸು ಹತ್ತಿದಾಗ ಅದಕ್ಕೆ ಭಗವಂತನ ದರ್ಶನ ಆಗುತ್ತದೆ. ಆದರೆ ಇದು ಲಾಟೀನಿನ ಒಳಗಿರುವ ಬೆಳಕನ್ನು ಗಾಜಿನ ಚಿಮ್ನಿಯ ದೆಸೆಯಿಂದ ಮುಟ್ಟಲಾಗದ ಹಾಗೆ. ಜನಕರಾಜ ಪಂಚಮ ಭೂಮಿಕೆಯಿಂದ ಬ್ರಹ್ಮಜ್ಞಾನೋಪದೇಶ ಕೊಡುತ್ತಿದ್ದ. ಆತ ಕೆಲವುವೇಳೆ ಐದನೆಯ, ಇನ್ನು ಕೆಲವು ವೇಳೆ ಆರನೆಯ ಭೂಮಿಕೆಯಲ್ಲಿ ಇರುತ್ತಿದ್ದ.

"ಷಟ್ಚಕ್ರಗಳನ್ನು ಭೇದಿಸಿದನಂತರ ಸಾಧಕ ಏಳನೆ ಭೂಮಿಕೆಯನ್ನು ಮುಟ್ಟುತ್ತಾನೆ. ಮನಸ್ಸು ಅಲ್ಲಿಗೆ ಬಂದೊಡನೆಯೇ ಅದು ಬ್ರಹ್ಮನಲ್ಲಿ ಲಯಹೊಂದಿಬಿಡುತ್ತದೆ. ಜೀವಾತ್ಮ ಪರಮಾತ್ಮ ಒಂದಾಗಿಬಿಡುತ್ತಾರೆ. ಸಾಧಕ ಸಮಾಧಿಸ್ಥನಾಗಿಬಿಡುತ್ತಾನೆ. ದೇಹಬುದ್ಧಿ ಹೊರಟುಹೋಗಿಬಿಡುತ್ತದೆ. ಬಾಹ್ಯಜ್ಞಾನ ಶೂನ್ಯವಾಗಿಬಿಡುತ್ತದೆ. ನಾನಾತ್ವದ ಜ್ಞಾನ ಹೊರಟುಹೋಗುತ್ತದೆ. ವಿಚಾರ ನಿಂತುಹೋಗಿಬಿಡುತ್ತದೆ.

"ತ್ರೈಲಿಂಗಸ್ವಾಮಿ ಒಮ್ಮೆ ಹೇಳಿದರು, ವಿಚಾರದ ದೆಸೆಯಿಂದ ಅನೇಕದ ಬೋಧೆ, ನಾನಾತ್ವದ ಬೋಧೆ ಆಗುತ್ತದೆ ಎಂಬುದಾಗಿ. ಸಮಾಧಿ ದೊರೆತ ಇಪ್ಪತ್ತೊಂದು ದಿನದೊಳಗಾಗಿ ದೇಹತ್ಯಾಗವಾಗಿಬಿಡುತ್ತದೆ. ಆದರೆ ಕುಲಕುಂಡಲಿನಿ ಜಾಗೃತಗೊಳ್ಳದ ಹೊರತು ಆತ್ಮಜಾಗೃತಿ ಉಂಟಾಗೋದಿಲ್ಲ.

"ಭಗವಂತನ ಸಾಕ್ಷಾತ್ಕಾರ ಪಡೆದವನಲ್ಲಿ ಕೆಲವು ಲಕ್ಷಣಗಳನ್ನು ನೋಡಬಹುದು. ಆತ ಬಾಲಕನ ಹಾಗೊ, ಉನ್ಮತ್ತನ ಹಾಗೊ, ಜಡನ ಹಾಗೊ, ಅಥವಾ ಪಿಶಾಚನ ಹಾಗೊ ಆಗಿಬಿಡುತ್ತಾನೆ. ಆತನಿಗೆ ದೃಢ ಬೋಧೆಯಾಗುತ್ತದೆ, ತಾನು ಯಂತ್ರ, ಭಗವಂತ ಯಂತ್ರಿಗ; ಆತನೇ ಕರ್ತ, ಉಳಿದವರೆಲ್ಲಾ ಅಕರ್ತರು ಎಂಬುದಾಗಿ. ಒಮ್ಮೆ ನನಗೆ ಸಿಕ್ಕರು ಹೇಳಿದ ಹಾಗೆ, ಎಲೆ ಅಲುಗುವುದೂ ಭಗವಂತನ ಇಚ್ಛೆಯಿಂದಲೇ. ರಾಮನ ಇಚ್ಛೆಯಿಂದಲೇ ಎಲ್ಲಾ ಘಟಿಸುತ್ತವೆ ಎಂಬ ಜ್ಞಾನ ಬೇಕು. ನೆಯ್ಗೆಯವ ಹೇಳುತ್ತಿದ್ದನಲ್ಲ: 'ರಾಮನ ಇಚ್ಛೆಯಿಂದ ಬಟ್ಟೆಯ ಬೆಲೆ

ಒಂದು ರೂಪಾಯಿ ಆರಾಣೆ. ರಾಮನ ಇಚ್ಛೆಯಿಂದ ಡಕಾಯಿತಿ ನಡೆಯಿತು. ರಾಮನ ಇಚ್ಛೆಯಿಂದ ಕಳ್ಳರು ಸಿಕ್ಕಿಬಿದ್ದರು. ರಾಮನ ಇಚ್ಛೆಯಿಂದ ಪೋಲೀಸಿನವರು ನನ್ನನ್ನು ಹಿಡಿದುಕೊಂಡು ಹೋದರು. ಕೊನೆಗೆ ರಾಮನ ಇಚ್ಛೆಯಿಂದಲೇ ನನ್ನನ್ನು ಬಿಟ್ಟುಬಿಟ್ಟರು' ಎಂಬುದಾಗಿ, ಹಾಗೆ."

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಊಟವಾದನಂತರ ಇದುವರೆಗೆ ಪರಮಹಂಸರಿಗೆ ವಿಶ್ರಾಂತಿಯೇ ದೊರೆಯಲಿಲ್ಲ. ಭಗವಂತನ ವಿಷಯವಾಗಿ ಒಂದೇ ಸಮನೆ ಮಾತಾಡುತ್ತಿದ್ದರು. ಕೊನೆಗೆ ಈಗ ಭಕ್ತರೆಲ್ಲರೂ ಪರಮಹಂಸರಿಂದ ಬೀಳ್ಕೊಂಡು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಿದಾರೆ.

೧೫ನೆ ಜೂನ್ ೧೮೮೩, ಜ್ಯೇಷ್ಠ ಶುಕ್ಲ ದಶಮಿ, ಶುಕ್ರವಾರ.

ಇಂದು ಗಂಗಾಪೂಜೆ. ರಜಾ ಸಿಕ್ಕಿರುವುದರಿಂದ ಅಧರಸೇನ, ಮಾಸ್ಟರ್ ಇವರೇ ಮೊದಲಾದ ಭಕ್ತರು ಬಂದಿದಾರೆ. ರಾಖಾಲನ ತಂದೆ, ಅಜ್ಜ ಇವರೂ ಬಂದಿದಾರೆ. ಎಲ್ಲರೂ ಪರಮಹಂಸರ ಕೊಠಡಿಯಲ್ಲಿ ನೆಲದ ಮೇಲೆ ಕುಳಿತಿದಾರೆ.

ರಾಖಾಲನ ಅಜ್ಜ ಒಬ್ಬ ಭಗವದ್ಭಕ್ತ. ಆತ ಪರಮಹಂಸರಿಗೆ ಪ್ರಶ್ನೆ ಹಾಕಿದ: "ಗೃಹಸ್ಥಾಶ್ರಮಿಗಳಿಗೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆಯೆ?"

ಶ್ರೀರಾಮಕೃಷ್ಣರು ನಗುತ್ತ: "ಏಕೆ ದೊರೆಯೋದಿಲ್ಲ? ಕೆಸರು ಮೀನಿನ ಹಾಗಿರಿ. ಅದು ಕೆಸರಿನಲ್ಲೇನೊ ವಾಸಿಸುತ್ತದೆ, ಆದರೆ ಅದು ತನ್ನ ಶರೀರಕ್ಕೆ ಕೆಸರು ಅಂಟಿಸಿಕೊಳ್ಳೋದಿಲ್ಲ. ಅಥವಾ ಜಾರೆಯಂತಿರಿ. ಆಕೆ ಮನೆಯ ಕೆಲಸಕಾರ್ಯಗಳನ್ನೆಲ್ಲಾ ಚೆನ್ನಾಗಿ ಮಾಡುತ್ತಿರುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ಉಪಪತಿಯ ಮೇಲೇ ನೆಲಸಿರುತ್ತದೆ. ಭಗವಂತನಲ್ಲಿ ಮನಸ್ಸಿಟ್ಟು ಸಂಸಾರದಲ್ಲಿ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡಿ. ಆದರೆ ಅದು ಬಹಳ ಕಠಿನವೇನೊ ನಿಜ. ನಾನು ಒಮ್ಮೆ ಬ್ರಾಹ್ಮಸಮಾಜದವರಿಗೆ ಹೇಳಿದೆ: 'ಯಾವ ಕೊಠಡಿಯಲ್ಲಿ ಹುಣಿಸೆ ಕಾಯಿನ ಉಪ್ಪಿನ ಕಾಯಿ, ನೀರಿನ ಹಂಡೆ ಇವೆಯೊ ಅದೇ ಕೊಠಡಿಯಲ್ಲಿ ವಿಷಮಶೀತಜ್ವರದ ರೋಗಿ ಮಲಗಿದಾನೆ ಅಂತ ಇಟ್ಟುಕೊಳ್ಳಿ. ಆತನನ್ನು ರೋಗ ಹೇಗೆ ಬಿಟ್ಟುತೊಲಗಬೇಕು ಹೇಳಿ? ಹುಣಿಸೆಕಾಯಿನ ಉಪ್ಪಿನ ಕಾಯ ಭಾವನೆಯೇ ಸಾಕು ಬಾಯಲ್ಲಿ ನೀರು ಊರಬೇಕಾದರೆ.' ಪುರುಷ

ನಿಗೆ ಹೆಂಗಸು ಹುಣಿಸೆಕಾಯಿನ ಉಪ್ಪಿನಕಾಯಿ ಇದ್ದ ಹಾಗೆ. ಜೊತೆಗೆ ವಿಷಯತೃಷ್ಣೆಯಂತೂ ಮನುಷ್ಯನಿಗೆ ಯಾವಾಗ ನೋಡಿದರೂ ರೋಗಿಯ ಜಲತೃಷ್ಣೆಯಂತೆ ಹತ್ತಿಕೊಂಡೇ ಇರುತ್ತದೆ. ಅದಕ್ಕೆ ಕೊನೆಯೆಂಬುದೇ ಇಲ್ಲ. ವಿಷಮಶೀತಜ್ವರದ ರೋಗಿ ಹೇಳುತ್ತಾನೆ: 'ಒಂದು ಹಂಡೆಯ ನೀರನ್ನೇ ಕುಡಿದುಬಿಡುತ್ತೇನೆ' ಎಂದು. ತಡೆದುಕೊಳ್ಳುವುದು ಬಹಳ ಕಠಿನ. ಈ ಜಗತ್ತಿನಲ್ಲಿ ಬಹಳ ಕೋಟಲೆಗಳಿವೆ. ಈ ಕಡೆಗೆ ಹೋದರೆ ಬೀಳುತ್ತದೆ ಮಚ್ಚಿನೇಟು; ಆ ಕಡೆಗೆ ಹೋದರೆ ಬೀಳುತ್ತದೆ ಬರಲೇಟು; ಮತ್ತೆ ಬೇರೆ ದಿಕ್ಕಿಗೆ ಹೋಗೋಣ ಅಂದರೆ ಬೀಳುತ್ತದೆ ಪಾಪಾಸಿನೇಟು. ಜೊತೆಗೆ ಏಕಾಂತದಲ್ಲಿ ವಾಸಿಸದ ಹೊರತು ಭಗವಚ್ಚಿಂತನೆ ಸಾಧ್ಯವಿಲ್ಲ. ಅಕ್ಕಸಾಲೆ ಚಿನ್ನ ಕರಗಿಸಿ ಒಡವೆ ಮಾಡುತ್ತಾನೆ. ಹಾಗೆ ಕರಗಿಸುವಾಗ ಅನೇಕರು ಆತನನ್ನು ಆಗಾಗ ಕರೆಯುತ್ತಲೇ ಇದ್ದರೆ, ಆತ ಅದನ್ನು ಕರಗಿಸುವ ಬಗೆ ಹೇಗೆ? ಅಕ್ಕಿ ತೊಳಸಬೇಕಾಗಿದೆ ಅಂತ ಇಟ್ಟುಕೊಳ್ಳಿ. ಎಲ್ಲಾ ಕೆಲಸ ಬಿಟ್ಟು ಆ ಕೆಲಸದಲ್ಲೇ ಕುಳಿತುಕೊಳ್ಳಬೇಕು. ಆಗಾಗ ಅದನ್ನು ಕೈಗೆ ತೆಗೆದುಕೊಂಡು ಬೆಳ್ಳಗಾಯಿತೆ ಇಲ್ಲವೆ ಅಂತ ನೋಡುತ್ತಿರಬೇಕು. ಅಕ್ಕಿ ತೊಳಸುತ್ತ ತೊಳಸುತ್ತ ಅನೇಕ ಸಲ ಅಲ್ಲಿಗಿಲ್ಲಿಗೆ ಹೋಗಬೇಕಾಗಿ ಬಂದರೆ ಅದು ಚೆನ್ನಾಗಿ ತೊಳಸಿಯಾಗುವ ಬಗೆ ಹೇಗೆ?''

ಒಬ್ಬ ಭಕ್ತ: ''ಮಹಾಶಯರೆ, ಹಾಗಾದರೆ ಮಾರ್ಗವೇನು?''

ಶ್ರೀರಾಮಕೃಷ್ಣರು: ''ಒಂದು ಮಾರ್ಗವಿದೆ. ತೀವ್ರ ವೈರಾಗ್ಯ ಉಂಟಾದರೆ ಜಯಶೀಲರಾಗಬಹುದು. ಯಾವುದು ಮಿಥ್ಯಾ ಎಂಬುದಾಗಿ ಗೊತ್ತಾಗುತ್ತೊ ಅದನ್ನ ಒಡನೇ ದೃಢಮನಸ್ಸಿನಿಂದ ತ್ಯಜಿಸಿಬಿಡಬೇಕು. ಒನ್ಮೆ ನನಗೆ ಬಹಳವಾಗಿ ಕಾಯಿಲೆಯಾಗಿದ್ದಾಗ ಗಂಗಾಪ್ರಸಾದಸೇನನ ಹತ್ತಿರಕ್ಕೆ ನನ್ನನ್ನು ಕರೆದುಕೊಂಡು ಹೋದರು. ಗಂಗಾಪ್ರಸಾದ ಹೇಳಿದ: 'ನಾನು ನಿಮಗೆ ಔಷಧವನ್ನೇನೊ ಕೊಡುತ್ತೇನೆ, ಆದರೆ ನೀವು ಮಾತ್ರ ಒಂದು ತೊಟ್ಟು ನೀರನ್ನೂ ಕುಡಿಯಕೂಡದು. ದಾಳಿಂಬೆ ರಸ ಬೇಕಾದರೆ ಕುಡಿಯಬಹುದು.' ನೀರು ಕುಡಿಯದೆ ಹೇಗೆ ಬದುಕಿರಲಾದೀತು ಎಂದು ಎಲ್ಲರೂ ಚಿಂತಿಸಲಾರಂಭಿಸಿದರು. ಆದರೆ ನಾನು ಮಾತ್ರ ನೀರು ಕುಡಿಯೋದಿಲ್ಲವೆಂದು ಸತ್ಯಸಂಕಲ್ಪ ಮಾಡಿಕೊಂಡುಬಿಟ್ಟೆ. ನಾನು ನನಗೇ ಹೇಳಿಕೊಂಡೆ: 'ನಾನು ಬಾತುಕೋಳಿಯಲ್ಲ— ಪರಮಹಂಸ. ನಾನು ಹಾಲನ್ನೇ ಕುಡಿಯುತ್ತೇನೆ.'

"ಕೆಲವು ಕಾಲ ನಿರ್ಜನ ಪ್ರದೇಶದಲ್ಲಿ ಇರಬೇಕು. ಅಜ್ಜಿಯನ್ನು ಮುಟ್ಟಿಬಿಟ್ಟರೆ ಇನ್ನು ಭಯಪಡಬೇಕಾಗೇನೂ ಇರುವುದಿಲ್ಲ. ಚಿನ್ನವಾಗಿ ಬಿಟ್ಟನಂತರ ಅದು ಎಲ್ಲಿ ಬಿದ್ದಿದ್ದರೆ ತಾನೆ ಏನು? ನಿರ್ಜನ ಪ್ರದೇಶ ದಲ್ಲಿದ್ದು ಭಕ್ತಿಯನ್ನು ಗಳಿಸಿಕೊಂಡುಬಿಟ್ಟರೆ, ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡುಬಿಟ್ಟರೆ, ಅನಂತರ ಸಂಸಾರದಲ್ಲೂ ಇರಬಹುದು. (ರಾಖಾ ಲನ ತಂದೆಗೆ) ಅದಕ್ಕಾಗೇ ಈ ಹುಡುಗರಿಗೆ ನನ್ನೊಡನೆ ಇರುವಂತೆ ನಾನು ಹೇಳುತ್ತಿರುವುದು; ಏಕೆಂದರೆ ಇಲ್ಲಿ ಕೆಲವು ಕಾಲವನ್ನು ಕಳೆದರೆ ಅವರಲ್ಲಿ ಭಗವದ್ಭಕ್ತಿ ಬೆಳೆಯುತ್ತದೆ. ಬಳಿಕ ಅವರು ನಿರಾಯಾಸವಾಗಿ ಸಂಸಾರ ದಲ್ಲಿರಬಲ್ಲರು."

ಭಕ್ತ: "ಭಗವಂತನೇ ಎಲ್ಲಕ್ಕೂ ಕರ್ತನಾಗಿರುವುದಾದರೆ, ಜನ ಏಕೆ ಒಳ್ಳೆಯದು ಕೆಟ್ಟದ್ದು, ಪಾಪ ಪುಣ್ಯ ಹೀಗೆಲ್ಲಾ ಹೇಳುತ್ತಾರೆ? ಪಾಪ ಕಾರ್ಯವೂ ಅವನಿಚ್ಛೆಯಿಂದ ತಾನೆ?"

ಇನ್ನೊಬ್ಬ ಭಕ್ತ: "ಆತನ ಇಚ್ಛೆ ಎಂಬುದನ್ನು ನಾವು ಅರಿತು ಕೊಳ್ಳುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಈ ಜಗತ್ತಿನಲ್ಲಿ ಪಾಪಪುಣ್ಯಗಳೆಂಬುವು ಇರುವುದೇನೋ ನಿಜ; ಆದರೆ ಭಗವಂತ ಅವುಗಳಿಂದ ನಿರ್ಲಿಪ್ತ. ಗಾಳಿ ಯಲ್ಲಿ ಸುಗಂಧ ದುರ್ಗಂಧ ಎರಡೂ ಇರುತ್ತವೆ, ಆದರೆ ಗಾಳಿ ಮಾತ್ರ ಅವುಗಳಿಂದ ನಿರ್ಲಿಪ್ತ. ಭಗವಂತನ ಸೃಷ್ಟಿವೈಚಿತ್ರ್ಯವೇ ಹಾಗೆ, ಅದರಲ್ಲಿ ಸತತ ಒಳ್ಳೆಯದು ಕೆಟ್ಟದ್ದು, ಸತ್ ಅಸತ್ ಇದ್ದೇ ಇರುತ್ತವೆ. ಉದಾ ಹರಣೆಗೆ ಮರಗಿಡಗಳಲ್ಲಿ ಕೆಲವು ಮಾವಿನವು, ಇನ್ನು ಕೆಲವು ಹಲಸಿನವು, ಮತ್ತೆ ಕೆಲವು ಅಮಟೆಯವು ಕೂಡ. ನೋಡಿಲ್ಲವೆ, ದುಷ್ಟರೂ ಬೇಕಾಗು ವುದನ್ನ? ಒಂದು ಪಕ್ಷ ಒಂದು ಜಮೀನುದಾರಿಯಲ್ಲಿ ಜನ ದಂಗೆ ಏಳು ತ್ತಾರೆ ಅಂತ ಇಟ್ಟುಕೊ; ಅದನ್ನು ಅಡಗಿಸಬೇಕಾದರೆ ಜಮೀನುದಾರ ಒಬ್ಬ ಯಾವುದಕ್ಕೂ ಹೇಸದ ಕೊಲೆಪಾತಕನನ್ನೇ ಕಳುಹಿಸಬೇಕಾಗುತ್ತದೆ."

ಮಾತುಕತೆ ಮತ್ತೆ ಗೃಹಸ್ಥಾಶ್ರಮಿಯ ಸಂಬಂಧವಾಗಿ ಆರಂಭ ವಾಯಿತು.

ಶ್ರೀರಾಮಕೃಷ್ಣರು ಭಕ್ತರಿಗೆ: "ನೋಡಿ, ಸಂಸಾರಕ್ಕೆ ಕಾಲಿಟ್ಟರೆ ಮಾನಸಿಕ ಶಕ್ತಿ ವೃಥಾ ವ್ಯಯವಾಗಿ ಹೋಗುತ್ತದೆ. ಆದರೆ ಸಂಸಾರಿ ಸನ್ಯಾಸ ಜೀವನವನ್ನು ಕೈಗೊಂಡರೆ, ವೃಥಾ ವ್ಯಯವಾಗಿ ಹೋಗಿದ್ದ ಶಕ್ತಿ

ಮತ್ತೆ ಕೂಡಿಬಂದುಬಿಡುತ್ತದೆ. ಮೊದಲನೆ ಜನ್ಮವನ್ನ ತಂದೆ ಕೊಡುತ್ತಾನೆ; ಎರಡನೆ ಜನ್ಮ ದೊರೆಯುತ್ತೆ ಉಪನಯನದ ಸಮಯದಲ್ಲಿ. ಇನ್ನೊಮ್ಮೆ ಜನ್ಮ ದೊರೆಯುತ್ತೆ ಸನ್ಯಾಸದ ಸಮಯದಲ್ಲಿ. ಆಧ್ಯಾತ್ಮಿಕ ಜೀವನಕ್ಕೆ ಕಾಮ ಕಾಂಚನ ಇವೆರಡೇ ವಿಘ್ನ. ಹೆಂಗಸಿನಲ್ಲಿ ಆಸಕ್ತಿ ಮನುಷ್ಯನನ್ನು ಭಗವತ್ಪಥದಿಂದ ವಿಮುಖನನ್ನಾಗಿ ಮಾಡಿಬಿಡುತ್ತದೆ. ಹೇಗೆ ತನಗೆ ಅಧೋಗತಿ ಬಂದುಬಿಡುತ್ತದೆ ಎಂಬುದನ್ನು ಮನುಷ್ಯ ಅರಿತುಕೊಳ್ಳಲಾರ. ಒಮ್ಮೆ ನಾನು ಗಾಡಿಯಲ್ಲಿ ಕುಳಿತು ಕೋಟೆಗೆ ಹೋಗುತ್ತಿದ್ದೆ. ಇಳಿಜಾರು ರಸ್ತೆಯಲ್ಲಿ ಮುಂದುವರಿಯುತ್ತಿದೇನೆ ಎಂದು ನನಗೆ ಸ್ವಲ್ಪವೂ ಗೊತ್ತೇ ಆಗಲಿಲ್ಲ. ಆದರೆ ಗಾಡಿ ಕೋಟೆಯ ಒಳಕ್ಕೆ ಹೋದನಂತರ ಗೊತ್ತಾಯಿತು ನಾನು ಎಷ್ಟು ಎತ್ತರದಿಂದ ಕೆಳಕ್ಕೆ ಬಂದುಬಿಟ್ಟದೇನೆ ಎಂಬುದು. ಆಹಾ! ಹೆಂಗಸರು ಗಂಡಸರನ್ನು ತಮ್ಮ ಮೋಹದ ಬಲೆಗೆ ಹಾಕಿ ಇಟ್ಟುಕೊಂಡುಬಿಡುತ್ತಾರೆ. ಕ್ಯಾಪ್ಟನ್ ಹೇಳುತ್ತಾನೆ: 'ನನ್ನ ಹೆಂಡತಿ ಬಹಳ ಒಳ್ಳೆ ವಿವೇಕಿ' ಎಂಬುದಾಗಿ. ಭೂತ ಯಾರನ್ನು ಮೆಟ್ಟಿಕೊಳ್ಳುತ್ತದೆಯೊ, ಆತನಿಗೆ ಗೊತ್ತೇ ಆಗೋದಿಲ್ಲ ತನ್ನನ್ನು ಭೂತ ಮೆಟ್ಟಿಕೊಂಡಿದೆ ಎಂದು. ಆತ ಹೇಳುತ್ತಾನೆ, ತಾನು ಸುಖವಾಗಿದೇನೆ!"

ಎಲ್ಲರೂ ಸ್ತಬ್ಧರಾಗಿ ಕೇಳುತ್ತಿದಾರೆ.

ಶ್ರೀರಾಮಕೃಷ್ಣರು: "ಸಂಸಾರದಲ್ಲಿ ಕೇವಲ ಕಾಮದ ಭಯ ಒಂದೇ ಅಲ್ಲ, ಜೊತೆಗೆ ಕ್ರೋಧದ ಭಯವೂ ಇದೆ. ಇಚ್ಛೆಗೆ ಅಡ್ಡಲಾಗಿ ಏನಾದರೂ ಬಂತು ಎಂದರೆ, ಒಡನೇ ಕ್ರೋಧ."

ಮಾಸ್ಟರ್: "ಒಮ್ಮೊಮ್ಮೆ ಬೆಕ್ಕು ನನ್ನ ಎಲೆಯಿಂದ ಮೀನು ಎಳೆದುಕೊಳ್ಳಲು ತನ್ನ ಕಾಲು ನೀಡುತ್ತದೆ. ನಾನು ಸುಮ್ಮನೆ ಇದ್ದುಬಿಡುತ್ತೇನೆ."

ಶ್ರೀರಾಮಕೃಷ್ಣರು: "ಏಕೆ ಹಾಗೆ? ಒಮ್ಮೊಮ್ಮೆ ಅದಕ್ಕೆ ಒಂದೆರಡು ಏಟು ಕೊಟ್ಟರೂ ಅದು ತಪ್ಪೇನೂ ಆಗಲಾರದು. ಸಂಸಾರಿ ಬುಸುಗುಟ್ಟಬೇಕಾಗುತ್ತದೆ. ಆದರೆ ವಿಷವನ್ನು ಮಾತ್ರ ಕಾರಕೂಡದು. ಆತ ಉದ್ದೇಶಪೂರ್ವಕವಾಗಿ ಯಾರಿಗೂ ತೊಂದರೆಕೊಡಕೂಡದು. ಆದರೆ ಶತ್ರುಗಳಿಂದ ಪಾರಾಗಲು ಕೋಪಿಸಿಕೊಂಡವನ ಹಾಗೆ ತೋರಿಸಿಕೊಳ್ಳಬೇಕು. ಇಲ್ಲದಿದ್ದರೆ ಶತ್ರುಗಳು ತೊಂದರೆಕೊಟ್ಟುಬಿಡುತ್ತಾರೆ. ಆದರೆ ಸನ್ಯಾಸಿ ಬುಸುಗುಟ್ಟಬೇಕಾಗೂ ಬರುವುದಿಲ್ಲ."

ಒಬ್ಬ ಭಕ್ತ: "ಮಹಾಶಯರೆ ಸಂಸಾರದಲ್ಲಿದ್ದುಕೊಂಡು ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳುವುದು ಬಹಳ ಕಠಿನ ಅಂತ ನನಗೆ ತೋರುತ್ತದೆ. ನೀವು ಹೇಳುವುದನ್ನು ಎಷ್ಟು ಜನ ತಾನೆ ಅನುಷ್ಠಾನಕ್ಕೆ ತರಬಲ್ಲರು? ಎಲ್ಲಿ, ಯಾರೂ ನನ್ನ ಕಣ್ಣಿಗೆ ಬೀಳುತ್ತಿಲ್ಲವಲ್ಲ."

ಶ್ರೀರಾಮಕೃಷ್ಣರು: "ಏಕೆ ಆಗುವುದಿಲ್ಲ? ಆ ದೇಶದಲ್ಲಿ (ಕಾಮಾರಪುಕುರದಲ್ಲಿ) ಪ್ರತಾಪಸಿಂಗ್ ಎಂಬ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಇದಾನೆ. ಆತ ಬಹಳ ದೊಡ್ಡ ಮನುಷ್ಯ. ಆತ ದಾನಿ, ಧ್ಯಾನಿ, ಭಗವದ್ಭಕ್ತ. ಇನ್ನೂ ಅನೇಕ ಗುಣಗಳಿವೆ ಆತನಲ್ಲಿ. ಒಮ್ಮೆ ಆತ ನನ್ನನ್ನು ಕರೆಯಕಳುಹಿಸಿದ್ದ. ಏನಿಲ್ಲ ಅಂದರೂ ಅಂಥವರು ಯಾರಾದರು ಇದ್ದೇ ಇರುತ್ತಾರೆ.

"ಸಾಧನೆ ಅತ್ಯಂತ ಆವಶ್ಯಕ. ಆಗ ಏಕೆ ಆತನ ಸಾಕ್ಷಾತ್ಕಾರ ದೊರೆಯೋದಿಲ್ಲ ಅನ್ನುತ್ತೆ? ಗುರುವಾಕ್ಯದಲ್ಲಿ ನಿಜವಾದ ಶ್ರದ್ಧೆಯುಂಟಾಯಿತು ಎಂದರೆ, ಮತ್ತೆ ಅಧಿಕವಾಗಿ ಕಷ್ಟಪಡಬೇಕಾಗಿರೋದಿಲ್ಲ. ವ್ಯಾಸದೇವ ಇನ್ನೇನು ಯಮುನೆಯನ್ನು ದಾಟಬೇಕಾಗಿತ್ತು. ಅಷ್ಟರಲ್ಲಿ ಗೋಪಿಯರು ಅಲ್ಲಿಗೆ ಬರುತ್ತಾರೆ. ಅವರೂ ಯಮುನೆಯನ್ನು ದಾಟಬೇಕಾಗಿದೆ, ಆದರೆ ದೋಣಿ ಓಡುತ್ತಿಲ್ಲ. ಗೋಪಿಯರು ವ್ಯಾಸರಿಗೆ ಅರಿಕೆಮಾಡಿಕೊಂಡರು: 'ಮಹರ್ಷಿಗಳೇ ಈಗ ನಾವು ದಾಟೋ ಬಗೆ ಹೇಗೆ?' ವ್ಯಾಸದೇವ ಹೇಳಿದರು: 'ಹೆದರಬೇಡಿ. ನಿಮ್ಮನ್ನು ಆಚೆ ದಡಕ್ಕೆ ತಲುಪಿಸುತ್ತೇನೆ. ಆದರೆ ಈಗ ನನಗೆ ಬಹಳವಾಗಿ ಹಸಿವಾಗುತ್ತಿದೆ. ಏನಾದರೂ ಇದೆಯೇನು?' ಗೋಪಿಯರ ಹತ್ತಿರ ಹಾಲು, ಕೆನೆ, ಬೆಣ್ಣೆ ಬೇಕಾದಷ್ಟು ಇತ್ತು. ವ್ಯಾಸರು ಎಲ್ಲವನ್ನೂ ಹೊಟ್ಟೆಗೆ ಹಾಕಿದರು. ಬಳಿಕ ಗೋಪಿಯರು ಅವರನ್ನು ಕೇಳಿದರು: 'ಯಮುನೆಯನ್ನು ದಾಟೋ ಸಮಾಚಾರ ಏನಾಯ್ತು?' ಅನಂತರ ವ್ಯಾಸರು ಯಮುನೆಯ ದಡಕ್ಕೆ ಹೋಗಿ ನಿಂತು ಹೇಳಿದರು: 'ಓ ಯಮುನೆ, ನಾನು ಇಂದು ಏನನ್ನೂ ತಿನ್ನದೆ ಇರುವುದು ನಿಜವಾದ್ದೇ ಆದರೆ, ನಿನ್ನ ನೀರು ಇಬ್ಭಾಗವಾಗಿಬಿಡಲಿ, ನಾವೆಲ್ಲರೂ ಅದರ ಮೂಲಕ ಆಚೆ ದಡಕ್ಕೆ ಸೇರಿಬಿಡುವಂತಾಗಲಿ.' ಅವರು ಹಾಗೆ ಹೇಳಿ ನಿಲ್ಲಿಸುವುದೇ ತಡ ನೀರು ಇಬ್ಭಾಗವಾಗಿಬಿಟ್ಟಿತು. ಗೋಪಿಯರು ಆಶ್ಚರ್ಯಚಕಿತರಾಗಿಬಿಟ್ಟರು. ಯೋಚಿಸಲಾರಂಭಿಸಿದರು: 'ಇವರು ಈಗತಾನೆ ಅಷ್ಟೊಂದು ತಿಂದರು! ಆದರೂ ಈಗ ಹೇಳಿದರಲ್ಲ:

"ನಾನು ಏನೂ ತಿನ್ನದೆ ಇದ್ದರೆ . . ." ಎಂದು!' ವ್ಯಾಸಮಹರ್ಷಿಗೆ ಅಂಥ ದೃಢವಿಶ್ವಾಸವಿತ್ತು, ತಿಂದವರು ತಾವಲ್ಲ ತಮ್ಮ ಹೃದಯಮಧ್ಯ ದಲ್ಲಿನ ನಾರಾಯಣ ಎಂಬುದಾಗಿ.

"ಶ್ರೀ ಶಂಕರಾಚಾರ್ಯರು ನಿಸ್ಸಂದೇಹವಾಗಿ ಬ್ರಹ್ಮಜ್ಞಾನಿಗಳು. ಆದರೆ ಮೊದಮೊದಲು ಅವರಿಗೆ ಭೇದಬುದ್ಧಿ ಇತ್ತು. ಎಲ್ಲವೂ ಸಾಕ್ಷಾತ್ ಭಗವಂತನೇ ಎಂಬ ದೃಢವಿಶ್ವಾಸ ಇನ್ನೂ ಉಂಟಾಗಿರಲಿಲ್ಲ. ಒಂದು ದಿನ ಅವರು ಗಂಗಾ ಸ್ನಾನ ಮಾಡಿ ಮೇಲೆ ಬರುವುದಕ್ಕೂ ಒಬ್ಬ ಚಂಡಾಲ ಮಾಂಸದ ಕುಕ್ಕೆ ಹೊತ್ತುಕೊಂಡು ಅಲ್ಲಿಗೆ ಬರುವುದಕ್ಕೂ ಒಂದೇ ಆಗುತ್ತದೆ. ಅಜಾಗರೂಕತೆಯಿಂದ ಆತನ ಶರೀರ ಅವರ ಶರೀರಕ್ಕೆ ತಗುಲಿಬಿಡುತ್ತದೆ. ಆಗ ಶಂಕರಾಚಾರ್ಯರು ರೇಗಿ ಹೇಳು ತ್ತಾರೆ: 'ಲೋ! ನನ್ನನ್ನು ಮುಟ್ಟುವುದಕ್ಕೆ ನಿನಗೆಷ್ಟಿರಬೇಕೊ ಎದೆ ಕೆಚ್ಚು?' ಚಂಡಾಲ ಉತ್ತರವಿತ್ತ: 'ಪೂಜ್ಯರೆ, ನೀವೂ ನನ್ನನ್ನು ಮುಟ್ಟ ಲಿಲ್ಲ, ನಾನೂ ನಿಮ್ಮನ್ನು ಮುಟ್ಟಲಿಲ್ಲ. ಶುದ್ಧ ಆತ್ಮ ಈ ಶರೀರವಲ್ಲ, ಪಂಚಭೂತ ಅಲ್ಲ, ಚತುರ್ವಿಂಶತಿ ತತ್ತ್ವ ಅಲ್ಲ.' ಆಗ ಶಂಕರಾಚಾರ್ಯ ರಿಗೆ ಜ್ಞಾನೋದಯವಾಯಿತು. ಒಮ್ಮೆ ಜಡಭರತರು ರಾಜ ರಾಹುಗಣನ ಪಲ್ಲಕ್ಕಿ ಹೊತ್ತುಕೊಂಡು ಹೋಗುತ್ತ ಹೋಗುತ್ತ ಇದ್ದ ಹಾಗೆ ಆತ್ಮಜ್ಞಾನದ ಸಂಬಂಧವಾಗಿ ಮಾತಾಡಲಾರಂಭಿಸಿದರು. ರಾಜ ಪಲ್ಲಕ್ಕಿಯಿಂದ ಕೆಳಕ್ಕಿಳಿದು ಜಡಭರತರನ್ನು ಕೇಳಿದ: 'ತಾವು ಯಾರು ದಯವಿಟ್ಟು ತಿಳಿಸ ಬೇಕು.' ಜಡಭರತರು ಉತ್ತರವಿತ್ತರು: 'ನಾನು ನೇತಿ, ನೇತಿ—ಶುದ್ಧ ಆತ್ಮ.' ಅವರಿಗೆ ತಾವು ಶುದ್ಧ ಆತ್ಮ ಎಂಬ ಪೂರ್ಣಶ್ರದ್ಧೆ ಇತ್ತು.

"'ನಾನೇ ಅವನು', 'ನಾನು ಶುದ್ಧ ಆತ್ಮ'—ಇದು ಜ್ಞಾನಿಗಳ ಸಿದ್ಧಾಂತ. ಭಕ್ತರು ಹೇಳುತ್ತಾರೆ: 'ಇಡೀ ವಿಶ್ವವೇ ಭಗವಂತನ ಐಶ್ವರ್ಯ' ಎಂಬುದಾಗಿ. ಐಶ್ವರ್ಯವಿಲ್ಲದೆ ಇತ್ತು ಎಂದರೆ, ಯಾರನ್ನೇ ಆಗಲಿ ಈತ ಧನಿಕ ಎಂಬುದಾಗಿ ಪತ್ತೆ ಮಾಡುವ ಬಗೆ ಹೇಗೆ? ಆದರೆ ಭಗವಂತ ಸಾಧಕನ ಭಕ್ತಿಯನ್ನು ಮೆಚ್ಚಿ ಆತನಿಗೆ ಹೇಳುವುದಾದರೆ: 'ನಾನು ಏನೊ, ಅದೇ ನೀನು' ಎಂಬುದಾಗಿ, ಅದು ಬೇರೆ ವಿಷಯ. ರಾಜ ದರ್ಬಾರು ಹಾಲಿನಲ್ಲಿ ಕುಳಿತುಕೊಂಡಿದಾನೆ ಅಂತ ಇಟ್ಟುಕೊ. ಆತನ ಪರಿಚಾರಕ ಆ ಹಾಲನ್ನು ಪ್ರವೇಶಿಸಿ ಸಿಂಹಾಸನದ ಮೇಲೆ ದೊರೆಯ ಹತ್ತಿರ ಹೋಗಿ ಕುಳಿತುಕೊಂಡು ರಾಜನಿಗೆ ಹೇಳಿದರೆ: 'ಓ ರಾಜ, ನೀನು

ಏನೊ, ಅದೇ ನಾನೂ' ಎಂಬುದಾಗಿ, ಆಗ ಜನ ಭಾವಿಸಿಕೊಳ್ಳುತ್ತಾರೆ, ಆತನಿಗೆ ಹುಚ್ಚು ಹಿಡಿದಿದೆ ಅಂತ. ಆದರೆ ಪರಿಚಾರಕನ ಸೇವೆಯನ್ನು ಮೆಚ್ಚಿ ರಾಜ ಒಂದು ದಿನ ಆತನಿಗೆ ಹೇಳುವುದಾದರೆ: 'ಬಾ ಇಲ್ಲಿ. ಇಲ್ಲೇ ನನ್ನೊಡನೆ ಕುಳಿತುಕೊ. ಇದರಿಂದೇನು ನೀನು ತಪ್ಪು ಮಾಡಿದಂತಾಗೋದಿಲ್ಲ. ನೀನೂ ನಾನೂ ಇನ್ನು ಮೇಲೆ ಒಂದೇ' ಎಂಬುದಾಗಿ, ಆಗ ಅದು ಪ್ರತ್ಯೇಕ ಸಮಾಚಾರ. ಬಳಿಕ ಪರಿಚಾರಕ ಹೋಗಿ ಸಿಂಹಾಸನದ ಮೇಲೆ ಕುಳಿತುಕೊಂಡರೆ, ಆಗ ಅದು ತಪ್ಪಾಗದು. ಸಾಮಾನ್ಯ ಜೀವರಿಗೆ ಶ್ರೇಯಸ್ಕರವಾದುದಲ್ಲ: 'ನಾನೇ ಅವನು' ಎಂದು ಹೇಳುವುದು. ತರಂಗ ನೀರಿನದು. ಎಂದಿಗಾದರೂ ನೀರು ತರಂಗದ್ದಾಗುವುದೆ?

"ಮುಖ್ಯಾಂಶವೇನೆಂದರೆ, ಮನುಷ್ಯ ಯಾವ ಮಾರ್ಗ ಬೇಕಾದರೂ ಅನುಸರಿಸಲಿ, ಮನಸ್ಸು ಸ್ಥಿರವಾಗದ ಹೊರತು ಯೋಗ ಸಾಧ್ಯವಾಗೋದಿಲ್ಲ. ಯೋಗಿಯ ಮನಸ್ಸು ಆತನ ವಶದಲ್ಲಿರುತ್ತದೆಯೇ ವಿನಾ ಆತ ಅದರ ವಶದಲ್ಲಿರೋದಿಲ್ಲ. ಮನಸ್ಸು ಸ್ಥಿರವಾಯಿತು ಎಂದರೆ, ವಾಯು ಸ್ಥಿರವಾಗುತ್ತದೆ—ಕುಂಭಕವಾಗುತ್ತದೆ. ಇದೇ ಕುಂಭಕ, ಭಕ್ತಿಯೋಗದಿಂದಲೂ ದೊರೆಯುತ್ತದೆ. ಭಕ್ತಿಯಿಂದಲೂ ವಾಯು ಸ್ಥಿರವಾಗಿಬಿಡುತ್ತದೆ. ಕೀರ್ತನೆಯಲ್ಲಿ ಗಾಯಕ ಮೊದಲು ಹಾಡುತ್ತಾನೆ: 'ನಿತಾಯಿ ನಮ್ಮ ಮದದ ಆನೆ! ನಿತಾಯಿ ನಮ್ಮ ಮದದ ಆನೆ!' ಎಂಬುದಾಗಿ. ಹೀಗೆ ಮತ್ತೆ ಮತ್ತೆ ಹಾಡುತ್ತ ಹಾಡುತ್ತ ಯಾವಾಗ ಭಾವ ಬಂದುಬಿಡುವುದೊ, ಆಗ ಆತನಿಗೆ ಇಡೀ ವಾಕ್ಯವನ್ನು ಹೇಳಲು ಸಾಧ್ಯವಾಗೋದಿಲ್ಲ. ಕೇವಲ ಹೇಳುತ್ತಾನೆ: 'ಆನೆ! ಆನೆ!' ಎಂಬುದಾಗಿ. ಬಳಿಕ ಭಾವ ಇನ್ನೂ ಗಾಢವಾದನಂತರ ಹೇಳುತ್ತಾನೆ: 'ಆ! ಆ!' ಎಂಬುದಾಗಿ ಮಾತ್ರ. ಭಾವದಲ್ಲಿ ವಾಯು ಸ್ಥಿರವಾಗಿಬಿಡುತ್ತದೆ; ಕುಂಭಕ ಆಗಿಬಿಡುತ್ತದೆ.

"ಒಬ್ಬ ಒಂದು ಕಡೆ ಗುಡಿಸುತ್ತಾ ಇದಾನೆ ಅಂತ ಇಟ್ಟುಕೊ. ಬೇರೊಬ್ಬ ಬಂದು ಆತನಿಗೆ ಹೇಳುತ್ತಾನೆ: 'ಇದು ಗೊತ್ತೆ ನಿನಗೆ? ಆ ಆಸಾಮಿ ಈ ಭೂಲೋಕದಲ್ಲಿ ಇಲ್ಲ; ಸತ್ತುಹೋಗಿಬಿಟ್ಟಿದಾನೆ.' ಆ ಸತ್ತ ಮನುಷ್ಯ ಈ ಗುಡಿಸುವವನ ಸಂಬಂಧಿಯಲ್ಲದಿದ್ದರೆ, ಈತ ಗುಡಿಸುವುದನ್ನು ಮುಂದುವರಿಸುತ್ತಲೆ ಆಗಾಗ ಹೇಳುತ್ತಿರುತ್ತಾನೆ: 'ಅಯ್ಯೊ ಪಾಪ ಹಾಗೇನು! ಆತ ಸತ್ತುಹೋಗಿಬಿಟ್ಟನೆ? ಬಹಳ ಒಳ್ಳೆಯವ.' ಹೀಗೆಲ್ಲ

ಹೇಳುತ್ತಿದ್ದರೂ ಗುಡಿಸುವುದನ್ನು ಮಾತ್ರ ಮುಂದುವರಿಸುತ್ತಲೇ ಇರುತ್ತಾನೆ. ಆದರೆ ಆ ಸತ್ತ ಮನುಷ್ಯನೇನಾದರೂ ಈತನ ಸಂಬಂಧಿಯಾಗಿದ್ದ ಪಕ್ಷದಲ್ಲಿ ಒಡನೇ ಈತನ ಕೈಯಿಂದ ಬರಲು ಕೆಳಕ್ಕೆ ಬಿದ್ದುಹೋಗಿಬಿಡುತ್ತದೆ. 'ಅಯ್ಯೋ!' ಅಂತ ಹೇಳಿ ಈತನೂ ಕುಸಿದುಬೀಳುತ್ತಾನೆ. ಆಗ ಈತನ ವಾಯು ಸ್ಥಿರವಾಗಿಬಿಡುತ್ತದೆ. ಆಗ ಈತನ ಕೈಯಲ್ಲಿ ಯಾವ ಕೆಲಸವನ್ನೇ ಆಗಲಿ, ಚಿಂತನೆಯನ್ನೇ ಆಗಲಿ ಮಾಡಲಾಗೋದಿಲ್ಲ. ಇದನ್ನು ನೀನು ಹೆಂಗಸರಲ್ಲಿ ನೋಡಿಲ್ಲವೇನು? ಅವರಲ್ಲಿ ಯಾರಾದರೂ ಆಶ್ಚರ್ಯಚಕಿತರಾಗಿ ಯಾವುದಾದರೂ ಒಂದು ವಸ್ತುವನ್ನು ನೋಡುತ್ತಲೋ ಅಥವಾ ಒಂದು ವಿಷಯವನ್ನು ಕೇಳುತ್ತಲೋ ಇದ್ದರೆ, ಉಳಿದ ಹೆಂಗಸರು ಅವಳನ್ನು ಕೇಳುತ್ತಾರೆ: 'ಏನು, ನಿನಗೆ ಭಾವ ಬಂದುಬಿಟ್ಟಿದೆಯೆ?' ಎಂಬುದಾಗಿ. ಇಂಥ ಸಂದರ್ಭದಲ್ಲೂ ವಾಯು ಸ್ಥಿರವಾಗಿಬಿಡುತ್ತದೆ. ಅದಕ್ಕಾಗೇ ಜನ 'ಹಾ!' ಅಂತ ಬಾಯಿ ತೆರೆದುಕೊಂಡು ಆಶ್ಚರ್ಯಚಕಿತರಾಗಿ ನೋಡುತ್ತಾ ನಿಂತುಕೊಳ್ಳೋದು.

"ಸುಮ್ಮನೆ 'ಸೋಽಹಮ್', 'ಸೋಽಹಮ್' ಅಂದುಬಿಟ್ಟರೇ ಸಾಕಾಗದು. ಜ್ಞಾನಿಗೆ ಕೆಲವು ಲಕ್ಷಣಗಳಿವೆ. ನರೇಂದ್ರನಿಗೆ ಉಬ್ಬಿಕೊಂಡು ಎದ್ದು ಕಾಣುವ ಕಣ್ಣುಗಳಿವೆ. (ಒಬ್ಬ ಭಕ್ತನನ್ನು ತೋರಿಸಿ) ಈತನಿಗೂ ಒಳ್ಳೆ ಕಣ್ಣು ಮತ್ತು ಹಣೆ ಇವೆ.

"ಎಲ್ಲರೂ ಒಂದೇ ಹಂತದವರಲ್ಲ. ಜೀವರಲ್ಲಿ ನಾಲ್ಕು ವಿಧ—ಬದ್ಧ-ಜೀವ, ಮುಮುಕ್ಷು-ಜೀವ, ಮುಕ್ತ-ಜೀವ, ನಿತ್ಯ-ಜೀವ. ಎಲ್ಲರೂ ಸಾಧನೆ ಮಾಡಲೇಬೇಕು ಎಂಬುದೇನಿಲ್ಲ. ನಿತ್ಯಸಿದ್ಧರೂ ಇದಾರೆ, ಸಾಧನಸಿದ್ಧರೂ ಇದಾರೆ. ಕೆಲವರು ಬಹಳವಾಗಿ ಸಾಧನೆ ಮಾಡಿ ಬಳಿಕ ಭಗವಂತನನ್ನು ಪಡೆದುಕೊಳ್ಳುತ್ತಾರೆ. ಇನ್ನು ಕೆಲವರು ಆಜನ್ಮದಿಂದಲೇ ಸಿದ್ಧರು. ಉದಾಹರಣೆಗೆ ಪ್ರಹ್ಲಾದ.

"ಪ್ರಹ್ಲಾದಾದಿ ನಿತ್ಯಸಿದ್ಧರೂ ಸಾಧನೆಭಜನೆ ಮಾಡುತ್ತಾರೆ. ಅವರಿಗೆ ಸಾಧನೆಗೆ ಮುಂಚೆಯೇ ಭಗವಂತನ ಸಾಕ್ಷಾತ್ಕಾರ. ಇದು ಕುಂಬಳಗಿಡ, ಸೋರೆಗಿಡ ಮೊದಲು ಕಾಯಿ ಬಿಟ್ಟು ಬಳಿಕ ಹೂವು ಬಿಡೋದಿಲ್ಲವೆ, ಹಾಗೆ.

(ರಾಖಾಲನ ತಂದೆ ಕಡೆಗೆ ನೋಡಿ) "ನಿತ್ಯಸಿದ್ಧ ನೀಚವಂಶದಲ್ಲಿ ಜನ್ಮವೆತ್ತಿದರೂ ಆತ ನಿತ್ಯಸಿದ್ಧನಾಗೇ ಉಳಿಯುತ್ತಾನೇ ವಿನಾ ಬೇರೇನೂ

ಆಗಿಹೋಗೋದಿಲ್ಲ. ಬಟಾಣಿ ಕಾಳು ತಿಪ್ಪೆ ಗುಂಡಿಯಲ್ಲಿ ಬಿದ್ದರೂ ಅಲ್ಲೂ ಅದು ಬಟಾಣಿ ಗಿಡವಾಗೇ ಹುಟ್ಟುತ್ತದೆ.

"ಭಗವಂತ ಕೆಲವರಿಗೆ ಹೆಚ್ಚು ಶಕ್ತಿ ಕೆಲವರಿಗೆ ಕಡಮೆ ಶಕ್ತಿ ಕೊಟ್ಟಿದಾನೆ. ಒಬ್ಬನಲ್ಲಿ ಅದು ಕೈಯೆಣ್ಣೆ ದೀಪದ ಹಾಗೆ ಉರಿಯುತ್ತದೆ, ಇನ್ನೊಬ್ಬನಲ್ಲಿ ಪಂಜಿನ ಹಾಗೆ ಉರಿಯುತ್ತದೆ. ವಿದ್ಯಾಸಾಗರನ ಒಂದು ಮಾತಿನಿಂದಲೆ ತಿಳಿದುಕೊಂಡುಬಿಟ್ಟೆ ಆತನ ಬುದ್ಧಿಶಕ್ತಿಯ ಮಿತಿ ಏನು ಎಂಬುದನ್ನ. ಭಗವಂತನ ಸೃಷ್ಟಿಯಲ್ಲಿ ಶಕ್ತಿ ವಿಶೇಷತೆಯಿದೆ ಎಂದು ನಾನು ಹೇಳಿದಾಗ, ಆತ ಕೇಳಿದ: 'ಮಹಾಶಯರೆ, ಹಾಗಾದರೆ ಭಗವಂತ ಕೆಲವರಿಗೆ ಹೆಚ್ಚು ಶಕ್ತಿ, ಇನ್ನು ಕೆಲವರಿಗೆ ಕಡಮೆ ಶಕ್ತಿ ಕೊಟ್ಟಿದಾನೇನು?' ಒಡನೇ ನಾನು ಉತ್ತರವಿತ್ತೆ: 'ಹೌದು, ಇದರಲ್ಲಿ ಸಂದೇಹವೇನಿದೆ? ಕೊಟ್ಟಿರುವ ಶಕ್ತಿಯಲ್ಲಿ ಹೆಚ್ಚುಕಡಮೆ ಇಲ್ಲದೆ ಇದ್ದರೆ ನಿನಗೆ ಇಷ್ಟೊಂದು ಕೀರ್ತಿ ಬರಲು ಕಾರಣವೇನು? ನಿನ್ನ ವಿದ್ಯೆ, ನಿನ್ನ ದಯೆ ಇವನ್ನೆಲ್ಲ ಕೇಳಿ ತಾನೆ ನಾವು ಇಲ್ಲಿಗೆ ಬಂದಿರುವುದು. ನಿನಗೇನು ಎರಡು ಕೊಂಬು ಬೆಳೆದಿಲ್ಲ ತಾನೆ?' ಅಷ್ಟೊಂದು ವಿದ್ಯೆ, ಅಷ್ಟೊಂದು ಕೀರ್ತಿ ಗಳಿಸಿಕೊಂಡಿದ್ದರೂ ವಿದ್ಯಾಸಾಗರ ಏನೂ ಅರಿಯದ ಮಕ್ಕಳ ಹಾಗೆ ಮಾತನಾಡಿದ: 'ಭಗವಂತ ಕೆಲವರಿಗೆ ಹೆಚ್ಚು ಶಕ್ತಿ, ಇನ್ನು ಕೆಲವರಿಗೆ ಕಡಮೆ ಶಕ್ತಿ ಕೊಟ್ಟಿದಾನೆಯೆ?' ಎಂಬುದಾಗಿ. ನೋಡು, ಬೆಸ್ತ ಬಲೆ ಹಾಕಿದಾಗ ಮೊದಮೊದಲು ದೊಡ್ಡ ದೊಡ್ಡ ಮೀನು ಬಲೆಗೆ ಬೀಳುತ್ತವೆ. ಬಳಿಕ ಬೆಸ್ತ ಕಾಲಿನಿಂದ ಕೆಸರು ಕೆದಕಿ ಬಲೆ ಎಳೆದಾಗ ಚಿಕ್ಕಪುಟ್ಟ ಮೀನುಗಳೆಲ್ಲಾ ಹೊರಬರುತ್ತವೆ. ಹಾಗೇನೆ, ಮನುಷ್ಯನಿಗೆ ಇನ್ನೂ ಭಗವಂತನ ಸಾಕ್ಷಾತ್ಕಾರ ದೊರೆತಿಲ್ಲ ಎಂದರೆ, ಅವನ ಅಂತರ್ಯದಲ್ಲಿ ಹುದುಗಿರೋ ಚಿಕ್ಕಪುಟ್ಟ ಮೀನುಗಳು (ಅಜ್ಞಾನ) ಕ್ರಮೇಣ ಹೊರಕ್ಕೆ ಬಂದುಬಿಡುತ್ತವೆ. ಕೇವಲ ಪಾಂಡಿತ್ಯ ಗಳಿಸಿಕೊಂಡುಬಿಟ್ಟರೇ ಏನಾದ ಹಾಗಾಯಿತು?"

೧೭ನೆ ಜೂನ್ ೧೮೮೩, ಜ್ಯೇಷ್ಠ ಶುಕ್ಲ ದ್ವಾದಶಿ, ಭಾನುವಾರ.

ಪರಮಹಂಸರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಊಟವಾದ ನಂತರ ವಿಶ್ರಮಿಸಿಕೊಳ್ಳುತ್ತಿದಾರೆ. ಅಧರಸೇನ ಮತ್ತು ಮಾಸ್ಟರ್ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದರು. ಒಬ್ಬ ತಾಂತ್ರಿಕ ಭಕ್ತನೂ ಬಂದಿದಾನೆ. ರಾಖಾಲ, ಹಾಜರಾ, ರಾಮಲಾಲ ಪರಮಹಂಸರೊಡನೆ ಇದ್ದುಕೊಂಡಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಸಂಸಾರದಲ್ಲಿ ಭಗವಂತನ ಸಾಕ್ಷಾತ್ಕಾರ ಏಕೆ ದೊರೆಯೋದಿಲ್ಲ? ಆದರೆ ಬಹಳ ಕಠಿನವೇನೊ ನಿಜ. ಜನಕಾದಿ ಋಷಿಗಳು ಬ್ರಹ್ಮಜ್ಞಾನ ಪಡೆದುಕೊಂಡು ಸಂಸಾರಕ್ಕೆ ಕಾಲಿಟ್ಟಿದ್ದರು. ಆದರೂ ಅವರಿಗೆ ಈ ಸಂಸಾರ ಭಯವಾಗಿ ಕಾಣುತ್ತಿತ್ತು. ಅನಾಸಕ್ತ ಸಂಸಾರಿಯೂ ಬಹಳ ಎಚ್ಚರಿಕೆಯಿಂದ ಇರಬೇಕು. ಒಮ್ಮೆ ಒಬ್ಬ ಭೈರವಿ ಕಣ್ಣಿಗೆ ಬಿದ್ದೊಡನೇ ಜನಕ ತಲೆ ತಗ್ಗಿಸಿದ. ಹೆಂಗಸನ್ನು ನೋಡಿ ಆತನಿಗೆ ಸ್ವಲ್ಪ ಮನಸ್ಸಂಕೋಚವಾಯಿತು. ಆಗ ಭೈರವಿ ಆತನಿಗೆ ಹೇಳಿದಳು: 'ಜನಕಾ, ನನಗನಿಸುತ್ತದೆ ನಿನಗಿನ್ನೂ ಬ್ರಹ್ಮಜ್ಞಾನ ದೊರೆತಿಲ್ಲ ಎಂಬುದಾಗಿ. ನಿನ್ನಲ್ಲಿ ಇನ್ನೂ ಸ್ತ್ರೀಪುರುಷ ಭೇದಬುದ್ಧಿ ಇದೆ.'

"ಕಾಡಿಗೆ ಕಟ್ಟಿಕೊಂಡಿರುವ ಕೊಠಡಿಯಲ್ಲಿ ನೀನು ಎಷ್ಟೇ ಎಚ್ಚರಿಕೆಯಿಂದ ಇದ್ದರೂ, ಒಂದು ಕಿಂಚಿತ್ತಾದರೂ ಕಾಡಿಗೆ ಮೈಗೆ ತಾಕೇ ತಾಕುತ್ತದೆ. ಸಂಸಾರಿಗಳು ರೇಷ್ಮೆ ಉಡಿಗೆ ಉಟ್ಟು ಪೂಜೆಯಲ್ಲಿ ತೊಡಗುವಾಗ ಒಳ್ಳೆ ಭಾವದಿಂದ ಕೂಡಿರುವುದನ್ನು ನಾನು ಅನೇಕ ವೇಳೆ ನೋಡಿದೇನೆ. ಪೂಜೆಯ ಸಮಯದಲ್ಲಿ ಮಾತ್ರವೇ ಏಕೆ, ಊಟೋಪಚಾರ ಆಗುವವರೆಗೂ ಅದೇ ಭಾವದಲ್ಲಿ ಇರುತ್ತಾರೆ. ಅದು ಮುಗಿದನಂತರ ಮತ್ತೆ ಎಂದಿನ ಮೂರ್ತಿಗಳೇ! ತಮ್ಮ ರಾಜಸಿಕ, ತಾಮಸಿಕ ಗುಣಗಳನ್ನ ಪ್ರದರ್ಶಿಸುತ್ತಾರೆ.

"ಸತ್ತ್ವ ಗುಣದಿಂದ ಭಕ್ತಿ ಉಂಟಾಗುತ್ತದೆ. ಭಕ್ತಿಯಲ್ಲೂ ಭಕ್ತಿಯ ಸತ್ತ್ವ, ಭಕ್ತಿಯ ರಜಸ್ಸು, ಭಕ್ತಿಯ ತಮಸ್ಸು ಎಂಬುವು ಇವೆ. ಭಕ್ತಿಯ ಸತ್ತ್ವ ವಿಶುದ್ಧ ಸತ್ತ್ವ. ಈ ಭಕ್ತಿ ಉಂಟಾದುದೇ ಆದರೆ ಭಕ್ತನ ಮನಸ್ಸು ಭಗವಂತನಲ್ಲಿ ಹೊರತು ಬೇರೆ ಯಾವುದರ ಮೇಲೂ ನೆಲಸದು. ಆದರೆ ತನ್ನ ಶರೀರರಕ್ಷಣಕ್ಕಾಗಿ ನಿಗಾ ಎಷ್ಟು ಆವಶ್ಯಕವೊ ಅದಷ್ಟನ್ನು ಮಾತ್ರ ಆತ ಅದರ ಮೇಲೆ ಇಡುತ್ತಾನೆ.

"ಆದರೆ ಪರಮಹಂಸ ಮೂರು ಗುಣಗಳಿಗೂ ಅತೀತ. ಅವು ಮೂರೂ ಆತನಲ್ಲಿ ಇದ್ದರೂ, ಅವು ಇಲ್ಲ ಅಂತಲೇ ಹೇಳಬಹುದು. ಆತ ಬಾಲಕನ ಹಾಗೆ ಯಾವ ಗುಣಕ್ಕೂ ವಶನಲ್ಲ. ಅದಕ್ಕಾಗೇ ಪರಮಹಂಸ ಚಿಕ್ಕ ಚಿಕ್ಕ ಮಕ್ಕಳು ತನ್ನೊಡನೆ ಬೆರೆಯಲು ಅವಕಾಶವೀಯುತ್ತಾನೆ, ಏಕೆಂದರೆ ಅವರ ಸ್ವಭಾವವನ್ನು ತನ್ನ ಮೇಲೆ ಆರೋಪಿಸಿಕೊಳ್ಳಲೋಸುಗ.

"ಪರಮಹಂಸ ಸಂಚಯ ಮಾಡಿಟ್ಟುಕೊಳ್ಳಕೂಡದು. ಆದರೆ

ಈ ನಿಯಮ ಸಂಸಾರಿಗಳಿಗಲ್ಲ. ಅವರು ತಮ್ಮ ಕುಟುಂಬಕ್ಕಾಗಿ ಸಂಚಯ ಮಾಡಿ ಇಟ್ಟುಕೊಳ್ಳಲೇ ಬೇಕು.''

ತಾಂತ್ರಿಕ ಭಕ್ತ: ''ಪರಮಹಂಸರಿಗೆ ಪಾಪಪುಣ್ಯದ ಬೋಧೆ ಇರುತ್ತದೆಯೆ?''

ಶ್ರೀರಾಮಕೃಷ್ಣರು: ''ಕೇಶವಸೇನನೂ ಇದೇ ಪ್ರಶ್ನೆ ಹಾಕಿದ. ನಾನು ಆತನಿಗೆ ಹೇಳಿದೆ: 'ಅದನ್ನು ನಾನು ನಿನಗೆ ವಿವರಿಸಿ ತಿಳಿಸಿದ್ದೇ ಆದರೆ, ನಿನ್ನ ಸಮಾಜ-ಗಿಮಾಜ ಎಲ್ಲ ಒಂದು ನಿಮಿಷವೂ ಉಳಿದಿರದು.' ಅದಕ್ಕೆ ಕೇಶವ ಹೇಳಿದ: 'ಹಾಗಾದರೆ ದಯವಿಟ್ಟು ಬೇಡಿ.'

''ಪಾಪ, ಪುಣ್ಯ ಇವು ಏನು ಗೊತ್ತೆ? ಪರಮಹಂಸನಿಗೆ ಕಂಡು ಬರುತ್ತದೆ, ಭಗವಂತನೇ ಸುಮತಿ ಕೊಡುತ್ತಾನೆ, ಆತನೇ ದುರ್ಮತಿ ಕೊಡುತ್ತಾನೆ ಎಂಬುದಾಗಿ. ಹುಳಿ, ಸಿಹಿ ಹಣ್ಣುಗಳಿರುವುದು ನಿನ್ನ ಅನುಭವಕ್ಕೆ ಬಂದಿಲ್ಲವೆ? ಕೆಲವು ಮರ ಸಿಹಿ ಹಣ್ಣು ಬಿಡುತ್ತವೆ, ಇನ್ನು ಕೆಲವು ಹುಳಿ ಹಣ್ಣು ಬಿಡುತ್ತವೆ. ಭಗವಂತ ಸಿಹಿ ಹಣ್ಣು ಬಿಡೋ ಮಾವಿನ ಗಿಡಗಳನ್ನೂ ಸೃಷ್ಟಿಸಿದಾನೆ, ಹುಳಿ ಹಣ್ಣು ಬಿಡೋ ಅಮಟೆ ಗಿಡಗಳನ್ನೂ ಸೃಷ್ಟಿಸಿದಾನೆ.''

ತಾಂತ್ರಿಕ: ''ಹೌದು, ನಿಜ. ಬೆಟ್ಟದ ಮೇಲಕ್ಕೆ ಹೋಗಿ ನೋಡಿದರೆ ಗುಲಾಬಿಯ ತೋಟ ಕಾಣಿಸಿಕೊಳ್ಳುತ್ತದೆ. ಎಲ್ಲಿಯವರೆಗೆ ಕಣ್ಣಿನ ದೃಷ್ಟಿ ಹೋಗುತ್ತದೊ ಅಲ್ಲಿಯವರೆಗೂ ಕೇವಲ ಗುಲಾಬಿ ತೋಟವೇ ಕಾಣಿಸಿಕೊಳ್ಳುತ್ತದೆ.''

ಶ್ರೀರಾಮಕೃಷ್ಣರು: ''ಪರಮಹಂಸನ ಅನುಭವಕ್ಕೆ ಬರುತ್ತದೆ, ಸತ್, ಅಸತ್; ಒಳ್ಳೆಯದು, ಕೆಟ್ಟದ್ದು; ಪಾಪ, ಪುಣ್ಯ ಇವೆಲ್ಲಾ ಭಗವಂತನ ಮಾಯೆಯ ಐಶ್ವರ್ಯ ಎಂಬುದಾಗಿ. ಇದು ಬಹು ದೂರದ ವಿಷಯ. ಈ ಅವಸ್ಥೆಯುಂಟಾಯಿತು ಎಂದರೆ ಸಮಾಜ-ಗಿಮಾಜ ಸಾಧ್ಯವಿಲ್ಲ.''

ತಾಂತ್ರಿಕ: ''ಆದರೆ ಕರ್ಮಫಲ ಉಂಟು ತಾನೆ?''

ಶ್ರೀರಾಮಕೃಷ್ಣರು: ''ಅದೂ ಇದೆ. ಒಳ್ಳೆ ಕರ್ಮ ಮಾಡಿದರೆ ಒಳ್ಳೆ ಫಲ, ಕೆಟ್ಟ ಕರ್ಮ ಮಾಡಿದರೆ ಕೆಟ್ಟ ಫಲ. ಮೆಣಸಿನ ಕಾಯಿ ತಿಂದರೆ ಕಾರ ಹತ್ತಿಕೊಳ್ಳೋದಿಲ್ಲವೆ? ಇವೆಲ್ಲಾ ಭಗವಂತನ ಲೀಲೆ, ಕ್ರೀಡೆ.''

ತಾಂತ್ರಿಕ: "ಹಾಗಾದರೆ ನಮಗೆ ಮಾರ್ಗವೇನು? ನಮ್ಮ ಕರ್ಮ ಫಲವನ್ನು ನಾವು ಅನುಭವಿಸೇ ತೀರಬೇಕು ತಾನೆ?"

ಶ್ರೀರಾಮಕೃಷ್ಣರು: "ಇರಬಹುದು. ಆದರೆ ಭಗವದ್ಭಕ್ತನದು ಬೇರೆ ವಿಷಯ. ಒಂದು ಹಾಡು ಕೇಳು:

ನಿನ್ನ ಬಾಳಿನ ಹೊಲವು ಪಾಳುಬಿದ್ದಿಹುದಲ್ಲೊ
ಕೃಷಿಗೈಯಲೂ ಕೂಡ ತಿಳಿಯದಿರುವೆ!..." (ಉ. ೬೯೨)

ಅವರು ಮತ್ತೆ ಹಾಡಿದರು:

ಜವ ಬರುವ ಬಾಗಿಲನು ಮುಚ್ಚಿರುವೆನದರಿಂದ
ಸಂದೇಹ ತಲ್ಲಣಗಳಿಲ್ಲ ನನಗೆ;
ಒಂದು ಕಂಬದ ಮೇಲೆ ಮೂರು ಹಗ್ಗವ ಬಿಗಿದು
ಒಂಬತ್ತು ಬಾಗಿಲಿನ ಮನೆಯ ಹೊರಗೆ,
ಪರಶಿವನೆ ರಕ್ಷಣೆಗೆ ನಿಂತು ಸಾವಿರದಲದ
ಕಮಲದಲಿ ಮನೆ ಮಾಡಿ ನೆಲಸಿರುವನು.

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ಕಾಶಿಯಲ್ಲಿ ಬ್ರಾಹ್ಮಣನಾದರೂ ಸಾಯಲಿ, ವೇಶ್ಯೆಯಾದರೂ ಸಾಯಲಿ, ಬೇರೆ ಯಾರು ಬೇಕಾದರೂ ಸಾಯಲಿ ಎಲ್ಲರೂ ಶಿವ ಆಗಿಬಿಡುತ್ತಾರೆ. ಯಾವಾಗ ಹರಿನಾಮ, ಕಾಳೀನಾಮ, ರಾಮನಾಮ ಇವುಗಳನ್ನು ಕೇಳಿದೊಡನೇ ಕಣ್ಣಿನಿಂದ ಪ್ರೇಮಾಶ್ರು ಸುರಿಯುವುದೊ, ಬಳಿಕ ಸಂಧ್ಯಾವಂದನೆ ಮೊದಲಾದ ಕ್ರಿಯೆಗಳ ಆವಶ್ಯಕತೆಯೇನಿರದು. ಎಲ್ಲಾ ಕರ್ಮಗಳೂ ಆತನನ್ನು ತಾವು ತಾವಾಗೇ ಬಿಟ್ಟು ತೊಲಗುತ್ತವೆ. ಕರ್ಮಫಲ ಆತನ ಹತ್ತಿರ ಸುಳಿಯುವುದೂ ಇಲ್ಲ."

ಮತ್ತೆ ಪರಮಹಂಸರು ಹಾಡುತ್ತಿದಾರೆ:

ಭಾವುಕನ ಭಾವದೊಲು ಅವನೊಳುದಿಸುವ ಒಲವು,
ಆ ಒಲವಿಗನುಸಾರ ಅವನು ಪಡೆಯುವ ಫಲವು, . . .

ಅವರು ಇನ್ನೊಂದು ಹಾಡು ಹಾಡಿದರು:

ಏತಕೆ, ಇನ್ನೇತಕೆ?
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ
ಪುಣ್ಯಕ್ಷೇತ್ರಗಳೇತಕೆ? . . .

ಬಳಿಕ ಅವರು ಹೇಳುತ್ತಿದಾರೆ: "ಮನುಷ್ಯ ಭಗವಂತನಲ್ಲಿ ಲೀನ

ನಾಗಿಬಿಟ್ಟನೆಂದರೆ ಆತನಲ್ಲಿ ದುರ್ಬುದ್ಧಿಯೇ ಆಗಲಿ, ಪಾಪಬುದ್ಧಿಯೇ ಆಗಲಿ ಉಳಿದುಕೊಂಡಿರದು."

ತಾಂತ್ರಿಕ: "ನೀವು ಹೇಳುತ್ತೀರಲ್ಲ 'ವಿದ್ಯಾ ಅಹಂ' ಅಂತ ಅದು ಉಳಿದುಕೊಂಡಿರುತ್ತದೆ."

ಶ್ರೀರಾಮಕೃಷ್ಣರು: "'ವಿದ್ಯಾ ಅಹಂ', 'ಭಕ್ತ ಅಹಂ', 'ದಾಸ ಅಹಂ', 'ಒಳ್ಳೆ ಅಹಂ' ಇವು ಉಳಿದುಕೊಂಡಿರುತ್ತವೆ. 'ನೀಚ ಅಹಂ' ಹೊರಟುಹೋಗುತ್ತದೆ."

ತಾಂತ್ರಿಕ: "ಇಂದು ನೀವು ನಮ್ಮ ಅನೇಕ ಸಂದೇಹಗಳನ್ನು ನಿವಾರಣೆಮಾಡಿಬಿಟ್ಟರಿ."

ಶ್ರೀರಾಮಕೃಷ್ಣರು: "ಆತ್ಮಸಾಕ್ಷಾತ್ಕಾರವಾಯಿತು ಎಂದರೆ, ಎಲ್ಲಾ ಸಂದೇಹಗಳೂ ನಿವೃತ್ತಿಯಾಗಿಬಿಡುತ್ತವೆ.

"ತಮಃಪ್ರಧಾನ ಭಕ್ತಿಯನ್ನು ಆರೋಪಿಸಿಕೊ. ಜೋರಿನಿಂದ ಹೇಳು: 'ಏನು? ನಾನು ರಾಮನಾಮ ಪಠಿಸಿದೇನೆ, ಕಾಳೀನಾಮ ಪಠಿಸಿದೇನೆ. ನನಗೆಲ್ಲಿಯ ಬಂಧನ? ನನಗೆಲ್ಲಿಯ ಕರ್ಮಫಲ?'"

ಪರಮಹಂಸರು ಹಾಡುತ್ತಿದಾರೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀ ನಾಮವನು ಜಪಿಸುತಿರಲು . . .

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತಿದಾರೆ: "ಶ್ರದ್ಧೆ! ಶ್ರದ್ಧೆ! ಶ್ರದ್ಧೆ! ಒಮ್ಮೆ ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿದ: 'ರಾಮನೇ ಎಲ್ಲವೂ ಆಗಿದಾನೆ' ಎಂಬುದಾಗಿ. ಒಂದು ನಾಯಿ ಶಿಷ್ಯನ ರೊಟ್ಟಿಯನ್ನು ತಿಂದುಬಿಡುವುದರಲ್ಲಿದ್ದಾಗ, ಅದಕ್ಕೆ ಆತ ಹೇಳಿದ: 'ಓ ರಾಮ, ಸ್ವಲ್ಪ ತಾಳು, ಸ್ವಲ್ಪ ತಾಳು. ರೊಟ್ಟಿಗೆ ತುಪ್ಪ ಸವರಿ ಕೊಡುತ್ತೇನೆ.' ಗುರುವಾಕ್ಯದಲ್ಲಿ ಆತನಿಗೆ ಈ ಮಟ್ಟದ ಶ್ರದ್ಧೆ.

"ಯಾವ ಕೆಲಸಕ್ಕೂ ಬಾರದವರಲ್ಲಿ ಶ್ರದ್ಧೆಯುಂಟಾಗೋದಿಲ್ಲ. ಅವರು ಸದಾ ಸಂಶಯಗ್ರಸ್ತರು. ಆತ್ಮಸಾಕ್ಷಾತ್ಕಾರವಾಗದ ಹೊರತು ಎಲ್ಲಾ ಸಂಶಯಗಳೂ ನಿವೃತ್ತಿಯಾಗೋದಿಲ್ಲ.

"ಶುದ್ಧ ಭಕ್ತಿಯಲ್ಲಿ ಯಾವ ಕಾಮನೆಯೂ ಇರದು. ಈ ಭಕ್ತಿಯ ಮೂಲಕ ಭಗವಂತನ ಸಾಕ್ಷಾತ್ಕಾರವನ್ನು ಬೇಗ ಪಡೆದುಕೊಂಡುಬಿಡಬಹುದು. ಅಣಿಮಾದಿ ಸಿದ್ಧಿ ಮುಂತಾದುವುಗಳೇ ಕಾಮನೆಗಳು. ಕೃಷ್ಣ

ಒಮ್ಮೆ ಅರ್ಜುನನಿಗೆ ಹೇಳಿದ: 'ಗೆಳೆಯ, ಅಣಿಮಾದಿ ಸಿದ್ಧಿಗಳಲ್ಲಿ ಕೇವಲ ಒಂದೇ ಒಂದು ನಿನ್ನಲ್ಲಿ ಇದ್ದರೂ, ನಿನಗೆ ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲ. ಅವು ಕೇವಲ ನಿನ್ನ ಶಕ್ತಿಗೆ ಇನ್ನು ಸ್ವಲ್ಪ ಶಕ್ತಿಯನ್ನು ಸೇರಿಸಬಲ್ಲವು.' "

ತಾಂತ್ರಿಕ: "ಈಗಿನ ಕಾಲದಲ್ಲಿ ತಾಂತ್ರಿಕ ಕ್ರಿಯೆ ಫಲಕಾರಿಯಾಗುತ್ತಿಲ್ಲವಲ್ಲ ಏಕೆ?"

ಶ್ರೀರಾಮಕೃಷ್ಣರು: "ಅವುಗಳನ್ನು ಜನ ಸರಿಯಾಗಿ ಮತ್ತು ಭಕ್ತಿಪೂರ್ವಕವಾಗಿ ಮಾಡದೆ ಇರುವುದರಿಂದ."

ಮುಕ್ತಾಯವಾಗಿ ಪರಮಹಂಸರು ಹೇಳುತ್ತಿದಾರೆ: "ಭಕ್ತಿಯೇ ಸಾರ. ನಿಜವಾದ ಭಕ್ತನಿಗೆ ಯಾವ ಭಯವೇ ಆಗಲಿ ಯಾವ ಚಿಂತನೆಯಾಗಲೀ ಇರದು. ಆತನಿಗೆ ಗೊತ್ತಿದೆ ತನ್ನ ಯೋಗಕ್ಷೇಮವೆಲ್ಲ ಭಗವತಿಗೆ ಗೊತ್ತಿದೆ ಎಂಬುದಾಗಿ. ಬೆಕ್ಕು ಇಲಿಯನ್ನು ಒಂದು ವಿಧದಲ್ಲಿ ಕಚ್ಚಿಕೊಂಡಿರುತ್ತದೆ, ಆದರೆ ತನ್ನ ಮರಿಯನ್ನು ಮಾತ್ರ ಬೇರೆ ವಿಧದಲ್ಲಿ."



# ೧೨
## ಪಾನಿಹಾಟಿಯಲ್ಲಿ ಮಹೋತ್ಸವ

೧೮ನೆ ಜೂನ್ ೧೮೮೩, ಜ್ಯೇಷ್ಠ ಶುಕ್ಲ ತ್ರಯೋದಶಿ, ಸೋಮವಾರ

ಕಲ್ಕತ್ತದ ಹತ್ತಿರವಿರುವ ಪಾನಿಹಾಟ ಮಹೋತ್ಸವಕ್ಕೆ ಪರಮಹಂಸ ರಿಗೆ ಆಹ್ವಾನ ಬಂದಿದೆ. ಇದಕ್ಕೆ "ಅವಲಕ್ಕಿ ಮಹೋತ್ಸವ" ಅಂತಲೂ ಹೆಸರು. ಇದು ಶ್ರೀ ಚೈತನ್ಯನ ಶಿಷ್ಯ ರಘುನಾಥದಾಸನಿಂದ ಅಂಕುರಾರ್ಪಣಾ ಮಾಡಲ್ಪಟ್ಟಿತು. ರಘುನಾಥ ಆಗಾಗ ಮನೆಯಿಂದ ಓಡಿಹೋಗಿ ಏಕಾಂತ ದಲ್ಲಿ ಇದ್ದು ಭಗವದಾನಂದದ ಸವಿಯನ್ನು ಸವಿಯುತ್ತಿದ್ದನಂತೆ. ಅದನ್ನು ಕಂಡು ನಿತ್ಯಾನಂದ ಆತನಿಗೆ ಹೇಳಿದನಂತೆ: "ಕಳ್ಳ! ನೀನು ಆಗಾಗ ಮನೆ ಯಿಂದ ಓಡಿಹೋಗಿ ಕೇವಲ ಒಬ್ಬನೇ ಭಗವದಾನಂದವನ್ನ ಅನುಭವಿಸುತ್ತಾ ಇದೀಯೆ. ನಮಗಾರಿಗೂ ಅದು ಗೊತ್ತಾಗದ ಹಾಗೆ ವರ್ತಿಸುತ್ತಿದೀಯೆ. ನಿನಗೆ ಶಿಕ್ಷೆ ವಿಧಿಸುತ್ತೇನೆ. ಇಂದು ನೀನು ಒಂದು ಮಹೋತ್ಸವ ಏರ್ಪಾಡು ಮಾಡಿ ಅದರಲ್ಲಿ ಭಕ್ತರಿಗೆಲ್ಲಾ ಅವಲಕ್ಕಿಯನ್ನು ಹಂಚಬೇಕು." ಅಂದಿ ನಿಂದ ವೈಷ್ಣವರು ಪಾನಿಹಾಟಿಯಲ್ಲಿ ಈ ಅವಲಕ್ಕಿ ಉತ್ಸವವನ್ನ ನಡಸಿ ಕೊಂಡುಬರುತ್ತಿದಾರೆ. ಶ್ರೀ ಚೈತನ್ಯದೇವನ ಅನುಯಾಯಿಗಳು ಸಹಸ್ರ ಸಹಸ್ರಗಟ್ಟಲೆ ಅಲ್ಲಿ ನೆರೆಯುತ್ತಾರೆ. ಅಲ್ಲಿ ಸಂಕೀರ್ತನೆ ಮತ್ತು ನರ್ತನ ವಿಶೇಷವಾದ ಭಾವಭಕ್ತಿಯಿಂದ ನಡೆಯುತ್ತವೆ. ಗಂಗಾ ನದಿಯ ದಡದಲ್ಲಿ ರುವ ರಾಧಾಕೃಷ್ಣರ ದೇವಾಲಯದಲ್ಲಿ ಈ ಮಹೋತ್ಸವ ನಡೆಯುತ್ತದೆ.

ದೇವಾಲಯದ ಮುಖ್ಯ ಪಾಲಕ ಮಣಿಸೇನನಿಂದ ಪರಮಹಂಸರಿಗೆ ಆಹ್ವಾನ ಬಂದಿದೆ. ಪರಮಹಂಸರು ಗಾಡಿ ಮಾಡಿಕೊಂಡು ರಾಮ್, ಮಾಸ್ಟರ್, ರಾಖಾಲ, ಭವನಾಥ ಮತ್ತು ಇನ್ನೂ ಕೆಲವು ಭಕ್ತರೊಡನೆ ಪಾನಿಹಾಟಿಗೆ ಹೊರಟಿದಾರೆ. ದಾರಿಯಲ್ಲಿ ಭಕ್ತರೊಡನೆ ತಮಾಷೆ ಮಾಡು ತ್ತಲೇ ಮುಂದುವರಿಯುತ್ತಿದಾರೆ. ಈಗ ಬಂಡಿ ಪಾನಿಹಾಟಿಯನ್ನು ತಲುಪಿತು. ಪರಮಹಂಸರು ಗಾಡಿಯಿಂದ ಇಳಿದೊಡನೆ ನೇರವಾಗಿ ಗುಂಪಿನೊಳಕ್ಕೆ ನುಗ್ಗಿಯೇ ಬಿಡುತ್ತಿದಾರೆ. ಅಲ್ಲಿ ಮಣಿಸೇನನ ಗುರುವಾದ ನವದ್ವೀಪಗೋಸ್ವಾಮಿಯು ಕೀರ್ತನಪಾರ್ಟಿಯೊಡನೆ ಬೆರೆತು ಇಡೀ ಜಗತ್ತನ್ನೇ ಮರೆತು ನರ್ತಿಸುತ್ತಿದಾರೆ. ಆಗಾಗ ನಿಂತೇ ಸಮಾಧಿಸ್ಥರಾಗಿ

ಬಿಡುತ್ತಿದಾರೆ. ಅವರು ಕೆಳಕ್ಕೆ ಬಿದ್ದುಬಿಡಬಹುದೆಂದು ಆ ಸಂದರ್ಭಗಳಲ್ಲೆಲ್ಲಾ ನವದ್ವೀಪಗೋಸ್ವಾಮಿ ಅವರನ್ನು ಹಿಡಿದುಕೊಂಡಿರುತ್ತಿದಾನೆ. ಈ ವರ್ಷದ ಉತ್ಸವಕ್ಕೆ ಲಕ್ಷಾಂತರ ಜನ ಬಂದುಬಿಟ್ಟಿದಾರೆ. ಯಾವ ಕಡೆಗೆ ಕಣ್ಣು ತಿರುಗಿಸಿ ನೋಡಿದರೂ, ಕೇವಲ ಮನುಷ್ಯರ ತಲೆಯೇ ಕಂಡು ಬರುತ್ತಿದೆ. ಪರಮಹಂಸರ ಪ್ರೇಮೋನ್ಮತ್ತತೆಯ ಸೋಂಕು ಆ ಇಡೀ ಜನಸಂದಣಿಗೇ ತಗುಲಿ ಅವರೆಲ್ಲರೂ ಪ್ರೇಮೋನ್ಮತ್ತರಾಗಿ ಆಕಾಶ ಬಿರಿಯೋ ರೀತಿಯಲ್ಲಿ ಭಗವನ್ನಾಮೋಚ್ಚಾರಣೆ ಮಾಡುತ್ತಿದಾರೆ. ತಾಳ, ಮೃದಂಗ ಇವೇ ಮೊದಲಾದುವು ಬಹಳ ಇಂಪಾದ ಶಬ್ದವನ್ನು ಹೊರಡಿಸುತ್ತಿವೆ. ಎಲ್ಲರ ಮುಖದಲ್ಲೂ ಭಗವದಾನಂದ ಎಂಬುದು ಸುಮ್ಮನೆ ನಲಿಯುತ್ತಿದೆ. ಅಲ್ಲಿ ನೆರೆದಿದ್ದ ಭಕ್ತರಿಗೆಲ್ಲಾ ತೋರಿಬಂತು ಸಾಕ್ಷಾತ್ ಶ್ರೀ ಚೈತನ್ಯ ಪ್ರಭುವೇ ಪರಮಹಂಸರ ರೂಪದಲ್ಲಿ ಬಂದಿದಾನೆ ಎಂಬುದಾಗಿ. ಹೂವು ಮತ್ತು ಬತ್ತಾಸು ಎಲ್ಲಾ ಕಡೆಯಿಂದಲೂ ಬಂದು ಅವರ ತಲೆಯ ಮೇಲೆ ಬೀಳುತ್ತಲೇ ಇವೆ. ಜನರು ಅವರ ಪಾದಗಳಿಗೆ ಹೂವು ಅರ್ಪಿಸಿ ಅಡ್ಡ ಬೀಳುತ್ತಲೇ ಇದಾರೆ. ಹರಿಸಂಕೀರ್ತನೆಯ ಧ್ವನಿ ದೂರಕ್ಕೆ ಸಮುದ್ರ ಗರ್ಜನೆಯಂತೆ ಕೇಳಿಬರುತ್ತಿದೆ.

ಪರಮಹಂಸರಿಗೆ ಭಾವಾವಿಷ್ಟತೆಯ ವಿವಿಧ ಅವಸ್ಥೆಗಳು ಒಂದಾದ ಮೇಲೊಂದು ಬರುತ್ತಿರುತ್ತವೆ. ಗಾಢಸಮಾಧಿಯಲ್ಲಿ ಮುಖದಿಂದ ಪ್ರೇಮಾನಂದವನ್ನು ಹೊರಸೂಸುತ್ತ ಪ್ರತಿಮೆಯೋಪಾದಿಯಲ್ಲಿ ಸ್ಥಿರವಾಗಿ ನಿಂತುಕೊಂಡಿರುತ್ತಾರೆ. ಅರ್ಧ ಬಾಹ್ಯದಶೆಯಲ್ಲಿ ಕೆಲವು ವೇಳೆ ಮತ್ತಗೆ, ಇನ್ನೂ ಕೆಲವು ವೇಳೆ ಸಿಂಹಪರಾಕ್ರಮದಿಂದ ನರ್ತಿಸುತ್ತಿರುತ್ತಾರೆ. ಬಾಹ್ಯದಶೆಯಲ್ಲಿ ಎಲ್ಲರನ್ನೂ ಸೇರಿಸಿಕೊಂಡು ಒಟ್ಟಿಗೆ ಹಾಡುತ್ತಿರುತ್ತಾರೆ. ಈಗ ಪರಮಹಂಸರು ಎಲ್ಲರನ್ನೂ ಸೇರಿಸಿಕೊಂಡು ಒಟ್ಟಿಗೆ ಹಾಡುತ್ತಿದಾರೆ:

ಹಂನಾಮವನು ನುತಿಸಿ, ಆನಂದ ಬಾಷ್ಪವನು
ಕರೆವಣ್ಣತಮ್ಮದಿರು, ಇವರು ನೋಡು ! . . . (ಉ. ೯೨)

ಮತ್ತೆ ಪರಮಹಂಸರು ಹಾಡುತ್ತಿದಾರೆ:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ಮೋದದಿ ! . . .

ಜನಸಂದಣಿ ಪರಮಹಂಸರನ್ನು ಸುತ್ತುಗಟ್ಟಿ ರಾಧಾಕೃಷ್ಣದೇವಾಲ

ಯದ ಕಡೆ ಬರುತ್ತಿದೆ. ಎಲ್ಲೋ ಕೆಲವರಿಗೆ ಮಾತ್ರ ದೇವಾಲಯದ ಒಳಕ್ಕೆ ಹೋಗಲು ಸಾಧ್ಯವಾಯಿತು. ಉಳಿದವರು ಹೊರಗಡೆಯೇ ನಿಂತು ಪರಮಹಂಸರ ದರ್ಶನ ಪಡೆಯಲು ಒಬ್ಬರನ್ನೊಬ್ಬರು ನೂಕಾಡುತ್ತಿದಾರೆ. ಪರಮಹಂಸರು ಪ್ರೇಮೋನ್ಮತ್ತರಾಗಿ ದೇವಾಲಯದ ಪ್ರಾಂಗಣದಲ್ಲಿ ನರ್ತಿಸಲಾರಂಭಿಸಿದಾರೆ. ಆಗಾಗ ಅವರು ಸಮಾಧಿಸ್ಥರಾಗುತ್ತಲೇ ಇದಾರೆ. ಅವರ ಸುತ್ತ ನೆರೆದಿದ್ದ ನೂರಾರು ಜನ ಭಗವನ್ನಾಮವನ್ನು ಕೂಗಿ ಹೇಳುತ್ತಿದಾರೆ. ದೇವಾಲಯದ ಹೊರಗಡೆ ಇದ್ದ ಸಹಸ್ರಾರು ಜನಕ್ಕೂ ಆ ಸೋಂಕು ತಗುಲಿ ಅವರೂ ತಮ್ಮ ಕಂಠ ಕಿತ್ತುಹೋಗುವ ಹಾಗೆ ಭಗವನ್ನಾಮವನ್ನು ಕೂಗಿ ಹೇಳುತ್ತಿದಾರೆ. ಇಲ್ಲಿಂದ ಹೊರಟ ಧ್ವನಿ ಗಂಗೆಯಲ್ಲಿ ದೋಣಿಯಮೇಲೆ ಕುಳಿತಿದ್ದವರಿಗೂ ಕೇಳಿಬಂದು ಅವರೂ ಭಗವನ್ನಾಮವನ್ನು ತಮ್ಮ ಉಚ್ಚ ಕಂಠದಿಂದ ಹೇಳುತ್ತಿದಾರೆ.

ಕೀರ್ತನೆ ಮುಗಿದನಂತರ ಮಣಿಸೇನ ಪರಮಹಂಸರನ್ನೂ, ನವದ್ವೀಪ ಗೋಸ್ವಾಮಿಯನ್ನೂ ಒಂದು ಕೊಠಡಿಗೆ ಕರೆದುಕೊಂಡುಹೋಗಿ ಉಪಾಹಾರ ಮಾಡಿಸುತ್ತಿದಾನೆ. ಅವರು ತಿಂದು ಮುಗಿಸಿದನಂತರ, ಭಗವತ್ಪ್ರಸಾದ ರಾಮನಿಗೆ ಮಾಸ್ಟರಿಗೆ ಮತ್ತು ಉಳಿದವರಿಗೂ ದೊರೆಯಿತು.

ಅಪರಾಹ್ನದಲ್ಲಿ ಪರಮಹಂಸರು ಭಕ್ತರೊಡನೆ ಮಣಿಸೇನನ ಬೈಠಕ್ ಖಾನೆಯಲ್ಲಿ ಕುಳಿತುಕೊಂಡಿದಾರೆ. ನವದ್ವೀಪಗೋಸ್ವಾಮಿಯೂ ಹತ್ತಿರ ಕುಳಿತಿದಾನೆ. ಮಣಿಸೇನ ಪರಮಹಂಸರಿಗೆ ಗಾಡಿ ಬಾಡಿಗೆಯನ್ನು ತಂದು ಕೊಟ್ಟ. ರಾಮನೇ ಮೊದಲಾದವರನ್ನು ನಿರ್ದೇಶಿಸಿ ಪರಮಹಂಸರು ಹೇಳುತ್ತಿದಾರೆ: "ಅವರು ಏಕೆ ನಿನ್ನಿಂದ ಗಾಡಿ ಬಾಡಿಗೆ ತೆಗೆದುಕೊಳ್ಳಬೇಕು? ಅವರು ಹಣ ಸಂಪಾದನೆಮಾಡುತ್ತಿದಾರಲ್ಲ." ಈಗ ಪರಮಹಂಸರು ನವದ್ವೀಪಗೋಸ್ವಾಮಿಯೊಡನೆ ಮಾತುಕತೆಯಲ್ಲಿ ತೊಡಗಿದಾರೆ.

ಶ್ರೀರಾಮಕೃಷ್ಣರು: "ಭಕ್ತಿ ಹಣ್ಣಾಯಿತು ಎಂದರೆ ಅದು ಭಾವವಾಗಿ ಪರಿಣಮಿಸಿಬಿಡುತ್ತದೆ. ಅನಂತರ ಮಹಾಭಾವ, ಬಳಿಕ ಪ್ರೇಮ, ಕೊನೆಗೆ ವಸ್ತುಲಾಭ (ಭಗವಂತನ ಸಾಕ್ಷಾತ್ಕಾರ). ಗೌರಾಂಗನಿಗೆ ಮಹಾಭಾವ ಮತ್ತು ಪ್ರೇಮ ಎರಡೂ ಉಂಟಾಗಿದ್ದುವು. ಪ್ರೇಮ ಉದಯವಾಯಿತು ಎಂದರೆ ಈ ಜಗತ್ತು ಮರೆತೇಹೋಗಿಬಿಡುತ್ತದೆ; ಅಷ್ಟು ಪ್ರಿಯವಾದ ಸ್ವಂತ ದೇಹವೂ ಮರೆತುಹೋಗಿಬಿಡುತ್ತದೆ. ಗೌರಾಂಗನಿಗೆ ಈ ಪ್ರೇಮ ಉಂಟಾಗಿತ್ತು. ಸಮುದ್ರ ಕಣ್ಣಿಗೆ ಬಿದ್ದಾಗ ಅದು ಯಮುನೆ

ಎಂದು ಭಾವಿಸಿ ಅದಕ್ಕೆ ದುಮುಕಿಬಿಟ್ಟ. ಸಾಮಾನ್ಯ ಜೀವರಿಗೆ ಮಹಾ ಭಾವವೇ ಆಗಲಿ, ಪ್ರೇಮವೇ ಆಗಲಿ ಉಂಟಾಗೋದಿಲ್ಲ. ಅವರು ಭಾವದ ವರೆಗೆ ಮಾತ್ರ ಮುಂದುವರಿಯಬಲ್ಲರು. ಗೌರಾಂಗದೇವನಿಗೆ ಮೂರು ಅವಸ್ಥೆಯೂ ಉಂಟಾಗುತ್ತಿತ್ತು. ಅಲ್ಲವೆ?"

ನವದ್ವೀಪ: "ಹೌದು, ನಿಜ. ಅಂತರ್ದಶೆ, ಅರ್ಧ ಬಾಹ್ಯದಶೆ, ಬಾಹ್ಯದಶೆ."

ಶ್ರೀರಾಮಕೃಷ್ಣರು: "ಅಂತರ್ದಶೆಯಲ್ಲಿ ಆತ ಸಮಾಧಿಸ್ಥನಾಗಿ ರುತ್ತಿದ್ದ. ಅರ್ಧ ಬಾಹ್ಯದಶೆಯಲ್ಲಿ ನರ್ತನಮಾಡಲು ಮಾತ್ರ ಸಾಧ್ಯ ವಾಗುತ್ತಿತ್ತು. ಬಾಹ್ಯದಶೆಯಲ್ಲಿ ನಾಮಸಂಕೀರ್ತನೆ ಮಾಡುತ್ತಿದ್ದ."

ನವದ್ವೀಪ ತನ್ನ ಮಗನನ್ನು ಪರಮಹಂಸರಿಗೆ ಪರಿಚಯಮಾಡಿ ಕೊಟ್ಟ. ಆತ ಇನ್ನೂ ಯುವಕ, ಶಾಸ್ತ್ರಾಭ್ಯಾಸ ಮಾಡುತ್ತಿದಾನೆ. ಆತ ಪರಮಹಂಸರಿಗೆ ಪ್ರಣಾಮಮಾಡಿದ.

ನವದ್ವೀಪ: "ಮನೆಯಲ್ಲಿ ಶಾಸ್ತ್ರಗಳನ್ನು ಓದುತ್ತಿದಾನೆ. ವೇದ ಗ್ರಂಥಗಳು ಹಿಂದೆ ಸಿಕ್ಕುವುದೇ ದುರ್ಲಭವಾಗಿತ್ತು. ಮ್ಯಾಕ್ಸ್‌ಮುಲ್ಲರ್ ಭಾಷಾಂತರಿಸಿದಾನೆ; ಆದ್ದರಿಂದ ಜನ ಈಗ ಅವನ್ನು ಓದಬಲ್ಲರು."

ಶ್ರೀರಾಮಕೃಷ್ಣರು: "ಅಧಿಕವಾದ ಶಾಸ್ತ್ರಾಧ್ಯಯನ ಒಳ್ಳೆಯ ದನ್ನು ಮಾಡುವುದಕ್ಕೆ ಬದಲು ಹೆಚ್ಚಾಗಿ ಹಾನಿಯನ್ನೇ ತರುತ್ತದೆ. ಮೊದಲು ಶಾಸ್ತ್ರಗಳ ಸಾರ ಏನು ಎಂಬುದನ್ನ ಅರಿತುಕೊಂಡುಬಿಡಬೇಕಾ ಗುತ್ತದೆ. ಬಳಿಕ ಶಾಸ್ತ್ರಗ್ರಂಥಗಳ ಆವಶ್ಯಕತೆಯೇನಿರುತ್ತದೆ? ಮೊದಲು ಸಾರ ಏನು ಎಂಬುದನ್ನು ಅರಿತುಕೊಂಡುಬಿಟ್ಟು, ಬಳಿಕ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆಯ ಆಳಕ್ಕೆ ಮುಳುಗಬೇಕು.

"ಭಗವತಿ ವೇದಾಂತದ ಸಾರ ಏನು ಎಂಬುದನ್ನ ನನಗೆ ತಿಳಿಸಿ ಕೊಟ್ಟುಬಿಟ್ಟಿದಾಳೆ—ಬ್ರಹ್ಮ ಸತ್ಯ, ಜಗನ್ಮಿಥ್ಯಾ ಎಂಬುದಾಗಿ. ಗೀತೆಯ ಸಾರ—ಅದನ್ನು ಒಂದು ಹತ್ತಾವರ್ತಿ ಆವೃತ್ತಿಮಾಡಿದರೆ ಅದು ಏನಾಗಿ ಕೇಳಿಬರುತ್ತದೊ ಅದೇ. ಅಂದರೆ ಅದು 'ತ್ಯಾಗಿ', 'ತ್ಯಾಗಿ' ಎಂಬು ದಾಗಿ ಕೇಳಿಬರುತ್ತದೆ. ಆದ್ದರಿಂದ ಗೀತೆಯ ಸಾರ: 'ಹೇ ಜೀವ, ಎಲ್ಲ ವನ್ನೂ ತ್ಯಾಗಮಾಡಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆಯಲ್ಲಿ ತೊಡಗು' ಎಂದು."

ನವದ್ವೀಪ: "ತ್ಯಾಗಮಾಡಬೇಕೆಂದು ಮನಸ್ಸಿಗೆಲ್ಲಿ ಅನಿಸುತ್ತದೆ?"

ಶ್ರೀರಾಮಕೃಷ್ಣರು: "ನೀವು ಗೋಸ್ವಾಮಿಗಳು. ನಿಮಗೆ ಅರ್ಚಕರ ಕೆಲಸ ಇದೆ. ನೀವು ಸಂಸಾರವನ್ನ ತ್ಯಜಿಸಲಾಗೋದಿಲ್ಲ; ಹಾಗೆ ಮಾಡಿದರೆ ದೇವಾಲಯಗಳಲ್ಲಿ ಭಗವಂತನ ಸೇವೆ ಹೇಗೆ ನಡೆಯಬೇಕು? ನೀವು ಮಾನಸಿಕವಾಗಿ ತ್ಯಾಗಮಾಡಿ.

"ಭಗವಂತನೇ ಲೋಕಶಿಕ್ಷಣಕ್ಕಾಗಿ ನಿಮ್ಮನ್ನು ಈ ಸಂಸಾರದಲ್ಲಿ ಇಟ್ಟಿದಾನೆ. ನೀನು ಎಷ್ಟೇ ಮನಸ್ಸು ಮಾಡಿದರೂ ನಿನ್ನ ಕೈಯಲ್ಲಿ ಈ ಸಂಸಾರ ತ್ಯಜಿಸಲಾಗೋದಿಲ್ಲ. ಭಗವಂತ ನಿನಗೆ ಅಂಥಾ ಸ್ವಭಾವ ಕೊಟ್ಟಿದಾನೆ, ನೀನು ಸಂಸಾರ ಕಾರ್ಯಗಳನ್ನ ಮಾಡಲೇಬೇಕಾಗುತ್ತದೆ.

"ಕೃಷ್ಣ ಅರ್ಜುನನಿಗೆ ಹೇಳಿದ: 'ನೀನು ಯುದ್ಧಮಾಡುವುದಿಲ್ಲ ಅಂತ ಹೇಳುತ್ತಿದೀಯಲ್ಲ ಇದೇನು ಹುಚ್ಚು? ಹಾಗೆ ಇಚ್ಛಿಪಟ್ಟರೂ ನೀನು ಯುದ್ಧಮಾಡದೆ ಇರಲಾಗೋದಿಲ್ಲ. ನಿನ್ನ ಸ್ವಭಾವವೇ ನಿನ್ನ ಕೈಯಲ್ಲಿ ಯುದ್ಧ ಮಾಡಿಸಿಬಿಡುತ್ತದೆ.'"

ಶ್ರೀಕೃಷ್ಣ ಅರ್ಜುನನಿಗೆ ಹೀಗೆ ಹೇಳುತ್ತಿದಾನೆ ಎಂಬುದಾಗಿ ಹೇಳು ಹೇಳುತ್ತಿದ್ದ ಹಾಗೇ ಪರಮಹಂಸರು ಸಮಾಧಿಸ್ಥರಾಗುತ್ತಿದಾರೆ. ರೆಪ್ಪೆ ಹೊಡೆಯುವುದರೊಳಗೇ ಅವರ ಶರೀರ ಸ್ಥಿರವಾಗಿಬಿಟ್ಟಿತು, ಕಣ್ಣು ಎವೆ ಯಿಕ್ಕುತ್ತಿಲ್ಲ. ಉಸಿರು ಆಡುತ್ತಿದೆಯೊ ಇಲ್ಲವೊ ಹೇಳಲಾಗುತ್ತಿಲ್ಲ. ಪರಮಹಂಸರಲ್ಲಿ ಆದ ಈ ವಿದ್ಯುದ್ವೇಗದ ಪರಿವರ್ತನೆ ನೋಡಿ ನವದ್ವೀಪ ಗೋಸ್ವಾಮಿ, ಆತನ ಮಗ ಮತ್ತು ಉಳಿದ ಭಕ್ತರು ಆಶ್ಚರ್ಯಚಕಿತರಾಗಿ ಪರಮಹಂಸರನ್ನು ನೋಡುತ್ತಿದಾರೆ.

ಸ್ವಲ್ಪ ಪ್ರಕೃತಿಸ್ಥರಾಗಿ ಪರಮಹಂಸರು ನವದ್ವೀಪಗೋಸ್ವಾಮಿಗೆ ಹೇಳುತ್ತಿದಾರೆ: "ಯೋಗ, ಭೋಗ. ಗೋಸ್ವಾಮಿ ವಂಶಸ್ಥನಾದ ನಿನಗೆ ಎರಡೂ ಇವೆ. ಈಗ ನೀನು ಕೇವಲ ಪ್ರಾರ್ಥನೆಮಾಡು. ವ್ಯಾಕುಲತೆಯಿಂದ ಪ್ರಾರ್ಥನೆ ಮಾಡು: 'ಹೇ ಭಗವಂತ, ನಿನ್ನ ಈ ಭುವನಮೋಹಿನಿಯ ಐಶ್ವರ್ಯ ನನಗೆ ಬೇಕಾಗಿಲ್ಲ. ನನಗೆ ನೀನೊಬ್ಬನೇ ಬೇಕು!' ಆತನೇನೊ ನಿಶ್ಚಯವಾಗೂ ಸರ್ವಭೂತಗಳಲ್ಲೂ ಇದಾನೆ. ಹಾಗಾದರೆ ಭಕ್ತ ಅನ್ನಿಸಿಕೊಳ್ಳುವವನು ಯಾರು? ಯಾರ ಮನಸ್ಸು ಪ್ರಾಣ ಅಂತರಾತ್ಮ ಎಲ್ಲವೂ ಭಗವಂತನಲ್ಲಿ ಲೀನವಾಗಿಬಿಟ್ಟಿವೆಯೊ ಆತ."

ಪರಮಹಂಸರು ಪೂರ್ಣವಾಗಿ ಪ್ರಕೃತಿಸ್ಥರಾಗಿದಾರೆ. ತಮ್ಮ ಸಮಾಧಿಯ ಸಂಬಂಧವಾಗಿ ನವದ್ವೀಪನಿಗೆ ಹೇಳುತ್ತಿದಾರೆ: "ಕೆಲಕೆಲವರು

ಹೇಳುತ್ತಾರೆ, ನನ್ನ ಈ ಅವಸ್ಥೆ ಒಂದು ವಿಧವಾದ ರೋಗ ಎಂಬುದಾಗಿ. ಅವರಿಗೆ ನನ್ನ ಉತ್ತರ: 'ಯಾರ ಚೇತನದಿಂದ ಈ ಜಗತ್ತು ಚೇತನಮಯವಾಗಿ ಕಾಣುವುದೊ, ಅಂಥವನ ಮೇಲೆ ಧ್ಯಾನಮಾಡಿದರೆ ಮನುಷ್ಯ ಅಚೇತನನಾಗಲು ಎಂದಿಗಾದರೂ ಸಾಧ್ಯವೇ?' ಎಂದು."

ಮಣಿಸೇನ ತಾನು ಆಹ್ವಾನಿಸಿದ್ದ ಬ್ರಾಹ್ಮಣರಿಗೆ, ವೈಷ್ಣವರಿಗೆ ತಕ್ಕ ಸಂಭಾವನೆಯನ್ನು ಒಪ್ಪಿಸಿ ಅವರನ್ನು ಬೀಳ್ಕೊಟ್ಟ. ಆತ ಪರಮಹಂಸರನ್ನು ಸಮೀಪಿಸಿ ಅವರಿಗೆ ಐದು ರೂಪಾಯಿ ಕೊಡಲು ಬಂದ. ತಾವು ದುಡ್ಡನ್ನು ಮುಟ್ಟುವ ಹಾಗಿಲ್ಲ ಎಂಬುದಾಗಿ ಪರಮಹಂಸರು ಹೇಳಿದರು. ಅವರು ಹಾಗೆ ಹೇಳಿದರೂ ಮಣಿಸೇನ ಬಿಡುತ್ತಿಲ್ಲ. ನಿನ್ನ ಗುರುವಿನ ಆಣೆಯಾಗೂ ನನ್ನನ್ನು ಬಲಾತ್ಕರಿಸಬೇಡ ಎಂದರು. ಹಾಗೆಂದರೂ ಆತ ಸುಮ್ಮನೆ ಬಿಡುತ್ತಿಲ್ಲ. ಆಗ ಪರಮಹಂಸರು ಬೇಸರಗೊಂಡು, ತಾವು ಸ್ವೀಕರಿಸಬಹುದೇ ಎಂಬುದಾಗಿ ಮಾಸ್ಟರನ್ನು ಕೇಳಿದರು. ಆತ ಬಹಳವಾಗಿ ಪ್ರತಿಭಟಿಸಿ ಹೇಳಿದ: "ಎಲ್ಲಾದರೂ ಉಂಟೆ? ಪ್ರಪಂಚದ ಮೇಲೆ ಪ್ರಪಂಚ ಬಿದ್ದರೂ ಸ್ವೀಕರಿಸಬೇಡಿ."

ಆಗ ಮಣಿಸೇನನ ಸ್ನೇಹಿತರು ಪರಮಹಂಸರಿಗೆ ಮಾವಿನ ಹಣ್ಣು, ಸಂದೇಶ (ಸಿಹಿ ತಿಂಡಿ) ಕೊಂಡುಕೊಡುವಂತೆ ಹೇಳಿ ರಾಖಾಲನ ಕೈಗೆ ಆ ಹಣವನ್ನು ಕೊಟ್ಟರು. ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳಿದರು: "ನಾನು ಆತನಿಗೆ ನಿನ್ನ ಗುರುವಿನ ಆಣೆಯಾಗೂ ಅಂತ ಹೇಳಿಬಿಟ್ಟಿದೇನೆ. ಆದರೂ ರಾಖಾಲ ಅದನ್ನು ಸ್ವೀಕರಿಸಿದಾನೆ. ಅದಕ್ಕೆ ಅವನೇ ಜವಾಬ್ದಾರ."

ಪರಮಹಂಸರು ಭಕ್ತರೊಡನೆ ಒಂದು ಗಾಡಿಗೆ ಹತ್ತಿದರು. ದಕ್ಷಿಣೇಶ್ವರಕ್ಕೆ ಹಿಂದಿರುಗುತ್ತಾರೆ. ದಾರಿಯಲ್ಲಿ ಮತಿಶೀಲರ ದೇವಾಲಯದ ತೋಟ ಸಿಕ್ಕುತ್ತದೆ. ಬಹಳ ಕಾಲದಿಂದ ಪರಮಹಂಸರು ಮಾಸ್ಟರಿಗೆ ಹೇಳುತ್ತಿದ್ದರು, ತಮ್ಮನ್ನು ಒಂದು ದಿನ ಅಲ್ಲಿಗೆ ಕರೆದುಕೊಂಡುಹೋಗುವಂತೆ. ಅಲ್ಲಿನ ಕೊಳದಲ್ಲಿ ಈಜಾಡುವ ಮೀನುಗಳನ್ನು ತೋರಿಸಿ ನಿರಾಕಾರ ಧ್ಯಾನವನ್ನು ಹೇಗೆ ಮಾಡಬೇಕು ಎಂಬುದನ್ನ ಮಾಸ್ಟರಿಗೆ ಪ್ರತ್ಯಕ್ಷವಾಗಿ ತೋರಿಸಬೇಕೆಂಬ ಇಚ್ಛೆ ಅವರಿಗೆ. ಆ ಕೊಳದಲ್ಲಿ ಸಾಕಿದ ಮೀನುಗಳು ಹೇರಳವಾಗಿ ಇವೆ. ಯಾರೂ ಅವಕ್ಕೆ ತೊಂದರೆಮಾಡುತ್ತಿಲ್ಲ. ಅವನ್ನು ನೋಡಲು ಬರುವವರು ಅವಕ್ಕೆ ಪುರಿ ಮೊದಲಾದ ಆಹಾರಗಳನ್ನು ಹಾಕಿದೊಡನೇ ದೊಡ್ಡ ದೊಡ್ಡ ಮೀನುಗಳ ಹಿಂಡೇ ಬಂದು ಒಂದರಮೇಲೊಂದು

ಬಿದ್ದು ಆಹಾರವನ್ನು ತಿನ್ನಲು ಪ್ರಯತ್ನಿಸುತ್ತವೆ. ಯಾವ ಭಯವೂ ಇಲ್ಲದೆ ಅವು ಅಲ್ಲಿ ಈಜಾಡುತ್ತ ಕ್ರೀಡಿಸುತ್ತಿರುತ್ತವೆ.

ಆ ಕೊಳದ ಹತ್ತಿರಕ್ಕೆ ಬಂದು ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ: "ನೋಡು ಈ ಮೀನುಗಳ ಕಡೆಗೆ. ನಿರಾಕಾರದ ಮೇಲೆ ಧ್ಯಾನ ಮಾಡುವುದು ಎಂದರೆ, ಈ ಮೀನುಗಳು ಆನಂದದಿಂದ ಈ ಕೊಳದಲ್ಲಿ ಈಜಾಡುತ್ತಿರುವ ಹಾಗೆ ಚಿದಾನಂದಸಾಗರದಲ್ಲಿ ಈಜಾಡುವಿಕೆ."

೨೫ನೆ ಜೂನ್ ೧೮೮೪, ಜ್ಯೇಷ್ಠ ಕೃಷ್ಣ ಪಂಚಮಿ, ಸೋಮವಾರ.

ಶ್ರೀರಾಮಕೃಷ್ಣರು ಕಲ್ಕತ್ತದಲ್ಲಿ ಬಲರಾಮವಸುವಿನ ಮನೆಗೆ ಬಂದಿದಾರೆ. ರಾಖಾಲ, ಮಾಸ್ಟರ್ ಹತ್ತಿರ ಕುಳಿತಿದಾರೆ. ಪರಮಹಂಸರು ಭಾವಾವಿಷ್ಟರಾಗಿದಾರೆ. ಆ ಅವಸ್ಥೆಯಲ್ಲೇ ಭಕ್ತರೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನೋಡಿ, ಹೃತ್ಪೂರ್ವಕವಾಗಿ ಪ್ರಾರ್ಥನೆ ಮಾಡಿದರೆ ಸ್ವಸ್ವರೂಪ ದರ್ಶನ ಪಡೆಯಬಹುದು. ಆದರೆ ಈ ಪ್ರಾಪಂಚಿಕ ವಸ್ತುಗಳ ಮೇಲಿನ ಭೋಗಾಸಕ್ತಿ ಎಷ್ಟು ಪ್ರಮಾಣದಲ್ಲಿ ಸಾಧಕನಲ್ಲಿ ಇರುವುದೊ ಅದಕ್ಕನುಗುಣವಾಗಿ ಆತನಿಗೆ ಸ್ವಸ್ವರೂಪ ದರ್ಶನ ತಡವಾಗುತ್ತದೆ."

ಮಾಸ್ಟರ್: "ಹೌದು. ನೀವು ಯಾವಾಗಲೂ ಹೇಳುತ್ತೀರಲ್ಲ ಸಾಧನೆಯಲ್ಲಿ ಮುಳುಗಬೇಕು ಅಂತ."

ಶ್ರೀರಾಮಕೃಷ್ಣರು ಆನಂದದಿಂದ: "ಹೌದು! ಹಾಗೇ ಮಾಡಬೇಕು. ನೋಡು, ಎಲ್ಲರಿಗೂ ಆತ್ಮಸಾಕ್ಷಾತ್ಕಾರ ಸಾಧ್ಯ."

ಮಾಸ್ಟರ್: "ಅದು ನಿಜ. ಆದರೆ ಭಗವಂತ ಕರ್ತ. ಜೀವಿಗಳ ಯೋಗ್ಯತೆಗನುಸಾರ ಆತ ವಿವಿಧ ಜೀವಿಗಳಲ್ಲಿ ವಿವಿಧ ರೀತಿಯಾಗಿ ವ್ಯಕ್ತವಾಗಿದಾನೆ. ಕೆಲವರಿಗೆ ಆತ್ಮಜಾಗೃತಿಯನ್ನುಂಟುಮಾಡಿಬಿಡುತ್ತಾನೆ, ಇನ್ನು ಕೆಲವರನ್ನು ಅಜ್ಞಾನದಲ್ಲಿಡುತ್ತಾನೆ."

ಶ್ರೀರಾಮಕೃಷ್ಣರು: "ಇಲ್ಲ, ಅದು ಹಾಗಲ್ಲ. ವ್ಯಾಕುಲಚಿತ್ತದಿಂದ ಆತನಿಗೆ ಪ್ರಾರ್ಥನೆ ಮಾಡಬೇಕು. ಹೃತ್ಪೂರ್ವಕ ಪ್ರಾರ್ಥನೆಗೆ ಆತ ಕಿವಿಗೊಟ್ಟೇಗೊಡುತ್ತಾನೆ."

ಒಬ್ಬ ಭಕ್ತ: "ಅದು ಸರಿ. ನಮ್ಮಲ್ಲಿ 'ಅಹಂ' ಎಂಬುದು ಇರುವುದರಿಂದ ಪ್ರಾರ್ಥನೆ ಮಾಡಬೇಕಾಗುತ್ತದೆ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಲೀಲೆಯ ಸಹಾಯ ತೆಗೆದು

ಕೊಂಡು ನಿತ್ಯಕ್ಕೆ ಹತ್ತಬೇಕು. ಇದು ಏಣಿಯ ಸಹಾಯದಿಂದ ಅಟ್ಟಕ್ಕೆ ಹತ್ತಿದ ಹಾಗೆ. ನಿತ್ಯದ ದರ್ಶನ ದೊರೆತನಂತರ, ಅಲ್ಲಿಂದ ಇಳಿದುಬಂದು ಲೀಲೆಯಲ್ಲಿ ಭಕ್ತಿ ಮತ್ತು ಭಕ್ತರನ್ನು ಆಶ್ರಯಿಸಿ ಇರಬೇಕು. ಇದು ನನ್ನ ಕೊನೆಯ ಮತ್ತು ಪೂರ್ಣ ಅಭಿಮತ.

"ಭಗವಂತನಿಗೆ ಅನೇಕ ರೂಪಗಳಿವೆ; ಬಗೆ ಬಗೆಯಾಗಿ ಕ್ರೀಡಿಸುತ್ತಾನೆ—ಭಗವಲ್ಲೀಲೆ, ದೇವಲೀಲೆ, ನರಲೀಲೆ, ಜಗಲ್ಲೀಲೆ ಇತ್ಯಾದಿಯಾಗಿ. ಆತ ಮನುಷ್ಯನ ರೂಪ ಧರಿಸಿ, ಎಂದರೆ ಅವತಾರವೆತ್ತಿ ಪ್ರೇಮ ಮತ್ತು ಭಕ್ತಿಯನ್ನು ಹರಡಲೋಸುಗ ಪ್ರತಿಯೊಂದು ಯುಗದಲ್ಲೂ ಈ ಧರೆಗೆ ಬರುತ್ತಾನೆ. ಉದಾಹರಣೆಗೆ ಚೈತನ್ಯದೇವನನ್ನು ನೋಡು. ಕೇವಲ ಅವತಾರಪುರುಷರ ಮೂಲಕವೇ ಭಗವದ್ಭಕ್ತಿ ಮತ್ತು ಪ್ರೇಮ ಏನು ಎಂಬುದರ ರುಚಿ ನೋಡಬಹುದು. ಭಗವಂತನ ಲೀಲೆ ಅನಂತ ಬಗೆಯಾದ್ದು, ಆದರೆ ನಮಗೆ ಬೇಕಾದ್ದು ಪ್ರೇಮ ಭಕ್ತಿ. ನಮಗೆ ಕೇವಲ ಹಾಲು ಮಾತ್ರ ಬೇಕು. ಹಾಲು ಹಸುವಿನ ಕೆಚ್ಚಲಿನಿಂದ ಬರುತ್ತದೆ. ಅವತಾರಪುರುಷ ಹಸುವಿನ ಕೆಚ್ಚಲು."

ತಾವು ಅವತಾರಪುರುಷರು ಎಂಬುದಾಗಿ ಪರಮಹಂಸರು ಸೂಚಿಸಿದರೇನು? ತಮ್ಮ ದರ್ಶನ ಮಾಡಿದರೆ ಭಗವಂತನ ದರ್ಶನ ಮಾಡಿದ ಹಾಗೇ ಎಂಬುದಾಗಿ ವ್ಯಕ್ತಪಡಿಸಿದರೇನು? ಚೈತನ್ಯದೇವನ ಸಂಬಂಧವಾಗಿ ಹೇಳಿ ತಮ್ಮ ಸಂಬಂಧವಾಗಿ ರಹಸ್ಯ ಬಿಟ್ಟುಕೊಟ್ಟರೇನು?

೧೮೮೩ ನೆ ಇಸವಿಯ ಜೂನ್ ತಿಂಗಳ ಒಂದು ಸೆಕೆಯ ದಿನ.

ಪರಮಹಂಸರು ದಕ್ಷಿಣೇಶ್ವರದಲ್ಲಿ ಶಿವದೇವಾಲಯಗಳ ಹಂತಗಳ ಮೇಲೆ ಕುಳಿತಿದಾರೆ. ಇನ್ನೇನು ಸಾಯಂಕಾಲವಾಗುವುದರಲ್ಲಿದೆ. ಮಾಸ್ಟರ್ ಐಸ್ ಮೊದಲಾದುವನ್ನು ತೆಗೆದುಕೊಂಡು ಬಂದು ಪರಮಹಂಸರಿಗೆ ಪ್ರಣಾಮಮಾಡಿ ಅವರ ಹತ್ತಿರ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಮಣಿಮಲ್ಲಿಕನ ಮೊಮ್ಮಗಳ ಗಂಡ ಇಲ್ಲಿಗೆ ಬಂದಿದ್ದ. ಆತ ಒಂದು ಪುಸ್ತಕದಲ್ಲಿ[1] ಓದಿದನಂತೆ: ಭಗವಂತನನ್ನ ಬುದ್ಧಿವಂತ, ಸರ್ವಜ್ಞ ಅಂತ ಹೇಳಲಾಗೋದಿಲ್ಲ; ಅದು ಹಾಗಿದ್ದ ಪಕ್ಷದಲ್ಲಿ ಈ ಜಗತ್ತಿನಲ್ಲೇಕೆ ಇಷ್ಟೊಂದು ದುಃಖ, ಕಷ್ಟ? ಜೀವಿಗಳಿಗೆ ಮೃತ್ಯು ಉಂಟಾಗುತ್ತಿದೆಯಲ್ಲ, ಒಂದೇ ಕ್ಷಣಕ್ಕೆ ಸಾಯುವ ಹಾಗೆ

1. ಜಾನ್ ಸ್ಟೂಯರ್ಟ್ ಮಿಲ್ಲನ ಆತ್ಮಕಥೆ.

ಮಾಡದೆ ಚಿತ್ರಹಿಂಸೆಗೆ ಒಳಪಡಿಸಿ ಏಕೆ ಅವನ್ನು ಸಾಯಿಸಬೇಕು? ಮತ್ತೆ ಗ್ರಂಥಕರ್ತ ಬರೆದಿದಾನಂತೆ, ತಾನು ಸೃಷ್ಟಿಕರ್ತನಾಗಿದ್ದರೆ, ಇದಕ್ಕಿಂತಲೂ ಮೇಲಾದ ಜಗತ್ತನ್ನು ಸೃಷ್ಟಿಸಿಬಿಡುತ್ತಿದ್ದೆ ಎಂಬುದಾಗಿ.''

ಮಾಸ್ಟರ್ ಬಾಯಿ ತೆರೆದುಕೊಂಡು ಈ ಮಾತುಗಳನ್ನೆಲ್ಲಾ ಕೇಳಿ ಯಾವ ಟೀಕೆಯನ್ನೂ ಮಾಡದೆ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ಭಗವಂತನ ಸಂಬಂಧವಾಗಿ ಏಕೆ ಹೀಗೆ ಎಂಬುದನ್ನು ಅರಿಯಲು ಸಾಧ್ಯವಾಗುವುದೇ? ನಾನೂ ಕೆಲವು ವೇಳೆ ಆತ ಒಳ್ಳೆಯವ ಅಂತ ಭಾವಿಸುತ್ತೇನೆ, ಇನ್ನು ಕೆಲವು ವೇಳೆ ಕೆಟ್ಟವ ಅಂತ ಭಾವಿಸುತ್ತೇನೆ. ಆತ ನಮ್ಮನ್ನು ತನ್ನ ಮಹಾಮಾಯೆಯಿಂದ ಮುಗ್ಧಗೊಳಿಸಿ ಇಟ್ಟಿದಾನೆ. ಕೆಲವು ವೇಳೆ ನಮ್ಮನ್ನು ಎಚ್ಚರಗೊಳಿಸುತ್ತಾನೆ, ಇನ್ನು ಕೆಲವು ವೇಳೆ ನಮಗೆ ಮರವು ತರುತ್ತಾನೆ. ಈ ನಿಮಿಷ ಅಜ್ಞಾನ ಒಮ್ಮೆಗೇ ಹೊರಟು ಹೋಗುತ್ತದೆ, ಮರುನಿಮಿಷ ಮತ್ತೆ ಬಂದು ಮುಚ್ಚಿಕೊಳ್ಳುತ್ತದೆ. ಪಾಚಿ ಮುಚ್ಚಿಕೊಂಡಿರುವ ಕೊಳಕ್ಕೆ ಕಲ್ಲು ಬಿಸಾಡಿದರೆ ನೀರಿನ ಸ್ವಲ್ಪ ಭಾಗ ಕಾಣಿಸಿಕೊಳ್ಳುತ್ತದೆ. ಆದರೆ ಕೆಲವು ಕ್ಷಣಗಳೊಳಗೇ ಮತ್ತೆ ಪಾಚಿ ನರ್ತಿಸುತ್ತಾ ಬಂದು ಆ ಭಾಗವನ್ನು ಮುಚ್ಚಿಕೊಂಡು ಬಿಡುತ್ತದೆ.

''ದೇಹಬುದ್ಧಿ ಇರುವವರೆಗೆ ಸುಖ ದುಃಖ, ಜನ್ಮ ಮೃತ್ಯು, ರೋಗ ಶೋಕ. ಇವೆಲ್ಲಾ ದೇಹಕ್ಕೆ ಸೇರಿದವೇ ವಿನಾ ಆತ್ಮಕ್ಕಲ್ಲ. ಈ ಶರೀರ ಸತ್ತುಹೋದ ಮೇಲೆ ಬಹುಶಃ ಆತ ನಮ್ಮನ್ನು ಉತ್ತಮ ಎಡೆಗೆ ಕರೆದುಕೊಂಡು ಹೋಗಬಹುದು. ಇದು ಪ್ರಸವವೇದನೆಯನ್ನು ಅನುಭವಿಸಿದನಂತರ ಮಗುವನ್ನು ಪಡೆದುಕೊಳ್ಳುವ ಹಾಗೆ. ಆತ್ಮಜ್ಞಾನ ದೊರೆತನಂತರ ಸುಖದುಃಖ, ಜನ್ಮಮೃತ್ಯು ಇವೆಲ್ಲ ಸ್ವಪ್ನದ ಹಾಗೆ ಕಾಣುತ್ತವೆ.

''ನಮ್ಮ ಕೈಯಲ್ಲಿ ಏನನ್ನು ತಾನೆ ಅರಿಯಲಾದೀತು? ಒಂದು ಸೇರಿನ ಪಾತ್ರೆ ಹತ್ತು ಸೇರು ಹಾಲು ಹಿಡಿಸುವುದೆ? ಉಪ್ಪಿನ ಗೊಂಬೆಯೇನಾದರೂ ಸಮುದ್ರದ ಆಳ ಕಂಡುಹಿಡಿಯಲು ಪ್ರಯತ್ನಿಸಿದರೆ, ಅದು ಹಿಂದಿರುಗಿ ಬಂದು ಸಮಾಚಾರ ಕೊಡಲಾರದು. ಅದು ನೀರಿನಲ್ಲಿ ಕರಗಿ ಬೆರೆತು ಹೋಗಿಬಿಡುತ್ತದೆ.''

ಮುಚ್ಚಂಜೆಯಾಗಿದೆ. ದೇವಾಲಯಗಳಲ್ಲಿ ಸಾಯಂಮಂಗಳಾರತಿ

ಆರಂಭವಾಯಿತು. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಜಗನ್ಮಾತೆಯ ಧ್ಯಾನ ಮಾಡುತ್ತಿದಾರೆ. ಅನೇಕ ಮಂದಿ ಭಕ್ತರೂ ನೆಲದ ಮೇಲೆ ಕುಳಿತಿದಾರೆ. ಮಾಸ್ಟರ್ ಇಂದಿನ ರಾತ್ರಿಯನ್ನು ಇಲ್ಲೇ ಕಳೆಯುತ್ತಾನೆ.

ಸ್ವಲ್ಪ ಹೊತ್ತಾದನಂತರ ಪರಮಹಂಸರು ತಮ್ಮ ಕೊಠಡಿಯ ಉತ್ತರ ದಿಕ್ಕಿನ ವರಾಂಡಕ್ಕೆ ಹೋಗಿ ಏಕಾಂತವಾಗಿ ಒಬ್ಬ ಭಕ್ತನೊಡನೆ ಮಾತನಾಡಲಾರಂಭಿಸಿದಾರೆ. ಅವರು ಆತನಿಗೆ ಹೇಳುತ್ತಿದಾರೆ: "ಬೆಳಗಿನ ಜಾವ ಮತ್ತು ಪ್ರಾತಃಕಾಲ ಧ್ಯಾನ ಮಾಡುವುದು ಒಳ್ಳೆಯದು. ದಿನವೂ ಮುಚ್ಚಂಜೆಯಾದ ಮೇಲೆ ಧ್ಯಾನಮಾಡುವುದೂ ಒಳ್ಳೆಯದೆ." ಸಾಕಾರ ಧ್ಯಾನ ನಿರಾಕಾರ ಧ್ಯಾನ ಇವನ್ನೆಲ್ಲ ಹೇಗೆ ಮಾಡಬೇಕು ಎಂಬುದಾಗಿ ಆತನಿಗೆ ಉಪದೇಶವೀಯುತ್ತಿದಾರೆ.

ಸ್ವಲ್ಪ ಹೊತ್ತಾದನಂತರ ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮ ದಿಕ್ಕಿನಲ್ಲಿರುವ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಕುಳಿತುಕೊಂಡಿದಾರೆ. ಘಂಟೆ ರಾತ್ರಿ ಒಂಬತ್ತು.

ಶ್ರೀರಾಮಕೃಷ್ಣರು: "ನೋಡು, ಯಾರಾರು ಇಲ್ಲಿಗೆ ಬರುವರೊ ಅವರ ಸಂದೇಹವೆಲ್ಲಾ ಸಂಪೂರ್ಣವಾಗಿ ನಿವೃತ್ತಿಯಾಗಿಹೋಗಿಬಿಡುತ್ತದೆ. ನಿನಗೇನನಿಸುತ್ತದೆ?"

ಮಾಸ್ಟರ್: "ಅದು ನಿಜ."

ದಡದಿಂದ ಬಹಳ ದೂರದಲ್ಲಿ ಗಂಗಾನದಿಯ ಮೇಲೆ ಒಂದು ದೋಣಿ ಹೋಗುತ್ತಿತ್ತು. ಅಂಬಿಗ ಅದರಲ್ಲಿ ಹಾಡಲು ಶುರುಮಾಡಿದ. ಆತನ ಧ್ವನಿ ಗಂಗಾನದಿಯ ಮೇಲೆ ತೇಲಿಬಂದು ಪರಮಹಂಸರ ಕಿವಿಯನ್ನು ಮುಟ್ಟಿತು. ಅವರು ಒಡನೆ ಭಾವಾವಿಷ್ಟರಾಗಿಬಿಟ್ಟಿದಾರೆ. ಅವರಿಗೆ ರೋಮಾಂಚವಾಗಿಬಿಟ್ಟಿದೆ. ಅವರು ಮಾಸ್ಟರಿಗೆ ಹೇಳುತ್ತಿದಾರೆ: "ನನ್ನ ಮೈ ಮುಟ್ಟಿನೋಡು." ಪರಮಹಂಸರಿಗೆ ರೋಮಾಂಚವಾಗಿರುವುದನ್ನು ನೋಡಿ ಮಾಸ್ಟರ್ ಆಶ್ಚರ್ಯಚಕಿತನಾದ. ಆತ ಭಾವಿಸಿದ: "ಬ್ರಹ್ಮ ಈ ವಿಶ್ವದಲ್ಲಿ, ಆಕಾಶದಲ್ಲಿ ಓತಪ್ರೋತನಾಗಿದಾನೆ ಎಂಬುದಾಗಿ ಉಪನಿಷತ್ತು ಹೇಳುತ್ತಿವೆ. ಆತನೇ ಶಬ್ದರೂಪದಲ್ಲಿ ಪರಮಹಂಸರ ಕಿವಿಯನ್ನು ಹೊಕ್ಕನೇನು? ಶಬ್ದಬ್ರಹ್ಮ ಎಂಬುದು ಇದೇ ಏನು?"

ಸ್ವಲ್ಪ ಹೊತ್ತಾದನಂತರ ಪರಮಹಂಸರು ಮತ್ತೆ ಮಾತಾಡಲು ಶುರುಮಾಡಿದಾರೆ.

ಶ್ರೀರಾಮಕೃಷ್ಣರು: "ಯಾರಾರು ಇಲ್ಲಿಗೆ ಬರುತ್ತಾರೊ ಅವರು ಒಳ್ಳೆ ಸಂಸ್ಕಾರಗಳಿಂದ ಜನ್ಮವೆತ್ತಿರಬೇಕು, ಅಲ್ಲವೆ?"

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಅಧರಸೇನನಿಗೆ ಒಳ್ಳೆ ಸಂಸ್ಕಾರವಿರಬೇಕು."

ಮಾಸ್ಟರ್: "ಹಾಗೆಂದು ಹೇಳಲೇಬೇಕಾಗಿಲ್ಲ."

ಶ್ರೀರಾಮಕೃಷ್ಣರು: "ಸರಳತೆ ಇದ್ದರೆ ಭಗವಂತನ ಸಾಕ್ಷಾತ್ಕಾರ ಬೇಗ ದೊರೆತುಬಿಡುತ್ತದೆ. ಎರಡು ಮಾರ್ಗಗಳಿವೆ: ಸನ್ಮಾರ್ಗ, ಅಸನ್ಮಾರ್ಗ. ಸನ್ಮಾರ್ಗದಲ್ಲಿ ಮುಂದುವರಿಯಬೇಕು."

ಮಾಸ್ಟರ್: "ಅದು ಸರಿ. ದಾರಕ್ಕೆ ಒಂದು ಎಳೆ ಅಂಟಿಕೊಂಡಿದ್ದರೂ ಅದನ್ನು ಸೂಜಿಗೆ ಪೋಣಿಸಲಾಗೋದಿಲ್ಲ."

ಶ್ರೀರಾಮಕೃಷ್ಣರು: "ಬಾಯಿಗೆ ಹಾಕಿಕೊಂಡಿರೋ ತುತ್ತಿನಲ್ಲಿ ಕೂದಲು ಏನಾದರೂ ಸಿಕ್ಕಿತು ಎಂದರೆ ಇಡೀ ತುತ್ತನ್ನು ಉಗುಳಿಬಿಡಬೇಕಾಗುತ್ತದೆ."

ಮಾಸ್ಟರ್: "ಆದರೆ ನೀವು ಹೇಳುತ್ತೀರಿ, ಯಾರಿಗೆ ಭಗವಂತನ ದರ್ಶನ ಆಗಿದೆಯೊ ಆತನನ್ನು ಕೆಟ್ಟ ಸಹವಾಸ ಏನೂ ಮಾಡಲಾರದು. ತಾನೇ ತಾನಾಗಿ ಉರಿಯುತ್ತಿರುವ ಬೆಂಕಿ ಬಾಳೆ ಗಿಡವನ್ನೂ ಸುಟ್ಟುಬಿಡಬಲ್ಲದು."

೧೪ ನೆ ಜುಲೈ ೧೮೮೩, ಆಷಾಢ ಶುಕ್ಲ ದಶಮಿ, ಶನಿವಾರ.

ಪರಮಹಂಸರು ಕಲ್ಕತ್ತದಲ್ಲಿರುವ ಅಧರಸೇನನ ಮನೆಗೆ ಬಂದಿದಾರೆ. ರಾಖಾಲ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ಅವರೊಡನೆ ಅಲ್ಲಿಗೆ ಬಂದಿದಾರೆ. ಅಧರಸೇನ, ರಾಜನಾರಾಯಣ ಮತ್ತು ಆತನ ಪಾರ್ಟಿಯಿಂದ ಚಂಡಿ ಕೀರ್ತನೆ ನಡಸಲು ವ್ಯವಸ್ಥೆಮಾಡಿದಾನೆ.

ರಾಜನಾರಾಯಣ ದೇವರ ಮನೆಯಲ್ಲಿ ಹಾಡಲಾರಂಭಿಸಿದ:

ತಾಯ ಶ್ರೀಪಾದದಲಿ ಜೀವವಿರಿಸಿದ ನನಗೆ
ಮೃತ್ಯುಭಯವೇನು? . . . (ಉ. ೩೦೩)

ಪರಮಹಂಸರು ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದಹಾಗೇ ಭಾವಾವಿಷ್ಟರಾಗಿ ಗಾಯಕರೊಡನೆ ಸೇರಿ ಹಾಡಲಾರಂಭಿಸಿದಾರೆ. ಆಗಾಗ

ಆಶುಕವಿತೆಗಳನ್ನು ಮಾಡಲಾರಂಭಿಸಿದಾರೆ. ಈಗ ಇದ್ದಕ್ಕಿದ್ದಹಾಗೆ ಸಮಾಧಿಸ್ಥರಾಗಿ ನಿಂತುಕೊಂಡಿದಾರೆ.

ಗಾಯಕ ಮತ್ತೆ ಹಾಡುತ್ತಿದಾನೆ:

ನಲಿಯುವಳಾರೀ ಭೈರವನಾರೀ
ರಣರಂಗದೊಳೀ ಬೆಳಕನು ಬೀರಿ? — (ಉ. ೧೩೪)

ಪರಮಹಂಸರು ಗಾಢಸಮಾಧಿಸ್ಥರಾಗಿಬಿಟ್ಟಿದಾರೆ.

೨೧ ನೆ ಜುಲೈ ೧೮೮೩, ಆಷಾಢ ಕೃಷ್ಣ ಪಾಡ್ಯಮಿ, ಶನಿವಾರ.

ಘಂಟೆ ಅಪರಾಹ್ನ ನಾಲ್ಕು. ಪರಮಹಂಸರು ರಾಮಲಾಲ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರೊಡನೆ ದಕ್ಷಿಣೇಶ್ವರದಿಂದ ಕಲ್ಕತ್ತೆಗೆ ಗಾಡಿಯಲ್ಲಿ ಕುಳಿತು ಹೊರಟಿದಾರೆ. ಅವರು ದೇವಾಲಯದ ಹೆಬ್ಬಾಗಿಲಿಗೆ ಬಂದಾಗ ಎದುರುಗಡೆಯಿಂದ ಮಾಸ್ಟರ್ ಕೈಯಲ್ಲಿ ನಾಲ್ಕು ಮಾವಿನ ಹಣ್ಣು ಹಿಡಿದುಕೊಂಡು ಬರುತ್ತಿರುವುದು ಕಂಡುಬಂತು. ಗಾಡಿ ನಿಂತುಕೊಂಡಿತು. ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ನಗುತ್ತ: "ಬಾ ನಮ್ಮೊಡನೆ. ನಾವು ಅಧರಸೇನನ ಮನೆಗೆ ಹೋಗುತ್ತಿದೇವೆ."

ಮಾಸ್ಟರ್ ಆನಂದದಿಂದ ಗಾಡಿಯನ್ನು ಹತ್ತಿದ. ಮಾಸ್ಟರ್ ಆಂಗ್ಲ ವಿದ್ಯಾಭ್ಯಾಸ ಪಡೆದಿದ್ದುದರಿಂದ ಆತನಿಗೆ ಪೂರ್ವಸಂಸ್ಕಾರದಲ್ಲಿ ನಂಬಿಕೆ ಇರಲಿಲ್ಲ. ಆದರೆ ಈಗ ಕೆಲವು ದಿನಗಳ ಹಿಂದೆ ಒಪ್ಪಿಕೊಂಡಿದ್ದ, ಅಧರಸೇನ ತನ್ನ ಪೂರ್ವಸಂಸ್ಕಾರದ ದೆಸೆಯಿಂದ ಪರಮಹಂಸರನ್ನು ಪ್ರೀತಿಸುತ್ತಿದಾನೆ ಎಂಬುದಾಗಿ. ಆತ ಮನೆಗೆ ಹಿಂದಿರುಗಿ ಹೋಗಿ ಅದರ ಸಂಬಂಧವಾಗಿ ಬಹಳವಾಗಿ ಯೋಚಿಸಿದನಂತರ ಇನ್ನೂ ತನಗೆ ಅದರಲ್ಲಿ ಪೂರ್ಣ ನಂಬಿಕೆ ಬಾರದಿರುವುದಾಗಿ ಆತನಿಗೆ ತೋರಿಬಂತು. ಆ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲೋಸುಗ ಇಂದು ದಕ್ಷಿಣೇಶ್ವರಕ್ಕೆ ಬರುತ್ತಾ ಇದ್ದ.

ಶ್ರೀರಾಮಕೃಷ್ಣರು: "ಒಳ್ಳೆಯದು, ಅಧರನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ಆತನಿಗೆ ಭಗವಂತನಲ್ಲಿ ಒಳ್ಳೆ ಅನುರಾಗವಿದೆ."

ಶ್ರೀರಾಮಕೃಷ್ಣರು: "ಅಧರನೂ ನಿನ್ನನ್ನು ಬಹಳವಾಗಿ ಹೊಗಳುತ್ತಾನೆ."

ಮಾಸ್ಟರ್ ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಪೂರ್ವಸಂಸ್ಕಾರದ ಸಂಬಂಧವಾಗಿ ಮಾತು ಎತ್ತಿದ.

ಮಾಸ್ಟರ್: "ನನಗೆ ಪೂರ್ವಜನ್ಮ, ಸಂಸ್ಕಾರ ಇವುಗಳ ಮೇಲೆ ಅಂಥ ನಿಜವಾದ ಶ್ರದ್ಧೆಯೇನಿಲ್ಲ. ಇದು ನನ್ನ ಭಕ್ತಿಗೆ ಏನಾದರೂ ಹಾನಿಯನ್ನು ತರುವುದೆ?"

ಶ್ರೀರಾಮಕೃಷ್ಣರು: "ಭಗವಂತನ ಸೃಷ್ಟಿಯಲ್ಲಿ ಎಲ್ಲವೂ ಸಾಧ್ಯ ಎಂಬ ಶ್ರದ್ಧೆಯೊಂದಿದ್ದರೇ ಬೇಕಾದಷ್ಟು. ನನ್ನ ಭಾವನೆಗಳೇ ಸತ್ಯವಾದುವು, ಉಳಿದವರದೆಲ್ಲಾ ಅಸತ್ಯವಾದುವು ಎಂಬ ಭಾವನೆ ನಿನ್ನ ಮನಸ್ಸಿನ ಹೊಸಲನ್ನೇ ಹತ್ತದಿರಲಿ. ಬಳಿಕ ಆತನೇ ಎಲ್ಲವನ್ನೂ ತಿಳಿಸಿಕೊಡುತ್ತಾನೆ.

"ಭಗವಂತನ ಕೆಲಸಕಾರ್ಯಗಳನ್ನು ಮನುಷ್ಯ ಅರಿಯೋ ಬಗೆ ಹೇಗೆ? ಅವಕ್ಕೆ ಮಿತಿ ಎಂಬುದೇ ಇಲ್ಲ. ಆದ್ದರಿಂದ ಅದನ್ನು ನಾನು ಅರಿತುಕೊಳ್ಳಲು ಸ್ವಲ್ಪವೂ ಪ್ರಯತ್ನಮಾಡೋದಿಲ್ಲ. ಆತನ ಸೃಷ್ಟಿಯಲ್ಲಿ ಎಲ್ಲವೂ ಸಾಧ್ಯ ಎಂಬುದನ್ನು ಕೇಳಿ ಅದನ್ನು ಹೃದಯದಲ್ಲಿ ಚಿರಮುದ್ರಿತವನ್ನಾಗಿ ಮಾಡಿಕೊಂಡಿದೇನೆ. ಆದ್ದರಿಂದ ನಾನು ಆತನ ಸೃಷ್ಟಿಯ ಸಂಬಂಧವಾಗಿ ಒಂದು ಸ್ವಲ್ಪವೂ ಚಿಂತಿಸದೆ ಆತನ ಸಂಬಂಧವಾಗೇ ಚಿಂತಿಸುತ್ತಿದೇನೆ. ಒಮ್ಮೆ ಹನುಮಂತನಿಗೆ ಯಾರೊ ಪ್ರಶ್ನೆ ಹಾಕಿದರು: 'ಈ ದಿನ ಯಾವ ತಿಥಿ?' ಎಂಬುದಾಗಿ. ಆತ ಉತ್ತರವಿತ್ತ: 'ನನಗೆ ತಿಥಿ, ನಕ್ಷತ್ರ, ವಾರ ಯಾವುದೂ ಗೊತ್ತಿಲ್ಲ; ನಾನು ಕೇವಲ ರಾಮ-ಚಿಂತನೆಯನ್ನು ಮಾತ್ರ ಮಾಡುತ್ತಿದೇನೆ.'

"ಭಗವಂತನ ಕಾರ್ಯ ಏನು ಅಂತ ಒಂದು ಕಿಂಚಿತ್ತಾದರೂ ಅರಿಯಲು ಸಾಧ್ಯವಾಗುವುದೆ? ಆತ ಬಹಳ ಹತ್ತಿರದಲ್ಲಿದಾನೆ; ಆದರೂ ಆತನನ್ನು ಅರಿಯಲು ಸಾಧ್ಯವಾಗುತ್ತಿಲ್ಲ. ಕೃಷ್ಣ ಭಗವಂತ ಎಂಬುದು ಬಲರಾಮನ ಅರಿವಿಗೆ ಬರಲೇ ಇಲ್ಲ."

ಮಾಸ್ಟರ್: "ಅದು ನಿಜ."

ಶ್ರೀರಾಮಕೃಷ್ಣರು: "ಭಗವಂತ ತನ್ನ ಮಾಯೆಯಿಂದ ಎಲ್ಲವನ್ನೂ ಮುಸುಕಿ ಇಟ್ಟಿದಾನೆ. ಯಾವುದನ್ನು ಅರಿಯಲೂ ಬಿಟ್ಟುಕೊಡುವುದಿಲ್ಲ. ಕಾಮಕಾಂಚನವೇ ಮಾಯೆ. ಯಾರು ಭಗವಂತನನ್ನು ನೋಡಬೇಕೆಂದು ಈ ಮಾಯೆಯ ಮುಸುಕನ್ನು ಹರಿದು ಒಂದು ಕಡೆಗೆ ಬಿಸಾಡುತ್ತಾನೊ, ಆತ ಆತನನ್ನು ನೋಡಬಲ್ಲ. ಒಮ್ಮೆ ನಾನು ಒಬ್ಬನಿಗೆ ಭಗವಂತನ ಸಂಬಂಧ

ವಾಗಿ ತಿಳಿಸುತ್ತ ತಿಳಿಸುತ್ತ ಮುಂದುವರಿಯುತ್ತಿದ್ದಾಗ ಭಗವಂತ ಇದ್ದಕ್ಕಿದ್ದ ಹಾಗೆ ಆ ದೇಶದ (ಕಾಮಾರಪುಕುರದ) ಒಂದು ಕೆರೆಯನ್ನು ನನಗೆ ತೋರಿಸಿದ. ಒಬ್ಬ ಮನುಷ್ಯ ಅದರಲ್ಲಿದ್ದ ಪಾಚಿಯನ್ನು ಒಂದು ಕಡೆಗೆ ಸರಿಸಿ ನೀರು ಕುಡಿದುದನ್ನು ಕಂಡೆ. ನೀರು ಸ್ಫಟಿಕದಂತೆ ಇತ್ತು. ಭಗವಂತ ನನಗೆ ತೋರಿಸಿದ, ಸಚ್ಚಿದಾನಂದವೆಂಬ ನೀರು ಮಾಯೆಯೆಂಬ ಪಾಚಿಯಿಂದ ಮುಚ್ಚಲ್ಪಟ್ಟಿದೆ. ಯಾರು ಅದನ್ನು ಒಂದು ಕಡೆಗೆ ಸರಿಸಿಬಿಡುವರೊ ಅವರಿಗೆ ನೀರು ಸಿಕ್ಕುತ್ತದೆ.

"ನಿನಗೊಂದು ರಹಸ್ಯ ಅನುಭವವನ್ನು ತಿಳಿಸುತ್ತೇನೆ. ಒಮ್ಮೆ ನಾನು ಸರ್ವೆ ಮರದ ತೋಪಿಗೆ ಹೋಗಿ ಅಲ್ಲಿ ಕುಳಿತಿದ್ದಾಗ ರಹಸ್ಯ ಬಾಗಿಲುಳ್ಳ ಒಂದು ಕೊಠಡಿ ಕಾಣಿಸಿಕೊಂಡಿತು. ಅದರೊಳಗೆ ಏನಿದೆ ಎಂಬುದು ನನಗೆ ಕಾಣಬರುತ್ತಿರಲಿಲ್ಲ. ಒಂದು ಉಗುರುಗತ್ತಿ ತೆಗೆದುಕೊಂಡು ಬಾಗಿಲಿನಲ್ಲಿ ಒಂದು ರಂಧ್ರ ಕೊರೆಯಲು ಪ್ರಯತ್ನಿಸಿದೆ, ಆದರೆ ಜಯಶೀಲನಾಗಲಿಲ್ಲ. ನಾನು ಕೊರೆಯುತ್ತ ಕೊರೆಯುತ್ತ ಹೋದರೂ ಅದು ಮುಚ್ಚಿಕೊಳ್ಳುತ್ತ ಮುಚ್ಚಿಕೊಳ್ಳುತ್ತ ಬರುತ್ತಲೂ ಇತ್ತು. ಇದ್ದಕ್ಕಿದ್ದ ಹಾಗೆ ಒಂದು ದೊಡ್ಡ ರಂಧ್ರ ಬಿದ್ದುಬಿಟ್ಟಿತು."

ಈ ಮಾತುಗಳನ್ನು ಹೇಳಿ ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಇದ್ದುಬಿಟ್ಟರು. ಈಗ ಮತ್ತೆ ಹೇಳುತ್ತಿದಾರೆ: "ಇವೆಲ್ಲಾ ಬಹಳ ದೊಡ್ಡ ದೊಡ್ಡ ವಿಷಯಗಳು. ನೋಡು ಯಾರೊ ನನ್ನ ಗಂಟಲನ್ನು ಹಿಡಿದು ಅದುಮಿದಂತೆ ಇದೆ. . . . ಭಗವಂತ ಜನನೇಂದ್ರಿಯದಲ್ಲಿ ವಾಸವಾಗಿರುವುದನ್ನೂ ನಾನು ನನ್ನ ಕಣ್ಣಿಂದಲೇ ನೋಡಿದೇನೆ. ಒಮ್ಮೆ ನಾನು ಗಂಡು ಹೆಣ್ಣು ನಾಯಿಗಳ ಮೈಥುನ ಸಮಯದಲ್ಲಿ ಆತನನ್ನು ನೋಡಿದೆ.

"ಭಗವಂತನ ಚೇತನದಿಂದ ಈ ಜಗತ್ತು ಚೇತನಮಯವಾಗಿದೆ. ಒಮ್ಮೊಮ್ಮೆ ಕಾಣಬರುತ್ತದೆ, ಚಿಕ್ಕಪುಟ್ಟ ಮೀನುಗಳಲ್ಲೂ ಅದೇ ಚೇತನ ಕಿಲಕಿಲ ಅನ್ನುತ್ತಿರುವುದು."

ಪರಮಹಂಸರ ಗಾಡಿ ಶೋಭಾಬಜಾರಿನ ಚೌಕದ ಹತ್ತಿರಕ್ಕೆ ಬಂದಿತು. ಅವರು ಮತ್ತೆ ತಮ್ಮ ಮಾತು ಮುಂದುವರಿಸುತ್ತ ಹೇಳುತ್ತಿದಾರೆ: "ಒಮ್ಮೊಮ್ಮೆ ನನಗೆ ಕಾಣಬರುತ್ತದೆ, ಯಾವ ರೀತಿಯಾಗಿ ಮಳೆಗಾಲದಲ್ಲಿ ಭೂಮಿ ಜಲಮಯವಾಗಿ ಕಾಣುವುದೊ, ಅದೇ ರೀತಿಯಾಗಿ ಈ ಜಗತ್ತು ಚೈತನ್ಯಮಯವಾಗಿರುವಂತೆ.

"ಇಷ್ಟೊಂದು ದರ್ಶನಗಳಾಗುತ್ತಿವೆ ನನಗೆ, ಆದರೂ ನನಗೆ ಅಹಂಕಾರ ಉಂಟಾಗುತ್ತಿಲ್ಲ."

ಮಾಸ್ಟರ್: "ನಿಮಗೆ ಅಹಂಕಾರ!"

ಶ್ರೀರಾಮಕೃಷ್ಣರು: "ನನ್ನ ಮಾತಿನಲ್ಲಿ ನಂಬಿಕೆಯಿಡು, ನನ್ನಲ್ಲಿ ಒಂದು ಕಿಂಚಿತ್ತಾಗಿಯೂ ಅಹಂಕಾರವಿಲ್ಲ."

ಮಾಸ್ಟರ್: "ಗ್ರೀಸ್ ದೇಶದಲ್ಲಿ ಸಾಕ್ರೆಟೀಸ್ ಎಂಬ ಹೆಸರಿನ ಒಬ್ಬ ಮನುಷ್ಯನಿದ್ದ. ದೈವವಾಣಿಯಾಯಿತು, ಮನುಷ್ಯರಲೆಲ್ಲಾ ಆತನೊಬ್ಬನೇ ಜ್ಞಾನಿ ಎಂಬುದಾಗಿ. ಇದನ್ನು ಕೇಳಿ ಸಾಕ್ರೆಟೀಸ್ ಆಶ್ಚರ್ಯಚಕಿತನಾದ. ಆತ ಏಕಾಂತದಲ್ಲಿ ಬಹಳ ಕಾಲ ಧ್ಯಾನದಲ್ಲಿ ತೊಡಗಿ ದೈವವಾಣಿ ಹೇಳಿದುದರ ಇಂಗಿತವೇನೆಂಬುದನ್ನು ಅರಿತುಕೊಂಡ. ಬಳಿಕ ಆತ ತನ್ನ ಸ್ನೇಹಿತರಿಗೆ ತಿಳಿಸಿದ: 'ಕೇವಲ ನಾನೊಬ್ಬನೇ ಅರಿತುಕೊಂಡಿದೇನೆ ನನಗೇನೂ ಗೊತ್ತಿಲ್ಲ ಎಂಬುದನ್ನು.' ಆದರೆ ಪ್ರತಿಯೊಬ್ಬನೂ ಭಾವಿಸುತ್ತಾನೆ, ತಾನು ಬುದ್ಧಿವಂತ ಎಂಬುದಾಗಿ. ವಸ್ತುತಃ ಎಲ್ಲರೂ ಅಜ್ಞಾನಿಗಳೇ."

ಶ್ರೀರಾಮಕೃಷ್ಣರು: "ಒಮ್ಮೊಮ್ಮೆ ನನಗೆ ಭಾವನೆ ಬರುತ್ತದೆ: 'ನನಗೇನು ಗೊತ್ತಿದೆ ಇಷ್ಟೊಂದು ಜನ ಇಲ್ಲಿಗೆ ಬರುವಂತೆ ಪ್ರೇರೇಪಣೆಯಾಗಲು?' ವೈಷ್ಣವಚರಣ ಒಳ್ಳೆ ದೊಡ್ಡ ಪಂಡಿತ. ಆತ ಹೇಳುತ್ತಿದ್ದ: 'ನೀವು ಆಡುವ ಮಾತುಗಳನ್ನೆಲ್ಲಾ ಶಾಸ್ತ್ರಗಳಲ್ಲಿ ಕಾಣಬಹುದು. ಆದರೆ ನಾನೇಕೆ ಇಲ್ಲಿಗೆ ಬರುತ್ತಾ ಇದೇನೆ ಗೊತ್ತೆ? ಅವನ್ನು ನಿಮ್ಮ ಬಾಯಿಂದ ಕೇಳಲು ಬರುತ್ತಿದೇನೆ.'"

ಮಾಸ್ಟರ್: "ನೀವು ಆಡುವ ಮಾತುಗಳೆಲ್ಲಾ ಶಾಸ್ತ್ರಗಳೊಡನೆ ಹೊಂದಿಕೆಯಾಗುತ್ತಿವೆ. ಅಂದು ಪಾನಿಹಾಟಿಯಲ್ಲಿ ನವದ್ವೀಪಗೋಸ್ವಾಮಿಯೂ ಹಾಗೇ ಹೇಳಿದ. ನೀವು ಅಂದು ಹೇಳಿದಿರಿ, 'ಗೀತೆ' ಎಂಬ ಪದವನ್ನು ಒಂದು ಹತ್ತುಸಲ ಆವೃತ್ತಿ ಮಾಡಿದರೆ ಅದು 'ತ್ಯಾಗಿ' ಎಂಬುದಾಗಿ ಕೇಳಿಬರುತ್ತದೆ ಅಂತ. ಅದನ್ನು ವ್ಯಾಕರಣದ ದೃಷ್ಟಿಯಿಂದ ಸಮರ್ಥಿಸಿದ."

ಶ್ರೀರಾಮಕೃಷ್ಣರು: "ನನ್ನನ್ನು ಹೋಲುವವರು ಬೇರೆ ಯಾರಾದರೂ ಇದಾರೇನು—ಸಾಧುವಾಗಲಿ, ಪಂಡಿತನಾಗಲಿ?"

ಮಾಸ್ಟರ್: "ಭಗವಂತ ತಮ್ಮನ್ನು ತನ್ನ ಸ್ವಂತ ಕೈಗಳಿಂದಲೇ

ರೂಪಗೊಳಿಸಿದಾನೆ. ಉಳಿದವರನ್ನೆಲ್ಲ ಯಂತ್ರಗಳಿಂದ ನಿರ್ಮಾಣಮಾಡಿ ಹಾನೆ—ಸೃಷ್ಟಿಯ ನಿಯಮಾನುಸಾರ ಸೃಷ್ಟಿಸಿದಾನೆ."

ಶ್ರೀರಾಮಕೃಷ್ಣರು ನಗುತ್ತ ರಾಮಲಾಲನೇ ಮೊದಲಾದವರಿಗೆ: "ನೋಡಿ, ಇವನೇನು ಹೇಳುತ್ತಿದಾನೆ!"

ಪರಮಹಂಸರು ಬಹಳ ಹೊತ್ತು ನಕ್ಕು ಕೊನೆಯಲ್ಲಿ ಹೇಳುತ್ತಿದಾರೆ: "ಸತ್ಯವಾಗಿ ಹೇಳುತ್ತೇನೆ, ನನ್ನಲ್ಲಿ ಸ್ವಲ್ಪವೂ ಅಹಂಕಾರವಿಲ್ಲ."

ಮಾಸ್ಟರ್: "ಜ್ಞಾನ ಒಂದು ವಿಧದಲ್ಲಿ ನಮಗೆ ಉಪಕಾರ ಮಾಡುತ್ತದೆ; ಅದು ನಮಗೇನೂ ಗೊತ್ತಿಲ್ಲ, ನಾವು ಏನೂ ಅಲ್ಲ ಎಂಬ ಬೋಧೆಯನ್ನು ತರುತ್ತದೆ."

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದು! ನಾನು ಏನೂ ಅಲ್ಲ. ನಾನು ಯಾರೂ ಅಲ್ಲ.

"ನಿನಗೆ ಆಂಗ್ಲ ಜ್ಯೋತಿಶ್ಶಾಸ್ತ್ರದಲ್ಲಿ ನಂಬಿಕೆ ಇದೆಯೆ?"

ಮಾಸ್ಟರ್: "ಅದರ ನಿಯಮವನ್ನು ಅನುಸರಿಸಿ ಹೊಸ ಹೊಸ ವಸ್ತುಗಳನ್ನು ಕಂಡುಹಿಡಿಯಬಹುದು. ಯುರೇನಸ್ಸಿನ ನಿಯಮವಿರುದ್ಧವಾದ ಚಲನವಲನ ನೋಡಿ ಜ್ಯೋತಿಶ್ಶಾಸ್ತ್ರಜ್ಞರು ತಮ್ಮ ದುರ್ಬೀನಿನಿಂದ ಅದರ ಕಾರಣಕ್ಕಾಗಿ ಹುಡುಕುತ್ತಿರಲಾಗಿ ಅವರಿಗೆ ಒಂದು ಹೊಸ ಗ್ರಹ 'ನೆಪ್ಟ್ಯೂನ್' ಎಂಬುದು ಕಾಣಿಸಿಕೊಂಡಿತು. ಅವರು ಗ್ರಹಣಗಳು ಎಂದು, ಯಾವಾಗ ಎಂಬುದನ್ನೂ ಹೇಳಬಲ್ಲರು."

ಶ್ರೀರಾಮಕೃಷ್ಣರು: "ಹೌದು, ಅದು ಸಾಧ್ಯ."

ಗಾಡಿ ಮುಂದುವರಿಯುತ್ತಿದೆ. ಈಗ ಇನ್ನೇನು ಅಧರಸೇನನ ಮನೆ ಹತ್ತಿರಕ್ಕೆ ಬರುವುದರಲ್ಲಿದೆ. ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳಿದರು: "ಸತ್ಯಾರ್ಥಿಯಾಗು. ನಿನಗೆ ನಿಜವಾಗಿಯೂ ಭಗವಂತನ ಸಾಕ್ಷಾತ್ಕಾರ ದೊರಕುತ್ತದೆ."

ಮಾಸ್ಟರ್: "ಅಂದು ನೀವು ನವದ್ವೀಪಗೋಸ್ವಾಮಿಗೆ ಹೇಳಿದಿರಿ: 'ಹೇ ಭಗವಂತ, ನನಗೆ ನೀನೊಬ್ಬನೇ ಬೇಕು. ದಯವಿಟ್ಟು ನೀನು ನಿನ್ನ ಭುವನಮೋಹಿನಿ ಮಾಯೆಯಿಂದ ನನ್ನನ್ನು ಮುಗ್ಧನನ್ನಾಗಿ ಮಾಡಬೇಡ. ನನಗೆ ನಿನ್ನ ಸಾಕ್ಷಾತ್ಕಾರ ಬೇಕು' ಎಂಬುದಾಗಿ."

ಶ್ರೀರಾಮಕೃಷ್ಣರು: "ಹೌದು, ಹಾಗೆಂದು ಹೃತ್ಪೂರ್ವಕವಾಗಿ ಪ್ರಾರ್ಥನೆಮಾಡಬೇಕು."

ಪರಮಹಂಸರು ಅಧರಸೇನನ ಮನೆಯನ್ನು ಮುಟ್ಟಿ ಆತನ ಬೈಠಕ್ ಖಾನೆಯಲ್ಲಿ ಕುಳಿತಿದಾರೆ. ರಾಮಲಾಲ, ಅಧರಸೇನ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ಅವರ ಹತ್ತಿರ ಕುಳಿತಿದಾರೆ. ರಾಖಾಲ ಕಲ್ಕತ್ತ ದಲ್ಲಿ ತನ್ನ ತಂದೆಯೊಡನೆ ಇದಾನೆ.

ಶ್ರೀರಾಮಕೃಷ್ಣರು ಅಧರಸೇನನಿಗೆ: "ನಾನು ಇಲ್ಲಿಗೆ ಬರುವುದನ್ನು ನೀನು ರಾಖಾಲನಿಗೆ ತಿಳಿಸಿಲ್ಲವೇನು?"

ಅಧರಸೇನ: "ಸಮಾಚಾರ ಕಳಿಸಿದೇನೆ."

ಪರಮಹಂಸರು ರಾಖಾಲನನ್ನು ನೋಡಲು ಕಾತರರಾಗಿರುವುದನ್ನು ನೋಡಿ ಅಧರಸೇನ ಆತನನ್ನು ಕರೆದುಕೊಂಡುಬರಲು ಒಡನೇ ತನ್ನ ಗಾಡಿ ಯನ್ನು ಕಳಿಸಿದ. ಅಧರಸೇನನ ಮನಸ್ಸು ಪರಮಹಂಸರನ್ನು ಇಂದು ನೋಡಬೇಕೆಂದು ಬಹಳವಾಗಿ ಕಾತರಪಡುತ್ತಿತ್ತು. ಅವರು ಇಂದು ಇಲ್ಲಿಗೆ ಬರುವುದು ಆತನಿಗೆ ನಿರ್ದಿಷ್ಟವಾಗಿ ಗೊತ್ತಿರಲಿಲ್ಲ.

ಅಧರಸೇನ: "ನಮ್ಮ ಮನೆಗೆ ಬಂದು ನೀವು ಬಹಳ ದಿವಸ ಆಯಿತು. ನೀವು ಇಂದು ಇಲ್ಲಿಗೆ ಬರಲಿ ಎಂದು ಭಗವಂತನಿಗೆ ಪ್ರಾರ್ಥನೆ ಮಾಡಿದೆ. ಆ ಸಂದರ್ಭದಲ್ಲಿ ಅತ್ತೂ ಬಿಟ್ಟೆ."

ಪರಮಹಂಸರು ಸಂತುಷ್ಟರಾಗಿ ನಗುತ್ತ ಹೇಳುತ್ತಿದಾರೆ: "ಹಾಗೇನು!"

ಸಾಯಂಕಾಲವಾಗಿಬಿಟ್ಟಿತು. ಬೈಠಕ್‌ಖಾನೆಯಲ್ಲಿ ದೀಪ ಹಚ್ಚಿ ದಾರೆ. ಪರಮಹಂಸರು ಎರಡು ಕೈಗಳಿಂದಲೂ ಜಗನ್ಮಾತೆಗೆ ಕೈಮುಗಿದು ನಿಶ್ಶಬ್ದರಾಗಿ ಮೂಲಮಂತ್ರ ಜಪಿಸುತ್ತಿದಾರೆ. ಬಳಿಕ ಮಧುರ ಕಂಠದಿಂದ ಭಗವನ್ನಾಮಜಪ ಮಾಡಲಾರಂಭಿಸಿದಾರೆ: "ಗೋವಿಂದ! ಗೋವಿಂದ! ಸಚ್ಚಿದಾನಂದ! ಹರಿ! ಹರಿ!" ಅವರ ಬಾಯಿಂದ ಬಂದ ಪ್ರತಿಯೊಂದು ಪದವೂ ಅಮೃತವನ್ನೇ ಭಕ್ತರ ಕಿವಿಯ ಮೇಲೆ ವರ್ಷಿಸತೊಡಗಿದೆ.

ರಾಮಲಾಲ ಭಗವತಿ ಕಾಳಿಯ ಸಂಬಂಧವಾಗಿ ಹಾಡಲಾರಂಭಿಸಿದ:

ಓ ಶರ್ವಪ್ರಿಯೆ ತಾಯಿ, ಸಕಲ ಭಯಹಾರಿಣಿಯೆ
ನಿನ್ನ ನಾಮವ ನಾನು ಕೇಳಿರುವೆನು,
ಅದರಿಂದ ನಿನ್ನಡಿಗೆ ಶರಣಾದೆನು.
ನಿನ್ನ ಬಸಿರಿಂದೊಗೆದು ಬಂದುದೀ ಬ್ರಹ್ಮಾಂಡ,
ಅದರ ಸಚರಾಚರವ ನೀ ತುಂಬಿದೆ.

ರಾಧೆಯೋ ಕಾಳಿಯೋ ನೀನು ಯಾರೆಂಬುದನು
—ನಾವು ಅಲ್ಪರು ತಾಯಿ—ಹೇಳಲಹುದೆ?

ನೀನು ಮೂಲಾಧಾರ ಪದ್ಮದಲಿ ನೆಲಸಿರುವೆ
ಕುಲಕುಂಡಲಿನಿ ಶಕ್ತಿರೂಪಿಯಾಗಿ,
ಮತ್ತೆ ಸ್ವಾಧಿಷ್ಠಾನವೆಂಬಲ್ಲಿಯೂ ಇರುವೆ
ನಾಲ್ಕು ದಲಗಳ ಕಮಲವರಳಿದಲ್ಲಿ.

ಮತ್ತೆ ಅದರಿಂದಾಚೆ ವಜ್ರಾಸನೇ ಎಂಬ
ಷಡ್ದಲದ ಕಮಲದಲಿ ಮನೆಯ ಮಾಡಿ
ಊರ್ಧ್ವಗಾಮಿನಿಯಾಗಿ ಮಣಿಪುರ ನಾಭಿಯಲಿ
ದಶದಲದ ನೀಲವರ್ಣದ ಪದ್ಮವರಳಿದೆಡೆಗೆ
ಸುಷುಮ್ನಾಪಥದಲ್ಲಿ ಏರಿಬರುವೆ
ಕಮಲವನ ಸಂಚಾರಿ ದಿವ್ಯ ಕಮಲೆ.

ಇನ್ನು ಅದರಿಂದಾಚೆ, ಮೇಲೆ ಮೇಲೇರಿದರೆ
ಅಮೃತ ಕಾಸಾರವಿದೆ ಹೃದಯದಲ್ಲಿ,
ಅಲ್ಲಿ ದ್ವಾದಶದಲದ ರಕ್ತವರ್ಣದ ಪದ್ಮ-
ವರಳಿ ಕೋರೈಸುವುದು ನಿನ್ನ ಪದ ಸ್ಪರ್ಶಿಸಲು ಬೆಳಕ ಚೆಲ್ಲಿ!

ಅದರಾಚೆ ಕಂಠಸ್ಥಲದಿ ಶೋಭಿಸಿದೆ
ಧೂಮ್ರವರ್ಣದ ಮತ್ತೆ ಷೋಡಶದಲದ ಪದ್ಮವೊಂದು.
ಅದರ ದಲದಲಗಳಲಿ ಆಕಾಶವಡಗಿಹುದು,
ಅದನು ದಾಟಲು ಎಲ್ಲ ಆಕಾಶವಹುದು!
ಮತ್ತೆ ಅದರಿಂದಾಚೆ ಲಲಾಟದೇಶದಲಿ
ಭ್ರೂಮಧ್ಯದೊಳಗೆರಡು ಕಮಲವಿಹವು;
ಅಲ್ಲಿ ಮಾನವ ಬುದ್ಧಿ ಸೆರೆಯಾಗಿ ಲೋಕವನು
ಪ್ರೇಕ್ಷಕನ ರೀತಿಯಲಿ ನೋಡುತಿಹುದು.

ಎಲ್ಲಕೂ ಮಿಗಿಲಾಗಿ, ಬಹು ಮನೋಹರವಾಗಿ
ಸಹಸ್ರದಲ ಕಮಲವಿದೆ ಮಸ್ತಕದಲಿ,
ಅಲ್ಲಿ ಶ್ರೀಮಹದೇವ ಧ್ಯಾನಸ್ಥನಾಗಿರಲು
ನೀನು ಅವನೊಡನಿರುವೆ ಪೀಠದಲ್ಲಿ.

ನೀನೆ ಆದ್ಯಾಶಕ್ತಿ, ನೀ ಜಿತೇಂದ್ರಿಯಶಕ್ತಿ;
ಯೋಗಿಜನ ಹೃದಯದಲಿ ನೀ ಪಾರ್ವತಿ.
ಓ ದಿವ್ಯ ಶಿವಶಕ್ತಿ ಪಾರುಗಾಣಿಸು ನನ್ನ
ಈ ತೃಷ್ಣೆಯೊಳಗಿಂದ ಮೇಲಕೆತ್ತಿ.
ಮತ್ತೆ ಭವಸಾಗರಕೆ ಬೀಳದಂದದಿ ನನಗೆ
ವರವ ಕರುಣಿಸು ತಾಯಿ ವಿಶ್ವಭೂತೆ.
ನಿನ್ನ ನಿಜರೂಪವನು ಯಾರು ಬಲ್ಲರು ತಾಯೆ,
ಪಂಚಭೂತಾಧಾರೆ ಲೋಕಮಾತೆ.
ಸಕಲ ತತ್ತ್ವಾತೀತೆಯಾದರೂ ಭಕ್ತರಿಗೆ
ಹಲವು ರೂಪದೊಳಿಂತು ತೋರುತಿರುವೆ.
ಪಂಚ ಪಂಚದಿ ಲಯವನಾಗಿಸಿದ ಸಾಧಕಗೆ
ನೀ ನಿರಾಕಾರೆಯೊಲು ಗೋಚರಿಸುವೆ.

ರಾಮಲಾಲ ಈ ಚರಣ ಹಾಡಿದಾಗ:

ಅದರಾಚೆ ಕಂಠಸ್ಥಲದಿ ಶೋಭಿಸಿದೆ
ಧೂಮ್ರವರ್ಣದ ಮತ್ತೆ ಷೋಡಶದಲದ ಪದ್ಮವೊಂದು.
ಅದರ ದಲದಲಗಳಲಿ ಆಕಾಶವಡಗಿಹುದು,
ಅದನು ದಾಟಲು ಎಲ್ಲ ಆಕಾಶವಹುದು!

ಪರಮಹಂಸರು ಮಾಸ್ಟರಿಗೆ ಹೇಳಿದರು: "ಕೇಳಿಲ್ಲಿ. ನಿರಾಕಾರ ಸಚ್ಚಿದಾನಂದದರ್ಶನ ಎಂಬುದು ಇದೇನೆ. ವಿಶುದ್ಧಚಕ್ರವನ್ನು ಭೇದಿಸಿದೊಡನೇ ಎಲ್ಲವೂ ಆಕಾಶಮಯ."

ಮಾಸ್ಟರ್: "ಹೌದು."

ಶ್ರೀರಾಮಕೃಷ್ಣರು: "ಈ ಮಾಯಾ ಕಲ್ಪಿತ ಜೀವಜಗತ್ತನ್ನು ದಾಟಿದ ಒಡನೇ ನಿತ್ಯ. ನಾದವನ್ನು ಭೇದಿಸಿದೊಡನೇ ಸಮಾಧಿ. ಓಂಕಾರ ಸಾಧನೆ ಮಾಡುತ್ತ ಮಾಡುತ್ತ ನಾದ ಭೇದವಾಗಿಬಿಡುತ್ತದೆ; ಸಮಾಧಿ ಉಂಟಾಗುತ್ತದೆ."

ಅಧರಸೇನ ಪರಮಹಂಸರಿಗೆ ಹಣ್ಣುಹಂಪಲಾದಿಗಳ ಉಪಾಹಾರ ಮಾಡಿಸಿದ. ಅವರು ಈಗ ಯದುಮಲ್ಲಿಕನ ಮನೆಗೆ ಹೊರಟುನಿಂತಿದಾರೆ.

ಪರಮಹಂಸರು ಯದುಮಲ್ಲಿಕನ ಮನೆಗೆ ಬಂದಿದಾರೆ. ಆತನ ಮನೆಯಲ್ಲಿ ಸಿಂಹವಾಹಿನಿಯ ನಿತ್ಯಪೂಜೆ ನಡೆಯುತ್ತಿದೆ. ದೇವಿಯನ್ನು

ಹೂವು, ಚಂದನ, ಮಾಲೆ ಇವುಗಳಿಂದ ಬಹಳ ಚೆನ್ನಾಗಿ ಅಲಂಕಾರ ಮಾಡಿದಾರೆ. ಪೀಠದ ಹತ್ತಿರ ದೀಪಗಳನ್ನು ಹಚ್ಚಿಟ್ಟಿದಾರೆ. ದೇವಿ ಆನಂದವನ್ನೇ ಹೊರಚೆಲ್ಲುತ್ತಿದಾಳೆ. ಹತ್ತಿರದಲ್ಲೇ ಅರ್ಚಕನೂ ಕುಳಿತಿದಾನೆ. ಪರಮಹಂಸರು ತಮ್ಮ ಭಕ್ತರೊಡನೆ ಅಲ್ಲಿಗೆ ಬಂದು ದೇವಿಗೆ ಪ್ರಣಾಮಮಾಡಿ ಆಕೆಯ ಎದುರು ನಿಂತುಕೊಂಡಿದಾರೆ. ಈಗ ಭಕ್ತರಲ್ಲೊಬ್ಬನಿಗೆ ಹೇಳುತ್ತಿದಾರೆ, ದಕ್ಷಿಣೆಯ ತಟ್ಟೆಗೆ ಒಂದು ರೂಪಾಯಿ ಹಾಕುವ ಹಾಗೆ.

ಪರಮಹಂಸರು ದೇವಿಯ ಎದುರು ಬಹಳ ಹೊತ್ತಿನಿಂದಲೂ ಕೈಮುಗಿದು ನಿಂತಿದಾರೆ. ಭಕ್ತರೂ ಅವರ ಹಿಂದೆ ಕೈಮುಗಿದುಕೊಂಡು ನಿಂತಿದಾರೆ. ಕ್ರಮೇಣ ಪರಮಹಂಸರು ಸಮಾಧಿಸ್ಥರಾಗುತ್ತಿದಾರೆ. ಶರೀರ ಸ್ಥಿರವಾಗಿ ನಿಂತುಕೊಂಡಿದೆ. ಕಣ್ಣು ರೆಪ್ಪೆ ಹೊಡೆಯುತ್ತಿಲ್ಲ.

ಬಹಳ ಹೊತ್ತಾದನಂತರ ದೀರ್ಘನಿಶ್ವಾಸ ಬಿಟ್ಟರು. ಈಗ ಪ್ರಕೃತಿಸ್ಥರಾಗುತ್ತಿದಾರೆ. ಇನ್ನೂ ಪ್ರೇಮೋನ್ಮತ್ತರಾಗೇ ಭಗವತಿಗೆ ಹೇಳುತ್ತಿದಾರೆ: "ತಾಯಿ, ನಾನು ಹೋಗಿಬರುತ್ತೇನೆ." ಆದರೆ ಅವರಿಗೆ ಆ ಸ್ಥಳವನ್ನು ಬಿಟ್ಟು ಹೋಗಲಾಗುತ್ತಿಲ್ಲ. ರಾಮಲಾಲನನ್ನು ಸಂಬೋಧಿಸಿ ಆತನಿಗೆ ಹೇಳುತ್ತಿದಾರೆ: "ಆ ಹಾಡನ್ನು ಹಾಡು— ಬಳಿಕ ನನಗೆ ಸರಿಯಾಗುತ್ತದೆ."

ರಾಮಲಾಲ ಹಾಡುತ್ತಿದಾನೆ:

ಜಗವ ಮರುಳು ಮಾಡಿಹೆ ನೀ
ಪರಶಿವ ಮನಮೋಹಿನೀ!
ಮೂಲಾಧಾರ ಕಮಲದಲ್ಲಿ
ವೀಣಾರವ ವಿನೋದಿನೀ.
ದೇಹ ದೇಹ ಯಂತ್ರದಲ್ಲಿ
ಸುಷುಮ್ನಾದಿ ತಂತ್ರದಲ್ಲಿ
ಗುಣಭೇದದ ಮಂತ್ರದಲ್ಲಿ
ಗುಣತ್ರಯ ವಿಭಾಗಿನೀ.
ಮಹಾಮಾಯೆ, ಅನಾಯಾಸ-
ದಿಂದ ಮೋಹಪಾಶದಿ
ಜಗವ ಬಿಗಿದು ನೀನು ಮಾತ್ರ

ತತ್ತ್ವಾಕಾಶದಲ್ಲಿ ನಿಂತೆ
ಅಚಲ ಮಿಂಚಿನಂದದಿ!

ಪರಮಹಂಸರು ಭಕ್ತರೊಡನೆ ಬೈಠಕ್‌ಖಾನೆಗೆ ಮುಂದುವರಿಯು ತ್ತಿದಾರೆ. ಆಗಾಗ ಹೇಳುತ್ತಲೇ ಇದಾರೆ: "ಹೇ ತಾಯೇ, ನನ್ನ ಹೃದಯ ದಲ್ಲಿ ನೆಲಸು!" ಯದುಮಲ್ಲಿಕ ತನ್ನ ಬಂಧುಬಾಂಧವರೊಡನೆ ಬೈಠಕ್ ಖಾನೆಯಲ್ಲಿ ಕುಳಿತಿದಾನೆ. ಪರಮಹಂಸರು ಇನ್ನೂ ಪ್ರೇಮೋನ್ಮತ್ತರಾಗೇ ಇದಾರೆ. ಈಗ ಕುಳಿತುಕೊಂಡು ಭಗವತಿಯ ಸಂಬಂಧವಾಗಿ ಹಾಡ ಲಾರಂಭಿಸಿದಾರೆ:

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು. . . . (ಉ. ೨೩)

ಪರಮಹಂಸರು ಇನ್ನೂ ಪ್ರೇಮೋನ್ಮತ್ತರಾಗೇ ಯದುಮಲ್ಲಿಕನಿಗೆ ಹೇಳುತ್ತಿದಾರೆ: "ಏನಪ್ಪ, ಮತ್ತೇನು ಹಾಡಲಿ? 'ಇವನೆಲ್ಲೋ ಎಂಟು ತಿಂಗಳ ಕೂಸು' ಎಂಬುದನ್ನು ಹಾಡಲೆ?"

ಪರಮಹಂಸರು ಹಾಡುತ್ತಿದಾರೆ:

ಇವನೆಲ್ಲೋ ಎಂಟು ತಿಂಗಳ ಕೂಸು—ಎಂದುಕೊಂಡಿಹೆ ನೀನು!
ನಿನ್ನ ಕೆಂಗಣ್ಣುಗಳ ಕಂಡು ಬೆದರುವೆನೆ ನಾನು? . . . (ಉ. ೧೧೮)

ಬಹುಮಟ್ಟಿಗೆ ಪ್ರಕೃತಿಸ್ಥರಾಗಿ ಪರಮಹಂಸರು ಹೇಳುತ್ತಿದಾರೆ: "ನಾನು ಭಗವತಿಯ ಪ್ರಸಾದ ತಿನ್ನುತ್ತೇನೆ." ಬಳಿಕ ಸಿಂಹವಾಹಿನಿಯ ಪ್ರಸಾದವನ್ನು ಸ್ವಲ್ಪ ತಿಂದರು.

ಯದುಮಲ್ಲಿಕ ತನ್ನ ಅನೇಕ ಮಂದಿ ಬಂಧುಬಾಂಧವರೊಡನೆ ಪರಮಹಂಸರ ಹತ್ತಿರ ಕುಳಿತಿದಾನೆ. ಅವರಲ್ಲಿ ಕೆಲವರು ಯದುಮಲ್ಲಿಕನ ಹೊಗಳುಭಟ್ಟರು.

ಶ್ರೀರಾಮಕೃಷ್ಣರು ನಗುತ್ತ: "ಈ ಹೊಗಳುಭಟ್ಟರನ್ನೇಕೆ ಹತ್ತಿರ ಸೇರಿಸುತ್ತಾ ಇದೀಯೆ?"

ಯದುಮಲ್ಲಿಕ ನಗುತ್ತ: "ಅವರು ಅಂಥವರೇ ಅಂತ ಇಟ್ಟುಕೊಳ್ಳಿ. ನೀವು ಅವರನ್ನು ಉದ್ಧಾರಮಾಡಲೊಲ್ಲಿರಾ?"

ಶ್ರೀರಾಮಕೃಷ್ಣರು ನಗುತ್ತ: "ಗಂಗೆಯ ನೀರು ಮದ್ಯದ ಸೀಸೆ ಯನ್ನು ಶುದ್ಧಿಮಾಡಲಾರದು."

ಯದುಮಲ್ಲಿಕ ಪರಮಹಂಸರಿಗೆ ವಾಗ್ದಾನಮಾಡಿದ್ದ ತಾನು ತನ್ನ ಮನೆಯಲ್ಲಿ ಚಂಡಿ ಕೀರ್ತನೆಯನ್ನು ಮಾಡಿಸುವುದಾಗಿ. ಹಾಗೆ ವಾಗ್ದಾನ ಮಾಡಿದ ಮೇಲೆ ಬಹಳ ದಿನಗಳು ಕಳೆದುಹೋದುವು, ಆದರೆ ಇನ್ನೂ ಚಂಡಿ ಕೀರ್ತನೆ ಮಾತ್ರ ನಡೆಯಲಿಲ್ಲ.

ಶ್ರೀರಾಮಕೃಷ್ಣರು: "ಒಳ್ಳೆಯದು, ಚಂಡಿ ಕೀರ್ತನೆ ಸಮಾಚಾರ ಏನಾಯಿತು?"

ಯದುಮಲ್ಲಿಕ: "ಏನೇನೊ ಕೆಲಸಗಳು ಬಂದುಬಿಟ್ಟಿದ್ದುವು; ಆದ್ದರಿಂದ ವ್ಯವಸ್ಥೆಮಾಡಲಾಗಲಿಲ್ಲ."

ಶ್ರೀರಾಮಕೃಷ್ಣರು: "ಇದೇನಿದು? ಮನುಷ್ಯನಿಗಿರುವುದು ಒಂದೇ ಒಂದು ನಾಲಗೆ! ಆತನ ಮಾತು ಆನೆಯ ದಂತದ ಹಾಗೆ; ಅವು ಹೊರಕ್ಕೆ ಬರುತ್ತವೆಯೇ ವಿನಾ ಒಳಕ್ಕೆ ಹಿಂದಿರುಗುವುದಿಲ್ಲ. ಮನುಷ್ಯ ತನ್ನ ನಾಲಗೆ ಉಳಿಸಿಕೊಳ್ಳಬೇಕು. ಏನು ಹೇಳುತ್ತೀಯೆ?"

ಯದುಮಲ್ಲಿಕ ನಗುತ್ತ: "ನೀವು ಹೇಳುವುದೇನೊ ನಿಜ."

ಶ್ರೀರಾಮಕೃಷ್ಣರು: "ನೀನು ಒಬ್ಬ ವ್ಯವಹಾರ ನಿಪುಣ. ನೀನು ಯಾವ ಕೆಲಸವನ್ನೂ ಬಹಳವಾಗಿ ಗುಣಾಕಾರ ಹಾಕಿ ಮಾಡುತ್ತೀಯೆ, ಬ್ರಾಹ್ಮಣನ ಹಸು ಕಡಮೆ ತಿನ್ನಬೇಕು, ಸಗಣಿ ಹೆಚ್ಚಾಗಿ ಹಾಕಬೇಕು. 'ಸೊರ್, ಸೊರ್' ಅಂತ ಧಾರಾಕಾರವಾಗಿ ಹಾಲು ಕರೆಯಬೇಕು." (ಎಲ್ಲರೂ ನಗುತ್ತಿದಾರೆ.)

ಸ್ವಲ್ಪ ಹೊತ್ತಾದನಂತರ ಪರಮಹಂಸರು ಯದುವಿಗೆ ಹೇಳುತ್ತಿದಾರೆ: "ನಿನ್ನ ಸ್ವಭಾವ ಏನು ಎಂಬುದು ಅರ್ಥವಾಯಿತು. ಅದು ಅರ್ಧ ಬೆಚ್ಚಗೆ, ಅರ್ಧ ತಣ್ಣಗೆ. ನೀನು ಭಗವಂತ ಮತ್ತು ಜಗತ್ತು ಎರಡರಲ್ಲೂ ಮನಸ್ಸಿಟ್ಟಿದೀಯೆ."

ಯದುಮಲ್ಲಿಕ ಪರಮಹಂಸರಿಗೂ, ಅವರ ಭಕ್ತರಿಗೂ ಹಣ್ಣುಹಂಪಲ ಮತ್ತು ಸಿಹಿ ತಿಂಡಿಗಳನ್ನು ಉಪಾಹಾರಮಾಡಿಸಿದ. ಬಳಿಕ ಪರಮಹಂಸರು ಖೇಲಾತಘೋಷನ ಮನೆಗೆ ಹೊರಟರು.

ಖೇಲಾತಘೋಷನ ಮನೆಯೇನೊ ಬಹಳ ದೊಡ್ಡ ಭವನವೇ, ಆದರೆ ಅದು ಬಿಟ್ಟುಬಿಟ್ಟ ಮನೆಯ ಹಾಗೆ ಕಂಡಿತು. ಮನೆಗೆ ಪ್ರವೇಶಮಾಡಿ ಮುಂದುವರಿಯುತ್ತಿದ್ದ ಹಾಗೇ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ಮಾಸ್ಟರ್, ರಾಮಲಾಲ, ಇನ್ನೂ ಕೆಲವು ಮಂದಿ ಭಕ್ತರು ಅವ

ರೊಡನೆ ಇದಾರೆ. ಪರಮಹಂಸರನ್ನು ಆಹ್ವಾನಿಸಿದ್ದವನು ಖೇಲಾತ-ಘೋಷನ ಭಾವ. ಆತ ವೈಷ್ಣವ. ಆಗಲೇ ಮುದುಕನಾಗಿದಾನೆ. ಮೈ ಮೇಲೆ ತಿಲಕಾದಿ ಮುದ್ರೆಗಳನ್ನು ಹಾಕಿಕೊಂಡಿದಾನೆ. ಕೈಯಲ್ಲಿ ಹರಿ-ನಾಮ ಚೀಲ ಹಿಡಿದಿದಾನೆ. ಆತ ಆಗಾಗ ದಕ್ಷಿಣೇಶ್ವರಕ್ಕೆ ಬಂದು ಪರಮ-ಹಂಸರ ದರ್ಶನ ಪಡೆಯುತ್ತಿದ್ದ. ಕೆಲ ಕೆಲ ವೈಷ್ಣವರಿಗೆ ಬಹಳ ಸಂಕುಚಿತ ಬುದ್ಧಿ. ಅವರು ಶಾಕ್ತರನ್ನ, ವೇದಾಂತಿಗಳನ್ನ ಬಹಳವಾಗಿ ನಿಂದಿಸುತ್ತಾರೆ. ಪರಮಹಂಸರು ಈಗ ಆತನೊಡನೆ ಮಾತನಾಡುತ್ತಿದಾರೆ.

ಶ್ರೀರಾಮಕೃಷ್ಣರು: "ನಮ್ಮ ಧರ್ಮವೇ ಸರಿ ಉಳಿದವರದೆಲ್ಲ ತಪ್ಪು ಎಂಬ ಭಾವನೆ ಒಳ್ಳೆಯದಲ್ಲ. ಭಗವಂತ ಒಬ್ಬನೇ ವಿನಾ ಇಬ್ಬರಲ್ಲ. ಆತನನ್ನು ಭಿನ್ನಭಿನ್ನ ಹೆಸರಿನಿಂದ ಬೇರೆಬೇರೆ ಜನರು ಕರೆಯುತ್ತಾರೆ. ಕೆಲವರು ಆತನನ್ನು 'ಗಾಡ್' ಅಂತ ಕರೆಯುತ್ತಾರೆ, ಇನ್ನು ಕೆಲವರು 'ಅಲ್ಲಾ' ಎಂದು ಕರೆಯುತ್ತಾರೆ. ಇನ್ನೂ ಕೆಲಕೆಲವರು ಆತನನ್ನೇ 'ಕೃಷ್ಣ', 'ಶಿವ', 'ಬ್ರಹ್ಮ' ಹೀಗೆಲ್ಲಾ ಕರೆಯುತ್ತಾರೆ. ಉದಾಹರಣೆಗೆ ಕೊಳದ ನೀರು. ಒಂದು ಘಟ್ಟದವರು ಅದನ್ನು 'ಜಲ', ಇನ್ನೊಂದು ಘಟ್ಟದವರು 'ವಾಟರ್', ಮತ್ತೊಂದು ಘಟ್ಟದವರು 'ಪಾನಿ' ಎಂದು ಕರೆಯುತ್ತಾರೆ. ಹಿಂದುಗಳು ಅದನ್ನ 'ಜಲ', ಕ್ರಿಶ್ಚಿಯನ್ನರು 'ವಾಟರ್', ಮುಸಲ್ಮಾನರು 'ಪಾನಿ' ಅಂತ ಕರೆಯುತ್ತಾರೆ. ಆದರೆ ವಸ್ತು ಮಾತ್ರ ಒಂದೇ ಒಂದು. ಮತಗಳು ಕೇವಲ ಪಥಗಳು ಮಾತ್ರ. ಪ್ರತಿಯೊಂದು ಧರ್ಮವೂ ಭಗವಂತನ ಸಾಕ್ಷಾತ್ಕಾರಕ್ಕೆ ಒಂದೊಂದು ಮಾರ್ಗ. ಇದು ನದಿಗಳು ವಿವಿಧ ದಿಕ್ಕುಗಳಿಂದ ಹರಿದುಬಂದು ಎಲ್ಲವೂ ಸಾಗರದಲ್ಲಿ ಐಕ್ಯ ವಾಗೋ ಹಾಗೆ.

"ವೇದಗಳಲ್ಲಿಯೂ, ಪುರಾಣಗಳಲ್ಲಿಯೂ, ತಂತ್ರದಲ್ಲಿಯೂ ಪ್ರತಿ ಪಾದ್ಯನಾಗಿರುವವನು ಕೇವಲ ಆ ಸಚ್ಚಿದಾನಂದನೊಬ್ಬನೇ. ವೇದಗಳು ಆತನನ್ನೇ 'ಬ್ರಹ್ಮ' ಎಂದು, ಪುರಾಣಗಳು 'ರಾಮ', 'ಕೃಷ್ಣ' ಇತ್ಯಾದಿ ಎಂದು, ತಂತ್ರ 'ಶಿವ' ಎಂದು ಕರೆದಿವೆ. ಆ ಒಬ್ಬ ಸಚ್ಚಿದಾನಂದನಿಗೇ ಬ್ರಹ್ಮ, ಕೃಷ್ಣ, ಶಿವ ಅಂತ ಹೆಸರು."

ಎಲ್ಲರೂ ಸುಮ್ಮನೆ ಕುಳಿತಿದಾರೆ.

ಒಬ್ಬ ವೈಷ್ಣವಭಕ್ತ: "ಮಹಾಶಯರೆ, ಭಗವಂತನ ಸಂಬಂಧ ವಾಗಿ ಯೋಚಿಸುವುದರ ಆವಶ್ಯಕತೆ ತಾನೆ ಏನಿದೆ?"

ಶ್ರೀರಾಮಕೃಷ್ಣರು: "ಮನುಷ್ಯನಿಗೆ ಈ ಜ್ಞಾನ[1] ವಿರುವುದೇ ಆದರೆ ಆತ ಜೀವನ್ಮುಕ್ತ.

"ಆದರೆ ಎಲ್ಲರಿಗೂ ಇದರಲ್ಲಿ ಶ್ರದ್ಧೆ ಇಲ್ಲ. ಬಾಯಲ್ಲಿ ಮಾತ್ರ ಹಾಗೆ ಹೇಳುತ್ತಾರೆ. ಭಗವಂತನಿದಾನೆ, ಆತನ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ ಎಂಬುದನ್ನು ಪ್ರಾಪಂಚಿಕರು ಕೇಳಿ ತಿಳಿದುಕೊಂಡಿದಾರೆಯೇ ವಿನಾ ಅದರಲ್ಲಿ ಅವರಿಗೆ ಶ್ರದ್ಧೆಯಿಲ್ಲ.

"ಪ್ರಾಪಂಚಿಕರ ಭಗವದ್ಭಾವನೆ ಯಾವ ರೀತಿಯದು ಗೊತ್ತೆ? ಅದು ಚಿಕ್ಕ ಮಕ್ಕಳು ಜಗಳವಾಡುವಾಗ 'ಭಗವಂತನಾಣೆಗೂ' ಎಂದು ಹೇಳುತ್ತವೆಯಲ್ಲ ಹಾಗೆ. ಅವು ಆ ಪದವನ್ನು ತಮ್ಮ ಚಿಕ್ಕಮ್ಮ ದೊಡ್ಡಮ್ಮಂದಿರು ಜಗಳಕಾಯುವಾಗ ಉಪಯೋಗಿಸುವುದನ್ನು ನೋಡಿ ಕಲಿತುಕೊಳ್ಳುತ್ತವೆ.

"ಎಲ್ಲರಿಗೂ ಭಗವಂತನನ್ನು ಗ್ರಹಿಸಲು ಸಾಧ್ಯವೇ? ಆತ ಒಳ್ಳೆಯವರು ಕೆಟ್ಟವರು, ಭಕ್ತರು ಅಭಕ್ತರು, ವಿಶ್ವಾಸಿ ಅವಿಶ್ವಾಸಿ ಎಲ್ಲರನ್ನೂ ಸೃಷ್ಟಿಸಿದಾನೆ. ಆತನ ಸೃಷ್ಟಿಯಲ್ಲಿ ಈ ವೈಚಿತ್ರ್ಯವೆಲ್ಲಾ ಇದೆ. ಆತನ ಶಕ್ತಿ ಕೆಲವದರಲ್ಲಿ ಅಧಿಕವಾಗಿ, ಇನ್ನು ಕೆಲವದರಲ್ಲಿ ಕಡಮೆಯಾಗಿ ವ್ಯಕ್ತವಾಗಿದೆ. ಸೂರ್ಯನ ಬೆಳಕು ಮಣ್ಣಿಗಿಂತ ನೀರಿನಲ್ಲಿ ಹೆಚ್ಚಾಗಿ ಪ್ರತಿಬಿಂಬಿತವಾಗುತ್ತದೆ; ಕನ್ನಡಿಯಲ್ಲಿ ಇನ್ನೂ ಅಧಿಕವಾಗಿ. ಹಾಗೇ ಭಕ್ತರಲ್ಲೂ ವಿವಿಧ ಅಂತಸ್ತಿನವರಿದಾರೆ: ಉತ್ತಮ, ಮಧ್ಯಮ, ಅಧಮ. ಗೀತೆಯಲ್ಲಿ ಇವೆಲ್ಲಾ ವರ್ಣಿತವಾಗಿವೆ."

ವೈಷ್ಣವ: "ಅದು ನಿಜ."

ಶ್ರೀರಾಮಕೃಷ್ಣರು: "ಅಧಮ ಭಕ್ತ ಹೇಳುತ್ತಾನೆ: 'ಭಗವಂತನಿದಾನೆ, ಆದರೆ ಆಕಾಶದಲ್ಲಿ—ಬಹಳ ದೂರದಲ್ಲಿ.' ಮಧ್ಯಮ ಭಕ್ತ ಹೇಳುತ್ತಾನೆ: 'ಭಗವಂತ ಎಲ್ಲಾ ಭೂತಗಳಲ್ಲಿಯೂ ಚೈತನ್ಯರೂಪದಿಂದ, ಪ್ರಾಣರೂಪದಿಂದ ಇದಾನೆ.' ಉತ್ತಮ ಭಕ್ತ ಹೇಳುತ್ತಾನೆ: 'ಭಗವಂತನೇ ಎಲ್ಲವೂ ಆಗಿದಾನೆ. ಏನೇನಿದೆಯೊ ಅದೆಲ್ಲಾ ಭಗವಂತನ ಒಂದೊಂದು ರೂಪ. ಆತನೇ ಮಾಯೆ, ಜೀವ, ಜಗತ್ತು ಇವೆಲ್ಲಾ ಆಗಿದಾನೆ. ಆತ ಹೊರತು ಬೇರೇನೂ ಇಲ್ಲ.'"

1. ಭಗವಂತ ಒಳಗೆ ಹೊರಗೆ ಎಲ್ಲೆಲ್ಲೂ ಇದಾನೆ ಎಂಬ ಜ್ಞಾನ. ಈ ಜ್ಞಾನವಿರುವುದೇ ಆದರೆ, ಆತನ ಸಂಬಂಧವಾಗಿ ಚಿಂತಿಸುವುದು ಅನಾವಶ್ಯಕ.

ವೈಷ್ಣವ: "ಆ ವಿಧದ ಅವಸ್ಥೆ ಯಾರಿಗಾದರೂ ಉಂಟಾಗುತ್ತ ದೆಯೆ?"

ಶ್ರೀರಾಮಕೃಷ್ಣರು: "ಆತನ ದರ್ಶನ ಆಗದ ಹೊರತು ಆ ಅವಸ್ಥೆ ಉಂಟಾಗೋದಿಲ್ಲ. ಆದರೆ ದರ್ಶನ ದೊರೆತಿದೆಯೊ ಇಲ್ಲವೊ ಎಂಬುದನ್ನು ಅರಿಯಲು ಲಕ್ಷಣಗಳಿವೆ. ಆತ ಕೆಲವು ವೇಳೆ ಉನ್ಮತ್ತನ ಹಾಗೆ ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ. ಇನ್ನು ಕೆಲವು ವೇಳೆ ಬಾಲಕನ ಹಾಗೆ, ಎಂದರೆ ಐದು ವರ್ಷದ ಬಾಲಕನ ಹಾಗೆ—ಸರಳನಾಗಿ, ಉದಾರಿಯಾಗಿ, ಅಹಂಕಾರಶೂನ್ಯನಾಗಿ, ಯಾವ ವಸ್ತುವಿನಲ್ಲೂ ಆಸಕ್ತಿಯಿಲ್ಲದವನಾಗಿ, ಯಾವ ಗುಣಕ್ಕೂ ವಶನಾಗದವನಾಗಿ, ಸದಾನಂದಮಯನಾಗಿ ಇರುತ್ತಾನೆ. ಮತ್ತೆ ಕೆಲವು ವೇಳೆ ಪಿಶಾಚಿಯ ಹಾಗೆ—ಶುಚಿ ಅಶುಚಿಯ ಭೇದವಿರದು; ಆಚಾರ ಅನಾಚಾರ ಎಲ್ಲಾ ಒಂದೇ ಆಗಿಬಿಡುತ್ತವೆ. ಮತ್ತೂ ಕೆಲವು ವೇಳೆ ಜಡನ ಹಾಗೆ—ಏನೊ ಒಂದನ್ನು ನೋಡುತ್ತಾ ನಿಂತಿರುವನೋ ಎಂಬಂತೆ; ಆತನ ಕೈಯಲ್ಲಿ ಯಾವ ಕಾರ್ಯವೂ ಸಾಧ್ಯವಿಲ್ಲ; ಯಾವುದಕ್ಕೂ ಪ್ರಯತ್ನಮಾಡಲಾರ."

ಪರಮಹಂಸರು ತಮ್ಮ ಅವಸ್ಥೆಯನ್ನೇ ಈ ರೀತಿಯಾಗಿ ಸೂಚಿಸುತ್ತಿದಾರೇನು?

ಶ್ರೀರಾಮಕೃಷ್ಣರು ವೈಷ್ಣವಭಕ್ತನಿಗೆ: "'ನೀನು, ನಿನ್ನದು' ಎಂಬ ಭಾವನೆಯೇ ಜ್ಞಾನ; 'ನಾನು, ನನ್ನದು' ಎಂಬುದೇ ಅಜ್ಞಾನ. ಜ್ಞಾನ ಈ ಭಾವನೆಯನ್ನು ತರುತ್ತದೆ: 'ಹೇ ಭಗವಂತ, ನೀನೇ ಕರ್ತ, ನಾನು ಅಕರ್ತ. ಹೇ ಭಗವಂತ, ಎಲ್ಲವೂ ನಿನಗೆ ಸೇರಿದವೆ. ದೇಹ, ಮನಸ್ಸು, ಗೃಹ, ಪರಿವಾರ, ಜೀವ, ಜಗತ್ತು ಎಲ್ಲವೂ ನಿನಗೆ ಸೇರಿದವೆ. ಯಾವುದೂ ನನಗೆ ಸೇರಿದುದಲ್ಲ.'

"ಅಜ್ಞಾನಿ ಹೇಳುತ್ತಾನೆ: 'ಏನು, ಭಗವಂತನೆ? ಅಲ್ಲಿ, ಅಲ್ಲಿ—ಬಹಳ ದೂರದಲ್ಲಿ.' ಜ್ಞಾನಿಗೆ ಗೊತ್ತಿದೆ, ಭಗವಂತ ಇಲ್ಲೆ, ಬಹಳ ಹತ್ತಿರದಲ್ಲೆ, ಹೃದಯಮಧ್ಯದಲ್ಲೆ ಅಂತರ್ಯಾಮಿ ರೂಪದಿಂದ ಇದಾನೆ; ಪ್ರತಿಯೊಂದು ರೂಪವನ್ನೂ ಆತನೇ ಧರಿಸಿದಾನೆ ಎಂಬುದಾಗಿ."

೨೨ನೆ ಜುಲೈ ೧೮೮೩, ಆಷಾಢ ಕೃಷ್ಣ ಬಿದಿಗೆ, ಭಾನುವಾರ.

ಇಂದು ರಜಾ ದಿನವಾದ್ದರಿಂದ ಅನೇಕ ಗೃಹಸ್ಥಭಕ್ತರು ಪರಮಹಂಸರ ದರ್ಶನ ಪಡೆಯಲು ದಕ್ಷಿಣೇಶ್ವರಕ್ಕೆ ಬಂದಿದಾರೆ. ಯುವಕ

ಭಕ್ತರು ಬಿಡಿ ದಿನಗಳಲ್ಲಿ ಬರುವ ವಾಡಿಕೆ. ಪರಮಹಂಸರು ತಮ್ಮ ಅಂತ-ರಂಗ ಭಕ್ತರಿಗೆ ಸಾಧ್ಯವಾದಾಗಲೆಲ್ಲಾ ಮಂಗಳವಾರ, ಶನಿವಾರ ಬರುವಂತೆ ಸಲಹೆ ಇತ್ತಿದಾರೆ. ಅವು ಆಧ್ಯಾತ್ಮಿಕ ಉಪದೇಶಗಳಿಗೆ ಬಹಳ ಪವಿತ್ರವಾದ ದಿನಗಳು ಅಂತ ಪರಮಹಂಸರ ಭಾವನೆ. ಅಧರಸೇನ, ರಾಖಾಲ, ಮಾಸ್ಟರ್ ಗಾಡಿಮಾಡಿಕೊಂಡು ಬಂದಿದಾರೆ.

ಪರಮಹಂಸರು ಮಧ್ಯಾಹ್ನದ ಊಟವಾದನಂತರ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡಿದಾರೆ. ಅವರ ಕೊಠಡಿಯಲ್ಲಿ ಅನೇಕ ದೇವ ದೇವಿಯರ ಚಿತ್ರಗಳನ್ನು ಗೋಡೆಗಳಿಗೆ ತೂಗಹಾಕಿದಾರೆ. ಅವುಗಳಲ್ಲಿ ಒಂದು, ಏಸುಕ್ರಿಸ್ತ ಮುಳುಗಿಹೋಗುತ್ತಿರುವ ಪೀಟರನನ್ನು ಮೇಲಕ್ಕೆ ಎತ್ತುತ್ತಿರು ವುದು. ಅವರ ಕೊಠಡಿಯ ಹೊರಗೆ ಸುವಾಸನೆಯನ್ನು ಬೀರುವ ಅನೇಕ ಹೂವಿನ ಗಿಡಗಳಿವೆ. ಕೊಠಡಿಯಿಂದಲೇ ದಕ್ಷಿಣಾಭಿಮುಖವಾಗಿ ಹರಿಯುವ ಗಂಗಾ ನದಿಯನ್ನು ನೋಡಬಹುದು. ಪರಮಹಂಸರು ಉತ್ತರಾಭಿಮುಖ ರಾಗಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಅವರ ಮುಂದುಗಡೆ ನೆಲದ ಮೇಲೆ ಹಾಸಿರುವ ಜಂಖಾನ ಮತ್ತು ಮಂದಲಿಗೆಗಳ ಮೇಲೆ ಭಕ್ತರು ಕುಳಿತುಕೊಂಡಿದಾರೆ. ಎಲ್ಲರೂ ಪರಮಹಂಸರನ್ನೇ ಏಕದೃಷ್ಟಿಯಿಂದ ನೋಡುತ್ತಿದಾರೆ. ಬ್ರಾಹ್ಮಸಮಾಜದ ಅನುಯಾಯಿಯಾದ ಅರವತ್ತು ವರ್ಷ ವಯಸ್ಸಿನ ಮಣಿಮಲ್ಲಿಕ ಪರಮಹಂಸರ ದರ್ಶನ ಪಡೆಯಲು ಬಂದಿ ದಾನೆ. ಈಗ ಕೆಲವು ದಿನದ ಹಿಂದೆ ಕಾಶಿಯಾತ್ರೆ ಮಾಡಿ ಹಿಂದಿರುಗಿ ಬಂದಿದಾನೆ. ಈಗ ಪರಮಹಂಸರಿಗೆ ತನ್ನ ಅನುಭವಗಳನ್ನು ತಿಳಿಸು ತ್ತಿದಾನೆ.

ಮಣಿಮಲ್ಲಿಕ: "ನಾನು ಕಾಶಿಯಲ್ಲಿ ಒಬ್ಬ ಸಾಧುವನ್ನು ಕಂಡೆ. ಆತ ಹೇಳಿದ: 'ಇಂದ್ರಿಯ ಸಂಯಮ ಆಗದ ಹೊರತು ಏನೂ ದೊರೆಯುವ ಹಾಗಿಲ್ಲ. ಸುಮ್ಮನೆ "ಭಗವಂತ! ಭಗವಂತ!" ಅಂತ ಕೂಗಿಕೊಂಡ ಮಾತ್ರಕ್ಕೆ ಏನು ದೊರೆತುಬಿಟ್ಟೀತು?' "

ಶ್ರೀರಾಮಕೃಷ್ಣರು: "ಇಂಥವರ ದೃಷ್ಟಿ ಏನು ಗೊತ್ತೆ? ಮೊದಲು ಸಾಧನೆ ಮಾಡಬೇಕು. ಶಮದಮಾದಿ ಷಟ್ ಸಂಪತ್ತಿಗಳನ್ನು ಗಳಿಸಿಕೊಳ್ಳ ಬೇಕು. ಇವರ ಗುರಿ ನಿರ್ವಾಣ. ಇವರು ವೇದಾಂತವಾದಿಗಳು. 'ಬ್ರಹ್ಮ ಸತ್ಯಂ, ಜಗನ್ಮಿಥ್ಯಾ' ಎಂಬುದಾಗಿ ಸತತ ವಿಚಾರದಲ್ಲಿ ತೊಡಗಿರುತ್ತಾರೆ. ಇದು ಬಹಳ ಕಠಿನ ಮಾರ್ಗ. ಜಗತ್ತು ಮಿಥ್ಯೆಯಾದರೆ ನೀನೂ ಮಿಥ್ಯೆ.

ಯಾರು ಉಪದೇಶವೀಯುತ್ತಾನೊ ಆತನೂ ಮಿಥ್ಯೆ. ಆತನ ಉಪದೇಶವೂ ಸ್ವಪ್ನದ ಹಾಗೆ ಮಿಥ್ಯೆ.

"ಈ ಅನುಭವ ಸಾಮಾನ್ಯ ಮನುಷ್ಯನಿಗೆ ನಿಲುಕದ ಮಾತು. ಇದು ಹೇಗೆ ಗೊತ್ತೆ? ಕರ್ಪೂರ ಉರಿಸಿದರೆ ಕೊನೆಗೆ ಏನೂ ಉಳಿದುಕೊಳ್ಳೋದಿಲ್ಲ. ಸೌದೆ ಉರಿಸಿದಾಗ, ಒಂದಿಷ್ಟು ಬೂದಿಯಾದರೂ ಉಳಿದುಕೊಳ್ಳುತ್ತದೆ. ವಿಚಾರದ ಪರಮಾವಧಿಯನ್ನು ಮುಟ್ಟಿದನಂತರ ಸಮಾಧಿಯುಂಟಾಗುತ್ತದೆ. ಆಗ 'ನಾನು', 'ನೀನು', 'ಈ ಜಗತ್ತು' ಇವುಗಳ ಸುದ್ದಿ ಸಮಾಚಾರವೇ ಇರದು.

"ಪದ್ಮಲೋಚನ ಒಬ್ಬ ದೊಡ್ಡ ಜ್ಞಾನಿ. ಆಗ ನಾನು ಯಾವಾಗ ನೋಡಿದರೂ 'ತಾಯಿ! ತಾಯಿ!' ಅನ್ನುತ್ತಿದ್ದೆ. ಆದರೂ ನನ್ನನ್ನು ಬಹಳವಾಗಿ ಗೌರವಿಸುತ್ತಿದ್ದ. ಆತ ವರ್ಧಮಾನ ರಾಜನ ಸಭಾ ಪಂಡಿತ. ಆತ ಒಮ್ಮೆ ಕಲ್ಕತ್ತಕ್ಕೆ ಬಂದಿದ್ದಾಗ ಕಾಮಾರಹಾಟಿಯ ತೋಟದಲ್ಲಿ ಕೆಲವು ಕಾಲ ಇದ್ದ. ನನಗೆ ಆತನನ್ನು ನೋಡಬೇಕು ಅಂತ ಇಚ್ಛೆಯಾಯಿತು. ಆತನಿಗೆ ಅಹಂಕಾರ ಇದೆಯೆ ಇಲ್ಲವೆ ಎಂಬುದನ್ನು ತಿಳಿದು ಬರಲು ಹೃದೆಯನ್ನು ಕಳುಹಿಸಿದೆ. ಇಲ್ಲ ಎಂದು ಗೊತ್ತಾಯಿತು. ಬಳಿಕ ಆತನನ್ನು ಹೋಗಿ ಕಂಡೆ. ಆತ ಒಳ್ಳೆ ಜ್ಞಾನಿ, ದೊಡ್ಡ ಪಂಡಿತ. ಆದರೂ ನಾನು ರಾಮಪ್ರಸಾದನ ಹಾಡನ್ನು ಹಾಡಿದೊಡನೇ ಅಳಲಾರಂಭಿಸಿದ. ನಾವಿಬ್ಬರೂ ಬಹಳ ಹೊತ್ತು ಮಾತಾಡಿದೆವು; ಅಂದಿನ ಸಂಭಾಷಣೆಯಲ್ಲಿ ನನಗೆ ದೊರೆತ ತೃಪ್ತಿ ಬೇರೆ ಯಾರೊಡನೆ ಸಂಭಾಷಿಸಿದಾಗಲೂ ದೊರೆಯಲಿಲ್ಲ. ಆತ ನನಗೆ ಬುದ್ಧಿವಾದವಿತ್ತ: 'ಭಕ್ತರ ಸಹವಾಸ ಬೇಕೆಂಬ ಇಚ್ಛೆಯನ್ನು ಬಿಟ್ಟುಬಿಡಿ; ಇಲ್ಲದಿದ್ದರೆ ಸಿಕ್ಕಿಸಿಕ್ಕಿದವರೆಲ್ಲಾ ನಿಮ್ಮನ್ನು ಮುತ್ತಿ ನಿಮ್ಮನ್ನು ಅಧೋಗತಿಗೆ ಎಳೆದುಬಿಡುವರು.' ಒಮ್ಮೆ ವೈಷ್ಣವಚರಣನ ಗುರು ಉತ್ಸವಾನಂದನೊಡನೆ ಬರವಣಿಗೆಯ ಮೂಲಕ ವಿಚಾರದಲ್ಲಿ ತೊಡಗಿದ್ದ. ಅಂದು ಆತ ನನಗೊಂದು ಸ್ವಾರಸ್ಯವಾದ ಘಟನೆ ತಿಳಿಸಿದ. ಒಮ್ಮೆ ಒಂದು ಸಭೆಯಲ್ಲಿ ಶಿವ ದೊಡ್ಡವನೊ ಅಥವಾ ಬ್ರಹ್ಮ ದೊಡ್ಡವನೊ ಎಂಬುದರ ಸಂಬಂಧವಾಗಿ ಚರ್ಚೆ ನಡೆಯಿತಂತೆ. ಪಂಡಿತರು ಯಾವ ನಿರ್ಧಾರಕ್ಕೂ ಬರಲಶಕ್ತರಾಗಿ ಪದ್ಮಲೋಚನನ ಅಭಿಪ್ರಾಯವನ್ನು ಕೇಳಿದರಂತೆ. ಆಗ ಆತ ತನ್ನ ಸ್ವಾಭಾವಿಕ ಸರಳತೆಯಿಂದ ಉತ್ತರವಿತ್ತನಂತೆ: 'ಅದು ನನಗೆ ಹೇಗೆ ಗೊತ್ತಾಗಬೇಕು? ನನಗೇ ಆಗಲಿ ಅಥವಾ ನಮ್ಮ ವಂಶದ

ಹದಿನಾಲ್ಕು ತಲೆಗಳಿಗೇ ಆಗಲಿ ಯಾರಿಗೂ ಶಿವನ ದರ್ಶನವೂ ಆಗಿಲ್ಲ, ಬ್ರಹ್ಮನ ದರ್ಶನವೂ ಆಗಿಲ್ಲ.' ನಾನು ಕಾಮಕಾಂಚನ ತ್ಯಾಗ ಮಾಡಿರುವುದನ್ನು ಕೇಳಿ ನನಗೆ ಹೇಳಿದ: 'ನೀವು ಅವನ್ನೇಕೆ ತ್ಯಜಿಸಿಬಿಟ್ಟಿರಿ? "ಇದು ಹಣ, ಅದು ಮಣ್ಣು" ಎಂಬ ಭೇದಬುದ್ಧಿ ಅಜ್ಞಾನದಿಂದ ಉಂಟಾಗುತ್ತದೆ.' ಅದಕ್ಕೆ ನಾನೇನು ಉತ್ತರ ಕೊಡಲಿ? ಹೇಳಿದೆ: 'ನನಗೆ ಇವೆಲ್ಲಾ ಗೊತ್ತಿಲ್ಲ. ನನಗಂತೂ ಹಣ-ಗಿಣ ಇವು ಯಾವೂ ರುಚಿಸುತ್ತಿಲ್ಲ.'

"ಒಬ್ಬ ಪಂಡಿತನಿಗೆ ಅಹಂಕಾರ ಬಹಳ ಜಾಸ್ತಿ. ಭಗವಂತನಿಗೆ ರೂಪವಿದೆ ಎಂಬುದನ್ನು ಆತ ಒಪ್ಪುತ್ತಿರಲಿಲ್ಲ. ಆದರೆ ಭಗವಂತನ ಕಾರ್ಯವನ್ನ ಯಾರುತಾನೆ ಅರಿಯಬಲ್ಲರು? ಭಗವಂತ ಆದ್ಯಾಶಕ್ತಿಯ ರೂಪದಲ್ಲಿ ಆತನಿಗೆ ಕಾಣಿಸಿಕೊಂಡ. ಪಂಡಿತ ಬಹಳ ಹೊತ್ತಿನವರೆಗೆ ಬಾಹ್ಯಪ್ರಜ್ಞೆಯೇ ಇಲ್ಲದವನಾಗಿ ಬಿದ್ದಿರಬೇಕಾಯಿತು. ಕಿಂಚಿತ್ ಪ್ರಜ್ಞೆ ಬಂದನಂತರ ಕೇವಲ 'ಕಾ! ಕಾ! ಕಾ!' ಅಂತ ಹೇಳಲಾರಂಭಿಸಿದ. ಆತನ ಕೈಯಲ್ಲಿ 'ಕಾಳಿ' ಎಂಬ ಪದವನ್ನು ಪೂರ್ಣವಾಗಿ ಉಚ್ಚರಿಸಲೂ ಸಾಧ್ಯವಾಗಲಿಲ್ಲ."

ಒಬ್ಬ ಭಕ್ತ: "ನೀವು ವಿದ್ಯಾಸಾಗರನನ್ನು ನೋಡಿದೀರಿ. ಆತನ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು?"

ಶ್ರೀರಾಮಕೃಷ್ಣರು: "ವಿದ್ಯಾಸಾಗರನಲ್ಲಿ ಪಾಂಡಿತ್ಯವಿದೆ, ದಯೆಯಿದೆ; ಆದರೆ ಅಂತರ್ದೃಷ್ಟಿಯಿಲ್ಲ. ಚಿನ್ನ ಆತನ ಆಂತರ್ಯದಲ್ಲಿ ಮಣ್ಣು ಮುಚ್ಚಿಕೊಂಡು ಬಿದ್ದಿದೆ. ಅದರ ಸೂಚನೆ ಗೊತ್ತಾಗಿದ್ದ ಪಕ್ಷದಲ್ಲಿ ಆತನ ಬಾಹ್ಯ ಕೆಲಸಗಳೆಲ್ಲಾ ಬಹಳವಾಗಿ ಕಡಮೆಯಾಗಿಬಿಡುತ್ತಿದ್ದುವು; ಕೊನೆಗೆ ಅವೆಲ್ಲಾ ಒಮ್ಮೆಗೇ ನಿಂತೇ ಹೋಗಿಬಿಡುತ್ತಿದ್ದುವು. ತನ್ನ ಆಂತರ್ಯದಲ್ಲಿ ಭಗವಂತ ನೆಲಸಿದಾನೆ ಎಂಬುದಾಗಿ ಆತನಿಗೆ ಗೊತ್ತಾಗಿದ್ದರೆ, ಆತನ ಮನಸ್ಸು ಭಗವಂತನ ಧ್ಯಾನ ಚಿಂತನೆಯಲ್ಲೇ ಮಗ್ನವಾಗಿಬಿಡುತ್ತಿತ್ತು. ಕೆಲ ಕೆಲವರು ನಿಷ್ಕಾಮ ಕರ್ಮವನ್ನ ಬಹಳ ಕಾಲದವರೆಗೆ ಮಾಡುತ್ತ ಮಾಡುತ್ತ ಮುಂದುವರಿದರೇನೇ ಕೊನೆಗೆ ಅವರಿಗೆ ವೈರಾಗ್ಯವುಂಟಾಗಿ ಅವರ ಮನಸ್ಸು ಭಗವಂತನ ಕಡೆಗೆ ಹರಿಯತೊಡಗುತ್ತದೆ; ಕೊನೆಯಲ್ಲಿ ಆತನೊಡನೆ ಲೀನವಾಗಿಬಿಡುತ್ತದೆ.

"ವಿದ್ಯಾಸಾಗರ ಮಾಡುತ್ತಿರುವ ಕೆಲಸಕಾರ್ಯಗಳು ಬಹಳ ಒಳ್ಳೆಯವು. ದಯಾವಂತನಾಗಿರುವುದು ಬಹಳ ಒಳ್ಳೆಯದೆ. ದಯೆಗೂ ಮಾಯೆಗೂ ಅಜಗಜಾಂತರ ವ್ಯತ್ಯಾಸ. ದಯೆ ಒಳ್ಳೆಯದು, ಆದರೆ

ಮಾಯೆ ಅಲ್ಲ. ಮಾಯೆ ಎಂದರೆ, ಆತ್ಮೀಯರ ಮೇಲೆ—ಹೆಂಡತಿ, ಪುತ್ರ, ಸೋದರ, ಸೋದರಿ, ಸೋದರ ಮಕ್ಕಳು, ತಂದೆ, ತಾಯಿ, ಇವರ ಮೇಲೆ ಇರುವ ಪ್ರೀತಿ. ದಯೆ ಎಂದರೆ, ಸರ್ವಭೂತಗಳಲ್ಲಿಯೂ ಒಂದೇ ಸಮ ಪ್ರೀತಿ.''

ಮಾಸ್ಟರ್: ''ದಯೆಯೂ ಒಂದು ಬಂಧನವೆ?''

ಶ್ರೀರಾಮಕೃಷ್ಣರು: ''ಅದು ಬಹಳ ದೂರದ ಮಾತು. ದಯೆ ಸತ್ತ್ವಗುಣದಿಂದ ಉಂಟಾಗುತ್ತದೆ. ಸತ್ತ್ವಗುಣದಿಂದ ಪಾಲನೆ, ರಜೋಗುಣದಿಂದ ಸೃಷ್ಟಿ, ತಮೋಗುಣದಿಂದ ಸಂಹಾರ. ಆದರೆ ಬ್ರಹ್ಮ ಈ ಮೂರು ಗುಣಗಳಿಗೂ ಅತೀತ. ಪ್ರಕೃತಿಗತೀತ.

''ಈ ಮೂರು ಗುಣಗಳೂ ಸತ್ಯದ ಹೊಸಲನ್ನು ಮೆಟ್ಟಲಾರವು. ಇದು ಡಕಾಯಿತ ಯಾವ ರೀತಿಯಾಗಿ ಪೊಲೀಸಿನವರಿಗೆ ಹೆದರಿ ರಾಜಬೀದಿಗೆ ಬರಲು ಹೆದರುತ್ತಾನೊ ಹಾಗೆ. ಇವು ಮೂರು ಗುಣಗಳೂ ಒಬ್ಬೊಬ್ಬ ಡಕಾಯಿತರೇ.

''ಒಂದು ಕಥೆ ಹೇಳುತ್ತೇನೆ ಕೇಳು. ಒಮ್ಮೆ ಒಬ್ಬ ಒಂದು ಕಾಡಿನ ಮಾರ್ಗವಾಗಿ ಹೋಗುತ್ತಿದ್ದ. ಇದ್ದಕ್ಕಿದ್ದ ಹಾಗೆ ಮೂರು ಜನ ಡಕಾಯಿತರು ಬಂದು ಆತನನ್ನು ಸುತ್ತುಗಟ್ಟಿ ಆತನಲ್ಲಿದ್ದುದ್ದನ್ನೆಲ್ಲಾ ಕಸಿದುಕೊಂಡು ಬಿಟ್ಟರು. ಬಳಿಕ ಒಬ್ಬ ಡಕಾಯಿತ ಹೇಳಿದ: 'ಇವನನ್ನೇಕೆ ಜೀವಸಹಿತ ಬಿಟ್ಟುಹೋಗಬೇಕು? ಕೊಂದುಹಾಕಿಬಿಡೋಣ.' ಹೀಗೆಂದು ಹೇಳಿ ಆತನನ್ನು ತನ್ನ ಕತ್ತಿಯಿಂದ ಇನ್ನೇನು ಇರಿಯಲಿದ್ದ. ಅಷ್ಟರಲ್ಲಿ ಎರಡನೆ ಡಕಾಯಿತ ಆತನನ್ನು ತಡೆದು ಹೇಳಿದ: 'ಈತನನ್ನೇಕೆ ಕೊಂದುಹಾಕಬೇಕು ಪಾಪ. ಈತನ ಕೈಕಾಲು ಕಟ್ಟಿ ಇಲ್ಲೇ ಬಿಟ್ಟುಹೋಗೋಣ. ಆಗ ಈತ ಹೋಗಿ ಪೊಲೀಸಿನವರಿಗೆ ದೂರು ಹೇಳಲಾರ.' ಹೀಗೆಂದು ಹೇಳಿ ಆತನ ಕೈಕಾಲುಗಳನ್ನು ಹಗ್ಗದಿಂದ ಕಟ್ಟಿ ಅಲ್ಲೆ ಬಿಟ್ಟು ಹೊರಟುಹೋದರು. ಸ್ವಲ್ಪ ಹೊತ್ತಾದನಂತರ ಮೂರನೆ ಡಕಾಯಿತ ಹಿಂದಿರುಗಿಬಂದು ಆ ಮನುಷ್ಯನಿಗೆ ಹೇಳಿದ: 'ಅಯ್ಯೋ ಪಾಪ! ನಿನಗೆ ಬಹಳ ಕಷ್ಟವಾಗಿರಬೇಕು, ಅಲ್ಲವೆ? ನಾನು ನಿನ್ನನ್ನು ಬಂಧನದಿಂದ ಬಿಡಿಸುತ್ತೇನೆ.' ಆತನನ್ನು ಬಂಧನದಿಂದ ಬಿಡಿಸಿ ಡಕಾಯಿತ ಆತನಿಗೆ ಹೇಳಿದ: 'ನನ್ನೊಡನೆ ಬಾ. ನಿನ್ನನ್ನು ರಾಜಮಾರ್ಗಕ್ಕೆ ಕರೆದುಕೊಂಡುಹೋಗಿಬಿಡುತ್ತೇನೆ.' ಬಹಳವಾಗಿ ಮುಂದುವರಿದನಂತರ ಅವರು ರಾಜಮಾರ್ಗವನ್ನು ತಲುಪಿದರು.

ಬಳಿಕ ಡಕಾಯಿತ ಆತನಿಗೆ ಹೇಳಿದ: 'ಈ ಮಾರ್ಗವಾಗೇ ಹೋಗು. ಅಲ್ಲಿ ನೋಡು ನಿನ್ನ ಮನೆ ಕಾಣುತ್ತಾ ಇದೆ.' ಆಗ ಆ ಮನುಷ್ಯ ಡಕಾಯಿತನಿಗೆ ಹೇಳಿದ: 'ಮಹಾಶಯ, ನೀನು ನನಗೆ ಬಹಳ ಉಪಕಾರ ಮಾಡಿದೀಯೆ. ಬಾ ನನ್ನೊಡನೆ ನನ್ನ ಮನೆಗೆ.' ಡಕಾಯಿತ ಹೇಳಿದ: 'ಓ ಸಾಧ್ಯವಿಲ್ಲ! ನಾನು ಅಲ್ಲಿಗೆ ಬರುವ ಹಾಗಿಲ್ಲ. ಪೊಲೀಸಿನವರಿಗೆ ಗೊತ್ತಾಗಿಬಿಡುತ್ತದೆ.'

"ಈ ಸಂಸಾರವೇ ಒಂದು ಅರಣ್ಯ. ಈ ಅರಣ್ಯದಲ್ಲಿ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಜನ ಡಕಾಯಿತರು ಹೊಂಚುಹಾಕುತ್ತಿದಾರೆ. ಜೀವರ ತತ್ತ್ವಜ್ಞಾನವನ್ನು ಕಸಿದುಕೊಂಡುಬಿಡುವವರು ಇವರೇ. ತಮೋಗುಣ ಜೀವನನ್ನು ನಾಶಗೊಳಿಸಲು ಪ್ರಯತ್ನಿಸುತ್ತದೆ. ರಜೋಗುಣ ಆತನನ್ನು ಈ ಜಗತ್ತಿಗೆ ಕಟ್ಟಿಹಾಕುತ್ತದೆ. ಆದರೆ ಸತ್ತ್ವಗುಣ ಆತನನ್ನು ರಜಸ್ತಮೋಗುಣಗಳ ಹಿಡಿತದಿಂದ ಬಿಡಿಸುತ್ತದೆ. ಜೀವ ಸತ್ತ್ವಗುಣವನ್ನು ಆಶ್ರಯಿಸಿದರೆ ಆತ ತಮೋಗುಣದಿಂದ ಉದ್ಭವವಾದ ಕಾಮಕ್ರೋಧಾದಿಗಳಿಂದ ಪಾರಾಗಬಲ್ಲ. ಇದೂ ಅಲ್ಲದೆ ಸತ್ತ್ವಗುಣ ಜೀವನನ್ನು ಈ ಜಗದ್ಬಂಧನದಿಂದ ವಿಮೋಚನೆ ಮಾಡುತ್ತದೆ. ಆದರೂ ಸತ್ತ್ವಗುಣವೂ ಒಬ್ಬ ಡಕಾಯಿತನೆ. ಅದು ಪರಂಧಾಮಕ್ಕೆ ಮಾರ್ಗ ತೋರಿಸಿಕೊಡಬಲ್ಲುದಾದರೂ ತತ್ತ್ವಜ್ಞಾನವನ್ನ ಕೊಡಲಾರದು. ರಾಜಮಾರ್ಗಕ್ಕೆ ತಂದು ಬಿಟ್ಟು ಅದು ಹೇಳುತ್ತದೆ: 'ಆ ಕಡೆ ನೋಡು. ಅಗೋ ಅಲ್ಲಿದೆ ನಿನ್ನ ನಿವಾಸ.' ಯಾವ ಅವಸ್ಥೆಯಲ್ಲಿ ಬ್ರಹ್ಮಜ್ಞಾನ ದೊರೆಯಬೇಕೊ ಅದು ಅಲ್ಲಿಂದ ಬಹಳ ದೂರದಲ್ಲೇ ನಿಲ್ಲುತ್ತದೆ.

"ಬ್ರಹ್ಮ ಏನು ಎಂಬುದನ್ನ ಬಾಯಿಂದ ಹೇಳಲಾಗೋದಿಲ್ಲ. ಯಾರಿಗೆ ಅದು ದೊರೆಯುತ್ತದೊ ಅವರು ಅದರ ಸಂಬಂಧವಾಗಿ ಏನು ಸುದ್ದಿಯನ್ನೂ ಕೊಡಲಾಗೋದಿಲ್ಲ. ಜನ ಹೇಳುತ್ತಾರೆ, ಸಾಗರದ ಕಡೆ ಹೋದ ಹಡಗು ಹಿಂದಿರುಗಿ ಬರುವುದಿಲ್ಲ ಎಂಬುದಾಗಿ.

"ನಾಲ್ಕು ಜನ ಸ್ನೇಹಿತರು ಹಾಗೇ ಸುತ್ತಾಡುತ್ತ ಸುತ್ತಾಡುತ್ತ ಹೋಗುತ್ತಿದ್ದಾಗ ಒಂದು ಕಡೆ ನಾಲ್ಕು ದಿಕ್ಕಿಗೂ ಗೋಡೆ ಎದ್ದಿದ್ದ ಒಂದು ಸ್ಥಳ ಕಣ್ಣಿಗೆ ಬಿತ್ತು. ಗೋಡೆ ಬಹಳ ಎತ್ತರದವರೆಗೆ ಎದ್ದಿತ್ತು. ಅದರೊಳಗೆ ಏನಿದೆ ಎಂಬುದನ್ನು ಅರಿಯಲು ಎಲ್ಲರೂ ಬಹಳವಾಗಿ ಕುತೂಹಲಪಟ್ಟರು. ಒಬ್ಬ ಅದರ ಮೇಲಕ್ಕೆ ಹತ್ತಿದ. ಆ ಕಡೆಗೆ ದೃಷ್ಟಿ ಬಿದ್ದೊಡನೇ ಆತನಿಗೆ ಏನು ಕಂಡುಬಂತೊ ಅದು ಆತನನ್ನು ಆಶ್ಚರ್ಯಚಕಿತನನ್ನಾಗಿ

ಮಾಡಿಬಿಟ್ಟಿತು. ಆತ ಕೇವಲ, 'ಅಹ! ಅಹ! ಅಹ! ಅಹ!' ಅಂತ ಹೇಳಿ ಒಳಕ್ಕೆ ದುಮುಕಿಬಿಟ್ಟ. ಮತ್ತೇನು ಸಮಾಚಾರವನ್ನೂ ಕೊಡಲಿಲ್ಲ. ಉಳಿದವರೂ ಹಾಗೇ ಹತ್ತಿ ನೋಡಲನೆಯುವನ ಹಾಗೇ, 'ಅಹ! ಅಹ! ಅಹ! ಅಹ!' ಅಂತ ಕೂಗಿ ಒಳಕ್ಕೆ ದುಮುಕಿಬಿಟ್ಟರು. ಈಗ ಒಳಗೇನಿದೆ ಎಂಬುದನ್ನು ಯಾರು ತಾನೆ ಹೇಳಬಲ್ಲರು?

"ಜಡಭರತ, ದತ್ತಾತ್ರೇಯ ಮೊದಲಾದವರು ಬ್ರಹ್ಮಸಾಕ್ಷಾತ್ಕಾರ ದೊರೆತನಂತರ ಅದರ ಸಂಬಂಧವಾಗಿ ಯಾವ ಸುದ್ದಿಯನ್ನೂ ಕೊಡಲಾರದೆ ಹೋದರು. ಬ್ರಹ್ಮಜ್ಞಾನ ದೊರೆತು ಸಮಾಧಿಯುಂಟಾಯಿತು ಎಂದರೆ, 'ಅಹಂ' ಎಂಬುದು ಉಳಿದಿರದು. ಇದಕ್ಕಾಗೇ ರಾಮಪ್ರಸಾದ ಮನಸ್ಸನ್ನು ಸಂಬೋಧಿಸಿ ಹೇಳಿದಾನೆ:

ನಿನಗೆ ಈ ಕೆಲಸವೂ ಕಷ್ಟವಾದರೆ ಹೇಳು,
ರಾಮಪ್ರಸಾದನಿದೊ ನೆರವಿಗಿಹನು.

ಮನಸ್ಸು ಜ್ಞಾನದಲ್ಲಿ ಲಯವಾಗಿಹೋಗಬೇಕು. ಆದರೆ ಅದು ಸಾಕಾಗದು. 'ರಾಮಪ್ರಸಾದನ ಲಯ' ಎಂದರೆ 'ಅಹಂತತ್ತ್ವದ ಲಯ' ಆಗಬೇಕು. ಆಗ ಮಾತ್ರವೇ ಬ್ರಹ್ಮಜ್ಞಾನ ದೊರೆಯುತ್ತದೆ."

ಒಬ್ಬ ಭಕ್ತ: "ಮಹಾಶಯರೆ, ಹಾಗಾದರೆ, ಶುಕದೇವನಿಗೆ ಬ್ರಹ್ಮ ಜ್ಞಾನ ದೊರೆಯಲಿಲ್ಲ ಅಂತಲೇನು?"

ಶ್ರೀರಾಮಕೃಷ್ಣರು: "ಕೆಲಕೆಲವರ ಭಾವನೆ ಶುಕದೇವ ಬ್ರಹ್ಮ ಸಾಗರದ ದರ್ಶನ ಸ್ಪರ್ಶನ ಮಾಡಿದನೇ ವಿನಾ ಅದರಲ್ಲಿ ಮುಳುಗಲಿಲ್ಲ ಅಂತ. ಅದಕ್ಕಾಗೇ ಆತ ಹಿಂದಿರುಗಿ ಬಂದು ಅಷ್ಟೊಂದು ಉಪದೇಶ ಮಾಡಲು ಸಾಧ್ಯವಾಯಿತು. ಇನ್ನು ಕೆಲವರ ಭಾವನೆ ಆತ ಬ್ರಹ್ಮಜ್ಞಾನ ದೊರೆತನಂತರ ಲೋಕಶಿಕ್ಷಣಕ್ಕಾಗಿ ಹಿಂದಿರುಗಿಬಂದ ಎಂದು. ಆತ ಪರೀಕ್ಷಿದ್ರಾಜನಿಗೆ ಭಾಗವತಪ್ರವಚನ ಮಾಡಿಸಬೇಕಾಗಿತ್ತು. ಇದೂ ಅಲ್ಲದೆ ಇನ್ನೂ ಅನೇಕ ವಿಧದಲ್ಲಿ ಜನರಿಗೆ ಉಪದೇಶ ಮಾಡಬೇಕಾಗಿತ್ತು. ಅದಕ್ಕಾಗಿ ಭಗವಂತ ಆತನ 'ಅಹಂ' ಅನ್ನು ಪೂರ್ಣವಾಗಿ ನಾಶಮಾಡ ಲಿಲ್ಲ. ಭಗವಂತ ಆತನಲ್ಲಿ 'ವಿದ್ಯಾ ಅಹಂ' ಅನ್ನು ಇಟ್ಟಿದ್ದ."

ಭಕ್ತ: "ಬ್ರಹ್ಮಜ್ಞಾನ ದೊರೆತನಂತರ ಸಮಾಜ-ಗಿಮಾಜ ಇವ ನ್ನೆಲ್ಲಾ ನೋಡಿಕೊಳ್ಳಲಾಗುವುದೆ?"

ಶ್ರೀರಾಮಕೃಷ್ಣರು: “ಒಮ್ಮೆ ನಾನು ಕೇಶವಸೇನನೊಡನೆ ಬ್ರಹ್ಮ ಜ್ಞಾನದ ಸಂಬಂಧವಾಗಿ ಮಾತನಾಡಿದೆ. ಅದನ್ನು ಇನ್ನೂ ಸ್ವಲ್ಪ ವಿಶದವಾಗಿ ಹೇಳಬೇಕೆಂದು ಆತ ನನ್ನನ್ನು ಕೇಳಿದ. ನಾನು ಹೇಳಿದೆ: ‘ನಾನು ಹಾಗೆ ಮಾಡಿದ್ದೇ ಆದರೆ ನಿನ್ನ ಸಮಾಜ-ಗಿಮಾಜ ಯಾವುದೂ ಉಳಿದುಕೊಳ್ಳದು.’ ಅದಕ್ಕೆ ಕೇಶವಸೇನ ಹೇಳಿದ: ‘ಮಹಾಶಯರೆ, ಹಾಗಾದರೆ ಮುಂದಕ್ಕೆ ಬೇಡಿ!’ (ಎಲ್ಲರೂ ನಗುತ್ತಿದಾರೆ.) ಆದರೂ ನಾನು ಕೇಶವಸೇನನಿಗೆ ಹೇಳಿದೆ: ‘“ನಾನು”, “ನನ್ನದು” ಎಂಬುದೇ ಅಜ್ಞಾನ. “ನಾನು ಕರ್ತ; ಈ ಹೆಂಡತಿ, ಮಕ್ಕಳು, ಆಸ್ತಿ, ಕೀರ್ತಿ, ಸಂಭ್ರಮ ಇವೆಲ್ಲಾ ನನಗೆ ಸೇರಿದವು” ಎಂಬ ಭಾವನೆ ಅಜ್ಞಾನದಿಂದಲ್ಲದೆ ಬೇರೆ ಯಾವುದರಿಂದಲೂ ಬಾರದು.’ ಕೇಶವ ಹೇಳಿದ: ‘ಮಹಾಶಯರೆ, ಈ “ಅಹಂ” ಎಂಬುದನ್ನು ತ್ಯಜಿಸಿಬಿಟ್ಟದ್ದೇ ಆದರೆ ಇನ್ನು ಏನೂ ಉಳಿದು ಕೊಳ್ಳುವುದಿಲ್ಲವಲ್ಲ.’ ಆಗ ನಾನು ಆತನಿಗೆ ಹೇಳಿದೆ: ‘ಕೇಶವ, ನಾನು ನಿನಗೆ ಸಂಪೂರ್ಣವಾಗಿ ಎಲ್ಲಾ “ಅಹಂ”ಗಳನ್ನೂ ತ್ಯಾಗಮಾಡು ಅಂತ ಹೇಳುತ್ತಿಲ್ಲ. ನೀನು “ಅಪಕ್ವ ಅಹಂ” ಅನ್ನು ಮಾತ್ರ ತ್ಯಾಗಮಾಡು. “ನಾನು ಕರ್ತ. ನನ್ನ ಹೆಂಡತಿ ಮಕ್ಕಳು. ನಾನು ಗುರು” ಎಂಬ ಭಾವನೆ “ಅಪಕ್ವ ಅಹಂ”ಗೆ ಸೇರಿದವು. ಇವನ್ನು ತ್ಯಾಗಮಾಡಿ, “ಪಕ್ವ ಅಹಂ” ಅನ್ನು ಮಾತ್ರ ಉಳಿಸಿಕೊ. ಅದು ನಿನಗೆ ತರುತ್ತದೆ: “ನಾನು ಭಗವಂತನ ದಾಸ. ನಾನು ಆತನ ಭಕ್ತ. ನಾನು ಅಕರ್ತ, ಆತ ಕರ್ತ” ಎಂಬ ಭಾವನೆಯನ್ನು.’”

ಭಕ್ತ: “‘ಪಕ್ವ ಅಹಂ’ ಸಮಾಜ ಕಟ್ಟಬಲ್ಲುದೆ?”

ಶ್ರೀರಾಮಕೃಷ್ಣರು: “ನಾನು ಕೇಶವಸೇನನಿಗೆ ಹೇಳಿದೆ: ‘“ನಾನು ದಳಪತಿ, ನಾನು ಈ ಸಮಾಜ ಕಟ್ಟಿದೇನೆ, ನಾನು ಲೋಕಶಿಕ್ಷಣ ಮಾಡು ತ್ತಿದೇನೆ” ಎಂಬ “ಅಹಂ” “ಅಪಕ್ವ ಅಹಂ”.’ ಧರ್ಮಪ್ರಚಾರ ಬಹಳ ಕಠಿನವಾದ ಕೆಲಸ. ಭಗವಂತನ ಆಜ್ಞೆಯಿಲ್ಲದಿದ್ದರೆ ಅದು ನಡೆ ಯುವ ಹಾಗಿಲ್ಲ. ಆತನ ಆದೇಶ ಬೇಕೇ ಬೇಕು. ಭಾಗವತ ಪ್ರವಚನ ಮಾಡಿಸಬೇಕೆಂದು ಶುಕದೇವನಿಗೆ ಆದೇಶವಾಗಿತ್ತು. ಭಗವಂತನ ಸಾಕ್ಷಾತ್ಕಾರ ದೊರೆತನಂತರ, ಆದೇಶ ದೊರೆತು ಮನುಷ್ಯ ಧರ್ಮಪ್ರಚಾರ ಕನೊ ಅಥವಾ ಲೋಕಶಿಕ್ಷಕನೊ ಆಗುವುದಾದರೆ ಅದರಿಂದ ಯಾವ

ಹಾನಿಯೂ ಉಂಟಾಗದು. ಆತನ 'ಅಹಂ' 'ಅಪಕ್ವ ಅಹಂ' ಅಲ್ಲ, 'ಪಕ್ವ ಅಹಂ'.

"ನಾನು ಕೇಶವನಿಗೆ ತಿಳಿಸಿದೆ, 'ಅಪಕ್ವ ಅಹಂ' ಅನ್ನು ತ್ಯಾಗ ಮಾಡೋ ಹಾಗೆ. 'ದಾಸ ಅಹಂ', 'ಭಕ್ತ ಅಹಂ' ಇವು ಹಾನಿಕರ ವಾದುವೇನಲ್ಲ. ನಾನು ಆತನಿಗೆ ಹೇಳಿದೆ: 'ನೀನು ಯಾವಾಗ ನೋಡಿ ದರೂ "ಸಮಾಜ, ಸಮಾಜ" ಅನ್ನುತ್ತಲೇ ಇದೀಯೆ. ಆದರೆ ನಿನ್ನ ಸಮಾಜದಿಂದಲೂ ಜನ ಒಡೆದುಕೊಂಡುಹೋಗಿಬಿಡುತ್ತಾ ಇದಾರಲ್ಲ.' ಕೇಶವಸೇನ ಉತ್ತರವಿತ್ತ: 'ಹೌದು, ನಿಜ. ಅನೇಕ ವರ್ಷಗಳು ಇಲ್ಲಿ ಇದ್ದೂ ಬೇರೆ ಸಮಾಜಕ್ಕೆ ಹೊರಟುಹೋಗಿಬಿಡುತ್ತಿದಾರೆ. ಅಷ್ಟೇ ಅಲ್ಲ, ಬಿಟ್ಟುಹೋಗುವಾಗ ನನ್ನನ್ನು ಚೆನ್ನಾಗಿ ಬಯ್ದೂ ಹೋಗುತ್ತಾರೆ.' ನಾನು ಹೇಳಿದೆ: 'ಜನರ ಸ್ವಭಾವ ನೋಡಿ ನೀನು ಏಕೆ ಅವರನ್ನು ಸೇರಿಸಿ ಕೊಳ್ಳೋದಿಲ್ಲ? ಸಿಕ್ಕಿಸಿಕ್ಕಿದವರನ್ನೆಲ್ಲಾ ಶಿಷ್ಯರನ್ನಾಗಿ ಮಾಡಿಕೊಂಡರೆ ಅದು ನಡೆಯುತ್ತದೆಯೆ?'

"ಮತ್ತೆ ಕೇಶವನಿಗೆ ಹೇಳಿದೆ: 'ನೀನು ಆದ್ಯಾಶಕ್ತಿಯನ್ನು ಒಪ್ಪಿ ಕೊಂಡುಬಿಡು. ಬ್ರಹ್ಮನಿಗು ಶಕ್ತಿಗು ಅಭೇದ. ಯಾರು ಬ್ರಹ್ಮನೊ ಆತನೇ ಶಕ್ತಿ. ದೇಹಬುದ್ಧಿ ಇರುವವರೆಗೆ ದ್ವೈತ ಎಂಬ ಬೋಧೆ. ಬಾಯಿ ಬಿಡುವುದು ಅಂದರೇ ದ್ವೈತ.' ಕೇಶವಸೇನ ಕೊನೆಗೆ ಕಾಳಿಯನ್ನು ಸ್ವೀಕರಿಸಿದ.

"ಒಂದು ದಿನ ಕೇಶವ ಇಲ್ಲಿಗೆ ಬಂದಿದ್ದ. ನಾನು ಆತನಿಗೆ ಹೇಳಿದೆ: 'ನನಗೆ ನಿನ್ನ ಲೆಕ್ಚರ್ ಕೇಳಬೇಕು ಅಂತ ಆಸೆಯಾಗಿದೆ.' ಆತ ಮುಖ-ಮಂಟಪದಲ್ಲಿ ಕುಳಿತು ಲೆಕ್ಚರ್ ಕೊಟ್ಟ. ಬಳಿಕ ಎಲ್ಲರೂ ಸ್ನಾನಘಟ್ಟದ ಮೇಲೆ ಕುಳಿತು ಬಹಳವಾಗಿ ಮಾತನಾಡಿದೆವು. ನಾನು ಆತನಿಗೆ ಹೇಳಿದೆ: 'ಯಾರು ಭಗವಂತನೊ ಆತನೇ ಒಂದು ರೂಪದಲ್ಲಿ ಭಕ್ತನಾಗಿದಾನೆ, ಇನ್ನೊಂದು ರೂಪದಲ್ಲಿ ಭಾಗವತವಾಗಿದಾನೆ. ಆದ್ದರಿಂದ ಹೇಳಿ ನೀವೆಲ್ಲರೂ ನೋಡೋಣ "ಭಾಗವತ—ಭಕ್ತ—ಭಗವಾನ್" ಅಂತ.' ಕೇಶವಸೇನ ಮತ್ತು ಆತನ ಭಕ್ತರು ಎಲ್ಲರೂ ಕೂಡಿ ಅದನ್ನು ಹೇಳಿದರು. ಯಾವಾಗ ನಾನು 'ಗುರು—ಕೃಷ್ಣ—ವೈಷ್ಣವ' ಅಂತ ಹೇಳಿ ಎಂದೆನೊ, ಆಗ ಕೇಶವ ಹೇಳಿದ: 'ಮಹಾಶಯರೆ, ಈಗ ಅಷ್ಟು ದೂರದವರೆಗೆ ಬೇಡಿ. ಜನ ನನ್ನನ್ನು ಗೊಡ್ಡು ವೈಷ್ಣವ ಅಂದುಬಿಟ್ಟಾರು.'

"ತ್ರಿಗುಣಾತೀತನಾಗೋದು ಬಹಳ ಕಷ್ಟ. ಭಗವಂತನ ಸಾಕ್ಷಾತ್ಕಾರ ದೊರೆಯುದವರೆಗೆ ಅದು ಸಾಧ್ಯವಾಗೋದಿಲ್ಲ. ಮನುಷ್ಯ ಮಾಯಾ ರಾಜ್ಯದಲ್ಲಿ ವಾಸಮಾಡುತ್ತಿದಾನೆ. ಈ ಮಾಯೆ ಭಗವಂತನನ್ನು ದರ್ಶನ ಮಾಡಲು ಬಿಟ್ಟುಕೊಡುತ್ತಿಲ್ಲ. ಇದು ಮನುಷ್ಯನನ್ನು ಅಜ್ಞಾನದಿಂದ ಮುಸುಕಿ ಇಟ್ಟುಬಿಟ್ಟಿದೆ.

"ಒಮ್ಮೆ ಹೃದೆ ಇಲ್ಲಿಗೆ ಒಂದು ಹೋರಿಗರುವನ್ನು ತೆಗೆದುಕೊಂಡು ಬಂದ. ಒಂದು ದಿನ, ಅದು ಹುಲ್ಲು ಮೇಯಲಿ ಎಂದು ಒಂದು ಉದ್ದವಾದ ಹಗ್ಗ ಹಾಕಿ ತೋಟದಲ್ಲಿ ಕಟ್ಟಿದ್ದ. ನಾನು ಆತನನ್ನು ಕೇಳಿದೆ: 'ಏಕೆ ನೀನು ದಿನವೂ ಆ ಕರುವನ್ನು ಅಲ್ಲಿ ಕಟ್ಟುತ್ತಾ ಇದೀಯೆ?' ಆತ ಉತ್ತರ ವಿತ್ತ: 'ಮಾವ, ಇದನ್ನ ಊರಿಗೆ ಕಳುಹಿಸುತ್ತೇನೆ. ದೊಡ್ಡದಾದ ಮೇಲೆ ಇದು ನೇಗಿಲಿಗೆ ಬರುತ್ತದೆ.' ಈ ಮಾತು ನನ್ನ ಕಿವಿಗೆ ಬಿದ್ದೊಡನೇ ನಾನು ಮೂರ್ಛಿತನಾಗಿಹೋಗಿಬಿಟ್ಟೆ. ಆಗ ಅನಿಸಿತು: 'ಮಾಯೆಯ ಕ್ರೀಡೆ ಎಷ್ಟು ಅದ್ಭುತವಾದ್ದು! ಕಾಮಾರಪುಕುರ ಮತ್ತು ಸಿಹೋರೆ[1] ಇರುವುದೆಲ್ಲಿ, ಕಲ್ಕತ್ತವಿರುವುದೆಲ್ಲಿ! ಈ ಬಡ ಪ್ರಾಣಿ ಅಲ್ಲಿಯವರೆಗೆ ನಡೆದು ಹೋಗಬೇಕು, ಅಲ್ಲಿ ದೊಡ್ಡದಾಗಿ ಬೆಳೆಯಬೇಕು, ಬಳಿಕ ಬಹಳ ದಿನಗಳಾದನಂತರ ನೇಗಿಲಿಗೆ ಬರಬೇಕು! ಸಂಸಾರ ಎಂಬುದು ಇದೇ! ಮಾಯೆ ಎಂಬುದು ಇದೇ!' ಬಹಳ ಹೊತ್ತಾದನಂತರ ನಾನು ಮೂರ್ಛೆಯಿಂದ ಎದ್ದೆ."

ಘಂಟೆ ಅಪರಾಹ್ನ ಮೂರೊ-ನಾಲ್ಕೊ. ಪರಮಹಂಸರು ಭಾವಾವಿಷ್ಟರಾಗಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿರುವುದು ಮಾಸ್ಟರ ಕಣ್ಣಿಗೆ ಬಿತ್ತು. ಸ್ವಲ್ಪ ಹೊತ್ತಾದನಂತರ ಅವರು ಭಗವತಿಯೊಡನೆ ಮಾತನಾಡುತ್ತಿರುವುದು ಕೇಳಿಬಂತು. ಅವರು ಹೇಳುತ್ತಿದಾರೆ: "ತಾಯೆ, ಅವನಿಗೇಕೆ ಒಂದು ಕಿಂಚಿತ್ ಭಾಗವನ್ನು ಮಾತ್ರ ಕೊಟ್ಟಿದೀಯೆ?" ಸ್ವಲ್ಪ ಹೊತ್ತು ಹಾಗೇ ಕುಳಿತಿದ್ದು ಮತ್ತೆ ಹೇಳುತ್ತಿದಾರೆ: "ತಾಯೆ, ಈಗ ನನಗೆ ಅರ್ಥವಾಯಿತು. ನೀನು ಕೊಟ್ಟಿರುವ ಭಾಗವೇ ಅವನಿಗೆ ಯಥೇಷ್ಟ. ಅದರಿಂದಲೇ ನಿನ್ನ ಕಾರ್ಯವಾಗಿಬಿಡುತ್ತದೆ, ಲೋಕಶಿಕ್ಷಣವಾಗಿಬಿಡುತ್ತದೆ."

ಪರಮಹಂಸರು ಈಗ ತಮ್ಮ ಅಂತರಂಗಭಕ್ತರಿಗೆ ಶಕ್ತಿಸಂಚಾರ ಮಾಡುತ್ತಿದಾರೇನು? ಮುಂದೆ ಅವರು ಲೋಕಶಿಕ್ಷಕರಾಗಲಿ ಎಂದು

1. ಹೃದಯನ ಊರು.

ಈಗಿನಿಂದಲೇ ಅವರಿಗೆ ಬೇಕಾಗುವ ಅನುಕೂಲತೆಗಳನ್ನು ಕಲ್ಪಿಸುತ್ತಿದಾರೇನು?

ಕೊಠಡಿಯಲ್ಲಿ ರಾಖಾಲನೂ ಇದಾನೆ. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ರಾಖಾಲನಿಗೆ ಹೇಳುತ್ತಿದಾರೆ: "ನೀನು ನನ್ನ ಮೇಲೆ ಕೋಪಿಸಿಕೊಂಡಿದ್ದೆ, ಅಲ್ಲವೆ? ನಿನಗೆ ಕೋಪಬರುವಂತೆ ನಾನೇಕೆ ಮಾಡಿದೆ ಗೊತ್ತೆ? ಇದರಲ್ಲಿ ಒಂದು ಉದ್ದೇಶವಿದೆ. ಆಗ ಮಾತ್ರವೇ ಔಷಧ ಕೆಲಸ ಮಾಡುತ್ತದೆ. ಕುರು ಚೆನ್ನಾಗಿ ಹಣ್ಣಾದ ಮೇಲೆ ತಾನೆ ಶಸ್ತ್ರಚಿಕಿತ್ಸೆ ಮಾಡಬೇಕು."

ಸ್ವಲ್ಪ ಹೊತ್ತಾದನಂತರ ಹೇಳಲಾರಂಭಿಸಿದಾರೆ: "ಹಾಜರಾ ನನಗೆ ಒಣಗಿದ ಮರದ ಹಾಗೆ ಕಂಡ. ಹಾಗಾದರೆ ಸುಮ್ಮನೆ ಆತ ಏಕೆ ಇಲ್ಲಿದಾನೆ? ಇದರಲ್ಲೂ ಅರ್ಥವಿದೆ. ಜಟಿಲೆಕುಟಿಲೆಯರಿದ್ದರೆ ತಾನೆ ಲೀಲೆ ಪುಷ್ಟಿಗೊಳ್ಳಬೇಕಾದರೆ.

(ಮಾಸ್ಟರಿಗೆ) "ಭಗವದ್ರೂಪಗಳನ್ನು ಒಪ್ಪಿಕೊಳ್ಳಬೇಕು. ಜಗದ್ಧಾತ್ರಿ ರೂಪದ ಸಂಕೇತ ನಿನಗೆ ಗೊತ್ತೆ? ಯಾರು ಈ ಜಗತ್ತನ್ನು ಧಾರಣಮಾಡಿಕೊಂಡಿದಾಳೊ ಅವಳು. ಆಕೆ ಈ ಜಗತ್ತನ್ನು ಹೊತ್ತುಕೊಂಡಿರದಿದ್ದರೆ, ಪಾಲಿಸದಿದ್ದರೆ ತನ್ನ ಸ್ಥಾನದಿಂದ ಕೆಳಕ್ಕೆ ಬಿದ್ದು ನಾಶವಾಗಿಬಿಡುತ್ತದೆ. ಮನಸ್ಸೆಂಬ ಆನೆಯನ್ನು ಯಾರು ವಶಪಡಿಸಿಕೊಳ್ಳುತ್ತಾನೊ ಆತನ ಹೃದಯದಲ್ಲಿ ಆಕೆ ವ್ಯಕ್ತವಾಗುತ್ತಾಳೆ."

ರಾಖಾಲ: "ಮನಸ್ಸು ಮದದ ಆನೆ."

ಶ್ರೀರಾಮಕೃಷ್ಣರು: "ಅದಕ್ಕೇ ಸಿಂಹವಾಹಿನಿಯ ಸಿಂಹ ಆನೆಯನ್ನು ಒಂದು ಹದ್ದುಬಸ್ತಿನಲ್ಲಿ ಇಟ್ಟುಕೊಂಡಿರೋದು."

ಸಾಯಂಕಾಲವಾಗಿದೆ. ದೇವಾಲಯಗಳಲ್ಲಿ ಮಂಗಳಾರತಿ ನಡೆಯುತ್ತಿದೆ. ಪರಮಹಂಸರು ದೇವದೇವಿಯರ ನಾಮೋಚ್ಚಾರಣೆ ಮಾಡುತ್ತಿದಾರೆ. ಅವರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕೈಮುಗಿದು ಕುಳಿತುಕೊಂಡು ಭಗವತಿಯ ಧ್ಯಾನದಲ್ಲಿ ಮಗ್ನರಾಗಿದಾರೆ. ಹೊರಜಗತ್ತು ಚಂದ್ರನ ಬೆಳಕಿನಿಂದ ತುಂಬಿತುಳುಕುತ್ತಿದೆ. ಭಕ್ತರು ಪರಮಹಂಸರ ಕೊಠಡಿಯಲ್ಲಿ ಕುಳಿತು ಅವರ ಪ್ರಶಾಂತ ಮುಖದ ಕಡೆ ದಿಟ್ಟಿಸಿನೋಡುತ್ತಿದಾರೆ.

ಬೇಲಘರದ ಗೋವಿಂದ ತನ್ನ ಕೆಲವು ಮಿತ್ರರೊಡನೆ ಕೊಠಡಿಯನ್ನು

ಪ್ರವೇಶಿಸಿದ. ಅವರೆಲ್ಲರೂ ಪರಮಹಂಸರಿಗೆ ಪ್ರಣಾಮಮಾಡಿ ನೆಲದ ಮೇಲೆ ಕುಳಿತುಕೊಂಡರು. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಕೆಲವು ನಿಮಿಷಗಳಾದನಂತರ ಅವರು ಭಕ್ತರಿಗೆ ಹೇಳಿದರು: "ನಿಮಗೇನೇನು ಸಂಶಯವಿವೆಯೊ ಎಲ್ಲವನ್ನೂ ಕೇಳಿಬಿಡಿ. ಎಲ್ಲಕ್ಕೂ ಉತ್ತರ ಕೊಟ್ಟುಬಿಡುತ್ತೇನೆ."

ಗೋವಿಂದ ಮತ್ತು ಉಳಿದ ಭಕ್ತರು ಭಾವನಾರಾಜ್ಯದಲ್ಲಿ ಮುಳುಗಿರುವಂತೆ ಕಂಡಿತು.

ಗೋವಿಂದ: "ಮಹಾಶಯರೆ, ಕಾಳಿಗೆ ಈ ಕಪ್ಪು ಬಣ್ಣ ಏಕೆ ಬಂತು?"

ಶ್ರೀರಾಮಕೃಷ್ಣರು : "ನೀನು ಆಕೆಯಿಂದ ಬಹಳ ದೂರದಲ್ಲಿರುವುದರಿಂದ ನಿನಗೆ ಆಕೆ ಕಪ್ಪಾಗಿ ಕಾಣುತ್ತಿದಾಳೆ. ಹತ್ತಿರ ಹೋಗಿ ನೋಡು ಆಕೆಗೆ ಯಾವ ಬಣ್ಣವೂ ಇಲ್ಲ. ಸರೋವರದ ನೀರು ದೂರದಿಂದ ಕಪ್ಪಾಗಿ ಕಾಣುತ್ತದೆ. ಹತ್ತಿರ ಹೋಗಿ ಕೈಗೆ ಸ್ವಲ್ಪ ನೀರು ತೆಗೆದುಕೊಂಡು ನೋಡು ಅದಕ್ಕೆ ಯಾವ ಬಣ್ಣವೂ ಇಲ್ಲ. ಆಕಾಶ ದೂರಕ್ಕೆ ನೀಲವರ್ಣದ್ದಾಗಿ ಕಾಣುತ್ತದೆ. ನಿನ್ನ ಹತ್ತಿರವಿರುವ ಆಕಾಶವನ್ನ ನೋಡು ಅದಕ್ಕೆ ಯಾವ ಬಣ್ಣವೂ ಇಲ್ಲ. ಭಗವಂತನ ಹತ್ತಿರ ಹತ್ತಿರ ಬಂದಷ್ಟೂ ಅನುಭವವಾಗುತ್ತದೆ ಆತನಿಗೆ ನಾಮ, ರೂಪ ಯಾವುದೂ ಇಲ್ಲ ಎಂಬುದಾಗಿ. ಭಗವತಿಯನ್ನು ಬಿಟ್ಟು ಬಹಳ ದೂರಕ್ಕೆ ಮುಂದುವರಿದರೆ ಹುಲ್ಲುಹೂವಿನ ಬಣ್ಣದ ಹಾಗೆ ನೀಲಿಯಾಗಿ ಕಾಣುತ್ತಾಳೆ. ಶ್ಯಾಮೆ (ಕಾಳಿ) ಪುರುಷನೆ ಅಥವಾ ಪ್ರಕೃತಿಯೆ? ಒಮ್ಮೆ ಒಬ್ಬ ಭಕ್ತ ಶ್ಯಾಮೆಯ ಪೂಜೆ ಮಾಡಿದ್ದ. ಇನ್ನೊಬ್ಬ ಬಂದು ಆಕೆಯನ್ನು ದರ್ಶನಮಾಡಿದಾಗ ಆಕೆಯ ಕೊರಳಲ್ಲಿ ಯಜ್ಞೋಪವೀತವಿರುವುದು ಕಂಡುಬಂತು. ಆಗ ಆತ ಆ ಭಕ್ತನನ್ನು ಕೇಳಿದ: 'ಏನಿದು? ನೀನು ಭಗವತಿಯ ಕೊರಳಿಗೆ ಯಜ್ಞೋಪವೀತ ಹಾಕಿದೀಯಲ್ಲ!' ಭಕ್ತ ಉತ್ತರವಿತ್ತ: 'ಗೆಳೆಯ, ನೀನು ಭಗವತಿಯನ್ನು ಅರಿತುಕೊಂಡಿರುವಂತೆ ಕಾಣುತ್ತೆ. ಆದರೆ ನನಗೆ ಇನ್ನೂ ಗೊತ್ತಾಗಿಲ್ಲ, ಆಕೆ ಪುರುಷನೊ ಅಥವಾ ಪ್ರಕೃತಿಯೊ ಎಂಬುದು; ಅದಕ್ಕಾಗೆ ನಾನು ಆಕೆಯ ಕೊರಳಿಗೆ ಯಜ್ಞೋಪವೀತ ಹಾಕಿದೇನೆ.'

"ಯಾರು ಶ್ಯಾಮೆಯೊ ಆತನೇ ಬ್ರಹ್ಮ. ಯಾರು ಸಾಕಾರನೊ ಆತನೇ ನಿರಾಕಾರ. ಯಾರು ಸಗುಣನೊ ಆತನೇ ನಿರ್ಗುಣ. ಬ್ರಹ್ಮನೇ

ಶಕ್ತಿ; ಶಕ್ತಿಯೇ ಬ್ರಹ್ಮ. ಇಬ್ಬರಿಗೂ ಭೇದವಿಲ್ಲ. ಯಾರು ಸಚ್ಚಿದಾನಂದ ಮಯನೊ ಆತನೇ ಸಚ್ಚಿದಾನಂದಮಯಿ."

ಗೋವಿಂದ: "'ಯೋಗಮಾಯೆ' ಅಂದರೇನು?"

ಶ್ರೀರಾಮಕೃಷ್ಣರು: "ಯೋಗಮಾಯೆ ಅಂದರೆ ಪ್ರಕೃತಿಪುರುಷರ ಸಂಯೋಗ. ಈ ಜಗತ್ತಿನಲ್ಲಿ ಏನೇನು ಕಣ್ಣಿಗೆ ಬೀಳುವುವೊ ಅವೆಲ್ಲವೂ ಈ ಸಂಯೋಗದಿಂದ ಉದ್ಭವವಾದವು. ಉದಾಹರಣೆಗೆ ಶಿವಕಾಳಿಯರ ಮೂರ್ತಿ ತೆಗೆದುಕೊ. ಕಾಳಿ ಶಿವನ ಮೇಲೆ ನಿಂತುಕೊಂಡಿದಾಳೆ; ಶಿವ ಶವದ ಹಾಗೆ ಆಕೆಯ ಪಾದದ ಕೆಳಗೆ ಬಿದ್ದುಕೊಂಡಿದಾನೆ; ಕಾಳಿ ಆತನ ಕಡೆಗೆ ದಿಟ್ಟಿಸಿ ನೋಡುತ್ತಿದಾಳೆ. ಇವೆಲ್ಲವೂ ಪುರುಷಪ್ರಕೃತಿಯರ ಸಂಯೋಗವನ್ನು ಸೂಚಿಸುತ್ತವೆ. ಪುರುಷ ನಿಷ್ಕ್ರಿಯ; ಅದಕ್ಕಾಗೆ ಶಿವ ಶವದ ಹಾಗೆ ನೆಲದ ಮೇಲೆ ಬಿದ್ದಿದಾನೆ. ಪುರುಷನ ಸಂಯೋಗದಿಂದ ಪ್ರಕೃತಿ ತನ್ನ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡುತ್ತಾಳೆ; ಸೃಷ್ಟಿಸ್ಥಿತಿ ಪ್ರಳಯ ಕಾರ್ಯಗಳನ್ನು ಮಾಡುತ್ತಾಳೆ. ರಾಧಾಕೃಷ್ಣರ ಯುಗಳ ಮೂರ್ತಿಗಳ ಸಂಕೇತವೂ ಇದೇನೆ. ಈ ಸಂಯೋಗಕ್ಕಾಗೇ ಆ ಪ್ರತಿಮೆಗಳು ಒಂದರ ಕಡೆಗೆ ಇನ್ನೊಂದು ಬಾಗಿರುವುದು.

"ಈ ಸಂಯೋಗವನ್ನು ಸೂಚಿಸಲೋಸುಗವೇ ಶ್ರೀಕೃಷ್ಣ ಮೂಗಿಗೆ ಮುತ್ತು ಇಟ್ಟುಕೊಂಡಿರುವುದು, ಶ್ರೀಮತಿ (ರಾಧೆ) ತನ್ನ ಮೂಗಿಗೆ ನೀಲ-ಮಣಿ ಇಟ್ಟುಕೊಂಡಿರುವುದು. ಶ್ರೀಮತಿಯದು ಗೌರವರ್ಣ, ಮುತ್ತಿನ ಹಾಗೆ ಉಜ್ಜ್ವಲವಾದ್ದು. ಶ್ರೀಕೃಷ್ಣನದು ಶ್ಯಾಮವರ್ಣ. ಇದಕ್ಕಾಗೇ ಶ್ರೀಮತಿ ನೀಲಮಣಿಯನ್ನು ಇಟ್ಟುಕೊಂಡಿರುವುದು. ಮತ್ತೆ ಶ್ರೀಕೃಷ್ಣನ ಉಡಿಗೆ ಪೀತಾಂಬರ, ಶ್ರೀಮತಿಯದು ನೀಲಾಂಬರ.

"ಉತ್ತಮ ಭಕ್ತ ಯಾರು ಗೊತ್ತೆ? ಯಾರು ಬ್ರಹ್ಮಜ್ಞಾನವನ್ನು ಪಡೆದುಕೊಂಡನಂತರ ಭಗವಂತನೇ ಈ ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಆಗಿದಾನೆ ಎಂಬುದಾಗಿ ನೋಡುತ್ತಾನೊ ಆತ. ಮೊದಲು 'ನೇತಿ, ನೇತಿ', 'ಇದಲ್ಲ, ಇದಲ್ಲ' ಎಂದು ವಿಚಾರಮಾಡಿ ಚಾವಣಿಯನ್ನು ಮುಟ್ಟಬೇಕು. ಆಗ ಆತನಿಗೆ ಗೊತ್ತಾಗುತ್ತದೆ ಚಾವಣಿ ಯಾವುದರಿಂದ—ಇಟ್ಟಿಗೆ, ಸುಣ್ಣ, ಇಟ್ಟಿಗೆ ಪುಡಿ—ತಯಾರಾಗಿದೆಯೊ ಅದೇ ವಸ್ತುಗಳಿಂದ ಮೆಟ್ಟಿಲಸಾಲೂ ತಯಾರಾಗಿದೆ ಎಂಬುದಾಗಿ. ಆಗ ಆತನಿಗೆ ತೋರಿಬರುತ್ತದೆ, ಬ್ರಹ್ಮನೇ ಜೀವ ಜಗತ್ತು ಸಮಸ್ತವೂ ಆಗಿದಾನೆ ಎಂಬುದಾಗಿ.

"ಕೇವಲ ವಿಚಾರವೇ? ಥೂ! ಥೂ! ಯಾವ ಪ್ರಯೋಜನಕ್ಕೂ ಬಂದುದಲ್ಲ. (ಪರಮಹಂಸರು ನೆಲದ ಮೇಲೆ ಉಗುಳುತ್ತಿದಾರೆ.)

"ವಿಚಾರದಲ್ಲಿ ತೊಡಗಿ ನಾನೇಕೆ ಒಣಮರದಂತಾಗಿಬಿಡಲಿ? ಎಲ್ಲಿಯವರೆಗೆ ನನ್ನಲ್ಲಿ 'ನಾನು', 'ನೀನು' ಎಂಬ ಭೇದವಿರುವುದೊ ಅಲ್ಲಿಯವರೆಗೆ ಭಗವಂತನ ಪಾದಪದ್ಮಗಳಲ್ಲಿ ನನಗೆ ಶುದ್ಧ ಭಕ್ತಿ ಇರಲಿ.

(ಗೋವಿಂದನಿಗೆ) "ಕೆಲವು ವೇಳೆ ನಾನು ಹೇಳುವುದುಂಟು, 'ನಾನೇ ನೀನು, ನೀನೇ ನಾನು' ಎಂಬುದಾಗಿ. ಮತ್ತೆ ಕೆಲವು ವೇಳೆ ಅದು, 'ನೀನೇ ನೀನು' ಎಂಬುದಾಗಿ ಆಗಿಹೋಗುತ್ತದೆ. ಆಗ ಈ 'ಅಹಂ' ಎಂಬುದಕ್ಕಾಗಿ ಎಷ್ಟು ಹುಡುಕಿದರೂ ಸಿಕ್ಕದು. ಅವತಾರ ಶಕ್ತಿಯವೇ. ಕೆಲವರ ದೃಷ್ಟಿಯಿಂದ, ರಾಮ ಕೃಷ್ಣ ಎಂಬುವರು ಚಿದಾನಂದ ಸಾಗರದ ಎರಡು ಅಲೆ ಮಾತ್ರ.

"ಅದ್ವೈತಜ್ಞಾನ ದೊರೆತನಂತರ ಆತ್ಮಜಾಗೃತಿಯುಂಟಾಗಿಬಿಡುತ್ತದೆ. ಆಗ ಸರ್ವಭೂತಗಳಲ್ಲೂ ಭಗವಂತ ಚೈತನ್ಯರೂಪದಿಂದಿರುವುದು ಕಾಣಬರುತ್ತದೆ. ಈ ಅನುಭವ ದೊರೆತನಂತರ ಆನಂದ ದೊರೆಯುತ್ತದೆ. ಮೊದಲು ಅದ್ವೈತ ಜ್ಞಾನ, ಬಳಿಕ ಆತ್ಮಜಾಗೃತಿ, ಅನಂತರ ನಿತ್ಯಾನಂದ.

(ಮಾಸ್ಟರಿಗೆ) "ಮತ್ತೆ ನಿನಗೆ ಹೇಳುತ್ತೇನೆ, ನೀನು ಭಗವದ್ರೂಪಗಳಲ್ಲಿ ಅವಿಶ್ವಾಸವಿಡಬೇಡ. ಭಗವಂತನಿಗೆ ರೂಪ ಉಂಟು; ನೀನು ಅದರಲ್ಲಿ ಶ್ರದ್ಧೆಯಿಡು. ಆತನ ಯಾವ ರೂಪ ನಿನಗೆ ಹಿಡಿಸುತ್ತದೊ ಅದರ ಮೇಲೆ ನೀನು ಧ್ಯಾನಮಾಡು.

(ಗೋವಿಂದನಿಗೆ) "ಸತ್ಯವೇನೆಂದರೆ, ಎಲ್ಲಿಯವರೆಗೆ ಪ್ರಾಪಂಚಿಕ ವಸ್ತುಗಳಲ್ಲಿ ಭೋಗಾಸಕ್ತಿ ಇರುವುದೊ ಅಲ್ಲಿಯವರೆಗೆ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದಾಗಲೀ, ಆತನ ದರ್ಶನ ಪಡೆಯಬೇಕೆಂದಾಗಲೀ ಪ್ರಾಣ ವ್ಯಾಕುಲಪಡುವುದಿಲ್ಲ. ಮಗು ಆಟದಲ್ಲಿ ತೊಡಗಿರುವಾಗ ಎಲ್ಲವನ್ನೂ ಮರೆತುಬಿಡುತ್ತದೆ. ಅದನ್ನು ಆಟದಿಂದ ಬಿಡಿಸಲು ಸಂದೇಶ (ಸಿಹಿ ತಿಂಡಿ) ಕೊಟ್ಟರೂ, ಅದನ್ನು ಎಲ್ಲೋ ಕಿಂಚಿತ್ ತಿಂದುಬಿಟ್ಟು ಮತ್ತೆ ಆಟದಲ್ಲಿ ತೊಡಗುತ್ತದೆ. ಯಾವಾಗ ಅದಕ್ಕೆ ಆಟವೂ ರುಚಿಸದೊ, ಸಂದೇಶವೂ ರುಚಿಸದೊ ಆಗ ಅದು ಹೇಳುತ್ತದೆ: 'ನಾನು ತಾಯಿಯ ಹತ್ತಿರಕ್ಕೆ ಹೋಗಬೇಕು, ನಾನು ತಾಯಿಯ ಹತ್ತಿರಕ್ಕೆ ಹೋಗಬೇಕು' ಎಂಬುದಾಗಿ. ಆಗ ಅದಕ್ಕೆ ಸಂದೇಶ-ಗಿಂದೇಶ ಯಾವುದೂ

ಬೇಕಾಗೋದಿಲ್ಲ. ಯಾರನ್ನು ಆ ಮಗು ಎಂದೂ ನೋಡಿಲ್ಲವೊ ಕಂಡಿಲ್ಲವೊ ಆತ ಬಂದು ಹೇಳಿದರೂ: 'ಬಾ ನನ್ನೊಡನೆ. ನಿನ್ನ ತಾಯಿಯ ಹತ್ತಿರ, ಕರೆದುಕೊಂಡುಹೋಗುತ್ತೇನೆ.' ಎಂಬುದಾಗಿ, 'ಒಡನೇ ಅದು ಆತನನ್ನು ಹಿಂಬಾಲಿಸುತ್ತದೆ. ಮನುಷ್ಯ ಯಾರು ಬೇಕಾದರೂ ಆಗಲಿ ಯಾರು ಅದನ್ನು ತನ್ನ ತಾಯ ಹತ್ತಿರಕ್ಕೆ ಕರೆದುಕೊಂಡು ಹೋಗಿ ಬಿಡುತ್ತಾನೊ ಆತನೊಡನೆ ಅದು ಹೊರಟುಹೋಗುತ್ತದೆ.

"ಪ್ರಾಪಂಚಿಕ ವಸ್ತುಗಳನ್ನು ಭೋಗಿಸಿ ತೃಪ್ತಿ ದೊರೆಯಿತು ಎಂದರೆ ಪ್ರಾಣ ಭಗವಂತನಿಗಾಗಿ ವ್ಯಾಕುಲಪಡಲಾರಂಭಿಸುತ್ತದೆ. ಏನು ಮಾಡಿದರೆ ಆತನ ಸಾಕ್ಷಾತ್ಕಾರ ದೊರೆಯುತ್ತದೆ ಎಂಬ ಈ ಚಿಂತೆಯೊಂದೇ ಆಗ ಅದಕ್ಕೆ. ಭಗವಂತನ ಸಂಬಂಧವಾಗಿ ಯಾರು ಏನು ಹೇಳಿದರೂ ಅದಕ್ಕೆ ಕಿವಿಗೊಡುತ್ತದೆ."

ಮಾಸ್ಟರ್ ತನಗೆ ತಾನೇ: "ಅಯ್ಯೋ! ಪ್ರಾಣ ಭಗವಂತನಿಗಾಗಿ ವ್ಯಾಕುಲಪಡಬೇಕಾದರೆ ಈ ಹಾಳಾದ ಭೋಗವಾಸನೆ ಮುಗಿಯಬೇಕಲ್ಲ."

೧೮ನೆ ಆಗಸ್ಟ್ ೧೮೮೩, ಆಷಾಢ ಪೂರ್ಣಿಮೆ, ಶನಿವಾರ.

ಪರಮಹಂಸರು ಕಲ್ಕತ್ತದಲ್ಲಿ ಬಲರಾಮನ ಮನೆಗೆ ಬಂದಿದಾರೆ. ಅವತಾರ ತತ್ತ್ವದ ಸಂಬಂಧವಾಗಿ ಭಕ್ತರಿಗೆ ತಿಳಿಸುತ್ತಿದಾರೆ.

ಶ್ರೀರಾಮಕೃಷ್ಣರು: "ಅವತಾರಪುರುಷ ಲೋಕಶಿಕ್ಷಣಕ್ಕಾಗಿ ಭಕ್ತಿ ಭಕ್ತರನ್ನು ಆಶ್ರಯಿಸಿ ಈ ಜಗತ್ತಿನಲ್ಲಿ ಇರುತ್ತಾನೆ. ಇದು ಚಾವಣಿಗೆ ಹತ್ತಿದನಂತರ ಮೆಟ್ಟಿಲ ಮೂಲಕ ಹತ್ತಿ ಇಳಿದು ಮಾಡುವ ಹಾಗೆ ಜ್ಞಾನ ದೊರೆಯದವರೆಗೆ, ಎಲ್ಲಾ ಆಸೆಗಳು ನಿವೃತ್ತಿಯಾಗದವರೆಗೆ ಜನರು ಭಕ್ತಿಮಾರ್ಗಾವಲಂಬಿಗಳಾಗಿರಬೇಕು. ಆಗ ಮಾತ್ರವೇ ಅವರಿಗೆ ಚಾವಣಿಯ ಮೇಲಕ್ಕೆ ಹತ್ತಲು ಸಾಧ್ಯವಾಗುತ್ತದೆ. ಎಲ್ಲಾ ವಾಸನೆಗಳು ಹೋದರೆ ಮಾತ್ರವೇ ಚಾವಣಿಗೆ ಹತ್ತಲು ಸಾಧ್ಯ. ಲೆಕ್ಕ ಸರಿಯಾಗದವರೆಗೆ ಅಂಗಡಿಯವ ಮಲಗಲು ಹೋಗೋದಿಲ್ಲ. ಲೆಕ್ಕ ಹಾಕಿ ಅದು ಸರಿಯಾದ ನಂತರವೇ ನಿದ್ರಿಸಲು ಹೋಗುತ್ತಾನೆ.

(ಮಾಸ್ಟರಿಗೆ) "ಮನುಷ್ಯ ಕಾರ್ಯರಂಗಕ್ಕೆ ಇಳಿದ ಅಂದರೆ ಆತನಿಗೆ ಜಯ ಸಿದ್ಧವೇ ಸಿದ್ಧ. ಆಗೇ ಆಗುತ್ತದೆ.

"ಒಳ್ಳೇದು, ಕೇಶವಸೇನ, ಶಿವನಾಥಶಾಸ್ತ್ರಿ, ಇನ್ನೂ ಉಳಿದವರು ಉಪಾಸನೆ ನಡಸುತ್ತಾರಲ್ಲ, ಅದರ ವಿಷಯವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ನೀವು ಹೇಳುವ ಹಾಗೆ, ಅವರು ತೋಟದ ವರ್ಣನೆಯಲ್ಲೇ ತೃಪ್ತರಾಗುತ್ತಾರೆಯೇ ವಿನಾ, ತೋಟದ ಯಜಮಾನನನ್ನು ನೋಡಬೇಕೆಂಬುದರ ವಿಷಯವಾಗಿ ಅಪರೂಪಕ್ಕೂ ಮಾತಾಡುವುದಿಲ್ಲ. ತೋಟದ ವರ್ಣನೆ ಮಾಡುವುದೇ ಅವರ ಪೂಜೆಯ ಆದಿ ಮತ್ತು ಅಂತ."

ಶ್ರೀ ರಾಮಕೃಷ್ಣರು: "ನೀನು ಹೇಳುವುದು ಸರಿ. ತೋಟದ ಯಜಮಾನನನ್ನು ಕಂಡುಹಿಡಿದು ಆತನೊಡನೆ ಮಾತುಕತೆಯಾಡೋದೇ ಮುಖ್ಯ ಕೆಲಸ. ಭಗವಂತನ ದರ್ಶನವೇ ಜೀವನದ ಉದ್ದೇಶ."

ಈಗ ಪರಮಹಂಸರು ಅಧರಸೇನನ ಮನೆಗೆ ಬಂದಿದಾರೆ. ಮುಚ್ಚಂಜೆಯಾದ ನಂತರ ಪರಮಹಂಸರು ಅಧರಸೇನನ ಬೈಠಕ್‌ಖಾನೆಯಲ್ಲಿ ನಾಮ-ಸಂಕೀರ್ತನೆ ಮಾಡುತ್ತ ನರ್ತಿಸತೊಡಗಿದಾರೆ. ಕೊಠಡಿಯಲ್ಲಿ ರಾಖಾಲ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರು ಕುಳಿತಿದಾರೆ. ನಾಮ-ಸಂಕೀರ್ತನೆ ಮುಗಿದನಂತರ ಭಾವಾವಿಷ್ಟರಾಗೇ ಕೆಳಕ್ಕೆ ಕುಳಿತುಕೊಂಡರು. ಈಗ ರಾಖಾಲನಿಗೆ ಹೇಳುತ್ತಿದಾರೆ: "ಇಲ್ಲಿಯದು[1] ಶ್ರಾವಣ ಮಾಸದ ಮಳೆಯ ಹಾಗಲ್ಲ. ಅದು ಇದ್ದಕ್ಕಿದ್ದ ಹಾಗೆ ಜೋರಾಗಿ 'ಧಪ್, ಧಪ್' ಅಂತ ಬರುತ್ತದೆ ಮತ್ತೆ ನಿಂತುಹೋಗಿಬಿಡುತ್ತದೆ. ಇಲ್ಲಿಯದು ಒಡೆದು ಮೂಡಿದ ಶಿವನೇ ಹೊರತು ಪ್ರತಿಷ್ಠಾಪಿಸಿದ ಶಿವನಲ್ಲ. ನೀನು ಅಂದು ಕೋಪಿಸಿಕೊಂಡು ದಕ್ಷಿಣೇಶ್ವರದಿಂದ ಬಂದುಬಿಟ್ಟೆ. ನಿನ್ನನ್ನು ಕ್ಷಮಿಸೋ ಹಾಗೆ ನಾನು ಭಗವತಿಗೆ ಪ್ರಾರ್ಥನೆ ಮಾಡಿದೆ."

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಅಧರಸೇನನಿಗೆ ಹೇಳುತ್ತಿದಾರೆ: "ಮಗೂ, ನೀನು ಯಾರ ನಾಮಸಂಕೀರ್ತನೆ ಮಾಡಿದೆಯೊ ಆತನ ಮೇಲೆ ಧ್ಯಾನಮಾಡು." ಹೀಗೆಂದು ಹೇಳಿ ಅಧರಸೇನನ ನಾಲಗೆ ಮೇಲೆ ತಮ್ಮ ಬೆರಳಿನಿಂದ ಏನನ್ನೊ ಬರೆಯುತ್ತಿದಾರೆ. ಇದೇ ಅಧರಸೇನನ ಮಂತ್ರೋಪದೇಶವೇನು?

1. ಪರಮಹಂಸರು ತಮ್ಮನ್ನು ಸೂಚಿಸಿ.

೧೩

# ಶ್ರೀ ರಾಮಕೃಷ್ಣರು ಮತ್ತು ಮಾಸ್ಟರ್

೧೯ನೆ ಆಗಸ್ಟ್ ೧೮೮೩, ಶ್ರಾವಣ ಕೃಷ್ಣ ಪಾಡ್ಯಮಿ, ಭಾನುವಾರ.

ದೇವಾಲಯಗಳಲ್ಲಿ ಈಗತಾನೆ ಮಧ್ಯಾಹ್ನದ ಮಂಗಳಾರತಿ ಮುಗಿದು ಬಾಗಿಲು ಹಾಕುತ್ತಿದಾರೆ. ಪರಮಹಂಸರು ಭಗವತಿಯ ಪ್ರಸಾದ ಸ್ವೀಕರಿಸಿದನಂತರ ತಮ್ಮ ಕೊಠಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದಾರೆ. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡನಂತರ ತಮ್ಮ ಚಿಕ್ಕ ಮಂಚದಮೇಲೆ ಎದ್ದು ಕುಳಿತುಕೊಂಡಿದಾರೆ. ಮಾಸ್ಟರ್ ಕೊಠಡಿಯನ್ನು ಪ್ರವೇಶಿಸಿ ತಮಗೆ ಪ್ರಣಾಮಮಾಡಿ ಒಂದುಕಡೆ ನೆಲದಮೇಲೆ ಕುಳಿತುಕೊಂಡನಂತರ ಆತನೊಡನೆ ವೇದಾಂತದ ಸಂಬಂಧವಾಗಿ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡು, ಅಷ್ಟಾವಕ್ರಸಂಹಿತೆಯಲ್ಲಿ ಆತ್ಮಜ್ಞಾನದ ವಿಚಾರವಾಗಿ ಹೇಳಿದೆ. ಆತ್ಮಜ್ಞಾನಿಗಳು ಹೇಳುತ್ತಾರೆ, 'ಸೋಽಹಮ್' ಎಂದರೆ, 'ನಾನೇ ಪರಮಾತ್ಮ' ಎಂಬುದಾಗಿ. ಇದು ವೇದಾಂತವಾದಿ ಸನ್ಯಾಸಿಗಳ ದೃಷ್ಟಿ. ಆದರೆ ಈ ದೃಷ್ಟಿ ಸಂಸಾರಿಗಳಿಗೆ ತಕ್ಕುದಲ್ಲ. ಸಂಸಾರಿಗಳು ಎಲ್ಲಾ ವಿಧದ ಕೆಲಸಕಾರ್ಯಗಳಲ್ಲೂ ತೊಡಗುತ್ತ, 'ನಾನೇ ಆ ನಿಷ್ಕ್ರಿಯ ಪರಮಾತ್ಮ' ಎಂಬುದಾಗಿ ಹೇಳುವ ಬಗೆ ಹೇಗೆ? ವೇದಾಂತವಾದಿಗಳ ದೃಷ್ಟಿಯಿಂದ ಆತ್ಮ ನಿರ್ಲಿಪ್ತ. ಸುಖ ದುಃಖ, ಪಾಪ ಪುಣ್ಯ ಇವೇ ಮೊದಲಾದುವು ಯಾವ ವಿಧದಿಂದಲೂ ಸ್ಪರ್ಶಿಸಲಾರವು. ಆದರೆ ದೇಹಾಭಿಮಾನಿಗಳಿಗೆ ಅವು ಕಷ್ಟ ಕೊಡಬಲ್ಲವು. ಹೊಗೆ ಗೋಡೆಯನ್ನು ಕಪ್ಪು ಮಾಡಬಲ್ಲದು, ಆದರೆ ಆಕಾಶಕ್ಕೆ ಅದು ಏನೂ ಮಾಡಲಾರದು. ಕೃಷ್ಣಕಿಶೋರ ಜ್ಞಾನಿಗಳ ಹಾಗೆ ಹೇಳುತ್ತಿದ್ದ: 'ನಾನು "ಖ"' ಎಂಬುದಾಗಿ, ಅಂದರೆ ತಾನು ಆಕಾಶದ ಹಾಗೆ ಅಂತ. ಆತ ಒಬ್ಬ ಪರಮಭಕ್ತನಾಗಿದ್ದುದರಿಂದ ಆತನಿಗೆ ಹಾಗೆ ಹೇಳಲು ಹಕ್ಕಿದೆ; ಆದರೆ ಉಳಿದವರ ಬಾಯಿಂದ ಆ ಮಾತು ಔಚಿತ್ಯವಾದುದಲ್ಲ.

"ಆದರೆ, 'ನಾನು ಮುಕ್ತ' ಎಂಬ ಮನೋಭಾವ ಬಹಳ ಒಳ್ಳೆಯದು. ಸತತ, 'ನಾನು ಮುಕ್ತ, ನಾನು ಮುಕ್ತ' ಅಂತ ಹೇಳುತ್ತಲೇ ಇದ್ದರೆ ಮನುಷ್ಯ ನಿಜವಾಗಿಯೂ ಮುಕ್ತನಾಗಿಬಿಡುತ್ತಾನೆ. ಇದಕ್ಕೆ



Mahendranath Gupta ("M")
ಮಹೇಂದ್ರನಾಥಗುಪ್ತ ("ಮ")

ಬದಲು ಮನುಷ್ಯ, 'ನಾನು ಬದ್ಧ, ನಾನು ಬದ್ಧ' ಅಂತ ಹೇಳಿಕೊಳ್ಳುತ್ತಲೇ ಇದ್ದರೆ ಆತ ಬದ್ಧನೇ ಆಗಿಬಿಡುತ್ತಾನೆ. ಯಾರು ಕೇವಲ ಹೇಳುತ್ತಾನೊ, 'ನಾನು ಪಾಪಿ, ನಾನು ಪಾಪಿ' ಎಂಬುದಾಗಿ, ಆ ನೀಚ ಅಧೋಗತಿಗೆ ಇಳಿದುಬಿಡುತ್ತಾನೆ. ಅದಕ್ಕೆ ಬದಲು ಹೇಳಬೇಕು: 'ನಾನು ಭಗವನ್ನಾಮೋಚ್ಚಾರಣೆ ಮಾಡಿದೇನೆ. ಇನ್ನು ನನಗೆಲ್ಲಿಯ ಪಾಪ? ಇನ್ನು ಬಂಧನ ನನಗೆಲ್ಲಿಯದು?'

(ಮಾಸ್ಟರಿಗೆ) "ನೋಡು, ಇಂದು ನನ್ನ ಮನಸ್ಸು ಬಹಳವಾಗಿ ಕೆಟ್ಟುಹೋಗಿಬಿಟ್ಟಿದೆ. ಹೃದೆ ಕಾಗದ ಬರೆದಿದಾನೆ, ತನಗೆ ಬಹಳವಾಗಿ ಕಾಯಿಲೆ ಅಂತ. ಇದಕ್ಕೇಕೆ ನನ್ನ ಮನಸ್ಸು ಕೆಟ್ಟುಹೋಗಬೇಕು? ಹೀಗಾಗಿರುವುದು ದಯೆಯಿಂದಲೊ, ಮಾಯೆಯಿಂದಲೊ?"

ಮಾಸ್ಟರ್ ಏನು ತಾನೆ ಹೇಳಿಯಾನು? ಸುಮ್ಮನೆ ಇದಾನೆ.

ಶ್ರೀರಾಮಕೃಷ್ಣರು: "ಮಾಯೆ ಯಾವುದು ಗೊತ್ತೆ? ತಾಯಿ ತಂದೆ, ಸೋದರ ಸೋದರಿ, ಹೆಂಡತಿ ಮಕ್ಕಳು, ಸೋದರಳಿಯ ಸೋದರಸೊಸೆ ಇವರೇ ಮೊದಲಾದ ಸ್ವಬಾಂಧವರಲ್ಲಿ ಇಡುವ ಪ್ರೀತಿಯೇ ಮಾಯೆ. ದಯೆ ಎಂದರೆ ಸರ್ವಭೂತಗಳಲ್ಲಿಯೂ ಒಂದೇ ಸಮ ಪ್ರೀತಿ. ಈ ನನ್ನದು ದಯೆಯೊ, ಮಾಯೆಯೊ? ಆದರೆ ಹೃದೆ ನನಗೆ ಬಹಳ ಮಟ್ಟಿಗೆ ಉಪಕಾರ ಮಾಡಿದಾನೆ; ನನಗೆ ಬಹಳ ಸೇವೆ ಮಾಡಿದಾನೆ—ವಿಶೇಷತಃ ನಾನು ಕಾಯಿಲೆ ಬಿದ್ದಿದ್ದಾಗ. ಆದರೆ ಕೊನೆಯಲ್ಲಿ ನನಗೆ ಚಿತ್ರಹಿಂಸೆಯನ್ನೂ ಮಾಡಿದ. ಆತ ಕೊಡುತ್ತಿದ್ದ ಚಿತ್ರಹಿಂಸೆ ಅಷ್ಟು ತಡೆಯಲಾರದಾಗಿಬಿಟ್ಟಿತ್ತು, ಒಮ್ಮೆ ನಾನು ಗಂಗಾ ನದಿಯಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳಬೇಕೆಂದು ದಡದವರೆಗೂ ಹೋಗಿಬಿಟ್ಟಿದ್ದೆ. ಆದರೆ ಆತ ಬಹಳವಾಗಿ ನನಗೆ ಸೇವೆ ಮಾಡಿದಾನೆ. ಈಗ ಅವನ ಕೈಗೊಂದಿಷ್ಟು (ಹಣ) ದೊರೆಯುವುದಾದರೆ ನನ್ನ ಮನಸ್ಸಿಗೆ ಸ್ವಲ್ಪ ಸಮಾಧಾನವಾಗುತ್ತದೆ. ಅದಕ್ಕಾಗಿ ನಾನು ಯಾರನ್ನು ತಾನೆ ಕೇಳುವುದಕ್ಕೆ ಹೋಗಲಿ? ಯಾರು ಇದನ್ನೆಲ್ಲಾ ಇಲ್ಲಿಗೆ ಬರೋ ಧನಿಕರ ಮುಂದೆ ಹೇಳಿಕೊಳ್ಳುತ್ತಾ ಹೋಗೋರು?"

ಘಂಟೆ ಅಪರಾಹ್ನ ಎರಡೊ-ಮೂರೊ. ಅಧರಸೇನ ಮತ್ತು ಬಲರಾಮ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ನೆಲದ ಮೇಲೆ ಕುಳಿತುಕೊಂಡು ಪರಮಹಂಸರ ದೇಹಾರೋಗ್ಯವನ್ನು ವಿಚಾರಿಸುತ್ತಿದಾರೆ. ಪರಮಹಂಸರು ಉತ್ತರವೀಯುತ್ತಿದಾರೆ:

"ನನ್ನ ಶರೀರವೇನೊ ಆರೋಗ್ಯದಿಂದಿದೆ, ಆದರೆ ಮನಸ್ಸು ಸ್ವಲ್ಪ ಕಷ್ಟಕ್ಕೊಳಗಾಗಿದೆ." ಅವರು ಹೃದಯನ ಕಾಯಿಲೆಯ ಸಂಬಂಧವಾಗಿ ಯಾವ ಮಾತನ್ನೂ ಎತ್ತಲಿಲ್ಲ.

ಶ್ರೀರಾಮಕೃಷ್ಣರು: "ನಾನು ಸಿಂಹವಾಹಿನಿಯನ್ನು ನೋಡಿಬರಲು ಹೋಗಿದ್ದೆ. ಆಕೆಯನ್ನು ಕಲ್ಕತ್ತದ ಮಲ್ಲಿಕನ ಮನೆತನಕ್ಕೆ ಸೇರಿದ ಒಂದು ಕುಟುಂಬದವರು ಪೂಜೆಮಾಡುತ್ತಿದಾರೆ. ಈ ಕುಟುಂಬದವರು ಬಹಳ ಕಷ್ಟಸ್ಥಿತಿಯಲ್ಲಿದಾರೆ. ಮನೆ ಹರಕಲು ಮುರುಕಲು. ಗೋಡೆ, ನೆಲ ಎಲ್ಲಾ ಹಸುರು ಪಾಚಿ ಮತ್ತು ಪಾರಿವಾಳದ ಹಿಕ್ಕೆಗಳಿಂದ ತುಂಬಿದೆ. ಗೋಡೆಯ ಸುಣ್ಣ ಒರೆಮಣ್ಣು ಛಿದ್ರ ಛಿದ್ರವಾಗಿ ಒಡೆದು ಉದುರುತ್ತಿವೆ. ಆದರೆ ಇದೇ ಮನೆತನದ ಉಳಿದ ಕುಟುಂಬಗಳು ಒಳ್ಳೆ ಸ್ಥಿತಿಯಲ್ಲಿವೆ. ಈ ಮನೆಯವರು ಮಾತ್ರ ಏಳಿಗೆಗೆ ಬರುವ ಯಾವ ಸೂಚನೆಯೂ ನನಗೆ ಕಂಡು ಬರಲಿಲ್ಲ. (ಮಾಸ್ಟರಿಗೆ) ಒಳ್ಳೇದು, ಇದು ಏನು ಸೂಚಿಸುತ್ತದೆ?"

ಮಾಸ್ಟರ್ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಇದು ಏಕೆ ಹೀಗೆ ಗೊತ್ತೆ? ಯಾರಾರು ಯಾವಾವ ಕರ್ಮಫಲದ ಬುತ್ತಿಯನ್ನು ಕಟ್ಟಿಕೊಂಡು ಬಂದಿದಾರೊ ಅವರವರು ಅದನ್ನು ಉಣ್ಣಲೇ ಬೇಕು. ಪೂರ್ವಸಂಸ್ಕಾರ, ಪ್ರಾರಬ್ಧ ಇವನ್ನೆಲ್ಲ ಒಪ್ಪಿಕೊಳ್ಳಬೇಕು. ಆದರೂ ಆ ಹರಕಲು ಮುರುಕಲು ಮನೆಯಲ್ಲಿ ಸಿಂಹವಾಹಿನಿಯ ಮುಖ ಸುಮ್ಮನೆ ಹೊಳೆಯುತ್ತಿರುವ ಹಾಗೆ ಕಂಡಿತು. ಆವಿರ್ಭಾವವನ್ನು ಒಪ್ಪಿಕೊಳ್ಳಬೇಕು.

"ಒಮ್ಮೆ ನಾನು ವಿಷ್ಣುಪುರಕ್ಕೆ ಹೋಗಿದ್ದೆ. ಅಲ್ಲಿನ ರಾಜಮನೆತನದವರಿಗೆ ಒಳ್ಳೊಳ್ಳೆ ದೇವಾಲಯಗಳಿವೆ. ಅವುಗಳೊಂದರಲ್ಲಿ ಮೃಣ್ಮಯಿ ದೇವಿಯ ಮೂರ್ತಿ ಇದೆ. ಆ ದೇವಾಲಯದ ಹತ್ತಿರ 'ಕೃಷ್ಣಬಂಧ', 'ಲಾಲ್‌ಬಂಧ' ಎಂಬ ಹೆಸರಿನ ಎರಡು ಕೊಳಗಳಿವೆ. ಒಳ್ಳೇದು, ಒಂದು ಕೊಳದ ಹತ್ತಿರ ಹೆಂಗಸರು ತಮ್ಮ ತಲೆಗೆ ಉಪಯೋಗಿಸುವ ಸುಗಂಧ ದ್ರವ್ಯದ ವಾಸನೆ ಬಂತಲ್ಲ ಏಕೆ ಹೇಳು ನೋಡೋಣ? ಅಲ್ಲಿಗೆ ಬರುವ ಭಕ್ತೆಯರು ದೇವಿಗೆ ಆ ಸುಗಂಧ ದ್ರವ್ಯ ಅರ್ಪಿಸುತ್ತಾರೆ ಎಂಬುದು ನನಗೆ ಗೊತ್ತಿರಲಿಲ್ಲ. ಆ ಕೊಳದ ಹತ್ತಿರ ನನಗೆ ಭಾವಸಮಾಧಿ ಉಂಟಾಯಿತು. ಆಗ ನಾನಿನ್ನೂ ದೇವಾಲಯಕ್ಕೆ ಹೋಗಿ ದೇವಿಯ ದರ್ಶನ ಮಾಡಿರಲಿಲ್ಲ.

ಆದರೂ ಆ ಅವಸ್ಥೆಯಲ್ಲೇ ನನಗೆ ಮೃಣ್ಮಯಿಯ ದರ್ಶನ ಆಯಿತು. ಆಕೆ ಆ ಕೊಳದ ನೀರಿನಲ್ಲಿ ಸೊಂಟದವರೆಗೆ ಎದ್ದು ನಿಂತಿದ್ದಳು."

ಇಷ್ಟರಲ್ಲಿ ಇನ್ನೂ ಅನೇಕ ಭಕ್ತರು ಬಂದು ಸೇರಿದರು. ಯಾರೊ ಒಬ್ಬರು ಕಾಬೂಲಿನ ರಾಜಕೀಯ ಕ್ರಾಂತಿ ಮತ್ತು ಒಳಯುದ್ಧದ ಮಾತು ಎತ್ತಿದರು. ಒಬ್ಬ ಭಕ್ತ ಹೇಳಿದ, ಯಾಕೂಬ್‌ಖಾನ್ ಸಿಂಹಾಸನ ಚ್ಯುತನಾಗಿಬಿಟ್ಟಿದಾನೆ ಎಂಬುದಾಗಿ. ಆ ಭಕ್ತ ಪರಮಹಂಸರನ್ನು ಸಂಬೋಧಿಸಿ ಹೇಳಿದ, ಯಾಕೂಬ್‌ಖಾನ್ ಒಬ್ಬ ಪರಮ ಭಗವದ್ಭಕ್ತ ಎಂಬುದಾಗಿ.

ಶ್ರೀರಾಮಕೃಷ್ಣರು: "ನೋಡು, ದೇಹ ಅಂದರೆ ಸುಖ ದುಃಖ ಇದ್ದೇ ಇರುತ್ತವೆ. ಕವಿಕಂಕಣ ಚಂಡಿಯಲ್ಲಿ ಹೇಳಿದೆ, ಜನ ಕಾಲು-ವೀರನನ್ನು ಜೈಲಿಗೆ ಹಾಕಿ ಆತನ ಎದೆಯ ಮೇಲೆ ಭಾರವಾದ ಕಲ್ಲನ್ನು ಹೇರಿದರು ಎಂಬುದಾಗಿ. ಆದರೆ ಆತ ಭಗವತಿಯ ವರಪುತ್ರ. ದೇಹ-ಧಾರಣೆ ಎಂದರೆ ಸುಖ ದುಃಖ ಇದ್ದೇ ಇರುತ್ತವೆ. ಮತ್ತೆ ದೊಡ್ಡ ಭಕ್ತನಾಗಿದ್ದ ಶ್ರೀಮಂತನನ್ನು ತೆಗೆದುಕೊ. ಆತನ ತಾಯಿಯಾದ ಖುಲ್ಲನೆಯನ್ನು ಭಗವತಿ ಎಷ್ಟೊಂದು ಪ್ರೀತಿಸುತ್ತಿದ್ದಳು! ಆದರೂ ಆತ ಎಷ್ಟೊಂದು ವಿಪತ್ತುಗಳಿಗೆ ತುತ್ತಾಗಬೇಕಾಯಿತು! ಜನ ಆತನ ಕತ್ತನ್ನೇ ಕತ್ತರಿಸಿಬಿಟ್ಟರು. ಪರಮಭಕ್ತನಾದ ಒಬ್ಬ ಮರ ಕಡಿಯುವವನಿಗೆ ಭಗವತಿಯ ದರ್ಶನ ದೊರೆಯಿತು. ಆಕೆ ಆತನ ಮೇಲೆ ಬಹಳವಾಗಿ ದಯೆ ಮತ್ತು ಕೃಪೆ ತೋರಿಸಿದಳು. ಆದರೂ ಆತನ ಮರ ಕಡಿಯುವ ಕೆಲಸ ಮಾತ್ರ ನಿಂತುಹೋಗಲಿಲ್ಲ. ಆ ಕೆಲಸ ಮಾಡೇ ಆತ ಜೀವಿಸಬೇಕಾಯಿತು. ಕಾರಾಗೃಹದಲ್ಲಿ ದೇವಕಿಗೆ ಶಂಖಚಕ್ರಗದಾಧಾರಿಯಾದ ಭಗವಂತನ ದರ್ಶನ ದೊರೆಯಿತು. ಆದರೆ ಆಕೆಯ ಕಾರಾಗೃಹವಾಸ ಮಾತ್ರ ಕೊನೆಯಾಗಲಿಲ್ಲ."

ಮಾಸ್ಟರ್: "ಕೇವಲ ಕಾರಾಗೃಹದಿಂದ ಬಿಡುಗಡೆಯೇ ಏಕೆ? ಈ ದೇಹ ಸಕಲ ತೊಂದರೆಗಳಿಗೂ ಮೂಲ. ದೇವಕಿ ಈ ದೇಹದಿಂದಲೂ ಬಿಡುಗಡೆ ಹೊಂದಬೇಕಾಗಿತ್ತು."

ಶ್ರೀರಾಮಕೃಷ್ಣರು: "ಇದೆಲ್ಲ ಪ್ರಾರಬ್ಧಕರ್ಮದ ಫಲ. ಆ ಬುತ್ತಿ ಇರುವವರೆಗೆ ದೇಹಧಾರಣೆ ಮಾಡಲೇಬೇಕು. ಒಬ್ಬ ಕುರುಡ ಒಮ್ಮೆ ಗಂಗಾಸ್ನಾನ ಮಾಡಿದ. ಅದರ ಫಲವಾಗಿ ಆತನ ಪಾಪಗಳೆಲ್ಲಾ ಆತನನ್ನು ಬಿಟ್ಟು ಹೊರಟುಹೋದುವು. ಆದರೆ ಕುರುಡುತನ ಮಾತ್ರ ಹೋಗಲಿಲ್ಲ. (ಎಲ್ಲರೂ

ನಗುತ್ತಿದಾರೆ.) ಹಿಂದಿನ ಜನ್ಮಗಳಲ್ಲಿ ಏನೊ ಮಾಡಿದ್ದ. ಅದಕ್ಕಾಗಿ ಆತ ಈ ಜನ್ಮದಲ್ಲಿ ಅನುಭವಿಸಬೇಕಾಗಿತ್ತು."

ಮಾಸ್ಟರ್: "ಹೌದು, ಬಿಟ್ಟಬಾಣದ ಮೇಲೆ ಯಾವ ಹತೋಟಿಯೂ ಇರದು."

ಶ್ರೀರಾಮಕೃಷ್ಣರು: "ದೇಹಕ್ಕೆ ಸುಖ ದುಃಖ ಏನೇ ಬಂದರೂ ಭಕ್ತನ ಜ್ಞಾನ ಮತ್ತು ಭಕ್ತಿಯ ಸಂಪತ್ತು ಅಚ್ಚಳಿಯದೆ ಉಳಿದುಕೊಂಡಿರುತ್ತವೆ. ಉದಾಹರಣೆಗೆ ಪಾಂಡವರನ್ನು ತೆಗೆದುಕೊ. ಅವರು ಏನೇನು ಕಷ್ಟಗಳಿಗೆ ಒಳಗಾದರು ಏನು ಕತೆ! ಆದರೂ ಅವರ ಹೃದಯದಲ್ಲಿ ನಾಸ್ತಿಕ ಭಾವನೆ ಒಮ್ಮೆಯೂ ಮೂಡಲಿಲ್ಲ. ಅವರಂಥ ಜ್ಞಾನಿಗಳು, ಅವರಂಥ ಭಕ್ತರು ಎಲ್ಲಿ ದೊರೆಯುತ್ತಾರೆ?"

ಈಗ ನರೇಂದ್ರ ಮತ್ತು ಕ್ಯಾಪ್ಟೆನ್ ವಿಶ್ವನಾಥೋಪಾಧ್ಯಾಯ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಳ್ಳುತ್ತಿದಾರೆ. ನರೇಂದ್ರನಿಗೆ ಇಪ್ಪತ್ತೆರಡು ವಯಸ್ಸು. ಕಾಲೇಜಿನಲ್ಲಿ ಓದುತ್ತಿದಾನೆ. ಪರಮಹಂಸರು ನರೇಂದ್ರನಿಗೆ ಹಾಡುವಂತೆ ಹೇಳಿದರು. ಕೊಠಡಿಯ ಪಶ್ಚಿಮ ಗೋಡೆಗೆ ತಂಬೂರಿಯನ್ನು ತೂಗಹಾಕಿದೆ. ಎಲ್ಲರ ಕಣ್ಣೂ ನರೇಂದ್ರನ ಕಡೆಗೆ ತಿರುಗಿವೆ. ಆತ ಈಗ ತಬಲ ಶ್ರುತಿ ಮಾಡುತ್ತಿದಾನೆ.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನೋಡು, ಈ ತಬಲ ಹಿಂದಿನ ಹಾಗೆ ಶ್ರುತಿ ಕೊಡುತ್ತಿಲ್ಲ."

ಕ್ಯಾಪ್ಟೆನ್: "ಪೂರ್ಣತೆಯನ್ನು ಪಡೆದುಕೊಂಡುಬಿಟ್ಟವೆ. ಆದ್ದರಿಂದ ಅವು ಶಬ್ದಮಾಡುತ್ತಿಲ್ಲ. ಪೂರ್ಣಕುಂಭವಾಗಿಬಿಟ್ಟವೆ." (ಎಲ್ಲರೂ ನಗುತ್ತಾರೆ.)

ಶ್ರೀರಾಮಕೃಷ್ಣರು: "ಆದರೆ ನಾರದಾದಿಗಳು?"

ಕ್ಯಾಪ್ಟೆನ್: "ಅವರು ಪರರ ದುಃಖ ನೋಡಿ ಮಾತನಾಡಿದರು."

ಶ್ರೀರಾಮಕೃಷ್ಣರು: "ಹೌದು, ನಿಜ. ನಾರದ, ಶುಕದೇವ ಇವರೇ ಮೊದಲಾದವರು ಸಮಾಧಿ ದೊರೆತನಂತರ ಕೆಳಕ್ಕೆ ಇಳಿದುಬಂದಿದ್ದರು. ದಯಾಪೂರಿತ ಹೃದಯರಾದುದರಿಂದ ಪರರ ಹಿತಕ್ಕಾಗಿ ಮಾತನಾಡಿದರು."

ನರೇಂದ್ರ ಹಾಡಲಾರಂಭಿಸಿದ:

ಸತ್ಯ ಶಿವ ಸುಂದರನ ರೂಪ ಹೃದಿಮಂದಿರದಿ
ಹೊಳೆವುದೆಂದೋ, . . .

ಪರಮಹಂಸರು ಈ ಹಾಡಿನ ಕೆಲವು ನುಡಿಗಳನ್ನು ಕೇಳುವುದೇ ತಡ ಗಾಢಸಮಾಧಿಸ್ಥರಾಗಿಬಿಟ್ಟರು. ಪೂರ್ವಾಭಿಮುಖವಾಗಿ ಕೈಮುಗಿದು ಕೊಂಡು ಕುಳಿತಿದಾರೆ. ದೇಹ ನೆಟ್ಟಗೆ ಕುಳಿತಿದೆ. ಬಾಹ್ಯಪ್ರಜ್ಞೆ ಒಂದು ಕಿಂಚಿತ್ತೂ ಇಲ್ಲ. ಉಸಿರಾಡುತ್ತಿದಾರೆಯೊ ಇಲ್ಲವೊ ಎಂಬುದನ್ನು ಹೇಳ ಲಾಗುತ್ತಿಲ್ಲ. ಕಣ್ಣು ಎವೆಯಿಕ್ಕದೆ ನೋಡುತ್ತಿವೆ. ಪರದೆ ಮೇಲಿನ ಚಿತ್ರದ ಹಾಗೆ ಕುಳಿತಿದಾರೆ. ಅವರ ಮನಸ್ಸು ಆನಂದಮಯಿಯ ರೂಪ-ಸಾಗರದಲ್ಲಿ ಮುಳುಗಿಹೋಗಿರುವಂತಿದೆ.

ಪರಮಹಂಸರ ಕೊಠಡಿಯ ಪೂರ್ವ ವರಾಂಡದಲ್ಲಿ ಹಾಜರಾ ಕಂಬ ಳಿಯ ಆಸನದ ಮೇಲೆ ಕೈಯಲ್ಲಿ ಜಪಮಾಲೆ ಹಿಡಿದು ಕುಳಿತಿದ್ದ. ನರೇಂದ್ರ ಅಲ್ಲಿಗೆ ಎದ್ದುಹೋಗಿ ಆತನೊಡನೆ ಮಾತುಕತೆಯಾಡುತ್ತಿದಾನೆ. ಇನ್ನೂ ಅನೇಕ ಭಕ್ತರು ಬಂದು ಸೇರಿದರು. ಪರಮಹಂಸರು ಪ್ರಕೃತಿಸ್ಥರಾಗಿ ಸುತ್ತಲೂ ನೋಡಿದರು. ನರೇಂದ್ರ ಅಲ್ಲಿ ಇಲ್ಲದಿರುವುದು, ತಂಬೂರಿ ಹಾಗೇ ಅಲ್ಲಿ ಬಿದ್ದಿರುವುದು, ಭಕ್ತರು ತಮ್ಮನ್ನೇ ದೃಷ್ಟಿಸಿ ನೋಡುತ್ತಿರು ವುದು ಅವರ ಕಣ್ಣಿಗೆ ಬಿತ್ತು.

ಶ್ರೀರಾಮಕೃಷ್ಣರು ನರೇಂದ್ರನನ್ನು ನಿರ್ದೇಶಿಸಿ: "ಕಾಡ್ಗಿಚ್ಚು ಹೊತ್ತಿಸಿಬಿಟ್ಟ. ಈಗ ಆತ ಇಲ್ಲಿ ಇದ್ದರೆ ತಾನೆ ಏನು ಅಥವಾ ಹೊರಕ್ಕೆ ಹೋದರೆ ತಾನೆ ಏನು?

(ಕ್ಯಾಪ್ಟೆನ್ ಮತ್ತು ಉಳಿದ ಭಕ್ತರಿಗೆ) "ಚಿದಾನಂದವನ್ನು ಆರೋಪಿಸಿಕೊಳ್ಳಿ; ನಿಮಗೂ ಆನಂದ ಉಂಟಾಗುತ್ತದೆ. ಚಿದಾನಂದ ಯಾವಾಗಲೂ ನಿಮ್ಮಲ್ಲಿ ಇದ್ದೇ ಇದೆ. ಅದು ಆವರಣ ವಿಕ್ಷೇಪ ಶಕ್ತಿ ಗಳಿಂದ ಕೇವಲ ಮುಚ್ಚಲ್ಪಟ್ಟಿದೆ. ವಿಷಯಾಸಕ್ತಿ ಕಡಮೆಯಾದಷ್ಟೂ ಭಗವಂತನಲ್ಲಿ ಪ್ರೀತಿ ಅಧಿಕವಾಗುತ್ತಾ ಬರುತ್ತದೆ."

ಕ್ಯಾಪ್ಟೆನ್: "ಕಲ್ಕತ್ತದ ಕಡೆಗೆ ಮುಂದು ಮುಂದುವರಿದಷ್ಟೂ ಕಾಶಿ ದೂರ ದೂರವಾಗುತ್ತಾ ಬರುತ್ತದೆ. ಹಾಗೇ ಕಾಶಿ ಕಡೆಗೆ ಮುಂದು ಮುಂದು ವರಿದಷ್ಟೂ, ಕಲ್ಕತ್ತ ದೂರ ದೂರವಾಗುತ್ತಾ ಬರುತ್ತದೆ."

ಶ್ರೀರಾಮಕೃಷ್ಣರು: "ರಾಧೆ ಶ್ರೀಕೃಷ್ಣನ ಕಡೆಗೆ ಮುಂದುವರಿ

ದಷ್ಟೂ ಆಕೆ ಆತನ ದೇಹಗಂಧವನ್ನ ಅಧಿಕಾಧಿಕವಾಗಿ ಪಡೆಯುತ್ತಿದ್ದಳು. ಭಗವಂತನ ಕಡೆಗೆ ಮುಂದುವರಿದಷ್ಟೂ ಆತನಲ್ಲಿ ಭಾವ ಭಕ್ತಿ ಅಧಿಕಾಧಿಕವಾಗುತ್ತಾ ಬರುತ್ತವೆ. ನದಿ ಸಮುದ್ರವನ್ನು ಹೆಚ್ಚು ಹೆಚ್ಚಾಗಿ ಸಮೀಪಿಸಿದಂತೆಲ್ಲಾ ನದಿಯಲ್ಲಿ ಉಬ್ಬರವಿಳಿತಗಳು ಅಧಿಕಾಧಿಕವಾಗುವುದನ್ನು ನಾವು ನೋಡಬಹುದು.

"ಜ್ಞಾನಿ ತನ್ನ ಅಂತರ್ಯದಲ್ಲಿ ಭಗವದಾನಂದವನ್ನು ಅನುಭವಿಸುತ್ತಾನೆ; ಸಮುದ್ರಮಟ್ಟಕ್ಕಿಂತ ಎತ್ತರದಲ್ಲಿ ಹರಿಯುವ ಗಂಗೆಯ ಹಾಗೆ ಅದು ಒಂದೇ ದಿಕ್ಕಿಗೆ ಹರಿಯುತ್ತದೆ. ಅವರ ದೃಷ್ಟಿಯಿಂದ ಎಲ್ಲಾ ಸ್ವಪ್ನದ ಹಾಗೆ; ಯಾವಾಗಲೂ ಸ್ವಸ್ವರೂಪದಲ್ಲೇ ನೆಲಸಿರುತ್ತಾರೆ. ಆದರೆ ಭಕ್ತನ ಮನಸ್ಸು ಯಾವಾಗಲೂ ಒಂದೇ ದಿಕ್ಕಿನದಲ್ಲ. ಆತನ ಭಗವದ್ಭಾವನೆಯಲ್ಲಿ ಉಬ್ಬರವಿಳಿತಗಳಿವೆ. ಆತ ಪ್ರೇಮೋನ್ಮತ್ತತೆಯಿಂದ ನಗುತ್ತಾನೆ, ಅಳುತ್ತಾನೆ, ನರ್ತಿಸುತ್ತಾನೆ, ಹಾಡುತ್ತಾನೆ. ಆತ ಭಗವಂತನೊಡನೆ ವಿಲಾಸಿಸಲು ಇಚ್ಛೆಪಡುತ್ತಾನೆ. ಸಾಗರದಲ್ಲಿ ಹಿಮಗಡ್ಡೆ ಮುಳುಗಿ ಎದ್ದು ತೇಲಿಯಾಡೋದಿಲ್ಲವೆ, ಹಾಗೇ ಆತ ಭಗವದಾನಂದ ಸಾಗರದಲ್ಲಿ ಕೆಲವು ವೇಳೆ ಈಜು ಹೊಡೆಯುತ್ತಾನೆ, ಇನ್ನು ಕೆಲವು ವೇಳೆ ಮುಳುಗುತ್ತಾನೆ, ಮತ್ತೆ ಕೆಲವು ವೇಳೆ ಮೇಲೆ ಏಳುತ್ತಾನೆ. (ನಗು.)

"ಜ್ಞಾನಿಗಳಿಗೆ ಬ್ರಹ್ಮಸಾಕ್ಷಾತ್ಕಾರ ಬೇಕು. ಆದರೆ ಭಕ್ತರ ಆದರ್ಶ ಷಡೈಶ್ವರ್ಯಪೂರ್ಣ ಸರ್ವಶಕ್ತಿಮಾನ್ ಸಾಕಾರ ಭಗವಂತ. ಆದರೆ ವಾಸ್ತವಿಕವಾಗಿ ಬ್ರಹ್ಮನಿಗು ಶಕ್ತಿಗು ಯಾವ ಭೇದವೂ ಇಲ್ಲ. ಯಾರು ಸಚ್ಚಿದಾನಂದನೊ ಆತನೇ ಸಚ್ಚಿದಾನಂದಮಯಿ. ಅವರು ರತ್ನ ಮತ್ತು ಅದರ ಪ್ರಭೆ ಇದ್ದಹಾಗೆ. ರತ್ನಪ್ರಭೆಯ ಭಾವನೆಯೊಡನೆ ರತ್ನವೂ ಮನಸ್ಸಿಗೆ ಬರುತ್ತದೆ; ಹಾಗೆ ರತ್ನದ ಭಾವನೆಯೊಡನೆ ರತ್ನಪ್ರಭೆಯೂ ಮನಸ್ಸಿಗೆ ಬರುತ್ತದೆ. ರತ್ನವನ್ನು ಭಾವಿಸದೆ ರತ್ನಪ್ರಭೆಯನ್ನು ಭಾವಿಸಲಾಗೋದಿಲ್ಲ, ರತ್ನಪ್ರಭೆಯನ್ನು ಭಾವಿಸದೆ ರತ್ನವನ್ನು ಭಾವಿಸಲಾಗೋದಿಲ್ಲ.

"ಇರತಕ್ಕವನು ಸಚ್ಚಿದಾನಂದ ಪರಬ್ರಹ್ಮನೊಬ್ಬನೇ. ಆತನೇ ಶಕ್ತಿಭೇದದಿಂದ, ಉಪಾಧಿಭೇದದಿಂದ ನಾನಾ ರೂಪಗಳನ್ನು ಧರಿಸಿದಾನೆ. ಅದಕ್ಕಾಗೆ ಭಕ್ತ ಹಾಡುತ್ತಾನೆ: 'ಹೇ ಭಗವತಿ, ಎಲ್ಲವೂ ನೀನೆ!' ಎಂಬುದಾಗಿ. ಎಲ್ಲೆಲ್ಲಿ ಕಾರ್ಯ—ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯವಿರುವುದೊ ಅಲ್ಲೆಲ್ಲಾ ಶಕ್ತಿಯ ವ್ಯಕ್ತತೆ. ನೀರು ಸುಮ್ಮನೆ ನಿಂತಿದ್ದರೂ ನೀರೇ,

ಅಲೆ ಗುಳ್ಳೆ ಇವುಗಳಿಂದ ತುಂಬಿದ್ದರೂ ನೀರೇ. ಸಚ್ಚಿದಾನಂದನೇ ಆದ್ಯಾಶಕ್ತಿಯಾಗಿದಾನೆ. ಆಕೆ ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುತ್ತಾಳೆ. ಕ್ಯಾಪ್ಟೆನ್ ಯಾವ ಕೆಲಸ ಮಾಡದೆ ಇರುವಾಗಲೂ ಕ್ಯಾಪ್ಟೆನ್ನೇ, ಪೂಜೆ ಕೆಲಸ ಮಾಡುವಾಗಲೂ ಕ್ಯಾಪ್ಟೆನ್ನೇ, ಗವರ್ನರನ್ನು ಭೇಟಿಮಾಡಲು ಹೋದಾಗಲೂ ಕ್ಯಾಪ್ಟೆನ್ನೇ. ಕೇವಲ ಉಪಾಧಿಯಿಂದ ಬೇರೆಬೇರೆ ಹೆಸರು.''

ಕ್ಯಾಪ್ಟೆನ್: ''ಹೌದು, ನಿಜ.''

ಶ್ರೀರಾಮಕೃಷ್ಣರು: ''ನಾನು ಇದೇ ಮಾತುಗಳನ್ನು ಒಮ್ಮೆ ಕೇಶವ ಸೇನನಿಗೆ ಹೇಳಿದೆ.''

ಕ್ಯಾಪ್ಟೆನ್: ''ಕೇಶವಸೇನ ಭ್ರಷ್ಟಾಚಾರಿ, ಸ್ವೇಚ್ಛಾಚಾರಿ. ಆತ ಬಾಬು, ಸಾಧು ಅಲ್ಲ.''

ಶ್ರೀರಾಮಕೃಷ್ಣರು ಉಳಿದ ಭಕ್ತರಿಗೆ: ''ಕ್ಯಾಪ್ಟೆನ್, ನಾನು ಹೋಗಿ ಕೇಶವಸೇನನೊಡನೆ ಬೆರೆಯಕೂಡದು ಎಂದು ನಿಷೇಧಿಸುತ್ತಿದಾನೆ.''

ಕ್ಯಾಪ್ಟೆನ್: ''ಮಹಾಶಯರೆ, ಆದರೆ ನೀವು ನಿಮಗೆ ಇಚ್ಛೆ ಬಂದ ಹಾಗೆ ಮಾಡಿಬಿಡುತ್ತೀರಿ. ಅದಕ್ಕೆ ನಾನೇನು ಮಾಡಲಿ?''

ಶ್ರೀರಾಮಕೃಷ್ಣರು ಸಿಟ್ಟುಗೊಂಡು: ''ನೀನು ಮಾತ್ರ ಹಣಕ್ಕಾಗಿ ಗವರ್ನರ್ ಹತ್ತಿರಕ್ಕೆ ಹೋಗಬಹುದು, ನಾನು ಕೇಶವಸೇನನ ಹತ್ತಿರಕ್ಕೆ ಹೋಗಕೂಡದು? ಆತ ಭಗವಚ್ಚಿಂತನೆ ಮಾಡುತ್ತಾನೆ, ಭಗವನ್ನಾಮೋಚ್ಚಾರಣೆ ಮಾಡುತ್ತಾನೆ. ನೀನೇ ತಾನೆ ಹೀಗೆಲ್ಲಾ ಹೇಳೋನು: '''ಈಶ್ವರ ಮಾಯಾಜೀವಜಗತ್''—ಭಗವಂತನೇ ಈ ಜೀವ ಜಗತ್ ಎಲ್ಲಾ ಆಗಿದಾನೆ' ಅಂತ? ಹಾಗಾದರೆ ಕೇಶವನಲ್ಲೂ ಭಗವಂತ ವಾಸಿಸೋದಿಲ್ಲ?''

ಹೀಗೆಂದು ಹೇಳಿ ಪರಮಹಂಸರು ಇದ್ದಕ್ಕಿದ್ದಹಾಗೆ ಕೊಠಡಿಯನ್ನು ಬಿಟ್ಟು ಈಶಾನ್ಯ ವರಾಂಡಕ್ಕೆ ಹೊರಟುಹೋದರು. ಕ್ಯಾಪ್ಟೆನ್ ಮತ್ತು ಉಳಿದ ಭಕ್ತರು ಅವರ ಹಿಂದಿರುಗುವಿಕೆಗಾಗಿ ಎದುರುನೋಡುತ್ತ ಕೊಠಡಿಯಲ್ಲೇ ಕುಳಿತಿದಾರೆ. ಮಾಸ್ಟರ್ ಶ್ರೀರಾಮಕೃಷ್ಣರನ್ನ ಹಿಂಬಾಲಿಸಿದ. ಅದೇ ಈಶಾನ್ಯ ವರಾಂಡದಲ್ಲಿ ನರೇಂದ್ರ ಹಾಜರಾನೊಡನೆ ಮಾತುಕತೆಯಾಡುತ್ತ ಕುಳಿತಿದ್ದ. ಪರಮಹಂಸರಿಗೆ ಗೊತ್ತಿತ್ತು ಹಾಜರಾ ಸದಾ ಶುಷ್ಕ ಜ್ಞಾನ ವಿಚಾರದಲ್ಲಿ ತೊಡಗಿರುತ್ತಾನೆ ಎಂಬುದು. ಆತ ಹೇಳುತ್ತಿದ್ದ: ''ಈ ಜಗತ್ತು ಸ್ವಪ್ನದ ಹಾಗೆ ಅನಿತ್ಯ. ಪೂಜೆ, ನೈವೇದ್ಯ

ಇವೆಲ್ಲಾ ಮಾನಸಿಕ ಭ್ರಮೆ. ಸ್ವಸ್ವರೂಪಧ್ಯಾನವೇ ಜೀವನದ ಉದ್ದೇಶ.'' ಮತ್ತೆ ಹೇಳುತ್ತಿದ್ದ: ''ನಾನೇ ಅವನು (ಪರಮಾತ್ಮ)'' ಎಂಬುದಾಗಿ. ಆತ ಹೀಗೆಲ್ಲಾ ಹೇಳುತ್ತಿದ್ದರೂ ಹಣ, ಮಾನ, ಸಂಭ್ರಮ ಇವುಗಳ ಕಡೆ ದೃಷ್ಟಿಯಿಟ್ಟಿದ್ದ.

ಶ್ರೀರಾಮಕೃಷ್ಣರು ನಗುತ್ತ ಹಾಜರಾನಿಗೆ ಮತ್ತು ನರೇಂದ್ರನಿಗೆ ಹೇಳುತ್ತಿದಾರೆ: ''ಏನು ಸಮಾಚಾರ! ಏನು ಮಾತಾಡುತ್ತಿದೀರಿ?''

ನರೇಂದ್ರ ನಗುತ್ತ : ''ನಾವು ಏನೇನೊ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿದೇವೆ. ಅವು ಸಾಮಾನ್ಯರಿಗೆ ಗೊತ್ತಾಗುವ ಹಾಗಿಲ್ಲ.''

ಶ್ರೀರಾಮಕೃಷ್ಣರು ನಗುತ್ತ: ''ನೋಡು, ಶುದ್ಧ-ಜ್ಞಾನ, ಶುದ್ಧ-ಭಕ್ತಿ ಎರಡೂ ಒಂದೇ. ಶುದ್ಧ-ಜ್ಞಾನ ಎಲ್ಲಿಗೆ ಕರೆದೊಯ್ಯುತ್ತದೊ ಅಲ್ಲಿಗೇ ಶುದ್ಧ-ಭಕ್ತಿಯೂ ಕರೆದೊಯ್ಯುತ್ತದೆ. ಭಕ್ತಿಮಾರ್ಗ ಬಹಳ ಸುಲಭವಾದ ಮಾರ್ಗ.''

ನರೇಂದ್ರ ಒಂದು ಹಾಡನ್ನು ಉದ್ಧರಿಸಿದ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ!... (ಉ. ೧೪)

ನರೇಂದ್ರ ಮಾಸ್ಟರಿಗೆ ಹೇಳಿದ: ''ನಾನು ಹ್ಯಾಮಿಲ್ಟನ್ನನ ಒಂದು ಪುಸ್ತಕ ಓದುತ್ತಿದೇನೆ. ಅದರಲ್ಲಿ ಆತ ಒಂದು ಕಡೆ ಬರೆದಿದಾನೆ: 'ಎ ಲರ್ನೆಡ್ ಇಗ್ನೊರೆನ್ಸ್ ಈಸ್ ದಿ ಎಂಡ್ ಆಫ್ ಫಿಲಾಸೊಫಿ ಅಂಡ್ ದಿ ಬಿಗಿನಿಂಗ್ ಆಫ್ ರಿಲಿಜನ್' ಎಂದು.''

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ಇದರ ಅರ್ಥ ಏನು?''

ನರೇಂದ್ರ ವಿವರಿಸಿ ಹೇಳಿದ: '''ತತ್ತ್ವ ಶಾಸ್ತ್ರಗಳನ್ನೆಲ್ಲಾ ಓದಿ ಮುಗಿಸುವುದರಲ್ಲಿ ಮನುಷ್ಯ ಪಂಡಿತ ಮೂರ್ಖನಾಗುತ್ತಾನೆ. ಬಳಿಕ ಆತ ಧರ್ಮ-ಗಿರ್ಮ ಅನ್ನಲು ಆರಂಭಿಸುತ್ತಾನೆ. ಅನಂತರ ಆತನ ಭಗವದಭಿಮುಖ ಜೀವನ ಪ್ರಾರಂಭಿಸುತ್ತದೆ.' ಇದೇ ಇದರ ಅರ್ಥ.'' ಪರಮಹಂಸರು ಆನಂದದಿಂದ ಇಂಗ್ಲಿಷಿನಲ್ಲಿ ಹೇಳಿದರು: ''ಥ್ಯಾಂಕ್ ಯೂ! ಥ್ಯಾಂಕ್ ಯೂ!'' ಅಂದರೆ ''ನಿನಗೆ ವಂದನೆ! ನಿನಗೆ ವಂದನೆ'' ಎಂದು. ಪರಮಹಂಸರು ಈ ಇಂಗ್ಲಿಷು ಪದಗಳನ್ನು ಉಚ್ಚರಿಸಿದ ರೀತಿಯನ್ನು ನೋಡಿ ಭಕ್ತರೆಲ್ಲರೂ ಬಹಳವಾಗಿ ನಗುತ್ತಿದಾರೆ. ಅವರಿಗೆ ಗೊತ್ತಿತ್ತು

ಪರಮಹಂಸರ ಇಂಗ್ಲಿಷು ಪದಗಳ ಕೋಶ ಒಂದು ಹತ್ತು ಹನ್ನೆರಡಕ್ಕಿಂತ ಹೆಚ್ಚಾಗೇನಿಲ್ಲ ಎಂಬುದು.

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಭಕ್ತರಲ್ಲನೇಕರು ಮತ್ತು ನರೇಂದ್ರ ಕೂಡ ಪರಮಹಂಸರಿಂದ ಬೀಳ್ಕೊಂಡು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಹೊರಟುಹೋದರು. ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮ ವರಾಂಡಕ್ಕೆ ಹೋಗಿ ನಿಂತುಕೊಂಡು ಗಂಗೆಯ ಕಡೆ ನೋಡುತ್ತಿದಾರೆ. ಕಾಳಿ ಮತ್ತು ವಿಷ್ಣು ದೇವಾಲಯಗಳ ಅರ್ಚಕರು ಗಂಗೆಯಲ್ಲಿ ಸ್ನಾನಮಾಡುತ್ತಿದ್ದುದು ಅವರ ಕಣ್ಣಿಗೆ ಬಿತ್ತು. ದಕ್ಷಿಣೇಶ್ವರದ ಒಂದು ಯುವಕರ ಗುಂಪು ದೇವಾಲಯದ ಉದ್ಯಾನವನದಲ್ಲಿ, ಗಂಗೆಯ ದಡದಲ್ಲಿ ಅಲ್ಲಿ ಇಲ್ಲಿ ಸುತ್ತಾಡುತ್ತಿದೆ. ಯೋಚನಾಪರರಾದ ಬೇರೆ ಕೆಲವರು ಪಂಚವಟಿಯಲ್ಲಿ ಏಕಾಂತವಾಗಿ ನಡೆಯುತ್ತಿದಾರೆ.

ಈಗ ಕತ್ತಲಾಗಿದೆ. ದಾಸಿ, ಪರಮಹಂಸರ ಕೊಠಡಿಗೆ ದೀಪ ಹಚ್ಚಿ ಧೂಪ ಹಾಕಿದಳು. ಎಲ್ಲಾ ದೇವಾಲಯಗಳಲ್ಲೂ ಸಾಯಂಮಂಗಳಾರತಿ ಆರಂಭವಾಯಿತು.

ಇಂದು ಕೃಷ್ಣಪಕ್ಷದ ಪಾಡ್ಯಮಿಯಾದ್ದರಿಂದ ಚಂದ್ರೋದಯ ಬೇಗ ಆಗಿಬಿಟ್ಟಿತು. ಅದರ ಹಾಲು ಚೆಲ್ಲಿದಂಥ ಬೆಳಕು ದೇವಾಲಯಗಳನ್ನ, ಮರಗಳ ತುದಿಯನ್ನ ಬೆಳಗಲಾರಂಭಿಸಿತು. ಗಂಗೆಯ ಅಸಂಖ್ಯ ಅಲೆಗಳು ಬೆಳ್ಳಿಯ ತಗಡನ್ನು ಹೊದು ಕೊಂಡಿರುವುವೊ ಏನೊ ಎಂಬಂತೆ ಥಳಥಳಿಸ ತೊಡಗಿದುವು.

ಪರಮಹಂಸರು ಕೊಠಡಿಗೆ ಹಿಂದಿರುಗಿಬಂದು ಭಗವತಿಗೆ ಪ್ರಣಾಮ ಮಾಡಿ ಕೈತಾಳ ಹಾಕುತ್ತ ಭಗವನ್ನಾಮೋಚ್ಚಾರಣೆ ಮಾಡಲಾರಂಭಿಸಿದರು. ಅವರ ಕೊಠಡಿಯಲ್ಲಿ ಧ್ರುವ, ಪ್ರಹ್ಲಾದ, ರಾಧಾಕೃಷ್ಣ, ಕಾಳಿ ಇವರ ಪಟಗಳು, ರಾಮಪಟ್ಟಾಭಿಷೇಕದ ಪಟ ಇನ್ನೂ ಏನೇನೊ ತೂಗ ಹಾಕಿವೆ. ಪರಮಹಂಸರು ಪ್ರತಿಯೊಂದು ಪಟಕ್ಕೂ ಪ್ರಣಾಮಮಾಡಿ ಅದರದರ ನಾಮಜಪ ಮಾಡುತ್ತಿದಾರೆ. ಈಗ ಹೇಳುತ್ತಿದಾರೆ: "ಬ್ರಹ್ಮ—ಆತ್ಮ—ಭಗವಾನ್; ಭಾಗವತ—ಭಕ್ತ—ಭಗವಾನ್; ಬ್ರಹ್ಮ—ಶಕ್ತಿ, ಶಕ್ತಿ—ಬ್ರಹ್ಮ; ವೇದ, ಪುರಾಣ, ತಂತ್ರ, ಗೀತೆ, ಗಾಯತ್ರಿ." ಮತ್ತೆ ಹೇಳುತ್ತಿದಾರೆ: "ಹೇ ತಾಯೆ, ಶರಣಾಗತ, ಶರಣಾಗತ; ನಾನಲ್ಲ ನಾನಲ್ಲ, ನೀನು ನೀನು; ನಾನು ಯಂತ್ರ, ನೀನು ಯಂತ್ರಿ." ಇತ್ಯಾದಿ.

ಪರಮಹಂಸರು ಈ ರೀತಿಯಾಗಿ ಭಗವತಿಯ ಮೇಲೆ ಧ್ಯಾನಮಾಡು ತ್ತಿದ್ದಾಗ, ಉದ್ಯಾನವನದಲ್ಲಿ ಸುತ್ತಾಡುತ್ತಿದ್ದ ಕೆಲವು ಮಂದಿ ಭಕ್ತರು ಅವರ ಕೊಠಡಿಗೆ ಬಂದರು. ಪರಮಹಂಸರು ಈಗ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಹೇಳುತ್ತಿದಾರೆ: "ನರೇಂದ್ರ, ಭವನಾಥ, ರಾಖಾಲ ಇವರು ನಿತ್ಯಸಿದ್ಧರ ಗುಂಪಿಗೆ ಸೇರಿದವರು; ಈಶ್ವರಕೋಟಿಗಳು. ಇವರಿಗೆ ಸಾಧನೆ-ಗೀಧನೆ ಅನಾವಶ್ಯಕ. ನರೇಂದ್ರನ ಕಡೆ ನೋಡು. ಆತ ಯಾರನ್ನೂ ಕೇರ್ (ಲಕ್ಷ್ಯ) ಮಾಡೋದೇ ಇಲ್ಲ. ಒಂದು ದಿನ ಕ್ಯಾಪ್ಟೆನ್ನನ ಗಾಡಿಯಲ್ಲಿ ನನ್ನೊಡನೆ ಬರುತ್ತಿದ್ದ. ಒಳ್ಳೆ ಜಾಗದಲ್ಲಿ ಕುಳಿತುಕೊಳ್ಳುವ ಹಾಗೆ ಕ್ಯಾಪ್ಟೆನ್ ಆತನಿಗೆ ಹೇಳಿದ. ನರೇಂದ್ರ ಆತನ ಕಡೆ ಕಣ್ಣೆತ್ತೂ ನೋಡಲಿಲ್ಲ. ಆತ ನನ್ನನ್ನೂ ಲಕ್ಷ್ಯಮಾಡೋದಿಲ್ಲ! ನಾನು ಆತನನ್ನು ಎಲ್ಲರ ಮುಂದೆಯೂ ಹೊಗಳಿಬಿಡಬಹುದು ಎಂದು ಹೆದರಿ ತನಗೆ ಗೊತ್ತಿರುವುದನ್ನೆಲ್ಲಾ ನನ್ನೆದುರಿಗೆ ಪ್ರದರ್ಶಿಸುತ್ತಿಲ್ಲ. ಆತ ಮಾಯಾ ಮೋಹಗಳಿಂದ ನಿವೃತ್ತನಾಗಿದಾನೆ. ಆತನಿಗೆ ಯಾವ ಬಂಧನವೂ ಇಲ್ಲ. ಒಳ್ಳೆ ಪಾತ್ರೆ. ಅನೇಕ ಒಳ್ಳೆ ಗುಣಗಳಿವೆ. ಹಾಡುವುದರಲ್ಲಿ ಬಾಜಿಸುವುದ ರಲ್ಲಿ ಒಳ್ಳೆ ನಿಪುಣ. ಒಳ್ಳೆ ದೊಡ್ಡ ವಿದ್ಯಾವಂತ. ಜೊತೆಗೆ ಜಿತೇಂದ್ರಿಯ ಬೇರೆ. ಹೇಳುತ್ತಾನೆ, ವಿವಾಹವಾಗೋದಿಲ್ಲ ಎಂದು. ನರೇಂದ್ರ ಭವನಾಥ ಇವರೀರ್ವರೂ ಪರಮ ಸ್ನೇಹಿತರು—ಗಂಡಹೆಂಡಿರೊ ಏನೊ ಎಂಬಂತೆ. ನರೇಂದ್ರ ಆಗಾಗ ಇಲ್ಲಿಗೆ ಬರುತ್ತಿಲ್ಲ. ಅದು ಒಳ್ಳೆಯದೆ. ಅವನು ಹಾಗೆ ಮಾಡಿದರೆ ನಾನು ವಿಹ್ವಲನಾಗಿಬಿಡುತ್ತೇನೆ."

**೨೦ನೆ ಆಗಸ್ಟ್ ೧೮೮೩, ಶ್ರಾವಣ ಕೃಷ್ಣ ದ್ವಿತೀಯ, ಸೋಮವಾರ.**

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಸೊಳ್ಳೆ ಪರದೆಯೊಳಗೆ ಕುಳಿತು ಧ್ಯಾನಮಾಡುತ್ತಿದಾರೆ. ಘಂಟೆ ರಾತ್ರಿ ಎಂಟು. ಮಾಸ್ಟರ್ ತನ್ನ ಸ್ನೇಹಿತ ಹರಿಬಾಬುವಿನೊಡನೆ ನೆಲದ ಮೇಲೆ ಕುಳಿತಿದಾನೆ. ಹರಿ ಬಾಬುವಿಗೆ ವಯಸ್ಸು ಇಪ್ಪತ್ತೆಂಟು. ಹನ್ನೊಂದು ವರ್ಷದ ಹಿಂದೆ ಪತ್ನೀ ವಿಯೋಗವಾಯಿತು. ಮತ್ತೆ ವಿವಾಹವಾಗಿಲ್ಲ. ತನ್ನ ತಾಯಿ, ತಂದೆ, ಸೋದರ, ಸೋದರಿ ಇವರನ್ನು ಕಂಡರೆ ಅತ್ಯಂತ ಮಮತೆ. ಅವರ ಸೇವೆ ಮಾಡುತ್ತಿದಾನೆ.

ಹಾಜರಾ ಪರಮಹಂಸರೊಡನೇ ದಕ್ಷಿಣೇಶ್ವರದಲ್ಲಿ ಇದಾನೆ. ರಾಖಾ ಲನೂ ಪರಮಹಂಸರೊಡನೆ ಇರುತ್ತಿದ್ದರೂ ಒಮ್ಮೊಮ್ಮೆ ಅಧರಸೇನನ

ಮನೆಗೂ ಹೋಗಿ ಇರುತ್ತಾನೆ. ನರೇಂದ್ರ, ಭವನಾಥ, ಮಾಸ್ಟರ್, ಅಧರ-ಸೇನ, ರಾಮ, ಮನಮೋಹನ ಮತ್ತು ಇನ್ನೂ ಕೆಲವರು ವಾರಕ್ಕೊಮ್ಮೆಯಾದರೂ ಬಂದುಹೋಗುತ್ತಿದಾರೆ.

ಪರಮಹಂಸರ ಸೋದರಳಿಯ ಹೃದಯ ಇನ್ನೂ ತನ್ನ ಊರಿನಲ್ಲೇ ಇದಾನೆ. ಪರಮಹಂಸರು ಆತನ ಸಂಬಂಧವಾಗಿ ಬಹಳವಾಗಿ ಚಿಂತಿಸುತ್ತಿದಾರೆ. ಪರಮಹಂಸರ ಭಕ್ತರಲ್ಲಿ ಒಬ್ಬ ಆತನಿಗೆ ಸ್ವಲ್ಪ ದುಡ್ಡು ಕಳುಹಿಸಿದಾನೆ. ಆದರೆ ಅದು ಪರಮಹಂಸರಿಗೆ ಗೊತ್ತಿರಲಿಲ್ಲ.

ಪರಮಹಂಸರು ಸೊಳ್ಳೆ ಪರದೆಯಿಂದ ಹೊರಕ್ಕೆ ಬಂದೊಡನೆ ಭಕ್ತರೆಲ್ಲರೂ ಅವರಿಗೆ ಪ್ರಣಾಮಮಾಡಿದರು. ಸೊಳ್ಳೆ ಪರದೆಯನ್ನು ಮೇಲಕ್ಕೆ ಕಟ್ಟಿದ ಮೇಲೆ ಪರಮಹಂಸರು ಮತ್ತೆ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಸೊಳ್ಳೆ ಪರದೆಯೊಳಗೆ ಕುಳಿತು ಧ್ಯಾನಮಾಡುತ್ತಿದ್ದೆ. ಭಾವನೆ ಬಂತು, ಧ್ಯಾನ ಎಂಬುದು ಇನ್ನು ಬೇರೆ ಏನೂ ಅಲ್ಲ, ಯಾವುದಾದರು ಒಂದು ರೂಪ ಕಲ್ಪಿಸಿಕೊಂಡು ಅದರಮೇಲೆ ಚಿಂತನೆಮಾಡುವುದು ಮಾತ್ರ ಎಂಬುದಾಗಿ. ಆದ್ದರಿಂದ ಇದು ನನಗೆ ರುಚಿಸಲಿಲ್ಲ. ಭಗವಂತ ಇದ್ದಕ್ಕಿದ್ದ ಹಾಗೆ ತನ್ನ ದರ್ಶನಕೊಟ್ಟುಬಿಟ್ಟದ್ದೇ ಆದರೆ ಆಗ ತುಷ್ಟಿ. ಮತ್ತೆ ನನಗೆ ನಾನೇ ಹೇಳಿಕೊಂಡೆ: 'ಧ್ಯಾನ ಮಾಡುತ್ತಾನಲ್ಲ, ಆತ ಯಾರು? ಯಾರ ಮೇಲೆ ತಾನೆ ಧ್ಯಾನ ಮಾಡುವುದು?' "

ಮಾಸ್ಟರ್: "ನೀವು ಹೇಳಿದೀರಿ, ಭಗವಂತನೇ ಜೀವ ಜಗತ್ತು ಎಲ್ಲವೂ ಆಗಿದಾನೆ ಎಂಬುದಾಗಿ. ಆದ್ದರಿಂದ ಧ್ಯಾನಮಾಡುವವನೂ ಭಗವಂತನೆ."

ಶ್ರೀರಾಮಕೃಷ್ಣರು: "ಭಗವಂತ ಧ್ಯಾನಮಾಡಿಸದಿದ್ದರೆ ಧ್ಯಾನ ಮಾಡಲಾಗೋದಿಲ್ಲ. ಆತ ಮಾಡಿಸಿದಾಗ ಮಾತ್ರ ಸಾಧ್ಯವಾಗುತ್ತದೆ. ನೀನು ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು, ನಿಜ. ನಿಮ್ಮಲ್ಲಿ 'ಅಹಂ' ಎಂಬುದು ಇಲ್ಲವೇ ಇಲ್ಲ. ಆದ್ದರಿಂದ ನಿಮಗೆ ಹಾಗನಿಸುತ್ತದೆ. ಯಾರಲ್ಲಿ 'ಅಹಂ' ಎಂಬುದು ಇಲ್ಲವೇ ಇಲ್ಲವೊ ಆತನಿಗೆ ಹೀಗೇ ಅನಿಸುತ್ತದೆ."

ಶ್ರೀರಾಮಕೃಷ್ಣರು: "'ನಾನು ದಾಸ, ನಾನು ಸೇವಕ' ಎಂಬ

ಇದೊಂದಿಷ್ಟು 'ಅಹಂ' ಇರುವುದು ಒಳ್ಳೆಯದು. ಎಲ್ಲಿಯವರೆಗೆ ಮನುಷ್ಯನಿಗೆ ಎಲ್ಲವನ್ನೂ ಮಾಡುತ್ತಿರುವವನು ತಾನು ಎಂಬ ಭಾವನೆ ಇರುವುದೊ ಅಲ್ಲಿಯವರೆಗೆ ಆತನಿಗೆ ತಾನು ದಾಸ, ಭಗವಂತ ಪ್ರಭು ಎಂಬ ಭಾವನೆ ಇರುವುದು ಒಳ್ಳೆಯದು. ಎಲ್ಲವನ್ನೂ ಮಾಡುತ್ತಿರುವವನು ತಾನೇ ಎಂಬ ಭಾವನೆ ಇರುವವರೆಗೆ ಸೇವ್ಯ ಸೇವಕ ಭಾವದಿಂದಿರುವುದೇ ಒಳ್ಳೆಯದು."

ಮಾಸ್ಟರ್ ಯಾವಾಗಲೂ ಪರಬ್ರಹ್ಮನ ಮೇಲೆ ಚಿಂತಿಸುತ್ತಿರುತ್ತಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಬ್ರಹ್ಮ ಆಕಾಶದ ಹಾಗೆ. ಆತನಲ್ಲಿ ಯಾವ ವಿಕಾರವೂ ಇಲ್ಲ. ಆದರೆ ಶಕ್ತಿಯ ದೆಸೆಯಿಂದ ಆತ ನಾನಾ ರೂಪ ಧರಿಸಿದಾನೆ. ಮತ್ತೆ ಬ್ರಹ್ಮ ಯಾವ ಬಣ್ಣವೂ ಇಲ್ಲದ ಬೆಂಕಿಯ ಹಾಗೆ. ಬೆಂಕಿಗೆ ಬಿಳಿ ಬಣ್ಣ ಹಾಕಿದರೆ ಬೆಳ್ಳಗೆ, ಕೆಂಪು ಬಣ್ಣ ಹಾಕಿದರೆ ಕೆಂಪಗೆ, ಕಪ್ಪು ಬಣ್ಣ ಹಾಕಿದರೆ ಕಪ್ಪಗೆ ಕಾಣಿಸಿಕೊಳ್ಳುತ್ತದೆ. ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳೂ ಶಕ್ತಿಗೆ ಸೇರಿದವು. ಬ್ರಹ್ಮ ಇವು ಮೂರಕ್ಕೂ ಅತೀತ. ಆತ ಏನು ಎಂಬುದನ್ನು ಮಾತಿನಿಂದ ಹೇಳಲಾಗೋದಿಲ್ಲ. ಆತ ವಾಕ್ಯಗಳಿಗೆ ಅತೀತ. 'ನೇತಿ, ನೇತಿ' ಅಂತ ವಿಚಾರ ಮಾಡಿ ಕೊನೆಗೆ ಏನು ಉಳಿದುಕೊಳ್ಳುವುದೊ ಮತ್ತೆ ಯಾವುದು ಆನಂದಸ್ವರೂಪವೊ ಅದೇ ಬ್ರಹ್ಮ.

"ಒಬ್ಬ ಹುಡುಗಿಯ ಗಂಡ ಮಾವನ ಮನೆಗೆ ಬಂದು ಬೈಠಕ್‌ಖಾನೆಯಲ್ಲಿ ತನ್ನ ಸಮವಯಸ್ಕ ಗೆಳೆಯರೊಡನೆ ಕುಳಿತಿದಾನೆ ಅಂತ ಇಟ್ಟುಕೊ. ಹುಡುಗಿಯೂ, ಆಕೆಯ ಗೆಳತಿಯರೂ ಕಿಟಕಿಯಿಂದ ಅವರ ಕಡೆ ನೋಡುತ್ತಿದಾರೆ. ಆ ಹುಡುಗಿಯ ಗೆಳತಿಯರಿಗೆ ಅಲ್ಲಿ ಕುಳಿತಿರುವವರಲ್ಲಿ ಆಕೆಯ ಪತಿ ಯಾರೆಂಬುದು ಗೊತ್ತಿಲ್ಲ. ಆದ್ದರಿಂದ ಅವರು ಒಬ್ಬನನ್ನು ತೋರಿಸಿ ಆಕೆಯನ್ನು ಕೇಳುತ್ತಾರೆ: 'ಆತ ನಿನ್ನ ಪತಿಯೆ?' ಆಕೆ ನಗುತ್ತ ಹೇಳುತ್ತಾಳೆ: 'ಅಲ್ಲ.' ಗೆಳತಿಯರು ಇನ್ನೊಬ್ಬನನ್ನು ತೋರಿಸಿ ಅದೇ ಪ್ರಶ್ನೆಯನ್ನು ಹಾಕುತ್ತಾರೆ. ಮತ್ತೆ ಆಕೆ ಹೇಳುತ್ತಾಳೆ: 'ಅಲ್ಲ.' ಅವರು ಮೂರನೆಯವನನ್ನು ತೋರಿಸಿದಾಗಲೂ ಅವರಿಗೆ ಅದೇ ಉತ್ತರ ದೊರೆಯುತ್ತದೆ. ಕೊನೆಗೆ ಆಕೆಯ ಪತಿಯನ್ನು ತೋರಿಸಿ ಕೇಳುತ್ತಾರೆ: 'ಆತ ನಿನ್ನ ಪತಿಯೆ?' ಆಗ ಆಕೆ 'ಹೌದು' ಅಂತಲೂ ಹೇಳುವುದಿಲ್ಲ, 'ಅಲ್ಲ'

ಅಂತಲೂ ಹೇಳುವುದಿಲ್ಲ, ನಸುನಗೆ ನಕ್ಕು ಸುಮ್ಮನಿದ್ದುಬಿಡುತ್ತಾಳೆ. ಆಗ ಗೆಳತಿಯರಿಗೆ ಗೊತ್ತಾಗುತ್ತದೆ, ಆತನೇ ಆಕೆಯ ಪತಿ ಎಂಬುದಾಗಿ.

"ನಿಜವಾದ ಬ್ರಹ್ಮಜ್ಞಾನ ದೊರೆಯಿತು ಎಂದರೆ ಸಾಧಕ ಮೂಕನಾಗಿಬಿಡುತ್ತಾನೆ.

(ಮಾಸ್ಟರಿಗೆ) "ಹಾಗಾದರೆ, ನಾನೇಕೆ ಇಷ್ಟೊಂದು ಮಾತಾಡುತ್ತೇನೆ?"

ಮಾಸ್ಟರ್: "ಭಕ್ತರಲ್ಲಿ ಆತ್ಮಜಾಗೃತಿಯನ್ನುಂಟುಮಾಡಲು ನೀವು ಮಾತಾಡುತ್ತಿದೀರಿ. ನೀವು ಒಮ್ಮೆ ಹೇಳಿದಿರಿ: 'ಕಾದ ತುಪ್ಪಕ್ಕೆ ಹಸಿಯ ಗೋಧಿ ಹಪ್ಪಳ ಹಾಕಿದರೆ ಅದು ಮತ್ತೆ "ಚರ, ಚರ" ಅಂತ ಶಬ್ದ ಮಾಡುತ್ತೆ' ಎಂಬುದಾಗಿ."

ಈಗ ಪರಮಹಂಸರು ಹಾಜರಾನ ಸಂಬಂಧವಾಗಿ ಮಾಸ್ಟರೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಒಳ್ಳೆಯ ಮನುಷ್ಯನ ಸ್ವಭಾವ ಎಂಥದು ಗೊತ್ತೆ? ಆತ ಯಾರಿಗೂ ತೊಂದರೆ ಕೊಡುವುದಿಲ್ಲ, ಕಿರುಕುಳ ಕೊಡುವುದಿಲ್ಲ. ಕೆಲವರ ಸ್ವಭಾವ ಅಂಥದು, ಅವರು ಪರರ ಮನೆಗೆ ಔತಣಕ್ಕೆ ಹೋದರೆ, ಅವರಿಗೇ ಒಂದು ಪ್ರತ್ಯೇಕ ಸ್ಥಳ ಬೇಕು. ನಿಜವಾದ ಭಕ್ತ ಯಾವಾಗಲೂ ತಪ್ಪು ಹೆಜ್ಜೆ ಇಡುವುದಿಲ್ಲ, ಬೇಕೂ ಅಂತ ಯಾರಿಗೂ ಕಷ್ಟ ಕೊಡುವುದಿಲ್ಲ.

"ಕೆಟ್ಟವರ ಸಹವಾಸ ಒಳ್ಳೆಯದಲ್ಲ. ಅವರಿಂದ ಬಹಳ ದೂರದಲ್ಲೇ ಇದ್ದು ತನ್ನನ್ನು ತಾನು ರಕ್ಷಿಸಿಕೊಂಡುಬಿಡಬೇಕು. (ಮಾಸ್ಟರಿಗೆ) ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು. ಕೆಟ್ಟವರ ಸಹವಾಸದಿಂದ ಮನಸ್ಸು ಬಹಳ ಕೆಳಮಟ್ಟಕ್ಕೆ ಇಳಿದುಬಿಡುತ್ತದೆ. ಆದರೆ ನೀವು ಹೇಳಿದೀರಿ, ವೀರರ ಮಾತು ಪ್ರತ್ಯೇಕ ಎಂಬುದಾಗಿ."

ಶ್ರೀರಾಮಕೃಷ್ಣರು: "ಹೇಗೆ ಅದು ಪ್ರತ್ಯೇಕ?"

ಮಾಸ್ಟರ್: "ಉರಿ 'ಮಿಣುಕು, ಮಿಣುಕು' ಅನ್ನುತ್ತಿರುವಾಗ ಅದಕ್ಕೆ ಒಂದು ಚಿಕ್ಕ ಕಡ್ಡಿ ಹಾಕಿದರೂ ಅದು ಆರಿಹೋಗಿಬಿಡುತ್ತದೆ. ಆದರೆ ಅದು ದೊಡ್ಡದಾಗಿ ಧಗಧಗಿಸಿ ಉರಿಯುತ್ತಿರುವಾಗ ಅದಕ್ಕೆ ಬಾಳೆಗಿಡ

ಹಾಕಿದರೂ ಏನೂ ಆಗದು. ಆ ಗಿಡ ಕೂಡ ಸುಟ್ಟು ಬೂದಿಯಾಗಿ ಬಿಡುತ್ತದೆ.''

ಪರಮಹಂಸರು ಮಾಸ್ಟರನ್ನು ಆತನ ಸ್ನೇಹಿತ ಹರಿಬಾಬುವಿನ ಸಂಬಂಧವಾಗಿ ಕೇಳುತ್ತಿದಾರೆ.

ಮಾಸ್ಟರ್: ''ಈತ ನಿಮ್ಮ ದರ್ಶನಮಾಡಲು ಬಂದಿದಾನೆ. ಈತನಿಗೆ ಪತ್ನೀವಿಯೋಗವಾಗಿ ಬಹಳ ಕಾಲವೇ ಆಗಿಬಿಟ್ಟದೆ.''

ಶ್ರೀರಾಮಕೃಷ್ಣರು ಹರಿಗೆ: ''ನೀನು ಏನು ಕೆಲಸ ಮಾಡಿಕೊಂಡಿದೀಯೆ?''

ಮಾಸ್ಟರ್: ''ನಿರ್ದಿಷ್ಟವಾದ್ದು ಏನೂ ಇಲ್ಲ. ಆದರೆ ಮನೆಯಲ್ಲಿ ಸೋದರ ಸೋದರಿ ತಂದೆ ತಾಯಿ ಇವರ ಸೇವೆಯನ್ನು ಬಹಳ ಚೆನ್ನಾಗಿ ಮಾಡುತ್ತಿದಾನೆ.''

ಶ್ರೀರಾಮಕೃಷ್ಣರು: ''ಇದೇಕೆ ಹೀಗೆ? ನೀನು ಕುಂಬಳಕಾಯಿ ಒಡೆಯೋ ಮನೆಯ ಮುದುಕಪ್ಪನಾಗಿಬಿಟ್ಟದೀಯಲ್ಲ. ನೀನು ಇಲ್ಲ ಸಂಸಾರಿಗೆ ಸಂಸಾರಿಯೂ ಅಲ್ಲ, ಭಗವದ್ಭಕ್ತನಿಗೆ ಭಗವದ್ಭಕ್ತನೂ ಅಲ್ಲ, ಹೀಗಾಗಿಬಿಟ್ಟದೀಯಲ್ಲ. ಇದು ಒಳ್ಳೆಯದಲ್ಲ. ಯಾವ ಕೆಲಸಕಾರ್ಯವೂ ಇಲ್ಲದೆ ಮನೆಯ ಹೊರ ಜಗಲಿಯಲ್ಲಿ ಗುಡುಗುಡಿ ಸೇದುತ್ತ, ಹಗಲಿರುಳೆನ್ನದೆ ಮಕ್ಕಳೊಡನೆ ಆಟವಾಡುತ್ತ ಬರಿದೆ ಕಾಲ ಕಳೆಯುವ ಮನುಷ್ಯನನ್ನು ನೀನು ಅನೇಕ ಮನೆಗಳಲ್ಲಿ ನೋಡಿರಬಹುದು. ಆತ ಅಪರೂಪಕ್ಕೆ ಹೋಗಿ ಕುಂಬಳಕಾಯಿ ಒಡೆದುಕೊಟ್ಟು ಬರುತ್ತಾನೆ; ಏಕೆಂದರೆ ಹೆಂಗಸರು ಕುಂಬಳಕಾಯಿ ಒಡೆಯಕೂಡದಾದುದರಿಂದ ಅವರು ಮಕ್ಕಳ ಮೂಲಕ ಆತನನ್ನು ಕರಸಿಕೊಂಡು ಆ ಕೆಲಸ ಮಾಡಿಸಿಕೊಳ್ಳುತ್ತಾರೆ. ಆತನ ಉಪಯೋಗ ಅದಷ್ಟು ಕೆಲಸಕ್ಕೆ ಮಾತ್ರ. ಆದ್ದರಿಂದ ಆತನಿಗೆ ಅಡ್ಡ ಹೆಸರು ಬಂದಿದೆ: 'ಕುಂಬಳಕಾಯಿ ಒಡೆಯೋ ಮನೆಯ ಮುದುಕಪ್ಪ' ಅಂತ.

''ನೀನು ಇದನ್ನೂ ಮಾಡಬೇಕು ಅದನ್ನೂ ಮಾಡಬೇಕು. ಭಗವಂತನ ಪಾದಪದ್ಮಗಳಲ್ಲಿ ಮನಸ್ಸಿಟ್ಟು ಸಾಂಸಾರಿಕ ಕೆಲಸಕಾರ್ಯಗಳನ್ನು ಮಾಡು. ನೀನು ಏಕಾಂತದಲ್ಲಿರುವಾಗ ಶ್ರೀಮದ್ಭಾಗವತ, ಶ್ರೀ ಚೈತನ್ಯ ಚರಿತಾಮೃತ ಇವೇ ಮೊದಲಾದ ಭಕ್ತಿ ಶಾಸ್ತ್ರಗಳನ್ನು ಓದು.''

ಘಂಟೆ ರಾತ್ರಿ ಹತ್ತು. ಪರಮಹಂಸರು ಸ್ವಲ್ಪ ರವೆಪಾಯಸ ಒಂದೆರಡು ಪೂರಿಯನ್ನು ಮಾತ್ರ ತೆಗೆದುಕೊಂಡರು. ಸ್ವಲ್ಪ ಹೊತ್ತಾದ

ನಂತರ ಮಾಸ್ಟರ್ ಮತ್ತು ಆತನ ಸ್ನೇಹಿತ ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಂಡರು.

೭ನೆ ಸೆಪ್ಟೆಂಬರ್ ೧೮೮೩, ಭಾದ್ರಪದ ಶುಕ್ಲ ಷಷ್ಠಿ, ಶುಕ್ರವಾರ.

ಶ್ರೀರಾಮಕೃಷ್ಣರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತು ಮಾಸ್ಟರೊಡನೆ ಮಾತಾಡುತ್ತಿದಾರೆ. ಅಲ್ಲಿ ಇನ್ನು ಬೇರೆ ಯಾರೂ ಇಲ್ಲ. ಘಂಟೆ ರಾತ್ರಿ ಏಳೂವರೆ.

ಶ್ರೀರಾಮಕೃಷ್ಣರು: "ಅಂದು ನಾನು ಕಲ್ಕತ್ತಕ್ಕೆ ಹೋಗಿದ್ದೆ. ಗಾಡಿಯಲ್ಲಿ ಕುಳಿತು ಹಾಗೇ ಮುಂದುವರಿಯುತ್ತ ಇದ್ದಾಗ ನೋಡುತ್ತೇನೆ, ದಾರಿಯಲ್ಲಿ ಸಿಕ್ಕಿದ ಪ್ರತಿಯೊಬ್ಬರ ದೃಷ್ಟಿಯೂ ಪ್ರಾಪಂಚಿಕ ವಸ್ತುಗಳ ಕಡೆಗೇ ಹರಿಯುತ್ತಿದೆ. ಪ್ರತಿಯೊಬ್ಬರಿಗೂ ಹೊಟ್ಟೆಯ ಚಿಂತೆಯೇ; ಹೊಟ್ಟೆ ಪಾಡಿಗಾಗಿ ಸುಮ್ಮನೆ ಧಾವಿಸುತ್ತಿದಾರೆ. ಅವರ ಮನಸ್ಸೆಲ್ಲಾ ಕಾಮ-ಕಾಂಚನದಲ್ಲೇ ನಿರತವಾಗಿಬಿಟ್ಟಿದೆ. ಆದರೆ ಎಲ್ಲೋ ಒಬ್ಬಿಬ್ಬರಿಗೆ ಮಾತ್ರ ಊರ್ಧ್ವದೃಷ್ಟಿ ಇತ್ತು—ಭಗವಂತನ ಕಡೆಗೆ ಮನಸ್ಸು ಹರಿಯುತ್ತಿತ್ತು."

ಮಾಸ್ಟರ್: "ಈಗಿನ ಕಾಲದಲ್ಲಂತೂ ಹೊಟ್ಟೆಯ ಚಿಂತೆ ಅಧಿಕವಾಗಿಬಿಟ್ಟಿದೆ. ಇಂಗ್ಲಿಷಿನವರನ್ನು ಅನುಸರಿಸಲು ಪ್ರಯತ್ನಿಸಿ ಜನರ ಮನಸ್ಸು ಹೆಚ್ಚು ಹೆಚ್ಚು ವಿಲಾಸದ ಕಡೆ ಹರಿಯುತ್ತಿದೆ; ಅದಕ್ಕಾಗಿ ಆವಶ್ಯಕತೆಗಳೂ ಅಧಿಕವಾಗಿಬಿಡುತ್ತಿವೆ."

ಶ್ರೀರಾಮಕೃಷ್ಣರು: "ಭಗವಂತನ ಸಂಬಂಧವಾಗಿ ಇಂಗ್ಲಿಷಿನವರ ಭಾವನೆ ಏನು?"

ಮಾಸ್ಟರ್: "ಅವರು ನಿರಾಕಾರವಾದಿಗಳು."

ಶ್ರೀರಾಮಕೃಷ್ಣರು: "ನಮ್ಮಲ್ಲಿಯೂ ಅಂಥವರಿದಾರೆ."

ಸ್ವಲ್ಪ ಹೊತ್ತಿನಿಂದ ಇಬ್ಬರೂ ಸುಮ್ಮನೆ ಕುಳಿತುಕೊಂಡಿದಾರೆ. ಈಗ ಪರಮಹಂಸರು ತಮ್ಮ ಬ್ರಹ್ಮಜ್ಞಾನಾವಸ್ಥೆಯ ಸಂಬಂಧವಾಗಿ ವರ್ಣಿಸಲು ಆರಂಭಿಸಿದಾರೆ.

ಶ್ರೀರಾಮಕೃಷ್ಣರು: "ಒಂದು ದಿನ ನನಗೆ ಭೇದರಹಿತನಾದ ಅಖಂಡ ಚೈತನ್ಯನ ದರ್ಶನವಾಯಿತು. ಮೊದಲು ಭಗವಂತ ನನಗೆ ದರ್ಶನ ಮಾಡಿಸಿದ, ಅನೇಕ ಮಂದಿ ಮನುಷ್ಯರು, ಜೀವ, ಜಂತು, ಒಂದು ಕಡೆ ಇರುವುದನ್ನ. ಆ ಗುಂಪಿನಲ್ಲಿ ಸಾಹುಕಾರರು, ಇಂಗ್ಲಿಷಿನವರು, ಮುಸಲ್ಮಾನರು, ನಾನು, ಜಾಡಮಾಲಿಗಳು, ನಾಯಿಗಳು, ಕೈಯಲ್ಲಿ ಒಂದು ಮಣ್ಣಿನ

ತಟ್ಟೆ ತುಂಬ ಅನ್ನವನ್ನು ಹಿಡಿದಿದ್ದ ಒಬ್ಬ ಗಡ್ಡ ಬೆಳೆದ ಮುಸಲ್ಮಾನ ಎಲ್ಲರೂ ಇದ್ದೆವು. ಆ ಮುಸಲ್ಮಾನ ಎಲ್ಲರ ಬಾಯಿಗೂ ಕೆಲವು ಅನ್ನದ ಅಗುಳನ್ನು ಹಾಕಿದ. ನಾನೂ ಅದನ್ನು ತಿಂದೆ.

"ಇನ್ನೊಂದು ದಿನ ಭಗವಂತ ತೋರಿಸಿದ, ಮಲ, ಮೂತ್ರ, ಅನ್ನ ಕಾಯಿಪಲ್ಯ, ವಿವಿಧ ಭಕ್ಷ್ಯಭೋಜ್ಯ ಎಲ್ಲ ಸುತ್ತಲೂ ಇರುವ ಹಾಗೆ. ಇದ್ದಕ್ಕಿದ್ದಹಾಗೆ ಜೀವಾತ್ಮ ನನ್ನ ಶರೀರದಿಂದ ಹೊರಕ್ಕೆ ಬಂದು ಜ್ವಾಲೆಯ ರೂಪ ತಾಳಿ ಎಲ್ಲವನ್ನೂ ರುಚಿ ನೋಡಲಾರಂಭಿಸಿದ—ನಾಲಗೆ ನೀಡಿ ನೀಡಿ ಎಲ್ಲವನ್ನೂ ರುಚಿ ನೋಡುತ್ತಿರುವನೊ ಏನೊ ಎಂಬಂತೆ ಕಂಡಿತು. ಮಲ ಮೂತ್ರಗಳನ್ನೂ ರುಚಿ ನೋಡಿಬಿಟ್ಟ. ಎಲ್ಲವೂ ಒಂದೇ, ಅಭೇದ ಎಂಬುದನ್ನು ತೋರಿಸಿಬಿಟ್ಟ.

"ಮತ್ತೊಂದು ದಿನ ಭಗವಂತ ನನಗೆ ತೋರಿಸಿದ, ಇಲ್ಲಿಗೆ ಅನೇಕ ಮಂದಿ ಭಕ್ತರು ಬರುವುದನ್ನ—ನನ್ನ ಪರಮ ಶಿಷ್ಯರನ್ನೂ; ನನ್ನ ಅಂತ-ರಂಗ ಭಕ್ತರನ್ನೂ. ಬಳಿಕ ಸಾಯಂಮಂಗಳಾರತಿಯ ಗಂಟೆ, ಜಾಗಟೆ ಮೊದಲಾದುವುಗಳ ಶಬ್ದ ಕೇಳಿಬಂದೊಡನೆ ಕುಟೀರದ ಮೇಲಕ್ಕೆ ಹತ್ತಿ ವ್ಯಾಕುಲಹೃದಯದಿಂದ ಕೂಗುತ್ತಿದ್ದೆ: 'ಏನ್ರೋ, ಎಲ್ಲಿದೀರ್ರೋ ನೀವೆಲ್ಲಾ? ಬೇಗ ಬನ್ರೋ! ನಿಮ್ಮನ್ನು ನೋಡಬೇಕು ಎಂಬುದಾಗಿ ಪ್ರಾಣ ಸುಮ್ಮನೆ ಚಟಪಟಗುಟ್ಟುತ್ತಿದೆ ಕಣ್ರೋ!'

(ಮಾಸ್ಟರಿಗೆ) "ಒಳ್ಳೇದು, ನನ್ನ ಈ ಅಲೌಕಿಕ ದರ್ಶನಗಳ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ನೀವು ಭಗವಂತನ ವಿಲಾಸಸ್ಥಾನ. ನನ್ನ ಅನುಭವಕ್ಕೆ ಬಂದಿದೆ, ನೀವು ಯಂತ್ರ ಭಗವಂತ ಯಂತ್ರಿಗ ಎಂಬುದಾಗಿ. ಭಗವಂತ ಉಳಿದವರನ್ನು ಯಂತ್ರಗಳಿಂದ ಸೃಷ್ಟಿಸಿದ್ದರೆ, ನಿಮ್ಮನ್ನು ತನ್ನ ಸ್ವಂತ ಹಸ್ತಗಳಿಂದಲೇ ನಿರ್ಮಿಸಿದಾನೆ."

ಶ್ರೀರಾಮಕೃಷ್ಣರು: "ನೋಡು, ಹಾಜರಾ ಹೇಳುತ್ತಾನೆ, ಭಗವದ್ದರ್ಶನವಾದಮೇಲೆ ಷಡೈಶ್ವರ್ಯ ದೊರೆಯುತ್ತೆ ಎಂಬುದಾಗಿ."

ಮಾಸ್ಟರ್: "ಯಾರಿಗೆ ಶುದ್ಧಭಕ್ತಿ ಬೇಕಾಗಿದೆಯೊ ಅವರಿಗೆ ಷಡೈಶ್ವರ್ಯ ಬೇಕೆನಿಸುವುದಿಲ್ಲ."

ಶ್ರೀರಾಮಕೃಷ್ಣರು: "ಬಹುಶಃ ಹಾಜರಾ ಹಿಂದಿನ ಜನ್ಮದಲ್ಲಿ ಒಬ್ಬ ದರಿದ್ರನಾಗಿದ್ದಿರಬೇಕು. ಅದಕ್ಕಾಗಿ ಆತ ಷಡೈಶ್ವರ್ಯ ನೋಡ

ಬೇಕು. ಅಂತ ಅಷ್ಟೊಂದು ಇಚ್ಛೆಪಡುತ್ತಿದಾನೆ. ನಾನು ಅಡಿಗೆಯವ ನೊಡನೆ ಏನೇನು ಮಾತುಕತೆಯಾಡುತ್ತೇನೆ ಎಂಬುದನ್ನು ತಿಳಿದುಕೊಳ್ಳಲು ಆತನಿಗೆ ಇಚ್ಛೆ. ಆತ ನನಗೆ ಹೇಳುತ್ತಾನೆ: 'ನಿಮಗೆ ಏನಾದರೂ ಬೇಕಾದರೆ ಅಡಿಗೆಯವನಿಗೆ ಏಕೆ ತಿಳಿಸಲು ಹೋಗಬೇಕು? ನಾನು ಖಜಾಂಚಿಗೆ ಹೇಳಿ ನಿಮಗೆ ಬೇಕಾದ್ದೆಲ್ಲವನ್ನೂ ಕೊಡಿಸಿಕೊಟ್ಟುಬಿಡುತ್ತೇನೆ.' (ಮಾಸ್ಟರ್ ಗಟ್ಟಿಯಾಗಿ ನಗುತ್ತಾನೆ.) ಆತ ಆ ರೀತಿಯಾಗೆಲ್ಲ ಹೇಳುತ್ತಲೇ ಇರುತ್ತಾನೆ, ನಾನು ಸುಮ್ಮನೆ ಇದ್ದುಬಿಡುತ್ತಲೇ ಇರುತ್ತೇನೆ."

ಮಾಸ್ಟರ್: "ನೀವು ಅನೇಕ ಸಲ ಹೇಳಿದೀರಿ, ಯಾರು ನಿಜವಾದ ಭಕ್ತನೊ ಆತನಿಗೆ ಭಗವಂತನ ಐಶ್ವರ್ಯ ನೋಡಬೇಕು ಅಂತ ಅನಿಸೋದಿಲ್ಲ ಎಂಬುದಾಗಿ. ಆತ ಭಗವಂತನನ್ನು ಗೋಪಾಲ ಭಾವದಿಂದ ನೋಡಲು ಇಚ್ಛೆಪಡುತ್ತಾನೆ. ಮೊದಮೊದಲು ಭಗವಂತ ಸೂಜಿಗಲ್ಲು, ಭಕ್ತ ಸೂಜಿ ಆಗಿರುತ್ತಾನೆ. ಆದರೆ ಕೊನೆಯಲ್ಲಿ ಭಕ್ತನೇ ಸೂಜಿಗಲ್ಲು, ಭಗವಂತ ಸೂಜಿ ಆಗಿಬಿಡುತ್ತಾನೆ—ಎಂದರೆ ಭಗವಂತ ಭಕ್ತನ ಬಳಿಯಲ್ಲಿ ಒಬ್ಬ ಸಣ್ಣ ವ್ಯಕ್ತಿ ಆಗಿಬಿಡುತ್ತಾನೆ."

ಶ್ರೀರಾಮಕೃಷ್ಣರು: "ಹೌದು, ಇದು ಅರುಣೋದಯ ಕಾಲದ ಸೂರ್ಯನ ಹಾಗೆ. ಆತನನ್ನು ಸುಲಭವಾಗಿ ಕಣ್ಣು ಬಿಟ್ಟು ನೋಡಬಹುದು. ಆಗ ಆತನ ಬೆಳಕು ಕಣ್ಣನ್ನು ಕೋರೈಸುವುದಿಲ್ಲ; ಅದಕ್ಕೆ ಬದಲು ಅವಕ್ಕೆ ತೃಪ್ತಿಯನ್ನು ತರುತ್ತದೆ. ಭಗವಂತ ಭಕ್ತನ ಸಲುವಾಗಿ ಸೌಮ್ಯಭಾವವನ್ನು ಆರೋಪಿಸಿಕೊಳ್ಳುತ್ತಾನೆ. ತನ್ನ ಐಶ್ವರ್ಯಗಳನ್ನೆಲ್ಲಾ ತ್ಯಜಿಸಿ ಭಕ್ತನನ್ನು ಸಮೀಪಿಸುತ್ತಾನೆ."

ಇಬ್ಬರೂ ಸ್ವಲ್ಪ ಹೊತ್ತಿನಿಂದ ಹಾಗೇ ಕುಳಿತುಕೊಂಡಿದಾರೆ.

ಮಾಸ್ಟರ್: "ನಿಮ್ಮ ಈ ದರ್ಶನಗಳೆಲ್ಲ ಸತ್ಯವೇಕೆ ಅಲ್ಲ? ಅವು ಸತ್ಯವಲ್ಲದಿದ್ದರೆ ಈ ಜಗತ್ತು ಇನ್ನೂ ಹೆಚ್ಚಿನ ರೀತಿಯಲ್ಲಿ ಅಸತ್ಯ; ಏಕೆಂದರೆ ಈ ಎರಡು ವಿಧದ ಅನುಭವಗಳಿಗೂ ಕೇವಲ ಒಂದು ಮನಸ್ಸೇ ಕಾರಣ. ಅತೀಂದ್ರಿಯ ದರ್ಶನಗಳೆಲ್ಲ ಶುದ್ಧ ಮನಸ್ಸಿಗೆ ಗೋಚರವಾಗುತ್ತವೆ; ಈ ಜಗತ್ತಿನ ವಸ್ತುಗಳೆಲ್ಲ ಸಾಮಾನ್ಯ ಮನಸ್ಸಿಗೆ ಗೋಚರವಾಗುತ್ತವೆ."

ಶ್ರೀರಾಮಕೃಷ್ಣರು: "ಈಗ ಕಾಣುತ್ತಾ ಇದೆ 'ಅನಿತ್ಯ' ಎಂದರೆ ಏನು ಎಂಬುದನ್ನು ನೀನು ಚೆನ್ನಾಗಿ ಗ್ರಹಿಸಿಬಿಟ್ಟಿರುವ ಹಾಗೆ. ಒಳ್ಳೇದು ನಿನ್ನ ದೃಷ್ಟಿಯಿಂದ ಹಾಜರಾ ಹೇಗೆ?"

ಮಾಸ್ಟರ್: "ಆತ ಒಂದು ವಿಧದ ವ್ಯಕ್ತಿ." (ಶ್ರೀರಾಮಕೃಷ್ಣರು ನಗುತ್ತಿದಾರೆ.)

ಶ್ರೀರಾಮಕೃಷ್ಣರು: "ಒಳ್ಳೇದು, ನನ್ನ ಹಾಗೆ ಬೇರೆ ಯಾರಾದರೂ ಇದಾರೆಯೆ?"

ಮಾಸ್ಟರ್: "ಇಲ್ಲ."

ಶ್ರೀರಾಮಕೃಷ್ಣರು: "ಬೇರೆ ಯಾರಾದರೂ ಪರಮಹಂಸರು?"

ಮಾಸ್ಟರ್: "ಇಲ್ಲ. ನಿಮ್ಮೊಡನೆ ಬೇರೆ ಯಾರನ್ನೂ ಹೋಲಿಸಲಾಗೋದಿಲ್ಲ."

ಶ್ರೀರಾಮಕೃಷ್ಣರು ನಗುತ್ತ: "'ಅಚೀನೆ'[1] ಎಂಬ ಹೆಸರಿನ ಒಂದು ಮರ ಇದೆ ಗೊತ್ತೆ?"

ಮಾಸ್ಟರ್: "ಇಲ್ಲ."

ಶ್ರೀರಾಮಕೃಷ್ಣರು: "ಆ ಹೆಸರಿನ ಒಂದು ಮರ ಇದೆ. ಆದರೆ ಅದನ್ನು ಯಾರೂ ಗುರುತಿಸಲಾರರು."

ಮಾಸ್ಟರ್: "ಹಾಗೇನೆ ನಿಮ್ಮನ್ನೂ ಕಂಡುಹಿಡಿಯಲಾಗೋದಿಲ್ಲ. ನಿಮ್ಮನ್ನು ಅರಿತುಕೊಂಡಷ್ಟೂ ವ್ಯಕ್ತಿಯ ಉನ್ನತಿಯೂ ಅಧಿಕವಾಗುತ್ತಾ ಬರುತ್ತದೆ."

ಮಾಸ್ಟರ್ ಸುಮ್ಮನೆ ಕುಳಿತು ಭಾವಿಸಲಾರಂಭಿಸಿದ: "ಪರಮ-ಹಂಸರು 'ಅರುಣೋದಯ ಕಾಲದ ಸೂರ್ಯ, ಅಚೀನೆ ಎಂಬ ಗಿಡ' ಇವುಗಳ ವಿಷಯವಾಗಿ ಹೇಳಿದರಲ್ಲ, ಏನವರು ಅವತಾರಪುರುಷನನ್ನು ಸೂಚಿಸಿದರೇನು? ನರಲೀಲೆ ಎಂಬುದು ಇದೇ ಏನು? ಪರಮಹಂಸರೇ ಅವತಾರಪುರುಷರೇನು? ಅದಕ್ಕಾಗೇ ತಮ್ಮ ಸಾಂಗೋಪಾಂಗಿಗಳನ್ನು ನೋಡಲು ಅತ್ಯಂತ ಕಾತರರಾಗಿ ಕುಟೀರದ ಚಾವಣಿಗೆ ಹತ್ತಿ ಕೂಗುತ್ತಿದ್ದರೇನು: 'ಏನ್ರೋ, ಎಲ್ಲಿದೀರ್‍ರೋ? ಬೇಗ ಬನ್ರೋ!' ಎಂಬುದಾಗಿ?"

ಮಾರನೆ ದಿನ ಪರಮಹಂಸರು ಕಾಳೀದೇವಾಲಯದ ಆಗ್ನೇಯ ವರಾಂಡದ ಹಂತಗಳ ಮೇಲೆ ಕುಳಿತಿದಾರೆ. ಅವರ ಹತ್ತಿರ ರಾಖಾಲ, ಮಾಸ್ಟರ್, ಹಾಜರಾ ಕುಳಿತಿದಾರೆ. ತಮ್ಮ ಬಾಲ್ಯಕಾಲದ ಜೀವನದ ಸಂಬಂಧವಾಗಿ ಮಗುವಿನ ಹಾಗೆ ಹೇಳಿಕೊಳ್ಳುತ್ತಿದಾರೆ.

1. ಇದರ ಪದಶಃ ಅರ್ಥ "ಗುರುತಿಸಲಾಗದ" ಎಂದು.

ಮುಚ್ಚಂಜೆ. ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿಬಂದು ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಇದ್ದಕ್ಕಿದ್ದಹಾಗೆ ಸಮಾಧಿಸ್ಥರಾಗಿ ಆ ಅವಸ್ಥೆಯಲ್ಲೇ ಭಗವತಿಯೊಡನೆ ಮಾತುಕತೆ ಆಡುತ್ತಿದಾರೆ. ಈಗ ಹೇಳುತ್ತಿದಾರೆ: "ತಾಯೆ, ಈ ಗೊಂದಲವೆಲ್ಲ ಏಕೆ? ನಾನು ಅಲ್ಲಿಗೆ ಹೋಗಬೇಕೇನು? ಕರೆದುಕೊಂಡು ಹೋದರೆ ಬರುತ್ತೇನೆ." ಪರಮ-ಹಂಸರು ಒಬ್ಬ ಭಕ್ತನ ಮನೆಗೆ ಹೋಗಬೇಕಾಗಿತ್ತು. ಅದಕ್ಕಾಗಿ ಭಗವತಿಯಿಂದ ಅಪ್ಪಣೆ ಪಡೆದುಕೊಳ್ಳುತ್ತಿದಾರೇನು?

ಈಗ ಮತ್ತೆ—ಬಹುಶಃ ಒಬ್ಬ ಭಕ್ತನ ಸಂಬಂಧವಾಗಿ ಇರಬೇಕು—ಭಗವತಿಯೊಡನೆ ಮಾತುಕತೆಯಾಡುತ್ತಿದಾರೆ. ಹೇಳುತ್ತಿದಾರೆ: "ತಾಯೆ, ಆತನನ್ನು ಕಳಂಕವಿಹೀನನನ್ನಾಗಿ ಮಾಡು. ಒಳ್ಳೇದು ತಾಯಿ, ಆತನಿಗೆ ಏಕೆ ಒಂದೇ ಒಂದು ಅಂಶವನ್ನು ಕೊಟ್ಟಿದೀಯೆ?" ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಮತ್ತೆ ಹೇಳುತ್ತಿದಾರೆ: "ಓ, ಈಗ ಅರ್ಥವಾಯಿತು. ಇಷ್ಟರಿಂದಲೇ ನಿನ್ನ ಕೆಲಸ ನೆರವೇರಿಬಿಡುತ್ತದೆ."

ಅದೇ ಅವಸ್ಥೆಯಲ್ಲಿ ಭಕ್ತರನ್ನು ಸಂಬೋಧಿಸಿ ಈಗ ಹೇಳುತ್ತಿದಾರೆ: "ಯಾರು ಬ್ರಹ್ಮನೊ ಆತನೇ ಶಕ್ತಿ. ಆತನನ್ನೇ ನಾನು 'ಭಗವತಿ' ಎಂಬುದಾಗಿ ಕರೆಯುತ್ತಿರುವುದು. ಯಾವಾಗ ಆತ ನಿಷ್ಕ್ರಿಯನೊ ಆಗ ಆತನನ್ನು 'ಬ್ರಹ್ಮ' ಅಂತ ಕರೆಯುತ್ತೇನೆ; ಸೃಷ್ಟಿಸ್ಥಿತಿಪ್ರಳಯ ಕಾರ್ಯ ಮಾಡುವಾಗ ಆತನನ್ನೇ 'ಶಕ್ತಿ' ಅಂತ ಕರೆಯುತ್ತೇನೆ. ನೀರು ಕೆಲವು ವೇಳೆ ಸ್ಥಿರವಾಗಿ ಇನ್ನು ಕೆಲವು ವೇಳೆ ಅಲೆಗಳಿಂದ ಕೂಡಿ ಇರೋದಿಲ್ಲವೆ ಇದೂ ಹಾಗೆ. ಶಕ್ತಿಯ ಲೀಲೆಯಿಂದಲೇ ಅವತಾರದ ಉತ್ಪನ್ನ. ಅವತಾರ-ಪುರುಷ ಪ್ರೇಮಭಕ್ತಿಯನ್ನು ಕಲಿಸಿಕೊಡಲು ಬರುತ್ತಾನೆ. ಆತನನ್ನು ಹಸುವಿನ ಕೆಚ್ಚಲಿಗೆ ಹೋಲಿಸಬಹುದು. ಹಾಲು ಬೇಕಾಗಿದ್ದರೆ, ಅದು ಕೆಚ್ಚಲಿನ ಮೂಲಕವೇ ಬರಬೇಕು. ಭಗವಂತ ಮನುಷ್ಯನಾಗಿ ಅವತೀರ್ಣನಾಗುತ್ತಾನೆ. ಸರೋವರದ ಗುಂಡಿಗಳಲ್ಲಿ ಅನೇಕ ಮೀನು ಬಂದು ಸೇರಿಕೊಳ್ಳುವ ಹಾಗೆ, ಅವತಾರಪುರುಷನಲ್ಲಿ ಭಗವಂತನ ಶಕ್ತಿ ವಿಶೇಷವಾಗಿ ತುಂಬಿಕೊಂಡಿರುತ್ತದೆ."

ಭಕ್ತರಲ್ಲಿ ಕೆಲಕೆಲವರು ಭಾವಿಸುತ್ತಿದಾರೆ: "ಪರಮಹಂಸರು ಶ್ರೀಕೃಷ್ಣ, ಶ್ರೀಚೈತನ್ಯ, ಏಸುಕ್ರಿಸ್ತ ಇವರಂತೆ ಅವತಾರಪುರುಷರೇನು?" ಎಂಬುದಾಗಿ.

೯ನೆ ಸೆಪ್ಟೆಂಬರ್ ೧೮೮೩, ಭಾದ್ರಪದ ಶುಕ್ಲ ಸಪ್ತಮಿ, ಭಾನುವಾರ.

ಪರಮಹಂಸರು ಮಧ್ಯಾಹ್ನದ ಊಟ ಮುಗಿಸಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ರಾಖಾಲ, ಮಾಸ್ಟರ್, ರತ್ನ ನೆಲದ ಮೇಲೆ ಕುಳಿತುಕೊಂಡಿದಾರೆ. ರತ್ನ ಯದುಮಲ್ಲಿಕನ ತೋಟದ ಮನೆಯ ಮೇಲ್ವಿಚಾರಕ. ಆತ ಪರಮಹಂಸರನ್ನು ಬಹಳವಾಗಿ ಗೌರವಿಸುತ್ತಿದ್ದುದರಿಂದ ಆಗಾಗ ಇಲ್ಲಿಗೆ ಬಂದು ಹೋಗುತ್ತಿದಾನೆ. ರಾಮಚಟ್ಟೋಪಾಧ್ಯಾಯ ಮತ್ತು ಹಾಜರಾ ಆಗಾಗ ಕೊಠಡಿಗೆ ಬಂದುಹೋಗುತ್ತಿದಾರೆ. ಘಂಟೆ ಅಪರಾಹ್ನ ಎರಡು.

ರತ್ನ ಪರಮಹಂಸರಿಗೆ ತಿಳಿಸಿದ, ಯದುಮಲ್ಲಿಕನ ಕಲ್ಕತ್ತದ ಮನೆಯಲ್ಲಿ ನೀಲಕಂಠನಿಂದ ಬಯಲು ನಾಟಕ ನಡೆಯುವಂತೆ ಏರ್ಪಾಡಾಗಿದೆ ಎಂಬುದಾಗಿ.

ರತ್ನ ಶ್ರೀರಾಮಕೃಷ್ಣರಿಗೆ: "ನೀವು ಅಲ್ಲಿಗೆ ಬರಬೇಕು. ನಿರ್ದಿಷ್ಟ ದಿನವನ್ನು ಗೊತ್ತುಮಾಡಿದೆ."

ಶ್ರೀರಾಮಕೃಷ್ಣರು: "ಅದು ಬಹಳ ಒಳ್ಳೆಯದು. ನನಗೂ ಇಚ್ಛೆ ಇದೆ. ನೀಲಕಂಠ ಬಹಳ ಭಕ್ತಿಯಿಂದ ಹಾಡುತ್ತಾನೆ."

ಒಬ್ಬ ಭಕ್ತ: "ಅದು ನಿಜ."

ಶ್ರೀರಾಮಕೃಷ್ಣರು: "ಹಾಡುತ್ತ ಹಾಡುತ್ತ ಅವನ ಕಣ್ಣಿಂದ ಪ್ರೇಮಾಶ್ರು ಸುರಿಯಲಾರಂಭಿಸುತ್ತದೆ. (ರತ್ನನಿಗೆ) ಯೋಚನೆಮಾಡುತ್ತಿದೇನೆ ರಾತ್ರಿಯನ್ನೆಲ್ಲಾ ಅಲ್ಲೇ ಕಳೆದುಬಿಡಬೇಕು ಎಂಬುದಾಗಿ."

ರತ್ನ: "ಬಹಳ ಒಳ್ಳೆಯದು."

ರಾಮಚಟ್ಟೋಪಾಧ್ಯಾಯ ಮತ್ತು ಉಳಿದ ಭಕ್ತರು ರತ್ನನನ್ನು ಯದುಮಲ್ಲಿಕನ ಮನೆಯಲ್ಲಿ ನಡೆದ ಕಳ್ಳತನದ ಸಂಬಂಧವಾಗಿ ಕೇಳಿದರು.

ರತ್ನ: "ಹೌದು, ಯದುಬಾಬುವಿನ ಮನೆದೇವರ ಚಿನ್ನದ ಪಾದುಕೆ ಕಳವಾಗಿಬಿಟ್ಟಿದೆ. ಅದಕ್ಕಾಗಿ ಮನೆಯಲ್ಲೆಲ್ಲಾ ಗೊಂದಲವೇ ಗೊಂದಲ. ಮಂತ್ರಿಸಿದ ತಟ್ಟೆಯಿಂದ ಕಳ್ಳನನ್ನು ಪತ್ತೆಮಾಡಿಬಿಡುತ್ತಾರೆ. ಎಲ್ಲರೂ ಮನೆಯಲ್ಲೇ ಇರಬೇಕು ಅಂತ ಕಟ್ಟಾಜ್ಞೆಯಾಗಿದೆ. ಯಾರು ಕದ್ದಿದಾನೊ ಆತನ ಕಡೆಗೆ ಆ ತಟ್ಟೆ ಚಲಿಸಿಬಿಡುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಅದು ಹೇಗೆ ಚಲಿಸುತ್ತದೆ? ಏನು ತನಗೆ ತಾನೇ?"

ರತ್ನ: "ಅದನ್ನು ನೆಲಕ್ಕೆ ಬಡಿಯುತ್ತಾರೆ."

ಒಬ್ಬ ಭಕ್ತ: "ಇದು ಒಂದು ವಿಧವಾದ ಕೈಚಳಕ—ಒಂದು ವಿಧವಾದ ಕೈಚಾತುರ್ಯ."

ಶ್ರೀರಾಮಕೃಷ್ಣರು: "ಯಾವ ಚಾತುರ್ಯದಿಂದ ಭಗವಂತನ ಸಾಕ್ಷಾತ್ಕಾರ ಸಾಧ್ಯವಾಗುವುದೊ ಅದೇ ನಿಜವಾದ ಚಾತುರ್ಯ. ಆ ಚಾತುರ್ಯವೇ ಉತ್ತಮೋತ್ತಮ ಚಾತುರ್ಯ."

ಹೀಗೆ ಮಾತುಕತೆ ಮುಂದುವರಿಯುತ್ತಿದ್ದಾಗ ಕೆಲವು ಮಂದಿ ಬಂಗಾಳಿ ದೊಡ್ಡ ಮನುಷ್ಯರು ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಂಡರು. ಅವರಲ್ಲಿ ಒಬ್ಬನ ಪರಿಚಯ ಪರಮಹಂಸರಿಗೆ ಹಿಂದೆಯೇ ಆಗಿತ್ತು. ಅವರೆಲ್ಲರೂ ತಂತ್ರ ಸಾಧನೆ ಮಾಡುತ್ತಿದ್ದರು. ಅವರಲ್ಲಿ ಒಬ್ಬ ಧರ್ಮದ ಹೆಸರಿನಲ್ಲಿ ಅನೀತಿ ಯುತವಾಗಿ ವರ್ತಿಸುತ್ತಿದ್ದುದು ಪರಮಹಂಸರಿಗೆ ಗೊತ್ತಿತ್ತು. ತಂತ್ರ ಶಾಸ್ತ್ರ, ಸಾಧನೆಯ ಸಮಯದಲ್ಲಿ ಪಂಚ ಮಕಾರಗಳನ್ನು ಉಪಯೋಗಿಸ ಲೇನೊ ಅನುಮತಿಯನ್ನಿತ್ತಿದೆ. ಆದರೆ ಪರಮಹಂಸರದು ಸಂತಾನಭಾವ. ಪ್ರತಿಯೊಬ್ಬ ಹೆಂಗಸೂ—ವೇಶ್ಯೆ ಕೂಡ—ಅವರ ದೃಷ್ಟಿಯಿಂದ ಸಾಕ್ಷಾತ್ ಭಗವತಿಯೇ. ಅವರೆಲ್ಲರನ್ನೂ ಅವರು "ತಾಯಿ" ಎಂದು ಸಂಬೋಧಿಸು ತ್ತಿದ್ದಾರೆ.

ಶ್ರೀರಾಮಕೃಷ್ಣರು ನಗುತ್ತ: "ಅಚಲಾನಂದನೆಲ್ಲಿ? ಅಚಲಾನಂದ ಮತ್ತು ಆತನ ಶಿಷ್ಯರ ಭಾವವೇ ಬೇರೆ. ನನ್ನದು ಸಂತಾನಭಾವ."

ಕೊಠಡಿಯನ್ನು ಪ್ರವೇಶಿಸಿದ ಬಂಗಾಳಿ ಬಾಬುಗಳು ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದಾರೆ.

ಶ್ರೀರಾಮಕೃಷ್ಣರು: "ನನ್ನದು ಸಂತಾನಭಾವ. ಅಚಲಾನಂದ ಆಗಾಗ ಇಲ್ಲಿಗೆ ಬಂದು ಇರುತ್ತಿದ್ದ. ಕಾರಣವನ್ನು (ಭಗವತಿಗೆ ಅರ್ಪಿಸಿದ ಮದ್ಯ) ಬಹಳವಾಗಿ ಕುಡಿಯುತ್ತಿದ್ದ. ನನ್ನದು ಸಂತಾನಭಾವ ಎಂಬು ದನ್ನು ಕೇಳಿ ತನ್ನದೇ ಸರಿಯೆಂದು ಹಠ ತೊಡಲಾರಂಭಿಸಿದ. ಒತ್ತಿ ಒತ್ತಿ ಹೇಳಲಾರಂಭಿಸಿದ: 'ಹೆಂಗಸರೊಡನೆ ವೀರಭಾವ ಸಾಧನೆ ಮಾಡುವುದನ್ನು ನೀವು ಏಕೆ ಒಪ್ಪುತ್ತಿಲ್ಲ? ಶಿವನ ಬರವಣಿಗೆಗೆ ನೀವು ಮನ್ನಣೆ ಕೊಡೋ ದಿಲ್ಲ? ಆತ ತಂತ್ರಶಾಸ್ತ್ರವನ್ನು ಬರೆದಿದ್ದಾನೆ. ಅದರಲ್ಲಿ ಎಲ್ಲಾ ವಿಧದ ಸಾಧನೆಗಳನ್ನೂ ನಿರೂಪಿಸಿದ್ದಾನೆ. ವೀರಭಾವದ ಸಾಧನೆಯೂ ಅದರಲ್ಲಿದೆ.'

ನಾನು ಆತನಿಗೆ ಹೇಳಿದೆ: 'ನನಗೆ ಅದೆಲ್ಲ ಗೊತ್ತಿಲ್ಲ. ನನಗೆ ಇವೆಲ್ಲ ಸ್ವಲ್ಪವೂ ರುಚಿಸುತ್ತಿಲ್ಲ. ನನ್ನದು ಸಂತಾನಭಾವ.'

"ಅಚಲಾನಂದ ತನ್ನ ಮಕ್ಕಳು ಮರಿಗಳ ಯೋಗಕ್ಷೇಮ ನೋಡಿಕೊಳ್ಳುತ್ತಿರಲಿಲ್ಲ. ಆತ ನನಗೆ ಹೇಳುತ್ತಿದ್ದ: 'ಅವನ್ನೆಲ್ಲಾ ಭಗವಂತ ನೋಡಿಕೊಳ್ಳುತ್ತಾನೆ. ಅವೆಲ್ಲಾ ಆತನ ಇಚ್ಛೆಯಂತೆ.' ನಾನು ಅದನ್ನು ಕೇಳಿ ಸುಮ್ಮನೆ ಇದ್ದುಬಿಡುತ್ತಿದ್ದೆ. ಆಗ ಆತ ಹೇಳಿದುದರ ಸಂಬಂಧವಾಗಿ ನನಗೆ ಈ ಭಾವನೆ ಬಂತು: 'ಮಕ್ಕಳನ್ನು ಯಾರು ನೋಡಿಕೊಳ್ಳುತ್ತಾರೆ? ಹೆಂಡತಿ ಮಕ್ಕಳನ್ನು ತ್ಯಜಿಸುವುದು ಹಣ ಸಂಪಾದಿಸಲು ಬೇರೊಂದು ಮಾರ್ಗ ಆಗದ ಹಾಗೆ ಇರಲಿ. ಜನ ಭಾವಿಸಿಕೊಳ್ಳುತ್ತಾರೆ ಈತ ಒಳ್ಳೆಯ ತ್ಯಾಗೀಪುರುಷ ಎಂಬುದಾಗಿ; ಸದ್ವಿನಿಯೋಗಕ್ಕಾಗಿ ಹೆಚ್ಚಾಗಿ ಹಣ ತಂದುಕೊಡುತ್ತಾರೆ. ಆ ರೀತಿಯಾಗಿ ಹಣ ಕೈಯಲ್ಲಿ ಅಧಿಕವಾಗಿ ಶೇಖರವಾಗಿಬಿಡುತ್ತದೆ.'

"ಮೊಕದ್ದಮೆಯಲ್ಲಿ ಗೆಲ್ಲಲು, ಹೆಚ್ಚಾಗಿ ಹಣ ಸಂಪಾದಿಸಲು ಅಥವಾ ಬೇರೆಯವರಿಗೆ ವ್ಯಾಜ್ಯ ಗೆದ್ದುಕೊಡಲು, ಪ್ರಾಪಂಚಿಕ ವಸ್ತುಗಳನ್ನು ದೊರಕಿಸಿಕೊಡಲು ಸಾಧನೆಯಲ್ಲಿ ತೊಡಗುವುದೆ? ಇದು ಅತ್ಯಂತ ಹೀನ ಬುದ್ಧಿಯುಳ್ಳವರ ವರ್ತನೆ.

"ಹಣದಿಂದ ತಿನ್ನಲು ಅನ್ನ, ಉಡಲು ಬಟ್ಟೆ, ಇರಲು ಜಾಗ ದೊರಕುತ್ತವೆ. ಅದರಿಂದ ಭಗವಂತನ, ಸಾಧುಸಂತರ, ದರಿದ್ರರ ಸೇವೆ ಆಗುತ್ತದೆ. ಈ ಕೆಲವದರಿಂದ ಹಣದ ಸದ್ವಿನಿಯೋಗ ಆಗುತ್ತದೆ. ಹಣವನ್ನು ಭೋಗಸುಖಗಳಿಗೇ ಆಗಲಿ, ದೇಹಸುಖಗಳಿಗೇ ಆಗಲಿ, ಲೋಕಮಾನ್ಯನಾಗಲೇ ಆಗಲಿ ಉಪಯೋಗಿಸಕೂಡದು.

"ಅಣಿಮಾದಿ ಸಿದ್ಧಿಗಳನ್ನು ಗಳಿಸಿಕೊಳ್ಳಲು ಜನ ತಂತ್ರಶಾಸ್ತ್ರದಲ್ಲಿ ಹೇಳಿರುವ ಪಂಚಮಕಾರ ಸಾಧನೆಗಳಲ್ಲಿ ತೊಡಗುತ್ತಾರೆ. ಅವರದು ಎಂಥ ಹೀನಬುದ್ಧಿ! ಶ್ರೀಕೃಷ್ಣ ಅರ್ಜುನನಿಗೆ ಹೇಳಿದ: 'ಗೆಳೆಯ, ಅಷ್ಟಸಿದ್ಧಿಗಳಲ್ಲಿ ಒಂದನ್ನು ಗಳಿಸಿಕೊಂಡರೂ ನಿನ್ನ ಶಕ್ತಿಯೇನೊ ಅಧಿಕವಾಗಬಹುದು, ಆದರೆ ಅದರಿಂದ ನನ್ನ ಸಾಕ್ಷಾತ್ಕಾರ ಮಾತ್ರ ನಿನಗೆ ದೊರೆಯುವ ಹಾಗಿಲ್ಲ.' ಸಿದ್ಧಿ ಇತ್ತು ಎಂದರೆ ಮಾಯೆ ನಮ್ಮನ್ನು ಬಿಟ್ಟು ತೊಲಗಲೊಲ್ಲದು. ಮಾಯೆಯಿಂದ ಅಹಂಕಾರ ಉಂಟಾಗುತ್ತದೆ.

"ಶರೀರ, ಹಣ ಇವೆಲ್ಲಾ ಅನಿತ್ಯ. ಇವುಗಳಿಗೇಕೆ ಇಷ್ಟೊಂದು

ಹಂಬಲಿಸಬೇಕು? ಹಾಗೇ ಹಠಯೋಗಿಗಳ ಪಾಡನ್ನು ನೋಡು. ಈ ಶರೀರವನ್ನು ದೀರ್ಘಾಯುವಾದುದನ್ನಾಗಿ ಮಾಡುವುದು ಹೇಗೆ ಎಂಬ ಹಂಬಲವೊಂದೇ ಅವರಿಗೆ. ಅವರ ಲಕ್ಷ್ಯ ಭಗವಂತನ ಕಡೆಗಿಲ್ಲ. ನೇತಿ, ಧೌತಿಗಳಿಂದ ಸುಮ್ಮನೆ ಹೊಟ್ಟೆ ತೊಳೆದುಕೊಳ್ಳುವುದು, ಕೊಳವೆಯ ಮುಖಾಂತರ ಹೊಟ್ಟೆಗೆ ಹಾಲು ಎಳೆದುಕೊಳ್ಳುವುದು ಇಷ್ಟೇ ಕೆಲಸ!

"ಒಬ್ಬ ಅಕ್ಕಸಾಲಿಗನ ನಾಲಗೆ ಅಕಸ್ಮಾತ್ತಾಗಿ ಮಡಿಸಿಕೊಂಡು ಅಂಗುಳಿಗೆ ಅಂಟಿಕೊಂಡುಬಿಟ್ಟಿತು. ಜಡ ಸಮಾಧಿಸ್ಥನ ಹಾಗೆ ತೋರಲಾರಂಭಿಸಿದ. ಚಲನವಲನಗಳೆಲ್ಲಾ ಸಂಪೂರ್ಣವಾಗಿ ನಿಂತುಹೋದುವು. ಆ ಅವಸ್ಥೆಯಲ್ಲೇ ಆತ ಬಹಳ ದಿನದವರೆಗೆ ಇದ್ದುಬಿಟ್ಟ. ಜನರು ಬಂದು ಆತನಿಗೆ ಪೂಜೆ ಪುರಸ್ಕಾರಗಳನ್ನು ಮಾಡುತ್ತಿದ್ದರು. ಕೆಲವು ವರ್ಷಗಳ ಬಳಿಕ ಇದ್ದಕ್ಕಿದ್ದ ಹಾಗೆ ನಾಲಗೆ ಮತ್ತೆ ಎಂದಿನ ಸ್ಥಿತಿಗೆ ಹಿಂದಿರುಗಿಬಿಟ್ಟಿತು. ಅದರೊಡನೆ ಆತನ ಹಿಂದಿನ ಪ್ರಜ್ಞೆಯೂ ಬಂತು. ಮತ್ತೆ ಚಿನ್ನದ ಕೆಲಸ ಮಾಡಲು ಶುರುಮಾಡಿದ. (ಎಲ್ಲರೂ ನಗುತ್ತಿದಾರೆ.)

"ಇವೆಲ್ಲಾ ದೇಹಕ್ಕೆ ಸಂಬಂಧಪಟ್ಟವು. ಇವಕ್ಕೂ ಭಗವಂತನ ಸಾಕ್ಷಾತ್ಕಾರಕ್ಕೂ ಯಾವ ಸಂಬಂಧವೂ ಇಲ್ಲ. ಒಬ್ಬನಿಗೆ ಎಂಬತ್ತೆರಡು ಆಸನಗಳು ಬರುತ್ತಿದ್ದುವು. ಯೋಗಸಮಾಧಿಯ ವಿಷಯವಾಗಿ ಬಹಳ ಬಹಳವಾಗಿ ಮಾತಾಡುತ್ತಿದ್ದ. ಆದರೆ ಆತನ ಅಂತರ್ಯ ಕಾಮಕಾಂಚನಗಳಲ್ಲಿ ಆಸಕ್ತವಾಗಿತ್ತು. ಒಮ್ಮೆ ಅನೇಕ ಸಹಸ್ರ ರೂಪಾಯಿಗಳ ಒಂದು ನೋಟು ಒಂದು ಕಡೆ ಬಿದ್ದುಹೋಗಿತ್ತು. ಹಣದ ಲೋಭದಿಂದ, ಮುಂದೆ ಹೊರಕ್ಕೆ ತೆಗೆದುಕೊಳ್ಳಲು ಅದನ್ನು ಎತ್ತಿ ನುಂಗಿಬಿಟ್ಟ. ಆತ ಆ ನೋಟನ್ನು ಹಿಂದಿರುಗಿ ಕೊಡಬೇಕಾಗಿಬಂದದ್ದೂ ಅಲ್ಲದೆ ಮೂರು ವರ್ಷ ಜೈಲುವಾಸ ಮಾಡಬೇಕಾಯಿತು. ಸತ್ಯವಾಗಿ ಹೇಳುತ್ತೇನೆ, ನನ್ನ ಸರಳ ಬುದ್ಧಿಯಿಂದ ಭಾವಿಸುತ್ತಿದ್ದೆ, ಆತ ಬಹಳವಾಗಿ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದಿರಬೇಕು ಎಂಬುದಾಗಿ.

"ಸಿಂಥಿಯ ಮಹೇಂದ್ರಪಾಲ ಒಮ್ಮೆ ರಾಮಲಾಲನ ಕೈಯಲ್ಲಿ ಐದು ರೂಪಾಯಿ ಕೊಟ್ಟು ಹೊರಟುಹೋದನಂತರ ರಾಮಲಾಲ ಬಂದು ಅದನ್ನು ನನಗೆ ತಿಳಿಸಿದ. ನಾನು ಆತನನ್ನು ಕೇಳಿದೆ: 'ಆತ ಏಕೆ ಕೊಟ್ಟುಹೋದ?' ಆತ ಉತ್ತರವಿತ್ತ: 'ನಿಮಗಾಗಿ.' ಆಗ ಮನಸ್ಸಿನಲ್ಲಿ ಭಾವನೆ ಬಂತು, ಹಾಲಿನವನ ಸಾಲವನ್ನು ಸ್ವಲ್ಪವಾಗಿ ತೀರಿಸಬಿಡಬಹುದು ಎಂಬುದಾಗಿ.

ಏನು ಹೇಳಲಿ! ರಾತ್ರಿ ಮಲಗಿದ್ದವನು ಹಠಾತ್ತಾಗಿ ಎದ್ದು ಕುಳಿತುಕೊಂಡೆ. ನನ್ನ ಹೃದಯವನ್ನು ಬೆಕ್ಕು ಒಳಹೊಕ್ಕು ಅದನ್ನು ಪರಚುತ್ತಿರುವುದೊ ಏನೊ ಎಂಬಂತೆ ಅನುಭವವಾಯಿತು. ಒಡನೆಯೇ ರಾಮಲಾಲನನ್ನು ಎಳಿಸಿ ಕೇಳಿದೆ: 'ಏನೊ, ಆ ಹಣವನ್ನು ಮಹೇಂದ್ರಲಾಲ ಯಾರಿಗೆ ಕೊಟ್ಟ? ನಿಮ್ಮ ಚಿಕ್ಕಮ್ಮನಿಗೇನೊ?' ಆತ ಉತ್ತರವಿತ್ತ: 'ಇಲ್ಲ, ನಿಮಗೆ.' ಆಗ ಆತನಿಗೆ ಹೇಳಿದೆ: 'ಈಕ್ಷಣವೇ ಹೋಗಿ ಈ ಹಣವನ್ನು ಹಿಂದಿರುಗಿ ಕೊಟ್ಟು ಬಾ; ಇಲ್ಲದಿದ್ದರೆ ನನ್ನ ಮನಸ್ಸಿಗೆ ಶಾಂತಿ ದೊರೆಯುವ ಹಾಗಿಲ್ಲ.' ರಾಮಲಾಲ ಬೆಳಗ್ಗೆ ಹೊತ್ತಿಗೆ ಮುಂಚೆಯೇ ಎದ್ದು ಹೋಗಿ ಹಣವನ್ನು ಕೊಟ್ಟುಬಂದ. ಆಗ ನನಗೆ ಸರಿಹೋಯಿತು.

"ಒಂದು ದಿನ ಇಲ್ಲಿಗೆ ಒಬ್ಬ ದೊಡ್ಡ ಧನಿಕ ಬಂದಿದ್ದ. ನನ್ನನ್ನು ಪ್ರಾರ್ಥನೆಮಾಡಿಕೊಂಡ: 'ಮಹಾಶಯರೆ, ಈ ಮೊಕದ್ದಮೆಯಲ್ಲಿ ನನಗೆ ಜಯವಾಗುವ ಹಾಗೆ ನೀವು ಏನಾದರೂ ಒಂದು ಮಾಡಬೇಕು. ನಿಮ್ಮ ಹೆಸರು ಕೇಳಿ ನಾನು ಇಲ್ಲಿಗೆ ಬಂದಿದೇನೆ.' ನಾನು ಆತನಿಗೆ ತಿಳಿಸಿದೆ: 'ನೋಡಪ್ಪ, ನೀನು ಹುಡುಕಿಕೊಂಡು ಬಂದಿರುವ ವ್ಯಕ್ತಿ ನಾನಲ್ಲ; ಆತ ಅಚಲಾನಂದ. ನೀನು ತಪ್ಪಿ ಇಲ್ಲಿಗೆ ಬಂದಿದೀಯೆ.'

"ನಿಜವಾದ ಭಕ್ತ ದೇಹಸುಖ, ಐಶ್ವರ್ಯ ಇವುಗಳ ಕಡೆಗೆ ಗಮನ ವೀಯುವುದಿಲ್ಲ. ಆತ ಭಾವಿಸುತ್ತಾನೆ: 'ದೇಹಸುಖ, ಲೋಕಮಾನ್ಯತೆ, ಧನಾರ್ಜನೆ ಇವುಗಳಿಗೇಕೆ ತಪಸ್ಸು ಮಾಡಲಿ? ಇವೆಲ್ಲಾ ಅನಿತ್ಯ—ಎರಡು ದಿನದ ಬಾಳಿನವು.'"

೨ ಹೊಸದಾಗಿ ಬಂದಿದ್ದ ಬಾಬುಗಳು ಪರಮಹಂಸರಿಗೆ ಪ್ರಣಾಮಮಾಡಿ ಎದ್ದು ಹೊರಟುಹೋದರು. ಶ್ರೀರಾಮಕೃಷ್ಣರು ಸ್ವಲ್ಪ ನಕ್ಕು ಮಾಸ್ಟರಿಗೆ ಹೇಳುತ್ತಿದಾರೆ: "ಚೋರರಿಗೆ ಧರ್ಮಬೋಧೆ ಹಿಡಿಸದು. (ಎಲ್ಲರೂ ನಗುತ್ತಿದಾರೆ.)

"ಒಳ್ಳೇದು, ನರೇಂದ್ರ ಹೇಗೆ ಕಾಣುತ್ತಾನೆ ನಿನ್ನ ಕಣ್ಣಿಗೆ?"

ಮಾಸ್ಟರ್: "ಆತ ಬಹಳ ಒಳ್ಳೆಯವ."

ಶ್ರೀರಾಮಕೃಷ್ಣರು: "ನೋಡು, ಅವನಲ್ಲಿ ವಿದ್ಯೆಗೆ ತಕ್ಕಂತೆ ಬುದ್ಧಿಯೂ ಇದೆ. ಹಾಡುವುದರಲ್ಲೂ, ಬಾಜಿಸುವುದರಲ್ಲೂ ನಿಪುಣ. ಜೊತೆಗೆ ಜಿತೇಂದ್ರಿಯನಾಗಿರುವುದು ಬೇರೆ. ಆತ ಹೇಳುತ್ತಿದಾನೆ, ತಾನು ವಿವಾಹವಾಗೋದಿಲ್ಲ ಎಂದು."

ಮಾಸ್ಟರ್: "ಒಮ್ಮೆ ನೀವು ಹೇಳಿದಿರಿ, ಯಾರು ತಾನು 'ಪಾಪಿ, ಪಾಪಿ' ಅಂತ ಭಾವಿಸಿಕೊಳ್ಳುತ್ತಾನೊ, ಆತ ಪಾಪಿಯೇ ಆಗಿಬಿಡುತ್ತಾನೆ; ಆತ ಉನ್ನತಿಯನ್ನು ಪಡೆಯಲಾರ. ಆದರೆ ಯಾರಿಗೆ ತಾನು ಭಗವಂತನ ಮಗು ಎಂಬ ದೃಢವಿಶ್ವಾಸವಿರುವುದೊ ಆತನಿಗೆ ಬೇಗ ಬೇಗ ಆತ್ಮೋನ್ನತಿಯಾಗಿ ಬಿಡುತ್ತದೆ ಅಂತ."

ಶ್ರೀರಾಮಕೃಷ್ಣರು: "ಹೌದು, ವಿಶ್ವಾಸಬೇಕು. ಕೃಷ್ಣಕಿಶೋರನದು ಎಂಥ ವಿಶ್ವಾಸ! ಹೇಳುತ್ತಿದ್ದ: 'ನಾನು ಭಗವಂತನ ಹೆಸರನ್ನು ಒಮ್ಮೆ ಪಠಿಸಿದ್ದೇನೆ. ನನ್ನಲ್ಲಿ ಇನ್ನು ಪಾಪ ಅಂದರೇನು? ನಾನು ಶುದ್ಧ ನಿರ್ಮಲ ವ್ಯಕ್ತಿ ಆಗಿಬಿಟ್ಟಿದ್ದೇನೆ.' ಒಂದು ದಿನ ಹಲಧಾರಿ ಹೇಳಿದ: 'ಅಜಾಮಿಳನೂ ಭಗವಂತನನ್ನು ತುಷ್ಟಿಗೊಳಿಸಲು ತಪಸ್ಸು ಮಾಡಬೇಕಾಯಿತು. ತಪಸ್ಸು ಮಾಡದೆ ಭಗವಂತನ ಕೃಪೆಯನ್ನು ಪಡೆಯಲು ಸಾಧ್ಯವೇ? ಕೇವಲ ಒಮ್ಮೆ 'ನಾರಾಯಣ' ಅಂತ ಹೇಳಿಬಿಟ್ಟಾಕ್ಷಣಕ್ಕೇ ಏನು ದೊರೆತುಬಿಟ್ಟೀತು?' ಇದನ್ನು ಕೇಳಿ ಕೃಷ್ಣಕಿಶೋರನ ಕೋಪಕ್ಕೆ ಮಿತಿಯೇ ಇಲ್ಲದೆ ಹೋಯಿತು. ಮತ್ತೆ ಆತ ಹೂವು ಕೊಯ್ಯಲು ಈ ತೋಟಕ್ಕೆ ಬಂದಾಗ, ಹಲಧಾರಿಯ ಕಡೆ ತಿರುಗಿಯೂ ನೋಡಲಿಲ್ಲ.

"ಹಲಧಾರಿಯ ತಂದೆ ಬಹಳ ದೊಡ್ಡ ಭಕ್ತ. ಸ್ನಾನದ ಸಮಯದಲ್ಲಿ ನಡುವಿನುದ್ದದ ನೀರಿಗಿಳಿದು 'ರಕ್ತವರ್ಣಂ ಚತುರ್ಮುಖಂ' ಎಂಬಿವೇ ಮೊದಲಾದ ಮಂತ್ರಗಳನ್ನು ಉಚ್ಚರಿಸುತ್ತ ಭಗವಂತನ ಮೇಲೆ ಧ್ಯಾನ ಮಾಡುತ್ತಿದ್ದ. ಆಗ ಆತನ ಕಣ್ಣುಗಳಿಂದ ಪ್ರೇಮಾಶ್ರು ಸುರಿಯುತ್ತಿತ್ತು.

"ಒಂದು ದಿನ ಗಂಗೆಯ ಏಡೇದೇರ್ ಘಟ್ಟಕ್ಕೆ ಒಬ್ಬ ಸಾಧು ಬಂದಿದ್ದ. ಆತನನ್ನು ನೋಡಿಬರಬೇಕೆಂದು ನಾವು ಮಾತುಕತೆಯಾಡಿಕೊಂಡೆವು. ಹಲಧಾರಿ ಹೇಳಿದ: 'ಆ ಪಂಚಭೂತಗಳ ಚೀಲವನ್ನು ನೋಡಿಕೊಂಡು ಬರುವುದರಿಂದ ದೊರೆಯುವ ಲಾಭವೇನು?' ಅನಂತರ ಈ ಮಾತನ್ನು ಕೃಷ್ಣಕಿಶೋರ ಕೇಳಿ ಹೇಳಿದ: 'ಏನು? ಸಾಧುವನ್ನು ದರ್ಶನಮಾಡುವುದರಿಂದ ಏನು ದೊರೆಯುತ್ತೆ ಅಂತ ಹಲಧಾರಿ ಹೇಳಿದನೆ? ಯಾರು ರಾಮನಾಮ ಅಥವಾ ಕೃಷ್ಣನಾಮ ಜಪಿಸುತ್ತಾನೊ ಆತನ ಭೌತ ದೇಹ ಚಿನ್ಮಯ ದೇಹ ಆಗಿಬಿಡುತ್ತದೆ. ಎಲ್ಲವೂ ಆತನ ಕಣ್ಣಿಗೆ ಚಿನ್ಮಯವಾಗಿ ಕಂಡುಬರುತ್ತದೆ — "ಚಿನ್ಮಯ ಶ್ಯಾಮ, ಚಿನ್ಮಯ ಧಾಮ."'

ಮತ್ತೂ ಹೇಳಿದ: 'ರಾಮನಾಮವನ್ನೇ ಆಗಲಿ, ಕೃಷ್ಣನಾಮವನ್ನೇ ಆಗಲಿ ಒಮ್ಮೆ ಜಪಿಸಿದರೂ ನೂರು ಸಂಧ್ಯಾವಂದನೆಗಳ ಫಲ ದೊರೆತುಬಿಡುತ್ತದೆ.'

"ಆತನ ಒಬ್ಬ ಮಗ, ಸಾಯುವಾಗ ರಾಮನಾಮ ಜಪಿಸಿ ಸತ್ತ. ಅದನ್ನು ನೋಡಿ ಕೃಷ್ಣಕಿಶೋರ ಹೇಳಿದ: 'ಆತನ ಬಾಯಿಂದ ರಾಮ ನಾಮ ಹೊರಬಂತು; ಇನ್ನು ಆತ ಹೆದರುವುದೇನಿದೆ?' ಆದರೆ ಮಧ್ಯೆ ಮಧ್ಯೆ ಒಮ್ಮೊಮ್ಮೆ ಅಳುತ್ತಿದ್ದ. ಎಷ್ಟೇ ಆಗಲಿ ಪುತ್ರಶೋಕವಲ್ಲವೆ?

"ಶ್ರದ್ಧೆಯಿಲ್ಲದೆ ಪೂಜೆ, ಜಪ, ತಪ ಇವನ್ನು ಮಾಡಿದರೆ ಏನೂ ದೊರೆಯೋದಿಲ್ಲ. ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಸ್ನಾನಕ್ಕೆ ಗಂಗಾ ಘಟ್ಟಕ್ಕೆ ಜನರು ಬರುವು ದನ್ನು ನೋಡಿದೇನೆ. ಅವರು ಅಲ್ಲಿ ಎಲ್ಲಾ ರಾಜ್ಯಗಳ ಸುದ್ದಿಯನ್ನೂ ಅಳೆದು ಸುರಿದು ನೋಡಿಬಿಡುತ್ತಾರೆ. ವಿಧವೆಯಾದ ಸೋದರತ್ತೆ ಹೇಳು ತ್ತಾಳೆ: 'ನಾನಿಲ್ಲದೆ ಇತ್ತು ಎಂದರೆ ಮನೆಯಲ್ಲಿ ದುರ್ಗಾಪೂಜೆ ನಡೆಯುವ ಹಾಗೇ ಇಲ್ಲ. ಗುಡಿಸಿ ಸಾರಿಸುವುದರಿಂದ ಹಿಡಿದು ನೈವೇದ್ಯದವರೆಗೂ ಎಲ್ಲವನ್ನೂ ನಾನೇ ನೋಡಿಕೊಳ್ಳಬೇಕಾಗುತ್ತದೆ. ಮನೆಯಲ್ಲಿ ವಿವಾಹ-ಗಿವಾಹವಾದರಂತೂ ಮೊದಲಿನಿಂದ ಕೊನೆಯವರೆಗೆ ಎಲ್ಲವನ್ನೂ—ಗಂಡು ಹೆಣ್ಣಿನ ಶಯ್ಯಾಗೃಹದ ವ್ಯವಸ್ಥೆಯನ್ನು ಕೂಡ—ನಾನು ನೋಡಿಕೊಂಡರೇ ಅದು ನಡೆದ ಹಾಗೆ.'"

ಮಾಸ್ಟರ್: "ನಿಜ. ಪಾಪ, ಅವರದೇನು ತಪ್ಪು? ಇಲ್ಲದಿದ್ದರೆ ಅವರು ಸಮಯವನ್ನು ಕಳೆಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು ನಗುತ್ತ: "ಮಹಡಿಯಲ್ಲಿ ದೇವರಮನೆ ಇದೆ. ಅಲ್ಲಿ ಭಗವಂತನ ಪೂಜೆ ನಡೆಯುತ್ತದೆ. ಪೂಜೆಗಾಗಿ ನೈವೇದ್ಯ, ಚಂದನ ಇತ್ಯಾದಿಗಳನ್ನು ಹೆಂಗಸರು ಸಿದ್ಧಮಾಡುತ್ತಿರುತ್ತಾರೆ. ಆದರೆ ಆ ಸಂದರ್ಭ ದಲ್ಲೂ ಅವರ ಬಾಯಿಂದ ಭಗವತ್ಸಂಬಂಧವಾದ ಮಾತುಕತೆ ಒಂದೂ ಹೊರಡದು. ಅವರ ಮಾತುಕತೆಯ ಸಾರಾಂಶ: 'ಈ ಹೊತ್ತು ಏನು ಅಡಿಗೆಮಾಡೋಣ? ಪೇಟೆಯಲ್ಲಿ ಇಂದು ಒಳ್ಳೆ ಕಾಯಿಪಲ್ಯ ದೊರೆಯ ಲಿಲ್ಲ. ನಿನ್ನೆ ಪಲ್ಯ ಬಹಳ ರುಚಿಯಾಗಿತ್ತು. ಆ ಹುಡುಗ ನಮ್ಮ ಚಿಕ್ಕಪ್ಪನ ಮಗ. ಏನ್ರಿ, ನಿಮಗೆ ಇನ್ನೂ ಅದೇ ಕೆಲಸ ಇದೆಯೇನು? ನನ್ನ ಆರೋಗ್ಯ

ವನ್ನು ಕೇಳಲೇಬೇಡಿ. ನಮ್ಮ ಹರಿ ಈ ಭೂಲೋಕದಲ್ಲಿ ಇಲ್ಲ' ಇತ್ಯಾದಿ. ಹಾಗೇ ನೋಡು! ದೇವರಮನೆಯಲ್ಲಿ ಪೂಜೆ ನಡೆಯುತ್ತಿರುವಾಗ ಈ ಎಲ್ಲಾ ರಾಜ್ಯಗಳ ಮಾತು!"

ಮಾಸ್ಟರ್: "ಹೌದು, ಅನೇಕರು ಹೀಗೇ. ನೀವು ಹೇಳುವ ಹಾಗೆ ಯಾರಲ್ಲಿ ಭಗವಂತನಲ್ಲಿನ ಅನುರಾಗ ಅಧಿಕವಾಗಿದೆಯೊ ಆತ ಈ ವಿಧವಾದ ಪೂಜೆ ಪುರಸ್ಕಾರಗಳನ್ನ ಹೆಚ್ಚು ದಿನ ಮುಂದುವರಿಸಲಾಗುವುದೆ?"

ಪರಮಹಂಸರು ಈಗ ಮಾಸ್ಟರೊಡನೆ ಏಕಾಂತದಲ್ಲಿ ಮಾತುಕತೆ ಯಾಡುತ್ತಿದಾರೆ.

ಮಾಸ್ಟರ್: "ಒಳ್ಳೇದು, ಭಗವಂತನೇ ಎಲ್ಲವೂ ಆಗಿರುವುದಾದರೆ, ಜನರಲ್ಲಿ ವಿವಿಧ ಭಾವನೆಗಳು ಉಂಟಾಗಲು ಕಾರಣವೇನು?"

ಶ್ರೀರಾಮಕೃಷ್ಣರು: "ಭಗವಂತ ವಿಭುರೂಪದಿಂದ ನಿಸ್ಸಂದೇಹ ವಾಗಿ ಸರ್ವಭೂತಗಳಲ್ಲಿಯೂ ಇದಾನೆ, ಆದರೆ ಶಕ್ತಿವಿಶೇಷತೆಯಿಂದ. ಕೆಲವೆಡೆ ವಿದ್ಯಾಶಕ್ತಿ ರೂಪದಲ್ಲಿ, ಇನ್ನೂ ಕೆಲವೆಡೆ ಅವಿದ್ಯಾಶಕ್ತಿ ರೂಪ ದಲ್ಲಿ; ಕೆಲವೆಡೆ ಹೆಚ್ಚು ಶಕ್ತಿಯಿಂದ, ಇನ್ನು ಕೆಲವೆಡೆ ಕಡಮೆ ಶಕ್ತಿಯಿಂದ ವ್ಯಕ್ತವಾಗಿದಾನೆ. ಕಾಣೋದಿಲ್ಲವೆ ಮನುಷ್ಯರಲ್ಲಿ ಮೋಸಗಾರರು, ದಗಾ ಖೋರರೂ ಅಲ್ಲದೆ ಹುಲಿಯಂಥ ಕ್ರೂರಿಗಳೂ ಇರುವುದನ್ನ? ನಾನು ಅವರನ್ನು ಕರೆಯುತ್ತೇನೆ, 'ಮೋಸಗಾರ ಭಗವಂತ', 'ವ್ಯಾಘ್ರ ಭಗವಂತ' ಅಂತ."

ಮಾಸ್ಟರ್ ನಗುತ್ತ: "ನಾವು ಅವರಿಗೆ ದೂರದಿಂದಲೇ ನಮಸ್ಕಾರ ಹಾಕಿಬಿಡಬೇಕು. ವ್ಯಾಘ್ರ ಭಗವಂತನನ್ನು ಸಮೀಪಿಸಿ ಆತನನ್ನು ಅಪ್ಪಿ ಕೊಂಡರೆ ಆತ ನಮ್ಮನ್ನು ನುಂಗಿಯೇಬಿಡಬಹುದು."

ಶ್ರೀರಾಮಕೃಷ್ಣರು: "ಭಗವಂತ, ಭಗವಂತನ ಶಕ್ತಿ; ಬ್ರಹ್ಮ, ಬ್ರಹ್ಮನ ಶಕ್ತಿ—ಬಿಟ್ಟರೆ ಬೇರೇನೂ ಇಲ್ಲ. ನಾರದ ಶ್ರೀರಾಮಚಂದ್ರನನ್ನು ಸ್ತೋತ್ರಮಾಡುತ್ತ ಮಾಡುತ್ತ ಹೇಳಿದ: 'ಹೇ ರಾಮ, ನೀನೇ ಶಿವ, ಸೀತೆಯೇ ಭಗವತಿ; ನೀನೇ ಬ್ರಹ್ಮ, ಸೀತೆಯೇ ಬ್ರಹ್ಮಾಣಿ, ನೀನೇ ಇಂದ್ರ ಸೀತೆಯೇ ಇಂದ್ರಾಣಿ; ನೀನೇ ನಾರಾಯಣ, ಸೀತೆಯೇ ಲಕ್ಷ್ಮಿ; ಪುರುಷ ವಾಚಕವಾದ್ದೆಲ್ಲಾ ನೀನೇ, ಸ್ತ್ರೀವಾಚಕವಾದ್ದೆಲ್ಲಾ ಸೀತೆಯೇ.'"

ಮಾಸ್ಟರ್: "ಚಿನ್ಮಯರೂಪ ಎಂಬುದು ಯಾವುದರ ಹಾಗೆ ಇದೆ?"

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಆಲೋಚಿಸಿ ಮೆಲ್ಲ ಮೆಲ್ಲಗೆ ಹೇಳುತ್ತಿದಾರೆ: "ಅದು ಯಾವುದರ ಹಾಗೆ ಅಂತೀಯಾ? ಅದು ನೀರಿನ ಹಾಗೆ.... ಸಾಧನೆ ಮಾಡಿದರೆ ಇವೆಲ್ಲಾ ಅರ್ಥವಾಗುತ್ತವೆ.

"ನೀನು ಭಗವದ್ರೂಪದಲ್ಲಿ ಶ್ರದ್ಧೆಯಿಡು. ಬ್ರಹ್ಮಜ್ಞಾನ ದೊರೆತ ನಂತರ ಮಾತ್ರ ಅಭೇದಜ್ಞಾನ—ಬ್ರಹ್ಮನಿಗು ಶಕ್ತಿಗು ಅಭೇದ ಎಂಬ ಜ್ಞಾನ ಉಂಟಾಗುತ್ತದೆ. ಬೆಂಕಿ, ಅದರ ಸುಡುವ ಶಕ್ತಿ ಅನನ್ಯವಾಗಿ ರುವ ಹಾಗೆ ಬ್ರಹ್ಮ, ಆತನ ಶಕ್ತಿ ಅನನ್ಯ. ಬೆಂಕಿಯನ್ನು ಭಾವಿಸಿದರೆ, ಬೆಂಕಿಯ ಸುಡುವ ಶಕ್ತಿಯನ್ನು ಭಾವಿಸಲೇ ಬೇಕು; ಬೆಂಕಿಯ ಸುಡುವ ಶಕ್ತಿಯನ್ನು ಭಾವಿಸಿದರೆ, ಬೆಂಕಿಯನ್ನು ಭಾವಿಸಲೇ ಬೇಕು. ಮತ್ತೆ ಹಾಲು, ಹಾಲಿನ ಬಿಳುಪು; ನೀರು, ನೀರಿನ ತೋಯುವ ಶಕ್ತಿ ಇವುಗಳ ಹಾಗೆ ಬ್ರಹ್ಮ, ಆತನ ಶಕ್ತಿ ಅನನ್ಯ.

"ಬ್ರಹ್ಮಜ್ಞಾನಾವಸ್ಥೆಗೂ ಅತೀತವಾದ್ದು ಬೇರೊಂದಿದೆ. ಜ್ಞಾನ ದೊರೆತ ಮೇಲೆ ವಿಜ್ಞಾನ. ಯಾರಿಗೆ ಜ್ಞಾನದ ಅರಿವು ಇದೆಯೊ ಆತನಿಗೆ ಅಜ್ಞಾನದ ಅರಿವೂ ಇರುತ್ತದೆ. ವಸಿಷ್ಠ ತನ್ನ ನೂರು ಮಕ್ಕಳನ್ನೂ ಕಳೆದು ಕೊಂಡದ್ದಕ್ಕಾಗಿ ಶೋಕಾಕ್ರಾಂತನಾದ. ವಸಿಷ್ಠನಂಥ ಜ್ಞಾನಿ ಏಕೆ ಪುತ್ರಶೋಕಾಕ್ರಾಂತನಾಗಬೇಕು ಎಂಬುದಾಗಿ ಲಕ್ಷ್ಮಣ ರಾಮನನ್ನು ಕೇಳಿ ದಾಗ, ಆತ ಉತ್ತರವಿತ್ತ: 'ನೀನು ಜ್ಞಾನಾಜ್ಞಾನಗಳಿಗೆ ಅತೀತನಾಗು.' ಯಾರಲ್ಲಿ ಜ್ಞಾನವಿರುತ್ತದೆಯೊ ಆತನಲ್ಲಿ ಅಜ್ಞಾನವೂ ಇರುತ್ತದೆ. ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಬೇರೊಂದು ಮುಳ್ಳನ್ನು ಹುಡುಕಿತಂದು ಅದನ್ನು ತೆಗೆಯಬೇಕಾಗುತ್ತದೆ; ಬಳಿಕ ಎರಡನೆ ಮುಳ್ಳನ್ನೂ ಬಿಸಾಡಿಬಿಡಬೇಕು."

ಮಾಸ್ಟರ್: "ಹಾಗಾದರೆ ಜ್ಞಾನ ಅಜ್ಞಾನ ಎರಡನ್ನೂ ತ್ಯಜಿಸಿಬಿಡ ಬೇಕೇನು?"

ಶ್ರೀರಾಮಕೃಷ್ಣರು: "ಹೌದು. ವಿಜ್ಞಾನವೆಂಬುದಿರುವುದೇ ಅದಕ್ಕಾಗಿ. ಹಾಗೇ ನೋಡು, ಯಾರಿಗೆ ಬೆಳಕಿನ ಅರಿವು ಇದೆಯೊ, ಆತನಿಗೆ ಕತ್ತಲೆಯ ಅರಿವೂ ಇರುತ್ತದೆ. ಯಾರಿಗೆ ಸುಖದ ಬೋಧೆ ಇರುವುದೊ, ಆತನಿಗೆ ದುಃಖದ ಬೋಧೆಯೂ ಇರುತ್ತದೆ. ಯಾರಿಗೆ ಪುಣ್ಯದ ಅರಿವೂ ಇದೆಯೊ, ಆತನಿಗೆ ಪಾಪದ ಅರಿವೂ ಇರುತ್ತದೆ. ಯಾರಿಗೆ ಒಳ್ಳೆಯದರ ತಿಳಿವು ಇರುವುದೊ, ಆತನಿಗೆ ಕೆಟ್ಟದ್ದರ ತಿಳಿವೂ ಇರುತ್ತದೆ. ಯಾರಿಗೆ ಶುಚಿಯ ಬೋಧೆ ಇರುವುದೊ, ಆತನಿಗೆ ಅಶುಚಿಯ ಬೋಧೆಯೂ

ಇರುತ್ತದೆ. ಯಾರಿಗೆ ನಾನು ಎಂಬುದರ ಅರಿವು ಇರುವುದೊ, ಆತನಿಗೆ ನೀನು ಎಂಬುದರ ಅರಿವೂ ಇರುತ್ತದೆ.

"ವಿಜ್ಞಾನವೆಂದರೇನು? ಭಗವಂತನನ್ನು ವಿಶೇಷ ರೂಪದಿಂದ ಅರಿಯುವಿಕೆ. ಕಟ್ಟಿಗೆಯಲ್ಲಿ ಬೆಂಕಿಯಿದೆ ಎಂಬ ಅರಿವು ಮತ್ತು ದೃಢಶ್ರದ್ಧೆಗೆ 'ಜ್ಞಾನ' ಅಂತ ಹೆಸರು. ಆದರ ಬೆಂಕಿಯಿಂದ ಅನ್ನ ಬೇಯಿಸಿ ಉಂಡು ತಿಂದು ಹೃಷ್ಟಪುಷ್ಟರಾಗುವುದಕ್ಕೆ 'ವಿಜ್ಞಾನ' ಅಂತ ಹೆಸರು. ಭಗವಂತ ನಿದಾನೆ ಎಂಬುದರ ಸ್ವಾತ್ಮಾನುಭವ ಹೊಂದುವುದಕ್ಕೆ 'ಜ್ಞಾನ' ಅಂತ ಹೆಸರು. ಆದರೆ ಆತನೊಡನೆ ಸಲಿಗೆಯಿಂದ ಮಾತುಕತೆಯಾಡುವುದಕ್ಕೆ, ಆತನೊಡನೆ ವಾತ್ಸಲ್ಯ, ಸಖ್ಯ, ದಾಸ, ಮಧುರ—ಈ ಭಾವಗಳಿಂದ ಆನಂದ ಪಡುವುದಕ್ಕೆ 'ವಿಜ್ಞಾನ' ಅಂತ ಹೆಸರು. ಭಗವಂತನೇ ಈ ಜೀವ ಜಗತ್ತು ಎಲ್ಲವೂ ಆಗಿದಾನೆ ಎಂಬುದರ ಪ್ರತ್ಯಕ್ಷ ದರ್ಶನಕ್ಕೆ 'ವಿಜ್ಞಾನ' ಅಂತ ಹೆಸರು.

"ಒಂದು ಮತದ ಪ್ರಕಾರ ಭಗವಂತನನ್ನು ದರ್ಶನಮಾಡಲಾಗುವುದಿಲ್ಲ. ಯಾರು ಯಾರನ್ನು ದರ್ಶನಮಾಡುವುದು? ಭಗವಂತ ನಮ್ಮಿಂದ ಪ್ರತ್ಯೇಕವೇನು, ದರ್ಶನಮಾಡುವುದಕ್ಕೆ? ತನ್ನನ್ನು ತಾನೇ ದರ್ಶನಮಾಡಿಕೊಳ್ಳುತ್ತಾನೆ. ಸಮುದ್ರದ ಕಪ್ಪು ನೀರಿನ ಕಡೆ ಹಡಗು ಮುಂದುವರಿಯಿತು ಎಂದರೆ ಅದು ಹಿಂದಿರುಗಿಬರುವ ಹಾಗಿಲ್ಲ—ಹಿಂದಿರುಗಿ ಬಂದು ತನ್ನ ಅನುಭವ ಏನು ಎಂಬುದನ್ನು ತಿಳಿಸುವ ಹಾಗಿಲ್ಲ."

ಮಾಸ್ಟರ್: "ಹೌದು, ನಿಜ. ನೀವು ಹೇಳುವ ಹಾಗೆ ಆಕ್ಟರ್-ಲೋನಿ ಸ್ಮಾರಕಸ್ತಂಭದ ಮೇಲಕ್ಕೆ ಹತ್ತಿಹೋಗಿ ನೋಡಿದರೆ ಕೆಳಗಡೆ ಏನೇನು ಎಲ್ಲೆಲ್ಲಿ ಎಂಬುದರ ವಿಷಯವೇ ಗೊತ್ತಾಗದು. ಗಾಡಿ ಯಾವುದು, ಕುದುರೆ ಯಾವುದು; ಗಂಡಸು ಯಾರು, ಹೆಂಗಸು ಯಾರು; ಮನೆ ಯಾವುದು, ಮಠ ಯಾವುದು; ಅಂಗಡಿ ಯಾವುದು, ಮುಂಗಟ್ಟು ಯಾವುದು; ಕೋರ್ಟು ಯಾವುದು, ಕಚೇರಿ ಯಾವುದು—ಯಾವು ಯಾವುದು ಏನೇನು ಎಂದು ಹೇಳಲಾಗುವುದಿಲ್ಲ."

ಶ್ರೀರಾಮಕೃಷ್ಣರು: "ಒಳ್ಳೇದು, ಈಗ ಸ್ವಲ್ಪ ದಿನದಿಂದ ನಾನು ಕಾಳೀದೇವಾಲಯಕ್ಕೆ ಹೋಗುತ್ತಿಲ್ಲ. ಅದು ತಪ್ಪು ಮಾಡಿದಂತಾಗುವುದೇ? ಒಮ್ಮೆ ನರೇಂದ್ರ ಹೇಳುತ್ತಿದ್ದ: 'ಏನಿದು? ಇವರು ಇನ್ನೂ ಕಾಳೀದೇವಾಲಯಕ್ಕೆ ಹೋಗುತ್ತಾರಲ್ಲ!'"

ಮಾಸ್ಟರ್: "ದಿನದಿನವೂ ನೀವು ಹೊಸಹೊಸ ಅವಸ್ಥೆಯಲ್ಲಿ ಇರುತ್ತೀರಿ. ಆದ್ದರಿಂದ ನೀವು ಅಪರಾಧವೆಸಗಿದಂತೆಲ್ಲಾಗುತ್ತೆ?"

ಶ್ರೀರಾಮಕೃಷ್ಣರು: "ಹೃದೂ ಸಂಬಂಧವಾಗಿ ಯಾರೊ ಸೇನನಿಗೆ ಹೇಳಿದರು: 'ಹೃದೂಗೆ ಬಹಳ ಕಾಯಿಲೆಯಾಗಿದೆ. ನೀವು ಆತನಿಗಾಗಿ ಎರಡು ಷರಟು, ಎರಡು ಪಂಚೆ ತೆಗೆದುಕೊಂಡು ಬನ್ನಿ. ನಾವು ಅವನ್ನು ಆತನ ಊರಿಗೆ ಕಳುಹಿಸಿಕೊಡುತ್ತೇವೆ.' ಆತ ತಂದುಕೊಟ್ಟ ಎರಡು ರೂಪಾಯಿಗಳನ್ನು ಮಾತ್ರ. ಏಕೆ ಹೀಗೆ ಹೇಳು? ಅಂಥಾ ಧನಿಕ, ಆದರೂ ಕೊಟ್ಟದ್ದು ಮಾತ್ರ ಅಷ್ಟು ಅಲ್ಪ! ಇದಕ್ಕೆ ಏನು ಹೇಳುತ್ತೀಯೆ?"

ಮಾಸ್ಟರ್: "ಯಾರು ಭಗವಂತನ ಸಾಕ್ಷಾತ್ಕಾರಕ್ಕಾಗಿ ಹಾತೊರೆಯುತ್ತಾರೊ ಅವರು ಹೀಗೆ ವರ್ತಿಸಲಾರರು—ಅಂದರೆ ಯಾರು ಬ್ರಹ್ಮ-ಜ್ಞಾನಕ್ಕಾಗಿ ಕಾತರರಾಗಿದಾರೊ ಅವರು."

ಶ್ರೀರಾಮಕೃಷ್ಣರು: "ಕೇವಲ ಭಗವಂತನೊಬ್ಬನೇ ವಸ್ತು, ಉಳಿದುದೆಲ್ಲಾ ಅವಸ್ತು."

**೨೨ನೆ ಸೆಪ್ಟೆಂಬರ್ ೧೮೮೩, ಶನಿವಾರ.**

ಪರಮಹಂಸರು ಅಧರಸೇನನ ಮನೆಯ ಬೈಠಕ್ಖಾನೆಯಲ್ಲಿ ಕುಳಿತುಕೊಂಡಿದಾರೆ. ಅವರ ಹತ್ತಿರ ರಾಖಾಲ, ಅಧರಸೇನ, ಮಾಸ್ಟರ್, ಈಶಾನ ಇನ್ನೂ ಅನೇಕರು ಕುಳಿತಿದಾರೆ. ವೇಳೆ ಅಪರಾಹ್ನ.

ಪರಮಹಂಸರಿಗೆ ಈಶಾನಚಂದ್ರಮುಖ್ಯೋಪಾಧ್ಯಾಯನನ್ನು ಕಂಡರೆ ಬಹಳ ಪ್ರೀತಿ. ಆತ ಅಕೌಂಟೆಂಟ್‌ಜನರಲ್ಸ್ ಆಫೀಸ್‌ನಲ್ಲಿ ಸೂಪರಿಂಟೆಂಡೆಂಟ್ ಆಗಿದ್ದ. ಈಗ ವಿಶ್ರಾಂತಿವೇತನ ಪಡೆಯುತ್ತಿದಾನೆ. ಆತನ ಮಕ್ಕಳೂ ದೊಡ್ಡ ಹುದ್ದೆಗಳಲ್ಲಿದಾರೆ. ಅವರಲ್ಲಿ ಒಬ್ಬ ನರೇಂದ್ರನ ಸಹಪಾಠಿ. ಈಶಾನನಿಗೆ ವಿಶ್ರಾಂತಿವೇತನ ದೊರೆತನಂತರ ಆತ ಧ್ಯಾನ, ದಾನಧರ್ಮಾದಿ ಕಾರ್ಯಗಳಲ್ಲಿ ತೊಡಗಿ ಆಗಾಗ ಬಂದು ಪರಮಹಂಸರ ದರ್ಶನ ಪಡೆದು ಹೋಗುತ್ತಿದ್ದ.

ಶ್ರೀರಾಮಕೃಷ್ಣರು ಈಶಾನನಿಗೆ: "ನಿನ್ನ ಆ ಕಥೆ ಹೇಳು—ಹುಡುಗ ಕಾಗದ ಬರೆದುಹಾಕಿದುದನ್ನ."

ಈಶಾನ ನಗುತ್ತ: "ಒಮ್ಮೆ ಒಬ್ಬರು ಒಬ್ಬ ಹುಡುಗನಿಗೆ ಹೇಳಿದರು, ಭಗವಂತ ನಮ್ಮನ್ನು ಸೃಷ್ಟಿಸಿದಾನೆ ಎಂಬುದಾಗಿ. ಆ ಹುಡುಗ ತನ್ನ

ಪ್ರಾರ್ಥನೆಯನ್ನೆಲ್ಲಾ ಒಂದು ಕಾಗದದಲ್ಲಿ ಬರೆದು ಅಂಚೆ ಪೆಟ್ಟಿಗೆಗೆ ಹಾಕಿದ. ಆ ಕಾಗದದ ಮೇಲೆ 'ಸ್ವರ್ಗ' ಎಂಬುದಾಗಿ ವಿಳಾಸ ಬರೆದಿದ್ದ."

ಶ್ರೀರಾಮಕೃಷ್ಣರು ನಗುತ್ತ: "ಕಥೆ ಕೇಳಿದಿರಾ? ಆ ಹುಡುಗನ ಶ್ರದ್ಧೆಯಂತೆ ಶ್ರದ್ಧೆಯುಂಟಾಗುವುದಾದರೆ, ಆಗ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. (ಈಶಾನನಿಗೆ) ಆ ಕರ್ಮತ್ಯಾಗದ ವಿಷಯವಾಗಿ ಹೇಳು."

ಈಶಾನ: "ಭಗವಂತನ ಸಾಕ್ಷಾತ್ಕಾರ ದೊರೆಯಿತು ಎಂದರೆ ಸಂಧ್ಯಾವಂದನಾದಿ ಕರ್ಮಗಳು ತಾವಾಗೇ ನಿಂತುಹೋಗುತ್ತವೆ. ಒಂದು ದಿನ ಎಲ್ಲರೂ ಗಂಗಾ ದಡದಲ್ಲಿ ಕುಳಿತು ಸಂಧ್ಯಾವಂದನೆ ಮಾಡುತ್ತಿದ್ದಾರೆ, ಆದರೆ ಒಬ್ಬ ಮಾತ್ರ ಮಾಡುತ್ತಿಲ್ಲ. ಕಾರಣ ಕೇಳಲಾಗಿ ಆತ ಉತ್ತರವಿತ್ತ: 'ನನಗೆ ಅಶೌಚ ಬಂದಿದೆ. ಆದ್ದರಿಂದ ನಾನು ಸಂಧ್ಯಾವಂದನೆ ಮಾಡಕೂಡದು. ಸತ್ತ ಸೂತಕ, ಹೆತ್ತ ಪುರುಡು ಎರಡೂ ಬಂದಿವೆ. ಅವಿದ್ಯೆಯೆಂಬ ನನ್ನ ತಾಯಿ ಮರಣ, ಆತ್ಮಸಾಕ್ಷಾತ್ಕಾರವೆಂಬ ನನ್ನ ಮಗನ ಜನ್ಮ ಎರಡೂ ಆಗಿವೆ.' "

ಶ್ರೀರಾಮಕೃಷ್ಣರು: "ಆತ್ಮಜ್ಞಾನ ದೊರೆತರೆ ಜಾತಿಭೇದವಿರದು ಎಂಬುದು."

ಈಶಾನ: "ಕಾಶಿಯಲ್ಲಿ ಗಂಗಾಸ್ನಾನ ಮುಗಿಸಿ ಶಂಕರಾಚಾರ್ಯರು ಮೆಟ್ಟಿಲು ಹತ್ತಿ ಬರುತ್ತಿರುವಾಗ ಒಂದು ಗುಂಪು ನಾಯಿಗಳನ್ನು ಹಿಡಿದುಕೊಂಡಿದ್ದ ಒಬ್ಬ ಚಂಡಾಲ ಎದುರಾದ. ಆಗ ಶಂಕರಾಚಾರ್ಯರು ಆತನಿಗೆ ಹೇಳಿದರು: 'ಏನು, ನನ್ನನ್ನು ಮುಟ್ಟಿಬಿಟ್ಟೆಯಲ್ಲ!' ಚಂಡಾಲ ಹೇಳಿದ: 'ಪೂಜ್ಯರೆ, ನಾನೂ ನಿಮ್ಮನ್ನು ಮುಟ್ಟಲಿಲ್ಲ, ನೀವೂ ನನ್ನನ್ನು ಮುಟ್ಟಲಿಲ್ಲ. ಆತ್ಮ ಎಲ್ಲರ ಅಂತರ್ಯಾಮಿ. ಅದು ನಿರ್ಲಿಪ್ತವಾದ್ದು. ಮದ್ಯದಲ್ಲಿ ಬಿದ್ದಿರುವ ಸೂರ್ಯನ ಪ್ರತಿಬಿಂಬಕ್ಕೂ, ಗಂಗೆಯಲ್ಲಿ ಬಿದ್ದಿರುವ ಸೂರ್ಯನ ಪ್ರತಿಬಿಂಬಕ್ಕೂ ಏನಾದರೂ ವ್ಯತ್ಯಾಸವಿದೆಯೇ?' "

ಶ್ರೀರಾಮಕೃಷ್ಣರು ನಗುತ್ತ: "ಆ ಸಮನ್ವಯದ ಕಥೆ—ಎಲ್ಲಾ ಮಾರ್ಗಗಳಿಂದಲೂ ಭಗವಂತನನ್ನು ಪಡೆಯಬಹುದು ಎಂಬುದು."

ಈಶಾನ ನಗುತ್ತ: "ಹರಿ ಹರ ಎಂಬ ಪದಗಳು ಒಂದೇ ಧಾತುವಿನಿಂದ ಬಂದಿವೆ. ಕೇವಲ ಪ್ರತ್ಯಯಗಳಲ್ಲಿ ಮಾತ್ರ ಭೇದ. ಯಾರು ಹರಿಯೊ ಆತನೇ ಹರ. ಶ್ರದ್ಧೆಯಿದ್ದರೇ ಎಲ್ಲಾ ದೊರೆತ ಹಾಗೇ."

ಶ್ರೀರಾಮಕೃಷ್ಣರು: "ಆ ಕಥೆ—ಸಾಧುವಿನ ಹೃದಯ ಎಲ್ಲಕ್ಕಿಂತ ದೊಡ್ಡದು ಎಂಬುದು."

ಈಶಾನ: "ನಮ್ಮ ಸುತ್ತಮುತ್ತಲಿರತಕ್ಕವುಗಳಿಗಿಂತ ಪೃಥಿವಿ ದೊಡ್ಡದು. ಪೃಥಿವಿಗಿಂತ ದೊಡ್ಡದು ಸಾಗರ. ಸಾಗರಕ್ಕಿಂತ ದೊಡ್ಡದು ಆಕಾಶ. ಆದರೆ ಭಗವಾನ್ ವಿಷ್ಣು ತನ್ನ ಒಂದು ಪಾದದಿಂದಲೇ ಸ್ವರ್ಗ, ಮರ್ತ್ಯ, ಪಾತಾಳ ಈ ತ್ರಿಭುವನಗಳನ್ನೂ ಅಳೆದುಬಿಟ್ಟ. ಆ ವಿಷ್ಣುವಿನ ಪಾದ ಸಾಧುವಿನ ಹೃದಯ ಮಧ್ಯದಲ್ಲಿದೆ. ಆದ್ದರಿಂದ ಸಾಧುವಿನ ಹೃದಯ ಎಲ್ಲಕ್ಕಿಂತಲೂ ದೊಡ್ಡದು."

ಈಶಾನನ ಈ ಎಲ್ಲಾ ಮಾತುಕತೆಗಳನ್ನೂ ಕೇಳಿ ಭಕ್ತರಿಗೆ ಬಹಳವಾಗಿ ಆನಂದವಾಗಿಬಿಟ್ಟದೆ.

ಈಶಾನ ಒಂದು ಏಕಾಂತ ಸ್ಥಳಕ್ಕೆ ಹೋಗಿ ಗಾಯತ್ರಿ ಪುರಶ್ಚರಣ ಮಾಡಬೇಕೆಂದಿದಾನೆ. ಗಾಯತ್ರಿ ಬ್ರಹ್ಮಮಂತ್ರ. ಪರಮಹಂಸರು ಹೇಳುತ್ತಿದಾರೆ, ವಿಷಯಬುದ್ಧಿ ಹೋಗದೆ ಇತ್ತು ಎಂದರೆ ಬ್ರಹ್ಮಜ್ಞಾನ ದೊರಕುವುದಿಲ್ಲ ಎಂಬುದಾಗಿ. ಮತ್ತೆ ಹೇಳುತ್ತಾರೆ, ಕಲಿಯುಗದಲ್ಲಿ ಅನ್ನಗತ ಪ್ರಾಣ—ವಿಷಯಬುದ್ಧಿ ಬಿಟ್ಟುತೊಲಗಲೊಲ್ಲದು. ಮನಸ್ಸು ರೂಪ, ರಸ, ಗಂಧ, ಸ್ಪರ್ಶ, ಶಬ್ದ ಇವುಗಳಲ್ಲೇ ಸರ್ವದಾ ನೆಲಸಿರುತ್ತದೆ ಎಂಬುದಾಗಿ. ಅದಕ್ಕಾಗೇ ಅವರು ಹೇಳುತ್ತಿದಾರೆ, ಕಲಿಯುಗಕ್ಕೆ ವೇದಮತವಲ್ಲ. ಯಾರು ಬ್ರಹ್ಮನೊ, ಆತನೇ ಶಕ್ತಿ. ಶಕ್ತಿಯ ಉಪಾಸನೆ ಮಾಡಿದರೇ ಬ್ರಹ್ಮನ ಉಪಾಸನೆ ಮಾಡಿದ ಹಾಗೆ. ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುವಾಗ ಬ್ರಹ್ಮನಿಗೇ ಶಕ್ತಿ ಅಂತ ಹೆಸರು. ಬ್ರಹ್ಮ ಶಕ್ತಿ ಪ್ರತ್ಯೇಕ ಪ್ರತ್ಯೇಕ ವಸ್ತುಗಳಲ್ಲ—ಒಂದೇ.

ಶ್ರೀರಾಮಕೃಷ್ಣರು ಈಶಾನನಿಗೆ: "'ನೇತಿ, ನೇತಿ' ಅಂತ ಸುಮ್ಮನೆ ಹೇಳಿಕೊಂಡು ಏಕೆ ವೃಥಾ ಕಾಲ ಕಳೆಯುತ್ತಾ ಇದೀಯೆ? ಬ್ರಹ್ಮನ ಸಂಬಂಧವಾಗಿ ಏನನ್ನೂ ಹೇಳಲಾಗುವುದಿಲ್ಲ. ಕೇವಲ ಆತ ಇದಾನೆ ಎಂಬುದಾಗಿ ಮಾತ್ರ ಹೇಳಬಹುದು.

"ನಾವು ಏನೇನನ್ನು ನೋಡುತ್ತೇವೆ, ಭಾವಿಸುತ್ತೇವೆ ಅವೆಲ್ಲಾ ಆದ್ಯಾಶಕ್ತಿಯೆ, ಚಿಚ್ಛಕ್ತಿಯ ವ್ಯಕ್ತತೆಯೆ. ಸೃಷ್ಟಿ, ಪಾಲನೆ, ಸಂಹಾರ; ಜೀವ, ಜಗತ್ತು; ಧ್ಯಾನ, ಧ್ಯಾತ, ಭಕ್ತಿ, ಪ್ರೇಮ ಎಲ್ಲಾ ಆಕೆಯ ಐಶ್ವರ್ಯ (ವ್ಯಕ್ತತೆ).

"ಆದರೆ ಬ್ರಹ್ಮನಿಗು ಶಕ್ತಿಗು ಅಭೇದ. ಲಂಕೆಯಿಂದ ಹಿಂದಿರುಗಿದ ನಂತರ ಹನುಮಂತ ರಾಮನನ್ನು ಸ್ತೋತ್ರಮಾಡುತ್ತ ಹೇಳಲಾರಂಭಿಸಿದ: 'ಹೇ ರಾಮ, ನೀನೇ ಪರಬ್ರಹ್ಮ, ಸೀತೆಯೇ ನಿನ್ನ ಶಕ್ತಿ, ಆದರೆ ನೀವಿಬ್ಬರೂ ಒಂದೇ—ಭೇದರಹಿತರು.' ಬ್ರಹ್ಮ ಶಕ್ತಿ, ಹಾವು ಅದರ ಸೊಟ್ಟ ಸೊಟ್ಟ ಗತಿ ಇದ್ದ ಹಾಗೆ. ಹಾವನ್ನು ಭಾವಿಸಿದರೆ ಅದರೊಡನೆ ಅದರ ಸೊಟ್ಟ ಸೊಟ್ಟ ಗತಿಯನ್ನೂ ಭಾವಿಸಲೇ ಬೇಕಾಗುತ್ತದೆ; ಹಾವಿನ ಸೊಟ್ಟ ಸೊಟ್ಟ ಗತಿಯನ್ನು ಭಾವಿಸಿದರೆ ಅದರೊಡನೆ ಹಾವನ್ನೂ ಭಾವಿಸಲೇ ಬೇಕಾಗುತ್ತದೆ. ಹಾಲನ್ನು ಭಾವಿಸಿದರೆ ಅದರೊಡನೆ ಅದರ ಬಿಳಿ ಬಣ್ಣವನ್ನೂ ಭಾವಿಸಲೇ ಬೇಕಾಗುತ್ತದೆ; ಹಾಲಿನ ಬಿಳಿ ಬಣ್ಣವನ್ನು ಭಾವಿಸಿದರೆ ಅದರೊಡನೆ ಹಾಲನ್ನೂ ಭಾವಿಸಲೇ ಬೇಕಾಗುತ್ತದೆ. ನೀರನ್ನು ಭಾವಿಸಿದರೆ ಅದರೊಡನೆ ಅದರ ತೋಯುವ ಶಕ್ತಿಯನ್ನೂ ಭಾವಿಸಲೇ ಬೇಕಾಗುತ್ತದೆ; ನೀರಿನ ತೋಯುವ ಶಕ್ತಿಯನ್ನು ಭಾವಿಸಿದರೆ ಅದರೊಡನೆ ನೀರನ್ನೂ ಭಾವಿಸಲೇ ಬೇಕಾಗುತ್ತದೆ.

"ಈ ಆದ್ಯಾಶಕ್ತಿ, ಎಂದರೆ ಮಹಾಮಾಯೆ ಬ್ರಹ್ಮನನ್ನು ಮುಚ್ಚಿ ಇಟ್ಟುಬಿಟ್ಟಿದೆ. ಈ ಆವರಣ ಹೋದ ಒಡನೇ ಅನುಭವವಾಗುತ್ತದೆ: 'ಏನಾಗಿದ್ದೆನೊ ಅದೇ ಆಗಿದೇನೆ' ಎಂಬುದಾಗಿ. ಆಗ ಅನುಭವವಾಗುತ್ತದೆ: 'ನಾನೇ ನೀನು; ನೀನೇ ನಾನು' ಅಂತ.

"ವ್ಯಕ್ತಿಯಲ್ಲಿ ಆವರಣವಿರುವವರೆಗೆ ವೇದಾಂತವಾದಿಗಳ 'ಸೋಽಹಮ್', ಎಂದರೆ 'ನಾನೇ ಆ ಪರಬ್ರಹ್ಮ' ಎಂಬುದನ್ನು ಹೇಳುವುದು ಸರಿಯಲ್ಲ. ಅಲೆ ನೀರಿಗೆ ಸೇರಿದುದೇ ವಿನಾ ನೀರು ಅಲೆಗೆ ಸೇರಿದುದಲ್ಲ. ವ್ಯಕ್ತಿಯಲ್ಲಿ ಆವರಣವಿರುವವರೆಗೆ 'ತಾಯಿ, ತಾಯಿ' ಎಂದು ಕರೆಯುವುದೇ ಶ್ರೇಯಸ್ಕರ. ಭಕ್ತ ಭಗವಂತನನ್ನು ಸಂಬೋಧಿಸಿ ಹೇಳಬೇಕು: 'ನೀನು ತಾಯಿ, ನಾನು ನಿನ್ನ ಸಂತಾನ; ನೀನು ಪ್ರಭು, ನಾನು ನಿನ್ನ ದಾಸ.' ಸೇವ್ಯ ಸೇವಕಭಾವವೇ ಶ್ರೇಯಸ್ಕರ. ಈ ದಾಸಭಾವದಿಂದ ಉಳಿದ ಭಾವಗಳು—ಶಾಂತ, ಸಖ್ಯ, ಇತ್ಯಾದಿ—ಉದ್ಭವವಾಗುತ್ತವೆ. ಯಜಮಾನ ದಾಸನನ್ನು ಪ್ರೀತಿಸುವಾಗ ಬೇಕಾದರೆ ಆತ ಹೇಳಬಹುದು: 'ಬಾ, ನನ್ನ ಹತ್ತಿರ ಕುಳಿತುಕೊ; ನನಗು ನಿನಗು ಯಾವ ಭೇದವೂ ಇಲ್ಲ.' ಆದರೆ ದಾಸ ಏಕಾಏಕಿ ಯಜಮಾನನ ಹತ್ತಿರ ಕುಳಿತುಕೊಳ್ಳಲು ಹೋದರೆ ಯಜಮಾನನಿಗೆ ಕೋಪ ಬರೋದಿಲ್ಲ?

"ಅವತಾರಲೀಲೆ ಇವೆಲ್ಲಾ ಚಿಚ್ಛಕ್ತಿಯ ಆವಿರ್ಭಾವ (ಐಶ್ವರ್ಯ). ಯಾರು ಬ್ರಹ್ಮನೊ ಆತನೇ ರಾಮ, ಕೃಷ್ಣ, ಶಿವ ಆಗಿದ್ದಾನೆ."

ಈಶಾನ: "ಹರಿ, ಹರ ಈ ಎರಡು ಪದಗಳ ಮೂಲಧಾತು ಒಂದೇ. ಇವುಗಳಿಗಿರುವ ವ್ಯತ್ಯಾಸ ಪ್ರತ್ಯಯಗಳಲ್ಲಿ ಮಾತ್ರ."

ಶ್ರೀರಾಮಕೃಷ್ಣರು: "ಹೌದು, ಇರುವುದು ಒಂದೇ ಅಲ್ಲದೆ ಎರಡಲ್ಲ, ವೇದಗಳು ಅದನ್ನೇ 'ಓಂ ಸಚ್ಚಿದಾನಂದ ಬ್ರಹ್ಮ' ಎಂಬುದಾಗಿಯೂ. ಪುರಾಣ 'ಓಂ ಸಚ್ಚಿದಾನಂದ ಕೃಷ್ಣ' ಎಂಬುದಾಗಿಯೂ, ತಂತ್ರಶಾಸ್ತ್ರ 'ಓಂ ಸಚ್ಚಿದಾನಂದಃ ಶಿವಃ' ಎಂಬುದಾಗಿಯೂ ಹೇಳಿವೆ.

"ಆ ಚಿಚ್ಛಕ್ತಿಯೇ ಮಹಾಮಾಯೆಯ ರೂಪದಿಂದ ಎಲ್ಲರನ್ನೂ ಅಜ್ಞಾನದ ಹೊದಿಕೆಯಲ್ಲಿ ಮುಚ್ಚಿ ಇಟ್ಟುಬಿಟ್ಟಿದೆ. ಅಧ್ಯಾತ್ಮರಾಮಾಯಣದಲ್ಲಿ ಹೇಳಿದೆ, ಶ್ರೀರಾಮನನ್ನು ದರ್ಶನ ಮಾಡಿದ ಋಷಿಗಳೆಲ್ಲರೂ ಕೇವಲ ಈ ರೀತಿಯಾಗೇ ಹೇಳಿದರು: 'ಹೇ ರಾಮ, ನಿನ್ನ ಭುವನಮೋಹಿನೀ ಮಾಯೆಯಿಂದ ನಮ್ಮನ್ನು ಮುಗ್ಧಗೊಳಿಸಬೇಡ.'"

ಈಶಾನ: "ಈ ಮಾಯೆ ಎಂಬುದು ಏನು?"

ಶ್ರೀರಾಮಕೃಷ್ಣರು: "ಏನೇನು ನೋಡುತ್ತೀಯೊ, ಏನೇನು ಕಿವಿಯಿಂದ ಕೇಳುತ್ತೀಯೊ, ಏನೇನು ಭಾವಿಸುತ್ತೀಯೊ ಎಲ್ಲವೂ ಮಾಯೆ. ಒಂದೇ ಪದದಲ್ಲಿ ಹೇಳುವುದಾದರೆ 'ಕಾಮಕಾಂಚನವೇ' ಮಾಯೆಯ ಆವರಣ (ಹೊದಿಕೆ).

"ಎಲಡಿಕೆ ಹಾಕಿಕೊಳ್ಳುವುದು, ಮೀನು ತಿನ್ನುವುದು, ತಂಬಾಕು ಸೇವಿಸುವುದು, ಮೈಗೆ ಎಣ್ಣೆ ಸವರಿಕೊಳ್ಳುವುದು ಇವೆಲ್ಲಾ ಅಂಥಾ ಕೆಡುಕಾದುವೇನಲ್ಲ. ಕೇವಲ ಇವನ್ನೇ ತ್ಯಜಿಸಿದರೆ ದೊರೆಯೋ ಪುರುಷಾರ್ಥವೇನು? ಅತ್ಯಂತ ಆವಶ್ಯಕವಾದ್ದು ಕಾಮಕಾಂಚನ ತ್ಯಾಗ. ಆ ತ್ಯಾಗವೇ ನಿಜವಾದ ತ್ಯಾಗ. ಗೃಹಸ್ಥರು ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಸಾಧನೆ ಭಜನೆ ಮಾಡಿ ಭಕ್ತಿಯನ್ನು ಗಳಿಸಿಕೊಳ್ಳಬೇಕು; ಅವರು ಮಾನಸಿಕವಾಗಿ ತ್ಯಾಗಮಾಡಬೇಕು. ಆದರೆ ಸನ್ಯಾಸಿ ಮಾನಸಿಕವಾಗಿ ಬಾಹ್ಯಿಕವಾಗಿ ಈ ಎರಡು ವಿಧದಿಂದಲೂ ತ್ಯಾಗಮಾಡಬೇಕು.

"ನಾನು ಒಮ್ಮೆ ಕೇಶವಸೇನನಿಗೆ ಹೇಳಿದೆ: 'ಯಾವ ಕೊಠಡಿಯಲ್ಲಿ ನೀರಿನ ಹಂಡೆ, ಉಪ್ಪಿನ ಕಾಯಿಯ ಚಟ್ಟಿ ಇವೆಯೊ, ಅದೇ ಕೊಠಡಿಯಲ್ಲಿ ವಿಷಮಶೀತಜ್ವರದ ರೋಗಿಯನ್ನು ಮಲಗಿಸಿದರೆ ಆತ ಆ ರೋಗದಿಂದ

ಮುಕ್ತನಾಗೋ ಬಗೆ ಹೇಗೆ?' ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಅಲ್ಲಿ ಇರಬೇಕು.''

ಒಬ್ಬ ಭಕ್ತ: ''ಮಹಾಶಯರೆ, ನವವಿಧಾನದ ಸಂಬಂಧವಾಗಿ ನಿಮ್ಮ ಅಭಿಪ್ರಾಯವೇನು? ಅದು ನನಗೆ ಎಲ್ಲದರ ಕಲಸುಮೇಲೋಗರ ದಂತೆ ಕಾಣುತ್ತಿದೆ.''

ಶ್ರೀರಾಮಕೃಷ್ಣರು: ''ಕೆಲಕೆಲವರು ಹೇಳುತ್ತಾರೆ, ಅದು ಆಧುನಿಕ ಸಂಪ್ರದಾಯ ಅಂತ. ಇದು ನನಗೆ ಆಶ್ಚರ್ಯವನ್ನು ತರುತ್ತಿದೆ: 'ಹಾಗಾದರೆ, ಬ್ರಹ್ಮಜ್ಞಾನಿಗಳ (ಬ್ರಾಹ್ಮಸಮಾಜದವರ) ಭಗವಂತ ಒಬ್ಬ ಪ್ರತ್ಯೇಕವಾದ ಭಗವಂತನೇ?' ಅವರು ಹೇಳುತ್ತಾರೆ, ತಮ್ಮದು ನವವಿಧಾನ, ಎಂದರೆ ಹೊಸ ರೀತಿಯ ಸಂಪ್ರದಾಯ ಅಂತ. ಬಹುಶಃ ಇದ್ದರೂ ಇರಬಹುದು. ಯಾರಿಗೆ ಗೊತ್ತು? ಷಡ್ದರ್ಶನಗಳಿವೆ; ಹಾಗೆ ಬಹುಶಃ ಇದೂ ಒಂದು ಇರಬೇಕು.

''ಆದರೆ ನಿರಾಕಾರವಾದಿಗಳು ಎಲ್ಲಿ ತಪ್ಪುಮಾಡುತ್ತಾರೆ ಗೊತ್ತೆ? ಭಗವಂತ ಕೇವಲ ನಿರಾಕಾರನೇ, ಉಳಿದವರ ಮತಗಳೆಲ್ಲಾ ತಪ್ಪು ಎಂದು ಹೇಳುವಾಗ.

''ಆದರೆ ನನಗೆ ಗೊತ್ತಿದೆ, ಭಗವಂತ ಸಾಕಾರ, ನಿರಾಕಾರ ಎರಡೂ ಅಂತ. ಆತ ಇನ್ನೂ ಏನೇನೊ ಆಗಿರಬಹುದು. ಆತ ಪ್ರತಿಯೊಂದೂ ಆಗಬಲ್ಲ.

(ಈಶಾನನಿಗೆ) ''ಆ ಚಿಚ್ಛಕ್ತಿ, ಆ ಮಹಾಮಾಯೆ ಚತುರ್ವಿಂಶತಿ ತತ್ತ್ವವಾಗಿ ವ್ಯಕ್ತವಾಗಿದೆ. ಒಂದು ದಿನ ನಾನು ಧ್ಯಾನಮಾಡುತ್ತಿದ್ದಾಗ ನನ್ನ ಮನಸ್ಸು ಅಲೆದಾಡುತ್ತ ಅಲೆದಾಡುತ್ತ ರಸ್ಕನ ಮನೆಗೆ ಹೋಯಿತು. ಆತ ಒಬ್ಬ ಜಾಡಮಾಲಿ. ಆಗ ನನ್ನ ಮನಸ್ಸಿಗೆ ಹೇಳಿದೆ: 'ನೀಚ ಮುಂಡೇದೆ, ಇರು ಇಲ್ಲೆ!' ಅಂತ. ಭಗವತಿ ನನಗೆ ತೋರಿಸಿದಳು, ಆತನ ಮನೆಯ ಜನ-ಗಿನ ಎಲ್ಲ ಕೇವಲ ಹೊದಿಕೆಗಳು ಮಾತ್ರ; ಅವರೊಳಗೆಲ್ಲಾ ಅದೇ ಕುಲಕುಂಡಲಿನಿ, ಅದೇ ಷಟ್ಚಕ್ರ ಇವೆ ಎಂಬುದನ್ನ.

''ಆದ್ಯಾಶಕ್ತಿ ಗಂಡಸೊ, ಹೆಂಗಸೊ? ಒಮ್ಮೆ ನಾನು ಕಾಮಾರ-ಪುಕುರಿನಲ್ಲಿ ಲಾಹಾಗಳ ಮನೆಯಲ್ಲಿ ಕಾಳೀಪೂಜೆ ನಡೆದುದನ್ನು ನೋಡಿದೆ. ಭಗವತಿಯ ಕೊರಳಿಗೆ ಯಜ್ಞೋಪವೀತವನ್ನು ಹಾಕಿದ್ದರು. ಒಬ್ಬ ಮನುಷ್ಯ ಕೇಳಿದ: 'ಭಗವತಿಯ ಕೊರಳಿಗೆ ಏಕೆ ಇವರು ಯಜ್ಞೋಪವೀತ

ಹಾಕಿದಾರೆ?' ಮನೆಯ ಯಜಮಾನ ಉತ್ತರವಿತ್ತ: 'ಸೋದರ, ಭಗವತಿ ಏನು ಎಂಬುದು ನಿನಗೆ ಸರಿಯಾಗಿ ಗೊತ್ತಾಗಿರುವಂತೆ ಕಾಣುತ್ತಿದೆ. ಆದರೆ ನನಗೆ ಸರಿಯಾಗಿ ಗೊತ್ತಿಲ್ಲ, ಭಗವತಿ ಗಂಡಸೊ ಹೆಂಗಸೊ ಎಂಬುದು.'

"ಒಂದು ಹೇಳಿಕೆ ಇದೆ, ಮಹಾಮಾಯೆ ಶಿವನನ್ನು ಇದ್ದಕ್ಕಿದ್ದ ಹಾಗೆ ನುಂಗಿಬಿಟ್ಟಳು. ಭಗವತಿಗೆ ಷಟ್ಚಕ್ರದ ಜ್ಞಾನೋದಯವಾದನಂತರ, ಶಿವ ಆಕೆಯ ತೊಡೆಯಿಂದ ಹೊರಕ್ಕೆ ಬಂದುಬಿಟ್ಟ. ಬಳಿಕ ಶಿವ ತಂತ್ರ ಶಾಸ್ತ್ರವನ್ನು ರಚಿಸಿದ ಎಂಬುದಾಗಿ.

"ಆ ಚಿಚ್ಛಕ್ತಿಯಲ್ಲಿ, ಆ ಮಹಾಮಾಯೆಯಲ್ಲಿ ಶರಣಾಗತರಾಗ ಬೇಕು."

ಈಶಾನ: "ದಯವಿಟ್ಟು ನೀವು ಕೃಪೆ ಮಾಡಿ."

ಶ್ರೀರಾಮಕೃಷ್ಣರು: "ಸರಳಭಾವದಿಂದ ಭಗವಂತನಿಗೆ ಪ್ರಾರ್ಥನೆ ಮಾಡು: 'ಹೇ ಭಗವಂತ, ನಿನ್ನ ದರ್ಶನ ಕೊಡು' ಅಂತ. ಮತ್ತೆ ಅಳು. ಪ್ರಾರ್ಥಿಸಿಕೊ: 'ಹೇ ಭಗವಂತ, ಕಾಮಕಾಂಚನದಿಂದ ನನ್ನ ಮನಸ್ಸು ವಿಮುಖವಾಗುವಂತೆ ಮಾಡು' ಎಂದು. ಇನ್ನೂ ಆಳಕ್ಕೆ ಮುಳುಗು. ಮೇಲೆ ಮೇಲೆ ತೇಲಿದರೆ ಅಥವಾ ಈಜಾಡಿದರೆ ರತ್ನ ದೊರೆಯುವುವೆ? ಆಳಕ್ಕೆ ಮುಳುಗಬೇಕು.

"ಗುರುವಿನಿಂದ ಉಪದೇಶ ಪಡೆಯಬೇಕು. ಒಬ್ಬ ಒಮ್ಮೆ ಬಾಣಲಿಂಗ ಶಿವನಿಗಾಗಿ ಹುಡುಕುತ್ತಿದ್ದ. ಯಾರೊ ಒಬ್ಬ ಹೇಳಿದ: 'ಆ ನಿರ್ದಿಷ್ಟ ನದಿಯ ಹತ್ತಿರಕ್ಕೆ ಹೋಗು. ಅಲ್ಲಿ ಒಂದು ಮರ ಕಣ್ಣಿಗೆ ಬೀಳುತ್ತದೆ. ಆ ಮರದ ಹತ್ತಿರ ಒಂದು ಜಲಾವರ್ತವನ್ನು ನೋಡುತ್ತೀಯೆ. ಅದರಲ್ಲಿ ಮುಳುಗುಹಾಕಿ ನೋಡು. ಆಗ ನಿನಗೆ ಬಾಣಲಿಂಗ ಶಿವ ದೊರಕುತ್ತಾನೆ.' ಆದ್ದರಿಂದ ನಾನು ಹೇಳುವುದು, ಗುರುವಿನಿಂದ ಉಪದೇಶ ಪಡೆಯಬೇಕು ಎಂಬುದಾಗಿ."

ಈಶಾನ: "ಹೌದು, ನಿಜ."

ಶ್ರೀರಾಮಕೃಷ್ಣರು: "ಸಚ್ಚಿದಾನಂದನೇ ಗುರುರೂಪ ಧರಿಸಿ ಬರುತ್ತಾನೆ. ಮನುಷ್ಯ ಗುರುವಿನಿಂದ ದೀಕ್ಷೆಯನ್ನು ಪಡೆದ ವ್ಯಕ್ತಿ ಆತನನ್ನು ಕೇವಲ ಮನುಷ್ಯ ಅಂತ ಭಾವಿಸಿದ್ದೇ ಆದರೆ ಆ ದೀಕ್ಷಿತನಿಗೆ ಯಾವ ಉನ್ನತಿಯೂ ಉಂಟಾಗದು. ಆತನನ್ನು ಸಾಕ್ಷಾತ್ ಭಗವಂತನೇ ಎಂಬುದಾಗಿ ಭಾವಿಸಿದರೆ ತಾನೆ ದೀಕ್ಷಿತನಿಗೆ ಮಂತ್ರದಲ್ಲಿ ಶ್ರದ್ಧೆಯುಂಟಾಗ

ಬೇಕಾದರೆ? ಶ್ರದ್ಧೆಯೊಂದು ಉಂಟಾಯಿತು ಎಂದರೆ ಎಲ್ಲಾ ದೊರೆತ ಹಾಗೇ. ಶೂದ್ರ ಜಾತಿಯ ಏಕಲವ್ಯ ದ್ರೋಣನ ಮಣ್ಣಿನ ಪ್ರತಿಮೆಯನ್ನು ಕಾಡಿನಲ್ಲಿ ಮುಂದಿಟ್ಟುಕೊಂಡು ಧನುರ್ವಿದ್ಯೆಯಲ್ಲಿ ಪಾರಂಗತನಾದ. ದ್ರೋಣನ ಮಣ್ಣಿನ ಪ್ರತಿಮೆಯನ್ನೇ ಸಾಕ್ಷಾತ್ ದ್ರೋಣನೆಂದು ಭಾವಿಸಿ ಆತ ಅದನ್ನು ಪೂಜಿಸುತ್ತಿದ್ದ; ಅದಕ್ಕಾಗೇ ಆತ ಧನುರ್ವಿದ್ಯೆಯಲ್ಲಿ ಸಿದ್ಧ ಪುರುಷನಾದುದು.

"ನೀನು ಬ್ರಾಹ್ಮಣ ಪಂಡಿತರೊಡನೆ ಅತಿಯಾಗಿ ಬೆರೆಯಬೇಡ. ಅವರ ಹಗಲಿರುಳ ಚಿಂತನೆ ಹೇಗೆ ಒಂದೆರಡು ಕಾಸು ಸಂಪಾದನೆಮಾಡುವುದು ಅಂತಲೇ. ನಾನು ನೋಡಿದೇನೆ, ಬ್ರಾಹ್ಮಣ ಪುರೋಹಿತರು ಸ್ವಸ್ತ್ಯಯನ ಮಾಡಲು ಬಂದಾಗ ಚಂಡೀಪಾಠ ಮಾಡುವುದನ್ನ. ಸರಿಯಾಗಿ ಹೇಳಲಾಗೋದಿಲ್ಲ, ಅವರು ಮಾಡುತ್ತಿರುವುದು ಚಂಡೀಪಾಠವನ್ನೊ ಅಥವಾ ಇನ್ನು ಬೇರೆ ಯಾವುದೊ ಪಾಠವನ್ನೊ ಎಂಬುದನ್ನ. ನೋಡಿದೇನೆ, ಆ ಪುಸ್ತಕದ ಅರ್ಧದಷ್ಟು ಹಾಳೆಗಳನ್ನ ಸುಮ್ಮನೆ ಮಗುಚಿಹಾಕಿಬಿಡುವುದನ್ನ. (ಎಲ್ಲರೂ ನಗುತ್ತಿದಾರೆ.)

"ತನ್ನನ್ನು ತಾನು ಕೊಂದುಕೊಳ್ಳುವುದಕ್ಕೆ ಉಗುರು-ಚಾಕೇ ಸಾಕು. ಬೇರೆಯವರನ್ನು ಕೊಲ್ಲಬೇಕಾದರೆ ಕತ್ತಿ ಗುರಾಣಿ ಇವೆಲ್ಲಾ ಬೇಕು. ಶಾಸ್ತ್ರಗಳ ಪ್ರಯೋಜನವೂ ಇದೇ ರೀತಿಯದು.

"ವಿವಿಧ ಶಾಸ್ತ್ರಗಳ ಅಧ್ಯಯನ ಆವಶ್ಯಕವಾದುದೇನಲ್ಲ. ವಿವೇಕವಿಲ್ಲದೆ ಇತ್ತು ಎಂದರೆ ಕೇವಲ ಪಾಂಡಿತ್ಯ ಯಾವುದಕ್ಕೂ ಬಂದುದಲ್ಲ. ಷಟ್ಶಾಸ್ತ್ರಗಳನ್ನು ಅಧ್ಯಯನ ಮಾಡಿದರೂ ಏನೂ ದೊರೆಯದು. ನಿರ್ಜನ ಪ್ರದೇಶದಲ್ಲಿ ಗೋಪ್ಯವಾಗಿ ಅಳುತ್ತ ಅಳುತ್ತ ಭಗವಂತನನ್ನು ಕರೆ. ಆತ ಏನೇನು ಬೇಕೊ ಎಲ್ಲವನ್ನೂ ಮಾಡಿಕೊಟ್ಟುಬಿಡುತ್ತಾನೆ."

ಪರಮಹಂಸರು ಕೇಳಿದ್ದರು, ಈಶಾನ ಗಂಗಾನದಿ ದಡದಲ್ಲಿ ಸಾಧನೆಗಾಗಿ ಒಂದು ಕುಟೀರವನ್ನು ಕಟ್ಟಿಸುತ್ತಿದಾನೆ ಎಂಬುದಾಗಿ. ಅವರು ಉತ್ಸುಕರಾಗಿ ಈಶಾನನನ್ನು ಕೇಳುತ್ತಿದಾರೆ: 'ಏನು, ಕುಟೀರ ಕಟ್ಟಿಸಿಯಾಯಿತೆ? ನಿನಗೊಂದು ವಿಷಯ ತಿಳಿಸಬೇಕು ಅಂತ ಇದೇನೆ. ನಿನ್ನ ಆಧ್ಯಾತ್ಮಿಕ ಸಾಧನೆಯ ಸಂಬಂಧವಾಗಿ ಜನರಿಗೆ ಕಡಮೆಯಾಗಿ ತಿಳಿದಷ್ಟೂ ನಿನಗೆ ಮೇಲು. ಸಾತ್ತ್ವಿಕಗುಣೀ ಭಕ್ತರು ಧ್ಯಾನವನ್ನ ಏಕಾಂತ ಜಾಗದಲ್ಲಿ

ಅಥವಾ ಕಾಡಿನಲ್ಲಿ ಅಥವಾ ಮನಸ್ಸಿನ ಒಳಗೇ ಮಾಡುತ್ತಾರೆ. ಇನ್ನು ಕೆಲವು ವೇಳೆ ಸೊಳ್ಳೆ ಪರದೆಯೊಳಗೆ ಕುಳಿತು ಧ್ಯಾನಮಾಡುತ್ತಾರೆ.

ಈಶಾನ ಆಗಾಗ ಹಾಜರಾನನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಹಾಜರಾನಿಗೆ ಬಾಹ್ಯಶುಚಿಯ ಹುಚ್ಚು. ಅದಕ್ಕೆ ಅಷ್ಟು ಮನಸ್ಸು ಕೊಡಬಾರದೆಂದು ಪರಮಹಂಸರು ಅನೇಕ ವೇಳೆ ಆತನಿಗೆ ಹೇಳಿದಾರೆ.

ಶ್ರೀರಾಮಕೃಷ್ಣರು ಈಶಾನನಿಗೆ: "ಇನ್ನೊಂದು ವಿಷಯ ಕೇಳು. ಅತಿಯಾಗಿ ಬಾಹ್ಯಾಚಾರದಲ್ಲಿ ತೊಡಗಬೇಡ. ಒಮ್ಮೆ ಒಬ್ಬ ಸಾಧುವಿಗೆ ತಡೆಯಲಾರದ ಬಾಯಾರಿಕೆಯಾಯಿತು. ಚಕ್ಕಳದಲ್ಲಿ ನೀರು ಹೊತ್ತು ಕೊಂಡುಹೋಗುತ್ತಿದ್ದ ಒಬ್ಬ ವ್ಯಕ್ತಿ ನೀರು ಕೊಡಲು ಮುಂದೆ ಬಂದ. ಸಾಧು ಆತನನ್ನು ಕೇಳಿದ: 'ಏನು, ನಿನ್ನ ಚೀಲವನ್ನ ಚೆನ್ನಾಗಿ ತೊಳೆದಿ ದೀಯಾ?' ಆತ ಉತ್ತರವಿತ್ತ: 'ಮಹಾರಾಜ್, ನನ್ನ ಚೀಲ ಸಂಪೂರ್ಣ ವಾಗಿ ಪರಿಶುದ್ಧವಾಗಿದೆ. ಆದರೆ ನಿಮ್ಮ ಚೀಲದೊಳಗೆ ಮಲ, ಮೂತ್ರ, ಇನ್ನೂ ಏನೇನೊ ಕಲ್ಮಷ ತುಂಬಿವೆ. ಆದ್ದರಿಂದ ನಾನು ಹೇಳುತ್ತೇನೆ, ನೀವು ನಿಸ್ಸಂಕೋಚವಾಗಿ ನನ್ನ ಚೀಲದಿಂದ ನೀರು ಕುಡಿಯಬಹುದು. ಇದರಿಂದ ನಿಮಗೆ ಯಾವ ಕೇಡೂ ಸಂಭವಿಸದು.' 'ನಿಮ್ಮ ಚೀಲ' ಎಂಬು ದಾಗಿ ಆ ನೀರು ಹೊರುವ ವ್ಯಕ್ತಿ ಹೇಳಿದುದರ ಅರ್ಥ ದೇಹ, ಹೊಟ್ಟೆ ಇತ್ಯಾದಿ.

"ಭಗವನ್ನಾಮದಲ್ಲಿ ಶ್ರದ್ಧೆಯಿಡು. ಬಳಿಕ ನೀನು ತೀರ್ಥಾದಿಗಳಿಗೆ ಹೋಗಬೇಕಾದ ಯಾವ ಆವಶ್ಯಕತೆಯೂ ಇರದು."

ಈಗ ಪರಮಹಂಸರು ಭಾವೋನ್ಮತ್ತರಾಗಿ ಹಾಡುತ್ತಿದಾರೆ:

ಏತಕೆ, ಇನ್ನೇತಕೆ?<br>
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ<br>
ಪುಣ್ಯಕ್ಷೇತ್ರಗಳೇತಕೆ? . . . (ಉ. ೧೧೫)

ಈಶಾನ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು ಈಶಾನನಿಗೆ: "ಇನ್ನೇನಾದರೂ ಸಂದೇಹವಿರು ವುದಾದರೆ ತಿಳಿಸು."

ಈಶಾನ: "ಶ್ರದ್ಧೆಯ ಸಂಬಂಧವಾಗಿ ಹೇಳಿದಾಗ ಎಲ್ಲಕ್ಕೂ ಉತ್ತರ ಕೊಟ್ಟುಬಿಟ್ಟದೀರಿ."

ಶ್ರೀರಾಮಕೃಷ್ಣರು: “ ನಿಜವಾದ ಶ್ರದ್ಧೆಯಿಂದಲೇ ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡುಬಿಡಬಹುದು. ಭಗವಂತನ ಸಂಬಂಧವಾಗಿ ಹೇಳಿರುವುದರಲ್ಲೆಲ್ಲಾ ಪೂರ್ಣ ಶ್ರದ್ಧೆಯಿಡುವುದಾದರೆ, ಸಾಕ್ಷಾತ್ಕಾರ ಇನ್ನೂ ಬೇಗ ದೊರೆತುಬಿಡುತ್ತದೆ. ಹಸು ಆರಿಸಿಕೊಂಡು ಆರಿಸಿಕೊಂಡು ಮೇವು ಮೇಯ್ದರೆ ಕಡಮೆ ಹಾಲು ಕೊಡುತ್ತದೆ. ಆದರೆ ಅದು ಎಲ್ಲಾ ವಿಧದ ಗಿಡಗಡ್ಡೆಗಳನ್ನು ತಿಂದಿತು ಎಂದರೆ, ಧಾರಾಕಾರವಾಗಿ ಹಾಲು ಕರೆಯುತ್ತದೆ.

“ ಒಮ್ಮೆ ನಾನು ಒಂದು ಕಥೆ ಕೇಳಿದೆ. ಒಮ್ಮೆ ಒಬ್ಬನಿಗೆ ಭಗವಂತನಿಂದ ಆದೇಶ ದೊರೆಯಿತಂತೆ, ಆತ ಟಗರಿನಲ್ಲಿ ತನ್ನ ಇಷ್ಟದೇವನನ್ನು ನೋಡಬೇಕು ಎಂಬುದಾಗಿ. ಆತ ಅದನ್ನು ಒಡನೇ ನಂಬಿದನಂತೆ. ಸರ್ವ ಭೂತಗಳಲ್ಲೂ ಭಗವಂತನೇ ಇದಾನೆ.

“ ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿದ: ‘ ಪ್ರತಿಯೊಂದು ಶರೀರದಲ್ಲೂ ರಾಮನೇ ಇದಾನೆ ’ ಎಂಬುದಾಗಿ. ಶಿಷ್ಯನಿಗೆ ಅದರಲ್ಲಿ ಪೂರ್ಣ ಶ್ರದ್ಧೆಯುಂಟಾಯಿತು. ಒಂದು ದಿನ ನಾಯಿಯೊಂದು ಆತನ ಕೈಯಿಂದ ರೊಟ್ಟಿಯನ್ನು ಕಿತ್ತುಕೊಂಡು ಓಡಲಾರಂಭಿಸಿತು. ಆಗ ಶಿಷ್ಯ ತುಪ್ಪದ ಭರಣಿಯನ್ನು ಕೈಯಲ್ಲಿ ಹಿಡಿದು ಅದರ ಹಿಂದೆ ಓಡುತ್ತ ಕೂಗಲಾರಂಭಿಸಿದ: ‘ ಎಲೋ ರಾಮಾ, ಒಂದು ನಿಮಿಷ ನಿಲ್ಲೋ. ರೊಟ್ಟಿಗೆ ಇನ್ನೂ ತುಪ್ಪ ಸವರಿಲ್ಲ ಕಣೋ ! ’

“ ಕೃಷ್ಣಕಿಶೋರನದು ಎಂಥ ಅದ್ಭುತ ವಿಶ್ವಾಸ ! ಆತ ಹೇಳುತ್ತಿದ್ದ : ‘ “ ಓಂ ಕೃಷ್ಣ, ಓಂ ರಾಮ ” ಎಂಬುದಾಗಿ ಉಚ್ಚರಿಸಿದ ಮಾತ್ರದಿಂದಲೇ ಕೋಟಿ ಸಂಧ್ಯೆಗಳ ಫಲ ದೊರೆಯುತ್ತೆ. ಒಮ್ಮೆ ಆತ ಗೋಪ್ಯವಾಗಿ ನನಗೆ ತಿಳಿಸಿದ: ‘ ಯಾರಿಗೂ ಹೇಳಬೇಡಿ ; ಈಗ ನನಗೆ ಸಂಧ್ಯೆ-ಗಿಂಧ್ಯೆ ಯಾವುದೂ ರುಚಿಸುತ್ತಿಲ್ಲ.’

“ ಕೆಲವು ವೇಳೆ ನನಗೂ ಹಾಗಾಗುತ್ತದೆ. ಭಗವತಿ ತೋರಿಸುತ್ತಿದ್ದಾಳೆ ಎಲ್ಲವೂ ತಾನೇ ಆಗಿರುವುದನ್ನ. ಒಮ್ಮೆ ಸರ್ವೆ ಮರಗಳಕಡೆಯಿಂದ ಪಂಚವಟಿಗೆ ಬರುತ್ತಿದ್ದೆ. ಒಂದು ನಾಯಿ ನನ್ನನ್ನು ಹಿಂಬಾಲಿಸಿತು. ಪಂಚವಟಿಯ ಹತ್ತಿರ ಸ್ವಲ್ಪ ಹೊತ್ತು ನಿಂತುಕೊಂಡೆ. ಭಾವನೆ ಬಂತು ಬಹುಶಃ ಭಗವತಿ ಈ ನಾಯಿಯ ಮೂಲಕ ನನಗೆ ಏನನ್ನಾದರೂ ತಿಳಿಸಬಹುದೊ ಏನೊ ಅಂತ.

“ಶ್ರದ್ಧೆಯಿಂದ ಎಲ್ಲವೂ ದೊರೆಯುತ್ತದೆ ಎಂಬುದಾಗಿ ನೀನು ಹೇಳಿದ್ದು ಖಂಡಿತ ಸರಿ.”

ಈಶಾನ: “ಆದರೆ ನಾವು ಗೃಹಸ್ಥರು.”

ಶ್ರೀರಾಮಕೃಷ್ಣರು: “ಆದರೇನು? ಭಗವಂತನ ಕೃಪೆಯಿಂದ ಅಸಂಭವವಾದ್ದೂ ಸಂಭವವಾಗಿಬಿಡುತ್ತದೆ. ರಾಮಪ್ರಸಾದ ಹಾಡಿದ: ‘ಮಾಯೆಯ ಚೌಕಟ್ಟಿದು ಈ ಸಂಸಾರ!’ ಎಂಬುದಾಗಿ. ಅದಕ್ಕೆ ಉತ್ತರವಾಗಿ ಇನ್ನೊಬ್ಬ ಒಂದು ಹಾಡನ್ನು ರಚಿಸಿದ:

ಈ ಜಗವೆಂಬುದು ಮೋಜಿನ ಮನೆಯೊ!

ಇದರೊಳು ನಾ ಮನಬಂದೊಲು ನಡೆವೆ. . . . (ಉ. ೨೯೯)

“ಆದರೆ ಮೊದಲು ನಿರ್ಜನಪ್ರದೇಶದಲ್ಲಿ ಗೋಪ್ಯವಾಗಿ ಸಾಧನೆ-ಭಜನೆ ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದು ಈ ಜಗತ್ತಿನಲ್ಲಿದ್ದರೆ ಜನಕರಾಜನಂತೆ ವಾಸಿಸಬಹುದು. ಇಲ್ಲದಿದ್ದರೆ ಏನನ್ನು ತಾನೆ ಸಾಧಿಸಲಾದೀತು?

“ಉದಾಹರಣೆಗೆ ಶಿವನನ್ನು ತೆಗೆದುಕೋ. ಆತನಿಗೆ ಎಲ್ಲರೂ ಇದಾರೆ —ಕಾರ್ತಿಕೇಯ, ಗಣೇಶ, ಲಕ್ಷ್ಮಿ, ಸರಸ್ವತಿ. ಆದರೂ ಶಿವ ಕೆಲವು ವೇಳೆ ಸಮಾಧಿಸ್ಥನಾಗಿರುತ್ತಾನೆ, ಇನ್ನೂ ಕೆಲವು ವೇಳೆ ‘ರಾಮ, ರಾಮ’ ಅಂತ ನರ್ತಿಸುತ್ತಿರುತ್ತಾನೆ.”



೧೪

## ವೈಷ್ಣವರಿಗೆ ಮತ್ತು ಬ್ರಾಹ್ಮಭಕ್ತರಿಗೆ ಹಿತೋಪದೇಶ

೨೨ನೆ ಸೆಪ್ಟೆಂಬರ್ ೧೮೮೩, ಭಾದ್ರಪದ ಕೃಷ್ಣ ಸಪ್ತಮಿ, ಭಾನುವಾರ.

ಪರಮಹಂಸರು ದಕ್ಷಿಣೇಶ್ವರದಲ್ಲಿ ರಾಖಾಲ, ಮಾಸ್ಟರ್ ಮತ್ತು ಇನ್ನೂ ಕೆಲವು ಭಕ್ತರೊಡನೆ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಹಾಜರಾ ಹೊರಗಿನ ವರಾಂಡದಲ್ಲಿ ಕುಳಿತಿದಾನೆ. ಪರಮಹಂಸರು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ಒಬ್ಬನಿಗೆ: "ನಿನ್ನನ್ನು ಕಂಡರೂ ಈಗ ಕೆಲವು ಕಾಲದಿಂದ ನರೇಂದ್ರನಿಗೆ ಆಗುತ್ತಿಲ್ಲ. (ಮಾಸ್ಟರಿಗೆ) ಏಕೆ ಆತ ನನ್ನನ್ನು ನೋಡಲು ಅಧರಸೇನನ ಮನೆಗೆ ಬರಲಿಲ್ಲ?

"ನರೇಂದ್ರನಲ್ಲಿ ಎಷ್ಟೊಂದು ಗುಣಗಳು! ಹಾಡುವುದರಲ್ಲಿ, ಬಾಜಿಸುವುದರಲ್ಲಿ, ಓದು ಬರಹದಲ್ಲಿ ಎಲ್ಲದರಲ್ಲೂ ನಿಪುಣ. ಆತ ಸ್ವಾತಂತ್ರ್ಯಪ್ರೇಮಿ. ಯಾರನ್ನೂ ಲೆಕ್ಕಕ್ಕೇ ಇಡುವುದಿಲ್ಲ. ಅಂದು ಕ್ಯಾಪ್ಟೆನ್ನನ ಗಾಡಿಯಲ್ಲಿ ಕಲ್ಕತ್ತದಿಂದ ಹಿಂದಿರುಗುತ್ತಿದ್ದ. ನರೇಂದ್ರ ಬಂದು ತನ್ನ ಹತ್ತಿರ ಕುಳಿತುಕೊಳ್ಳಬೇಕೆಂದು ಕ್ಯಾಪ್ಟೆನ್ ಆತನನ್ನು ಬಹಳವಾಗಿ ಕೇಳಿಕೊಂಡ. ಆದರೂ ಆತ ಹೋಗಿ ಆತನ ಎದುರು ಪಕ್ಕದಲ್ಲೇ ಕುಳಿತುಕೊಂಡ. ಕ್ಯಾಪ್ಟೆನ್ನನ ಕಡೆ ಕಣ್ಣೆತ್ತಿ ಕೂಡ ನೋಡಲಿಲ್ಲ.

"ಕೇವಲ ಪಾಂಡಿತ್ಯದಿಂದ ಏನು ದೊರೆತೀತು? ಸಾಧನೆ ಭಜನೆ ಮಾಡಬೇಕು. ಇಂದೇಶದ ಗೌರಿ, ಪಂಡಿತನೂ ಆಗಿದ್ದ ಸಾಧಕನೂ ಆಗಿದ್ದ. ಆತ ಒಬ್ಬ ಶಕ್ತಿ ಸಾಧಕ. ಭಗವತಿಯ ಭಾವದಿಂದ ಆಗಾಗ ಉನ್ಮತ್ತನಾಗಿಬಿಡುತ್ತಿದ್ದ. ಆಗಾಗ ಆತ ಸ್ತೋತ್ರ ಮಾಡುತ್ತಿದ್ದ: 'ಹಾರೇ ರೇ ನಿರಾಲಂಬಲಂಬೋದರಜನನೀ ಕಂ ಯಾಮಿ ಶರಣಮ್?' ಆಗ ಉಳಿದ ಪಂಡಿತರೆಲ್ಲ ಆತನ ಎದುರು ಎರೆಹುಳುವಿನಂತೆ ಆಗಿಬಿಡುತ್ತಿದ್ದರು. ನಾನೂ ಭಾವಾವಿಷ್ಟನಾಗಿಬಿಡುತ್ತಿದ್ದೆ.

"ಮೊದಮೊದಲು ಗೌರೀಪಂಡಿತ ಮತಭ್ರಾಂತ ಶಾಕ್ತನಾಗಿದ್ದ. ತುಳಸಿ ಪತ್ರೆಯನ್ನು ಆತ ಎರಡು ಕಡ್ಡಿಯ ಸಹಾಯದಿಂದ ಎತ್ತುತ್ತಿದ್ದ— ಕೈಗೆ ಸೋಕದೆ ಇರಲಿ ಅಂತ. (ಎಲ್ಲರೂ ನಗುತ್ತಿದಾರೆ.) ಅನಂತರ ತನ್ನ

ಮನೆಗೆ ಹೋದ. ಅಲ್ಲಿಂದ ಹಿಂದಿರುಗಿ ಬಂದ ಮೇಲೆ ಆ ರೀತಿಯಾಗಿ ಮತ್ತೆ ಆತ ವರ್ತಿಸಲಿಲ್ಲ. ಹಿಂದೂ ಪುರಾಣಗಳ ಸಂಬಂಧವಾಗಿ ಬಹಳ ಒಳ್ಳೆ ವ್ಯಾಖ್ಯಾನ ಕೊಡುತ್ತಿದ್ದ. ಆತ ಹೇಳುತ್ತಿದ್ದ: ರಾವಣನ ದಶಮುಖ ಗಳೇ ದಶೇಂದ್ರಿಯಗಳು. ಕುಂಭಕರ್ಣ ತಮೋಗುಣದ, ರಾವಣ ರಜೋ ಗುಣದ, ವಿಭೀಷಣ ಸತ್ತ್ವಗುಣದ ಪ್ರತೀಕಗಳು. ಅದಕ್ಕಾಗೇ ವಿಭೀಷಣ ರಾಮನ ಸಾಕ್ಷಾತ್ಕಾರ ಪಡೆದುಕೊಂಡ.''

ಪರಮಹಂಸರು ಮಧ್ಯಾಹ್ನದ ಊಟವಾದನಂತರ ವಿಶ್ರಮಿಸಿಕೊಳ್ಳು ತ್ತಿದ್ದಾಗ ಕಲ್ಕತ್ತದಿಂದ ರಾಮ, ತಾರಕ (ಶಿವಾನಂದ), ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮ ಮಾಡಿ ಒಂದು ಕಡೆ ಕುಳಿತುಕೊಂಡರು.

ನಿತ್ಯಗೋಪಾಲ, ತಾರಕ ಮತ್ತು ಇನ್ನೂ ಕೆಲವರು ರಾಮನ ಮನೆ ಯಲ್ಲೆ ಇರುತ್ತಿದ್ದರು. ನಿತ್ಯಗೋಪಾಲ ಯಾವಾಗಲೂ ಭಾವಾವಿಷ್ಟನಾಗೇ ಇರುತ್ತಿದ್ದ. ತಾರಕನ ಮನಸ್ಸು ಯಾವಾಗಲೂ ಅಂತರ್ಮುಖವಾಗೇ ಇರುತ್ತಿತ್ತು. ಅಪರೂಪಕ್ಕೆ ಒಮ್ಮೆ ಆತ ಇತರರೊಡನೆ ಮಾತುಕತೆಯಾಡು ತ್ತಿದ್ದ. ರಾಮ ಅವರಿಗೆಲ್ಲ ಊಟಕ್ಕೆ ಹಾಕುತ್ತಿದ್ದ. ರಾಖಾಲ ಆಗಾಗ ತನ್ನ ಕೆಲವು ದಿನಗಳನ್ನ ಅಧರಸೇನನೊಡನೆ ಕಳೆಯುತ್ತಿದ್ದ.

ರಾಮ: ''ನಾವೆಲ್ಲರೂ ಮೃದಂಗ ಕಲಿಯುತ್ತಿದೇವೆ.''

ಶ್ರೀರಾಮಕೃಷ್ಣರು ರಾಮನಿಗೆ: ''ನಿತ್ಯಗೋಪಾಲ ಕೂಡ?''

ರಾಮ: ''ಚೆನ್ನಾಗೇನಿಲ್ಲ. ಸಾಮಾನ್ಯವಾಗಿ ಬಾಜಿಸಬಲ್ಲ.''

ಶ್ರೀರಾಮಕೃಷ್ಣರು: ''ತಾರಕನೊ?''

ರಾಮ: ''ಆತ ಹೆಚ್ಚಾಗಿ ಕಲಿತಿದಾನೆ.''

ಶ್ರೀರಾಮಕೃಷ್ಣರು: ''ಅದು ಹಾಗಿದ್ದರೆ, ಅಷ್ಟೊಂದಾಗಿ ಆತ ನೆಲದ ಕಡೆಗೆ ಮುಖ ತಿರುಗಿಸಿ ಇರಲಾಗುತ್ತಿರಲಿಲ್ಲ. ಮನಸ್ಸು ಬೇರೆ ವಸ್ತುವಿನ ಕಡೆ ಬಹಳವಾಗಿ ಹರಿದುಹೋದರೆ, ಭಗವಂತನ ಕಡೆ ಗಾಢ ವಾಗೇನು ಇರಲಾರದು.''

ರಾಮ: ''ನಾನು ಕಲಿಯುತ್ತಿರುವುದು ಸಂಕೀರ್ತನೆಯ ಸಮಯ ದಲ್ಲಿ ಹಿಂಬಾಲಿಸಲಾಗುವಷ್ಟು.''

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ನೀನು ಹಾಡುವುದನ್ನು ಕಲಿ ಯುತ್ತಾ ಇದೀಯಂತೆ, ನಿಜವೆ?''

ಮಾಸ್ಟರ್ ನಗುತ್ತ: "ಇಲ್ಲ. ಸುಮ್ಮನೆ ಸ್ವಲ್ಪ 'ಊ, ಆ' ಅಂತ ಹೇಳುತ್ತೇನೆ."

ಶ್ರೀರಾಮಕೃಷ್ಣರು: "ನೀನು ಆ ಹಾಡನ್ನು—'ನನ್ನನೂ ಉನ್ಮತ್ತನಾಗಿಸೆಲೆ ತಾಯೆ' ಎಂಬ ಹಾಡನ್ನು ಅಭ್ಯಾಸಮಾಡಿದೀಯೇನು? ಮಾಡಿದ್ದರೆ ಹಾಡು. ಅದು ನನ್ನ ಭಾವವನ್ನು ಪೂರ್ಣವಾಗಿ ವ್ಯಕ್ತಪಡಿಸುತ್ತದೆ."

ಮಾತುಕತೆ ಹಾಜರಾ ಕೆಲಕೆಲವರ ಮೇಲೆ ಇಟ್ಟಿರುವ ದ್ವೇಷದ ಮೇಲೆ ಶುರುವಾಯಿತು. ಆತ ಹಾಗೆ ಮಾಡುತ್ತಿರುವುದು ಪರಮಹಂಸರಿಗೆ ಒಪ್ಪುತ್ತಿಲ್ಲ.

ಶ್ರೀರಾಮಕೃಷ್ಣರು ಭಕ್ತರಿಗೆ: "ನಾನು ಕಾಮಾರಪುಕುರಿನಲ್ಲಿದ್ದಾಗ ಆಗಾಗ ಒಂದು ಮನೆಗೆ ಹೋಗುತ್ತಿದ್ದೆ. ಆ ಮನೆಯ ಹುಡುಗರು ನನ್ನ ಸಮವಯಸ್ಕರು. ಅಂದು ಅವರು ಇಲ್ಲಿಗೆ ಬಂದಿದ್ದರು; ಎರಡು ಮೂರು ದಿನ ಇದ್ದರು. ಅವರ ತಾಯಿ ಹಾಜರಾನ ಹಾಗೆ ಎಲ್ಲರನ್ನೂ ದ್ವೇಷಿಸುತ್ತಿದ್ದಳು. ಆಕೆಯ ಕಾಲಿಗೆ ಏನೊ ಒಂದು ಆಗಿ ಕೊನೆಗೆ ಅಂಗಕ್ಷಯ ರೋಗ ಬಂತು. ಕಾಲು ಕೊಳೆತು ನಾರಲಾರಂಭಿಸಿತು. ಆಕೆಯಿದ್ದ ಕೊಠಡಿಯಲ್ಲಿ ಅಂಥ ದುರ್ವಾಸನೆ, ಬೇರೆ ಯಾರೂ ಒಳಕ್ಕೆ ಹೋಗಲಾಗುತ್ತಿರಲಿಲ್ಲ. ಹಾಜರಾನಿಗೆ ಈ ವಿಷಯ ತಿಳಿಸಿ ಯಾರನ್ನೂ ದ್ವೇಷಿಸಬೇಡ ಅಂತ ಹೇಳಿದೆ."

ಸಾಯಂಕಾಲವಾಗಿದೆ. ಪರಮಹಂಸರು ದೇವಾಲಯದ ಒಳಅಂಗಳದ ವಾಯುವ್ಯ ಮೂಲೆಯಲ್ಲಿ ನಿಂತಿದ್ದ ಹಾಗೇ ಸಮಾಧಿಸ್ಥರಾಗಿಬಿಟ್ಟಿದಾರೆ. ಈಗ ಕೆಲವು ಕಾಲದಿಂದ ಪರಮಹಂಸರು ಯಾವಾಗ ನೋಡಿದರೂ ಸಮಾಧಿಸ್ಥರಾಗೇ ಇರುತ್ತಿದಾರೆ. ಸಾಮಾನ್ಯ ಉದ್ದೀಪನವೇ ಸಾಕು ಅವರನ್ನು ಬಾಹ್ಯಜ್ಞಾನಶೂನ್ಯರನ್ನಾಗಿ ಮಾಡುವುದಕ್ಕೆ. ಭಕ್ತರು ಬಂದಾಗ ಎಲ್ಲೋ ಅವರೊಡನೆ ಸ್ವಲ್ಪ ಹೊತ್ತು ಮಾತುಕತೆ ಆಡುತ್ತಾರೆ. ಇಲ್ಲದೆ ಇತ್ತು ಎಂದರೆ ಸರ್ವದಾ ಅಂತರ್ಮುಖರಾಗೇ ಇರುತ್ತಾರೆ. ಪೂಜೆ, ಜಪ, ಇತ್ಯಾದಿ ಕರ್ಮ ಈಗ ಅವರ ಕೈಯಲ್ಲಿ ಸಾಗುತ್ತಿಲ್ಲ.

ಪರಮಹಂಸರು ಪ್ರಕೃತಿಸ್ಥರಾಗಿ ನಿಂತಲ್ಲೇ ನಿಂತು ಭಗವತಿಯೊಡನೆ ಮಾತುಕತೆಯಾಡುತ್ತಿದಾರೆ. ಈಗ ಹೇಳುತ್ತಿದಾರೆ: "ಹೇ ತಾಯೆ, ಪೂಜೆ ಮಾಡುವುದೂ ನಿಂತುಹೋಯಿತು; ಜಪ ಮಾಡುವುದೂ ನಿಂತುಹೋಯಿತು. ದಯವಿಟ್ಟು ನೋಡಿಕೊ ತಾಯೆ, ನಾನು ಒಂದು ಜಡವಸ್ತು ಆಗದ ಹಾಗೆ.

ನನ್ನನ್ನು ಸೇವ್ಯ ಸೇವಕ ಭಾವದಲ್ಲಿ ಇಡು. ಹೇ ತಾಯೆ, ನಿನ್ನ ಸಂಬಂಧ ವಾಗಿ ಮಾತುಕತೆಯಾಡುವ ಹಾಗೆ, ನಿನ್ನ ನಾಮಗುಣಕೀರ್ತನೆ ಮಾಡುವ ಹಾಗೆ ಸಾಧ್ಯವಾಗುವಂತೆ ಇಡು. ನಿನ್ನ ವೈಭವವನ್ನು ನಾನು ಸ್ತುತಿಸ ಬೇಕು ಅಂತ ಇದೇನೆ ತಾಯೆ. ಈ ಶರೀರಕ್ಕೆ ಸ್ವಲ್ಪ ಶಕ್ತಿ ಕೊಡು. ಅದು ತಾನೇ ನಡೆಯುವಂತಾಗಲಿ. ಎಲ್ಲಿ ನಿನ್ನ ಸಂಬಂಧವಾಗಿ ಕಥಾಶ್ರವಣ ವಾಗುತ್ತೊ, ಎಲ್ಲಿ ನಿನ್ನ ಭಕ್ತರಿದಾರೊ ಅಲ್ಲಿಗೆಲ್ಲಾ ಅದು ಹೋಗಿಬರು ವಂತಾಗಲಿ.''

ಪರಮಹಂಸರು ಇಂದು ಪ್ರಾತಃಕಾಲ ಹೋಗಿ ಭಗವತಿಯ ಪಾದ ಪದ್ಮಗಳಲ್ಲಿ ಪುಷ್ಪಾಂಜಲಿಯನ್ನು ಅರ್ಪಿಸಿಬಂದಿದ್ದರು.

ಭಗವತಿಯೊಡನೆ ತಮ್ಮ ಮಾತನ್ನು ಮುಂದುವರಿಸುತ್ತ ಪರಮ-ಹಂಸರು ಹೇಳುತ್ತಿದಾರೆ: ''ಇಂದು ಪ್ರಾತಃಕಾಲ ನಿನ್ನ ಪಾದಪದ್ಮಗಳಲ್ಲಿ ಪುಷ್ಪಾಂಜಲಿಯನ್ನಿತ್ತು ಬಂದೆ. ಆಗ ಯೋಚನೆ ಬಂತು: 'ಛೇಷ್, ನನ ಮನಸ್ಸು ಬಾಹ್ಯಪೂಜೆಯ ಕಡೆ ಹೋಗುತ್ತಿದೆ. ಆದರೆ ಹೀಗನಿಸುತ್ತಿದೆ ಯಲ್ಲ ಏಕೆ? ಮತ್ತೆ ನನ್ನನ್ನು ಜಡನಂತೆ ಮಾಡಿಬಿಡುತ್ತೀಯಲ್ಲ ಏಕೆ?''

ಇಂದು ಕೃಷ್ಣಪಕ್ಷದ ಸಪ್ತಮಿಯಾದ್ದರಿಂದ ಇನ್ನೂ ಚಂದ್ರೋದಯ ವಾಗಿಲ್ಲ. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ತಮ್ಮ ಕೊಠಡಿ ಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತು ಭಗವತಿಯೊಡನೆ ಮಾತುಕತೆಯಾಡು ತ್ತಿದಾರೆ. ಈಗ ಹೇಳುತ್ತಿದಾರೆ: ''ಮತ್ತೆ ಗಾಯತ್ರಿಯ ಈ ಪುರಶ್ಚರಣ ವೇಕೆ? ಈ ನೆಲೆಯಿಂದ ಆ ನೆಲೆಗೆ ಹಾರುವುದು? . . . ಇದನ್ನು ಮಾಡು ವಂತೆ ಯಾರು ಆತನಿಗೆ ಹೇಳಿದರು? ಬಹುಶಃ ತಾನೇ ಸ್ವತಃ ಮಾಡುತ್ತಿರ ಬಹುದು. . . . ಒಳ್ಳೇದು, ಸ್ವಲ್ಪ ಮಾಡಲಿ.''

ಹಿಂದಿನ ದಿನ ಪರಮಹಂಸರು ಈಶಾನನಿಗೆ ತಿಳಿಸಿದ್ದರು, ಈ ಕಲಿ ಯುಗದಲ್ಲಿ ಅನ್ನಗತಪ್ರಾಣವಾದ್ದರಿಂದ ವೇದಾಂತಮತ ಪೂಜೆ ಸೂಕ್ತ ವಾದುದಲ್ಲ. ಭಗವತಿಯನ್ನು ಮಾತೃಭಾವದಿಂದ ಪೂಜೆಮಾಡಬೇಕು ಎಂದು.

ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ: ''ಇವೆಲ್ಲಾ ನನ್ನ ಮಾನಸಿಕ ಕಲ್ಪನೆಯೊ ಅಥವಾ ನಿಜವಾದುವೊ?'' ಪರಮಹಂಸರು ಈ ರೀತಿಯಾಗಿ ಭಗವತಿಯೊಡನೆ ಮಾತುಕತೆಯಾಡುತ್ತಿದ್ದುದನ್ನು ನೋಡಿ ಮಾಸ್ಟರ್ ಆಶ್ಚರ್ಯಚಕಿತನಾಗಿ ಸುಮ್ಮನೆ ಕುಳಿತಿದಾನೆ. ಆತ ಯೋಚಿ

ಸುತ್ತಿದಾನೆ, ಭಗವತಿ ನಮಗೆ ಬಹಳ ಹತ್ತಿರದಲ್ಲಿ ಒಳಗೂ ಹೊರಗೂ ಇರಲೇಬೇಕು. ಇಲ್ಲದಿದ್ದರೆ ಪರಮಹಂಸರಿಗೆ ಆಕೆಯೊಡನೆ "ಪಿಸಿ, ಪಿಸಿ" ಅಂತ ಮಾತನಾಡಲು ಹೇಗೆ ಸಾಧ್ಯವಾಗುತ್ತಿತ್ತು ?

೨೬ನೆ ಸೆಪ್ಟೆಂಬರ್ ೧೮೮೪, ಭಾದ್ರಪದ ಕೃಷ್ಣ ದಶಮಿ, ಬುಧವಾರ.

ಭಾನುವಾರ ರಜಾ ದಿನವಾದ್ದರಿಂದ ಭಕ್ತರಲ್ಲನೇಕರು ಅಂದು ಬರುತ್ತಾರೆ. ಇಂದು ಕೆಲಸಕಾರ್ಯವಿರುವುದರಿಂದ ಎಲ್ಲೋ ಕೆಲವರು ಮಾತ್ರವೇ ಬಂದಿದಾರೆ. ರಾಖಾಲ, ಲಾಟು ತಮ್ಮ ಸಮಯದ ಬಹು ಭಾಗ ವನ್ನು ದಕ್ಷಿಣೇಶ್ವರದಲ್ಲೆ ಕಳೆಯುತ್ತಿದಾರೆ. ಮಾಸ್ಟರ್ ಅಪರಾಹ್ನದಲ್ಲಿ ಬಂದು ನೋಡುತ್ತಾನೆ, ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಮಾತುಕತೆ ನರೇಂದ್ರನ ಸಂಬಂಧವಾಗಿ ಆರಂಭ ವಾಯಿತು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇತ್ತೀಚೆಗೆ ನರೇಂದ್ರ ನಿನಗೆ ಸಿಕ್ಕಿದ್ದನೇನು? (ನಗುತ್ತ) ಆತ ನನಗೆ ಹೇಳಿದ: 'ಇವರು ಇನ್ನೂ ಕಾಳೀ ದೇವಾಲಯಕ್ಕೆ ಹೋಗುತ್ತಿದಾರೆ. ನಿಜವಾದ ಜ್ಞಾನೋದಯವಾಯಿತು ಎಂದರೆ ಮತ್ತೆ ಇವರು ಅಲ್ಲಿಗೆ ಹೋಗುವುದಿಲ್ಲ.' ಆತ ಆಗಾಗ ಇಲ್ಲಿಗೆ ಬರುತ್ತಿರುವುದರಿಂದ ಅವನ ಮನೆಯವರು ಆತನ ಮೇಲೆ ಬಹಳವಾಗಿ ಸಿಟ್ಟು ಗೊಂಡಿದಾರೆ. ಅಂದು ಇಲ್ಲಿಗೆ ಒಂದು ಗಾಡಿ ಮಾಡಿಕೊಂಡು ಬಂದ. ಸುರೇಂದ್ರ ಅದರ ಬಾಡಿಗೆ ಕೊಟ್ಟ. ಅದಕ್ಕಾಗಿ ನರೇಂದ್ರನ ಸೋದರತ್ತೆ ಸುರೇಂದ್ರನ ಮನೆಗೆ ಹೋಗಿ ಒಂದು ದೊಡ್ಡ ಗೊಂದಲವನ್ನೇ ಎಬ್ಬಿಸಿ ಬಂದುಬಿಟ್ಟಳು."

ಪರಮಹಂಸರು ನರೇಂದ್ರನ ಸಂಬಂಧವಾಗಿ ಮಾತಾಡುತ್ತ ಮಾತಾ ಡುತ್ತ ತಮ್ಮ ಮಂಚದಿಂದ ಎದ್ದು ಈಶಾನ್ಯ ವರಾಂಡಕ್ಕೆ ಹೋಗಿ ನಿಂತು ಕೊಂಡಿದಾರೆ. ಅಲ್ಲಿ ಹಾಜರಾ, ಕಿಶೋರಿ, ರಾಖಾಲ ಇವರೇ ಮೊದಲಾದ ಭಕ್ತರು ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಏನು ಈವೊತ್ತು ಇಲ್ಲಿಗೆ ಬಂದು ಬಿಟ್ಟೆಯಲ್ಲ ? ಸ್ಕೂಲಿಲ್ಲವೆ ?"

ಮಾಸ್ಟರ್: "ಈ ದಿನ ನಮ್ಮ ಸ್ಕೂಲನ್ನು ಒಂದೂವರೆ ಘಂಟೆಗೆ ಮುಚ್ಚಿಬಿಟ್ಟರು."

ಶ್ರೀರಾಮಕೃಷ್ಣರು: "ಏಕೆ ಅಷ್ಟು ಹೊತ್ತಿಗೆ ಮುಂಚೆ ?"

ಮಾಸ್ಟರ್: "ಸ್ಕೂಲು ನೋಡಲು ವಿದ್ಯಾಸಾಗರ ಬಂದಿದ್ದರು. ಸ್ಕೂಲು ಅವರದಾದುದರಿಂದ, ಅವರು ಸ್ಕೂಲಿಗೆ ಭೇಟಿ ಕೊಟ್ಟಾಗಲೆಲ್ಲಾ ಮಕ್ಕಳು ಆನಂದಪಡಲಿ ಎಂದು ಅರ್ಧ ದಿನ ರಜಾ ಕೊಡಲಾಗುತ್ತಿದೆ."

ಶ್ರೀರಾಮಕೃಷ್ಣರು: "ವಿದ್ಯಾಸಾಗರ ತನ್ನ ಮಾತಿನಂತೆ ನಡೆದುಕೊಳ್ಳುವುದಿಲ್ಲ ಏಕೆ? 'ಸತ್ಯವಚನವಾಡುವುದು, ಪರಸ್ತ್ರೀಯನ್ನು ಮಾತೃಸಮಾನವಾಗಿ ಕಾಣುವುದು ಇವುಗಳಿಂದ ಭಗವಂತನ ಸಾಕ್ಷಾತ್ಕಾರ ದೊರೆಯದಿದ್ದರೆ ತುಳಸೀದಾಸ ಒಬ್ಬ ಮಿಥ್ಯಾವಾದಿಯಾಗುತ್ತಾನೆ.' ಮನುಷ್ಯ ಸತ್ಯಾರ್ಥಿಯಾಗಿದ್ದರೆ ಆತನಿಗೆ ಭಗವಂತನ ಸಾಕ್ಷಾತ್ಕಾರ ದೊರೆತೇ ದೊರೆಯುತ್ತದೆ. ಅಂದು ವಿದ್ಯಾಸಾಗರ ಹೇಳಿದ ತಾನು ಇಲ್ಲಿಗೆ ಬಂದು ನನ್ನನ್ನು ನೋಡುವುದಾಗಿ. ಆದರೆ ಅದರಂತೆ ನಡೆದುಕೊಳ್ಳಲಿಲ್ಲ.

"ಪಂಡಿತನಿಗೂ ಸಾಧುವಿಗೂ ಅಜಗಜಾಂತರ ವ್ಯತ್ಯಾಸ. ಯಾರು ಕೇವಲ ಪಂಡಿತರೊ ಅವರಿಗೆ ಕಾಮಕಾಂಚನಗಳಲ್ಲಿ ಮನಸ್ಸಿರುತ್ತದೆ. ಆದರೆ ಸಾಧುಗಳ ಮನಸ್ಸು ಹರಿಪಾದಪದ್ಮಗಳಲ್ಲಿ ನೆಲಸಿರುತ್ತದೆ. ಪಂಡಿತ ಬಾಯಲ್ಲಿ ಹೇಳುವುದು ಒಂದು ಕೈಯಲ್ಲಿ ಮಾಡುವುದು ಒಂದು. ಸಾಧುಗಳ ಮಾತು ಬಿಟ್ಟುಬಿಡು. ಸಾಮಾನ್ಯವಾಗಿ ಯಾರು ಹರಿಪಾದಪದ್ಮಗಳಲ್ಲಿ ಮನಸ್ಸಿಟ್ಟಿರುತ್ತಾರೊ ಅವರ ಮಾತುಕತೆ, ವರ್ತನೆ ಎಲ್ಲಾ ಪ್ರತ್ಯೇಕ. ಕಾಶಿಯಲ್ಲಿ ನಾನಕ್‌ಪಂಥದ ಒಬ್ಬ ಯುವಕ ಸನ್ಯಾಸಿಯನ್ನು ನೋಡಿದೆ. ಅವನಿಗೆ ವಯಸ್ಸು ನಿನ್ನಷ್ಟೆ. ನನ್ನನ್ನು ಸಂಬೋಧಿಸುತ್ತಿದ್ದ: 'ಪ್ರೇಮೀ ಸಾಧು' ಎಂದು. ಕಾಶಿಯಲ್ಲಿ ಅವರ ಪಂಥದ ಒಂದು ಮಠ ಇದೆ. ಅಲ್ಲಿಗೆ ಅವರು ಒಂದು ದಿನ ನನ್ನನ್ನು ಕರೆದುಕೊಂಡುಹೋದರು. ಅಲ್ಲಿನ ಮಹಂತ ಮನೆಯ ಒಳ್ಳೆ ಯಜಮಾನಿಯ ಹಾಗೆ ಕಂಡ. ಆತನನ್ನು ಕೇಳಿದೆ: 'ಮಾರ್ಗವೇನು?' ಆತ ಉತ್ತರವಿತ್ತ: 'ಕಲಿಯುಗಕ್ಕೆ ನಾರದೀಯ ಭಕ್ತಿ.' ನಾನು ಹೋಗಿದ್ದಾಗ ಆತ ಸ್ತೋತ್ರಪಾಠ ಮಾಡುತ್ತಿದ್ದ. ಅದು ಮುಗಿದನಂತರ ಹೇಳಲಾರಂಭಿಸಿದ: 'ಜಲದಲ್ಲಿ ವಿಷ್ಣು, ಸ್ಥಲದಲ್ಲಿ ವಿಷ್ಣು, ಪರ್ವತದ ತುದಿಯಲ್ಲೂ ವಿಷ್ಣು. ಈ ಇಡೀ ಜಗತ್ತೇ ವಿಷ್ಣುಮಯ.' ಕೊನೆಗೆ ಹೇಳಿದ: 'ಶಾಂತಿಃ! ಶಾಂತಿಃ! ಪ್ರಶಾಂತಿಃ!' ಅಂತ.

"ಒಂದು ದಿನ ಗೀತಾ ಪಠನ ಮಾಡುತ್ತಿದ್ದ. ಆತ ಅಷ್ಟು ಕಟ್ಟುನಿಟ್ಟಿನವ, ಪ್ರಾಪಂಚಿಕರ ಕಡೆ ಮುಖಮಾಡಿ ಅದನ್ನು ಪಠಿಸುತ್ತಿರಲಿಲ್ಲ! ನನ್ನ ಕಡೆಗೆ ತಿರುಗಿ ಪಠಿಸಲಾರಂಭಿಸಿದ. ಮಥುರಬಾಬುವೂ ನನ್ನೊಡನೆ

ಇದ್ದ. ಆತನ ಕಡೆಗೆ ಬೆನ್ನು ತಿರುಗಿಸಿಬಿಟ್ಟೆ. ಈ ನಾನಕ್‌ಪಂಥದ ಸಾಧುವೇ ನನಗೆ ಹೇಳಿದವನು, ಉಪಾಯ 'ನಾರದೀಯ ಭಕ್ತಿ' ಅಂತ.''

ಮಾಸ್ಟರ್: ''ಏನು, ಆ ಸಾಧುಗಳು ವೇದಾಂತವಾದಿಗಳಲ್ಲವೇನು?

ಶ್ರೀರಾಮಕೃಷ್ಣರು: ''ಹೌದು, ವೇದಾಂತವಾದಿಗಳೇ. ಆದರೆ ಭಕ್ತಿಮಾರ್ಗವನ್ನೂ ಅನುಮೋದಿಸುತ್ತಾರೆ. ಆದರೆ ನೋಡು, ಈ ಕಲಿ ಯುಗದಲ್ಲಿ ವೇದಾಂತ ಮತದಂತೆ ನಡೆಯಲು ಸಾಧ್ಯವಿಲ್ಲ. ಒಮ್ಮೆ ಒಬ್ಬ ಹೇಳಿದ, ತಾನು ಗಾಯತ್ರಿ ಪುರಶ್ಚರಣ ಮಾಡುವುದಾಗಿ. ನಾನು ಆತನಿಗೆ ಹೇಳಿದೆ: 'ಏಕೆ ಅದರಲ್ಲಿ ತೊಡಗಬೇಕು? ಕಲಿಯುಗಕ್ಕೆ ತಂತ್ರೋಕ್ತ ಮತ. ಇದರಲ್ಲಿ ಪುರಶ್ಚರಣೆ ಸಾಧ್ಯವಿಲ್ಲವೇನು?'

''ವೈದಿಕ ಕರ್ಮ ಬಹಳ ಕಠಿನವಾದ್ದು. ಜೊತೆಗೆ ಈಗ ಎಲ್ಲಿ ನೋಡಿ ದರೂ ದಾಸತ್ವ. ಒಂದು ಹೇಳಿಕೆ ಇದೆ, ಹನ್ನೆರಡು ವರ್ಷವೊ ಏನೊ ದಾಸತ್ವ ಮಾಡಿದ್ದೇ ಆದರೆ ಕೊನೆಗೆ ಮನುಷ್ಯ ದಾಸನೇ ಆಗಿಬಿಡುತ್ತಾನೆ ಅಂತ. ಅಷ್ಟೊಂದು ಕಾಲ ದಾಸತ್ವ ಮಾಡಿದರೆ ಯಜಮಾನನ ಗುಣ ಗಳೆಲ್ಲಾ ದಾಸನಿಗೆ ಬಂದುಬಿಡುತ್ತವೆ—ಯಜಮಾನನ ರಾಜಸಿಕ ಮತ್ತು ತಾಮಸಿಕ ಗುಣ, ಹಿಂಸಾಪ್ರವೃತ್ತಿ, ವಿಲಾಸವಿಭ್ರಮ ಎಲ್ಲಾ ಬಂದುಬಿಡು ತ್ತವೆ. ಕೇವಲ ಅವರಿಗೆ ಬರೀ ದಾಸತ್ವವೇ ಅಲ್ಲ, ಅನಂತರ ಅದರ ವಿಶ್ರಾಂತಿ ವೇತನವೂ ದೊರೆಯುತ್ತದೆ.

''ಒಮ್ಮೆ ಇಲ್ಲಿಗೆ ಒಬ್ಬ ವೇದಾಂತವಾದಿ ಸಾಧು ಬಂದಿದ್ದ. ಮೇಘ ಕಣ್ಣಿಗೆ ಬಿತ್ತು ಎಂದರೆ ನರ್ತಿಸುತ್ತಿದ್ದ. ಬಿರುಗಾಳಿ ಮಳೆ ಕಂಡರೆ ಬಹಳ ಆನಂದ. ಧ್ಯಾನದ ಸಮಯದಲ್ಲಿ ಯಾರಾದರೂ ಆತನನ್ನು ಸಮೀಪಿಸಿದರೆ ಆತನಿಗೆ ಉಗ್ರ ಕೋಪ ಬಂದುಬಿಡುತ್ತಿತ್ತು. ಒಂದು ದಿನ ನಾನು ಹಾಗೇ ಹೋಗಿಬಿಟ್ಟೆ. ಸಮೀಪಿಸಿದ ಒಡನೇ ಆತನಿಗೆ ಬಹಳವಾಗಿ ಸಿಟ್ಟು ಬಂತು. ಯಾವಾಗ ನೋಡಿದರೂ 'ಬ್ರಹ್ಮ ಸತ್ಯಂ, ಜಗನ್ಮಿಥ್ಯಾ' ಅಂತ ವಿಚಾರ ದಲ್ಲಿ ತೊಡಗಿರುತ್ತಿದ್ದ. ನಾನಾತ್ವಕ್ಕೆ ಮಾಯೆಯೇ ಕಾರಣವಾದ್ದರಿಂದ, ಕೈಯಲ್ಲಿ ಯಾವಾಗಲೂ ಗೊಂಚಲುದೀಪದ ಒಂದು ಮುಪ್ಪಟ್ಟೆ ಗಾಜನ್ನು (ಪ್ರಿಸಮ್) ಇಟ್ಟುಕೊಂಡಿರುತ್ತಿದ್ದ. ಅದರ ಮೂಲಕ ನೋಡಿದರೆ ಅನೇಕ ಬಣ್ಣಗಳು ಕಣ್ಣಿಗೆ ಬೀಳುತ್ತವೆ; ಆದರೆ ವಾಸ್ತವಿಕವಾಗಿ ಯಾವ ಬಣ್ಣವೂ ಇಲ್ಲ. ಹಾಗೇನೆ ವಸ್ತುತಃ ಬ್ರಹ್ಮ ಹೊರತು ಬೇರೇನೂ ಇಲ್ಲ. ಆದರೆ ಮಾಯೆಯ ದೆಸೆಯಿಂದ, ಅಹಂಕಾರದ ದೆಸೆಯಿಂದ ನಾನಾತ್ವ ಕಣ್ಣಿಗೆ

ಬೀಳುತ್ತಿದೆ. ಮಾಯೆಯ ಬಲೆಗೆ ಬೀಳಬೇಕಾಗಿ ಬರಬಹುದು, ಆಸಕ್ತಿಯುಂಟಾಗಬಹುದು ಎಂದು ಹೆದರಿ ಯಾವ ವಸ್ತುವನ್ನೂ ಆತ ಒಂದು ಸಲಕ್ಕಿಂತ ಹೆಚ್ಚಾಗಿ ನೋಡುತ್ತಿರಲಿಲ್ಲ. ಸ್ನಾನದ ಸಮಯದಲ್ಲಿ ಹಕ್ಕಿ ಹಾರುವುದನ್ನು ನೋಡಿ ವಿಚಾರದಲ್ಲಿ ತೊಡಗುತ್ತಿದ್ದ. ಆತನಿಗೆ ವ್ಯಾಕರಣ ಚೆನ್ನಾಗಿ ಗೊತ್ತಿತ್ತು. ಇಲ್ಲಿ ಮೂರು ದಿನ ಮಾತ್ರ ಇದ್ದ. ಒಂದು ದಿನ ನದಿಯ ದಡದ ಹತ್ತಿರ ಕೊಳಲ ನಾದ ಆಗುತ್ತಿರುವುದನ್ನು ಕೇಳಿ ಹೇಳಿದ, ಯಾರಿಗೆ ಬ್ರಹ್ಮದರ್ಶನವಾಗಿದೆಯೊ ಆತನ ಕಿವಿಗೆ ಇದು ಬಿತ್ತು ಎಂದರೆ, ಆತ ಸಮಾಧಿಸ್ಥನಾಗಿಬಿಡುತ್ತಾನೆ ಎಂದು.''

ಪರಮಹಂಸರು ಸಾಧುಗಳ ಸಂಬಂಧವಾಗಿ ಮಾತನಾಡುತ್ತ ಮಾತನಾಡುತ್ತ ಪರಮಹಂಸನ ಅವಸ್ಥೆಯ ಸಂಬಂಧವಾಗಿ ಭಕ್ತರಿಗೆ ತೋರಿಸಲಾರಂಭಿಸಿದಾರೆ. ಬಾಲಕನ ಹಾಗೆ ಚಲನವಲನ ಮಾಡುತ್ತಿದಾರೆ. ಮುಖದಲ್ಲಿ ನಗೆ ಸುಮ್ಮನೆ ಒಡೆದು ಮೂಡುತ್ತಿದೆ. ದಿಗಂಬರರಾಗಿದಾರೆ. ಕಣ್ಣು ಆನಂದಬಾಷ್ಪ ಸುರಿಸುತ್ತಿವೆ. ಮತ್ತೆ ಅವರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಎಂದಿನಂತೆ ತಮ್ಮ ಮನಮುಗ್ಧಕರ ಮಾತುಗಳನ್ನು ಹೊರಗೆಡಹುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ನಾನು ತೋತಾಪುರಿಯಿಂದ ವೇದಾಂತೋಪದೇಶ ಪಡೆದೆ: 'ಬ್ರಹ್ಮ ಸತ್ಯಂ, ಜಗನ್ಮಿಥ್ಯಾ' ಎಂದು. ಐಂದ್ರಜಾಲಿಕ ಇಂದ್ರಜಾಲ ತೋರಿಸುತ್ತಾನೆ. ಆತ ಮಾವಿನ ಗಿಡವನ್ನು ಹುಟ್ಟಿಸಿ ತೋರಿಸುತ್ತಾನೆ. ಅದು ಹಣ್ಣು ಕೂಡ ಬಿಟ್ಟುಬಿಡುತ್ತದೆ. ಆದರೆ ಇದೆಲ್ಲ ಕೇವಲ ಇಂದ್ರಜಾಲ ಮಾತ್ರ. ನಿಜವಾಗಿ ಇರತಕ್ಕವನು ಐಂದ್ರಜಾಲಿಕನೊಬ್ಬನೇ.''

ಮಾಸ್ಟರ್: ''ನಮ್ಮ ಜೀವನ ಒಂದು ದೀರ್ಘ ನಿದ್ರೆ ಇದ್ದ ಹಾಗೆ. ಇದು ಮಾತ್ರ ನನಗೆ ಅರ್ಥವಾಗುತ್ತಿದೆ, ನಾವು ಸರಿಯಾದ ರೀತಿಯಲ್ಲಿ ಈ ಜಗತ್ತನ್ನು ನೋಡುತ್ತಿಲ್ಲ ಅಂತ. ಕಣ್ಣೆದುರಿಗಿರುವ ಈ ಆಕಾಶದ ಸ್ವರೂಪ ಏನು ಎಂಬುದನ್ನೇ ಅರಿಯಲಾರದ ಈ ಮನಸ್ಸಿನಿಂದ ಈ ಜಗತ್ತಿನ ಸ್ವರೂಪ ಏನು ಎಂಬುದನ್ನು ಅರಿಯಲು ಪ್ರಯತ್ನಿಸುತ್ತಿದೇವೆ. ಆದ್ದರಿಂದ ನಾವು ಅದರ ಸ್ವರೂಪವನ್ನು ಅದು ಇರುವ ರೀತಿಯಲ್ಲಿ ಕಾಣುವ ಬಗೆ ಹೇಗೆ?''

ಶ್ರೀರಾಮಕೃಷ್ಣರು: ''ಇದನ್ನು ಇನ್ನೊಂದು ದೃಷ್ಟಿಯಿಂದ ನೋಡಬಹುದು. ಆಕಾಶವನ್ನು ಅದು ಇರುವ ರೀತಿಯಲ್ಲಿ ನಾವು ನೋಡಲಾಗುತ್ತಿಲ್ಲ.

ದಿಗಂತದಲ್ಲಿ ಆಕಾಶ ಭೂಮಿಯನ್ನು ಮುಟ್ಟುತ್ತಿರುವಂತೆ ಕಾಣುತ್ತದೆ. ಮನುಷ್ಯನಿಗೆ ಸರಿಯಾದ ದೃಷ್ಟಿಯಿಂದ ನೋಡಲು ಹೇಗೆ ಸಾಧ್ಯವಾದೀತು? ಆತನ ಮನಸ್ಸು ವಿಷಮಶೀತಜ್ವರದ ರೋಗಿಯ ಹಾಗೆ ಸನ್ನಿಗೊಳಗಾಗಿದೆ."

ಪರಮಹಂಸರು ತಮ್ಮ ಮಧುರ ಕಂಠದಿಂದ ಹಾಡುತ್ತಿದ್ದಾರೆ:

ಇರುವುದೊಂದೆ ವಿಕಾರ;
ನಿನ್ನ ಪದಕಮಲಗಳ ಕೃಪೆಯಲ್ಲದಿನ್ನಿಲ್ಲ
ಬೇರೆ ಪರಿಹಾರ....

ತಮ್ಮ ಮಾತು ಮುಂದುವರಿಸುತ್ತ ಶ್ರೀರಾಮಕೃಷ್ಣರು ಹೇಳುತ್ತಿದ್ದಾರೆ: "ಇದು ಸನ್ನಿಯಲ್ಲದೆ ಮತ್ತೆ ಬೇರೆ ಏನು? ಹಾಗೇ ನೋಡು, ಸಂಸಾರಿಗಳು ಹೇಗೆ ಪರಸ್ಪರ ಜಗಳಕಾಯುತ್ತಾರೆ. ಯಾವ ಪಟ್ಟ ಗಳಿಸಿಕೊಳ್ಳುವುದಕ್ಕೋ ದೇವರೇ ಬಲ್ಲ. ಹೇಗೆ ಜಗಳಕಾಯುತ್ತಾರೆ ಏನು ಕತೆ! 'ನಿನಗೆ ಹಾಗಾಗಲಿ! ನಿನಗೆ ಹೀಗೆ ಮಾಡುತ್ತೇನೆ!' ಎಷ್ಟೊಂದು ಅಬ್ಬರ! ಎಷ್ಟೊಂದು ಬೈಗುಳು!"

ಮಾಸ್ಟರ್: "ನಾನು ಕಿಶೋರಿಗೆ ಹೇಳಿದೆ: 'ಪೆಟ್ಟಿಗೆ ಖಾಲಿ; ಒಳಗೆ ಏನೂ ಇಲ್ಲ. ಆದರೂ ಅದನ್ನ—ಅದರಲ್ಲಿ ಹಣ ಇದೆ ಅಂತ—ಇಬ್ಬರು ಹಿಡಿದು ಎಳೆದಾಡುತ್ತಾರೆ.' ಒಳ್ಳೇದು, ಎಲ್ಲಾ ಅನರ್ಥಗಳಿಗೂ ಈ ದೇಹವೇ ಕಾರಣ, ಅಲ್ಲವೆ? ಇದನ್ನೆಲ್ಲಾ ಅರಿತುಕೊಂಡು ಜ್ಞಾನಿಗಳು ಭಾವಿಸುತ್ತಾರೆ: 'ಈ ಶರೀರವೆಂಬ ದಿಂಬಿನ ಚೀಲ ಹೋಯಿತು ಎಂದರೆ ಬದುಕಿಕೊಂಡೆವಪ್ಪ!'"

ಪರಮಹಂಸರು ಮತ್ತು ಮಾಸ್ಟರ್ ಕಾಳೀದೇವಾಲಯದ ಕಡೆ ಹೋಗುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಏಕೆ ಹಾಗೆ ಹೇಳುತ್ತೀಯೆ? ಈ ಜಗತ್ತೇನೊ 'ಮಾಯೆಯ ಚೌಕಟ್ಟಾಗಿ' ಇದ್ದರೂ ಇರಬಹುದು. ಆದರೆ ಇದು 'ಮೋಜಿನ ಮನೆ' ಅಂತಲೂ ಹೇಳಿದೆಯಲ್ಲ. ದೇಹ ಇದ್ದರೆ ತಾನೆ ಏನು? ಈ ಜಗತ್ತನ್ನು ಮೋಜಿನ ಮನೆಯಾಗಿ ಮಾಡಿಕೊಳ್ಳಲೂ ಸಾಧ್ಯ."

ಮಾಸ್ಟರ್: "ಆದರೆ ಈ ಜಗತ್ತಿನಲ್ಲೆಲ್ಲಿ ನಿರವಚ್ಛಿನ್ನ ಆನಂದ ದೊರೆತೀತು?"

ಶ್ರೀರಾಮಕೃಷ್ಣರು: "ಇಲ್ಲ. ನೀನು ಹೇಳುವುದು ನಿಜ."

ಪರಮಹಂಸರು ಕಾಳೀದೇವಾಲಯದ ಮುಂಭಾಗಕ್ಕೆ ಬಂದು ಭಗವತಿಗೆ ಸಾಷ್ಟಾಂಗಪ್ರಣಾಮ ಮಾಡಿದರು. ಮಾಸ್ಟರೂ ಹಾಗೇ ಮಾಡಿದ. ಬಳಿಕ ಪರಮಹಂಸರು ದೇವಾಲಯದ ಎದುರಿಗಿರುವ ಕೆಳಗಿನ ಅಂಗಳದಲ್ಲಿ ನಾಟ್ಯಮಂದಿರದ ಒಂದು ಕಂಬವನ್ನು ಒರಗಿಕೊಂಡು ಕುಳಿತಿದಾರೆ. ಅವರು ಕೆಂಪು ಅಂಚಿನ ಪಂಚೆ ಉಟ್ಟುಕೊಂಡಿದಾರೆ. ಅದರ ಒಂದು ಭಾಗವನ್ನು ಹೆಗಲ ಮೇಲೆ ಹಾಕಿಕೊಂಡಿದಾರೆ. ಅದು ಬೆನ್ನಿನ ಮೇಲೆ ಜೋಲುಬಿದ್ದಿದೆ. ಮಾಸ್ಟರ್ ಹತ್ತಿರ ಕುಳಿತಿದಾನೆ.

ಮಾಸ್ಟರ್: "ಈ ಜಗತ್ತಿನಲ್ಲಿ ನಿರವಚ್ಛಿನ್ನ ಆನಂದವಿಲ್ಲದೆ ಇರುವುದರಿಂದ, ದೇಹಧಾರಣೆಯ ಆವಶ್ಯಕತೆ ತಾನೆ ಏನಿದೆ? ಕಾಣಬರುತ್ತಿದೆ, ಕೆಲವು ಹಿಂದಿನ ಕರ್ಮಫಲಗಳನ್ನು ಭೋಗಿಸುವುದಕ್ಕಾಗೇ ಶರೀರಧಾರಣೆ ಎಂಬುದಾಗಿ. ಆದರೆ ಈಗ ಅದು ಏನು ಕರ್ಮ ಮಾಡುತ್ತಿದೆಯೊ ಯಾರಿಗೆ ತಾನೆ ಗೊತ್ತು? ಇತಿ ಮಧ್ಯೆ ನಮ್ಮ ಪ್ರಾಣ ಹೋಗುತ್ತಿದೆ."

ಶ್ರೀರಾಮಕೃಷ್ಣರು: "ಬಟಾಣಿ ತಿಪ್ಪೆಗುಂಡಿಗೆ ಬಿದ್ದರೂ ಅಲ್ಲೂ ಅದು ಬಟಾಣಿ ಗಿಡವಾಗೇ ಹುಟ್ಟುತ್ತದೆ."

ಮಾಸ್ಟರ್: "ಆದರೂ ಅಷ್ಟಬಂಧನಗಳೆಂಬುವು ಇವೆಯಲ್ಲ?"

ಶ್ರೀರಾಮಕೃಷ್ಣರು: "ಅವು ಅಷ್ಟಬಂಧನಗಳಲ್ಲ ಅಷ್ಟಪಾಶಗಳು. ಅವು ಇದ್ದರೆ ತಾನೆ ಏನು? ಭಗವಂತನ ಕೃಪೆಯೊಂದು ದೊರೆಯಿತು ಎಂದರೆ, ಒಂದು ಮುಹೂರ್ತದೊಳಗೇ ಈ ಅಷ್ಟಪಾಶಗಳೂ ನಮ್ಮನ್ನು ಬಿಟ್ಟು ತೊಲಗಬಹುದು. ಇದು ಹೇಗೆ ಗೊತ್ತೆ? ಒಂದು ಪಕ್ಷ ಸಾವಿರಾರು ವರ್ಷಗಳಿಂದ ಒಂದು ಕೊಠಡಿ ಕತ್ತಲೆಯಾಗೇ ಇತ್ತು ಅಂತ ಇಟ್ಟುಕೊ. ಅಲ್ಲಿಗೆ ಬೆಳಕು ತಂದೊಡನೇ ಕತ್ತಲೆ ಪರಾರಿಯಾಗಿಬಿಡುತ್ತದೆ; ಕಿಂಚಿತ್ ಕಿಂಚಿತ್ತಾಗೇನು ಅಲ್ಲ. ಐಂದ್ರಜಾಲಿಕನ ಸಾಹಸವನ್ನು ನೀನು ನೋಡಿಲ್ಲವೆ? ಅನೇಕ ಗಂಟು ಹಾಕಿರುವ ಒಂದು ಹಗ್ಗದ ತುದಿಯನ್ನು ಒಂದು ಆಸರೆಗೆ ಕಟ್ಟಿ, ಅದರ ಇನ್ನೊಂದು ತುದಿಯನ್ನು ತನ್ನ ಕೈಯಲ್ಲಿ ಹಿಡಿದುಕೊಳ್ಳುತ್ತಾನೆ. ಬಳಿಕ ಒಂದೆರಡು ಸಲ ಹಗ್ಗವನ್ನ ಅಲುಗಾಡಿಸುತ್ತಾನೆ. ಒಡನೇ ಗಂಟುಗಳೆಲ್ಲಾ ಬಿಚ್ಚಿಕೊಂಡುಬಿಡುತ್ತವೆ. ಆದರೆ ಬೇರೆ ಯಾರೇ ಆಗಲಿ ಎಷ್ಟೇ ಪ್ರಯತ್ನಪಟ್ಟರೂ ಅವನ್ನು ಬಿಚ್ಚಲಾಗುವುದಿಲ್ಲ. ಗುರುವಿನ ಕೃಪಾಬಲದಿಂದ ಅಜ್ಞಾನದ ಎಲ್ಲಾ ಗಂಟುಗಳು ಒಂದು ಮುಹೂರ್ತದಲ್ಲೇ ಬಿಚ್ಚಿಹೋಗಿಬಿಡುತ್ತವೆ.

"ಒಳ್ಳೇದು, ಕೇಶವಸೇನ ಇತ್ತೀಚೆಗೆ ಇಷ್ಟೊಂದು ಬದಲಾಯಿಸಿ ಬಿಟ್ಟನಲ್ಲ ಏಕೆ? ಇಲ್ಲಿಗೆ ಅಡಿಗಡಿಗೆ ಬರುತ್ತಲೇ ಇದ್ದ. ಇಲ್ಲಿಗೆ ಬಂದ ಮೇಲೆ ಹೇಗೆ ನಮಸ್ಕಾರಮಾಡಬೇಕು ಎಂಬುದನ್ನು ಕಲಿತುಕೊಂಡ. ಒಂದು ದಿನ ಆತನಿಗೆ ನಾನು ತಿಳಿಸಿದೆ, ಆತ ಮಾಡುತ್ತಿದ್ದ ಹಾಗೆ ಸಾಧುಗಳಿಗೆ ನಮಸ್ಕಾರ ಮಾಡಕೂಡದು ಎಂಬುದಾಗಿ. ಹರೀಶ ಸರಿಯಾಗಿ ಹೇಳುತ್ತಿದಾನೆ: 'ಎಲ್ಲಾ ಚೆಕ್ಕುಗಳಿಗೂ ಇಲ್ಲಿನ ಒಪ್ಪಿಗೆಯ ಮುದ್ರೆ ಬೀಳಬೇಕು. ಆಗ ಮಾತ್ರವೇ ಬ್ಯಾಂಕಿನಲ್ಲಿ ನಗದು ಹಣ ದೊರೆಯುತ್ತದೆ.'" (ನಗು.)

ಮಾಸ್ಟರ್ ಆಶ್ಚರ್ಯಚಕಿತನಾಗಿ ಈ ಮಾತುಕತೆಗಳನ್ನೆಲ್ಲಾ ಕೇಳುತ್ತಿದಾನೆ. ಆತನಿಗೆ ಅನ್ನಿಸಲಾರಂಭಿಸಿತು, ಸಚ್ಚಿದಾನಂದನೇ ಗುರುವಿನ ರೂಪದಲ್ಲಿ ಚೆಕ್ಕನ್ನು ಸೈನ್‌ಮಾಡುತ್ತಾನೆ ಎಂಬುದಾಗಿ.

ಶ್ರೀರಾಮಕೃಷ್ಣರು: "ವಾದದಲ್ಲಿ ತೊಡಗಬೇಡ. ಭಗವಂತನನ್ನು ಅರಿತುಕೊಳ್ಳಲು ಯಾರಿಂದ ತಾನೆ ಸಾಧ್ಯ? ತೋತಾಪುರಿ ಹೇಳುತ್ತಿದ್ದುದನ್ನು ನನ್ನ ಮನಸ್ಸಿನಲ್ಲಿ ಚಿರಮುದ್ರೆಯನ್ನಾಗಿ ಮಾಡಿಕೊಂಡುಬಿಟ್ಟಿದೇನೆ. ಆತ ಹೇಳುತ್ತಿದ್ದ, ಈ ಬ್ರಹ್ಮಾಂಡ ಆತನ ಕೇವಲ ಒಂದು ಅಂಶ ಮಾತ್ರ ಅಂತ.

"ಹಾಜರಾನದು ಲೆಕ್ಕಾಚಾರದ ಬುದ್ಧಿ. ಆತ ಲೆಕ್ಕಹಾಕುತ್ತಾನೆ: 'ಭಗವಂತನ ಇಷ್ಟು ಭಾಗ ಈ ಜಗದ್ರೂಪವನ್ನು ತಾಳಿದೆ. ಇನ್ನು ಉಳಿದುದು ಇಷ್ಟು.' ಆತ ಲೆಕ್ಕಹಾಕುವುದನ್ನು ನೋಡಿದಾಗ ನನ್ನ ತಲೆ ಸುಮ್ಮನೆ ನೋಯುತ್ತದೆ. ನನಗೆ ಗೊತ್ತಿದೆ, ನನಗೆ ಏನೂ ಗೊತ್ತಿಲ್ಲ ಎಂಬುದು. ಕೆಲವು ವೇಳೆ ಭಗವಂತನ ಸಂಬಂಧವಾಗಿ ಭಾವಿಸುತ್ತೇನೆ, ಆತ ಒಳ್ಳೆಯವ, ಇನ್ನು ಕೆಲವು ವೇಳೆ ಕೆಟ್ಟವ ಅಂತ. ಆತನ ಸಂಬಂಧವಾಗಿ ನಾನು ಏನನ್ನು ತಾನೆ ಅರಿತುಕೊಳ್ಳಬಲ್ಲೆ?"

ಮಾಸ್ಟರ್: "ಹೌದು, ಅದು ನಿಜ. ಆತನನ್ನು ಯಾರು ತಾನೆ ಅರಿತುಕೊಳ್ಳಬಲ್ಲರು? ಪ್ರತಿಯೊಬ್ಬನೂ ತನ್ನ ಬುದ್ಧಿಶಕ್ತಿಗನುಸಾರ ಭಾವಿಸುತ್ತಾನೆ, ಭಗವಂತನ ಸಂಬಂಧವಾಗಿ ಎಲ್ಲವನ್ನೂ ತಾನು ಅರಿತುಕೊಂಡುಬಿಟ್ಟಿದೇನೆ ಎಂಬುದಾಗಿ. ನೀವು ಹೇಳುತ್ತೀರಲ್ಲ, ಒಂದು ಇರುವೆ ಸಕ್ಕರೆಯ ಗುಡ್ಡದ ಹತ್ತಿರ ಹೋಗಿ ಅದರ ಒಂದು ಕಣ ತಿನ್ನುವುದರಲ್ಲೇ ಅದರ ಹೊಟ್ಟೆ ತುಂಬಿಹೋದರೂ ಭಾವಿಸುತ್ತದೆ, ಮುಂದಿನ ಸಲ ಬಂದು ಈ ಇಡೀ

ಗುಡ್ಡವನ್ನೇ ತನ್ನ ಗೂಡಿಗೆ ಸಾಗಿಸಿಬಿಡುತ್ತೇನೆ ಎಂಬುದಾಗಿ, ಇದೂ ಹಾಗೆ."

ಶ್ರೀರಾಮಕೃಷ್ಣರು: "ಭಗವಂತನನ್ನು ಯಾರು ತಾನೆ ಅರಿತು ಕೊಳ್ಳಬಲ್ಲರು? ನಾನು ಆ ಪ್ರಯತ್ನವನ್ನೇ ಮಾಡುವುದಿಲ್ಲ. ನಾನು ಆತ ನನ್ನು ಕೇವಲ 'ತಾಯಿ' ಅಂತ ಮಾತ್ರ ಕೂಗುತ್ತೇನೆ. ತಾಯಿ ತನ್ನ ಇಚ್ಛೆಯಿದ್ದಂತೆ ಮಾಡಲಿ. ಆಕೆಯ ಇಚ್ಛೆಯಿದ್ದರೆ ತಾನೇ ತೋರಿಸಿಕೊಡು ತ್ತಾಳೆ ತಾನು ಏನು ಎಂಬುದನ್ನ, ಇಲ್ಲದಿದ್ದರೆ ಇಲ್ಲ. ನನ್ನದು ಬೆಕ್ಕಿನ ಮರಿಯ ಸ್ವಭಾವ. ಕೇವಲ ಅದು, 'ಮಿಯಾವ್! ಮಿಯಾವ್!' ಅಂತ ಕೂಗುತ್ತದೆ. ಉಳಿದ ತನ್ನ ಯೋಗಕ್ಷೇಮವನ್ನೆಲ್ಲಾ ತಾಯಿಗೆ ಬಿಟ್ಟು ಬಿಟ್ಟಿರುತ್ತದೆ. ತಾಯಿ ಬೆಕ್ಕು ಕೆಲವು ವೇಳೆ ಮರಿಯನ್ನು ಅಡಿಗೆ ಮನೆ ಯಲ್ಲಿ, ಇನ್ನು ಕೆಲವು ವೇಳೆ ಯಜಮಾನನ ಹಾಸಿಗೆ ಮೇಲೆ ಇಡುತ್ತದೆ. ಚಿಕ್ಕ ಮಗುವಿಗೆ ತಾಯಿ ಮಾತ್ರ ಬೇಕು. ತನ್ನ ತಾಯಿಗೆ ಎಷ್ಟು ಐಶ್ವರ್ಯ ವಿದೆ ಎಂಬುದು ಅದಕ್ಕೆ ಗೊತ್ತಿರುವುದಿಲ್ಲ; ತಿಳಿಯಲಿಚ್ಛಿಸುವುದೂ ಇಲ್ಲ. ಅದಕ್ಕೆ ಕೇವಲ ಗೊತ್ತಿದೆ: 'ನನ್ನ ತಾಯಿ ಇದಾಳೆ; ಇನ್ನು ನನಗೇನು ಯೋಚನೆ?' ದಾಸಿಯ ಮಗುವಿಗೂ ಗೊತ್ತಿದೆ, ತನಗೊಬ್ಬಳು ತಾಯಿ ಇದಾಳೆ ಅಂತ. ಅದಕ್ಕೂ ಯಜಮಾನನ ಮಗುವಿಗೂ ಜಗಳ ಬಂತು ಎಂದರೆ, ಆಗ ಅದು ಹೇಳುತ್ತದೆ: 'ನನ್ನ ತಾಯಿ ಇದಾಳೆ. ನೋಡಿಕೊ, ಹೋಗಿ ಹೇಳಿಬಿಡುತ್ತೇನೆ.' ನನ್ನದು ಸಂತಾನಭಾವ."

ಇದ್ದಕ್ಕಿದ್ದಹಾಗೆ ಪರಮಹಂಸರು ತಮ್ಮನ್ನು ತೋರಿಸಿ, ತಮ್ಮ ಎದೆ ಮೇಲೆ ಕೈಯಿಟ್ಟು ಮಾಸ್ಟರಿಗೆ ಹೇಳುತ್ತಿದಾರೆ: "ಒಳ್ಳೇದು, ಇದರೊಳಗೆ ಏನೊ ಇರಬೇಕು. ನೀನು ಏನು ಹೇಳುತ್ತೀಯೆ?"

ಮಾಸ್ಟರ್ ಆಶ್ಚರ್ಯಚಕಿತನಾಗಿ ಪರಮಹಂಸರ ಕಡೆ ನೋಡುತ್ತಿ ದಾನೆ. ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: "ಸಾಕ್ಷಾತ್ ಭಗವತಿಯೇ ಪರಮಹಂಸರ ಹೃದಯಮಧ್ಯದಲ್ಲಿ ಇದಾಳೇನು? ಜೀವರ ಮಂಗಳಕ್ಕಾಗಿ ಭಗವತಿಯೇ ಈ ದೇಹಧಾರಣೆಮಾಡಿಕೊಂಡು ಬಂದಿದಾಳೇನು?"

ಈಗ ಶ್ರೀರಾಮಕೃಷ್ಣರು ಭಗವತಿಗೆ ಪ್ರಾರ್ಥನೆ ಮಾಡುತ್ತಿದಾರೆ: "ಹೇ ತಾಯಿ! ಹೇ ಓಂಕಾರ ಸ್ವರೂಪಿಣಿಯೆ! ತಾಯೆ, ನಿನ್ನ ವಿಷಯ ವಾಗಿ ಜನ ಎಷ್ಟೊಂದು ಹೇಳುತ್ತಾರೆ ಏನು ಕತೆ! ಆದರೆ ನನಗೇನೂ ಅರ್ಥ ವಾಗುತ್ತಿಲ್ಲವಲ್ಲ. ನನಗೇನೂ ಗೊತ್ತಿಲ್ಲ ತಾಯೆ. ನಾನು ನಿನ್ನಲ್ಲಿ ಶರಣಾಗತ,

ಶರಣಾಗತ. ಕೇವಲ ಇದಿಷ್ಟು, ಎಂದರೆ ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿಯುಂಟಾಗುವಂತೆ ಕರುಣಿಸಿಬಿಡು ತಾಯಿ. ತಾಯಿ, ನಿನ್ನ ಭುವನಮೋಹಿನೀ ಮಾಯೆಯಿಂದ ನನ್ನನ್ನು ಭ್ರಾಂತಿಗೊಳಿಸಬೇಡ. ನಾನು ನಿನ್ನಲ್ಲಿ ಶರಣಾಗತ, ಶರಣಾಗತ.''

ದೇವಾಲಯಗಳಲ್ಲಿ ಸಾಯಂ ಮಂಗಳಾರತಿ ಮುಗಿಯಿತು. ಪರಮ-ಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತಿದಾನೆ.

ಮಾಸ್ಟರ್ ಈಗ ಸುಮಾರು ಎರಡು ವರ್ಷಗಳಿಂದ ಪರಮಹಂಸರ ಹತ್ತಿರಕ್ಕೆ ಬಂದುಹೋಗುತ್ತಾ ಅವರ ಕೃಪಾಕಟಾಕ್ಷವನ್ನು ಪಡೆದುಕೊಂಡಿದಾನೆ. ಪರಮಹಂಸರು ಆತನಿಗೂ ಮತ್ತು ಉಳಿದ ಭಕ್ತರಿಗೂ ತಿಳಿಸಿದಾರೆ, ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು; ಭಕ್ತರಿಗಾಗಿ ಆತ ರೂಪಧಾರಣೆ ಮಾಡುತ್ತಾನೆ ಎಂಬುದಾಗಿ. ನಿರಾಕಾರವಾದಿಗಳಿಗೆ ಪರಮ-ಹಂಸರು ಹೇಳಿದಾರೆ: "ನಿಮಗೆ ಯಾವುದರಲ್ಲಿ ವಿಶ್ವಾಸವೊ ಅದನ್ನು ಬಿಗಿಯಾಗಿ ಹಿಡಿದುಕೊಳ್ಳಿ, ಆದರೆ ಭಗವಂತನಿಗೆ ಎಲ್ಲವೂ ಸಾಧ್ಯ ಎಂಬುದನ್ನು ಮಾತ್ರ ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿರಿ. ಆತ ಸಾಕಾರನೂ ಹೌದು, ನಿರಾಕಾರನೂ ಹೌದು. ಆತ ಇನ್ನೂ ಏನೇನೊ ಆಗಲೂ ಬಲ್ಲ.''

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನು ಒಂದನ್ನ, ಎಂದರೆ ನಿರಾಕಾರವನ್ನ ಹಿಡಿದುಕೊಂಡಿದೀಯೆ, ಅಲ್ಲವೆ?''

ಮಾಸ್ಟರ್: "ಹೌದು. ಆದರೆ ನೀವು ಹೇಳುತ್ತೀರಲ್ಲ, ಭಗವಂತನಿಗೆ ಎಲ್ಲವೂ ಸಂಭವ ಅಂತ, ಅದನ್ನು ಕೂಡ. ಸಾಕಾರವೂ ಸಂಭವ.''

ಶ್ರೀರಾಮಕೃಷ್ಣರು: "ಭೇಷ್! ಜ್ಞಾಪಕದಲ್ಲಿಟ್ಟುಕೊ ಆತ ಚೈತನ್ಯ ರೂಪದಿಂದ ಇಡೀ ಚರಾಚರ ವಿಶ್ವವನ್ನೆಲ್ಲಾ ವ್ಯಾಪಿಸಿಕೊಂಡಿದಾನೆ ಎಂಬುದನ್ನ.''

ಮಾಸ್ಟರ್: "ನಾನು ಭಾವಿಸುತ್ತಿದೇನೆ, ಭಗವಂತ ಚೇತನವಸ್ತುಗಳ ಚೇತನ ಎಂಬುದಾಗಿ.''

ಶ್ರೀರಾಮಕೃಷ್ಣರು: "ಈಗ ಈ ಭಾವವನ್ನೇ ಹಿಡಿದುಕೊಂಡಿರು. ಬಲಾತ್ಕರಿಸಿ ಭಾವ ಬದಲಾವಣೆ ಮಾಡುವುದು ಬೇಡ. ಕ್ರಮೇಣ ನಿನ್ನ ಅನುಭವಕ್ಕೆ ಬರುತ್ತದೆ, ಆ ಚೈತನ್ಯ ಭಗವಂತನ ಚೈತನ್ಯವೇ ಅಂತ. ಕೇವಲ ಆತ ಮಾತ್ರನೇ ಚೈತನ್ಯಸ್ವರೂಪ.

"ಒಳ್ಳೇದು, ನಿನಗೆ ಹಣ ಐಶ್ವರ್ಯಗಳ ಮೇಲೆ ಆಸಕ್ತಿ ಇದೆಯೇ?"

ಮಾಸ್ಟರ್ "ಇಲ್ಲ. ನಿಶ್ಚಿಂತೆಯಿಂದ ಇರುವುದಕ್ಕೆ ಮಾತ್ರ—ನಿಶ್ಚಿಂತೆಯಿಂದ ಇದ್ದು ಭಗವಂತನ ಧ್ಯಾನಮಾಡುವುದಕ್ಕೆ ಮಾತ್ರ."

ಶ್ರೀರಾಮಕೃಷ್ಣರು: "ಅದು ಸ್ವಾಭಾವಿಕವಾದ್ದು."

ಮಾಸ್ಟರ್: "ಅದು ಲೋಭವೇನು? ಅಲ್ಲ ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು: "ನೀನು ಹೇಳುವುದು ಸರಿ. ಇಲ್ಲದಿದ್ದರೆ ನಿನ್ನ ಮಕ್ಕಳನ್ನ ಯಾರು ನೋಡಿಕೊಳ್ಳುತ್ತಾರೆ? ನಿನಗೆ ಅಕರ್ತ ಎಂಬ ಜ್ಞಾನವುಂಟಾಗಿಬಿಟ್ಟರೆ ಮಕ್ಕಳ ಗತಿಯೇನಾಗಬೇಕು?"

ಮಾಸ್ಟರ್: "ಕೇಳಿದೇನೆ, ಕರ್ತವ್ಯಜ್ಞಾನ ಇರುವವರೆಗೆ ಬ್ರಹ್ಮಜ್ಞಾನ ದೊರೆಯುವುದಿಲ್ಲ ಎಂಬುದಾಗಿ. ಕರ್ತವ್ಯ ಎಂಬುದು ಉರಿಬಿಸಿಲು ಇದ್ದಹಾಗೆ."

ಶ್ರೀರಾಮಕೃಷ್ಣರು: "ನಿನಗೀಗಿರುವ ಭಾವವೇ ಇರಲಿ. ಮುಂದೆ ಯಾವಾಗ ಕರ್ತವ್ಯ ಬೋಧೆ ತಾನಾಗೇ ಹೊರಟುಹೋಗುವುದೊ ಆಗ ಅದು ಬೇರೆ ವಿಷಯ."

ಇಬ್ಬರೂ ಸ್ವಲ್ಪ ಹೊತ್ತು ಹಾಗೇ ಕುಳಿತುಕೊಂಡರು.

ಮಾಸ್ಟರ್: "ಕಿಂಚಿತ್ ಜ್ಞಾನಾರ್ಜನೆ ಮಾಡಿ ಸಂಸಾರಕ್ಕೆ ಕಾಲಿಡುವುದು! ಇದು, ಕಾಲರಾ ರೋಗಿ ಪ್ರಜ್ಞೆಯೊಡನೆ ಸಾಯುವ ಹಾಗೆ!"

ಶ್ರೀರಾಮಕೃಷ್ಣರು: "ರಾಮ! ರಾಮ!"

ಮಾಸ್ಟರ ಮನಸ್ಸಿನಲ್ಲಿದ್ದ ಭಾವನೆಯೇನೆಂದರೆ: ಕಾಲರಾ ರೋಗಿಗೆ ಕೊನೆಯವರೆಗೂ ಪ್ರಜ್ಞೆ ಇರುವುದರಿಂದ ಆತ ಬಹಳವಾಗಿ ದುಃಖ ಅನುಭವಿಸಿ ಸಾಯಬೇಕಾಗಿರುವ ಹಾಗೆ, ಈ ಜಗತ್ತು ಮಿಥ್ಯೆ ಎಂಬುದಾಗಿ ಕಿಂಚಿತ್ ಜ್ಞಾನವನ್ನು ಸಂಪಾದಿಸಿಕೊಂಡಿರುವ ಜ್ಞಾನಿಯೂ ಈ ಸಂಸಾರವನ್ನು ನಡಸಿಕೊಂಡುಹೋಗುವಾಗ ಬಹಳವಾಗಿ ಸಂಕಟಕ್ಕೊಳಗಾಗುತ್ತಾನೆ.

ಮಾಸ್ಟರ್: "ವಿಷಮಶೀತಜ್ವರದ ರೋಗಿಗೆ ಸನ್ನಿ ಮುಚ್ಚಿಕೊಂಡಿರುವುದರಿಂದ ಆತನಿಗೆ ಮರಣಸಂಕಟ ಆಗದು. ಪೂರ್ಣ ಅಜ್ಞಾನಿಗಳೂ ಅವರ ಹಾಗೇ."

ಶ್ರೀರಾಮಕೃಷ್ಣರು: "ಹಣದಿಂದ ಏನು ದೊರೆಯುತ್ತೆ ಹೇಳು?

ಜಯಗೋಪಾಲಸೇನ ಅಂಥ ಧನಿಕ; ಆದರೆ ಆತನ ಸಂಕಟ, ತನ್ನ ಮಕ್ಕಳು ಹೇಳಿದ ಹಾಗೆ ಕೇಳೋದಿಲ್ಲವಲ್ಲ ಏನುಮಾಡುವುದು ಅಂತ.''

ಮಾಸ್ಟರ್: ''ಏನು, ಈ ಸಂಸಾರದಲ್ಲಿ ದಾರಿದ್ರ್ಯ ದುಃಖವೊಂದು ಮಾತ್ರವೇ ಇದೆಯೇ? ಜೊತೆಗೆ ಆರು ರಿಪುಗಳೂ ಇವೆ. ಬಳಿಕ ರೋಗ, ಶೋಕ.''

ಶ್ರೀರಾಮಕೃಷ್ಣರು: ''ಇವೂ ಅಲ್ಲದೆ ಮಾನ, ಸಂಭ್ರಮ, ಲೋಕ-ಮಾನ್ಯನಾಗಲು ಇಚ್ಛೆ ಕೂಡ. ಒಳ್ಳೇದು, ನನ್ನ ಭಾವ ಎಂಥದು?''

ಮಾಸ್ಟರ್: ''ನಿದ್ದೆಯಿಂದ ಎದ್ದರೆ ಮನುಷ್ಯನಿಗೆ ಏನಾಗುತ್ತೊ ಹಾಗೆ. ಆತನಿಗೆ ನಾನು ಯಾರು ಎಂಬ ಅರಿವು ಆಗುತ್ತದೆ. ನೀವು ಯಾವಾಗಲೂ ಭಗವಂತನೊಡನೆ ಐಕ್ಯವಾಗಿದೀರಿ.''

ಶ್ರೀರಾಮಕೃಷ್ಣರು: ''ನೀನು ಎಂದಾದರೂ ನನ್ನನ್ನು ಸ್ವಪ್ನದಲ್ಲಿ ಕಂಡಿದೀಯೇನು?''

ಮಾಸ್ಟರ್: ''ಹೌದು, ಅನೇಕ ವೇಳೆ.''

ಶ್ರೀರಾಮಕೃಷ್ಣರು: ''ಯಾವ ರೀತಿಯಾಗಿ? ಏನಾದರೂ ಉಪದೇಶ-ಗಿಪದೇಶ ಕೊಡೋ ಹಾಗೆ?''

ಮಾಸ್ಟರ್ ಸುಮ್ಮನೆ ಇದಾನೆ.

ಶ್ರೀರಾಮಕೃಷ್ಣರು: ''ನಾನೇನಾದರೂ ನಿನಗೆ ದೀಕ್ಷೆ ಕೊಡುವ ಹಾಗೆ ನೀನು ಸ್ವಪ್ನಿಸಿದ್ದರೆ, ಹಾಗೆ ಮಾಡಿದವನು ಸಚ್ಚಿದಾನಂದನೇ ಎಂಬುದನ್ನು ನೀನು ಚೆನ್ನಾಗಿ ತಿಳಿದುಕೊ.''

ಬಳಿಕ ಮಾಸ್ಟರ್ ತನ್ನ ಸ್ವಪ್ನಾನುಭವಗಳನ್ನೆಲ್ಲಾ ಪರಮಹಂಸರಿಗೆ ಹೇಳಲಾರಂಭಿಸಿದ. ಅವರು ಅವನ್ನು ಏಕಾಗ್ರಚಿತ್ತದಿಂದ ಕೇಳಲಾರಂಭಿಸಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ಇದು ಬಹಳ ಒಳ್ಳೆಯದು. ನೀನು ಇನ್ನು ವಿಚಾರಕ್ಕೆ ಮನಸ್ಸು ಕೊಡಬೇಡ. ನೀನು ಒಬ್ಬ ಶಾಕ್ತ.''

೧೦ನೆ ಅಕ್ಟೋಬರ್ ೧೮೮೪, ಆಶ್ವೀಜ ಶುಕ್ಲ ನವಮಿ, ಬುಧವಾರ.

ಅಧರಸೇನ ಪರಮಹಂಸರನ್ನು ತನ್ನ ಮನೆಯ ದುರ್ಗಾಪೂಜೆಗಾಗಿ ಆಹ್ವಾನಿಸಿದ್ದ. ಇಂದು ದುರ್ಗಾಪೂಜೆಯ ಮೂರನೆ ದಿನ. ಪರಮ-ಹಂಸರು ಅಧರಸೇನನ ಮನೆಗೆ ಬಂದಾಗ, ಅಧರಸೇನನ ಸ್ನೇಹಿತ ಸಾರದಾ

ಬಾಬು, ಬಲರಾಮನ ತಂದೆ, ಅಧರಸೇನನ ಅಕ್ಕಪಕ್ಕದವರು ಮತ್ತು ಬಂಧುಬಾಂಧವರು ತಮಗಾಗಿ ಕಾದಿರುವುದು ಅವರ ಕಣ್ಣಿಗೆ ಬಿತ್ತು.

ಸಾಯಂ ಮಂಗಳಾರತಿ ನೋಡಲು ಪರಮಹಂಸರು ಪೂಜಾಗೃಹಕ್ಕೆ ಬಂದಿದಾರೆ. ಮಂಗಳಾರತಿ ಮುಗಿದನಂತರ ಪರಮಹಂಸರು ಭಾವಾವಿಷ್ಟ ರಾಗಿ ನಿಂತುಕೊಂಡೇ ಭಗವತಿಯ ಸಂಬಂಧವಾದ ಒಂದು ಸ್ತೋತ್ರವನ್ನು ಹೇಳಲಾರಂಭಿಸಿದಾರೆ:

ಮರಣಭಯ ವಿಹ್ವಲನು ನಾನಾದೆನೆಲೆ ತಾಯಿ,
ಪಾರುಗಾಣಿಸು ನನ್ನ ಭವತಾರಿಣಿ;
ನೀನು ಗಮನಿಸದಿರಲು ನಾಶವಾಗುವೆ ನಾನು,
ಕಾಪಾಡು ಕಾಪಾಡು ಭಯಹಾರಿಣಿ.
ಸಕಲಲೋಕದ ತಾಯಿ, ಸರ್ವಜನರಾಧಾರೆ
ಲೋಕಮೋಹಿನಿ ಮತ್ತೆ ಜಗತಜನನೀ;
ಅಲ್ಲಿ ಬೃಂದಾವನದಿ ರಾಧಾ ವಿನೋದಿನೀ
ಗೋಪಿಜನವಲ್ಲಭನ ಮನಮೋಹಿನೀ.
ರಾಸಲೀಲೆಯೊಳಿರುವ ಓ ರಾಸರಂಗಿನೀ,
ನೀ ಗಿರಿಜೆ, ನೀ ಗೋಪಿ, ಗೋವಿಂದ ಮೋಹಿನೀ,
ಓ ಜಗನ್ನುತೆ ಗಂಗೆ ಪರಮಗತಿದಾಯಿನೀ—
ಓ ಸದಾನಂದೆ, ಶಿವೆ, ಚಿರಂತನೇ
ಸಗುಣ-ನಿರ್ಗುಣ ರೂಪೆ ಸರ್ವಸ್ವರೂಪಿಣೀ
ಶರ್ವಪ್ರಿಯೆ, ಘನಮಹಿಮೆ, ನಿನ್ನಮಿತ ಲೀಲೆಗಳ
ಯಾರು ಬಲ್ಲರು ಹೇಳು ಮೂಲೋಕದೆ?

ಪರಮಹಂಸರು ಈಗ ಅಧರಸೇನನ ಮನೆಯ ಎರಡನೆ ಅಂತಸ್ತಿನಲ್ಲಿ ರುವ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಅಲ್ಲಿ ಅನೇಕ ಆಹ್ವಾನಿತ ಅತಿಥಿ ಗಳೂ ಕುಳಿತಿದಾರೆ. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಆ ಅತಿಥಿ ಗಳನ್ನು ಸಂಬೋಧಿಸಿ ಹೇಳುತ್ತಿದಾರೆ: "ಮಹನೀಯರೆ, ನಾನು ಊಟ ಮಾಡಿದೇನೆ. ಈಗ ನೀವು ಹೋಗಿ ಊಟಮಾಡಿ." ಅಧರಸೇನ ಅರ್ಪಿಸಿದ ನೈವೇದ್ಯವನ್ನು ಭಗವತಿ ಸ್ವೀಕರಿಸಿದಾಳೆ ಎಂಬುದಾಗಿ ಪರಮಹಂಸರು ಸೂಚಿಸಿದರೇನು? ಭಗವತಿಯೊಡನೆ ತಾದಾತ್ಮ್ಯವನ್ನು ಹೊಂದಿ ಹೇಳುತ್ತಿ ದಾರೇನು: "ನಾನು ಊಟಮಾಡಿದೇನೆ" ಅಂತ?

ಬಳಿಕ ಪರಮಹಂಸರು ಭಗವತಿಯನ್ನು ಸಂಬೋಧಿಸಿ ಹೇಳುತ್ತಿದಾರೆ: "ತಾಯೆ, ನಾನು ತಿನ್ನಲೆ? ಅಥವಾ ನೀನೇ ತಿನ್ನುತ್ತೀಯಾ? ತಾಯಿ, ಕಾರಣಾನಂದರೂಪಿಣಿ." ಜಗನ್ಮಾತೆ ಮತ್ತು ತಾವು ಒಂದೇ ಎಂದು ಪರಮಹಂಸರು ವ್ಯಕ್ತಪಡಿಸಿದರೇನು? ಭಗವತಿಯೇ ಸಂತಾನರೂಪದಿಂದ ಲೋಕಶಿಕ್ಷಣಕ್ಕಾಗಿ ಅವತೀರ್ಣಳಾಗಿದಾಳೇನು? ಅದಕ್ಕಾಗೇ ಏನು ಪರಮಹಂಸರು ಹೇಳಿದುದು: "ನಾನು ಊಟ ಮಾಡಿದೇನೆ" ಎಂಬುದಾಗಿ?

ಪರಮಹಂಸರು ಭಾವಾವೇಶದಿಂದ ತಮ್ಮ ಶರೀರದಲ್ಲಿ ಷಟ್ಚಕ್ರಗಳನ್ನೂ ಮತ್ತು ಅವುಗಳ ಮಧ್ಯೆ ಭಗವತಿ ನೆಲಸಿರುವುದನ್ನೂ ದರ್ಶನ ಮಾಡುತ್ತಿದಾರೆ. ಆದ್ದರಿಂದ ಭಾವದಿಂದ ತುಂಬಿತುಳುಕಾಡುತ್ತ ಆ ದೃಶ್ಯದ ಸಂಬಂಧವಾಗಿ ಒಂದು ಹಾಡನ್ನು ಹಾಡುತ್ತಿದಾರೆ:

ಓ ಶರ್ವಪ್ರಿಯೆ ತಾಯಿ, ಸಕಲಭಯ ಹಾರಿಣಿಯೆ
ನಿನ್ನ ನಾಮವ ನಾನು ಕೇಳಿರುವೆನು, . . .

ಮತ್ತೆ ಹಾಡುತ್ತಿದಾರೆ:

ತಾಯಿ ಶ್ರೀಕಾಳಿಯೀ ಲೀಲೆಯುವಲೋಕನದಿ
ಸೋಜಿಗದ ಕಡಲೊಳಗೆ ಮನ ಮುಳುಗಿದೆ.
ಅವಳ ಶ್ರೀಶುಭನಾಮ ಮರಣಭಯವನು ಕೂಡ
ಹೊಡೆದಟ್ಟಿದೆ.
ಅವಳ ಶ್ರೀಪಾದವಿದೊ ಆ ಮಹಾಕಾಳನನೆ
ಮೆಟ್ಟುತ್ತಿದೆ!

ಅವಳ ತನುರುಚಿಯೇಕೆ ಕಾಳವಾಗಿದೆ ಹೇಳು?
ಎಲ್ಲ ಕಪ್ಪಿಗು ಮಿಗಿಲು ಕಪ್ಪಾದಳೇಕಿವಳು
ಧ್ಯಾನಿಯೆದೆಯೊಳು ದಿವ್ಯ ಕಮಲವನ್ನರಳಿಸುತ
ಬೆಳಕನಿತ್ತವಳು!

ಅವಳ ರೂಪವು ಕಾಳಿ; ಅವಳ ಹೆಸರೂ ಕಾಳಿ
ಕಣ್ಣ ತುಂಬುವ ಕಪ್ಪು, ಕಾರಿರುಳ ಕಪ್ಪು!
ಇವಳ ಕಂಡಾ ಕಣ್ಗೆ ಬೇರಾವ ರೂಪವೂ
ಶೋಭಿಸದ ರೀತಿಯಲಿ ಇವಳು ಒಪ್ಪು.

ಅಚ್ಚರಿಯೊಳೆನ್ನುವನು ರಾಮಪ್ರಸಾದನಿದೊ:
ಯಾರ ರೂಪವ ನಾನು ಕಾಣದಿದ್ದರು ಕೂಡ
ಯಾರ ಶ್ರೀಶುಭನಾಮ ಮನವ ಸೆರೆಗೈಯುವುದೊ
ಅಂಥ ತಾಯಿಯು ಈಗ ಎಲ್ಲಿರುವಳೊ!

ಭಗವತಿಯಲ್ಲಿ ಶರಣಾಗತಿಯನ್ನು ಹೊಂದಿದುದೇ ಆದರೆ ಭಕ್ತರ ಸಕಲ ಭಯ ಒಮ್ಮೆಗೇ ಕಂಬಿಕೀಳುತ್ತವೆ. ಬಹುಶಃ ಇದಕ್ಕಾಗೇ ಏನು ಪರಮಹಂಸರು ಈ ಹಾಡು ಹಾಡಿದ್ದು?

ತಾಯ ಶ್ರೀಪಾದದಲಿ ಜೀವವಿರಿಸಿದ ನನಗೆ
ಮೃತ್ಯುಭಯವೇನು? . . . (ಉ. ೩೦೩)

ಸಾರದಾಬಾಬು ಪುತ್ರಶೋಕಾನ್ವಿತನಾಗಿದಾನೆ. ಅದಕ್ಕಾಗಿ ಅಧರಸೇನ ಆತನನ್ನು ದಕ್ಷಿಣೇಶ್ವರಕ್ಕೆ ಪರಮಹಂಸರ ದರ್ಶನ ಮಾಡಿಸಲು ಕೆಲವು ದಿನದ ಹಿಂದೆ ಕರೆದುಕೊಂಡುಹೋಗಿದ್ದ. ಆತ ಗೌರಾಂಗನ ಭಕ್ತ. ಆತನನ್ನು ನೋಡಿ ಪರಮಹಂಸರಿಗೆ ಈಗ ಗೌರಾಂಗನ ಉದ್ದೀಪನವಾಗಿಬಿಟ್ಟದೆ.

ಪರಮಹಂಸರು ಹಾಡುತ್ತಿದಾರೆ:

ಗೌರವರ್ಣವಾಯಿತೇಕೆ ಇಂದು ನನ್ನ ತನುರುಚಿ?
ಯುಗಯುಗಗಳು ಕಳೆಯಬೇಕು
ಮುಗಿಯಬೇಕು ದ್ವಾಪರ;
ಈ ಲೀಲೆಯೆ ತೀರಲಿಲ್ಲ
ಏನಚ್ಚರಿ ಈಗಾಗಲೆ ಗೌರವರ್ಣವಾಯಿತಲ್ಲ
ನನ್ನ ದೇಹಗೋಪುರ!
ಸುತ್ತಮುತ್ತ ಗೌರವರ್ಣ;
ಗೌರ ನವಿಲು ಕೋಕಿಲ!
ಗೌರವರ್ಣ ಭರಿತವಾಯ್ತು
ನನ್ನ ಕಣ್ಣಿನಂಗಳ
ಎತ್ತನೋಡಲತ್ತ ಗೌರ
ಈ ಪವಾಡ ಬಂಧುರ!
ಬಹುಶಃ ಹೀಗಿರಲೆಬೇಕು
ಪರಿವರ್ತನ ಕಾರಣ:
ಮಥುರೆಗಿಂದು ಬಂದಳಲ್ತೆ

ನನ್ನ ರಾಣಿ ರಾಧೆಯು ?
ಭ್ರಮರದಂತೆ ಬಂದಳಿವಳು
ಬೆಳಗುಗಣ್ಣ ತೆರೆದಳಿವಳು,
ಒಡನೆ ಗೌರವಾಯಿತೆನ್ನ
ಕೃಷ್ಣವರ್ಣ ಕಾಯವು !

ರಾಧೆಯನ್ನು ನೆನೆದು ನೆನೆದು
ನಾನೆ ರಾಧೆಯಾದೆನೊ !
ನವದ್ವೀಪವೊ ಮಥುರೆಯೋ
ನಾನೆಲ್ಲಿಹೆ ಕಾಣೆನೊ !
ಏಕಾಯಿತು ಪರಿವರ್ತನೆ
ತಿಳಿಯದೆ ಬೆರಗಾದೆನೊ.

ನಿತ್ಯಾನಂದನಾಗಿ ಇನ್ನು
ಬಲರಾಮನು ಜನಿಸಲಿಲ್ಲ,
ಶ್ರೀವಾಸನ ರೂಪದಲ್ಲಿ
ನಾರದನೂ ಕಾಣಲಿಲ್ಲ ;
ಈ ಯಶೋದೆ ಶಚಿಯಾಗದೆ
ನಂದಗೋಪ ಜಗನ್ನಾಥ-
ನಾಗಿ ಇನ್ನು ಜನಿಸದೆ,
ನಾನೊಬ್ಬನೆ ಗೌರನಾಗಿ
ಮೊದಲು ಮೂಡಿ ಬಂದೆನೆ ?

ಓ ಈಗ ಅರ್ಥವಾಯ್ತು
ಪರಿವರ್ತನ ಕಾರಣ :
ಮಥುರೆಗಿಂದು ಬಂದಳಲ್ತೆ
ನನ್ನ ರಾಣಿ ರಾಧೆಯು
ಒಡನೆ ಗೌರವಾಯಿತೆನ್ನ
ಕೃಷ್ಣವರ್ಣ ಕಾಯವು !

ಪರಮಹಂಸರು ಇನ್ನೂ ಗೌರಾಂಗನ ಭಾವದಿಂದ ಆವಿಷ್ಟರಾಗೇ ಮತ್ತೆ ಹಾಡುತ್ತಿದಾರೆ:

ನಿಜಕೂ ಭಾವದ ಸಮಾಧಿಗದ್ಭುತ ಮೈಮರೆತಿರುವನು ಗೌರಾಂಗ,
ಅಳುವನು ನಗುವನು, ಹಾಡುತ ಕುಣಿವನು ತುಂಬಿತುಳುಕಿರಲು ಆನಂದ.
ಸನಿಯದ ಕಾಡಾಗಿದೆ ಬೃಂದಾವನ, ಹರಿವ ಗಂಗೆಯೇ ಯಮುನೆ
ಎಂಬ ಭಾವದೊಳು ರೋದಿಸುತಿರುವನು ನೆನೆದು ನೆನೆದು ಶ್ರೀಕೃಷ್ಣನನೆ!
ಇಂತಿರುವೀ ಗೌರಾಂಗನ ಕಾಯವು, ಹೊರಗೆ ಗೌರವರ್ಣ
ಅಂತರಂಗವೋ ಕೃಷ್ಣಭಾವದಲಿ ತುಂಬಿ ಕೃಷ್ಣವರ್ಣ!

ಪರಮಹಂಸರು ಈಗ ಗೌರಾಂಗಪ್ರೇಮದಿಂದ ಮೋಹಪರವಶಳಾಗಿರುವ ಭಕ್ತೆಯ ಭಾವವನ್ನು ಆರೋಪಿಸಿಕೊಂಡು ಹಾಡಲಾರಂಭಿಸಿದಾರೆ:

ಏಕೆ ನೆರೆಹೊರೆಯವರು ಈ ತೆರ
ಸಲ್ಲದಪವಾದವನು ಹಬ್ಬಿಸಿ
ನಾ ಕಳಂಕಿನಿ—ಎಂಬರು?
ಯಾರಿಗೊರೆಯಲಿ, ಎಂತು ಒರೆಯಲಿ
ನನ್ನ ಒಳಗಿನ ನೋವನು?
ನಾನು ಹೇಳಿದೆನೆಂದರೂ,
ಅದನೆಂತು ತಿಳಿಯಲು ಬಲ್ಲರು?
ಒಮ್ಮೆ ನಾ ಶ್ರೀವಾಸ ಗೃಹದೊಳು
ಹರಿಯ ನಾಮವ ನುತಿಪ ಗೌರನ
ದಿವ್ಯವಾಣಿಯ ಕೇಳಿದೆ;
ದಿವ್ಯಭಾವದೊಳದ್ದು ಶ್ರೀಗೌ-
ರಾಂಗ ಹೊರಳಿರೆ ನೆಲದೊಳು
ಸನಿಯದಲಿ ನಿಂತಿದ್ದ ನಾನೂ
ದಿವ್ಯಭಾವಕೆ ಮುಳುಗಲು
ಸಹಚರ ಶ್ರೀವಾಸನೆನ್ನನು
ಮುರಳಿ ಪ್ರಜ್ಞೆಗೆ ತಂದನು.
ಭಕ್ತವೃಂದದ ನಡುವೆ ಹಾಡುತ
ಹೊಲೆಯರನು ಎದೆಗಪ್ಪುತ,
ಒಂದುದಿನವೀಪೇಟೆಬೀದಿಯೊ-
ಳಿರಲು ಶ್ರೀ ಗೌರಾಂಗನು

ನಾನು ಕೂಡಾ ಒಡನೆ ನಡೆದೆನು
ಅವನ ಚರಣವ ಕಂಡೆನು.

ಒಮ್ಮೆ ಗಂಗಾತೀರದೊಳು ಶ್ರೀ
ಗೌರಾಂಗನಿದ್ದನು ಸೂರ್ಯಚಂದ್ರರ
ಹೊಳಪ ಜರೆಯುವ ಪ್ರಭೆಯೊಳು,
ಕೊಡವ ತುಂಬಲು ಬಂದ ನಾನೂ
ಆ ಅಗೋ ಅಲ್ಲವನ ಕಂಡೆನು
ಕೊಡವು ಜಾರಿತು ಹುಡಿಯೊಳು !
ನನ್ನ ನಾದಿನಿ ಇದನು ಕಂಡಳು,
ಅಂದಿನಿಂದಲು ಅಲ್ಲಸಲ್ಲದ
ಮಾತ ಹರಡುತಲಿರುವಳು.

ಬಲರಾಮನ ತಂದೆ ವೈಷ್ಣವ. ಬಹುಶಃ ಅದಕ್ಕಾಗಿ ಇರಬೇಕು ಈಗ ಪರಮಹಂಸರು ಗೋಪಿಯರ ಉದ್ಭ್ರಾಂತಪ್ರೇಮದ ಸಂಬಂಧವಾಗಿ ಹಾಡಲಾರಂಭಿಸಿರುವುದು :

ಇನ್ನೂ ಕಾಣೆನು ಕೃಷ್ಣನ, ನಾ-
ನಿನ್ನೂ ಕಾಣೆನು ಸಖಿಯೇ,
ಅವನಿಲ್ಲದೆ ಬರಿದಾಗಿದೆ ಮನೆಯೇ !

ನನ್ನ ತಲೆನವಿರು ಅವನಾಗಿದ್ದರೆ, ಸಖಿ
ಬಾಚುತಲಿದ್ದೆನು ಮೃದುವಾಗಿ
ಮೆಲ್ಲನೆ ಬಾಚುತ ಬಕುಲದ ಮಾಲೆಯ
ಮುಡಿಸುತಲಿದ್ದೆನು ಚೆಲುವಾಗಿ,
ಆ ಶ್ರೀಕೃಷ್ಣನು ಕೃಷ್ಣಕೇಶದಲಿ
ಬೆರೆಯುತಲಿದ್ದನು ಒಂದಾಗಿ !

ನನ್ನ ಮೂಗಿನಲಿ ನತ್ತಾಗಿದ್ದರೆ, ಸಖಿ
ನನ್ನಧರದ ಮಧು ಚುಂಬನದಿ
ನಲಿಯುತಲಿದ್ದನು . . . ; ಬರಿ ಕನಸಿದು ಸಖಿ
ಆ ಶ್ರೀಕೃಷ್ಣನು ಈ ನಿರ್ಭಾಗ್ಯಳ
ನತ್ತಾಗಿರುವನೆ ಮೂಗಿನಲಿ ?

ನನ್ನೀ ತೋಳಿನ ತೊಡವಾಗಿದ್ದರೆ, ಸಖಿ
ತೋಳನು ತಿರುವುತ ಹೆಮ್ಮೆಯಲಿ
ರಾಜವೀಧಿಯೊಳು ನಡೆಯುತಲಿದ್ದೆನು
ಝುಣಕು ಝುಣಕು ಝುಣ ನಾದದಲಿ !

ಬಲರಾಮನ ತಂದೆಗೆ ಒರಿಸ್ಸಾದಲ್ಲಿ ಅನೇಕ ಕಡೆ ಜಮೀನು ಇವೆ. ಆತ ನಿಷ್ಠಾವಂತ ವೈಷ್ಣವ. ಅನೇಕ ತೀರ್ಥಸ್ಥಾನಗಳಲ್ಲಿ ದೇವಾಲಯ ಕಟ್ಟಿಸಿ ಅತಿಥಿಶಾಲೆ ಏರ್ಪಡಿಸಿದಾನೆ. ತನ್ನ ಮುಪ್ಪಿನ ಜೀವನವನ್ನು ಈಗ ಬೃಂದಾವನದಲ್ಲಿ ಕಳೆಯುತ್ತಿದಾನೆ. ವೈಷ್ಣವರು ಸಾಮಾನ್ಯವಾಗಿ ಸ್ವಮತಭ್ರಾಂತರು. ಅವರಲ್ಲಿ ಅನೇಕರು ಶಾಕ್ತರನ್ನ, ಶೈವರನ್ನ, ವೇದಾಂತ ವಾದಿಗಳನ್ನ ಸಹಾನುಭೂತಿಯಿಂದ ನೋಡುತ್ತಿಲ್ಲ. ಅವರಲ್ಲಿ ಕೆಲವರು ಇವರನ್ನೆಲ್ಲಾ ದ್ವೇಷಿಸುತ್ತಾರೆ. ಆದರೆ ಪರಮಹಂಸರು ಆ ವಿಧದ ಸಂಕೀರ್ಣ ಭಾವನೆಗೆ ಮನ್ನಣೆಕೊಡುತ್ತಿಲ್ಲ. ಅವರ ದೃಷ್ಟಿಯಿಂದ, ವ್ಯಾಕುಲತೆಯೊಂದಿದ್ದರೆ ಎಲ್ಲಾ ಮಾರ್ಗಗಳಿಂದಲೂ, ಎಲ್ಲಾ ಮತ ಗಳಿಂದಲೂ ಭಗವಂತನ ಸಾಕ್ಷಾತ್ಕಾರ ಪಡೆಯಬಹುದು. ಬಲರಾಮನ ತಂದೆಯ ದೃಷ್ಟಿಯನ್ನು ವಿಶಾಲಗೊಳಿಸಲು ಈಗ ಪರಮಹಂಸರು ಮಾತು ಕತೆಯಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಮ್ಮೆ ಭಾವಿಸಿದೆ: 'ನಾನೇಕೆ ಒಂದೇ ಸ್ವರ ಊದುವವನಾಗಬೇಕು?' ಅದಕ್ಕಾಗಿ ಬೃಂದಾವನದಲ್ಲಿ ವೈಷ್ಣವಮಂತ್ರೋಪದೇಶ ಪಡೆದು ವೈಷ್ಣವಬೈರಾಗಿಯ ಉಡುಪನ್ನು ಧರಿಸಿದೆ. ಮೂರು ದಿನ ಆ ಭಾವದಿಂದ ಇದ್ದೆ. ಮತ್ತೆ ದಕ್ಷಿಣೇಶ್ವರದಲ್ಲಿ ರಾಮಮಂತ್ರೋಪದೇಶ ಪಡೆದೆ. ಹಣೆಗೆ ಉದ್ದುದ್ದವಾದ ನಾಮ ಬಳಿದು ಕೊಳ್ಳುತ್ತಿದ್ದೆ, ಕೊರಳಿಗೆ ಹೀರದ ಹಾರ ಹಾಕಿಕೊಳ್ಳುತ್ತಿದ್ದೆ. ಕೆಲವು ದಿನಗಳಾದ ಮೇಲೆ ಅವನ್ನೆಲ್ಲಾ ವರ್ಜಿಸಿಬಿಟ್ಟೆ.

"ಒಬ್ಬನ ಹತ್ತಿರ ಒಂದು ಮರದ ತೊಟ್ಟಿ ಇತ್ತು. ತಮ್ಮ ಬಟ್ಟೆಗೆ ಬಣ್ಣ ಹಾಕಿಸಿಕೊಳ್ಳುವುದಕ್ಕೆ ಜನ ಆತನ ಹತ್ತಿರಕ್ಕೆ ಬರುತ್ತಿದ್ದರು. ಆ ತೊಟ್ಟಿಯಲ್ಲಿ ಬಣ್ಣದ ಒಂದು ಮಿಶ್ರಣ ಇತ್ತು. ಯಾರಾರಿಗೆ ಯಾವಾವ ಬಣ್ಣದ ಬಟ್ಟೆ ಬೇಕೊ ಆ ಮಿಶ್ರಣದಲ್ಲಿ ಅದ್ದಿದರೇ ಆಯಾಯ ಬಣ್ಣದ ಬಟ್ಟೆಯಾಗಿಬಿಡುತ್ತಿತ್ತು. ಒಬ್ಬ ಈ ಸೋಜಿಗವನ್ನು ನೋಡಿ ಆಶ್ಚರ್ಯ

ದಿಂದ ಬಣ್ಣಹಾಕುವವನಿಗೆ ಹೇಳಿದ: 'ನಿನ್ನ ತೊಟ್ಟಿಯಲ್ಲಿ ಇರುವ ಮಿಶ್ರಣದ ಬಣ್ಣ ಹಾಕಿಕೊಡು ನನಗೆ.' "

ಎಲ್ಲಾ ಧರ್ಮದ ಜನರೂ ತಮ್ಮ ಹತ್ತಿರ ಬರುತ್ತಾರೆ ಮತ್ತು ತಮ್ಮ ತಮ್ಮ ಆದರ್ಶಗಳಿಗೆ ತಕ್ಕಂತೆ ಆತ್ಮಜಾಗೃತಿಯನ್ನು ಪಡೆದುಕೊಳ್ಳುತ್ತಾರೆ ಎಂಬುದಾಗಿ ಪರಮಹಂಸರು ಸೂಚಿಸಿದರೇನು ?

ಶ್ರೀರಾಮಕೃಷ್ಣರು ಬಲರಾಮನ ತಂದೆಗೆ: "ನೀನು ಇನ್ನು ಮೇಲೆ ಪುಸ್ತಕಗಳನ್ನೋದೋ ಗೋಜಿಗೆ ಹೋಗಬೇಡ. ಆದರೆ ಚೈತನ್ಯಚರಿತಾಮೃತದಂಥ ಭಕ್ತಿಶಾಸ್ತ್ರಗಳನ್ನು ಬೇಕಾದರೆ ಓದು.

"ಮುಖ್ಯವಾಗಿ ಮಾಡಬೇಕಾದ್ದು ಭಗವಂತನನ್ನು ಪ್ರೀತಿಸುವುದು, ಆತನ ಮಾಧುರ್ಯವನ್ನು ಸವಿಯುವುದು. ಆತ ರಸ, ಭಕ್ತ ಆಸ್ವಾದಕ. ಭಕ್ತ ಭಗವದಾನಂದವನ್ನು ಸವಿಯುತ್ತಾನೆ. ಆತ ತಾವರೆ ಹೂವು, ಭಕ್ತ ದುಂಬಿ. ಭಕ್ತ ತಾವರೆ ಹೂವಿನ ಮಧುವನ್ನು ಹೀರುತ್ತಾನೆ.

"ಭಗವಂತನಿಲ್ಲದೆ ಭಕ್ತನಿರಲಾರದ ಹಾಗೆ, ಭಕ್ತನಿಲ್ಲದೆ ಭಗವಂತನೂ ಇರಲಾರ. ಆಗ ಭಕ್ತ ರಸವಾಗುತ್ತಾನೆ, ಭಗವಂತ ಆಸ್ವಾದಕನಾಗುತ್ತಾನೆ. ಭಕ್ತ ತಾವರೆ ಹೂವು ಆಗುತ್ತಾನೆ, ಭಗವಂತ ದುಂಬಿಯಾಗುತ್ತಾನೆ. ಭಗವಂತ ತನ್ನ ಮಾಧುರ್ಯವನ್ನು ತಾನೇ ಆಸ್ವಾದಿಸಲೋಸುಗ ಎರಡಾಗಿದಾನೆ. ಈ ಕಾರಣದಿಂದಲೇ ರಾಧಾಕೃಷ್ಣ ಲೀಲೆ.

"ಆಧ್ಯಾತ್ಮಿಕ ಜೀವನದ ಮೊದಮೊದಲಲ್ಲಿ, ತೀರ್ಥಯಾತ್ರೆ, ಕೊರಳಿಗೆ ರುದ್ರಾಕ್ಷಿ ಅಥವಾ ತುಳಸಿಮಾಲೆ, ಮಡಿ-ಗಿಡಿ ಇವನ್ನೆಲ್ಲಾ ಆಚರಿಸಬೇಕು. ವಸ್ತುಲಾಭವಾಯಿತೆಂದರೆ, ಭಗವದ್ದರ್ಶನ ದೊರೆಯಿತು ಎಂದರೆ, ಬಾಹ್ಯಾಡಂಬರ ಕ್ರಮೇಣ ಕಡಮೆಯಾಗಿಬಿಡುತ್ತದೆ. ಬಳಿಕ ಉಳಿದುಕೊಳ್ಳುವ ಕೆಲಸ ಆತನ ನಾಮಜಪ ಮಾಡುವುದು ಮತ್ತು ಸ್ಮರಣ ಮನನ.

"ಹದಿನಾರು ರೂಪಾಯಿಗಳ ಕಾಸು ಒಂದು ದೊಡ್ಡ ಗುಡ್ಡೆಯೇ ಆಗಿಬಿಡುತ್ತದೆ. ಅವನ್ನೆಲ್ಲಾ ರೂಪಾಯಿಯಾಗಿ ಪರಿವರ್ತಿಸಿದರೆ ಆಗ ಅವು ಒಂದು ದೊಡ್ಡ ಗುಡ್ಡೆಯಾಗಿ ಕಾಣುವುದಿಲ್ಲ. ಅವುಗಳಿಗೆ ಬದಲು ಒಂದು ಮೊಹರು ಕೊಂಡುಕೊಂಡರೆ ಆ ಗುಡ್ಡೆ ಎಂಥ ಪುಟ್ಟ ಅವಸ್ಥೆಗೆ ಬಂದುಬಿಡುತ್ತದೆ. ಆ ಮೊಹರಿಗೆ ಬದಲು ಒಂದು ವಜ್ರ ಕೊಂಡುಕೊಂಡರೆ ಅದು ಜನರ ಕಣ್ಣಿಗೆ ಬೀಳುವುದೇ ಕಷ್ಟವಾಗುತ್ತದೆ."

ಕೊರಳಿಗೆ ತುಳಸಿ ಮಾಲೆ, ಆಚಾರ-ಗೀಚಾರ ಇವೆಲ್ಲವನ್ನು ಆಚರಿಸದೆ ಇತ್ತು ಎಂದರೆ ವೈಷ್ಣವರು ಜನರನ್ನು ನಿಂದಿಸುತ್ತಾರೆ. ಈ ಕಾರಣದಿಂದಲೇ ಏನು ಪರಮಹಂಸರು ಹೇಳಿದುದು, ಭಗವಂತನ ದರ್ಶನ ದೊರೆತನಂತರ ಮಾಲೆ, ವೇಷ ಭೂಷಣ ಇವುಗಳ ಕಡೆ ಮನಸ್ಸು ಅಷ್ಟಾಗಿ ಹರಿದುಹೋಗುವುದಿಲ್ಲ; ಬಾಹ್ಯಾಚರಣೆ ಬಹಳವಾಗಿ ಕಡಮೆಯಾಗಿಬಿಡುತ್ತದೆ ಎಂದು ?

ಶ್ರೀರಾಮಕೃಷ್ಣರು ಬಲರಾಮನ ತಂದೆಗೆ: "ಕರ್ತಾಭಜಾ ಸಂಪ್ರದಾಯದವರು ಭಕ್ತರನ್ನು ಪ್ರವರ್ತಕ, ಸಾಧಕ, ಸಿದ್ಧ, ಸಿದ್ಧರ ಸಿದ್ಧ ಎಂಬುದಾಗಿ ನಾಲ್ಕು ಪಂಗಡಗಳಾಗಿ ವಿಂಗಡಿಸುತ್ತಾರೆ. ಪ್ರವರ್ತಕ ಕೊರಳಿಗೆ ಮಾಲೆ ಹಾಕುತ್ತಾನೆ, ಹಣೆಗೆ ತಿಲಕವಿಡುತ್ತಾನೆ, ಉಳಿದ ಬಾಹ್ಯಾಚಾರಗಳನ್ನು ಆಚರಿಸುತ್ತಾನೆ. ಸಾಧಕನಲ್ಲಿ ಬಾಹ್ಯಾಡಂಬರ ಅಷ್ಟಾಗೇನು ಇರುವುದಿಲ್ಲ. ಉದಾಹರಣೆಗೆ ಬಾವುಲರು. ಸಿದ್ಧನಿಗೆ ಭಗವಂತನಿದಾನೆ ಎಂಬ ಪೂರ್ಣ ವಿಶ್ವಾಸವಿರುತ್ತದೆ. ಸಿದ್ಧರ ಸಿದ್ಧ, ಶ್ರೀ ಚೈತನ್ಯನ ಹಾಗೆ, ಭಗವಂತನ ದರ್ಶನ ಮಾಡಿರುವುದೇ ಅಲ್ಲದೆ, ಆತನೊಡನೆ ಸರ್ವದಾ ಮಾತುಕತೆಯಾಡುತ್ತಾನೆ. ಸಿದ್ಧರ ಸಿದ್ಧನ ಅವಸ್ಥೆಯೇ ತುತ್ತತುದಿಯದು.

"ಅನೇಕ ವಿಧದ ಸಾಧಕರಿದಾರೆ. ಸಾತ್ತ್ವಿಕ ಸಾಧಕರು ಸಾಧನೆ ಭಜನೆಯನ್ನು ಗೋಪ್ಯವಾಗಿ ಮಾಡುತ್ತಾರೆ. ಹೊರಗೆ ನೋಡುವುದಕ್ಕೇನೊ ಸಾಮಾನ್ಯರಂತೇ ಕಾಣುತ್ತಾರೆ, ಆದರೆ ಸೊಳ್ಳೆ ಪರದೆಯೊಳಗೆ ಧ್ಯಾನ ಮಾಡುತ್ತಾರೆ.

"ರಾಜಸಿಕ ಸಾಧಕರು ಬಾಹ್ಯಾಡಂಬರವನ್ನು ಪ್ರದರ್ಶಿಸುತ್ತಾರೆ— ಕೊರಳಿಗೆ ಮಾಲೆ, ಹಣೆಗೆ ತಿಲಕ, ಕಾಷಾಯದುಡಿಗೆ, ರೇಷ್ಮೆವಸ್ತ್ರ, ಚಿನ್ನದ ಮಣಿ ಹಾಕಿರುವ ಜಪಮಾಲೆ, ಇತ್ಯಾದಿ. ಇವರನ್ನು ಸೈನ್‌ಬೋರ್ಡ್ ಹಾಕಿ ಅಂಗಡಿ ತೆರೆದಿರುವ ವ್ಯಾಪಾರಿಗಳಿಗೆ ಹೋಲಿಸಬಹುದು.

"ಯಾವ ಧರ್ಮವೇ ಆಗಲಿ, ಯಾವ ಮತವೇ ಆಗಲಿ ಎಲ್ಲವೂ ಆ ಒಬ್ಬ ಭಗವಂತನನ್ನೇ ಕರೆಯುವಂತೆ ತಮ್ಮ ತಮ್ಮ ಅನುಯಾಯಿಗಳನ್ನು ಪ್ರೇರೇಪಿಸುತ್ತಿವೆ. ಆದ್ದರಿಂದ ಯಾವ ಧರ್ಮವನ್ನೇ ಆಗಲಿ, ಯಾವ ಮತವನ್ನೇ ಆಗಲಿ ಅಶ್ರದ್ಧೆಯಿಂದ ನೋಡಕೂಡದು, ದ್ವೇಷಿಸಕೂಡದು. ಆ ಒಬ್ಬ ಭಗವಂತನನ್ನೇ ವೇದಗಳು ಸಚ್ಚಿದಾನಂದ ಬ್ರಹ್ಮ ಅಂತಲೂ, ಭಾಗವತಾದಿ ಪುರಾಣಗಳು ಸಚ್ಚಿದಾನಂದ ಕೃಷ್ಣ ಅಂತಲೂ, ತಂತ್ರಶಾಸ್ತ್ರ

ಸಚ್ಚಿದಾನಂದ ಶಿವ ಅಂತಲೂ ಕರೆಯುತ್ತಿವೆ. ನಿಜವಾಗಿ ಇರುವವನು ಕೇವಲ ಆ ಸಚ್ಚಿದಾನಂದನೊಬ್ಬನೇ.

"ವೈಷ್ಣವರಲ್ಲಿ ವಿವಿಧ ಪಂಗಡಗಳಿವೆ. ವೇದ ಯಾವುದನ್ನು 'ಬ್ರಹ್ಮ' ಅಂತ ಕರೆಯುತ್ತದೆಯೊ, ಅದನ್ನೇ ಒಂದು ಪಂಗಡದ ವೈಷ್ಣವರು 'ಅಲೇಕ-ನಿರಂಜನ' ಎಂಬುದಾಗಿ ಕರೆಯುತ್ತಾರೆ. 'ಅಲೇಕ' ಅಂದರೆ ಯಾವುದನ್ನು ಗುರುತಿಸಿ ಹೇಳಲಾಗುವುದಿಲ್ಲವೊ, ಇಂದ್ರಿಯಗಳಿಂದ ಗ್ರಹಿಸಲಾಗುವುದಿಲ್ಲವೊ ಅದು. ಇವರು ಹೇಳುತ್ತಾರೆ, ರಾಧೆ ಮತ್ತು ಕೃಷ್ಣ ಅಲೇಕದ ಕೇವಲ ಎರಡು ಗುಳ್ಳೆ ಅಂತ.

"ವೇದಾಂತದ ದೃಷ್ಟಿಯಿಂದ ಅವತಾರವೆಂಬುದು ಇಲ್ಲ. ವೇದಾಂತಿಗಳು ಹೇಳುತ್ತಾರೆ: ರಾಮ ಕೃಷ್ಣ ಇವರು ಸಚ್ಚಿದಾನಂದ ಸಾಗರದ ಎರಡು ಅಲೆ ಮಾತ್ರ ಎಂದು.

"ನಿಜವಾಗಿ ಇರುವುದು ಒಂದೇ ಹೊರತು ಎರಡಲ್ಲ. ಮನುಷ್ಯ ಭಗವಂತನನ್ನು ಯಾವ ಹೆಸರಿನಿಂದ ಬೇಕಾದರೂ ಕರೆಯಲಿ, ಹೃತ್ಪೂರ್ವಕವಾಗಿ ಭಗವಂತನನ್ನು ಕರೆದುದೇ ಆದರೆ ಆತ ಭಗವಂತನ ಸಾಕ್ಷಾತ್ಕಾರವನ್ನು ಪಡೆದೇ ಪಡೆಯುತ್ತಾನೆ. ವ್ಯಾಕುಲತೆ ಇತ್ತು ಎಂದರೆ ಜಯ."

ಪರಮಹಂಸರು ಭಾವದಿಂದ ತುಂಬಿತುಳುಕಾಡುತ್ತ ಈ ವಿಷಯಗಳನ್ನೆಲ್ಲಾ ಭಕ್ತರಿಗೆ ತಿಳಿಸಿದರು. ಈಗ ಸ್ವಲ್ಪ ಪ್ರಕೃತಿಸ್ಥರಾಗಿ ಬಲರಾಮನ ತಂದೆಯನ್ನು ಕೇಳುತ್ತಿದಾರೆ: "ನೀನು ಬಲರಾಮನ ತಂದೆಯಲ್ಲವೆ?"

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದಾರೆ. ಬಲರಾಮನ ವೃದ್ಧ ತಂದೆ ಸದ್ದುಮಾಡದೆ ಜಪಮಾಲೆ ತಿರುಗಿಸುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರ್ ಮತ್ತು ಉಳಿದವರಿಗೆ: "ಇವರು ಅಷ್ಟೊಂದು ಜಪ ಮಾಡುತ್ತಾರೆ, ಅಷ್ಟೊಂದು ತೀರ್ಥಯಾತ್ರೆ ಮಾಡುತ್ತಾರೆ, ಆದರೂ ಹೀಗಿದಾರಲ್ಲ ಏಕೆ? ಇವರ ವರ್ಷ ಹದಿನೆಂಟು ತಿಂಗಳಿನದು ಅನ್ನುವ ಹಾಗಿದಾರಲ್ಲ!

"ಒಮ್ಮೆ ನಾನು ಹರೀಶನಿಗೆ ಹೇಳಿದೆ : 'ಕಾಶಿಗೆ ಹೋಗುವುದರ ಆವಶ್ಯಕತೆಯೇನಿದೆ ಭಗವಂತನಿಗಾಗಿ ವ್ಯಾಕುಲತೆ ಇಲ್ಲದೆ ಇತ್ತು ಎಂದರೆ? ವ್ಯಾಕುಲತೆಯೊಂದು ಇತ್ತು ಎಂದರೆ ಈ ಜಾಗವೇ ಕಾಶಿಯಾಗಿಬಿಡುತ್ತದೆ.'

"ಅವರು ಅಷ್ಟೊಂದು ಜಪ, ಅಷ್ಟೊಂದು ತೀರ್ಥಯಾತ್ರೆ ಮಾಡುತ್ತಾರೆ, ಆದರೆ ಅವರಿಗೆ ಯಾವ ಸಾಕ್ಷಾತ್ಕಾರವೂ ದೊರೆಯುತ್ತಿಲ್ಲವಲ್ಲ

ಏಕೆ? ಅವರಲ್ಲಿ ವ್ಯಾಕುಲತೆ ಇಲ್ಲ. ವ್ಯಾಕುಲತೆಯಿಂದ ಆತನನ್ನು ಕರೆದದ್ದೇ ಆದರೆ ಖಂಡಿತ ಆತ ತನ್ನ ದರ್ಶನವನ್ನು ಕೊಟ್ಟೇ ಕೊಡುತ್ತಾನೆ.

"ಒಯಲು ನಾಟಕದ ಆರಂಭದಲ್ಲಿ ರಂಗಭೂಮಿಯ ಮೇಲೆ ಏನೇನೊ 'ಗುಜುಗುಜು, ಗುಜುಗುಜು' ಅಂತ ಶಬ್ದ ನಡೆಯುತ್ತಿರುತ್ತದೆ. ಆಗ ಶ್ರೀಕೃಷ್ಣ ಅಲ್ಲಿ ಕಾಣಿಸಿಕೊಳ್ಳುವುದಿಲ್ಲ. ಯಾವಾಗ ನಾರದ ಋಷಿ ರಂಗಭೂಮಿಯನ್ನು ಪ್ರವೇಶಿಸಿ ವೀಣೆಯನ್ನು ನುಡಿಸುತ್ತ ನುಡಿಸುತ್ತ ವ್ಯಾಕುಲತೆಯಿಂದ ಕರೆಯುತ್ತಾನೊ: 'ಪ್ರಾಣ ಹೇ ಗೋವಿಂದ ಮಮ ಜೀವನ' ಅಂತ, ಆಗ ಶ್ರೀಕೃಷ್ಣ ಇನ್ನು ಅಲ್ಲಿ ಕಾಣಿಸಿಕೊಳ್ಳದೆ ಇರಲಾರ. ಗೋಪಾಲ ಕರೊಡನೆ ಬಂದು ದರ್ಶನವೀಯುತ್ತಾನೆ."

೧೬ನೆ ಅಕ್ಟೋಬರ್ ೧೮೮೪, ಆಶ್ವೀಜ ಪೂರ್ಣಿಮೆ, ಮಂಗಳವಾರ.

ಪರಮಹಂಸರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯಲ್ಲಿ ರಾಖಾಲ, ಬಲರಾಮನ ತಂದೆ, ವೇಣೀಪಾಲ, ಮಾಸ್ಟರ್, ಮಣಿಮಲ್ಲಿಕ, ಈಶಾನ, ಕಿಶೋರಿ ಇವರೇ ಮೊದಲಾದವರೊಡನೆ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಯಾರದು ಉದಾರ ಭಾವವೊ ಅವರು ಎಲ್ಲಾ ದೇವರನ್ನೂ ಒಪ್ಪಿಕೊಳ್ಳುತ್ತಾರೆ—ಕೃಷ್ಣ, ಕಾಳಿ, ಶಿವ, ರಾಮ, ಇತ್ಯಾದಿ ಎಲ್ಲರನ್ನೂ."

ಬಲರಾಮನ ತಂದೆ: "ನಿಜ. ಇದು ಹೆಂಗಸು ತನ್ನ ಪತಿ ಯಾವ ಪೋಷಾಕು ಹಾಕಿಕೊಂಡಿದ್ದರೂ ಆತನನ್ನು ಆಕೆ ಗುರುತಿಸುವ ಹಾಗೆ."

ಶ್ರೀರಾಮಕೃಷ್ಣರು: "ಆದರೆ ನಿಷ್ಠಾಭಕ್ತಿ ಎಂಬುದೊಂದಿದೆ. ಗೋಪಿಯರು ಮಥುರೆಗೆ ಹೋಗಿದ್ದಾಗ ರುಮಾಲು ಕಟ್ಟಿದ್ದ ಕೃಷ್ಣನನ್ನು ಕಂಡು ತಲೆಮುಸುಕು ಎಳೆದುಕೊಂಡು ಹೇಳಿದರು: 'ಇವನಾರಪ್ಪ ಇವನು? ತಲೆಗೆ ನವಿಲುಗರಿಯ ಕಿರೀಟವಿಟ್ಟುಕೊಂಡಿರುವ, ಶರೀರದ ಮೇಲೆ ಪೀತಾಂಬರ ಹೊದ್ದುಕೊಂಡಿರುವ ನಮ್ಮ ಕೃಷ್ಣನೆಲ್ಲಿ?' ಹನುಮಂತನದೂ ನಿಷ್ಠಾಭಕ್ತಿ. ದ್ವಾಪರಯುಗದಲ್ಲಿ ಹನುಮಂತ ದ್ವಾರಕೆಗೆ ಬಂದಾಗ ಕೃಷ್ಣ ರುಕ್ಮಿಣಿಗೆ ಹೇಳಿದ: 'ಹನುಮಂತನಿಗೆ ರಾಮರೂಪವನ್ನು ನೋಡದೆ ಇದ್ದರೆ ಸಂತೋಷವಾಗುವುದಿಲ್ಲ.' ಅದಕ್ಕಾಗಿ ಕೃಷ್ಣ ರಾಮರೂಪವನ್ನು ಧರಿಸಿ ಆತನನ್ನು ಎದುರುಗೊಂಡ.

"ಆದರೆ ನೋಡಿ, ನನ್ನದು ಒಂದು ವಿಚಿತ್ರ ಅವಸ್ಥೆ. ನನ್ನ ಮನಸ್ಸು

ಸತತ ನಿತ್ಯದಿಂದ ಲೀಲೆಗೆ ಇಳಿದುಬರುತ್ತಿರುತ್ತದೆ ಮತ್ತೆ ಲೀಲೆಯಿಂದ ನಿತ್ಯಕ್ಕೆ ಹತ್ತುತ್ತಿರುತ್ತದೆ.

"ನಿತ್ಯವನ್ನು ಮುಟ್ಟುವುದರ ಹೆಸರೇ ಬ್ರಹ್ಮಜ್ಞಾನ. ಅದನ್ನು ಗಳಿಸಿಕೊಳ್ಳುವುದು ಬಹಳ ಕಷ್ಟ. ಸಂಪೂರ್ಣವಾಗಿ ವಿಷಯಬುದ್ಧಿ ಹೋಗದ ಹೊರತು ಅದು ದೊರೆಯುವುದಿಲ್ಲ. ಹಿಮಾಲಯಪರ್ವತ ರಾಜನ ಮನೆಯಲ್ಲಿ ಭಗವತಿ ಜನ್ಮ ತಳೆದಾಗ ಆಕೆ ಅನೇಕ ರೂಪಗಳನ್ನು ಧರಿಸಿ ತನ್ನ ತಂದೆಗೆ ದರ್ಶನಕೊಟ್ಟಳು. ರಾಜ ಆಕೆಗೆ ತಿಳಿಸಿದ: 'ನನಗೆ ಬ್ರಹ್ಮದರ್ಶನ ಪಡೆಯಲು ಇಚ್ಛೆಯಾಗುತ್ತಿದೆ.' ಅದಕ್ಕೆ ಭಗವತಿ ಹೇಳಿದಳು: 'ಹೇ ತಂದೆ, ನಿಮಗೆ ಆ ಇಚ್ಛೆಯುಂಟಾಗಿರುವುದಾದರೆ ನೀವು ಸಾಧುಸಂಗ ಮಾಡಬೇಕು. ಸಂಸಾರವನ್ನು ಬಿಟ್ಟು ನಿರ್ಜನ ಪ್ರದೇಶದಲ್ಲಿದ್ದು ಆಗಾಗ ಸಾಧುಸಂಗ ಮಾಡಿ.'

"ಆ ಒಂದರಿಂದಲೇ ಅನೇಕ ಉಂಟಾಗಿದೆ—ನಿತ್ಯದಿಂದಲೇ ಲೀಲೆಯ ಉದ್ಭವ. ಒಂದು ಅವಸ್ಥೆ ಇದೆ, ಅದರಲ್ಲಿ ಅನೇಕವೂ ಹೊರಟುಹೋಗುತ್ತದೆ, ಹಾಗೇ ಒಂದೂ ಕೂಡ—ಏಕೆಂದರೆ ಒಂದು ಎಂಬುದು ಇತ್ತೂ ಎಂದರೆ ಎರಡು ಎಂಬುದು ಇರಲೇ ಬೇಕು. ಬ್ರಹ್ಮ ಅನುಪಮ—ಉಪಮೆಯ ಮೂಲಕ ಆತನನ್ನು ಅರಿಯುವಂತಿಲ್ಲ. ಆತ ಬೆಳಕಿಗು ಅಂಧಕಾರಕ್ಕು ಮಧ್ಯೆ. ಆತ ಬೆಳಕೇನೊ ನಿಜ, ಆದರೆ ನಮ್ಮ ಈ ಬೆಳಕಲ್ಲ—ಈ ಜಡ ಬೆಳಕಲ್ಲ.

"ಯಾವಾಗ ಆತ ನನ್ನ ಮನಸ್ಸನ್ನು ಬದಲಾಯಿಸುತ್ತಾನೊ, ಲೀಲೆಗೆ ಇಳಿಸುತ್ತಾನೋ, ಆಗ ನೋಡುತ್ತೇನೆ ಆತನೇ ಈಶ್ವರ, ಮಾಯೆ, ಈ ಜೀವ ಜಗತ್ತು ಎಲ್ಲವೂ ಆಗಿರುವುದನ್ನ.

"ಮತ್ತೆ ಇನ್ನು ಕೆಲವು ವೇಳೆ ತೋರಿಸುತ್ತಾನೆ, ತಾನೇ ಈ ಜೀವ ಜಗತ್ತನ್ನು ಸೃಷ್ಟಿಸಿರುವುದಾಗಿ. ಆತ ಒಡೆಯ, ಈ ಜಗತ್ತು ಆತನ ತೋಟ.

"'ಆತ ಒಡೆಯ, ಈ ಇಡೀ ಜೀವ ಜಗತ್ತು ಆತನಿಗೆ ಸೇರಿದವೇ'—ಇದಕ್ಕೆ ಜ್ಞಾನ ಅಂತ ಹೆಸರು. 'ನಾನು ಕರ್ತ', 'ನಾನು ಗುರು', 'ನಾನು ತಂದೆ'—ಇದರ ಹೆಸರೇ ಅಜ್ಞಾನ. 'ಇದು ನನ್ನ ಮನೆ; ಇದು ನನ್ನ ಸಂಸಾರ; ಇದು ನನ್ನ ಧನ; ಇವರು ನನ್ನ ಬಂಧುಬಾಂಧವರು'—ಈ ಭಾವನೆಯೂ ಅಜ್ಞಾನವೇ."

ಬಲರಾಮನ ತಂದೆ: "ಹೌದು, ಅದು ನಿಜ."

ಶ್ರೀರಾಮಕೃಷ್ಣರು: "ಎಲ್ಲಿಯವರೆಗೆ 'ಭಗವಂತ ಕರ್ತ' ಎಂಬ ಜ್ಞಾನೋದಯವಾಗುವುದಿಲ್ಲವೊ ಅಲ್ಲಿಯವರೆಗೆ ಮತ್ತೆ ಮತ್ತೆ ಈ ಜಗತ್ತಿಗೆ ಬರಲೇಬೇಕಾಗುತ್ತದೆ—ಮತ್ತೆ ಮತ್ತೆ ಜನ್ಮವೆತ್ತಬೇಕಾಗುತ್ತದೆ. 'ಭಗವಂತನೇ ಕರ್ತ' ಎಂಬ ಜ್ಞಾನೋದಯವಾಗಿಬಿಟ್ಟರೆ ಮತ್ತೆ ಜನ್ಮವೆತ್ತಬೇಕಾಗಿರುವುದಿಲ್ಲ. ಎಲ್ಲಿಯವರೆಗೆ, ಹೇ ಭಗವಂತ, ನಿಜವಾಗಿ ಇರತಕ್ಕವನು ನೀನೊಬ್ಬನೇ' ಎಂದು ಹೇಳುವುದಿಲ್ಲವೊ ಅಲ್ಲಿಯವರೆಗೆ ಈ ಸಂಸಾರದಿಂದ ಬಿಡುಗಡೆಯಾಗುವುದಿಲ್ಲ. ಪುನರ್ಜನ್ಮ, ಈ ಜಗತ್ತಿಗೆ ಬಂದು ಹೋಗುವುದು, ಇದ್ದೇ ಇರುತ್ತದೆ. ಮುಕ್ತಿ ದೊರಕುವುದಿಲ್ಲ. 'ನನ್ನದು, ನನ್ನದು' ಅಂದರೆ ತಾನೆ ಏನು ಪುರುಷಾರ್ಥ ದೊರೆಯುತ್ತದೆ? ಎಸ್ಟೇಟಿನ ವ್ಯವಸ್ಥಾಪಕ ಹೇಳಬಹುದು: 'ಇದು ನಮ್ಮ ತೋಟ; ಇದು ನಮ್ಮ ಮರ ಮುಟ್ಟುಗಳು' ಎಂದು. ಆದರೆ ತೋಟದ ಯಜಮಾನ ಆತನನ್ನು ವಜಾ ಮಾಡಿಬಿಟ್ಟಾಗ, ತನ್ನ ಸ್ವಂತ ಉಪಯೋಗಕ್ಕೆ ದೊರೆತಿದ್ದ ಮಾವಿನ ಮರದ ಒಡಕಲು ಪೆಟ್ಟಿಗೆಯನ್ನೂ ಜೊತೆಯಲ್ಲಿ ತೆಗೆದುಕೊಂಡುಹೋಗಲು ಧೈರ್ಯವಿರುವುದಿಲ್ಲ.

"'ನಾನು, ನನ್ನದು' ಎಂಬುದು ಸತ್ಯವನ್ನು ಮುಚ್ಚಿ ಇಟ್ಟುಬಿಟ್ಟಿದೆ—ಅರಿತುಕೊಳ್ಳಲು ಬಿಟ್ಟುಕೊಡಲೊಲ್ಲದು. ಅದ್ವೈತಜ್ಞಾನ ಉಂಟಾಗದ ಹೊರತು ಚೈತನ್ಯದರ್ಶನ ದೊರೆಯುವುದಿಲ್ಲ. ಅದು ದೊರೆತ ಮೇಲೇ ನಿತ್ಯಾನಂದದ ಅನುಭವ. ಪರಮಹಂಸಾವಸ್ಥೆಯನ್ನು ಹೊಂದಿದ ಮೇಲೆ ಈ ನಿತ್ಯಾನಂದದ ಅನುಭವ ದೊರೆಯುತ್ತದೆ.

"ವೇದಾಂತದ ದೃಷ್ಟಿಯಿಂದ ಅವತಾರವೆಂಬುದು ಇಲ್ಲ. ಅವರ ದೃಷ್ಟಿಯಿಂದ ಚೈತನ್ಯದೇವ ಅಖಂಡ ಬ್ರಹ್ಮನ ಒಂದು ಗುಳ್ಳೆ ಮಾತ್ರ.

"ಚೈತನ್ಯದರ್ಶನ ಯಾವುದರ ಹಾಗಿದೆ ಗೊತ್ತೆ? ಬೆಂಕಿಕಡ್ಡಿ ಗೀಚಿದಾಗ ಕತ್ತಲೆ ಕೊಠಡಿ ಇದ್ದಕ್ಕಿದ್ದಹಾಗೆ ಬೆಳಕಾದ ಹಾಗೆ.

"ಭಕ್ತಿಮಾರ್ಗಿಗಳು ಅವತಾರವನ್ನು ಒಪ್ಪುತ್ತಾರೆ. ಕರ್ತಾಭಜಾ ಸಂಪ್ರದಾಯದ ಒಬ್ಬ ಹೆಂಗಸು ನನ್ನ ಅವಸ್ಥೆಯನ್ನು ನೋಡಿ ಹೇಳಿದಳು: 'ನಿಮಗೆ ಆತ್ಮಸಾಕ್ಷಾತ್ಕಾರವಾಗಿಬಿಟ್ಟಿದೆ. ಅತಿಯಾಗಿ ಹಾಡುವುದು ನರ್ತಿಸುವುದು ಮಾಡಬೇಡಿ. ಹಣ್ಣಾದ ದ್ರಾಕ್ಷಿಗಳನ್ನ ಬಿಡಿಸಿದ ಹತ್ತಿಯ ಮೇಲಿಟ್ಟು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಸೊಸೆ ಗರ್ಭಿಣಿ

ಯಾದರೆ ಅತ್ತೆ ಆಕೆಯ ಕೆಲಸವನ್ನು ಕಡಮೆ ಕಡಮೆ ಮಾಡಿಕೊಡುತ್ತಾಳೆ. ಭಗವಂತನ ದರ್ಶನ ದೊರೆತಿರುವುದಕ್ಕೆ ಚಿಹ್ನೆ, ಕ್ರಮೇಣ ಕರ್ಮತ್ಯಾಗವಾಗಿ ಬಿಡುತ್ತದೆ. ಈ ಮನುಷ್ಯರ ಅಂತರ್ಯದಲ್ಲಿ [ಪರಮಹಂಸರನ್ನುದ್ದೇಶಿಸಿ] ಮಾನುಷ ರತ್ನ ಇದೆ.'

"ನಾನು ಊಟಮಾಡುವುದನ್ನು ನೋಡಿ ಆಕೆ ಹೇಳುತ್ತಿದ್ದಳು: 'ಏನು, ನೀವು ತಿನ್ನುತ್ತಾ ಇದೀರೊ ಅಥವಾ ಬೇರೆ ಯಾರಿಗಾದರು ತಿನ್ನಿಸುತ್ತಾ ಇದೀರೊ?'

"ಈ 'ಅಹಂ' ಎಂಬುದೇ ಸತ್ಯವನ್ನು ಮುಚ್ಚಿ ಇಟ್ಟುಬಿಟ್ಟಿದೆ. ನರೇಂದ್ರ ಒಮ್ಮೆ ಹೇಳಿದ: 'ಮನುಷ್ಯನ 'ಅಹಂ' ಎಂಬುದು ಹಿಂದೆಗೆದ ಹಾಗೆಲ್ಲಾ ಭಗವಂತನ 'ಅಹಂ' ಎಂಬುದು ಸಮೀಪಿಸತೊಡಗುತ್ತದೆ.' ಕೇದಾರ ಹೇಳುತ್ತಾನೆ: 'ಜೇಡಿಮಣ್ಣು ಹೂಜಿಯಲ್ಲಿ ಎಷ್ಟು ಹೆಚ್ಚಾಗಿರುವುದೊ, ಅಷ್ಟೂ ಕಡಮೆಯಾಗಿ ಅದು ನೀರು ಹಿಡಿಯುತ್ತದೆ.'

"ಕೃಷ್ಣ ಅರ್ಜುನನಿಗೆ ಹೇಳಿದ: 'ಗೆಳೆಯಾ, ಅಷ್ಟಸಿದ್ಧಿಗಳಲ್ಲಿ ಒಂದು ಇದ್ದರೂ ನಿನಗೆ ನನ್ನ ಸಾಕ್ಷಾತ್ಕಾರ ದೊರೆಯದು.' ಇವು ಎಲ್ಲೋ ಸ್ವಲ್ಪ ಶಕ್ತಿಯನ್ನು ಮಾತ್ರ ಕೊಡಬಲ್ಲವು. ಗುಣಪಡಿಸುವುದು ಇದೇ ಮೊದಲಾದ ಶಕ್ತಿಗಳಿಂದ ಎಲ್ಲೋ ಅಲ್ಪ ಸಹಾಯವನ್ನು ಪರರಿಗೆ ಮಾಡಲು ಸಾಧ್ಯ. ಏನು ಹೇಳುತ್ತೀಯೆ?'

"ಅದಕ್ಕಾಗೇ ನಾನು ಭಗವತಿಯನ್ನು ಕೇವಲ ಶುದ್ಧಭಕ್ತಿಗಾಗಿ ಪ್ರಾರ್ಥನೆಮಾಡಿದೆ. ಸಿದ್ಧಿಗಳು ಬೇಕೆಂದು ಪ್ರಾರ್ಥಿಸಲಿಲ್ಲ."

ಹೀಗೆ ಮಾತನಾಡುತ್ತ ಮಾತನಾಡುತ್ತ ಇದ್ದ ಹಾಗೇ ಪರಮಹಂಸರು ಸಮಾಧಿಸ್ಥರಾಗಿಬಿಟ್ಟಿದಾರೆ. ಬಾಹ್ಯಜ್ಞಾನಶೂನ್ಯರಾಗಿದಾರೆ. ಚಿತ್ರದ ಗೊಂಬೆಯ ಹಾಗೆ ಕುಳಿತಿದಾರೆ. ಈಗ ಪ್ರಕೃತಿಸ್ಥರಾಗಿ ಹಾಡಲಾರಂಭಿಸಿದಾರೆ:

ಯಾರಿಗಾಗಿ ಮರುಳುಗೊಂಡು ಅಲೆಯುತಿರುವೆನೋ
ಆ ನನ್ನ ಮೋಹಮೂರ್ತಿ ಕಾಣನಿನ್ನೂ ಕೆಳದಿಯೆ . . . .

ಈಗ ರಾಮಲಾಲ ಪರಮಹಂಸರ ಇಚ್ಛೆಗನುಸಾರ ಗೌರಾಂಗ ಯಾವ ರೀತಿಯಾಗಿ ಸನ್ಯಾಸ ಸ್ವೀಕರಿಸಿದ ಎಂಬುದರ ಸಂಬಂಧವಾಗಿ ಹಾಡತೊಡಗಿದಾನೆ:

ಓ ಎಂಥ ನೋಟವ ಕಂಡೆನು !
ಕೇಶವಭಾರತಿಯ ಕುಟಿಯೊಳಗೆ, ನಾ-
ನೆಂಥ ನೋಟವ ಕಂಡೆನು ! . . . ( ಉ. ೩೯೨ )

ಈಗ ಮಣಿಮಲ್ಲಿಕನಿಗೆ ಪರಮಹಂಸರು ಹೇಳುತ್ತಿದಾರೆ: "ಹರಿ ಭಕ್ತಿಯುಂಟಾಯಿತು ಎಂದರೆ ಮತ್ತೆ ಜಾತಿಭೇದದ ಗೊಂದಲವಿರದು ಎಂಬುದಾಗಿ ತುಳಸೀದಾಸ ಹೇಳಿರುವುದರ ಸಂಬಂಧವಾಗಿ ನೀನು ಹೇಳು."

ಮಣಿಮಲ್ಲಿಕ: "'ನೀರಡಿಕೆಯಿಂದ ಚಾತಕಪಕ್ಷಿಯ ಗಂಟಲು ಒಣಗಿಹೋಗುವುದರಲ್ಲಿದೆ. ಅದರ ಸುತ್ತಲೂ ಗಂಗೆ, ಯಮುನೆ, ಸರಯೂ ಮತ್ತು ಇನ್ನೂ ಅಸಂಖ್ಯ ನದಿಗಳು, ಸರೋವರಗಳು ನೀರಿನಿಂದ ತುಂಬಿ ತುಳುಕಾಡುತ್ತಿವೆ; ಆದರೂ ಅವೊಂದನ್ನೂ ಆ ಹಕ್ಕಿ ಮುಟ್ಟದು. ಕೇವಲ ಸ್ವಾತಿ ನಕ್ಷತ್ರದ ಮಳೆಯ ಹನಿಗಾಗಿ ಬಾಯಿ ತೆರೆದುಕೊಂಡು ಕುಳಿತಿರುತ್ತದೆ.'"

ಶ್ರೀರಾಮಕೃಷ್ಣರು: "ಎಂದರೆ ಭಗವಂತನ ಪಾದಪದ್ಮಗಳಲ್ಲಿನ ಭಕ್ತಿಯೇ ಸಾರವಾದ್ದು, ಉಳಿದುದೆಲ್ಲಾ ಮಿಥ್ಯಾ ಅಂತ."

ಮಣಿಮಲ್ಲಿಕ: "ತುಳಸೀದಾಸ ಇನ್ನೊಂದು ವಿಷಯ ಹೇಳಿದಾನೆ: 'ಅಷ್ಟಧಾತುಗಳು ಸ್ಪರ್ಶ ಮಣಿಯನ್ನು ಮುಟ್ಟಿದ್ದೇ ಆದರೆ, ಅವು ಚಿನ್ನವಾಗಿಬಿಡುತ್ತವೆ. ಅದೇ ರೀತಿಯಾಗಿ ಎಲ್ಲಾ ಜಾತಿಯ ಜನರೂ—ಚಮ್ಮಾರ, ಚಂಡಾಲ ಕೂಡ—ಭಗವನ್ನಾಮೋಚ್ಚಾರಣೆ ಮಾಡಿದರೆ ಶುದ್ಧರಾಗಿಬಿಡುತ್ತಾರೆ. ಭಗವನ್ನಾಮೋಚ್ಚಾರಣೆ ಮಾಡದೆ ಇದ್ದರೆ, ನಾಲ್ಕು ವರ್ಣದವರೂ ಚಮ್ಮಾರರೇ.'"

ಶ್ರೀರಾಮಕೃಷ್ಣರು: "ಯಾವ ಚರ್ಮವನ್ನ ಮುಟ್ಟಲೇ ಕೂಡದೊ ಅದನ್ನ ಹದಮಾಡಿಬಿಟ್ಟದ್ದೇ ಆದರೆ ಅದನ್ನು ದೇವಾಲಯದೊಳಕ್ಕೆ ಕೂಡ ತೆಗೆದುಕೊಂಡುಹೋಗಿಬಿಡಬಹುದು.

"ಭಗವನ್ನಾಮೋಚ್ಚಾರಣೆಯಿಂದ ಮನುಷ್ಯ ಪವಿತ್ರನಾಗಿಬಿಡುತ್ತಾನೆ. ಆದ್ದರಿಂದ ನಾಮಕೀರ್ತನೆಯ ಅಭ್ಯಾಸವನ್ನಿಟ್ಟುಕೊಂಡಿರಬೇಕು. ನಾನು ಯದುಮಲ್ಲಿಕನ ತಾಯಿಗೆ ಹೇಳಿದೆ: 'ಪ್ರಾಪಂಚಿಕನಿಗೆ ಸಾಯುವ ಸಮಯದಲ್ಲಿ ಸಂಸಾರದ—ಎಂದರೆ ಹೆಂಡತಿ ಮಕ್ಕಳು ಮರಿಗಳ, ಉಯಿಲು ಬರೆದಿಡುವುದರ ಇವೇ ಮೊದಲಾದುವುಗಳ ಯೋಚನೆಗಳೇ ಬರುತ್ತವೆ. ಭಗವದ್ಭಾವನೆ ಮನಸ್ಸಿನಲ್ಲಿ ಏಳದು. ಇದಕ್ಕೆ ಮಾರ್ಗ ಬದುಕಿರುವಾಗ

ನಾಮಜಪಕೀರ್ತನೆಯ ಅಭ್ಯಾಸವನ್ನಿಟ್ಟುಕೊಂಡಿರುವುದೇ. ಈ ಅಭ್ಯಾಸವನ್ನಿಟ್ಟುಕೊಂಡಿದ್ದುದೇ ಆದರೆ ಸಾಯುವ ಸಮಯದಲ್ಲಿ ಭಗವನ್ನಾಮ ಬಾಯಿಂದ ಹೊರಡುತ್ತದೆ. ಗಿಳಿಯನ್ನು ಬೆಕ್ಕು ಹಿಡಿಯಿತು ಎಂದರೆ ಆಗ ಅದು "ಕ್ಯಾ, ಕ್ಯಾ" ಅಂತ ಕೂಗಿಕೊಳ್ಳುತ್ತದೆಯೇ ವಿನಾ "ರಾಮ, ರಾಮ, ಹರೇ ಕೃಷ್ಣ!" ಅಂತ ಹೇಳುವುದಿಲ್ಲ.'

"ಸಾವಿಗಾಗಿ ಸಿದ್ಧರಾಗಿರುವುದು ಮೇಲು. ಮುಪ್ಪಿನಲ್ಲಿ ನಿರ್ಜನ ಪ್ರದೇಶದಲ್ಲಿದ್ದು ಕೇವಲ ಭಗವಚ್ಚಿಂತನೆ, ಆತನ ನಾಮಗುಣಕೀರ್ತನೆ ಮಾಡುತ್ತಿರಬೇಕು. ಆನೆಯ ಮೈ ತೊಳೆದ ಮೇಲೆ ಅದನ್ನು ಗಜಶಾಲೆಯಲ್ಲಿ ಕಟ್ಟಿಹಾಕಿದರೆ, ಅದು ಮತ್ತೆ ದೂಳು ಬದಿ ಇವನ್ನು ಮೈಗೆ ಮೆತ್ತಿಕೊಳ್ಳಲಾರದು."

ಬಲರಾಮನ ತಂದೆ, ಮಣಿಮಲ್ಲಿಕ, ವೇಣೀಪಾಲ ಇವರೆಲ್ಲ ವೃದ್ಧರು. ಪರಮಹಂಸರು ಈ ಉಪದೇಶಗಳನ್ನೆಲ್ಲಾ ವಿಶೇಷತಃ ಅವರ ಹಿತಕ್ಕಾಗಿ ಕೊಟ್ಟರೇನು?

ಶ್ರೀರಾಮಕೃಷ್ಣರು: "ನಿರ್ಜನಪ್ರದೇಶದಲ್ಲಿ ಭಗವಚ್ಚಿಂತನೆ, ಭಗವನ್ನಾಮಗುಣಕೀರ್ತನೆ ಮಾಡಬೇಕೆಂದು ಹೇಳುತ್ತೇನಲ್ಲ ಏಕೆ ಗೊತ್ತೆ? ಸಂಸಾರದಲ್ಲೇ ಹಗಲೂ ಇರುಳೂ ವಾಸಿಸುತ್ತಿದ್ದರೆ ಅಶಾಂತಿ ಇದ್ದೇ ಇರುತ್ತದೆ. ಒಂದು ಅಂಗೈಯಗಲದ ಜಮೀನಿಗಾಗಿ ಅಣ್ಣತಮ್ಮಂದಿರು ಒಬ್ಬರನ್ನೊಬ್ಬರು ಖೂನಿಮಾಡಿಬಿಡುವುದಕ್ಕೂ ಹೇಸದಿರುವುದನ್ನು ನೀನು ನೋಡಿಲ್ಲವೇ? ಒಮ್ಮೆ ಸಿಕ್ ಮತದವರು ನನಗೆ ಹೇಳಿದರು: 'ಈ ಜಗತ್ತಿನಲ್ಲಿರುವ ಎಲ್ಲಾ ಅಶಾಂತಿ ಗೊಂದಲಗಳಿಗೂ ಇವು ಮೂರೇ ಕಾರಣ—ಜಮೀನು, ಹೆಂಗಸು, ಹಣ.'

"ನೀವು ಸಂಸಾರದಲ್ಲಿದೀರಿ. ಅದಕ್ಕೆ ಭಯಪಡುವುದೇಕೆ? ತಾನು ಸಂಸಾರವನ್ನು ತ್ಯಾಗಮಾಡಬೇಕೆಂದಿರುವ ವಿಷಯವನ್ನು ರಾಮ ದಶರಥನಿಗೆ ತಿಳಿಸಿದಾಗ, ದಶರಥ ಚಿಂತಾಮಗ್ನನಾಗಿ ವಸಿಷ್ಠರನ್ನು ಶರಣುಹೊಕ್ಕ. ವಸಿಷ್ಠ ರಾಮನಿಗೆ ಹೇಳಿದ: 'ರಾಮ, ನೀನೇಕೆ ಸಂಸಾರವನ್ನು ತ್ಯಾಗ ಮಾಡಬೇಕು? ನನ್ನೊಡನೆ ಆಲೋಚಿಸಿ ನೋಡು. ಈ ಸಂಸಾರ ಭಗವಂತನಿಂದ ಹೊರಗಿದೆಯೇನು? ಏನನ್ನು ತಾನೆ ನೀನು ತ್ಯಜಿಸುವುದು, ಏನನ್ನು ತಾನೆ ನೀನು ಗ್ರಹಿಸುವುದು? ಆತ ಹೊರತು ಬೇರೇನೂ ಇಲ್ಲ.

ಕೇವಲ ಬ್ರಹ್ಮನೇ ಈ ಜೀವ, ಜಗತ್ತು, ಮಾಯೆ, ಈಶ್ವರ ಎಲ್ಲವೂ ಆಗಿ ತೋರ್ಪಡಿಸಿಕೊಳ್ಳುತ್ತಿದಾನೆ.' "

ಬಲರಾಮನ ತಂದೆ: "ಬಹಳ ಕಷ್ಟ."

ಶ್ರೀರಾಮಕೃಷ್ಣರು: "ಸಾಧನೆಯ ಸಮಯದಲ್ಲಿ ಈ ಜಗತ್ತು 'ಮಾಯೆಯ ಚೌಕಟ್ಟಾಗಿ' ಕಾಣುತ್ತದೆ. ಆದರೆ ಬ್ರಹ್ಮಜ್ಞಾನ ದೊರೆತ ನಂತರ, ಭಗವದ್ದರ್ಶನ ದೊರೆತನಂತರ ಇದೇ ಜಗತ್ತು 'ಮೋಜಿನ ಮನೆಯಾಗಿ' ಕಾಣುತ್ತದೆ.

"ವೈಷ್ಣವಗ್ರಂಥಗಳಲ್ಲಿ ಬರೆದಿದೆ: 'ಶ್ರದ್ಧೆಯಿಂದಲೇ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು; ತರ್ಕ ಆತನನ್ನು ಬಹು ದೂರಕ್ಕೆ ತಳ್ಳಿಬಿಡುತ್ತದೆ.' ಬೇಕಾಗಿರುವುದು ಕೇವಲ ಶ್ರದ್ಧೆ!

"ಕೃಷ್ಣಕಿಶೋರನದು ಎಂಥಾ ಶ್ರದ್ಧೆ! ಒಬ್ಬ ಕೀಳು ಜಾತಿಯವ ಆತನಿಗೆ ಬಾವಿಯಿಂದ ನೀರು ಸೇದಿಕೊಟ್ಟ. ಕೃಷ್ಣಕಿಶೋರ ಆತನಿಗೆ ಹೇಳಿದ: 'ನೀನು ಶಿವ ಅಂತ ಹೇಳು.' ಆತ ಹಾಗೆ ಮಾಡಿದನಂತರ ಮರು ಯೋಚನೆಯನ್ನೇ ಮಾಡದೆ ನೀರು ಕುಡಿದುಬಿಟ್ಟ. ಆತ ಹೇಳುತ್ತಿದ್ದ: 'ಭಗವನ್ನಾಮೋಚ್ಚಾರಣೆ ಮಾಡಿದನಂತರ ದುಡ್ಡು ಖರ್ಚುಮಾಡಿ ಪ್ರಾಯಶ್ಚಿತ್ತ ಮಾಡಿಸಿಕೊಳ್ಳುವುದೆ? ಇದು ಎಂಥ ತಿಳಿಗೇಡಿತನ!' ಜನ ರೋಗದಿಂದ ಮುಕ್ತರಾಗಲು ಭಗವಂತನಿಗೆ ತುಳಸಿ ಅರ್ಪಿಸುವುದನ್ನು ನೋಡಿ ಆತನಿಗೆ ಆಶ್ಚರ್ಯವಾಗಿಬಿಟ್ಟಿತು. ಈ ಸ್ನಾನಘಟ್ಟದಲ್ಲಿ ಆತ ನಮಗೆ ಹೇಳಿದ: 'ಶ್ರೀರಾಮನ ಪವಿತ್ರನಾಮೋಚ್ಚಾರಣೆ ಮಾಡುತ್ತ ನಾನು ನನ್ನ ದಿನಗಳನ್ನು ಕಳೆಯುವ ಹಾಗೆ ನೀವೆಲ್ಲರೂ ನನಗೆ ಆಶೀರ್ವಾದ ಮಾಡಿ.' ನಾನು ಆತನ ಮನೆಗೆ ಹೋದಾಗಲೆಲ್ಲಾ ಆತ ನನ್ನನ್ನು ನೋಡಿ ಆನಂದದಿಂದ ಕುಪ್ಪಳಿಸುತ್ತಿದ್ದ. ರಾಮಚಂದ್ರ ಲಕ್ಷ್ಮಣನಿಗೆ ಹೇಳಿದ: 'ಸೋದರ, ಎಲ್ಲಿ ನೀನು ಊರ್ಜಿತಭಕ್ತಿಯನ್ನು ನೋಡುವೆಯೊ, ಅಲ್ಲಿ ನಾನು ಇದೇನೆ ಎಂಬುದನ್ನು ತಿಳಿದುಕೊ.' ಉದಾಹರಣೆಗೆ ಚೈತನ್ಯದೇವ ಆತ ಪ್ರೇಮದಿಂದ ನಕ್ಕು ಅತ್ತು ನರ್ತಿಸಿ ಹಾಡುತ್ತಿದ್ದ. ಆತ ಒಬ್ಬ ಅವತಾರಪುರುಷ. ಭಗವಂತನೇ ಆತನ ಮೂಲಕ ಅವತೀರ್ಣನಾಗಿದ್ದ."

ಪರಮಹಂಸರು ಗೌರಾಂಗನ ಪ್ರೇಮ ಭಕ್ತಿಯ ಸಂಬಂಧವಾಗಿ ಒಂದು ಹಾಡನ್ನು ಹಾಡಿದರು. ಬಲರಾಮನ ತಂದೆ, ಮಣಿಮಲ್ಲಿಕ, ವೇಣೀಪಾಲ, ಇನ್ನೂ ಅನೇಕ ಭಕ್ತರು ಪರಮಹಂಸರಿಂದ ಬೀಳ್ಕೊಂಡರು.

ಸಾಯಂಕಾಲವಾದ ಮೇಲೆ ಕಾನ್ಸಾರಿತೊಲದ ಹರಿಸಭೆಯ ಭಕ್ತರು ಬಂದರು. ಅವರೊಡನೆ ಪರಮಹಂಸರು ಪ್ರೇಮೋನ್ಮತ್ತರಾಗಿ ನರ್ತಿಸುತ್ತಿದಾರೆ. ನರ್ತನವಾದನಂತರ ಭಾವಾವಿಷ್ಟರಾಗಿ ಹೇಳುತ್ತಿದಾರೆ: "ನಾನೇ ಸ್ವಲ್ಪ ದೂರ ಮುಂದುವರಿಯುತ್ತೇನೆ." ಕಿಶೋರಿ ಅವರ ಪಾದವನ್ನು ಒತ್ತಲು ಮುಂದೆ ಬಂದ, ಆದರೆ ಪರಮಹಂಸರು ತಮ್ಮನ್ನು ಸ್ಪರ್ಶಿಸಲು ಯಾರನ್ನೂ ಬಿಟ್ಟುಕೊಡಲಿಲ್ಲ.

ಈಗ ಈಶಾನ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಕುಳಿತುಕೊಂಡಿದಾರೆ—ಭಾವಾವಿಷ್ಟರಾಗಿ. ಸ್ವಲ್ಪ ಹೊತ್ತಾದಮೇಲೆ ಈಶಾನನೊಡನೆ ಮಾತುಕತೆಯಾಡತೊಡಗಿದರು. ಈಶಾನನಿಗೆ ಗಾಯತ್ರಿಯ ಪುರಶ್ಚರಣೆ ಮಾಡಲು ಇಚ್ಛೆ.

ಶ್ರೀರಾಮಕೃಷ್ಣರು ಈಶಾನನಿಗೆ: "ನಿನ್ನ ಮನಸ್ಸು ಹೇಗೆ ಹೇಳುತ್ತದೊ ಹಾಗೇ ಮಾಡು. ನಿನ್ನ ಮನಸ್ಸಿನಲ್ಲಿ ಇನ್ನೇನೂ ಸಂದೇಹವಿಲ್ಲ ತಾನೆ? ಕಲಿಯುಗಕ್ಕೆ ನಿಗಮ ಮಾರ್ಗವಲ್ಲ, ಆಗಮ ಮಾರ್ಗ."

ಈಶಾನ: "ನಾನು ಒಂದು ವಿಧದ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಸಂಕಲ್ಪಿಸಿದ್ದೆ."

ಶ್ರೀರಾಮಕೃಷ್ಣರು: "ಆಗಮ ಮಾರ್ಗ (ತಂತ್ರಮಾರ್ಗ) ದಿಂದ ಭಗವಂತನ ಸಾಕ್ಷಾತ್ಕಾರ ದೊರೆಯುವುದಿಲ್ಲವೇನು? ಯಾರು ಬ್ರಹ್ಮನೊ ಆತನೇ ಶಕ್ತಿ, ಕಾಳಿ.

ತಾಯಿ ಕಾಳಿಯೆ ಪರಮ ಬ್ರಹ್ಮಸ್ವರೂಪಿ ಎನ್ನುವ ಮರ್ಮವ
ತಿಳಿದು ನಾನಿದೊ ಬಿಸುಟು ನಿಂತಿಹೆ ಸಕಲ ಧರ್ಮಾಧರ್ಮವ!"

ಈಶಾನ: "ಚಂಡಿಯ ಒಂದು ಸ್ತೋತ್ರದಲ್ಲಿ ಹೇಳಿದೆ, ಬ್ರಹ್ಮನೇ ಆದ್ಯಾಶಕ್ತಿ ಎಂದು. ಬ್ರಹ್ಮನಿಗು ಶಕ್ತಿಗು ಅಭೇದ."

ಶ್ರೀರಾಮಕೃಷ್ಣರು: "ಸುಮ್ಮನೆ ಹೀಗೆ ಬಾಯಲ್ಲಿ ಹೇಳಿಬಿಟ್ಟರೆ ಏನೂ ಪ್ರಯೋಜನವಿಲ್ಲ. ಯಾವಾಗ ಈ ಭಾವನೆ ನಿನ್ನ ಅಂತರ್ಗತವಾಗುತ್ತೊ ಆಗ ನಿನಗೆ ಶ್ರೇಯಸ್ಸಾಗುತ್ತದೆ.

"ಸಾಧನೆಯಿಂದ ಚಿತ್ತಶುದ್ಧಿಯಾದನಂತರ ನಿಸ್ಸಂದೇಹವಾಗಿ ಬೋಧೆಯಾಗುತ್ತದೆ, ಭಗವಂತನೇ ಕರ್ತೃ. ಆತನೇ ಮನಸ್ಸು, ಬುದ್ಧಿ, ಪ್ರಾಣ ಆಗಿದಾನೆ. ನಾವು ಕೇವಲ ಯಂತ್ರ ಎಂದು.

ಪಂಕದಲಿ ಬಂಧಿಸುವೆ ಕರಿಯ
ಹೆಳವನನು ದಾಟಿಸುವೆ ಗಿರಿಯ !

"ಚಿತ್ತಶುದ್ಧಿಯಾದನಂತರ ಬೋಧೆಯಾಗುತ್ತದೆ, ಪುರಶ್ಚರಣಾದಿ ಕರ್ಮಗಳನ್ನ ಭಗವಂತನೇ ನಮ್ಮ ಕೈಯಿಂದ ಮಾಡಿಸುತ್ತಿದಾನೆ ಎಂದು.

ನಿನ್ನ ಇಚ್ಛೆಯ ನೀನು ಪೂರೈಸುತಿರಲು
ತಮ್ಮ ಗೈಮೆಯಿದೆಂದು ತಿಳಿವರೀ ಜನರು !

"ಭಗವಂತನ ದರ್ಶನ ದೊರೆತರೆ ಎಲ್ಲಾ ಸಂದೇಹಗಳೂ ನಿವೃತ್ತಿಯಾಗಿಬಿಡುತ್ತವೆ. ಆಗ ಅನುಕೂಲವಾದ ಗಾಳಿ ಬೀಸಲಾರಂಭಿಸುತ್ತದೆ. ಭಕ್ತ ನಿಶ್ಚಿಂತನಾಗಿಬಿಡುತ್ತಾನೆ. ಅನುಕೂಲವಾದ ಗಾಳಿ ಬೀಸುವಾಗ ಯಾವ ರೀತಿಯಾಗಿ ಅಂಬಿಗ ನೌಕಾಪಟವನ್ನು ಬಿಚ್ಚಿ ಚುಕ್ಕಾಣಿ ಹಲಗೆಯನ್ನು ನೆಪಮಾತ್ರಕ್ಕೆ ಹಿಡಿದುಕೊಂಡು ನಿಶ್ಚಿಂತೆಯಿಂದ ಕುಳಿತು ಹುಕ್ಕ ಸೇದುತ್ತಾನೊ ಆ ರೀತಿಯಾಗಿ ಭಕ್ತ ನಿಶ್ಚಿಂತನಾಗಿಬಿಡುತ್ತಾನೆ."

ಈಶಾನ ಪರಮಹಂಸರಿಂದ ಬೀಳ್ಕೊಂಡು ಹೊರಟುಹೋದ. ಪರಮಹಂಸರು ಈಗ ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ. ಕೊಠಡಿಯಲ್ಲಿ ಇನ್ನು ಬೇರೆ ಯಾರೂ ಇಲ್ಲ. ಪರಮಹಂಸರು ಮಾಸ್ಟರನ್ನು ಕೇಳುತ್ತಿದಾರೆ, ನರೇಂದ್ರ, ರಾಖಾಲ, ಅಧರಸೇನ, ಹಾಜರಾ ಇವರೆಲ್ಲಾ ಸರಳರೊ ಅಲ್ಲವೊ; ಅವರ ಸಂಬಂಧವಾಗಿ ಆತನ ಅಭಿಪ್ರಾಯವೇನು ಎಂಬುದಾಗಿ. ತಮ್ಮ ವಿಷಯವಾಗಿಯೂ ಆತನನ್ನು ಕೇಳಿದರು : "ನಾನು ಹೇಗೆ ಕಾಣುತ್ತೇನೆ ನಿನಗೆ ?"

ಮಾಸ್ಟರ್ ಉತ್ತರವಿತ್ತ : "ನೀವು ಸರಳರೂ ಹೌದು, ಅಷ್ಟೇ ಗಭೀರರೂ ಹೌದು. ನಿಮ್ಮನ್ನು ಅರಿತುಕೊಳ್ಳುವುದು ಬಹಳ ಕಷ್ಟ."

ಶ್ರೀರಾಮಕೃಷ್ಣರು ನಗುತ್ತಿದಾರೆ.

**೨೬ನೆ ನೊವೆಂಬರ್ ೧೮೮೩, ಕಾರ್ತಿಕ ಕೃಷ್ಣ ಏಕಾದಶಿ, ಸೋಮವಾರ.**

ಸಿಂದೂರಿಯಾಪಟ್ಟಿಯ ಬ್ರಾಹ್ಮಸಮಾಜದ ವಾರ್ಷಿಕ ಸಮ್ಮೇಳನ ಮಣಿಲಾಲಮಲ್ಲಿಕನ ಮನೆಯಲ್ಲಿ ಇಂದು ನಡೆಯುತ್ತದೆ. ಉಪಾಸನಾಗೃಹವನ್ನು ತಳಿರು ತೋರಣಗಳಿಂದ, ವಿವಿಧ ಹೂವುಗಳಿಂದ ಬಹಳ ಚೆನ್ನಾಗಿ ಅಲಂಕಾರಮಾಡಿದಾರೆ. ಭಕ್ತರೆಲ್ಲರೂ ಅಲ್ಲಿ ನೆರೆದು, ಉಪಾಸನೆ ಎಷ್ಟು ಹೊತ್ತಿಗೆ ಆರಂಭವಾದೀತು ಎಂದು ಆಕಾಂಕ್ಷಿತರಾಗಿ ಕುಳಿತಿದಾರೆ. ಪರಮಹಂಸರು ಸಮ್ಮೇಳನಕ್ಕೆ ಬರುತ್ತಾರೆ ಎಂಬ ಸುದ್ದಿಯನ್ನು ಕೇಳಿ

ಸಭಿಕರ ಉತ್ಸಾಹ, ಆನಂದಕ್ಕೆ ಮೇರೆಯೇ ಇಲ್ಲದಂತಾಗಿದೆ. ಕೇಶವ, ಶಿವನಾಥ, ವಿಜಯ, ಇನ್ನೂ ಉಳಿದ ಬ್ರಾಹ್ಮಭಕ್ತರು ಅವರನ್ನು ಬಹಳ ಗೌರವದಿಂದ ನೋಡುತ್ತಿದಾರೆ. ಪರಮಹಂಸರ ಭಗವತ್ಪ್ರೇಮ, ಉಜ್ಜ್ವಲ ಶ್ರದ್ಧೆ, ಭಗವಂತನೊಡನೆ ಬಾಲಕನಂತೆ ಮಾತುಕತೆಯಾಡುವಿಕೆ, ಭಗವಂತನಿಗಾಗಿ ವ್ಯಾಕುಲತೆಯಿಂದ ಕ್ರಂದಿಸುವಿಕೆ, ಸ್ತ್ರೀ ಜಾತಿಯನ್ನೇ ಮಾತೃದೃಷ್ಟಿಯಿಂದ ಪೂಜೆಮಾಡುವಿಕೆ, ಪ್ರಾಪಂಚಿಕ ಮಾತುಕತೆಯ ವರ್ಜನೆ, ತೈಲಧಾರಾ ತುಲ್ಯ ನಿರವಚ್ಛಿನ್ನ ಭಗವತ್ಕಥಾಪ್ರಸಂಗ, ಸರ್ವಧರ್ಮ ಸಮನ್ವಯ, ಪರಧರ್ಮಗಳ ವಿದ್ವೇಷಭಾವಲೇಶಶೂನ್ಯತೆ, ಭಗವದ್ಭಕ್ತರಿಗಾಗಿ ರೋದನೆ ಇವುಗಳೆಲ್ಲ ಬ್ರಾಹ್ಮಭಕ್ತರ ಚಿತ್ತವನ್ನು ಆಕರ್ಷಿಸಿಬಿಟ್ಟಿವೆ. ಅದಕ್ಕಾಗೇ ಇಂದು ಬಹಳ ದೂರದಿಂದ ಅನೇಕ ಮಂದಿ ಬ್ರಾಹ್ಮಭಕ್ತರು ಪರಮಹಂಸರ ದರ್ಶನಾರ್ಥವಾಗಿ, ಅವರ ಭಗವದ್ವಾಣಿಯನ್ನು ಕೇಳುವುದಕ್ಕಾಗಿ ಬಂದಿದಾರೆ.

ಪರಮಹಂಸರು ಉಪಾಸನೆಗೆ ಮುಂಚೆಯೇ ಬಂದುಬಿಟ್ಟಿದಾರೆ. ಈಗ ಅವರು ವಿಜಯಕೃಷ್ಣಗೋಸ್ವಾಮಿ ಮತ್ತು ಉಳಿದ ಭಕ್ತರೊಡನೆ ಮಾತುಕತೆಯಾಡುತ್ತಿದಾರೆ. ಸಮಾಜಗೃಹಕ್ಕೆ ದೀಪ ಹಚ್ಚಲಾಯಿತು. ಇನ್ನೇನು ಉಪಾಸನೆ ಆರಂಭವಾಗಲಿದೆ.

"ಶಿವನಾಥ ಬರುವುದಿಲ್ಲವೆ?" ಎಂದು ಪರಮಹಂಸರು ಕೇಳಿದರು. ಬ್ರಾಹ್ಮಭಕ್ತ ಉತ್ತರವಿತ್ತ: "ಅವರಿಗೆ ವಿಶೇಷ ಕೆಲಸವಿರುವುದರಿಂದ ಬರುವುದಿಲ್ಲ."

ಶ್ರೀರಾಮಕೃಷ್ಣರು: "ಶಿವನಾಥನನ್ನು ನೋಡಿದರೆ ನನಗೆ ಬಹಳ ಆನಂದವಾಗಿಬಿಡುತ್ತದೆ. ಭಕ್ತಿರಸದಲ್ಲಿ ಸದಾ ಮುಳುಗಿರುವಂತೇ ಆತ ಕಾಣುತ್ತಾನೆ. ಜೊತೆಗೆ ಯಾರನ್ನ ಅನೇಕರು ಗೌರವಿಸುತ್ತಾರೊ, ಕೊಂಡಾಡುತ್ತಾರೊ, ಅವರಲ್ಲಿ ಭಗವಂತನ ಶಕ್ತಿ ವಿಶೇಷವಾಗಿ ಸ್ವಲ್ಪ ಇದ್ದೇ ಇರಬೇಕು. ಆದರೆ ಆತನಲ್ಲಿ ಒಂದು ದೊಡ್ಡ ದುರ್ಗುಣವಿದೆ— ಮಾತಿನಂತೆ ನಡೆದುಕೊಳ್ಳುವುದಿಲ್ಲ. ದಕ್ಷಿಣೇಶ್ವರಕ್ಕೆ ಬರುವೆನೆಂದು ಒಮ್ಮೆ ನನಗೆ ತಿಳಿಸಿದ್ದ. ಆದರೆ ಬರಲೂ ಇಲ್ಲ, ಆದರ ಸಂಬಂಧವಾಗಿ ಯಾವ ಸಮಾಚಾರವನ್ನು ಕಳುಹಿಸಲೂ ಇಲ್ಲ. ಇದು ಸರಿಯಲ್ಲ. ಸತ್ಯವಚನವೇ ಕಲಿಯುಗದ ತಪಸ್ಸು ಎಂಬ ಒಂದು ಹೇಳಿಕೆ ಇದೆ. ಸತ್ಯವನ್ನು ಬಲವಾಗಿ ಹಿಡಿದುಕೊಂಡಿದ್ದರೇನೇ ಭಗವಂತನ ದರ್ಶನ ದೊರೆಯಬೇಕಾಗಿದ್ದರೆ.

ಸತ್ಯನಿಷ್ಠೆ ಇಲ್ಲದೆ ಇತ್ತು ಎಂದರೆ, ಕ್ರಮಕ್ರಮೇಣ ಇಹ ಪರ ಎಲ್ಲವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಸರ್ವತೋಪಿನ ಕಡೆ ಹೋಗಿಬರುತ್ತೇನೆ ಎಂದು ಆಕಸ್ಮಿಕವಾಗಿ ನಾನು ಹೇಳಿಬಿಟ್ಟರೆ, ಅವಶ್ಯಕತೆಯಿಲ್ಲದಿದ್ದರೂ ಸತ್ಯನಿಷ್ಠೆ ಎಲ್ಲಿ ಕೈಬಿಟ್ಟುಹೋಗಿಬಿಡುವುದೊ ಎಂದು ಹೆದರಿ ಅಲ್ಲಿಗೆ ಸುಮ್ಮನೆಯಾದರೂ ಹೋಗಿಬರುತ್ತೇನೆ. ನನಗೆ ಭಗವತಿಯ ದರ್ಶನ ದೊರೆತನಂತರ ಕೈಯಲ್ಲಿ ಹೂವನ್ನು ತೆಗೆದುಕೊಂಡು ಪ್ರಾರ್ಥನೆ ಮಾಡಿದೆ: 'ಹೇ ಭಗವತಿ, ಇಗೋ ತೆಗೆದುಕೊ ನಿನ್ನ ಜ್ಞಾನವನ್ನ, ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ, ನನಗೆ ಶುದ್ಧಭಕ್ತಿಯನ್ನು ಕೊಡು ತಾಯಿ. ಇಗೋ ತೆಗೆದುಕೊ ನಿನ್ನ ಶುಚಿಯನ್ನ, ಇಗೋ ತೆಗೆದುಕೊ ನಿನ್ನ ಅಶುಚಿಯನ್ನ, ನನಗೆ ಶುದ್ಧಭಕ್ತಿಯನ್ನ ಕರುಣಿಸು ತಾಯಿ. ಇಗೋ ತೆಗೆದುಕೊ ನಿನ್ನ ಒಳ್ಳೆಯದನ್ನ, ಇಗೋ ತೆಗೆದುಕೊ ನಿನ್ನ ಕೆಟ್ಟದ್ದನ್ನ, ನನಗೆ ಶುದ್ಧಭಕ್ತಿಯನ್ನು ನೀಡು ತಾಯಿ. ಇಗೋ ತೆಗೆದುಕೊ ನಿನ್ನ ಪುಣ್ಯವನ್ನ, ಇಗೋ ತೆಗೆದುಕೊ ನಿನ್ನ ಪಾಪವನ್ನ, ನನಗೆ ಶುದ್ಧಭಕ್ತಿಯನ್ನು ಕರುಣಿಸು ತಾಯಿ.' ಇವುಗಳನ್ನೆಲ್ಲಾ ತೆಗೆದುಕೊ ಅಂತಲೇನೊ ಹೇಳಿದೆ, ಆದರೆ ಆಗ ಹೇಳಲಾಗಲಿಲ್ಲ: 'ಹೇ ತಾಯಿ, ಇಗೋ ತೆಗೆದುಕೊ ನಿನ್ನ ಸತ್ಯವನ್ನ, ಇಗೋ ತೆಗೆದುಕೊ ನಿನ್ನ ಅಸತ್ಯವನ್ನ.' ಭಗವತಿಯ ಪಾದಪದ್ಮಗಳಲ್ಲಿ ಎಲ್ಲವನ್ನೂ ಅರ್ಪಿಸಿಬಿಟ್ಟೆ, ಆದರೆ ಸತ್ಯವೊಂದನ್ನು ಮಾತ್ರ ಆಗಲಿಲ್ಲ."

ಬ್ರಾಹ್ಮಸಮಾಜದ ಪದ್ಧತಿಗನುಸಾರ ಉಪಾಸನೆ ಆರಂಭವಾಯಿತು. ಆಚಾರ್ಯ ವೇದಿಕೆಯ ಮೇಲೆ ಕುಳಿತಿದಾನೆ. ಪ್ರಾರ್ಥನೆಯಾದನಂತರ ಆತ ಪರಬ್ರಹ್ಮನ ಸಂಬಂಧವಾಗಿ ವೇದೋಕ್ತಮಂತ್ರಗಳನ್ನು ಉಚ್ಚರಿಸಲಾರಂಭಿಸಿದಾನೆ. ಬ್ರಾಹ್ಮಭಕ್ತರೆಲ್ಲರೂ ಒಕ್ಕೊರಳಿನಿಂದ ಆ ಪುರಾತನ ಆರ್ಯ ಋಷಿಗಳ ಶ್ರೀಮುಖದಿಂದ ಹೊರಬಿದ್ದಂಥ, ಅವರ ಪವಿತ್ರ ನಾಲಗೆಯಿಂದ ಉಚ್ಚರಿಸಲ್ಪಟ್ಟಂಥ, "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ", "ಆನಂದರೂಪಮಮೃತಂ ಯದ್ವಿಭಾತಿ", "ಶಾಂತಂ ಶಿವಮದ್ವೈತಮ್", "ಶುದ್ಧಮಪಾಪವಿದ್ಧಮ್" ಎಂಬ ಮಂತ್ರಗಳನ್ನು ಉಚ್ಚರಿಸಲಾರಂಭಿಸಿದಾರೆ. ಪ್ರಣವ ಸಂಯುಕ್ತ ಈ ಉಚ್ಚಾರಣೆಯ ಧ್ವನಿ ಭಕ್ತರ ಹೃದಯಾಕಾಶದಲ್ಲಿ ಪ್ರತಿಧ್ವನಿಯಾಗತೊಡಗಿದೆ. ಎಲ್ಲರೂ ಕಣ್ಣುಮುಚ್ಚಿ ವೇದೋಕ್ತ ಸಗುಣ ಬ್ರಹ್ಮನ ಮೇಲೆ ಸ್ವಲ್ಪ ಹೊತ್ತಿನಿಂದ ಧ್ಯಾನದಲ್ಲಿ ತೊಡಗಿದಾರೆ.

ಪರಮಹಂಸರು ಭಾವದಲ್ಲಿ ನಿಮಗ್ನರಾಗಿದಾರೆ. ಬಾಯಲ್ಲಿ ಯಾವ

ಮಾತೂ ಇಲ್ಲ. ಸ್ಥಿರದೃಷ್ಟಿಯುಳ್ಳವರಾಗಿ ಚಿತ್ರದ ಗೊಂಬೆಯ ಹಾಗೆ ಕುಳಿತಿದಾರೆ. ಅವರ ಆತ್ಮಪಕ್ಷಿ ಎಲ್ಲೋ ಆನಂದದಿಂದ ವಿಹರಿಸುತ್ತಿದೆ. ಅವರ ದೇಹ ಮಾತ್ರ ಶೂನ್ಯಮಂದಿರದಲ್ಲಿ ಬಿದ್ದಿದೆ. ಪ್ರಕೃತಿಸ್ಥರಾದನಂತರ ಕಣ್ಣು ತೆರೆದು ನೋಡುತ್ತಾರೆ, ಸಭಿಕರೆಲ್ಲರೂ ನೆಟ್ಟ ದೃಷ್ಟಿಯುಳ್ಳವರಾಗಿ ತಮ್ಮನ್ನೇ ನೋಡುತ್ತಿದಾರೆ. ಇದ್ದಕ್ಕಿದ್ದಹಾಗೆ "ಬ್ರಹ್ಮ! ಬ್ರಹ್ಮ!" ಅಂತ ಹೇಳುತ್ತ ಎದ್ದುನಿಂತುಕೊಂಡುಬಿಟ್ಟಿದಾರೆ. ಆ ಸಮಯಕ್ಕೆ ಸರಿಯಾಗಿ ಉಪಾಸನೆ ಮುಗಿದು ಬ್ರಾಹ್ಮಭಕ್ತರು ತಾಳ ಮೃದಂಗಗಳೊಡನೆ ಸಂಕೀರ್ತನೆ ಮಾಡಲಾರಂಭಿಸಿದಾರೆ. ಪರಮಹಂಸರು ಪ್ರೇಮಾನಂದನಿಂದ ಮತ್ತರಾಗಿ ಅವರೊಡನೆ ಹಾಡುತ್ತ ನರ್ತಿಸಲಾರಂಭಿಸಿದಾರೆ. ಎಲ್ಲರೂ ಮುಗ್ಧರಾಗಿ ಆ ನೃತ್ಯವನ್ನು ನೋಡುತ್ತಿದಾರೆ. ವಿಜಯನೂ, ಉಳಿದ ಭಕ್ತರೂ ಅವರನ್ನೂ ಸುತ್ತುಗಟ್ಟಿ ಸುತ್ತುಗಟ್ಟಿ ನರ್ತಿಸುತ್ತಿದಾರೆ. ಅಲ್ಲಿ ನೆರೆದಿದ್ದವರೆಲ್ಲರೂ ಆ ಅದ್ಭುತ ದೃಶ್ಯವನ್ನು ನೋಡುತ್ತ, ಕೀರ್ತನಾನಂದವನ್ನು ಸವಿಯುತ್ತ ಈ ಪ್ರಪಂಚವನ್ನೇ ಮರೆತುಬಿಟ್ಟವರಂತೆ ಕಾಣಬರುತ್ತಿದಾರೆ. ಅವರು ಹರಿ-ರಸ-ಮದಿರೆಯನ್ನು ಪಾನಮಾಡುತ್ತ ಈ ಕೆಲವು ನಿಮಿಷಗಳ ಮಟ್ಟಿಗಾದರೂ ವಿಷಯಾನಂದವನ್ನು ಮರೆತುಬಿಟ್ಟಿರುವಂತೆಯೂ; ವಿಷಯಸುಖರಸ ಅವರಿಗೆ ಕಹಿಯಾಗಿ ತೋರುತ್ತಿರುವಂತೆಯೂ ಕಂಡುಬರುತ್ತಿದೆ.

ಕೀರ್ತನೆ ಮುಗಿದನಂತರ ಪರಮಹಂಸರ ಬಾಯಿಂದ ಬರುವ ಅಮೃತ ವಾಣಿಯನ್ನು ಕೇಳಲು ಎಲ್ಲರೂ ಅವರನ್ನು ಸುತ್ತುಗಟ್ಟಿ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ನಿರ್ಲಿಪ್ತರಾಗಿ ಈ ಸಂಸಾರದಲ್ಲಿ ಇರುವುದು ಎಂದರೆ ಬಹಳ ಕಠಿನ. ಒಮ್ಮೆ ಪ್ರತಾಪಚಂದ್ರ ನನಗೆ ಹೇಳಿದ: 'ಮಹಾಶಯರೆ, ನಮ್ಮ ಆದರ್ಶಪುರುಷ ಜನಕರಾಜ. ಆತ ಈ ಸಂಸಾರದಲ್ಲಿ ನಿರ್ಲಿಪ್ತನಾಗಿ ಇದ್ದ. ನಾವೂ ಆತನ ಹಾಗೇ ಇರಲು ಪ್ರಯತ್ನಿಸುತ್ತೇವೆ.' ನಾನು ಹೇಳಿದೆ: 'ಸುಮ್ಮನೆ ಹಾಗೆ ಭಾವಿಸಿಕೊಂಡುಬಿಟ್ಟರೇ ಜನಕರಾಜನಂತಿರಲಾಗುವುದೇ? ಆತ ಎಷ್ಟೊಂದು ತಪಸ್ಸು ಮಾಡಿ ಬ್ರಹ್ಮಜ್ಞಾನವನ್ನು ಪಡೆದುಕೊಂಡಿದ್ದ! ಶಿರಸಾಸನದಲ್ಲಿ ಬಹಳ ವರ್ಷಗಳ ಕಾಲ ಘೋರತರ ತಪಸ್ಸುಮಾಡಿ ಅನಂತರ ಬಂದು ಸಂಸಾರದಲ್ಲಿ ಇರಲಾರಂಭಿಸಿದ.'

“ಹಾಗಾದರೆ ಸಂಸಾರಿಗಳಿಗೆ ಮಾರ್ಗವೇ ಇಲ್ಲ ಅಂತಲೇನು? ಆವಶ್ಯಕವಾಗಿ ಇದೆ. ಆಗಾಗ ಕೆಲವು ದಿನಗಳ ಮಟ್ಟಿಗೆ ನಿರ್ಜನಪ್ರದೇಶ ದಲ್ಲಿ ಸಾಧನೆ ಮಾಡಬೇಕು. ಆಗ ಭಕ್ತಿ ದೊರೆಯುತ್ತೆ, ಜ್ಞಾನ ದೊರೆ ಯುತ್ತೆ. ಬಳಿಕ ಹೋಗಿ ಸಂಸಾರದಲ್ಲಿ ಇದ್ದರೆ ಯಾವ ತೊಂದರೆಯೂ ಆಗದು. ನಿರ್ಜನಪ್ರದೇಶದಲ್ಲಿ ಸಾಧನೆ ಮಾಡುವಾಗ ಸಂಸಾರ ಸಂಬಂಧ ವನ್ನು ಸಂಪೂರ್ಣವಾಗಿ ತ್ಯಜಿಸಿಬಿಡಬೇಕು. ಹೆಂಡತಿ, ಮಗ, ಮಗಳು, ತಾಯಿ, ತಂದೆ, ಸೋದರ, ಸೋದರಿ, ಗೆಳೆಯರು, ಸ್ವಬಾಂಧವರು ಯಾರೂ ಹತ್ತಿರ ಸುಳಿಯದ ಹಾಗೆ ನೋಡಿಕೊಳ್ಳಬೇಕು. ಹಾಗೆ ಸಾಧನೆ ಮಾಡು ವಾಗ ಭಾವಿಸಬೇಕು: ‘ನನಗೆ ಈ ಜಗತ್ತಿನಲ್ಲಿ ಯಾರೆಂದರೆ ಯಾರೂ ಇಲ್ಲ. ಭಗವಂತನೇ ನನ್ನ ಸರ್ವಸ್ವ.’ ಅಳುತ್ತ ಅಳುತ್ತ ಜ್ಞಾನ ಭಕ್ತಿಗಳಿಗಾಗಿ ಭಗ ವಂತನನ್ನು ಪ್ರಾರ್ಥಿಸಿಕೊಳ್ಳಬೇಕು.

“ಎಷ್ಟು ದಿನಗಳ ಮಟ್ಟಿಗೆ ಸಂಸಾರವನ್ನು ಬಿಟ್ಟುಹೋಗಿ ನಿರ್ಜನ ಪ್ರದೇಶದಲ್ಲಿ ಇರಬೇಕು ಎಂದು ನೀವು ಪ್ರಶ್ನಿಸುವುದಾದರೆ, ನನ್ನ ಉತ್ತರ, ಹಾಗೆ ಕೇವಲ ಒಂದು ದಿನವಿದ್ದರೂ ಶ್ರೇಯಸ್ಕರವಾದುದೆ. ಮೂರು ದಿನದ ಮಟ್ಟಿಗೆ ಇನ್ನೂ ಒಳ್ಳೆಯದೆ. ಸಾಧ್ಯವಾದರೆ ಹನ್ನೆರಡು ದಿನವನ್ನ, ಒಂದು ತಿಂಗಳನ್ನ, ಮೂರು ತಿಂಗಳನ್ನ, ಒಂದು ವರ್ಷವನ್ನ—ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ. ಜ್ಞಾನ ಭಕ್ತಿಗಳನ್ನು ಪಡೆದುಕೊಂಡು ಸಂಸಾರದಲ್ಲಿ ಬಂದು ಇದ್ದರೆ ವಿಶೇಷವಾಗೇನು ಹೆದರಬೇಕಾಗಿಲ್ಲ.

“ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣು ಬಿಡಿಸಿದರೆ ಅಂಟು ಕೈಗೆ ಅಂಟುವುದಿಲ್ಲ. ಕಣ್ಣುಮುಚ್ಚಾಲೆಯಾಟವಾಡುವಾಗ ಅಜ್ಜಿ ಯನ್ನು ಮುಟ್ಟಿಬಿಟ್ಟದ್ದೇ ಆದರೆ, ನಿಶ್ಚಿಂತೆಯಿಂದ ಇದ್ದುಬಿಡಬಹುದು. ಒಮ್ಮೆ ಸ್ಪರ್ಶಮಣಿಯನ್ನು ಮುಟ್ಟಿ ಚಿನ್ನವಾಗಿಬಿಡಿ. ಬಳಿಕ ನಿಮ್ಮನ್ನು ಒಂದು ಸಾವಿರ ವರ್ಷ ಮಣ್ಣಿನೊಳಗೆ ಹೂತಿಟ್ಟಿದ್ದು ಹೊರಕ್ಕೆ ತೆಗೆದರೂ ಚಿನ್ನವಾಗೇ ಉಳಿದಿರುತ್ತೀರಿ.

“ಮನಸ್ಸು ಹಾಲು ಇದ್ದ ಹಾಗೆ. ಅದನ್ನ ಸಂಸಾರವೆಂಬ ನೀರಿಗೆ ಸುರಿದರೆ ಅದು ಅದರೊಡನೆ ಬೆರೆತುಕೊಂಡುಬಿಡುತ್ತದೆ. ಜನ ಹಾಲನ್ನು ನಿರ್ಜನಪ್ರದೇಶದಲ್ಲಿ ಇಟ್ಟು ಹೆಪ್ಪು ಹಾಕಿ ಮೊಸರುಮಾಡಿ ಕಡೆದು ಬೆಣ್ಣೆ ತೆಗೆಯುತ್ತಾರೆ. ಹಾಗೇನೇ ನಿರ್ಜನಪ್ರದೇಶದಲ್ಲಿ ಸಾಧನೆ ಮಾಡಿ ಮನ

ಸ್ಸೆಂಬ ಹಾಲಿನಿಂದ ಜ್ಞಾನ-ಭಕ್ತಿಗಳೆಂಬ ಬೆಣ್ಣೆಯನ್ನು ತೆಗೆಯುವುದಾದರೆ, ಬಳಿಕ ಆ ಬೆಣ್ಣೆಯನ್ನು ಅನಾಯಾಸವಾಗಿ ಸಂಸಾರವೆಂಬ ನೀರಿನಲ್ಲಿ ಇಡಬಹುದು. ಆಗ ಅದು ಎಂದಿಗೂ ಸಂಸಾರವೆಂಬ ನೀರಿನಲ್ಲಿ ಬೆರೆತುಹೋಗುವುದಿಲ್ಲ—ಅದು ಅದರಲ್ಲಿ ನಿರ್ಲಿಪ್ತವಾಗಿ ತೇಲುತ್ತಿರುತ್ತದೆ.''

ವಿಜಯ ಈಗತಾನೆ ಗಯೆಯಿಂದ ಬಂದಿದಾನೆ. ಅಲ್ಲಿ ಆತನಿಗೆ ನಿರ್ಜನವಾಸ, ಸಾಧುಸಂಗ ಎರಡೂ ದೊರೆಯಿತು. ಈಗ ಕಾಷಾಯವಸ್ತ್ರ ಧಾರಿಯಾಗಿದಾನೆ. ಆತನ ಮನಸ್ಸು ಬಹಳ ಉಚ್ಚಸ್ಥಿತಿಯಲ್ಲಿದೆ—ಸರ್ವದಾ ಅಂತರ್ಮುಖವಾಗಿರುವ ಹಾಗೆ. ಪರಮಹಂಸರ ಹತ್ತಿರ ತಲೆ ತಗ್ಗಿಸಿ ಕುಳಿತಿದಾನೆ. ಏನನ್ನೊ ಭಾವಿಸುತ್ತಿರುವಂತೆ ಕಾಣುತ್ತಿದೆ.

ಪರಮಹಂಸರು ವಿಜಯನ ಕಡೆ ನೋಡುತ್ತ ನೋಡುತ್ತ ಇದ್ದ ಹಾಗೆ ಕೇಳುತ್ತಿದಾರೆ: "ವಿಜಯಾ, ನಿನಗೆ ಇಳಿದುಕೊಳ್ಳಲು ಕೊಠಡಿ ದೊರೆತಿರುವುದೇ?

"ಒಂದು ಕಥೆ ಹೇಳುತ್ತೇನೆ ಕೇಳು: ಇಬ್ಬರು ಸಾಧುಗಳು ದೇಶಾಟನೆ ಮಾಡುತ್ತ ಮಾಡುತ್ತ ಒಂದು ಪಟ್ಟಣಕ್ಕೆ ಬಂದು ಸೇರಿದರು. ಒಬ್ಬ ಚಕಿತ ದೃಷ್ಟಿಯಿಂದಲೂ, ಆಶ್ಚರ್ಯದಿಂದ ಬಾಯಿ ತೆರೆದೂ ಪೇಟೆ, ಅಂಗಡಿ ಮುಂಗಟ್ಟು, ಮನೆಮಠ ಎಲ್ಲವನ್ನೂ ನೋಡುತ್ತಿದ್ದ. ಆ ಸಂದರ್ಭದಲ್ಲಿ ಆತ ತನ್ನ ಆ ಗೆಳೆಯ ಸಾಧುವನ್ನು ಸಂಧಿಸಿದ. ಆಗ ಆ ಸಾಧು ಈ ಸಾಧುವನ್ನು ಕೇಳಿದ: 'ನೀನು ಬಾಯಿ ತೆರೆದುಕೊಂಡು ಪಟ್ಟಣ ನೋಡುತ್ತಿದೀಯಲ್ಲ, ನಿನ್ನ ಗಂಟುಮೂಟೆಗಳೆಲ್ಲ ಎಲ್ಲಿ?' ಆತ ಉತ್ತರವಿತ್ತ: 'ನಾನು ಮೊದಲು ಇಳಿದುಕೊಳ್ಳಲು ಕೊಠಡಿ ಪತ್ತೆಮಾಡಿ, ಅದರಲ್ಲಿ ಗಂಟುಮೂಟೆಗಳನ್ನೆಲ್ಲಾ ಇಟ್ಟು, ಕೊಠಡಿಗೆ ಬೀಗಹಾಕಿ, ನಿಶ್ಚಿಂತನಾಗಿ ಈಗ ಪಟ್ಟಣದಲ್ಲಿ ತಮಾಷೆ ನೋಡುತ್ತಿದೇನೆ.'

"ಅದಕ್ಕಾಗೆ, ವಿಜಯ, ನಾನು ನಿನ್ನನ್ನು ಕೇಳಿದುದು, ಇಳಿದುಕೊಳ್ಳಲು ನಿನಗೆ ಕೊಠಡಿ ದೊರೆತಿರುವುದೇ ಎಂದು. (ಮಾಸ್ಟರ್ ಮೊದಲಾದವರಿಗೆ) ನೋಡಿ, ಇದುವರೆಗೆ ವಿಜಯನ ಹೃದಯ ಚಿಲುಮೆ ಮುಚ್ಚಿಕೊಂಡಿತ್ತು. ಈಗ ತೆರೆದುಕೊಂಡುಬಿಟ್ಟಿದೆ.

(ವಿಜಯನಿಗೆ) "ನೋಡು, ಶಿವನಾಥನಿಗೆ ವರ್ಣಿಸಲಾರದ ಜಂಜಾಟ. ಆತ ವಾರ್ತಾಪತ್ರಿಕೆಗಳಿಗೆ ಬರೆದುಕೊಡಬೇಕಾಗಿದೆ, ಇನ್ನೂ ಏನೇನೊ ಕೆಲಸಕಾರ್ಯಗಳಲ್ಲಿ ತೊಡಗಿರಬೇಕಾಗಿದೆ. ಪ್ರಾಪಂಚಿಕ ಕರ್ಮ

ಗಳಿಗೆ ಕೈ ಹಾಕಿತು ಎಂದರೇ ಅಶಾಂತಿಯುಂಟಾಗುತ್ತದೆ; ಬಹಳವಾಗಿ ಚಿಂತೆ, ಯೋಚನೆ ಬಂದುಬಿಡುತ್ತವೆ.

"ಶ್ರೀಮದ್ಭಾಗವತದಲ್ಲಿ ಹೇಳಿದೆ, ಅವಧೂತನ ಇಪ್ಪತ್ನಾಲ್ಕು ಗುರುಗಳಲ್ಲಿ ಹದ್ದೂ ಒಂದು ಎಂದು. ಒಂದು ಜಾಗದಲ್ಲಿ ಬೆಸ್ತರು ಮೀನು ಹಿಡಿಯುತ್ತಿದ್ದರು. ಒಂದು ಹದ್ದು ಮೇಲಿಂದ ಫಕ್ಕನೆ ಕೆಳಕ್ಕೆ ಇಳಿದುಬಂದು ಒಂದು ಮೀನನ್ನು ಎತ್ತಿಕೊಂಡುಹೋಯಿತು. ಹದ್ದಿನ ಹತ್ತಿರ ಮೀನು ಇರುವುದನ್ನು ಕಂಡು ಸಾವಿರಾರು ಕಾಗೆಗಳು ಅದರ ಬೆನ್ನು ಹತ್ತಿ 'ಕಾ, ಕಾ' ಅಂತ ಕೂಗುತ್ತ ಅದಕ್ಕೆ ಚಿತ್ರಹಿಂಸೆ ಕೊಡಲಾರಂಭಿಸಿದುವು. ಹದ್ದು ಮೀನಿನೊಡನೆ ಯಾವ ದಿಕ್ಕಿಗೆ ಹಾರಿಹೋದರೂ ಕಾಗೆಗಳೂ ಅದನ್ನು ಅಟ್ಟಿಸಿಕೊಂಡು ಆ ದಿಕ್ಕಿಗೇ ಹೋಗುತ್ತಿದ್ದುವು. ಹದ್ದು ಮೊದಲು ದಕ್ಷಿಣ ದಿಕ್ಕಿಗೆ ಹೋಯಿತು. ಕಾಗೆಗಳೂ ಆ ದಿಕ್ಕಿಗೇ ಹೋದುವು. ಬಳಿಕ ಉತ್ತರಕ್ಕೆ ಹೋಯಿತು. ಅಲ್ಲಿಗೂ ಅವು ಹೋದುವು. ಅನಂತರ ಪೂರ್ವ ಪಶ್ಚಿಮ ದಿಕ್ಕುಗಳಿಗೆ ಹೋದರೂ ಅವೂ ಹಿಂಬಾಲಿಸುವುದನ್ನ ಬಿಡಲಿಲ್ಲ. ಕೊನೆಗೆ ಹದ್ದಿಗೆ ದಿಗ್ಭ್ರಮೆ ಹಿಡಿದು ಸಿಕ್ಕಿಸಿಕ್ಕಿದ ಕಡೆಗೆ ಹಾರುತ್ತಿದ್ದಾಗ ಮೀನು ಕಳಚಿಕೊಂಡು ಕೆಳಕ್ಕೆ ಬಿದ್ದುಹೋಯಿತು. ಒಡನೇ ಕಾಗೆಗಳು ಹದ್ದನ್ನು ಸುಮ್ಮನೆ ಬಿಟ್ಟುಬಿಟ್ಟು ಮೀನಿನ ಕಡೆಗೆ ಹಾರಿಹೋಗಲಾರಂಭಿಸಿದುವು. ಹದ್ದು ಬಳಿಕ ನಿಶ್ಚಿಂತೆಯಿಂದ ಹಾರಿಹೋಗಿ ಒಂದು ಮರದ ಕೊಂಬೆಯ ಮೇಲೆ ಕುಳಿತು ಭಾವಿಸಲಾರಂಭಿಸಿತು: 'ಆ ಹಾಳಾದ ಮೀನೇ ನನ್ನ ಇಷ್ಟೊಂದು ತೊಂದರೆಗಳಿಗೆಲ್ಲಾ ಮೂಲ. ಈಗ ಅದನ್ನು ನಾನು ಬಿಸಾಡಿಬಿಟ್ಟಿರುವುದರಿಂದ ನಿಶ್ಚಿಂತನಾಗಿದೇನೆ.'

"ಅವಧೂತ ಹದ್ದಿನಿಂದ ಈ ಕೆಳಗಿನ ಪಾಠ ಕಲಿತುಕೊಂಡ: ಎಲ್ಲಿಯವರೆಗೆ ಹತ್ತಿರ ಮೀನು ಇರುವುದೊ, ಎಂದರೆ ಕಾಮನೆ ಇರುವುವೊ, ಅಲ್ಲಿಯವರೆಗೆ ಪ್ರಾಪಂಚಿಕ ಕೆಲಸಕಾರ್ಯಗಳಲ್ಲಿ ತೊಡಗಿರಬೇಕಾಗುತ್ತದೆ. ಫಲಿತಾಂಶ ಭಾವನೆ, ಚಿಂತೆ, ಅಶಾಂತಿ. ಕಾಮನಾತ್ಯಾಗವಾದೊಡನೇ ಕರ್ಮನಾಶವಾಗುತ್ತದೆ, ಶಾಂತಿ ದೊರೆಯುತ್ತದೆ.

"ಆದರೆ ನಿಷ್ಕಾಮ ಕರ್ಮ ಒಳ್ಳೆಯದು. ಅದು ಅಶಾಂತಿಯನ್ನು ತರುವುದಿಲ್ಲ. ಆದರೆ ನಿಷ್ಕಾಮದಿಂದಿರುವುದು ಬಹಳ ಕಠಿನ. ಭಾವಿಸುತ್ತೇವೆ, ನಿಷ್ಕಾಮ ಕರ್ಮ ಮಾಡುತ್ತಿದೇವೆ ಎಂದು. ಆದರೆ ಕಾಮನೆ ನಮಗೆ ಅರಿವೇ ಆಗದ ರೀತಿಯಲ್ಲಿ ಎಲ್ಲಿಂದಲೋ ನುಸಿದುಕೊಂಡುಬಂದುಬಿಡುತ್ತದೆ.

ಮೊದಲು ಬಹಳವಾಗಿ ಸಾಧನೆ ಮಾಡಿದ್ದರೆ, ಅದರ ಬಲದಿಂದ ಕೆಲಕೆಲವರ ಕೈಯಲ್ಲಿ ನಿಷ್ಕಾಮ ಕರ್ಮ ಸಾಧ್ಯವಾಗಬಹುದು. ಭಗವಂತನ ದರ್ಶನ ದೊರೆತನಂತರ ನಿಷ್ಕಾಮ ಕರ್ಮವನ್ನ ಅನಾಯಾಸದಿಂದ ಮಾಡಬಹುದು. ಭಗವದ್ದರ್ಶನ ದೊರೆತನಂತರ ಪ್ರಾಯಿಕವಾಗಿ ಕರ್ಮತ್ಯಾಗ ಆಗಿಬಿಡುತ್ತದೆ. ಒಬ್ಬಿಬ್ಬರು ( ನಾರದಾದಿ ) ಲೋಕಶಿಕ್ಷಣಕ್ಕಾಗಿ ಕರ್ಮ ಮಾಡುತ್ತಾರೆ.

"ಅವಧೂತ ಒಂದು ಜೇನು ಹುಳುವನ್ನು ತನ್ನ ಗುರುವಾಗಿ ಸ್ವೀಕರಿಸಿದ್ದ. ಜೇನುಹುಳುಗಳು ಬಹಳ ದಿನಗಳವರೆಗೆ ದುಡಿದು ದುಡಿದು ಜೇನು ಶೇಖರಿಸುತ್ತವೆ. ಆದರೆ ಆ ಜೇನನ್ನು ಅವು ಕುಡಿದು ಆನಂದ ಪಡುವಂತಿಲ್ಲ. ಮನುಷ್ಯ ಬಂದು ಗೂಡನ್ನು ಕಿತ್ತು ಜೇನನ್ನು ಅಪಹರಿಸಿ ಕೊಂಡುಹೋಗಿಬಿಡುತ್ತಾನೆ. ಜೇನುಹುಳುಗಳಿಂದ ಅವಧೂತ ಪಾಠ ಕಲಿತುಕೊಂಡ, ಸಂಚಯಮಾಡಿಡಕೂಡದು ಎಂದು. ಸಾಧುಗಳು ಭಗವಂತನ ಮೇಲೆ ತಮ್ಮ ಭಾರವನ್ನು ಸಂಪೂರ್ಣವಾಗಿ ಹಾಕಬೇಕು. ಅವರು ಸಂಚಯಮಾಡಿಡಕೂಡದು. ಆದರೆ ಈ ನಿಯಮ ಸಂಸಾರಿಗಳಿಗಲ್ಲ. ಸಂಸಾರಿ ತನ್ನ ಸಂಸಾರ ಪೋಷಣೆ ಮಾಡಬೇಕಾಗಿದೆ; ಆದ್ದರಿಂದ ಆತನಿಗೆ ಸಂಚಯದ ಆವಶ್ಯಕತೆ ಇದೆ. ಹಕ್ಕಿ ಮತ್ತು ಸಾಧು ಸಂಚಯಮಾಡಿಡೋದಿಲ್ಲ. ಆದರೆ ಹಕ್ಕಿಗೆ ಮರಿಯಾದರೆ ಅದೂ ಸಂಚಯಮಾಡುತ್ತದೆ—ಮರಿಗಳಿಗಾಗಿ ಕೊಕ್ಕಿನಲ್ಲಿ ಆಹಾರ ಶೇಖರಿಸಿತರುತ್ತದೆ.

"ಒಂದು ವಿಷಯ ವಿಜಯ. ಸಾಧುವಿನ ಹತ್ತಿರ ಗಂಟು ಮೂಟೆ ಇತ್ತು ಎಂದರೆ, ಹತ್ತಿಪ್ಪತ್ತು ಪುಟ್ಟ ಪುಟ್ಟ ಗಂಟು ಹಾಕಿರುವ ಬಟ್ಟೆ ಇತ್ತು ಎಂದರೆ ಆತನನ್ನು ನಂಬಬೇಡ. ನಾನು ಪಂಚವಟಿಯಲ್ಲಿ ಆಲದ ಮರದ ಕೆಳಗೆ ಅಂಥ ಸಾಧುಗಳನ್ನು ನೋಡಿದೇನೆ. ಒಮ್ಮೆ ಇಬ್ಬರು ಮೂವರು ಕುಳಿತಿದ್ದರು. ಒಬ್ಬ ಬೇಳೆಯಿಂದ ಕಲ್ಲು ಆರಿಸುತ್ತಿದ್ದ, ಉಳಿದವರು ಬಟ್ಟೆ ಹೊಲಿದುಕೊಳ್ಳುತ್ತಿದ್ದರು. ಎಲ್ಲರೂ ಕೂಡಿ ಒಬ್ಬ ದೊಡ್ಡ ಮನುಷ್ಯನ ಮನೆಯ ಔತಣದ ಸಂಬಂಧವಾಗಿ ಹರಟೆ ಹೊಡೆಯುತ್ತಿದ್ದರು. ಅವರು ತಮ್ಮೊಳಗೆ ತಾವೇ ಮಾತನಾಡಿಕೊಳ್ಳುತ್ತಿದ್ದರು: 'ನೋಡಿ, ಆ ಸಾಹುಕಾರ ಒಂದು ಲಕ್ಷ ರೂಪಾಯಿ ಖರ್ಚುಮಾಡಿದಾನೆ. ಸಾಧುಗಳಿಗೆ ಹೊಟ್ಟೆ ಬಿರಿಯುವ ಹಾಗೆ ಊಟಕ್ಕೆ ಹಾಕಿಸಿದ. ಪೂರಿ, ಚಿರೋಟೆ,

ಪೇಡಾ, ಬರ್ಫೀ, ಮಾಲ್ಪೋವಾ, ಇನ್ನೂ ಏನೇನೊ ಮಾಡಿಸಿದ್ದ.' " (ಎಲ್ಲರೂ ನಗುತ್ತಿದಾರೆ.)

ವಿಜಯ: "ಹೌದು, ನಿಜ. ಗಯೆಯಲ್ಲಿ ಈ ವಿಧದ ಸಾಧುಗಳನ್ನು ನೋಡಿದೇನೆ. ಅವರಿಗೆ 'ಗಯೆಯ ಲೋಟಾವಾಲಾ ಸಾಧು' ಅಂತ ಹೆಸರು."

ಶ್ರೀರಾಮಕೃಷ್ಣರು ವಿಜಯನಿಗೆ: "ಭಗವಂತನಲ್ಲಿ ಪ್ರೇಮಾಂಕುರ ವಾಯಿತು ಎಂದರೆ, ಕರ್ಮತ್ಯಾಗ ತಾನಾಗೇ ಆಗಿಬಿಡುತ್ತದೆ. ಭಗವಂತ ಯಾರ ಕೈಯಲ್ಲಾದರೂ ಕರ್ಮ ಮಾಡಿಸುತ್ತಿರುವುದಾದರೆ ಅವರು ಬೇಕಾದರೆ ಮಾಡಲಿ. ಈಗ ನಿನಗೆ ಎಲ್ಲವನ್ನೂ ತ್ಯಾಗಮಾಡುವ ಸಮಯ ಬಂದಿದೆ. ಎಲ್ಲವನ್ನೂ ತ್ಯಜಿಸಿ ಹೇಳು: 'ಮನಸ್ಸೇ, ನೀನು ನಾನು ಇಬ್ಬರು ಮಾತ್ರವೇ ಭಗವತಿಯ ದರ್ಶನಮಾಡೋಣ. ನಮ್ಮಿಬ್ಬರ ಮಧ್ಯೆ ಬೇರೆ ಯಾರೂ ಬಾರದೆ ಇರಲಿ.'"

ಹೀಗೆಂದು ಹೇಳಿ ತಮ್ಮ ಅತುಲನೀಯ ಕಂಠದಿಂದ ಮಾಧುರ್ಯ ವನ್ನು ವರ್ಷಿಸುತ್ತ ಹಾಡಲಾರಂಭಿಸಿದಾರೆ:

ಅಂತರಂಗದಲಿ ಶ್ರೀ ಘನಶ್ಯಾಮೆಯ
ಆದರಿಸೆಲೆ ಮನವೇ.... (ಉ. ೩೯೯)

ಶ್ರೀರಾಮಕೃಷ್ಣರು ವಿಜಯನಿಗೆ ಹೇಳುತ್ತಿದಾರೆ: "ಭಗವಂತನಲ್ಲಿ ಶರಣಾಗತನಾಗಿ ಲಜ್ಜೆ, ಭಯ ಇವನ್ನೆಲ್ಲಾ ತ್ಯಜಿಸಿಬಿಡು. 'ನಾನು ಭಗವನ್ನಾಮೋಚ್ಚಾರಣೆ ಮಾಡುತ್ತ ನರ್ತಿಸಿದ್ದೇ ಆದರೆ, ಜನ ನನ್ನನ್ನು ಏನನ್ನುತ್ತಾರೊ?' ಎಂಬ ಈ ಭಾವನೆಗಳನ್ನೆಲ್ಲಾ ಸಂಪೂರ್ಣವಾಗಿ ತ್ಯಜಿಸಿ ಬಿಡು. 'ಲಜ್ಜೆ, ದ್ವೇಷ, ಭಯ ಇವು ಮೂರು ಇರುವವರೆಗೆ ಭಗವಂತನ ಸಾಕ್ಷಾತ್ಕಾರ ದೊರೆಯುವುದಿಲ್ಲ' ಎಂಬ ಹೇಳಿಕೆ, ಅಕ್ಷರಶಃ ಸತ್ಯ. ಲಜ್ಜೆ, ದ್ವೇಷ, ಭಯ, ಜಾತ್ಯಭಿಮಾನ, ಗೋಪ್ಯಪ್ರವೃತ್ತಿ ಇವೆಲ್ಲಾ ಪಾಶಗಳು. ಇವೆಲ್ಲಾ ಹೋದನಂತರ ಜೀವನಿಗೆ ಮುಕ್ತಿ ದೊರೆಯುತ್ತದೆ.

"ಪಾಶಬದ್ಧನೇ ಜೀವ, ಪಾಶಮುಕ್ತನೇ ಶಿವ. ಭಗವಂತನ ಪ್ರೇಮ ವೆಂಬುದು ಅತ್ಯಂತ ದುರ್ಲಭ ವಸ್ತು.

"ಮೊದಲು ಉಂಟಾಗುವುದು ಭಕ್ತಿ. ಸತಿಗೆ ಪತಿಯಲ್ಲಿರುವ ನಿಷ್ಠೆಯ ಹಾಗೆ ಭಕ್ತನಿಗೆ ಭಗವಂತನಲ್ಲಿ ನಿಷ್ಠೆಯುಂಟಾಗುವುದಾದರೆ, ಆಗ ಹೃದಯ

ದಲ್ಲಿ ಭಕ್ತಿ ಅಂಕುರವಾಗುತ್ತದೆ. ಶುದ್ಧಭಕ್ತಿಯುಂಟಾಗುವುದು ಬಹಳ ಕಠಿನ. ಈ ಭಕ್ತಿಯುಂಟಾದಾಗ ಪ್ರಾಣ, ಮನಸ್ಸು ಭಗವಂತನಲ್ಲಿ ಲೀನವಾಗಿಬಿಡುತ್ತವೆ.

"ಬಳಿಕ ಭಾವ. ಇದು ಉಂಟಾದಾಗ ಭಕ್ತ ಮೂಕನಾಗುತ್ತಾನೆ. ವಾಯು ಸ್ಥಿರವಾಗಿಬಿಡುತ್ತದೆ. ತಾನಾಗೇ ಕುಂಭಕ ಉಂಟಾಗಿಬಿಡುತ್ತದೆ. ಇದು ಬಂದೂಕ ಹೊಡೆಯುವಾಗ, ಹೊಡೆಯುವವನ ಮಾತು ಕಟ್ಟಿಹೋಗಿ ವಾಯು ಸ್ಥಿರವಾಗಿಬಿಡೋದಿಲ್ಲವೆ, ಹಾಗೆ.

"ಆದರೆ ಪ್ರೇಮ, ಬಹುದೂರದ ಮಾತು. ಚೈತನ್ಯದೇವನಿಗೆ ಪ್ರೇಮವುಂಟಾಗಿತ್ತು. ಭಗವತ್ಪ್ರೇಮ ಉಂಟಾಯಿತು ಎಂದರೆ, ಬಾಹ್ಯ ವಸ್ತುಗಳೆಲ್ಲಾ ನೆನಪಿಗೆ ಬಾರದೆಹೋಗುತ್ತವೆ. ಜಗತ್ತೇ ಮರೆತುಹೋಗಿ ಬಿಡುತ್ತದೆ. ಅತ್ಯಂತ ಪ್ರಿಯವಾದ ನಮ್ಮ ಸ್ವಂತ ಈ ದೇಹ, ಇದೂ ಕೂಡ ಮರೆತುಹೋಗಿಬಿಡುತ್ತದೆ."

ಪರಮಹಂಸರು ಈಗ ಹಾಡುತ್ತಿದಾರೆ:

ಓ, ಎಂದಿಗೋ ಇನ್ನೆಂದಿಗೋ,
ಎದೆಯೊಳೊಲವಿನ ಕಿಡಿಯು ಜ್ವಲಿಸುವ
ದಿವ್ಯ ಶುಭದಿನವೆಂದಿಗೋ— . . . ( ಉ. ೫೩೮ )

ಈ ರೀತಿಯಾಗಿ ಮಾತುಕತೆ ನಡೆಯುತ್ತಿದ್ದಾಗ, ಇನ್ನೂ ಕೆಲವು ಮಂದಿ ಆಹ್ವಾನಿತ ಬ್ರಾಹ್ಮಭಕ್ತರು ವಿಜಯನ ಹತ್ತಿರ ಬಂದು ಕುಳಿತುಕೊಂಡರು. ಅವರಲ್ಲಿ ಕೆಲವರು ಪಂಡಿತರು, ಇನ್ನು ಕೆಲವರು ಉಚ್ಚ ಸರ್ಕಾರಿ ಉದ್ಯೋಗಸ್ಥರು.

ಪರಮಹಂಸರು ಹೇಳಿದ್ದರು, ಭಾವವುಂಟಾದರೆ ವಾಯು ಸ್ಥಿರವಾಗುತ್ತದೆ ಎಂಬುದಾಗಿ. ಈಗ ಅವರು ಮಾತು ಮುಂದುವರಿಸುತ್ತಿದಾರೆ: "ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸುವ ಸಮಯದಲ್ಲಿ ಆತನ ದೃಷ್ಟಿಯೆಲ್ಲವೂ ಮತ್ಸ್ಯದ ಕಣ್ಣಿನ ಕಡೆಗೇ ಇದ್ದಿತೇ ವಿನಾ ಬೇರೆ ಯಾವುದರ ಕಡೆಗೂ ಇರಲಿಲ್ಲ. ಅಷ್ಟೇ ಅಲ್ಲ, ಮತ್ಸ್ಯದ ಕಣ್ಣು ಹೊರತು ಅದರ ಬೇರೆ ಯಾವ ಅಂಗವೂ ಆತನ ಕಣ್ಣಿಗೆ ಬೀಳಲಿಲ್ಲ. ಈ ರೀತಿಯ ಅವಸ್ಥೆಯಲ್ಲಿ ವಾಯು ಸ್ಥಿರವಾಗುತ್ತದೆ, ಕುಂಭಕವಾಗುತ್ತದೆ.

"ಭಗವದ್ದರ್ಶನದ ಇನ್ನೊಂದು ಲಕ್ಷಣ, ದೇಹದೊಳಗಿನಿಂದ ಮಹಾ

ವಾಯು ಗರ್ಗರ ಶಬ್ದ ಮಾಡುತ್ತ ಎದ್ದು ತಲೆಯ ಕಡೆಗೆ ನುಗ್ಗುತ್ತದೆ. ಆಗ ಸಮಾಧಿಯುಂಟಾದರೆ ಭಗವಂತನ ದರ್ಶನ ದೊರೆಯುತ್ತದೆ.''

ಹೊಸದಾಗಿ ಬಂದ ಬ್ರಾಹ್ಮಭಕ್ತರ ಕಡೆ ನೋಡಿ ಶ್ರೀರಾಮಕೃಷ್ಣರು ಹೇಳುತ್ತಿದಾರೆ: ''ಭಗವಂತನಲ್ಲಿ ಭಕ್ತಿಯಿಲ್ಲದ ನಾಮ ಮಾತ್ರ ಪಂಡಿತರು ಅಸಂಬದ್ಧವಾಗಿ ಮಾತುಕತೆ ಆಡುತ್ತಾರೆ. ಪಂಡಿತ ಸಮಾಧ್ಯಾಯಿ ತನ್ನ ಸಂಭಾಷಣೆಯ ಸಮಯದಲ್ಲಿ ಒಮ್ಮೆ ಹೇಳಿದ: 'ಭಗವಂತ ನೀರಸ. ನಾವು ನಮ್ಮ ಪ್ರೇಮ ಭಕ್ತಿಗಳಿಂದ ಆತನನ್ನು ಸರಸನನ್ನಾಗಿ ಮಾಡಿಕೊಳ್ಳಬೇಕು.' ಹಾಗೇ ನೋಡಿ! ವೇದ ಯಾರನ್ನು 'ರಸಸ್ವರೂಪ' ಅಂತ ಘೋಷಿಸಿವೆಯೊ ಆತನನ್ನು 'ನೀರಸ' ಅಂತ ವರ್ಣಿಸುವುದು! ಇದು ತೋರಿಸುತ್ತದೆ, ಆ ಪಂಡಿತನಿಗೆ ಭಗವಂತನ ನಿಜಸ್ವರೂಪ ಏನು ಎಂಬುದು ಸ್ವಲ್ಪವೂ ಗೊತ್ತಿಲ್ಲ ಎಂಬುದನ್ನ. ಅದಕ್ಕಾಗೇ ಆತನ ಮಾತಿನಲ್ಲಿ ಅಸಂಬದ್ಧತೆ.

''ಒಮ್ಮೆ ಒಬ್ಬ ಹೇಳಿದ: 'ನಮ್ಮ ಮಾವನ ಮನೆಯ ದನದ ಕೊಟ್ಟಿಗೆ ತುಂಬ ಕುದುರೆ ಇವೆ' ಎಂದು. ಇದರಿಂದ ಅರಿತುಕೊಳ್ಳಬೇಕು, ಅಲ್ಲಿ ಒಂದು ಕುದುರೆಯೂ ಇಲ್ಲ ಎಂಬುದಾಗಿ. ಯಾರೂ ದನದ ಕೊಟ್ಟಿಗೆಯಲ್ಲಿ ಕುದುರೆಯನ್ನು ಕಟ್ಟಿಹಾಕೋದಿಲ್ಲ.

''ಕೆಲವರು ತಮ್ಮ ಐಶ್ವರ್ಯದ—ಧನದ, ಕೀರ್ತಿಯ, ಪದವಿಯ—ಅಹಂಕಾರವನ್ನು ತೋರಿಸುತ್ತಾರೆ. ಇವೆಲ್ಲಾ ಎರಡು ದಿನದ ಬಾಳಿನವು. ಇವು ಯಾವೂ ಸಂಗಡ ಬರುವುದಿಲ್ಲ.

''ಇದರ ಸಂಬಂಧವಾಗಿ ಒಂದು ಹಾಡಿದೆ:

ಎತ್ತ ಹೋದರು ಸುತ್ತಲೆಲ್ಲೂ
ನನಗೆ ಯಾರೂ ಇಲ್ಲ ಜಗದೊಳು
ಎಂಬುದನು ನೀ ನೆನಪಿಡು. . . . (ಉ. ೬೭)

''ಧನದ ಅಹಂಕಾರವನ್ನು ತೋರಿಸುವುದು ಒಳ್ಳೆಯದಲ್ಲ. ನೀನು ಧನಿಕ ಎಂದು ನೀನು ಹೇಳಿಕೊಳ್ಳುವುದಾದರೆ, ನಿನಗಿಂತಲೂ ಹೆಚ್ಚಿನ ಧನಿಕರು, ಅವರಿಗಿಂತಲೂ ಇನ್ನೂ ಹೆಚ್ಚಿನ ಧನಿಕರು, ಹೀಗೆ ಇನ್ನೂ ಹೆಚ್ಚು ಹೆಚ್ಚಿನ ಧನಿಕರು ಇದಾರೆ ಎಂಬುದನ್ನ ಮರೆಯಕೂಡದು. ಸಾಯಂಕಾಲವಾದನಂತರ ಮಿಣುಕು ಹುಳು ಹಾರಾಡಲಾರಂಭಿಸಿದಾಗ ಅವು ಭಾವಿಸುತ್ತವೆ, ತಾವು ಈ ಜಗತ್ತಿಗೆ ಬೆಳಕುಕೊಡುತ್ತಿರುವುದಾಗಿ. ಆದರೆ ನಕ್ಷತ್ರಗಳು

ಉದಯಿಸಿದೊಡನೆ ಅವುಗಳ ಅಹಂಕಾರ ಚೂರ್ಣವಾಗುತ್ತದೆ. ಬಳಿಕ ನಕ್ಷತ್ರಗಳು ಭಾವಿಸುತ್ತವೆ, ತಾವು ಈ ಜಗತ್ತಿಗೆ ಬೆಳಕುಕೊಡುತ್ತಿರುವುದಾಗಿ. ಆದರೆ ಚಂದ್ರೋದಯವಾದೊಡನೆ ನಕ್ಷತ್ರಗಳು ಲಜ್ಜೆಯಿಂದ ಕಾಂತಿಹೀನವಾಗುತ್ತವೆ. ಅನಂತರ ಚಂದ್ರ ಭಾವಿಸುತ್ತಾನೆ, ತನ್ನ ಬೆಳಕಿನಿಂದ ಈ ಜಗತ್ತು ನಗುತ್ತಿದೆ, ತಾನು ಈ ಭೂಮಿಗೆ ಬೆಳಕುಕೊಡುತ್ತಿದೇನೆ ಎಂಬುದಾಗಿ. ಬಳಿಕ ಪೂರ್ವ ದಿಗಂತ ಕೆಂಪೇರಲಾರಂಭಿಸುತ್ತದೆ. ಸೂರ್ಯ ಉದಯಿಸುತ್ತಾನೆ. ಚಂದ್ರ ಕಳೆಗುಂದಲಾರಂಭಿಸುತ್ತಾನೆ. ಸ್ವಲ್ಪ ಹೊತ್ತಾದನಂತರ ಆತ ಕಣ್ಣಿಗೇ ಕಾಣುವುದಿಲ್ಲ.

"ಧನಿಕರು ಇವುಗಳ ಮೇಲೆ ಚಿಂತಿಸಿದರೆ ಅವರಲ್ಲಿ ಧನದ ಅಹಂಕಾರ ಉದಯವಾಗುವುದಿಲ್ಲ."

ಮಣಿಲಾಲ ವಾರ್ಷಿಕ ಸಮ್ಮೇಳನದ ಪ್ರಯುಕ್ತ ಒಳ್ಳೆ ಔತಣವನ್ನು ಏರ್ಪಡಿಸಿದ್ದ. ಆತ ಒಳ್ಳೆ ಶ್ರದ್ಧಾ ಭಕ್ತಿ ಉತ್ಸಾಹದಿಂದ ಪರಮಹಂಸರಿಗೂ ಮತ್ತು ಉಳಿದ ಆಹ್ವಾನಿತರಿಗೂ ಅತಿಥಿಸತ್ಕಾರ ಮಾಡಿದ. ಎಲ್ಲರೂ ತಮ್ಮ ಸ್ವಸ್ಥಾನಕ್ಕೆ ಹಿಂದಿರುಗಿ ಸೇರಿದಾಗ ರಾತ್ರಿ ಬಹಳವಾಗಿ ಮುಂದುವರಿದುಬಿಟ್ಟಿತ್ತು.



೧೫

## ಕೇಶವಸೇನನೊಡನೆ ಕಟ್ಟಕಡೆಯ ಭೇಟಿ

೨೮ನೆ ನೊವೆಂಬರ್ ೧೮೮೩, ಕಾರ್ತಿಕ ಕೃಷ್ಣ ಚತುರ್ದಶಿ, ಬುಧವಾರ.

ಅಪರಾಹ್ನ ಎರಡು ಘಂಟೆ ಸಮಯದಲ್ಲಿ ಕೇಶವಸೇನನ ಕಮಲ ಕುಟೀರದ ಮುಂದೆ ಇರುವ ಸರ್ಕ್ಯುಲರ್ ರಸ್ತೆಯ ಫುಟ್‌ಪಾತಿನಲ್ಲಿ ಮಾಸ್ಟರ್ ಅಡ್ಡಾಡುತ್ತಿದಾನೆ. ಆತ ಪರಮಹಂಸರ ಬರುವಿಕೆಯನ್ನೇ ಆಕಾಂಕ್ಷಿತನಾಗಿ ಎದುರುನೋಡುತ್ತಿದಾನೆ. ಕೇಶವಸೇನನಿಗೆ ಬಂದಿರುವ ಕಾಯಿಲೆ ಬಲಗೊಂಡುಬಿಟ್ಟಿದೆ. ಈ ಸಲ ಆತ ಬದುಕಿಕೊಳ್ಳುವ ಸಂಭವ ಬಹಳ ಕಡಮೆ. ಪರಮಹಂಸರು ಆತನನ್ನು ಬಹಳವಾಗಿ ಪ್ರೀತಿ ಸುತ್ತಿದ್ದುದರಿಂದ ಆತನನ್ನು ನೋಡಲು ಅವರು ದಕ್ಷಿಣೇಶ್ವರದಿಂದ ಬರಲಿದಾರೆ.

ಸರ್ಕ್ಯುಲರ್ ರಸ್ತೆಯ ಪೂರ್ವ ಭಾಗದಲ್ಲಿ ವಿಕ್ಟೋರಿಯಾ ಕಾಲೇಜು ಇದೆ. ಇಲ್ಲಿ ಕೇಶವಸೇನನ ಸಮಾಜದ ಹೆಂಗಸರು ಮತ್ತು ಅವರ ಹೆಣ್ಣು ಮಕ್ಕಳು ಓದುತ್ತಿದಾರೆ. ಈ ಕಾಲೇಜಿನ ಉತ್ತರಕ್ಕೆ ವಿಶಾಲವಾದ ಒಂದು ತೋಟದ ಮನೆ ಇದೆ. ಅದರಲ್ಲಿ ಒಬ್ಬ ಆಂಗ್ಲ ಸಂಸಾರಿ ವಾಸಿಸುತ್ತಿದಾನೆ. ಆ ಮನೆಯಲ್ಲಿ ಏನೊ ಒಂದು ಅನಾಹುತವಾಗಿರುವಂತೆ ಮಾಸ್ಟರಿಗೆ ಕಂಡು ಬಂತು. ಏನದು ಅಂತ ಬಹಳ ಕುತೂಹಲದಿಂದ ನೋಡಲಾರಂಭಿಸಿದ. ಇದ್ದಕ್ಕಿದ್ದಹಾಗೆ ಒಂದು ಶವದ ಬಂಡಿ ಅಲ್ಲಿ ಬಂದು ನಿಂತಿತು. ಬಹಳ ದುಃಖದಿಂದ ಮನೆಯವರೆಲ್ಲರೂ ಹೊರಕ್ಕೆ ಬರಲಾರಂಭಿಸಿದರು. ಅಲ್ಲಿ ಒಂದು ಸಾವು.

"ಈ ಮರ್ತ್ಯ ದೇಹವನ್ನು ಬಿಟ್ಟು ಜೀವ ಎಲ್ಲಿಗೆ ಹೋಗುತ್ತದೆ?" ಅನಾದಿಕಾಲದಿಂದಲೂ ಬಂದ ಈ ಪ್ರಶ್ನೆಯ ಮೇಲೆ ಚಿಂತಿಸುತ್ತ ಮಾಸ್ಟರ್ ಉತ್ತರ ದಿಕ್ಕಿನಿಂದ ಬರುತ್ತಿದ್ದ ಗಾಡಿಗಳನ್ನೆಲ್ಲಾ ದಿಟ್ಟಿಸಿ ನೋಡುತ್ತಲೇ ಕಾದಿದಾನೆ.

ಐದು ಘಂಟೆ ಸಮಯಕ್ಕೆ ಒಂದು ಗಾಡಿ ಬಂದು ಕಮಲಕುಟೀರದ ಎದುರಿಗೆ ನಿಂತಿತು. ಲಾಟು, ರಾಖಾಲ, ಇನ್ನೂ ಕೆಲವರನ್ನು ಜೊತೆಯಲ್ಲಿ ಕರೆದುಕೊಂಡುಬಂದಿದ್ದ ಪರಮಹಂಸರು ಗಾಡಿಯಿಂದ ಕೆಳಕ್ಕೆ ಇಳಿದರು.

ಕೇಶವಸೇನನ ಸಂಬಂಧಿಗಳು ಬಂದು ಪರಮಹಂಸರನ್ನು ಎದುರುಗೊಂಡು ಅವರನ್ನೂ ಭಕ್ತರನ್ನೂ ಮೇಲ್ಮಹಡಿಯ ಬೈಠಕ್ ಖಾನೆಯ ದಕ್ಷಿಣ ವರಾಂಡಕ್ಕೆ ಕರೆದುಕೊಂಡುಹೋದರು. ಪರಮಹಂಸರು ಒಂದು ಆರಾಮ ಸೋಫದ ಮೇಲೆ ಕುಳಿತಿದ್ದಾರೆ.

ಪರಮಹಂಸರು ಹಾಗೇ ಬಹಳ ಹೊತ್ತು ಕುಳಿತಿದ್ದು ಸಾಕಾಗಿ ಕೇಶವಸೇನನನ್ನು ನೋಡಲು ತವಕಪಡಲಾರಂಭಿಸಿದರು. ಕೇಶವಸೇನನ ಶಿಷ್ಯರು ಹೇಳುತ್ತಿದ್ದಾರೆ: "ಅವರು ವಿಶ್ರಮಿಸಿಕೊಳ್ಳುತ್ತಿದ್ದರು. ಇನ್ನೇನು ಬರುತ್ತಾರೆ." ಪರಮಹಂಸರು ಇನ್ನೂ ಅಧಿಕವಾಗಿ ತವಕಪಡುತ್ತ ಕೇಶವನ ಶಿಷ್ಯರಿಗೆ ಹೇಳುತ್ತಿದ್ದಾರೆ: "ನೋಡಿ, ಆತನೇ ಇಲ್ಲಿಗೆ ಬರುವುದರ ಆವಶ್ಯಕತೆಯೇನಿದೆ? ನಾನೇ ಒಳಕ್ಕೆ ಹೋಗಿ ಆತನನ್ನು ಏಕೆ ನೋಡ ಬಾರದು?"

ಪ್ರಸನ್ನ ವಿನಯದಿಂದ: "ಮಹಾಶಯರೆ, ಇನ್ನು ಕೆಲವು ನಿಮಿಷ ಗಳಲ್ಲೇ ಅವರು ಇಲ್ಲಿಗೆ ಬಂದುಬಿಡುತ್ತಾರೆ."

ಶ್ರೀರಾಮಕೃಷ್ಣರು: "ಹೋಗಿ! ಏನುಬೇಕಾದರೂ ಮಾಡಿಕೊಳ್ಳಿ! ಈ ತೊಂದರೆಯನ್ನೆಲ್ಲಾ ತಂದೊಡ್ಡುತ್ತಿರುವವರು ನೀವೇ. ನಾನಂತೂ ಒಳಕ್ಕೆ ಹೋಗಿಬಿಡುತ್ತೇನೆ."

ಪರಮಹಂಸರ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಲು ಪ್ರಸನ್ನ ಕೇಶವನ ಸಂಬಂಧವಾಗಿ ಮಾತು ಎತ್ತಿದ. ಆತ ಹೇಳಿದ: "ಕೇಶವ ಸೇನರು ಈಗ ಒಬ್ಬ ಹೊಸ ಮನುಷ್ಯರಾಗಿಬಿಟ್ಟಿದ್ದಾರೆ. ನಿಮ್ಮ ಹಾಗೆ ಅವರು ಭಗವತಿಯೊಡನೆ ಮಾತಾಡುತ್ತಾರೆ. ಭಗವತಿ ಹೇಳುವುದನ್ನು ಕೇಳಿ ಒಮ್ಮೊಮ್ಮೆ ನಗುತ್ತಾರೆ, ಅಳುತ್ತಾರೆ."

ಕೇಶವಸೇನ ಭಗವತಿಯೊಡನೆ ಮಾತಾಡುತ್ತಾನೆ, ನಗುತ್ತಾನೆ, ಅಳುತ್ತಾನೆ ಎಂಬುದನ್ನು ಕೇಳಿದೊಡನೇ ಪರಮಹಂಸರು ಭಾವಾವಿಷ್ಟರಾಗ ಲಾರಂಭಿಸಿದರು. ಕಣ್ಣು ಮುಚ್ಚಿ ಕಣ್ಣು ಬಿಡುವುದರಲ್ಲೇ ಸಮಾಧಿಸ್ಥ ರಾಗಿಬಿಟ್ಟಿದ್ದಾರೆ.

ಚಳಿಗಾಲವಾದ್ದರಿಂದ ಪರಮಹಂಸರು ಒಂದು ಹಸುರು ಫ್ಲ್ಯಾನೆಲ್ ಕೋಟು ಹಾಕಿಕೊಂಡು ಶಾಲು ಹೊದ್ದುಕೊಂಡಿದ್ದಾರೆ. ದೇಹ ನೇರವಾಗಿ ಕುಳಿತಿದೆ. ದೃಷ್ಟಿ ಸ್ಥಿರವಾಗಿದೆ. ಸಂಪೂರ್ಣವಾಗಿ ಸಮಾಧಿಯಲ್ಲಿ ಮಗ್ನ

ರಾಗಿದಾರೆ. ಹೀಗೇ ಬಹಳ ಹೊತ್ತು ಕಳೆದುಹೋದರೂ ಅವರು ಪ್ರಕೃತಿಸ್ಥ ರಾಗುವ ಚಿಹ್ನೆಗಳಾವೂ ಕಂಡುಬರಲಿಲ್ಲ.

ಸಾಯಂಕಾಲವಾಗತೊಡಗಿತು. ಪಕ್ಕದ ಬೈಠಕ್‌ಖಾನೆಗೆ ದೀಪ ಹಚ್ಚಲಾಯಿತು. ಪರಮಹಂಸರನ್ನು ಅಲ್ಲಿಗೆ ಕರೆದುಕೊಂಡುಹೋಗಲು ವ್ಯವಸ್ಥೆ ನಡೆಯುತ್ತಿದೆ. ಅವರು ಈಗ ತಾನೆ ಕಿಂಚಿತ್ ಪ್ರಕೃತಿಸ್ಥರಾಗುತ್ತಿದಾರೆ. ಬಹಳ ಪ್ರಯಾಸದಿಂದ ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗಲಾಯಿತು. ಕೊಠಡಿಯನ್ನು ಬಹಳ ಚೆನ್ನಾಗಿ ಸಜ್ಜುಗೊಳಿಸಿದಾರೆ. ಅಲ್ಲಿನ ಸಾಮಾನು ನೋಡಿ ಪರಮಹಂಸರು ತಮಗೆ ತಾವೇ ಮಟಿಗುಟ್ಟುತ್ತಿದಾರೆ: "ಹಿಂದೆ ಇವೆಲ್ಲ ಬಹಳವಾಗಿ ಬೇಕಾಗಿದ್ದುವು, ಆದರೆ ಈಗ ಇವುಗಳ ಆವಶ್ಯಕತೆಯೇನಿದೆ?" ರಾಖಾಲನನ್ನು ನೋಡಿ ಹೇಳುತ್ತಿದಾರೆ: "ಓ, ನೀನು ಇಲ್ಲಿ ಕುಳಿತಿದೀಯಾ?" ಪರಮಹಂಸರನ್ನು ಒಂದು ಸೋಫದ ಮೇಲೆ ಕೂರಿಸಲಾಯಿತು. ಅದರ ಮೇಲೆ ಕುಳಿತುಕೊಂಡು ಮತ್ತೆ ಭಾವಾವಿಷ್ಟರಾಗುತ್ತಿದಾರೆ. ಯಾರನ್ನೊ ನೋಡುತ್ತಿರುವವರ ಹಾಗೆ ಹೇಳುತ್ತಿದಾರೆ: "ಓಹೊ! ಭಗವತಿ ಬಂದುಬಿಟ್ಟಿದಾಳೆ! ಕಾಶಿಯ ಸೀರೆ ಎಷ್ಟು ಸೊಗಸಾಗಿ ನಿನಗೆ ಒಪ್ಪುತ್ತಿದೆ! ಈಗ ನನಗೇನೂ ತೊಂದರೆ ಕೊಡಬೇಡ. ಕುಳಿತುಕೊ, ಸುಮ್ಮನೆ ಕುಳಿತುಕೊ."

ಪರಮಹಂಸರ ಮಹಾಭಾವದ ಮತ್ತು ಇನ್ನೂ ಇಳಿದಿಲ್ಲ. ಕೊಠಡಿ ಬೆಳಕುಮಯವಾಗಿದೆ. ಬ್ರಾಹ್ಮಭಕ್ತರು ಪರಮಹಂಸರ ಸುತ್ತಲೂ ಕುಳಿತಿದಾರೆ. ಲಾಟು, ರಾಖಾಲ, ಮಾಸ್ಟರ್ ಮೊದಲಾದವರು ಪರಮಹಂಸರ ಹತ್ತಿರ ಕುಳಿತಿದಾರೆ. ಪರಮಹಂಸರು ಭಾವಾವಸ್ಥೆಯಲ್ಲಿ ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: "ದೇಹ ಮತ್ತು ಆತ್ಮ! ದೇಹ ಹುಟ್ಟಿತು, ಸಾಯುತ್ತದೆ. ಆತ್ಮಕ್ಕೆ ಮೃತ್ಯುವಿಲ್ಲ. ಅದು ಹಣ್ಣಾದ ಅಡಕೆಯ ಹಾಗೆ. ಅಡಕೆ ಹಣ್ಣಾದಾಗ, ಅದು ಸಿಪ್ಪೆಗೆ ಅಂಟಿಕೊಂಡಿರುವುದಿಲ್ಲ. ಆದರೆ ಅದು ಕಾಯಾಗಿರುವಾಗ ಅದನ್ನ ಸಿಪ್ಪೆಯಿಂದ ಬೇರ್ಪಡಿಸಬೇಕಾದರೆ ಬಹಳವಾಗಿ ಕಷ್ಟಪಡಬೇಕಾಗುತ್ತದೆ. ಭಗವಂತನ ಸಾಕ್ಷಾತ್ಕಾರ, ಭಗವಂತನ ದರ್ಶನ ದೊರೆತನಂತರ ದೇಹಬುದ್ಧಿ ಹೊರಟುಹೋಗುತ್ತದೆ. ಆಗ ದೇಹ ಪ್ರತ್ಯೇಕ, ಆತ್ಮ ಪ್ರತ್ಯೇಕ ಎಂಬ ಬೋಧೆಯಾಗುತ್ತದೆ."

ಈ ಸಮಯಕ್ಕೆ ಸರಿಯಾಗಿ ಕೇಶವಸೇನ ಕೊಠಡಿಯನ್ನು ಪೂರ್ವ ಬಾಗಿಲಿನಿಂದ ಪ್ರವೇಶಿಸಿದ. ಬ್ರಾಹ್ಮಸಮಾಜ ಮಂದಿರದಲ್ಲಿ,

ಟೌನ್‌ಹಾಲಿನಲ್ಲಿ ಆತ ಉಪನ್ಯಾಸ ಕೊಟ್ಟಾಗ ಆತನನ್ನು ಯಾರು ನೋಡಿದ್ದರೊ, ಅವರಿಗೆ ಅಸ್ಥಿಚರ್ಮಸಾರವಾಗಿರುವ ಈ ಮೂರ್ತಿಯನ್ನು ನೋಡಿ ಸುಮ್ಮನೆ ಎದೆ ಒಡೆದುಹೋದಂತಾಯಿತು. ಆತನಿಗೆ ಸರಿಯಾಗಿ ನಿಂತುಕೊಳ್ಳಲೂ ಆಗುತ್ತಿರಲಿಲ್ಲ. ಆತ ಗೋಡೆ ಹಿಡಿದು ಮುಂದುವರಿಯುತ್ತ ಬಹಳ ಕಷ್ಟಪಟ್ಟು ಸೋಫದ ಮುಂಭಾಗಕ್ಕೆ ಬಂದು ನೆಲದ ಮೇಲೆ ಕುಳಿತುಕೊಂಡ. ಅಷ್ಟರಲ್ಲಿ ಪರಮಹಂಸರೂ ಸೋಫದಿಂದಿಳಿದು ನೆಲದ ಮೇಲೆ ಕುಳಿತುಕೊಂಡರು. ಕೇಶವಸೇನ ಪರಮಹಂಸರ ದರ್ಶನವನ್ನು ಪಡೆದ ನಂತರ ಅವರಿಗೆ ಸಾಷ್ಟಾಂಗಪ್ರಣಾಮ ಮಾಡುತ್ತ ಆ ಅವಸ್ಥೆಯಲ್ಲೇ ಬಹಳ ಹೊತ್ತು ಅವರ ಪಾದದ ಮೇಲೆ ಬಿದ್ದಿದ್ದ. ಬಳಿಕ ಎದ್ದು ಕುಳಿತುಕೊಂಡ. ಪರಮಹಂಸರು ಇನ್ನೂ ಭಾವಾವಸ್ಥೆಯಲ್ಲೇ ಇದ್ದಾರೆ. ತಮ್ಮಷ್ಟಕ್ಕೆ ತಾವೇ ಏನನ್ನೊ ಹೇಳಿಕೊಳ್ಳುತ್ತಿದ್ದು ಈಗ ಭಗವತಿಯೊಡನೆ ಮಾತಾಡುತ್ತಿದ್ದಾರೆ.

ಕೇಶವಸೇನ ತನ್ನ ಕೊರಳನ್ನು ಸ್ವಲ್ಪ ಅಧಿಕವಾಗಿ ಚಾಚಿ ಹೇಳುತ್ತಿದ್ದಾನೆ: "ನಾನು ಬಂದಿದ್ದೇನೆ." ಆತ ಪರಮಹಂಸರ ಎಡಗೈಯನ್ನು ತನ್ನ ಕೈಗೆ ತೆಗೆದುಕೊಂಡು ಅದನ್ನು ಮೆತ್ತಗೆ ಸವರುತ್ತಿದ್ದಾನೆ. ಆದರೆ ಪರಮಹಂಸರು ಭಾವದಿಂದ ತುಂಬಿತುಳುಕಾಡುತ್ತ ತಮಗೆ ತಾವೇ ಏನೇನನ್ನೊ ಹೇಳಿಕೊಳ್ಳುತ್ತಿದ್ದಾರೆ. ಭಕ್ತರೆಲ್ಲರೂ ಆಶ್ಚರ್ಯದಿಂದ ಬಾಯಿ ತೆರೆದು ಕೇಳುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಎಲ್ಲಿಯವರೆಗೆ ಉಪಾಧಿಯಿರುವುದೊ ಅಲ್ಲಿಯವರೆಗೆ ನಾನಾತ್ವದ ಬೋಧೆ ಇರುತ್ತದೆ—ಕೇಶವ, ಪ್ರಸನ್ನ, ಅಮೃತ, ಇತ್ಯಾದಿಗಳ ಬೋಧೆ. ಪೂರ್ಣಜ್ಞಾನ ದೊರೆತಾಗ ಎಲ್ಲೆಲ್ಲೂ ಒಂದೇ ಚೈತನ್ಯವಿರುವ ಹಾಗೆ ಬೋಧೆಯಾಗುತ್ತದೆ. ಆ ಪೂರ್ಣಜ್ಞಾನವೇ ಮತ್ತೆ ಅನುಭವವನ್ನು ತರುತ್ತದೆ, ಆ ಒಂದು ಚೈತನ್ಯ ವಸ್ತುವೇ ಈ ಜೀವ ಜಗತ್ತು, ಈ ಚತುರ್ವಿಂಶತಿ ತತ್ತ್ವ ಆಗಿದೆ ಎಂಬುದಾಗಿ. ಆದರೆ ಶಕ್ತಿ ವಿಶೇಷತೆಯಿಂದ. ಅದೇ ಎಲ್ಲವೂ ಆಗಿರುವುದೇನೊ ನಿಜ; ಆದರೆ ಕೆಲವದರಲ್ಲಿ ಶಕ್ತಿಯ ಪ್ರಕಾಶ ಹೆಚ್ಚು, ಇನ್ನು ಕೆಲವದರಲ್ಲಿ ಕಡಮೆ.

"ವಿದ್ಯಾಸಾಗರ ಒಮ್ಮೆ ನನ್ನನ್ನು ಕೇಳಿದ: 'ಭಗವಂತ ಕೆಲವರಿಗೆ ಅಧಿಕ ಶಕ್ತಿ ಕೆಲವರಿಗೆ ಕಡಮೆ ಶಕ್ತಿ ಕೊಟ್ಟಿದ್ದಾನೆ ಎಂಬುದು ನಿಜವೆ?' ನಾನು ಉತ್ತರವಿತ್ತೆ: 'ಹಾಗಿಲ್ಲದಿದ್ದರೆ, ಒಬ್ಬನೇ ಒಬ್ಬ, ಐವತ್ತು ಜನ

ಎದುರಾದರೂ, ಎಲ್ಲರನ್ನೂ ಸೋಲಿಸಿಬಿಡುತ್ತಾನಲ್ಲ ಅದು ಹೇಗೆ? ಅದು ನಿಜವಲ್ಲದಿದ್ದರೆ ನಾವೇಕೆ ನಿನ್ನನ್ನು ನೋಡಲು ಬಂದಿದೇವೆ?'

"ಭಗವಂತ ಯಾರ ಮೂಲಕ ವಿಶೇಷವಾಗಿ ಕ್ರೀಡಿಸುತ್ತಾನೊ, ಆತನಲ್ಲಿ ಭಗವಂತನ ಶಕ್ತಿ ವಿಶೇಷ ರೂಪದಲ್ಲಿ ಇರುತ್ತದೆ. ಜಮೀನುದಾರ ತನ್ನ ಎಸ್ಟೇಟಿನಲ್ಲಿ ಎಲ್ಲಿ ಬೇಕಾದರಲ್ಲಿ ಇರಬಲ್ಲ. ಆದರೆ ಒಂದು ನಿರ್ದಿಷ್ಟ ಬೈಠಕ್‌ಖಾನೆಯಲ್ಲಿ ಆತ ಪ್ರಾಯಿಕವಾಗಿ ಇರುತ್ತಾನೆ. ಭಕ್ತ ಭಗವಂತನ ಬೈಠಕ್‌ಖಾನೆ. ಭಕ್ತನ ಹೃದಯದಲ್ಲಿ ಕ್ರೀಡಿಸಲು ಆತ ಇಚ್ಛಿಸುತ್ತಾನೆ. ಭಕ್ತನ ಹೃದಯದಲ್ಲಿ ಆತನ ವಿಶೇಷ ಶಕ್ತಿ ಬಂದು ನೆಲಸುತ್ತದೆ.

"ಅಂಥ ಭಕ್ತನ ಲಕ್ಷಣವೇನು? ಯಾರೇ ಆಗಲಿ ಮಹತ್ಕಾರ್ಯಗಳನ್ನು ಸಾಧಿಸುತ್ತಿದ್ದರೆ, ಅರಿತುಕೊಳ್ಳಬೇಕು ಭಗವಂತನ ವಿಶೇಷ ಶಕ್ತಿ ಆತನ ಮೂಲಕ ವ್ಯಕ್ತವಾಗುತ್ತಿದೆ ಎಂದು.

"ಆದ್ಯಾಶಕ್ತಿ ಮತ್ತು ಪರಬ್ರಹ್ಮ ಒಂದೇ. ಒಬ್ಬರನ್ನು ಬಿಟ್ಟು ಇನ್ನೊಬ್ಬರನ್ನು ಚಿಂತಿಸುವ ಹಾಗಿಲ್ಲ. ಅವರು ರತ್ನ ಮತ್ತು ಅದರ ಪ್ರಭೆಯ ಹಾಗೆ. ರತ್ನವನ್ನು ಬಿಟ್ಟು ಅದರ ಪ್ರಭೆಯನ್ನು ಭಾವಿಸುವ ಹಾಗಿಲ್ಲ. ಹಾಗೇ ರತ್ನದ ಪ್ರಭೆಯನ್ನು ಬಿಟ್ಟು ರತ್ನವನ್ನು ಭಾವಿಸುವ ಹಾಗಿಲ್ಲ. ಮತ್ತೆ ಇದು ಹಾವು ಮತ್ತು ಅದರ ಸೊಟ್ಟ ಸೊಟ್ಟ ಗತಿಯ ಹಾಗೆ. ಹಾವನ್ನು ಬಿಟ್ಟು ಅದರ ಸೊಟ್ಟ ಸೊಟ್ಟ ಗತಿಯನ್ನು ಭಾವಿಸುವ ಹಾಗಿಲ್ಲ. ಹಾಗೇ ಹಾವಿನ ಸೊಟ್ಟ ಸೊಟ್ಟ ಗತಿಯನ್ನು ಬಿಟ್ಟು ಹಾವನ್ನು ಭಾವಿಸುವ ಹಾಗಿಲ್ಲ.

"ಆದ್ಯಾಶಕ್ತಿಯೇ ಈ ಜೀವಜಗತ್ತು, ಈ ಚತುರ್ವಿಂಶತಿ ತತ್ತ್ವ ಆಗಿದ್ದಾಳೆ. ಅನುಲೋಮ ವಿಲೋಮ ನಡೆದುಕೊಂಡುಹೋಗುತ್ತಿದೆ.

"ರಾಖಾಲ, ನರೇಂದ್ರ, ಇನ್ನೂ ಉಳಿದ ಯುವಕರು ಇವರಿಗಾಗಿ ನಾನು ವ್ಯಸ್ತನಾಗುತ್ತೇನಲ್ಲ ಏಕೆ? ಹಾಜರಾ ಒಮ್ಮೆ ನನ್ನನ್ನು ಕೇಳಿದ: 'ನೀವು ಆ ಹುಡುಗರಿಗಾಗಿ ವ್ಯಸ್ತರಾಗಿ ಕಾಲ ಕಳೆಯುತ್ತಿದ್ದರೆ ಇನ್ನು ನೀವು ಭಗವಂತನ ಧ್ಯಾನಮಾಡುವುದು ಯಾವಾಗ?' (ಕೇಶವ ಮತ್ತು ಉಳಿದವರು ಸ್ವಲ್ಪ ಮುಗುಳುನಗೆ ನಕ್ಕರು.) ಅದು ನನಗೆ ಮಹಾ ಚಿಂತೆಯನ್ನು ತಂದುಬಿಟ್ಟಿತು. ನಾನು ಭಗವತಿಗೆ ಪ್ರಾರ್ಥನೆಮಾಡಿದೆ: 'ತಾಯೆ, ನನ್ನ ಅವಸ್ಥೆ ಯಾವ ದುರವಸ್ಥೆಗೆ ಬಂದುಬಿಟ್ಟಿದೆ ನೋಡು! ನಾನು ಆ ಯುವಕರ ಸಂಬಂಧವಾಗಿ ವ್ಯಸ್ತನಾಗಿರುವುದನ್ನು ನೋಡಿ

ಹಾಜರಾ ನನ್ನನ್ನು ಖಂಡಿಸುತ್ತಿದ್ದಾನೆ.' ಅನಂತರ ನಾನು ಭೋಲಾನಾಥ ನನ್ನು ಅದರ ಸಂಬಂಧವಾಗಿ ಕೇಳಿದೆ. ಆತ ಹೇಳಿದ, ಮಹಾಭಾರತದಲ್ಲಿ ಈ ಅವಸ್ಥೆಯ ಸಂಬಂಧವಾಗಿ ವರ್ಣನೆ ಇದೆ ಎಂದು. ಸಮಾಧಿಸ್ಥ ಪುರುಷ ಸಮಾಧಿಯಿಂದ ಇಳಿದುಬಂದ ಮೇಲೆ ತನ್ನ ಮನಸ್ಸನ್ನು ಇನ್ನು ಬೇರೆ ಯಾವುದರ ಮೇಲೆ ತಾನೆ ಇಟ್ಟಾನು? ಅದಕ್ಕಾಗೇ ಆತ ಸಾತ್ತ್ವಿಕ ಗುಣೀ ಭಕ್ತರೊಡನೆ ಬೆರೆಯಲು ಪ್ರಯತ್ನಿಸುತ್ತಾನೆ. ಮಹಾಭಾರತದಲ್ಲಿನ ವಿಷಯ ವನ್ನು ಆತ ತಿಳಿಸಿದನಂತರ, 'ಬದುಕಿಕೊಂಡೆನಪ್ಪ!' ಅಂತ ಅನಿಸಿತು.

"ಹಾಜರಾನದು ತಪ್ಪೇನಲ್ಲ. ಸಾಧಕನ ಅವಸ್ಥೆಯಲ್ಲಿ 'ನೇತಿ, ನೇತಿ' ಮಾರ್ಗವನ್ನು ಅನುಸರಿಸಿ ಇಡೀ ಮನಸ್ಸನ್ನು ಭಗವಂತನ ಕಡೆ ತಿರುಗಿಸಬೇಕು. ಆದರೆ ಸಿದ್ಧನ ಅವಸ್ಥೆ ಪ್ರತ್ಯೇಕವಾದ್ದು. ಭಗ ವಂತನ ಸಾಕ್ಷಾತ್ಕಾರ ದೊರೆತಮೇಲೆ ಅನುಲೋಮಮಾಡಿದುದನ್ನೆಲ್ಲ ವಿಲೋಮಮಾಡಬೇಕಾಗುತ್ತದೆ— ಎಂದರೆ, ತ್ಯಜಿಸಿದುದನ್ನೆಲ್ಲ ಸ್ವೀಕರಿಸ ಬೇಕಾಗುತ್ತದೆ. ಮಜ್ಜಿಗೆಯನ್ನು ಪ್ರತ್ಯೇಕಿಸಿದರೆ ಬೆಣ್ಣೆ ದೊರೆಯುತ್ತದೆ. ಆಗ ಬೋಧೆಯಾಗುತ್ತದೆ, ಬೆಣ್ಣೆಗು ಮಜ್ಜಿಗೆಗು ಅನ್ಯೋನ್ಯ ಸಂಬಂಧವಿದೆ. ಅವೆರಡೂ ಒಂದೇ ವಸ್ತುವಿನಿಂದ ಬಂದಿವೆ. ಬೆಣ್ಣೆ ಮೂಲತಃ ಮಜ್ಜಿಗೆ ಯಿಂದ ಪ್ರತ್ಯೇಕವಲ್ಲ. ಹಾಗೇ ಮಜ್ಜಿಗೆಯೂ ಮೂಲತಃ ಬೆಣ್ಣೆಯಿಂದ ಪ್ರತ್ಯೇಕವಲ್ಲ ಎಂದು. ಭಗವಂತನ ಸಾಕ್ಷಾತ್ಕಾರ ದೊರೆತಮೇಲೆ ನಿರ್ದಿಷ್ಟ ಅನುಭವವಾಗುತ್ತದೆ, ಆತನೇ ಎಲ್ಲವೂ ಆಗಿದ್ದಾನೆ ಎಂಬುದಾಗಿ. ಕೆಲವದ ರಲ್ಲಿ ಅಧಿಕವಾಗಿ ಇನ್ನು ಕೆಲವದರಲ್ಲಿ ಕಡಮೆಯಾಗಿ ವ್ಯಕ್ತವಾಗಿದ್ದಾನೆ, ಅಷ್ಟೆ.

"ಸಮುದ್ರದಿಂದ ನೀರು ಉಕ್ಕಿಬಂದರೆ ಭೂಮಿಯ ಮೇಲೆ ಒಂದು ಗಳುವಿನುದ್ದದ ನೀರು ನಿಲ್ಲುತ್ತದೆ. ಹೀಗಾಗುವುದಕ್ಕೆ ಮುಂಚೆ ದೋಣಿ ಸಮುದ್ರವನ್ನು ಮುಟ್ಟಬೇಕಾಗಿದ್ದರೆ ನದಿಯ ಸೊಟ್ಟ ಸೊಟ್ಟ ಗತಿಯನ್ನು ಅನುಸರಿಸಿ ಸಮುದ್ರವನ್ನು ಮುಟ್ಟಬೇಕಾಗಿತ್ತು. ಆದರೆ ಸಮುದ್ರ ಉಕ್ಕಿ ಬಂದನಂತರ ಸಮುದ್ರಕ್ಕೆ ನೇರವಾಗಿ ದೋಣಿಯನ್ನು ನಡೆಯಿಸಿಕೊಂಡು ಹೋಗಿಬಿಡಬಹುದು. ಆಗ ಸುತ್ತಿ ಸುತ್ತಿ ಸಮುದ್ರವನ್ನು ಸೇರಬೇಕಾಗಿ ರುವುದಿಲ್ಲ. ಬತ್ತದ ಬೆಳೆಯನ್ನು ಕೊಯ್ದನಂತರ ತೆವರಿಗಳ ಮೇಲೆ ಸುತ್ತಿ ಸುತ್ತಿ ತಿರುಗಾಡಬೇಕಾಗಿರುವುದಿಲ್ಲ. ಯಾವ ದಿಕ್ಕಿಗೆ ಬೇಕಾದರೂ ನೇರ ವಾಗಿ ಹೊರಟುಹೋಗಿಬಿಡಬಹುದು.

"ಭಗವಂತನ ಸಾಕ್ಷಾತ್ಕಾರ ದೊರೆತನಂತರ ಆತನನ್ನು ಪ್ರತಿಯೊಂದ ರಲ್ಲೂ ನೋಡಬಹುದು. ಮನುಷ್ಯನಲ್ಲಿ ಆತ ಹೆಚ್ಚಾಗಿ ವ್ಯಕ್ತವಾಗಿದಾನೆ. ಮತ್ತೆ ಮನುಷ್ಯರ ಮಧ್ಯೆ ಸಾತ್ತ್ವಿಕ ಭಕ್ತರಲ್ಲಿ, ಎಂದರೆ ಯಾರಲ್ಲಿ ಕಾಮ ಕಾಂಚನ, ಭೋಗೇಚ್ಛೆ ಸಂಪೂರ್ಣವಾಗಿ ಇಲ್ಲವೊ ಅವರಲ್ಲಿ ಇನ್ನೂ ಹೆಚ್ಚಾಗಿ ವ್ಯಕ್ತವಾಗಿರುತ್ತಾನೆ. ಸಮಾಧಿಸ್ಥ ವ್ಯಕ್ತಿ ಕೆಳಕ್ಕೆ ಇಳಿದುಬಂದುದೇ ಆದರೆ ಆತ ಇನ್ನು ಬೇರೆ ಯಾವುದರ ಮೇಲೆ ತಾನೆ ತನ್ನ ಮನಸ್ಸನ್ನು ಇಟ್ಟಾನು? ಅದಕ್ಕಾಗೇ ಆತನಿಗೆ ಕಾಮಕಾಂಚನತ್ಯಾಗಿಗಳಾದ ಶುದ್ಧ ಸಾತ್ತ್ವಿಕ ಭಕ್ತರ ಸಂಗ ಬೇಕಾಗುತ್ತದೆ. ಇಲ್ಲದಿದ್ದರೆ ಆತ ತನ್ನ ಮನಸ್ಸನ್ನು ಇನ್ನು ಬೇರೆ ಯಾವುದರ ಕಡೆಗೆ ತಾನೆ ತಿರುಗಿಸಿ ಇಡಬಲ್ಲ?

"ಯಾರು ಬ್ರಹ್ಮನೊ ಆತನೇ ಆದ್ಯಾಶಕ್ತಿಯಾಗಿದಾನೆ. ನಿಷ್ಕ್ರಿಯ ನಾಗಿರುವಾಗ ಆತನಿಗೇ ಬ್ರಹ್ಮ ಅಂತ ಹೆಸರು; ಪುರುಷ ಅಂತ ಹೆಸರು. ಸೃಷ್ಟಿಸ್ಥಿತಿಪ್ರಳಯ ಕಾರ್ಯಗಳನ್ನು ಮಾಡುವಾಗ ಆತನಿಗೇ ಶಕ್ತಿ ಅಂತ ಹೆಸರು; ಪ್ರಕೃತಿ ಅಂತ ಹೆಸರು. ಪುರುಷ ಮತ್ತು ಪ್ರಕೃತಿ. ಯಾರು ಪುರುಷನೊ ಆತನೇ ಪ್ರಕೃತಿ. ಆನಂದಮಯನೇ ಆನಂದಮಯಿ.

"ಯಾರಿಗೆ ಪುರುಷಜ್ಞಾನವಿರುವುದೊ ಅವರಿಗೆ ಪ್ರಕೃತಿಜ್ಞಾನವೂ ಇದ್ದೇ ಇರುತ್ತದೆ. ತಂದೆಯ ಜ್ಞಾನವಿರುವವರಿಗೆ ತಾಯಿಯ ಜ್ಞಾನವೂ ಇದ್ದೇ ಇರುತ್ತದೆ. (ಕೇಶವ ನಗುತ್ತಾನೆ.) ಯಾರಿಗೆ ಕತ್ತಲೆಯ ಜ್ಞಾನ ವಿರುವುದೊ, ಅವರಿಗೆ ಬೆಳಕಿನ ಜ್ಞಾನವೂ ಇರುತ್ತದೆ. ಸುಖದ ಜ್ಞಾನ ವಿರುವವರಿಗೆ ದುಃಖದ ಜ್ಞಾನವೂ ಇರುತ್ತದೆ. ನಿನಗೆ ಇದು ಅರ್ಥವಾಗಿರ ಬೇಕು, ಅಲ್ಲವೆ?"

ಕೇಶವಸೇನ: "ಹೌದು, ನನಗೆ ಅರ್ಥವಾಯಿತು."

ಶ್ರೀರಾಮಕೃಷ್ಣರು: "ನನ್ನ ತಾಯಿ! ಯಾರು ನನ್ನ ತಾಯಿ? ಓ, ಆಕೆ ಈ ಜಗಜ್ಜನನಿ. ಈ ಜಗತ್ತನ್ನು ಸೃಷ್ಟಿಸಿರುವವಳು, ಪಾಲಿಸುತ್ತಿರು ವವಳು ಅವಳೇ. ಅವಳೇ ಸರ್ವದಾ ತನ್ನ ಮಕ್ಕಳನ್ನು ನೋಡಿಕೊಳ್ಳು ತ್ತಿರುತ್ತಾಳೆ. ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳಲ್ಲಿ ಯಾವುದು ಯಾರಿಗೆ ಬೇಕಾದರೂ ಅದನ್ನು ಅವರಿಗೆ ಕೊಡುತ್ತಾಳೆ. ನಿಜವಾದ ಮಗು ತಾಯಿಯನ್ನು ಬಿಟ್ಟು ಇರಲಾರದು. ತಾಯಿಗೆ ಎಲ್ಲಾ ಗೊತ್ತು. ಮಗು

ಉಂಡು ತಿಂದು ತಿರುಗಾಡಿಕೊಂಡಿರುತ್ತದೆ; ಈ ಜಗತ್ತಿನ ಸಂಬಂಧವಾಗಿ ಅದು ಏನನ್ನೂ ತಲೆಗೆ ಹಚ್ಚಿಕೊಳ್ಳುವುದಿಲ್ಲ.''

ಕೇಶವಸೇನ: ''ಹೌದು, ನಿಜ.''

ಪರಮಹಂಸರು ಹೀಗೆ ಮಾತಾಡುತ್ತ ಮಾತಾಡುತ್ತ ಪೂರ್ಣವಾಗಿ ಪ್ರಕೃತಿಸ್ಥರಾಗಿದಾರೆ. ಈಗ ಕೇಶವಸೇನನೊಡನೆ ಆನಂದದಿಂದ ಮಾತುಕತೆ ಯಾಡುತ್ತಿದಾರೆ. ಕೊಠಡಿಯ ತುಂಬ ತುಂಬಿದ್ದ ಜನ ಕಿವಿ ನೆಟ್ಟಗೆ ಮಾಡಿಕೊಂಡು ಎಲ್ಲವನ್ನೂ ಕೇಳುತ್ತಿದಾರೆ, ಅವರ ಕಡೆ ದಿಟ್ಟಿಸಿ ನೋಡುತ್ತಿದಾರೆ. ಇಬ್ಬರೂ ದೇಹಾರೋಗ್ಯದ ಸಂಬಂಧವಾಗಿ ಯಾವ ಮಾತನ್ನೂ ಎತ್ತದೆ ಭಗವತ್ಸಂಬಂಧವಾಗೇ ಮಾತನಾಡುತ್ತಿರುವುದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಗಿಬಿಟ್ಟಿದೆ.

ಶ್ರೀರಾಮಕೃಷ್ಣರು ಕೇಶವಸೇನನಿಗೆ: ''ಬ್ರಾಹ್ಮಸಮಾಜದ ಅನುಯಾಯಿಗಳು ಭಗವಂತನ ಮಹಿಮೆಯನ್ನು ಅಷ್ಟೊಂದಾಗಿ ವರ್ಣನೆ ಮಾಡುತ್ತಾರಲ್ಲ ಏಕೆ? 'ಹೇ ಭಗವಂತ, ನೀನು ಚಂದ್ರನನ್ನು ಸೃಷ್ಟಿಸಿದೀಯೆ, ಸೂರ್ಯನನ್ನು ಸೃಷ್ಟಿಸಿದೀಯೆ, ನಕ್ಷತ್ರಗಳನ್ನು ಸೃಷ್ಟಿಸಿದೀಯೆ' ಎಂಬ ಈ ವಿಧದ ವರ್ಣನೆ ಯಾವ ಪ್ರಯೋಜನಕ್ಕೆ ಬಂದದ್ದು? ಅನೇಕರಿಗೆ ತೋಟವನ್ನು ಕಂಡರೇ ತೃಪ್ತಿ. ಅದರ ಯಜಮಾನನನ್ನು ನೋಡಬೇಕೆಂದು ಹಂಬಲಿಸುವವರು ಎಷ್ಟು ಅಲ್ಪ! ಮಹತ್ತು ತೋಟದಲ್ಲಿದೆಯೊ ಅಥವಾ ಯಜಮಾನನಲ್ಲಿದೆಯೊ?

''ಮದ್ಯವನ್ನು ಕುಡಿದು ಮುಗಿಸಿದ ಮೇಲೆ ಸಾರಾಯಿ ಅಂಗಡಿಯಲ್ಲಿ ಎಷ್ಟು ಸೇರು ಮದ್ಯವಿದೆ ಎಂಬುದರ ಲೆಕ್ಕಾಚಾರ ನನಗೇಕೆ? ನನಗೆ ಒಂದು ಸೀಸೆ ಮದ್ಯವೇ ಸಾಕು.

''ನಾನು ನರೇಂದ್ರನನ್ನು ಸಂಧಿಸಿದಂದಿನಿಂದ ಇದುವರೆಗೆ ಎಂದೂ ಕೇಳಲಿಲ್ಲ: 'ನಿನ್ನ ತಂದೆಯ ಹೆಸರೇನು? ಆತನಿಗೆಷ್ಟು ಮನೆ ಇದೆ?'

''ಸತ್ಯವೇನು ಹೇಳಲೆ? ಮನುಷ್ಯ ತಾನೇ ಐಶ್ವರ್ಯವನ್ನು ಪ್ರೀತಿಸುವುದರಿಂದ, ಭಾವಿಸುತ್ತಾನೆ ಭಗವಂತನೂ ಹಾಗೇ ಮಾಡುತ್ತಾನೆ ಎಂಬುದಾಗಿ. ಭಾವಿಸುತ್ತಾನೆ, ಆತನ ಐಶ್ವರ್ಯದ ವೈಭವವನ್ನು ಹೊಗಳಿದ್ದೇ ಆದರೆ ಆತನಿಗೆ ಆನಂದವಾಗಿಬಿಡುತ್ತದೆ. ಒಮ್ಮೆ ಶಂಭುಮಲ್ಲಿಕ ಹೇಳಿದ: 'ನಾನು ನನ್ನ ಈ ಐಶ್ವರ್ಯವನ್ನೆಲ್ಲಾ ಭಗವಂತನ ಪಾದಪದ್ಮಗಳಲ್ಲಿ ಅರ್ಪಿಸಿ ಶಾಂತಿಯಿಂದ ಸಾಯುವ ಹಾಗೆ ನನಗೆ ಆಶೀರ್ವಾದಮಾಡಿ.' ನಾನು ಉತ್ತರ

ವಿತ್ತೆ: 'ಇವು ನಿನಗೇನೊ ದೊಡ್ಡ ಐಶ್ವರ್ಯವಾಗಿರಬಹುದು. ನೀನು ಆತನಿಗೆ ಯಾವ ಐಶ್ವರ್ಯವನ್ನು ಕೊಡಬಲ್ಲೆ? ಆತನ ದೃಷ್ಟಿಯಿಂದ ಇವೆಲ್ಲಾ ಕೇವಲ ಕಸ ಕಡ್ಡಿ.'

"ಒಮ್ಮೆ ವಿಷ್ಣುದೇವಾಲಯದ ಒಡವೆಗಳನ್ನೆಲ್ಲಾ ಯಾರೊ ಕದ್ದು ಕೊಂಡುಹೋದಾಗ, ನಾನೂ ಮಥುರಬಾಬೂ ದೇವಾಲಯದ ಒಳಕ್ಕೆ ಹೋಗಿ ನೋಡಿದೆವು. ಮಥುರಬಾಬು ಹೇಳಿದ: 'ಛೀ ದೇವರೆ! ನೀನು ಯಾವುದಕ್ಕೂ ಬಂದವನಲ್ಲ. ಕಳ್ಳರು ನಿನ್ನ ಶರೀರದ ಮೇಲೆ ಇದ್ದ ಒಡವೆಗಳನ್ನೆಲ್ಲಾ ಕಳಚಿಕೊಂಡು ಹೋಗಿಬಿಟ್ಟಿದಾರೆ. ನಿನ್ನ ಕೈಯಲ್ಲಿ ಏನು ಮಾಡೋಕೂ ಆಗದೆಹೋಯಿತಲ್ಲ!' ನಾನು ಆತನಿಗೆ ಹೇಳಿದೆ: 'ನಿನ್ನದು ಇದೆಂಥ ಮಾತು! ನೀನು ಅಷ್ಟೊಂದಾಗಿ ಭಾವಿಸುತ್ತಿರುವ ಒಡವೆ ಭಗವಂತನಿಗೆ ಒಂದು ಮಣ್ಣಿ ಹೆಂಟೆಗೆ ಸಮಾನ. ಭಾಗ್ಯದೇವತೆಯಾದ ಲಕ್ಷ್ಮಿಯೇ ಆತನ ರಾಣಿ. ಅಂಥ ಭಗವಂತ ನಿನ್ನ ಈ ಕೆಲವು ರೂಪಾಯಿಗಳ ಒಡವೆ ಕಳವಾದುದಕ್ಕಾಗಿ ಹಗಲಿರುಳು ಚಿಂತಿಸುತ್ತಿರಬೇಕಾಗಿತ್ತು ಅನ್ನು? ಇಂಥ ಮಾತುಗಳನ್ನ ನೀನು ಇನ್ನೆಂದಿಗೂ ಆಡಕೂಡದು.'

"ಭಗವಂತ ಐಶ್ವರ್ಯಕ್ಕೆ ವಶನೆ? ಆತ ಭಕ್ತಿಗೆ ವಶನಾಗುತ್ತಾನೆ. ಆತನಿಗೆ ಏನು ಬೇಕಾಗಿದೆ? ನಿಜವಾಗಿಯೂ ಹಣವಲ್ಲ! ಭಕ್ತರ ಭಾವ, ಪ್ರೇಮ, ಭಕ್ತಿ, ವಿವೇಕ, ವೈರಾಗ್ಯ ಇವೇ ಮೊದಲಾದುವು ಬೇಕು.

"ಪ್ರತಿಯೊಬ್ಬನೂ ತನ್ನ ತನ್ನ ಭಾವದಂತೆ ಭಗವಂತನನ್ನು ನೋಡುತ್ತಾನೆ. ಉದಾಹರಣೆಗೆ ತಾಮಸಿಕ ಭಕ್ತನನ್ನು ತೆಗೆದುಕೊಳ್ಳಿ. ಆತ ಭಾವಿಸುತ್ತಾನೆ, ಭಗವತಿ ಆಡನ್ನು ತಿನ್ನುತ್ತಾಳೆ ಎಂದು. ಅದಕ್ಕಾಗಿ ಆಕೆಗೆ ಬಲಿಯನ್ನು ಅರ್ಪಿಸುತ್ತಾನೆ. ಹಾಗೇ ರಾಜಸಿಕ ಭಕ್ತ ಅನೇಕ ಬಗೆಯ ಪಲ್ಯ ಮತ್ತು ಅನ್ನವನ್ನು ಅರ್ಪಿಸುತ್ತಾನೆ. ಆದರೆ ಸಾತ್ವಿಕ ಭಕ್ತನಲ್ಲಿ ಯಾವ ವಿಧವಾದ ಬಾಹ್ಯ ಪೂಜಾಡಂಬರವಿರುವುದಿಲ್ಲ. ಆತ ಪೂಜೆ ಮಾಡುತ್ತಿರುವುದು ಜನರಿಗೆ ಗೊತ್ತೇ ಇರುವುದಿಲ್ಲ. ಹೂವು ಇಲ್ಲದೆ ಇತ್ತು ಎಂದರೆ ಬಿಲ್ವಪತ್ರೆ, ಗಂಗಾಜಲ ಇವುಗಳಿಂದಲೇ ಪೂಜೆ ಮಾಡಿಬಿಡುತ್ತಾನೆ. ಆತನ ನೈವೇದ್ಯಕ್ಕೆ ಒಂದು ಹಿಡಿ ಬೆಲ್ಲದ ಪುರಿಯೊ ಅಥವಾ ಒಂದೆರಡು ಬತ್ತಾಸೊ ಇದ್ದರೇ ಸಾಕು. ಅಪರೂಪಕ್ಕೆ ಒಮ್ಮೊಮ್ಮೆ ಭಗವಂತನಿಗೆ ಪಾಯಸ ಮಾಡಿ ಅರ್ಪಿಸುತ್ತಾನೆ.

"ಇವರೂ ಅಲ್ಲದೆ ತ್ರಿಗುಣಾತೀತ ಭಕ್ತರೂ ಇದಾರೆ. ಅವರದು ಬಾಲಕನ ಸ್ವಭಾವ. ಅವರ ಪೂಜೆ ಭಗವನ್ನಾಮೋಚ್ಚಾರಣೆ ಮಾಡುವುದರಲ್ಲೇ — ಕೇವಲ ಆತನ ನಾಮೋಚ್ಚಾರಣೆಯಲ್ಲೇ ಕೊನೆಗಾಣುತ್ತದೆ.

(ಕೇಶವಸೇನನಿಗೆ ನಗುತ್ತ) "ನಿನ್ನ ದೇಹಾರೋಗ್ಯ ಕೆಟ್ಟಿದೆಯಲ್ಲ ಏಕೆ? ಇದಕ್ಕೆ ಕಾರಣವಿದೆ. ಶರೀರದ ಮೂಲಕ ಅನೇಕ ಭಾವ ಪ್ರವಹಿಸಿ ಹೋಗಿವೆ; ಅದಕ್ಕಾಗಿ ಹೀಗಾಗಿಬಿಟ್ಟಿದೆ. ಭಾವ ಉಂಟಾದಾಗ ಏನೂ ಗೊತ್ತಾಗುವುದಿಲ್ಲ. ಬಹಳ ದಿನಗಳಾದಮೇಲೆ ಅದು ಶರೀರದ ಮೇಲೆ ಮಾಡಿದ ಆಘಾತ ಅರಿವಿಗೆ ಬರುತ್ತದೆ. ನಾನು ನೋಡಿದೇನೆ, ಗಂಗೆಯಲ್ಲಿ ದೊಡ್ಡ ದೊಡ್ಡ ಜಹಜು ಹೋಗುವುದನ್ನ. ಅವು ಹೋಗುವ ಸಮಯದಲ್ಲಿ ಗೊತ್ತೇ ಆಗದ ಹಾಗೆ ಹೊರಟುಹೋಗುತ್ತವೆ. ಆದರೆ ಏನು ಹೇಳಲಿ! ಸ್ವಲ್ಪ ಹೊತ್ತಿನಲ್ಲೇ ಅಲೆ ಬಂದು 'ಢಬಾರ್, ಢಬಾರ್' ಅಂತ ರಭಸದಿಂದ ದಡವನ್ನು ಬಡಿಯಲಾರಂಭಿಸುತ್ತವೆ. ಬಹುಶಃ ಆ ಏಟಿಗೆ ದಡದ ಸ್ವಲ್ಪ ಭಾಗ ಕುಸಿದೂ ನೀರಿಗೆ ಬೀಳಬಹುದು.

"ಆನೆ ಗುಡಿಸಿಲನ್ನು ಒಳಹೊಕ್ಕರೆ ಒಳಗೆಲ್ಲ ಹಾವಳಿಮಾಡಿ ಕೊನೆಗೆ ಅದನ್ನು ಉರುಳಿಸಿ ಚೂರುಚೂರು ಮಾಡಿಬಿಡುತ್ತದೆ. ಹಾಗೇ ಭಾವವೆಂಬ ಆನೆ ಈ ದೇಹವನ್ನು ಪ್ರವೇಶಿಸಿ ಅದನ್ನು ಚೂರುಚೂರು ಮಾಡಿಬಿಡುತ್ತದೆ.

"ನಿಜವಾಗಿ ಏನು ಆಗುತ್ತದೆ ಗೊತ್ತೆ? ಮನೆಗೆ ಬೆಂಕಿ ಹೊತ್ತಿಕೊಂಡಾಗ ಮೊದಲು ಮನೆಯೊಳಗಿನ ಕೆಲವು ವಸ್ತುಗಳು ಉರಿದುಹೋಗಲಾರಂಭಿಸುತ್ತವೆ. ಬಳಿಕ ದೊಡ್ಡ ಲಂಕಾದಹನ ಆರಂಭವಾಗುತ್ತದೆ. ಅದೇ ರೀತಿಯಾಗಿ ಜ್ಞಾನಾಗ್ನಿ ಮೊದಲು ಕಾಮ, ಕ್ರೋಧ ಮೊದಲಾದ ರಿಪುಗಳನ್ನು ನಾಶಮಾಡುತ್ತದೆ. ಬಳಿಕ ಅಹಂಬುದ್ಧಿಯನ್ನು ನಾಶ ಮಾಡುತ್ತದೆ. ಅನಂತರ ಈ ದೇಹದಲ್ಲಿ ಒಂದು ದೊಡ್ಡ ತುಮುಲ ಏಳುತ್ತದೆ.

"ನೀನು ಭಾವಿಸಿಕೊಳ್ಳಬಹುದು, ಎಲ್ಲ ಮುಗಿದುಹೋಯಿತು ಎಂದು. ಆದರೆ ಭಗವಂತ, ರೋಗದ ಸಿಲ್ಕು ಒಂದು ಕಿಂಚಿತ್ ಇರುವವರೆಗೂ ನಿನ್ನನ್ನು ಬಿಟ್ಟುಕೊಡಲೊಲ್ಲ. ಆಸ್ಪತ್ರೆಗೆ ಹೋಗಿ ದಾಖಲಾದರೆ ಅಲ್ಲಿಂದ ಸುಮ್ಮನೆ ಬಂದುಬಿಡಲಾಗುವುದಿಲ್ಲ. ರೋಗದ ಕೊಸರು ಸ್ವಲ್ಪ ಇರುವವರೆಗೂ ಡಾಕ್ಟರ್ ನಿನ್ನನ್ನು ಬಿಟ್ಟುಕೊಡುವುದಿಲ್ಲ. ಆಸ್ಪತ್ರೆಗೆ ಹೋಗಿ ಏಕೆ ದಾಖಲಾದೆ ಮತ್ತೆ?" (ಎಲ್ಲರೂ ನಗುತ್ತಿದಾರೆ.)

ಕೇಶವಸೇನ ಆಸ್ಪತ್ರೆಯ ಮಾತು ಕೇಳಿ ಮತ್ತೆ ಮತ್ತೆ ನಗುತ್ತಿದಾನೆ. ಆತನಿಗೆ ನಗುವನ್ನು ನಿಲ್ಲಿಸಲಾಗುತ್ತಿಲ್ಲ. ತಡೆದು ತಡೆದು ನಗುತ್ತಲೇ ಇದಾನೆ. ಈಗ ಪರಮಹಂಸರು ತಮ್ಮ ರೋಗದ ಸಂಬಂಧವಾಗಿ ಹೇಳಲಾ ರಂಭಿಸಿದಾರೆ. (ಕೇಶವಸೇನನಿಗೆ) "ಹೃದು ಹೇಳುತ್ತಿದ್ದ: 'ಇದುವರೆಗೆ ನಾನು ಎಂದೂ ಇಂಥ ಭಾವವನ್ನೂ ನೋಡಿಲ್ಲ, ಇಂಥ ರೋಗವನ್ನೂ ನೋಡಿಲ್ಲ.' ಆಗ ನನಗೆ ಬಹಳ ಕೆಟ್ಟ ಅತಿಸಾರ. ಲಕ್ಷಾಂತರ ಇರುವೆ ಒಟ್ಟಿಗೆ ಸೇರಿ ನನ್ನ ಮಿದುಳನ್ನು ಕಚ್ಚುತ್ತಿರುವಂತೆ ಅನುಭವವಾಗುತ್ತಿತ್ತು. ಆದರೂ ಭಗವತ್ಸಂಬಂಧವಾದ ಮಾತುಕತೆ ಮಾತ್ರ ಹಗಲೂ ಇರುಳೂ ನಡೆಯುತ್ತಲೇ ಇತ್ತು. ನಾಟಗರ್‌ನ ಕವಿರಾಜ ರಾಮು ನನ್ನನ್ನು ಪರೀಕ್ಷೆ ಮಾಡಲು ಬಂದ. ನಾನು ಭಗವತ್ಸಂಬಂಧವಾಗಿ ವಿಚಾರದಲ್ಲಿ ತೊಡ ಗಿದ್ದುದು ಆತನ ಕಣ್ಣಿಗೆ ಬಿತ್ತು. ಆಗ ಆತ ಹೇಳಿದ: 'ಇವರೆಂಥ ಹುಚ್ಚು ಮನುಷ್ಯರು! ಮೂಳೆ ಚಕ್ಕಳದ ಅವಸ್ಥೆಗೆ ಇಳಿದಿದ್ದರೂ ವಿಚಾರ ದಲ್ಲಿ ತೊಡಗಿದಾರಲ್ಲ!' "

ಶ್ರೀರಾಮಕೃಷ್ಣರು ಕೇಶವಸೇನನಿಗೆ: "ಎಲ್ಲವೂ ಭಗವಂತನ ಇಚ್ಛೆಯ ಮೇಲೆ ನಿಂತಿದೆ.

ಎಲ್ಲವೂ ನಿನ್ನಿಚ್ಛೆಯಂತೆ ನಡೆದಿರಲು
ನೀನೆ ಭವಸಾಗರವ ದಾಟಿಸುವ ಹಡಗು . . . . (ಉ. ೫೬೩)

"ಇಬ್ಬನಿಯನ್ನು ಕುಡಿಯಲಿ ಎಂದು ತೋಟಗಾರ ಬಸ್‌ರಾ ಗುಲಾಬಿ ಗಿಡದ ಬೇರಿನ ಬಹುಭಾಗವನ್ನು ತೋಡಿ ಹಾಗೇ ಬಿಟ್ಟುಬಿಡುತ್ತಾನೆ. ಅದು ಇಬ್ಬನಿಯನ್ನು ಕುಡಿದರೆ ಬಹಳ ಚೆನ್ನಾಗಿ ಹೂವು ಬಿಡುತ್ತದೆ. ಬಹುಶಃ ಅದಕ್ಕಾಗೆ ಇರಬೇಕು ಭಗವತಿ ನಿನ್ನ ಬೇರಿನ ಬಹುಭಾಗವನ್ನು ತೋಡಿಬಿಟ್ಟಿ ರುವುದು. (ಕೇಶವ, ಪರಮಹಂಸರು ಇಬ್ಬರೂ ನಗುತ್ತಾರೆ.) ಬಹುಶಃ ನೀನು ಹಿಂದಿರುಗಿ ಬಂದ ಮೇಲೆ ಒಂದು ದೊಡ್ಡ ಮಹತ್ಕಾರ್ಯವನ್ನು ಸಾಧಿಸಬಹುದು.

"ನಿನಗೆ ಕಾಯಿಲೆ ಬಂತು ಎಂದರೇ ನನ್ನ ಪ್ರಾಣ ಬಹಳವಾಗಿ ವ್ಯಾಕುಲಪಡಲಾರಂಭಿಸುತ್ತದೆ. ಹಿಂದಿನ ಸಲ ನೀನು ಕಾಯಿಲೆ ಬಿದ್ದಿದ್ದಾಗ ರಾತ್ರಿಯ ಕೊನೆಯ ಭಾಗದಲ್ಲಿ ನಿನಗಾಗಿ ಅಳುತ್ತ ಭಗವತಿಗೆ ಹೇಳುತ್ತಿದ್ದೆ: 'ತಾಯೆ, ಕೇಶವನಿಗೆ ಅಕಸ್ಮಾತ್ ಏನಾದರೂ ಆಗಿಬಿಟ್ಟರೆ, ಬಳಿಕ ಕಲ್ಕತ್ತಕ್ಕೆ ಹೋದಾಗ ನಾನು ಯಾರೊಡನೆ ಮಾತಾಡಲಿ?' ಕಲ್ಕತ್ತಕ್ಕೆ

ಬಂದು ನಿನ್ನ ಆರೋಗ್ಯಕ್ಕಾಗಿ ಭಗವತಿ ಸಿದ್ಧೇಶ್ವರೀದೇವಿಗೆ ಎಳನೀರು ಸಕ್ಕರೆಯನ್ನು ಅರ್ಪಿಸಿದೆ."

ಪರಮಹಂಸರು ಕೇಶವಸೇನನ ಮೇಲೆ ಇಟ್ಟಿರುವ ಅಕೃತ್ರಿಮ ಪ್ರೀತಿ, ಆತನಿಗಾಗಿ ಅವರು ವ್ಯಾಕುಲಪಡುವುದು ಈ ವಿಷಯವಾಗಿ ಎಲ್ಲವನ್ನೂ ಕೇಳಿ ಭಕ್ತರೆಲ್ಲರೂ ಬಹಳವಾಗಿ ಆಶ್ಚರ್ಯಚಕಿತರಾಗಿದಾರೆ.

ಶ್ರೀರಾಮಕೃಷ್ಣರು: "ಆದರೆ ಈ ಸಲ, ಸತ್ಯವಾಗಿ ಹೇಳಬೇಕಾದರೆ, ಹಿಂದಿನಷ್ಟು ಮನಸ್ಸು ವ್ಯಾಕುಲಪಡಲಿಲ್ಲ. ಎಲ್ಲೋ ಎರಡು ಮೂರು ದಿನ ಸ್ವಲ್ಪವಾಗಿ ವ್ಯಾಕುಲಪಟ್ಟಿತು."

ಕೇಶವಸೇನ ಕೊಠಡಿಯನ್ನು ಪ್ರವೇಶಿಸಿದ ಆ ಪೂರ್ವ ಬಾಗಿಲ ಹತ್ತಿರಕ್ಕೆ ಕೇಶವಸೇನನ ವೃದ್ಧ ಮಾತೆ ಬಂದಿದಾಳೆ. ಉಮಾನಾಥ ಪರಮ-ಹಂಸರಿಗೆ ಗಟ್ಟಿಯಾಗಿ ಕೂಗಿ ಹೇಳುತ್ತಿದಾನೆ: "ಇಲ್ಲಿ, ತಾಯಿ ನಿಮಗೆ ಪ್ರಣಾಮಮಾಡುತ್ತಿದಾಳೆ."

ಶ್ರೀರಾಮಕೃಷ್ಣರು ನಗುತ್ತಿದಾರೆ. ಉಮಾನಾಥ ಮತ್ತೆ ಹೇಳುತ್ತಿದಾನೆ: "ತಾಯಿ ಕೇಳಿಕೊಳ್ಳುತ್ತಿದಾಳೆ, ತಾವು ಕೇಶವಸೇನನ ರೋಗ ಗುಣಹೊಂದುವ ಹಾಗೆ ಆಶೀರ್ವಾದಮಾಡಬೇಕು ಎಂದು."

ಶ್ರೀರಾಮಕೃಷ್ಣರು ಕೇಶವಸೇನನ ತಾಯಿಗೆ: "ಭಗವತಿ ಸುವಚನಿ ಆನಂದಮಯಿಗೆ ಮೊರೆಯಿಡಿ. ಆಕೆ ದುಃಖವನ್ನು ದೂರಮಾಡುತ್ತಾಳೆ.

(ಕೇಶವಸೇನನಿಗೆ) "ಮನೆಯ ಅಂತಃಪುರದಲ್ಲಿ ಬಹಳ ಕಾಲವನ್ನು ಕಳೆಯಬೇಡ. ಹೆಂಗಸರ ಮಧ್ಯೆ ಇದ್ದರೆ ಇನ್ನೂ ಆಳಕ್ಕೆ ಇಳಿದುಹೋಗಿ ಬಿಡುತ್ತೀಯೆ. ಭಗವತ್ಸಂಬಂಧವಾಗೇ ಮಾತುಕತೆ ನಿನ್ನ ಕಿವಿಗೆ ಬೀಳುವುದಾದರೆ ನೀನು ಉತ್ತಮಗೊಳ್ಳುವೆ."

ಪರಮಹಂಸರು ಗಂಭೀರ ಮುದ್ರೆಯಿಂದ ಈ ಮಾತುಗಳನ್ನು ಹೇಳಿದ ನಂತರ ಬಾಲಕನ ಹಾಗೆ ನಗಲಾರಂಭಿಸಿದರು. ಈಗ ಕೇಶವಸೇನನಿಗೆ ಹೇಳುತ್ತಿದಾರೆ: "ಎಲ್ಲಿ, ನಿನ್ನ ಕೈ ನೋಡೋಣ." ಮಗುವಿನ ಹಾಗೆ ಅದನ್ನು ಹಿಡಿದು ಆಟವಾಡುತ್ತ ತೂಗಿನೋಡುತ್ತಿದಾರೆ. ಕೊನೆಗೆ ಈಗ ಹೇಳುತ್ತಿದಾರೆ: "ಇಲ್ಲ ನಿನ್ನ ಕೈ ಹಗುರವಾಗಿದೆ. ಕಪಟಿಯ ಕೈ ಬಹಳ ಭಾರವಾಗಿರುತ್ತದೆ." (ಎಲ್ಲರೂ ನಗುತ್ತಿದಾರೆ.)

ಉಮಾನಾಥ ಬಾಗಿಲಿನ ಹತ್ತಿರದಿಂದ ಮತ್ತೆ ಹೇಳುತ್ತಿದಾನೆ:

"ತಾಯಿ ಹೇಳುತ್ತಿದಾಳೆ, ತಾವು ಕೇಶವಸೇನನಿಗೆ ಆಶೀರ್ವಾದಮಾಡ ಬೇಕು ಎಂದು."

ಶ್ರೀರಾಮಕೃಷ್ಣರು ಗಂಭೀರಸ್ವರದಿಂದ: "ನನ್ನ ಕೈಯಲ್ಲಿ ಏನು ತಾನೆ ಸಾಧ್ಯ? ಆಶೀರ್ವಾದ ಮಾಡತಕ್ಕವನು ಕೇವಲ ಭಗವಂತ ನೊಬ್ಬನೇ. 'ನಿನ್ನ ಇಚ್ಛೆಯ ನೀನು ಪೂರೈಸುತಿರಲು; ತಮ್ಮ ಗೈಮೆಯಿ ದೆಂದು ತಿಳಿವರೀ ಜನರು!'

"ಭಗವಂತ ಎರಡು ವೇಳೆ ನಗುತ್ತಾನೆ. ಸೋದರರಿಬ್ಬರು ಪಿತ್ರಾರ್ಜಿತ ಜಮೀನನ್ನು ಹಂಚಿಕೊಳ್ಳುವಾಗೊಮ್ಮೆ ನಗುತ್ತಾನೆ. ಅವರು ಜಮೀನಿನ ಮೇಲೆ ದಾರ ಕಟ್ಟಿ ಹೇಳುತ್ತಾರೆ: 'ಈ ಭಾಗ ನನ್ನದು, ಆ ಭಾಗ ನಿನ್ನದು.' ಆಗ ಭಗವಂತ ನಗುತ್ತ ತನಗೆ ತಾನೇ ಹೇಳಿಕೊಳ್ಳುತ್ತಾನೆ: 'ಏಕೆ, ಈ ಇಡೀ ಜಗತ್ತೇ ನನ್ನದು. ಅಂಥಾದ್ದರಲ್ಲಿ ಇದೊಂದಿಷ್ಟು ಭಾಗ ಮಣ್ಣಿನ ಸಂಬಂಧವಾಗಿ ಅವರು ಹೇಳುತ್ತಿದಾರಲ್ಲ: "ಈ ಭಾಗ ನನ್ನದು, ಆ ಭಾಗ ನಿನ್ನದು" ಎಂದು!'

"ಭಗವಂತ ಇನ್ನೊಮ್ಮೆ ನಗುತ್ತಾನೆ: ಮಗುವಿನ ತೀವ್ರ ಕಾಯಿಲೆಯನ್ನು ನೋಡಿ ತಾಯಿ ಬಹಳವಾಗಿ ವಿಲಾಪಿಸುತ್ತಿರುತ್ತಾಳೆ. ಡಾಕ್ಟರ್ ಬಂದು ಹೇಳುತ್ತಾನೆ: "ತಾಯೆ, ಭಯಪಡಬೇಕಾಗಿಲ್ಲ. ನಾನು ಗುಣ ಪಡಿಸಿಕೊಟ್ಟುಬಿಡುತ್ತೇನೆ.' ಆದರೆ ಡಾಕ್ಟರಿಗೆ ಗೊತ್ತಿಲ್ಲ ಆ ಮಗು ಸಾಯಬೇಕೆಂಬುದು ಭಗವಂತನ ಇಚ್ಛೆಯಾಗಿದ್ದಪಕ್ಷದಲ್ಲಿ ಅದನ್ನು ಯಾರೂ ಬದುಕಿಸಲಾರರು ಎಂಬುದು." (ಎಲ್ಲರೂ ಸ್ತಬ್ಧರಾಗಿ ಕುಳಿತಿದಾರೆ.)

ಈ ಸಮಯಕ್ಕೆ ಸರಿಯಾಗೇ ಕೇಶವಸೇನ ಕೆಮ್ಮಲು ಆರಂಭಿಸಿ ಬಹಳ ಹೊತ್ತಿನವರೆಗೆ ಕೆಮ್ಮುತ್ತಲೇ ಇದ್ದ. ಆತನ ಕೆಮ್ಮಲ ಶಬ್ದ ಕೇಳಿ ಎಲ್ಲರಿಗೂ ದುಃಖವಾಗಲಾರಂಭಿಸಿತು. ಆತನಿಗೆ ಬಹಳವಾಗಿ ಸುಸ್ತಾಗಿಬಿಟ್ಟು ಇನ್ನು ಅಲ್ಲಿ ಕುಳಿತುಕೊಳ್ಳಲಾಗಲಿಲ್ಲ. ಆತ ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಎದ್ದು ಮತ್ತೆ ಗೋಡೆಯನ್ನು ಹಿಡಿದುಕೊಂಡು ತನ್ನ ಕೊಠಡಿಗೆ ಬಂದ ಮಾರ್ಗವಾಗೇ ಹಿಂದಿರುಗಿ ಹೊರಟುಹೋದ.

ಪರಮಹಂಸರು ಸ್ವಲ್ಪ ಉಪಾಹಾರ ಮಾಡಿಕೊಂಡು ಹೊರಡುತ್ತಾರೆ. ಕೇಶವಸೇನನ ಹಿರಿಯ ಮಗ ಪರಮಹಂಸರ ಹತ್ತಿರ ಕುಳಿತಿದಾನೆ. ಅಮೃತ ಪರಮಹಂಸರಿಗೆ ಆ ಹುಡುಗನ ಪರಿಚಯ ಮಾಡಿಕೊಟ್ಟು ಆತನಿಗೆ ಆಶೀರ್ವಾದಮಾಡುವಂತೆ ಅವರನ್ನು ಪ್ರಾರ್ಥಿಸಿಕೊಳ್ಳುತ್ತಿದಾನೆ. ಪರಮ-

ಹಂಸರು ಹೇಳುತ್ತಿದಾರೆ: "ಆ ಕಾರ್ಯ ನನ್ನದಲ್ಲ, ಭಗವಂತನದು." ನಗುತ್ತ ಆ ಹುಡುಗನ ಮೈ ಕೈಯನ್ನು ಸವರುತ್ತಿದಾರೆ.

ಅಮೃತ ನಗುತ್ತ: "ಒಳ್ಳೇದು, ನಿಮಗೆ ಸರಿ ಎಂದು ತೋರಿದ ಹಾಗೆ ಮಾಡಿ."

ಶ್ರೀರಾಮಕೃಷ್ಣರು ಭಕ್ತರಿಗೆ: "'ನಿನಗೆ ಗುಣವಾಗಿಬಿಡಲಿ' ಇವೇ ಮೊದಲಾದುವನ್ನು ಹೇಳಲು ನನ್ನ ಕೈಯಲ್ಲಿ ಸಾಧ್ಯವಿಲ್ಲ. ಗುಣಪಡಿಸುವ ಶಕ್ತಿಯನ್ನು ಕೊಡು ಎಂಬುದಾಗಿ ನಾನು ಎಂದೂ ಭಗವತಿಗೆ ಪ್ರಾರ್ಥನೆ ಸಲ್ಲಿಸುವುದಿಲ್ಲ. ನಾನು ಆಕೆಯನ್ನು ಕೇವಲ ಶುದ್ಧ ಭಕ್ತಿಯನ್ನು ಕೊಡು ವಂತೆ ಪ್ರಾರ್ಥಿಸುತ್ತೇನೆ.

"ಏನು, ಕೇಶವಸೇನ ಸಾಮಾನ್ಯ ಮನುಷ್ಯನೇ? ದ್ರವ್ಯಯಾಚಿಗಳೂ ಆತನನ್ನು ಗೌರವಿಸುತ್ತಾರೆ, ಹಾಗೇ ಸಾಧುಗಳು ಕೂಡ. ಇಲ್ಲೊಂದು ತೋಟದಲ್ಲಿ ದಯಾನಂದ ಬಂದು ಇಳಿದುಕೊಂಡಿದ್ದಾಗ ನಾನು ಹೋಗಿ ಆತನನ್ನು ನೋಡಿದೆ. ಅಂದು ಆತ ಕೇಶವಸೇನನನ್ನು ತೀವ್ರ ಆಕಾಂಕ್ಷೆ ಯಿಂದ ಎದುರುನೋಡುತ್ತ ಆಗಾಗ ಕೊಠಡಿಯಿಂದ ಹೊರಕ್ಕೆ ಬಂದು ನೋಡುತ್ತಲೇ ಇದ್ದ. ಅಂದು ಕೇಶವಸೇನ ಅಲ್ಲಿಗೆ ಬರುವುದಾಗಿ ಆತ ದಯಾ ನಂದನಿಗೆ ತಿಳಿಸಿದ್ದನೆಂದು ಬಳಿಕ ಅರಿತೆ. ಕೇಶವಸೇನನಿಗೆ ವೇದೋಕ್ತ ಹೋಮದಲ್ಲಿ ಮತ್ತು ದೇವತೆಗಳಲ್ಲಿ ಶ್ರದ್ಧೆಯಿರಲಿಲ್ಲ. ಅದಕ್ಕಾಗಿ ದಯಾ ನಂದ ಹೇಳಿದ: 'ಇಷ್ಟೊಂದು ವಸ್ತುಗಳನ್ನು ಸೃಷ್ಟಿಸಿದ ಭಗವಂತನ ಕೈ ಯಲ್ಲಿ ದೇವತೆಗಳನ್ನು ಸೃಷ್ಟಿಸಲು ಆಗೋದಿಲ್ಲವೆ?'"

ಶ್ರೀರಾಮಕೃಷ್ಣರು ತಮ್ಮ ಮಾತು ಮುಂದುವರಿಸಿ ಹೇಳುತ್ತಿದಾರೆ: "ಕೇಶವಸೇನನದು ಹೀನಬುದ್ಧಿಯಲ್ಲ. ಅನೇಕರಿಗೆ ಆತ ಹೇಳಿದಾನೆ: 'ಏನೇನು ಸಂದೇಹವಿದ್ದರೂ ಅಲ್ಲಿಗೆ[1] ಹೋಗಿ ಪರಿಹಾರಮಾಡಿಕೊಂಡು ಬಿಡಿ.' ನನ್ನ ಸ್ವಭಾವವೂ ಅದೇ ರೀತಿಯದು. ನಾನು ಹೇಳುತ್ತೇನೆ: 'ಜನ ವರ್ಷಿಸುವ ಕೀರ್ತಿಯನ್ನು ತೆಗೆದುಕೊಂಡು ನಾನೇನು ಮಾಡಲಿ? ಕೇಶವನ ಕೀರ್ತಿ ಇನ್ನೂ ಸಹಸ್ರಮಡಿಯಾಗಿ ಬೆಳೆಯಲಿ.' ಕೇಶವ ನಿಜವಾಗಿಯೂ ಬಹಳ ದೊಡ್ಡ ಮನುಷ್ಯನೇ. ದ್ರವ್ಯಯಾಚಿಗಳೂ ಆತನನ್ನು ಗೌರವಿಸು ತ್ತಾರೆ, ಹಾಗೇ ಸಾಧುಗಳು ಕೂಡ." ಈ ರೀತಿಯಾಗಿ ಪರಮಹಂಸರು ಕೇಶವಸೇನನನ್ನು ಆತನ ಶಿಷ್ಯರ ಎದುರಿಗೆ ಹೊಗಳಿದರು.

---

1. ಪರಮಹಂಸರ ಹತ್ತಿರಕ್ಕೆ.

ಉಪಾಹಾರವಾದನಂತರ ಪರಮಹಂಸರು ಹೊರಡಲು ಸಿದ್ಧರಾದರು. ಬ್ರಾಹ್ಮಭಕ್ತರು ಅವರನ್ನು ಗಾಡಿಗೆ ಹತ್ತಿಸಿಕೊಡಲು ಸಿದ್ಧರಾಗಿದ್ದಾರೆ. ಹಂತದ ಮೂಲಕ ಕೆಳಕ್ಕೆ ಇಳಿಯುವಾಗ ನೆಲ ಅಂತಸ್ತಿನಲ್ಲಿ ಬೆಳಕಿಲ್ಲದಿರುವುದು ಪರಮಹಂಸರ ಕಣ್ಣಿಗೆ ಬಿತ್ತು. ಅವರು ಅಮೃತನಿಗೆ ಮತ್ತು ಕೇಶವನ ಶಿಷ್ಯರಿಗೆ ಹೇಳುತ್ತಿದ್ದಾರೆ: "ಇಂಥ ಸ್ಥಳಗಳಲ್ಲೆಲ್ಲಾ ಒಳ್ಳೆ ಬೆಳಕು ಇರಬೇಕು. ಬೆಳಕಿಲ್ಲದೆ ಇತ್ತು ಎಂದರೆ ದಾರಿದ್ರ್ಯಲಕ್ಷ್ಮಿ ಗೃಹವನ್ನು ಪ್ರವೇಶಿಸುತ್ತಾಳೆ. ಈ ರೀತಿಯಾಗಿ ಮುಂದೆ ಇನ್ನೆಂದಿಗೂ ಆಗದ ಹಾಗೆ ನೋಡಿಕೊಳ್ಳಬೇಕು."

ಬಳಿಕ ಪರಮಹಂಸರು ಒಬ್ಬಿಬ್ಬರು ಭಕ್ತರೊಡನೆ ದಕ್ಷಿಣೇಶ್ವರದ ಕಡೆ ಮುಂದುವರಿಯಲಾರಂಭಿಸಿದರು.

ಪರಮಹಂಸರು ಹಾಗೇ ಮುಂದುವರಿಯುತ್ತ ಜಯಗೋಪಾಲಸೇನನ ಮನೆಯ ಹತ್ತಿರ ಗಾಡಿಯನ್ನು ನಿಲ್ಲಿಸಿ ಆತನ ಮನೆಗೆ ಬಂದಿದ್ದಾರೆ. ಘಂಟೆ ಈಗ ರಾತ್ರಿ ಏಳು. ಜಯಗೋಪಾಲಸೇನನ ಮನೆಯವರು, ಆತನ ಬಂಧುಗಳು, ಅಕ್ಕಪಕ್ಕದವರು ಬೈಠಕ್‌ಖಾನೆಯಲ್ಲಿ ತುಂಬಿಕೊಂಡಿದ್ದಾರೆ. ಜಯಗೋಪಾಲಸೇನನ ಸೋದರ ವೈಕುಂಠ ಪರಮಹಂಸರನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಾನೆ: "ಮಹಾಶಯರೆ, ನಾವು ಸಂಸಾರಿಗಳು. ನಮಗೆ ಏನಾದರೂ ಉಪದೇಶಕೊಡಿ."

ಶ್ರೀರಾಮಕೃಷ್ಣರು: "ಮೊದಲು ಭಗವಂತನ ಸಾಕ್ಷಾತ್ಕಾರವನ್ನು ಮಾಡಿಕೊಂಡು ಅನಂತರ ಈ ಜಗತ್ತಿನ ಕಾರ್ಯಗಳನ್ನು ಮಾಡಿ. ಒಂದು ಕೈಯಿಂದ ಭಗವಂತನ ಪಾದಪದ್ಮಗಳನ್ನು ಬಿಗಿಯಾಗಿ ಹಿಡಿದುಕೊಂಡು ಇನ್ನೊಂದು ಕೈಯಿಂದ ಸಾಂಸಾರಿಕ ಕೆಲಸಕಾರ್ಯಗಳನ್ನು ಮಾಡಿ."

ವೈಕುಂಠ: "ಮಹಾಶಯರೆ, ಈ ಸಂಸಾರ ಮಿಥ್ಯೆಯಾದುದೇನು?"

ಶ್ರೀರಾಮಕೃಷ್ಣರು: "ಹೌದು, ಭಗವಂತನ ಸಾಕ್ಷಾತ್ಕಾರವನ್ನು ಪಡೆಯದವರೆಗೆ ಈ ಜಗತ್ತು ಮಿಥ್ಯೆಯಾದುದೇ. ಅಜ್ಞಾನವಶದಿಂದ ಮನುಷ್ಯ ಭಗವಂತನನ್ನು ಮರೆತು 'ನನ್ನದು, ನನ್ನದು' ಅನ್ನುತ್ತಲೇ ಇರುತ್ತಾನೆ. ಮಾಯೆಯಿಂದ ಬದ್ಧನಾಗಿ, ಕಾಮಕಾಂಚನದಿಂದ ಮುಗ್ಧನಾಗಿ ಅಧೋ ಅಧೋಗತಿಗೆ ಇಳಿಯುತ್ತಲೇ ಇರುತ್ತಾನೆ. ಮಾಯೆಯ ದೆಸೆಯಿಂದ ಮನುಷ್ಯ ಅಂಥ ಅಜ್ಞಾನಿಯಾಗುತ್ತಾನೆ, ಈ ಸಂಸಾರದಿಂದ ಮುಕ್ತ

ನಾಗಲು ದಾರಿಯಿದ್ದರೂ ಆತ ಅದನ್ನು ಪತ್ತೆಮಾಡಲಾರದವನಾಗಿಬಿಡುತ್ತಾನೆ!

"ಒಂದು ಹಾಡನ್ನು ಕೇಳು:

ತಾಯ ಮಾಯದ ಬಲೆಯು ಹರಹಿದೆ
ಮೂರು ಲೋಕದ ಅಗಲಕೆ, . . .

"ಈ ಜಗತ್ತು ಎಷ್ಟು ಅನಿತ್ಯವಾದ್ದು ಎಂಬುದನ್ನು ನೀವು ನಿಮ್ಮ ಸ್ವಂತ ಅನುಭವದಿಂದಲೇ ಅರಿತುಕೊಂಡಿದೀರಿ. ಈ ದೃಷ್ಟಿಯಿಂದ ಅದನ್ನು ನೋಡಿ. ಎಷ್ಟೊಂದು ಜನ ಈ ಜಗತ್ತಿನಲ್ಲಿ ಹುಟ್ಟಿ ಸತ್ತಿದಾರೆ! ಜನ ಹುಟ್ಟುತ್ತಾರೆ ಮತ್ತೆ ಸಾಯುತ್ತಾರೆ. ಈ ಜಗತ್ತು ಈಗಿದೆ, ಈಗಿಲ್ಲ. ಅನಿತ್ಯವಾದ್ದು. ಯಾರನ್ನು 'ನನ್ನವರು, ನನ್ನವರು' ಅನ್ನುತ್ತಿದೀರೊ, ನೀವು ಸಾಯುವಾಗ ಕಣ್ಣು ಮುಚ್ಚಿದೊಡನೇ ಯಾರೂ ಜೊತೆಯಲ್ಲಿ ಬರುವುದಿಲ್ಲ. ಕೆಲಕೆಲವರಿಗೆ ಹತ್ತಿರದ ಸಂಬಂಧಿಗಳು ಯಾರು ಇಲ್ಲದಿದ್ದರೂ, ಅವರು ತಮ್ಮ ಮೊಮ್ಮಕ್ಕಳ ಸಲುವಾಗಿ ಕಾಶಿಗೆ ಹೋಗಲಾಗುವುದಿಲ್ಲ. 'ನಮ್ಮ ಹಾರುವಿನ[1] ಗತಿ ಏನಾಗಿಬಿಡುತ್ತೊ ಬಳಿಕ?' ಅಂತ ವಾದಿಸುತ್ತಾರೆ. 'ಬಂದು ಹೋಗಲು ಮಾರ್ಗವಿದೆ. ಆದರೂ ಮೀನು ಬೋನಿನಿಂದ ತಪ್ಪಿಸಿಕೊಂಡುಹೋಗದು.' 'ರೇಷ್ಮೆಹುಳು ತನ್ನನ್ನು ತಾನೇ ಬಂಧಿಸಿಕೊಂಡು, ತಾನಾಗೇ ಸಾಯುತ್ತದೆ.' ಈ ರೀತಿಯ ಈ ಜಗತ್ತು ಮಿಥ್ಯೆಯಾದ್ದು, ಅನಿತ್ಯವಾದ್ದು."

ಒಬ್ಬ ನೆರೆಯವ: "ಮಹಾಶಯರೆ, ಒಂದು ಕೈಯಿಂದ ಭಗವಂತನನ್ನು ಹಿಡಿದುಕೊಂಡು ಇನ್ನೊಂದು ಕೈಯನ್ನು ಸಂಸಾರದಲ್ಲಿ ಏಕೆ ಇಡಬೇಕು? ಈ ಜಗತ್ತು ಅನಿತ್ಯವಾದ್ದೇ ಆದರೆ ಅದರ ಕಡೆ ಏಕೆ ತಾನೆ ಕೈ ನೀಡಬೇಕು?"

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರ ಪಡೆದು ಈ ಜಗತ್ತಿನಲ್ಲಿ ಇದ್ದರೆ, ಆಗ ಇದು ಅನಿತ್ಯವಾಗಿ ತೋರುವುದಿಲ್ಲ. ಒಂದು ಹಾಡನ್ನು ಕೇಳು:

ನಿನ್ನ ಬಾಳಿನ ಹೊಲವು ಪಾಳುಬಿದ್ದಿಹುದಲ್ಲೊ
ಕೃಷಿಗೈಯಲೂ ಕೂಡ ತಿಳಿಯದಿರುವೆ!

---

1. ಒಬ್ಬ ಹುಡುಗನ ಹೆಸರು.

ಎಂಥ ಹೊನ್ನನು ಬೆಳೆದು ತೆಗೆಯಬಹುದಾಗಿತ್ತೊ
ಕೆಲವು ದಿನ ಮೈಮುರಿದು ದುಡಿದಿದ್ದರೆ !
ಈಗಲಾದರೂ ತಾಯ ಶ್ರೀನಾಮವೆಂತೆಂಬ
ಬೇಲಿಯನು ಕಟ್ಟಿ ನೀ ಕಾಯ್ದುಕೊಳ್ಳೋ.
ಅದಕಿಂತ ಬಲವಾದ ಕಾವಲಿನ್ನಾವುದಿದೆ ?
ಮೃತ್ಯುವೂ ನಿನ್ನ ಬಳಿ ಬರಲಾರನೊ . . . . ( ಉ. ೭೯೨ )

" ಹಾಡನ್ನು ಕೇಳಿದೆಯೊ ?

ಈಗಲಾದರೂ ತಾಯ ಶ್ರೀನಾಮವೆಂತೆಂಬ
ಬೇಲಿಯನು ಕಟ್ಟಿ ನೀ ಕಾಯ್ದುಕೊಳ್ಳೋ.

"ಭಗವಂತನಿಗೆ ಶರಣಾಗತನಾಗಿಬಿಡು, ಎಲ್ಲವೂ ನಿನಗೆ ದೊರೆತು ಬಿಡುತ್ತದೆ.

ಅದಕಿಂತ ಬಲವಾದ ಕಾವಲಿನ್ನಾವುದಿದೆ?
ಮೃತ್ಯುವೂ ನಿನ್ನ ಬಳಿ ಬರಲಾರನೋ.

"ಹೌದು, ನಿಜವಾಗಿಯೂ ಅದು ಬಹಳ ಬಲವಾದ ಬೇಲಿ. ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡುದೇ ಆದರೆ, ಆಗ ಈ ಜಗತ್ತು ನಿಸ್ಸಾರವಾದುದಾಗಿ ತೋರಿಬರುವುದಿಲ್ಲ. ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನಿಗೆ ಭಗವಂತನೇ ಈ ಜೀವ ಜಗತ್ತಾಗಿರುವುದಾಗಿ ಕಂಡುಬರುತ್ತದೆ. ಮಕ್ಕಳನ್ನು ಪೋಷಿಸುವಾಗ ಭಾವಿಸಬೇಕು, ಸಾಕ್ಷಾತ್ ಭಗವಂತನನ್ನೇ ಪೋಷಿಸುತ್ತಿರುವ ಹಾಗೆ. ತಂದೆ ತಾಯಿಗಳನ್ನು ಸಾಕ್ಷಾತ್ ಭಗವಂತನೇ ಎಂದು ಭಾವಿಸಿ ಅವರ ಸೇವೆಯನ್ನು ಮಾಡಬೇಕು. ಆತನ ಸಾಕ್ಷಾತ್ಕಾರವನ್ನು ಪಡೆದು ಸಂಸಾರದಲ್ಲಿದ್ದರೆ ಮನುಷ್ಯ ಪ್ರಾಯಿಕವಾಗಿ ತನ್ನ ಹೆಂಡತಿಯೊಡನೆ ಯಾವ ಸ್ಥೂಲ ಸಂಬಂಧವನ್ನು ಮಾಡುವುದಿಲ್ಲ. ಇಬ್ಬರೂ ಭಕ್ತರೇ ಆಗಿ ಭಗವತ್ಸಂಬಂಧವಾದ ಮಾತುಕತೆಗಳನ್ನೇ ಆಡುತ್ತ, ಭಗವದ್ವಿಚಾರದಲ್ಲೇ ತೊಡಗಿರುತ್ತಾರೆ. ಭಕ್ತರ ಸೇವೆಯನ್ನು ಮಾಡುತ್ತಾರೆ, ಏಕೆಂದರೆ, ಅವರಿಗೆ ಗೊತ್ತಿದೆ ಭಗವಂತನೇ ಸರ್ವಭೂತಗಳಲ್ಲಿಯೂ ಇದಾನೆ ಎಂಬುದು; ಇದನ್ನು ಅರಿತು ಪರರ ಸೇವೆಗಾಗಿ ತಮ್ಮ ಇಡೀ ಜೀವನವನ್ನೇ ಮುಡುಪಾಗಿಡುತ್ತಾರೆ."

ನೆರೆಯವ: "ಆದರೆ, ಮಹಾಶಯರೆ, ಈ ವಿಧದ ಸತಿಪತಿಯರನ್ನು ಎಲ್ಲೂ ಕಂಡುದೇ ಇಲ್ಲವಲ್ಲ."

ಶ್ರೀರಾಮಕೃಷ್ಣರು: "ಇದಾರೆ, ಆದರೆ ಅತಿ ವಿರಳ. ಪ್ರಾಪಂಚಿಕರು ಅವರನ್ನು ಗುರುತುಹಚ್ಚಲಾರರು. ಈ ವಿಧದ ಜೀವನ ನಡಸಬೇಕಾದರೆ ಇಬ್ಬರೂ ಆಧ್ಯಾತ್ಮಿಕಜೀವಿಗಳಾಗಬೇಕು. ಇಬ್ಬರಿಗೂ ಭಗವದಾನಂದದ ರುಚಿ ದೊರೆತದ್ದೇ ಆದರೆ ಮಾತ್ರ ಈ ವಿಧದ ಜೀವನ ಸಾಧ್ಯವಾಗುವ ಸಂಭವ. ಇದಕ್ಕೆ ಭಗವಂತನ ವಿಶೇಷ ಕೃಪೆ ಬೇಕು. ಇಲ್ಲದಿದ್ದರೆ ಜೀವನ, 'ಎತ್ತು ಏರಿಗೆ, ಕೋಣ ನೀರಿಗೆ' ಎಳೆದಂತಾಗುತ್ತದೆ. ಇಂಥ ಸನ್ನಿವೇಶದಲ್ಲಿ ಒಬ್ಬರು ಇನ್ನೊಬ್ಬರನ್ನು ಅಗಲಿ ಇರಬೇಕಾಗುತ್ತದೆ. ಇಬ್ಬರ ಮಾನಸಿಕ ಪ್ರವೃತ್ತಿಯೂ ಒಂದೇ ರೀತಿಯದಾಗಿಲ್ಲದೆ ಇತ್ತು ಎಂದರೆ, ಇಬ್ಬರೂ ತಾಳಲಾರದ ದುಃಖಪರಂಪರೆಗಳಿಗೆ ಈಡಾಗಬೇಕಾಗುತ್ತದೆ. ಹೆಂಡತಿ ಬಹುಶಃ ಹಗಲೂ ಇರುಳೂ ಗೊಣಗುಟ್ಟಬಹುದು: 'ನಮ್ಮ ತಂದೆ ಏಕೆ ತಂದು ನನ್ನನ್ನು ನಿಮಗೆ ಗಂಟುಹಾಕಿದರೊ? ನನಗೇ ಆಗಲಿ, ನನ್ನ ಮಕ್ಕಳಿಗೇ ಆಗಲಿ ಉಡುವುದಕ್ಕೆ ಉಣ್ಣುವುದಕ್ಕೆ ಏನೂ ದೊರೆಯುತ್ತಿಲ್ಲ. ನನ್ನ ಶರೀರದ ಮೇಲೆ ಒಡವೆಯ ಗಂಧವೂ ಇಲ್ಲ. ನಿಮ್ಮನ್ನು ಸೇರಿದುದಕ್ಕೆ ನನಗೇನು ಸುಖವನ್ನು ತಾನೆ ಕೊಟ್ಟಿದೀರಿ! ಯಾವಾಗ ನೋಡಿದರೂ ಕಣ್ಣು ಮುಚ್ಚಿಕೊಂಡು ಸುಮ್ಮನೆ 'ಭಗವಂತ, ಭಗವಂತ' ಅಂತ ಅಂತಲೇ ಇದೀರಿ! ಈ ಹುಚ್ಚುತನವನ್ನು ಬಿಟ್ಟುಬಿಡಿ.' "

ಒಬ್ಬ ಭಕ್ತ: "ಹೌದು, ಈ ಪ್ರತಿಬಂಧಕಗಳೆಲ್ಲಾ ಇವೆ. ಜೊತೆಗೆ ಮಕ್ಕಳು ಅವಿಧೇಯರೂ ಆಗಬಹುದು. ಈ ವಿಧದ ತೊಂದರೆಗಳಿಗೆ ಕೊನೆಯೆಂಬುದೇ ಇಲ್ಲ. ಆದ್ದರಿಂದ, ಮಹಾಶಯರೆ, ನಮಗೆ ಮಾರ್ಗ ವೇನು?"

ಶ್ರೀರಾಮಕೃಷ್ಣರು: "ಸಂಸಾರದಲ್ಲಿದ್ದು ಸಾಧನೆಮಾಡುವುದು ಎಂದರೆ ಬಹಳ ಕಷ್ಟ. ಅನೇಕ ಪ್ರತಿಕೂಲಗಳಿವೆ: ರೋಗ, ಶೋಕ, ದಾರಿದ್ರ್ಯ, ಹೆಂಡತಿಯೊಡನೆ ಒಮ್ಮನಸ್ಸಿಲ್ಲದಿರುವುದು, ಅವಿಧೇಯ ಮೂರ್ಖ ಹಠಮಾರಿ ಮಕ್ಕಳು ಹುಟ್ಟುವುದು ಇತ್ಯಾದಿ. ನಾನೇನೂ ನಿಮಗೆ ಇವುಗಳ ಪಟ್ಟಿಯನ್ನು ಕೊಡಬೇಕಾಗಿಲ್ಲ.

"ಆದರೂ ಮಾರ್ಗವಿದೆ. ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸಬೇಕು, ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಪ್ರಯತ್ನಮಾಡಬೇಕು."

ನೆರೆಯವ: "ಮನೆ ಬಿಟ್ಟು ಹೊರಗೆ ಹೋಗಿ ಇರಬೇಕೇ?"

ಶ್ರೀರಾಮಕೃಷ್ಣರು: "ಒಮ್ಮೊಗೇ ಏನಲ್ಲ. ಅವಕಾಶ ದೊರೆತಾಗ ಒಂದೊ ಎರಡೊ ದಿನದ ಮಟ್ಟಿಗೆ ಹೋಗಿ ನಿರ್ಜನಪ್ರದೇಶದಲ್ಲಿ ಇರಬೇಕು. ಆಗ ಹೊರ ಜಗತ್ತಿನೊಂದಿಗೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳ ಕೂಡದು; ಪ್ರಾಪಂಚಿಕರೊಡನೆ ಪ್ರಪಂಚದ ವಿಷಯವಾಗಿ ಒಂದು ಮಾತೂ ಆಡಕೂಡದು. ಸಾಧ್ಯವಾದರೆ ನಿರ್ಜನವಾಸ, ಇಲ್ಲದಿದ್ದರೆ ಸಾಧುಸಂಗ ಮಾಡುತ್ತಿರಬೇಕು."

ನೆರೆಯವ: "ಈತ ಸಾಧು ಎಂದು ಗುರುತಿಸುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಯಾರ ಮನಸ್ಸು, ಪ್ರಾಣ, ಅಂತರಾತ್ಮ ಭಗವದ್ಗತವಾಗಿದೆಯೊ ಆತನೇ ಸಾಧು. ಯಾರು ಕಾಮಕಾಂಚನ ತ್ಯಾಗಿಯೊ ಆತನೇ ಸಾಧು. ಯಾರು ಸಾಧುವೊ ಆತ ಹೆಂಗಸರನ್ನು ಎಂದಿಗೂ ಐಹಿಕ ದೃಷ್ಟಿಯಿಂದ ನೋಡುವುದಿಲ್ಲ. ಸರ್ವದಾ ಅವರಿಂದ ದೂರದಲ್ಲೇ ಇರುತ್ತಾನೆ. ಒಂದುಪಕ್ಷ ಅವರನ್ನು ಸಮೀಪಿಸಬೇಕಾಗಿ ಬಂದರೆ ಅವರನ್ನು ಮಾತೃದೃಷ್ಟಿಯಿಂದ ನೋಡುತ್ತ ಅವರನ್ನು ಪೂಜೆ ಮಾಡುತ್ತಾನೆ. ಸಾಧು ಯಾವಾಗಲೂ ಭಗವಚ್ಚಿಂತನೆಯನ್ನೇ ಮಾಡುತ್ತಾನೆ. ಭಗವತ್ಸಂಬಂಧವಾಗಿ ಹೊರತು ಬೇರೆ ಯಾವ ಮಾತನ್ನೂ ಆಡುವುದಿಲ್ಲ. ಸರ್ವಭೂತಗಳಲ್ಲಿಯೂ ಭಗವಂತನೇ ಇದಾನೆ ಎಂಬುದನ್ನು ಅರಿತು ಅವರ ಸೇವೆಯನ್ನು ಮಾಡುತ್ತಾನೆ. ಸಾಮಾನ್ಯವಾಗಿ ಇವು ಸಾಧುವಿನ ಲಕ್ಷಣಗಳು."

ನೆರೆಯವ: "ನಿರ್ಜನ ಪ್ರದೇಶದಲ್ಲಿ ಯಾವಾಗಲೂ ಇದ್ದುಕೊಂಡಿರಬೇಕಾಗುತ್ತದೆಯೇ?"

ಶ್ರೀರಾಮಕೃಷ್ಣರು: "ಫುಟ್‌ಪಾತಿನಲ್ಲಿರುವ ಮರಗಳನ್ನು ನೀನು ನೋಡಿಲ್ಲವೇನು? ಅವು ಸಸಿಯಾಗಿರುವವರೆಗೆ ಬೇಲಿ ಹಾಕಬೇಕು. ಇಲ್ಲದಿದ್ದರೆ ದನ ಕರು ಆಡು ಅವನ್ನು ತಿಂದುಬಿಡುತ್ತವೆ. ಆದರೆ ಗಿಡದ ಕಾಂಡ ದಪ್ಪವಾಯಿತು ಎಂದರೆ, ಬಳಿಕ ಬೇಲಿ ಬೇಕಾಗಿರುವುದಿಲ್ಲ. ಅನಂತರ ಅದಕ್ಕೆ ಆನೆಯನ್ನು ತಂದು ಕಟ್ಟಿದರೂ ಅದಕ್ಕೇನೂ ಆಗುವುದಿಲ್ಲ. ಅದೇ ರೀತಿಯಾಗಿ ನೀನು ಮನಸ್ಸನ್ನು ಬಲವಾದುದನ್ನಾಗಿ ಮಾಡಿಕೊಂಡುಬಿಟ್ಟಿದ್ದೇ ಆದರೆ ಇನ್ನು ಚಿಂತನೆಯೇನು, ಭಯವೇನು? ವಿವೇಕವನ್ನು ಗಳಿಸಿಕೊಳ್ಳಲು ಮೊದಲು ಪ್ರಯತ್ನಪಡು. ಕೈಗೆ ಎಣ್ಣೆ ಸವರಿ

ಕೊಂಡು ಹಲಸಿನಹಣ್ಣು ಬಿಡಿಸು. ಆಗ ಅದರ ಅಂಟು ಕೈಗೆ ಅಂಟಿ ಕೊಳ್ಳುವುದಿಲ್ಲ.''

ನೆರೆಯುವ: ''ಯಾವುದಕ್ಕೆ ವಿವೇಕ ಅಂತ ಹೆಸರು?.''

ಶ್ರೀರಾಮಕೃಷ್ಣರು: ''ಭಗವಂತನೊಬ್ಬನೇ ಸತ್, ಉಳಿದುದೆಲ್ಲಾ ಅಸತ್ ಎಂಬ ವಿಚಾರ. ಸತ್ ಎಂದರೆ ನಿತ್ಯವಾದ್ದು, ಅಸತ್ ಎಂದರೆ ಅನಿತ್ಯವಾದ್ದು. ಯಾರು ವಿವೇಕವನ್ನು ಗಳಿಸಿಕೊಂಡಿದಾರೊ ಅವರಿಗೆ ಗೊತ್ತಿದೆ ಭಗವಂತನೊಬ್ಬನೇ ವಸ್ತು, ಉಳಿದುದೆಲ್ಲಾ ಅವಸ್ತು ಎಂದು. ವಿವೇಕ ಉದಯವಾಯಿತು ಎಂದರೆ, ಭಗವಂತನನ್ನು ಅರಿಯಬೇಕು ಎಂಬ ಇಚ್ಛೆಯಾಗುತ್ತದೆ. ಅಸತ್ ವಸ್ತುಗಳನ್ನು, ಎಂದರೆ ದೇಹಸುಖ, ಲೋಕ ಮಾನ್ಯತೆ, ಹಣ ಇವೇ ಮೊದಲಾದುವನ್ನು ಪ್ರೀತಿಸಿದರೆ, ಸತ್ಸ್ವರೂಪನಾದ ಭಗವಂತನನ್ನು ಅರಿಯಲು ಇಚ್ಛೆಯುಂಟಾಗುವುದಿಲ್ಲ. ಸದಸದ್ವಿಚಾರ ಬಂದ ಮೇಲೇನೇ ಭಗವಂತನನ್ನು ಅರಸಲು ಇಚ್ಛೆಯುಂಟಾಗುತ್ತದೆ.

''ಒಂದು ಹಾಡನ್ನು ಕೇಳು:

ಸುಮ್ಮನೆ ತಿರುಗಾಟಕೆ ಬಾ ಮನವೇ<br>
ಶ್ರೀ ಕಾಳೀ ಸುರತರುವಿರುವೆಡೆಗೆ! . . . (ಉ. ೭೩೭)

''ಮನಸ್ಸಿನಲ್ಲಿ ನಿವೃತ್ತಿಯುಂಟಾಯಿತು ಎಂದರೆ, ವಿವೇಕ ಉದಯ ವಾಗುತ್ತದೆ. ವಿವೇಕ ಉದಯವಾಯಿತು ಎಂದರೆ, ತಾತ್ತ್ವಿಕ ಭಾವನೆ ಮನಸ್ಸಿನಲ್ಲಿ ಮೂಡುತ್ತದೆ. ಬಳಿಕ ಮನಸ್ಸು ಇಚ್ಛೆಪಡುತ್ತದೆ, 'ಶ್ರೀ ಕಾಳೀ ಸುರತರುವಿರುವೆಡೆಗೆ' ಹೋಗಲು. ಆ ಮರದ ಹತ್ತಿರಕ್ಕೆ ಹೋದರೆ, ಎಂದರೆ ಭಗವಂತನನ್ನು ಸಮೀಪಿಸಿದರೆ ಅನಾಯಾಸವಾಗಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಫಲಗಳು ದೊರೆಯುತ್ತವೆ. ಹೌದು, ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಮೇಲೆ, ಇಚ್ಛೆಯಿದ್ದರೆ ಸಂಸಾರಿ ಗಳಿಗೆ ಬೇಕಾದ ಧರ್ಮ, ಅರ್ಥ, ಕಾಮಗಳನ್ನು ಆತನಿಂದ ಪಡೆದುಕೊಳ್ಳ ಬಹುದು.''

ನೆರೆಯುವ: ''ಹಾಗಾದರೆ ಈ ಜಗತ್ತನ್ನ ಮಾಯೆ ಅಂತ ಏಕೆ ಹೇಳುತ್ತಾರೆ?''

ಶ್ರೀರಾಮಕೃಷ್ಣರು: ''ಭಗವಂತನ ಸಾಕ್ಷಾತ್ಕಾರ ದೊರೆಯುದವರೆಗೆ 'ನೇತಿ, ನೇತಿ' ಮಾರ್ಗವನ್ನು ಅನುಸರಿಸಿ ಈ ಜಗತ್ತನ್ನು ತ್ಯಜಿಸಬೇಕು. ಆದರೆ ಯಾರು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡಿದಾರೊ

ಅವರಿಗೆ ಗೊತ್ತಿದೆ ಆತನೇ ಎಲ್ಲವೂ ಆಗಿದ್ದಾನೆ ಎಂಬುದು. ಆಗ ಬೋಧೆಯಾಗುತ್ತದೆ, 'ಈಶ್ವರಮಯಾ ಜೀವಜಗತ್' ಎಂಬುದಾಗಿ. ಜೀವ ಜಗತ್ತೆಲ್ಲವೂ ಕೇವಲ ಆತನೇ. ಒಂದು ಪಕ್ಷ ನೀನು ಬೇಲದ ಹಣ್ಣನ್ನು ಒಡೆದು ಅದರ ಕರಟ, ತಿರುಳು, ಬೀಜ ಇವನ್ನು ಪ್ರತ್ಯೇಕಮಾಡಿರುವಾಗ ಒಬ್ಬ ಬಂದು ನಿನ್ನನ್ನು ಬೇಲದ ಹಣ್ಣಿನ ತೂಕ ಎಷ್ಟು ಎಂದು ಕೇಳುತ್ತಾನೆ ಅಂತ ಇಟ್ಟುಕೊ. ಆಗ ನೀನು ಕರಟ, ಬೀಜ ಇವನ್ನು ಬಿಸಾಡಿ ಕೇವಲ ತಿರುಳನ್ನು ಮಾತ್ರ ತೂಗಿ ನೋಡುವೆಯೇನು? ಎಂದಿಗೂ ಇಲ್ಲ. ಅದರ ನಿಜವಾದ ತೂಕ ಸಿಕ್ಕಬೇಕಾದರೆ ಕರಟ, ಬೀಜ, ತಿರುಳು ಮೂರನ್ನೂ ಸೇರಿಸಿ ತೂಗಬೇಕು. ಆಗ ಮಾತ್ರವೇ ನೀನು ಅದರ ತೂಕವನ್ನು, ಅದರ ನಿಜವಾದ ತೂಕವನ್ನು ಹೇಳಬಲ್ಲೆ. ಕರಟ ಈ ಜಗತ್ತು ಇದ್ದ ಹಾಗೆ, ಬೀಜಗಳೆಲ್ಲಾ ಜೀವಗಳು ಇದ್ದ ಹಾಗೆ. ವಿಚಾರದ ಅವಸ್ಥೆಯಲ್ಲಿ ಮನುಷ್ಯ ಭಾವಿಸುತ್ತಾನೆ, ಜೀವ ಜಗತ್ತು ಅನಾತ್ಮ — ಅವಸ್ತು ಎಂಬುದಾಗಿ. ಆ ಸಮಯದಲ್ಲಿ ಬೋಧೆಯಾಗುತ್ತದೆ, ತಿರುಳೇ ನಿಜವಾದ ಸಾರ, ಕರಟ ಬೀಜ ಅಸಾರ ಎಂಬುದಾಗಿ. ಆದರೆ ವಿಚಾರ ಮುಗಿದನಂತರ ಅವು ಮೂರೂ ಸೇರಿ ಒಂದು ಪೂರ್ಣ ವಸ್ತುವಾಗಿದೆ ಎಂಬ ಬೋಧೆಯಾಗುತ್ತದೆ. ಮತ್ತೆ ಬೋಧೆಯಾಗುತ್ತದೆ, ಯಾವ ವಸ್ತುವಿನಿಂದ ತಿರುಳು ಉದ್ಭವವಾಗಿದೆಯೊ, ಅದೇ ವಸ್ತುವಿನಿಂದ ಕರಟ, ಬೀಜ ಕೂಡ ಉದ್ಭವವಾಗಿವೆ ಅಂತ. ಬೇಲದ ಹಣ್ಣಿನ ನೈಜ ಸ್ವರೂಪವನ್ನು ಅರಿಯಬೇಕಾದರೆ ಅವು ಮೂರನ್ನೂ ಗಣನೆಗೆ ತೆಗೆದುಕೊಳ್ಳಬೇಕು.

"ಇದು ಅನುಲೋಮ ಮತ್ತು ವಿಲೋಮ. ಮಜ್ಜಿಗೆಯದೇ ಬೆಣ್ಣೆ, ಬೆಣ್ಣೆಯದೇ ಮಜ್ಜಿಗೆ. ಮಜ್ಜಿಗೆ ಎಂಬುದು ಇತ್ತು ಎಂದರೆ ಬೆಣ್ಣೆ ಎಂಬುದೂ ಇರಲೇ ಬೇಕು. ಬೆಣ್ಣೆ ಎಂಬುದು ಇತ್ತು ಎಂದರೆ ಮಜ್ಜಿಗೆಯೂ ಇರಲೇ ಬೇಕು. ಆತ್ಮವಿದ್ದುದೇ ಆದರೆ ಅನಾತ್ಮವೂ ಇರಲೇ ಬೇಕು.

"ನಿತ್ಯ ಯಾರದೊ ಆತನದೇ ಲೀಲೆ. ಲೀಲೆ ಯಾರದೊ ಆತನದೇ ನಿತ್ಯ. ಯಾರು ಈಶ್ವರನಾಗಿ ವ್ಯಕ್ತವಾಗಿದ್ದಾನೊ, ಆತನೇ ಈ ಜೀವ ಜಗತ್ತಾಗಿ ವ್ಯಕ್ತವಾಗಿದ್ದಾನೆ. ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೊ ಆತನಿಗೆ ಗೊತ್ತಿದೆ ಆತನೇ ಸಮಸ್ತವೂ, ಎಂದರೆ ತಾಯಿ ತಂದೆ, ಮಗು, ನೆರೆಯವ, ಜೀವ ಜಂತು, ಒಳ್ಳೆಯದು ಕೆಟ್ಟದ್ದು, ಶುಚಿ ಅಶುಚಿ, ಇತ್ಯಾದಿ ಆಗಿದ್ದಾನೆ ಎಂಬುದಾಗಿ."

ನೆರೆಯವ: "ಹಾಗಾದರೆ ಪಾಪ ಪುಣ್ಯ ಎಂಬುದೇನಿಲ್ಲವೇ ?"

ಶ್ರೀರಾಮಕೃಷ್ಣರು: "ಅವು ಇವೆ ಮತ್ತೆ ಇಲ್ಲ. ಭಗವಂತ ಮನುಷ್ಯನಲ್ಲಿ ಅಹಂತತ್ತ್ವವನ್ನು ಇಟ್ಟಿದ್ದೇ ಆದರೆ, ಆತ ಆತನಲ್ಲಿ ಭೇದ ಬುದ್ಧಿಯನ್ನೂ ಇಡುತ್ತಾನೆ, ಪಾಪಪುಣ್ಯ ಜ್ಞಾನವನ್ನೂ ಇಡುತ್ತಾನೆ. ಆದರೆ ಆತ ಎಲ್ಲೋ ಕೆಲವರ ಅಹಂಕಾರವನ್ನು ಮಾತ್ರ ಸಂಪೂರ್ಣವಾಗಿ ತೆಗೆದುಹಾಕಿಬಿಡುತ್ತಾನೆ. ಅವರು ಪಾಪಪುಣ್ಯ, ಒಳ್ಳೆಯದು ಕೆಟ್ಟದ್ದು ಇವನ್ನು ದಾಟಿಹೋಗಿಬಿಡುತ್ತಾರೆ. ಭಗವಂತನ ದರ್ಶನ ಆಗದವರೆಗೆ ಭೇದಬುದ್ಧಿ, ಒಳ್ಳೆಯದು ಕೆಟ್ಟದ್ದರ ಜ್ಞಾನ ಇದ್ದೇ ಇರುತ್ತದೆ. ನೀನು ಬಾಯಿಯಲ್ಲಿ ಬೇಕಾದರೆ ಹೇಳಿಬಿಡಬಹುದು: 'ನನಗೆ ಪಾಪ ಪುಣ್ಯ ಎರಡೂ ಒಂದೇ ಆಗಿಬಿಟ್ಟಿವೆ. ಭಗವಂತ ಮಾಡಿಸಿದ ಹಾಗೆ ಮಾಡುತ್ತೇನೆ.' ಆದರೆ ನಿನ್ನ ಅಂತರ್ಯದಲ್ಲಿ ನಿನಗೆ ಚೆನ್ನಾಗಿ ಗೊತ್ತಿದೆ, ಅವೆಲ್ಲ ಕೇವಲ ಬಾಯಿ-ಮಾತು ಮಾತ್ರ. ದುಷ್ಕಾರ್ಯಗಳಲ್ಲಿ ನೀನು ತೊಡುಗುವುದೇ ತಡ, ನಿನ್ನ ಹೃದಯ 'ಡಬ್, ಡಬ್' ಎಂದು ಹೊಡೆದುಕೊಳ್ಳಲಾರಂಭಿಸುತ್ತದೆ. ಭಗವಂತನ ಸಾಕ್ಷಾತ್ಕಾರ ಭಕ್ತನಿಗೆ ದೊರೆತ ಮೇಲೂ ಭಗವಂತ ಇಚ್ಛೆ ಪಡುವುದಾದರೆ ಆತ ಭಕ್ತನ ಹೃದಯದಲ್ಲಿ 'ದಾಸ ಅಹಂ' ಅನ್ನು ಇಡುತ್ತಾನೆ. ಆ ಅವಸ್ಥೆಯಲ್ಲಿ ಭಕ್ತ ಹೇಳುತ್ತಾನೆ: 'ಹೇ ಭಗವಂತ, ನಾನು ದಾಸ, ನೀನು ಪ್ರಭು.' ಅಂಥ ಭಕ್ತನಿಗೆ ಭಗವತ್ಕಥೆ, ಭಗವತ್ಕಾರ್ಯ ಮಾತ್ರ ರುಚಿಸುತ್ತವೆ. ಭಗವದ್ವಿಮುಖರಾದ ಜನರ ಸಹವಾಸ ಆತನಿಗೆ ರುಚಿಸದು. ಭಗವತ್ಸಂಬಂಧವಾದ ಕಾರ್ಯವಿನಾ ಬೇರೆ ಯಾವುದೂ ರುಚಿಸದು. ಈಗ ನಿನಗೆ ಸ್ಪಷ್ಟವಾಗಿರಬೇಕು, ಇಂಥ ಭಕ್ತರಲ್ಲೂ ಭಗವಂತ ಭೇದಬುದ್ಧಿಯನ್ನು ಇಡುತ್ತಾನೆ ಎಂಬುದು."

ನೆರೆಯವ: "ಮಹಾಶಯರೆ, ನೀವು ಹೇಳುತ್ತೀರಿ, ಭಗವಂತನನ್ನು ಅರಿತು ಸಂಸಾರದಲ್ಲಿರಿ ಎಂದು. ಏನು, ಆತನನ್ನು ನಿಜವಾಗಿ ಅರಿಯಬಹುದೆ ?"

ಶ್ರೀರಾಮಕೃಷ್ಣರು: "ಭಗವಂತನನ್ನು ಇಂದ್ರಿಯಗಳ ಮೂಲಕ ಅಥವಾ ಈ ಮನಸ್ಸಿನ ಮೂಲಕ ಅರಿಯಲಾಗುವುದಿಲ್ಲ; ಆದರೆ ಯಾವ ಮನಸ್ಸಿನಲ್ಲಿ ವಿಷಯರಸ ಎಂಬುದು ಇಲ್ಲವೇ ಇಲ್ಲವೊ ಅಂಥ ಶುದ್ಧ ಮನಸ್ಸಿನಿಂದ ಆತನನ್ನು ಅರಿಯಲು ಸಾಧ್ಯ."

ನೆರೆಯವ: "ಭಗವಂತನನ್ನು ಯಾರು ತಾನೆ ಅರಿಯಬಲ್ಲರು?"

ಶ್ರೀರಾಮಕೃಷ್ಣರು: "ನಿಜ, ಯಾರು ತಾನೆ ಆತನನ್ನು ನಿಜವಾಗಿ ಅರಿಯಬಲ್ಲರು? ನಮಗೆಷ್ಟು ಬೇಕೊ ಅಷ್ಟು ದೊರೆತರೇ ಸಾಕು. ಇಡೀ ಬಾವಿಯ ನೀರು ಏಕೆ ನನಗೆ ಬೇಕು? ಒಂದು ಹೂಜಿ ನೀರು ದೊರೆತರೇ ಬೇಕಾದಷ್ಟು. ಸಕ್ಕರೆಯ ಬೆಟ್ಟದ ಹತ್ತಿರಕ್ಕೆ ಒಂದು ಇರುವೆ ಹೋಯಿತು. ಅದಕ್ಕೆ ಇಡೀ ಗುಡ್ಡ ಏಕೆ ಬೇಕು? ಅದರ ಒಂದೆರಡು ಕಣವೇ ಅದಕ್ಕೆ ಯಥೇಷ್ಟ."

ನೆರೆಯವ: "ಮಹಾಶಯರೆ, ನಾವು ವಿಷಮಶೀತಜ್ವರದ ರೋಗಿ ಇದ್ದ ಹಾಗೆ. ನಮಗೆ ಒಂದು ಹೂಜಿ ನೀರು ಸಾಕಾಗುತ್ತದೆಯೆ? ಭಗವಂತನನ್ನ ಸಂಪೂರ್ಣವಾಗಿ ಅರಿತುಕೊಂಡುಬಿಡಬೇಕು ಅಂತ ಇಚ್ಛೆಯಾಗುತ್ತದೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಆದರೆ ವಿಷಮಶೀತ ಜ್ವರಕ್ಕೆ ಔಷಧವಿದೆ."

ನೆರೆಯವ: "ಮಹಾಶಯರೆ, ಯಾವ ಔಷಧ?"

ಶ್ರೀರಾಮಕೃಷ್ಣರು: "ಸಾಧುಸಂಗ, ಭಗವಂತನ ನಾಮಗುಣ ಕೀರ್ತನೆ, ಆತನನ್ನು ಸರ್ವದಾ ಪ್ರಾರ್ಥನೆಮಾಡುವುದು. ನಾನು ಭಗವತಿಗೆ ಪ್ರಾರ್ಥನೆ ಸಲ್ಲಿಸಿದೆ: 'ತಾಯೆ, ನನಗೆ ಜ್ಞಾನ ಬೇಕಾಗಿಲ್ಲ. ಇಗೋ ತೆಗೆದುಕೊ ನಿನ್ನ ಜ್ಞಾನವನ್ನ, ಇಗೋ ತೆಗೆದುಕೊ ನಿನ್ನ ಅಜ್ಞಾನವನ್ನ. ನನಗೆ ತಾಯೆ, ನಿನ್ನ ಪಾದಪದ್ಮಗಳಲ್ಲಿ ಶುದ್ಧಭಕ್ತಿಯನ್ನು ಮಾತ್ರ ನೀಡು.' ನಾನು ಇನ್ನು ಬೇರೆ ಯಾವುದಕ್ಕೂ ಪ್ರಾರ್ಥನೆಮಾಡಲಿಲ್ಲ.

"ರೋಗಕ್ಕೆ ತಕ್ಕಂತೆ ಔಷಧ ಹಾಕಬೇಕು. ಶ್ರೀ ಕೃಷ್ಣ ಗೀತೆಯಲ್ಲಿ ಹೇಳುತ್ತಾನೆ: 'ಓ ಅರ್ಜುನ, ನೀನು ನನ್ನಲ್ಲಿ ಶರಣುಹೊಂದು. ನಿನ್ನನ್ನು ಎಲ್ಲಾ ವಿಧದ ಪಾಪಗಳಿಂದ ಮುಕ್ತನನ್ನಾಗಿ ಮಾಡುತ್ತೇನೆ.' ಆತನಲ್ಲಿ ಶರಣಾಗತಿಯನ್ನು ಪಡೆ. ಆತ ಸದ್ಬುದ್ಧಿಯನ್ನು ಕೊಡುತ್ತಾನೆ. ನಿನ್ನ ಭಾರವನ್ನೆಲ್ಲಾ ಆತ ಹೊತ್ತುಕೊಳ್ಳುತ್ತಾನೆ. ಆಗ ವಿಷಮಶೀತಜ್ವರ ನಿನ್ನನ್ನು ಬಿಟ್ಟುತೊಲಗುವುದು. ಈ ನಮ್ಮ ಮನಸ್ಸಿನಿಂದ ಆತನನ್ನು ಅರಿತುಕೊಳ್ಳಲು ಸಾಧ್ಯವೇ? ಒಂದು ಸೇರಿನ ಪಾತ್ರೆ ನಾಲ್ಕು ಸೇರು ಹಾಲು ಹಿಡಿ

ಸುವುದೆ? ಆತನನ್ನು ಅರಿಯುವಂತೆ ಆತ ನಮ್ಮನ್ನು ಪ್ರಚೋದಿಸದ ಹೊರತು ಆತನನ್ನು ಅರಿಯಲಾಗುವುದೇ? ಅದಕ್ಕಾಗೇ ನಾನು ಹೇಳು ವುದು, ಆತನಲ್ಲಿ ಶರಣುಹೊಂದು; ಆತ ತನ್ನಿಚ್ಛೆಯಂತೆ ಮಾಡಲಿ ಎಂದು. ಆತ ಇಚ್ಛಾಮಯ. ಮನುಷ್ಯನಲ್ಲಿ ಯಾವ ಶಕ್ತಿ ತಾನೆ ಇದೆ?"



೧೬

## ದಕ್ಷಿಣೇಶ್ವರದಲ್ಲಿ ಭಕ್ತರೊಡನೆ (೨)

೯ನೆ ಡಿಸೆಂಬರ್ ೧೮೮೩, ಮಾರ್ಗಶಿರ ಶುಕ್ಲ ದಶಮಿ, ಭಾನುವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತಿದಾರೆ. ಅಧರಸೇನ, ಮನಮೋಹನ, ರಾಖಾಲ, ಮಾಸ್ಟರ್, ಹರೀಶ, ಇನ್ನೂ ಅನೇಕರು ಕೊಠಡಿಯಲ್ಲಿ ಕುಳಿತಿದಾರೆ. ಘಂಟೆ ಅಪರಾಹ್ನ ಎರಡು. ಪರಮಹಂಸರು ಅವರಿಗೆಲ್ಲಾ ಶ್ರೀ ಚೈತನ್ಯದೇವನ ದಿವ್ಯಭಾವವನ್ನು ವರ್ಣಿಸುತ್ತಿದಾರೆ.

ಶ್ರೀರಾಮಕೃಷ್ಣರು: "ಚೈತನ್ಯದೇವನಿಗೆ ಮೂರು ಅವಸ್ಥೆ ಉಂಟಾಗುತ್ತಿತ್ತು. ಮೊದಲನೆಯದು ಬಾಹ್ಯದಶೆ. ಆಗ ಆತನ ಮನಸ್ಸು ಸ್ಥೂಲ ಮತ್ತು ಸೂಕ್ಷ್ಮಗಳ ಮೇಲೆ ನೆಲಸಿರುತ್ತಿತ್ತು. ಎರಡನೆಯದು ಅರ್ಧಬಾಹ್ಯದಶೆ. ಆಗ ಆತನ ಮನಸ್ಸು ಕಾರಣಶರೀರವನ್ನು ಹೊಕ್ಕು, ಕಾರಣಾನಂದದಲ್ಲಿ ಮಗ್ನವಾಗಿರುತ್ತಿತ್ತು. ಮೂರನೆಯದು ಅಂತರ್ದಶೆ. ಆಗ ಆತನ ಮನಸ್ಸು ಮಹಾಕಾರಣದಲ್ಲಿ ಲಯವಾಗಿಬಿಡುತ್ತಿತ್ತು.

"ವೇದಾಂತದ ಪಂಚಕೋಶಗಳೊಡನೆ ಈ ಅವಸ್ಥೆಗಳು ಚೆನ್ನಾಗಿ ಹೊಂದಿಕೊಳ್ಳುತ್ತವೆ. ಸ್ಥೂಲಶರೀರವೆಂದರೆ, ಅನ್ನಮಯಕೋಶ ಮತ್ತು ಪ್ರಾಣಮಯಕೋಶ. ಸೂಕ್ಷ್ಮಶರೀರವೆಂದರೆ ಮನೋಮಯಕೋಶ ಮತ್ತು ವಿಜ್ಞಾನಮಯಕೋಶ. ಕಾರಣಶರೀರವೆಂದರೆ, ಆನಂದಮಯಕೋಶ. ಮಹಾಕಾರಣ,ಪಂಚಕೋಶಗಳಿಗೆ ಅತೀತವಾದ್ದು. ಚೈತನ್ಯದೇವನ ಮನಸ್ಸು ಮಹಾಕಾರಣದಲ್ಲಿ ಲಯವಾದಾಗ ಆತನಿಗೆ ಸಮಾಧಿಯುಂಟಾಗುತ್ತಿತ್ತು. ಅದಕ್ಕೇ ನಿರ್ವಿಕಲ್ಪ ಸಮಾಧಿ ಅಥವಾ ಜಡಸಮಾಧಿ ಎಂದು ಹೆಸರು.

"ಚೈತನ್ಯದೇವನಿಗೆ ಬಾಹ್ಯದಶೆ ಉಂಟಾಗುತ್ತಿದ್ದಾಗ ನಾಮಸಂಕೀರ್ತನೆ ಮಾಡುತ್ತಿದ್ದ; ಅರ್ಧಬಾಹ್ಯದಶೆಯಲ್ಲಿ ಭಕ್ತರೊಡನೆ ನರ್ತಿಸುತ್ತಿದ್ದ; ಅಂತರ್ದಶೆಯಲ್ಲಿ ಸಮಾಧಿಸ್ಥನಾಗುತ್ತಿದ್ದ."

ಮಾಸ್ಟರ್ ತನಗೆ ತಾನೇ: "ಪರಮಹಂಸರು ತಮ್ಮ ಅವಸ್ಥೆಗಳ ಸಂಬಂಧವಾಗೇ ಈ ರೀತಿಯಾಗಿ ಸೂಚಿಸುತ್ತಿದಾರೇನು? ಇವರಿಗೂ ಚೈತನ್ಯದೇವನಿಗೂ ಬಹುಮಟ್ಟಿಗೆ ಸಾಮ್ಯವಿದೆ."

ಶ್ರೀರಾಮಕೃಷ್ಣರು: "ಚೈತನ್ಯದೇವ ಭಕ್ತಿಯ ಅವತಾರ. ಭಗವಂತನನ್ನು ಯಾವ ರೀತಿಯಾಗಿ ಪ್ರೀತಿಸಬೇಕು ಎಂಬುದನ್ನು ತೋರಿಸ ಲೋಸುಗವೇ ಆತ ಅವತರಿಸಿದ್ದುದು. ಭಗವಂತನಲ್ಲಿ ಭಕ್ತಿಯುಂಟಾಗಿ ಬಿಟ್ಟಿತು ಎಂದರೆ, ಎಲ್ಲವೂ ದೊರೆತ ಹಾಗೇ. ಹಠಯೋಗದ ಆವಶ್ಯಕತೆ ಸ್ವಲ್ಪವೂ ಇರದು."

ಒಬ್ಬ ಭಕ್ತ: "ಮಹಾಶಯರೆ, ಹಠಯೋಗವೆಂಬುದು ಯಾವುದು?"

ಶ್ರೀರಾಮಕೃಷ್ಣರು: "ಹಠಯೋಗದಲ್ಲಿ ಶರೀರದಮೇಲೆ ಹೆಚ್ಚಾಗಿ ಮನಸ್ಸನ್ನಿಡಬೇಕಾಗುತ್ತದೆ. ಹಠಯೋಗಿ ತನ್ನ ಗುದದ್ವಾರಕ್ಕೆ ಬಿದಿರ ಕೊಳವೆಯನ್ನು ಸಿಕ್ಕಿಸಿಕೊಂಡು ಅದರ ಮೂಲಕ ನೀರೆಳೆದು ತನ್ನ ಕರುಳನ್ನು ತೊಳೆದುಕೊಳ್ಳುತ್ತಾನೆ. ಜನನೇಂದ್ರಿಯದ ಮೂಲಕ ಹಾಲು ತುಪ್ಪಗಳನ್ನು ಒಳಕ್ಕೆ ಸೆಳೆದುಕೊಳ್ಳುತ್ತಾನೆ. ಜಿಹ್ವಾಸಿದ್ಧಿಯನ್ನು ಅಭ್ಯಾಸಮಾಡುತ್ತಾನೆ. ನಿರ್ದಿಷ್ಟ ಆಸನದಲ್ಲಿ ಕುಳಿತು ದೇಹವನ್ನು ನೆಲದಿಂದ ಮೇಲಕ್ಕೆ ಏಳಿಸಿ ಗಾಳಿ ಯಲ್ಲಿ ತೇಲಾಡುವಂತೆ ಮಾಡುತ್ತಾನೆ. ಇವೆಲ್ಲಾ ಪ್ರಾಣವಾಯುವಿನ ಕ್ರಿಯೆ. ಒಬ್ಬ ತನ್ನ ಇಂದ್ರಜಾಲವನ್ನು ತೋರಿಸುತ್ತ ತೋರಿಸುತ್ತ ಇದ್ದ ಹಾಗೆ ನಾಲಗೆ ತಿರುಗಿಕೊಂಡು ಗಂಟಲಿಗೆ ಹೋಗಿ ಸಿಕ್ಕಿಕೊಂಡಿತು. ಒಡನೆ ಆತನ ಶರೀರ ಸ್ಥಿರವಾಗಿಬಿಟ್ಟಿತು. ಜನ ಭಾವಿಸಿದರು, ಆತ ಸತ್ತುಹೋದ ಎಂದು. ಬಳಿಕ ಅವರು ಆತನನ್ನು ಮಣ್ಣಿನಲ್ಲಿ ಹೂಳಿಬಿಟ್ಟರು. ಅನೇಕ ವರ್ಷಗಳವರೆಗೆ ಆತ ಆ ಅವಸ್ಥೆಯಲ್ಲೇ ಇದ್ದ. ಬಹಳ ವರ್ಷಗಳಾದ ನಂತರ ಆತನ ಗೋರಿ ಏನೋ ಕಾರಣದಿಂದ ಬಾಯಿ ತೆರೆಯಿತು. ಇದ್ದ ಕ್ಕಿದ್ದಹಾಗೆ ಆ ಮನುಷ್ಯನಿಗೆ ಪ್ರಜ್ಞೆ ಬಂತು. ಆತ ಒಡನೇ ಕೂಗಲಾರಂಭಿಸಿದ: 'ಮಾಯವೇ ಬಾ! ಮಾಟವೇ ಬಾ!' ಅಂತ. (ಎಲ್ಲರೂ ನಗುತ್ತಿದಾರೆ.) ಇವೆಲ್ಲಾ ಪ್ರಾಣವಾಯುವಿನ ಕ್ರಿಯೆಗಳು.

"ವೇದಾಂತವಾದಿಗಳು ಹಠಯೋಗಕ್ಕೆ ಮನ್ನಣೆ ಕೊಡುವುದಿಲ್ಲ. ಇದಲ್ಲದೆ ರಾಜಯೋಗವೆಂಬುದೂ ಇದೆ. ರಾಜಯೋಗದಲ್ಲಿ ಮನಸ್ಸಿನ ಮೂಲಕ, ಎಂದರೆ ಭಕ್ತಿ ಮತ್ತು ವಿಚಾರದ ಮೂಲಕ ಭಗವಂತನೊಡನೆ ಯೋಗವುಂಟಾಗುತ್ತದೆ. ಈ ಯೋಗವೇ ಒಳ್ಳೆಯದು. ಹಠಯೋಗ ಒಳ್ಳೆಯದಲ್ಲ. ಕಲಿಯುಗದಲ್ಲಿ ಅನ್ನಗತಪ್ರಾಣ."

ಪರಮಹಂಸರು ನಹಬತ್‌ಖಾನೆಯ ಬಳಿಯಲ್ಲಿರುವ ರಸ್ತೆಯಲ್ಲಿ ನಿಂತಿದಾರೆ. ಸರ್ವೆ ಮರದ ತೋಪಿನ ಕಡೆಯಿಂದ ತಮ್ಮ ಕೊಠಡಿಗೆ ಬರುತ್ತಿದ್ದ

ವರು, ಅಲ್ಲಿ ನಿಂತುಕೊಂಡಿದಾರೆ. ನೋಡುತ್ತಾರೆ, ಮಾಸ್ಟರ್ ನಹಬತ್ ಖಾನೆಯ ವರಾಂಡದ ಕಟಕಟೆಯ ಹಿಂದೆ ಕುಳಿತು ಗಭೀರ ಭಗವಚ್ಚಿಂತನೆ ಯಲ್ಲಿ ಮಗ್ನನಾಗಿದಾನೆ.

ಶ್ರೀರಾಮಕೃಷ್ಣರು: "ಓಹೊ! ನೀನಿಲ್ಲಿದೀಯಾ? ನಿನಗೆ ಬೇಗನೇ ದೊರೆಯುತ್ತದೆ. ಸ್ವಲ್ಪ ಮುಂದುವರಿದರೇ ಸಾಕು, ಬೇರೆ ಯಾರಾದರೂ ಬಂದು ಹೀಗೀಗೆ ಮಾಡಬೇಕು ಅಂತ ಹೇಳಿಕೊಟ್ಟುಬಿಡುತ್ತಾರೆ."

ಮಾಸ್ಟರ್ ಚಕಿತನಾಗಿ ಪರಮಹಂಸರ ಕಡೆ ನೋಡುತ್ತಿದಾನೆ. ಇನ್ನೂ ಆತ ತಾನು ಕುಳಿತಲ್ಲಿಂದ ಮೇಲಕ್ಕೆ ಎದ್ದಿಲ್ಲ.

ಶ್ರೀರಾಮಕೃಷ್ಣರು: "ಈಗ ನಿನಗೆ ಸಮಯ ಬಂದಿದೆ. ಸಕಾಲ ಬಾರದವರೆಗೆ ತಾಯಿ ಹಕ್ಕಿ ಮೊಟ್ಟೆಯನ್ನು ಒಡೆಯುವುದಿಲ್ಲ. ನಾನು ತಿಳಿಸಿದುದೇ ನಿಜವಾಗಿ ನಿನ್ನ ಆದರ್ಶ ಧ್ಯೇಯ."

ಪರಮಹಂಸರು ಮತ್ತೆ ಈಗ ಆತನ ಆದರ್ಶ ಧ್ಯೇಯವೇನೆಂಬುದನ್ನು ತಿಳಿಸಿದರು.

ಶ್ರೀರಾಮಕೃಷ್ಣರು: "ಎಲ್ಲರೂ ಕಠೋರ ತಪಸ್ಸಿನಲ್ಲಿ ತೊಡಗ ಬೇಕಾದ ಆವಶ್ಯಕತೆಯೇನಿಲ್ಲ. ಆದರೆ ನಾನು ಮಾತ್ರ ಬಹಳ ಕಷ್ಟಪಡ ಬೇಕಾಯಿತು. ಮಣ್ಣಿನ ಗುಡ್ಡೆಯನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ನೆಲದ ಮೇಲೆ ಬಿದ್ದಿರುತ್ತಿದ್ದೆ. ದಿನ ಹೇಗೆ ಕಳೆದುಹೋಗುತ್ತಿದ್ದುವೊ ಅದು ನನಗೆ ಗೊತ್ತಾಗುತ್ತಲೇ ಇರಲಿಲ್ಲ. ನಾನು ಕೇವಲ 'ತಾಯಿ! ತಾಯಿ!' ಎಂದು ಭಗವತಿಯನ್ನು ಕರೆಯುತ್ತ ಸುಮ್ಮನೆ ಅಳುತ್ತಿದ್ದೆ."

ಮಾಸ್ಟರ್ ಈಗ ಎರಡು ವರ್ಷಗಳಿಂದ ಪರಮಹಂಸರ ಹತ್ತಿರ ಬಂದು ಹೋಗುತ್ತಿದಾನೆ. ಆತ ಇಂಗ್ಲಿಷು ವಿದ್ಯಾಭ್ಯಾಸ ಮಾಡಿದ್ದುದರಿಂದ ಪಾಶ್ಚಾತ್ಯ ದರ್ಶನ ಮತ್ತು ವಿಜ್ಞಾನ ಶಾಸ್ತ್ರಗಳನ್ನು ಓದಲು ಇಚ್ಛೆಪಡುತ್ತಿದ್ದ ಮತ್ತು ಕೇಶವಸೇನನೇ ಮೊದಲಾದ ವಿದ್ವಾಂಸರ ಉಪನ್ಯಾಸ ಕೇಳಲು ಹಾತೊರೆಯುತ್ತಿದ್ದ. ಪರಮಹಂಸರು ಆತನನ್ನು ಆಗಾಗ "ಇಂಗ್ಲೀಷ್ ಮ್ಯಾನ್" ಅಂತ ಕರೆಯುತ್ತಿದ್ದರು. ಆದರೆ ಆತ ಪರಮಹಂಸರನ್ನು ದರ್ಶನಮಾಡಿದಂದಿನಿಂದ ಐರೋಪ್ಯ ವಿದ್ವಾಂಸರ ಗ್ರಂಥ ಮತ್ತು ಉಪ ನ್ಯಾಸ-ಗಿಪನ್ಯಾಸಗಳು ಆತನಿಗೆ ಬಹಳ ಸಪ್ಪೆಯಾಗಿ ತೋರುತ್ತಿವೆ. ಈಗ ಆತನಿಗೆ ಪರಮಹಂಸರ ದರ್ಶನವನ್ನು ಹಗಲಿರುಳೂ ಪಡೆಯುತ್ತಲೇ ಇರ ಬೇಕು ಮತ್ತು ಅವರ ಶ್ರೀಮುಖದಿಂದ ಬರುವ ಮಾತುಗಳನ್ನು ಕೇಳುತ್ತಲೇ

ಇರಬೇಕು ಎಂಬ ಉತ್ಕಟೇಚ್ಛೆಯುಂಟಾಗಿಬಿಟ್ಟಿದೆ. ಈಗ ಕೆಲವು ದಿನಗಳಿಂದ ಪರಮಹಂಸರ ಕೆಲವು ಉಕ್ತಿಗಳನ್ನು ಸದಾ ಮೆಲುಕುಹಾಕುತ್ತಿದಾನೆ. ಪರಮಹಂಸರು ಹೇಳಿದಾರೆ: "ಸಾಧನೆಯನ್ನು ಮಾಡಿದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು." ಮತ್ತೆ ಹೇಳಿದಾರೆ: "ಭಗವದ್ದರ್ಶನವೇ ಮಾನವ ಜೀವನದ ಉದ್ದೇಶ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಸ್ವಲ್ಪ ಸಾಧನೆಯಲ್ಲಿ ತೊಡಗಿದ್ದೇ ಆದರೆ, ಯಾರಾದರೂ ಬಂದು ಹೀಗೀಗೆ ಮಾಡಬೇಕು ಎಂದು ಹೇಳಿಕೊಟ್ಟುಬಿಡುತ್ತಾರೆ. ನೀನು ಏಕಾದಶೀವ್ರತವನ್ನು ಆಚರಿಸು.

"ನೀವು ನನಗೆ ಸೇರಿದವರು, ನನ್ನ ಸಂಬಂಧಿಗಳು; ಇಲ್ಲದಿದ್ದರೆ ಇಷ್ಟಾಗಿ ನೀನು ಇಲ್ಲಿಗೆ ಏಕೆ ಬರುತ್ತಿದ್ದೆ? ಕೀರ್ತನೆ ಕೇಳುತ್ತ ಕೇಳುತ್ತ ಇದ್ದ ಹಾಗೆ ರಾಖಾಲನ ದರ್ಶನವಾಯಿತು. ಆತ ವ್ರಜಗೋಪಾಲರ ಮಧ್ಯೆ ನಿಂತಿದ್ದ. ನರೇಂದ್ರ ಬಹಳ ಉಚ್ಚ ಮಟ್ಟದವನು. ಹಿರಾನಂದ ಕೂಡ; ಅವನದು ಎಂಥಾ ಮಗುವಿನಂಥ ಸ್ವಭಾವ! ಆತನ ಭಾವ ಎಷ್ಟು ಮಧುರವಾದುದು! ಆತನನ್ನು ನೋಡಬೇಕು ಅಂತಲೂ ಇಚ್ಛೆಯಾಗುತ್ತಿದೆ.

"ಒಮ್ಮೆ ನಾನು ಗೌರಾಂಗನ ಸಾಂಗೋಪಾಂಗಿಗಳನ್ನೆಲ್ಲಾ ನೋಡಿದೆ; ಭಾವದಲ್ಲಿ ಅಲ್ಲ, ಈ ಕಣ್ಣುಗಳಿಂದಲೇ. ಆಗ ನನಗೆ ಅಂಥ ಅವಸ್ಥೆ ಬಂದಿತ್ತು, ಎಲ್ಲಾ ದರ್ಶನಗಳನ್ನೂ ಈ ಕಣ್ಣುಗಳಿಂದಲೇ ನೋಡಬಹುದಾಗಿತ್ತು; ಈಗ ಭಾವದಲ್ಲಿ ಆಗುತ್ತಿವೆ. ನಾನು ಗೌರಾಂಗನ ಸಾಂಗೋಪಾಂಗಿಗಳನ್ನು ಈ ಕಣ್ಣಿನಿಂದಲೇ ನೋಡಿದೆ. ಅವರ ಮಧ್ಯದಲ್ಲಿ ನೀನೂ ಇದ್ದ ಹಾಗೆ ಇತ್ತು, ಬಲರಾಮನೂ ಇದ್ದ ಹಾಗೆ ಇತ್ತು. ನಾನು ಕೆಲವರನ್ನು ನೋಡಿದಾಗ ಥಟ್ಟನೆ ಎದ್ದುನಿಂತುಕೊಳ್ಳುವುದನ್ನು ನೀನು ನೋಡಿರಬಹುದು. ಏಕೆ ಗೊತ್ತೆ? ತನ್ನ ಸ್ವಂತದವರನ್ನ ಬಹಳ ಕಾಲವಾದ ಮೇಲೆ ದರ್ಶನಮಾಡಿದರೆ ಮನುಷ್ಯನಿಗೆ ಆ ರೀತಿಯಾಗಿ ಆಗುತ್ತದೆ.

"ಭಗವತಿಗೆ ಅಳುತ್ತ ಅಳುತ್ತ ಹೇಳುತ್ತಿದ್ದೆ: 'ತಾಯೆ, ಭಕ್ತರನ್ನು ನೋಡಬೇಕೆಂದು ನನ್ನ ಪ್ರಾಣ ಸುಮ್ಮನೆ ತವಕಪಡುತ್ತಿದೆ. ಅವರನ್ನು ಬೇಗ ನನ್ನ ಹತ್ತಿರಕ್ಕೆ ಕರೆತಂದುಬಿಡು.' ಆಗ ನನ್ನ ಮನಸ್ಸಿನಲ್ಲಿ ಏನೇನು ಇಚ್ಛೆಗಳು ಏಳುತ್ತಿದ್ದುವೊ, ಅವೆಲ್ಲಾ ಪೂರ್ಣಗೊಂಡುಬಿಡುತ್ತಿದ್ದುವು.

"ಜಪ, ಧ್ಯಾನಕ್ಕೆಂದು ಪಂಚವಟಿಯಲ್ಲಿ ತುಳಸಿಯ ವನವನ್ನು ಬೆಳಸಿದ್ದೆ. ಅದರ ಸುತ್ತ ಬಿದಿರ ಬೇಲಿಯನ್ನು ಹಾಕಬೇಕು ಎಂಬುದಾಗಿ

ಇಚ್ಛೆಯಾಯಿತು. ಸ್ವಲ್ಪ ದಿನಗಳಲ್ಲೇ ಗಂಗೆಯಲ್ಲಿ ಉಬ್ಬರ ಬಂದು ಒಂದು ಹೊರೆ ಬಿದಿರ ಕಡ್ಡಿಗಳನ್ನೂ, ಅದರೊಡನೆ ಸ್ವಲ್ಪ ದಾರವನ್ನೂ ನೇರವಾಗಿ ಪಂಚವಟಿಯ ದಡಕ್ಕೇ ಹೊತ್ತುತಂದು ಬಿಸಾಡಿತು. ದೇವಾಲಯದ ಒಬ್ಬ ಕೆಲಸಗಾರ ಅದನ್ನು ನೋಡಿ ಆನಂದದಿಂದ ಕುಣಿಯುತ್ತಾ ಬಂದು ಸಮಾಚಾರ ತಿಳಿಸಿದ.

"ನನಗೆ ಈ ಭಗವದವಸ್ಥೆ ಉಂಟಾದನಂತರ ಪೂಜೆಯ ಕೆಲಸ ಮಾಡಲಾಗಲಿಲ್ಲ. ಆಗ ನಾನು ಭಗವತಿಗೆ ಮೊರೆಯಿಟ್ಟೆ: 'ತಾಯೆ, ನನ್ನನ್ನು ನೋಡಿಕೊಳ್ಳೋರಾರು? ನನ್ನ ಯೋಗಕ್ಷೇಮವನ್ನು ನಾನೇ ನೋಡಿಕೊಳ್ಳುವಂಥ ಶಕ್ತಿ ನನಗಿಲ್ಲ. ನಿನ್ನ ಸಂಬಂಧವಾಗಿ ಕೇಳಬೇಕು ಅಂತ ಇಚ್ಛೆಯಾಗುತ್ತಿದೆ. ಭಕ್ತರಿಗೆ ಊಟಕ್ಕೆ ಹಾಕಬೇಕು ಅಂತ ಆಸೆಯಾಗುತ್ತಿದೆ. ದರಿದ್ರರು ಕಣ್ಣಿಗೆ ಬಿದ್ದರೆ ಏನಾದರೂ ಕೊಡಬೇಕು ಅಂತ ಬಯಕೆಯಾಗುತ್ತಿದೆ. ಇವೆಲ್ಲಾ ನಡೆಯುವ ಬಗೆ ಹೇಗೆ ತಾಯೆ? ಯಾರಾದರೂ ಒಬ್ಬ ಧನಿಕ ನನಗೆ ಸಹಾಯ ನೀಡುವಂತೆ ಮಾಡು.' ಅದಕ್ಕಾಗೇ ಮಥುರಬಾಬು ನನಗೆ ಅಷ್ಟೊಂದು ಸೇವೆ ಸಲ್ಲಿಸಿದುದು.

"ಮತ್ತೆ ಮೊರೆಯಿಟ್ಟೆ: 'ತಾಯೆ, ನನಗಂತೂ ಮಕ್ಕಳಾಗುವ ಹಾಗಿಲ್ಲ. ಆದರೆ ಇಚ್ಛೆಯಾಗುತ್ತಿದೆ ನನ್ನ ಹತ್ತಿರ ಶುದ್ಧಭಕ್ತನಾದ ಒಬ್ಬ ಯುವಕ ಸದಾ ಇರಬೇಕು ಎಂದು. ಅಂಥ ಒಬ್ಬ ಯುವಕನನ್ನು ನನಗೆ ದೊರಕಿಸಿಕೊಡು.' ಅದಕ್ಕಾಗೇ ರಾಖಾಲ ಬಂದು ನನ್ನನ್ನು ಸೇರಿದುದು. ಯಾರಾರನ್ನು ನನ್ನ ಸ್ವಂತದವರು ಎಂದು ನಾನು ಪರಿಗಣಿಸುತ್ತಿದೇನೊ ಅವರಲ್ಲಿ ಕೆಲವರು ನನ್ನ ಅಂಶ, ಮತ್ತೆ ಕೆಲವರು ನನ್ನ ಕಲಾ."

ಈಗ ಪರಮಹಂಸರು ಮಾಸ್ಟರೊಡನೆ ಪಂಚವಟಿಯ ಕಡೆ ಹೋಗುತ್ತಿದಾರೆ. ಅವರೊಡನೆ ಇನ್ನು ಬೇರೆ ಯಾರೂ ಇಲ್ಲ. ಪರಮಹಂಸರು ನಗುಮುಖರಾಗಿ ಆತನೊಡನೆ ತಮ್ಮ ಹಿಂದಿನ ಅನುಭವಗಳನ್ನು ತಿಳಿಸುತ್ತಾ ಹೋಗುತ್ತಿದಾರೆ.

ಶ್ರೀರಾಮಕೃಷ್ಣರು: "ನೋಡು, ಒಂದು ದಿನ ಕಾಳೀದೇವಾಲಯದಿಂದ ಹಿಡಿದು ಪಂಚವಟಿಯವರೆಗೂ ಮಲಗಿದ್ದ ಒಂದು ಅದ್ಭುತ ಮೂರ್ತಿಯನ್ನು ಕಂಡೆ. ಇದನ್ನು ನೀನು ನಂಬುತ್ತೀಯಾ?"

ಮಾಸ್ಟರ್ ಆಶ್ಚರ್ಯಚಕಿತನಾಗಿ ಸುಮ್ಮನೆ ಇದಾನೆ. ಈಗ ಆತ

ಹೇಳಿದ: ವಟಿಯಲ್ಲಿ ಒಂದು ಕೊಂಬೆಯಿಂದ ಒಂದೆರಡು ಎಲೆಗಳನ್ನು ಕಿತ್ತು ತನ್ನ ಜೇಬಿಗೆ ಹಾಕಿಕೊಳ್ಳುತ್ತಿದಾನೆ.

ಶ್ರೀರಾಮಕೃಷ್ಣರು: "ಅಲ್ಲಿ ನೋಡು — ಆ ಕೊಂಬೆ ಮುರಿದು ಬಿದ್ದಿದೆ. ಅದರ ಕೆಳಗೆ ನಾನು ಕುಳಿತುಕೊಳ್ಳುತ್ತಿದ್ದೆ."

ಮಾಸ್ಟರ್: "ನಾನು ಇದರಿಂದ ಒಂದು ಕೊಂಬೆ ಕಡಿದುಕೊಂಡು ಹೋಗಿ ಮನೆಯಲ್ಲಿ ನೆಟ್ಟಿದೇನೆ."

ಶ್ರೀರಾಮಕೃಷ್ಣರು ನಗುತ್ತ: "ಏಕೆ?"

ಮಾಸ್ಟರ್: "ಅದನ್ನು ನೋಡಿದರೆ ನನಗೆ ಆನಂದವಾಗುತ್ತದೆ. ಎಲ್ಲ ಮುಗಿದನಂತರ ಈ ಸ್ಥಳ ಮಹಾತೀರ್ಥವಾಗುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಎಂಥ ತೀರ್ಥಸ್ಥಳ? ಪಾನಿಹಾಟಿಯ ಹಾಗೇನು?"

ಪರಮಹಂಸರು ಈಗ ಕೆಲವು ವರ್ಷಗಳಿಂದ ಪ್ರಾಯಿಕವಾಗಿ ಪ್ರತಿ ವರ್ಷವೂ ಪಾನಿಹಾಟಿಯ ಮಹೋತ್ಸವಕ್ಕೆ ಹೋಗಿಬರುತ್ತಿದಾರೆ.

ಸಾಯಂಕಾಲವಾಗುತ್ತಿದೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಭಗವತಿಯ ಧ್ಯಾನದಲ್ಲಿ ಮಗ್ನರಾಗಿದಾರೆ. ಈಗ ದೇವಾಲಯಗಳಲ್ಲಿ ಮಂಗಳಾರತಿ ಆರಂಭವಾಗಿದೆ. ಶಂಖ, ಜಾಗಟೆ ಗಂಟೆಗಳ ಧ್ವನಿ ಕೇಳಿಬರುತ್ತಿದೆ. ಇಂದಿನ ರಾತ್ರಿಯನ್ನು ಮಾಸ್ಟರ್ ಇಲ್ಲೇ ಕಳೆಯುತ್ತಾನೆ.

ಸ್ವಲ್ಪ ಹೊತ್ತಾದನಂತರ ಪರಮಹಂಸರು ಮಾಸ್ಟರಿಗೆ ಹೇಳಿದರು, ಭಕ್ತಮಾಲೆಯಿಂದ ತಮಗೊಂದು ಕಥೆಯನ್ನು ಓದಿ ಹೇಳುವಂತೆ.

ಮಾಸ್ಟರ್ ಈಗ ಓದುತ್ತಿದಾನೆ:

ಒಂದು ಪ್ರದೇಶದಲ್ಲಿ ಜಯಮಲ್ ಎಂಬ ಹೆಸರಿನ ಒಬ್ಬ ದೊಡ್ಡ ಭಕ್ತನಿದ್ದ. ಆತ ಕೃಷ್ಣನಲ್ಲಿಟ್ಟಿದ್ದ ಪ್ರೀತಿ ಅನಿರ್ವಚನೀಯವಾದುದಾಗಿತ್ತು. ಕೃಷ್ಣನ ಪೂಜೆಗೆ ಸಲ್ಲಬೇಕಾದ ಎಲ್ಲಾ ಕ್ರಿಯಾಕರ್ಮಗಳನ್ನೂ ವಿಶೇಷವಾದ ಶ್ರದ್ಧಾಭಕ್ತಿಯಿಂದ ಎಂದಿಗೂ ತಪ್ಪದ ರೀತಿಯಲ್ಲಿ ನಡಸಿಕೊಂಡುಬರುತ್ತಿದ್ದ. ಆ ಕೃಷ್ಣವಿಗ್ರಹವನ್ನು ಶ್ಯಾಮಲಸುಂದರ ಎಂಬ ಹೆಸರಿನಿಂದ ಪೂಜಿಸುತ್ತಿದ್ದ. ಸಂಪೂರ್ಣವಾಗಿ ತನ್ನ ಇಷ್ಟ ದೇವನಲ್ಲೇ ತೃಪ್ತನಾಗಿದ್ದುದರಿಂದ ಆತ ತನ್ನ ಮನಸ್ಸನ್ನು ಬೇರೆ ಯಾವ ದೇವ ದೇವಿಯರ ಕಡೆಗೂ ಹರಿಸುತ್ತಿರಲಿಲ್ಲ. ಶ್ಯಾಮಲಸುಂದರನ ಪೂಜೆಪುರಸ್ಕಾರಗಳಲ್ಲಿ ದಿನವೂ ಬಹುಮಟ್ಟಿಗೆ ಮಧ್ಯಾಹ್ನದವರೆಗೆ ತಾನು ನಿರತನಾಗಿರಬೇಕೆಂಬುದೇ ಆತನ

ಅಚಲ ನಿಷ್ಠೆ. ರಾಜ್ಯ, ಧನ ಕಳೆದುಕೊಳ್ಳಬೇಕಾಗಿ ಬಂದರೂ ಸ್ವಲ್ಪವೂ ತನ್ನ ಈ ನಿಷ್ಠೆಯನ್ನು ಪರಿಪಾಲಿಸಿಕೊಂಡು ಬರುತ್ತಿದ್ದ. ಇದು ಶತ್ರು ರಾಜನಿಗೆ ಗೊತ್ತಾಗಿ, ಆತ ದಂಡೆತ್ತಿಬಂದು ಬೆಳಗಿನ ವೇಳೆ ಪಟ್ಟಣವನ್ನು ಮುತ್ತಿದ. ಜಯ ಮಲ್ಲನಿಂದ ಆಜ್ಞೆ ಬಾರದಿದ್ದುದರಿಂದ, ಆತನ ಸೇನೆ ಶತ್ರು ರಾಜನನ್ನು ಎದುರಿಸ ಲಿಲ್ಲ; ಆದ್ದರಿಂದ ಶತ್ರುರಾಜ ಪಟ್ಟಣವನ್ನು ಮುತ್ತುತ್ತಿರುವುದನ್ನು ಸುಮ್ಮನೆ ನೋಡಲಾರಂಭಿಸಿತು. ಶತ್ರುವಿನ ಸೇನೆ ಸಾವಕಾಶವಾಗಿ ರಾಜಧಾನಿಯ ಕಂದಕ ವನ್ನು ಸುತ್ತುಗಟ್ಟಿತು; ಆದರೂ ಜಯಮಲ್ಲ ಪೂಜಾಗೃಹವನ್ನು ಬಿಟ್ಟು ಹೊರಕ್ಕೆ ಬರಲಿಲ್ಲ. ಜಯಮಲ್ಲನ ತಾಯಿ ಆತನನ್ನು ಸಮೀಪಿಸಿ ಬಹಳವಾಗಿ ಅಳುತ್ತ ಶತ್ರು ವನ್ನು ಎದುರಿಸುವಂತೆ ಕೇಳಿಕೊಂಡಳು. ಆತ ಶಾಂತವಾಗೇ ಆಕೆಗೆ ಉತ್ತರವಿತ್ತ: "ಏಕಮ್ಮ ಇಷ್ಟೊಂದು ದುಃಖಿಸುತ್ತಿದೀಯೆ? ಈ ರಾಜ್ಯವನ್ನು ಶ್ಯಾಮಲಸುಂದರ ನನಗೆ ಕೊಟ್ಟ. ಆತನೇನಾದರೂ ನನ್ನಿಂದ ಕಿತ್ತುಕೊಂಡುಬಿಡಬೇಕು ಎಂದು ಇಚ್ಛೆಪಟ್ಟಿದ್ದರೆ ಆದರೆ ನಾನು ಏನುಮಾಡಲು ತಾನೆ ಸಾಧ್ಯವಾದೀತು? ಆದರೆ ಆತ ನನ್ನನ್ನು ರಕ್ಷಿಸಿದ್ದೇ ಆದರೆ ಯಾರೂ ನನಗೇನೂ ಮಾಡಲಾರರು. ಬರಿದೆ ನಮ್ಮ ಸ್ವಪ್ರಯತ್ನ ವ್ಯರ್ಥ!"

ಇಷ್ಟರಲ್ಲಿ ವಾಸ್ತವಿಕವಾಗಿಯೂ ಶ್ಯಾಮಲಸುಂದರನೇ ಶಸ್ತ್ರಸಜ್ಜಿತನಾಗಿ ದೊರೆಯ ಕುದುರೆಯನ್ನು ಹತ್ತಿ ಯುದ್ಧರಂಗಕ್ಕೆ ಹೋಗಿಬಿಟ್ಟಿದ್ದ. ಅಲ್ಲಿ ತಾನೊಬ್ಬನೇ ಶತ್ರುರಾಜನನ್ನು ಎದುರಿಸಿ, ಆತನ ಸೇನೆಯನ್ನೆಲ್ಲಾ ಧ್ವಂಸಮಾಡಿ ಬಿಟ್ಟ. ಶತ್ರುವನ್ನು ಸಂಪೂರ್ಣವಾಗಿ ನಾಶಮಾಡಿದನಂತರ ಶ್ಯಾಮಲಸುಂದರ ದೇವಾಲಯಕ್ಕೆ ಹಿಂದಿರುಗಿಬಂದು ಕುದುರೆಯನ್ನು ಅದರ ಹತ್ತಿರ ಕಟ್ಟಿಹಾಕಿದ.

ಜಯಮಲ್ಲ ಪೂಜೆಯನ್ನು ಮುಗಿಸಿದನಂತರ ಹೊರಗೆ ಬಂದು ನೋಡುತ್ತಾನೆ, ತನ್ನ ಕುದುರೆ ಬೆವರಿನಿಂದ ಪೂರ್ಣವಾಗಿ ತೊಯ್ದುಹೋಗಿದೆ ಮತ್ತು ಸುಮ್ಮನೆ ಏದುತ್ತಿದೆ. ಆತ ವಿಚಾರಿಸಿದ: "ನನ್ನ ಕುದುರೆಯನ್ನು ಹತ್ತಿಹೋಗಿದ್ದವರು ಯಾರು? ಯಾರು ಅದನ್ನು ತಂದು ಇಲ್ಲಿ ಕಟ್ಟಿಹಾಕಿದರು?" ಅಧಿಕಾರಿಗಳು ಆತನಿಗೆ ತಿಳಿಸಿದರು, ತಮಗೆ ಇದರ ಸಂಬಂಧವಾಗಿ ಏನೂ ಗೊತ್ತಿಲ್ಲ ಎಂದು. ದೊರೆ ಚಿಂತಾಕ್ರಾಂತನಾಗಿ ತನ್ನ ಸೇನೆಯೊಡನೆ ಯುದ್ಧರಂಗಕ್ಕೆ ಹೋದ. ಅಲ್ಲಿ ಅವನ ಆಶ್ಚರ್ಯಕ್ಕೆ ಶತ್ರುರಾಜ ಒಬ್ಬ ವಿನಾ ಉಳಿದವರೆಲ್ಲಾ ಸತ್ತುಬಿದ್ದಿದ್ದಾರೆ. ಜಯ ಮಲ್ಲ ಈ ಅದ್ಭುತ ಕಾರ್ಯದ ರಹಸ್ಯವನ್ನರಿಯಲಾರದೆ ಬಿಟ್ಟ ಕಣ್ಣು ಬಿಟ್ಟಹಾಗೆ ತನ್ನೆದುರಿಗೆ ಕಾಣುತ್ತಿರುವ ದೃಶ್ಯವನ್ನು ನೋಡಲಾರಂಭಿಸಿದ. ಅಷ್ಟರಲ್ಲಿ ಶತ್ರುರಾಜ ಜಯಮಲ್ಲನನ್ನು ಸಮೀಪಿಸಿ ಆತನಿಗೆ ಸಾಷ್ಟಾಂಗಪ್ರಣಾಮ ಮಾಡಿ

ಹೇಳಿದ: "ನನ್ನ ಅಂತರ್ಯದಲ್ಲಿರುವುದನ್ನು ನಿವೇದಿಸಿಕೊಳ್ಳಲು ನೀವು ನನಗೆ ಅನುಮತಿಯನ್ನೀಯಬೇಕು. ನಾನು ಯುದ್ಧಮಾಡುವ ಬಗೆ ಹೇಗೆ? ನಿಮ್ಮ ಹತ್ತಿರ ಇಡೀ ವಿಶ್ವವನ್ನೇ ಗೆಲ್ಲಬಲ್ಲ ಯೋಧನಿದಾನೆ. ನನಗೆ ನಿಮ್ಮ ರಾಜ್ಯವೇ ಆಗಲಿ, ಧನಕನಕಾದಿಗಳೇ ಆಗಲಿ ಬೇಕಾಗಿಲ್ಲ; ನೀವು ನಿಮ್ಮ ಆ ಸ್ನೇಹಿತ ಇದಾನಲ್ಲ, ಆ ನೀಲಿ ಬಣ್ಣದ ಯೋಧ, ಆತನ ಸಂಬಂಧವಾಗಿ ನನಗೆ ತಿಳಿಸುವುದಾದರೆ ನಾನು ಖಂಡಿತವಾಗಿಯೂ ನನ್ನ ರಾಜ್ಯವನ್ನು ನಿಮಗೆ ಕೊಟ್ಟುಬಿಡುತ್ತೇನೆ. ನಾನು ಆತನ ಕಡೆ ನನ್ನ ಕಣ್ಣುಹಾಕುವುದೇ ತಡ ಆತ ನನ್ನ ಹೃದಯ ಮತ್ತು ಜೀವವನ್ನು ವಶಮಾಡಿಕೊಂಡುಬಿಟ್ಟ."

ಆಗ ಜಯಮಲ್ಲನಿಗೆ ಅರ್ಥವಾಯಿತು, ಯುದ್ಧರಂಗಕ್ಕೆ ಬಂದಿದ್ದವನು ಶ್ಯಾಮಲಸುಂದರನಲ್ಲದೆ ಇನ್ನು ಬೇರೆ ಯಾರೂ ಅಲ್ಲ ಎಂದು. ಶತ್ರುರಾಜನಿಗೂ ವಾಸ್ತವಿಕತೆ ಗೊತ್ತಾಯಿತು. ಆಗ ಆತ ಜಯಮಲ್ಲನಿಗೆ ಮತ್ತೆ ಸಾಷ್ಟಾಂಗಪ್ರಣಾಮ ಮಾಡಿ, ಆತನ ಆಶೀರ್ವಾದವನ್ನು ಪಡೆದುಕೊಂಡು ಶ್ರೀಕೃಷ್ಣನ ಕೃಪೆಗೆ ಪಾತ್ರನಾದ.

ಶ್ರೀರಾಮಕೃಷ್ಣರು: "ನಿನಗೆ ಇವುಗಳಲ್ಲಿ ನಂಬಿಕೆ ಇದೆಯೆ? ಶ್ರೀಕೃಷ್ಣ ಕುದುರೆಯನ್ನು ಹತ್ತಿಹೋಗಿ ಜಯಮಲ್ಲನ ಶತ್ರುಸೈನ್ಯವನ್ನು ನಾಶಮಾಡಿಬಂದುದನ್ನು ನೀನು ನಂಬುತ್ತೀಯಾ?"

ಮಾಸ್ಟರ್: "ಜಯಮಲ್ಲ ಶ್ರೀಕೃಷ್ಣನನ್ನು ಅತ್ಯಂತ ವ್ಯಾಕುಲ ಹೃದಯದಿಂದ ಪ್ರಾರ್ಥನೆಮಾಡಿದ ಎಂಬುದನ್ನು ನಂಬುತ್ತೇನೆ. ಶ್ರೀಕೃಷ್ಣ ಕುದುರೆಯನ್ನು ಹತ್ತಿ ಅಲ್ಲಿಗೆ ಬಂದುದನ್ನು ಶತ್ರುರಾಜ ನಿಜವಾಗಿ ನೋಡಿದನೇ ಎಂಬುದರಲ್ಲಿ ಸಂದೇಹವುಂಟಾಗುತ್ತಿದೆ. ಶ್ರೀಕೃಷ್ಣನೇನೊ ಸವಾರನಾಗಿ ಅಲ್ಲಿಗೆ ಬಂದಿದ್ದರೂ ಬಂದಿರಬಹುದು, ಆದರೆ ಅವರು ಆತನನ್ನು ನಿಜವಾಗಿ ನೋಡಿದರೇ ಎಂಬ ಸಂದೇಹ ನನಗೆ."

ಶ್ರೀರಾಮಕೃಷ್ಣರು ನಗುತ್ತ: "ಈ ಪುಸ್ತಕದಲ್ಲಿ ಭಕ್ತರ ಅನೇಕ ಒಳ್ಳೆ ಕಥೆ ಇವೆ. ಆದರೆ ಎಲ್ಲಾ ಒಂದು ಸ್ವರದವೇ. ಅನ್ಯ ಮತದವರ ನಿಂದೆ ಈ ಪುಸ್ತಕದಲ್ಲಿದೆ."

ಮಾರನೆಯ ಪ್ರಾತಃಕಾಲ ಪರಮಹಂಸರು ಮತ್ತು ಮಾಸ್ಟರ್ ಉದ್ಯಾನಪಥದಲ್ಲಿ ನಿಂತು ಮಾತುಕತೆಯಾಡುತ್ತಿದಾರೆ.

ಮಾಸ್ಟರ್: "ಹಾಗಾದರೆ, ನಾನು ಇಲ್ಲೇ ಬಂದು ಇದ್ದುಬಿಡುತ್ತೇನೆ."

ಶ್ರೀರಾಮಕೃಷ್ಣರು: ಒಳ್ಳೇದು, ನೀವು ಇಲ್ಲಿಗೆ ಇಷ್ಟೊಂದಾಗಿ ಬರುತ್ತಾ ಇದೀರಲ್ಲ, ಇದರ ಅರ್ಥವೇನು? ಜನರು ಸಾಧುಗಳನ್ನು ಎಲ್ಲೊ ಒಂದು ಸಲ ಬಂದು ನೋಡಿಹೋಗುತ್ತಾರೆ. ಆದರೆ ನೀವು ಇಲ್ಲಿಗೆ ಅಡಿಗಡಿಗೆ ಬರುತ್ತಲೇ ಇದೀರಲ್ಲ, ಇದರ ಉದ್ದೇಶವೇನು?''

ಮಾಸ್ಟರ್ ಸುಮ್ಮನೆ ನಿಂತಿದಾನೆ. ಪರಮಹಂಸರೇ ತಮ್ಮ ಪ್ರಶ್ನೆಗೆ ಉತ್ತರವೀಯುತ್ತಿದಾರೆ.

ಶ್ರೀರಾಮಕೃಷ್ಣರು: ''ನೀನು ನನ್ನ ಅಂತರಂಗಕ್ಕೆ ಸೇರಿಲ್ಲದವನಾಗಿದ್ದರೆ ಇಷ್ಟೊಂದಾಗಿ ಇಲ್ಲಿಗೆ ಬರುತ್ತಾ ಇದ್ದೆಯಾ? ಅಂತರಂಗದವರು ಎಂದರೆ ಸಂಬಂಧಿಗಳು; ತಂದೆ, ತಾಯಿ, ಮಗು, ಸೋದರಿಯರ ಹಾಗೆ ಸ್ವಂತದವರು.

''ಎಲ್ಲವನ್ನೂ ಹೇಳಿಬಿಡುತ್ತಿಲ್ಲ. ಹಾಗೆ ಮಾಡಿಬಿಟ್ಟರೆ ನೀವು ಮತ್ತೆ ಇಲ್ಲಿಗೆ ಬರುತ್ತೀರೇನು?

''ಶುಕದೇವ ಬ್ರಹ್ಮಜ್ಞಾನವನ್ನು ಪಡೆದುಕೊಳ್ಳಲು ಜನಕರಾಜನನ್ನು ಸಮೀಪಿಸಿದ. ಜನಕ ಆತನಿಗೆ ಹೇಳಿದ: 'ಮೊದಲು ಗುರುದಕ್ಷಿಣೆ ಕೊಟ್ಟುಬಿಡು.' ಅದಕ್ಕೆ ಶುಕದೇವ ಉತ್ತರವಿತ್ತ: 'ಉಪದೇಶ ಪಡೆಯದೆ ಗುರುದಕ್ಷಿಣೆ ಕೊಡುವ ಬಗೆ ಹೇಗೆ?' ಜನಕರಾಜ ಆಗ ನಗುತ್ತ ನಗುತ್ತ ಹೇಳಿದ: 'ನಿನಗೆ ಬ್ರಹ್ಮಜ್ಞಾನ ದೊರೆತುಬಿಟ್ಟದ್ದೇ ಆದರೆ, ಬಳಿಕ ನಿನ್ನಲ್ಲಿ ಗುರುಶಿಷ್ಯಬೋಧೆ ಉಳಿಯುವುದೆ? ಅದಕ್ಕಾಗೇ ನಾನು ಮೊದಲೇ ಗುರುದಕ್ಷಿಣೆ ಕೇಳಿದ್ದು.' ''

ಈಗ ರಾತ್ರಿ. ಚಂದ್ರೋದಯವಾಗಿದೆ. ಮಾಸ್ಟರ್ ಕಾಳೀದೇವಾಲಯದ ಉದ್ಯಾನಪಥದಲ್ಲಿ ಸುಮ್ಮನೆ ಅಡ್ಡಾಡುತ್ತಿದಾನೆ. ಪಥದ ಒಂದು ಕಡೆಯಲ್ಲಿ ಪರಮಹಂಸರ ಕೊಠಡಿ, ನಹಬತ್‌ಖಾನೆ, ಬಕುಳತೋಪು, ಪಂಚವಟಿ ಇವೆ. ಇನ್ನೊಂದು ಕಡೆಯಲ್ಲಿ ಭಾಗೀರಥಿ ಜ್ಯೋತ್ಸ್ನಾಮಯಿಯಾಗಿ ಹರಿಯುತ್ತಿದಾಳೆ.

ಮಾಸ್ಟರ್ ತನಗೆ ತಾನೇ: ''ಏನು, ನಿಜವಾಗಿಯೂ, ಭಗವಂತನನ್ನು ದರ್ಶನಮಾಡಲು ಸಾಧ್ಯವೆ? ಪರಮಹಂಸರೇನೊ ಹೇಳುತ್ತಿದಾರೆ ಸಾಧ್ಯ ಅಂತ. ಅವರು ಹೇಳುತ್ತಿದಾರೆ, ಏನಾದರೂ ಸ್ವಲ್ಪ ಸಾಧನೆಯನ್ನು ಮಾಡಿದ್ದೇ ಆದರೆ, ಯಾರಾದರೂ ಬಂದು 'ಹೀಗೆ, ಹೀಗೆ' ಅಂತ ಹೇಳಿಕೊಟ್ಟುಬಿಡುತ್ತಾರೆ ಎಂದು. ಎಂದರೆ ಸಾಧನೆಯ ವಿಷಯವಾಗಿ

ಅವರು ಸ್ವಲ್ಪ ಹೇಳಿಕೊಟ್ಟಂತೇ ಆಯಿತು. ಒಳ್ಳೇದು, ನಾನೊಬ್ಬ ವಿವಾಹಿತ ಮನುಷ್ಯ. ಮಕ್ಕಳು ಮರಿ ಇವೆ. ಆದರೂ ನನಗೆ ಭಗವಂತನ ಸಾಕ್ಷಾತ್ಕಾರ ದೊರಕುವುದೇ?''

ಮಾಸ್ಟರ್ ಸ್ವಲ್ಪ ಹೊತ್ತು ಹಾಗೇ ಯೋಚಿಸಿ ಮತ್ತೆ ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: ''ಖಂಡಿತ ಸಾಧ್ಯ. ಇಲ್ಲದಿದ್ದರೆ ಪರಮಹಂಸರು ಹಾಗೆ ಏಕೆ ಹೇಳುತ್ತಿದ್ದರು? ಭಗವಂತ ಕೃಪೆಮಾಡುವುದಾದರೆ ಸಾಧ್ಯವಾಗದೆ ಏನು?

''ನನ್ನ ಸುತ್ತ ಈ ಜಗತ್ತು ಇದೆ—ಸೂರ್ಯ, ಚಂದ್ರ, ನಕ್ಷತ್ರ, ಜೀವ, ಚತುರ್ವಿಂಶತಿ ತತ್ತ್ವ ಇವುಗಳಿಂದ ಕೂಡಿದೆ. ಇವೆಲ್ಲಾ ಬಂದ ಬಗೆ ಹೇಗೆ? ಇವುಗಳ ಸೃಷ್ಟಿಕರ್ತ ಯಾರು? ನನಗೂ ಆತನಿಗೂ ಸಂಬಂಧವೇನು? ಇವನ್ನೆಲ್ಲಾ ಅರಿಯದಿದ್ದರೆ ಜೀವನ ಬರಿದೆ ವ್ಯರ್ಥ.

''ಪರಮಹಂಸರು ಪುರುಷಶ್ರೇಷ್ಠರು. ನನ್ನ ಇಡೀ ಜೀವನದಲ್ಲಿ ಇದುವರೆಗೆ ಇಂಥ ಮಹಾಪುರುಷರನ್ನು ನಾನು ಕಂಡಿಲ್ಲ. ಇವರು ನಿಸ್ಸಂದೇಹವಾಗಿ ಭಗವಂತನ ದರ್ಶನ ಪಡೆದಿದಾರೆ. ಇಲ್ಲದಿದ್ದರೆ 'ತಾಯಿ, ತಾಯಿ' ಎಂದು ಸಂಬೋಧಿಸುತ್ತ ಹಗಲೂ ಇರುಳೂ ಮಾತಾಡುತ್ತಿದಾರಲ್ಲ ಮತ್ತೆ ಯಾರೊಡನೆ? ಇಲ್ಲದಿದ್ದರೆ ಇವರಿಗೆ ಭಗವಂತನಲ್ಲಿ ಪ್ರೀತಿ ಇಷ್ಟೊಂದಾಗಿ ಉಂಟಾಗಲು ಕಾರಣವೇನು? ಇವರ ಭಗವಂತನಲ್ಲಿನ ಪ್ರೀತಿ ಅಷ್ಟೊಂದು ಮಹತ್ತಾದ್ದು, ಇವರು ಬಾಹ್ಯಜ್ಞಾನಶೂನ್ಯರಾಗಿ ಬಿಡುತ್ತಾರೆ. ಸಮಾಧಿಸ್ಥರಾಗಿ ಜಡವಸ್ತುವಿನಂತಾಗಿಬಿಡುತ್ತಾರೆ. ಇನ್ನು ಕೆಲವು ವೇಳೆ ಪ್ರೇಮೋನ್ಮತ್ತರಾಗಿ ನಗುತ್ತಾರೆ, ಅಳುತ್ತಾರೆ, ಹಾಡುತ್ತಾರೆ.''

೧೪ನೆ ಡಿಸೆಂಬರ್ ೧೮೮೩, ಮಾರ್ಗಶಿರ ಪೂರ್ಣಿಮೆ, ಶುಕ್ರವಾರ.

ಘಂಟೆ ಒಂಬತ್ತು. ಪರಮಹಂಸರು ತಮ್ಮ ಕೊಠಡಿಯ ಆಗ್ನೇಯ ವರಾಂಡದಲ್ಲಿ ಬಾಗಿಲ ಹತ್ತಿರ ನಿಂತಿದಾರೆ. ರಾಮಲಾಲ ಅವರ ಹತ್ತಿರ ನಿಂತಿದಾನೆ. ರಾಖಾಲ, ಲಾಟು ಅವರ ಹತ್ತಿರ ಸುಮ್ಮನೆ ಸುತ್ತಾಡುತ್ತಿದಾರೆ. ಮಾಸ್ಟರ್ ಅಲ್ಲಿಗೆ ಬಂದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದ. ಪರಮಹಂಸರು ಆನಂದದಿಂದ ಹೇಳಿದರು: ''ಬಂದೆಯಾ? ಇಂದು ಒಳ್ಳೆ ಶುಭದಿನ.''

ಇಂದು ಬಂಗಾಳಿ ತಿಂಗಳ ಕೊನೆಯ ದಿನ. ಜೊತೆಗೆ ಪೂರ್ಣಿಮೆ ಬೇರೆ. ಮಾಸ್ಟರ್ ಇಂದು ಇಲ್ಲಿಗೆ ಬಂದಿರುವುದರ ಉದ್ದೇಶ ಪರಮಹಂಸ

ರೊಡನೇ ಕೆಲವು ದಿನಗಳನ್ನು ಕಳೆದು ಸಾಧನೆಯಲ್ಲಿ ತೊಡಗಬೇಕು ಅಂತ. ಪರಮಹಂಸರು ಆತನಿಗೆ ಹೇಳಿದಾರೆ: "ಏನಾದರೂ ಸ್ವಲ್ಪ ಸಾಧನೆ ಮಾಡಿದ್ದೇ ಆದರೆ, ಯಾರಾದರೂ ಬಂದು 'ಹೀಗೆ, ಹೀಗೆ' ಅಂತ ಹೇಳಿ ಕೊಟ್ಟುಬಿಡುತ್ತಾರೆ."

ಪರಮಹಂಸರು ಮಾಸ್ಟರಿಗೆ ಹೇಳಿದಾರೆ: "ನೀನು ಅತಿಥಿಶಾಲೆಯಲ್ಲಿ ದಿವಸವೂ ಊಟಮಾಡುವುದು ಸರಿಯಲ್ಲ. ಅದನ್ನು ಏರ್ಪಡಿಸಿರುವುದು ಸಾಧುಗಳಿಗೆ ಮತ್ತು ಭಿಕ್ಷುಕರಿಗೆ. ನಿನ್ನ ಊಟಕ್ಕಾಗಿ ಒಬ್ಬ ಅಡಿಗೆಯವನನ್ನು ಕರೆದುಕೊಂಡು ಬಾ." ಮಾಸ್ಟರ್ ಆ ರೀತಿಯಾಗೇ ಒಬ್ಬ ಅಡಿಗೆಯವನನ್ನು ಕರೆದುಕೊಂಡುಬಂದಿದಾನೆ. ಪರಮಹಂಸರು ಅಡಿಗೆ ಮಾಡಲು ಆತನಿಗೆ ಒಂದು ಸ್ಥಳವನ್ನು ಏರ್ಪಡಿಸಿಕೊಟ್ಟರು. ಈಗ ರಾಮುಲಾಲನಿಗೆ ಹೇಳುತ್ತಿದಾರೆ, ಮಾಸ್ಟರಿಗೆ ಹಾಲಿನ ವ್ಯವಸ್ಥೆ ಮಾಡುವ ಹಾಗೆ.

ಸ್ವಲ್ಪ ಹೊತ್ತಾದನಂತರ ರಾಮುಲಾಲ ಅಧ್ಯಾತ್ಮರಾಮಾಯಣದಿಂದ ಓದಲಾರಂಭಿಸಿದ. ಪರಮಹಂಸರು ಮತ್ತು ಮಾಸ್ಟರ್ ಅದನ್ನು ಕೇಳುತ್ತಿದಾರೆ:

ರಾಮಚಂದ್ರ ಸೀತೆಯನ್ನು ವಿವಾಹಮಾಡಿಕೊಂಡು ಅಯೋಧ್ಯೆಗೆ ಹಿಂದಿರುಗಿ ಬರುತ್ತಿದ್ದಾಗ ದಾರಿಯಲ್ಲಿ ಪರಶುರಾಮನನ್ನು ಸಂಧಿಸಿದ. ರಾಮಚಂದ್ರ ಹರಧನುಸ್ಸನ್ನ ಮುರಿದಿದಾನೆ ಎಂಬುದನ್ನು ಕೇಳಿದನಂತರ ಪರಶುರಾಮ ಆತನಿಗೆ ತೊಂದರೆ ತಂದೊಡ್ಡಲು ಸಿದ್ಧನಾಗಿರುವುದನ್ನು ನೋಡಿ ದಶರಥ ಭಯದಿಂದ ಸುಮ್ಮನೆ ಕಂಪಿಸಲಾರಂಭಿಸಿದ. ಪರಶುರಾಮ ಒಂದು ಧನುಸ್ಸನ್ನು ರಾಮನ ಮುಂದೆ ಬಿಸಾಡಿ ಆದಕ್ಕೆ ಹೆದೆ ಕಟ್ಟುವ ಹಾಗೆ ಹೇಳಿದ. ರಾಮ ಕಿಂಚಿತ್ ನಕ್ಕು ಆ ಧನುಸ್ಸನ್ನು ತನ್ನ ಎಡಗೈಯಲ್ಲಿ ಎತ್ತಿಕೊಂಡು ಹೆದೆಯೇರಿಸಿ ಟಂಕಾರಮಾಡಿದ. ಅನಂತರ ಧನುಸ್ಸಿಗೆ ಬಾಣವನ್ನು ಹೂಡಿ ಪರಶುರಾಮನನ್ನು ಕೇಳಿದ, ಎಲ್ಲಿಗೆ ಬಿಡಬೇಕು ಎಂದು. ಆಗ ಪರಶುರಾಮನ ಅಹಂಕಾರ ಸಂಪೂರ್ಣವಾಗಿ ಚೂರ್ಣವಾಗಿ ಹೋಯಿತು. ಬಳಿಕ ಆತ ಶ್ರೀರಾಮಚಂದ್ರ ಪರಬ್ರಹ್ಮನೇ ಎಂದು ಭಾವಿಸಿ ಆತನನ್ನು ಸ್ತೋತ್ರಮಾಡಲಾರಂಭಿಸಿದ.

ಪರಶುರಾಮನ ಸ್ತೋತ್ರವನ್ನು ಕೇಳುತ್ತ ಕೇಳುತ್ತ ಇದ್ದ ಹಾಗೇ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ಆಗಾಗ ರಾಮನಾಮವನ್ನು ತಮ್ಮ ಮಧುರ ಕಂಠದಿಂದ ಉಚ್ಚರಿಸುತ್ತಿದಾರೆ.

ಬಳಿಕ ಪರಮಹಂಸರು ರಾಮುಲಾಲನಿಗೆ ಚಂಡಾಲ ಗುಹಕನ ಸಂಬಂಧವಾಗಿ ಓದುವಂತೆ ಹೇಳಿದರು. ರಾಮುಲಾಲ ಓದುತ್ತಿದಾನೆ:

ಚಂಡಾಲ ಗುಹಕ ಶ್ರೀರಾಮಚಂದ್ರನ ಪರಮ ಗೆಳೆಯ. ಪಿತೃವಾಕ್ಯಪರಿಪಾಲನೆಗಾಗಿ ಶ್ರೀರಾಮಚಂದ್ರ ಸೀತೆ ಮತ್ತು ಲಕ್ಷ್ಮಣರೊಡನೆ ವನಕ್ಕೆ ತೆರಳುತ್ತಿದ್ದಾಗ, ಆತ ಇವರನ್ನು ತನ್ನ ದೋಣಿಯಲ್ಲಿ ಕೂರಿಸಿ ಸರಯೂ ನದಿಯನ್ನು ದಾಟಿಸಿದ. ರಾಮ ಆತನನ್ನು ಆಲಿಂಗನಮಾಡಿಕೊಂಡು ಹೇಳಿದ, ತಾನು ವಲ್ಕಲವನ್ನು ಉಟ್ಟು, ಗೆಡ್ಡೆ ಗೆಣಸು ತಿಂದುಕೊಂಡು ಹದಿನಾಲ್ಕು ವರ್ಷ ವನವಾಸಮಾಡಬೇಕಾಗಿದೆ; ವನವಾಸ ಮುಗಿಸಿ ಅಯೋಧ್ಯೆಗೆ ಹಿಂದಿರುಗುವಾಗ ತಾನು ಬಂದು ಆತನನ್ನು ನೋಡಿಹೋಗುವುದಾಗಿ. ಗುಹಕ ಅಷ್ಟು ಕಾಲವನ್ನೂ ಆತನಿಗಾಗಿ ಎದುರುನೋಡುತ್ತಲೇ ಶಾಂತತೆಯಿಂದ ಕಳೆದ. ಆದರೆ ಹದಿನಾಲ್ಕು ವರ್ಷ ಮುಗಿದಮೇಲೂ ರಾಮ ಬಾರದಿರುವುದನ್ನು ನೋಡಿ ಗುಹಕ ಅಗ್ನಿಪ್ರವೇಶ ಮಾಡಲು ಸಿದ್ಧನಾಗಲಾರಂಭಿಸಿದ. ಆತ ಇನ್ನೇನು ಅಗ್ನಿಪ್ರವೇಶ ಮಾಡಬೇಕು ಅಷ್ಟರಲ್ಲಿ ಹನುಮಂತ ಬಂದು ರಾಮನ ಸಮಾಚಾರ ಕೊಟ್ಟ. ರಾಮಚಂದ್ರ ಮತ್ತು ಸೀತೆ ಪುಷ್ಪಕ-ವಿಮಾನದಲ್ಲಿ ಕುಳಿತು ಅಲ್ಲಿಗೆ ಬಂದರು. ಆಗ ಗುಹಕನ ಆನಂದಕ್ಕೆ ಎಣೆಯೇ ಇಲ್ಲದೆಹೋಯಿತು.

ಮಧ್ಯಾಹ್ನದ ಊಟವಾದನಂತರ ಪರಮಹಂಸರು ತಮ್ಮ ಹಾಸಿಗೆಯ ಮೇಲೆ ವಿಶ್ರಮಿಸಿಕೊಳ್ಳುತ್ತಿದಾರೆ. ಮಾಸ್ಟರ್ ಹತ್ತಿರದಲ್ಲೆ ನೆಲದ ಮೇಲೆ ಕುಳಿತಿದಾನೆ. ಸ್ವಲ್ಪ ಹೊತ್ತಿನೊಳಗೇ ಡಾಕ್ಟರ್ ಶ್ಯಾಮ ಮತ್ತು ಕೆಲವು ಮಂದಿ ಭಕ್ತರು ಕೊಠಡಿಯನ್ನು ಪ್ರವೇಶಿಸಿದರು. ಈಗ ಪರಮಹಂಸರು ಎದ್ದು ಕುಳಿತು ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಸರ್ವದಾ ಕರ್ಮಗಳನ್ನು ಮಾಡಿಕೊಂಡು ಹೋಗುತ್ತಲೇ ಇರಬೇಕಾದ ಆವಶ್ಯಕತೆಯೇನಿರುವುದಿಲ್ಲ. ಕಾಯಿ ಕಚ್ಚಿದ ಮೇಲೆ ಹೂವು ತಾನಾಗೇ ಉದುರಿಹೋಗೋ ಹಾಗೆ, ಭಗವದ್ದರ್ಶನವಾದ ನಂತರ ಕರ್ಮಗಳು ತಾವಾಗೇ ನಿಂತುಹೋಗುತ್ತವೆ.

"ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿದೆಯೊ ಆತನಿಗೆ ಸಂಧ್ಯಾವಂದನಾದಿ ಕರ್ಮಗಳಿರುವುದಿಲ್ಲ. ಆತನ ವಿಷಯದಲ್ಲಿ ಸಂಧ್ಯಾವಂದನೆ ಗಾಯತ್ರಿಯಲ್ಲಿ ಲೀನವಾಗುತ್ತದೆ. ಅದು ಹಾಗಾದಾಗ ಗಾಯತ್ರಿಯನ್ನು ಜಪಿಸಿದರೇ ಬೇಕಾದಷ್ಟು. ಬಳಿಕ ಗಾಯತ್ರಿ ಓಂಕಾರದಲ್ಲಿ ಲಯವಾಗುತ್ತದೆ. ಅದಾದನಂತರ ಗಾಯತ್ರಿಯನ್ನೂ ಜಪಿಸಬೇಕಾದ ಆವಶ್ಯಕತೆಯೇನಿರುವುದಿಲ್ಲ; ಆಗ ಕೇವಲ 'ಓಂ' ಎಂದು ಜಪಿಸುತ್ತಿದ್ದರೇ ಸಾಕು. ಸಂಧ್ಯಾವಂದನಾದಿ ಕರ್ಮಗಳು ಎಲ್ಲಿಯವರೆಗೆ? ಎಲ್ಲಿಯವರೆಗೆ ಹರಿನಾಮ

ಅಥವಾ ರಾಮನಾಮೋಚ್ಚಾರಣೆಯಿಂದ ಪುಲಕವುಂಟಾಗೋದಿಲ್ಲವೊ, ಪ್ರೇಮಾಶ್ರು ಸುರಿಯೋದಿಲ್ಲವೊ ಅಲ್ಲಿಯವರೆಗೆ. ಜನ ಹಣ ಕಾಸುಗಳಿಗಾಗಿ, ವ್ಯಾಜ್ಯ ಗೆಲ್ಲುವುದಕ್ಕಾಗಿ ಪೂಜಾದಿ ಕರ್ಮಗಳಲ್ಲಿ ತೊಡಗುತ್ತಾರೆ. ಇದು ಒಳ್ಳೆಯದಲ್ಲ.''

ಒಬ್ಬ ಭಕ್ತ: ''ಹಣ ಕಾಸುಗಳಿಗಾಗಿ ಪ್ರತಿಯೊಬ್ಬನೂ ಪ್ರಯತ್ನ ಮಾಡುತ್ತಿದಾನೆ. ನೋಡಿ, ಕೇಶವಸೇನನೂ ಹೇಗೆ ತನ್ನ ಮಗಳನ್ನ ರಾಜ ನಿಗೆ ಕೊಟ್ಟು ಮದುವೆ ಮಾಡಿದ''

ಶ್ರೀರಾಮಕೃಷ್ಣರು: ''ಕೇಶವಸೇನನ ವಿಚಾರವೇ ಬೇರೆ. ಯಾರು ನಿಜವಾದ ಭಕ್ತನೊ ಆತ ಪ್ರಯತ್ನ ಮಾಡದೆ ಇದ್ದರೂ ಭಗವಂತ ಆತನ ಆವಶ್ಯಕತೆಗಳನ್ನೆಲ್ಲಾ ದೊರಕಿಸಿಕೊಟ್ಟುಬಿಡುತ್ತಾನೆ. ಯಾರು ನಿಜ ವಾಗಿಯೂ ರಾಜನ ಮಗನೊ ಆತನಿಗೆ ತಿಂಗಳ ತಿಂಗಳ ಭತ್ಯ ತಾನಾಗೇ ದೊರೆಯುತ್ತದೆ. ಬಹಳವಾಗಿ ದುಡಿದು, ದಾಸತ್ವಮಾಡಿ ಹಣ ಸಂಪಾದಿ ಸುತ್ತಾರಲ್ಲ ಅಂಥ ವಕೀಲ-ಗಿಕೀಲರ ವಿಷಯವಾಗಿ ನಾನು ಹೇಳುತ್ತಿಲ್ಲ. ನಾನು ಹೇಳುತ್ತಿರುವುದು ನಿಜವಾದ ರಾಜಕುಮಾರನ ಸಂಬಂಧವಾಗಿ. ಯಾರಿಗೆ ಯಾವ ಕಾಮನೆಗಳೂ ಇಲ್ಲವೊ ಅವರು ಹಣ ಕಾಸುಗಳಿಗಾಗಿ ಹಾತೊರೆಯುವುದಿಲ್ಲ. ಅದು ತಾನಾಗೇ ಬರುತ್ತದೆ. ಗೀತೆಯಲ್ಲಿ ಹೇಳಿದೆ: 'ಯದೃಚ್ಛಾಲಾಭಸಂತುಷ್ಟಃ' ಎಂದು. ಯಾವ ಕಾಮನೆಯೂ ಇಲ್ಲದ ಸದ್ಬ್ರಾಹ್ಮಣ ಚಂಡಾಲನ ಮನೆಯಿಂದಲೂ ಸ್ವೀಕರಿಸಬಹುದು. ಆತ 'ಯದೃಚ್ಛಾಲಾಭಸಂತುಷ್ಟಃ'. ಆತ ಪ್ರಯತ್ನಿಸೋದಿಲ್ಲ; ಆದರೆ ತಾನಾಗೇ ಬರುತ್ತದೆ.''

ಒಬ್ಬ ಭಕ್ತ: ''ಮಹಾಶಯರೆ, ಈ ಸಂಸಾರದಲ್ಲಿ ಹೇಗಿರಬೇಕು?''

ಶ್ರೀರಾಮಕೃಷ್ಣರು: ''ಕೆಸರು ಮೀನಿನ ಹಾಗೆ ಇರಬೇಕು. ಸಂಸಾರ ದಿಂದ ದೂರ ಹೋಗಿ ನಿರ್ಜನಪ್ರದೇಶದಲ್ಲಿ ಭಗವಚ್ಚಿಂತನೆಯನ್ನು ಆಗಾಗ ಮಾಡಿದರೆ, ಭಗವಂತನಲ್ಲಿ ಭಕ್ತಿ ಅಂಕುರವಾಗುತ್ತದೆ. ಆಗ ಸಂಸಾರದಲ್ಲಿ ನಿರ್ಲಿಪ್ತನಾಗಿ ಇರಲು ಸಾಧ್ಯವಾಗುತ್ತದೆ. ಕೆಸರೇನೊ ಇದೆ, ಮೀನೂ ಅದರಲ್ಲಿ ವಾಸಿಸಬೇಕಾಗಿದೆ, ಆದರೂ ಕೆಸರು ಅದರ ಮೈಗೆ ಅಂಟಿಕೊಳ್ಳು ವುದಿಲ್ಲ. ಆ ರೀತಿಯ ಮನುಷ್ಯ ಅನಾಸಕ್ತನಾಗಿ ಸಂಸಾರದಲ್ಲಿ ಇರುತ್ತಾನೆ.''

ಪರಮಹಂಸರು ನೋಡುತ್ತಾರೆ, ಮಾಸ್ಟರ್ ಹಾಗೇ ಕುಳಿತುಕೊಂಡು ಎಲ್ಲವನ್ನೂ ಏಕಾಗ್ರಚಿತ್ತದಿಂದ ಕೇಳುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರ್ ಕಡೆ ನೋಡಿ: "ತೀವ್ರ ವೈರಾಗ್ಯ ವುಂಟಾದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ಯಾರಿಗೆ ತೀವ್ರ ವೈರಾಗ್ಯವುಂಟಾಗಿದೆಯೊ ಅವರಿಗೆ ಈ ಸಂಸಾರ ದಾವಾನಲದ ಹಾಗೆ ಕಾಣುತ್ತದೆ. ಹೆಂಡತಿ ಮಕ್ಕಳು ಅವರ ಕಣ್ಣಿಗೆ ಆಳವಾದ ಬಾವಿಯ ಹಾಗೆ ಕಾಣುತ್ತಾರೆ. ಅಂಥ ವೈರಾಗ್ಯ ನಿಜವಾಗಿ ಉಂಟಾದುದೇ ಆದರೆ ಮನೆಯನ್ನು ತ್ಯಜಿಸಿ ಹೋಗಲೇ ಬೇಕಾಗುತ್ತದೆ. ಸಂಸಾರದಲ್ಲಿ ಕೇವಲ ಅನಾಸಕ್ತರಾಗಿ ಇದ್ದುಕೊಂಡಿರುವುದು ಅವರಿಗೆ ತೃಪ್ತಿಯನ್ನು ತರದು.

"ಕಾಮಕಾಂಚನವೇ ಮಾಯೆ. ಅದರ ಸ್ವರೂಪ ಏನು ಎಂಬುದನ್ನು ಅರಿತದ್ದೇ ಆದರೆ ಅದು ನಾಚಿಕೆಪಟ್ಟುಕೊಂಡು ತಾನೇ ಕಂಬಿಕೀಳುತ್ತದೆ. ಒಬ್ಬ ಹುಲಿಯ ಚರ್ಮ ಹೊದ್ದುಕೊಂಡು ಒಬ್ಬನಿಗೆ ಭಯ ತೋರಿಸುತ್ತಿದ್ದ. ಆತ ಹೇಳಿದ: 'ನೀನು ಯಾರು ಎಂಬುದು ನನಗೆ ಗೊತ್ತು. ನೀನು ನಮ್ಮ ಹರಿ.' ಆಗ ಹುಲಿಯ ಚರ್ಮ ಹೊದ್ದುಕೊಂಡಿದ್ದವ ನಗುತ್ತ ಹೊರಟುಹೋಗಿ ಇನ್ನೊಬ್ಬನಿಗೆ ಭಯ ತೋರಿಸಲಾರಂಭಿಸಿದ.

"ಪ್ರತಿಯೊಬ್ಬ ಹೆಂಗಸೂ ಶಕ್ತಿಯ ಒಂದೊಂದು ರೂಪ. ಆ ಆದ್ಯಾಶಕ್ತಿಯೇ ಹೆಂಗಸಾಗಿ ಹೆಂಗಸಿನ ರೂಪ ಧರಿಸಿದ್ದಾಳೆ. ಅಧ್ಯಾತ್ಮರಾಮಾಯಣದಲ್ಲಿ ಹೇಳಿದೆ, ನಾರದಾದಿ ಋಷಿಗಳು ಶ್ರೀರಾಮನನ್ನು ಸ್ತೋತ್ರ ಮಾಡಿದರು: 'ಹೇ ರಾಮ, ಗಂಡಸರಾಗಿ ಕಾಣುವವರೆಲ್ಲಾ ನೀನೇ, ಹೆಂಗಸರಾಗಿ ಕಾಣುವವರೆಲ್ಲಾ ಸೀತೆಯೇ. ನೀನು ಇಂದ್ರ, ಸೀತೆ ಇಂದ್ರಾಣಿ; ನೀನು ಶಿವ, ಸೀತೆ ಶಿವೆ; ನೀನು ನರ, ಸೀತೆ ನಾರಿ. ಹೆಚ್ಚಾಗಿ ಇನ್ನೇನು ತಾನೆ ನಾವು ಹೇಳೋಣ? ಗಂಡಸು ಎಲ್ಲೋ ಅಲ್ಲಿ ಇರತಕ್ಕವನು ನೀನೇ; ಹೆಂಗಸು ಎಲ್ಲೋ ಅಲ್ಲಿ ಇರತಕ್ಕವಳು ಸೀತೆಯೇ.'

(ಭಕ್ತರಿಗೆ) "ಸುಮ್ಮನೆ ಮನಸ್ಸಿನಲ್ಲಿ ಮಾಡಿಕೊಂಡಾಕ್ಷಣಕ್ಕೇ ತ್ಯಾಗಮಾಡಲಾಗುವುದಿಲ್ಲ. ಪ್ರಾರಬ್ಧ, ಸಂಸ್ಕಾರ ಇವೆಲ್ಲವೂ ಇವೆ. ಒಮ್ಮೆ ಒಬ್ಬ ಯೋಗಿ ಒಬ್ಬ ರಾಜನಿಗೆ ಹೇಳಿದ: 'ನೀನು ನನ್ನೊಡನೇ ಇದ್ದುಕೊಂಡು ಭಗವಂತನ ಧ್ಯಾನ ಮಾಡಿಕೊಂಡಿರು.' ರಾಜ ಉತ್ತರ ವಿತ್ತ: 'ಅದು ನನ್ನಿಂದ ಸಾಧ್ಯವಿಲ್ಲ. ಸುಮ್ಮನೆ ಏನೊ ನಾನು ನಿಮ್ಮೊಡನೆ ಇರಬಲ್ಲೆ, ಆದರೆ ನನಗಿನ್ನೂ ಭೋಗಾಸಕ್ತಿ ಇದೆ. ನಾನೇನಾದರೂ ಈ

ವನದಲ್ಲಿ ಇದ್ದುದೇ ಆದರೆ, ಈ ವನವೇ ಒಂದು ರಾಜ್ಯವಾಗಿಬಿಡಬಹುದು. ನನ್ನಲ್ಲಿ ಇನ್ನೂ ಭೋಗೇಚ್ಛೆಯಿದೆ.'

"ನಟವರಪಾಂಜ ಹುಡುಗನಾಗಿದ್ದಾಗ ಈ ತೋಟದಲ್ಲಿ ದನ ಮೇಯಿಸುತ್ತಿದ್ದ. ಆತ ಭೋಗಪಡಬೇಕಾದ್ದು ಇನ್ನೂ ಬೇಕಾದಷ್ಟು ಇತ್ತು. ಅದಕ್ಕಾಗೇ ಆತ ಹರಳೆಣ್ಣೆ ಮಿಲ್ಲು ಇರಿಸಿ ಯಥೇಚ್ಛವಾಗಿ ಹಣ ಸಂಪಾದಿಸಿದ. ಆತನ ಹರಳೆಣ್ಣೆ ವ್ಯಾಪಾರ ಆಲಂಬಜಾರಿನಲ್ಲಿ ಬಹಳ ಚೆನ್ನಾಗಿ ನಡೆದುಕೊಂಡುಬರುತ್ತಿದೆ.

"ಒಂದು ಸಂಪ್ರದಾಯವಿದೆ. ಅದು ಹೇಳುತ್ತದೆ, ಹೆಂಗಸಿನೊಡನೆ ಕೂಡಿ ಸಾಧನೆಯಲ್ಲಿ ತೊಡಗುವ ಹಾಗೆ. ಒಮ್ಮೆ ನನ್ನನ್ನು ಕರ್ತಾಭಜಾ ಹೆಂಗಸರ ಹತ್ತಿರಕ್ಕೆ ಕರೆದುಕೊಂಡುಹೋಗಿದ್ದರು. ಅವರೆಲ್ಲರೂ ಬಂದು ನನ್ನ ಹತ್ತಿರ ಕುಳಿತುಕೊಂಡರು. ನಾನು ಅವರನ್ನು 'ತಾಯಿ, ತಾಯಿ' ಎಂದು ಸಂಬೋಧಿಸಲಾಗಿ ಅವರು ಪರಸ್ಪರ ತಮ್ಮಲ್ಲೇ ಮಾತನಾಡಿಕೊಳ್ಳಲಾರಂಭಿಸಿದರು: 'ಈತ ಇನ್ನೂ ಪ್ರವರ್ತಕ. ಮಾರ್ಗ ಈತನಿಗೆ ಇನ್ನೂ ಗೊತ್ತಿಲ್ಲ.' ಆ ಸಂಪ್ರದಾಯದ ದೃಷ್ಟಿಯಿಂದ ಆಗ ತಾನೆ ಸಾಧನೆಯಲ್ಲಿ ತೊಡಗಿರುವವನಿಗೆ ಪ್ರವರ್ತಕ ಅಂತ ಹೆಸರು. ಬಳಿಕ ಆತ ಸಾಧಕ, ಕೊನೆಯಲ್ಲಿ ಸಿದ್ಧರ ಸಿದ್ಧ ಆಗುತ್ತಾನೆ. ಒಬ್ಬ ಹೆಂಗಸು ವೈಷ್ಣವಚರಣನ ಹತ್ತಿರ ಬಂದು ಕುಳಿತುಕೊಂಡಳು. ಅದರ ಸಂಬಂಧವಾಗಿ ವೈಷ್ಣವ ಚರಣನನ್ನು ಕೇಳಲಾಗಿ ಆತ ಹೇಳಿದ: 'ಈಕೆಯದು ಬಾಲಿಕಾಭಾವ.' ಸ್ತ್ರೀಭಾವವನ್ನು ಆರಿಸಿಕೊಂಡರೆ ಶೀಘ್ರವಾಗಿ ಪತನವಾಗುವ ಸಂಭವ. ಮಾತೃಭಾವ ಶುದ್ಧಭಾವ."

ಕೆಲವು ಮಂದಿ ಭಕ್ತರು ತಾವು ಕಾಳಿಯ ಮತ್ತು ಉಳಿದ ದೇವಾಲಯಗಳನ್ನು ನೋಡಬೇಕಾಗಿದೆ ಅಂತ ಹೇಳಿ ಪರಮಹಂಸರಿಂದ ಬೀಳ್ಕೊಂಡರು.

ಮಾಸ್ಟರ್ ಪಂಚವಟಿಯ ಮತ್ತು ಉದ್ಯಾನವನದ ಇತರ ಭಾಗಗಳಲ್ಲಿ ಸುಮ್ಮನೆ ಒಂಟಿಯಾಗಿ ಸುತ್ತಾಡುತ್ತಿದಾನೆ. "ಸ್ವಲ್ಪ ಸಾಧನೆ ಮಾಡಿದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು.", "ಮಾಯೆಯ ಸ್ವರೂಪವನ್ನು ಅರಿತುಕೊಂಡರೆ ಅದು ನಾಚಿಕೆಪಟ್ಟುಕೊಂಡು ತಾನಾಗೇ ಕಂಬಿಕೀಳುತ್ತದೆ" ಎಂದು ಪರಮಹಂಸರು ಹೇಳಿದುದರ ಮತ್ತು ಅವರು ತೀವ್ರ ವೈರಾಗ್ಯದ ಸಂಬಂಧವಾಗಿ ತಿಳಿಸಿದುದರ ವಿಷಯವಾಗಿ ಮಾಸ್ಟರ್ ಆಲೋಚಿಸುತ್ತಾ ತಿರುಗುತ್ತಿದಾನೆ.

ಘಂಟೆ ಅಪರಾಹ್ನ ಮೂರು. ಮಾಸ್ಟರ್ ಮತ್ತೆ ಪರಮಹಂಸರ ಕೊಠಡಿಗೆ ಬಂದು ಕುಳಿತುಕೊಂಡಿದ್ದಾನೆ. ಬ್ರೌಟನ್ ಇನ್‌ಸ್ಟಿಟ್ಯೂಟ್‌ನಿಂದ ಒಬ್ಬ ಉಪಾಧ್ಯಾಯರು ಕೆಲವು ಮಂದಿ ವಿದ್ಯಾರ್ಥಿಗಳೊಡನೆ ಪರಮಹಂಸರನ್ನು ನೋಡಲು ಬಂದಿದ್ದಾರೆ. ಪರಮಹಂಸರು ಅವರೊಡನೆ ಮಾತುಕತೆಯಾಡುತ್ತಿದ್ದಾರೆ. ಆಗಾಗ ಉಪಾಧ್ಯಾಯರು ಒಂದೊಂದು ಪ್ರಶ್ನೆ ಹಾಕುತ್ತಿದ್ದಾರೆ. ಪ್ರತಿಮಾ ಪೂಜೆಯ ಸಂಬಂಧವಾಗಿ ಮಾತುಕತೆ ನಡೆಯುತ್ತಿದೆ.

ಶ್ರೀರಾಮಕೃಷ್ಣರು ಉಪಾಧ್ಯಾಯರಿಗೆ: "ಪ್ರತಿಮಾ ಪೂಜೆ ಮಾಡುವುದರಲ್ಲಿ ತಪ್ಪೇನಿದೆ? ವೇದಾಂತ ಹೇಳುತ್ತದೆ, ಎಲ್ಲಿ 'ಅಸ್ತಿ, ಭಾತಿ ಪ್ರಿಯ' ಇರುವುವೊ, ಅಲ್ಲೇ ಭಗವಂತನ ವ್ಯಕ್ತತೆಯೂ ಇದೆ ಎಂದು. ಆದ್ದರಿಂದ ಬ್ರಹ್ಮನಿಲ್ಲದ ವಸ್ತುವೇ ಇಲ್ಲ.

"ಚಿಕ್ಕ ಹುಡುಗಿಯರು ಎಲ್ಲಿಯವರೆಗೆ ತಮ್ಮ ಗೊಂಬೆಗಳೊಡನೆ ಆಟವಾಡುತ್ತಾರೆ? ವಿವಾಹವಾಗದವರೆಗೆ ಮತ್ತು ತಮ್ಮ ತಮ್ಮ ಪತಿಯೊಡನೆ ವಾಸಿಸದವರೆಗೆ. ವಿವಾಹವಾದನಂತರ ಅವರು ಗೊಂಬೆಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಇಡುತ್ತಾರೆ. ಭಗವಂತನ ಸಾಕ್ಷಾತ್ಕಾರ ದೊರೆತನಂತರ ಪ್ರತಿಮಾ ಪೂಜೆಯ ಆವಶ್ಯಕತೆ ಎಲ್ಲಿರುತ್ತದೆ?"

ಶ್ರೀರಾಮಕೃಷ್ಣರು ಮಾಸ್ಟರ ಕಡೆ ನೋಡಿ ಹೇಳುತ್ತಿದ್ದಾರೆ: "ಅನುರಾಗವುಂಟಾಯಿತು ಎಂದರೆ ಭಗವಂತನ ದರ್ಶನ ದೊರೆಯುತ್ತದೆ. ತೀವ್ರ ವ್ಯಾಕುಲತೆ ಬೇಕು. ತೀವ್ರ ವ್ಯಾಕುಲತೆಯುಂಟಾದರೆ ಇಡೀ ಮನಸ್ಸು ಭಗವಂತನಲ್ಲಿ ಏಕಾಗ್ರಗೊಂಡುಬಿಡುತ್ತದೆ.

"ಒಬ್ಬನಿಗೆ ಒಬ್ಬಳು ಮಗಳಿದ್ದಳು. ಬಹಳ ಚಿಕ್ಕವಳಾಗಿರುವಾಗಲೇ ಆಕೆ ವಿಧವೆಯಾಗಿಬಿಟ್ಟಳು. ಆಕೆ ಪತಿಯನ್ನು ಅರಿತವಳೇ ಅಲ್ಲ. ತನ್ನ ಜೊತೆಗಾತಿಯರ ಪತಿಗಳನ್ನು ಕಂಡು ಒಂದು ದಿನ ಆಕೆ ತನ್ನ ತಂದೆಯನ್ನು ಕೇಳಿದಳು: 'ಅಪ್ಪ, ನನ್ನ ಪತಿ ಎಲ್ಲಿದ್ದಾರೆ?' ಆಕೆಯ ತಂದೆ ಉತ್ತರವಿತ್ತ: 'ಗೋವಿಂದನೇ ನಿನ್ನ ಪತಿ. ಕರೆ, ಬರುತ್ತಾನೆ.' ಈ ಮಾತನ್ನು ಕೇಳಿ ಆ ಹುಡುಗಿ ತನ್ನ ಕೊಠಡಿಯ ಬಾಗಿಲು ಹಾಕಿಕೊಂಡು ಗೋವಿಂದನನ್ನು ಕರೆಯುತ್ತ ಅಳಲಾರಂಭಿಸಿದಳು: 'ಓ ಗೋವಿಂದ, ದಯವಿಟ್ಟು ಬಾ! ಕೃಪೆಯಿಟ್ಟು ನಿನ್ನ ದರ್ಶನ ಕೊಡು! ನೀನು ಏಕೆ ಬರುತ್ತಿಲ್ಲ ಹೇಳು?' ಆ ಚಿಕ್ಕ ಹುಡುಗಿಯ ಹೃದಯವಿದ್ರಾವಕ ಅಳುವನ್ನು ನೋಡಿ ಆಕೆಗೆ

ಭಗವಂತ ದರ್ಶನ ಕೊಡದೆ ಇರಲಾಗಲಿಲ್ಲ. ಆದ್ದರಿಂದ ಬಂದು ಆಕೆಗೆ ದರ್ಶನವಿತ್ತ.

"ಮಗುವಿನಂಥ ವಿಶ್ವಾಸ ಬೇಕು. ಮಗು ತಾಯನ್ನು ನೋಡಲು ಯಾವ ರೀತಿಯಾದ ವ್ಯಾಕುಲತೆಯನ್ನು ತೋರಿಸುವುದೊ, ಆ ರೀತಿಯಾದ ವ್ಯಾಕುಲತೆ ಬೇಕು. ಅಂಥ ವ್ಯಾಕುಲತೆ ಉಂಟಾಯಿತು ಎಂದರೆ ಅರುಣೋದಯವಾದ ಹಾಗೇ. ಅರುಣೋದಯವಾದನಂತರ ಸೂರ್ಯೋದಯ ಆಗಲೇ ಬೇಕು. ಅಂಥ ವ್ಯಾಕುಲತೆಯುಂಟಾದ ಒಡನೇ ಭಗವಂತನ ದರ್ಶನ ದೊರೆಯುತ್ತದೆ.

"ಜಟಿಲ ಎಂಬ ಹೆಸರಿನ ಒಬ್ಬ ಬಾಲಕನ ಕಥೆಯಿದೆ, ಕೇಳು. ಆ ಬಾಲಕ ಒಂದು ಕಾಡಿನ ಮೂಲಕ ಹಾದು ತನ್ನ ಸ್ಕೂಲಿಗೆ ಹೋಗ ಬೇಕಾಗಿತ್ತು. ಕಾಡು ದಾರಿ ಆತನಿಗೆ ಬಹಳ ಹೆದರಿಕೆಯನ್ನುಂಟುಮಾಡು ತ್ತಿತ್ತು. ಆ ಹುಡುಗ ತನ್ನ ಭಯವನ್ನ ಒಂದು ದಿನ ತನ್ನ ತಾಯಿಗೆ ತಿಳಿಸಿದ. ಆಕೆ ಹೇಳಿದಳು: 'ನೀನೇಕೆ ಭಯಪಡಬೇಕು? ಮಧುಸೂದನನನ್ನು ಕರೆ.' ಆ ಬಾಲಕ ಆಕೆಯನ್ನು ಕೇಳಿದ: 'ಅಮ್ಮಾ, ಮಧುಸೂದನ ಯಾರು?' ತಾಯಿ ಹೇಳಿದಳು: 'ಆತ ನಿನ್ನ ಅಣ್ಣ.' ಈ ಮಾತುಕತೆಯಾದ ಬಳಿಕ ಒಂದು ದಿನ ಕಾಡಿನಲ್ಲಿ ಹೋಗುತ್ತಿದ್ದಾಗ ಆ ಬಾಲಕನಿಗೆ ಮತ್ತೆ ಹೆದರಿಕೆಯಾಯಿತು. ಆಗ ಆ ಬಾಲಕ ಕೂಗಲಾರಂಭಿಸಿದ: 'ಅಣ್ಣಾ ಮಧುಸೂದನಾ!' ಎಲ್ಲಿ, ಮಧುಸೂದನನೂ ಇಲ್ಲ, ಗಿಧುಸೂದನನೂ ಇಲ್ಲ. ಆಗ ಆ ಬಾಲಕ ಅಳುತ್ತ ತಾರಸ್ವರದಿಂದ ಕೂಗಲಾರಂಭಿಸಿದ: 'ಎಲ್ಲಿ ದೀಯೋ ಅಣ್ಣಾ ಮಧುಸೂದನಾ? ಬೇಗ ಬಾರೊ. ನನಗೆ ಬಹಳವಾಗಿ ಹೆದರಿಕೆಯಾಗುತ್ತಿದೆ ಕಣೋ!' ಭಗವಂತನಿಗೆ ಆಗ ಸುಮ್ಮನಿರಲಾಗಲಿಲ್ಲ. ಆತ ಆ ಬಾಲಕನಿಗೆ ಹೇಳಿದ: 'ನೋಡೋ, ಇಲ್ಲೀ ನಾನೂ. ನೀನೇಕೆ ಭಯಪಟ್ಟುಕೊಳ್ಳಬೇಕೋ.' ಹೀಗೆಂದು ಹೇಳಿ ಆ ಬಾಲಕನನ್ನು ಕಾಡಿನ ಕೊನೆಯವರೆಗೂ ಕರೆದುಕೊಂಡುಹೋಗಿ ಸ್ಕೂಲಿಗೆ ದಾರಿ ತೋರಿಸಿದ. ಆತನಿಂದ ಬೀಳ್ಕೊಂಡಾಗ ಭಗವಂತ ಆ ಬಾಲಕನಿಗೆ ಹೇಳಿದ: 'ನೀನು ಕರೆದಾಗಲೆಲ್ಲಾ ನಾನು ಬಂದುಬಿಡುತ್ತೇನೆ. ಹೆದರಿಕೊಳ್ಳಬೇಡ.' ಬಾಲಕನ ಇಂಥ ವಿಶ್ವಾಸ, ಇಂಥ ವ್ಯಾಕುಲತೆ ಬೇಕು.

"ಒಬ್ಬ ಬ್ರಾಹ್ಮಣನ ಮನೆಯಲ್ಲಿ ನಿತ್ಯವೂ ದೇವರಪೂಜೆ ನಡೆ ಯುತ್ತಿತ್ತು. ಒಂದು ದಿನ ಏನೊ ಕೆಲಸದ ನಿಮಿತ್ತ ಆ ಬ್ರಾಹ್ಮಣ ಬೇರೆ

ಸ್ಥಳಕ್ಕೆ ಹೋಗಿಬರಬೇಕಾಗಿ ಬಂತು. ಆತ ತನ್ನ ಚಿಕ್ಕ ಮಗನಿಗೆ ಹೇಳಿ ಹೋದ: 'ನೀನು ಇಂದು ದೇವರಿಗೆ ನೈವೇದ್ಯ ಅರ್ಪಿಸಿ ಊಟಮಾಡಿಸು.' ಹುಡುಗ ದೇವರಿಗೆ ನೈವೇದ್ಯವನ್ನು ಅರ್ಪಿಸಿದ. ಆದರೆ ದೇವರು ಮಾತ್ರ ಸುಮ್ಮನೆ ಕುಳಿತಿದಾನೆ. ಮಾತೂ ಆಡುತ್ತಿಲ್ಲ, ಊಟವೂ ಮಾಡುತ್ತಿಲ್ಲ. ಆ ಹುಡುಗ ಬಹಳ ಹೊತ್ತಿನವರೆಗೆ ಕುಳಿತುನೋಡಿದ. ಆದರೂ ದೇವರು ಮಾತ್ರ ಮೇಲಕ್ಕೆ ಏಳಲೇ ಇಲ್ಲ. ಆತ ಸಂಪೂರ್ಣವಾಗಿ ನಂಬಿದ್ದ, ದೇವರು ಎದ್ದುಬಂದು ಆಸನದ ಮೇಲೆ ಕುಳಿತುಕೊಂಡು ಊಟಮಾಡುತ್ತಾನೆ ಎಂದು. ಆಗ ಆ ಬಾಲಕ ಮತ್ತೆ ಮತ್ತೆ ಮೊರೆಯಿಡಲಾರಂಭಿಸಿದ: 'ಹೇ ದೇವರೆ, ಆಸನದಲ್ಲಿ ಬಂದು ಕುಳಿತುಕೊಂಡು ಊಟಮಾಡು. ಈಗ ಆಗಲೆ ಬಹಳ ಹೊತ್ತಾಗಿಬಿಟ್ಟಿದೆ. ನನ್ನ ಕೈಯಲ್ಲಿ ಇನ್ನು ಕಾದು ಕುಳಿತಿರ ಲಾಗುತ್ತಿಲ್ಲ.' ಹೀಗೆ ಮೊರೆಯಿಟ್ಟರೂ ದೇವರು ಒಂದು ಮಾತನ್ನೂ ಆಡಲಿಲ್ಲ. ಇದನ್ನು ನೋಡಿ ಹುಡುಗ ರೋದಿಸುತ್ತ ಮತ್ತೆ ದೇವರಿಗೆ ಮೊರೆಯಿಡಲಾರಂಭಿಸಿದ: 'ದೇವರೆ, ನಮ್ಮ ತಂದೆ ನಿನಗೆ ಊಟಮಾಡಿಸು ವಂತೆ ಹೇಳಿಹೋಗಿದಾರೆ. ಏತಕ್ಕೆ ನೀನು ಎದ್ದುಬರುತ್ತಿಲ್ಲ? ನನ್ನ ಕೈ ಯಿಂದ ಏಕೆ ಊಟಮಾಡಲಿಚ್ಛಿಸುತ್ತಿಲ್ಲ?' ಆ ಹುಡುಗ ಈ ರೀತಿಯಾಗಿ ಅತ್ಯಂತ ವ್ಯಾಕುಲನಾಗಿ ಅಳಲಾರಂಭಿಸಿದ ಸ್ವಲ್ಪ ಹೊತ್ತಿನಲ್ಲೇ ದೇವರು ಪೀಠದಿಂದ ನಗುತ್ತ ನಗುತ್ತ ಎದ್ದುಬಂದು ಆಸನದ ಮೇಲೆ ಕುಳಿತುಕೊಂಡು ಊಟಮಾಡಲಾರಂಭಿಸಿದ. ಆ ಹುಡುಗ ದೇವರಿಗೆ ಊಟಮಾಡಿಸಿ ದೇವರ ಮನೆಯಿಂದ ಹೊರಕ್ಕೆ ಬಂದ. ಮನೆಯವರು ಕೇಳಿದರು: 'ನೈವೇದ್ಯ ಅರ್ಪಿಸಿ ಆಯಿತೆ? ಹಾಗಾದರೆ ಎಲ್ಲವನ್ನೂ ತೆಗೆದುಕೊಂಡುಬಂದುಬಿಡು.' ಆ ಹುಡುಗ ಉತ್ತರವಿತ್ತ: 'ಹೌದು, ನೈವೇದ್ಯವನ್ನು ಅರ್ಪಿಸಿ ಆಯಿತು. ದೇವರು ಎಲ್ಲವನ್ನೂ ಊಟಮಾಡಿಬಿಟ್ಟ.' ಅದನ್ನು ಕೇಳಿ ಅವರು ಹೇಳಿದರು: 'ಅದು ಹೇಗೊ?' ಆ ಹುಡುಗ ತನ್ನ ಸರಳಬುದ್ಧಿಯಿಂದ ಉತ್ತರವಿತ್ತ: 'ಏಕೆ, ದೇವರು ಊಟಮಾಡಿಬಿಟ್ಟ.' ಬಳಿಕ ಎಲ್ಲರೂ ದೇವರ ಮನೆಗೆ ಹೋಗಿ ನೋಡಿ ಸುಮ್ಮನೆ ಆಶ್ಚರ್ಯಪಡಲಾರಂಭಿಸಿದರು."

ಮುಚ್ಚಂಜೆಯಾಗಲು ಇನ್ನೂ ಸಮಯವಿದೆ. ಪರಮಹಂಸರು ನಹಬತ್‌ಖಾನೆಯ ದಕ್ಷಿಣ ಭಾಗದಲ್ಲಿ ನಿಂತು ಮಾಸ್ಟರೊಡನೆ ಮಾತುಕತೆ ಯಾಡುತ್ತಿದಾರೆ. ಚಳಿಗಾಲವಾದ್ದರಿಂದ ಪರಮಹಂಸರು ಶಾಲು ಹೊದ್ದು ಕೊಂಡಿದಾರೆ.

ಶ್ರೀರಾಮಕೃಷ್ಣರು: "ನೀನು ಎಲ್ಲಿ ಮಲಗುತ್ತೀಯೆ? ಪಂಚವಟಿಯ ಗುಡಿಸಿಲಿನಲ್ಲಿ?"

ಮಾಸ್ಟರ್: "ನಹಬತ್‌ಖಾನೆಯ ಮಹಡಿ ಮೇಲಿನ ಕೊಠಡಿಯನ್ನು ಕೊಡಲೊಲ್ಲರೇನು?"

ಮಾಸ್ಟರ್ ಕಾವ್ಯಪ್ರಿಯನಾದ್ದರಿಂದ ನಹಬತ್‌ಖಾನೆಯ ಮಹಡಿ ಮೇಲಿನ ಕೊಠಡಿಯನ್ನು ಆರಿಸಿಕೊಂಡ. ಅಲ್ಲಿಂದ ಆತ ಆಕಾಶ, ಗಂಗೆ, ಬೆಳುದಿಂಗಳು, ಹೂವು, ಹಣ್ಣು, ಗಿಡಗಳು ಇವನ್ನೆಲ್ಲಾ ನೋಡಬಲ್ಲ.

ಶ್ರೀರಾಮಕೃಷ್ಣರು: "ಕೊಡದೆಯೇನು? ಆದರೆ ನಾನು ಪಂಚವಟಿಯನ್ನು ಸೂಚಿಸಿದ್ದು ಇದಕ್ಕಾಗಿ; ಅಲ್ಲಿ ಬಹಳವಾಗಿ ಭಗವನ್ನಾಮ ಸಂಕೀರ್ತನೆ, ಭಗವಚ್ಚಿಂತನೆ ನಡೆದಿದೆ."

ಮುಚ್ಚಂಜೆಯಾಯಿತು. ಪರಮಹಂಸರ ಕೊಠಡಿಗೆ ಧೂಪ ಹಾಕಲಾಯಿತು. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಭಗವಚ್ಚಿಂತನೆ ಮಾಡುತ್ತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತುಕೊಂಡಿದಾನೆ. ರಾಖಾಲ, ಲಾಟು, ರಾಮಲಾಲ ಇವರೂ ಕೊಠಡಿಯಲ್ಲಿ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳುತ್ತಿದಾರೆ: "ನೋಡು, ಮುಖ್ಯವಾಗಿ ಮಾಡಬೇಕಾದ್ದು— ಭಗವಂತನಲ್ಲಿ ಭಕ್ತಿ ಬೆಳಸಿಕೊಳ್ಳುವುದು, ಆತನನ್ನು ಪ್ರೀತಿಸುವುದು." ಪರಮಹಂಸರು ರಾಮಲಾಲನಿಗೆ ಹಾಡುವಂತೆ ಹೇಳಿದರು. ಆತ ತನ್ನ ಮಧುರ ಕಂಠದಿಂದ ಹಾಡುತ್ತಿದಾನೆ. ಪರಮಹಂಸರು ಪ್ರತಿಯೊಂದು ಹಾಡಿನ ಪಲ್ಲವಿಯನ್ನೂ ಎತ್ತಿಕೊಡುತ್ತಿದಾರೆ.

ರಾಮಲಾಲ ಈಗ ಹಾಡುತ್ತಿದಾನೆ:

ಓ ಎಂಥ ನೋಟವ ಕಂಡೆನು!
ಕೇಶವಭಾರತಿಯ ಕುಟಿಯೊಳಗೆ, ನಾ-
ನೆಂಥ ನೋಟವ ಕಂಡೆನು! . . . (ಉ. ೩೯೨)

ಬಳಿಕ ಆತ ಹಾಡಿದ:

ಮುಕ್ತಿಪದವನು ನೀಡಲೆನಗೆ ಮನವಿದ್ದರೂ
ಶುದ್ಧ ಭಕ್ತಿಯ ಕೊಡಲು ಹಿಂಜರಿವೆನು . . . .

ಶ್ರೀರಾಮಕೃಷ್ಣರು ರಾಮಲಾಲನಿಗೆ ಹೇಳುತ್ತಿದಾರೆ: "ಅದನ್ನು ಹಾಡು— 'ಗೌರಾಂಗ ನಿತ್ಯಾನಂದರೆನ್ನುವ ದಿವ್ಯ ಸೋದರವರ್ಯರೇ,'."

ರಾಮಲಾಲ ಹಾಡಲು ಶುರುಮಾಡಿದ. ಪರಮಹಂಸರು ಆತನೊಡನೆ ಕೂಡಿ ಹಾಡುತ್ತಿದಾರೆ:

ಗೌರಾಂಗ ನಿತ್ಯಾನಂದರೆನ್ನುವ
ದಿವ್ಯ ಸೋದರವರ್ಯರೇ,
ನೀವು ಕರುಣಾಪೂರ್ಣರೆಂಬುದ
ಕೇಳಿ ಬಂದೆನು ನಿಮ್ಮೆಡೆ . . . . ( ಉ. ೧೩೩ )

ನಹಬತ್‌ಖಾನೆಯ ಮೇಲಿನ ಕೊಠಡಿಯಲ್ಲಿ ಮಾಸ್ಟರ್ ಒಬ್ಬನೆ ಕುಳಿತಿದಾನೆ. ಇಂದು ಮಾರ್ಗಶಿರ ತಿಂಗಳ ಪೂರ್ಣಿಮೆ. ಆಕಾಶ, ಗಂಗೆ, ಕಾಳೀದೇವಾಲಯ, ದೇವಾಲಯಗಳ ಗೋಪುರ, ಉದ್ಯಾನಮಾರ್ಗ, ಪಂಚವಟಿ ಇವು ಬೆಳುದಿಂಗಳಿಂದ ಸುಮ್ಮನೆ ನಗುತ್ತಿವೆ. ಮಾಸ್ಟರ್ ಪರಮಹಂಸರ ಮೇಲೆ ಧ್ಯಾನಮಾಡುತ್ತಿದಾನೆ.

ರಾತ್ರಿ ಘಂಟೆ ಮೂರು. ಮಾಸ್ಟರ್ ಹಾಸಿಗೆಯಿಂದ ಎದ್ದು ಪರಮಹಂಸರ ಸಲಹೆಯಂತೆ ಪಂಚವಟಿಯ ಕಡೆ ಮುಂದುವರಿಯುತ್ತಿದಾನೆ. ಆತನಿಗೆ ನಹಬತ್‌ಖಾನೆಯ ಕೊಠಡಿ ಬೇಡವೆಂದೆನಿಸಿತು. ಪಂಚವಟಿಯ ಗುಡಿಸಿಲಿನಲ್ಲೇ ಇರಲು ಸ್ಥಿರಮಾಡಿಕೊಂಡುಬಿಟ್ಟ.

ಇದ್ದಕ್ಕಿದ್ದಹಾಗೆ ದೂರದಿಂದ ಯಾರೊ, "ಓ, ಅಣ್ಣಾ ಮಧುಸೂದನಾ! ಎಲ್ಲಿದೀಯೋ?" ಅಂತ ಆರ್ತನಾದ ಮಾಡುತ್ತಿದ್ದ ಹಾಗೆ ಕೇಳಿಬಂತು. ಪಂಚವಟಿಯ ದಟ್ಟ ಮರಗಳ ಸಂದಿಗೊಂದಿಗಳಿಂದ ಬೆಳುದಿಂಗಳು ಪ್ರವಹಿಸಿ ನೆಲದ ಮೇಲೆ ಬೀಳುತ್ತಿತ್ತು. ಹಾಗೇ ಸ್ವಲ್ಪ ದೂರ ಮುಂದುವರಿದನಂತರ ಕಂಡುಬಂತು, ಪರಮಹಂಸರ ಶಿಷ್ಯರಲ್ಲೊಬ್ಬ ಪಂಚವಟಿಯಲ್ಲಿ ಕುಳಿತಿರುವುದು. ಆತ ಆರ್ತನಾದ ಮಾಡುತ್ತಿದಾನೆ: "ಓ, ಅಣ್ಣಾ ಮಧುಸೂದನಾ! ಎಲ್ಲಿದೀಯೋ" ಅಂತ.

ಮಾಸ್ಟರ್ ಸ್ವಲ್ಪವೂ ಸದ್ದುಮಾಡದೆ ಆತನನ್ನೇ ದೃಷ್ಟಿಸಿ ನೋಡುತ್ತಿದಾನೆ.

೧೫ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಪಾಡ್ಯಮಿ, ಶನಿವಾರ.

ಮಾಸ್ಟರ್ ದಕ್ಷಿಣೇಶ್ವರದಲ್ಲಿ ಪರಮಹಂಸರೊಡನೆ ಇದ್ದುಕೊಂಡಿದಾನೆ. ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡು ರಾಮಲಾಲನ ಕೈಯಲ್ಲಿ ಭಕ್ತಮಾಲೆಯಿಂದ ಪ್ರಹ್ಲಾದನ ಚರಿತ್ರೆಯನ್ನು ಓದಿಸಿ ಕೇಳುತ್ತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತಿದಾನೆ. ರಾಖಾಲ,

ಲಾಟು, ಹರೀಶ ಇವರೂ ಕೊಠಡಿಯಲ್ಲಿ ಕುಳಿತಿದಾರೆ. ಹಾಜರಾ ವರಾಂಡ ದಲ್ಲಿ ಕುಳಿತಿದಾನೆ. ಪರಮಹಂಸರು ಪ್ರಹ್ಲಾದನ ಚರಿತ್ರೆಯನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಭಾವಾವಿಷ್ಟರಾಗುತ್ತಿದಾರೆ.

ಹಿರಣ್ಯಕಶಿಪುವಿನ ವಧೆಯಾದಾಗ, ನರಸಿಂಹನ ರೌದ್ರಮೂರ್ತಿಯನ್ನು ನೋಡಿ ಮತ್ತು ಆತನ ಸಿಂಹನಾದವನ್ನು ಕೇಳಿ ಬ್ರಹ್ಮಾದಿದೇವತೆಗಳೆಲ್ಲರೂ ಇನ್ನು ಎಲ್ಲಿ ಪ್ರಳಯವಾಗಿಬಿಡುವುದೊ ಏನೊ ಎಂದು ಹೆದರಿ ಪ್ರಹ್ಲಾದ ನನ್ನೇ ನರಸಿಂಹನ ಹತ್ತಿರಕ್ಕೆ ಕಳುಹಿಸಿದರು. ಪ್ರಹ್ಲಾದ ಮಗುವಿನ ಹಾಗೆ ನರಸಿಂಹನನ್ನು ಸ್ತೋತ್ರಮಾಡಲಾರಂಭಿಸಿದ. ಭಕ್ತವತ್ಸಲ ನಾದ ನರಸಿಂಹ ಪ್ರಹ್ಲಾದನ ಶರೀರವನ್ನು ಪ್ರೀತಿಯಿಂದ ನೆಕ್ಕಲಾರಂಭಿಸಿದ.

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಹೇಳುತ್ತಿದಾರೆ: "ಆಹಾ! ಆಹಾ! ಭಕ್ತನ ಮೇಲೆ ಎಷ್ಟೊಂದು ಪ್ರೀತಿ!" ಹೀಗೆಂದು ಹೇಳುತ್ತ ಹೇಳುತ್ತ ಇದ್ದ ಹಾಗೇ ಭಾವಸಮಾಧಿಸ್ಥರಾಗಿಬಿಟ್ಟರು. ಸ್ಪಂದ ಹೀನರಾಗಿಬಿಟ್ಟಿದಾರೆ. ಕಡೆಗಣ್ಣಿನಿಂದ ಪ್ರೇಮಾಶ್ರು ಸುರಿಯುತ್ತಿದೆ.

ಪರಮಹಂಸರು ಪ್ರಕೃತಿಸ್ಥರಾದನಂತರ ಮಾಸ್ಟರೊಡನೆ ಮಾತಾಡು ತ್ತಿದಾರೆ. ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರಿಯುತ್ತ ಯಾರು ಸ್ತ್ರೀ ಸಂಗ ಮಾಡುತ್ತಾರೊ ಅವರ ಸಂಬಂಧವಾಗಿ ಪರಮಹಂಸರು ತಮ್ಮ ಕೋಪ ತಾಪಗಳನ್ನು ಸೂಚಿಸುತ್ತಿದಾರೆ.

ಶ್ರೀರಾಮಕೃಷ್ಣರು: "ನಿನಗೇನು ನಾಚಿಕೆಯಾಗೋದಿಲ್ಲವೆ? ಮಕ್ಕ ಳಾಗಿದ್ದರೂ ಹೆಂಡತಿಯ ಸಹವಾಸ ಮಾಡುವುದು! ಅಸಹ್ಯ ತೋರೋ ದಿಲ್ಲವೆ ಪಶುವಿನ ಹಾಗೆ ವ್ಯವಹರಿಸಲು? ನರ, ರಕ್ತ, ಮಲ, ಮೂತ್ರ ಇವುಗಳಿಂದ ಕೂಡಿದ ದೇಹ ನೋಡಿ ಹೇವರಿಕೆಯಾಗೋದಿಲ್ಲವೆ? ಯಾರು ಭಗವಂತನ ಪಾದಪದ್ಮಗಳ ಚಿಂತನೆಯನ್ನು ಮಾಡುತ್ತಾನೊ, ಆತನಿಗೆ ಪರಮ ಸುಂದರ ರಮಣಿಯೂ ಚಿತೆಯ ಭಸ್ಮದ ಹಾಗೆ ತೋರಿಬರುತ್ತಾಳೆ. ಯಾವ ಶರೀರ ನಶ್ವರವಾದ್ದೊ, ಯಾವುದರಲ್ಲಿ ಕ್ರಿಮಿ, ಕೀವು, ಶ್ಲೇಷ್ಮ, ಇವೇ ಮುಂತಾದ ಅಸಹ್ಯ ವಸ್ತುಗಳು ತುಂಬಿವೆಯೊ ಅಂಥ ಶರೀರದೊಡನೆ ಆನಂದಪಡುವುದು! ಏನು, ನಾಚಿಕೆಯಾಗೋದಿಲ್ಲವೆ?"

ಮಾಸ್ಟರ್ ಲಜ್ಜೆಯಿಂದ ತಲೆ ತಗ್ಗಿಸಿಕೊಂಡು ಸುಮ್ಮನೆ ಕುಳಿತಿ ದಾನೆ.

ಶ್ರೀರಾಮಕೃಷ್ಣರು: "ಭಗವತ್ಪ್ರೇಮದ ಒಂದು ಬಿಂದುವೇ ಆಗಲಿ

ಯಾರಿಗಾದರೂ ದೊರೆತದ್ದೇ ಆದರೆ, ಕಾಮಕಾಂಚನ ಅತಿ ತುಚ್ಛವಾಗಿ ತೋರಿಬರುತ್ತವೆ. ಕಲ್ಲುಸಕ್ಕರೆಯ ಪಾನಕ ದೊರೆಯಿತು ಎಂದರೆ, ಜೋನಿ ಬೆಲ್ಲದ ಪಾನಕ ತುಚ್ಛವಾಗಿ ತೋರುತ್ತದೆ. ಭಗವಂತನನ್ನು ವ್ಯಾಕುಲ ಚಿತ್ತದಿಂದ ಪ್ರಾರ್ಥನೆಮಾಡಿದರೆ, ಆತನ ನಾಮಗುಣಕೀರ್ತನೆಯನ್ನು ಸರ್ವದಾ ಮಾಡುತ್ತಿದ್ದರೆ, ಆತನಲ್ಲಿ ಪ್ರೀತಿ ಕ್ರಮೇಣ ಉದ್ಭವವಾಗಿ ಬಿಡುತ್ತದೆ.''

ಪರಮಹಂಸರು ಪ್ರೇಮೋನ್ಮತ್ತರಾಗಿ ಕೊಠಡಿಯಲ್ಲಿ ಸುತ್ತಿ ಸುತ್ತಿ ನರ್ತಿಸುತ್ತ ಹಾಡಲಾರಂಭಿಸಿದಾರೆ:

ಗಂಗಾತೀರದಿ ಶ್ರೀಹರಿನಾಮವ
ನುತಿಸುವ ಇವನಾರು ?
ಸಗ್ಗದ ಒಲವನು ಈ ತಿರೆಗೆರೆಯುವ
ನಿತ್ಯಾನಂದನು ಇವನೇನು ?

ಘಂಟೆ ಬೆಳಗಿನ ಹತ್ತು. ರಾಮಲಾಲ ಕಾಳೀದೇವಾಲಯದ ನಿತ್ಯ ಪೂಜೆಯನ್ನು ಮಾಡಿ ಮುಗಿಸಿದಾನೆ. ಪರಮಹಂಸರು ಮಾಸ್ಟರೊಡನೆ ಕಾಳೀದೇವಾಲಯಕ್ಕೆ ಹೋಗುತ್ತಿದಾರೆ. ಗರ್ಭಗೃಹವನ್ನು ಪ್ರವೇಶಿಸಿ ಆಸನದಲ್ಲಿ ಕುಳಿತುಕೊಂಡರು. ಈಗ ಭಗವತಿಯ ಪಾದಪದ್ಮಗಳಿಗೆ ಒಂದೆರಡು ಹೂವುಗಳನ್ನು ಅರ್ಪಿಸುತ್ತಿದಾರೆ. ತಮ್ಮ ತಲೆಯ ಮೇಲೂ ಹೂವನ್ನು ಇಟ್ಟು ಧ್ಯಾನಮಾಡಲಾರಂಭಿಸಿದಾರೆ. ಈಗ ಭಗವತಿಗೆ ಒಂದು ಹಾಡು ಹಾಡುತ್ತಿದಾರೆ:

ಓ ಶರ್ವಪ್ರಿಯೆ ತಾಯಿ, ಸಕಲ ಭಯಹಾರಿಣಿಯೆ
ನಿನ್ನ ನಾಮವ ನಾನು ಕೇಳಿರುವೆನು, . . .

ಪರಮಹಂಸರು ಕಾಳೀದೇವಾಲಯದಿಂದ ಹಿಂದಿರುಗಿಬಂದು ತಮ್ಮ ಕೊಠಡಿಯ ಆಗ್ನೇಯ ವರಾಂಡದಲ್ಲಿ ಕುಳಿತಿದಾರೆ. ಭಗವತಿಯ ಮತ್ತು ರಾಧಾಕಾಂತ ದೇವಾಲಯಗಳ ಹಣ್ಣು ಹಂಪಲಗಳ ಪ್ರಸಾದವನ್ನು ತಾವೂ ತೆಗೆದುಕೊಳ್ಳುತ್ತ ಭಕ್ತರಿಗೂ ಹಂಚುತ್ತಿದಾರೆ.

ಪರಮಹಂಸರ ಹತ್ತಿರ ರಾಖಾಲ ಕುಳಿತುಕೊಂಡು "ಸ್ಮೈಲ್ಸ್" ಎಂಬುವವನ "ಸೆಲ್ಫ್-ಹೆಲ್ಪ್" ಎಂಬ ಗ್ರಂಥದಿಂದ "ಲಾರ್ಡ್ ಎರ್‌ಸ್ಕಿನ್" ಎಂಬುವವನ ವಿಷಯವಾಗಿ ಓದುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಈ ಪುಸ್ತಕ ಏನು ಹೇಳುತ್ತದೆ?"

ಮಾಸ್ಟರ್: "ಇದು ಹೇಳುತ್ತದೆ, ಲಾರ್ಡ್ ಎರ್‌ಸ್ಕಿನ್ ಎಂಬುವನು ಫಲಾಕಾಂಕ್ಷೆಯಿಲ್ಲದೆ ತನ್ನ ಕೆಲಸಗಳನ್ನು ಮಾಡುತ್ತಿದ್ದ—ನಿಷ್ಕಾಮ ಕರ್ಮ ಮಾಡುತ್ತಿದ್ದ."

ಶ್ರೀರಾಮಕೃಷ್ಣರು: "ಹಾಗಾದರೆ, ಇದು ಬಹಳ ಒಳ್ಳೆಯದೆ. ಆದರೆ ಪೂರ್ಣ ಜ್ಞಾನಿ ತನ್ನ ಹತ್ತಿರ ಒಂದು ಪುಸ್ತಕವನ್ನೂ ಇಟ್ಟುಕೊಳ್ಳುವುದಿಲ್ಲ. ಎಲ್ಲವೂ ಆತನ ನಾಲಗೆ ತುದಿಯಲ್ಲಿ. ಉದಾಹರಣೆಗೆ ಶುಕದೇವ. ಪುಸ್ತಕಗಳಲ್ಲಿ, ಎಂದರೆ ಶಾಸ್ತ್ರಗಳಲ್ಲಿ ಸಕ್ಕರೆ ಮರಳು ಮಿಶ್ರವಾಗಿ ಹೋಗಿವೆ. ಸಾಧು ಸಕ್ಕರೆಯನ್ನು ಮಾತ್ರ ಸ್ವೀಕರಿಸಿ ಮರಳನ್ನು ತ್ಯಜಿಸಿ ಬಿಡುತ್ತಾನೆ. ಸಾಧು ಸಾರವನ್ನು ಮಾತ್ರ ಗ್ರಹಿಸುತ್ತಾನೆ."

ಕೀರ್ತನಕಾರ ವೈಷ್ಣವಚರಣ ಬಂದಿದಾನೆ. ಈಗ ಆತ ಕೀರ್ತನೆ ಮಾಡುತ್ತಿದಾನೆ.

ಮಾಸ್ಟರ್ ನಹಬತ್‌ಖಾನೆಯಲ್ಲಿ ತನ್ನ ರಾತ್ರಿಯನ್ನು ಕಳೆದ.

೧೬ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಬಿದಿಗೆ, ಭಾನುವಾರ.

ಪರಮಹಂಸರು ಮಾಸ್ಟರೊಡನೆ ತಮ್ಮ ಕೊಠಡಿಯ ಅರ್ಧಚಂದ್ರಾಕಾರದ ವರಾಂಡದಲ್ಲಿ ಕುಳಿತಿದಾರೆ. ಘಂಟೆ ಬೆಳಗಿನ ಹತ್ತು. ಸಮೀಪದಲ್ಲೆ ಕಣಗಿಲು, ಮಲ್ಲಿಗೆ, ಗುಲಾಬಿ ಇವೇ ಮೊದಲಾದ ಹೂವು ಗಿಡಗಳು ಹೂವು ತುಂಬಿ ಸುಮ್ಮನೆ ನಗುತ್ತಿವೆ. ಪರಮಹಂಸರು ಮಾಸ್ಟರ ಕಡೆ ನೋಡುತ್ತ ಹಾಡುತ್ತಿದಾರೆ:

ನೀನೆ ಕಾಪಿಡಬೇಕು, ನಾನಿದೋ ಶರಣಾದೆ
ನಿನ್ನ ಪದಕೆ;
ಪಂಜರದ ಒಳಗಿರುವ ಪಕ್ಷಿಯಂದದಿ ನಾನು
ನಿಸ್ಸಹಾಯಕನಾಗಿ ಬಳಲುತಿರುವೆ.
ಅನಂತ ಅಪರಾಧಿ, ಜ್ಞಾನಶೂನ್ಯನು ನಾನು
ಕರು ಕಳೆದ ಗೋವಿನೊಲು ಭ್ರಮಿಸುತಿರುವೆ.

ಶ್ರೀರಾಮಕೃಷ್ಣರು: "ಏಕೆ? ಪಂಜರದ ಹಕ್ಕಿಯಂತೆ ಏಕೆ ಆಗಲು ಹೋಗಲಿ? ಹ್ಯಾಕ್, ಥೂ!"

ಹೀಗೆಂದು ಹೇಳುತ್ತ ಹೇಳುತ್ತ ಇದ್ದ ಹಾಗೇ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ಶರೀರ ಸ್ಥಿರವಾಗಿಬಿಟ್ಟಿದೆ; ಮನಸ್ಸು ಕೆಲಸಮಾಡುವುದನ್ನು ನಿಲ್ಲಿಸಿಬಿಟ್ಟಿದೆ; ಕೆನ್ನೆಗಳ ಮೇಲೆ ಪ್ರೇಮಾಶ್ರು ಇಳಿದುಬರುತ್ತಿದೆ.

ಸ್ವಲ್ಪ ಹೊತ್ತಾದ ಮೇಲೆ ಹೇಳಲಾರಂಭಿಸಿದಾರೆ: "ತಾಯೆ, ನನ್ನನ್ನು ಸೀತೆಯಂತೆ ಮಾಡಿಬಿಡು. ಆಕೆ ಒಮ್ಮೆಗೇ ಎಲ್ಲವನ್ನೂ ಮರೆತುಬಿಟ್ಟಿದ್ದಳು—ಶರೀರ, ಕೈ, ಕಾಲು, ಇಂದ್ರಿಯಗಳು ಇವುಗಳಾವುದರ ಅರಿವೇ ಅವಳಿಗಿರಲಿಲ್ಲ. ಅವಳಿಗಿದ್ದ ಕೇವಲ ಒಂದೇ ಒಂದು ಚಿಂತನೆ: 'ರಾಮ ಎಲ್ಲಿ?'"

ಯಾವ ರೀತಿಯಾದ ವ್ಯಾಕುಲತೆಯುಂಟಾದರೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ ಎಂಬುದನ್ನು ಮಾಸ್ಟರಿಗೆ ತೋರಿಸಿಕೊಡಲು ಪರಮಹಂಸರಿಗೆ ಸೀತೆಯ ಉದ್ದೀಪನವಾಯಿತೆ? ಸೀತೆ ರಾಮಮಯಜೀವಿತೆ—ರಾಮಚಿಂತನೆಯಿಂದ ಉನ್ಮಾದಿನಿ. ಶರೀರವೆಂಬುದು ಅಂಥ ಪ್ರಿಯವಾದ ವಸ್ತು. ಅದನ್ನೂ ಆಕೆ ಮರೆತುಬಿಟ್ಟಿದ್ದಳು.

ಘಂಟೆ ಅಪರಾಹ್ನ ನಾಲ್ಕು. ಪ್ರಾಣಕೃಷ್ಣನ ಸಂಬಂಧಿ ಮುಖ್ಯೋಪಾಧ್ಯಾಯ ತನ್ನೊಡನೆ ಒಬ್ಬ ಶಾಸ್ತ್ರಜ್ಞ ಬ್ರಾಹ್ಮಣನನ್ನು ಕರೆದುಕೊಂಡುಬಂದು ಕೊಠಡಿಯನ್ನು ಪ್ರವೇಶಿಸಿದ.

ಮುಖ್ಯೋಪಾಧ್ಯಾಯ: "ನಿಮ್ಮ ದರ್ಶನ ದೊರೆತು ನನಗೆ ಬಹಳ ಆನಂದವಾಗಿಬಿಟ್ಟದೆ."

ಶ್ರೀರಾಮಕೃಷ್ಣರು: "ಭಗವಂತ ಎಲ್ಲರಲ್ಲಿಯೂ ಇದಾನೆ. ಎಲ್ಲರಲ್ಲಿರುವುದೂ ಆ ಒಂದೇ ಚಿನ್ನ. ಆದರೆ ಕೆಲವೆಡೆಗಳಲ್ಲಿ ಹೆಚ್ಚಾಗಿ ಪ್ರಕಾಶವಾಗಿದಾನೆ. ಸಂಸಾರಿಗಳಲ್ಲಿಯೂ ಭಗವಂತನಿದಾನೆ. ಆದರೆ ಅವರಲ್ಲಿ ಮಣ್ಣು ಮುಚ್ಚಿದ ಚಿನ್ನದ ಹಾಗೆ ಮುಚ್ಚಿಹೋಗಿಬಿಟ್ಟಿದಾನೆ."

ಮುಖ್ಯೋಪಾಧ್ಯಾಯ: "ಮಹಾಶಯರೆ, ಇಹಕ್ಕು ಪರಕ್ಕು ಏನು ವ್ಯತ್ಯಾಸ?"

ಶ್ರೀರಾಮಕೃಷ್ಣರು: "ಸಾಧನೆಯ ಸಮಯದಲ್ಲಿ 'ನೇತಿ, ನೇತಿ' ಮಾರ್ಗ ಅನುಸರಿಸಿ ಎಲ್ಲವನ್ನೂ ತ್ಯಾಗಮಾಡಬೇಕಾಗುತ್ತದೆ. ಆದರೆ ಭಗವಂತನ ಸಾಕ್ಷಾತ್ಕಾರ ದೊರೆತನಂತರ ಗೊತ್ತಾಗುತ್ತದೆ, ಆತನೇ ಎಲ್ಲವೂ ಆಗಿದಾನೆ.

"ಒಮ್ಮೆ ರಾಮಚಂದ್ರನಿಗೆ ತೀವ್ರ ವೈರಾಗ್ಯ ಬಂದುಬಿಟ್ಟಿತು. ಅದನ್ನು ನೋಡಿ ದಶರಥ ಬಹಳ ಚಿಂತಿತನಾಗಿ ವಸಿಷ್ಠನನ್ನು ಸಮೀಪಿಸಿ ರಾಮ ಸಂಸಾರವನ್ನು ತ್ಯಾಗಮಾಡದ ಹಾಗೆ ಬುದ್ಧಿವಾದವೀಯಬೇಕೆಂದು ಬೇಡಿಕೊಂಡ. ವಸಿಷ್ಠ ರಾಮನ ಹತ್ತಿರಕ್ಕೆ ಬಂದು ನೋಡುತ್ತಾನೆ, ಆತ

ವಿಮನಸ್ಕನಾಗಿ ಕುಳಿತಿದಾನೆ. ಅಂತರ್ಯದಲ್ಲಿ ತೀವ್ರ ವೈರಾಗ್ಯ ತುಂಬಿ ತುಳುಕಾಡುತ್ತಿದೆ. ವಸಿಷ್ಠ ಆತನಿಗೆ ಹೇಳಿದ: 'ನೀನು ಸಂಸಾರವನ್ನು ಏಕೆ ತ್ಯಾಗಮಾಡಬೇಕು? ಸಂಸಾರ ಆತನಿಂದ ಹೊರಗಿದೆಯೇನು? ನನ್ನೊಡನೆ ವಿಚಾರಮಾಡಿನೋಡು.' ರಾಮನ ಅನುಭವಕ್ಕೆ ಬಂತು, ಈ ಜಗತ್ತು ಪರಬ್ರಹ್ಮನಿಂದಲೇ ಉದ್ಭವವಾಗಿದೆ ಎಂದು. ಅದಕ್ಕಾಗಿ ಆತ ಸುಮ್ಮನೆಆಗಿಬಿಟ್ಟ.

"ಯಾವ ವಸ್ತುವಿನಿಂದ ಮಜ್ಜಿಗೆ ಆಗಿದೆಯೊ ಅದೇ ವಸ್ತುವಿನಿಂದ ಬೆಣ್ಣೆ ಕೂಡ. ಈ ಅನುಭವವಾದವನಿಗೆ ಗೊತ್ತಾಗುತ್ತದೆ, ಮಜ್ಜಿಗೆ ಬೆಣ್ಣೆಗೆ ಸೇರಿದುದೇ, ಬೆಣ್ಣೆ ಮಜ್ಜಿಗೆಗೆ ಸೇರಿದುದೇ. ಬಹಳ ಕಷ್ಟಪಟ್ಟು ಬೆಣ್ಣೆ ಯನ್ನು ತೆಗೆದನಂತರ, ಎಂದರೆ ಬ್ರಹ್ಮಜ್ಞಾನವನ್ನು ಪಡೆದನಂತರ ಅನುಭವ ವಾಗುತ್ತದೆ, ಬೆಣ್ಣೆ ಇತ್ತು ಎಂದರೆ ಮಜ್ಜಿಗೆಯೂ ಇರಲೇಬೇಕು, ಮಜ್ಜಿಗೆ ಇತ್ತು ಎಂದರೆ ಬೆಣ್ಣೆಯೂ ಇರಲೇಬೇಕು. ಬ್ರಹ್ಮನಿದಾನೆ ಎಂಬ ಬೋಧೆ ಇತ್ತು ಎಂದರೆ, ಜೀವಜಗತ್ತು, ಚತುರ್ವಿಂಶತಿ ತತ್ತ್ವ ಇವುಗಳ ಬೋಧೆಯೂ ಆಗೇ ಆಗುತ್ತದೆ.

"ಬ್ರಹ್ಮ ಏನು ಎಂಬುದನ್ನ ಬಾಯಿಂದ ಹೇಳಲಾಗೋದಿಲ್ಲ. ಎಲ್ಲಾ ವಸ್ತುಗಳೂ ಉಚ್ಛಿಷ್ಟವಾಗಿಹೋಗಿವೆ, ಎಂದರೆ ಬಾಯಿಂದ ಹೇಳಲ್ಪಟ್ಟಿವೆ. ಆದರೆ ಬ್ರಹ್ಮ ಏನು ಎಂಬುದನ್ನ ಯಾರ ಕೈಯಲ್ಲೂ ಬಾಯಿಂದ ಹೇಳ ಲಾಗೋದಿಲ್ಲ. ಅದಕ್ಕಾಗಿ ಅದು ಉಚ್ಛಿಷ್ಟವಾಗಿಹೋಗಿಲ್ಲ. ಈ ವಿಷಯ ವನ್ನು ಒಮ್ಮೆ ನಾನು ವಿದ್ಯಾಸಾಗರನಿಗೆ ತಿಳಿಸಿದೆ. ಆತನಿಗೆ ಇದನ್ನು ಕೇಳಿ ಬಹಳ ಆನಂದವಾಗಿಬಿಟ್ಟಿತು.

"ಆದರೆ ವಿಷಯಬುದ್ಧಿ ಲೇಶಮಾತ್ರವಿದ್ದರೂ ಬ್ರಹ್ಮಜ್ಞಾನ ದೊರೆ ಯೋದಿಲ್ಲ. ಕಾಮಕಾಂಚನಾಸಕ್ತಿ ಮನಸ್ಸಿನಲ್ಲಿ ಒಂದು ಕಿಂಚಿತ್ತೂ ಇಲ್ಲದೆ ಇತ್ತು ಎಂದರೆ ಮಾತ್ರ ಅದು ದೊರೆಯುತ್ತದೆ. ಗಿರಿರಾಜನಿಗೆ ಪಾರ್ವತಿ ಹೇಳಿದಳು: 'ತಂದೆ, ನಿಮಗೆ ಬ್ರಹ್ಮಜ್ಞಾನ ಬೇಕಾದರೆ ನೀವು ಸಾಧುಸಂಗ ಮಾಡಿ.'"

ಶ್ರೀರಾಮಕೃಷ್ಣರು ಮುಖ್ಯೋಪಾಧ್ಯಾಯನನ್ನು ಸಂಬೋಧಿಸಿ ಹೇಳು ತ್ತಿದಾರೆ: "ನಿನಗೆ ಧನ ಐಶ್ವರ್ಯ ಎಲ್ಲಾ ಇದ್ದರೂ ಭಗವಂತನ ಧ್ಯಾನ ಮಾಡುತ್ತಿದೀಯೆ. ಇದು ಬಹಳ ಒಳ್ಳೆಯದು. ಗೀತೆಯಲ್ಲಿ ಹೇಳಿದೆ,

ಯಾರು ಯೋಗಭ್ರಷ್ಟರೊ ಅವರು ಭಕ್ತರಾಗಿ ಐಶ್ವರ್ಯವಂತರ ಮನೆಗಳಲ್ಲಿ ಜನ್ಮವೆತ್ತುತ್ತಾರೆ.''

ಮುಖ್ಯೋಪಾಧ್ಯಾಯ ಗೀತೆಯಿಂದ ಆ ಶ್ಲೋಕವನ್ನು ಉದ್ಧರಿಸಿದ.

ಶ್ರೀರಾಮಕೃಷ್ಣರು: "ಭಗವಂತ ಇಚ್ಛೆಪಟ್ಟರೆ ಆದರೆ ಜ್ಞಾನಿಯನ್ನೂ ಸಂಸಾರದಲ್ಲಿ ಇಡಬಲ್ಲ. ಆತನ ಇಚ್ಛೆಯಿಂದಲೇ ಈ ಜೀವ ಜಗತ್ತು ಉಂಟಾಗಿವೆ. ಆತ ಇಚ್ಛಾಮಯ.''

ಮುಖ್ಯೋಪಾಧ್ಯಾಯ ನಗುತ್ತ: "ಅವನಿಗೆಲ್ಲಿಂದ ಬಂತು ಇಚ್ಛೆ? ಆತನಿಗೇನಾದರೂ ಅಭಾವ ಎಂಬುದು ಇದೆಯೇ?"

ಶ್ರೀರಾಮಕೃಷ್ಣರು ನಗುತ್ತ: "ಅದರಲ್ಲಿ ತಪ್ಪೇನಿದೆ? ನೀರು ಸುಮ್ಮನೆ ನಿಂತಿದ್ದರೂ ನೀರೇ, ಅಲೆಗಳಾಗಿ ಎದ್ದಿದ್ದರೂ ನೀರೇ. ಹಾವು ಸುರುಳಿ ಸುತ್ತಿ ಸುಮ್ಮನೆ ಬಿದ್ದಿದ್ದರೂ ಹಾವೇ, ಸೊಟ್ಟಸೊಟ್ಟವಾಗಿ ಹರಿದು ಹೋಗುತ್ತಿದ್ದರೂ ಹಾವೇ. ಮನುಷ್ಯ ಸುಮ್ಮನೆ ಕುಳಿತಿದ್ದರೂ ಮನುಷ್ಯನೇ, ಕೆಲಸದಲ್ಲಿ ತೊಡಗಿದ್ದರೂ ಮನುಷ್ಯನೇ.

"ಜೀವಜಗತ್ತನ್ನು ಬ್ರಹ್ಮನಿಂದ ಹೊರ ಹಾಕುವುದು ಹೇಗೆ? ಹಾಗೆ ಮಾಡಿದರೆ ತೂಕ ಕಡಮೆಯಾಗಿಬಿಡುತ್ತದೆ. ಬೇಲದ ಹಣ್ಣಿನ ಬೀಜ ಮತ್ತು ಕರಟವನ್ನು ಹೊರಕ್ಕೆ ಬಿಸಾಡಿಬಿಟ್ಟರೆ ಬೇಲದ ಹಣ್ಣಿನ ನಿಜವಾದ ತೂಕ ದೊರೆಯೋದಿಲ್ಲ.

"ಬ್ರಹ್ಮ ನಿರ್ಲಿಪ್ತ. ಗಾಳಿಯಲ್ಲಿ ಸುಗಂಧ ದುರ್ಗಂಧಗಳಿರುವುದನ್ನು ನಾವು ಅನುಭವಿಸಬಹುದು. ಆದರೆ ಗಾಳಿ ಮಾತ್ರ ಅವುಗಳಿಂದ ನಿರ್ಲಿಪ್ತ ವಾಗಿದೆ. ಬ್ರಹ್ಮನಿಗು ಶಕ್ತಿಗು ಯಾವ ಭೇದವೂ ಇಲ್ಲ. ಆ ಆದ್ಯಾ-ಶಕ್ತಿಯೇ ಈ ಜೀವಜಗತ್ತಾಗಿ ಆಗಿದೆ.''

ಮುಖ್ಯೋಪಾಧ್ಯಾಯ: "ಯೋಗಭ್ರಷ್ಟನಾಗಲು ಕಾರಣವೇನು?"

ಶ್ರೀರಾಮಕೃಷ್ಣರು: "ಒಂದು ಹೇಳಿಕೆ ಇದೆ: 'ಗರ್ಭದಲ್ಲಿದ್ದಾಗ ಯೋಗದಲ್ಲಿದ್ದೆ. ಭೂಮಿಗೆ ಬಂದು ಮಣ್ಣು ಮುಕ್ಕಿದೆ. ಸೂಲಗಿತ್ತಿ ಯೇನೊ ಒಂದು ಬಂಧನವನ್ನು—ಹೊಕ್ಕಳುಬಳ್ಳಿಯನ್ನು—ಕತ್ತರಿಸಿಹಾಕಿದಳು; ಆದರೆ ನಾನು ಮಾಯಾ ಬಂಧನವನ್ನು ಕತ್ತರಿಸುವ ಬಗೆ ಹೇಗೆ?'

"ಕಾಮ, ಕಾಂಚನ ಇವೇ ಮಾಯೆ. ಮನಸ್ಸನ್ನು ಇವೆರಡೂ ಬಿಟ್ಟುತೊಲಗಿದುವು ಎಂದರೇ ಯೋಗವುಂಟಾಗುತ್ತದೆ. ಆತ್ಮ, ಎಂದರೆ ಪರಮಾತ್ಮ ಸೂಜಿಗಲ್ಲು; ಜೀವಾತ್ಮ ಸೂಜಿ. ಆತ ಎಳೆದುಕೊಂಡರೇ

ಯೋಗ. ಆದರೆ ಸೂಜಿಗೆ ಮಣ್ಣು ಮೆತ್ತಿಕೊಂಡಿದ್ದರೆ ಸೂಜಿಗಲ್ಲು ಅದನ್ನು ಎಳೆಯಲಾರದು; ಮಣ್ಣನ್ನು ತೊಳೆದುಬಿಟ್ಟರೆ ಅದು ಎಳೆದುಬಿಡುತ್ತದೆ. ಕಾಮ ಕಾಂಚನಗಳೆಂಬ ಮಣ್ಣನ್ನು ತೊಳೆಯಬೇಕು.''

ಮುಖ್ಯೋಪಾಧ್ಯಾಯ: ''ಅದನ್ನು ತೊಳೆಯೋ ಬಗೆ ಹೇಗೆ?''

ಶ್ರೀರಾಮಕೃಷ್ಣರು: ''ಭಗವಂತನಿಗಾಗಿ ವ್ಯಾಕುಲತೆಯಿಂದ ಅಳು. ಆತನಿಗಾಗಿ ಸುರಿಸಿದ ಕಣ್ಣೀರು ಮಣ್ಣನ್ನು ತೊಳೆದುಬಿಡುತ್ತದೆ. ನೀನು ಹಾಗೆ ಮಾಡಿ ಪರಿಶುದ್ಧನಾಗಿಬಿಟ್ಟೆ ಎಂದರೆ, ಆಗ ಸೂಜಿಗಲ್ಲು ನಿನ್ನನ್ನು ಎಳೆದುಬಿಡುತ್ತದೆ. ಆಗ ಮಾತ್ರವೇ ಯೋಗ.''

ಮುಖ್ಯೋಪಾಧ್ಯಾಯ: ''ಆಹಾ! ಎಂಥ ದಿವ್ಯವಾದ ಮಾತು!''

ಶ್ರೀರಾಮಕೃಷ್ಣರು: ''ಭಗವಂತನಿಗಾಗಿ ಅಳುವುದಾದರೆ ಆತನ ದರ್ಶನ ದೊರೆಯುತ್ತದೆ—ಸಮಾಧಿಯುಂಟಾಗುತ್ತದೆ. ಯೋಗ ಸಿದ್ಧಿಸಿತು ಎಂದರೇ ಸಮಾಧಿ. ಭಗವಂತನಿಗಾಗಿ ಅತ್ತರೆ ಕುಂಭಕ ತಾನಾಗೇ ಉಂಟಾಗುತ್ತದೆ. ಮುಂದಿನ ಮೆಟ್ಟಲೇ ಸಮಾಧಿ.

''ಇನ್ನೊಂದು ಮಾರ್ಗವಿದೆ—ಧ್ಯಾನದ್ದು. ಸಹಸ್ರಾರದಲ್ಲಿ ಶಿವ ವಿಶೇಷರೂಪದಿಂದ ಇದಾನೆ. ಆತನ ಮೇಲೆ ಧ್ಯಾನಮಾಡಬೇಕು. ಶರೀರ ತಟ್ಟೆಯಿದ್ದ ಹಾಗೆ; ಮನಸ್ಸು, ಬುದ್ಧಿ ನೀರು ಇದ್ದಹಾಗೆ. ಈ ನೀರಿನಲ್ಲಿ ಸಚ್ಚಿದಾನಂದ ಸೂರ್ಯನ ಪ್ರತಿಬಿಂಬ ಬೀಳುತ್ತದೆ. ಆ ಪ್ರತಿಬಿಂಬಿತ ಸೂರ್ಯನ ಧ್ಯಾನ ಮಾಡುತ್ತ ಮಾಡುತ್ತ ಭಗವಂತನ ಕೃಪೆಯಿಂದ ಸತ್ಯವಾದ ಸೂರ್ಯನ ದರ್ಶನ ದೊರೆಯುತ್ತದೆ.

''ಆದರೆ ಸಂಸಾರಿಗಳಿಗೆ ಸರ್ವದಾ ಸಾಧುಸಂಗ ಆವಶ್ಯಕ. ಎಲ್ಲರಿಗೂ ಅದು ಬೇಕಾದ್ದೆ—ಸನ್ಯಾಸಿಗಳಿಗು ಕೂಡ. ಆದರೆ ಸಂಸಾರಿಗಳಿಗೆ ವಿಶೇಷತಃ. ಸಂಸಾರಿ ಕಾಮಕಾಂಚನಗಳ ಮಧ್ಯೆ ಇರಬೇಕಾಗಿರುವುದರಿಂದ ಆತನಿಗೆ ರೋಗ ತಗುಲಿಕೊಂಡೇ ಇರುತ್ತದೆ.''

ಮುಖ್ಯೋಪಾಧ್ಯಾಯ: ''ಹೌದು, ಆತನಿಗೆ ರೋಗ ತಗುಲಿಕೊಂಡೇ ಇದೆ.''

ಶ್ರೀರಾಮಕೃಷ್ಣರು: ''ಭಗವಂತನಿಗೆ ವಕಾಲತ್ತು ವಹಿಸಿಬಿಡು. ಆತ ತನಗಿಚ್ಛೆಬಂದಂತೆ ಮಾಡಲಿ. ನೀನು ಬೆಕ್ಕಿನ ಮರಿಯ ಹಾಗೆ ವ್ಯಾಕುಲನಾಗಿ ಆತನನ್ನು ಕರೆ. ತಾಯಿ ಬೆಕ್ಕು ತನಗಿಚ್ಛೆಬಂದ ಎಡೆಯಲ್ಲಿ ಅದನ್ನು ಇಡುತ್ತದೆ. ಮರಿಗೆ ಏನೂ ಗೊತ್ತಿರುವುದಿಲ್ಲ. ಅದು ಮರಿಯನ್ನು ಕೆಲವು

ವೇಳೆ ಹಾಸಿಗೆಯ ಮೇಲೆ ಇಡುತ್ತದೆ, ಇನ್ನು ಕೆಲವು ವೇಳೆ ಒಲೆಯ ಬೂದಿಯ ಮೇಲೆ ಇಡುತ್ತದೆ.''

ಮುಖ್ಯೋಪಾಧ್ಯಾಯ: ''ಭಗವದ್ಗೀತೆ ಮೊದಲಾದುವುಗಳನ್ನು ಓದುವುದು ಮೇಲು.''

ಶ್ರೀರಾಮಕೃಷ್ಣರು: ''ಕೇವಲ ಓದುವುದರಿಂದಲೇ ಆಗಲಿ, ಅಥವಾ ಕೇಳುವುದರಿಂದಲೇ ಆಗಲಿ ಏನು ಪ್ರಯೋಜನ? ಕೆಲವರು ಹಾಲಿನ ವಿಷಯವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ, ಮತ್ತೆ ಕೆಲವರು ಅದನ್ನು ಕುಡಿದಿದಾರೆ. ಭಗವಂತನನ್ನು ನಿಜವಾಗಿ ದರ್ಶನಮಾಡಬಹುದು; ಅಷ್ಟೇ ಏಕೆ, ಆತನೊಡನೆ ಮಾತುಕತೆಯನ್ನೂ ಆಡಬಹುದು.

''ಮೊದಲನೆಯ ಹಂತ ಪ್ರವರ್ತಕನದು. ಆತ ಓದುತ್ತಾನೆ, ಕೇಳುತ್ತಾನೆ. ಎರಡನೆಯದು ಸಾಧಕನ ಹಂತ. ಆತ ಭಗವಂತನಿಗೆ ಪ್ರಾರ್ಥನೆ ಸಲ್ಲಿಸುತ್ತಾನೆ, ಧ್ಯಾನ ಚಿಂತನೆ ಮಾಡುತ್ತಾನೆ, ನಾಮಗುಣ ಕೀರ್ತನೆ ಮಾಡುತ್ತಾನೆ. ಮೂರನೆಯ ಹಂತ ಸಿದ್ಧನದು. ಭಗವಂತನನ್ನು ತನ್ನ ಅಂತರ್ಯದಲ್ಲಿ ಅರಿತುಕೊಂಡಿರುತ್ತಾನೆ, ದರ್ಶನಮಾಡಿರುತ್ತಾನೆ. ಕೊನೆಯ ಹಂತ ಸಿದ್ಧರಸಿದ್ಧನದು. ಉದಾಹರಣೆಗೆ ಚೈತನ್ಯನದು. ಕೆಲವು ವೇಳೆ ವಾತ್ಸಲ್ಯಭಾವದಿಂದ ಇರುತ್ತಾನೆ, ಇನ್ನು ಕೆಲವು ವೇಳೆ ಮಧುರ ಭಾವದಿಂದ ಇರುತ್ತಾನೆ.''

ಮಾಸ್ಟರ್, ರಾಖಾಲ, ಯೋಗಿನ್, ಲಾಟು ಮೊದಲಾದ ಭಕ್ತರು ಈ ದೇವದುರ್ಲಭ ವಿಷಯಗಳನ್ನೆಲ್ಲಾ ಮಂತ್ರಮುಗ್ಧರಾಗಿ ಕೇಳುತ್ತಿದಾರೆ.

ಈಗ ಮುಖ್ಯೋಪಾಧ್ಯಾಯ ಮತ್ತು ಆತನ ಸ್ನೇಹಿತ ಪರಮಹಂಸರಿಂದ ಬೀಳ್ಕೊಳ್ಳುತ್ತಿದಾರೆ. ಅವರು ಪರಮಹಂಸರಿಗೆ ಪ್ರಣಾಮಮಾಡಿ ಎದ್ದುನಿಂತುಕೊಂಡರು. ಅವರಿಗೆ ಸನ್ಮಾನತೋರಿಸಲು ಪರಮಹಂಸರೂ ಎದ್ದುನಿಂತುಕೊಳ್ಳುತ್ತಿದಾರೆ.

ಮುಖ್ಯೋಪಾಧ್ಯಾಯ ನಗುತ್ತ: ''ನೀವೂ ಏಳುವುದು ಕೂರುವುದೇ!''

ಶ್ರೀರಾಮಕೃಷ್ಣರು: ''ಅದರಲ್ಲಿ ತಪ್ಪೇನಿದೆ? ನೀರು ಸ್ಥಿರವಾಗಿ ನಿಂತಿದ್ದರೂ ನೀರೇ, ಅಲ್ಲೋಲಕಲ್ಲೋಲವಾಗುತ್ತಿದ್ದರೂ ನೀರೇ. ನಾನು

ಗಾಳಿಗೆ ಸಿಕ್ಕಿದ ಎಂಜಲೆಲೆಯ ಹಾಗೆ. ಗಾಳಿ ಅದನ್ನು ಇಷ್ಟಬಂದ ಕಡೆಗೆ ಹೊತ್ತುಕೊಂಡುಹೋಗಿಬಿಡುತ್ತದೆ. ನಾನು ಯಂತ್ರ, ಆಕೆ ಯಂತ್ರಿ.''

ಮುಖ್ಯೋಪಾಧ್ಯಾಯ ಮತ್ತು ಆತನ ಸ್ನೇಹಿತ ಕೊಠಡಿಯಿಂದ ಹೊರಹೊರಟರು. ಮಾಸ್ಟರ್ ಭಾವಿಸುತ್ತಿದಾನೆ: ''ವೇದಾಂತದ ದೃಷ್ಟಿಯಿಂದ ಎಲ್ಲಾ ಸ್ವಪ್ನವಿದ್ದ ಹಾಗೆ. ಹಾಗಾದರೆ ಜೀವ, ಜಗತ್ತು, ನಾನು, ಎಲ್ಲಾ—ಮಿಥ್ಯೆಯೇ?''

ಮಾಸ್ಟರ್ ಅಲ್ಪಸ್ವಲ್ಪ ವೇದಾಂತ ಓದಿದಾನೆ. ಮತ್ತೆ ವೇದಾಂತದ ಅಸ್ಫುಟ ಪ್ರತಿಧ್ವನಿಯಂತಿರುವ ಕ್ಯಾಂಟ್, ಹೆಗಲ್ ಮೊದಲಾದ ಜರ್ಮನ್ ತತ್ತ್ವಶಾಸ್ತ್ರಜ್ಞರ ವಿಚಾರಗ್ರಂಥಗಳನ್ನೂ ಓದಿದಾನೆ. ಆದರೆ ಪರಮಹಂಸರು ಸಾಮಾನ್ಯ ಮನುಷ್ಯರ ಹಾಗೆ ವಿಚಾರದಲ್ಲಿ ತೊಡಗಲಿಲ್ಲ. ಜಗನ್ಮಾತೆ ಅವರಿಗೆ ಸಕಲ ದರ್ಶನಗಳ ಸಾರವನ್ನೂ ತಿಳಿಸಿಕೊಟ್ಟುಬಿಟ್ಟಿದಾಳೆ. ಮಾಸ್ಟರ್ ಇದರ ಸಂಬಂಧವಾಗೇ ಭಾವಿಸುತ್ತಿದಾನೆ.

ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಮಾಸ್ಟರೊಡನೆ ತಮ್ಮ ಕೊಠಡಿಯ ಪಶ್ಚಿಮದಲ್ಲಿರುವ ಅರ್ಧಚಂದ್ರಾಕಾರ ವರಾಂಡದಲ್ಲಿ ಮಾತುಕತೆ ಆಡುತ್ತಿದಾರೆ. ಅಲ್ಲಿ ಇನ್ನು ಬೇರೆ ಯಾರೂ ಇಲ್ಲ. ಚಳಿಗಾಲದ ಅಪರಾಹ್ನ. ಸೂರ್ಯ ಇನ್ನೂ ಮುಳುಗಿಲ್ಲ.

ಮಾಸ್ಟರ್: ''ಈ ಜಗತ್ತು ಮಿಥ್ಯೆಯಾದುದೇ?''

ಶ್ರೀರಾಮಕೃಷ್ಣರು: ''ಏಕೆ ಮಿಥ್ಯೆಯಾದೀತು? ಈ ಪ್ರಶ್ನೆ ವಿಚಾರಕ್ಕೆ ಸಂಬಂಧಪಟ್ಟದ್ದು.

''ಮೊದಲು 'ನೇತಿ, ನೇತಿ' ಎಂದು ವಿಚಾರದಲ್ಲಿ ತೊಡಗಿದಾಗ, ಭಗವಂತ ಜೀವವಲ್ಲ, ಜಗತ್ತಲ್ಲ, ಚತುರ್ವಿಂಶತಿ ತತ್ತ್ವ ಅಲ್ಲ ಎಂಬುದಾಗಿ ತೋರುತ್ತದೆ. ಎಲ್ಲವೂ ಸ್ವಪ್ನವಿದ್ದ ಹಾಗೆ ಕಾಣುತ್ತದೆ. ಬಳಿಕ ಅನುಲೋಮ ಹೋಗಿ ವಿಲೋಮ. ಆಗ ಭಗವಂತನೇ ಜೀವ ಜಗತ್ತು ಆಗಿದಾನೆ ಎಂಬ ಬೋಧೆಯಾಗುತ್ತದೆ.

''ನೀನು ಮೆಟ್ಟಿಲಸಾಲು ಹತ್ತಿ ಮಾಳಿಗೆಗೆ ಹೋಗುತ್ತಿದೀಯೆ ಅಂತ ಇಟ್ಟುಕೊ. ಆದರೆ ಎಲ್ಲಿಯವರೆಗೆ ಮಾಳಿಗೆಯ ಅರಿವು ನಿನಗಿರುವುದೊ, ಅಲ್ಲಿಯವರೆಗೆ ಮೆಟ್ಟಿಲಸಾಲ ಅರಿವೂ ನಿನಗಿರುತ್ತದೆ. ಯಾರಿಗೆ ಎತ್ತರದ ಜ್ಞಾನವಿದೆಯೊ, ಆತನಿಗೆ ತಗ್ಗಿನ ಜ್ಞಾನವೂ ಇರುತ್ತದೆ. ಆದರೆ ಮಾಳಿಗೆಯನ್ನು ಹತ್ತಿ ನೋಡಿದಾಗ ನಿನ್ನ ಅನುಭವಕ್ಕೆ ಬರುತ್ತದೆ, ಯಾವ ವಸ್ತು

ಗಳಿಂದ, ಎಂದರೆ ಇಟ್ಟಿಗೆ ಸುಣ್ಣ ಇಟ್ಟಿಗೆಪುಡಿ ಇವುಗಳಿಂದ ಮಾಳಿಗೆ ನಿರ್ಮಿತವಾಗಿದೆಯೊ, ಅದೇ ವಸ್ತುಗಳಿಂದ ಮೆಟ್ಟಿಲಸಾಲೂ ನಿರ್ಮಿತ ವಾಗಿದೆ.

"ನಾನಾಗಲೆ ಬೇಲದ ಹಣ್ಣಿನ ಉದಾಹರಣೆ ಕೊಟ್ಟಿದೇನೆ. ಯಾರು ಅಚಲನೊ ಆತ ಚಲನೂ ಹೌದು.

"'ಅಹಂ' ಎಂಬುದು ಹೋಗತಕ್ಕುದಲ್ಲ. 'ನಾನು ದೇಹ' ಎಂಬ ಜ್ಞಾನವಿರುವವರೆಗೆ, ಜೀವ ಜಗತ್ತು ಇದ್ದೇ ಇರುತ್ತವೆ. ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡರೆ ಕಂಡುಬರುತ್ತದೆ, ಆತನೇ ಜೀವ ಜಗತ್ತು ಆಗಿರುವುದಾಗಿ. ಕೇವಲ ವಿಚಾರದಿಂದ ಈ ಅನುಭವವನ್ನು ಪಡೆಯ ಲಾಗೋದಿಲ್ಲ.

"ಶಿವನಿಗೆ ಎರಡು ಅವಸ್ಥೆ. ಯಾವಾಗ ಸಮಾಧಿಸ್ಥನಾಗಿರುತ್ತಾನೊ, ಎಂದರೆ ಮಹಾಯೋಗದಲ್ಲಿರುತ್ತಾನೊ, ಆಗ ಆತ ಆತ್ಮಾರಾಮ. ಮತ್ತೆ ಯಾವಾಗ ಆ ಅವಸ್ಥೆಯಿಂದ ಕೆಳಕ್ಕೆ ಇಳಿದುಬರುತ್ತಾನೊ, ಆಗ ಆತನಲ್ಲಿ ಸ್ವಲ್ಪ ಅಹಂ ಇರುತ್ತದೆ. ಬಳಿಕ ಆತ 'ರಾಮ! ರಾಮ!' ಅಂತ ಹೇಳುತ್ತ ನರ್ತಿಸುತ್ತಾನೆ."

ಪರಮಹಂಸರು ಶಿವನ ಅವಸ್ಥೆಯನ್ನು ವರ್ಣನೆಮಾಡಿ ತಮ್ಮ ಅವಸ್ಥೆ ಯನ್ನೇ ಸೂಚಿಸಿ ಹೇಳಿದರೇನು?

ಮುಚ್ಚಂಜೆಯಾಗಿದೆ. ಪರಮಹಂಸರು ಜಗನ್ಮಾತೆಯ ನಾಮೋಚ್ಚಾ ರಣೆ ಮಾಡುತ್ತ ಆಕೆಯ ಮೇಲೆ ಧ್ಯಾನಮಾಡುತ್ತಿದಾರೆ. ಭಕ್ತರೂ ನಿರ್ಜನ ಪ್ರದೇಶಗಳಿಗೆ ಹೋಗಿ ತಮ್ಮ ತಮ್ಮ ಆದರ್ಶ ಧ್ಯೇಯಗಳ ಮೇಲೆ ಧ್ಯಾನ ಮಾಡುತ್ತಿದಾರೆ. ಈಗ ಭಗವತಿ ಕಾಳೀದೇವಾಲಯದಲ್ಲಿ, ರಾಧಾಕಾಂತ ದೇವಾಲಯದಲ್ಲಿ, ಹನ್ನೆರಡು ಶಿವದೇವಾಲಯಗಳಲ್ಲಿ ಸಾಯಂ ಮಂಗಳಾರತಿ ಆರಂಭವಾಯಿತು.

ಇಂದು ಕೃಷ್ಣಪಕ್ಷದ ದ್ವಿತೀಯ ತಿಥಿ. ಸೂರ್ಯ ಮುಳುಗಿದ ಸ್ವಲ್ಪ ಹೊತ್ತಿನೊಳಗೇ ಚಂದ್ರೋದಯವಾಯಿತು. ಬೆಳುದಿಂಗಳು ದೇವಾಲಯಗಳ ಗೋಪುರಗಳ ಮೇಲೂ, ಸುತ್ತಮುತ್ತಲಿನ ಗಿಡಬಳ್ಳಿಗಳ ಮೇಲೂ, ಭಾಗೀ ರಥಿಯ ಮೇಲೂ ಬಿದ್ದು ಅವುಗಳಿಗೆ ಒಂದು ಅಪೂರ್ವ ಕಾಂತಿಯನ್ನು ಕೊಟ್ಟಿದೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ, ಮಾಸ್ಟರ್

ನೆಲದ ಮೇಲೆ ಕುಳಿತುಕೊಂಡಿದಾರೆ. ಮಾತುಕತೆ ವೇದಾಂತದ ಸಂಬಂಧ ವಾಗಿ ಆರಂಭವಾಯಿತು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಜಗತ್ತು ಮಿಥ್ಯೆಯೇಕಾದೀತು? ಇದು ತತ್ತ್ವಶಾಸ್ತ್ರಜ್ಞರ ಊಹಾಪೋಹಕ್ಕೆ ಸೇರಿದ ವಿಷಯ. ಭಗವಂತನ ದರ್ಶನವಾದನಂತರ ಬೋಧೆಯಾಗುತ್ತದೆ, ಆತನೇ ಜೀವ ಜಗತ್ತು ಆಗಿರು ವುದಾಗಿ.

"ಭಗವತಿ ನನಗೆ ಕಾಳೀದೇವಾಲಯದಲ್ಲಿ ತೋರಿಸಿದಳು, ತಾನೇ ಎಲ್ಲವೂ ಆಗಿರುವುದಾಗಿ. ತೋರಿಸಿದಳು, ಎಲ್ಲವೂ ಚಿನ್ಮಯವಾಗಿರುವು ದನ್ನ. ಪ್ರತಿಮೆ ಚಿನ್ಮಯವಾಗಿ, ವೇದಿ ಚಿನ್ಮಯವಾಗಿ, ಕೋಶಾ-ಕುಶಿ (ಪೂಜಾಪಾತ್ರೆ) ಚಿನ್ಮಯವಾಗಿ—ಎಲ್ಲವೂ ಚಿನ್ಮಯವಾಗಿ ಕಂಡುವು.

"ಗರ್ಭಗುಡಿಯಲ್ಲಿರುವುದೆಲ್ಲಾ ರಸಮಯವಾಗಿ—ಸಚ್ಚಿದಾನಂದರಸ ಮಯವಾಗಿ ಕಂಡುಬಂದುವು. ಕಾಳೀದೇವಾಲಯದ ಎದುರಿಗೆ ಒಬ್ಬ ದುಷ್ಟನನ್ನು ನೋಡಿದೆ. ಆದರೆ ಆತನಲ್ಲೂ ಆಕೆಯ ಶಕ್ತಿ ಸುಮ್ಮನೆ ಜ್ವಲಿ ಸುತ್ತಿದ್ದುದು ಕಣ್ಣಿಗೆ ಬಿತ್ತು.

"ಅದಕ್ಕಾಗೇ ನಾನು ಭಗವತಿಗೆ ಅರ್ಪಿಸಬೇಕಾದ ಪೂರಿಯನ್ನು ಬೆಕ್ಕಿಗೆ ತಿನ್ನಿಸಿದುದು. ನೋಡಿದೆ ಭಗವತಿಯೇ ಎಲ್ಲವೂ ಆಗಿರುವುದನ್ನ—ಬೆಕ್ಕು ಕೂಡ. ಆಗ ಪಾರುಪತ್ಯಗಾರ ಮಥುರಬಾಬುವಿಗೆ ಕಾಗದ ಬರೆದ, ನಾನು ಭಗವತಿಗೆ ಅರ್ಪಿಸಬೇಕಾದ್ದನ್ನು ಬೆಕ್ಕಿಗೆ ತಿನ್ನಿಸುತ್ತಿರುವುದಾಗಿ. ಆದರೆ ಮಥುರಬಾಬುವಿಗೆ ನನ್ನ ಮಾನಸಿಕ ಅವಸ್ಥೆ ಚೆನ್ನಾಗಿ ಗೊತ್ತಿತ್ತು. ಆತ ಪಾರುಪತ್ಯಗಾರನಿಗೆ ಉತ್ತರ ಬರೆದುಕುಳಹಿಸಿದ: 'ಅವರು ಹೇಗೆ ಬೇಕಾದರೆ ಹಾಗೆ ಮಾಡಲಿ. ಅವರ ತಂಟೆಗೇ ನೀನು ಹೋಗಕೂಡದು.'

"ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡರೆ ಇವುಗಳ ನಿಜಸ್ವರೂಪ ವನ್ನು ನೋಡಬಹುದು. ಆತನೇ ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಆಗಿರುವುದನ್ನ ನೋಡಬಹುದು.

"ಆದರೆ ಆತ ಸಂಪೂರ್ಣವಾಗಿ 'ಅಹಂ' ಎಂಬುದನ್ನು ತೊಡೆದು ಹಾಕಿಬಿಟ್ಟದ್ದೇ ಆದರೆ, ಬಳಿಕ ಏನು ಇರುತ್ತದೆ ಎಂಬುದನ್ನು ಬಾಯಿಂದ ಹೇಳಲಾಗೋದಿಲ್ಲ. ರಾಮಪ್ರಸಾದ ತನ್ನ ಒಂದು ಹಾಡಿನಲ್ಲಿ ಹೇಳಿದಾನೆ: 'ಆಗ ನೀನು ಒಳ್ಳೆಯವನೊ ಅಥವಾ ನಾನು ಒಳ್ಳೆಯವನೊ ಎಂಬುದು ನಿನಗೇ ಗೊತ್ತಾಗುತ್ತದೆ!' ಆ ಅವಸ್ಥೆ ನನಗೆ ಒಮ್ಮೊಮ್ಮೆ ಉಂಟಾಗುತ್ತದೆ.

"ಯಾವುದೇ ಆಗಲಿ, ವಿಚಾರದ ಮೂಲಕ ಒಂದು ವಿಧವಾಗಿ ತೋರುತ್ತದೆ; ಆ ವಸ್ತುವೇ, ಭಗವಂತ ತೋರಿಸಿದಾಗ, ಸಂಪೂರ್ಣ ಬೇರೆ ರೀತಿಯಾಗಿ ತೋರಿಬರುತ್ತದೆ."

**೧೭ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ತದಿಗೆ, ಸೋಮವಾರ.**

ಘಂಟೆ ಬೆಳಗಿನ ಎಂಟು. ಪರಮಹಂಸರು ಮಾಸ್ಟರೊಡನೆ ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಡಾಕ್ಟರ್ ಮಧು ಬಂದು ಪರಮಹಂಸರ ಬಳಿಯಲ್ಲೇ ಚಿಕ್ಕ ಮಂಚದ ಮೇಲೆ ಕುಳಿತುಕೊಂಡ. ಆತನಿಗೆ ವಯಸ್ಸಾಗಿದೆ. ಹಾಸ್ಯ ತುಂಬಿದೆ ಅವನಲ್ಲಿ. ಪರಮಹಂಸರಿಗೆ ಕಾಯಿಲೆ ಆದಾಗಲೆಲ್ಲಾ ಪ್ರಾಯಿಕವಾಗಿ ಬಂದು ಆತ ಅವರನ್ನು ನೋಡುತ್ತಿದಾನೆ.

ಶ್ರೀರಾಮಕೃಷ್ಣರು: "ಮುಖ್ಯವಾಗಿ ಬೇಕಾದ್ದು ಸಚ್ಚಿದಾನಂದನಲ್ಲಿ ಪ್ರೀತಿ. ಎಂಥ ಪ್ರೀತಿ? ಭಗವಂತನನ್ನು ಯಾವ ರೀತಿಯಾಗಿ ಪ್ರೀತಿಸಬೇಕು? ಗೌರೀಪಂಡಿತ ಹೇಳುತ್ತಿದ್ದ, ರಾಮನನ್ನು ಅರಿತುಕೊಳ್ಳಬೇಕಾದರೆ, ಸೀತೆಯಂತೆ ಆಗಬೇಕು; ಭಗವಂತನನ್ನು ಅರಿಯಬೇಕಾದರೆ, ಭಗವತಿಯಂತೆ ಆಗಬೇಕು. ಭಗವತಿ ಯಾವ ರೀತಿಯಾಗಿ ಶಿವನಿಗಾಗಿ ಕಠೋರ ತಪಸ್ಸು ಮಾಡಿದಳೊ ಆ ರೀತಿಯಾಗಿ ತಪಸ್ಸು ಮಾಡಬೇಕು. ಪುರುಷನನ್ನು ಅರಿಯಬೇಕಾದರೆ, ಪ್ರಕೃತಿಭಾವವನ್ನು ಆರೋಪಿಸಿಕೊಳ್ಳಬೇಕಾಗುತ್ತದೆ—ಎಂದರೆ ಸಖೀಭಾವ, ದಾಸೀಭಾವ, ಮಾತೃಭಾವಗಳನ್ನ.

"ನನಗೆ ಸೀತಾಮಾತೆಯ ದರ್ಶನ ದೊರೆಯಿತು. ಆಕೆಯ ಇಡೀ ಮನಸ್ಸು ರಾಮನಲ್ಲೇ ನೆಲಸಿರುವುದನ್ನು ನೋಡಿದೆ. ಆಕೆಗೆ ತನ್ನ ಕೈ ಕಾಲು ಶರೀರದ ಮೇಲೇ ಆಗಲಿ, ವಸನಭೂಷಣಗಳ ಮೇಲೇ ಆಗಲಿ ಯಾವುದರ ಮೇಲೂ ದೃಷ್ಟಿಯಿರಲಿಲ್ಲ. ಆಕೆಯ ಜೀವನ ರಾಮಮಯವಾಗಿ ಕಂಡಿತು. ರಾಮನಿಲ್ಲದಿದ್ದರೆ, ರಾಮ ಆಕೆಗೆ ದೊರೆಯದಿದ್ದರೆ ಆಕೆ ಬದುಕುವಂತಿರಲಿಲ್ಲ."

ಮಾಸ್ಟರ್: "ಹೌದು, ನಿಜ. ಆಕೆಗೆ ರಾಮನ ಹುಚ್ಚು ಹಿಡಿದಿತ್ತು."

ಶ್ರೀರಾಮಕೃಷ್ಣರು: "ಹುಚ್ಚು! ಅದು ಬರಬೇಕು. ಭಗವಂತನ ಸಾಕ್ಷಾತ್ಕಾರ ದೊರಕಬೇಕಾದರೆ ಆತನಿಗಾಗಿ ಹುಚ್ಚುಹಿಡಿಯಬೇಕು. ಕಾಮಕಾಂಚನಗಳ ಕಡೆ ಮನಸ್ಸಿತ್ತು ಎಂದರೆ ಅದು ಉಂಟಾಗದು. ಹೆಂಗಸಿನೊಡನೆ ಸಹವಾಸ! ಅದರಲ್ಲೇನು ಸುಖ ಇದೆ? ಭಗವಂತನ ದರ್ಶನ ದೊರೆತುದೇ ಆದರೆ, ಹೆಂಗಸಿನ ಸುಖಕ್ಕಿಂತ ಕೋಟಿಪಾಲು ಅಧಿಕವಾಗಿ

ಸುಖ ದೊರೆಯುತ್ತದೆ. ಗೌರೀಪಂಡಿತ ಹೇಳುತ್ತಿದ್ದ, ಮಹಾಭಾವ ವುಂಟಾದರೆ ಚರ್ಮದ ಎಲ್ಲಾ ರಂಧ್ರಗಳೂ—ರೋಮಕೂಪಗಳು ಕೂಡ—ಮಹಾಯೋನಿಗಳಾಗಿಬಿಡುತ್ತವೆ. ಪ್ರತಿಯೊಂದು ರಂಧ್ರದ ಮೂಲಕವೂ ಸಾಧಕ ಆತ್ಮನೊಡನೆ ರಮಿಸುತ್ತಿರುವಂತೆ ಬೋಧೆಯಾಗುತ್ತದೆ.

"ವ್ಯಾಕುಲಚಿತ್ತದಿಂದ ಆತನನ್ನು ಕರೆಯಬೇಕು. ಏನುಮಾಡಿದರೆ ಆತನ ಸಾಕ್ಷಾತ್ಕಾರವನ್ನು ಪಡೆಯಬಹುದು ಎಂಬುದನ್ನ ಗುರುವಿನ ಮೂಲಕ ಕೇಳಿ ತಿಳಿದುಕೊಳ್ಳಬೇಕಾಗುತ್ತದೆ. ಗುರು ನಿಜವಾಗಿ ಪೂರ್ಣಜ್ಞಾನಿಯಾಗಿದ್ದ ಪಕ್ಷದಲ್ಲಿ ಮಾತ್ರ ಮಾರ್ಗವನ್ನು ತೋರಿಸಿಕೊಡಲು ಆತನಿಗೆ ಸಾಧ್ಯವಾಗುತ್ತದೆ.

"ಪೂರ್ಣಜ್ಞಾನ ದೊರೆಯಿತು ಎಂದರೆ, ಎಲ್ಲಾ ವಾಸನೆಗಳೂ (ಕಾಮನೆಗಳೂ) ಬಿಟ್ಟು ತೊಲಗುತ್ತವೆ. ಐದು ವರ್ಷದ ಬಾಲಕನ ಸ್ವಭಾವ ಬಂದುಬಿಡುತ್ತದೆ. ದತ್ತಾತ್ರೇಯ ಮತ್ತು ಜಡಭರತರಿಗೆ ಬಾಲಕನ ಸ್ವಭಾವ ಉಂಟಾಗಿತ್ತು."

ಮಾಸ್ಟರ್: "ಇವರು ಏನು ಎತ್ತ ಎಂಬುದು ಜನರಿಗೆ ಗೊತ್ತಾಗಿದೆ. ಹಾಗೆ ಗೊತ್ತಾಗದೆ ಇದ್ದ ಇವರಂಥ ಜ್ಞಾನಿಗಳು ಎಷ್ಟೋ ಮಂದಿ ಈ ಜಗತ್ತಿಗೆ ಬಂದುಹೋಗಿದಾರೆ."

ಶ್ರೀರಾಮಕೃಷ್ಣರು: "ಹೌದು, ಜ್ಞಾನಿಗಳ ಎಲ್ಲಾ ವಾಸನೆಗಳೂ ಅವರನ್ನು ಬಿಟ್ಟು ತೊಲಗಿಹೋಗುತ್ತವೆ. ಹಾಗೂ ಏನಾದರೂ ಉಳಿದುಕೊಂಡಿದ್ದರೆ ಅದರಿಂದ ಅವರಿಗೆ ಯಾವ ಕೇಡೂ ಸಂಭವಿಸದು. ಕತ್ತಿ ಸ್ಪರ್ಶವೇದಿಯನ್ನು ಮುಟ್ಟಿದರೆ, ಅದು ಚಿನ್ನವಾಗಿಬಿಡುತ್ತದೆ. ಬಳಿಕ ಆ ಕತ್ತಿಯಿಂದ ಹಿಂಸಾತ್ಮಕ ಕಾರ್ಯ ಯಾವುದೂ ಸಾಧ್ಯವಿಲ್ಲ. ಅದೇ ರೀತಿಯಾಗಿ ಜ್ಞಾನಿಗಳ ಕಾಮಕ್ರೋಧಗಳು ತೋರಿಕೆಗೆ ಮಾತ್ರ ಇರುತ್ತವೆ. ಅವು ಹೆಸರಿಗೆ ಮಾತ್ರ ಕಾಮಕ್ರೋಧಗಳೇ ವಿನಾ, ಅವುಗಳಿಂದ ಯಾವ ಕೇಡೂ ಸಂಭವಿಸದು."

ಮಾಸ್ಟರ್: "ನೀವು ಹೇಳುತ್ತೀರಲ್ಲ, ಜ್ಞಾನಿ ಮೂರು ಗುಣಗಳಿಗೂ ಅತೀತನಾಗುತ್ತಾನೆ. ಆತ ಸತ್ತ್ವ, ರಜಸ್ಸು, ತಮಸ್ಸು ಈ ಯಾವ ಗುಣಗಳಿಗೂ ವಶನಾಗುವುದಿಲ್ಲ. ಇವು ಮೂರು ಕಳ್ಳರಿದ್ದ ಹಾಗೇ."

ಶ್ರೀರಾಮಕೃಷ್ಣರು: "ಹೌದು, ಇದನ್ನು ಗ್ರಹಿಸಬೇಕು."

ಮಾಸ್ಟರ್: "ಈ ಭೂಮಂಡಲದಲ್ಲೆಲ್ಲಾ ಪೂರ್ಣಜ್ಞಾನಿಗಳು ಮೂರು ನಾಲ್ಕಕ್ಕಿಂತ ಹೆಚ್ಚಾಗಿಲ್ಲ ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು: "ಏಕೆ ಹಾಗೆ ಹೇಳುತ್ತೀಯೆ? ಉತ್ತರ ಭಾರತದ ಮಠಗಳಲ್ಲಿ ಅನೇಕ ಸಾಧು ಸನ್ಯಾಸಿಗಳಿದಾರೆ."

ಮಾಸ್ಟರ್: "ಸುಲಭವಾಗಿ ನಾನೂ ಅವರಂತೆ ಒಬ್ಬ ಸನ್ಯಾಸಿ ಆಗಬಲ್ಲೆ."

ಪರಮಹಂಸರು ಮಾಸ್ಟರನ್ನು ದೃಷ್ಟಿಸಿ ನೋಡುತ್ತ ಹೇಳಿದರು: "ಏನು, ಎಲ್ಲವನ್ನೂ ತ್ಯಜಿಸಿ?"

ಮಾಸ್ಟರ್: "ಮಾಯೆಯಿಂದ ಮುಕ್ತವಾಗದಿದ್ದರೆ ಏನನ್ನು ತಾನೆ ಸಾಧಿಸಲು ಸಾಧ್ಯ? ಮಾಯೆಯನ್ನು ಗೆಲ್ಲುವ ಶಕ್ತಿಯಿಲ್ಲದೆ ಬರಿದೆ ಸನ್ಯಾಸಿ ಯಾದರೆ ಏನು ದೊರೆತೀತು?"

ಸ್ವಲ್ಪ ಹೊತ್ತಿನವರೆಗೆ ಎಲ್ಲರೂ ಸುಮ್ಮನೆ ಇದ್ದರು.

ಮಾಸ್ಟರ್: "ಯಾವುದಕ್ಕೆ ತ್ರಿಗುಣಾತೀತ ಭಕ್ತಿ ಅಂತ ಹೇಳು ತ್ತಾರೆ?"

ಶ್ರೀರಾಮಕೃಷ್ಣರು: "ಆ ಭಕ್ತಿಯುಂಟಾಯಿತು ಎಂದರೆ, ಎಲ್ಲವೂ ಚಿನ್ಮಯವಾಗಿ ಕಾಣುತ್ತದೆ. ಆತನಿಗೆ 'ಶ್ಯಾಮ ಚಿನ್ಮಯ, ಆತನ ಧಾಮವೂ ಚಿನ್ಮಯ.' ಭಕ್ತನೂ ಚಿನ್ಮಯ. ಎಲ್ಲವೂ ಚಿನ್ಮಯ. ಎಲ್ಲೊ ಕೆಲವರಿಗೆ ಮಾತ್ರ ಆ ವಿಧದ ಭಕ್ತಿಯುಂಟಾಗುತ್ತದೆ."

ಡಾಕ್ಟರ್ ಮಧು: "ತ್ರಿಗುಣಾತೀತ ಭಕ್ತಿ—ಎಂದರೆ ಭಕ್ತ ಯಾವ ಗುಣಕ್ಕೂ ವಶನಲ್ಲ ಅಂತ."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಅದೇ. ಐದು ವರ್ಷದ ಬಾಲಕನ ಹಾಗೆ—ಯಾವ ಗುಣಕ್ಕೂ ವಶವಾಗದವನಾಗಿ."

ಮಧ್ಯಾಹ್ನದ ಊಟವಾದನಂತರ ಪರಮಹಂಸರು ಸ್ವಲ್ಪ ವಿಶ್ರಮಿಸಿ ಕೊಳ್ಳುತ್ತಿದಾರೆ. ಮಣಿಲಾಲಮಲ್ಲಿಕ ಬಂದು ಪರಮಹಂಸರಿಗೆ ಪ್ರಣಾಮ ಮಾಡಿ ನೆಲದ ಮೇಲೆ ಕುಳಿತುಕೊಂಡ. ಪರಮಹಂಸರು ಹಾಗೇ ಮಲಗಿ ಕೊಂಡು ಮಣಿಮಲ್ಲಿಕನೊಡನೆ ಆಗಾಗ ಒಂದೆರಡು ಮಾತು ಆಡುತ್ತಿದಾರೆ.

ಮಣಿಮಲ್ಲಿಕ: "ನೀವು ಕೇಶವಸೇನನನ್ನು ನೋಡಿಬರಲು ಹೋಗಿದ್ದು ದಾಗಿ ಸಮಾಚಾರ ಕೇಳಿದೆ."

ಶ್ರೀರಾಮಕೃಷ್ಣರು: "ಹೌದು. ಈಗ ಹೇಗಿದಾನೆ ಆತ?"

ಮಣಿಮಲ್ಲಿಕ: "ಏನೂ ಉತ್ತಮಗೊಂಡಿಲ್ಲ."

ಶ್ರೀರಾಮಕೃಷ್ಣರು: "ಆತ ದೊಡ್ಡ ರಾಜಸಿಕ ವ್ಯಕ್ತಿ. ಬಹಳ ಹೊತ್ತು ಕಾಯಿಸಿಬಿಟ್ಟ. ಆ ಬಳಿಕವೇ ಆತನನ್ನು ನೋಡಲು ಸಾಧ್ಯವಾಯಿತು."

ಪರಮಹಂಸರು ಎದ್ದು ಕುಳಿತುಕೊಂಡು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಾನು 'ರಾಮ ರಾಮ' ಅಂತ ಹೇಳುತ್ತ ಹುಚ್ಚನಂತಾಗಿಬಿಟ್ಟಿದ್ದೆ. ಆ ಸನ್ಯಾಸಿಯ ಇಷ್ಟದೇವನಾದ ರಾಮಲಾಲನನ್ನು[1] ಕೈಯಲ್ಲಿ ಹಿಡಿದುಕೊಂಡು ಸುಮ್ಮನೆ ಸುತ್ತುತ್ತಿದ್ದೆ. ಅದಕ್ಕೆ ಸ್ನಾನ, ಊಟ, ಶಯನ ಎಲ್ಲವನ್ನೂ ಮಾಡಿಸುತ್ತಿದ್ದೆ. ಹೋದೆಡೆಗೆಲ್ಲಾ ಅದನ್ನು ತೆಗೆದುಕೊಂಡುಹೋಗುತ್ತಿದ್ದೆ. ನಾನು ರಾಮಲಾಲನಿಗಾಗಿ ಸುಮ್ಮನೆ ಹುಚ್ಚೆದ್ದುಬಿಟ್ಟಿದ್ದೆ."

---

1. ಒಬ್ಬ ವೈಷ್ಣವ ಸನ್ಯಾಸಿ ಪರಮಹಂಸರಿಗೆ ಕೊಟ್ಟ ಬಾಲಕ ರಾಮನ ಕಂಚಿನ ವಿಗ್ರಹ.

## ೧೭

# ದಕ್ಷಿಣೇಶ್ವರದಲ್ಲಿ ಮಾಸ್ಟರ್ (೧)

೧೪ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಚತುರ್ಥಿ, ಮಂಗಳವಾರ.

ಪರಮಹಂಸರು ಪ್ರಾತಃಕಾಲ ತಮ್ಮ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಕೆಲವು ಮಂದಿ ಭಕ್ತರೊಡನೆ ಕುಳಿತಿದಾರೆ. ದೇವೇಂದ್ರನಾಥ ಠಾಕುರನ ಭಕ್ತಿ ಮತ್ತು ವೈರಾಗ್ಯದ ಸಂಬಂಧವಾಗಿ ಆತನನ್ನು ಬಹಳವಾಗಿ ಹೊಗಳುತ್ತಿದಾರೆ. ರಾಖಾಲನೇ ಮೊದಲಾದ ಭಕ್ತರ ಕಡೆಗೆ ತೋರಿಸಿ ಹೇಳುತ್ತಿದಾರೆ: "ದೇವೇಂದ್ರ ಒಳ್ಳೆ ಮನುಷ್ಯ; ಆದರೆ ಯಾರು ಸಂಸಾರಕ್ಕೆ ಕಾಲು ಹಾಕದೆ ಬಾಲ್ಯದಿಂದಲೇ ಶುಕದೇವನ ಹಾಗೆ ಅಹರ್ನಿಶಿ ಭಗವಚ್ಚಿಂತನೆ ಮಾಡುತ್ತಾರೊ, ಅಂದರೆ ಯಾರು ಕೌಮಾರ ವೈರಾಗ್ಯ ಸಂಪನ್ನರೊ ಅವರು ನಿಸ್ಸಂದೇಹವಾಗಿ ಧನ್ಯರು.

"ಸಂಸಾರಸ್ಥರಿಗೆ ಒಂದಲ್ಲ ಒಂದು ಆಸೆ ಇದ್ದೇ ಇರುತ್ತದೆ. ಆದರೂ ಒಮ್ಮೊಮ್ಮೆ ಒಳ್ಳೆ ಭಕ್ತಿಯನ್ನೂ ವ್ಯಕ್ತಪಡಿಸುತ್ತಾರೆ. ಮಥುರಬಾಬು ಒಂದು ವ್ಯಾಜ್ಯಕ್ಕೆ ಸಿಕ್ಕಿದ್ದ. ಆತ ಕಾಳೀದೇವಾಲಯದಲ್ಲಿ ನನಗೆ ಹೇಳಿದ: 'ಬಾಬಾ, ಈ ಅರ್ಘ್ಯವನ್ನ ಭಗವತಿಗೆ ಅರ್ಪಿಸಿ.' ನಾನು ಯಾವ ಸಂದೇಹವನ್ನೂ ಪಡದೆ ಭಗವತಿಗೆ ಅರ್ಪಿಸಿದೆ. ಆತ ಸಂಪೂರ್ಣವಾಗಿ ನಂಬಿದ್ದ ನಾನು ಅರ್ಘ್ಯವನ್ನು ಅರ್ಪಿಸಿದರೆ ತಾನು ನಿಸ್ಸಂದೇಹವಾಗಿ ಗೆಲ್ಲುವುದಾಗಿ.

"ರತಿಯ ತಾಯಿಯದು ಎಂಥ ಭಕ್ತಿ! ಎಷ್ಟೊಂದು ವೇಳೆ ಇಲ್ಲಿಗೆ ಬರುತ್ತಿದ್ದಳು! ಎಷ್ಟೊಂದು ಸೇವೆ ಮಾಡುತ್ತಿದ್ದಳು! ಆಕೆ ವೈಷ್ಣವಿ. ಒಂದು ದಿನ ಆಕೆಯ ಕಣ್ಣಿಗೆ ಬಿತ್ತು, ನಾನು ಕಾಳಿಯ ಪ್ರಸಾದ ತಿನ್ನುತ್ತಿರುವುದು. ಅದು ಆಕೆಯನ್ನು ಇಲ್ಲಿಗೆ ಬಾರದ ಹಾಗೆ ಮಾಡಿಬಿಟ್ಟಿತು. ಆಕೆ ಒಂದೇ ಒಂದು ಸ್ವರದವಳು. ಜನರನ್ನು ಮೊದಮೊದಲು ಅರಿಯಲಾಗುವುದಿಲ್ಲ."

ಪರಮಹಂಸರು ಈಗ ತಮ್ಮ ಕೊಠಡಿಯ ಒಳಗೆ ಪೂರ್ವದ ಬಾಗಿಲ ಹತ್ತಿರ ಕುಳಿತಿದಾರೆ. ಚಳಿಗಾಲದ ಪ್ರಾತಃಕಾಲವಾದ್ದರಿಂದ ಶಾಲು ಹೊದ್ದುಕೊಂಡಿದಾರೆ. ಇದ್ದಕ್ಕಿದ್ದ ಹಾಗೆ ಸೂರ್ಯದರ್ಶನಮಾಡಿ ಸಮಾಧಿಸ್ಥರಾಗಿಬಿಟ್ಟಿದಾರೆ. ಕಣ್ಣು ಎವೆಯಿಕ್ಕದೆ ನೋಡುತ್ತಿವೆ. ಬಾಹ್ಯ-ಜ್ಞಾನಶೂನ್ಯರಾಗಿದಾರೆ. ಬಹಳ ಹೊತ್ತಿನನಂತರ ಪ್ರಕೃತಿಸ್ಥರಾಗು

ತ್ತಿದಾರೆ. ರಾಖಾಲ, ಹಾಜರಾ, ಮಾಸ್ಟರ್ ಮೊದಲಾದವರು ಹತ್ತಿರ ಕುಳಿತಿದಾರೆ.

ಶ್ರೀರಾಮಕೃಷ್ಣರು ಹಾಜರಾನಿಗೆ: "ಸಮಾಧಿಯ ಅವಸ್ಥೆ ಪ್ರೇಮ ದಿಂದ ಪ್ರೇರಿತವಾದುದೇನೊ ನಿಜ. ಒಮ್ಮೆ ಶ್ಯಾಮಬಜಾರಿನ ನಟವರ ಗೋಸ್ವಾಮಿಯ ಮನೆಯಲ್ಲಿ ಕೀರ್ತನೆ ನಡೆಯಿತು. ಅಲ್ಲಿ ನನಗೆ ಶ್ರೀಕೃಷ್ಣನ ಮತ್ತು ಗೋಪಿಯರ ದರ್ಶನ ದೊರೆತು ಸಮಾಧಿಸ್ಥನಾಗಿಬಿಟ್ಟೆ. ಅನುಭವ ವಾಯಿತು, ನನ್ನ ಸೂಕ್ಷ್ಮಶರೀರ ಶ್ರೀಕೃಷ್ಣನ ಹಿಂದೆ ಹಿಂದೇ ತಿರುಗುತ್ತಿರುವ ಹಾಗೆ.

"ಜೊರಾಸಂಕದ ಹರಿಸಭೆಯಲ್ಲಿ ಈ ವಿಧದ ಕೀರ್ತನೆ ನಡೆಯು ತ್ತಿದ್ದಾಗಲೂ ಸಮಾಧಿಸ್ಥನಾಗಿ ಬಾಹ್ಯಜ್ಞಾನಶೂನ್ಯನಾಗಿಬಿಟ್ಟೆ. ಅಂದು ಅವರು ಹೆದರಿದ್ದರು ನನ್ನ ದೇಹತ್ಯಾಗವಾಗಿಬಿಡುವುದೊ ಏನೊ ಎಂದು."

ಪರಮಹಂಸರು ಸ್ನಾನ ಮುಗಿಸಿದನಂತರ ಮತ್ತೆ ಅವರು ಗೋಪೀ ಪ್ರೇಮದ ಸಂಬಂಧವಾಗಿ ಮಾತಾಡುತ್ತಿದಾರೆ. ಅವರು ಮಾಸ್ಟರ್ ಮತ್ತು ಉಳಿದ ಭಕ್ತರಿಗೆ ಹೇಳುತ್ತಿದಾರೆ: "ಗೋಪಿಯರು ಶ್ರೀಕೃಷ್ಣನಲ್ಲಿಟ್ಟಿದ್ದ ಪ್ರೀತಿಯನ್ನು ಅನುಕರಿಸಬೇಕು. ಈ ವಿಧದ ಹಾಡುಗಳನ್ನು ಆಗಾಗ ಹಾಡುತ್ತಿರಿ:

ಹೃದಯವಲ್ಲಭನಿರುವ ಕದಂಬವನವೆನ್ನುವುದು
ಇನ್ನೆಷ್ಟು ದೂರವಿದೆ ಹೇಳು ಕೆಳದೀ?
ಕೃಷ್ಣಗಂಧವು ಇದೆಕೊ ಇಲ್ಲಿಗೂ ಬೀಸುತಿದೆ!
ನಡೆಯಲಾರೆನು ಮುಂದೆ; ಸೋತಿರುವೆನು."

ಮತ್ತೆ ಹಾಡುತ್ತಿದಾರೆ:

ಹೋಗಲಾರೆ ನಾ ಹೋಗಲಾರೆ ಮನೆಗೆ,
ಕೃಷ್ಣನಾಮವನು ಜಪಿಸಲಾರೆ ನಾ
ನನ್ನ ಮನೆಯ ಒಳಗೆ....

ಪರಮಹಂಸರು ರಾಖಾಲನಿಗೆ ಒಳ್ಳೆಯದಾಗಲಿ ಎಂದು ಸಿದ್ಧೇಶ್ವರೀ ದೇವಿಗೆ ಎಳನೀರು ಸಕ್ಕರೆ ಅರ್ಪಿಸುವುದಾಗಿ ಹರಕೆ ಹೊತ್ತಿದ್ದರು. ಅವು ಗಳ ಬೆಲೆಯನ್ನು ಕೊಡಲು ಮಾಸ್ಟರಿಗೆ ಸಾಧ್ಯವಾಗುತ್ತದೆಯೆ ಎಂದು ಆತನನ್ನು ಕೇಳುತ್ತಿದಾರೆ.

ಪರಮಹಂಸರು ಅಪರಾಹ್ನದಲ್ಲಿ ರಾಖಾಲ, ಮಾಸ್ಟರ್ ಮೊದಲಾದವ

ರೊಡನೆ ಕಲ್ಕತ್ತದಲ್ಲಿರುವ ಸಿದ್ಧೇಶ್ವರೀದೇವಾಲಯದ ಕಡೆ ಗಾಡಿ ಮಾಡಿಕೊಂಡು ಬರುತ್ತಿದಾರೆ. ದಾರಿಯಲ್ಲಿ ಸಕ್ಕರೆ ಎಳನೀರು ಕೊಂಡುಕೊಂಡುದಾಯಿತು. ದೇವಾಲಯವನ್ನು ಮುಟ್ಟಿದನಂತರ ಪರಮಹಂಸರು ಭಕ್ತರಿಗೆ ಹೇಳಿದರು, ಎಳನೀರನ್ನು ಕೊಚ್ಚಿ ಅದಕ್ಕೆ ಸಕ್ಕರೆ ಬೆರಸಿ ಭಗವತಿಗೆ ಅರ್ಪಿಸುವ ಹಾಗೆ. ಅಲ್ಲಿನ ಅರ್ಚಕರು ತಮ್ಮ ಸ್ನೇಹಿತರೊಡನೆ ಇಸ್ಪೀಟು ಆಡುತ್ತಿದ್ದುದು ಪರಮಹಂಸರ ಕಣ್ಣಿಗೆ ಬಿತ್ತು. ಅದನ್ನು ನೋಡಿ ಪರಮಹಂಸರು ಭಕ್ತರಿಗೆ ಹೇಳುತ್ತಿದಾರೆ: "ನೋಡಿದಿರಾ, ಇಲ್ಲೂ ಇಸ್ಪೀಟು ಆಡುತ್ತಿರುವುದನ್ನ! ಇಲ್ಲಿ ಮಾಡಬೇಕಾದ್ದು ಭಗವಚ್ಚಿಂತನೆ."

ಪರಮಹಂಸರು ದೇವಾಲಯದಿಂದ ಹೊರಟು ಯದುಮಲ್ಲಿಕನ ಮನೆಗೆ ಬಂದಿದಾರೆ. ಆತನೊಡನೆ ಅನೇಕ ಮಂದಿ ಬಾಬುಗಳು ಕುಳಿತಿದಾರೆ. ಯದುಮಲ್ಲಿಕ ಪರಮಹಂಸರನ್ನು ಆದರದಿಂದ ಬರಮಾಡಿಕೊಂಡ.

ಶ್ರೀರಾಮಕೃಷ್ಣರು ನಗುತ್ತ: "ನೀನು ಇಷ್ಟೊಂದು ಜನ ನಕಲಿಗಳನ್ನ, ಹೊಗಳುಭಟ್ಟರನ್ನ ಏಕೆ ಹತ್ತಿರಕ್ಕೆ ಸೇರಿಸುತ್ತಾ ಇದೀಯೆ?"

ಯದುಮಲ್ಲಿಕ ನಗುತ್ತ: "ನೀವು ಅವರನ್ನು ಉದ್ಧಾರಮಾಡಲಿ ಎಂದು." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು: "ಹೊಗಳುಭಟ್ಟರು ಭಾವಿಸುತ್ತಾರೆ, ಧನಿಕ ತಮಗಾಗಿ ಹಣದ ಚೀಲದ ಕಟ್ಟನ್ನ ಸಡಿಲಮಾಡುತ್ತಾನೆ ಎಂದು. ಆದರೆ ಆತನಿಂದ ಏನನ್ನಾದರೂ ವಸೂಲುಮಾಡುವುದು ಅಂದರೆ ಬಹಳ ಕಷ್ಟ. ಒಮ್ಮೆ ಒಂದು ಕುನ್ನಿನರಿಗೆ (ಶೃಗಾಲ) ಒಂದು ಹೋರಿ ಕಣ್ಣಿಗೆ ಬಿದ್ದು, ಅದು ಅದರ ಜೊತೆಯನ್ನು ಬಿಡಲೊಲ್ಲದು. ಅದು ಹೋದ ಹೋದ ಕಡೆಗೆಲ್ಲಾ ನರಿಯೂ ಹೋಗುತ್ತಿದೆ. ನರಿ ಭಾವಿಸಿತ್ತು: 'ಹೋರಿಯ ಅಂಡಕೋಶ ಅಲ್ಲಿ ನೇತಾಡುತ್ತಿವೆ. ಒಂದಲ್ಲ ಒಂದು ಸಮಯ ಅವು ಕೆಳಕ್ಕೆ ಬಿದ್ದುಹೋಗುತ್ತವೆ. ಆಗ ಅವನ್ನು ತಿಂದುಬಿಡೋಣ.' ಹೋರಿ ಮಲಗಿ ನಿದ್ರಿಸಿದಾಗಲೆಲ್ಲಾ ನರಿಯೂ ಅದರ ಹತ್ತಿರವೇ ಮಲಗಿ ನಿದ್ರಿಸುತ್ತಿತ್ತು; ಅದು ಎದ್ದು ಸುತ್ತಾಡಿದಾಗಲೆಲ್ಲಾ ನರಿಯೂ ಅದರ ಹಿಂದೇ ಸುತ್ತಾಡುತ್ತಿತ್ತು. ಹೀಗೆ ಎಷ್ಟೋ ದಿನ ಕಳೆದುಹೋದುವು, ಆದರೂ ಹೋರಿಯ ಅಂಡಕೋಶ ಕೆಳಕ್ಕೆ ಬೀಳಲಿಲ್ಲ. ಆಗ ಅದು ನಿರಾಶೆಯಿಂದ ಹೊರಟುಹೋಯಿತು. (ಎಲ್ಲರೂ ನಗುತ್ತಿದಾರೆ.) ಹೊಗಳುಭಟ್ಟರಿಗೂ ಆಗುವ ಗತಿ ಇದೇ."

ಯದುಮಲ್ಲಿಕ ಮತ್ತು ಆತನ ತಾಯಿ ಪರಮಹಂಸರಿಗೂ ಮತ್ತು ಅವರ ಭಕ್ತರಿಗೂ ಉಪಾಹಾರಮಾಡಿಸಿದರು.

೧೯ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಪಂಚಮಿ, ಬುಧವಾರ.

ಘಂಟೆ ಬೆಳಗಿನ ಒಂಬತ್ತು. ಪರಮಹಂಸರು ಮಾಸ್ಟರೊಡನೆ ದಕ್ಷಿಣೇಶ್ವರದ ಬಿಲ್ವಮರದ ಹತ್ತಿರ ಮಾತಾಡುತ್ತಿದಾರೆ. ಬಿಲ್ವಮರದ ಮೂಲ ಪರಮಹಂಸರ ಸಾಧನಭೂಮಿ. ಅದು ಅತಿ ನಿರ್ಜನ ಪ್ರದೇಶ. ಉತ್ತರದಲ್ಲಿ ಎತ್ತರವಾದ ಕಾಂಪೌಂಡ್ ಇದೆ. ಅದರಿಂದಾಚೆಗೆ ಮದ್ದಿನ ಮನೆ. ಪಶ್ಚಿಮದಲ್ಲಿ ಸರ್ವೆ ಮರಗಳ ತೋಪು ಸದಾ "ಸೊಯ್, ಸೊಯ್" ಅಂತ ಶಬ್ದ ಮಾಡುತ್ತಿದೆ. ಅದರಿಂದಾಚೆಗೆ ಭಾಗೀರಥಿ ಹರಿಯುತ್ತಿದಾಳೆ. ದಕ್ಷಿಣ ದಿಕ್ಕಿನಲ್ಲಿ ಪಂಚವಟಿ ಕಾಣಿಸಿಕೊಳ್ಳುತ್ತಿದೆ. ಸುತ್ತಲೂ ಅಷ್ಟೊಂದು ಮರಗಿಡಗಳು ಎದ್ದಿವೆ ದೇವಾಲಯ ಇಲ್ಲಿಂದ ಕಣ್ಣಿಗೆ ಬೀಳುತ್ತಿಲ್ಲ. ಬಾಹ್ಯ ಪ್ರಪಂಚದ ಶಬ್ದ ಒಂದು ಕಿಂಚಿತ್ತೂ ಇಲ್ಲಿಗೆ ಕೇಳಿಬರುತ್ತಿಲ್ಲ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡು, ಕಾಮಕಾಂಚನವನ್ನ ತ್ಯಾಗಮಾಡದ ಹೊರತು ಭಗವಂತನ ಸಾಕ್ಷಾತ್ಕಾರ ದೊರೆಯುವುದಿಲ್ಲ."

ಮಾಸ್ಟರ್: "ಏಕೆ? ವಸಿಷ್ಠದೇವ ರಾಮಚಂದ್ರನಿಗೆ ಹೇಳಲಿಲ್ಲವೆ: 'ರಾಮ, ನೀನು ಈ ಜಗತ್ತನ್ನು ತ್ಯಜಿಸಬಹುದು, ಇದು ಭಗವಂತನಿಂದ ಹೊರಗಿರುವುದಾದರೆ.'"

ಶ್ರೀರಾಮಕೃಷ್ಣರು ನಸುನಕ್ಕು: "ಅದು ರಾವಣನ ವಧೆಗಾಗಿ. ಅದಕ್ಕಾಗಿ ರಾಮ ಸಂಸಾರಕ್ಕೆ ಕಾಲು ಹಾಕಿದ್ದು — ವಿವಾಹ ಮಾಡಿಕೊಂಡಿದ್ದು."

ಮಾಸ್ಟರ ಬಾಯಲ್ಲಿ ಒಂದು ಮಾತೂ ಹೊರಡದೆ ಮರದ ತುಂಡಿನ ಹಾಗೆ ಸುಮ್ಮನೆ ನಿಂತುಕೊಂಡಿದಾನೆ.

ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಲು ಪಂಚವಟಿಯ ಕಡೆ ಬರುತ್ತಿದಾರೆ. ಮಾಸ್ಟರೂ ಅವರನ್ನು ಹಿಂಬಾಲಿಸುತ್ತಿದಾನೆ. ಈಗ ಘಂಟೆ ಹತ್ತು.

ಮಾಸ್ಟರ್: "ಭಗವಂತನ ನಿರಾಕಾರ ಸಾಕ್ಷಾತ್ಕಾರಕ್ಕೆ ಸಾಧನೆ ಇಲ್ಲವೆ?"

ಶ್ರೀರಾಮಕೃಷ್ಣರು: "ಇಲ್ಲದೆ ಏನು? ಆದರೆ ಆ ಮಾರ್ಗ ಬಹಳ ಕಠಿನವಾದುದು. ಹಿಂದಿನ ಋಷಿಗಳು ಬಹಳವಾಗಿ ತಪಸ್ಸು ಮಾಡಿ ಭಗವಂತ ತಮ್ಮ ಆತ್ಮದ ಆತ್ಮ ಎಂಬುದನ್ನ—ಬ್ರಹ್ಮನ ನಿಜಸ್ವರೂಪ ಏನು

Bel Tree
ಬಿಲ್ವ ಮರ



Bel Tree
ಬಿಲ್ವ ಮರ

ಎಂಬುದನ್ನ ಅನುಭವಮಾಡಿಕೊಳ್ಳುತ್ತಿದ್ದರು. ಆದರೆ ಅವರು ಎಷ್ಟು ಕಷ್ಟಪಡಬೇಕಾಯಿತು! ಅವರು ಪ್ರಾತಃಕಾಲವೇ ತಮ್ಮ ಕುಟೀರವನ್ನು ಬಿಟ್ಟು ಇಡೀ ಹಗಲೆಲ್ಲಾ ತಪಸ್ಸಿನಲ್ಲಿ ತೊಡಗಿದ್ದು ಸಾಯಂಕಾಲವಾದನಂತರ ಕುಟೀರಕ್ಕೆ ಹಿಂದಿರುಗಿಬರುತ್ತಿದ್ದರು. ರಾತ್ರಿವೇಳೆಯಲ್ಲಿ ಮಾತ್ರ ಎಲ್ಲೋ ಕಿಂಚಿತ್ ಫಲಮೂಲಗಳನ್ನು ತಿನ್ನುತ್ತಿದ್ದರು.

"ಈ ಸಾಧನೆಯಲ್ಲಿ ವಿಷಯಬುದ್ಧಿ ಲೇಶಮಾತ್ರವಿದ್ದರೂ ಭಗವಂತನ ಸಾಕ್ಷಾತ್ಕಾರ ದೊರೆಯೋದಿಲ್ಲ. ರೂಪ, ರಸ, ಗಂಧ, ಸ್ಪರ್ಶ, ಶಬ್ದ—ಈ ವಸ್ತುಗಳ ಮೇಲಿನ ಆಸಕ್ತಿ ಮನಸ್ಸಿನಲ್ಲಿ ಒಂದು ಕಿಂಚಿತ್ತೂ ಇರಕೂಡದು. ಆಗ ಮಾತ್ರವೇ ಮನಸ್ಸು ಶುದ್ಧವಾಗುತ್ತದೆ. ಶುದ್ಧ ಮನಸ್ಸೇ ಶುದ್ಧ ಆತ್ಮ. ಅಂಥ ಮನಸ್ಸಿನಲ್ಲಿ ಕಾಮಕಾಂಚನಾಸಕ್ತಿ ಕಿಂಚಿತ್ತೂ ಇರದು. ಮನಸ್ಸು ಶುದ್ಧವಾದಾಗ ಇನ್ನೊಂದು ಅನುಭವ ದೊರೆಯುತ್ತದೆ. ಅನುಭವವಾಗುತ್ತದೆ: 'ಭಗವಂತನೇ ಕರ್ತ, ನಾನು ಅಕರ್ತ.' ನಾನಿಲ್ಲದಿದ್ದರೆ ಆಗೋದಿಲ್ಲ ಎಂಬ ಜ್ಞಾನವಿರದು—ಪರರ ಸುಖದಲ್ಲಿ, ದುಃಖದಲ್ಲಿ.

"ಒಮ್ಮೆ ಒಬ್ಬ ದುಷ್ಟ ಒಂದು ಮಠದ ಸಾಧುವನ್ನು ಪ್ರಜ್ಞೆ ತಪ್ಪುವವರೆಗೆ ಹೊಡೆದುಬಿಟ್ಟ. ಆತನಿಗೆ ಪ್ರಜ್ಞೆ ಬಂದ ಮೇಲೆ ಆತನ ಸ್ನೇಹಿತರು ಆತನನ್ನು ಕೇಳಿದರು: 'ಯಾರು ಈಗ ನಿನಗೆ ಹಾಲು ಕುಡಿಸುತ್ತಿದಾರೆ?' ಆತ ಉತ್ತರವಿತ್ತ: 'ಯಾರು ನನ್ನನ್ನು ಹೊಡೆದನೊ ಆತನೇ ಈಗ ಹಾಲು ಕುಡಿಸುತ್ತಿದಾನೆ.'"

ಮಾಸ್ಟರ್: "ಹೌದು, ನನಗೆ ಆ ಕಥೆ ಗೊತ್ತಿದೆ."

ಶ್ರೀರಾಮಕೃಷ್ಣರು: "ಕೇವಲ ಅದು ಗೊತ್ತಿದ್ದುಬಿಟ್ಟರೇ ಸಾಕಾಗದು. ಅದರ ಅರ್ಥವನ್ನ ಅನುಷ್ಠಾನಕ್ಕೆ ತರಬೇಕು. ವಿಷಯಚಿಂತನೆ ಮನಸ್ಸನ್ನು ಸಮಾಧಿಸ್ಥವಾಗಲು ಬಿಟ್ಟುಕೊಡದು. ವಿಷಯಬುದ್ಧಿ ಸಂಪೂರ್ಣವಾಗಿ ತೊಲಗಿಹೋದನಂತರವೇ ಸ್ಥಿತ ಸಮಾಧಿ ಉಂಟಾಗುತ್ತದೆ. ನಾನು ಸ್ಥಿತ ಸಮಾಧಿಯಲ್ಲಿ ದೇಹತ್ಯಾಗ ಮಾಡಿಬಿಡಬಲ್ಲೆ; ಆದರೆ ನನ್ನಲ್ಲಿ ಭಕ್ತನಾಗಿ ಭಕ್ತರೊಡನೆ ಇರಬೇಕೆಂಬ ಸ್ವಲ್ಪ ಆಸೆ ಇದೆ. ಅದಕ್ಕಾಗೇ ನಾನು ಈ ದೇಹದ ಮೇಲೆ ಸ್ವಲ್ಪ ಮನಸ್ಸಿಟ್ಟಿರುವುದು.

"ಇನ್ನೊಂದು ಇದೆ 'ಉನ್ಮನ ಸಮಾಧಿ' ಎಂಬುದು. ಚೆದರಿದ್ದ ಮನಸ್ಸನ್ನು ಇದ್ದಕ್ಕಿದ್ದಹಾಗೆ ಒಟ್ಟುಗೂಡಿಸುವುದು. ಇದು ಏನು ಎಂಬುದು ನಿನಗೆ ಅರ್ಥವಾಯಿತೆ?"

ಮಾಸ್ಟರ್: "ಹೌದು, ಆಯಿತು."

ಶ್ರೀರಾಮಕೃಷ್ಣರು: "ಇದು ಚೆದರಿಹೋಗಿದ್ದ ಮನಸ್ಸನ್ನು ಇದ್ದಕ್ಕಿದ್ದ ಹಾಗೆ ಒಟ್ಟುಗೂಡಿಸುವುದು. ಈ ಸಮಾಧಿ ಹೆಚ್ಚು ಹೊತ್ತು ನಿಲ್ಲದು. ಪ್ರಾಪಂಚಿಕ ಯೋಚನೆ ಬಂದು ಅದನ್ನು ಭಂಗಮಾಡಿಬಿಡುತ್ತವೆ. ಯೋಗಿಯ ಯೋಗ ಭಂಗವಾಗಿಬಿಡುತ್ತದೆ.

"ಕಾಮಾರಪುಕುರದಲ್ಲಿ ನೋಡಿದೇನೆ, ಕೀರ ಗೋಡೆಯೊಳಗೆ ಬಿಲ ಮಾಡಿಕೊಂಡು ಇರುವುದನ್ನ. ಅದು ಅಲ್ಲಿ ಬಹಳ ಆರಾಮದಿಂದ ಇರುತ್ತದೆ. ಒಮ್ಮೊಮ್ಮೆ ಜನ ಅದರ ಬಾಲಕ್ಕೆ ಇಟ್ಟಿಗೆಯನ್ನು ಕಟ್ಟಿಬಿಡುತ್ತಾರೆ; ಇಟ್ಟಿಗೆಯ ಭಾರಕ್ಕೆ ಅದು ಬಿಲದಿಂದ ಕೆಳಕ್ಕೆ ಬೀಳಬೇಕಾಗುತ್ತದೆ. ತನ್ನ ಬಿಲದೊಳಕ್ಕೆ ಹೋಗಿ ಆರಾಮದಿಂದಿರಲು ಅದು ಎಷ್ಟೇ ಸಲ ಪ್ರಯತ್ನ ಪಟ್ಟರೂ, ಅಷ್ಟು ಸಲವೂ ಇಟ್ಟಿಗೆಯ ಭಾರದಿಂದ ಅದು ಕೆಳಕ್ಕೆ ಬೀಳುತ್ತಲೇ ಇರಬೇಕಾಗುತ್ತದೆ. ವಿಷಯಚಿಂತನೆಯೂ ಹೀಗೇ ಮಾಡುತ್ತದೆ. ಅದು ಯೋಗಿಯನ್ನು ಯೋಗಭ್ರಷ್ಟನನ್ನಾಗಿ ಮಾಡುತ್ತದೆ.

"ಪ್ರಾಪಂಚಿಕರಿಗೂ ಒಮ್ಮೊಮ್ಮೆ ಸಮಾಧಿಯ ಅವಸ್ಥೆ ಉಂಟಾಗಲೂ ಬಹುದು. ಸೂರ್ಯೋದಯವಾದಾಗ ತಾವರೆ ಹೂವು ಅರಳುತ್ತದೆ; ಆದರೆ ಸೂರ್ಯನನ್ನು ಮೋಡ ಮುಚ್ಚಿತು ಎಂದರೆ, ಅದೂ ಮುಚ್ಚಿಕೊಂಡು ಬಿಡುತ್ತದೆ. ಪ್ರಾಪಂಚಿಕ ಚಿಂತನೆಯೇ ಮೋಡ."

ಮಾಸ್ಟರ್: "ಸಾಧನೆ ಮಾಡಿದರೆ ಜ್ಞಾನ ಭಕ್ತಿ ಎರಡನ್ನೂ ಗಳಿಸಿಕೊಳ್ಳಲಾಗುವುದಿಲ್ಲವೆ?"

ಶ್ರೀರಾಮಕೃಷ್ಣರು: "ಭಕ್ತಿಮಾರ್ಗವನ್ನು ಅನುಸರಿಸಿದರೆ ಎರಡೂ ದೊರೆಯುತ್ತವೆ. ಆವಶ್ಯಕವೆನಿಸಿದರೆ ಭಗವಂತನೇ ಬ್ರಹ್ಮಜ್ಞಾನವನ್ನ ಕೊಡುತ್ತಾನೆ. ಬಹಳ ಉತ್ತಮ ಸಾಧಕ ಜ್ಞಾನ, ಭಕ್ತಿ ಎರಡನ್ನೂ ಜೊತೆಯಲ್ಲೇ ಬೆಳಸಿಕೊಂಡುಹೋಗುತ್ತಾನೆ. ಈಶ್ವರಕೋಟಿ ಈ ಗುಂಪಿಗೆ ಸೇರಿದವರು—ಉದಾಹರಣೆಗೆ ಚೈತನ್ಯದೇವ. ಆದರೆ ಜೀವಕೋಟಿಗಳ ವಿಷಯವೇ ಬೇರೆ.

"ಬೆಳಕಿನಲ್ಲಿ ಐದು ವಿಧ: ದೀಪದ ಬೆಳಕು, ವಿವಿಧ ಬೆಂಕಿಗಳ ಬೆಳಕು, ಚಂದ್ರನ ಬೆಳಕು, ಸೂರ್ಯನ ಬೆಳಕು, ಸೂರ್ಯ ಚಂದ್ರರ ಮಿಶ್ರಣ ಬೆಳಕು. ಭಕ್ತಿ, ಚಂದ್ರನ ಬೆಳಕು; ಜ್ಞಾನ, ಸೂರ್ಯನ ಬೆಳಕು.

"ಕೆಲಕೆಲವು ವೇಳೆ ಸೂರ್ಯ ಅಸ್ತನಾಗುವುದಕ್ಕೆ ಮುನ್ನವೇ

ಚಂದ್ರೋದಯವಾಗುವುದನ್ನ ನೋಡಬಹುದು. ಅವತಾರಾದಿಗಳಲ್ಲಿ ಭಕ್ತಿ ಎಂಬ ಚಂದ್ರ, ಜ್ಞಾನವೆಂಬ ಸೂರ್ಯ ಎರಡೂ ಜೊತೆಯಲ್ಲೇ ಇರುವುದನ್ನ ನೋಡಬಹುದು.

"ಮನಸ್ಸು ಮಾಡಿಕೊಂಡುಬಿಟ್ಟಾಕ್ಷಣಕ್ಕೆ ಎಲ್ಲರೂ ಜ್ಞಾನ ಭಕ್ತಿಗಳನ್ನ ಒಟ್ಟಿಗೇ ಬೆಳಸಿಕೊಳ್ಳಲು ಸಾಧ್ಯವೇ? ಆಧಾರ ವಿಶೇಷತೆಯೆಂಬುದು ಇದೆ. ಕೆಲವು ಬಂಬುಗಳಲ್ಲಿ ಟೊಳ್ಳು ದೊಡ್ಡದಾಗಿರುತ್ತದೆ, ಇನ್ನು ಕೆಲವದರಲ್ಲಿ ಚಿಕ್ಕದಾಗಿರುತ್ತದೆ. ಭಗವಂತನ ನೈಜಸ್ವರೂಪವನ್ನ ಗ್ರಹಿಸಲು ಎಲ್ಲರಿಗೂ ಸಾಧ್ಯವೆ? ಒಂದು ಸೇರಿನ ಪಾತ್ರೆ ಎರಡು ಸೇರು ಹಾಲು ಹಿಡಿಸುವುದೆ?"

ಮಾಸ್ಟರ್: "ಏಕೆ? ಆತನ ಕೃಪೆಯೊಂದಿದ್ದರೆ? ಆತ ಕೃಪೆಮಾಡಿದುದೇ ಆದರೆ ಸೂಜಿಯ ಕಣ್ಣಿನ ಮೂಲಕ ಒಂಟೆಯೂ ಹಾದುಹೋಗಿಬಿಡಬಲ್ಲದು, ಅಲ್ಲವೆ?"

ಶ್ರೀರಾಮಕೃಷ್ಣರು: "ಕೃಪೆ ಸುಮ್ಮನೆ ಬಂದುಬಿಡುತ್ತದೆಯೆ? ಭಿಕ್ಷುಕ ಒಂದು ಕಾಸು ಕೇಳಿದರೇನೊ ಕೊಟ್ಟುಬಿಡಬಹುದು. ಆತ ತನ್ನ ಡೀ ರೈಲ್ವೆ ಚಾರ್ಜನ್ನು ಕೊಡಬೇಕೆಂದರೆ?"

ಮಾಸ್ಟರ್ ಸುಮ್ಮನೆ ನಿಂತಿದಾನೆ. ಪರಮಹಂಸರೂ ಸುಮ್ಮನಿದಾರೆ. ಇದ್ದಕ್ಕಿದ್ದಹಾಗೆ ಹೇಳುತ್ತಿದಾರೆ: "ಹೌದು, ನಿಜ. ಭಗವಂತನ ಕೃಪೆಯಿಂದ ಕೆಲವರಿಗೆ ಜ್ಞಾನ ಭಕ್ತಿ ಎರಡನ್ನೂ ಗಳಿಸಿಕೊಳ್ಳಲು ಸಾಧ್ಯವಾಗಬಹುದು."

ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಬಿಲ್ವಮರದ ಕಡೆಗೆ ಹೋಗುತ್ತಿದಾನೆ.

ಮಧ್ಯಾಹ್ನವಾದರೂ ಮಾಸ್ಟರ್ ಇನ್ನೂ ಬಾರದಿರುವುದನ್ನು ನೋಡಿ ಪರಮಹಂಸರೇ ಬಿಲ್ವಮರದ ಕಡೆಗೆ ಹೋಗುತ್ತಿದಾರೆ; ಆದರೆ ಅವರು ಪಂಚವಟಿಯನ್ನು ತಲುಪಿದಾಗ ಮಾಸ್ಟರೂ ಆ ಕಡೆಯಿಂದ ಜಂಖಾನ, ಆಸನ, ನೀರಿನ ಪಾತ್ರೆ ಹಿಡಿದುಕೊಂಡು ಬರುತ್ತಿದ್ದುದು ಅವರ ಕಣ್ಣಿಗೆ ಬಿತ್ತು. ಮಾಸ್ಟರ್ ಹತ್ತಿರಕ್ಕೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳುತ್ತಿದಾರೆ: "ನಿನ್ನನ್ನು ಹುಡುಕಲು ಬರುತ್ತಿದ್ದೆ. ನೀನು ಇಷ್ಟು ಹೊತ್ತಾದರೂ ಬಾರದಿರುವುದನ್ನು ನೋಡಿ ಭಾವಿಸಿದೆ, ನೀನು ಕಾಂಪೌಂಡು ನೆಗೆದು ಹಾಗೇ ತಪ್ಪಿಸಿಕೊಂಡು ಹೊರಟು

ಹೋಗಿರಬೇಕು. ಬೆಳಗ್ಗೆ ನಿನ್ನ ಕಣ್ಣು ಇದ್ದ ಅವಸ್ಥೆಯನ್ನು ನೋಡಿದ್ದೆ-ಭಾವನೆ ಬಂತು ನಾರಾಯಣಶಾಸ್ತ್ರಿಯು ಹಾಗೆ ಓಡಿಹೋಗಿರಬೇಕು. ಬಳಿಕ ನನಗೆ ನಾನೇ ಹೇಳಿಕೊಂಡೆ: 'ಛೆ! ಅವನು ಆ ರೀತಿಯಾಗೆಲ್ಲ ಮಾಡತಕ್ಕ ಮನುಷ್ಯನಲ್ಲ. ಆತ ಏನು ಮಾಡಬೇಕಾದರೂ ಮೊದಲೇ ಪೂರ್ವ ಪರ ಆಲೋಚಿಸಿ ಆಮೇಲೆ ಮಾಡುತ್ತಾನೆ.' "

ರಾತ್ರಿಯಾಗಿದೆ. ಪರಮಹಂಸರು ಮಾಸ್ಟರೊಡನೆ ಮಾತಾಡುತ್ತಿದಾರೆ. ರಾಖಾಲ, ಲಾಟು, ಹರೀಶ ಮೊದಲಾದವರೂ ಹತ್ತಿರ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಒಳ್ಳೇದು, ಕೆಲಕೆಲವರು ಕೃಷ್ಣ-ಲೀಲೆಯ ಸಂಬಂಧವಾಗಿ ಆಧ್ಯಾತ್ಮಿಕ ವ್ಯಾಖ್ಯಾನ ಕೊಡುತ್ತಾರೆ. ಅದರ ವಿಷಯವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ಅನೇಕ ದೃಷ್ಟಿಗಳಿವೆ. ಇದ್ದರೇನು ತೊಂದರೆ? ನೀವು ಭೀಷ್ಮದೇವನ ಸಂಬಂಧವಾಗಿ ಹೇಳಿದೀರಿ—ಶರಶಯ್ಯೆಯಲ್ಲಿ ಆತ ಮಲಗಿ ದೇಹತ್ಯಾಗಮಾಡುವಾಗ ಹೇಳಿದ: 'ನಾನು ಏಕೆ ಅಳುತ್ತಿದೇನೆ ಗೊತ್ತೆ? ಮರಣಸಂಕಟಕ್ಕಾಗೇನೂ ಅಲ್ಲ. ಸಾಕ್ಷಾತ್ ನಾರಾಯಣನೇ ಅರ್ಜುನನ ಸಾರಥಿಯಾಗಿದ್ದರೂ ಪಾಂಡವರ ದುಃಖದುರಿತಗಳಿಗೆ ಕೊನೆಯೇ ಇಲ್ಲವಲ್ಲ; ಭಗವಂತನ ಲೀಲೆ ನನಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲವಲ್ಲ ಎಂಬ ಭಾವನೆ ಬಂದು ಅಳುತ್ತಿದೇನೆ.'

"ಮತ್ತೆ ನೀವು ಹನುಮಂತನ ವಿಷಯವಾಗಿ ಹೇಳಿದೀರಿ—ಆತ ಹೇಳುತ್ತಿದ್ದ: 'ನನಗೆ ವಾರ, ತಿಥಿ, ನಕ್ಷತ್ರ ಏನೂ ಗೊತ್ತಿಲ್ಲ. ನಾನು ಕೇವಲ ರಾಮಚಿಂತನೆ ಮಾಡುತ್ತಿದೇನೆ.'

"ನೀವು ಹೇಳಿದೀರಿ, ಬ್ರಹ್ಮ ಶಕ್ತಿ ಇವೆರಡು ಹೊರತು ಇನ್ನು ಬೇರೆ ಏನೂ ಇಲ್ಲ. ಮತ್ತೆ ಹೇಳಿದೀರಿ, ಬ್ರಹ್ಮಜ್ಞಾನ ಉಂಟಾದರೆ ಇವೆರಡೂ ಒಂದೇ ಎಂಬ ಬೋಧೆಯಾಗುತ್ತದೆ; ಒಂದೇ ಎರಡಿಲ್ಲ ಎಂಬ ಬೋಧೆಯಾಗುತ್ತದೆ."

ಶ್ರೀರಾಮಕೃಷ್ಣರು: "ಹೌದು, ನಿಜ. ನಿನ್ನ ಉದ್ದೇಶ ಗುರಿಯನ್ನು ಮುಟ್ಟುವುದು. ನೀನು ಅದನ್ನು ಇಚ್ಛಿಬಂದರೆ ಮುಳ್ಳಿನ ಕಾಡಿನ ಮೂಲಕವಾಗೂ ಮುಟ್ಟಬಹುದು, ಒಳ್ಳೆ ರಸ್ತೆಯ ಮೂಲಕವಾಗೂ ಮುಟ್ಟಬಹುದು.

"ನಾನಾ ದೃಷ್ಟಿಗಳು ನಿಜವಾಗಿಯೂ ಇವೆ. ತೋತಾಪುರಿ ಹೇಳುತ್ತಿದ್ದ, ನಾನಾ ದೃಷ್ಟಿಗಳ ದೆಸೆಯಿಂದ ಸಾಧುಸೇವೆ ನಡೆಯದೆ ಹೋಯಿತು ಎಂದು. ಒಂದು ಜಾಗದಲ್ಲಿ ಸಂತರ್ಪಣೆ ನಡೆಯುತ್ತಿತ್ತು. ಅನೇಕ ಸಾಧು ಸಂಪ್ರದಾಯದವರು ಬಂದಿದ್ದರು. ಪ್ರತಿಯೊಂದು ಸಂಪ್ರದಾಯದವರೂ ಹೇಳಲಾರಂಭಿಸಿದರು, ಮೊದಲು ತಮಗೆ ಸೇವೆ ನಡೆಯಬೇಕು ಬಳಿಕ ಉಳಿದ ಸಂಪ್ರದಾಯದವರಿಗೆ ಎಂದು. ಈ ಗೊಂದಲದಲ್ಲಿ ಯಾವ ನಿರ್ಧಾರಕ್ಕೂ ಬರಲಾಗಲಿಲ್ಲ. ಕೊನೆಗೆ ಎಲ್ಲರೂ ಹೊರಟುಹೋದರು. ಮಾಡಿದ್ದ ಅಡಿಗೆಯನ್ನ ವೇಶ್ಯೆಯರಿಗೆ ಬಡಿಸಲಾಯಿತು."

ಮಾಸ್ಟರ್: "ತೋತಾಪುರಿ ಬಹಳ ದೊಡ್ಡ ಸಾಧು."

ಶ್ರೀರಾಮಕೃಷ್ಣರು: "ಆದರೆ ಹಾಜರಾ ಹೇಳುತ್ತಾನೆ, ಆತ ಕೇವಲ ಒಬ್ಬ ಸಾಮಾನ್ಯ ಮನುಷ್ಯ ಎಂದು. ಇವುಗಳ ಮೇಲೆ ಮಾತುಕತೆ ಯಾವ ಪ್ರಯೋಜನಕ್ಕೂ ಬಂದುದಲ್ಲ. ಪ್ರತಿಯೊಬ್ಬರೂ ಹೇಳುತ್ತಾರೆ, ತಮ್ಮ ಗಡಿಯಾರ ಸರಿಯಾಗಿ ನಡೆದುಕೊಂಡುಹೋಗುತ್ತಿದೆ.

"ನೋಡು, ನಾರಾಯಣಶಾಸ್ತ್ರಿಯದು ಒಳ್ಳೆ ವೈರಾಗ್ಯ. ಆತ ಒಳ್ಳೆ ದೊಡ್ಡ ವಿದ್ವಾಂಸ—ಹೆಂಡತಿಯನ್ನು ತ್ಯಜಿಸಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಹೊರಟುಹೋದ. ಮನಸ್ಸಿನಿಂದ ಸಂಪೂರ್ಣವಾಗಿ ಕಾಮಕಾಂಚನಾಸಕ್ತಿಯನ್ನು ತ್ಯಜಿಸಿದರೆ ಮಾತ್ರವೇ ಯೋಗ ಉಂಟಾಗುತ್ತದೆ. ಕೆಲಕೆಲವರಲ್ಲಿ ಯೋಗಿಯ ಲಕ್ಷಣ ಎದ್ದು ಕಾಣುತ್ತವೆ.

"ನಿನಗೆ ನಾನು ಷಟ್ಚಕ್ರದ ವಿಷಯವಾಗಿ ಸ್ವಲ್ಪ ತಿಳಿಸಬೇಕಾಗಿದೆ. ಯೋಗಿಗಳು ಷಟ್ಚಕ್ರವನ್ನು ಭೇದಿಸಿ ಭಗವಂತನ ಕೃಪೆಯಿಂದ ಆತನ ದರ್ಶನವನ್ನ ಪಡೆಯುತ್ತಾರೆ. ಷಟ್ಚಕ್ರದ ವಿಷಯವಾಗಿ ಕೇಳಿದೀಯೇನು?"

ಮಾಸ್ಟರ್: "ಅವೇ ವೇದಾಂತದ ಸಪ್ತ ಭೂಮಿಕೆಗಳು."

ಶ್ರೀರಾಮಕೃಷ್ಣರು: "ವೇದಾಂತದ್ದಲ್ಲ, ವೇದದ್ದು. ಷಟ್ಚಕ್ರಗಳು ಹೇಗಿವೆ ಗೊತ್ತೆ? ಸೂಕ್ಷ್ಮದೇಹದೊಳಗೆ ಆ ಎಲ್ಲಾ ಪದ್ಮಗಳೂ ಇವೆ. ಯೋಗಿಗಳಿಗೆ ಅವನ್ನು ನೋಡಲು ಸಾಧ್ಯವಾಗುತ್ತದೆ. ಅವು ಮೇಣದ ಮರದ ಎಲೆ ಕಾಯಿಗಳಂತೆ ಕಾಣುತ್ತವೆ."

ಮಾಸ್ಟರ್: "ಹೌದು, ಯೋಗಿಗಳು ಅವನ್ನು ನೋಡಬಲ್ಲರಂತೆ. ಒಂದು ವಿಧವಾದ ಗಾಜು ಇದೆ, ಅದರ ಮೂಲಕ ನೋಡಿದರೆ ಚಿಕ್ಕ ವಸ್ತು

ದೊಡ್ಡದಾಗಿ ಕಾಣುತ್ತವೆ ಎಂಬುದಾಗಿ ಓದಿದೇನೆ. ಅದೇ ರೀತಿಯಾಗಿ ಯೋಗದ ಮೂಲಕ ಆ ಸೂಕ್ಷ್ಮ ಪದ್ಮಗಳನ್ನು ನೋಡಲು ಸಾಧ್ಯವಾಗುತ್ತದೆ ಅಂತ ಕಾಣುತ್ತೆ.''

ಪರಮಹಂಸರ ಸಲಹೆಗನುಸಾರ ಮಾಸ್ಟರ್ ಪಂಚವಟಿಯ ಗುಡಿಸಿಲಿನಲ್ಲಿ ತನ್ನ ರಾತ್ರಿಯನ್ನು ಕಳೆದ. ಬೆಳಗಿನ ಜಾವ ಎದ್ದು ಒಬ್ಬನೇ ಹಾಡುತ್ತಿದಾನೆ:

ಭಜನೆ ಸಾಧನೆಯಿಂದ ಏನೂ ಫಲವು ದೊರೆಯದೆಹೋಯಿತು
ದೀನಹೀನನ ದಿವ್ಯಸ್ಪರ್ಶದಿ ಶುದ್ಧಿಗೈಯುತ ನಿಲ್ಲಿಸು.
ನಿನ್ನ ಪಾದವ ಪಡೆವ ಹಂಬಲದಲ್ಲಿ ದಿನಗಳು ಉರುಳಿವೆ
ಆದರಯ್ಯೋ ನೀನು ಮಾತ್ರವೆ ಕಾಣದೆಲ್ಲೋ ಅವಿತಿಹೆ! . . .

ಅಕಸ್ಮಾತ್ತಾಗಿ ಮಾಸ್ಟರ್ ಕಿಟಕಿಯ ಕಡೆ ನೋಡಿದಾಗ, ಪರಮಹಂಸರು ಅದರ ಬಳಿ ನಿಂತಿರುವುದು ಕಂಡುಬಂತು. ಪರಮಹಂಸರು ಅಶ್ರುಪೂರ್ಣಲೋಚನರಾಗಿದಾರೆ, ಮಾಸ್ಟರ್ ಈ ಕೆಳಗಿನ ಚರಣ ಹಾಡಿದಾಗ:

ದೀನಹೀನನ ದಿವ್ಯಸ್ಪರ್ಶದಿ ಶುದ್ಧಿಗೈಯುತ ನಿಲ್ಲಿಸು.

ಮಾಸ್ಟರ್ ಮತ್ತೆ ಹಾಡುತ್ತಿದಾನೆ:

ಕಾವಿಬಟ್ಟೆಯಸುಟ್ಟು, ಕಿವಿಯೊಳು ಶಂಖಕುಂಡಲವಿಕ್ಕುತ
ಕ್ರೂರ ಹರಿ ದೊರೆವನಕ ಅಲೆವೆನು ಯೋಗಿವೇಷವ ತಾಳುತ! . . .

ಪರಮಹಂಸರು ರಾಖಾಲನೊಡನೆ ಈಗ ಸುತ್ತಾಡುತ್ತಿದಾರೆ.

೨೧ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಸಪ್ತಮಿ, ಶುಕ್ರವಾರ.

ಬೆಳಗಿನ ವೇಳೆ. ಪರಮಹಂಸರು ಈಗ ಮಾಸ್ಟರೊಡನೆ ಬಿಲ್ವಮರದ ಕೆಳಗೆ ಮಾತಾಡುತ್ತಿದಾರೆ. ಆತನಿಗೆ ಸಾಧನೆಯ ವಿಷಯವಾಗಿ ಅನೇಕ ರಹಸ್ಯ ವಿಷಯಗಳನ್ನ ತಿಳಿಸುತ್ತಿದಾರೆ. ಕಾಮಕಾಂಚನವನ್ನ ತ್ಯಜಿಸುವ ಬಗೆ ಹೇಗೆ, ಹೇಗೆ ಮನಸ್ಸು ಕೆಲವು ವೇಳೆ ತಾನೇ ಗುರುವಿನ ಕೆಲಸ ಮಾಡುತ್ತದೆ ಎಂಬುವುಗಳ ವಿಷಯವಾಗೂ ತಿಳಿಸುತ್ತಿದಾರೆ.

ಊಟವಾದನಂತರ ಪರಮಹಂಸರು ಪಂಚವಟಿಗೆ ಮನೋಹರ ಪೀತಾಂಬರಧಾರಿಗಳಾಗಿ ಬಂದಿದಾರೆ. ಅವರು ಅಲ್ಲಿಗೆ ಬಂದಾಗ ಇಬ್ಬರು ಮೂವರು ವೈಷ್ಣವ ಸಾಧುಗಳು ತಮ್ಮ ಸಂಪ್ರದಾಯದ ಉಡಿಗೆ ಉಟ್ಟು ಅಲ್ಲಿ ಕುಳಿತಿದ್ದರು.

ಅಪರಾಹ್ನದಲ್ಲಿ ನಾನಕ್‌ಪಂಥಕ್ಕೆ ಸೇರಿದ ಒಬ್ಬ ಸಾಧು ಬಂದರು. ಅವರು ನಿರಾಕಾರವಾದಿ. ಪರಮಹಂಸರು ಅವರಿಗೆ ಸಾಕಾರದ ಮೇಲೂ ಧ್ಯಾನಮಾಡುವಂತೆ ಹೇಳುತ್ತಿದಾರೆ. ಪರಮಹಂಸರು ಅವರಿಗೆ ಹೇಳುತ್ತಿದಾರೆ: "ಆಳಕ್ಕೆ ಮುಳುಗು; ಮೇಲೆ ಮೇಲೆ ತೇಲಿದರೆ ರತ್ನ ದೊರೆಯದು. ಭಗವಂತ ನಿರಾಕಾರನೇನೊ ನಿಶ್ಚಯ, ಆದರೆ ಸಾಕಾರ ಕೂಡ. ಸಾಕಾರದ ಮೇಲೆ ಧ್ಯಾನಮಾಡಿದರೆ ಶೀಘ್ರದಲ್ಲೇ ಭಕ್ತಿಯುಂಟಾಗುತ್ತದೆ; ಬಳಿಕ ನಿರಾಕಾರದ ಮೇಲೆ ಧ್ಯಾನಮಾಡಬಹುದು. ಇದು ಪತ್ರವನ್ನು ಓದಿಕೊಂಡುಬಿಟ್ಟನಂತರ ಅದನ್ನು ಬಿಸಾಡಿಬಿಟ್ಟು, ಅದು ಹೇಳಿದಂತೆ ಕಾರ್ಯಕ್ಕೆ ಕೈ ಹಾಕುವ ಹಾಗೆ.

೨೨ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಅಷ್ಟಮಿ, ಶನಿವಾರ.

ರಾಖಾಲ, ಹರೀಶ, ಮಾಸ್ಟರ್, ಲಾಟು ಪರಮಹಂಸರೊಡನೇ ಇದ್ದುಕೊಂಡಿದಾರೆ. ಪರಮಹಂಸರು ಅವರೊಡನೆ ತಮ್ಮ ಕೊಠಡಿಯ ಆಗ್ನೇಯ ವರಾಂಡದಲ್ಲಿ ಕುಳಿತಿದಾರೆ. ಬಲರಾಮನ ತಂದೆ ಮತ್ತು ಶ್ಯಾಮಪುಕುರದ ದೇವೇಂದ್ರಘೋಷ ಬಂದಿದಾರೆ. ಈಗ ಘಂಟೆ ಬೆಳಗಿನ ಒಂಬತ್ತು.

ಒಬ್ಬ ಭಕ್ತ: "ಭಕ್ತಿಯನ್ನು ಗಳಿಸಿಕೊಳ್ಳುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಮುಂದೆ ಹೋಗು. ಏಳು ಬಾಗಿಲುಗಳ ಆಚೆ ದೊರೆ ವಾಸಿಸುತ್ತಿದಾನೆ. ಆ ಎಲ್ಲಾ ಬಾಗಿಲುಗಳನ್ನೂ ದಾಟಿ ಹೋದರೆ ತಾನೆ ರಾಜನನ್ನು ನೋಡಲು ಸಾಧ್ಯ?

"ಚಾನಕದಲ್ಲಿ ಅನ್ನಪೂರ್ಣೆಯನ್ನು ಪ್ರತಿಷ್ಠಾಪನೆ ಮಾಡಿದಾಗ ನಾನು ದ್ವಾರಕಬಾಬುವಿಗೆ ಹೇಳಿದೆ: 'ದೊಡ್ಡ ಸರೋವರದಲ್ಲಿ ದೊಡ್ಡ ದೊಡ್ಡ ಮೀನು ಬಹಳ ಆಳದಲ್ಲಿ ವಾಸಿಸುತ್ತವೆ. ನೀರಿಗೆ ಒಳ್ಳೆ ಎರೆಯನು ಬಿಸಾಡು; ಆಗ ಮೀನು ಅದರ ಗಂಧಕ್ಕಾಗಿ ಮೇಲೆ ಬರುತ್ತವೆ; ಒಂದೊಂದು ಸಲ ನೀರನ್ನು ತಮ್ಮ ಬಾಲದಿಂದ ಹೊಡೆದು ಎರಚುತ್ತವೆ. ಪ್ರೇಮ ಭಕ್ತಿ ಒಳ್ಳೆ ಎರೆ ಇದ್ದ ಹಾಗೆ.'

"ಭಗವಂತ ನರಲೀಲೆಯನ್ನು ಮಾಡುತ್ತಾನೆ. ಮನುಷ್ಯನ ರೂಪಿನಲ್ಲಿ ಅವತೀರ್ಣನಾಗುತ್ತಾನೆ. ಉದಾಹರಣೆಗೆ, ಶ್ರೀಕೃಷ್ಣ, ರಾಮಚಂದ್ರ, ಚೈತನ್ಯದೇವ. ಒಮ್ಮೆ ನಾನು ಕೇಶವಸೇನನಿಗೆ ಹೇಳಿದೆ: 'ಭಗವಂತ ಮನುಷ್ಯನಲ್ಲಿ ವಿಶೇಷ ರೀತಿಯಾಗಿ ವ್ಯಕ್ತವಾಗಿದಾನೆ. ಗದ್ದೆಯ ತೆವರಿ

ಯಲ್ಲಿ ಚಿಕ್ಕ ಚಿಕ್ಕ ಬಿಲಗಳಿರುತ್ತವೆ. ಮಳೆಗಾಲದಲ್ಲಿ ಅವುಗಳ ಒಳಗೆ ಮೀನು ನಳ್ಳಿ ಸೇರಿಕೊಂಡಿರುತ್ತವೆ. ಮೀನು ನಳ್ಳಿ ಬೇಕಾಗಿತ್ತು ಎಂದರೆ, ಹೋಗಿ ಆ ಬಿಲಗಳಲ್ಲಿ ಹುಡುಕಬೇಕು. ಭಗವಂತ ಬೇಕಾಗಿದ್ದರೆ, ಅವತಾರ-ಪುರುಷನಲ್ಲಿ ಆತನನ್ನು ನೋಡಬಹುದು.'

"ಈ ಮೂರೂವರೆ ಮೊಳ ಮಾನವನ ಆಕಾರದ ಮೂಲಕ ಜಗನ್ಮಾತೆ ವ್ಯಕ್ತವಾಗುತ್ತಾಳೆ. ಇದರ ಸಂಬಂಧವಾಗಿ ಒಂದು ಹಾಡು ಇದೆ:

ನಿನ್ನದೇ ಈ ಯಂತ್ರ? ಎಂಟು ಗೇಣಿನ ಬೊಂಬೆ!
ಯಾವ ಆಟಕೆ ಇದನು ನೀ ಮಾಡಿದೆ? . . .

"ಭಗವಂತನನ್ನು ಅರಿತುಕೊಳ್ಳಬೇಕಾದರೆ, ಅವತಾರಪುರುಷನನ್ನು ಗುರುತಿಸಬೇಕಾದರೆ ಸಾಧನೆ ಮಾಡಬೇಕು. ದೊಡ್ಡ ದೊಡ್ಡ ಮೀನು ಸರೋವರದಲ್ಲಿ ವಾಸಿಸುತ್ತವೆ, ಆದರೆ ಅವನ್ನು ನೋಡಬೇಕಾದರೆ ನೀರಿಗೆ ಎರೆ ಬಿಸಾಡಬೇಕು. ಹಾಲಿನಲ್ಲಿ ಬೆಣ್ಣೆ ಇದೆ, ಆದರೆ ಬೆಣ್ಣೆ ಬೇಕಾದರೆ ಹಾಲಿಗೆ ಹೆಪ್ಪುಹಾಕಿ ಕಡೆಯಬೇಕು. ಸಾಸವೆಯಲ್ಲಿ ಎಣ್ಣೆ ಇದೆ, ಆದರೆ ಎಣ್ಣೆಬೇಕಾದರೆ ಸಾಸವೆಯನ್ನು ಗಾಣಕ್ಕೆ ಹಾಕಿ ತಿರುಗಿಸಬೇಕು. ಗೋರಂಟಿ ಕೈಯನ್ನು ಕೆಂಪಗೆ ಮಾಡುತ್ತದೆ, ಆದರೆ ಕೈ ಕೆಂಪಗಾಗಬೇಕಾದರೆ ಗೋರಂಟಿಯನ್ನು ಅರೆದು ಮೆತ್ತಬೇಕು."

ಭಕ್ತ: "ಒಳ್ಳೇದು, ಭಗವಂತ ಸಾಕಾರನೇ ಅಥವಾ ನಿರಾಕಾರನೆ?"

ಶ್ರೀರಾಮಕೃಷ್ಣರು: "ತಾಳು, ತಾಳು! ಮೊದಲು ನೀನು ಕಲ್ಕತ್ತಕ್ಕೆ ಹೋದರೆ ತಾನೆ, ಅಲ್ಲಿ ಮೈದಾನ, ಏಷ್ಯಾಟಿಕ್ ಸೊಸೈಟಿ, ಬಂಗಾಳ ಬ್ಯಾಂಕ್ ಇವೆಲ್ಲ ಎಲ್ಲಿವೆ ಎಂಬುದು ಗೊತ್ತಾಗಬೇಕಾದರೆ? ನೀನು ಖರ್ದಹಾ ಅಗ್ರಹಾರಕ್ಕೆ ಹೋಗಬೇಕಾದರೆ ಮೊದಲು ನೀನು ಖರ್ದಹಾ ಅನ್ನು ಮುಟ್ಟಲೇ ಬೇಕಲ್ಲವೆ?

"ನಿರಾಕಾರ ಸಾಧನೆ ಏಕೆ ಸಾಧ್ಯವಿಲ್ಲ? ಆದರೆ ಅದು ಬಹಳ ಕಠಿನವಾದ್ದು. ಕಾಮಕಾಂಚನವನ್ನು ತ್ಯಜಿಸದ ಹೊರತು ಅದು ಸಾಧ್ಯವಿಲ್ಲ. ಹೊರಗಿನ ತ್ಯಾಗ, ಒಳಗಿನ ತ್ಯಾಗ ಎರಡೂ ಆಗಬೇಕು. ವಿಷಯಬುದ್ಧಿ ಲೇಶಮಾತ್ರವಿದ್ದರೂ ಅದು ಸಾಧ್ಯವಾಗೋದಿಲ್ಲ.

"ಸಾಕಾರ ಸಾಧನೆಯೇನೊ ಸುಲಭವಾದ್ದೆ, ಆದರೆ ಬಾಯಲ್ಲಿ ಹೇಳುವಷ್ಟು ಸುಲಭವಾದ್ದಲ್ಲ.

"ನಿರಾಕಾರ ಸಾಧನೆ, ಜ್ಞಾನಯೋಗ ಸಾಧನೆ ಇವನ್ನ ಭಕ್ತನ ಮುಂದೆ ವಿವರಿಸಬಾರದು. ಬಹಳ ಕಷ್ಟಪಟ್ಟನಂತರ ಆತನಲ್ಲಿ ಸ್ವಲ್ಪ ಭಕ್ತಿಯುಂಟಾಗಬಹುದು. ಎಲ್ಲಾ ಸ್ವಪ್ನವತ್ ಅಂತ ವಿವರಿಸಿಬಿಟ್ಟಿದ್ದೇ ಆದರೆ, ಆತನ ಭಕ್ತಿಗೆ ಹಾನಿಯುಂಟಾಗುತ್ತದೆ.

"ಕಬೀರ್‌ದಾಸ ನಿರಾಕಾರವಾದಿ. ಶಿವ, ಕಾಳಿ, ಕೃಷ್ಣ ಇವರಿಗೆ ಆತ ಮನ್ನಣೆ ತೋರಿಸುತ್ತಿರಲಿಲ್ಲ. ಅವರ ವಿಷಯವಾಗಿ ಆತ ತಮಾಷೆ ಮಾಡುತ್ತಿದ್ದ. ಆತ ಹೇಳುತ್ತಿದ್ದ: 'ಕಾಳಿ, ಅಕ್ಕಿ ಬಾಳೆಹಣ್ಣು ತಿಂದು ಜೀವಿಸುತ್ತಿದ್ದಳು; ಕೃಷ್ಣ ಗೋಪಿಯರ ಕೈಚಪ್ಪಾಳೆಗನುಸಾರ ಕಪಿಯ ಹಾಗೆ ಕುಣಿಯುತ್ತಿದ್ದ.' (ಎಲ್ಲರೂ ನಗುತ್ತಿದಾರೆ.)

"ನಿರಾಕಾರ ಸಾಧಕ ಬಹುಶಃ ಮೊದಲು ದರ್ಶನಮಾಡಬಹುದು ದಶಭುಜ ಮೂರ್ತಿಯನ್ನ, ಬಳಿಕ ಚತುರ್ಭುಜ ಮೂರ್ತಿಯನ್ನ, ಅನಂತರ ದ್ವಿಭುಜ ಗೋಪಾಲನನ್ನ. ಕೊನೆಗೆ ಆತ ಅಖಂಡ ಜ್ಯೋತಿಯನ್ನು ದರ್ಶನ ಮಾಡಿ ಅದರಲ್ಲಿ ಲೀನವಾಗಿಬಿಡುತ್ತಾನೆ.

"ಪ್ರತೀತಿ ಇದೆ, ದತ್ತಾತ್ರೇಯ, ಜಡಭರತ ಇವರು ಬ್ರಹ್ಮಸಾಕ್ಷಾತ್ಕಾರವಾದನಂತರ ಹಿಂದಿರುಗಿಬರಲಿಲ್ಲ ಎಂದು. ಕೆಲವರ ಅಭಿಪ್ರಾಯ, ಶುಕದೇವ ಆ ಬ್ರಹ್ಮಸಮುದ್ರದ ಒಂದು ತೊಟ್ಟನ್ನು ರುಚಿ ನೋಡಿದ್ದೆಷ್ಟೊ ಅಷ್ಟೆ. ಆತ ಆ ಸಮುದ್ರದ ಅಲೆಗಳ ಅಲ್ಲೋಲ ಕಲ್ಲೋಲಗಳನ್ನು ಕೇವಲ ನೋಡಿದ್ದು ಮತ್ತು ಅದರ ಅಬ್ಬರವನ್ನು ಕೇಳಿದ್ದು ವಿನಾ ಅದರಲ್ಲಿ ಮುಳುಗು ಹಾಕಲಿಲ್ಲ.

"ಒಬ್ಬ ಬ್ರಹ್ಮಚಾರಿ ನನಗೆ ಹೇಳಿದ: 'ಕೇದಾರನಾಥವನ್ನು ಬಿಟ್ಟು ಮುಂದಕ್ಕೆ ಹೋಯಿತು ಎಂದರೆ ದೇಹ ಬದುಕಿರದು.' ಅದೇ ರೀತಿಯಾಗಿ ಬ್ರಹ್ಮಜ್ಞಾನ ದೊರೆತನಂತರ ಶರೀರ ಬದುಕಿರದು. ಶರೀರಕ್ಕೆ ಇಪ್ಪತ್ತೊಂದು ದಿನದೊಳಗೆ ಮೃತ್ಯು.

"ಒಂದು ಬಹಳ ಎತ್ತರವಾದ ಗೋಡೆಯಿಂದಾಚೆ ವಿಶಾಲವಾದ ಮೈದಾನ. ನಾಲ್ಕು ಮಂದಿ ಸ್ನೇಹಿತರು ಆ ಗೋಡೆಯಿಂದಾಚೆ ಏನಿದೆ ಎಂಬುದನ್ನು ಪತ್ತೆಮಾಡಲು ಸನ್ನದ್ಧರಾದರು. ಅವರಲ್ಲಿ ಮೂರು ಜನರೂ ಒಬ್ಬೊಬ್ಬರಾಗಿ ಗೋಡೆ ಹತ್ತಿ ಮೈದಾನವನ್ನು ನೋಡಿದನಂತರ 'ಆಹ! ಆಹ!' ಅಂತ ಹೇಳಿ, ನಕ್ಕು ಆ ಕಡೆಗೆ ದುಮುಕಿಬಿಟ್ಟರು. ಅವರು ಮೂವರೂ ಆ ಮೈದಾನದ ಯಾವ ಸುದ್ದಿ ಸಮಾಚಾರವನ್ನೂ ತಿಳಿಸಲೇ

ಇಲ್ಲ. ಕೇವಲ ನಾಲ್ಕನೆಯವ ಮಾತ್ರ ಹಿಂದಿರುಗಿ ಇಳಿದು ಬಂದು ಜನರಿಗೆ ಸುದ್ದಿ ಸಮಾಚಾರವನ್ನು ಕೊಟ್ಟ. ಕೆಲವರು ಬ್ರಹ್ಮಜ್ಞಾನ ದೊರೆತ ನಂತರವೂ ಶರೀರ ಉಳಿಸಿಕೊಂಡಿರುತ್ತಾರಲ್ಲ ಲೋಕಶಿಕ್ಷಣಕ್ಕಾಗಿ, ಆತ ಅವರ ಹಾಗೆ. ಅವತಾರಾದಿ ಪುರುಷರು ಈ ಗುಂಪಿಗೆ ಸೇರಿದವರು.

"ಹಿಮವತ್ಪರ್ವತ ರಾಜನ ಮನೆಯಲ್ಲಿ ಪಾರ್ವತಿ ಜನ್ಮವೆತ್ತಿದಳು. ಹುಟ್ಟಿದನಂತರ ಆಕೆ ತನ್ನ ತಂದೆಗೆ ತನ್ನ ಅನೇಕ ದಿವ್ಯರೂಪಗಳನ್ನು ತೋರಿಸಲಾರಂಭಿಸಿದಳು. ರಾಜ ಆಕೆಗೆ ಹೇಳಿದ: 'ಅಮ್ಮ, ನಿನ್ನ ಈ ದಿವ್ಯ ರೂಪಗಳನ್ನೇನೊ ನನಗೆ ತೋರಿಸಿದೆ. ಇದು ಬಹಳ ಒಳ್ಳೆಯದೆ. ಆದರೆ ನಿನಗೆ ಇನ್ನೊಂದು ರೂಪವಿದೆಯಲ್ಲ, ಬ್ರಹ್ಮಸ್ವರೂಪ, ದಯವಿಟ್ಟು ಅದನ್ನು ಒಮ್ಮೆ ನನಗೆ ತೋರಿಸಿಬಿಡು.' ಪಾರ್ವತಿ ಉತ್ತರವಿತ್ತಳು: 'ಅಪ್ಪ, ನಿಮಗೆ ಬ್ರಹ್ಮಜ್ಞಾನ ಬೇಕಾಗಿದ್ದರೆ, ನೀವು ಸಂಸಾರವನ್ನು ತ್ಯಜಿಸಿ ಸಾಧು-ಸಂಗ ಮಾಡಬೇಕು.' ರಾಜ ಆಕೆಯನ್ನು ಏನು ಮಾಡಿದರೂ ಬಿಡಲಿಲ್ಲ. ಆಗ ಪಾರ್ವತಿ ತನ್ನ ಬ್ರಹ್ಮಸ್ವರೂಪವನ್ನು ಒಮ್ಮೆ ತೋರಿಸಿದಳು. ಒಡನೇ ಗಿರಿರಾಜ ಸಂಪೂರ್ಣವಾಗಿ ಮೂರ್ಛಿತನಾಗಿಹೋದ.

"ಇದುವರೆಗೆ ನಾನು ಹೇಳಿದುದೆಲ್ಲಾ ವಿಚಾರಕ್ಕೆ ಸಂಬಂಧಪಟ್ಟದ್ದು. ಬ್ರಹ್ಮ ಸತ್ಯ, ಜಗತ್ ಮಿಥ್ಯಾ—ಇದೇ ವಿಚಾರ. ಬ್ರಹ್ಮ ಹೊರತು ಎಲ್ಲವೂ ಸ್ವಪ್ನವತ್. ಇದು ಬಹಳ ಕಠಿನ ಮಾರ್ಗ. ಈ ಮಾರ್ಗದ ದೃಷ್ಟಿಯಿಂದ ಭಗವಂತನ ಲೀಲೆಯೂ ಸ್ವಪ್ನದ ಹಾಗೆ ಮಿಥ್ಯೆಯಾಗಿಬಿಡುತ್ತದೆ; 'ಅಹಂ' ಕೂಡ ಶೂನ್ಯವಾಗಿಬಿಡುತ್ತದೆ. ಈ ಮಾರ್ಗ ಅವತಾರವನ್ನು ಒಪ್ಪುವುದಿಲ್ಲ. ಇದು ಬಹಳ ಕಠಿನವಾದ ಮಾರ್ಗ. ವಿಚಾರದ ಈ ಮಾತುಕತೆಗಳನ್ನು ಭಕ್ತರು ಅತಿಯಾಗಿ ಕೇಳಕೂಡದು.

"ಇದಕ್ಕಾಗೇ ಭಗವಂತ ಅವತರಿಸಿ ಭಕ್ತಿಯನ್ನು ಉಪದೇಶಮಾಡುತ್ತಾನೆ— ಶರಣಾಗತರಾಗುವಂತೆ ಪ್ರಚೋದಿಸುತ್ತಾನೆ. ಭಕ್ತಿಯಿಂದಲೇ, ಆತನ ಕೃಪೆಯಿಂದ, ಎಲ್ಲವೂ ದೊರೆಯುತ್ತವೆ—ಜ್ಞಾನ, ವಿಜ್ಞಾನ ಎಲ್ಲವೂ ದೊರೆಯುತ್ತವೆ.

"ಭಗವಂತ ಈ ಜಗತ್ತಿನಲ್ಲಿ ಲೀಲೆಯನ್ನು ಮಾಡುತ್ತಾನೆ. ಆತ ಭಕ್ತರ ಅಧೀನ. 'ಭಗವತಿ ಶ್ಯಾಮೆ ತನ್ನ ಭಕ್ತರ ಪ್ರೇಮಪಾಶದಿಂದ ತನ್ನನ್ನೇ ತಾನು ಬಂಧಿಸಿಕೊಂಡಿದಾಳೆ.'

"ಕೆಲವು ವೇಳೆ ಭಗವಂತ ಸೂಜಿಗಲ್ಲಾಗುತ್ತಾನೆ, ಭಕ್ತ ಸೂಜಿ

ಯಾಗುತ್ತಾನೆ. ಇನ್ನು ಕೆಲವು ವೇಳೆ ಭಕ್ತ ಸೂಜಿಗಲ್ಲಾಗುತ್ತಾನೆ, ಭಗವಂತ ಸೂಜಿಯಾಗುತ್ತಾನೆ. ಭಕ್ತ ಆತನನ್ನು ಸೆಳೆದುಕೊಂಡುಬಿಡುತ್ತಾನೆ. ಭಗವಂತ ಭಕ್ತವತ್ಸಲ, ಭಕ್ತಪರಾಧೀನ.

"ಕೆಲವರು ಹೇಳುತ್ತಾರೆ, ಯಶೋದಾದಿ ಗೋಪಿಯರು ಹಿಂದಿನ ಜನ್ಮಗಳಲ್ಲಿ ನಿರಾಕಾರವಾದಿಗಳಾಗಿದ್ದರು. ಅದರಿಂದ ಅವರಿಗೆ ತೃಪ್ತಿ ದೊರಕಲಿಲ್ಲ. ಅದಕ್ಕಾಗೇ ಬೃಂದಾವನಲೀಲೆಯಲ್ಲಿ ಶ್ರೀಕೃಷ್ಣನೊಡನೆ ಬಹಳವಾಗಿ ಆನಂದಪಟ್ಟರು ಎಂದು. ಒಂದು ದಿನ ಶ್ರೀಕೃಷ್ಣ ಗೋಪಿಯರಿಗೆ ಹೇಳಿದ: 'ಬನ್ನಿ ನನ್ನೊಡನೆ ಯಮುನೆಯ ಸ್ನಾನಕ್ಕೆ. ನಿಮಗೆ ನಿತ್ಯ ಧಾಮದ ದರ್ಶನ ಮಾಡಿಸುತ್ತೇನೆ.' ಅವರು ಯಮುನೆಯಲ್ಲಿ ಮುಳುಗಿ ಏಳುವುದೇ ತಡ ಗೋಲೋಕದರ್ಶನವಾಯಿತು. ಅನಂತರ ಅವರಿಗೆ, ಅಖಂಡಜ್ಯೋತಿಯ ದರ್ಶನ ದೊರೆಯಿತು. ಆಗ ಯಶೋದೆ ಕೂಗಿ ಹೇಳಿದಳು: 'ಓ ಕೃಷ್ಣ, ನಮಗೆ ಇನ್ನು ಇದಾವುದೂ ಬೇಕಾಗಿಲ್ಲ. ಈಗ ನೀನು ನಿನ್ನ ಎಂದಿನ ಮನುಷ್ಯರೂಪವನ್ನು ತೋರಿಸು. ನಾನು ನಿನ್ನನ್ನು ಕಂಕುಳಲ್ಲಿ ಎತ್ತಿಕೊಂಡು ನಿನಗೆ ತಿನಿಸಬೇಕು.'

"ಆದ್ದರಿಂದ ಭಗವಂತ ಅವತಾರಪುರುಷರಲ್ಲಿ ಹೆಚ್ಚಾಗಿ ವ್ಯಕ್ತವಾಗಿರುತ್ತಾನೆ. ಅವತಾರಪುರುಷನ ಶರೀರ ಇನ್ನೂ ಬದುಕಿರುವಾಗಲೇ ಆತನಿಗೆ ಪೂಜೆ, ಸೇವೆ ಸಲ್ಲಿಸಬೇಕು. 'ಹಗಲು ಮೂಡಿದೊಡನೇ ಭಗವಂತ ತನ್ನ ಅಂತಃಪುರಕ್ಕೆ ಹೊರಟುಹೋಗುತ್ತಾನೆ.'

"ಅವತಾರಪುರುಷನನ್ನು ಎಲ್ಲರೂ ಗುರುತಿಸಲಾರರು. ಅವತಾರ-ಪುರುಷನೂ ದೇಹಧಾರಣೆಯ ದೆಸೆಯಿಂದ ನಮ್ಮ ಹಾಗೆ ರೋಗ, ಶೋಕ, ಹಸಿವು ಬಾಯಾರಿಕೆ ಇವುಗಳಿಗೆ ತುತ್ತಾಗುತ್ತಾನೆ. ರಾಮ ಸೀತೆಗಾಗಿ ಅತ್ತ.

"ಪುರಾಣದಲ್ಲಿ ಹೇಳಿದೆ, ಹಿರಣ್ಯಾಕ್ಷನ ವಧೆಯಾದನಂತರ ವರಾಹ ಅವತಾರ ಮರಿ-ಗಿರಿ ಕಟ್ಟಿಕೊಂಡು ಸುಮ್ಮನೆ ಇದ್ದುಬಿಟ್ಟ—ಅವುಗಳಿಗೆ ಹಾಲನ್ನು ಕೊಡುತ್ತ ಸ್ವಧಾಮಕ್ಕೆ ಹಿಂದಿರುಗಬೇಕು ಎಂಬ ಮಾತೇ ಇಲ್ಲದೆ ತೆಪ್ಪಗಿದ್ದುಬಿಟ್ಟ. ಕೊನೆಗೆ ಶಿವ ಬಂದು ಆ ವರಾಹ ಶರೀರವನ್ನು ತನ್ನ ತ್ರಿಶೂಲದಿಂದ ನಾಶಮಾಡಿದಾಗ, ವಿಷ್ಣು 'ಹಿಹಿಹಿ' ಅಂತ ನಕ್ಕು ತನ್ನ ಸ್ವಧಾಮಕ್ಕೆ ಹಿಂದಿರುಗಿದ ಎಂದು."

ಈಗ ಅಪರಾಹ್ನ. ಭವನಾಥ ಬಂದಿದ್ದಾನೆ. ಕೊಠಡಿಯಲ್ಲಿ ರಾಖಾಲ, ಮಾಸ್ಟರ್, ಹರೀಶ ಮೊದಲಾದವರು ಕುಳಿತಿದ್ದಾರೆ.

ಶ್ರೀರಾಮಕೃಷ್ಣರು ಭವನಾಥನಿಗೆ: "ಅವತಾರವನ್ನು ಪ್ರೀತಿಸಲು ಸಾಧ್ಯವಾದರೇ ಬೇಕಾದಷ್ಟು. ಆಹ, ಗೋಪಿಯರಿಗೆ ಕೃಷ್ಣನ ಮೇಲೆ ಎಂಥಾ ಪ್ರೀತಿ!"

ಈಗ ಪರಮಹಂಸರು ಗೋಪಿಯರ ಭಾವವನ್ನು ಆರೋಪಿಸಿಕೊಂಡು ಹಾಡಲಾರಂಭಿಸಿದ್ದಾರೆ:

ನನ್ನ ಜೀವದ ಜೀವ, ಓ ನನ್ನ ಘನಶ್ಯಾಮ . . . .

ಬಳಿಕ ಹಾಡುತ್ತಿದ್ದಾರೆ:

ಹೋಗಲಾರೆ ನಾ ಹೋಗಲಾರೆ ಮನೆಗೆ,
ಕೃಷ್ಣನಾಮವನು ಜಪಿಸಲಾರೆ ನಾ
ನನ್ನ ಮನೆಯ ಒಳಗೆ. . . .

ಮತ್ತೆ ಹಾಡುತ್ತಿದ್ದಾರೆ:

ನಾನು ಬಾಗಿಲೊಳಿದ್ದೆ, ನೀನಂದು ವನದೆಡೆಗೆ ನಡೆಯುವಾಗ. . . .

ಶ್ರೀರಾಮಕೃಷ್ಣರು ತಮ್ಮ ಮಾತು ಮುಂದುವರಿಸುತ್ತ ಹೇಳುತ್ತಿದ್ದಾರೆ: "ರಾಸಲೀಲೆ ಮುಂದುವರಿಯುತ್ತಿದ್ದಾಗ ಇದ್ದಕ್ಕಿದ್ದಹಾಗೆ ಶ್ರೀಕೃಷ್ಣ ಅಂತರ್ಧಾನನಾಗಿಬಿಟ್ಟಿದ್ದನ್ನು ನೋಡಿ ಗೋಪಿಯರು ಉನ್ಮಾದಿನಿಯರಾಗಿಬಿಟ್ಟಿದ್ದಾರೆ. ಮರದ ಕಡೆ ನೋಡಿ ಹೇಳುತ್ತಾರೆ: 'ನೀನು ಒಬ್ಬ ತಪಸ್ವಿಯೇ ಆಗಿರಬೇಕು. ನೀನು ಶ್ರೀಕೃಷ್ಣನನ್ನು ನೋಡಿರಲೇಬೇಕು. ಇಲ್ಲದಿದ್ದರೆ ನೀನು ಸಮಾಧಿಸ್ಥನ ಹಾಗೆ ನಿಶ್ಚಲನಾಗಿ ಇರಲು ಕಾರಣವೇನು?' ಹಸುರು ಹುಲ್ಲಿನಿಂದ ಕೂಡಿದ ಭೂಮಿಯನ್ನು ನೋಡಿ ಅವರು ಹೇಳುತ್ತಾರೆ: 'ಹೇ ಭೂಮಿಯೇ, ನೀನು ನಿಜವಾಗಿಯೂ ಶ್ರೀಕೃಷ್ಣನನ್ನು ನೋಡಿರಲೇಬೇಕು. ಇಲ್ಲದಿದ್ದರೆ ನೀನು ರೋಮಾಂಚಿತಳಾಗಿರಲು ಕಾರಣವೇನು? ಆತನ ಸ್ಪರ್ಶ ಸುಖವನ್ನು ನೀನು ಅನುಭವಿಸಿರಲೇಬೇಕು.' ಮಾಧವೀಲತೆಯನ್ನು ನೋಡಿ ಹೇಳುತ್ತಾರೆ: 'ಓ ಮಾಧವೀ, ನಮ್ಮ ಮಾಧವನನ್ನು ನಮಗೆ ಕೊಡು!' ಗೋಪಿಯರದು ಪ್ರೇಮೋನ್ಮಾದ. ಶ್ರೀಕೃಷ್ಣನನ್ನೂ, ಬಲರಾಮನನ್ನೂ ಮಥುರೆಗೆ ಕರೆದುಕೊಂಡು ಹೋಗಲು ಅಕ್ರೂರ ಬೃಂದಾವನಕ್ಕೆ ಬಂದ. ಅವರು ರಥಕ್ಕೆ ಹತ್ತಿದಾಗ ಗೋಪಿಯರು ರಥದ ಚಕ್ರಗಳನ್ನು ಬಲವಾಗಿ ಹಿಡಿದುಕೊಂಡು ಅದು ಮುಂದುವರಿಯಲು ಬಿಟ್ಟುಕೊಡಲಿಲ್ಲ."

ಹೀಗೆಂದು ಹೇಳಿದನಂತರ ಪರಮಹಂಸರು ಅಕ್ರೂರನ ಭಾವವನ್ನು ಆರೋಪಿಸಿಕೊಂಡು ಹಾಡುತ್ತಿದಾರೆ:

ತಡೆಯುದಿರಿ, ತಡೆಯುದಿರಿ, ರಥಚಕ್ರಗಳನು;
ಚಕ್ರದಿಂದೀ ರಥವು ಮುನ್ನಡೆವುದೇನು?
ಯಾವ ಚಕ್ರಿಯ ಇಚ್ಛೆಗೀ ಲೋಕಚಕ್ರ
ನಡೆಯುವುದೊ, ಆವನಿಚ್ಛೆ ನಡಸುವುದು ಇದನೂ! . . .

ಶ್ರೀರಾಮಕೃಷ್ಣರು: "'ಚಕ್ರದಿಂದೀ ರಥವು ಮುನ್ನಡೆವುದೇನು?' 'ಯಾವ ಚಕ್ರಿಯ ಇಚ್ಛೆಗೀ ಲೋಕ ಚಕ್ರ ನಡೆಯುವುದೊ,' 'ರಥಿಯ ಆಜ್ಞೆಗನುಸಾರ ಸಾರಥಿ ರಥವನ್ನು ಚಲಿಸುವನು.' ಈ ಮಾತುಗಳು ನನ್ನ ಹೃದಯದ ಅಂತರಾಳವನ್ನು ಕಲಕಿಬಿಟ್ಟವೆ

೨೩ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ನವಮಿ ಭಾನುವಾರ.

ಪರಮಹಂಸರು ತಮ್ಮ ಕೊಠಡಿಯ ಆಗ್ನೇಯ ವರಾಂಡದಲ್ಲಿ ರಾಖಾಲ, ಲಾಟು, ಮಾಸ್ಟರ್, ಹರೀಶನೇ ಮೊದಲಾದ ಭಕ್ತರೊಡನೆ ಕುಳಿತಿದಾರೆ. ಘಂಟೆ ಈಗ ಬೆಳಗಿನ ಒಂಬತ್ತು. ಮಾಸ್ಟರ್ ಗುರು-ಗೃಹದಲ್ಲಿ ವಾಸಿಸಲು ಆರಂಭಿಸಿ ಆಗಲೇ ಒಂಬತ್ತು ದಿನ ಆಗಿಬಿಟ್ಟವೆ. ಕೊನ್ನಗರಕ್ಕೆ ಹೋಗಿದ್ದ ಮನಮೋಹನ ಪ್ರಾತಃಕಾಲವೇ ಇಲ್ಲಿಗೆ ಬಂದಿದಾನೆ. ಆತ ಇಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಕಲ್ಕತ್ತಕ್ಕೆ ಹಿಂದಿರುಗುತ್ತಾನೆ. ಹಾಜರಾ ಪರಮಹಂಸರ ಹತ್ತಿರ ಕುಳಿತಿದಾನೆ.

ಒಬ್ಬ ವೈಷ್ಣವ ಈಗ ಹಾಡುತ್ತಿದಾನೆ. ಆತ ಹಾಡಿದ ಹಾಡುಗಳಲ್ಲೊಂದರ ಮಾತೆತ್ತಿ ಪರಮಹಂಸರು ಹೇಳುತ್ತಿದಾರೆ: "ಆ ಹಾಡು ನನಗೆ ಅಷ್ಟಾಗಿ ರುಚಿಸಲಿಲ್ಲ. ಹಿಂದಿನ ಕಾಲದ ಹಾಡುಗಳಲ್ಲಿ ಒಳ್ಳೆ ಸತ್ತ್ವವಿದೆ. ಒಮ್ಮೆ ನಾನು ಪಂಚವಟಿಯಲ್ಲಿ ತೋತಾಪುರಿಯ ಎದುರಿಗೆ ಹಾಡಿದೆ: 'ಕೈದುಗೊಳು, ಕೈದುಗೊಳು, ಮನೆಯ ಸುತ್ತಲು ಮೃತ್ಯು ನಿಂತು ರಣಭೇರಿಯನು ಹೊಡೆಯುತ್ತಿದೆ,' ಎಂಬ ಹಾಡನ್ನು. ನಾನು ಮತ್ತೆ ಹಾಡಿದೆ: 'ನಾನಾರ ದೂಷಿಸಲಿ, ನಾನೆ ತೋಡಿದ ಕೂಪದಾಳದಲಿ ನಾನಾಗಿ ಮುಳುಗುತಿಹೆನು!' ಎಂಬುದನ್ನ.

"ತೋತಾಪುರಿ ಮಹಾ ಜ್ಞಾನಿ. ಆ ಹಾಡು ಆತನಿಗೆ ಅರ್ಥವಾಗದೆ ಇದ್ದರೂ ಪ್ರೇಮಾಶ್ರು ಸುರಿಸಲಾರಂಭಿಸಿದ. ಭಗವತಿಯ ಸಂಬಂಧವಾದ ರಾಮಪ್ರಸಾದನ ಹಾಡುಗಳನ್ನು ನಾನು ಹಾಡಿದಾಗ ಪದ್ಮಲೋಚನನೂ

ಪ್ರೇಮಾಶ್ರು ಸುರಿಸಲಾರಂಭಿಸಿದ. ಆತ ನಿಜವಾಗಿಯೂ ಒಳ್ಳೆ ದೊಡ್ಡ ಪಂಡಿತ.''

ಮಧ್ಯಾಹ್ನದ ಊಟವಾದನಂತರ ಪರಮಹಂಸರು ಸ್ವಲ್ಪ ವಿಶ್ರಮಿಸಿ ಕೊಳ್ಳುತ್ತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತಿದಾನೆ. ನಹಬತ್ ಖಾನೆಯಿಂದ ಬರುತ್ತಿದ್ದ ಬಾಜನವನ್ನು ಕೇಳುತ್ತ ಕೇಳುತ್ತ ಪರಮಹಂಸರು ಬಹಳವಾಗಿ ಆನಂದವನ್ನು ಸೂಚಿಸುತ್ತಿದಾರೆ. ಈಗ ಮಾಸ್ಟರಿಗೆ ವಿವರಿಸಿ ಹೇಳುತ್ತಿದಾರೆ, ಬ್ರಹ್ಮನೇ ಜೀವ ಜಗತ್ತು ಎಲ್ಲವೂ ಆಗಿದಾನೆ ಎಂಬುದಾಗಿ.

ಶ್ರೀರಾಮಕೃಷ್ಣರು: "ಯಾರೋ ಒಬ್ಬರು ಒಂದು ಊರಿನ ಸಂಬಂಧವಾಗಿ ಹೇಳಿದರು: 'ಅಲ್ಲಿ ಭಗವನ್ನಾಮದ ಶಬ್ದವನ್ನೇ ಕೇಳುವ ಹಾಗಿಲ್ಲ.' ಆ ಮಾತುಗಳು ಆತನ ಬಾಯಿಂದ ಹೊರಡುವುದೇ ತಡ ಭಗವಂತನೇ ಎಲ್ಲಾ ಜೀವಗಳಾಗಿರುವುದನ್ನು ಕಂಡೆ. ಅವು ಸಚ್ಚಿದಾನಂದ ಸಾಗರದಲ್ಲಿ ಎದ್ದಿರುವ ಅಸಂಖ್ಯ ಗುಳ್ಳೆಗಳೊ ಅಥವಾ ಪ್ರತಿಬಿಂಬಗಳೊ ಏನೊ ಎಂಬಂತೆ ಕಂಡವು.

"ಕೆಲವು ವೇಳೆ ನನಗೆ ಕಾಣುತ್ತದೆ, ಜೀವಗಳು ಸಚ್ಚಿದಾನಂದನ ಅಸಂಖ್ಯ ಗುಳಿಗೆಗಳೊ ಏನೋ ಎಂಬಂತೆ. ಒಮ್ಮೆ ನಾನು ಕಾಮಾರ-ಪುಕುರದಿಂದ ಬರ್ದ್ವಾನಿಗೆ ಹೋಗುತ್ತಿದ್ದೆ. ಒಂದು ಜಾಗಕ್ಕೆ ಹತ್ತಿರವೇ ಇದ್ದ ಒಂದು ಹುಲ್ಲುಗಾವಲಿಗೆ ಓಡಲಾರಂಭಿಸಿದೆ—ಜೀವಗಳು ಯಾವರೀತಿಯಾಗಿ ಅಲ್ಲಿ ತಿಂದು ಬದುಕಿಕೊಂಡಿವೆ ಎಂಬುದನ್ನು ನೋಡಲೋಸುಗ. ಅಲ್ಲಿಗೆ ಹೋಗಿ ನೋಡುತ್ತೇನೆ, ಬಯಲಿನಲ್ಲೆಲ್ಲಾ ಇರುವೆ ಓಡಾಡುತ್ತಿವೆ. ಇಡೀ ಪ್ರದೇಶ ಚೈತನ್ಯಮಯವಾಗಿರುವ ಹಾಗೆ ಕಂಡಿತು.''

ಹಾಜರಾ ಕೊಠಡಿಯನ್ನು ಪ್ರವೇಶಿಸಿ ನೆಲದ ಮೇಲೆ ಕುಳಿತು ಕೊಂಡಿದಾನೆ.

ಶ್ರೀರಾಮಕೃಷ್ಣರು: "ಇನ್ನು ಕೆಲವು ವೇಳೆ ನನಗೆ ಕಾಣುತ್ತದೆ, ಜೀವಗಳು ವಿವಿಧ ವರಿಸೆ ದಳಗಳುಳ್ಳ ಹೂವುಗಳ ಹಾಗೆ. ಮತ್ತೆ ಕೆಲವು ವೇಳೆ ಅವು ಕೆಲವು ದೊಡ್ಡ ಕೆಲವು ಚಿಕ್ಕ ಗುಳ್ಳೆಗಳೊ ಏನೊ ಎಂಬಂತೆ ಕಾಣುತ್ತವೆ.''

ಈ ರೀತಿಯಾಗಿ ಪರಮಹಂಸರು ತಮ್ಮ ದಿವ್ಯ ದರ್ಶನಗಳ ಸಂಬಂಧ ವಾಗಿ ವಿವರಿಸುತ್ತ ಇದ್ದಹಾಗೇ ಭಾವಾವಿಷ್ಟರಾಗಿ ಹೇಳುತ್ತಿದಾರೆ: "ನಾನು ಆಗಿದೇನೆ! ನಾನು ಬಂದಿದೇನೆ!'' ಹೀಗೆಂದು ಹೇಳಿದೊಡನೇ

ಸಮಾಧಿಸ್ಥರಾಗಿಬಿಟ್ಟರು. ಅವರ ಅಂಗಾಂಗಗಳೆಲ್ಲಾ ಸ್ಥಿರವಾಗಿಬಿಟ್ಟುವು. ಆ ಅವಸ್ಥೆಯಲ್ಲೇ ಅವರು ಬಹಳ ಹೊತ್ತು ಇದ್ದನಂತರ ಬಾಹ್ಯಪ್ರಜ್ಞೆ ಬರಲಾರಂಭಿಸಿತು. ಈಗ ಬಾಲಕನ ಹಾಗೆ ನಗುತ್ತ ನಗುತ್ತ ಕೊಠಡಿಯಲ್ಲಿ ಸುತ್ತಾಡುತ್ತಿದಾರೆ. ಅವರು ಏನೊ ಒಂದು ಅದ್ಭುತ ದರ್ಶನ ಮಾಡಿದು ದನ್ನು ಅವರ ಕಣ್ಣುಗಳು ಹೊರಸೂಸುತ್ತಿವೆ. ಹಸನ್ಮುಖರಾಗಿ ಶೂನ್ಯ ದೃಷ್ಟಿಯುಳ್ಳವರಾಗಿದಾರೆ. ಕೊಠಡಿಯಲ್ಲಿ ಇನ್ನೂ ಸುತ್ತಾಡುತ್ತಲೇ ಹೇಳುತ್ತಿದಾರೆ: "ನಾನು ಆ ಆಲದ ಮರದ ಕೆಳಗೆ ಇರುವ ಪರಮಹಂಸ ನನ್ನು ನೋಡಿದೆ. ಆತ ಈ ರೀತಿಯಾಗಿ ನಗುತ್ತ ಸುತ್ತಾಡುತ್ತಿದ್ದ. ನನಗೂ ಅದೇ ಅವಸ್ಥೆ ಬಂದುಬಿಟ್ಟಿದೆಯೇನು?"

ಈಗ ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಭಗವತಿಯೊಡನೆ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಹೋಗು, ನನಗೆ ಅರಿತುಕೊಳ್ಳಲೂ ಇಚ್ಛೆ ಯಿಲ್ಲ. ತಾಯಿ, ನಿನ್ನ ಪಾದಪದ್ಮಗಳಲ್ಲಿ ಶುದ್ಧ ಭಕ್ತಿಯುಂಟಾಗುವಂತೆ ಆಗಲಿ!

(ಮಾಸ್ಟರಿಗೆ) "ಕ್ಷೋಭೆ, ಕಾಮನೆ ಹೋದುವು ಎಂದರೇ ಈ ಅವಸ್ಥೆ.

(ಭಗವತಿಗೆ) "ತಾಯಿ, ನನ್ನಿಂದ ಪೂಜಾಕಾರ್ಯವನ್ನು ತಪ್ಪಿಸಿಬಿಟ್ಟಿ ದೀಯೆ. ದಯವಿಟ್ಟು ನೋಡಿಕೊ ತಾಯಿ, ನನ್ನ ಎಲ್ಲಾ ಕಾಮನೆಗಳು ಒಂದೂ ಇಲ್ಲದ ರೀತಿಯಾಗಿ ಬಿಟ್ಟುಹೋಗದ ಹಾಗೆ. ಪರಮಹಂಸ ಕೇವಲ ಬಾಲಕ. ಬಾಲಕನಿಗೆ ತಾಯಿ ಬೇಕಾಗಿಲ್ಲ? ಅದಕ್ಕಾಗೇ ನೀನು ತಾಯಿ, ನಾನು ಮಗು. ತಾಯಿಯಿಲ್ಲದೆ ಮಗು ಹೇಗೆ ತಾನೆ ಇರಬಲ್ಲದು?"

ಪರಮಹಂಸರು ಭಗವತಿಯೊಡನೆ ಅಂಥಾ ಕಂಠದಿಂದ ಮಾತಾಡು ತ್ತಿದಾರೆ, ಕಲ್ಲೂ ಕರಗಿಹೋಗಬೇಕು. ಮತ್ತೆ ಭಗವತಿಗೆ ಹೇಳುತ್ತಿದಾರೆ: "ಕೇವಲ ಅದ್ವೈತ ಜ್ಞಾನವೆ! ಹ್ಯಾಕ್ ಥೂ! ಎಲ್ಲಿಯವರೆಗೆ 'ನಾನು' ಎಂಬುದನ್ನು ಇಟ್ಟಿದಿಯೊ ಅಲ್ಲಿಯವರೆಗೆ ನೀನು ಇದ್ದೇ ಇದೀಯೆ. ಪರಮ-ಹಂಸ ಬಾಲಕ. ಬಾಲಕನಿಗೆ ತಾಯಿ ಬೇಡ?"

ಮಾಸ್ಟರ್ ಆಶ್ಚರ್ಯಚಕಿತನಾಗಿ ಪರಮಹಂಸರ ಈ ದೇವದುರ್ಲಭ ಅವಸ್ಥೆಯನ್ನು ನೋಡುತ್ತಿದಾನೆ. ಆತ ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: "ಪರಮಹಂಸರು ಅಹೇತುಕಕೃಪಾಸಿಂಧು. ಭಗವಂತನಲ್ಲಿ ಭಕ್ತರಿಗೆ

ಶ್ರದ್ಧೆಯುಂಟಾಗುವಂತೆ ಮಾಡಲು, ಆತ್ಮಜಾಗೃತಿಯನ್ನುಂಟುಮಾಡಲು, ಜೀವಶಿಕ್ಷಣಕ್ಕಾಗಿ ಗುರುರೂಪರಾದ ಶ್ರೀರಾಮಕೃಷ್ಣರಿಗೆ ಈ ಪರಮ-ಹಂಸಾವಸ್ಥೆ.''

ಮಾಸ್ಟರ್ ಮತ್ತೆ ಭಾವಿಸುತ್ತಿದಾನೆ: ''ಪರಮಹಂಸರು ಹೇಳುತ್ತಿದಾರೆ: 'ಅದ್ವೈತ–ನಿತ್ಯಾನಂದ–ಚೈತನ್ಯ' ಎಂದು; ಅಂದರೆ, ಅದ್ವೈತಜ್ಞಾನ ಉಂಟಾಯಿತು ಎಂದರೆ ಆತ್ಮಜಾಗೃತಿಯುಂಟಾಗುತ್ತದೆ. ಅನಂತರವೇ ನಿತ್ಯಾನಂದ ದೊರೆಯುತ್ತದೆ. ಪರಮಹಂಸರು ಅದ್ವೈತಜ್ಞಾನವನ್ನು ಪಡೆದುಕೊಂಡಿರುವುದಷ್ಟೇ ಅಲ್ಲ, ನಿತ್ಯಾನಂದಾವಸ್ಥೆಯಲ್ಲೂ ಇದಾರೆ. ಜಗನ್ಮಾತೆಯ ಪ್ರೇಮಾನಂದದಿಂದ ಯಾವಾಗ ನೋಡಿದರೂ ತುಂಬಿ ತುಳುಕಾಡುತ್ತಿದಾರೆ—ಪ್ರೇಮೋನ್ಮತ್ತರಾಗಿದಾರೆ.''

ಹಾಜರಾ ಪರಮಹಂಸರ ಈ ಅವಸ್ಥೆಯನ್ನು ನೋಡಿ ಕೈ ಮುಗಿದು ಆಗಾಗ ಹೇಳುತ್ತಲೇ ಇದಾನೆ: ''ಧನ್ಯ! ಧನ್ಯ!''

ಶ್ರೀರಾಮಕೃಷ್ಣರು ಹಾಜರಾನಿಗೆ: ''ನಿನ್ನಲ್ಲಿ ಶ್ರದ್ಧೆಯೆಂಬುದೇ ಇಲ್ಲ. ಆದರೆ ನೀನು ಇಲ್ಲಿ ಇದೀಯೆ ಜಟಿಲೆಕುಟಿಲೆಯರ ಹಾಗೆ—ಲೀಲೆಯನ್ನು ಪುಷ್ಟಿಗೊಳಿಸಲೋಸುಗ.''

ಅಪರಾಹ್ನದಲ್ಲಿ ಮಾಸ್ಟರ್ ಏಕಾಕಿಯಾಗಿ ಉದ್ಯಾನವನದಲ್ಲಿ ತಿರುಗಾಡುತ್ತಿದಾನೆ. ಪರಮಹಂಸರ ಈ ಅದ್ಭುತ ಅವಸ್ಥೆಯ ಸಂಬಂಧವಾಗಿ ಭಾವಿಸುತ್ತಿದಾನೆ. ತನಗೆ ತಾನೇ ಹೇಳಿಕೊಳ್ಳುತ್ತಿದಾನೆ: '''ಕ್ಷೋಭೆ, ಕಾಮನೆ ಹೋದರೇ ಈ ಅವಸ್ಥೆ' ಎಂದು ಪರಮಹಂಸರು ಏಕೆ ಹೇಳಿದರು? ಈ ಗುರುರೂಪದ ಶ್ರೀರಾಮಕೃಷ್ಣರು ಯಾರು? ಸಾಕ್ಷಾತ್ ಭಗವಂತನೇ ನಮಗಾಗಿ ಇವರ ರೂಪಿನಲ್ಲಿ ದೇಹಧಾರಣೆ ಮಾಡಿಕೊಂಡು ಬಂದಿದಾನೇನು? ಪರಮಹಂಸರೇ ಹೇಳುತ್ತಾರೆ, ಈಶ್ವರ ಕೋಟಿ—ಅವತಾರಾದಿ—ಆಗದೆ ಇತ್ತು ಎಂದರೆ ಜಡಸಮಾಧಿ (ನಿರ್ವಿಕಲ್ಪ ಸಮಾಧಿ) ಯಿಂದ ಹಿಂದಿರುಗಿಬರಲಾಗುವುದಿಲ್ಲವೆಂದು.''

೨೪ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಪಂಚಮಿ. ಸೋಮವಾರ.

ಘಂಟೆ ಬೆಳಗಿನ ಎಂಟು. ಪರಮಹಂಸರು ಮಾಸ್ಟರೊಡನೆ ಸರ್ವೆ ಗಿಡಗಳ ತೋಪಿನಲ್ಲಿ ಮಾತಾಡುತ್ತಿದಾರೆ. ಈ ದಿನ ಮಾಸ್ಟರ ಗುರು-ಗೃಹವಾಸದ ಹನ್ನೊಂದನೆ ದಿನ.

ಚಳಿಗಾಲ. ಸೂರ್ಯೋದಯ ಈಗತಾನೆ ಆಗುತ್ತಿದೆ.

ಗಂಗೆಯಲ್ಲಿ ಉಬ್ಬರ ಬಂದು ಆಕೆ ಉತ್ತರವಾಹಿನಿಯಾಗಿ ಹರಿಯುತ್ತಿದಾಳೆ. ಪರಮಹಂಸರ ಸಾಧನೆಯ ಸ್ಥಾನವಾದ ಆ ಬಿಲ್ವ ಮರ ಅನತಿದೂರದಲ್ಲಿ ಕಾಣಿಸಿಕೊಳ್ಳುತ್ತಿದೆ. ಪರಮಹಂಸರು ಪೂರ್ವಾಭಿಮುಖರಾಗಿ ಕುಳಿತು ಮಾಸ್ಟರಿಗೆ ಬ್ರಹ್ಮಜ್ಞಾನದ ಸಂಬಂಧವಾಗಿ ತಿಳಿಸುತ್ತಿದಾರೆ.

ಶ್ರೀರಾಮಕೃಷ್ಣರು: ''ನಿರಾಕಾರವೂ ಸತ್ಯ, ಸಾಕಾರವೂ ಸತ್ಯ. ತೋತಾಪುರಿ ನನಗೆ ಸಚ್ಚಿದಾನಂದ ಬ್ರಹ್ಮನ ಸಂಬಂಧವಾಗಿ ಉಪದೇಶ ಕೊಡುತ್ತಿದ್ದ. ಆತ ಹೇಳುತ್ತಿದ್ದ, ಅದು ಒಂದು ಅನಂತ ಸಾಗರವಿದ್ದ ಹಾಗೆ — ಮೇಲೆ, ಕೆಳಗೆ, ಬಲಕ್ಕೆ, ಎಡಕ್ಕೆ ಎಲ್ಲೆಲ್ಲೂ ನೀರೇ ನೀರು. ಅದನ್ನು ಚಲನೆಯೇ ಇಲ್ಲದ ಮಹಾಕಾರಣದ ನೀರು ಅಂತ ಹೇಳಬಹುದು. ಅದು ಚಲಿಸಲು ಆರಂಭಿಸಿದಾಗ ಅಲೆ. ಅದರ ಕಾರ್ಯ—ಸೃಷ್ಟಿಸ್ಥಿತಿ ಪ್ರಳಯ.

''ಮತ್ತೆ ಹೇಳುತ್ತಿದ್ದ, ವಿಚಾರ ಎಲ್ಲಿಗೆ ಹೋಗಿ ನಿಂತುಹೋಗುತ್ತದೊ ಅದೇ ಬ್ರಹ್ಮ. ಉದಾಹರಣೆಗೆ ಕರ್ಪೂರ. ಅದನ್ನು ಉರಿಸಿದನಂತರ ಏನೂ ಉಳಿದಿರದು—ಬೂದಿಯ ಚಿಹ್ನೆ ಕೂಡ.

''ಬ್ರಹ್ಮ ವಾಙ್ಮನಾತೀತ. ಉಪ್ಪಿನ ಗೊಂಬೆ ಸಮುದ್ರದ ಆಳ ಕಂಡುಹಿಡಿಯಲು ಹೋಗಿತ್ತು. ಅದು ಹಿಂದಿರುಗಿಬಂದು ಯಾವ ಸಮಾಚಾರವನ್ನೂ ಕೊಡಲಿಲ್ಲ. ಸಮುದ್ರದಲ್ಲೇ ಕರಗಿಹೋಯಿತು.

''ಋಷಿಗಳು ಒಮ್ಮೆ ರಾಮನಿಗೆ ಹೇಳಿದರು: 'ಓ ರಾಮ, ಭರದ್ವಾಜಾದಿ ಋಷಿಗಳು ನಿನ್ನನ್ನು ಅವತಾರಪುರುಷ ಅಂತ ಬೇಕಾದರೆ ಹೇಳಬಹುದು; ಆದರೆ ನಾವು ಹಾಗೆ ಹೇಳುವುದಿಲ್ಲ. ನಾವು ಶಬ್ದಬ್ರಹ್ಮನ ಉಪಾಸನೆ ಮಾಡುತ್ತಿದೇವೆ. ನಮಗೆ ಭಗವಂತನ ಮನುಷ್ಯರೂಪ ಬೇಕಾಗಿಲ್ಲ.' ರಾಮ ಪ್ರಸನ್ನನಾಗಿ ಸ್ವಲ್ಪ ನಕ್ಕು ಅವರು ಇತ್ತ ಪೂಜೆಯನ್ನು ಸ್ವೀಕರಿಸಿ ಹೊರಟುಹೋದ.

''ಆದರೆ ನಿತ್ಯ ಯಾರದೊ ಆತನದೇ ಲೀಲೆ. ನಾನು ಹಿಂದೆ ತಿಳಿಸಿರುವ ಹಾಗೆ ಇದು ಚಾವಣಿ ಮತ್ತು ಮೆಟ್ಟಲಸಾಲ ಹಾಗೆ. ಸಚ್ಚಿದಾನಂದ ಅನೇಕ ವಿಧದಲ್ಲಿ ಕ್ರೀಡಿಸುತ್ತಾನೆ. ಉದಾಹರಣೆಗೆ ಭಗವಲ್ಲೀಲೆ, ದೇವಲ್ಲೀಲೆ, ನರಲೀಲೆ, ಜಗಲ್ಲೀಲೆ. ನರಲೀಲೆಯಲ್ಲಿ ಅವತಾರಪುರುಷನಾಗುತ್ತಾನೆ. ನರಲೀಲೆ ಎಂಬುದು ಏನು ಗೊತ್ತೆ? ಇದು ವಿಶಾಲವಾದ ಚಾವಣಿಯ ಮೇಲೆ ಬಿದ್ದ ಮಳೆನೀರು ಒಂದು ಕೊಳವೆಯ ಮೂಲಕ

'ಜರ್' ಅಂತ ಹೊರಕ್ಕೆ ಬರುವ ಹಾಗೆ; ಕೊಳವೆಯ ಮೂಲಕ ನೀರು ಬರುವ ಹಾಗೆ ಸಚ್ಚಿದಾನಂದ ಶಕ್ತಿ—ಅಷ್ಟೇ ಅಲ್ಲ, ಸಚ್ಚಿದಾನಂದವೇ—ಮಾನವನೆಂಬ ಕೊಳವೆಯ ಮೂಲಕ ಹೊರಕ್ಕೆ ಬರುತ್ತದೆ. ಕೇವಲ ಭರದ್ವಾಜನೇ ಮೊದಲಾದ ಹನ್ನೆರಡು ಮಂದಿ ಋಷಿಗಳು ರಾಮನನ್ನು ಅವತಾರಪುರುಷನೆಂದು ಗುರುತಿಸಿದರು. ಅವತಾರಪುರುಷನನ್ನು ಎಲ್ಲರೂ ಗುರುತಿಸಲಾರರು.

"ಸಚ್ಚಿದಾನಂದನೇ ಅವತಾರವೆತ್ತಿ ಜ್ಞಾನ, ಭಕ್ತಿಗಳ ಉಪದೇಶ ನೀಯುತ್ತಾನೆ. ಒಳ್ಳೇದು, ನನ್ನ ಸಂಬಂಧವಾಗಿ ನಿನ್ನ ಅಭಿಪ್ರಾಯ ವೇನು?

"ಒಮ್ಮೆ ನಮ್ಮ ತಂದೆ ಗಯೆಗೆ ಹೋಗಿದ್ದರು. ಅಲ್ಲಿ ರಘುವೀರ ಅವರ ಸ್ವಪ್ನದಲ್ಲಿ ಬಂದು ಹೇಳಿದನಂತೆ: 'ನಾನು ನಿನ್ನ ಮಗನಾಗಿ ಹುಟ್ಟು ತ್ತೇನೆ.' ಅದಕ್ಕೆ ನಮ್ಮ ತಂದೆ ಹೇಳಿದರಂತೆ: 'ಹೇ ಭಗವಂತ, ನಾನೊಬ್ಬ ದರಿದ್ರ ಬ್ರಾಹ್ಮಣ. ನಿನ್ನ ಸೇವೆ ಮಾಡಲು ನನ್ನ ಕೈಯಲ್ಲಿ ಎಲ್ಲಿ ಸಾಧ್ಯ ವಾದೀತು?' ರಘುವೀರ ಉತ್ತರವಿತ್ತನಂತೆ: 'ಅದರ ವಿಷಯವಾಗಿ ನೀನು ಸ್ವಲ್ಪವೂ ಚಿಂತಿಸಬೇಡ. ಇವೆಲ್ಲಾ ಯಾವ ತೊಂದರೆಯೂ ಇಲ್ಲದೆ ನಡೆದು ಹೋಗಿಬಿಡುತ್ತವೆ.'

"ನನ್ನ ಸೋದರಿ—ಹೃದಯನ ತಾಯಿ—ನನ್ನ ಪಾದಗಳನ್ನು ಗಂಧಪುಷ್ಪಾದಿಗಳಿಂದ ಪೂಜಿಸುತ್ತಿದ್ದಳು. ಒಂದು ದಿನ ಆಕೆಯ ತಲೆಯ ಮೇಲೆ ನನ್ನ ಪಾದವನ್ನಿಡುವಂತೆ ಭಗವತಿ ನನ್ನನ್ನು ಪ್ರೇರೇಪಿಸಿ ನನ್ನ ಮೂಲಕ ಆಕೆಗೆ ತಿಳಿಸಿದಳು: 'ನಿನಗೆ ಕಾಶಿಯಲ್ಲಿ ಮೃತ್ಯುವುಂಟಾಗುತ್ತದೆ' ಎಂದು.

"ಒಮ್ಮೆ ಮಥುರಬಾಬು ನನಗೆ ಹೇಳಿದ: 'ನಿಮ್ಮ ಅಂತರ್ಯದಲ್ಲಿ ಭಗವಂತನಲ್ಲದೆ ಇನ್ನು ಬೇರೆ ಏನೂ ಇಲ್ಲ. ನಿಮ್ಮ ಶರೀರ ಕೇವಲ ಒಂದು ಖಾಲಿ ಬುರುಡೆ ಇದ್ದ ಹಾಗೆ. ಹೊರಗಿನಿಂದ ನೋಡುವುದಕ್ಕೇನೊ ಕುಂಬಳ ಕಾಯಿಯ ಆಕಾರವೇ, ಆದರೆ ಒಳಗೆ ಮಾತ್ರ ತಿರುಳು ಬೀಜ ಏನೂ ಇಲ್ಲ. ಯಾರೊ ಮುಸುಕು ಹಾಕಿಕೊಂಡು ತಿರುಗಾಡುತ್ತಿರುವ ಹಾಗೆ ಒಮ್ಮೆ ನೀವು ನನ್ನ ಕಣ್ಣಿಗೆ ಬಿದ್ದಿರಿ.'

(ಮಾಸ್ಟರಿಗೆ) "ಭಗವತಿ ಮೊದಲೆ ನನಗೆ ಎಲ್ಲವನ್ನು ತೋರಿಸಿ ಕೊಟ್ಟುಬಿಡುತ್ತಾಳೆ. ಒಮ್ಮೆ ನಾನು ಗೌರಾಂಗನ ಸಂಕೀರ್ತನ ಪಾರ್ಟಿ

ಯನ್ನು ಪಂಚವಟಿಯಲ್ಲಿ ನೋಡಿದೆ. ಅದರಲ್ಲಿ ಬಲರಾಮ ಇದ್ದ ಹಾಗೆ ಇತ್ತು, ನೀನೂ ಇದ್ದ ಹಾಗೆ ಇತ್ತು.

"ಗೌರಾಂಗನ ಭಾವವನ್ನು ಅರಿಯಲು ಒಮ್ಮೆ ಇಚ್ಛೆಯಾಯಿತು. ಭಗವತಿ ಅದನ್ನು ನಮ್ಮ ಊರಿನ ಹತ್ತಿರವಿರುವ ಶ್ಯಾಮಬಜಾರಿನಲ್ಲಿ ನನಗೆ ತೋರಿಸಿದಳು. ನನ್ನ ಸುತ್ತಲೂ ಒಂದು ದೊಡ್ಡ ಗುಂಪು ನೆರೆಯಿತು; ಮರಗಳ ಮೇಲೆಲ್ಲಾ, ಗೋಡೆಗಳ ಮೇಲೆಲ್ಲಾ, ಜನ ಕಿಕ್ಕಿರಿದು ನಿಲ್ಲಲಾರಂಭಿಸಿದರು; ಹಗಲೂ ಇರುಳೂ ನನ್ನೊಡನೆಯೇ ಇರಲಾರಂಭಿಸಿದರು. ಏಳು ದಿನಗಳವರೆಗೆ ದೇಹಬಾಧೆ ತೀರಿಸಿಕೊಳ್ಳಲೂ ನನಗೆ ಸಮಯ ದೊರಕಲಿಲ್ಲ. ಆಗ ಭಗವತಿಗೆ ಹೇಳಿದೆ: 'ತಾಯಿ, ಸಾಕು ಇನ್ನು.'

"ಅದಕ್ಕಾಗೇ ಈಗ ನಾನು ಶಾಂತನಾಗಿರುವುದು. ನಾನು ಇನ್ನೊಮ್ಮೆ ಈ ಧರೆಗೆ ಬರಬೇಕಾಗಿದೆ. ಅದಕ್ಕಾಗೇ ನಾನು ನನ್ನ ಜೊತೆಯಲ್ಲಿರುವವರಿಗೆ ಎಲ್ಲಾ ಜ್ಞಾನವನ್ನು ತಿಳಿಸಿಕೊಟ್ಟುಬಿಡುತ್ತಿಲ್ಲ. (ನಗುತ್ತ) ಒಂದು ಪಕ್ಷ ನಾನು ಎಲ್ಲಾ ಜ್ಞಾನವನ್ನೂ ತಿಳಿಸಿಕೊಟ್ಟುಬಿಟ್ಟೆ ಅಂತ ಇಟ್ಟುಕೊ; ಬಳಿಕ ನೀವಾಗೇ ನೀವು ನನ್ನ ಹತ್ತಿರ ಬರುವಿರೇನು?

"ನೀನು ಚೈತನ್ಯಭಾಗವತವನ್ನು ಓದಿ ಹೇಳಿದ ರೀತಿಯನ್ನು ನೋಡಿ, ನೀನು ಯಾರು ಎಂಬುದನ್ನು ಅರಿತಿದೇನೆ. ನೀನು ನನಗೆ ಸೇರಿದವ. ಒಂದೇ ಸತ್ತ್ವ ತಂದೆ, ಮಗು ಆಗಿರುವ ಹಾಗೆ. ಇಲ್ಲಿಗೆ ಎಲ್ಲರೂ ಬರುತ್ತಿದಾರೆ. ನೀರುಹಂಬಿನ ಒಂದು ಭಾಗ ಹಿಡಿದು ಎಳೆದರೆ ಅದರ ಕವಲು-ಗಿವಲು ಎಲ್ಲಾ ಜೊತೆಯಲ್ಲಿ ಬಂದುಬಿಡುತ್ತವೆ. ನೀವೆಲ್ಲರೂ ಬಂಧುಬಾಂಧವರಿದ್ದ ಹಾಗೆ—ಅಷ್ಟೇಕೆ ಸೋದರರಿದ್ದ ಹಾಗೆ. ಪೂರಿಗೆ ರಾಖಾಲ, ಹರೀಶ ಮೊದಲಾದವರು ಹೋಗಿದಾರೆ, ನೀನೂ ಅಲ್ಲಿಗೆ ಹೋಗಿದೀಯೆ ಅಂತ ಇಟ್ಟುಕೊ. ನೀನು ಏನು ಅಲ್ಲಿ ಪ್ರತ್ಯೇಕವಾಗಿ ಇರಲು ಹೋಗುವೆಯಾ?

"ಇಲ್ಲಿಗೆ ಬರುವ ಮುಂಚೆ ನೀನು ಯಾರು ಎಂಬುದು ನಿನಗೆ ಗೊತ್ತಿರಲಿಲ್ಲ. ಇನ್ನು ನಿನಗೆ ಗೊತ್ತಾಗುತ್ತದೆ. ಭಗವಂತ ಗುರುವಿನ ರೂಪದಲ್ಲಿ ಬಂದು ನಿನಗೆ ತಿಳಿಸಿಕೊಟ್ಟುಬಿಡುತ್ತಾನೆ.

"ತೋತಾಪುರಿ ಒಂದು ಹುಲಿಯ ಮತ್ತು ಒಂದು ಆಡಿನ ಮಂದೆಯ ಕಥೆಯನ್ನು ಒಮ್ಮೆ ನನಗೆ ಹೇಳಿದ. ಒಂದು ಹೆಣ್ಣು ಹುಲಿ ಒಮ್ಮೆ ಒಂದು ಆಡಿನ ಮಂದೆಯ ಮೇಲೆ ಬಿತ್ತು. ಒಬ್ಬ ಬೇಡ ದೂರದಿಂದಲೇ ಅದನ್ನು

ಕಂಡು ಆ ಹೆಣ್ಣು ಹುಲಿಯನ್ನು ಕೊಂದುಹಾಕಿದ. ಅದರ ಹೊಟ್ಟೆಯಲ್ಲಿ ಮರಿ ಇತ್ತು. ಅದು ಸಾಯುವಾಗ ಮರಿ ಪ್ರಸವವಾಗಿಹೋಯಿತು. ಆ ಮರಿ ಆಡುಗಳೊಡನೆ ಬೆಳೆಯಲಾರಂಭಿಸಿತು. ಮೊದಲು ಆಡುಗಳು ಅದಕ್ಕೆ ತಮ್ಮ ಮೊಲೆಯನ್ನು ಕೊಟ್ಟುವು. ಸ್ವಲ್ಪ ಬೆಳೆದ ಮೇಲೆ ಅದೂ ಹುಲ್ಲು ತಿನ್ನಲಾರಂಭಿಸಿತು. ಇದೂ ಅಲ್ಲದೆ ಆಡುಗಳ ಹಾಗೆ 'ಬ್ಯಾ, ಬ್ಯಾ' ಅಂತ ಅರಚಲಾರಂಭಿಸಿತು. ಕ್ರಮೇಣ ಆ ಮರಿ ದೊಡ್ಡ ಹುಲಿಯಾಗಿ ಬೆಳೆಯಿತು; ಆದರೂ ಅದು ಇನ್ನೂ ಹುಲ್ಲು ತಿನ್ನುತ್ತ 'ಬ್ಯಾ, ಬ್ಯಾ' ಅಂತ ಅರಚುತ್ತಲೇ ಇತ್ತು. ಬೇರೆ ಯಾವುದಾದರೂ ಮೃಗ ಮಂದೆಯ ಮೇಲೆ ಬಿದ್ದರೆ ಅದೂ ಆಡುಗಳ ಹಾಗೆ ಓಡಿಹೋಗಿ ತಪ್ಪಿಸಿಕೊಳ್ಳುತ್ತಿತ್ತು. ಒಂದು ದಿನ ಒಂದು ಭಯಂಕರ ಹುಲಿ ಆ ಮಂದೆಯ ಮೇಲೆ ಬಿತ್ತು. ಅದಕ್ಕೆ ಅತ್ಯಾಶ್ಚರ್ಯವಾಯಿತು, ಆಡುಗಳ ಮಧ್ಯೆ ಒಂದು ಹುಲಿ ಹುಲ್ಲು ಮೇಯುತ್ತಿರುವುದನ್ನು ಮತ್ತು ಅವುಗಳ ಹಾಗೆ ಅದೂ ಓಡಿಹೋಗಿ ತಪ್ಪಿಸಿಕೊಳ್ಳಲು ಪ್ರಯತ್ನಮಾಡುತ್ತಿರುವುದನ್ನು ನೋಡಿ. ಆಗ ಅದು ಆಡುಗಳ ಗೋಜಿಗೆ ಹೋಗದೆ ಆ ಹುಲ್ಲು ತಿನ್ನುತ್ತಿದ್ದ ಹುಲಿಯನ್ನು ಹಿಡಿಯಿತು. ಅದು 'ಬ್ಯಾ, ಬ್ಯಾ' ಅಂತ ಅರಚುತ್ತ ತಪ್ಪಿಸಿಕೊಳ್ಳಲು ಪ್ರಯತ್ನಮಾಡಲಾರಂಭಿಸಿತು. ಆಗ ಆ ಕಾಡಿನ ಹುಲಿ ಆ ಹುಲ್ಲು ತಿನ್ನುತ್ತಿದ್ದ ಹುಲಿಯನ್ನು ನೀರಿನ ಹತ್ತಿರಕ್ಕೆ ಎಳೆದುಕೊಂಡುಹೋಗಿ ಹೇಳಿತು: 'ಈಗ ನೋಡು ನೀರಿನಲ್ಲಿ ನಿನ್ನ ಮುಖವನ್ನ. ದಿಟ್ಟಿಸಿ ನೋಡು ನಿನಗೆ ಹುಲಿಯ ಗಡಿಗೆಮುಖದಂಥ ಮುಖ ಇರುವುದನ್ನ; ಅದು ತೇಟ್ ನನ್ನದರ ಹಾಗೇ ಇದೆ.' ಅನಂತರ ಅದು ಅದರ ಬಾಯಿಗೆ ಒಂದು ಮಾಂಸದ ತುಂಡನ್ನು ತುರುಕಿತು. ಮೊದಲು ಆ ಹುಲ್ಲು ತಿನ್ನುವ ಹುಲಿ ಮಾಂಸವನ್ನು ತಿನ್ನದೆ ಉಗುಳಲಾರಂಭಿಸಿತು. ಆದರೆ ಆ ಪ್ರಯತ್ನದಲ್ಲಿ ಅದಕ್ಕೆ ಮಾಂಸದ ರುಚಿ ದೊರೆತು ಅದು ಅದನ್ನು ತಿನ್ನತೊಡಗಿತು. ಕೊನೆಯಲ್ಲಿ ಆ ಕಾಡಿನ ಹುಲಿ ಆ ಹುಲ್ಲು ತಿನ್ನುತ್ತಿದ್ದ ಹುಲಿಗೆ ಹೇಳಿತು: 'ಇದು ಹುಲಿಯ ಜಾತಿಗೆ ಎಷ್ಟು ಅಪಮಾನಕರ! ನೀನು ಆಡುಗಳೊಡನೆ ಇದ್ದುಕೊಂಡು ಅವುಗಳ ಹಾಗೆ ಹುಲ್ಲು ಮೇಯುತ್ತಿದ್ದೆಯಲ್ಲ!' ಆಗ ಆ ಹುಲ್ಲು ತಿನ್ನುತ್ತಿದ್ದ ಹುಲಿಗೆ ಬಹಳ ನಾಚಿಕೆಯಾಗಿಬಿಟ್ಟಿತು.

"ಕಾಮಕಾಂಚನಗಳನ್ನು ಅನುಭವಿಸುವುದೇ ಹುಲ್ಲು ತಿಂದ ಹಾಗೆ. ಆಡುಗಳ ಹಾಗೆ 'ಬ್ಯಾ, ಬ್ಯಾ' ಅನ್ನುವುದೇ ಮತ್ತು ಅವುಗಳ ಹಾಗೆ ಓಡಿ

ತಪ್ಪಿಸಿಕೊಳ್ಳುವುದೇ ಸಾಮಾನ್ಯ ಜೀವರ ಹಾಗೆ ವರ್ತಿಸುವಿಕೆ. ಕಾಡಿನ ಹುಲಿಯೊಡನೆ ಹೋಗುವುದೇ ಆತ್ಮಜಾಗೃತಿಯನ್ನುಂಟುಮಾಡುವ ಗುರುವಿಗೆ ಶರಣಾಗತನಾಗುವಿಕೆ ಮತ್ತು ಆತನೇ ಪರಮಬಂಧು ಎಂದು ಅರಿಯುವಿಕೆ. ಸ್ಪಷ್ಟವಾಗಿ ತನ್ನ ಮುಖವನ್ನು ನೋಡುವುದೇ ಸ್ವಸ್ವರೂಪವನ್ನು ಅರಿಯುವಿಕೆ.''

ಪರಮಹಂಸರು ಈಗ ಎದ್ದು ನಿಂತುಕೊಂಡರು. ಸುತ್ತಲೂ ನಿಶ್ಶಬ್ದ, ಕೇವಲ ಸರ್ವೆ ಮರಗಳ 'ಸೊಯ್ಞ್, ಸೊಯ್ಞ್' ಎಂಬ ಶಬ್ದ ಮತ್ತು ಗಂಗಾ ನದಿಯ ಮರ್ಮರ ಶಬ್ದ ಬಿಟ್ಟರೆ. ಈಗ ಪರಮಹಂಸರು ಮಾಸ್ಟರೊಡನೆ ಮಾತನಾಡುತ್ತಲೆ ಪಂಚವಟಿಯನ್ನು ದಾಟಿ ತಮ್ಮ ಕೊಠಡಿಯ ಕಡೆಗೆ ಬರುತ್ತಿದಾರೆ. ಮಾಸ್ಟರ್ ಅವರನ್ನು ಮಂತ್ರಮುಗ್ಧನ ಹಾಗೆ ಹಿಂಬಾಲಿಸುತ್ತಿದಾನೆ. ಅವರು ಪಂಚವಟಿಗೆ ಬಂದಾಗ ಆಲದ ಮರದ ಕೊಂಬೆ ಮುರಿದುಬಿದ್ದಿರುವ ಜಾಗದಲ್ಲಿ ಪೂರ್ವಾಭಿಮುಖವಾಗಿ ನಿಂತು ಆ ಕಟ್ಟೆಯನ್ನು ತಮ್ಮ ಹಣೆಯಿಂದ ಮುಟ್ಟಿ ಪ್ರಣಾಮಮಾಡಿದರು. ಆ ಜಾಗವೇ ಅವರು ಸಾಧನೆ ಮಾಡಿದ ಸ್ಥಳ. ಆ ಸ್ಥಳದಲ್ಲಿ ಅವರು ಎಷ್ಟೊಂದು ವ್ಯಾಕುಲತೆಯಿಂದ ಅತ್ತಿದಾರೆ; ಎಷ್ಟೊಂದು ಭಗವದ್ದರ್ಶನಗಳಾಗಿವೆ ಅವರಿಗೆ; ಭಗವತಿಯೊಡನೆ ಎಷ್ಟೊಂದು ಮಾತುಗಳನ್ನು ಆಡಿದಾರೆ! ಬಹುಶಃ ಇದಕ್ಕಾಗೇ ಇರಬೇಕು ಅವರು ಅಲ್ಲಿಗೆ ಬಂದಾಗಲೆಲ್ಲಾ ಆ ಸ್ಥಳಕ್ಕೆ ಪ್ರಣಾಮಮಾಡುತ್ತಾರೆ.

ಈಗ ಪರಮಹಂಸರು ಮತ್ತು ಮಾಸ್ಟರ್ ಬಕುಳ ಮರಗಳನ್ನು ದಾಟಿ ನಹಬತ್‌ಖಾನೆಯ ಹತ್ತಿರಕ್ಕೆ ಬಂದಿದಾರೆ. ಹಾಜರಾ ಅಲ್ಲಿ ಅವರ ಕಣ್ಣಿಗೆ ಬಿದ್ದ. ಅವರು ಆತನಿಗೆ ಹೇಳುತ್ತಿದಾರೆ: "ಹೆಚ್ಚಾಗಿ ತಿನ್ನಬೇಡ. ಬಾಹ್ಯ ಶುಚಿಯ ಹುಚ್ಚನ್ನು ಬಿಟ್ಟುಬಿಡು. ಯಾರು ಬಾಹ್ಯ ಶುಚಿಗೆ ಅಷ್ಟಾಗಿ ಮನಸ್ಸು ಕೊಡುವರೊ ಅವರಿಗೆ ಬ್ರಹ್ಮಜ್ಞಾನ ದೊರೆಯೋದಿಲ್ಲ. ಆಚಾರ ಎಷ್ಟು ಅತ್ಯಾವಶ್ಯಕವೊ ಅಷ್ಟನ್ನು ಮಾತ್ರ ಮಾಡು. ಮಿತಿಮೀರಿ ಹೋಗಬೇಡ.'' ಪರಮಹಂಸರು ಈಗ ತಮ್ಮ ಕೊಠಡಿಯನ್ನು ಪ್ರವೇಶಿಸಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡರು.

ಮಧ್ಯಾಹ್ನದ ಊಟವಾದನಂತರ ಪರಮಹಂಸರು ವಿಶ್ರಮಿಸಿಕೊಳ್ಳುತ್ತಿದ್ದ ಹಾಗೇ ಕಲ್ಕತ್ತದಿಂದ ಸುರೇಂದ್ರ, ರಾಮ ಮೊದಲಾದ ಭಕ್ತರು ಕ್ರಮೇಣ ಬಂದು ಸೇರಲಾರಂಭಿಸಿದರು. ಈಗ ಘಂಟೆ ಅಪರಾಹ್ನ ಒಂದು.

ಮಾಸ್ಟರ್ ಒಬ್ಬನೇ ಸರ್ವೆಮರಗಳ ತೋಪಿನಲ್ಲಿ ಸುತ್ತಾಡುತ್ತಿದಾನೆ. ಹರೀಶ ಅಲ್ಲಿಗೆ ಬಂದು ಆತನಿಗೆ ತಿಳಿಸಿದ, ಯಾರೊ ಒಬ್ಬರು ಶಿವಸಂಹಿತೆ ಯನ್ನು ಓದುತ್ತಾರೆ. ಪರಮಹಂಸರು ನಿನ್ನನ್ನು ಕರೆಯುವಂತೆ ಹೇಳಿದಾರೆ. ಅದು ಯೋಗದ ವಿಷಯವಾಗಿ— ಷಟ್ಚಕ್ರದ ವಿಷಯವಾಗಿ ತಿಳಿಸುತ್ತದೆ.

ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದು ಅವರಿಗೆ ಪ್ರಣಾಮ ಮಾಡಿ ಒಂದು ಕಡೆ ಕುಳಿತುಕೊಂಡ. ಭಕ್ತರು ನೆಲದ ಮೇಲೆ ಕುಳಿತಿದಾರೆ. ಕಾರಣಾಂತರದಿಂದ ಶಿವಸಂಹಿತೆಯ ಪ್ರವಚನ ನಡೆಯಲಿಲ್ಲ. ಪರಮ ಹಂಸರೇ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಗೋಪಿಯರದು ಪ್ರೇಮಭಕ್ತಿ. ಇದರಲ್ಲಿ ಎರಡು ಅಂಗಭಾಗಗಳಾಗಿವೆ—ಅಹಂಕಾರ, ಮಮಕಾರ. ನಾನು ಕೃಷ್ಣನ ಸೇವೆ ಮಾಡದಿದ್ದರೆ ಆತನಿಗೆ ಅಸೌಖ್ಯವುಂಟಾಗುತ್ತೆ ಎಂಬ ಭಾವನೆಗೆ ಅಹಂಕಾರ ಎಂದು ಹೆಸರು. ಈ ಭಾವದಲ್ಲಿ ಭಕ್ತ ಭಗವಂತನನ್ನು ಭಗವಂತನೆಂದು ಭಾವಿಸುವುದಿಲ್ಲ, ಎಂದರೆ ಆತನಿಗೆ ಭಗವದ್ಬೋಧೆ ಇರದು.

"ಮಮತೆ—'ನನ್ನದು, ನನ್ನದು' ಎನ್ನುವುದು. ಗೋಪಿಯರಿಗೆ ಶ್ರೀಕೃಷ್ಣನಲ್ಲಿ ಅಂಥಾ ಮಮತೆ, ಆತನ ಪಾದಗಳು ನೋಯಬಹುದೆಂದು ಅವರು ತಮ್ಮ ಸೂಕ್ಷ್ಮಶರೀರಗಳನ್ನು ಆತನ ಪಾದದಡಿಯಲ್ಲಿ ಇಡುತ್ತಿದ್ದರು.

"ಯಶೋದೆ ಹೇಳಿದಳು: 'ನನಗೆ ನಿಮ್ಮ ಚಿಂತಾಮಣಿ ಕೃಷ್ಣ ಗೊತ್ತಿಲ್ಲ— ಆತ ನನ್ನ ಗೋಪಾಲ.' ಗೋಪಿಯರೂ ಹೇಳಿದರು: 'ನಮ್ಮ ಪ್ರಾಣವಲ್ಲಭನೆಲ್ಲಿ? ಎಲ್ಲಿ ನಮ್ಮ ಹೃದಯವಲ್ಲಭ ಕೃಷ್ಣ?' ಅವರಿಗೆ ಆತ ಭಗವಂತ ಎಂಬ ಬೋಧೆ ಇರಲಿಲ್ಲ.

"ಇದು ಚಿಕ್ಕ ಮಗು, ಆತ 'ನಮ್ಮ ತಂದೆ' ಎಂದು ಹೇಳುವ ಹಾಗೆ. ಯಾರಾದರೂ ಅದಕ್ಕೆ ಹೇಳಿದರೆ: 'ಅಲ್ಲ ಕಣೊ, ಆತ ನಿಮ್ಮ ತಂದೆಯಲ್ಲ', ಅದು ಹೇಳುತ್ತದೆ: 'ಇಲ್ಲ ಇಲ್ಲ. ಆತ ನಮ್ಮ ತಂದೆಯೇ.'

"ನರಲೀಲೆಯಲ್ಲಿ ಭಗವಂತ ಮನುಷ್ಯನ ಹಾಗೇ ವರ್ತಿಸಬೇಕಾಗು ತ್ತದೆ. ಆದ್ದರಿಂದ ಅವತಾರಪುರುಷನನ್ನು ಗುರುತಿಸುವುದು ಬಹಳ ಕಷ್ಟ. ಭಗವಂತ ಮನುಷ್ಯನಾದಾಗ ತದ್ವತ್ ಮನುಷ್ಯನೇ. ಅದೇ ಹಸಿವು, ಬಾಯಾರಿಕೆ, ರೋಗ, ಶೋಕ, ಕೆಲವು ವೇಳೆ ಭಯ ಕೂಡ—ಮನುಷ್ಯನ ಹಾಗೇ. ರಾಮಚಂದ್ರ ಸೀತೆಗಾಗಿ ಬಹಳವಾಗಿ ದುಃಖಾನ್ವಿತನಾಗಿ

ಹೋಗಿದ್ದ. ಶ್ರೀಕೃಷ್ಣ ತನ್ನ ತಂದೆ ನಂದನ ಮೆಟ್ಟು ಮತ್ತು ಮರದ ಪೀಠವನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ಹೋದ.

"ನಾಟಕಶಾಲೆಯಲ್ಲಿ ಯಾರು ಸಾಧುವಿನ ವೇಷ ಧರಿಸಿದಾನೊ ಆತ ಸಾಧುವಿನ ಹಾಗೆ ವ್ಯವಹರಿಸುವನೇ ವಿನಾ ರಾಜನ ವೇಷ ಧರಿಸಿದವನ ಹಾಗೆ ವ್ಯವಹರಿಸುವುದಿಲ್ಲ. ವೇಷದಂತೆ ಅಭಿನಯ.

"ಒಮ್ಮೆ ಒಬ್ಬ ಬಹುರೂಪಿ ಸರ್ವಸಂಗ ಪರಿತ್ಯಾಗಿ ಸಾಧುವಿನ ವೇಷ ಧರಿಸಿದ್ದ. ಆತನ ವೇಷ ತದ್ವತ್ತಾಗೇ ಇದ್ದುದನ್ನು ನೋಡಿ ಕೆಲವು ಮಂದಿ ಧನಿಕರು ಆತನಿಗೆ ಒಂದು ರೂಪಾಯಿ ಕೊಡುವುದಕ್ಕೆ ಹೋದರು. ಆತ ಅದನ್ನು ಸ್ವೀಕರಿಸಲಿಲ್ಲ. 'ಉಹ್ಲೂ' ಎಂದು ಹೇಳಿ ಹೊರಟುಹೋದ. ಬಳಿಕ ತನ್ನ ವೇಷವನ್ನು ತೆಗೆದುಹಾಕಿ ತನ್ನ ನಿಜ ರೂಪದಲ್ಲಿ ಬಂದು ಆ ಧನಿಕರನ್ನು ಕೇಳಿದ: 'ಕೊಡಿ ಆ ರೂಪಾಯನ್ನ.' ಅವರು ಹೇಳಿದರು: 'ಈಗತಾನೆ ತೆಗೆದುಕೊಳ್ಳುವುದಿಲ್ಲ ಅಂತ ಹೊರಟುಹೋದೆ, ಮತ್ತೆ ಈಗ ಬಂದು ಕೇಳುತ್ತಾ ಇದೀಯಲ್ಲೊ?' ಅದಕ್ಕೆ ಆತ ಉತ್ತರವಿತ್ತ: 'ಆಗ ನಾನು ಸಾಧುವಿನ ವೇಷ ಧರಿಸಿದ್ದೆ. ಆದ್ದರಿಂದ ಹಣ ಸ್ವೀಕರಿಸಲಿಲ್ಲ.' ಅದೇ ರೀತಿಯಾಗಿ ಭಗವಂತ ಮನುಷ್ಯನಾದಾಗ ಮನುಷ್ಯನಂತೇ ವ್ಯವಹರಿಸುತ್ತಾನೆ.

"ಬೃಂದಾವನಕ್ಕೆ ಹೋದರೆ ಕೃಷ್ಣಲೀಲೆಯ ಅನೇಕ ಸ್ಥಳಗಳನ್ನು ನೋಡಬಹುದು."

ಸುರೇಂದ್ರ: "ನಾವು ನಮ್ಮ ರಜಾ ದಿನಗಳಲ್ಲಿ ಅಲ್ಲಿಗೆ ಹೋಗಿದ್ದವು. 'ಪೈಸೆ ಕೊಡು, ಪೈಸೆ ಕೊಡು' ಅಂತ ಜನ ಅಲ್ಲಿ ಚಿತ್ರಹಿಂಸೆಮಾಡುತ್ತಾರೆ. ಅಲ್ಲಿನ ಪಂಡಾಗಳು ಮತ್ತು ಇತರರು 'ಕೊಡು, ಕೊಡು' ಅಂತ ಶುರು ಮಾಡಿದರು. ನಾವು ಅವರಿಗೆ ಮಾರನೆ ದಿನ ಕಲ್ಕತ್ತಕ್ಕೆ ಹೊರಡುತ್ತೇವೆ ಅಂತ ಹೇಳಿ ಅಂದೇ ಪಲಾಯನ ಮಾಡಿದೆವು."

ಶ್ರೀರಾಮಕೃಷ್ಣರು: "ಏನಿದು, ಛೆ! ಮಾರನೆ ದಿನ ಹೊರಡುತ್ತೇವೆ ಅಂತ ಹೇಳಿ ಅಂದೇ ಪಲಾಯನ ಮಾಡುವುದೆ? ಎಂಥ ನಾಚಿಕೆಗೇಡಿತನ!"

ಸುರೇಂದ್ರ ತಲೆ ತಗ್ಗಿಸಿ: "ಅಲ್ಲಿ ಇಲ್ಲಿ ತೋಟಗಳಲ್ಲಿ ಬಾಬಾಜಿಗಳು ನಿರ್ಜನಪ್ರದೇಶದಲ್ಲಿ ಕುಳಿತು ಸಾಧನೆ ಭಜನೆಯಲ್ಲಿ ತೊಡಗಿದ್ದುದನ್ನು ನೋಡಿದೆ."

ಶ್ರೀರಾಮಕೃಷ್ಣರು: "ಬಾಬಾಜಿಗಳಿಗೆ ಏನನ್ನಾದರೂ ಕೊಟ್ಟಿರಾ?"

ಸುರೇಂದ್ರ : "ಇಲ್ಲ."

ಶ್ರೀರಾಮಕೃಷ್ಣರು: "ಅದು ಸರಿಯಾದ ನಡತೆಯಲ್ಲ. ಸಾಧು ಭಕ್ತರಿಗೆ ಏನನ್ನಾದರೂ ಕೊಡಬೇಕು. ಯಾರಿಗೆ ಭಗವಂತ ಕೊಟ್ಟಿದಾನೊ ಅವರು ಅಂಥವರು ಕಣ್ಣಿಗೆ ಬಿದ್ದಾಗ ಏನನ್ನಾದರೂ ಕೊಡಬೇಕು.

"ನಾನು ಮಥುರಬಾಬುವಿನೊಡನೆ ಬೃಂದಾವನಕ್ಕೆ ಹೋಗಿದ್ದೆ. ಮಥುರೆಯಲ್ಲಿ ಧ್ರುವಘಟ್ಟದ ಹತ್ತಿರಕ್ಕೆ ಬಂದೊಡನೇ ಇದ್ದಕ್ಕಿದ್ದ ಹಾಗೆ ದರ್ಶನವಾಯಿತು, ವಸುದೇವ ಕೃಷ್ಣನನ್ನು ಎತ್ತಿಕೊಂಡು ಯಮುನೆಯನ್ನು ದಾಟುತ್ತಿರುವುದು.

"ಒಂದು ದಿನ ಸಾಯಂಕಾಲದ ವೇಳೆಯಲ್ಲಿ ನದಿ ದಡದಲ್ಲಿ ತಿರುಗಾಡುತ್ತಿದ್ದೆ. ದಡದ ಮೇಲೆ ಚಿಕ್ಕ ಚಿಕ್ಕ ಕುಟೀರಗಳಿದ್ದುವು. ಅಲ್ಲಲ್ಲಿ ದೊಡ್ಡ ಯಲಚಿ ಮರಗಳೂ ಇದ್ದುವು. ಗೋಧೂಳಿಯ ಸಮಯ. ಗೋವುಗಳು ಹುಲ್ಲುಗಾವಲಿನಿಂದ ಹಿಂದಿರುಗುತ್ತಿದ್ದುವು. ಅನಂತರ ಅವು ನದಿಯನ್ನು ದಾಟಲಾರಂಭಿಸಿದುವು. ಅವುಗಳ ಹಿಂದೆ ಗೋಪಾಲಕರೂ ನದಿಯನ್ನು ದಾಟಿ ಬರುತ್ತಿದ್ದರು. ಆ ದೃಶ್ಯ ನನ್ನ ಕಣ್ಣಿಗೆ ಬಿದ್ದೊಡನೆ ಕೂಗಿಕೊಂಡೆ: 'ಕೃಷ್ಣನೆಲ್ಲಿ?' ಒಡನೆಯೇ ಬಾಹ್ಯಜ್ಞಾನಶೂನ್ಯನಾಗಿಬಿಟ್ಟೆ.

"ಶ್ಯಾಮಕುಂಡ ರಾಧಾಕುಂಡಗಳ ದರ್ಶನ ಮಾಡಬೇಕು ಅಂತ ಇಚ್ಛೆಯಾಯಿತು. ಮಥುರಬಾಬು ಒಂದು ಪಲ್ಲಕ್ಕಿಯನ್ನು ಏರ್ಪಾಡು ಮಾಡಿ ಅಲ್ಲಿಗೆ ಕಳುಹಿಸಿಕೊಟ್ಟ. ಬೃಂದಾವನದಿಂದ ಅವು ಬಹಳ ದೂರವೇ. ಪೂರಿ ಜಿಲೇಬಿಗಳನ್ನು ಪಲ್ಲಕ್ಕಿಯಲ್ಲಿ ಇಡಿಸಿದ್ದ. ಅಲ್ಲಿನ ಹುಲ್ಲುಗಾವಲು ದಾಟಿ ಹೋಗುವಾಗ ಭಾವಾವಿಷ್ಟನಾಗಿ ಅಳಲಾರಂಭಿಸಿದೆ: 'ಓ ಕೃಷ್ಣ, ನೀನು ಸುತ್ತಿ ಬಳಸಾಡಿದ ಎಲ್ಲಾ ಸ್ಥಾನಗಳೂ ಇವೆ, ಆದರೆ ನೀನೊಬ್ಬ ಮಾತ್ರ ಇಲ್ಲ. ನೀನು ಈ ಹುಲ್ಲುಗಾವಲಿನಲ್ಲೇ ಗೋವುಗಳನ್ನು ಮೇಯಿಸುತ್ತಿದ್ದೆ.' ಹೃದೆ ನನ್ನ ಹಿಂದೆ ನಡೆದುಬರುತ್ತಿದ್ದ. ನಾನು ಕಣ್ಣೀರಿನಲ್ಲಿ ಸುಮ್ಮನೆ ಸ್ನಾನಮಾಡುತ್ತಲೇ ಮುಂದುವರಿದೆ. ಬೋಯಿಗಳಿಗೆ ಸ್ವಲ್ಪ ನಿಂತುಕೊಳ್ಳಿ ಎಂದು ಹೇಳಲೂ ನನ್ನ ಕೈಯಲ್ಲಾಗಲಿಲ್ಲ.

"ಶ್ಯಾಮಕುಂಡ ರಾಧಾಕುಂಡಗಳಿಗೆ ಹೋಗಿ ನೋಡಿದಾಗ ಅಲ್ಲಿ ಸಾಧುಗಳು ಒಂದೊಂದು ಕುಟೀರ ಕಟ್ಟಿಕೊಂಡು ತಮ್ಮ ಕಣ್ಣು ರಸ್ತೆಯಲ್ಲಿ ಹೋಗಿಬರುವ ಜನರ ಮೇಲೆ ಬೀಳಬಹುದೆಂದು ಹೆದರಿ ರಸ್ತೆ ಕಡೆ ಬೆನ್ನು

ಹಾಕಿ ಕುಳಿತು ಧ್ಯಾನ ಭಜನೆ ಮಾಡುತ್ತಿದ್ದರು. ಬೃಂದಾವನದ ಹನ್ನೆರಡು ವನಗಳನ್ನೂ ನೋಡಬೇಕಾದ್ದೆ.

"ಬಂಕುವಿಹಾರಿ ಮೂರ್ತಿಯನ್ನು ನೋಡಿ ನನಗೆ ಭಾವವುಂಟಾಗಿ ಬಿಟ್ಟಿತ್ತು. ಅದನ್ನು ಮುಟ್ಟಲು ಹೋಗಿದ್ದೆ. ಗೋವಿಂದಜೀಯನ್ನು ಎರಡನೆ ಸಲ ನೋಡಬೇಕು ಅಂತ ಇಚ್ಛೆಯಾಗಲಿಲ್ಲ. ನಾನು ಮಥುರೆಗೆ ಹೋಗಿದ್ದಾಗ ಗೋಪಾಲಕೃಷ್ಣನನ್ನು ಸ್ವಪ್ನದಲ್ಲಿ ಕಂಡೆ. ಹೃದೆಗೂ ಮಥುರಬಾಬುವಿಗೂ ಅದೇ ರೀತಿಯ ಸ್ವಪ್ನ ಬಿತ್ತು.

(ಸುರೇಂದ್ರನಿಗೆ) "ನಿನಗೆ ಯೋಗವೂ ಇದೆ, ಭೋಗವೂ ಇದೆ. ಋಷಿಗಳಲ್ಲಿ ಮೂರು ವಿಧ: ಬ್ರಹ್ಮರ್ಷಿ, ದೇವರ್ಷಿ, ರಾಜರ್ಷಿ. ಶುಕದೇವ ನಂಥವರು ಬ್ರಹ್ಮರ್ಷಿಗಳು. ಆತನ ಹತ್ತಿರ ಒಂದು ಪುಸ್ತಕವೂ ಇರಲಿಲ್ಲ. ನಾರದ ದೇವರ್ಷಿ. ಜನಕರಾಜನಂಥವರು ರಾಜರ್ಷಿಗಳು — ನಿಷ್ಕಾಮ ಕರ್ಮ ಮಾಡುತ್ತಾರೆ.

"ದೇವಿಯ ಭಕ್ತರಿಗೆ ಧರ್ಮ, ಮೋಕ್ಷ ಎರಡೂ ದೊರೆಯುತ್ತವೆ. ಜೊತೆಗೆ ಅವರು ಅರ್ಥ, ಕಾಮವನ್ನೂ ಅನುಭವಿಸುತ್ತಾರೆ. ನೀನು ದೇವಿಯ ಪುತ್ರನಾಗಿರುವಂತೆ ಒಂದು ದಿನ ನನಗೆ ದರ್ಶನ ದೊರೆಯಿತು. ನಿನಗೆ ಎರಡೂ ಇವೆ—ಯೋಗ, ಭೋಗ; ಇಲ್ಲದಿದ್ದರೆ ನಿನ್ನ ಮುಖಭಾವ ಒಣಗಿಕೊಂಡಿರುತ್ತಿತ್ತು.

"ಸರ್ವ ತ್ಯಾಗಿಗಳ ಆಕೃತಿ ಒಣಗಿಕೊಂಡಿರುತ್ತದೆ. ಒಮ್ಮೆ ಗಂಗೆಯ ಘಟ್ಟದಲ್ಲಿ ದೇವಿಯ ಭಕ್ತನೊಬ್ಬನನ್ನು ನೋಡಿದೆ. ಆತ ತಾನು ಊಟ ಮಾಡುತ್ತಿದ್ದ ಹಾಗೆಯೇ ದೇವಿಯ ಪೂಜೆಯನ್ನೂ ಮಾಡುತ್ತಿದ್ದ. ಆತನದು ಸಂತಾನಭಾವ.

"ದೊಡ್ಡ ಧನವಂತನಾಗುವುದೂ ಒಳ್ಳೆಯದಲ್ಲ. ಈಗ ಯದುಮಲ್ಲಿಕ ಪ್ರಾಪಂಚಿಕ ಸಾಗರದಲ್ಲಿ ಮುಳುಗಿಹೋಗಿದಾನೆ. ಕಾರಣ ಆತನಿಗೆ ಹೆಚ್ಚು ಹಣಸಂಪಾದನೆಯಾಗಿಬಿಟ್ಟಿದ್ದರಿಂದ. ನವೀನನಿಯೋಗಿಗೂ ಯೋಗ ಭೋಗ ಎರಡೂ ಇವೆ. ದುರ್ಗಾಪೂಜೆಯ ಸಮಯದಲ್ಲಿ ತಂದೆ, ಮಗ ಇಬ್ಬರೂ ದೇವಿಗೆ ಚಾಮರ ಬೀಸುತ್ತಿದ್ದುದನ್ನು ನೋಡಿದೆ."

ಸುರೇಂದ್ರ: "ನನ್ನ ಕೈಯಲ್ಲಿ ಧ್ಯಾನಮಾಡಲಾಗುತ್ತಿಲ್ಲವಲ್ಲ ಏಕೆ?"

ಶ್ರೀರಾಮಕೃಷ್ಣರು: "ಸ್ಮರಣ ಮನನವಾದರೂ ನಡೆಯುತ್ತಾ ಇದೆ ತಾನೆ?"

ಸುರೇಂದ್ರ: "'ತಾಯಿ, ತಾಯಿ' ಎಂದು ಹೇಳುತ್ತ ನಿದ್ದೆಹೋಗುತ್ತೇನೆ."

ಶ್ರೀರಾಮಕೃಷ್ಣರು: "ಅದು ಬಹಳ ಒಳ್ಳೆಯದು. ಸ್ಮರಣ ಮನನ ಇದ್ದರೇ ಬೇಕಾದಷ್ಟು."

ಪರಮಹಂಸರು ಸುರೇಂದ್ರನ ಭಾರವನ್ನು ಹೊತ್ತುಕೊಂಡಿದಾರೆ. ಆದ್ದರಿಂದ ಆತನಿಗೆ ಇನ್ನು ಯೋಚನೆಯೇಕೆ?

ವೇಳೆ ಸಾಯಂಕಾಲ. ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತಿದಾರೆ. ಮಾಸ್ಟರೂ ಉಳಿದ ಭಕ್ತರೊಡನೆ ನೆಲದ ಮೇಲೆ ಕುಳಿತಿದಾನೆ. ಯೋಗದ ವಿಷಯವಾಗಿ—ಷಟ್ಚಕ್ರದ ವಿಷಯವಾಗಿ—ಮಾತಾಡುತ್ತಿದಾರೆ. ಶಿವಸಂಹಿತೆಯಲ್ಲಿ ಈ ವಿಷಯಗಳೆಲ್ಲಾ ಇವೆ.

ಶ್ರೀರಾಮಕೃಷ್ಣರು: "ಇಡಾ, ಪಿಂಗಳಾ, ಸುಷುಮ್ನಾ ಇವು ಮೂರು ನಮ್ಮ ಶರೀರದಲ್ಲಿರುವ ಮುಖ್ಯ ನಾಡಿಗಳು. ಸುಷುಮ್ನೆಯ ಒಳಗೆ ಎಲ್ಲಾ ಪದ್ಮಗಳೂ ಇವೆ. ಎಲ್ಲವೂ ಚಿನ್ಮಯ. ಇದು ಮೇಣದ ಮರದಲ್ಲಿ ಅದರ ಕೊಂಬೆ, ರೆಂಬೆ, ಕಾಯಿ, ಹಣ್ಣು ಎಲ್ಲಾ ಮೇಣವಾಗಿರುವ ಹಾಗೆ. ಮೂಲಾಧಾರ ಪದ್ಮದಲ್ಲಿ ಕುಲಕುಂಡಲಿನಿ ಶಕ್ತಿ ಮಲಗಿರುತ್ತಾಳೆ. ಅದು ಆರು ದಳದ ಪದ್ಮ. ಯಾರು ಆದ್ಯಾಶಕ್ತಿಯೊ ಆಕೆಯೇ ಎಲ್ಲರ ದೇಹಗಳಲ್ಲೂ ಕುಲಕುಂಡಲಿನಿ ರೂಪದಲ್ಲಿ ಇದಾಳೆ. ಆಕೆ ಅಲ್ಲಿ ಸುರುಳಿ ಸುತ್ತಿಕೊಂಡು ಮಲಗಿರುವ ಹಾವಿನ ಹಾಗೆ ಇದಾಳೆ—'ಪ್ರಸುಪ್ತ ಭುಜಗಾಕಾರಾ ಆಧಾರಪದ್ಮವಾಸಿನೀ'. (ಮಾಸ್ಟರಿಗೆ) ಭಕ್ತಿಯೋಗದ ಮೂಲಕ ಕುಲಕುಂಡಲಿನಿ ಬೇಗ ಎಚ್ಚರಗೊಳ್ಳುತ್ತಾಳೆ. ಆಕೆ ಎಚ್ಚರಗೊಳ್ಳದ ಹೊರತು ಭಗವಂತನ ದರ್ಶನ ದೊರೆಯೋ ಹಾಗಿಲ್ಲ. ನಿರ್ಜನ ಪ್ರದೇಶದಲ್ಲಿ ಗೋಪ್ಯವಾಗಿ ಏಕಾಗ್ರಚಿತ್ತದಿಂದ ಈ ಹಾಡನ್ನು ನೀನು ಹಾಡು:

ಏಳಮ್ಮ ಕುಲಕುಂಡಲಿನೀ
ನಿತ್ಯಾನಂದ ಸ್ವರೂಪಿಣೀ
ಮೂಲಾಧಾರ ಕಮಲದಲ್ಲಿ
ಪ್ರಸುಪ್ತ ಭುಜಗ ರೂಪಿಣೀ.

"ಹಾಡಿನಿಂದಲೇ ರಾಮಪ್ರಸಾದನಿಗೆ ಭಗವಂತನ ದರ್ಶನ ದೊರೆ

ಯಿತು. ವ್ಯಾಕುಲಚಿತ್ತದಿಂದ ಹಾಡಿದರೆ ಭಗವಂತನ ದರ್ಶನ ದೊರೆಯುತ್ತದೆ.''

ಮಾಸ್ಟರ್: ''ಇವುಗಳೆಲ್ಲದರ ಅನುಭವ ಒಮ್ಮೆ ದೊರೆತರೂ ಮನಸ್ಸಿನ ಶೋಕ ತಾಪಗಳೆಲ್ಲಾ ಹೊರಟುಹೋಗುತ್ತವೆ.''

ಶ್ರೀರಾಮಕೃಷ್ಣರು: ''ಹೌದು, ನಿಜ. ಮನಸ್ಸಿನ ದುಃಖಗಳೆಲ್ಲಾ ಒಮ್ಮೆಗೇ ಕೊನೆಗಾಣುತ್ತವೆ. ಯೋಗದ ವಿಷಯವಾಗಿ ನಿನಗೆ ಸಂಕ್ಷಿಪ್ತವಾಗಿ ಸ್ವಲ್ಪ ತಿಳಿಸಬೇಕಾಗಿದೆ. ಆದರೆ ನೋಡು, ಮೊಟ್ಟೆಯೊಳಗೆ ಮರಿ ಚೆನ್ನಾಗಿ ಬೆಳೆಯುದವರೆಗೆ ತಾಯಿ ಹಕ್ಕಿ ಮೊಟ್ಟೆಯನ್ನು ಒಡೆಯುವುದಿಲ್ಲ. ಸಕಾಲ ಬಂದಾಗ ಮಾತ್ರವೇ ಅದು ಅದನ್ನು ಒಡೆಯುತ್ತದೆ. ಸ್ವಲ್ಪ ಸಾಧನೆ ಅತ್ಯಂತ ಆವಶ್ಯಕ. ಗುರುವೇನೊ ಎಲ್ಲವನ್ನೂ ಮಾಡಿಕೊಟ್ಟು ಬಿಡುತ್ತಾನೆ; ಆದರೆ ಕೊನೆಯಲ್ಲಿ ಶಿಷ್ಯನ ಕೈಯಲ್ಲೂ ಸ್ವಲ್ಪ ಸಾಧನೆ ಮಾಡಿಸುತ್ತಾನೆ. ದೊಡ್ಡ ಮರವನ್ನು ಕತ್ತರಿಸುವಾಗ ಅದರ ಬುಡವನ್ನು ಬಹುಮಟ್ಟಿಗೆ ಕೊನೆಯವರೆಗೂ ಕತ್ತರಿಸಿದೊಡನೇ ಸ್ವಲ್ಪ ದೂರ ಸರಿದು ನಿಲ್ಲಬೇಕಾಗುತ್ತದೆ. ಬಳಿಕ ಮರ ತಾನೇ 'ಕಟ್, ಕಟ್' ಅಂತ ಮುರಿದು 'ಧಪ್' ಅಂತ ಬೀಳುತ್ತದೆ.

''ರೈತರು ನದಿಯಿಂದ ಗದ್ದೆಗೆ ನೀರು ತರುವಾಗ, ನದಿಯವರೆಗೂ ಕಾಲುವೆ ತೆಗೆದು ಇನ್ನೇನು ಸ್ವಲ್ಪ ಅಗೆಯಬೇಕಾಗಿದೆ ಅನ್ನುವಷ್ಟರಲ್ಲಿ ದೂರ ಸರಿದು ನಿಂತುಕೊಳ್ಳುತ್ತಾರೆ. ಬಳಿಕ ಮಣ್ಣಿಗೆ ತೇವವೇರಿ ಅದು ತಾನಾಗೇ ಕುಸಿದು ಬೀಳುತ್ತದೆ. ಒಡನೇ ನದಿಯ ನೀರು 'ಜರ್' ಅಂತ ಶಬ್ದ ಮಾಡುತ್ತ ರಭಸದಿಂದ ಕಾಲುವೆಗೆ ನುಗ್ಗುತ್ತದೆ.

''ಅಹಂಕಾರ, ಉಪಾಧಿ ಇವುಗಳನ್ನೆಲ್ಲ ತ್ಯಜಿಸಿದರೇನೇ ಭಗವಂತನ ದರ್ಶನಮಾಡಲು ಸಾಧ್ಯ. 'ನಾನು ಪಂಡಿತ', 'ನಾನು ಅಂಥಾ ದೊಡ್ಡ ಮನುಷ್ಯನ ಮಗ', 'ನಾನು ಧನಿಕ', 'ನಾನು ಅಂಥಾ ಕೀರ್ತಿವಂತ'— ಇವೇ ಮೊದಲಾದ ಉಪಾಧಿಗಳೆಲ್ಲಾ ನಮ್ಮನ್ನು ಬಿಟ್ಟು ತೊಲಗಿದೊಡನೇ ಭಗವಂತನ ದರ್ಶನ ದೊರೆಯುತ್ತದೆ.

'''ಭಗವಂತನೊಬ್ಬನೇ ಸತ್ಯ ಉಳಿದುದೆಲ್ಲಾ ಅನಿತ್ಯ; ಈ ಜಗತ್ತು ಅನಿತ್ಯ'— ಇದಕ್ಕೇ ವಿವೇಕ ಅಂತ ಹೆಸರು. ವಿವೇಕವುಂಟಾಗದವರೆಗೆ ಭಗವತ್ಸಂಬಂಧವಾದ ಉಪದೇಶಗಳನ್ನು ಗ್ರಹಿಸಲಾಗುವುದಿಲ್ಲ.

"ಸಾಧನೆ ಮಾಡುತ್ತ ಮಾಡುತ್ತ ಮುಂದುವರಿದರೆ ಭಗವಂತನ ಕೃಪೆಯಿಂದ ಸಿದ್ಧಿ ದೊರೆಯುತ್ತದೆ. ಆದರೆ ಮೊದಲು ಸ್ವಲ್ಪ ಕಷ್ಟಪಡ ಬೇಕು. ಬಳಿಕ ಆತನ ದರ್ಶನ ದೊರೆಯುತ್ತದೆ, ಆನಂದ ದೊರೆಯುತ್ತದೆ. ಯಾವುದೊ ಒಂದು ಜಾಗದಲ್ಲಿ ಚಿನ್ನದ ನಾಣ್ಯಗಳ ಒಂದು ತಪ್ಪಲೆಯನ್ನು ಹೂತಿಟ್ಟಿದೆ ಎಂದು ಕೇಳಿದೊಡನೇ ಜನ ಅಲ್ಲಿಗೆ ಓಡಿಹೋಗಿ ಅಗೆಯಲು ಶುರುಮಾಡುತ್ತಾರೆ. ಅಗೆಯುತ್ತ ಅಗೆಯುತ್ತ ಮುಖದಿಂದ ಬೆವರು ಸುರಿಯತೊಡಗುತ್ತದೆ. ಬಹಳವಾಗಿ ಮಣ್ಣನ್ನು ತೋಡಿದನಂತರ ಏನೊ ಗುದ್ದಲಿ ಮೊನೆಗೆ ತಗುಲಿ 'ಠಣ್' ಅಂತ ಶಬ್ದಮಾಡುತ್ತದೆ. ಬಳಿಕ ಗುದ್ದಲಿಯನ್ನು ಒಂದು ಕಡೆಗೆ ಬಿಸುಟು ತಪ್ಪಲೆಗಾಗಿ ಹುಡುಕುತ್ತಾರೆ. ತಪ್ಪಲೆ ಕಣ್ಣಿಗೆ ಬಿದ್ದೊಡನೇ ಆನಂದದಿಂದ ಕುಣಿದು ಕುಪ್ಪಳಿಸುತ್ತಾರೆ. ಬಳಿಕ ತಪ್ಪಲೆಯನ್ನು ಹೊರಕ್ಕೆ ತೆಗೆದು ನಾಣ್ಯಗಳನ್ನು ಹೊರಕ್ಕೆ ಸುರಿದು ಕೊಳ್ಳುತ್ತಾರೆ. ಅನಂತರ ಅವನ್ನು ಕೈಯಲ್ಲಿ ತೆಗೆದುಕೊಂಡು ಎಣಿಸ ಲಾರಂಭಿಸುತ್ತಾರೆ. ಆಗ ಏನು ಆನಂದ! ದರ್ಶನ—ಸ್ಪರ್ಶನ—ಹರ್ಷಣ. ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು, ನಿಜ."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಮತ್ತೆ ಮಾತಾಡು ತ್ತಿದಾರೆ.

ಶ್ರೀರಾಮಕೃಷ್ಣರು: "ಯಾರು ನನಗೆ ಸೇರಿದವರೊ ಅವರನ್ನು ಬೈದರೂ ಮತ್ತೆ ಇಲ್ಲಿಗೆ ಬರುತ್ತಾರೆ. ನರೇಂದ್ರನ ಕಡೆ ನೋಡು! ಮೊದಲು ಆತ ಭಗವತಿ ಕಾಳಿಯನ್ನು ಮನಸ್ಸು ಬಂದ ಹಾಗೆಲ್ಲಾ ಹಳಿಯು ತ್ತಿದ್ದ. ಒಂದು ದಿನ ಸಿಟ್ಟುಗೊಂಡು ಆತನಿಗೆ ಹೇಳಿದೆ: 'ಮೂರ್ಖ! ನೀನು ಮತ್ತೆ ಇಲ್ಲಿಗೆ ಬರಬೇಡ.' ಆಗ ಆತ ಮೆಲ್ಲಮೆಲ್ಲಗೆ ಇಲ್ಲಿಂದ ಸರಿದು ಗುಡುಗುಡಿ ಸಿದ್ಧಪಡಿಸಲಾರಂಭಿಸಿದ. ಸ್ವಂತದವರನ್ನ ತಿರಸ್ಕಾರ ದೃಷ್ಟಿಯಿಂದ ನೋಡಿದರೂ ಅವರಿಗೆ ಕೋಪಬರುವುದಿಲ್ಲ. ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ಅದು ನಿಜ."

ಶ್ರೀರಾಮಕೃಷ್ಣರು: "ನರೇಂದ್ರ ಸ್ವತಸ್ಸಿದ್ಧ. ಆತ ನಿರಾಕಾರನಿಷ್ಠ."

ಮಾಸ್ಟರ್ ನಗುತ್ತ: "ಆತ ಇಲ್ಲಿಗೆ ಬಂದಾಗಲೆಲ್ಲಾ ಏನಾದರೂ ಒಂದು ಸಂಭ್ರಮ ಇದ್ದೇ ಇರುತ್ತದೆ."

ಶ್ರೀರಾಮಕೃಷ್ಣರು ಆನಂದದಿಂದ ನಗುತ್ತ ಹೇಳುತ್ತಿದಾರೆ: "ಹೌದು, ಸಂಭ್ರಮವೇ ನಿಜವಾಗೂ."

ಮಾರನೆ ದಿನ ಮಂಗಳವಾರ, ಏಕಾದಶಿ. ಘಂಟೆ ಬೆಳಗಿನ ಹನ್ನೊಂದು. ಪರಮಹಂಸರು ಇನ್ನೂ ಊಟಮಾಡಿಲ್ಲ. ಮಾಸ್ಟರ್, ರಾಖಾಲ, ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯಲ್ಲಿ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಏಕಾದಶಿ ವ್ರತವನ್ನು ಆಚರಿಸುವುದು ಒಳ್ಳೆಯದು. ಅದರಿಂದ ಮನಸ್ಸು ಪವಿತ್ರವಾಗುತ್ತದೆ, ಭಗವಂತನಲ್ಲಿ ಭಕ್ತಿಯುಂಟಾಗುತ್ತದೆ. ಏನು?"

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ನೀನು ಬೇಕಾದರೆ ಪುರಿ ಹಾಲು ತೆಗೆದುಕೊ. ಏನು ಹೇಳುತ್ತೀಯೆ?"



೧೮

## ದಕ್ಷಿಣೇಶ್ವರದಲ್ಲಿ ಮಾಸ್ಟರ್ (೨)

೨೬ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಸಪ್ತಮಿ, ಬುಧವಾರ.

ಪರಮಹಂಸರು ಇಂದು ರಾಮಚಂದ್ರನ ಹೊಸ ತೋಟಕ್ಕೆ ಗಾಡಿ ಮಾಡಿಕೊಂಡು ಹೋಗುತ್ತಿದಾರೆ. ಗಾಡಿಯಲ್ಲಿ ಮಣಿಲಾಲಮಲ್ಲಿಕ, ಮಾಸ್ಟರ್, ಇನ್ನೂ ಕೆಲವು ಮಂದಿ ಭಕ್ತರಿದಾರೆ. ರಾಮಚಂದ್ರನ ಈ ಹೊಸ ತೋಟ ಸುರೇಂದ್ರನ ತೋಟದ ಹತ್ತಿರದಲ್ಲೇ ಇದೆ. ರಾಮಚಂದ್ರ ಪರಮಹಂಸರನ್ನು ಸಾಕ್ಷಾತ್ ಅವತಾರಪುರುಷರೇ ಎಂದು ಪೂಜಿಸುತ್ತಿದಾನೆ. ಆತ ದಕ್ಷಿಣೇಶ್ವರಕ್ಕೆ ಆಗಾಗ ಬಂದು ಪರಮಹಂಸರ ದರ್ಶನ ಮಾಡಿ ಹೋಗುತ್ತಿದಾನೆ. ಮಣಿಲಾಲಮಲ್ಲಿಕ ಬ್ರಾಹ್ಮಸಮಾಜದ ಒಬ್ಬ ಅನುಯಾಯಿ. ಬ್ರಾಹ್ಮಸಮಾಜದವರು ಅವತಾರವನ್ನು ಒಪ್ಪುವುದಿಲ್ಲ.

ಶ್ರೀರಾಮಕೃಷ್ಣರು ಮಣಿಲಾಲಮಲ್ಲಿಕನಿಗೆ: "ಭಗವಂತನನ್ನು ಧ್ಯಾನಿಸಬೇಕಾದರೆ ಮೊದಲು ಉಪಾಧಿಶೂನ್ಯ ಭಗವಂತನನ್ನು ಧ್ಯಾನಿಸಲು ಪ್ರಯತ್ನಮಾಡಬೇಕು. ಆತ ನಿರುಪಾಧಿಕ, ವಾಙ್ಮನಾತೀತ. ಆದರೆ ಈ ವಿಧದ ಧ್ಯಾನದಿಂದ ಮುಕ್ತಿಯನ್ನು ಪಡೆಯುವುದು ಬಹಳ ಕಠಿನ.

"ಆದರೆ ಯಾವಾಗ ಭಗವಂತ ಮನುಷ್ಯನಾಗಿ ಅವತರಿಸುತ್ತಾನೊ ಆಗ ಆತನ ಮೇಲೆ ಧ್ಯಾನಮಾಡುವುದು ಬಹಳ ಸುಲಭ. ಹೌದು, ಅವತಾರಪುರುಷ ಬೇರೆ ಏನೂ ಅಲ್ಲ, ಸಾಕ್ಷಾತ್ ಭಗವಂತನೇ ಮನುಷ್ಯ ರೂಪ ಧರಿಸುವಿಕೆ. ದೇಹ ಕೇವಲ ಆವರಣ ಮಾತ್ರ. ಇದು ಲಾಟೇನಿನ ಒಳಗೆ ದೀಪ ಉರಿಯುತ್ತಿರುವ ಹಾಗೆ ಅಥವಾ ಗಾಜಿನ ಪೆಟ್ಟಿಗೆಯಲ್ಲಿ ಅಮೌಲ್ಯ ವಸ್ತುಗಳು ಕಾಣಬರುವ ಹಾಗೆ."

ತೋಟದ ಹತ್ತಿರಕ್ಕೆ ಬಂದನಂತರ ಪರಮಹಂಸರು ಗಾಡಿಯಿಂದಿಳಿದು ರಾಮನೇ ಮೊದಲಾದ ಭಕ್ತರೊಡನೆ ತುಳಸಿವನದ ಕಡೆಗೆ ಹೋಗುತ್ತಿದಾರೆ. ಅದರ ಹತ್ತಿರ ನಿಂತು ಹೇಳುತ್ತಿದಾರೆ: "ಆಹ, ಎಷ್ಟು ಚೆನ್ನಾಗಿದೆ ಈ ಜಾಗ! ಇಲ್ಲಿ ಭಗವಂತನ ಮೇಲೆ ಬಹಳ ಚೆನ್ನಾಗಿ ಧ್ಯಾನಮಾಡಬಹುದು.

ಈಗ ಪರಮಹಂಸರು ಪುಷ್ಕರಣಿಯ ದಕ್ಷಿಣದ ಕೊಠಡಿಗೆ ಬಂದು ಕುಳಿತುಕೊಂಡರು. ರಾಮ ಅವರಿಗೆ ಹಣ್ಣು ಹಂಪಲಾದಿಗಳನ್ನು ಮತ್ತು ಸಿಹಿ ತಿಂಡಿಗಳನ್ನು ಅರ್ಪಿಸಿದ. ಪರಮಹಂಸರು ಅವನ್ನು ಭಕ್ತರಿಗೂ ಹಂಚಿ ತಾವೂ ತಿನ್ನಲಾರಂಭಿಸಿದರು. ಸ್ವಲ್ಪ ಹೊತ್ತಾದನಂತರ ತೋಟದಲ್ಲಿ ಸುತ್ತಾಡಲು ಹೊರಟರು.

ಈಗ ಪರಮಹಂಸರು ಸುರೇಂದ್ರನ ತೋಟದ ಕಡೆ ಮುಂದುವರಿಯುತ್ತಿದ್ದಾರೆ. ಅವರು ಪಾದಚಾರಿಗಳಾಗಿ ಸ್ವಲ್ಪ ದೂರ ಮುಂದುವರಿದಾಗ ಪಕ್ಕದ ತೋಟದಲ್ಲಿ ಒಬ್ಬ ಸಾಧು ಒಬ್ಬರೇ ಒಂದು ಮರದ ಕೆಳಗೆ ಮಂಚದ ಮೇಲೆ ಕುಳಿತಿದ್ದುದು ಕಣ್ಣಿಗೆ ಬಿತ್ತು. ಒಡನೆಯೇ ಪರಮಹಂಸರು ಆ ಸಾಧುವನ್ನು ಸಮೀಪಿಸಿ ಅವರೊಡನೆ ಹಿಂದಿಯಲ್ಲಿ ಆನಂದದಿಂದ ಮಾತುಕತೆಗಳಾಡಲಾರಂಭಿಸಿದರು.

ಶ್ರೀರಾಮಕೃಷ್ಣರು ಸಾಧುವಿಗೆ: "ನೀವು ಯಾವ ಸಂಪ್ರದಾಯಕ್ಕೆ ಸೇರಿದವರು—ಗಿರಿಯೆ, ಪುರಿಯೆ ಅಥವಾ ಬೇರೆ ಯಾವುದಾದರೂ ಉಪಾಧಿ ಇದೆಯೆ?"

ಸಾಧು: "ಜನ ನನ್ನನ್ನು ಪರಮಹಂಸ ಅಂತ ಕರೆಯುತ್ತಾರೆ."

ಶ್ರೀರಾಮಕೃಷ್ಣರು: "ಭೇಷ್, ಭೇಷ್. ನಿಮ್ಮದು 'ಶಿವೋಽಹಮ್.' ಇದು ಬಹಳ ಒಳ್ಳೆಯದೆ. ಆದರೆ ಒಂದು ವಿಷಯ. ಈ ಸೃಷ್ಟಿ ಸ್ಥಿತಿ ಪ್ರಳಯ ಹಗಲಿರುಳೂ ನಡೆಯುತ್ತಾ ಇದೆಯಲ್ಲ, ಇದು ಭಗವಂತನ ಶಕ್ತಿಯಿಂದಲೇ. ಈ ಆದ್ಯಾಶಕ್ತಿಗು ಬ್ರಹ್ಮನಿಗು ಅಭೇದ. ಹೇಗೆ ನೀರೆಂಬುದು ಇಲ್ಲದಿದ್ದರೆ ಅಲೆಯೆಂಬುದೂ ಇರದೊ, ಹಾಗೆ ಬ್ರಹ್ಮನೆಂಬುವವನು ಇಲ್ಲದಿದ್ದರೆ ಶಕ್ತಿಯೆಂಬುವವಳೂ ಇರಳು. ವಾದ್ಯವೆಂಬುದು ಇಲ್ಲದಿದ್ದರೆ ಬಾಜನವೆಂಬುದೂ ಇರದು.

"ಎಲ್ಲಿಯವರೆಗೆ ಭಗವಂತ ನಮ್ಮನ್ನು ಈ ಲೀಲಾಪ್ರಪಂಚದಲ್ಲಿ ಇಡುತ್ತಾನೊ ಅಲ್ಲಿಯವರೆಗೆ ಎರಡು ಇರುವುದರ ಬೋಧೆಯಾಗುತ್ತದೆ. ಶಕ್ತಿ ಅಂದರೇ ಬ್ರಹ್ಮನೂ ಜೊತೆಯಲ್ಲೇ. ಇದು ರಾತ್ರಿಯ ಬೋಧೆ ಇತ್ತು ಎಂದರೆ ದಿನದ ಬೋಧೆಯೂ ಇರುವ ಹಾಗೆ. ಜ್ಞಾನದ ಬೋಧೆ ಇತ್ತು ಎಂದರೆ ಅಜ್ಞಾನದ ಬೋಧೆಯೂ ಇರಲೇ ಬೇಕು.

"ಇನ್ನೊಂದು ಅವಸ್ಥೆ ಇದೆ. ಅದರಲ್ಲಿ ಭಗವಂತ ತೋರಿಸುತ್ತಾನೆ,

ಬ್ರಹ್ಮ, ಜ್ಞಾನಾಜ್ಞಾನಗಳಿಗೆ ಅತೀತ ಎಂಬುದಾಗಿ. ಆ ಅವಸ್ಥೆಯನ್ನು ಬಾಯಿಂದ ವರ್ಣಿಸಲಾಗೋದಿಲ್ಲ. ಆಗ ಏನಿದೆಯೊ ಅದೇ ಇರುತ್ತದೆ.''

ಈ ರೀತಿಯಾಗಿ ಅನ್ಯೋನ್ಯವಾಗಿ ಮಾತುಕತೆಗಳಾಡಿದನಂತರ ಪರಮಹಂಸರು ತಮ್ಮ ಗಾಡಿಯ ಕಡೆ ಮುಂದುವರಿಯುತ್ತಿದಾರೆ. ಸಾಧು ಪರಮಹಂಸರನ್ನು ಗಾಡಿಗೆ ಹತ್ತಿಸಲು ಅವರೊಡನೆ ಬರುತ್ತಿದಾರೆ. ಅವರಿಬ್ಬರೂ ಎಷ್ಟೋ ದಿವಸಗಳಾದ ಮೇಲೆ ಸಂಧಿಸಿದ ಬಂಧುಗಳ ಹಾಗೆ ತೋಳೊಳಗೆ ತೋಳಿಟ್ಟು ನಡೆಯುತ್ತಿದಾರೆ.

ಈಗ ಪರಮಹಂಸರು ಸುರೇಂದ್ರನ ತೋಟಕ್ಕೆ ಬಂದಿದಾರೆ. ಅಲ್ಲಿ ಎಲ್ಲರೂ ಕುಳಿತುಕೊಂಡನಂತರ ಅವರು ಎತ್ತಿದ ಮೊದಲನೆಯ ಮಾತೇ ಆ ಸಾಧುಗಳ ವಿಷಯವಾಗಿ.

ಶ್ರೀರಾಮಕೃಷ್ಣರು: ''ಅವರು ಬಹಳ ಒಳ್ಳೆ ಸಾಧು. (ರಾಮನಿಗೆ) ನೀನು ದಕ್ಷಿಣೇಶ್ವರಕ್ಕೆ ಬರುವಾಗ ಆ ಸಾಧುಗಳನ್ನು ಜೊತೆಯಲ್ಲಿ ಕರೆದು ಕೊಂಡು ಬಾ. ಅವರು ನಿಜವಾಗಿಯೂ ಒಳ್ಳೆ ಸಾಧು. ಒಂದು ಹಾಡಿದೆ—ಸಹಜನಾಗದಿದ್ದರೆ ಸಹಜನನ್ನು ಅರಿಯಲಾಗುವುದಿಲ್ಲ ಎಂದು.

''ಅವರು ನಿರಾಕಾರವಾದಿ. ಅದು ಬಹಳ ಒಳ್ಳೆಯದೆ. ಭಗವಂತ ಸಾಕಾರ, ನಿರಾಕಾರ ಎರಡೂ ಆಗಿದಾನೆ; ಇನ್ನೂ ಏನೇನೊ ಆಗಿದಾನೆ. ನಿತ್ಯ ಯಾರದೊ ಆತನದೇ ಲೀಲೆ. ಯಾರು ವಾಙ್ಮನಾತೀತನೊ ಆತನೇ ನಾನಾ ರೂಪಗಳ ಮೂಲಕ ಅವತೀರ್ಣನಾಗಿ ಅನೇಕ ಕೆಲಸಕಾರ್ಯಗಳಲ್ಲಿ ತೊಡಗಿದಾನೆ. ಆ ಒಂದು ಓಂಕಾರದಿಂದಲೇ 'ಓಂ ಶಿವ', 'ಓಂ ಕಾಳಿ', 'ಓಂ ಕೃಷ್ಣ' ಉದ್ಭವವಾಗಿದಾರೆ. ಒಂದು ಮನೆಯ ಯಜಮಾನ ತನ್ನ ಮನೆಯ ಒಬ್ಬ ಚಿಕ್ಕ ಹುಡುಗನನ್ನು ಸಂತರ್ಪಣೆಗಾಗಿ ಜನರನ್ನು ಆಹ್ವಾನ ಮಾಡಿ ಬರಲು ಕಳುಹಿಸಿದಾನೆ ಅಂತ ಇಟ್ಟುಕೊ. ಜನ ಆತನನ್ನು ಎಷ್ಟು ಆದರದಿಂದ ನೋಡುತ್ತಾರೆ! ಏಕೆಂದರೆ ಆತ ಒಬ್ಬ ದೊಡ್ಡ ಮನುಷ್ಯನ ಮಗನೊ ಅಥವಾ ಮೊಮ್ಮಗನೊ ಆಗಿರುವುದರಿಂದ.''

ಪರಮಹಂಸರು ಸುರೇಂದ್ರನ ತೋಟದಲ್ಲಿ ಸ್ವಲ್ಪ ಉಪಾಹಾರವನ್ನು ಸ್ವೀಕರಿಸಿ ಭಕ್ತರೊಡನೆ ದಕ್ಷಿಣೇಶ್ವರಕ್ಕೆ ಹೊರಟರು.

೨೭ನೆ ಡಿಸೆಂಬರ್ ೧೮೮೩, ಮಾರ್ಗಶಿರ ಕೃಷ್ಣ ಅಷ್ಟಮಿ, ಗುರುವಾರ.

ದಕ್ಷಿಣೇಶ್ವರದ ಕಾಳೀದೇವಾಲಯದಲ್ಲಿ ಪ್ರಾತಃಕಾಲದ ಮಂಗ-ಳಾರತಿಯ ಮಧುರ ನಿನಾದ ಕೇಳಿಬರುತ್ತಿದೆ. ಅದರೊಡನೆ ನಹಬತ್‌ಖಾನೆ

ಯಿಂದ ಬರುತ್ತಿದ್ದ ಉದಯರಾಗದ ಬಾಜನವೂ ಹೊಂದಿಕೊಳ್ಳುತ್ತಿದೆ. ಪರಮಹಂಸರು ಹಾಸಿಗೆಯಿಂದೆದ್ದು ತಮ್ಮ ಮಧುರ ಕಂಠದಿಂದ ಭಗವತಿಯ ನಾಮೋಚ್ಚಾರಣೆ ಮಾಡುತ್ತಿದಾರೆ. ಈಗ ಅವರು ತಮ್ಮ ಕೊಠಡಿಯಲ್ಲಿದ್ದ ಪ್ರತಿಯೊಂದು ದೇವದೇವಿಯರ ಪಟಕ್ಕೂ ಕೈ ಮುಗಿಯುತ್ತಿದಾರೆ. ಮತ್ತೆ ಈಗ ತಮ್ಮ ಕೊಠಡಿಯ ಪಶ್ಚಿಮ ವರಾಂಡಕ್ಕೆ ಬಂದು ಭಾಗೀರಥಿಯ ದರ್ಶನ ಮಾಡಿ ಆಕೆಗೆ ಪ್ರಣಾಮಮಾಡುತ್ತಿದಾರೆ.

ಹಿಂದಿನ ರಾತ್ರಿಯನ್ನು ದಕ್ಷಿಣೇಶ್ವರದಲ್ಲೇ ಕಳೆದ ಭಕ್ತರು ಈಗ ಒಬ್ಬೊಬ್ಬರಾಗಿ ಬಂದು ಪರಮಹಂಸರಿಗೆ ಪ್ರಣಾಮಮಾಡುತ್ತಿದಾರೆ. ರಾಖಾಲ ಪರಮಹಂಸರೊಡನೆಯೇ ಇದಾನೆ. ಬಾಬುರಾಮ ಹಿಂದಿನ ರಾತ್ರಿ ಬಂದ. ಮಾಸ್ಟರ್ ಈಗ ಹದಿನಾಲ್ಕು ದಿನಗಳಿಂದ ಪರಮಹಂಸ ರೊಡನೆಯೇ ಇದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಹೇಳುತ್ತಿದಾರೆ: "ಇಂದಿನ ಪ್ರಾತಃ ಕಾಲ ತನ್ನ ಮನೆಗೆ ಬರಬೇಕೆಂದು ಈಶಾನ ನನಗೆ ಆಹ್ವಾನವಿತ್ತು ಹೋಗಿ ದಾನೆ. ನನ್ನೊಡನೆ ಬಾಬುರಾಮ ಬರುತ್ತಾನೆ. ನೀನೂ ಬಾ." ಪರಮ-ಹಂಸರೊಡನೆ ಹೊರಡಲು ಮಾಸ್ಟರ್ ಈಗ ಸಿದ್ಧನಾಗುತ್ತಿದಾನೆ.

ಘಂಟೆ ಬೆಳಗಿನ ಎಂಟು. ಪರಮಹಂಸರಿಗಾಗಿ ಗಾಡಿ ಬಂದು ನಹಬತ್‌ಖಾನೆಯ ಹತ್ತಿರ ನಿಂತಿದೆ. ಸುತ್ತಲೂ ಹೂವಿನ ಗಿಡಗಳು ತುಂಬಿವೆ. ಹತ್ತಿರದಲ್ಲೇ ಭಾಗೀರಥಿ ಹರಿಯುತ್ತಿದಾಳೆ. ಎಲ್ಲ ದಿಕ್ಕುಗಳೂ ಪ್ರಾತಃ ಕಾಲದ ಸೂರ್ಯರಶ್ಮಿಯಿಂದ ಪುಲಕಿತಗೊಂಡು ಹರ್ಷವನ್ನು ಸೂಚಿಸು ತ್ತಿವೆ. ಪರಮಹಂಸರು ಮತ್ತೆ ದೇವದೇವಿಯರ ಪಟಗಳಿಗೆಲ್ಲಾ ಪ್ರಣಾಮ ಮಾಡಿ ಭಗವತಿಯ ನಾಮೋಚ್ಚಾರಣೆ ಮಾಡುತ್ತ ಗಾಡಿಗೆ ಹತ್ತುತ್ತಿದಾರೆ. ಈಗ ಮಾಸ್ಟರ್ ಮತ್ತು ಬಾಬುರಾಮನೂ ಗಾಡಿಯನ್ನು ಹತ್ತುತ್ತಿದಾರೆ. ಭಕ್ತರು ಪರಮಹಂಸರ ಶಾಲನ್ನು, ಉಣ್ಣೆಯ ಟೋಪಿಯನ್ನು ಮತ್ತು ಎಲಡಿಕೆ ಚೀಲವನ್ನು ತಮ್ಮ ಜೊತೆಯಲ್ಲಿ ತೆಗೆದುಕೊಂಡಿದಾರೆ.

ಪರಮಹಂಸರು ಹಸನ್ಮುಖರಾಗಿದಾರೆ. ದಾರಿಯ ಉದ್ದಕ್ಕೂ ಮಗುವಿನ ಹಾಗೆ ಎಲ್ಲವನ್ನೂ ನೋಡಿ ಆನಂದಪಡುತ್ತ ಮುಂದುವರಿಯು ತ್ತಿದಾರೆ. ಒಂಬತ್ತು ಘಂಟೆ ಸಮಯಕ್ಕೆ ಗಾಡಿ ಈಶಾನನ ಮನೆಯ ಬಾಗಿಲ ಹತ್ತಿರ ಬಂದು ನಿಂತಿತು.

ಈಶಾನ ತನ್ನ ಮನೆಯವರೊಡನೆ ಪರಮಹಂಸರನ್ನು ಎದುರುಗೊಂಡು ಅವರನ್ನು ಮೊದಲನೆ ಅಂತಸ್ತಿನಲ್ಲಿದ್ದ ಬೈಠಕ್‌ಖಾನೆಗೆ ಕರೆದುಕೊಂಡು ಹೋದ. ಈಗ ಈಶಾನನ ಮಗ ಶ್ರೀಶನನ್ನು ಪರಮಹಂಸರಿಗೆ ಪರಿಚಯ ಮಾಡಿಕೊಡಲಾಯಿತು. ಆ ಯುವಕ ಆಲಿಪುರದಲ್ಲಿ ಲಾಯರಾಗಿದಾನೆ. ಆತ ಒಳ್ಳೆ ತೀಕ್ಷ್ಣಬುದ್ಧಿಯುಳ್ಳ ಯುವಕ. ವಿಶ್ವವಿದ್ಯಾನಿಲಯದ ಎರಡು ಪರೀಕ್ಷೆಗಳಲ್ಲೂ ಮೊದಲನೆ ರ್‍ಯಾಂಕು ಪಡೆದಿದಾನೆ. ಆದರೂ ಆತ ಅತ್ಯಂತ ನಮ್ರ ಸ್ವಭಾವಿ.

ಶ್ರೀರಾಮಕೃಷ್ಣರು ಶ್ರೀಶನಿಗೆ: "ನಿನಗೆ ಏನು ಕೆಲಸ ಇದೆ?"

ಶ್ರೀಶ: "ನಾನು ಆಲಿಪುರದಲ್ಲಿ ವಕೀಲನ ಕೆಲಸ ಮಾಡಿಕೊಂಡಿದೇನೆ."

ಶ್ರೀರಾಮಕೃಷ್ಣರು: "ಇಂಥ ಮನುಷ್ಯ ವಕೀಲನ ಕೆಲಸ ಮಾಡುವುದೆ! (ಶ್ರೀಶನಿಗೆ) ಒಳ್ಳೇದು, ನೀನೇನಾದರೂ ಕೇಳಬೇಕು ಅಂತ ಇದೀಯೇನು? ಸಂಸಾರದಲ್ಲಿ ಅನಾಸಕ್ತನಾಗಿ ಇರುವುದು ಹೇಗೆ ಎಂದು ಕೇಳಬೇಕು ಅಂತ ಇದೀಯೆ ಅಂತ ಕಾಣುತ್ತೆ, ಅಲ್ಲವೆ?"

ಶ್ರೀಶ: "ಕೆಲಸಗಳ ಒತ್ತಡದ ದೆಸೆಯಿಂದ ಈ ಜಗತ್ತಿನಲ್ಲಿ ಜನರು ಎಷ್ಟೋ ಅನ್ಯಾಯ ಕರ್ಮಗಳನ್ನು ಮಾಡಬೇಕಾಗಿ ಬರುತ್ತದೆ. ನೋಡಿ, ಕೆಲವರು ಪಾಪಕರ್ಮಗಳನ್ನು ಮಾಡುತ್ತಾರೆ. ಇವುಗಳೆಲ್ಲ ಹಿಂದಿನ ಜನ್ಮಗಳ ಕಾರ್ಯಗಳ ಫಲವೇನು? ಅದಕ್ಕಾಗೇನು ಅವರು ಹಾಗೆ ವರ್ತಿಸುವುದು?"

ಶ್ರೀರಾಮಕೃಷ್ಣರು: "ಕರ್ಮವನ್ನು ಎಲ್ಲಿಯವರೆಗೆ ಮಾಡಬೇಕಾಗುತ್ತೆ ಗೊತ್ತೆ? ಭಗವಂತನ ಸಾಕ್ಷಾತ್ಕಾರವಾಗದವರೆಗೆ. ಆತನ ಸಾಕ್ಷಾತ್ಕಾರವಾದೊಡನೆ ಎಲ್ಲಾ ತಾನಾಗೇ ನಿಂತುಹೋಗುತ್ತವೆ. ಆಗ ಮನುಷ್ಯ ಪಾಪಪುಣ್ಯಗಳಿಗೆ ಅತೀತನಾಗುತ್ತಾನೆ. ಕಾಯಿ ತಲೆದೋರಿದೊಡನೇ ಹೂವು ಉದುರಿಹೋಗುತ್ತದೆ. ಕಾಯಿ ಬಿಡುವುದಕ್ಕೋಸ್ಕರ ಹೂವು ಉಂಟಾಗುವುದು.

"ಸಂಧ್ಯಾವಂದನಾದಿ ಕರ್ಮಗಳನ್ನು ಎಲ್ಲಿಯವರೆಗೆ ಮಾಡಬೇಕಾಗುತ್ತೆ ಗೊತ್ತೆ? ಎಲ್ಲಿಯವರೆಗೆ ಭಗವನ್ನಾಮೋಚ್ಚಾರಣೆ ಮಾಡಿದ ಮಾತ್ರದಿಂದಲೇ ಮೈಯಲ್ಲಿ ರೋಮಾಂಚವಾಗದೊ, ಕಣ್ಣುಗಳಲ್ಲಿ ಪ್ರೇಮಾಶ್ರು ಸುರಿಯದೊ ಅಲ್ಲಿಯವರೆಗೆ. ಈ ಅವಸ್ಥೆಗಳೆಲ್ಲ ಭಗವಂತನ ಸಾಕ್ಷಾತ್ಕಾರವಾಗಿರುವುದರ ಲಕ್ಷಣ. ಭಗವಂತನಲ್ಲಿ ಶ್ರದ್ಧಾಭಕ್ತಿಯನ್ನು

ಗಳಿಸಿಕೊಂಡಿರುವುದರ ಚಿಹ್ನೆ. ಭಗವಂತನ ಸಾಕ್ಷಾತ್ಕಾರ ದೊರೆತುದೇ ಆದರೆ ಮನುಷ್ಯ ಪಾಪ ಪುಣ್ಯಗಳಿಗತೀತನಾಗಿಬಿಡುತ್ತಾನೆ. ರಾಮಪ್ರಸಾದ ಹೇಳುತ್ತಾನೆ:

‘ ತಾಯಿ ದುರ್ಗೆಯು ಪರಮ ಬ್ರಹ್ಮಸ್ವರೂಪಿ ಎನ್ನುವ ಮರ್ಮವ
ತಿಳಿದು ನಾನಿದೊ ಭುಕ್ತಿ ಮುಕ್ತಿಗೆ ತಲೆಯ ಬಾಗಿಸಿ ನಿಲ್ಲುತ,
ಕಟ್ಟಕಡೆಗಿದೊ ಬಿಸುಟು ನಿಂತಿಹೆ ಸಕಲ ಧರ್ಮಾಧರ್ಮವ.’

“ಭಗವಂತನ ಕಡೆಗೆ ಮುಂದುವರಿದಷ್ಟೂ ಆತ ಕರ್ಮಗಳನ್ನ ಕಡಮೆ ಮಾಡಿಕೊಡುತ್ತಾನೆ.”

ಶ್ರೀಶ: “ಸಂಸಾರದಲ್ಲಿ ಇದ್ದುಕೊಂಡು ಭಗವಂತನ ಕಡೆಗೆ ಹೋಗುವುದೆಂದರೆ ಬಹಳ ಕಷ್ಟ.”

ಶ್ರೀರಾಮಕೃಷ್ಣರು: “ಏಕೆ? ಅಭ್ಯಾಸಯೋಗವಿದೆಯಲ್ಲ? ಕಾಮಾರಪುಕುರಿನಲ್ಲಿ ಬಡಗಿಯ ಹೆಂಗಸರು ಅವಲಕ್ಕಿ ವ್ಯಾಪಾರ ಮಾಡುತ್ತಾರೆ. ಅವರು ಎಷ್ಟು ಕಡೆಗೆ ಕಣ್ಣಿಟ್ಟು ಕೆಲಸಮಾಡುತ್ತಾರೆ ಎಂಬುದನ್ನು ಸ್ವಲ್ಪ ಕೇಳು. ಏತ ಅವಲಕ್ಕಿಯನ್ನು ಕುಟ್ಟುತ್ತಲೇ ಇರುತ್ತದೆ. ಹೆಂಗಸು ಒಂದು ಕೈಯಿಂದ ಒರಳಿಗೆ ಬತ್ತವನ್ನು ತಳ್ಳಿಕೊಡುತ್ತಿರುತ್ತಾಳೆ, ಇನ್ನೊಂದು ಕೈಯಿಂದ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಎದೆ ಕೊಡುತ್ತಿರುತ್ತಾಳೆ. ಸಾಲದುದಕ್ಕೆ ಅದೇ ಸಮಯಕ್ಕೆ ಗಿರಾಕಿಗಳು ಬೇರೆ ಬಂದಿರುತ್ತಾರೆ. ಆ ಕಡೆ ಏತ ಬತ್ತವನ್ನು ಕುಟ್ಟುತ್ತಲೇ ಇರುತ್ತದೆ, ಈ ಕಡೆ ಗಿರಾಕಿಗಳೊಡನೆ ವ್ಯಾಪಾರಮಾಡುತ್ತಿರುತ್ತಾಳೆ. ಅವರಿಗೆ ಆಕೆ ಹೇಳುತ್ತಾಳೆ: ‘ಬಾಕಿ ಏನು ಕೊಡಬೇಕಾಗಿದೆಯೊ ಅದನ್ನು ಮೊದಲು ಕೊಟ್ಟುಬಿಟ್ಟು ಬಳಿಕ ಸಾಮಾನು ತೆಗೆದುಕೊಂಡುಹೋಗಿ.’ ಹಾಗೇ ನೋಡು, ಮಗುವಿಗೆ ಎದೆಕೊಡುವುದು, ಒರಳಿಗೆ ಬತ್ತವನ್ನು ತಳ್ಳುವುದು, ಅವಲಕ್ಕಿಯಾದನಂತರ ಅದನ್ನು ಒರಳಿನಿಂದ ಹೊರಕ್ಕೆ ತೆಗೆಯುವುದು, ಗಿರಾಕಿ[illegible]ರಮಾಡುವುದು ಇಷ್ಟನ್ನೂ ಒಟ್ಟಿಗೇ ಮಾಡುತ್ತಾಳೆ. [illegible] ಅಭ್ಯಾಸಯೋಗ ಅಂತ ಹೆಸರು. ಆದರೂ ಏತದ ಮೊನೆ ಎಲ್ಲಿ ಕೈಯನ್ನು ಜಜ್ಜಿಬಿಡುವುದೊ ಎಂದು ಆಕೆ ತನ್ನ ಮನಸ್ಸಿನ ಹದಿನೈದು ಆಣೆ ಭಾಗವನ್ನ ಒರಳ ಕಡೆಗೇ ಇಟ್ಟಿರುತ್ತಾಳೆ. ಉಳಿದುಕೊಂಡಿರುವ ಆ ಒಂದಾಣೆ ಮನಸ್ಸಿನಿಂದ ಮಗುವಿಗೆ ಎದೆಕೊಡುವುದು, ಗಿರಾಕಿಗಳೊಡನೆ ವ್ಯಾಪಾರಮಾಡುವುದು ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಾಳೆ.

ಅದೇ ರೀತಿಯಾಗಿ ಯಾರು ಸಂಸಾರಸ್ಥರೊ ಅವರು ತಮ್ಮ ಮನಸ್ಸಿನ ಹದಿನೈದು ಆಣೆ ಭಾಗವನ್ನ ಭಗವಂತನಿಗೆ ಮೀಸಲಾಗಿ ಇಡಬೇಕು; ಉಳಿದ ಒಂದಾಣೆ ಮನಸ್ಸಿನಿಂದ ಬಾಕಿ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡಿ ಕೊಳ್ಳಬೇಕು. ಹಾಗೆ ಮಾಡದಿದ್ದರೆ ಸರ್ವನಾಶವಾಗುತ್ತದೆ; ಯಮನ ಕೈಗೆ ಸಿಕ್ಕಿಬೀಳಬೇಕಾಗುತ್ತದೆ.

"ಬ್ರಹ್ಮಜ್ಞಾನ ಪಡೆದುಕೊಂಡನಂತರ ಸಂಸಾರದಲ್ಲಿ ಇರಲು ಸಾಧ್ಯ. ಆದರೆ ಮೊದಲು ಬ್ರಹ್ಮಜ್ಞಾನವನ್ನು ದೊರಕಿಸಿಕೊಳ್ಳಬೇಕು. ಸಂಸಾರ ವೆಂಬ ನೀರಿಗೆ ಮನಸ್ಸೆಂಬ ಹಾಲನ್ನು ಸುರಿದರೆ ಎರಡೂ ಬೆರೆತುಕೊಂಡು ಬಿಡುತ್ತವೆ. ಆದ್ದರಿಂದ ಮನಸ್ಸೆಂಬ ಹಾಲಿಗೆ ಹೆಪ್ಪುಹಾಕಿ ಮೊಸರು ಮಾಡಿ ಅದನ್ನು ಏಕಾಂತಸ್ಥಳದಲ್ಲಿ ಕಡೆದು ಬೆಣ್ಣೆ ತೆಗೆದನಂತರ ಬೇಕಾದರೆ ಅದನ್ನು ಸಂಸಾರವೆಂಬ ನೀರಿನಲ್ಲಿ ಇಡಬಹುದು. ಆದ್ದರಿಂದ, ನೀನೇ ನೋಡು, ಸಾಧನೆ ಆವಶ್ಯಕ. ಪ್ರಥಮ ಅವಸ್ಥೆಯಲ್ಲಿ ನಿರ್ಜನವಾಸ ಅತ್ಯಂತ ಆವಶ್ಯಕ. ಅಶ್ವತ್ಥ ವೃಕ್ಷ ಇನ್ನೂ ಸಸಿಯಾಗಿರುವಾಗ ಅದಕ್ಕೆ ಬೇಲಿ ಹಾಕ ಬೇಕು; ಇಲ್ಲದಿದ್ದರೆ ಆಡು ಕುರಿಗಳು ಅದನ್ನು ತಿಂದುಬಿಡುತ್ತವೆ. ಆದರೆ ಅದರ ಬುಡ ದಪ್ಪವಾಯಿತು ಎಂದರೆ ಬೇಲಿಯನ್ನು ತೆಗೆದು ಹಾಕಿಬಿಡ ಬಹುದು. ಅಷ್ಟೇ ಏಕೆ, ಆಗ ಅದಕ್ಕೆ ಆನೆ ತಂದು ಕಟ್ಟಿದರೂ ಏನೂ ಆಗದು.

"ಆದ್ದರಿಂದ ಮೊದಮೊದಲು ಸಾಧಕ ಆಗಾಗ ಏಕಾಂತಸ್ಥಳಕ್ಕೆ ಹೋಗಿ ಇರಬೇಕು. ಸಾಧನೆ ಆವಶ್ಯಕ. ನಿನಗೆ ಅನ್ನ ತಿನ್ನಬೇಕು ಅಂತ ಇಚ್ಛೆಯಿದೆ ಅಂತ ಇಟ್ಟುಕೊ; ಸುಮ್ಮನೆ ಒಂದು ಜಾಗದಲ್ಲಿ ಕುಳಿತು ಕೊಂಡು ನೀನು ಹೇಳಲಾರಂಭಿಸಿದರೆ: 'ಸೌದೆಯಲ್ಲಿ ಬೆಂಕಿಯಿದೆ. ಆ ಬೆಂಕಿಯಿಂದ ಅನ್ನವಾಗುತ್ತದೆ', ಅಷ್ಟಕ್ಕೇ ಅನ್ನ ತಯಾರಾಗಿಹೋಗು ವುದೆ? ಎರಡು ತುಂಡು ಸೌದೆ ತಂದು ಅವನ್ನು ಉಜ್ಜಿದರೆ ಅವುಗಳಿಂದ ಬೆಂಕಿ ಹೊರಬರುತ್ತದೆ.

"ರಾಮರಸವನ್ನು ಕುಡಿದರೆ ಅಮಲೇರುತ್ತದೆ, ಆನಂದವುಂಟಾಗು ತ್ತದೆ. ಅದನ್ನು ಕುಡಿಯಲಿಲ್ಲ ಮಾಡಲಿಲ್ಲ, ಸುಮ್ಮನೆ ಕುಳಿತುಕೊಂಡು 'ರಾಮರಸ, ರಾಮರಸ' ಅನ್ನುತ್ತಿದ್ದರೆ ಅಮಲೇರುವುದೆ ಅಥವಾ ಆನಂದ ಉಂಟಾಗುವುದೆ?

"ಬೇಕಾದಷ್ಟನ್ನು ಪುಸ್ತಕ ಓದಿ ತಿಳಿದುಕೊಳ್ಳಬಹುದು; ಆದರೆ ಭಗವಂತನಲ್ಲಿ ಭಕ್ತಿಯಿಲ್ಲದಿದ್ದರೆ, ಆತನ ಸಾಕ್ಷಾತ್ಕಾರ ಪಡೆಯಬೇಕು

ಎಂಬ ಇಚ್ಛೆಯಿಲ್ಲದಿದ್ದರೆ ಎಲ್ಲವೂ ವ್ಯರ್ಥ. ವಿವೇಕ ವೈರಾಗ್ಯಗಳಿಲ್ಲದ ಬರಿಯ ವಿದ್ವಾಂಸರ ದೃಷ್ಟಿ ಕಾಮಕಾಂಚನಗಳ ಮೇಲೆ ನೆಲಸಿರುತ್ತದೆ. ಹದ್ದು ಬಹಳ ಎತ್ತರಕ್ಕೇನೊ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಹೆಣದ ಗುಂಡಿಗಳ ಕಡೆಗೇ.

"ಯಾವ ವಿದ್ಯೆಯಿಂದ ಭಗವಂತನ ಸಾಕ್ಷಾತ್ಕಾರ ದೊರೆಯುವುದೊ ಅದೇ ನಿಜವಾದ ವಿದ್ಯೆ, ಉಳಿದುದೆಲ್ಲಾ ಯಾವುದಕ್ಕೂ ಬಾರದ್ದು. ಒಳ್ಳೇದು ಭಗವಂತನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?"

ಶ್ರೀಶ: "ಮಹಾಶಯರೆ, ನನಗೆ ಇಷ್ಟು ಮಾತ್ರ ಜ್ಞಾನೋದಯವಾಗಿದೆ, ಒಬ್ಬ ಜ್ಞಾನಮಯಪುರುಷ ಇದಾನೆ ಎಂಬುದಾಗಿ. ನಾವು ಆತನ ಸೃಷ್ಟಿಯ ಕಡೆ ನೋಡಿದ್ದೇ ಆದರೆ, ಆತನ ಜ್ಞಾನದ ಪರಿಚಯ ನಮಗಾಗುತ್ತದೆ. ಇದನ್ನು ನೋಡಿ—ಶೀತಪ್ರದೇಶಗಳಲ್ಲಿ ಮೀನು ಮೊದಲಾದ ಜಲಚರ ಪ್ರಾಣಿಗಳನ್ನು ಬದುಕಿಸಿ ಇಡಲು ಭಗವಂತ ಎಂಥ ಕೌಶಲ ಉಪಯೋಗಿಸಿದಾನೆ ಎಂಬುದನ್ನ! ನೀರು ತಣ್ಣಗಾಗುತ್ತ ಆಗುತ್ತ ಅದು ಸಂಕುಚಿಸುತ್ತದೆ. ಆದರೆ ಒಂದು ಆಶ್ಚರ್ಯವೇನೆಂದರೆ, ನೀರು ಹಿಮುಗಡ್ಡೆಯಾಗುವ ಮುನ್ನ ಅದು ಹಗುರ ಆಗಿ ನೀರಿನ ಪ್ರಮಾಣ ಹೆಚ್ಚಾಗುತ್ತದೆ. ಇದರಿಂದ ಗಡ್ಡೆ ಕಟ್ಟುವ ಚಳಿಯಲ್ಲೂ ಮೀನು ಯಾವ ಆತಂಕವೂ ಇಲ್ಲದೆ ವಾಸಿಸಬಲ್ಲವು. ನೀರಿನ ಇಡೀ ಮೇಲ್ಭಾಗ ಗಡ್ಡೆ ಕಟ್ಟಿಕೊಂಡುಬಿಡುತ್ತದೆ. ಆದರೆ ಒಳಗೆ ಮಾತ್ರ ಎಂದಿನ ನೀರೇ. ವಿಪರೀತವಾದ ತಂಗಾಳಿ ಬೀಸುವಾಗ ನೀರಿನ ಗಡ್ಡೆ ಕಟ್ಟಿದ ಭಾಗ ಆ ಶೈತ್ಯವನ್ನು ತಡೆದುಬಿಡುತ್ತದೆ. ಒಳಗಿನ ನೀರು ಮಾತ್ರ ಬೆಚ್ಚಗೇ ಇರುತ್ತದೆ."

ಶ್ರೀರಾಮಕೃಷ್ಣರು: "ಭಗವಂತನಿದಾನೆ ಎಂಬುದಕ್ಕೆ ಈ ಜಗತ್ತಿನ ಕಡೆ ನೋಡಿದರೇ ಸಾಕು. ಆದರೆ ಆತನ ವಿಷಯವಾಗಿ ಕೇಳುವುದು ಒಂದು, ಆತನನ್ನು ನೋಡುವುದು ಇನ್ನೊಂದು, ಆತನೊಡನೆ ಮಾತುಕತೆಯಾಡುವುದು ಮತ್ತೊಂದು ವಿಧದ ಅನುಭವ. ಕೆಲವರು ಹಾಲಿನ ವಿಷಯವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ, ಮತ್ತೆ ಕೆಲವರು ಅದನ್ನು ಕುಡಿದಿದಾರೆ. ಹಾಲನ್ನು ನೋಡಿದಾಗ ಆನಂದವೇನೊ ಆಗುತ್ತದೆ; ಆದರೆ ಕುಡಿದಾಗ ಬಲವುಂಟಾಗುತ್ತದೆ, ದೇಹ ಹೃಷ್ಟಪುಷ್ಟಗೊಳ್ಳುತ್ತದೆ. ಭಗವಂತನನ್ನು ದರ್ಶನ ಮಾಡಿದಾಗ ಶಾಂತಿಯೇನೊ ದೊರೆಯು

ತ್ತದೆ; ಆದರೆ ಆತನೊಡನೆ ಮಾತುಕತೆಯಾಡಿದರೆ ಆನಂದವುಂಟಾಗುತ್ತದೆ, ಬಲವೂ ಅಧಿಕವಾಗುತ್ತದೆ.''

ಶ್ರೀಶ: ''ಆತನನ್ನು ಪ್ರಾರ್ಥಿಸಲು ಸಮಯ ದೊರೆಯುತ್ತಿಲ್ಲ.''

ಶ್ರೀರಾಮಕೃಷ್ಣರು ನಗುತ್ತ: ''ಅದೇನೊ ನಿಜ. ಸಮಯವಾಗದೆ ಇತ್ತು ಎಂದರೆ ಏನೂ ದೊರೆಯದು. ಒಂದು ಮಗು ತನ್ನ ತಾಯಿಗೆ ಹೇಳಿತು: 'ದೇಹಬಾಧೆಯುಂಟಾದಾಗ ನನ್ನನ್ನು ಎಬ್ಬಿಸು.' ತಾಯಿ ಉತ್ತರವಿತ್ತಳು: 'ಮಗು, ದೇಹಬಾಧೆಯೇ ನಿನ್ನನ್ನು ಎಬ್ಬಿಸಿಬಿಡುತ್ತದೆ. ನಾನೇನು ಆ ಕಷ್ಟ ತೆಗೆದುಕೊಳ್ಳಬೇಕಾಗಿಲ್ಲ.'

''ಯಾರಿಗೆ ಏನು ಕೊಡಬೇಕು ಎಂಬುದನ್ನ ಭಗವಂತ ಮೊದಲೇ ಇತ್ಯರ್ಥಮಾಡಿಕೊಂಡುಬಿಟ್ಟಿದಾನೆ. ಒಬ್ಬಳು ಅತ್ತೆ ತನ್ನ ಸೊಸೆಯರಿಗೆ ಒಂದು ಬಟ್ಟಲಿನಿಂದ ಅಳೆದು ಅಳೆದು ಅನ್ನ ಬಡಿಸುತ್ತಿದ್ದಳು. ಆದರೆ ಅದು ಅವರಿಗೆ ಸಾಕಾಗುತ್ತಿರಲಿಲ್ಲ. ಒಂದು ದಿನ ಆ ಬಟ್ಟಲು ಒಡೆದುಹೋಯಿತು. ಅದನ್ನು ನೋಡಿ ಸೊಸೆಯರಿಗೆಲ್ಲಾ ಬಹಳ ಆನಂದವಾಯಿತು. ಆದರೆ ಅತ್ತೆ ಅವರಿಗೆ ಹೇಳಿದಳು: 'ನೀವು ಕುಣಿದು ನಲಿಯಬಹುದು. ಆದರೆ ನೋಡಿ ನನ್ನ ಕೈಯಳತೆ ಇದ್ದೇ ಇದೆ.'

(ಶ್ರೀಶನಿಗೆ) ''ಇನ್ನೇನು ತಾನೆ ಸಾಧ್ಯ? ಆತನ ಪಾದಪದ್ಮಗಳಲ್ಲಿ ನಿನ್ನ ಸರ್ವಸ್ವವನ್ನೂ ಸಮರ್ಪಿಸಿಬಿಡು. ಆತನಿಗೆ ನಿನ್ನ ವಕಾಲತ್ತು ವಹಿಸಿಬಿಡು. ಆತನಿಗೆ ಯಾವುದು ಶ್ರೇಯಸ್ಕರವಾದ್ದು ಅಂತ ತೋರುತ್ತೊ ಅದನ್ನು ಆತ ನಿನಗೆ ಕರುಣಿಸಲಿ. ದೊಡ್ಡ ಮನುಷ್ಯರ ಮೇಲೆ ಭಾರ ಹಾಕಿದರೆ ಅವರು ಎಂದಿಗೂ ನಿನಗೆ ಕೆಟ್ಟದ್ದನ್ನು ಮಾಡುವುದಿಲ್ಲ.

''ಸಾಧನೆ ಆವಶ್ಯಕವಾದ್ದೆ; ಆದರೆ ಎರಡು ವಿಧದ ಸಾಧಕರಿದಾರೆ. ಒಬ್ಬರದು ಕೋತಿ ಮರಿಯ ಸ್ವಭಾವ. ಇನ್ನೊಬ್ಬರದು ಬೆಕ್ಕಿನ ಮರಿಯ ಸ್ವಭಾವ. ಕೋತಿ ಮರಿ ಹಾಗೂ ಹೀಗೂ ಮಾಡಿ ಬಹಳ ಪ್ರಯಾಸದಿಂದ ತಾಯಿಯನ್ನು ಅಪ್ಪಿ ಹಿಡಿದುಕೊಂಡಿರುತ್ತದೆ. ಅದೇ ರೀತಿಯಾಗಿ ಕೆಲಕೆಲ ಸಾಧಕರು ಭಾವಿಸುತ್ತಾರೆ, ತಾವು ಇಷ್ಟೊಂದು ಸಲ ಜಪ ಮಾಡಬೇಕು, ಇಷ್ಟೊಂದು ಕಾಲ ಧ್ಯಾನ ಮಾಡಬೇಕು, ಇಷ್ಟೊಂದು ಬಗೆಯ ತಪಸ್ಸು ಮಾಡಬೇಕು, ಆಗ ಮಾತ್ರವೇ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. ಈ ವಿಧದ ಸಾಧಕ ಸ್ವಪ್ರಯತ್ನದಿಂದ ಭಗವಂತನ ಸಾಕ್ಷಾತ್ಕಾರವನ್ನು ಗಳಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದರೆ ಬೆಕ್ಕಿನ ಮರಿ ತಾನೇ

ತನ್ನ ತಾಯನ್ನು ಹಿಡಿದುಕೊಳ್ಳಲಾರದು. ಅದು ಒಂದು ಕಡೆ ಸುಮ್ಮನೆ ಬಿದ್ದುಕೊಂಡು ಕೇವಲ 'ಮಿಯಾವ್, ಮಿಯಾವ್' ಎಂದು ಕೂಗುತ್ತದೆ. ಅದು ತನ್ನ ಭಾರವನ್ನು ತಾಯಿಯ ಮೇಲೆ ಹಾಕಿಬಿಟ್ಟಿರುತ್ತದೆ. ತಾಯಿ ಬೆಕ್ಕು ಅದನ್ನು ಕೆಲವು ವೇಳೆ ಹಾಸಿಗೆ ಮೇಲೆ, ಇನ್ನು ಕೆಲವು ವೇಳೆ ಮಾಳಿಗೆ ಮೇಲೆ ಸೌದೆ ಹೊರೆ ಹಿಂದೆ ಇಡುತ್ತದೆ. ಅದು ಮರಿಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಅಲ್ಲಿಗೆ ಇಲ್ಲಿಗೆ ತೆಗೆದುಕೊಂಡು ಹೋಗಿ ಇಡುತ್ತದೆ. ತಾಯಿಯನ್ನು ಹೇಗೆ ಅಪ್ಪಿ ಹಿಡಿದುಕೊಳ್ಳುವುದು ಎಂಬುದು ಅದಕ್ಕೆ ಗೊತ್ತಿಲ್ಲ. ಅದೇ ರೀತಿಯಾಗಿ ಕೆಲಕೆಲ ಸಾಧಕರಿಗೆ ಇಷ್ಟೊಂದು ಸಲ ಜಪ ಮಾಡಬೇಕು, ಇಷ್ಟು ಕಾಲ ಧ್ಯಾನ ಮಾಡಬೇಕು ಇತ್ಯಾದಿಯಾಗಿ ಗುಣಾಕಾರ ಭಾಗಾಕಾರ ಹಾಕಿ ಸಾಧನೆ ಮಾಡಲಾಗುವುದಿಲ್ಲ. ಅವರು ಕೇವಲ ವ್ಯಾಕುಲಚಿತ್ತದಿಂದ ಅಳುತ್ತ ಅಳುತ್ತ ಭಗವಂತನನ್ನು ಕರೆಯುತ್ತಾರೆ. ಆತ ಅವರ ಅಳು ಕೇಳಿ ಸುಮ್ಮನೆ ಇರಲಾರ. ಬಂದು ದರ್ಶನವೀಯುತ್ತಾನೆ."

ಊಟಕ್ಕೆ ಸಮಯ ಆಯಿತು. ಈಶಾನ ಪರಮಹಂಸರಿಗೆ ಮತ್ತು ಭಕ್ತರಿಗೆ ಊಟಕ್ಕೆ ಬಡಿಸಲು ಸಿದ್ಧನಾಗುತ್ತಿದಾನೆ. ಪರಮಹಂಸರು ನಗುಮುಖರಾಗಿ ಕೊಠಡಿಯಲ್ಲಿ ಅಡ್ಡಾಡುತ್ತಿದಾರೆ. ಆಗಾಗ ಗಾಯಕನೊಡನೆ ಒಂದೆರಡು ಮಾತು ಆಡುತ್ತಿದಾರೆ.

ಗಾಯಕ: "ಭಗವಂತನೇ 'ಕರಣ', 'ಕಾರಣ' ಎರಡೂ. ದುರ್ಯೋಧನ ಶ್ರೀಕೃಷ್ಣನಿಗೆ ಹೇಳಿದ: 'ಹೇ ಹೃಷೀಕೇಶ, ನೀನು ನನ್ನ ಹೃದಯದಲ್ಲಿ ಇದ್ದುಕೊಂಡು ಯಾವ ರೀತಿಯಾಗಿ ಪ್ರೇರೇಪಿಸುತ್ತೀಯೊ ಹಾಗೆ ಮಾಡುತ್ತೇನೆ.'"

ಶ್ರೀರಾಮಕೃಷ್ಣರು ನಗುತ್ತ: "ಹೌದು, ನಿಜ. ಆತನೇ ಎಲ್ಲವನ್ನೂ ನಮ್ಮ ಕೈಯಿಂದ ಮಾಡಿಸುತ್ತಾನೆ. ಆತನೇ ನಿಜವಾಗಿ ಕರ್ತ. ಮನುಷ್ಯ ಆತನ ಯಂತ್ರ ಮಾತ್ರ. ಆದರೆ ಇದೂ ನಿಜ, ಕರ್ಮಫಲವೆಂಬುದು ನಿಸ್ಸಂದೇಹವಾಗಿ ಇದೆ. ಖಾರದ ಮೆಣಸಿನಕಾಯಿ ತಿಂದರೆ ಹೊಟ್ಟೆ ಉರಿದೇ ಉರಿಯುತ್ತದೆ. ತಿಂದರೆ ಹೊಟ್ಟೆಯುರಿಯಲೆಂದೇ ಅದನ್ನು ಭಗವಂತ ಆ ರೀತಿಯಾಗಿ ಸೃಷ್ಟಿಸಿದಾನೆ. ಪಾಪ ಮಾಡಿದ್ದೇ ಆದರೆ ಅದರ ಫಲವನ್ನು ಅನುಭವಿಸಲೇಬೇಕು. ಯಾರಿಗೆ ಸಿದ್ಧಿ ದೊರೆತಿದೆಯೋ, ಭಗವಂತನ ದರ್ಶನ ದೊರೆತಿದೆಯೊ ಆತ ಎಂದಿಗೂ ಪಾಪಕಾರ್ಯಗಳನ್ನು

ಮಾಡಲಾರ. ನಿಪುಣ ನರ್ತಕ ಎಂದಿಗೂ ತಪ್ಪು ಹೆಜ್ಜೆ ಇಡುವುದಿಲ್ಲ. ಸಾಧನೆ ಮಾಡಿದ ಕಂಠದಿಂದ 'ಸ, ರಿ, ಗ, ಮ, ಪ, ಧ, ನಿ' ಸ್ವರಗಳು ತಪ್ಪಿಲ್ಲದೇ ಹೊರಡುತ್ತವೆ.''

ಎಲೆ ಹಾಕಿದನಂತರ ಪರಮಹಂಸರು ಭಕ್ತರೊಡನೆ ಊಟಕ್ಕೆ ಕುಳಿತು ತೃಪ್ತಿಕರವಾಗಿ ಊಟಮಾಡಿದರು. ಈಶಾನ ಅನೇಕ ವಿಧದ ಭಕ್ಷ್ಯಭೋಜ್ಯಗಳನ್ನು ಮಾಡಿಸಿದ್ದ.

ಊಟವಾದನಂತರ ಪರಮಹಂಸರು ಈಶಾನನ ಬೈಠಕ್‌ಖಾನೆಯಲ್ಲಿ ಕುಳಿತಿದಾರೆ. ಘಂಟೆ ಅಪರಾಹ್ನ ಮೂರು. ಅವರ ಹತ್ತಿರ ಮಾಸ್ಟರ್, ಶ್ರೀಶ ಕುಳಿತಿದಾರೆ. ಈಗ ಪರಮಹಂಸರು ಶ್ರೀಶನೊಡನೆ ಮಾತುಕತೆಯಾಡಲು ಮತ್ತೆ ಆರಂಭಿಸಿದಾರೆ.

ಶ್ರೀರಾಮಕೃಷ್ಣರು: ''ಭಗವಂತನ ಸಂಬಂಧವಾಗಿ ನಿನ್ನ ಭಾವವೇನು? 'ಸೋಽಹಮ್' ಭಾವವೊ ಅಥವಾ 'ಸೇವ್ಯ-ಸೇವಕ' ಭಾವವೊ? ಸಂಸಾರಿಗಳಿಗೆ ಸೇವ್ಯ-ಸೇವಕ ಭಾವವೇ ಒಳ್ಳೆಯದು. ಸಂಸಾರಿ ಈ ಪ್ರಪಂಚದ ಎಲ್ಲಾ ಕೆಲಸಕಾರ್ಯಗಳನ್ನೂ ಮಾಡಿಕೊಂಡು ಹೋಗುತ್ತಿರುವಾಗ ಆತನಿಗೆ 'ನಾನೇ ಅವನು' ಎಂಬ ಭಾವ ಹೇಗೆ ತಾನೆ ಉಂಟಾದೀತು? ಯಾರು 'ನಾನೇ ಅವನು' ಎಂದು ಹೇಳುತ್ತಾನೊ, ಆತನ ದೃಷ್ಟಿಯಿಂದ ಈ ಜಗತ್ತು ಸ್ವಪ್ನವಿದ್ದ ಹಾಗೆ. ಆತನ ಸ್ವಂತ ದೇಹ ಮನಸ್ಸು ಎಲ್ಲವೂ ಆತನಿಗೆ ಸ್ವಪ್ನವಿದ್ದ ಹಾಗೆ. ಆದ್ದರಿಂದ ಆತ ಈ ಪ್ರಾಪಂಚಿಕ ಕೆಲಸಕಾರ್ಯಗಳನ್ನ ಮಾಡಲಾರ. ಇದಕ್ಕಾಗೇ ಗೃಹಸ್ಥನಿಗೆ ಸೇವಕಭಾವ, ದಾಸಭಾವ ಬಹಳ ಒಳ್ಳೆಯದು.

''ಹನುಮಂತನದು ದಾಸಭಾವ. ಆತ ರಾಮನಿಗೆ ಹೇಳಿದ: 'ಹೇ ರಾಮ, ಕೆಲವು ವೇಳೆ ನಾನು ಭಾವಿಸುತ್ತೇನೆ, ನೀನು ಪೂರ್ಣ ನಾನು ಅಂಶ. ಇನ್ನು ಕೆಲವು ವೇಳೆ ಭಾವಿಸುತ್ತೇನೆ, ನೀನು ಪ್ರಭು ನಾನು ದಾಸ. ಆದರೆ ನನಗೆ ತತ್ತ್ವಜ್ಞಾನವುಂಟಾದಾಗ ಕಂಡುಬರುತ್ತದೆ, ನೀನೇ ನಾನು, ನಾನೇ ನೀನು.'

''ತತ್ತ್ವಜ್ಞಾನವುಂಟಾದಾಗ 'ಸೋಽಹಮ್' ಭಾವ ಸಾಧ್ಯ; ಆದರೆ ಅದು ಬಹಳ ದೂರದ ಮಾತು.''

ಶ್ರೀಶ: ''ಹೌದು, ನಿಜ. ದಾಸಭಾವವನ್ನು ಅನುಸರಿಸಿದರೆ ಮನುಷ್ಯ ನಿಶ್ಚಿಂತನಾಗಿರಬಹುದು. ಎಲ್ಲವೂ ಭಗವಂತನ ಮೇಲೆ ನಿಂತಿದೆ.

ನಾಯಿಗೆ ಒಡೆಯನ ಮೇಲೆ ಬಹಳ ಭಕ್ತಿ. ಆದ್ದರಿಂದ ಎಲ್ಲಾ ಭಾರವನ್ನೂ ಒಡೆಯನ ಮೇಲೆ ಹಾಕಿ ನಿಶ್ಚಿಂತೆಯಿಂದ ಇದ್ದುಬಿಡುತ್ತದೆ.''

ಶ್ರೀರಾಮಕೃಷ್ಣರು: ''ಒಳ್ಳೇದು, ನಿನಗೆ ಯಾವುದು ಹಿಡಿಸುತ್ತದೆ—ಸಾಕಾರವೊ, ನಿರಾಕಾರವೊ? ಆದರೆ ಸತ್ಯಾಂಶವೇನೆಂದರೆ, ಯಾರು ನಿರಾಕಾರನೊ ಆತನೇ ಸಾಕಾರ ಕೂಡ. ಭಕ್ತರಿಗೆ ತನ್ನ ಸಾಕಾರ ರೂಪವನ್ನು ತೋರಿಸುತ್ತಾನೆ. ಉದಾಹರಣೆಗೆ ಅನಂತ ಜಲರಾಶಿಯನ್ನ—ಮಹಾಸಾಗರವನ್ನ ತೆಗೆದುಕೊ. ಅದಕ್ಕೆ ದಡ-ಗಿಡ ಎಂಬುದೇ ಇಲ್ಲ. ಅಂಥ ಜಲರಾಶಿಯ ಕೆಲಕೆಲ ಭಾಗದಲ್ಲಿ ನೀರು ಗಡ್ಡೆ ಕಟ್ಟಿದೆ. ಅಧಿಕವಾದ ಶೈತ್ಯ ನೀರನ್ನು ಗಡ್ಡೆ ಕಟ್ಟಿಸಿಬಿಟ್ಟಿದೆ. ಅದೇ ರೀತಿಯಾಗಿ ಭಕ್ತಿ ಎಂಬ ಶೈತ್ಯದಿಂದ ಆ ಅನಂತ ಬ್ರಹ್ಮ ಸಾಕಾರವನ್ನು ತಾಳುತ್ತಾನೆ. ಸೂರ್ಯ ಉದಯವಾದೊಡನೆ ಯಾವ ರೀತಿಯಾಗಿ ಹಿಮಗಡ್ಡೆ ಕರಗಿ ಎಂದಿನ ನೀರಾಗುವುದೊ, ಅದೇ ರೀತಿಯಾಗಿ ಜ್ಞಾನಮಾರ್ಗದ—ವಿಚಾರಮಾರ್ಗದ—ಮೂಲಕ ಮುಂದುವರಿದರೆ ಸಾಕಾರ ರೂಪವನ್ನು ನೋಡಲಾಗುವುದಿಲ್ಲ. ಆಗ ಎಲ್ಲವೂ ನಿರಾಕಾರವಾಗಿ ಕಾಣುತ್ತದೆ. ಜ್ಞಾನ ಸೂರ್ಯ ಉದಯಿಸಿಬಿಟ್ಟಿದ್ದರಿಂದ ಸಾಕಾರ ಹಿಮಗಡ್ಡೆ ಕರಗಿಹೋಗಿಬಿಟ್ಟಿತು. ಆದರೆ ಇದನ್ನು ಮನಸ್ಸಿಗೆ ಚೆನ್ನಾಗಿ ಒತ್ತು, ನಿರಾಕಾರ ಯಾರದೊ ಆತನದೇ ಸಾಕಾರ ಎಂಬುದನ್ನ.''

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಪರಮಹಂಸರು ದಕ್ಷಿಣೇಶ್ವರಕ್ಕೆ ಹೊರಡಲು ಸಿದ್ಧರಾಗಿದಾರೆ. ಈಗ ಅವರು ಈಶಾನನ ಬೈಠಕ್ ಖಾನೆಯ ದಕ್ಷಿಣ ಕೈಸಾಲೆಯಲ್ಲಿ ನಿಂತು ಆತನೊಡನೆ ಮಾತಾಡುತ್ತಿದಾರೆ. ಅಲ್ಲಿದ್ದ ಒಬ್ಬ ವ್ಯಕ್ತಿ ಹೇಳಿದ: ''ಭಗವನ್ನಾಮೋಚ್ಚಾರಣೆ ಎಲ್ಲಾ ಸಮಯದಲ್ಲೂ ಫಲ ಕೊಡುತ್ತದೆ ಎಂದು ಹೇಳಲಾಗುವುದಿಲ್ಲ.'' ಈಶಾನ ಉತ್ತರವಿತ್ತ: ''ಏನು ನೀನು ಹೇಳುವುದು! ಅಶ್ವತ್ಥದ ಬೀಜ ಬಹಳ ಚಿಕ್ಕದೇನೊ ನಿಜ, ಆದರೆ ಅದರಲ್ಲಿ ದೊಡ್ಡ ಮರವಾಗಿ ಬೆಳೆಯುವ ಶಕ್ತಿ ಅಡಗಿದೆ. ಅದು ಬೆಳೆದು ದೊಡ್ಡದಾಗಲು ಸ್ವಲ್ಪ ಹೆಚ್ಚು ಸಮಯವೇನೊ ಬೇಕಾಗಬಹುದು.''

ಶ್ರೀರಾಮಕೃಷ್ಣರು: ''ಹೌದು, ಹೌದು. ಫಲ ದೊರಕಬೇಕಾದರೆ ಸ್ವಲ್ಪ ಹೆಚ್ಚು ಸಮಯವೇ ಬೇಕು.''

ಈಶಾನನ ಮನೆಯ ಪಕ್ಕದ ಮನೆಯೇ ಆತನ ಮಾವನ ಮನೆ.

ಎರಡು ಮನೆಗೂ ಮಧ್ಯೆ ಬಾಗಿಲಿದೆ. ಪರಮಹಂಸರು ಈಗ ಗಾಡಿಗೆ ಹತ್ತಲು ಈಶಾನನ ಮಾವನ ಮನೆಯ ಬಾಗಿಲಿನಲ್ಲಿ ನಿಂತಿದಾರೆ. ಈಶಾನ ಮತ್ತು ಆತನ ಬಂಧು ಬಾಂಧವರು ಅವರನ್ನು ಬೀಳ್ಕೊಡಲು ಅವರ ಸುತ್ತ ನಿಂತಿದಾರೆ. ಪರಮಹಂಸರು ಈಶಾನನಿಗೆ ಹೇಳುತ್ತಿದಾರೆ: "ನೀನು ಸಂಸಾರದಲ್ಲಿದೀಯೆ—ಕೆಸರು ಮೀನಿನ ಹಾಗೆ. ಅದು ಕೊಳದ ಕೆಸರಿನಲ್ಲಿ ವಾಸಿಸುತ್ತದೆ, ಆದರೂ ಅದರ ಶರೀರಕ್ಕೆ ಮಾತ್ರ ಕೆಸರು ಅಂಟದು.

"ಮಾಯೆಯ ಈ ಸಂಸಾರದಲ್ಲಿ ವಿದ್ಯೆ, ಅವಿದ್ಯೆ ಎರಡೂ ಇವೆ. ಯಾರಿಗೆ ಪರಮಹಂಸ ಅಂತ ಹೆಸರು? ಯಾರು ಹಂಸದ ಹಾಗೆ, ಹಾಲು ನೀರು ಒಟ್ಟಿಗೆ ಬೆರೆತುಕೊಂಡಿದ್ದರೂ, ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ತ್ಯಜಿಸಿಬಿಡುವನೊ; ಇರುವೆಯ ಹಾಗೆ, ಸಕ್ಕರೆ ಮರಳು ಎರಡು ಬೆರೆತು ಕೊಂಡಿದ್ದರೂ, ಸಕ್ಕರೆಯನ್ನು ಬೇರ್ಪಡಿಸಿಕೊಂಡು ಮರಳನ್ನು ಬಿಟ್ಟುಬಿಡು ವನೊ ಆತನೇ ಪರಮಹಂಸ."

ಮುಚ್ಚಂಜೆಯಾಗಿಬಿಟ್ಟದೆ. ಈಗ ಪರಮಹಂಸರು ರಾಮನ ಮನೆಗೆ ಬಂದಿದಾರೆ. ಇಲ್ಲಿಂದ ದಕ್ಷಿಣೇಶ್ವರಕ್ಕೆ ಹೊರಡುತ್ತಾರೆ. ಪರಮಹಂಸರನ್ನ ಬೈಠಕ್ ಖಾನೆಗೆ ಕರೆದುಕೊಂಡುಹೋಗಲಾಯಿತು. ಅಲ್ಲಿ ಅವರು ಮಹೇಂದ್ರಗೋಸ್ವಾಮಿಯೊಡನೆ ಮಾತುಕತೆಯಾಡುತ್ತಿದಾರೆ. ಗೋಸ್ವಾ-ಮಿಯ ಮನೆ ರಾಮನ ಮನೆಯ ಹತ್ತಿರವೇ ಇದೆ. ಆತನನ್ನು ಕಂಡರೆ ಪರಮಹಂಸರಿಗೆ ಬಹಳ ಪ್ರೀತಿ.

ಶ್ರೀರಾಮಕೃಷ್ಣರು: "ವೈಷ್ಣವರು, ಶಾಕ್ತರು ಎಲ್ಲರೂ ಕಟ್ಟಕಡೆ ಯಲ್ಲಿ ಮುಟ್ಟುವ ಜಾಗ ಒಂದೇ ಒಂದು; ಆದರೆ ಮಾರ್ಗ ಮಾತ್ರ ಬೇರೆ ಬೇರೆ. ನಿಜವಾದ ವೈಷ್ಣವರು ಶಾಕ್ತರನ್ನು ನಿಂದಿಸುವುದಿಲ್ಲ."

ಗೋಸ್ವಾಮಿ ನಗುತ್ತ: "ಹರ ಪಾರ್ವತಿ ನಮ್ಮ ತಂದೆ ತಾಯಿ."

ಶ್ರೀರಾಮಕೃಷ್ಣರು ತಮಗೆ ಗೊತ್ತಿದ್ದ ಒಂದು ಡಜನ್ ಇಂಗ್ಲಿಷ್ ಪದಗಳ ಕೋಶವನ್ನು ಉಪಯೋಗಿಸಿ ನಗುತ್ತ ಹೇಳಿದರು: "ಥ್ಯಾಂಕ್ ಯೂ!" ಬಳಿಕ ಹೇಳಿದರು: "ಹೌದು, ತಂದೆ ತಾಯಿ!"

ಗೋಸ್ವಾಮಿ: "ಇದೂ ಅಲ್ಲದೆ ಯಾರನ್ನೇ ಆಗಲಿ, ವಿಶೇಷತಃ ಭಗವದ್ಭಕ್ತನನ್ನು, ನಿಂದಿಸುವುದು ದೊಡ್ಡ ಅಪರಾಧವೇ. ಎಲ್ಲಾ ಅಪರಾಧ ಗಳಿಗೂ ಕ್ಷಮೆಯುಂಟು, ಭಗವದ್ಭಕ್ತನನ್ನು ನಿಂದಿಸಿದ ಅಪರಾಧಕ್ಕೆ ಕ್ಷಮೆ ಯೆಂಬುದೇ ಇಲ್ಲ."

ಶ್ರೀರಾಮಕೃಷ್ಣರು: "ಅಪರಾಧವನ್ನು ಎಲ್ಲರೂ ಮಾಡಿದಂತಾಗುವುದಿಲ್ಲ. ಈಶ್ವರಕೋಟಿಗಳು ಅಪರಾಧಮಾಡಿದಂತಾಗುವುದಿಲ್ಲ. ಉದಾಹರಣೆಗೆ ಚೈತನ್ಯದೇವನಂಥ ಅವತಾರಪುರುಷರು.

"ಮಗು ತಂದೆಯ ಕೈ ಹಿಡಿದುಕೊಂಡು ಗದ್ದೆ ತೆವರಿಯ ಮೇಲೆ ನಡೆಯಲಾರಂಭಿಸಿದರೆ ಹಳ್ಳಕ್ಕೆ ಬೀಳುವ ಸಂಭವವಿರುತ್ತದೆ. ಆದರೆ ತಂದೆ ಮಗುವಿನ ಕೈಯನ್ನು ಹಿಡಿದುಕೊಂಡಿದ್ದರೆ ಅದು ಎಂದಿಗೂ ಹಳ್ಳಕ್ಕೆ ಬೀಳುವ ಹಾಗಿಲ್ಲ.

"ಇದನ್ನು ಕೇಳು. ನಾನು ಭಗವತಿಯನ್ನು ಶುದ್ಧಭಕ್ತಿಗಾಗಿ ಪ್ರಾರ್ಥಿಸಿದೆ. ಆಕೆಯನ್ನು ಪ್ರಾರ್ಥಿಸಿದೆ: 'ಇಗೋ ತೆಗೆದುಕೊ ನಿನ್ನ ಧರ್ಮವನ್ನ, ಇಗೋ ತೆಗೆದುಕೊ ನಿನ್ನ ಅಧರ್ಮವನ್ನ; ನನಗೆ ಶುದ್ಧಭಕ್ತಿಯನ್ನು ಕೊಡು. ಇಗೋ ತೆಗೆದುಕೊ ನಿನ್ನ ಶುಚಿಯನ್ನ, ಇಗೋ ತೆಗೆದುಕೊ ನಿನ್ನ ಅಶುಚಿಯನ್ನ; ನನಗೆ ಶುದ್ಧಭಕ್ತಿಯನ್ನು ಕರುಣಿಸು. ತಾಯೆ, ಇಗೋ ತೆಗೆದುಕೊ ನಿನ್ನ ಪಾಪವನ್ನ, ಇಗೋ ತೆಗೆದುಕೊ ನಿನ್ನ ಪುಣ್ಯವನ್ನ; ನನಗೆ ಶುದ್ಧಭಕ್ತಿಯನ್ನು ಕೃಪೆಮಾಡು.'"

ಗೋಸ್ವಾಮಿ: "ಇದು ಸರಿ."

ಶ್ರೀರಾಮಕೃಷ್ಣರು: "ಎಲ್ಲಾ ಮತಗಳನ್ನೂ ಗೌರವಿಸು. ಆದರೆ ನೋಡು ನಿಷ್ಠಾಭಕ್ತಿ ಎಂಬುದೊಂದಿದೆ. ಎಲ್ಲಾ ಮತಗಳನ್ನು ಗೌರವಿಸಬೇಕಾದ್ದೇನೋ ಸರಿ, ಆದರೆ ಅವುಗಳಲ್ಲಿ ಒಂದನ್ನು ಮಾತ್ರ ತನ್ನ ಇಡೀ ಹೃದಯದಿಂದ ಪ್ರೀತಿಸುವುದಕ್ಕೆ ನಿಷ್ಠೆ ಅಂತ ಹೆಸರು.

"ರಾಮರೂಪ ವಿನಾ ಬೇರೆ ಯಾವ ರೂಪವೂ ಹನುಮಂತನಿಗೆ ಹಿಡಿಸುತ್ತಿರಲಿಲ್ಲ. ಗೋಪಿಯರಿಗೆ ಬೃಂದಾವನದ ಗೋಪಾಲಕೃಷ್ಣನ ಮೇಲೆ ಅಂಥ ನಿಷ್ಠೆ, ದ್ವಾರಕೆಯ ಪೇಟ ಸುತ್ತಿದ ಕೃಷ್ಣನನ್ನು ನೋಡಲು ಅವರು ಇಚ್ಛೆಪಡಲಿಲ್ಲ.

"ಹೆಂಗಸು ತನ್ನ ಭಾವಮೈದುನರಿಗೆ ಕೈಕಾಲು ತೊಳೆಯಲು ನೀರು ಕೊಡುವುದು, ಮಣೆ ಹಾಕಿ ಊಟಕ್ಕೆ ಬಡಿಸುವುದು ಇವೇ ಮೊದಲಾದ ಉಪಚಾರಗಳನ್ನು ಮಾಡುತ್ತಾಳೆ. ಆದರೆ ಆಕೆ ತನ್ನ ಪತಿಗೆ ಯಾವ ರೀತಿಯಾಗಿ ಸೇವೆ ಮಾಡುತ್ತಾಳೊ ಹಾಗೆ ಬೇರೆ ಯಾರಿಗೂ ಮಾಡುವುದಿಲ್ಲ. ಆಕೆಯ ಸಂಬಂಧ ಪತಿಯೊಡನೆ ಪ್ರತ್ಯೇಕವಾದ್ದು."

ರಾಮ ಪರಮಹಂಸರಿಗೆ ಸ್ವಲ್ಪ ಉಪಾಹಾರ ಮಾಡಿಸಿದ. ಪರಮ-

ಹಂಸರು ದಕ್ಷಿಣೇಶ್ವರಕ್ಕೆ ಹೊರಡಲು ಈಗ ಸಿದ್ಧರಾಗಿದಾರೆ. ಅವರು ತಮ್ಮ ಶಾಲು ಹೊದ್ದುಕೊಂಡು, ಟೋಪಿ ಹಾಕಿಕೊಂಡು ಮಾಸ್ಟರ್ ಮೊದಲಾದವರೊಡನೆ ಗಾಡಿಗೆ ಹತ್ತಿದರು. ರಾಮು ಮತ್ತು ಆತನ ಸ್ನೇಹಿತರು ಪರಮಹಂಸರಿಗೆ ಪ್ರಣಾಮಮಾಡಿ ಅವರನ್ನು ಬೀಳ್ಕೊಟ್ಟರು.

೨೯ನೆ ಡಿಸೆಂಬರ್ ೧೮೮೩, ಮಾರ್ಗಶಿರ ಅಮಾವಾಸ್ಯೆ, ಶನಿವಾರ.

ಘಂಟೆ ಅಪರಾಹ್ನ ಒಂದು. ಪರಮಹಂಸರು ಕಾಳೀಘಟ್ಟಕ್ಕೆ ಹೋಗಲು ಗಾಡಿಯನ್ನು ಹತ್ತಿದರು. ಅಧರಸೇನನ ಮನೆಗೆ ಮೊದಲು ಹೋಗಿ ಆತನನ್ನು ಕರೆದುಕೊಂಡು ಕಾಳೀಘಟ್ಟಕ್ಕೆ ಹೋಗುತ್ತಾರೆ. ಗಾಡಿ ಪರಮಹಂಸರ ಕೊಠಡಿಯ ಉತ್ತರವರಾಂಡದ ಹತ್ತಿರ ನಿಂತಿದ್ದಾಗ ಮಾಸ್ಟರ್ ಅವರ ಹತ್ತಿರಕ್ಕೆ ಹೋಗಿ ಕೇಳಿದ: "ನಾನೂ ನಿಮ್ಮೊಡನೆ ಬರಲೆ?"

ಶ್ರೀರಾಮಕೃಷ್ಣರು: "ಏಕೆ?"

ಮಾಸ್ಟರ್: "ನಾನು ನಮ್ಮ ಮನೆಗೆ ಹೋಗಿಬರಬೇಕು ಅಂತ ಇದೇನೆ."

ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತು ಯೋಚಿಸಿ ಹೇಳಿದರು: "ಮನೆಗೆ ಹೋಗಬೇಕಾಗಿದೆಯೇನು? ಏಕೆ? ಇಲ್ಲಿ ಆನಂದದಿಂದ ಇದೀಯಲ್ಲ."

ಮಾಸ್ಟರಿಗೆ ಕೆಲವು ಘಂಟೆಗಳ ಮಟ್ಟಿಗೆ ಮನೆಗೆ ಹೋಗಿ ಮನೆಯವರನ್ನು ನೋಡಿಬರಬೇಕೆಂಬ ಇಚ್ಛೆ. ಆದರೆ ಪರಮಹಂಸರಿಗೆ ಇದು ಒಪ್ಪಿಗೆಯಾಗಲಿಲ್ಲ.

೩೦ನೆ ಡಿಸೆಂಬರ್ ೧೮೮೩, ಪುಷ್ಯ ಶುಕ್ಲ ಪಾಡ್ಯಮಿ, ಭಾನುವಾರ.

ಘಂಟೆ ಅಪರಾಹ್ನ ಮೂರು. ಮಾಸ್ಟರ್ ಮರಗಳ ನೆಳಲಿನಲ್ಲಿ ಒಬ್ಬನೆ ಅಡ್ಡಾಡುತ್ತಿದಾನೆ. ಒಬ್ಬ ಭಕ್ತ ಬಂದು ಆತನಿಗೆ ತಿಳಿಸಿದ ಪರಮಹಂಸರು ಆತನನ್ನು ಕರೆಯುತ್ತಿದಾರೆ ಎಂದು. ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದು ನೋಡುತ್ತಾನೆ, ಅನೇಕ ಮಂದಿ ಭಕ್ತರು ನೆರೆದಿದಾರೆ. ಮಾಸ್ಟರ್ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತುಕೊಳ್ಳುತ್ತಿದಾನೆ.

ಕಲ್ಕತ್ತದಿಂದ ರಾಮು, ಕೇದಾರ ಮೊದಲಾದ ಭಕ್ತರು ಬಂದಿದಾರೆ. ಕೆಲವು ದಿನಗಳ ಹಿಂದೆ ಪರಮಹಂಸರು ರಾಮುನ ತೋಟದ ಹತ್ತಿರ ಸಂಧಿಸಿದ ವೇದಾಂತವಾದಿ ಸಾಧುವನ್ನು ರಾಮು ಕರೆದುಕೊಂಡುಬಂದಿದಾನೆ. ಆ

ಸಂದರ್ಭದಲ್ಲಿ ಪರಮಹಂಸರು ರಾಮನಿಗೆ ತಿಳಿಸಿದ್ದರು ಆ ಸಾಧುವನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡುಬರುವಂತೆ.

ಆ ಸಾಧು ಪರಮಹಂಸರೊಡನೆ ಚಿಕ್ಕ ಮಂಚದ ಮೇಲೆ ಕುಳಿತು ಕೊಂಡಿದಾರೆ. ಇಬ್ಬರೂ ಹಿಂದೂಸ್ಥಾನಿಯಲ್ಲಿ ಬಹಳ ಆನಂದದಿಂದ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು : "ಇವೆಲ್ಲಾ ನಿಮಗೆ ಹೇಗೆ ಕಾಣುತ್ತವೆ?"

ಸಾಧು: "ಎಲ್ಲಾ ಸ್ವಪ್ನವಿದ್ದ ಹಾಗೆ."

ಶ್ರೀರಾಮಕೃಷ್ಣರು: "ಬ್ರಹ್ಮ ಸತ್ಯ, ಜಗತ್ ಮಿಥ್ಯಾ ತಾನೆ? ಒಳ್ಳೇದು ಬ್ರಹ್ಮನ ಸ್ವರೂಪವೇನು?"

ಸಾಧು: "ಶಬ್ದವೇ ಬ್ರಹ್ಮ. ಅನಾಹತ ಶಬ್ದವೇ ಬ್ರಹ್ಮ."

ಶ್ರೀರಾಮಕೃಷ್ಣರು: "ಆದರೆ ಶಬ್ದದ ಪ್ರತಿಪಾದ್ಯನೊಬ್ಬ ಇದಾನೆ ಅಲ್ಲವೇ?"

ಸಾಧು: "ಆತನೇ ವಾಚ್ಯ, ಆತನೇ ವಾಚಕ."

ಈ ಮಾತನ್ನು ಕೇಳುಕೇಳುತ್ತ ಇದ್ದಹಾಗೇ ಪರಮಹಂಸರು ಸಮಾಧಿಸ್ಥರಾಗಿಬಿಟ್ಟರು. ಚಿತ್ರದ ಗೊಂಬೆಯ ಹಾಗೆ ಕುಳಿತಿದಾರೆ. ಸಾಧು ಮತ್ತು ಭಕ್ತರು ಆಶ್ಚರ್ಯಚಕಿತರಾಗಿ ಪರಮಹಂಸರ ಸಮಾಧಿಯ ಅವಸ್ಥೆ ಯನ್ನು ನೋಡುತ್ತಾ ಕುಳಿತಿದಾರೆ. ಕೇದಾರ ಆ ಸಾಧುವಿಗೆ ಹೇಳಿದ: "ಅವರ ಕಡೆ ನೋಡಿ. ಇದಕ್ಕೇ ಸಮಾಧಿ ಅಂತ ಕರೆಯುತ್ತಾರೆ."

ಸಾಧು ಪುಸ್ತಕಗಳಲ್ಲಿ ಸಮಾಧಿ ಅಂದರೆ ಏನು ಎಂಬುದನ್ನು ಓದಿದ್ದರು; ಎಂದೂ ಕಂಡಿರಲಿಲ್ಲ. ಪರಮಹಂಸರು ಕ್ರಮಕ್ರಮೇಣ ಪ್ರಕೃತಿಸ್ಥ ರಾಗುತ್ತಿದಾರೆ. ಅವರು ಈಗ ಭಗವತಿಗೆ ಹೇಳುತ್ತಿದಾರೆ: "ತಾಯೆ, ಎಂದಿನ ಸ್ಥಿತಿಯಲ್ಲಿರಲು ನನಗೆ ಇಚ್ಛೆ. ನನ್ನನ್ನು ಬಾಹ್ಯಜ್ಞಾನಶೂನ್ಯ ನನ್ನಾಗಿ ಮಾಡಬೇಡ. ಸಾಧುವಿನೊಡನೆ ಸಚ್ಚಿದಾನಂದನ ಸಂಬಂಧವಾಗಿ ಮಾತುಕತೆಯಾಡಬೇಕೆಂದು ಇಚ್ಛೆ. ಸಚ್ಚಿದಾನಂದನ ಮಾತುಕತೆ ಯಾಡುತ್ತ ಆನಂದಪಡಬೇಕೆಂಬ ಇಚ್ಛೆ ನನಗಿದೆ."

ಸಾಧು ಪರಮಹಂಸರ ಈ ಮಾತುಗಳನ್ನು ಕೇಳಿ ಮತ್ತು ಅವರ ಅವಸ್ಥೆಯನ್ನು ನೋಡಿ ಆಶ್ಚರ್ಯಚಕಿತರಾಗಿಬಿಟ್ಟಿದಾರೆ. ಪರಮಹಂಸರು ಈಗ ಅವರಿಗೆ ಹೇಳುತ್ತಿದಾರೆ: "ಸದ್ಯಕ್ಕೆ ನಿಮ್ಮ 'ಸೋಽಹಮ್' ಎಂಬು

ದನ್ನ ಒಂದು ಕಡೆ ಕಟ್ಟಿಟ್ಟುಬಿಡಿ. ಈಗ ಆನಂದಪಡಲು 'ನಾನು', 'ನೀನು' ಎಂಬುವುಗಳ ಕಡೆ ಮನಸ್ಸಿಡೋಣ."

ಈಗ ಪರಮಹಂಸರು ಕೇದಾರ, ರಾಮ ಮಾಸ್ಟರ್ ಇವರೇ ಮೊದಲಾದ ಭಕ್ತರೊಡನೆ ಪಂಚವಟಿಯಲ್ಲಿ ನಡೆಯುತ್ತಿದಾರೆ.

ಶ್ರೀರಾಮಕೃಷ್ಣರು ಕೇದಾರನಿಗೆ ನಗುತ್ತ: "ಸಾಧುವಿನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು ?"

ಕೇದಾರ: "ಬರೀ ಒಣ ಜ್ಞಾನ. ಒಲೆ ಮೇಲೇನೊ ತಪ್ಪಲೆ ಇಟ್ಟಿದಾರೆ, ಆದರೆ ಇನ್ನೂ ಅಕ್ಕಿ ಹಾಕಿಲ್ಲ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಆದರೆ ಅವರು ಎಲ್ಲವನ್ನೂ ತ್ಯಜಿಸಿದಾರೆ. ಯಾರು ಸಂಸಾರವನ್ನು ತ್ಯಜಿಸಿಬಿಟ್ಟಿದಾರೊ ಅವರು ಆಗಲೇ ಬಹಳವಾಗಿ ಮುಂದುವರಿದ ಹಾಗೇ. ಸಾಧುವೇನೊ ಪ್ರವರ್ತಕರು. ಭಗವಂತನ ಸಾಕ್ಷಾತ್ಕಾರ ಪಡೆಯದೆ ಇತ್ತು ಎಂದರೆ ಏನನ್ನು ಪಡೆದ ಹಾಗೂ ಆಗುವುದಿಲ್ಲ. ಯಾವಾಗ ಆತನ ಪ್ರೇಮದಿಂದ ಮತ್ತವಾಗಲು ಸಾಧ್ಯವಾಗುವುದೊ ಆಗ ಇನ್ನು ಏನೂ ಬೇಕಾಗದು. ಬಳಿಕ—

ಅಂತರಂಗದಲಿ ಶ್ರೀ ಘನಶ್ಯಾಮೆಯ
ಆದರಿಸೆಲೆ ಮನವೇ.
ನಮ್ಮಿಬ್ಬರ ಹೊರತಿನ್ನಾರೂ ತಿಳಿಯದ
ರೀತಿಯೊಳವಳೆಡೆ ಸಾಗುವೆವೇ !"

ಕೇದಾರ ಪರಮಹಂಸರ ಭಾವಕ್ಕನುಗುಣವಾಗಿ ಒಂದು ಹಾಡನ್ನು ಹಾಡಿದ:

ಎಂತೊರೆಯಲಿ ಸಖಿ ನನ್ನೆದೆಯೊಳಗನು ?
ಬಾಯಿಗೆ ಇಕ್ಕಿದೊಲಿದೆ ಬೀಗ ! . . . (ಉ. ೧೨)

ಈಗ ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿ ಬಂದಿದಾರೆ. ಘಂಟೆ ಅಪರಾಹ್ನ ನಾಲ್ಕು. ಕಾಳೀದೇವಾಲಯದ ಬಾಗಿಲನ್ನು ತೆಗೆದಿದಾರೆ. ಪರಮಹಂಸರು ಸಾಧುವಿನೊಡನೆ ಕಾಳೀದೇವಾಲಯಕ್ಕೆ ಹೋಗುತ್ತಿದಾರೆ. ಮಾಸ್ಟರೂ ಅವರನ್ನು ಹಿಂಬಾಲಿಸುತ್ತಿದಾನೆ. ಪರಮಹಂಸರು ಗರ್ಭಗುಡಿಗೆ ಪ್ರವೇಶಮಾಡಿ ಭಕ್ತಿಯಿಂದ ಭಗವತಿಗೆ ಪ್ರಣಾಮಮಾಡುತ್ತಿದಾರೆ.

ಸಾಧುವೂ ಕೈ ಮುಗಿದು ತಲೆಯನ್ನು ಬಗ್ಗಿಸಿ ಮತ್ತೆ ಮತ್ತೆ ಪ್ರಣಾಮ ಮಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು: "ಕಾಳಿಯ ವಿಷಯವಾಗಿ ನಿಮ್ಮ ಅಭಿಪ್ರಾಯ ವೇನು?"

ಸಾಧು ಭಕ್ತಿಯುತವಾಗಿ: "ಕಾಳಿ ಪ್ರಧಾನೆ."

ಶ್ರೀರಾಮಕೃಷ್ಣರು: "ಕಾಳಿಗು ಬ್ರಹ್ಮನಿಗು ಅಭೇದ. ಏನು, ಅಲ್ಲವೆ?"

ಸಾಧು: "ಎಲ್ಲಿಯವರೆಗೆ ಮನಸ್ಸು ಬಹಿರ್ಮುಖವಾಗಿರುವುದೊ ಅಲ್ಲಿಯವರೆಗೆ ಕಾಳಿಯನ್ನು ಒಪ್ಪಬೇಕಾಗುತ್ತದೆ. ಎಲ್ಲಿಯವರೆಗೆ ಈ ಹೊರಗಿನ ಪ್ರಪಂಚ ಕಣ್ಣಿಗೆ ಬೀಳುತ್ತದೊ, ಒಳ್ಳೆಯದು ಕೆಟ್ಟದ್ದು ಎಂಬ ವಿವೇಚನೆ ಇರುವುದೊ ಅಲ್ಲಿಯವರೆಗೆ ಒಳ್ಳೆಯದನ್ನು ಸ್ವೀಕರಿಸಿ ಕೆಟ್ಟದ್ದನ್ನು ತ್ಯಜಿಸಬೇಕು. ನಿಸ್ಸಂದೇಹವಾಗಿ ಈ ನಾಮರೂಪಾತ್ಮಕ ಪ್ರಪಂಚ ಮಿಥ್ಯೆಯಾದುದೆ; ಆದರೆ ಎಲ್ಲಿಯವರೆಗೆ ಮನಸ್ಸು ಬಹಿರ್ಮುಖವಾಗಿರುವುದೊ ಅಲ್ಲಿಯವರೆಗೆ ಹೆಂಗಸನ್ನು ತ್ಯಜಿಸಬೇಕು. ಇದು ಒಳ್ಳೆಯದು ಅದು ಕೆಟ್ಟದ್ದು ಎಂಬುದು ಸಾಧಕನಿಗೆ ಮಾತ್ರ; ಇಲ್ಲದಿದ್ದರೆ ಆತ ಭ್ರಷ್ಟಾಚಾರಿಯಾಗುತ್ತಾನೆ."

ಪರಮಹಂಸರು ಸಾಧುವಿನೊಡನೆ ಈ ರೀತಿಯಾಗಿ ಮಾತುಕತೆಯಾಡುತ್ತ ತಮ್ಮ ಕೊಠಡಿಗೆ ಹಿಂದಿರುಗಿಬಂದರು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡಿದೆ ತಾನೆ, ಸಾಧು ಕಾಳೀ ದೇವಾಲಯದಲ್ಲಿ ಪ್ರಣಾಮಮಾಡಿದುದನ್ನ?"

ಮಾಸ್ಟರ್: "ಹೌದು, ನೋಡಿದೆ."

೩೧ನೆ ಡಿಸೆಂಬರ್ ೧೮೮೩, ಪುಷ್ಯ ಶುಕ್ಲ ಬಿದಿಗೆ, ಸೋಮವಾರ.

ಅಪರಾಹ್ನ ನಾಲ್ಕು ಘಂಟೆ ಸಮಯದಲ್ಲಿ ಪರಮಹಂಸರು ತಮ್ಮ ಕೊಠಡಿಯಲ್ಲಿ ಮಾಸ್ಟರ್, ರಾಖಾಲ, ಲಾಟು, ಹರೀಶ, ಬಲರಾಮ ಇವರೇ ಮೊದಲಾದ ಭಕ್ತರೊಡನೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರ್, ಬಲರಾಮರನ್ನು ಸಂಬೋಧಿಸಿ ಹೇಳುತ್ತಿದಾರೆ: "ಹಲಧಾರಿಯದು ಜ್ಞಾನಿಯ ಭಾವ. ಆತ ಹಗಲೂ ಇರುಳೂ ಅಧ್ಯಾತ್ಮರಾಮಾಯಣ, ಉಪನಿಷತ್ತು, ಈ ವಿಧದ ಇನ್ನೂ ಅನೇಕ ಪುಸ್ತಕಗಳನ್ನು ಓದುತ್ತಿದ್ದ. ಸಾಕಾರದ ಮಾತು ಎತ್ತಿತು ಎಂದರೆ, ಮುಖ

ತಿರುಗಿಸಿಕೊಳ್ಳುತ್ತಿದ್ದ. ಒಮ್ಮೆ ನಾನು ದರಿದ್ರನಾರಾಯಣರು ತಮ್ಮ ಎಲೆಯಲ್ಲಿ ಬಿಟ್ಟಿದ್ದ ಅನ್ನವನ್ನು ತಿಂದೆ. ಅದನ್ನು ನೋಡಿ ಹಲಧಾರಿ ನನ್ನನ್ನು ಜರೆದ: 'ಹೀಗೆ ಮಾಡಿದರೆ, ನಿಮ್ಮ ಮಕ್ಕಳನ್ನು ನೀವು ಮದುವೆ ಮಾಡುವ ಬಗೆ ಹೇಗೆ?' ನಾನು ಬಿಸಿಬಿಸಿಯಾಗಿ ತಾಕಿಸಿದೆ: 'ಎಲೋ ನೀಚ! ನಾನು ಮಕ್ಕಳು ಮರಿಗಳನ್ನ ಹುಟ್ಟಿಸಿಕೊಳ್ಳುತ್ತೇನೆ ಅಂತ ತಿಳಿದು ಕೊಂಡಿದೀಯೇನು? ಗೀತೆ, ವೇದಾಂತ ಓದುತ್ತಿರುವ ನಿನ್ನ ಬಾಯಿಗೆ ಬೆಂಕಿ ಬೀಳ!' ಹಾಗೇ ನೋಡಿ! ಒಂದು ಕಡೆ ನೋಡಿದರೆ ಹೇಳುತ್ತಿದ್ದ ಜಗತ್ತು ಮಿಥ್ಯೆ ಎಂದು, ಮತ್ತೆ ವಿಷ್ಣುದೇವಾಲಯಕ್ಕೆ ಹೋಗಿ ಮೂಗು ಹಿಡಿದು ಕುಳಿತು ಧ್ಯಾನಮಾಡುತ್ತಿದ್ದ."

ಸಾಯಂಕಾಲವಾದನಂತರ ಬಲರಾಮನೇ ಮೊದಲಾದ ಭಕ್ತರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿಹೊರಟುಹೋದರು. ಪರಮಹಂಸರು ತಮ್ಮ ಕೊಠಡಿಯಲ್ಲಿ ಭಗವತಿಯ ಧ್ಯಾನದಲ್ಲಿ ಮಗ್ನರಾಗಿದಾರೆ. ಸ್ವಲ್ಪ ಹೊತ್ತಾದನಂತರ ದೇವಾಲಯಗಳಿಂದ ಸಾಯಂಮಂಗಳಾರತಿಯ ಸುಮಧುರ ಧ್ವನಿ ಕೇಳಿಬರಲಾರಂಭಿಸಿತು.

ಘಂಟೆ ರಾತ್ರಿ ಎಂಟು. ಪರಮಹಂಸರು ಭಾವೋನ್ಮತ್ತರಾಗಿ ತಮ್ಮ ಸುಮಧುರ ಕಂಠದಿಂದ ಭಗವತಿಯೊಡನೆ ಮಾತುಕತೆಯಾಡುತ್ತಿದಾರೆ. ಮಾಸ್ಟರ್ ನೆಲದ ಮೇಲೆ ಕುಳಿತಿದಾನೆ. "ಹರಿಃ ಓಂ! ಹರಿಃ ಓಂ! ಓಂ!" ಎಂಬುದಾಗಿ ಉಚ್ಚರಿಸಿದನಂತರ ಪರಮಹಂಸರು ಭಗವತಿಗೆ ಹೇಳುತ್ತಿದಾರೆ: "ಹೇ ತಾಯೆ, ಬ್ರಹ್ಮಜ್ಞಾನವನ್ನು ಕೊಟ್ಟು ನನ್ನನ್ನು ಬಾಹ್ಯಜ್ಞಾನಶೂನ್ಯನನ್ನಾಗಿ ಮಾಡಿಬಿಡಬೇಡ. ತಾಯೆ, ನನಗೆ ಬ್ರಹ್ಮ-ಜ್ಞಾನ ಬೇಕಾಗಿಲ್ಲ. ಆನಂದಪಡಲು, ವಿಲಾಸಿಸಲು ನನಗೆ ಇಚ್ಛೆಯಿದೆ." ಮತ್ತೆ ಹೇಳುತ್ತಿದಾರೆ: "ತಾಯೆ, ನನಗೆ ವೇದಾಂತ ಗೊತ್ತಿಲ್ಲ; ಅದನ್ನು ತಿಳಿದುಕೊಳ್ಳಲು ಇಚ್ಛೆಯೂ ಇಲ್ಲ, ತಾಯೆ. ತಾಯೆ, ನೀನು ದೊರೆತು ಬಿಟ್ಟಿದ್ದೇ ಆದರೆ, ವೇದ ವೇದಾಂತಗಳು ಎಷ್ಟೋ ಹಿಂದೆ ಬಿದ್ದುಕೊಂಡಿ ರುತ್ತವೆ." ಬಳಿಕ ಹೇಳುತ್ತಿದಾರೆ: "ಓ ಕೃಷ್ಣ, ನಾನು ನಿನಗೆ ಹೇಳು ತ್ತೇನೆ: 'ಎಲೋ ಮಗು, ಇದನ್ನು ತಿನ್ನೋ! ಅದನ್ನು ತೆಗೆದುಕೊಳ್ಳೊ!' ಓ ಕೃಷ್ಣ, ನಾನು ನಿನಗೆ ಹೇಳುತ್ತೇನೆ: 'ಎಲೋ ಮಗೂ, ನೀನು ನನಗಾಗಿ ದೇಹಧಾರಣೆಮಾಡಿಕೊಂಡು ಬಂದಿದೀಯೆ.'"

೨ನೆ ಜನವರಿ ೧೮೮೪, ಪುಷ್ಯ ಶುಕ್ಲ ಚತುರ್ಥಿ, ಬುಧವಾರ.

ರಾಖಾಲ, ಲಾಟು, ಹರೀಶ, ರಾಮಲಾಲ, ಮಾಸ್ಟರ್ ಪರಮಹಂಸರೊಡನೆ ದಕ್ಷಿಣೇಶ್ವರದಲ್ಲಿ ವಾಸವಾಗಿದಾರೆ. ಸುಮಾರು ಅಪರಾಹ್ನ ಮೂರು ಘಂಟೆಯ ಸಮಯದಲ್ಲಿ ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಕುಳಿತು ಒಬ್ಬ ತಾಂತ್ರಿಕ ಭಕ್ತನೊಡನೆ ಮಾತನಾಡುತ್ತಿರುವುದು ಮಾಸ್ಟರ ಕಣ್ಣಿಗೆ ಬಿತ್ತು. ಆತ ಕಾಷಾಯವಸ್ತ್ರಧಾರಿಯಾಗಿದ್ದ. ಪರಮಹಂಸರು ಮಾಸ್ಟರಿಗೆ ಹೇಳಿದರು ತಮ್ಮ ಹತ್ತಿರ ಕುಳಿತುಕೊಳ್ಳುವಂತೆ. ಬಹುಶಃ ಪರಮಹಂಸರು ತಾಂತ್ರಿಕ ಭಕ್ತನೊಡನೆ ಮಾತುಕತೆಯಾಡುತ್ತ ಮಾಸ್ಟರಿಗೂ ತಿಳಿವಳಿಕೆ ಕೊಡಬೇಕು ಅಂತ ಇದಾರೆ ಅಂತ ಕಾಣುತ್ತೆ. ಮಹಿಮಚಕ್ರವರ್ತಿ ಆ ತಾಂತ್ರಿಕ ಭಕ್ತನನ್ನು ಪರಮಹಂಸರ ಹತ್ತಿರಕ್ಕೆ ಕಳುಹಿಸಿದ್ದ.

ಶ್ರೀರಾಮಕೃಷ್ಣರು ತಾಂತ್ರಿಕ ಭಕ್ತನಿಗೆ: "ಮನುಷ್ಯನ ತಲೆಬುರುಡೆಯನ್ನು ಪಾತ್ರೆಯನ್ನಾಗಿ ಮಾಡಿಕೊಂಡು ಅದರಿಂದ ಮದ್ಯ ಕುಡಿಯುವುದು ತಾಂತ್ರಿಕ ಸಾಧನೆಯ ಒಂದು ಅಂಗ. ಆ ಮದ್ಯವನ್ನ 'ಕಾರಣವಾರಿ' ಅಂತ ಕರೆಯುತ್ತಾರೆ, ಅಲ್ಲವೆ?"

ತಾಂತ್ರಿಕ: "ಹೌದು."

ಶ್ರೀರಾಮಕೃಷ್ಣರು: "ಆ ಪಾತ್ರೆಯಿಂದ ಹನ್ನೊಂದು ಸಲ, ಅಲ್ಲವೆ?"

ತಾಂತ್ರಿಕ: "ಇಲ್ಲ, ಕೇವಲ ಮೂರು ತೊಲ ಪ್ರಮಾಣದಷ್ಟು ಮಾತ್ರ—ಶವಸಾಧನೆಗಾಗಿ."

ಶ್ರೀರಾಮಕೃಷ್ಣರು: "ನಾನು ಮದ್ಯವನ್ನು ಮುಟ್ಟುವ ಹಾಗೂ ಇಲ್ಲ."

ತಾಂತ್ರಿಕ: "ನಿಮ್ಮದು ಸಹಜಾನಂದ. ಅದು ದೊರೆತುದೇ ಆದರೆ ಬೇರೆ ಏನೂ ಬೇಕಾಗದು."

ಶ್ರೀರಾಮಕೃಷ್ಣರು: "ಇಲ್ಲಿ ನೋಡು, ನನಗೆ ಜಪ, ತಪ ಹಿಡಿಸುತ್ತಿಲ್ಲ. ಆದರೆ ಸರ್ವದಾ ಸ್ಮರಣ ಮನನ ನಡೆಯುತ್ತಿದೆ. ಒಳ್ಳೇದು, ಷಟ್ಚಕ್ರ ಅಂತ ಹೇಳುತ್ತಾರಲ್ಲ ಅದೇನದು?"

ತಾಂತ್ರಿಕ: "ಅವು ವಿವಿಧ ತೀರ್ಥಸ್ಥಾನಗಳಿದ್ದಂತೆ. ಪ್ರತಿಯೊಂದು ಚಕ್ರದಲ್ಲೂ ಶಿವಶಕ್ತಿಯರ ವಾಸ. ಅವರನ್ನು ಸ್ಥೂಲಕಣ್ಣಿನಿಂದ ನೋಡ

ಲಾಗುವುದಿಲ್ಲ. ಶರೀರವನ್ನ ಹೋಳುಮಾಡಿ ಅವರನ್ನ ಹೊರಕ್ಕೆ ತೆಗೆಯ ಲಾಗುವುದಿಲ್ಲ.''

ಮಾಸ್ಟರ್ ಎಲ್ಲವನ್ನೂ ನಿಶ್ಶಬ್ದನಾಗಿ ಕುಳಿತು ಕೇಳುತ್ತಿದಾನೆ. ಆ ತಾಂತ್ರಿಕ ಭಕ್ತನ ಕಡೆ ನೋಡಿ ಆತನನ್ನು ಕೇಳುತ್ತಿದಾರೆ: ''ಒಳ್ಳೇದು, ಬೀಜಮಂತ್ರೋಪದೇಶವನ್ನು ಪಡೆಯದೆ ಸಿದ್ಧಿಯನ್ನು ಪಡೆಯಲಾಗು ವುದೆ ?''

ತಾಂತ್ರಿಕ: ''ಪಡೆಯಬಹುದು ಶ್ರದ್ಧೆಯಿದ್ದರೆ — ಗುರುವಾಕ್ಯದಲ್ಲಿ ಶ್ರದ್ಧೆಯಿದ್ದರೆ.''

ಶ್ರೀರಾಮಕೃಷ್ಣರು ಮಾಸ್ಟರ ಕಡೆಗೆ ತಿರುಗಿ ಆತನ ಗಮನವನ್ನು ಸೆಳೆದು ಹೇಳುತ್ತಿದಾರೆ: ''ಶ್ರದ್ಧೆ !''

ಆ ತಾಂತ್ರಿಕ ಭಕ್ತ ಹೊರಟುಹೋದನಂತರ ಬ್ರಾಹ್ಮಸಮಾಜದ ಅನುಯಾಯಿ ಜಯಗೋಪಾಲಸೇನ ಕೊಠಡಿಯನ್ನು ಪ್ರವೇಶಿಸಿದ. ಪರಮಹಂಸರು ಆತನೊಡನೆ ಮಾತುಕತೆಯಾಡಲು ಆರಂಭಿಸಿದಾರೆ.

ಶ್ರೀರಾಮಕೃಷ್ಣರು ಜಯಗೋಪಾಲಸೇನನಿಗೆ: ''ಯಾರನ್ನೇ ಆಗಲಿ, ಯಾವ ಮತವನ್ನೇ ಆಗಲಿ ದ್ವೇಷಿಸಕೂಡದು. ನಿರಾಕಾರವಾದಿ, ಸಾಕಾರ ವಾದಿ ಎಲ್ಲರೂ ಆ ಒಂದೇ ಭಗವಂತನ ಕಡೆಗೆ ಹೋಗುತ್ತಿದಾರೆ. ಜ್ಞಾನಿ, ಯೋಗಿ, ಭಕ್ತ—ಎಲ್ಲರೂ ಆತನಿಗಾಗೇ ಹುಡುಕುತ್ತಿದಾರೆ. ಜ್ಞಾನಮಾರ್ಗಿ ಗಳು ಆತನನ್ನು 'ಬ್ರಹ್ಮ' ಎಂದು, ಯೋಗಿಗಳು 'ಆತ್ಮ ಅಥವಾ ಪರ ಮಾತ್ಮ' ಎಂದು, ಭಕ್ತರು 'ಭಗವಾನ್' ಎಂದು ಕರೆಯುತ್ತಾರೆ. ಮತ್ತೆ ಜನ ಹೇಳುತ್ತಾರೆ, ನಿತ್ಯ ಭಗವಂತನಿದಾನೆ, ನಿತ್ಯ ದಾಸರಿದಾರೆ ಎಂದು.''

ಜಯಗೋಪಾಲ: ''ಎಲ್ಲಾ ಮಾರ್ಗಗಳೂ ಸತ್ಯ ಎಂದು ಅರಿಯುವ ಬಗೆ ಹೇಗೆ?''

ಶ್ರೀರಾಮಕೃಷ್ಣರು: ''ಯಾವುದಾದರೂ ಒಂದು ಮಾರ್ಗವನ್ನು ಸರಿಯಾಗಿ ಅನುಸರಿಸಿ ಮುಂದುವರಿದುದೇ ಆದರೆ ಭಗವಂತನನ್ನು ಮುಟ್ಟ ಬಹುದು. ಬಳಿಕ ಎಲ್ಲಾ ಮಾರ್ಗಗಳ ಸುದ್ದಿ ಸಮಾಚಾರಗಳನ್ನೂ ತಿಳಿದು ಕೊಳ್ಳಬಹುದು. ಒಮ್ಮೆ ಹೇಗೊ ಮಾಡಿ ಚಾವಣಿಯ ಮೇಲಕ್ಕೆ ಹತ್ತಿ ಬಿಟ್ಟದ್ದೇ ಆದರೆ ಬಳಿಕ ಬೇಕಾದರೆ ಮರದ ಹಂತಗಳ ಮೂಲಕ ಅಥವಾ ಬಂಬಿನ ಮೂಲಕ ಅಥವಾ ಹಗ್ಗದ ಮೂಲಕ ಕೆಳಕ್ಕೆ ಇಳಿದುಬಂದುಬಿಡ ಬಹುದು.

"ಭಗವಂತನ ಕೃಪೆಯೊಂದೊದಗಿತು ಎಂದರೆ, ಭಕ್ತ ಎಲ್ಲವನ್ನೂ ಅರಿತುಕೊಳ್ಳಬಲ್ಲ. ಆತನ ಸಾಕ್ಷಾತ್ಕಾರ ಒಮ್ಮೆ ದೊರೆಯಿತು ಎಂದರೆ, ಎಲ್ಲವನ್ನೂ ಅರಿತುಕೊಳ್ಳಲು ಸಾಧ್ಯ. ಒಮ್ಮೆ ಹೇಗಾದರೂ ಮಾಡಿ ಮನೆಯ ಯಜಮಾನನನ್ನು ಸಂಧಿಸಿ ಆತನ ಸ್ನೇಹ ಬೆಳಸಿಬಿಟ್ಟೆದ್ದೇ ಆದರೆ ಆತನೇ ಹೇಳಿಬಿಡುತ್ತಾನೆ ತನಗೆಷ್ಟು ತೋಟತುಡಿಕೆಗಳಿವೆ, ಕೆರೆಕಟ್ಟೆಗಳಿವೆ, ಲೇವಾದೇವಿ ಪತ್ರಗಳಿವೆ ಎಂಬುದನ್ನ."

ಜಯಗೋಪಾಲ: "ಏನು ಮಾಡಿದರೆ ಭಗವಂತನ ಕೃಪೆಯೊದಗುತ್ತದೆ?"

ಶ್ರೀರಾಮಕೃಷ್ಣರು: "ಭಗವಂತನ ನಾಮಗುಣಕೀರ್ತನೆಯನ್ನು ಸರ್ವದಾ ಮಾಡುತ್ತಿರಬೇಕು. ವಿಷಯಚಿಂತನೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ತ್ಯಜಿಸಬೇಕು. ನೀನು ಬೆಳೆ ಬೆಳೆಯಲು ಬಹಳ ಶ್ರಮವಹಿಸಿ ಗದ್ದೆಗೆ ನೀರು ತರಬಹುದು, ಆದರೆ ತೆವರಿಯಲ್ಲಿರುವ ಬಿಲಗಳ ಮೂಲಕ ನೀರೆಲ್ಲಾ ಹೊರಕ್ಕೆ ಹರಿದುಹೋಗಿಬಿಡುತ್ತದೆ ಅಂತ ಇಟ್ಟುಕೊ. ಆಗ ನಾಲೆ ತೋಡಿ ನೀರು ತಂದುದೆಲ್ಲಾ ವೃಥಾ ಪರಿಶ್ರಮಪಟ್ಟಂತಾಗುತ್ತದೆ.

"ಚಿತ್ತಶುದ್ಧಿಯಾಯಿತು ಎಂದರೆ, ವಿಷಯಾಸಕ್ತಿ ಹೊರಟುಹೋಯಿತು ಎಂದರೆ ವ್ಯಾಕುಲತೆಯುಂಟಾಗುತ್ತದೆ. ಆಗ ಮಾತ್ರವೇ ನಿನ್ನ ಪ್ರಾರ್ಥನೆ ಭಗವಂತನನ್ನು ಮುಟ್ಟುತ್ತದೆ. ಟೆಲಿಗ್ರಾಫ್ ತಂತಿಯಲ್ಲಿ ಬೇರೆ ವಸ್ತು ಬೆರೆತುಕೊಂಡಿದ್ದರೆ ಅಥವಾ ಅದು ಕಿತ್ತುಹೋಗಿದ್ದರೆ ವಾರ್ತೆಯನ್ನು ಅದು ಹೊತ್ತುಕೊಂಡುಹೋಗಲಾರದು.

"ನಾನು ವ್ಯಾಕುಲನಾಗಿ ಒಬ್ಬನೇ ಏಕಾಂಗಿಯಾಗಿ ಅಳುತ್ತಿದ್ದೆ: 'ಹೇ ಭಗವಂತ, ಎಲ್ಲಿದೀಯೋ?' ಅಂತ. ಹಾಗೇ ಅಳುತ್ತ ಅಳುತ್ತ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತಿದ್ದೆ. ನನ್ನ ಮನಸ್ಸು ಆಗ ಮಹಾವಾಯುವಿನಲ್ಲಿ ಲೀನವಾಗಿಬಿಡುತ್ತಿತ್ತು.

"ಯೋಗ ಯಾವುದರಿಂದ ದೊರೆಯುತ್ತದೆ? ಒಮ್ಮೆಗೇ ವಿಷಯಾ-ಸಕ್ತಿಯನ್ನು ತ್ಯಾಗಮಾಡುವುದರಿಂದ. ಯಾವ ನ್ಯೂನತೆಯೂ ಇಲ್ಲದ ಟೆಲಿಗ್ರಾಫ್ ತಂತಿಯ ಹಾಗೆ ಮನಸ್ಸು ಕಳಂಕರಹಿತವಾಗಿಯೂ ಶುದ್ಧವಾಗಿಯೂ ಇರಬೇಕು.

"ಮನಸ್ಸಿನಲ್ಲಿ ಯಾವ ಕಾಮನೆಯನ್ನೇ ಆಗಲಿ, ವಾಸನೆಯನ್ನೇ ಆಗಲಿ ಇಟ್ಟುಕೊಂಡಿರಕೂಡದು. ಕಾಮನೆ, ವಾಸನೆ ಇತ್ತು ಎಂದರೆ

ಅದಕ್ಕೆ ಸಕಾಮ ಭಕ್ತಿ ಅಂತ ಹೆಸರು. ನಿಷ್ಕಾಮ ಭಕ್ತಿಗೆ ಅಹೇತುಕ ಭಕ್ತಿ ಅಂತ ಹೆಸರು. ನೀನು ನನ್ನನ್ನು ಪ್ರೀತಿಸು ಅಥವಾ ಬಿಡು ನಾನು ಮಾತ್ರ ನಿನ್ನನ್ನು ಪ್ರೀತಿಸುತ್ತೇನೆ. ಇದಕ್ಕೇ ಅಹೇತುಕ ಭಕ್ತಿ ಅಂತ ಹೆಸರು.

"ಮುಖ್ಯವಾದುದೇನೆಂದರೆ ಭಗವಂತನನ್ನು ಪ್ರೀತಿಸಬೇಕು. ಅಗಾಧ ಪ್ರೀತಿಯುಂಟಾಯಿತು ಎಂದರೆ ಆತನ ದರ್ಶನ ದೊರೆಯುತ್ತದೆ. ಸತಿಗೆ ಪತಿಯಲ್ಲಿರುವ ಪ್ರೀತಿ, ತಾಯಿಗೆ ಮಗುವಿನಲ್ಲಿರುವ ಪ್ರೀತಿ, ವಿಷಯಾಸಕ್ತನಿಗೆ ವಿಷಯವಸ್ತುಗಳಲ್ಲಿರುವ ಪ್ರೀತಿ—ಈ ಮೂರು ಪ್ರೀತಿಗಳನ್ನೂ ಒಟ್ಟುಗೂಡಿಸಿ ಭಗವಂತನ ಕಡೆ ತಿರುಗಿಸುವುದಾದರೆ ಆಗ ಆತನ ದರ್ಶನ ದೊರೆಯುತ್ತದೆ."

ಜಯಗೋಪಾಲ ವಿಷಯಾಸಕ್ತ. ಅದಕ್ಕಾಗೇನು ಪರಮಹಂಸರು ಆತನಿಗೆ ಈ ಹಿತಕಾರಿ ಉಪದೇಶಗಳನ್ನು ಕೊಟ್ಟದ್ದು ?

ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಘಂಟೆ ರಾತ್ರಿ ಎಂಟು. ಕೊಠಡಿಯಲ್ಲಿ ಮಾಸ್ಟರ್, ರಾಖಾಲ ಕುಳಿತಿದಾರೆ. ಮಾಸ್ಟರ್ ಇಲ್ಲೇ ವಾಸಿಸಲಾರಂಭಿಸಿ ಇಂದಿಗೆ ಇಪ್ಪತ್ತೊಂದು ದಿನ. ಪರಮಹಂಸರು ಮಾಸ್ಟರಿಗೆ ಕಟ್ಟಾಜ್ಞೆಯಿತ್ತಿದಾರೆ ಆತ ವಿಚಾರದಲ್ಲಿ ತೊಡಗಕೂಡದೆಂದು.

ಶ್ರೀರಾಮಕೃಷ್ಣರು ರಾಖಾಲನಿಗೆ: "ಹೆಚ್ಚಾಗಿ ವಾದದಲ್ಲಿ ತೊಡಗುವುದು ಒಳ್ಳೆಯದಲ್ಲ. ಮೊದಲು ಭಗವಂತನ ದರ್ಶನ ಬಳಿಕ ಜಗದ್ವಿಚಾರ. ಮೊದಲು ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡದ್ದೇ ಆದರೆ, ಬಳಿಕ ಜಗತ್ತಿನ ವಿಷಯವನ್ನೆಲ್ಲಾ ಚೆನ್ನಾಗಿ ಅರಿತುಕೊಳ್ಳಬಹುದು. (ಮಾಸ್ಟರ್ ರಾಖಾಲರಿಗೆ) ಮೊದಲು ಯದುಮಲ್ಲಿಕನೊಡನೆ ಸ್ನೇಹ ಬೆಳಸಿಕೊಂಡುಬಿಟ್ಟದ್ದೇ ಆದರೆ ಬಳಿಕ ಆತನಿಗೆಷ್ಟು ಮನೆ, ತೋಟ, ಲೇವಾದೇವಿ ಪತ್ರ ಇವೆ ಎಂಬಿವೇ ಮೊದಲಾದ ಎಲ್ಲಾ ವಿಷಯಗಳನ್ನೂ ಅರಿತುಕೊಂಡು ಬಿಡಬಹುದು. ಅದಕ್ಕಾಗೇ ನಾರದ ಋಷಿ 'ಮರಾ', 'ಮರಾ' ಎಂದು ಜಪಿಸುವಂತೆ ವಾಲ್ಮೀಕಿಗೆ ಉಪದೇಶವಿತ್ತುದು. 'ಮ' ಅಂದರೆ ಭಗವಂತ, 'ರಾ' ಅಂದರೆ ಜಗತ್ತು. ಮೊದಲು ಭಗವಂತ, ಅನಂತರ ಜಗತ್ತು. ಕೃಷ್ಣಕಿಶೋರ ಹೇಳಿದ, 'ಮರಾ' ಎಂಬ ಮಂತ್ರವನ್ನು ನಾರದ ಋಷಿ ವಾಲ್ಮೀಕಿಗೆ ಕೊಟ್ಟಿದ್ದರಿಂದ ಅದು ಬಹಳ ಪವಿತ್ರವಾದ ಮಂತ್ರವೇ. 'ಮ' ಅಂದರೆ ಭಗವಂತ, 'ರಾ' ಅಂದರೆ ಜಗತ್ತು.

"ಆದುದರಿಂದ ಮೊದಲು ವಾಲ್ಮೀಕಿಯ ಹಾಗೆ ಎಲ್ಲವನ್ನೂ ತ್ಯಜಿಸಿ ನಿರ್ಜನಪ್ರದೇಶದಲ್ಲಿ ಗೋಪ್ಯವಾಗಿ ವ್ಯಾಕುಲಚಿತ್ತದಿಂದ ಅಳುತ್ತ ಅಳುತ್ತ ಭಗವಂತನನ್ನು ಕರೆಯಬೇಕು. ಮೊದಲು ಆವಶ್ಯಕವಾದ್ದು ಭಗವಂತನ ದರ್ಶನ; ಬಳಿಕ ವಿಚಾರ—ಶಾಸ್ತ್ರಗಳ ಮತ್ತು ಜಗತ್ತಿನ ಸಂಬಂಧವಾಗಿ.

(ಮಾಸ್ಟರಿಗೆ) "ಆದ್ದರಿಂದಲೇ ನಾನು ನಿನಗೆ ಹೇಳುತ್ತಾ ಬಂದಿರುವುದು—ಇನ್ನು ವಿಚಾರದಲ್ಲಿ ತೊಡಗಬೇಡ ಎಂದು. ಅದನ್ನು ಮತ್ತೆ ಹೇಳಲೋಸುಗವೇ ನಾನು ಸರ್ವೆ ಮರಗಳ ತೋಪಿನಿಂದ ಎದ್ದು ಬಂದುದು. ಹೆಚ್ಚಾಗಿ ವಿಚಾರದಲ್ಲಿ ತೊಡಗಿದರೆ ಕೊನೆಯಲ್ಲಿ ಹಾನಿ ತಗಲುತ್ತದೆ—ಕೊನೆಗೆ ನೀನು ಹಾಜರಾನ ಹಾಗೇ ಆಗಿಬಿಡುತ್ತೀಯೆ ನೋಡಿಕೊ. ನಾನು ಒಬ್ಬನೇ ರಾತ್ರಿ ವೇಳೆಯಲ್ಲಿ ರಸ್ತೆಯಲ್ಲಿ ತಿರುಗುತ್ತ ಭಗವತಿಗೆ ಅಳುತ್ತ ಅಳುತ್ತ ಮೊರೆಯಿಡುತ್ತಿದ್ದೆ: 'ಹೇ ತಾಯಿ, ನನ್ನ ವಿಚಾರ ಬುದ್ಧಿಗೆ ನಿನ್ನ ವಜ್ರಾಘಾತವನ್ನು ಹಾಕು.' ಇನ್ನು ಮುಂದೆ ವಿಚಾರದಲ್ಲಿ ತೊಡಗುವುದಿಲ್ಲ ಎಂದು ವಾಗ್ದಾನಮಾಡು."

ಮಾಸ್ಟರ್: "ಖಂಡಿತ. ನಾನು ಇನ್ನೆಂದಿಗೂ ವಿಚಾರದಲ್ಲಿ ತೊಡಗುವುದಿಲ್ಲ."

ಶ್ರೀರಾಮಕೃಷ್ಣರು: "ಭಕ್ತಿಯಿಂದಲೇ ಎಲ್ಲವೂ ದೊರೆತುಬಿಡುತ್ತದೆ. ಯಾರಿಗೆ ಬ್ರಹ್ಮಜ್ಞಾನ ಬೇಕೊ ಅವರು ಭಕ್ತಿಮತಾವಲಂಬಿಗಳಾಗಿದ್ದರೂ ಅವರಿಗೂ ಅದು ದೊರೆತುಬಿಡುತ್ತದೆ.

"ಭಗವಂತನ ಕೃಪೆಯೊಂದಿತ್ತು ಎಂದರೆ ಜ್ಞಾನದ ಅಭಾವವಿರುವುದೆ? ಕಾಮಾರಪುಕುರಿನಲ್ಲಿ ಜನ ಬತ್ತವನ್ನು ಅಳೆಯುತ್ತಾರೆ. ರಾಶಿ ಇನ್ನೇನು ಮುಗಿಯುತ್ತಾ ಬಂತು ಅನ್ನುವುದರೊಳಗೇ ಇನ್ನೊಬ್ಬ ರಾಶಿಯನ್ನು ತಳ್ಳಿಕೊಡುತ್ತಾನೆ. ಭಗವತಿ ಜ್ಞಾನದ ರಾಶಿಯನ್ನು ತಳ್ಳಿಕೊಟ್ಟು ಬಿಡುತ್ತಾಳೆ.

"ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡನಂತರ ಬರೀ ಪಂಡಿತರು ಕಸ ಕಡ್ಡಿಯಂತೆ ತೋರಿಬರುತ್ತಾರೆ. ಒಮ್ಮೆ ಪದ್ಮಲೋಚನ ನನಗೆ ಹೇಳಿದ: 'ನಾನು ನಿಮ್ಮೊಡನೆ ಬೆಸ್ತರ ಸಭೆಗೂ ಹೋಗಿಬರಬಲ್ಲೆ. ಆದರಿಂದ ಯಾವ ರಾಜ್ಯ ತಾನೆ ಮುಳುಗಿಹೋಗಿಬಿಟ್ಟೀತು? ನಾನು ನಿಮ್ಮೊಡನೆ ಅಂತ್ಯಜನ ಮನೆಗೆ ಹೋಗಿಯೂ ಊಟಮಾಡಿಬರಬಲ್ಲೆ.

"ಭಕ್ತಿಯಿಂದಲೇ ಎಲ್ಲವನ್ನೂ ಹೊಂದಬಹುದು. ಭಗವಂತನನ್ನು

ಪ್ರೀತಿಸಿದುದೇ ಆದರೆ ಯಾವುದರ ಅಭಾವವೂ ಇರದು. ಒಂದು ದಿನ ಭಗವತಿಯ ಹತ್ತಿರ ಕಾರ್ತಿಕೇಯ ಮತ್ತು ಗಣೇಶ ಇಬ್ಬರೂ ಕುಳಿತಿದ್ದರು. ಆಕೆ ಕೊರಳಿಗೆ ಒಂದು ರತ್ನಖಚಿತ ಹಾರವನ್ನು ಹಾಕಿಕೊಂಡಿದ್ದಳು. ಭಗವತಿ ಅವರಿಗೆ ಹೇಳಿದಳು: 'ನಿಮ್ಮಿಬ್ಬರಲ್ಲಿ ಯಾರು ಮೊದಲು ಈ ಬ್ರಹ್ಮಾಂಡ ವನ್ನೆಲ್ಲಾ ಸುತ್ತಿಬರಬಲ್ಲಿರೊ ಅವರಿಗೆ ಈ ಹಾರವನ್ನು ಕೊಡುತ್ತೇನೆ.' ಕಾರ್ತಿಕೇಯ ಒಡನೆಯೇ ಒಂದು ನಿಮಿಷವನ್ನೂ ಕಳೆದುಕೊಳ್ಳದೆ ನವಿಲನ್ನು ಹತ್ತಿ ಹೊರಟೇಬಿಟ್ಟ. ಗಣೇಶ ಸಾವಕಾಶವಾಗಿ ಭಗವತಿಯ ಸುತ್ತ ಪ್ರದಕ್ಷಿಣೆ ಬಂದು ಆಕೆಗೆ ಸಾಷ್ಟಾಂಗಪ್ರಣಾಮ ಮಾಡಿದ. ಆತನಿಗೆ ಗೊತ್ತಿತ್ತು, ತಾಯ ಗರ್ಭದಲ್ಲೆ ಇಡೀ ಬ್ರಹ್ಮಾಂಡವಿದೆ ಎಂದು. ಭಗವತಿ ಪ್ರಸನ್ನಳಾಗಿ ಗಣೇಶನ ಕೊರಳಿಗೆ ಹಾರವನ್ನು ಹಾಕಿಬಿಟ್ಟಳು. ಬಹಳ ಸಮಯವಾದನಂತರ ಕಾರ್ತಿಕೇಯ ಬಂದುನೋಡುತ್ತಾನೆ, ಅಣ್ಣ ಆಗಲೆ ಕೊರಳಿಗೆ ಹಾರ ಹಾಕಿಕೊಂಡು ಕುಳಿತಿದಾನೆ.

"ಅಳುತ್ತ ಅಳುತ್ತ ನಾನು ಭಗವತಿಗೆ ಪ್ರಾರ್ಥನೆಮಾಡಿದೆ: 'ತಾಯೆ, ವೇದ ವೇದಾಂತಗಳಲ್ಲಿ ಏನಿದೆ ಎಂಬುದನ್ನ ನನಗೆ ತಿಳಿಸಿಕೊಟ್ಟು ಬಿಡು. ಪುರಾಣ, ತಂತ್ರಗಳಲ್ಲಿ ಏನಿದೆ ಎಂಬುದನ್ನೂ ನನಗೆ ತಿಳಿಸಿಕೊಟ್ಟು ಬಿಡು.' ಆಕೆ ಒಂದೊಂದಾಗಿ ಎಲ್ಲವನ್ನೂ ನನಗೆ ತಿಳಿಸಿಕೊಟ್ಟುಬಿಟ್ಟಳು.

"ಆಕೆ ಎಲ್ಲವನ್ನೂ ನನಗೆ ತೋರಿಸಿಕೊಟ್ಟುಬಿಟ್ಟದಾಳೆ. ಓ, ಆಕೆ ನನಗೆ ಎಷ್ಟೊಂದು ಅನುಭವಗಳನ್ನು ಮಾಡಿಕೊಟ್ಟದಾಳೆ! ಒಂದು ದಿನ ತೋರಿಸಿದಳು, ಎಲ್ಲೆಲ್ಲೂ ಶಿವ ಶಕ್ತಿಯರಿರುವುದನ್ನ. ಎಲ್ಲೆಲ್ಲೂ ಶಿವ ಶಕ್ತಿ ಯರ ಕ್ರೀಡೆಯೇ ನಡೆಯುತ್ತಿರುವುದನ್ನ ನೋಡಿದೆ. ಮನುಷ್ಯರಲ್ಲಿ ಪ್ರಾಣಿ ಗಳಲ್ಲಿ, ತರುಗಳಲ್ಲಿ, ಲತೆಗಳಲ್ಲಿ ಎಲ್ಲದರಲ್ಲೂ ಶಿವ ಶಕ್ತಿಯರು ಇರುವುದನ್ನು ನೋಡಿದೆ. ಪ್ರತಿಯೊಂದರಲ್ಲೂ ಪ್ರಕೃತಿ ಪುರುಷರ ಕ್ರೀಡೆಯನ್ನು ನೋಡಿದೆ.

"ಇನ್ನೊಂದು ದಿನ ತೋರಿಸಿದಳು ನರಮುಂಡದ ರಾಶಿಯನ್ನ—ಪರ್ವತದ ಎತ್ತರದಷ್ಟು. ಇನ್ನು ಬೇರೆ ಏನೂ ಇರಲಿಲ್ಲ. ನಾನು ಅದರ ಮಧ್ಯದಲ್ಲಿ ಒಬ್ಬನೇ ಕುಳಿತಿದ್ದೆ.

"ಇನ್ನೊಮ್ಮೆ ಆಕೆ ನನಗೆ ತೋರಿಸಿದಳು ಮಹಾ ಸಮುದ್ರವನ್ನ. ನಾನು ಉಪ್ಪಿನ ಗೊಂಬೆಯಾಗಿ ಅದನ್ನು ಅಳೆಯಲು ಹೋಗುತ್ತಿದ್ದೆ. ಹಾಗೇ ಹೋಗಿ ಗುರುವಿನ ಕೃಪೆಯಿಂದ ಕಲ್ಲಾಗಿ ಪರಿವರ್ತನೆಯಾಗಿಬಿಟ್ಟೆ. ಆಗ ಕಣ್ಣಿಗೆ ಬಿತ್ತು ಒಂದು ಹಡಗು. ಒಡನೇ ಅದನ್ನು ಹತ್ತಿಬಿಟ್ಟೆ. ಗುರುವೇ

ಚುಕ್ಕಾಣಿಗ. ಸಚ್ಚಿದಾನಂದ ಗುರುವಿಗೆ ದಿನವೂ ಪ್ರಾತಃಕಾಲ ನೀನು ಪ್ರಾರ್ಥನೆ ಸಲ್ಲಿಸುತ್ತಾ ಇದೀಯೇನು?''

ಮಾಸ್ಟರ್: ''ಹೌದು. ಸಲ್ಲಿಸುತ್ತಾ ಇದೇನೆ.''

ಶ್ರೀರಾಮಕೃಷ್ಣರು: ''ಗುರು ಚುಕ್ಕಾಣಿಗ. ಆಗ ನೋಡುತ್ತೇನೆ, 'ನಾನು' ಎಂಬುದು ಒಂದು, 'ನೀನು' ಎಂಬುದು ಇನ್ನೊಂದು ವಸ್ತು. ಮತ್ತೆ ಸಮುದ್ರಕ್ಕೆ ದುಮುಕಿ ಮೀನು ಆದೆ. ಬಳಿಕ ಸಚ್ಚಿದಾನಂದ ಸಾಗರದಲ್ಲಿ ಆನಂದದಿಂದ ನಾನೇ ಈಜಾಡುವುದನ್ನು ನೋಡಿದೆ.

''ಇವೆಲ್ಲಾ ಅತಿ ಗುಹ್ಯ ವಿಷಯಗಳು. ವಿಚಾರದಿಂದ ಏನು ತಾನೆ ಗೊತ್ತಾದೀತು? ಯಾವಾಗ ಭಗವಂತನೇ ಮಾರ್ಗದರ್ಶಕನಾಗುತ್ತಾನೊ ಆಗ ಎಲ್ಲವೂ ದೊರೆತುಬಿಡುತ್ತವೆ—ಯಾವುದರ ಅಭಾವವೂ ಇರದು.''

೪ನೆ ಜನವರಿ ೧೮೮೪, ಪುಷ್ಯ ಶುಕ್ಲ ಷಷ್ಠಿ, ಶುಕ್ರವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಘಂಟೆ ಅಪರಾಹ್ನ ನಾಲ್ಕು. ಮಾಸ್ಟರ್ ಇನ್ನೂ ಪರಮಹಂಸರೊಡನೇ ವಾಸವಾಗಿ ದಾನೆ. ಆತ ಬಿಲ್ವಮರದ ಕೆಳಗೆ ತನ್ನ ಬಹು ಭಾಗ ಸಮಯವನ್ನ ಧ್ಯಾನ ದಲ್ಲಿ ಕಳೆಯುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ಮತ್ತೆಂದಿಗೂ ವಿಚಾರದಲ್ಲಿ ತೊಡಗಬೇಡ. ಕೊನೆಗೆ ಅದರಿಂದ ಹಾನಿಯುಂಟಾಗುತ್ತದೆ. ಭಗವಂತನಿಗೆ ಪ್ರಾರ್ಥನೆಮಾಡುವಾಗ ಯಾವುದಾದರೂ ಒಂದು ಭಾವವನ್ನ ಆಶ್ರಯಿಸ ಬೇಕು—ಸಖೀಭಾವವನ್ನೊ, ದಾಸೀಭಾವವನ್ನೊ, ಸಂತಾನಭಾವವನ್ನೊ ಅಥವಾ ವೀರಭಾವವನ್ನೊ.

''ನನ್ನದು ಸಂತಾನಭಾವ. ಈ ಭಾವವನ್ನು ನೋಡಿದೊಡನೇ ಮಾಯಾದೇವಿ ದಾರಿ ಬಿಟ್ಟು ನಿಂತುಕೊಳ್ಳುತ್ತಾಳೆ—ಲಜ್ಜೆಪಟ್ಟುಕೊಂಡು.

''ವೀರಭಾವ ಬಹಳ ಕಠಿನ. ಶಾಕ್ತರು, ವೈಷ್ಣವ ಸಂಪ್ರದಾಯಕ್ಕೆ ಸೇರಿದ ಬಾವುಲರು ಈ ಭಾವವನ್ನು ಆರೋಪಿಸಿಕೊಳ್ಳುತ್ತಾರೆ. ಆದರೆ ಇದರಲ್ಲಿ ನೇರವಾಗಿರುವುದು ಬಹಳ ಕಠಿನ. ಮತ್ತೆ ಇವೆ—ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಭಾವಗಳು. ಮಧುರಭಾವದಲ್ಲಿ ಎಲ್ಲವೂ ಸೇರಿ ಕೊಂಡಿವೆ—ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ. (ಮಾಸ್ಟರಿಗೆ) ನಿನಗೆ ಇವುಗಳಲ್ಲಿ ಯಾವುದು ಹಿಡಿಸುತ್ತದೆ?''

ಮಾಸ್ಟರ್: ''ನನಗೆ ಎಲ್ಲವೂ ಹಿಡಿಸುತ್ತವೆ.''

ಶ್ರೀರಾಮಕೃಷ್ಣರು: "ಎಲ್ಲಾ ಭಾವಗಳು ಸಿದ್ಧನ ಅವಸ್ಥೆಯಲ್ಲಿ ಮಾತ್ರ ಹಿಡಿಸುತ್ತವೆ. ಆ ಅವಸ್ಥೆಯಲ್ಲಿ ಕಾಮಗಂಧ ಲೇಶಮಾತ್ರವೂ ಇರದು. ವೈಷ್ಣವ ಶಾಸ್ತ್ರದಲ್ಲಿ ಇದೆ ಚಂಡೀದಾಸನ ಮತ್ತು ರಜಕಿನಿಯ (ಅಗಸಗಿತ್ತಿ) ಕಥೆ. ಅವರ ಪ್ರೀತಿ ಕಾಮಗಂಧವಿಹೀನವಾಗಿತ್ತು.

"ಆ ಅವಸ್ಥೆಯಲ್ಲಿ ಪ್ರಕೃತಿಭಾವ. ಸಾಧಕನಿಗೆ ತಾನು ಪುರುಷ ಎಂಬ ಬೋಧೆ ಇರದು. ಮೀರಾಬಾಯಿ ಹೆಂಗಸಾಗಿದ್ದುದರಿಂದ ಸನಾತನ-ಗೋಸ್ವಾಮಿ ಆಕೆಗೆ ಭೇಟಿ ಕೊಡಲು ಒಪ್ಪಲಿಲ್ಲ. ಆಗ ಆಕೆ ಆತನಿಗೆ ಉತ್ತರ ಕಳುಹಿಸಿದಳು: 'ಶ್ರೀಕೃಷ್ಣನೊಬ್ಬನೆ ಏಕಮಾತ್ರ ಪುರುಷ. ಬೃಂದಾವನದಲ್ಲಿರುವವರೆಲ್ಲರೂ ಆ ಪುರುಷನ ದಾಸಿಯರು. ಅಂಥಾದ್ದರಲ್ಲಿ ತಾವೂ ಒಬ್ಬ ಪುರುಷ ಎಂಬ ಅಭಿಮಾನವಿಟ್ಟುಕೊಂಡಿರುವುದು ಸರಿಯಾಯಿತೇನು?'"

ಈಗ ಮುಚ್ಚಂಜೆ. ಮಾಸ್ಟರ್ ಪರಮಹಂಸರ ಹತ್ತಿರ ಕುಳಿತಿದಾನೆ. ಸಮಾಚಾರ ಬಂತು ಕೇಶವಸೇನನ ರೋಗ ಬಲಗೊಂಡಿದೆ ಎಂದು. ಆತನ ಮಾತೆತ್ತಿ ಈಗ ಪರಮಹಂಸರು ಬ್ರಾಹ್ಮಸಮಾಜದವಿಷಯವಾಗಿ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡು, ಅವರು ಅಲ್ಲಿ ಕೇವಲ ಉಪನ್ಯಾಸ ಕೊಡುವುದೊಂದೆಯೊ ಅಥವಾ ಧ್ಯಾನವನ್ನೂ ಮಾಡುತ್ತಾರೊ? ಅವರು ತಮ್ಮ ಆರಾಧನೆಯನ್ನ 'ಉಪಾಸನೆ' ಅಂತ ಕರೆಯುತ್ತಾರೆ ಎಂದು ಕೇಳಿದೇನೆ.

"ಕೇಶವ ಹಿಂದೆ ಕ್ರೈಸ್ತ ಧರ್ಮದ ಮತ್ತು ಕ್ರಿಸ್ತರ ದೃಷ್ಟಿಕೋನದ ಸಂಬಂಧವಾಗಿ ಬಹಳವಾಗಿ ಚಿಂತಿಸಿದ್ದ. ಆ ಸಮಯದಲ್ಲಿ ಮತ್ತೆ ಅದಕ್ಕೆ ಮುಂಚಿನಿಂದಲೂ ದೇವೇಂದ್ರನಾಥಠಾಕುರನ ಸಮಾಜದ ಅನುಯಾಯಿಯಾಗಿದ್ದ."

ಮಾಸ್ಟರ್: "ಕೇಶವಬಾಬು ಮೊದಲಿನಿಂದಲೂ ಇಲ್ಲಿಗೆ ಬರುತ್ತಿದ್ದರೆ, ಆತ ಸಮಾಜಸುಧಾರಣೆ ಸಂಬಂಧವಾಗಿ ಇಷ್ಟೊಂದು ವ್ಯಸ್ತನಾಗುತ್ತಿರಲಿಲ್ಲ. ಜಾತಿಭೇದ ನಿರ್ಮೂಲಮಾಡುವಿಕೆ, ವಿಧವಾ ವಿವಾಹ, ಅಂತರ ಜಾತೀಯ ವಿವಾಹ, ಸ್ತ್ರೀ ಶಿಕ್ಷಣ ಇವೇ ಮೊದಲಾದ ಸಾಮಾಜಿಕ ಕೆಲಸ ಕಾರ್ಯಗಳಲ್ಲಿ ಬಹಳವಾಗಿ ಮಗ್ನನಾಗಿಬಿಡುತ್ತಿರಲಿಲ್ಲ."

ಶ್ರೀರಾಮಕೃಷ್ಣರು: "ಕೇಶವ ಈಗ ಕಾಳಿಯನ್ನ ಒಪ್ಪುತ್ತಾನೆ—

ಚಿನ್ಮಯ ಕಾಳಿಯನ್ನ, ಆದ್ಯಾಶಕ್ತಿ ಕಾಳಿಯನ್ನ. ಇದೂ ಅಲ್ಲದೆ 'ತಾಯಿ, ತಾಯಿ' ಎಂದು ಹೇಳುತ್ತ ಆಕೆಯ ನಾಮಗುಣಕೀರ್ತನೆ ಮಾಡುತ್ತಾನೆ.

"ಒಳ್ಳೇದು, ಏನು ಈ ಬ್ರಾಹ್ಮಸಮಾಜ ಮುಂದೆಯೂ ಒಂದು ಸಮಾಜಸುಧಾರಕ ಸಂಘವಾಗೇ ಉಳಿಯುವುದೇ?"

ಮಾಸ್ಟರ್: "ಈ ದೇಶದ ಮಣ್ಣಿನ ಗುಣವೇ ಬೇರೆ. ಯಾವುದು ಸತ್ಯವಾದುದೊ ಅದು ಮಾತ್ರ ಉಳಿದುಕೊಳ್ಳುತ್ತದೆ."

ಶ್ರೀರಾಮಕೃಷ್ಣರು: "ಹೌದು, ನಿಜ. ಸನಾತನ ಧರ್ಮ, ಎಂದರೆ ಋಷಿಗಳು ಬೋಧಿಸಿರುವ ಧರ್ಮ ಮಾತ್ರ ಉಳಿದುಕೊಳ್ಳುತ್ತದೆ. ಆದರೆ ಬ್ರಾಹ್ಮಸಮಾಜ ಮತ್ತು ಅದರಂಥ ಸಂಪ್ರದಾಯಗಳೂ ಅಲ್ಪಸ್ವಲ್ಪವಾಗಿ ಬದುಕಿಕೊಂಡಿರುತ್ತವೆ. ಎಲ್ಲವೂ ಭಗವದಿಚ್ಛೆಯಂತೆ ಉದ್ಭವಿಸುತ್ತವೆ, ನಶಿಸುತ್ತವೆ."

ಅಪರಾಹ್ನದಲ್ಲಿ ಅನೇಕ ಭಕ್ತರು ಕಲ್ಕತ್ತದಿಂದ ಬಂದು ಪರಮ-ಹಂಸರ ಮುಂದೆ ಅನೇಕ ಹಾಡುಗಳನ್ನು ಹಾಡಿದ್ದರು. ಒಂದು ಹಾಡಿನಲ್ಲಿ ಈ ಭಾವನೆ ಇತ್ತು: "ಹೇ ತಾಯಿ ನೀನು ಕೆಂಪು ಬಣ್ಣದ ಉರುಳು ಗೋಲನ್ನು ಬಾಯಲ್ಲಿ ಇಟ್ಟು ನಿನ್ನನ್ನು ಮರೆಯುವಂತೆ ಮಾಡಿಬಿಟ್ಟಿದೀಯೆ. ಯಾವಾಗ ನಾವು ಅದನ್ನು ಬಿಸಾಡಿ ನಿನಗಾಗಿ ಚಂಡಿ ಹಿಡಿದು ಅಳುತ್ತೇವೆಯೊ, ಆಗ ನೀನು ನಮ್ಮ ಹತ್ತಿರಕ್ಕೆ ನಿಶ್ಚಯವಾಗಿ ಓಡಿಬರುವೆ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಅವರು ಎಷ್ಟು ಚೆನ್ನಾಗಿ ಕೆಂಪು ಉರುಳುಗೋಲಿನ ಹಾಡನ್ನು ಹಾಡಿದರು!"

ಮಾಸ್ಟರ್: "ಹೌದು. ಒಮ್ಮೆ ನೀವು ಕೇಶವಸೇನನಿಗೆ ಕೆಂಪು ಉರುಳುಗೋಲಿನ ವಿಷಯವನ್ನು ತಿಳಿಸಿದಿರಿ."

ಶ್ರೀರಾಮಕೃಷ್ಣರು: "ನಿಜ. ಚಿದಾಕಾಶದ ವಿಷಯವನ್ನ—ಇನ್ನೂ ಏನೇನೊ ಅನೇಕ ವಿಷಯಗಳನ್ನ ತಿಳಿಸಿದೇನೆ. ಆಗ ನಾವು ಎಷ್ಟು ಆನಂದದಿಂದ ಇರುತ್ತಿದ್ದೆವು! ನಾವು ಒಟ್ಟಿಗೆ ಹಾಡುತ್ತ ನರ್ತಿಸುತ್ತಿದ್ದೆವು."

**೫ನೆ ಜನವರಿ ೧೮೮೪, ಪುಷ್ಯ ಶುಕ್ಲ ಸಪ್ತಮಿ, ಶನಿವಾರ.**

ಪರಮಹಂಸರೊಡನೆ ಮಾಸ್ಟರ್ ಇರಲು ಆರಂಭಿಸಿ ಇಂದಿಗೆ ಇಪ್ಪತ್ತು ಮೂರು ದಿನ. ಘಂಟೆ ಒಂದು. ಮಾಸ್ಟರ್ ಮಧ್ಯಾಹ್ನದ ಊಟ ಮುಗಿಸಿ ನಹಬತ್‌ಖಾನೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾಗ, ಇದ್ದಕ್ಕಿದ್ದಹಾಗೆ ಆತನ ಹೆಸರನ್ನು ಹಿಡಿದು ಯಾರೊ ನಾಲ್ಕು ಸಲ ಕೂಗಿದಂತೆ ಕೇಳಿಸಿತು. ಹೊರಗಡೆ

ಬಂದು ನೋಡುತ್ತಾನೆ, ಪರಮಹಂಸರು ತಮ್ಮ ಕೊಠಡಿಯ ಉತ್ತರ ವರಾಂಡದಲ್ಲಿ ನಿಂತು ತನ್ನನ್ನು ಕೂಗುತ್ತಿದಾರೆ.

ಮಾಸ್ಟರ್ ಅಲ್ಲಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಈಗ ಅವರು ದಕ್ಷಿಣ ವರಾಂಡದಲ್ಲಿ ಕುಳಿತು ಮಾಸ್ಟರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ನಿನ್ನ ಧ್ಯಾನ ಯಾವ ರೀತಿಯಾಗಿ ನಡೆಯುತ್ತಿದೆ? ನಾನು ಬಿಲ್ವಮರದ ಕೆಳಗೆ ಧ್ಯಾನಮಾಡುತ್ತಿದ್ದಾಗ ನನಗೆ ಅನೇಕ ದಿವ್ಯದರ್ಶನಗಳು ಬಹಳ ಸ್ಪಷ್ಟವಾಗಿ ಆಗುತ್ತಿದ್ದುವು. ಒಂದು ದಿನ ನೋಡಿದೆ, ಎದುರಿಗೆ ಹಣ, ಶಾಲು, ಒಂದು ತಟ್ಟೆ ಸಂದೇಶ (ಸಿಹಿ ತಿಂಡಿ), ಇಬ್ಬರು ಹೆಂಗಸರು ಇರುವುದನ್ನ. ಮನಸ್ಸನ್ನು ಕೇಳಿದೆ: 'ಮನಸ್ಸೇ, ಇವುಗಳಲ್ಲಿ ಯಾವುದಾದರೂ ಬೇಕೆ?' ಸಂದೇಶ ಮಲದ ಹಾಗೆ ತೋರಿತು. ಆ ಹೆಂಗಸರಲ್ಲಿ ಒಬ್ಬಳು ಮೂಗಿಗೆ ಮುಕರ ಇಟ್ಟು ಕೊಂಡಿದ್ದಳು. ಅವರ ಒಳಗೆ ಹೊರಗೆ ಇರುವುದೆಲ್ಲ ನನಗೆ ಚೆನ್ನಾಗಿ ಕಾಣಿಸಲಾರಂಭಿಸಿತು—ಕರುಳು, ಹೊಟ್ಟೆ, ಮಲ, ಮೂತ್ರ, ಮೂಳೆ, ಮಾಂಸ, ರಕ್ತ ಇವೆಲ್ಲ. ಮನಸ್ಸಿಗೆ ಇವು ಯಾವೂ ಬೇಕಾಗಲಿಲ್ಲ—ಹಣ, ಶಾಲು, ಸಿಹಿ ತಿಂಡಿ, ಹೆಂಗಸು. ಭಗವಂತನ ಪಾದಪದ್ಮಗಳಲ್ಲೇ ಮನಸ್ಸು ನೆಲಸಿ ನಿಂತಿತು.

"ಚಿಕ್ಕ ತಕ್ಕಡಿಗೆ ಎರಡು ಮುಳ್ಳು ಇರುತ್ತವೆ—ಮೇಲೊಂದು ಕೆಳಗೊಂದು. ಮನಸ್ಸೆಂಬುದೇ ಕೆಳಗಿನ ಮುಳ್ಳು. ಮನಸ್ಸು ಮೇಲಿನ ಮುಳ್ಳನ್ನು ಎಂದರೆ ಭಗವಂತನನ್ನು ಬಿಟ್ಟು ಎಲ್ಲಿ ವಿಮುಖವಾಗಿಬಿಡುವುದೊ ಎಂದು ಸತತ ಆತಂಕಪಡುತ್ತಿದ್ದೆ. ಇದೂ ಅಲ್ಲದೆ ಒಬ್ಬ ತ್ರಿಶೂಲ ಹಿಡಿದು ಕೊಂಡು ಸದಾ ನನ್ನ ಹತ್ತಿರವೇ ಕುಳಿತಿರುತ್ತಿದ್ದ. ಆತ ಹೆದರಿಸುತ್ತಿದ್ದ, ಕೆಳಗಿನ ಮುಳ್ಳೇನಾದರೂ ಮೇಲಿನ ಮುಳ್ಳನ್ನು ಬಿಟ್ಟು ಅಲುಗಿತು ಎಂದರೆ ತ್ರಿಶೂಲದಿಂದ ಅಪ್ಪಳಿಸುತ್ತೇನೆ ಎಂದು.

"ಆದರೆ ಕಾಮಕಾಂಚನ ತ್ಯಾಗವನ್ನು ಮಾಡದ ಹೊರತು ಭಗವಂತನ ಸಾಕ್ಷಾತ್ಕಾರ ಸಾಧ್ಯವೇ ಇಲ್ಲ. ನಾನು ಇವು ಮೂರನ್ನೂ ತ್ಯಜಿಸಿಬಿಟ್ಟೆ—ಹೆಣ್ಣು, ಹೊನ್ನು, ಮಣ್ಣು. ಕಾಮಾರಪುಕುರದಲ್ಲಿ ರಘುವೀರನ ಹೆಸರಿನಲ್ಲಿದ್ದ ಭೂಮಿಯನ್ನು ರಿಜಿಸ್ಟರ್ ಮಾಡಿಸಲು ಒಮ್ಮೆ ಕಚೇರಿಗೆ ಹೋಗಿದ್ದೆ. ನನಗೆ ರುಜು ಹಾಕುವಂತೆ ಹೇಳಿದರು, ಆದರೆ ನಾನು ಮಾಡಲಿಲ್ಲ. ಆ

ಭೂಮಿ ನನ್ನದು ಎಂಬ ಭಾವನೆ ನನಗಿರಲಿಲ್ಲ. ಕೇಶವಸೇನನ ಗುರು ಎಂದು ಜನ ಬಹಳವಾಗಿ ಆದರ ತೋರಿಸಿದರು. ಬೇಕಾದಷ್ಟು ಮಾವಿನ ಹಣ್ಣನ್ನು ತಂದು ಅರ್ಪಿಸಿದರು. ಆದರೆ ಅದನ್ನು ಮನೆಗೆ ತೆಗೆದುಕೊಂಡು ಬರುವಂತಿಲ್ಲ. ಸನ್ಯಾಸಿ ಸಂಚಯಮಾಡಕೂಡದು.

"ತ್ಯಾಗವನ್ನು ಮಾಡದೆ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವ ಬಗೆ ಹೇಗೆ? ಒಂದು ವಸ್ತುವಿನ ಮೇಲೆ ಇನ್ನೊಂದು ವಸ್ತುವನ್ನು ಇಟ್ಟಿದೆ ಅಂತ ಇಟ್ಟುಕೊ. ಮೇಲಿನದನ್ನು ತೆಗೆಯದೆ ಕೆಳಗಿನದನ್ನು ತೆಗೆದುಕೊಳ್ಳುವ ಬಗೆ ಹೇಗೆ?

"ನಿಷ್ಕಾಮ ಭಾವನೆಯಿಂದ ಭಗವಂತನಿಗೆ ಪ್ರಾರ್ಥನೆಮಾಡಬೇಕು. ಆದರೆ ಸಕಾಮ ಭಾವನೆಯಿಂದ ಪ್ರಾರ್ಥನೆ ಮಾಡುತ್ತ ಮಾಡುತ್ತ ಕೊನೆಗೆ ಅದು ನಿಷ್ಕಾಮ ಭಾವನೆಯಾಗಿ ಪರಿಣಮಿಸಿಬಿಡುತ್ತದೆ. ಧ್ರುವ ರಾಜ್ಯಕ್ಕಾಗಿ ತಪಸ್ಸು ಮಾಡಿದ, ಆದರೆ ಕೊನೆಯಲ್ಲಿ ಆತನಿಗೆ ಭಗವಂತನ ದರ್ಶನ ದೊರೆಯಿತು. ಆತ ಹೇಳಿದ: 'ಗಾಜಿನ ಮಣಿಗಾಗಿ ಹುಡುಕುತ್ತಿರುವಾಗ ಚಿನ್ನ ದೊರೆತುದೇ ಆದರೆ ಅದನ್ನಾರು ಬಿಟ್ಟುಬಿಡುತ್ತಾರೆ?'

"ಸತ್ತ್ವಗುಣ ಉಂಟಾದಾಗ ಮಾತ್ರ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ದಾನಾದಿ ಕರ್ಮಗಳನ್ನ ಸಂಸಾರಿಗಳು ಪ್ರಾಯಿಕವಾಗಿ ಸಕಾಮ ಭಾವನೆಯಿಂದಲೇ ಮಾಡುತ್ತಾರೆ. ಅದು ಒಳ್ಳೆಯದಲ್ಲ. ಅವನ್ನ ನಿಷ್ಕಾಮ ಭಾವನೆಯಿಂದ ಮಾಡಿದರೆ ಅದು ಬಹಳ ಒಳ್ಳೆಯದು. ಆದರೆ ಹಾಗೆ ಮಾಡುವುದು ಬಹಳ ಕಠಿನವೇನೊ ನಿಜ.

"ಭಗವಂತನ ಸಾಕ್ಷಾತ್ಕಾರ ದೊರೆತಾಗ ಆತನನ್ನು ಪ್ರಾರ್ಥನೆ ಮಾಡುವಿಯೇನು: 'ಹೇ ಭಗವಂತ, ನಾನು ಕೆಲವು ಕೆರೆ, ರಸ್ತೆ, ಸ್ನಾನ-ಘಟ್ಟ, ಔಷಧಾಲಯ, ಆಸ್ಪತ್ರೆಗಳನ್ನು ಕಟ್ಟಿಸಬೇಕೆಂದಿದೇನೆ. ಅವೆಲ್ಲವೂ ಆಗುವಂತೆ ವರ ಕರುಣಿಸು' ಎಂದು? ಆತನ ಸಾಕ್ಷಾತ್ಕಾರ ದೊರೆತನಂತರ ಆ ವಿಧದ ಆಸೆಗಳೆಲ್ಲಾ ಒಂದು ಮೂಲೆಯಲ್ಲಿ ಮುದುರಿ ಬಿದ್ದಿರುತ್ತವೆ.

"ಹಾಗೆಂದು ದಯಾ ಕಾರ್ಯಗಳನ್ನ, ಎಂದರೆ ದಾನಾದಿ ಕರ್ಮಗಳನ್ನ ಸ್ವಲ್ಪವೂ ಮಾಡಲೇ ಕೂಡದು ಅಂತಲೇನು? ಎಂದಿಗೂ ಅಲ್ಲ. ಎದುರಿಗೆ ಜನ ದುಃಖ, ಕಷ್ಟಗಳಿಂದ ನರಳುತ್ತಿರುವುದನ್ನು ಕಂಡರೆ, ಹತ್ತಿರ ಹಣವಿದ್ದರೆ ಅವರಿಗೆ ಸಹಾಯ ನೀಡಬೇಕಾದ್ದೆ. ಅಂಥ ಸಂದರ್ಭಗಳಲ್ಲಿ ಜ್ಞಾನಿ ಜನರಿಗೆ ಹೇಳುತ್ತಾನೆ: 'ಕೊಡಿ, ಕೊಡಿ. ಈ ದುಃಖಪೀಡಿತರಿಗೆ

ಏನಸ್ನಾದರೂ ಕೊಡಿ.' ಇಲ್ಲದಿದ್ದರೆ ತನ್ನ ಅಂತರ್ಯದಲ್ಲಿ ಆತ ಭಾವಿಸು ತ್ತಾನೆ: 'ನನ್ನ ಕೈಯಲ್ಲಿ ಏನು ತಾನೆ ಸಾಧ್ಯ? ಭಗವಂತನೇ ಕರ್ತ. ನಾನು ಅಕರ್ತ.'

"ಮಹಾಪುರುಷರು ಜೀವರ ದುಃಖಗಳನ್ನು ನೋಡಿ ಸಹಿಸಲಾರದೆ ಅವರಿಗೆ ಭಗವಂತನನ್ನು ಪಡೆಯುವ ಮಾರ್ಗವನ್ನು ತೋರಿಸಿಕೊಟ್ಟು ಬಿಡುತ್ತಾರೆ. ಶಂಕರಾಚಾರ್ಯರು ಲೋಕಶಿಕ್ಷಣಕ್ಕಾಗಿ 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. ಅನ್ನದಾನಕ್ಕಿಂತ ಜ್ಞಾನದಾನ, ಭಕ್ತಿದಾನ ಬಹಳ ಉತ್ತಮವಾದುವು. ಅದಕ್ಕಾಗೇ ಆಚಂಡಾಲಾದಿಯಾಗಿ ಎಲ್ಲರಿಗೂ ಚೈತನ್ಯದೇವ ಭಕ್ತಿದಾನವನ್ನು ಮಾಡಿದುದು. ದೇಹದ ಸುಖ ದುಃಖವಂತೂ ಇದ್ದೇ ಇರುತ್ತವೆ. ನೀನು ಇಲ್ಲಿಗೆ ಬಂದುದು ಮಾವಿನ ಹಣ್ಣು ತಿನ್ನಲು. ಅವನ್ನು ತಿಂದುಹೋಗು. ಅತ್ಯಾವಶ್ಯಕವಾಗಿ ಬೇಕಾದ್ದು ಜ್ಞಾನ, ಭಕ್ತಿ. ಭಗವಂತನೊಬ್ಬನೇ ವಸ್ತು; ಉಳಿದುದೆಲ್ಲಾ ಅವಸ್ತು.

"ಆತನೇ ಎಲ್ಲವನ್ನೂ ಮಾಡುತ್ತಿದಾನೆ. ಹಾಗಾದರೆ ಮನುಷ್ಯ ಪಾಪಕೃತ್ಯಗಳನ್ನು ಮಾಡಬಹುದಲ್ಲ ಎಂದರೆ, ಅದು ಸರಿಯಲ್ಲ. ಯಾರಿಗೆ ನಿಜವಾಗಿ ಬೋಧೆಯಾಗಿದೆಯೊ, ಭಗವಂತನೊಬ್ಬನೇ ಕರ್ತ ತಾನು ಅಕರ್ತ ಎಂದು, ಆತ ಎಂದಿಗೂ ತಪ್ಪು ಹೆಜ್ಜೆ ಇಡುವುದಿಲ್ಲ.

"ಯಾವುದನ್ನು ಇಂಗ್ಲಿಷುಮನ್‌ರು[1] 'ಸ್ವಾಧೀನ ಇಚ್ಛೆ' ಅಂತ ಕರೆಯುತ್ತಾರೊ ಅದನ್ನು ಮನಸ್ಸಿನಲ್ಲಿ ಭಗವಂತನೇ ನಾಟಿದಾನೆ. ಯಾರು ಭಗವಂತನ ಸಾಕ್ಷಾತ್ಕಾರವನ್ನು ಇನ್ನೂ ಮಾಡಿಕೊಂಡಿಲ್ಲವೊ ಅಂಥವರ ಮನಸ್ಸಿನಲ್ಲಿ ಭಗವಂತ 'ಈ ಸ್ವಾಧೀನ ಇಚ್ಛೆ' ಎಂಬುದನ್ನು ನಾಟದೆ ಇದ್ದಿದ್ದರೆ ಅವರಲ್ಲಿ ಪಾಪಪ್ರವೃತ್ತಿ ವೃದ್ಧಿಯಾಗಿಬಿಡುತ್ತಿತ್ತು. ತಮ್ಮ ಪಾಪಪ್ರವೃತ್ತಿಗೆ ತಾವೇ ಹೊಣೆ ಎಂಬುದನ್ನು ಆತ ಜನರ ಮನಸ್ಸಿನಲ್ಲಿ ನಾಟದೆ ಇದ್ದಿದ್ದರೆ ಪಾಪಪ್ರವೃತ್ತಿ ಇನ್ನೂ ಹೆಚ್ಚಾಗಿ ವೃದ್ಧಿಯಾಗಿ ಬಿಡುತ್ತಿತ್ತು.

. "ಯಾರಿಗೆ ಭಗವಂತನ ಸಾಕ್ಷಾತ್ಕಾರ ಆಗಿದೆಯೊ ಅವರಿಗೆ ಗೊತ್ತಿದೆ, 'ಸ್ವಾಧೀನ ಇಚ್ಛೆ' ಎಂಬುದೊಂದು ಇರುವಂತಲೇನೊ ತೋರುತ್ತದೆ,

1. ಪರಮಹಂಸರು ಪಾಶ್ಚಾತ್ಯರೆಲ್ಲರನ್ನೂ ಒಟ್ಟಿಗೆ ಈ ಹೆಸರಿನಿಂದ ಕರೆಯು ತ್ತಿದ್ದುದೇ ಅಲ್ಲದೆ ಅವರನ್ನು ಅನುಕರಿಸುತ್ತಿದ್ದ ಪ್ರಾಚ್ಯರನ್ನೂ ಇದೇ ಹೆಸರಿನಿಂದ ಕರೆಯುತ್ತಿದ್ದರು.

ಆದರೆ ವಾಸ್ತವಿಕವಾಗಿ ಭಗವಂತ ಯಂತ್ರಚಾಲಕ, ಮನುಷ್ಯ ಯಂತ್ರ; ಆತ ಗಾಡಿ ಹೊಡೆಯುವವ, ಮನುಷ್ಯ ಗಾಡಿ."

ಘಂಟೆ ಅಪರಾಹ್ನ ನಾಲ್ಕು. ಪಂಚವಟಿಯ ಗುಡಿಸಿಲಿನಲ್ಲಿ ರಾಖಾಲ, ಇನ್ನೂ ಒಬ್ಬಿಬ್ಬರು ಭಕ್ತರು ಮಾಸ್ಟರ್ ಹಾಡುತ್ತಿದ್ದ ಕೀರ್ತನೆಯನ್ನು ಕೇಳುತ್ತಿದಾರೆ. ರಾಖಾಲ ಕೀರ್ತನೆಯನ್ನು ಕೇಳಿ ಭಾವಾವಿಷ್ಟನಾಗಿಬಿಟ್ಟಿದಾನೆ. ಸ್ವಲ್ಪ ಹೊತ್ತಾದ ಮೇಲೆ ಪರಮಹಂಸರು ಬಾಬುರಾಮ, ಹರೀಶರೊಡನೆ ಪಂಚವಟಿಗೆ ಬಂದರು. ಈಗ ರಾಖಾಲ, ಮಾಸ್ಟರೂ ಅಲ್ಲಿಗೆ ಬಂದಿದಾರೆ. ಉಳಿದವರೂ ಬರುತ್ತಿದಾರೆ.

ರಾಖಾಲ ಮಾಸ್ಟರನ್ನು ತೋರಿಸಿ: "ಇಂದು ಈತ ಬಹಳ ಚೆನ್ನಾಗಿ ಕೀರ್ತನೆಯನ್ನು ಹಾಡಿ ನಮಗೆ ಬಹಳ ಆನಂದವನ್ನು ಕೊಟ್ಟಿದಾನೆ."

ಪರಮಹಂಸರು ಈಗ ಭಾವಾವಿಷ್ಟರಾಗಿ ಹಾಡುತ್ತಿದಾರೆ:

ಮನದ ಭಾರವು ನೀಗಿತೇ, ಸಖಿ
ಕೇಳಿ ಕೃಷ್ಣನ ನಾಮವ! . . .

ಭಕ್ತರಿಗೆ ಹೇಳುತ್ತಿದಾರೆ: "ಈ ವಿಧದ ಹಾಡುಗಳನ್ನು ನೀವು ಯಾವಾಗಲೂ ಹಾಡುತ್ತಿರಬೇಕು." ಮತ್ತೆ ಹೇಳುತ್ತಿದಾರೆ: "ಇಷ್ಟೇ ಬೇಕಾಗಿರುವುದು—ಭಗವಂತನನ್ನು ಪ್ರೀತಿಸುವುದು, ಭಕ್ತರ ಸಹವಾಸ ಮಾಡುವುದು." ಮತ್ತೆ ಪುನಃ ಹೇಳುತ್ತಿದಾರೆ: "ಕೃಷ್ಣ ಮಥುರೆಗೆ ಹೊರಟುಹೋದಾಗ ಯಶೋದೆ ಶ್ರೀಮತಿಯನ್ನು (ರಾಧೆಯನ್ನು) ನೋಡಲು ಬಂದಳು. ಆಗ ಆಕೆ ಧ್ಯಾನದಲ್ಲಿದ್ದಳು. ಅನಂತರ ರಾಧೆ ಯಶೋದೆಗೆ ಹೇಳಿದಳು: 'ಆದ್ಯಾಶಕ್ತಿ ನಾನು. ನಿನಗೇನು ವರ ಬೇಕಾದರೂ ಕೇಳು.' ಯಶೋದೆ ಹೇಳಿದಳು: 'ಇನ್ನು ಬೇರೆ ಯಾವ ವರವನ್ನು ತಾನೆ ಕೇಳಲಿ? ಹಾಗಾದರೆ ಆಶೀರ್ವಾದಮಾಡು ನಾನು ಕಾಯಾ ವಾಚಾ ಮನಸಾ ಭಗವಂತನ ಸೇವೆ ಮಾಡಲಾಗುವ ಹಾಗೆ, ಈ ಕಣ್ಣುಗಳಿಂದ ಆತನ ಭಕ್ತರನ್ನು ನೋಡಲಾಗುವ ಹಾಗೆ, ಈ ಮನಸ್ಸಿನಿಂದ ಆತನ ಚಿಂತನೆ ಮಾಡಲಾಗುವ ಹಾಗೆ, ಈ ನಾಲಗೆಯಿಂದ ಆತನ ನಾಮಗುಣಕೀರ್ತನೆ ಮಾಡಲಾಗುವ ಹಾಗೆ ಆಗುವಂತೆ.'

"ಆದರೆ ಯಾರ ಜ್ಞಾನ ಪೂರ್ಣವಾಗಿ ಹಣ್ಣಾಗಿಹೋಗಿರುವುದೊ ಅವರಿಗೆ ಭಕ್ತರ ಸಹವಾಸವಿಲ್ಲದಿದ್ದರೂ ಏನೂ ತೊಂದರೆಯಾಗುವುದಿಲ್ಲ. ಅವರಿಗೆ ಕೆಲಕೆಲವು ವೇಳೆ ಭಕ್ತರ ಸಹವಾಸ ರುಚಿಸುವುದೂ ಇಲ್ಲ. ಮುತ್ತಿನ

ಚಿಪ್ಪಿನ ಕೆಲಸದ ಮೇಲೆ ಸುಣ್ಣದ ಕೆಲಸ ನಿಲ್ಲುವುದಿಲ್ಲ. ಎಂದರೆ, ಯಾರ ಒಳಗೆ ಹೊರಗೆ ಎಲ್ಲಾ ಭಗವನ್ಮಯವಾಗಿಬಿಟ್ಟಿರುವುದೊ ಅವರದು ಈ ಅವಸ್ಥೆ.''

ಈಗ ಪರಮಹಂಸರು ಸರ್ವೆಮರಗಳ ತೋಪಿನಿಂದ ಹಿಂದಿರುಗಿ ಪಂಚವಟಿಗೆ ಬಂದು ಮಾಸ್ಟರಿಗೆ ಹೇಳುತ್ತಿದಾರೆ: '' ನಿನಗೆ ಹೆಂಗಸಿನ ಕಂಠ ವಿದೆ. ಈ ವಿಧದ ಹಾಡನ್ನು ಅಭ್ಯಾಸಮಾಡಲಾಗೋದಿಲ್ಲ?—

ಹೃದಯವಲ್ಲಭನಿರುವ ಕದಂಬವನವೆನ್ನುವುದು
ಇನ್ನೆಷ್ಟು ದೂರವಿದೆ ಹೇಳು ಕೆಳದೀ ?

( ಮಾಸ್ಟರಿಗೆ ಬಲರಾಮನನ್ನು ತೋರಿಸಿ ) '' ನೋಡು, ಯಾರು ನನ್ನ ಸ್ವಂತದವರೊ ಅವರು ಪರಕೀಯರಾಗಿಬಿಟ್ಟದಾರೆ—ರಾಮುಲಾಲ ಮೊದ ಲಾದವರು ಯಾರೊ ಬೇರೆಯವರು ಇದ್ದ ಹಾಗೆ. ಪರಕೀಯರು ನನ್ನ ಸ್ವಂತದವರಾಗಿಬಿಟ್ಟದಾರೆ. ಎದ್ದು ಕೈಕಾಲು ತೊಳೆದುಕೊಂಡು ಬಾ ಎಂದು ನಾನು ಬಾಬುರಾಮನಿಗೆ ಹೇಳುತ್ತಿರುವುದನ್ನು ನೀನು ನೋಡಿರ ಬೇಕಲ್ಲವೆ? ಈಗ ಭಕ್ತರೇ ನನ್ನ ಸ್ವಂತದವರು.

( ಪಂಚವಟಿಯ ಕಡೆಗೆ ನೋಡಿ ) '' ನಾನು ಅಲ್ಲಿ ಕುಳಿತುಕೊಳ್ಳುತ್ತಿದ್ದೆ. ಕಾಲಾನಂತರದಲ್ಲಿ ನನಗೆ ಭಗವದುನ್ಮಾದ ಉಂಟಾಯಿತು. ಆ ಅವಸ್ಥೆಯೂ ಹೊರಟುಹೋಯಿತು. ಕಾಲನೇ ಬ್ರಹ್ಮ. ಯಾರು ಕಾಲನೊಡನೆ ವಿಲಾಸಿ ಸುತ್ತಾಳೊ ಆಕೆಯೇ ಕಾಳಿ—ಆಕೆಯೇ ಆದ್ಯಾಶಕ್ತಿ. ಆಕೆ ಅಚಲನನ್ನೂ ಚಲಿಸಿಬಿಡುತ್ತಾಳೆ.''

ಹೀಗೆಂದು ಹೇಳಿ ಪರಮಹಂಸರು ಹಾಡುತ್ತಿದಾರೆ:

ತಾಯಿ ಶ್ರೀಕಾಳಿಯೀ ಲೀಲೆಯವಲೋಕನದಿ
ಸೋಜಿಗದ ಕಡಲೊಳಗೆ ಮನ ಮುಳುಗಿದೆ. . . .

ಅನಂತರ ಅವರು ಮಾಸ್ಟರಿಗೆ ಹೇಳುತ್ತಿದಾರೆ: '' ಇಂದು ಶನಿವಾರ. ಕಾಳೀದೇವಾಲಯಕ್ಕೆ ಹೋಗಿ ಬಾ.''

ಶ್ರೀರಾಮಕೃಷ್ಣರು ಬಕುಳವೃಕ್ಷದ ಹತ್ತಿರಕ್ಕೆ ಬಂದಾಗ ಅವರು ಮಾಸ್ಟರಿಗೆ ಹೇಳಲಾರಂಭಿಸಿದರು: '' ಚಿದಾತ್ಮ, ಚಿಚ್ಛಕ್ತಿ ಅಂತ ಇವೆ. ಚಿದಾತ್ಮನೇ ಪುರುಷ, ಚಿಚ್ಛಕ್ತಿಯೇ ಪ್ರಕೃತಿ. ಚಿದಾತ್ಮನೇ ಶ್ರೀಕೃಷ್ಣ, ಚಿಚ್ಛಕ್ತಿಯೇ ರಾಧೆ. ಭಕ್ತರೆಲ್ಲರೂ ಆ ಚಿಚ್ಛಕ್ತಿಯ ಒಂದೊಂದು ರೂಪ.

ಆದ್ದರಿಂದ ಭಕ್ತರು ತಾವು ಚಿಚ್ಛಕ್ತಿಯ ಅಥವಾ ರಾಧೆಯ ಸಖಿಯರು ಅಥವಾ ದಾಸಿಯರು ಎಂದು ಭಾವಿಸಿಕೊಳ್ಳಬೇಕು. ಸಾರಾಂಶ ಇದೇ.''

ಸಾಯಂಕಾಲವಾದನಂತರ ಪರಮಹಂಸರು ಕಾಳೀದೇವಾಲಯಕ್ಕೆ ಬಂದಿದಾರೆ. ಅಲ್ಲಿ ಮಾಸ್ಟರ್ ಭಗವತಿಯ ಧ್ಯಾನದಲ್ಲಿ ತೊಡಗಿರುವುದನ್ನು ನೋಡಿ ಅವರಿಗೆ ಬಹಳ ಆನಂದವಾಗಿಬಿಟ್ಟಿದೆ.

ದೇವಾಲಯಗಳಲ್ಲೆಲ್ಲಾ ಸಾಯಂ ಮಂಗಳಾರತಿ ಮುಗಿದಿದೆ. ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತು ಧ್ಯಾನ ಮಾಡುತ್ತಿದಾರೆ. ಮಾಸ್ಟರ್ ನೆಲದಮೇಲೆ ಕುಳಿತಿದಾನೆ. ಕೊಠಡಿಯಲ್ಲಿ ಇನ್ನು ಬೇರೆ ಯಾರೂ ಇಲ್ಲ.

ಪರಮಹಂಸರು ಸಮಾಧಿಸ್ಥರಾಗಿದಾರೆ. ಈಗ ಕಿಂಚಿತ್ ಪ್ರಕೃತಿಸ್ಥರಾಗುತ್ತಿದಾರೆ. ಆದರೂ ಭಾವೋನ್ಮತ್ತರಾಗೇ ಇದಾರೆ. ಚಿಕ್ಕ ಮಗು ತಾಯಿಯನ್ನು ಚಂಡಿ ಹಿಡಿದು ಕೇಳುವ ಹಾಗೆ ಪರಮಹಂಸರು ಭಗವತಿಯನ್ನು ಕರುಣಾಜನಕ ಸ್ವರದಿಂದ ಕೇಳುತ್ತಿದಾರೆ: ''ಹೇ ತಾಯೆ, ಏಕೆ ನೀನು ನಿನ್ನ ಆ ರೂಪವನ್ನ–ನಿನ್ನ ಆ ಭುವನಮೋಹನ ರೂಪವನ್ನ ನನಗೆ ತೋರಿಸುತ್ತಿಲ್ಲ? ನಾನು ಅಷ್ಟೊಂದಾಗಿ ನಿನ್ನನ್ನು ಕೇಳಿಕೊಂಡೆ, ಆದರೂ ನೀನು ನನ್ನ ಪ್ರಾರ್ಥನೆಗೆ ಕಿವಿಯನ್ನೇ ಕೊಡುತ್ತಿಲ್ಲವಲ್ಲ! ನೀನು ಇಚ್ಛಾಮಯಿ.''

ಪರಮಹಂಸರು ಈ ಮಾತುಗಳನ್ನು ಅಂಥ ಕಂಠದಿಂದ ಹೇಳಿದರು, ಕಲ್ಲೂ ಕರಗಿಹೋಗಬೇಕು.

ಮತ್ತೆ ಪರಮಹಂಸರು ಭಗವತಿಗೆ ಹೇಳುತ್ತಿದಾರೆ: ''ತಾಯೆ, ಬೇಕಾಗಿರುವುದು ಶ್ರದ್ಧೆ. ಈ ಹಾಳು ವಿಚಾರ ಎಂಬುದು ತೊಲಗಿಹೋಗಲಿ! ಅದು ನಾಶವಾಗಲಿ! ಶ್ರದ್ಧೆ ಬೇಕು—ಗುರುವಾಕ್ಯದಲ್ಲಿ ಶ್ರದ್ಧೆ, ಬಾಲಕನಂಥ ಶ್ರದ್ಧೆ. ತಾಯಿ ಮಗುವಿಗೆ ಹೇಳುತ್ತಾಳೆ: 'ಮಗು, ಅಲ್ಲೊಂದು ಭೂತವಿದೆ.' ಅದು ಸಂಪೂರ್ಣವಾಗಿ ನಂಬುತ್ತದೆ ಅಲ್ಲೊಂದು ಭೂತವಿದೆ ಎಂದು. ತಾಯಿ ಮಗುವಿಗೆ ಹೇಳುತ್ತಾಳೆ: 'ಮಗು, ಅಲ್ಲೊಂದು ಗುಮ್ಮ ಇದೆ.' ಅದು ಸಂಪೂರ್ಣವಾಗಿ ನಂಬುವುದು, ಅಲ್ಲೊಂದು ಗುಮ್ಮ ಇದೆ ಎಂದು. ತಾಯಿ ಯಾರೊ ಒಬ್ಬನನ್ನು ತೋರಿಸಿ ಮಗುವಿಗೆ ಹೇಳುತ್ತಾಳೆ: 'ಮಗು, ಆತ ನಿಮ್ಮ ಅಣ್ಣ.' ಅದು ಸಂಪೂರ್ಣವಾಗಿ ನಂಬುತ್ತದೆ, ಆತ ನೂರಕ್ಕೆ ನೂರಿಪ್ಪತ್ತೈದು ಭಾಗ ತಮ್ಮ ಅಣ್ಣನೇ ಎಂದು. ಬೇಕಾಗಿರುವುದು ಶ್ರದ್ಧೆ. ಆದರೆ ತಾಯೆ, ಇದರಲ್ಲಿ ಅವರ ತಪ್ಪೇನು? ಅವರು ಇನ್ನೇನನ್ನು

ತಾನೆ ಮಾಡಿಯಾರು? ವಿಚಾರದ ದವಡೆಗೆ ಒಮ್ಮೆಯಾದರೂ ಸಿಕ್ಕಬೇಕಾದ ಆವಶ್ಯಕತೆ ಇದೆ. ಹಾಗೇ ನೀನೇ ನೋಡು, ಅಂದು ನಾನು ಆತನಿಗೆ ಎಷ್ಟೊಂದಾಗಿ ಹೇಳಿದೆ, ಆದರೂ ಅದು ಯಾವ ಪ್ರಯೋಜನಕ್ಕೂ ಬಾರದೆ ಹೋಯಿತಲ್ಲ!''

ಪರಮಹಂಸರು ಬಿಕ್ಕಿ ಬಿಕ್ಕಿ ಅಳುತ್ತ ಭಕ್ತರ ಹಿತಕ್ಕಾಗಿ ಈ ರೀತಿ ಯಾಗಿ ಭಗವತಿಯ ಹತ್ತಿರ ಪ್ರಾರ್ಥನೆ ಮಾಡುತ್ತಿದಾರೆ. ಏನಾಶ್ಚರ್ಯ! ಹೇಳುತ್ತಿದಾರೆ: ''ತಾಯೆ, ಯಾರಾರು ನಿನ್ನನ್ನು ಸಮೀಪಿಸುತ್ತಾರೊ ಅವರ ಸಕಲ ಅಭೀಷ್ಟಗಳನ್ನೂ ಪೂರ್ಣಮಾಡಿಕೊಡು. ಆದರೆ ಅವರು ಒಮ್ಮೆಗೇ ಎಲ್ಲವನ್ನೂ ತ್ಯಾಗಮಾಡುವಂತೆ ಬಲಾತ್ಕರಿಸಬೇಡ. ಒಳ್ಳೆದು, ಕೊನೆಯಲ್ಲಿ ಹೇಗೆ ಬೇಕೊ ಹಾಗೆ ಮಾಡು. ನೀನು ಅವರನ್ನು ಸಂಸಾರದಲ್ಲಿ ಇಡುವುದಾದರೆ, ಒಮ್ಮೊಮ್ಮೆ ಅವರಿಗೆ ನಿನ್ನ ದರ್ಶನವನ್ನು ಕೊಡು. ಇಲ್ಲ ದಿದ್ದರೆ ಅವರು ಬದುಕಿಕೊಂಡಿರುವ ಬಗೆ ಹೇಗೆ? ಒಮ್ಮೊಮ್ಮೆ ನೀನು ಅವರಿಗೆ ನಿನ್ನ ದರ್ಶನ ಕೊಡದಿದ್ದರೆ, ನಿನ್ನ ದರ್ಶನ ಮಾಡಬೇಕೆಂಬ ಉತ್ಸಾಹ ಅವರಿಗೆ ಹೇಗೆ ತಾನೆ ಬಂದೀತು? ಇಷ್ಟರ ಮೇಲೆ ಕೊನೆಗೆ ನಿನಗೆ ಇಚ್ಛೆಬಂದಂತೆ ಮಾಡು.''

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಇದ್ದಕ್ಕಿದ್ದ ಹಾಗೆ ಮಾಸ್ಟರಿಗೆ ಹೇಳುತ್ತಿದಾರೆ: ''ನೋಡು, ನೀನು ಇದುವರೆಗೆ ಬೇಕಾದಷ್ಟು ಸಮಯವನ್ನ ವಿಚಾರದಲ್ಲಿ ಕಳೆದಿದೀಯೆ. ಇನ್ನು ಬೇಡ. ಹೇಳು, ಇನ್ನು ಮಾಡುವುದಿಲ್ಲವೆಂದು.''

ಮಾಸ್ಟರ್ ಕೈ ಮುಗಿದು ಹೇಳುತ್ತಿದಾನೆ: ''ಇಲ್ಲ, ಇನ್ನು ಮುಂದೆ ಮಾಡುವುದಿಲ್ಲ.''

ಶ್ರೀರಾಮಕೃಷ್ಣರು: ''ಇದುವರೆಗೆ ಬೇಕಾದಷ್ಟು ಆಗಿದೆ. ನೀನು ಮೊಟ್ಟಮೊದಲು ನನ್ನನ್ನು ಸಂಧಿಸಿದಾಗಲೇ ನಾನು ನಿನಗೆ ನಿನ್ನ ಆದರ್ಶ ಏನು ಎಂಬುದನ್ನು ತಿಳಿಸಿಬಿಟ್ಟಿದೇನೆ. ನಿನ್ನ ವಿಷಯವಾಗಿ ನನಗೆ ಎಲ್ಲ ಗೊತ್ತಿದೆ, ಅಲ್ಲವೆ?''

ಮಾಸ್ಟರ್ ಕೈ ಮುಗಿದು: ''ಹೌದು, ಗೊತ್ತಿದೆ.''

ಶ್ರೀರಾಮಕೃಷ್ಣರು: ''ನಿನ್ನ ಆದರ್ಶ, ನೀನು ಯಾರು, ನಿನ್ನ ಒಳಗು ಹೊರಗು, ನಿನ್ನ ಹಿಂದಿನದು ಮುಂದಿನದು — ಎಲ್ಲವೂ ನನಗೆ ಗೊತ್ತಿದೆ, ಅಲ್ಲವೆ?''

ಮಾಸ್ಟರ್ ಕೈ ಮುಗಿದು: "ಹೌದು, ನಿಜ."

ಶ್ರೀರಾಮಕೃಷ್ಣರು: "ನಿನಗೆ ಮಕ್ಕಳಾಗಿವೆ ಎಂಬುದನ್ನು ಕೇಳಿ ನಾನು ನಿನ್ನನ್ನು ಹಳಿದಿದ್ದೆ. ಈಗ ಹೋಗಿ ಮನೆಯಲ್ಲಿ ವಾಸಮಾಡಿ ಕೊಂಡಿರು. ನೀನು ಅವರಿಗೆ ಸೇರಿದವನೆಂಬುದು ಅವರಿಗೆ ಗೊತ್ತಾಗುವಂತೆ ವ್ಯವಹರಿಸು. ಆದರೆ ನೀನು ಅಂತರ್ಯದಲ್ಲಿ ಚೆನ್ನಾಗಿ ಅರಿತುಕೊಂಡಿರು, ನೀನು ಅವರಿಗೇ ಆಗಲಿ, ಅವರು ನಿನಗೇ ಆಗಲಿ ಸೇರಿದವರಲ್ಲ ಎಂಬುದನ್ನ."

ಮಾಸ್ಟರ್ ಸುಮ್ಮನೆ ಕುಳಿತಿದಾನೆ. ಪರಮಹಂಸರು ಬುದ್ಧಿವಾದ ಹೇಯುತ್ತಲೇ ಮುಂದುವರಿಯುತ್ತಿದಾರೆ.

ಶ್ರೀರಾಮಕೃಷ್ಣರು: "ಈಗ ನೀನು ಹಾರುವುದನ್ನು ಕಲಿತು ಕೊಂಡಿದೀಯೆ. ನೀನು ನಿನ್ನ ತಂದೆಯನ್ನು ಪ್ರೀತಿಯಿಂದ ನೋಡಬೇಕು. ನೀನು ನಿನ್ನ ತಂದೆಗೆ ಸಾಷ್ಟಾಂಗಪ್ರಣಾಮ ಮಾಡಲಾಗೋದಿಲ್ಲ?"

ಮಾಸ್ಟರ್ ಕೈ ಮುಗಿದು: "ಹೌದು, ಸಾಧ್ಯ."

ಶ್ರೀರಾಮಕೃಷ್ಣರು: "ನಾನು ನಿನಗೆ ಇನ್ನೇನು ತಾನೆ ಹೇಳಲಿ? ನಿನಗೆ ಎಲ್ಲಾ ಗೊತ್ತಿದೆ. ಎಲ್ಲಾ ಅರ್ಥವಾಗುತ್ತಿದೆ, ಅಲ್ಲವೆ?"

ಮಾಸ್ಟರ್ ಒಂದು ಮಾತೂ ಆಡದೆ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಎಲ್ಲವನ್ನೂ ಅರ್ಥಮಾಡಿಕೊಂಡಿದೀಯೆ, ಅಲ್ಲವೆ?"

ಮಾಸ್ಟರ್: "ಹೌದು, ಈಗ ನನಗೆ ಸ್ವಲ್ಪ ಸ್ವಲ್ಪ ಅರ್ಥವಾಗಲು ಹತ್ತಿದೆ."

ಶ್ರೀರಾಮಕೃಷ್ಣರು: "ಇಲ್ಲ, ನಿನಗೆ ಚೆನ್ನಾಗೇ ಅರ್ಥವಾಗುತ್ತಿದೆ. ರಾಖಾಲ ಇಲ್ಲಿ ಇರುವುದನ್ನು ನೋಡಿ ಆತನ ತಂದೆಗೆ ಬಹಳ ಆನಂದವಾಗಿ ಬಿಟ್ಟಿದೆ."

ಮಾಸ್ಟರ್ ಕೈ ಮುಗಿದು ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಹೌದು, ನೀನು ಏನು ಭಾವಿಸುತ್ತಿದೀಯೊ ಅದೂ ನಡೆದುಹೋಗಿಬಿಡುತ್ತದೆ."

ಈಗ ಪರಮಹಂಸರು ಪೂರ್ಣಪ್ರಕೃತಿಸ್ಥರಾಗಿದ್ದಾರೆ. ರಾಖಾಲ, ರಾಮಲಾಲ ಕೊಠಡಿಯನ್ನು ಪ್ರವೇಶಿಸಿದರು. ಪರಮಹಂಸರ ಆಜ್ಞಾನುಸಾರ ರಾಮಲಾಲ ಹಾಡಲಾರಂಭಿಸಿದಾನೆ:

ನಲಿಯುವಳಾರೀ ಭೈರವನಾರೀ
ರಣರಂಗದೊಳೀ ಬೆಳಕನು ಬೀರಿ?— . . . ( ಉ. ೧೩೪ )

ಆತ ಮತ್ತೆ ಹಾಡುತ್ತಿದ್ದಾನೆ:

ನಟ್ಟಿರುಳ ನಭದಂತೆ ಕಾಳಿಮಾ ತನುವಾಗಿ
ಧಾವಿಸುವ ನಾರಿ ಯಾರು? . . . ( ಉ. ೧೩೫ )

ಶ್ರೀರಾಮಕೃಷ್ಣರು: "ಭಗವತಿ ಮತ್ತು ಜನನಿ. ಯಾರು ಸರ್ವವ್ಯಾಪಿಯಾಗಿದ್ದುಕೊಂಡು ಜಗದ್ರೂಪವನ್ನು ಧರಿಸಿದಾಳೊ ಆಕೆಯೇ ಭಗವತಿ. ಜನನಿ ಎಂದರೆ ಹೆತ್ತ ತಾಯಿ, ಈ ಶರೀರಕ್ಕೆ ಜನ್ಮ ಕೊಡತಕ್ಕವಳು. ನಾನು 'ಭಗವತಿ', 'ಭಗವತಿ' ಎಂದು ಹೇಳು ಹೇಳುತ್ತಿದ್ದ ಹಾಗೇ ಸಮಾಧಿಸ್ಥನಾಗಿಬಿಡುತ್ತಿದ್ದೆ. 'ಭಗವತಿ', 'ಭಗವತಿ' ಎಂದು ಹೇಳು ಹೇಳುತ್ತಿದ್ದ ಹಾಗೇ ಅನುಭವವಾಗುತ್ತಿತ್ತು, ಈ ಜಗತ್ತಿನ ಈಶ್ವರಿಯನ್ನು ಹತ್ತಿರಕ್ಕೆ ಎಳೆದುಕೊಂಡುಬರುತ್ತಿರುವಂತೆ. ಇದು ಬೆಸ್ತರು ಮೊದಲು ಬಲೆ ಬೀಸಿ ಅನಂತರ ಅದನ್ನು ಎಳೆಯುವಾಗ ದೊಡ್ಡ ದೊಡ್ಡ ಮೀನು ಅದಕ್ಕೆ ಬಿದ್ದಿರುವುದು ಗೊತ್ತಾಗುತ್ತದೆಯಲ್ಲ ಹಾಗೆ.

"ಗೌರೀಪಂಡಿತ ಒಮ್ಮೆ ಹೇಳಿದ, ಕಾಳಿ, ಗೌರಾಂಗ ಒಂದೇ ಎಂಬ ಜ್ಞಾನೋದಯವಾದಾಗ ನಿಜವಾದ ಜ್ಞಾನ ದೊರಕಿದಂತಾಗುತ್ತದೆ. ಯಾರು ಬ್ರಹ್ಮನೊ ಆತನೇ ಶಕ್ತಿ—ಕಾಳಿ; ಆತನೇ ನರರೂಪದಲ್ಲಿ ಶ್ರೀ ಗೌರಾಂಗ."

ಪರಮಹಂಸರ ಇಚ್ಛೆಗನುಸಾರ ಈ ಸಲ ರಾಮಲಾಲ ಗೌರಾಂಗನ ಸಂಬಂಧವಾಗಿ ಹಾಡಿದ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿತ್ಯ ಯಾರದೊ ಆತನದೇ ಲೀಲೆ. ಲೀಲೆ ಭಕ್ತರಿಗಾಗಿ. ಭಗವಂತ ನರರೂಪವನ್ನು ಧರಿಸಿದರೆ ತಾನೆ, ಭಕ್ತರು ಆತನನ್ನು ಪ್ರೀತಿಸಲು ಸಾಧ್ಯ; ಸೋದರ, ಸೋದರಿ, ತಂದೆ, ತಾಯಿ, ಸಂತಾನ ಭಾವಗಳಿಂದ ಆತನನ್ನು ಪೂಜಿಸಲು ಸಾಧ್ಯ.

"ಭಗವಂತ ಭಕ್ತರ ಈ ಪ್ರೀತಿಯ ಸಲುವಾಗಿ ದೇಹಧಾರಣೆ ಮಾಡಿಕೊಂಡು ಈ ಜಗತ್ತಿನಲ್ಲಿ ಕ್ರೀಡಿಸಲು ಬರುತ್ತಾನೆ."

## ೧೯

## ಶ್ರೀ ರಾಮಕೃಷ್ಣರು: ಕೈ ಕೀಲು ತಪ್ಪಿದ ಸನ್ನಿವೇಶದಲ್ಲಿ

೨ನೆ ಫೆಬ್ರುವರಿ ೧೮೮೪, ಮಾಘ ಶುಕ್ಲ ಷಷ್ಠಿ, ಶನಿವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡು ರಾಖಾಲ, ಮಹಿಮಚರಣ, ಹಾಜರಾ ಮತ್ತು ಇನ್ನೂ ಕೆಲವು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ. ಘಂಟೆ ಅಪರಾಹ್ನ ಮೂರು. ಮಾಸ್ಟರ್ ದಬ್ಬೆ, ಸಿಂಬಿ, ಮೆದುಬಟ್ಟೆ, ಪಟ್ಟೆ ಇವುಗಳೊಡನೆ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ.

ಒಂದು ದಿನ ಪರಮಹಂಸರು ಭಾವಾವಿಷ್ಟರಾಗಿ ಸರ್ವೆ ಮರಗಳ ಕಡೆಗೆ ಹೋಗುತ್ತಿದ್ದಾಗ ಅವರ ಜೊತೆಯಲ್ಲಿ ಯಾರೂ ಇಲ್ಲದಿದ್ದುದರಿಂದ ಬೇಲಿಯ ಹತ್ತಿರ ಬಿದ್ದುಬಿಟ್ಟು ಅವರ ಎಡಗೈ ತೋಳಿನ ಒಂದು ಮೂಳೆ ಕೀಲು ತಪ್ಪಿಬಿಟ್ಟಿದೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿನಗೇನು ದೇಹಾರೋಗ್ಯ ಸರಿಯಾಗಿರಲಿಲ್ಲವೆ? ಈಗ ಸರಿಯಾಗಿದೆ ತಾನೆ?"

ಮಾಸ್ಟರ್: "ಹೌದು, ಈಗ ಸರಿಯಾಗಿದೆ."

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಒಳ್ಳೇದು, ನಾನು ಯಂತ್ರ, ಭಗವಂತ ಯಂತ್ರಿಗ ಆಗಿದ್ದರೆ ನನಗೇಕೆ ಹೀಗಾಯಿತು?"

ಪರಮಹಂಸರು ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಮಹಿಮ-ಚರಣನ ತೀರ್ಥಯಾತ್ರೆಯ ಸಂಬಂಧವಾಗಿ ಕೇಳುತ್ತಿದಾರೆ. ಆತ ಹನ್ನೆರಡು ವರ್ಷಗಳ ಹಿಂದೆ ಅನೇಕ ತೀರ್ಥಸ್ಥಾನಗಳಿಗೆ ಹೋಗಿದ್ದ.

ಮಹಿಮಚರಣ: "ನಾನು ಕಾಶಿಯ 'ಸಿಕ್ರೋಲ' ಎಂಬ ಭಾಗದ ಒಂದು ತೋಟದಲ್ಲಿ ಒಬ್ಬ ಬ್ರಹ್ಮಚಾರಿಯನ್ನು ನೋಡಿದೆ. ಆತ ಹೇಳಿದ, ತಾನು ಆ ತೋಟದಲ್ಲಿ ಕಳೆದ ಇಪ್ಪತ್ತು ವರ್ಷಗಳಿಂದ ಇದ್ದರೂ ಅದರ ಯಜಮಾನ ಯಾರೆಂಬುದು ತನಗೆ ಗೊತ್ತಾಗಿಲ್ಲ ಎಂದು. ನನ್ನನ್ನು ಕೇಳಿದ, ನನಗೇನಾದರೂ ಸರ್ಕಾರಿ ಕೆಲಸವಿದೆಯೆ ಎಂದು. ಇಲ್ಲವೆಂದು ಹೇಳಿದಾಗ ಆತ ಕೇಳಿದ: 'ಹಾಗಾದರೆ ನೀನೇನು ಪರಿವ್ರಾಜಕನೇ?' ನರ್ಮದಾ

ತೀರದಲ್ಲಿ ನಾನು ಒಬ್ಬ ಸಾಧುವನ್ನು ನೋಡಿದೆ. ಆತ ಮನಸ್ಸಿನೊಳಗೇ ಗಾಯತ್ರಿ ಜಪ ಮಾಡುತ್ತಿದ್ದ—ಶರೀರ ಪುಲಕಗೊಳ್ಳುತ್ತಿತ್ತು! ಆತ ಪ್ರಣವ ಮತ್ತು ಗಾಯತ್ರಿಯನ್ನು ಗಟ್ಟಿಯಾಗಿ ಉಚ್ಚರಿಸಿದಾಗಲಂತೂ, ಆತನ ಹತ್ತಿರ ಕುಳಿತಿದ್ದವರಿಗೂ ರೋಮಾಂಚ, ಪುಲಕ ಆಗಿಬಿಡುತ್ತಿತ್ತು!''

ಪರಮಹಂಸರದು ಬಾಲಕನ ಸ್ವಭಾವ. ಹಸಿವಾಗಿದ್ದುದರಿಂದ ಮಾಸ್ಟರನ್ನು ಕೇಳುತ್ತಿದಾರೆ: "ಎಲ್ಲಿ, ಏನಾದರೂ ತಂದಿದೀಯೇನು?'' ರಾಖಾಲನ ಕಡೆ ನೋಡಿ ಪರಮಹಂಸರು ಸಮಾಧಿಸ್ಥರಾಗಿಬಿಟ್ಟರು.

ಈಗ ಪರಮಹಂಸರು ಕ್ರಮೇಣ ಪ್ರಕೃತಿಸ್ಥರಾಗುತ್ತಿದಾರೆ. ಪೂರ್ಣ ಪ್ರಕೃತಿಸ್ಥರಾಗಲು ಹೇಳುತ್ತಿದಾರೆ: "ನನಗೆ ಜಿಲೇಬಿ ಬೇಕು, ಕುಡಿಯೋ ನೀರು ಬೇಕು.''

ಪರಮಹಂಸರು ಮಗುವಿನ ಹಾಗೆ ಅಳುತ್ತ ಅಳುತ್ತ ಭಗವತಿಗೆ ಹೇಳುತ್ತಿದಾರೆ: "ಹೇ ಬ್ರಹ್ಮಮಯಿ, ನನಗೇಕೆ ಹೀಗೆ ಮಾಡಿಬಿಟ್ಟೆ? ತೋಳು ಬಹಳವಾಗಿ ನೋಯುತ್ತಿದೆಯಲ್ಲ. (ಭಕ್ತರ ಕಡೆ ನೋಡಿ) ಮತ್ತೆ ಸರಿಯಾಗಿಬಿಡುತ್ತದೆಯೆ?'' ಭಕ್ತರು ಚಿಕ್ಕ ಮಗುವನ್ನು ಸಮಾಧಾನ ಪಡಿಸುವ ರೀತಿಯಲ್ಲಿ ಅವರಿಗೆ ಹೇಳುತ್ತಿದಾರೆ: "ಖಂಡಿತ. ಬೇಗ ಸರಿ ಹೋಗಿಬಿಡುತ್ತದೆ.''

ಶ್ರೀರಾಮಕೃಷ್ಣರು ರಾಖಾಲನಿಗೆ: "ನೀನು ಇಲ್ಲಿ ಇರುವುದು ನನ್ನ ಶರೀರ ನೋಡಿಕೊಳ್ಳುವುದಕ್ಕಾದರೂ, ಇದು ನಿನ್ನ ತಪ್ಪೇನಲ್ಲ; ಏಕೆಂದರೆ ನೀನು ನನ್ನ ಜೊತೆಯಲ್ಲಿ ಬಂದಿದ್ದರೂ ನೀನು ಆ ಬೇಲಿಯವರೆಗೆ ಬರಲಾಗುತ್ತಿರಲಿಲ್ಲ.''

ಶ್ರೀರಾಮಕೃಷ್ಣರು ಮತ್ತೆ ಭಾವಾವಿಷ್ಟರಾಗಿ ಹೇಳುತ್ತಿದಾರೆ: "ಓಂ! ಓಂ! ಓಂ! ಹೇ ತಾಯೆ, ಇದೇನು ನಾನು ಹೇಳುತ್ತಿರುವುದು? ಹೇ ತಾಯೆ, ನನಗೆ ಬ್ರಹ್ಮಜ್ಞಾನವನ್ನು ಕೊಟ್ಟು ಬಾಹ್ಯಜ್ಞಾನಶೂನ್ಯ ನನ್ನಾಗಿ ಮಾಡಬೇಡ. ನನಗೆ ಬ್ರಹ್ಮಜ್ಞಾನವನ್ನು ಕೊಡಬೇಡ. ನಾನು ಕೇವಲ ನಿನ್ನ ಕೈ ಕೂಸು. ಆದ್ದರಿಂದ ನನಗೆ ಅಂಜಿಕೆ ಬಹಳ. ನನಗೆ ತಾಯಿ ಬೇಕು. ಬ್ರಹ್ಮಜ್ಞಾನಕ್ಕೆ ನನ್ನ ಕೋಟಿ ನಮಸ್ಕಾರಗಳು! ಯಾರು ಕೇಳುತ್ತಾರೊ ಅವರಿಗೆ ಅದನ್ನು ಕೊಡು. ಹೇ ಆನಂದಮಯಿ! ಹೇ ಆನಂದಮಯಿ!''

ಪರಮಹಂಸರು ಉಚ್ಚ ಕಂಠದಿಂದ "ಆನಂದಮಯಿ! ಆನಂದ ಮಯಿ!" ಎಂದು ಹೇಳುತ್ತ, ಅಳುತ್ತ ಅಳುತ್ತಲೇ ಹೇಳುತ್ತಿದಾರೆ:

ಈ ಎದೆಯ ಕೊರೆಯುವುದು ಒಂದೆ ವ್ಯಥೆ ನನಗೆ:
ನೀನೊಡನೆ ಇದ್ದರೂ ನಾನೆಚ್ಚರಿದ್ದರೂ
ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ!

ಮತ್ತೆ ಪರಮಹಂಸರು ಭಗವತಿಗೆ ಹೇಳುತ್ತಿದಾರೆ: "ನಾನೇನಾದರೂ ತಪ್ಪು ಮಾಡಿದೇನೆಯೆ ತಾಯೆ? ನಾನು ಯಾವುದನ್ನಾದರೂ ಸ್ವತಃ ಮಾಡುತ್ತೇನೆಯೆ ತಾಯೆ? ಎಲ್ಲವನ್ನೂ ಮಾಡತಕ್ಕವಳು ನೀನೇ ಅಲ್ಲವೆ? ನಾನು ಯಂತ್ರ, ನೀನು ಯಂತ್ರಿ.

(ರಾಖಾಲನಿಗೆ ನಗುತ್ತ) "ನೋಡಿಕೊ, ಕೆಳಕ್ಕೆ ಬಿದ್ದುಬಿಟ್ಟೀಯೆ! ಮೋಸಹೋಗಬೇಡ ಮುನಿಸಿಕೊಂಡು."

ಮತ್ತೆ ಭಗವತಿಯನ್ನು ಸಂಬೋಧಿಸಿ ಪರಮಹಂಸರು ಆಕೆಗೆ ಹೇಳುತ್ತಿದಾರೆ: "ತಾಯೆ, ನೋಯುತ್ತಿದೆ ಅಂತ ನಾನು ಅಳುತ್ತಿದೇನೆಯೇ? ಎಂದಿಗೂ ಇಲ್ಲ.

ಈ ಎದೆಯ ಕೊರೆಯುವುದು ಒಂದೆ ವ್ಯಥೆ ನನಗೆ:
ನೀನೊಡನೆ ಇದ್ದರೂ ನಾನೆಚ್ಚರಿದ್ದರೂ
ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ!"

ಮಗು ಕಾಯಿಲೆಯಿಂದ ನರಳುತ್ತಿದ್ದರೂ ಒಮ್ಮೊಮ್ಮೆ ಅದು ಅದನ್ನು ಮರೆತು, ನಗುವುದು, ಆಟವಾಡುವುದು, ಸುತ್ತಾಡುವುದು ಇವುಗಳನ್ನೆಲ್ಲ ಮಾಡುವುದಿಲ್ಲವೆ, ಹಾಗೆ ಪರಮಹಂಸರೂ ವರ್ತಿಸುತ್ತಿದಾರೆ.

ಶ್ರೀರಾಮಕೃಷ್ಣರು: "ಸಚ್ಚಿದಾನಂದನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳದೆ ಇತ್ತು ಎಂದರೆ ಜೀವನ ಬರಿದೆ ವ್ಯರ್ಥ. ವಿವೇಕ ವೈರಾಗ್ಯಗಳಂಥ ವಸ್ತು ಇನ್ನು ಬೇರೆ ಯಾವುದೂ ಇಲ್ಲ. ಸಂಸಾರಿಗಳ ಅನುರಾಗ ಬಹಳ ಕ್ಷಣಿಕ—ಕಾದ ಬಾಣಲೆಯ ಮೇಲೆ ಬಿದ್ದ ನೀರಿನ ಹನಿಯ ಹಾಗೆ. ಒಂದು ಹೂವನ್ನು ನೋಡಿ ಬಹುಶಃ ಆತ ಹೇಳಬಹುದು: 'ಅಹಹ, ಭಗವಂತನ ಸೃಷ್ಟಿ ಎಷ್ಟು ಅದ್ಭುತವಾದ್ದು!'

"ವ್ಯಾಕುಲತೆ ಬೇಕು. ಮಗ ತನ್ನ ಭಾಗದ ಹಿಸ್ಸೆಗಾಗಿ ಬಹಳವಾಗಿ ಪೀಡಿಸಿದ್ದೇ ಆದರೆ, ಆಗ ತಂದೆ ತಾಯಿ ಇಬ್ಬರೂ ಆಲೋಚಿಸಿ ಮಗ ಇನ್ನೂ ಪ್ರಾಪ್ತವಯಸ್ಕನಾಗದಿದ್ದರೂ ಆತನಿಗೆ ಆತನ ಭಾಗದ ಹಿಸ್ಸೆಯನ್ನು

ಕೊಟ್ಟುಬಿಡುತ್ತಾರೆ. ವ್ಯಾಕುಲತೆಯೊಂದಿತ್ತು ಎಂದರೆ, ಭಗವಂತ ನಮ್ಮ ಪ್ರಾರ್ಥನೆಯನ್ನ ಕೇಳಿಯೇ ಕೇಳುತ್ತಾನೆ. ಭಗವಂತ ಎಂದು ನಮ್ಮನ್ನು ಸೃಷ್ಟಿಸಿದನೊ ಅಂದೇ ನಾವು ಆತನ ಸ್ವತ್ತಿಗೆ ಹಕ್ಕುದಾರರಾಗಿಬಿಟ್ಟೆದೇವೆ. ಆತ ನಮ್ಮ ತಂದೆ, ತಾಯಿ. ನಾವು ಆತನನ್ನು ಬಲಾತ್ಕರಿಸಿ ಕೇಳಬಹುದು. ನಾವು ಆತನನ್ನು ಕೇಳಬಹುದು: 'ಕೊಡು ನಿನ್ನ ದರ್ಶನವನ್ನ. ಇಲ್ಲದೆ ಇದ್ದರೆ ನೋಡಿಕೊ ಕತ್ತು ಕತ್ತರಿಸಿಕೊಂಡುಬಿಡುತ್ತೇನೆ.' "

ಪರಮಹಂಸರು ಭಗವತಿಯನ್ನು ಹೇಗೆ ಪ್ರಾರ್ಥಿಸಬೇಕು ಎಂಬುದನ್ನ ಈಗ ತೋರಿಸಿಕೊಡುತ್ತಿದಾರೆ.

ಶ್ರೀರಾಮಕೃಷ್ಣರು: "ನಾನು ಭಗವತಿಯನ್ನು ಈ ರೀತಿಯಾಗಿ ಪ್ರಾರ್ಥಿಸುತ್ತಿದ್ದೆ: 'ಹೇ ತಾಯಿ! ಹೇ ಆನಂದಮಯಿ! ನಿನ್ನ ದರ್ಶನವನ್ನು ಕೊಡು. ಕೊಟ್ಟೇ ಕೊಡಬೇಕು!' ಇನ್ನು ಕೆಲವು ವೇಳೆ ಪ್ರಾರ್ಥಿಸುತ್ತಿದ್ದೆ: 'ಹೇ ದೀನನಾಥೆ! ಹೇ ಜಗನ್ನಾಥೆ! ನಾನು ನಿನ್ನ ಜಗತ್ತಿನಿಂದ ಹೊರಗೇನಿಲ್ಲ. ನಾನು ಜ್ಞಾನಹೀನ, ಸಾಧನಹೀನ, ಭಕ್ತಿಹೀನ. ನನಗೆ ಏನೆಂದರೆ ಏನೂ ಗೊತ್ತಿಲ್ಲ. ಕೃಪೆಮಾಡಿ ನಿನ್ನ ದರ್ಶನವನ್ನ ನನಗೆ ಕೊಟ್ಟೇ ಕೊಡಬೇಕು.' "

ಹೀಗೆ ಪರಮಹಂಸರು ಭಗವತಿಯನ್ನು ಯಾವ ರೀತಿಯಾಗಿ ಪ್ರಾರ್ಥನೆಮಾಡಬೇಕು ಎಂಬುದನ್ನ ಭಕ್ತರಿಗೆ ತೋರಿಸಿಕೊಟ್ಟರು. ಅವರೆಲ್ಲರ ಹೃದಯವೂ ಕರಗಿ ನೀರಾಗಿ ಹೋಯಿತು. ಮಹಿಮಚರಣನ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು.

ಪರಮಹಂಸರು ಆತನ ಕಡೆ ನೋಡಿ ಹಾಡುತ್ತಿದಾರೆ:

ನಂಬಿ ಕರೆದರೆ ತಾಯಿ ಓ ಎನ್ನದಿಹಳೇನೊ ?
ನಿನ್ನ ತೊರೆದವಳೆಂತು ಇರಬಲ್ಲಳೊ ? . . .

ಶಿವಪುರದಿಂದ ಅನೇಕ ಮಂದಿ ಭಕ್ತರು ಬಂದಿದಾರೆ. ಅವರು ಅಷ್ಟು ದೂರದಿಂದ ಶ್ರಮವಹಿಸಿ ಬಂದಿರುವುದನ್ನು ನೋಡಿ ಪರಮಹಂಸರ ಕೈಯಲ್ಲಿ ಸುಮ್ಮನೆ ಇದ್ದುಬಿಡಲಾಗಲಿಲ್ಲ. ಮುಖ್ಯ ಮುಖ್ಯವಾದ ವಿಷಯಗಳನ್ನು ಅವರಿಗೆ ಹೇಳಲಾರಂಭಿಸಿದಾರೆ.

ಶ್ರೀರಾಮಕೃಷ್ಣರು: "ಭಗವಂತನೊಬ್ಬನೇ ಸತ್ಯ ಉಳಿದುದೆಲ್ಲಾ ಅನಿತ್ಯ. ತೋಟ ಮತ್ತು ಅದರ ಯಜಮಾನ. ಭಗವಂತ ಮತ್ತು ಆತನ

ಐಶ್ವರ್ಯ. ಜನರ ಕಣ್ಣೆಲ್ಲಾ ತೋಟದ ಕಡೆಗೇ. ಯಜಮಾನನನ್ನು ನೋಡಬೇಕೆಂಬುವವರು ಎಷ್ಟು ಅಲ್ಪ ಮಂದಿ!"

ಭಕ್ತ: "ನಿಜ. ಆದರೆ ಮಾರ್ಗವೇನು?"

ಶ್ರೀರಾಮಕೃಷ್ಣರು: "ಸದಸದ್ವಿಚಾರ. ಭಗವಂತನೊಬ್ಬನೇ ಸತ್ಯ ಉಳಿದುದೆಲ್ಲಾ ಅನಿತ್ಯ—ಇದರ ಸಂಬಂಧವಾಗಿ ಸರ್ವದಾ ವಿಚಾರ ಮಾಡುತ್ತಿರಬೇಕು. ವ್ಯಾಕುಲನಾಗಿ ಕರೆ."

ಭಕ್ತ: "ಮಹಾಶಯರೆ, ಸಮಯವೆಲ್ಲಿ?"

ಶ್ರೀರಾಮಕೃಷ್ಣರು: "ಯಾರಿಗೆ ಸಮಯವಿರುವುದೊ ಅವರು ಧ್ಯಾನ, ಭಜನೆ ಮಾಡಲೇಬೇಕು. ಆದರೆ ಯಾರಿಗೆ ಸಮಯವಿಲ್ಲವೊ ಅವರು ದಿನಕ್ಕೆ ಎರಡು ವೇಳೆ ಹೃತ್ಪೂರ್ವಕವಾಗಿ ಭಗವಂತನಿಗೆ ನಮಸ್ಕಾರ ಹಾಕಲಿ. ಆತ ಅಂತರ್ಯಾಮಿ—ಆತನಿಗೆ ಗೊತ್ತಿದೆ ಇವರು ಇನ್ನೇನು ತಾನೆ ಮಾಡಿಯಾರು, ಇವರಿಗೆ ಬೇಕಾದಷ್ಟು ಕೆಲಸಕಾರ್ಯಗಳಿವೆಯಲ್ಲ ಪಾಪ ಎಂದು. ಆತನನ್ನು ಪ್ರಾರ್ಥಿಸಲು ನಿಮಗೆ ಸಮಯವಿಲ್ಲ; ಆದ್ದರಿಂದ ಆತನಿಗೆ ನಿಮ್ಮ ವಕಾಲತ್ತನ್ನು ವಹಿಸಿಬಿಡಿ. ಆದರೆ ನೋಡಿಕೊಳ್ಳಿ, ಆತನ ಸಾಕ್ಷಾತ್ಕಾರವನ್ನ ಪಡೆದುಕೊಳ್ಳದೆಹೋದಿರಿ ಎಂದರೆ, ಆತನ ದರ್ಶನವನ್ನು ಮಾಡಿಕೊಳ್ಳದೆಹೋದಿರಿ ಎಂದರೆ ಜೀವನ ಬರಿದೆ ವ್ಯರ್ಥವಾದಂತೆ."

ಒಬ್ಬ ಭಕ್ತ: "ನಿಮ್ಮ ದರ್ಶನ ಮಾಡಿದರೆ ಭಗವಂತನ ದರ್ಶನ ಮಾಡಿದ ಹಾಗೇ."

ಶ್ರೀರಾಮಕೃಷ್ಣರು: "ಮತ್ತೆ ಆ ರೀತಿಯಾಗಿ ಎಂದಿಗೂ ಹೇಳಬೇಡ. ಅಲೆ ಗಂಗೆಗೆ ಸೇರಿದುದೇ ವಿನಾ ಎಂದಿಗೂ ಗಂಗೆ ಅಲೆಗೆ ಸೇರಿದುದಲ್ಲ. 'ನಾನು ಒಬ್ಬ ದೊಡ್ಡ ಮನುಷ್ಯ', 'ನಾನು ಅಂಥವನು'— ಈ ವಿಧದ ಅಹಂಕಾರಗಳೆಲ್ಲ ಹೋಗದ ಹೊರತು ಭಗವಂತನ ಸಾಕ್ಷಾತ್ಕಾರವನ್ನ ಪಡೆಯಲಾಗುವುದಿಲ್ಲ. 'ಅಹಂ' ಎಂಬ ಗುಡ್ಡವನ್ನ 'ಭಕ್ತಿ' ಎಂಬ ನೀರಿನಿಂದ ನೆನೆಯಿಸಿ ನೆಲಸಮ ಮಾಡಿಬಿಡು."

ಭಕ್ತ: "ಭಗವಂತ ಏಕೆ ನಮ್ಮನ್ನು ಸಂಸಾರದಲ್ಲಿ ಇಟ್ಟಿದಾನೆ?"

ಶ್ರೀರಾಮಕೃಷ್ಣರು: "ತನ್ನ ಸೃಷ್ಟಿಯನ್ನು ಮುಂದುವರಿಸಲು. ಅದು ಆತನ ಇಚ್ಛೆ, ಆತನ ಮಾಯೆ. ಕಾಮಕಾಂಚನಗಳಿಂದ ಮನುಷ್ಯನನ್ನು ಭ್ರಾಂತಿಗೊಳಿಸಿ ಇಟ್ಟಿದಾನೆ."

ಭಕ್ತ : "ಏತಕ್ಕೆ ಆತ ನಮ್ಮನ್ನು ಭ್ರಾಂತಿಗೊಳಿಸಿ ಇಟ್ಟಿದ್ದಾನೆ? ಏಕೆ ಆತ ಹಾಗೆ ಇಚ್ಛಿಸಿದ?"

ಶ್ರೀರಾಮಕೃಷ್ಣರು : "ಭಗವದಾನಂದವನ್ನು ಸವಿಯಲು ಒಮ್ಮೆ ಆತ ನಮ್ಮನ್ನು ಬಿಟ್ಟುಕೊಟ್ಟುದೇ ಆದರೆ, ಬಳಿಕ ಯಾರಿಗೂ ಈ ಸಂಸಾರವನ್ನು ನಡೆಯಿಸಿಕೊಂಡುಹೋಗಲು ಇಚ್ಛೆಯಾಗುವುದಿಲ್ಲ. ಸೃಷ್ಟಿ ನಿಂತೇ ಹೋಗಿ ಬಿಡುತ್ತದೆ.

"ದಿನಸಿ ವ್ಯಾಪಾರಿ ತನ್ನ ಉಗ್ರಾಣದಲ್ಲಿ ದೊಡ್ಡ ದೊಡ್ಡ ಚೀಲಗಳಲ್ಲಿ ಅಕ್ಕಿಯನ್ನು ಕಟ್ಟಿ ಇಡುತ್ತಾನೆ. ಇಲಿಗಳು ಆ ಮೂಟೆಗಳ ಹತ್ತಿರ ಹೋಗದಿರಲೆಂದು ಅವುಗಳ ಹತ್ತಿರವೇ ಆತ ಒಂದು ಮೊರದಲ್ಲಿ ಪುರಿಯನ್ನು ಇಡುತ್ತಾನೆ. ಈ ಪುರಿ ಅವಕ್ಕೆ ಬಹಳ ಸಿಹಿಯಾಗಿ ತೋರುತ್ತದೆ. ಆದ್ದರಿಂದ ಅವು ಇಡೀ ರಾತ್ರಿಯೆಲ್ಲಾ 'ಕರ್‍ಕ, ಕರ್‍ಕ' ಅಂತ ಆ ಪುರಿಯನ್ನು ತಿನ್ನುತ್ತಲೇ ಇರುತ್ತವೆ. ಅಕ್ಕಿ ಮೂಟೆಗಳ ಕಡೆಗೆ ಅವು ಹೋಗುವುದೇ ಇಲ್ಲ. ಆದರೆ ನೋಡು! ಒಂದು ಸೇರು ಅಕ್ಕಿಯನ್ನು ಹುರಿದರೆ ಹದಿನಾರು ಸೇರು ಪುರಿಯಾಗುತ್ತದೆ. ಕಾಮಕಾಂಚನಗಳಾನಂದದೊಡನೆ ಹೋಲಿಸಿ ನೋಡಿದರೆ ಭಗವದಾನಂದ ಎಷ್ಟು ಅಮಿತವಾದ್ದು! ಭಗವಂತನ ರೂಪವನ್ನು ಚಿಂತಿಸಿದುದೇ ಆದರೆ, ರಂಭೆ ತಿಲೋತ್ತಮೆಯರ ರೂಪ ಚಿತೆಯ ಭಸ್ಮವೇ ಆಗಿ ತೋರಿಬರುತ್ತದೆ."

ಭಕ್ತ : "ಆತನ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ವ್ಯಾಕುಲತೆ ನಮಗೇಕೆ ಉಂಟಾಗುತ್ತಿಲ್ಲ?"

ಶ್ರೀರಾಮಕೃಷ್ಣರು: "ಭೋಗಾಂತವಾಗದವರೆಗೆ ವ್ಯಾಕುಲತೆ ಉಂಟಾಗುವುದಿಲ್ಲ. ಕಾಮಕಾಂಚನಗಳ ಭೋಗವನ್ನು ಎಷ್ಟು ಅನುಭವಿಸಬೇಕಾಗಿರುವುದೊ ಅಷ್ಟನ್ನೂ ಅನುಭವಿಸದವರೆಗೆ ಜಗನ್ಮಾತೆಯ ಭಾವನೆಯೇ ಮನಸ್ಸಿನಲ್ಲಿ ಏಳದು. ಮಗು ಆಟದಲ್ಲಿ ನಿರತವಾಗಿರುವಾಗ ಅದಕ್ಕೆ ತಾಯಿ ಬೇಕಾಗದು. ಆಟ ಮುಗಿಯಿತು ಎಂದರೆ ಆಗ ಅದು ಹೇಳುತ್ತದೆ: 'ತಾಯಿಯ ಹತ್ತಿರಕ್ಕೆ ಹೋಗಬೇಕು.' ಹೃದೂನ ಮಗು ಪಾರಿವಾಳಗಳೊಡನೆ ಆಟವಾಡುತ್ತಿತ್ತು. ಅದು ಅವನ್ನು ಕರೆಯುತ್ತಿತ್ತು: 'ಬಾ! ತೀ, ತೀ!' ಅವುಗಳೊಡನೆ ಆಟವಾಡಿ ಅದಕ್ಕೆ ತೃಪ್ತಿಯಾಗುವುದೇ ತಡ ಅಳಲಾರಂಭಿಸಿತು. ಆಗ ಒಬ್ಬ ಅಪರಿಚಿತ ಅದರ ಹತ್ತಿರಕ್ಕೆ ಬಂದು ಹೇಳಿದ: 'ಬಾ, ನಿನ್ನನ್ನ ನಿನ್ನ ತಾಯಿಯ ಹತ್ತಿರಕ್ಕೆ ಕರೆದುಕೊಂಡು

ಹೋಗುತ್ತೇನೆ.' ಅದು ಆತನ ಹೆಗಲು ಹತ್ತಿ ಯಾವ ಯೋಚನೆಯನ್ನೂ ಮಾಡದೆ ಹೊರಟೇ ಹೋಯಿತು.

"ಯಾರು ನಿತ್ಯಸಿದ್ಧರೊ ಅವರು ಸಂಸಾರಕ್ಕೆ ಕಾಲಿಡಬೇಕಾಗಿರುವುದಿಲ್ಲ. ಅವರ ಭೋಗವಾಸನೆ, ಹುಟ್ಟುವುದಕ್ಕೆ ಮುನ್ನವೇ ಪೂರ್ಣಗೊಂಡು ಬಿಟ್ಟಿರುತ್ತದೆ."

ಘಂಟೆ ಸಾಯಂಕಾಲ ಐದು. ಡಾಕ್ಟರ್ ಮಧುಸೂದನ ಬಂದಿದಾನೆ. ದಬ್ಬೆ ಪಟ್ಟಿ ಇವುಗಳನ್ನೆಲ್ಲ ಸಿದ್ಧಮಾಡಿಕೊಳ್ಳುತ್ತಿದಾನೆ. ಪರಮಹಂಸರು ಬಾಲಕನ ಹಾಗೆ ನಗುತ್ತ ಹೇಳುತ್ತಿದಾರೆ: "ನೀನು ಇಹಪರದ ಮಧು-ಸೂದನ."

ಡಾಕ್ಟರ್ ಮಧುಸೂದನ ನಗುತ್ತ: "ನಾನು ಆ ಹೆಸರಿನ ಹೊರೆಯನ್ನು ಹೊತ್ತುಕೊಂಡಿರುವುದೆಷ್ಟೊ ಅಷ್ಟೆ."

ಶ್ರೀರಾಮಕೃಷ್ಣರು ನಗುತ್ತ: "ಏನು, ಹೆಸರೇನು ಕಡಮೆಯಾದುದೆ? ಭಗವಂತನಿಗೂ ಆತನ ಹೆಸರಿಗೂ ವ್ಯತ್ಯಾಸವೇನಿಲ್ಲ. ಸತ್ಯ-ಭಾಮೆ ಚಿನ್ನ, ರತ್ನ, ಮಾಣಿಕ್ಯ ಇವುಗಳಿಂದ ಶ್ರೀಕೃಷ್ಣನನ್ನು ತುಲಾಯಂತ್ರದಲ್ಲಿ ತೂಗಲು ಪ್ರಯತ್ನ ಮಾಡಿದಾಗ ಆಕೆ ತಕ್ಕಡಿತಟ್ಟೆಗಳನ್ನ ಒಂದು ಸಮತೂಕಕ್ಕೆ ತರಲಾಗಲಿಲ್ಲ. ಆಗ ರುಕ್ಮಿಣಿ ತುಳಸಿ ಎಲೆಯ ಮೇಲೆ ಕೃಷ್ಣನ ಹೆಸರನ್ನು ಬರೆದು ತೂಕದ ತಟ್ಟೆಗೆ ಹಾಕಿದಳು. ಒಡನೆ ತೂಕ ಸರಿಹೋಗಿಬಿಟ್ಟಿತು."

ಡಾಕ್ಟರ್ ಮಧುಸೂದನ ಪರಮಹಂಸರ ತೋಳಿಗೆ ಪಟ್ಟಿ ಕಟ್ಟಲು ಈಗ ಸಿದ್ಧವಾಗಿದಾನೆ. ನೆಲದ ಮೇಲೆ ಹಾಸಿಗೆಯನ್ನು ಹಾಸಲಾಯಿತು. ಪರಮಹಂಸರು ನಗುತ್ತ ನಗುತ್ತ ಅದರ ಮೇಲೆ ಮಲಗಿಕೊಂಡರು. ಅವರು ರಾಗ ಎಳೆದು ಹೇಳುತ್ತಿದಾರೆ: "ಇದೇ ರಾಧೆಯ ಕೊನೆಯ ಅವಸ್ಥೆ. ಆದರೆ ಬೃಂದೆ ಹೇಳುತ್ತಿದಾಳೆ: 'ಇನ್ನೂ ಏನೇನು ಆಗಬೇಕೊ?'"

ಭಕ್ತರು ಪರಮಹಂಸರ ಸುತ್ತಲೂ ಕುಳಿತಿದಾರೆ. ಪರಮಹಂಸರು ಈಗ ಹಾಡುತ್ತಿದಾರೆ:

ಗೋಪಿಯರೆಲ್ಲರು ಒಂದುಗೂಡಿದರು ಸರೋವರದ ಸುತ್ತ.

ಈಗ ಪರಮಹಂಸರೂ ನಗುತ್ತಿದಾರೆ, ಭಕ್ತರೂ ನಗುತ್ತಿದಾರೆ.

ಪರಮಹಂಸರ ತೋಳಿಗೆ ಪಟ್ಟಿಯನ್ನು ಕಟ್ಟಿಯಾದಮೇಲೆ ಅವರು ಹೇಳುತ್ತಿದಾರೆ: "ನನಗೆ ಕಲ್ಕತ್ತದ ಡಾಕ್ಟರುಗಳಲ್ಲಿ ಅಷ್ಟಾಗಿ ಶ್ರದ್ಧೆ

ಯಿಲ್ಲ. ಶಂಭುಮಲ್ಲಿಕನಿಗೆ ಸನ್ನಿ ಮುಚ್ಚಿಕೊಂಡಿದ್ದಾಗ ಡಾಕ್ಟರ್ ಸರ್ವಾಧಿಕಾರಿ ಹೇಳಿದ: 'ಓ, ಇದು ಏನೂ ಅಲ್ಲ. ಔಷಧದ ಮತ್ತು.' ಆತ ಹಾಗೆಂದ ಸ್ವಲ್ಪ ಹೊತ್ತಿನೊಳಗೇ ಶಂಭುಮಲ್ಲಿಕ ದೇಹತ್ಯಾಗಮಾಡಿ ಬಿಟ್ಟ."

ಸಾಯಂಕಾಲವಾದನಂತರ ಎಲ್ಲಾ ದೇವಾಲಯಗಳಲ್ಲೂ ಸಾಯಂ ಮಂಗಳಾರತಿ ಮುಗಿದುಹೋಯಿತು. ಅಧರಸೇನ ಕಲ್ಕತ್ತದಿಂದ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಮಹಿಮಚರಣ, ರಾಖಾಲ, ಮಾಸ್ಟರ್ ಕೊಠಡಿಯಲ್ಲಿ ಕುಳಿತಿದಾರೆ.

ಅಧರಸೇನ: "ನಿಮ್ಮ ದೇಹಾರೋಗ್ಯ ಹೇಗಿದೆ?"

ಶ್ರೀರಾಮಕೃಷ್ಣರು ಪ್ರೀತಿಯಿಂದ: "ಇಲ್ಲಿ ನೋಡು. ತೋಳಿಗೆ ಪೆಟ್ಟು ಬಿದ್ದು ಏನಾಗಿಬಿಟ್ಟಿದೆ. (ನಗುತ್ತ) ಕಣ್ಣಿಗೇ ಕಾಣಿಸುತ್ತಿದೆ, ಮತ್ತೆ ಹೇಗೆ ಅಂತಲಂತೆ!"

ಅಧರಸೇನ ಭಕ್ತರೊಡನೆ ನೆಲದ ಮೇಲೆ ಕುಳಿತುಕೊಂಡಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನೀನು ಇದರ ಮೇಲೆ ಸ್ವಲ್ಪ ಕೈ ಆಡಿಸು." ಅಧರಸೇನ ಚಿಕ್ಕ ಮಂಚದ ಕೊನೆಯಲ್ಲಿ ಕುಳಿತು ಅವರ ಪಾದಗಳನ್ನು ಒತ್ತುತ್ತಿದಾನೆ.

ಪರಮಹಂಸರು ಈಗ ಮಹಿಮಚರಣನೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಅಹೇತುಕ ಭಕ್ತಿ—ಇದನ್ನು ನೀನು ಅಭ್ಯಾಸ ಮಾಡುವುದಾದರೆ ನಿನಗೆ ಬಹಳ ಒಳ್ಳೆಯದಾಗುತ್ತದೆ. ಈ ವಿಧದ ಭಕ್ತಿಯನ್ನು ಹೊಂದಿದ ಭಕ್ತ ಹೇಳುತ್ತಾನೆ: 'ಹೇ ಭಗವಂತ, ಮುಕ್ತಿ, ಕೀರ್ತಿ, ಹಣ, ರೋಗ ಗುಣವಾಗುವಿಕೆ—ಇವು ಯಾವೂ ನನಗೆ ಬೇಡ. ನನಗೆ ನೀನೊಬ್ಬನೇ ಬೇಕು.' ಇದಕ್ಕೇ ಅಹೇತುಕ ಭಕ್ತಿ ಅಂತ ಹೆಸರು. ಧನಿಕನ ಹತ್ತಿರ ಅನೇಕರು ಬರುತ್ತಾರೆ—ಅನೇಕ ಕಾಮನೆಗಳನ್ನು ಹೃದಯದಲ್ಲಿಟ್ಟುಕೊಂಡು. ಆದರೆ ಯಾರಿಗೇ ಆಗಲಿ ಏನೂ ಬೇಕಾಗದೆ, ಪ್ರೀತಿಯಿಂದ ಧನಿಕನನ್ನು ನೋಡಲು ಬಂದರೆ ಆಗ ಧನಿಕನಿಗೆ ಆತನ ಮೇಲೆ ಪ್ರೀತಿಯುಂಟಾಗುತ್ತದೆ. ಪ್ರಹ್ಲಾದನದು ಅಹೇತುಕ ಭಕ್ತಿ—ಭಗವಂತನಲ್ಲಿ ಶುದ್ಧ ನಿಷ್ಕಾಮ ಪ್ರೀತಿ."

ಮಹಿಮಚರಣ ಸುಮ್ಮನೆ ಕುಳಿತಿದಾನೆ. ಪರಮಹಂಸರು ಮತ್ತೆ ಆತನ ಕಡೆಗೆ ತಿರುಗಿ ಮಾತನಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಒಳ್ಳೇದು, ನಿನ್ನ ಭಾವಕ್ಕನುಗುಣವಾಗಿ ಕೆಲವು ಮಾತು ಹೇಳುತ್ತೇನೆ ಕೇಳು. ವೇದಾಂತದ ದೃಷ್ಟಿಯ ಪ್ರಕಾರ ಪ್ರತಿಯೊಬ್ಬನೂ ತನ್ನ ನಿಜಸ್ವರೂಪವನ್ನು ಅರಿತುಕೊಳ್ಳಬೇಕು. ಆದರೆ 'ಅಹಂ' ಎಂಬುದನ್ನು ತ್ಯಜಿಸದ ಹೊರತು ಅದು ಸಾಧ್ಯವಿಲ್ಲ. 'ಅಹಂ' ಎಂಬುದು, ನೀರು ಎರಡು ಭಾಗವಾಗಿದೆಯೊ ಏನೊ ಎಂಬಂತೆ ತೋರಿಸುವ ಕೋಲು ಇದ್ದ ಹಾಗೆ. ನಾನು ಪ್ರತ್ಯೇಕ ನೀನು ಪ್ರತ್ಯೇಕ ಎಂಬ ಬೋಧೆಯನ್ನು ತರುತ್ತದೆ. ಆದರೆ ಸಮಾಧಿಯಲ್ಲಿ ಈ 'ಅಹಂ' ಎಂಬುದು ಹೊರಟುಹೋದಾಗ ಬೋಧೆಯಾಗುತ್ತದೆ, ಬ್ರಹ್ಮ ನಮ್ಮ ಬೋಧೆಯ ಬೋಧ ಎಂಬುದಾಗಿ.

"'ನಾನು ಮಹಿಮಚರಣಚಕ್ರವರ್ತಿ', 'ನಾನು ವಿದ್ವಾನ್' ಎಂಬ ಈ 'ಅಹಂ' ಅನ್ನು ತ್ಯಾಗಮಾಡಬೇಕು. ಆದರೆ 'ವಿದ್ಯಾ ಅಹಂ' ನಿಂದ ಯಾವ ತೊಂದರೆಯೂ ಬಾರದು. ಶಂಕರಾಚಾರ್ಯರು ಲೋಕ ಶಿಕ್ಷಣಕ್ಕಾಗಿ 'ವಿದ್ಯಾ ಅಹಂ' ಅನ್ನು ಇಟ್ಟುಕೊಂಡಿದ್ದರು.

"ಹೆಂಗಸರ ಸಂಬಂಧವಾಗಿ ಬಹಳ ಎಚ್ಚರಿಕೆಯಿಂದ ಇರದಿದ್ದರೆ ಬ್ರಹ್ಮಜ್ಞಾನ ದೊರೆಯದು. ಆದ್ದರಿಂದ ಸಂಸಾರದಲ್ಲಿ ಇದನ್ನು ದೊರಕಿಸಿಕೊಳ್ಳುವುದು ಬಹಳ ಕಠಿನ. ಎಷ್ಟೇ ಬುದ್ಧಿವಂತನಾಗಿದ್ದರೂ, ಮಸಿ ಹಿಡಿದ ಕೊಠಡಿಯಲ್ಲಿದ್ದರೆ, ಶರೀರಕ್ಕೆ ಮಸಿ ಬಳಿದೇ ಬಳಿದುಕೊಳ್ಳುತ್ತದೆ. ಯುವತಿಯ ಸಹವಾಸ ಕಾಮವಿಹೀನನಲ್ಲೂ ಕಾಮೋದ್ರೇಕವನ್ನುಂಟುಮಾಡಿ ಬಿಡುತ್ತದೆ.

"ಆದರೆ ಸಂಸಾರದಲ್ಲಿರುವ ಜ್ಞಾನಮಾರ್ಗಿ ಯಾವಾಗಲಾದರೂ ಒಮ್ಮೊಮ್ಮೆ ತನ್ನ ಸ್ವಂತ ಸತಿಯ ಸಹವಾಸಮಾಡುವುದೇನು ಕೆಡುಕಾದ್ದೇನಲ್ಲ. ಸ್ವಾಭಾವಿಕ ದೇಹಬಾಧೆಯನ್ನು ತೀರಿಸಿಕೊಳ್ಳುವ ಹಾಗೆ, ಈ ಬಾಧೆಯನ್ನೂ ತೀರಿಸಿಕೊಂಡಂತಾಗುತ್ತದೆ. ಇದು ಲಾಡು ಜಿಲೇಬಿಯನ್ನು ಅಪರೂಪಕ್ಕೆ ಒಮ್ಮೊಮ್ಮೆ ತಿಂದ ಹಾಗೆ. (ಮಹಿಮಚರಣ ನಗುತ್ತಿದಾನೆ.) ಇದು ಗೃಹಸ್ಥರಿಗೆ ಅಷ್ಟು ಕೆಡುಕಾದ್ದೇನಲ್ಲ.

"ಆದರೆ ಸನ್ಯಾಸಿಗೆ ಇದು ಬಹಳ ಕೆಡಕಾದ್ದು. ಸನ್ಯಾಸಿ ಹೆಂಗಸಿನ ಚಿತ್ರಪಟವನ್ನೂ ನೋಡಕೂಡದು. ಸನ್ಯಾಸಿ ಹೆಂಗಸಿನ ಸಹವಾಸ ಮಾಡುವುದೆಂದರೆ, ಉಗುಳಿದ ಉಗುಳನ್ನು ಮತ್ತೆ ನುಂಗಿದ ಹಾಗೆ.

"ಹೆಂಗಸಿನೊಡನೆ ಕುಳಿತುಕೊಂಡು ಸನ್ಯಾಸಿ ಮಾತುಕತೆಯಾಡ

ಕೂಡದು—ಆಕೆ ಭಕ್ತಶಿಖಾಮಣಿಯಾಗಿದ್ದರು ಕೂಡ. ಜಿತೇಂದ್ರಿಯನಾಗಿದ್ದರೂ ಮಾತುಕತೆಯಾಡಕೂಡದು.

" ಸನ್ಯಾಸಿ ಕಾಮ, ಕಾಂಚನ ಎರಡನ್ನೂ ತ್ಯಜಿಸಬೇಕು—ಹೆಂಗಸರ ಪಟವನ್ನೂ ಹೇಗೆ ನೋಡಕೂಡದೊ, ಹಾಗೇ ಕಾಂಚನ, ಎಂದರೆ ಹಣವನ್ನೂ ಸ್ಪರ್ಶಮಾಡಕೂಡದು. ಹಣ ಹತ್ತಿರ ಇತ್ತು ಎಂದರೇ ಆತನಿಗೆ ಕೆಡುಕು, ಏಕೆಂದರೆ ಅದು ಲೆಕ್ಕಾಚಾರ, ದುಶ್ಚಿಂತೆ, ಧನಮದ, ಕ್ರೋಧ ಇವೇ ಮೊದಲಾದುವನ್ನು ಉಂಟುಮಾಡಿಬಿಡುತ್ತದೆ. ಇದು ಈಗತಾನೆ ಪ್ರಕಾಶಮಾನವಾಗಿ ಹೊಳೆಯುತ್ತಿದ್ದ ಸೂರ್ಯನನ್ನು ಇದ್ದಕ್ಕಿದ್ದಹಾಗೆ ಮೋಡ ಬಂದು ಮುಚ್ಚಿಕೊಳ್ಳುವ ಹಾಗೆ.

" ಅದಕ್ಕಾಗೇ ನನಗಾಗಿ ಮಾರ್ವಾಡಿ ಭಕ್ತರು ಹೃದಯ ಹತ್ತಿರ ಹಣ ಇಡಲು ಇಚ್ಛಿಸಿದಾಗ ನಾನು ಅವರಿಗೆ ಹೇಳಿದೆ: 'ಅದೆಲ್ಲ ಆಗುವುದಿಲ್ಲ—ಹತ್ತಿರವಿದ್ದರೇ ಮೋಡವೇಳುತ್ತದೆ.'

" ಸನ್ಯಾಸಿಗೆ ಇಂಥ ಕಠಿನ ನಿಯಮಗಳೇಕೆ? ಆತನ ಸ್ವಂತ ಮಂಗಳಕ್ಕೇನೊ ನಿಜ, ಆದರೆ ಲೋಕಶಿಕ್ಷಣಕ್ಕು ಕೂಡ. ಸನ್ಯಾಸಿ ತಾನು ನಿರ್ಲಿಪ್ತನಾಗಿದ್ದರೂ, ಜಿತೇಂದ್ರಿಯನಾಗಿದ್ದರೂ ಲೋಕಶಿಕ್ಷಣಕ್ಕಾಗಿ ಕಾಮಕಾಂಚನವನ್ನ ಈ ರೀತಿಯಾಗಿ ತ್ಯಜಿಸಬೇಕು.

" ಸನ್ಯಾಸಿಯ ನೂರಕ್ಕೆ ನೂರು ಭಾಗ ತ್ಯಾಗವನ್ನು ನೋಡಿದರೆ ತಾನೆ ಸಾಮಾನ್ಯ ಜನರಿಗೆ ಸಾಹಸವುಂಟಾಗುತ್ತದೆ. ಆಗ ಮಾತ್ರ ತಾನೆ ಅವರು ಕಾಮಕಾಂಚನ ತ್ಯಜಿಸಲು ಪ್ರಯತ್ನಮಾಡುತ್ತಾರೆ. ಸನ್ಯಾಸಿ ಈ ಆದರ್ಶವನ್ನ ಅವರ ಮುಂದೆ ಇಡಲಿಲ್ಲ ಎಂದರೆ, ಬೇರೆ ಇನ್ನಾರಿಗೆ ತಾನೆ ಸಾಧ್ಯ?

" ಮೊದಲು ಭಗವಂತನ ಸಾಕ್ಷಾತ್ಕಾರವನ್ನು ದೊರಕಿಸಿಕೊಂಡರೆ ಮಾತ್ರ ಬಳಿಕ ಸಂಸಾರದಲ್ಲಿರಲು ಸಾಧ್ಯ. ಇದು ಹಾಲಿನಿಂದ ಬೆಣ್ಣೆ ತೆಗೆದು ನೀರಿನಲ್ಲಿ ಇಟ್ಟ ಹಾಗೆ. ಜನಕರಾಜ ಮೊದಲು ಬ್ರಹ್ಮಜ್ಞಾನವನ್ನು ಪಡೆದುಕೊಂಡು ಅನಂತರ ಸಂಸಾರದಲ್ಲಿದ್ದ.

" ಜನಕರಾಜ ಎರಡು ವಿಧದ ಕತ್ತಿಗಳನ್ನು ತಿರುಗಿಸುತ್ತಿದ್ದ—ಒಂದು ಜ್ಞಾನದ್ದು, ಇನ್ನೊಂದು ಕರ್ಮದ್ದು. ಸನ್ಯಾಸಿ ಕರ್ಮತ್ಯಾಗ ಮಾಡುತ್ತಾನೆ. ಆದ್ದರಿಂದ ಆತನ ರಕ್ಷಣೆಗೆ ಒಂದೇ ಒಂದು ಕತ್ತಿ—ಜ್ಞಾನದ್ದು. ಜನಕರಾಜನ ಹಾಗೆ ಜ್ಞಾನವನ್ನು ಪಡೆದುಕೊಂಡ ಸಂಸಾರಿ, ಗಿಡದ ಕೆಳ

ಗಡೆಯ ಹಣ್ಣು ಮೇಲುಗಡೆಯ ಹಣ್ಣು ಎರಡನ್ನೂ ತಿನ್ನಬಲ್ಲ. ಆತ ಸಾಧು ಸೇವೆ, ಅಥಿತಿಸತ್ಕಾರ ಇವೆಲ್ಲವನ್ನೂ ಮಾಡಬಲ್ಲ. ನಾನು ಭಗವತಿಗೆ ಹೇಳು ತ್ತಿದ್ದೆ: 'ಹೇ ತಾಯೆ, ನನಗೆ ಒಣ ಸಾಧು ಆಗಲು ಇಚ್ಛೆಯಿಲ್ಲ.'

"ಬ್ರಹ್ಮಜ್ಞಾನ ದೊರೆತನಂತರ ಊಟೋಪಚಾರಗಳ ವಿಷಯದಲ್ಲಿ ಒಂದು ನಿರ್ದಿಷ್ಟ ನಿಯಮವೇನಿರದು. ಹಿಂದಿನ ಕಾಲದ ಬ್ರಹ್ಮಜ್ಞಾನಿ ಋಷಿಗಳು ಬ್ರಹ್ಮಾನಂದದಲ್ಲೇ ಮಗ್ನರಾಗಿದ್ದುದರಿಂದ ಎಲ್ಲವನ್ನೂ ತಿಂದು ಬಿಡುತ್ತಿದ್ದರು—ಹಂದಿ ಮಾಂಸ ಕೂಡ.

(ಮಹಿಮಚರಣನಿಗೆ) "ಒಟ್ಟನಲ್ಲಿ ಎರಡು ವಿಧದ ಯೋಗಗಳಿವೆ—ಕರ್ಮಯೋಗ, ಮನೋಯೋಗ, ಎಂದರೆ ಕರ್ಮದ ಮೂಲಕ ಯೋಗ, ಮನಸ್ಸಿನ ಮೂಲಕ ಯೋಗ.

"ಒಟ್ಟು ನಾಲ್ಕು ಆಶ್ರಮಗಳಿವೆ: ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ. ಮೊದಲ ಮೂರು ಆಶ್ರಮಗಳಲ್ಲೂ ಕರ್ಮ ಮಾಡ ಬೇಕಾಗುತ್ತದೆ. ಸನ್ಯಾಸಿ ದಂಡಕಮಂಡಲುಧಾರಿಯಾಗಿ ಭಿಕ್ಷಾಪಾತ್ರೆ ಯನ್ನು ಹಿಡಿದುಕೊಳ್ಳಬೇಕಾಗುತ್ತದೆ. ಆತನೂ ಕೆಲವು ನಿತ್ಯಕರ್ಮಗಳನ್ನ ಮಾಡಿದರೂ ಮಾಡಬಹುದು, ಆದರೆ ಆತನ ಮನಸ್ಸು ಅವುಗಳಲ್ಲಿ ಆಸಕ್ತ ವಾಗಿರುವುದಿಲ್ಲ; ಅವುಗಳನ್ನು ತಾನು ಮಾಡುತ್ತಿದೇನೆ ಎಂಬ ಭಾವನೆಯೇ ಆತನಿಗಿರದು. ಕೆಲವು ಮಂದಿ ಸನ್ಯಾಸಿಗಳು ನಿತ್ಯಕರ್ಮ ಮಾಡುತ್ತಾರೆ—ಲೋಕಶಿಕ್ಷಣಕ್ಕಾಗಿ. ಗೃಹಸ್ಥರಿಗೇ ಆಗಲಿ ಅಥವಾ ಅನ್ಯ ಆಶ್ರಮಿಗಳಿಗೇ ಆಗಲಿ ನಿಷ್ಕಾಮ ಕರ್ಮ ಮಾಡಲು ಸಾಧ್ಯವಾಗುವುದಾದರೆ, ಆಗ ಅವರಿಗೆ ಕರ್ಮದ ಮೂಲಕ ಯೋಗವುಂಟಾಗುತ್ತದೆ.

"ಪರಮಹಂಸಾವಸ್ಥೆಯಲ್ಲಿ—ಉದಾಹರಣೆಗೆ ಶುಕದೇವಾದಿಗಳದು—ಎಲ್ಲ ಕರ್ಮಗಳೂ ನಿಂತುಹೋಗಿಬಿಡುತ್ತವೆ—ಪೂಜೆ, ಜಪ, ತರ್ಪಣ, ಸಂಧ್ಯಾವಂದನೆ ಇವೆಲ್ಲಾ. ಈ ಅವಸ್ಥೆಯಲ್ಲಿ ಕೇವಲ ಮನಸ್ಸಿನ ಮೂಲಕ ಯೋಗ. ಬಾಹ್ಯಿಕ ಕರ್ಮಗಳನ್ನ ಅವರು ಮಾಡಿದರೂ ಮಾಡಬಹುದು, ಇಚ್ಛೆಬಂದರೆ—ಲೋಕಶಿಕ್ಷಣಕ್ಕಾಗಿ. ಆದರೆ ಅವರಲ್ಲಿ ಸರ್ವದಾ ಸ್ಮರಣ ಮನನ ಇದ್ದೇ ಇರುತ್ತವೆ."

ಹೀಗೆ ಮಾತಾಡುತ್ತ ಮಾತಾಡುತ್ತ ಇದ್ದಹಾಗೆ ಘಂಟೆ ರಾತ್ರಿ ಎಂಟಾಗಿಬಿಟ್ಟಿತು. ಪರಮಹಂಸರು ಮಹಿಮಚರಣನನ್ನು ಶಾಸ್ತ್ರಗ್ರಂಥ ಗಳಿಂದ ಯಾವುದಾದರೂ ಕೆಲವು ಸ್ತೋತ್ರಗಳನ್ನು ಪಠಿಸುವಂತೆ ಕೇಳಿ

ಕೊಂಡರು. ಮಹಿಮಚರಣ ಉತ್ತರಗೀತೆಯಿಂದ ಪರಬ್ರಹ್ಮನ ಸಂಬಂಧ ವಾಗಿ ವರ್ಣಿತವಾಗಿರುವ ಮೊದಲನೆ ಅಧ್ಯಾಯದ ಒಂದನೆ ಶ್ಲೋಕವನ್ನು ಪಠಿಸಿದ:

ಯದೇಕಂ ನಿಷ್ಕಲಂ ಬ್ರಹ್ಮ
ವ್ಯೋಮಾತೀತಂ ನಿರಂಜನಮ್ ।
ಅಪ್ರತರ್ಕ್ಯಮವಿಜ್ಞೇಯಂ
ವಿನಾಶೋತ್ಪತ್ತಿವರ್ಜಿತಮ್ ॥ ‡

ಮಹಿಮಚರಣ ಹಾಗೇ ಓದುತ್ತ ಮುಂದುವರಿದು ಮೂರನೆ ಅಧ್ಯಾಯದ ಎಂಟನೆ ಶ್ಲೋಕ ಪಠಿಸಲಾರಂಭಿಸಿದ:

ಅಗ್ನಿರ್ದೇವೋ ದ್ವಿಜಾತೀನಾಂ
ಮುನಿನಾಂ ಹೃದಿ ದೈವತಮ್ ।
ಪ್ರತಿಮಾಸ್ವಲ್ಪಬುದ್ಧಿನಾಂ
ಸರ್ವತ್ರ ಸಮದರ್ಶಿನಾಮ್ ॥ †

"ಸರ್ವತ್ರ ಸಮದರ್ಶಿನಾಮ್" ಎಂಬ ಪಾದ ಪರಮಹಂಸರ ಕಿವಿಗೆ ಬೀಳುವುದೇ ತಡ ಅವರು ಎದ್ದುನಿಂತುಕೊಂಡು ಸಮಾಧಿಸ್ಥರಾಗಿ ಬಿಟ್ಟರು. ಪಟ್ಟಿ ಮತ್ತು ದಬ್ಬೆಗಳಿಂದ ತೋಳು ಯಾವ ರೀತಿಯಾಗಿ ಕಟ್ಟಲ್ಪಟ್ಟಿತ್ತೊ ಅದು ಹಾಗೇ ಇದೆ. ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿ ಪರಮಹಂಸರ ಮೂಲಕ ಸಮದರ್ಶಿ ಮಹಾಯೋಗಿಯ ಅವಸ್ಥೆಯನ್ನು ನೋಡುತ್ತಿದಾರೆ.

ಪರಮಹಂಸರು ಬಹಳ ಹೊತ್ತಾದನಂತರ ಪ್ರಕೃತಿಸ್ಥರಾಗಿ ತಮ್ಮ ಸ್ಥಾನದಲ್ಲಿ ಕುಳಿತುಕೊಂಡರು. ಈಗ ಪರಮಹಂಸರು ಮಹಿಮಚರಣನಿಗೆ ಹೇಳುತ್ತಿದಾರೆ, ಭಗವದ್ಭಕ್ತಿಯ ಸಂಬಂಧವಾದ ಶ್ಲೋಕಗಳನ್ನು ಆವೃತ್ತಿ ಮಾಡುವಂತೆ. ಆತ ನಾರದ ಪಂಚರಾತ್ರದಿಂದ ಕೆಲವು ಶ್ಲೋಕಗಳನ್ನು ಆವೃತ್ತಿಮಾಡುತ್ತಿದಾನೆ:

ಪ್ರೇಮದೊಳಾರಾಧಿಸೆ ದೇವರ, ಈ ಜಪತಪವಿನ್ನೇಕೆ?
ಪ್ರೇಮದೊಳಾರಾಧಿಸದಿದ್ದರೆ ಈ ಜಪತಪವಿನ್ನೇಕೆ?* ... (ಉ. ೩೨೦)

ಶ್ರೀರಾಮಕೃಷ್ಣರು: "ಆಹ! ಆಹ!"

ಈ ಶ್ಲೋಕಗಳನ್ನು ಕೇಳಿ ಪರಮಹಂಸರು ಮತ್ತೆ ಭಾವಾವಿಷ್ಟರಾಗು

---

‡ ಪರಿಶಿಷ್ಟ ೧ರಲ್ಲಿ ೪ನ್ನು ನೋಡಿ.

† ಪರಿಶಿಷ್ಟ ೧ ರಲ್ಲಿ ೫ ನ್ನು ನೋಡಿ. * ಕನ್ನಡ ಅನುವಾದ.

ವುದರಲ್ಲಿದ್ದರು. ಆದರೆ ಬಹಳ ಕಷ್ಟಪಟ್ಟು ಅದನ್ನು ತಡೆದು ಹಿಡಿದು ಕೊಂಡರು.

ಮಹಿಮಚರಣ ಈಗ ಕಾಶೀಪಂಚಕದಿಂದ ಒಂದು ಶ್ಲೋಕವನ್ನು ಪಠಿಸಿದ :

ಯಸ್ಯಾಮಿದಂ ಕಲ್ಪಿತಮಿಂದ್ರಜಾಲಂ
ಚರಾಚರಂ ಭಾತಿ ಮನೋವಿಲಾಸಮ್ ।
ಸಚ್ಚಿತ್ಸುಖೈಕಾ ಪರಮಾತ್ಮರೂಪಾ
ಸಾ ಕಾಶಿಕಾಹಂ ನಿಜಬೋಧರೂಪಾ ॥ ೨ ॥ †

"ಸಾ ಕಾಶಿಕಾಹಂ ನಿಜಬೋಧರೂಪಾ" ಎಂಬ ಚರಣವನ್ನು ಕೇಳಿದೊಡನೇ ಪರಮಹಂಸರು ನಗುತ್ತ ಹೇಳುತ್ತಿದಾರೆ: "ಯಾವುದು ಪಿಂಡಾಂಡದಲ್ಲಿ ಇದೆಯೊ, ಅದೇ ಬ್ರಹ್ಮಾಂಡದಲ್ಲೂ ಇದೆ."

ಈಗ ಮಹಿಮಚರಣ ನಿರ್ವಾಣಷಟ್ಕವನ್ನು ಪಠಿಸುತ್ತಿದಾನೆ:

ಬುದ್ಧಿಮನ ಚಿತ್ತಹಂಕಾರ ನಾನಲ್ಲ;
ಕಣ್ಣು ಕಿವಿ ಮೂಗಲ್ಲ, ನಾಲಗೆಯುಮಲ್ಲ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು! . . . ( ಉ. ೮೭೫ )

ಮಹಿಮಚರಣ "ಸಚ್ಚಿದಾನಂದಾತ್ಮ ಶಿವ ನಾನು ನಾನು" ಎಂದು ಎಷ್ಟು ಸಲ ಹೇಳಿದನೊ ಅಷ್ಟು ಸಲವೂ ಪರಮಹಂಸರು ನಗುತ್ತ ಹೇಳಿದರು: "ನಾನಲ್ಲ! ನಾನಲ್ಲ! ಸಚ್ಚಿದಾನಂದಾತ್ಮ ಶಿವ ನೀನು! ನೀನು!"

ಮಹಿಮಚರಣ ಜೀವನ್ಮುಕ್ತಿ ಗೀತೆಯಿಂದ ಕೆಲವು ಶ್ಲೋಕಗಳನ್ನು ಪಠಿಸಿದನಂತರ ಷಟ್ಚಕ್ರಗಳ ಸಂಬಂಧವಾಗಿ ಕೆಲವು ಶ್ಲೋಕಗಳನ್ನು ಪಠಿಸಿದ. ಬಳಿಕ ಆತ ಪರಮಹಂಸರಿಗೆ ತಿಳಿಸಿದ, ತಾನು ಕಾಶಿಯಲ್ಲಿ ಯೋಗಾವಸ್ಥೆಯಲ್ಲಿ ಮೃತಪಟ್ಟ ಒಬ್ಬ ಯೋಗಿಯನ್ನು ನೋಡಿದುದಾಗಿ.

ಮಹಿಮಚರಣ: "ರಾಮಗೀತೆಯಲ್ಲಿ ಬಹಳ ಒಳ್ಳೆಯ ವಿಷಯಗಳಿವೆ."

ಶ್ರೀರಾಮಕೃಷ್ಣರು ನಗುತ್ತ: "ನೀನು ಯಾವಾಗ ನೋಡಿದರೂ 'ರಾಮಗೀತೆ', 'ರಾಮಗೀತೆ' ಅನ್ನುತ್ತಲೇ ಇದೀಯೆ. ಆದ್ದರಿಂದ ನೀನು

† ಪರಿಶಿಷ್ಟ ೧ ರಲ್ಲಿ ೬ನ್ನು ನೋಡಿ.

ಒಬ್ಬ ದೊಡ್ಡ ವೇದಾಂತಿಯೇ ಇರಬೇಕು. ಆ ವಿಧದ ಪುಸ್ತಕಗಳನ್ನು ಸಾಧುಗಳು ಎಷ್ಟೋಂದಾಗಿ ಇಲ್ಲಿ ಓದುತ್ತಿದ್ದರು!"

ಈಗ ಮಹಿಮಚರಣ "ಓಂ" ಎಂಬುದರ ಸ್ವರೂಪದ ಸಂಬಂಧವಾಗಿ ಪಠಿಸುತ್ತಿದಾನೆ:

ತೈಲಧಾರವದವಿಚ್ಛಿನ್ನಮ್—ದೀರ್ಘಘಂಟಾ ನಿನಾದವತ್ ।

ಸಮಾಧಿಯ ಸಂಬಂಧವಾಗಿ ಆತ ಪಠಿಸಿದ:

ಊರ್ಧ್ವಪೂರ್ಣಮಧಃ ಪೂರ್ಣಂ
ಮಧ್ಯಪೂರ್ಣಂ ಯದಾತ್ಮಕಮ್ ।
ಸರ್ವಪೂರ್ಣಂ ಸ ಆತ್ಮೇತಿ
ಸಮಾಧಿಸ್ಥಸ್ಯ ಲಕ್ಷಣಮ್ ॥ †

ಅಧರಸೇನ, ಮಹಿಮಚರಣ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡು ಹೊರಟುಹೋದರು.

ಮಾರನೆ ದಿನ ಪರಮಹಂಸರು ಮಧ್ಯಾಹ್ನದ ಊಟ ಮುಗಿಸಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ರಾಮ, ಸುರೇಂದ್ರ, ಇನ್ನು ಕೆಲವು ಮಂದಿ ಭಕ್ತರು ಕಲ್ಕತ್ತದಿಂದ ಬಂದಿದಾರೆ. ಪರಮಹಂಸರ ಕೈ ಕೀಲು ತಪ್ಪಿರುವುದನ್ನು ನೋಡಿ ಅವರೆಲ್ಲರೂ ಚಿಂತಾಕ್ರಾಂತರಾಗಿದಾರೆ. ಮಾಸ್ಟರೂ ಹತ್ತಿರ ಕುಳಿತಿದಾನೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಭಗವತಿ ನನ್ನನ್ನು ಅಂಥ ಅವಸ್ಥೆಯಲ್ಲಿ ಇಟ್ಟಿದಾಳೆ, ನಾನು ಯಾವುದನ್ನೂ ರಹಸ್ಯವಾಗಿ ಇಟ್ಟುಕೊಳ್ಳುವ ಹಾಗಿಲ್ಲ. ನನ್ನದು ಬಾಲಕನ ಅವಸ್ಥೆ. ರಾಖಾಲನಿಗೆ ಇದು ಅರ್ಥವಾಗುತ್ತಿಲ್ಲ. ಜನ ನನ್ನ ಕೀಲು ತಪ್ಪಿದ ತೋಳನ್ನು ನೋಡಿ ನನ್ನನ್ನು ನಿಂದಿಸಬಹುದೆಂದು ಆತ ಅದು ಕಾಣದ ರೀತಿಯಲ್ಲಿ ನನ್ನ ಮೇಲೆ ಬಟ್ಟೆ ಹೊದಿಸುತ್ತಾನೆ. ಆತ ಒಂದು ಪಕ್ಕಕ್ಕೆ ಡಾಕ್ಟರ್ ಮಧುಸೂದನನನ್ನು ಕರೆದುಕೊಂಡುಹೋಗಿ ನನ್ನ ಕೀಲು ತಪ್ಪಿದ ತೋಳಿನ ವಿಷಯವಾಗಿ ಆತನಿಗೆ ತಿಳಿಸುತ್ತಿದ್ದ. ಆದರೆ ನಾನು ಗಟ್ಟಿಯಾಗಿ ಕೂಗಿ ಹೇಳಿದೆ: 'ಓ ಡಾಕ್ಟರ್ ಮಧುಸೂದನ, ಇಲ್ಲಿ ಬಂದು ನೋಡು. ನನ್ನ ಕೈ ಕೀಲು ತಪ್ಪಿಬಿಟ್ಟಿದೆ!'

"ಮಥುರಬಾಬು ಮತ್ತು ಆತನ ಹೆಂಡತಿ ಮಲಗುತ್ತಿದ್ದ ಕೊಠಡಿ

---

*. †. ಪರಿಶಿಷ್ಟ ೧ ರಲ್ಲಿ ೭, ೮ ನ್ನು ನೋಡಿ.

ಯಲ್ಲೇ ಕೆಲವು ಕಾಲ ನಾನೂ ಮಲಗುತ್ತಿದ್ದೆ. ನಾನು ಅವರ ಒಂದು ಚಿಕ್ಕ ಮಗುವೊ ಏನೊ ಎಂಬಂತೆ ಅವರು ನನ್ನನ್ನು ನೋಡಿಕೊಳ್ಳುತ್ತಿದ್ದರು. ಆಗ ನನಗೆ ಉನ್ಮಾದ ಅವಸ್ಥೆ. ಮಥುರಬಾಬು ಕೇಳುತ್ತಿದ್ದ: 'ಬಾಬಾ, ನಾವು ಮಾತುಕತೆಯಾಡಿಕೊಳ್ಳುವುದು ನಿಮಗೆ ಕೇಳಿಸುತ್ತದೆಯೇ?' ನಾನು ಉತ್ತರವೀಯುತ್ತಿದ್ದೆ: 'ಹೌದು.'

"ಒಮ್ಮೆ ಮಥುರಬಾಬುವಿನ ಹೆಂಡತಿಗೆ ತನ್ನ ಪತಿಯ ನಡತೆಯ ಸಂಬಂಧವಾಗಿ ಸಂದೇಹ ಬಂದು ಆತನಿಗೆ ಹೇಳಿದಳು: 'ನೀವು ಹೊರಗೆಲ್ಲಿಗಾದರೂ ಹೋಗುವುದಾದರೆ, ನಿಮ್ಮೊಡನೆ ಪರಮಹಂಸರನ್ನೂ ಕರೆದುಕೊಂಡುಹೋಗಬೇಕು.' ಒಂದು ದಿನ ಮಥುರಬಾಬು ಒಂದು ಸ್ಥಳಕ್ಕೆ ಹೋದ. ಅಲ್ಲಿ ಆತ ನನ್ನನ್ನು ಕೆಳಗಡೆ ಕೂರಿಸಿ ತಾನು ಮೇಲುಗಡೆ ಹೋದ. ಅರ್ಧ ಘಂಟೆಯಾದನಂತರ ಕೆಳಕ್ಕೆ ಇಳಿದು ಬಂದು ಹೇಳಿದ: 'ಬಾಬಾ, ಬನ್ನಿ, ಹೋಗೋಣ ಬನ್ನಿ. ಗಾಡಿ ಕಾದುಕೊಂಡಿದೆ.' ಅದರ ಸಂಬಂಧವಾಗಿ ಮಥುರಬಾಬುವಿನ ಹೆಂಡತಿ ನನ್ನನ್ನು ಕೇಳಿದಾಗ ನಾನು ಚಾಚೂ ತಪ್ಪದೆ ಎಲ್ಲವನ್ನೂ ಸಾಂಗವಾಗಿ ಹೇಳಿಬಿಟ್ಟೆ. ನಾನು ಆಕೆಗೆ ಹೇಳಿದೆ: 'ನೋಡು, ನಾವು ಒಂದು ಮನೆಗೆ ಹೋದೆವು. ಆತ ನನ್ನನ್ನು ಕೆಳಗಡೆ ಕೂರಿಸಿ ತಾನು ಮೇಲ್ಮಹಡಿಗೆ ಹೋದ. ಅರ್ಧ ಘಂಟೆಯಾದಮೇಲೆ ಕೆಳಕ್ಕೆ ಇಳಿದುಬಂದು ಹೇಳಿದ: 'ಬಾಬಾ, ಬನ್ನಿ, ಹೋಗೋಣ ಬನ್ನಿ.' ಆಕೆ ಅಲ್ಲಿ ಏನಾಗಿರಬೇಕು ಎಂಬುದನ್ನ ತನಗರಿವಾಗೋ ರೀತಿಯಲ್ಲಿ ಅರಿತುಕೊಂಡಳು.

"ಮಥುರಬಾಬುವಿನ ಜಮೀನುದಾರಿಯ ಒಬ್ಬ ಪಾಲುದಾರ ಇಲ್ಲಿನ ತೋಟದಿಂದ ಹಣ್ಣುಹಂಪಲ ತರಕಾರಿಗಳನ್ನ ರಹಸ್ಯವಾಗಿ ಗಾಡಿಯಲ್ಲಿ ಸಾಗಿಸೋ ಅಭ್ಯಾಸವನ್ನಿಟ್ಟುಕೊಂಡಿದ್ದ. ಇನ್ನೊಬ್ಬ ಪಾಲುದಾರ ಆ ವಿಷಯವನ್ನು ಕೇಳಿದಾಗ ಆಗ ಎಲ್ಲವನ್ನೂ ಆತನಿಗೆ ಸಾಂಗವಾಗಿ ಹೇಳಿಬಿಟ್ಟೆ."

೨೪ನೆ ಫೆಬ್ರುವರಿ ೧೮೮೪, ಫಾಲ್ಗುಣ ಕೃಷ್ಣ ತ್ರಯೋದಶಿ, ಭಾನುವಾರ.

ಪರಮಹಂಸರು ಮಧ್ಯಾಹ್ನದೂಟವಾದನಂತರ ವಿಶ್ರಮಿಸಿಕೊಳ್ಳುತ್ತಿದ್ದಾರೆ. ನೆಲದ ಮೇಲೆ ಮಣಿಮಲ್ಲಿಕ ಕುಳಿತುಕೊಂಡಿದ್ದಾನೆ. ಮಾಸ್ಟರ್ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಮಣಿಮಲ್ಲಿಕನ ಹತ್ತಿರ ಕುಳಿತುಕೊಂಡ. ಪರಮಹಂಸರ ತೋಳಿನಲ್ಲಿ ಇನ್ನೂ ಪಟ್ಟಿ ಇದೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನು ಯಾವ ರೀತಿಯಾಗಿ ಬಂದೆ?"

ಮಾಸ್ಟರ್: "ಆಲಂಬಜಾರಿನವರೆಗೆ ಗಾಡಿಯಲ್ಲಿ ಬಂದು, ಅಲ್ಲಿಂದ ನಡೆದುಬಂದೆ."

ಮಣಿಲಾಲ: "ಓ, ಬಹಳವಾಗಿ ಬೆವರಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಇದಕ್ಕಾಗೇ ನಾನು ಭಾವಿಸುತ್ತಿರುವುದು, ಇವೆಲ್ಲಾ ನನ್ನ ತಲೆಯ ಕಲ್ಪನೆಗಳಲ್ಲ ಎಂದು. ಇಲ್ಲದಿದ್ದರೆ ಈ 'ಇಂಗ್ಲೀಷ್ ಮ್ಯಾನ್‌ಗಳೆಲ್ಲಾ' ಇಷ್ಟು ಕಷ್ಟ ತೆಗೆದುಕೊಂಡು ಇಲ್ಲಿಗೆ ಏಕೆ ಬರುತ್ತಿದ್ದರು?"

ಪರಮಹಂಸರು ಈಗ ಅವರೊಡನೆ ತಮ್ಮ ಆರೋಗ್ಯದ ಸಂಬಂಧವಾಗಿಯೂ, ತಮ್ಮ ನೊಂದ ತೋಳಿನ ಸಂಬಂಧವಾಗಿಯೂ ಮಾತನಾಡ ತೊಡಗಿದಾರೆ.

ಶ್ರೀರಾಮಕೃಷ್ಣರು: "ನನಗೆ ಒಮ್ಮೊಮ್ಮೆ ಈ ತೋಳಿನ ಸಂಬಂಧವಾಗಿ ಚಿಂತೆ ಹತ್ತಿಕೊಂಡುಬಿಡುತ್ತದೆ. ಇವನಿಗೆ ತೋರಿಸಿ ಅವನಿಗೆ ತೋರಿಸಿ, ಇದು ಸರಿಯಾಗುವುದೆ ಎಂದು ಕೇಳುತ್ತಲೇ ಇರುತ್ತೇನೆ. ಇದನ್ನು ನೋಡಿ ನನ್ನ ಮೇಲೆ ರಾಖಾಲನಿಗೆ ಕೋಪ. ನನ್ನ ಅವಸ್ಥೆ ಏನು ಎಂಬುದು ಆತನಿಗೆ ಅರ್ಥವಾಗುತ್ತಿಲ್ಲ. ಒಮ್ಮೊಮ್ಮೆ ನಾನೇ ನನಗೆ ಹೇಳಿಕೊಳ್ಳುತ್ತೇನೆ: 'ಆತ ಇಲ್ಲಿಂದ ಹೊರಟುಹೋಗಿಬಿಡಲಿ.' ಮತ್ತೆ ಭಗವತಿಗೆ ಹೇಳುತ್ತೇನೆ: 'ಹೇ ತಾಯೆ, ಆತ ಹೋಗುವುದು ತಾನೆ ಎಲ್ಲಿಗೆ? ಆತ ಈ ಪ್ರಪಂಚವೆಂಬ ಉರಿಯೋ ಬಾಣಲೆಯಲ್ಲಿ ಬಿದ್ದು ಸುಟ್ಟು ಭಸ್ಮವಾಗಿ ಹೋಗಬೇಕೇಕೆ?'

"ನನ್ನ ಬಾಲಕನಂಥ ಅಧೈರ್ಯ ಹೊಸದೇನಲ್ಲ. ನಾನು ಮಥುರ-ಬಾಬುವಿಗೆ ನನ್ನ ಕೈ ತೋರಿಸಿ ಆತನನ್ನು ಕೇಳುತ್ತಿದ್ದೆ: 'ನನ್ನ ಆರೋಗ್ಯ ಸರಿಯಾಗಿಲ್ಲವೇನು?'

"ಒಳ್ಳೇದು, ಹಾಗಾದರೆ ನನಗೆ ಭಗವಂತನಲ್ಲಿ ಶ್ರದ್ಧೆ ಎಲ್ಲಿದ್ದ ಹಾಗಾಯಿತು? ಒಮ್ಮೆ ನಾನು ಕಾಮಾರಪುಕುರಕ್ಕೆ ಎತ್ತಿನ ಬಂಡಿಯಲ್ಲಿ ಹೋಗುತ್ತಿದ್ದೆ. ಅನೇಕರು ಡಕಾಯಿತರಂತೆ ದೊಣ್ಣೆ ಹಿಡಿದುಕೊಂಡು ಅದರ ಹತ್ತಿರಕ್ಕೆ ಬಂದರು. ನಾನು ದೇವರುಗಳ ಹೆಸರನ್ನೆಲ್ಲಾ ಹೇಳಲು ಉಪಕ್ರಮಿಸಿದೆ. ಕೆಲವು ವೇಳೆ 'ರಾಮ', ಇನ್ನು ಕೆಲವು ವೇಳೆ 'ದುರ್ಗೆ',

ಮತ್ತೆ ಕೆಲವು ವೇಳೆ 'ಓಂ ತತ್ ಸತ್' ಎಂದು—ಒಂದಿಲ್ಲದಿದ್ದರೆ ಇನ್ನೊಂದು ಕಾರ್ಯ ಮಾಡಲಿ ಅಂತ.

(ಮಾಸ್ಟರಿಗೆ) "ಒಳ್ಳೇದು, ಏಕೆ ಇಷ್ಟೊಂದು ಅಧೈರ್ಯ ನನಗೆ?"

ಮಾಸ್ಟರ್: "ನೀವು ಸರ್ವದಾ ಸಮಾಧಿಸ್ಥರಾಗಿದೀರಿ. ಭಕ್ತರಿಗಾಗಿ ನೀವು ಮನಸ್ಸನ್ನ ನಿಮ್ಮ ಶರೀರದ ಮೇಲೆ ಇಟ್ಟಿದೀರಿ. ಈ ಕಾರಣದಿಂದ ನೀವು ನಿಮ್ಮ ಶರೀರ ರಕ್ಷಣೆಗಾಗಿ ಆಗಾಗ ಅಧೈರ್ಯಪಡುತ್ತಿದೀರಿ."

ಶ್ರೀರಾಮಕೃಷ್ಣರು: "ಹೌದು, ಅದು ನಿಜ. ಒಂದು ಕಿಂಚಿತ್ ಮನಸ್ಸಿದೆ ಈ ಶರೀರದ ಮೇಲೆ. ಅದು ಭಗವದ್ಭಕ್ತಿ ಮತ್ತು ಭಕ್ತರೊಡನೆ ಆನಂದಪಡಲು ಇಚ್ಛಿಸುತ್ತಿದೆ."

ಮಣಿಮಲ್ಲಿಕ ಕಲ್ಕತ್ತದಲ್ಲಿ ತೆರೆದಿರುವ ವಸ್ತುಪ್ರದರ್ಶನಾಲಯದ ಸಂಬಂಧವಾಗಿ ವಿವರಿಸಿ ಹೇಳಲಾರಂಭಿಸಿದ. ಆತ ಹೇಳಿದ, ಅಲ್ಲಿ ಯಶೋದೆ ಬಾಲಕ ಕೃಷ್ಣನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡಿರುವ ಬಹಳ ಸುಂದರವಾದ ಒಂದು ವಿಗ್ರಹ ಇದೆ ಎಂದು. ಅದನ್ನು ಕೇಳಿ ಪರಮಹಂಸರ ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿತು. ವಾತ್ಸಲ್ಯಭಾವದಿಂದ ಕೂಡಿದ ಯಶೋದೆಯ ಆ ವಿಗ್ರಹದ ಸಂಬಂಧವಾಗಿ ಕೇಳಿ ಪರಮಹಂಸರಿಗೆ ಉದ್ದೀಪನವಾಗಿಬಿಟ್ಟಿದೆ. ಅದಕ್ಕಾಗೇ ಅವರು ಪ್ರೇಮಾಶ್ರು ಸುರಿಸುತ್ತಿರುವುದು.

ಮಣಿಲಾಲ: "ನಿಮ್ಮ ಶರೀರಾರೋಗ್ಯ ಸರಿಯಾಗಿಲ್ಲ. ಇಲ್ಲದಿದ್ದರೆ ನೀವೂ ಒಮ್ಮೆ ಅಲ್ಲಿಗೆ ಹೋಗಿ ನೋಡಿಬರಬಹುದಾಗಿತ್ತು. ಪ್ರದರ್ಶನ ಏರ್ಪಟ್ಟಿರುವುದು ಆ ದೊಡ್ಡ ಮೈದಾನದಲ್ಲಿ."

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ನಾನು ಅಲ್ಲಿಗೆ ಹೋದರೆ ಎಲ್ಲವನ್ನೂ ಪೂರ್ಣವಾಗಿ ನೋಡಿಬರಲಾಗುವುದಿಲ್ಲ. ವಿಶೇಷವಾದ್ದು ಯಾವುದಾದರೂ ಒಂದನ್ನು ನೋಡಿ ನಾನು ಬಾಹ್ಯಜ್ಞಾನಶೂನ್ಯನಾಗಿಬಿಡಬಹುದು. ಬಳಿಕ ಯಾವುದನ್ನೂ ನೋಡಲಾಗುವುದಿಲ್ಲ. ಒಮ್ಮೆ ನನ್ನನ್ನು ಮೃಗಾಲಯಕ್ಕೆ ಕರೆದುಕೊಂಡುಹೋಗಿದ್ದರು. ಅಲ್ಲಿ ಸಿಂಹವನ್ನು ನೋಡಿಬಿಟ್ಟು ಸಮಾಧಿಸ್ಥನಾಗಿಬಿಟ್ಟೆ. ಭಗವತಿಯ ವಾಹನವನ್ನ ನೋಡಿದೊಡನೇ ಭಗವತಿಯ ಉದ್ದೀಪನವೇ ಆಗಿಬಿಟ್ಟಿತು. ಆ ಅವಸ್ಥೆಯಲ್ಲಿ ಬೇರೆ ಮೃಗಗಳನ್ನ ನೋಡಲು ಎಲ್ಲಿ ಸಾಧ್ಯವಾದೀತು? ಕೇವಲ ಆ ಸಿಂಹವನ್ನು ನೋಡಿ ಹಿಂದಿರುಗಿ ಬರಬೇಕಾಯಿತು. ಅದಕ್ಕಾಗೇ ಮಣಿಮಲ್ಲಿಕನ ತಾಯಿ

ಮೊದಲು ಹೇಳಿದಳು: 'ಇವರನ್ನೂ ವಸ್ತುಪ್ರದರ್ಶನಾಲಯಕ್ಕೆ ಕರೆದು ಕೊಂಡುಹೋಗಿ' ಎಂದು; ಬಳಿಕ ಹೇಳಿದಳು : 'ಬೇಡಿ' ಎಂದು.''

ಮಣಿಮಲ್ಲಿಕನ ವಯಸ್ಸು ಅರವತ್ತೈದು. ಬಹಳ ಹಿಂದಿನಿಂದಲೂ ಬ್ರಾಹ್ಮಸಮಾಜದ ಅನುಯಾಯಿ. ಪರಮಹಂಸರು ಆತನ ಭಾವಕ್ಕನು ಗುಣವಾಗಿ ಆತನಿಗೆ ಉಪದೇಶವೀಯುತ್ತಿದಾರೆ.

ಶ್ರೀರಾಮಕೃಷ್ಣರು : ''ಪಂಡಿತ ಜಯನಾರಾಯಣ ಒಳ್ಳೆ ಉದಾರಿ. ಒಮ್ಮೆ ಆತನನ್ನು ಆತನ ಮನೆಯಲ್ಲಿ ಸಂಧಿಸಿದೆ. ಆತನ ಭಾವ ನನಗೆ ಬಹಳವಾಗಿ ಹಿಡಿಸಿತು. ಆದರೆ ಆತನ ಮಕ್ಕಳೆಲ್ಲಾ ಎತ್ತರವಾದ ಹಿಮ್ಮಡಿ ಯುಳ್ಳ ಬೂಟ್ಸ್ ಹಾಕಿಕೊಂಡಿದ್ದರು. ಅವನೇ ಹೇಳಿದ, ತಾನು ಕಾಶಿಗೆ ಹೋಗಿ ಇರುವುದಾಗಿ. ಆಡಿದಂತೆಯೇ ಕೊನೆಗೆ ನಡೆದುಕೊಂಡ; ಕಾಶಿಗೆ ಹೋಗಿ ಇದ್ದ, ಕೊನೆಗೆ ಅಲ್ಲೇ ಆತನ ದೇಹತ್ಯಾಗವೂ ಆಯಿತು. ಮುಪ್ಪಾದ ಮೇಲೆ ಜಯನಾರಾಯಣನಂತೆ ಮನೆ ಬಿಟ್ಟುಹೋಗಿ ಭಗವ ಚ್ಚಿಂತನೆ ಮಾಡುವುದು ಶ್ರೇಯಸ್ಕರವಾದ್ದು, ಏನು ಹೇಳುತ್ತೀಯೆ ?''

ಮಣಿಲಾಲ: ''ಹೌದು, ಸಂಸಾರದ ತಾಪತ್ರಯ ನನಗೆ ಹಿಡಿಸುತ್ತಿಲ್ಲ.''

ಶ್ರೀರಾಮಕೃಷ್ಣರು : ''ಗೌರೀಪಂಡಿತ ತನ್ನ ಹೆಂಡತಿಗೆ ಪುಷ್ಪಾಂಜಲಿ ಯನ್ನರ್ಪಿಸಿ ಆಕೆಯನ್ನು ಪೂಜಿಸುತ್ತಿದ್ದ. ಎಲ್ಲಾ ಹೆಂಗಸರೂ ಭಗವತಿಯ ಒಂದೊಂದು ರೂಪ. (ಮಣಿಲಾಲನಿಗೆ) ನಿನ್ನ ಆ ಕಥೆಯನ್ನ ಇವರಿಗೆ ಸ್ವಲ್ಪ ಹೇಳು.''

ಮಣಿಲಾಲ ನಗುತ್ತ: ''ಕೆಲವು ಮಂದಿ ಒಂದು ದೋಣಿ ಮಾಡಿ ಕೊಂಡು ಗಂಗಾನದಿಯನ್ನು ದಾಟುತ್ತಿದ್ದರು. ಅವರಲ್ಲಿ ಒಬ್ಬ ಪಂಡಿತ ಇದ್ದ. ಆತ ತನ್ನ ಪಾಂಡಿತ್ಯವನ್ನ ಬಹಳವಾಗಿ ಕೊಚ್ಚಿಕೊಳ್ಳಲಾರಂಭಿಸಿದ. ಆತ ಹೇಳಿದ, ತಾನು ವೇದ, ವೇದಾಂತ, ಷಡ್ದರ್ಶನ ಇತ್ಯಾದಿ ಅನೇಕ ಶಾಸ್ತ್ರಗಳನ್ನು ಓದಿರುವುದಾಗಿ. ಆತ ಒಬ್ಬನನ್ನು ಕೇಳಿದ: 'ನಿನಗೆ ವೇದಾಂತದ ಪರಿಚಯ ಆಗಿದೆಯೆ ?' ಆತ ಉತ್ತರವಿತ್ತ: 'ಇಲ್ಲ, ಸ್ವಾಮಿ.' 'ಶಾಸ್ತ್ರ-ಗೀಸ್ತ್ರಗಳನ್ನು ಸ್ವಲ್ಪವೂ ಓದಿಲ್ಲವೆ?' 'ಇಲ್ಲ, ಸ್ವಾಮಿ.' ಪಂಡಿತ ಅತ್ಯಂತ ಗರ್ವದಿಂದ ಹೀಗೆ ಮಾತಾಡುತ್ತಿದ್ದರೂ ಆ ಪ್ರಯಾಣಿಕ ಸುಮ್ಮನೆ ಕುಳಿತಿದ್ದ. ಇದ್ದಕ್ಕಿದ್ದಹಾಗೆ ದೊಡ್ಡ ಬಿರುಗಾಳಿ ಎದ್ದು ದೋಣಿ ಇನ್ನೇನು ಮಗುಚಿಕೊಂಡುಬಿಡುವುದರಲ್ಲಿತ್ತು. ಆಗ ಆ ಪ್ರಯಾಣಿಕ

ಪಂಡಿತನನ್ನು ಕೇಳಿದ: 'ಪಂಡಿತರೆ, ನಿಮಗೆ ಈಜು ಬರುವುದೆ?' ಪಂಡಿತ ಉತ್ತರವಿತ್ತ: 'ಇಲ್ಲ.' ಪ್ರಯಾಣಿಕ ಹೇಳಿದ: 'ಸ್ವಾಮಿ, ನನಗೆ ಸಾಂಖ್ಯ, ಪಾತಂಜಲ ಇವು ಯಾವೂ ಗೊತ್ತಿಲ್ಲ, ಆದರೆ ನನಗೆ ಈಜುವುದು ಗೊತ್ತಿದೆ.'"

ಶ್ರೀರಾಮಕೃಷ್ಣರು ನಗುತ್ತ: "ಅನೇಕ ಶಾಸ್ತ್ರಗಳ ಪರಿಚಯ ಮಾಡಿಕೊಂಡಿದ್ದರೆ ಏನು ಬಂತು? ಭವನದಿಯನ್ನ ದಾಟುವುದು ಹೇಗೆ ಎಂಬುದನ್ನು ಆವಶ್ಯಕವಾಗಿ ಅರಿತುಕೊಳ್ಳಬೇಕು. ಭಗವಂತನೇ ವಸ್ತು, ಉಳಿದುದೆಲ್ಲಾ ಅವಸ್ತು.

"ಲಕ್ಷ್ಯವನ್ನು ಭೇದಿಸುವ ಸಮಯದಲ್ಲಿ ದ್ರೋಣಾಚಾರ್ಯರು ಅರ್ಜುನನನ್ನು ಕೇಳಿದರು: 'ನಿನ್ನ ಕಣ್ಣಿಗೆ ಏನು ಕಾಣುತ್ತಿದೆ? ಈ ದೊರೆಗಳು ನಿನ್ನ ಕಣ್ಣಿಗೆ ಬೀಳುತ್ತಿದ್ದಾರೆಯೆ?' ಆತ ಉತ್ತರವಿತ್ತ: 'ಇಲ್ಲ.' 'ನಾನು ನಿನ್ನ ಕಣ್ಣಿಗೆ ಬೀಳುತ್ತಿದೇನೆಯೆ?' 'ಇಲ್ಲ.' 'ಆ ಮರ?' 'ಇಲ್ಲ.' 'ಆ ಮರದ ಮೇಲಿರುವ ಹಕ್ಕಿ?' 'ಇಲ್ಲ.' 'ಹಾಗಾದರೆ ನಿನಗೇನು ಕಾಣುತ್ತಿದೆ?' 'ಕೇವಲ ಹಕ್ಕಿಯ ಕಣ್ಣು.'

"ಯಾರಿಗೆ ಕೇವಲ ಹಕ್ಕಿಯ ಕಣ್ಣು ಕಾಣಬರುವುದೊ ಆತ ಮಾತ್ರ ತನ್ನ ಲಕ್ಷ್ಯವನ್ನು ಭೇದಿಸಬಲ್ಲ. ಯಾರ ದೃಷ್ಟಿಗೆ ಕೇವಲ ಭಗವಂತನೇ ವಸ್ತು ಉಳಿದುದೆಲ್ಲಾ ಅವಸ್ತು ಎಂದು ಕಾಣಬರುವುದೊ ಆತನೇ ನಿಜವಾದ ಬುದ್ಧಿವಂತ. ಉಳಿದ ವಿಷಯಗಳ ಸುದ್ದಿ ಸಮಾಚಾರ ನಮಗೇಕೆ? ಹನುಮಂತ ಒಮ್ಮೆ ಹೇಳಿದ: 'ನನಗೆ ತಿಥಿ, ನಕ್ಷತ್ರ ಇವುಗಳ ವಿಷಯವಾಗಿ ಏನೂ ಗೊತ್ತಿಲ್ಲ. ಕೇವಲ ರಾಮ ಚಿಂತನೆ ಮಾಡುತ್ತಿದೇನೆ.'

(ಮಾಸ್ಟರಿಗೆ) "ಇಲ್ಲಿನ ಉಪಯೋಗಕ್ಕಾಗಿ ಕೆಲವು ಬೀಸಣಿಗೆ ಕೊಂಡುಕೊಂಡು ಬಾ.

(ಮಣಿಲಾಲನಿಗೆ) "ಒಮ್ಮೆ ನೀನು ಹೋಗಿ ಇವನ (ಮಾಸ್ಟರ) ತಂದೆಯನ್ನು ಸಂಧಿಸಿ ಬಾ. ಭಕ್ತನನ್ನು ನೋಡಿದರೆ ಉದ್ದೀಪನವಾಗುತ್ತದೆ.

(ಮಾಸ್ಟರಿಗೆ) "ನನ್ನ ತೋಳಿಗೆ ಪೆಟ್ಟು ತಗುಲಿದನಂತರ ನನ್ನ ಮಾನಸಿಕ ಅವಸ್ಥೆಯಲ್ಲಿ ದೊಡ್ಡ ಪರಿವರ್ತನೆಯೇ ಆಗಿಬಿಟ್ಟಿದೆ. ಈಗ ಕೇವಲ ನರಲೀಲೆ ಬಹಳವಾಗಿ ಹಿಡಿಸುತ್ತಿದೆ. ನಿತ್ಯ ಮತ್ತು ಲೀಲೆ.

ನಿತ್ಯ ಎಂದರೆ, ಆ ಅಖಂಡ ಸಚ್ಚಿದಾನಂದ. ಲೀಲೆ, ಎಂದರೆ ಭಗವಲ್ಲೀಲೆ, ದೇವಲೀಲೆ, ನರಲೀಲೆ, ಜಗಲ್ಲೀಲೆ.

"ವೈಷ್ಣವಚರಣ ಹೇಳುತ್ತಿದ್ದ, ನರಲೀಲೆಯಲ್ಲಿ ಶ್ರದ್ಧೆಯುಂಟಾದುದೇ ಆದರೆ ಪೂರ್ಣಜ್ಞಾನ ದೊರೆತುಬಿಡುತ್ತದೆ ಎಂದು. ಆಗ ಅದು ಸರಿ ಎಂದು ತೋರಲಿಲ್ಲ. ಈಗ ಕಾಣುತ್ತಿದೆ ಸರಿ ಎಂದು. ಕೋಮಲಭಾವ, ಪ್ರೇಮಭಾವ ಇವನ್ನು ಹೊರಸೂಸುವ ಮನುಷ್ಯರ ಭಾವಚಿತ್ರ ವೈಷ್ಣವ-ಚರಣನಿಗೆ ಬಹಳವಾಗಿ ಹಿಡಿಸುತ್ತವೆ.

(ಮಣಿಲಾಲನಿಗೆ) "ಭಗವಂತನೇ ಮನುಷ್ಯನಾಗಿ ಲೀಲೆ ಮಾಡುತ್ತಾನೆ—ಆತನೇ ಮಣಿಮಲ್ಲಿಕನಾಗಿದಾನೆ. ಸಿಕ್ಕರು ಉಪದೇಶವೀಯುತ್ತಾರೆ: 'ನೀನು ಸಚ್ಚಿದಾನಂದ' ಎಂದು.

"ಒಮ್ಮೊಮ್ಮೆ ಮನುಷ್ಯನಿಗೆ ತನ್ನ ಸ್ವಸ್ವರೂಪದ ಕ್ಷಣ ದರ್ಶನ ದೊರೆತು ಆಶ್ಚರ್ಯಚಕಿತನಾಗಿಬಿಡುತ್ತಾನೆ, ಆನಂದದಿಂದ ತುಂಬಿತುಳುಕಾಡಲಾರಂಭಿಸುತ್ತಾನೆ. ಇದು ಇದ್ದಕ್ಕಿದ್ದ ಹಾಗೆ ಆತ್ಮೀಯ ಬಂಧುವನ್ನು ದರ್ಶಿಸಿದ ಹಾಗೆ. (ಮಾಸ್ಟರಿಗೆ) ಅಂದು ಗಾಡಿಯಲ್ಲಿ ಬರುತ್ತ ಬರುತ್ತ ಇದ್ದ ಹಾಗೆ ಬಾಬುರಾಮನನ್ನು ನೋಡಿ ನನಗೆ ಆ ರೀತಿಯಾಗಿ ಆಯಿತು. ಶಿವ ತನ್ನ ಸ್ವಸ್ವರೂಪವನ್ನು ದರ್ಶನಮಾಡಿದಾಗ ಆತ ಆನಂದದಿಂದ ಹೀಗೆ ಹೇಳಿಕೊಂಡು ನರ್ತಿಸುತ್ತಾನೆ: 'ನಾನು ಏನು! ನಾನು ಏನು!'

"ಅಧ್ಯಾತ್ಮರಾಮಾಯಣದಲ್ಲಿ ಈ ವಿಷಯವೇ ಇದೆ. ಅಲ್ಲಿ ನಾರದ ಹೇಳುತ್ತಾನೆ: 'ಹೇ ರಾಮ, ಪುರುಷರು ಯಾರಾರು ಇದಾರೊ ಅವರೆಲ್ಲರೂ ನೀನೇ. ಹೆಂಗಸರು ಯಾರಾರು ಇದಾರೊ ಅವರೆಲ್ಲರೂ ಸೀತೆಯೇ.' ರಾಮಲೀಲೆಯಲ್ಲಿ ಯಾರಾರು ಅಭಿನಯಿಸಿದ್ದರೊ ಅವರೆಲ್ಲರನ್ನೂ ನೋಡಿ ನನಗನಿಸಿತು, ಭಗವಂತನೇ ಈ ಎಲ್ಲಾ ಮನುಷ್ಯರ ರೂಪ ಧರಿಸಿದಾನೆ ಎಂದು. ವಾಸ್ತವ, ಕೃತಕ ಎರಡೂ ಸಮಾನವಾಗಿ ಕಂಡುವು.

"ಕುಮಾರಿ ಪೂಜೆ ಮಾಡುತ್ತಾರಲ್ಲ ಏಕೆ? ಎಲ್ಲಾ ಸ್ತ್ರೀಯರೂ ಭಗವತಿಯ ಒಂದೊಂದು ರೂಪ. ಆದರೆ ಶುದ್ಧಾತ್ಮ ಕುಮಾರಿಯರಲ್ಲಿ ಆಕೆ ವಿಶೇಷವಾಗಿ ವ್ಯಕ್ತವಾಗಿರುತ್ತಾಳೆ.

(ಮಾಸ್ಟರಿಗೆ) "ನನಗೆ ದೇಹಾರೋಗ್ಯ ಕೆಟ್ಟಿತು ಎಂದರೆ ಅಧೈರ್ಯ ಬಂದುಬಿಡುತ್ತದೆಯಲ್ಲ ಏಕೆ? ನನ್ನನ್ನು ಭಗವತಿ ಬಾಲಕನ ಅವಸ್ಥೆಯಲ್ಲಿ ಇಟ್ಟುಬಿಟ್ಟಿದಾಳೆ. ಮಗು ಎಲ್ಲಕ್ಕೂ ತಾಯಿಯನ್ನು ಸಂಪೂರ್ಣವಾಗಿ

ಅವಲಂಬಿಸಿರುತ್ತದೆ. ದಾಸಿಯ ಮಗು ಯಜಮಾನನ ಮಗುವಿನೊಡನೆ ಜಗಳಕಾಯುವಾಗ ಹೇಳುತ್ತದೆ: 'ನೋಡು, ಅಮ್ಮನಿಗೆ ಹೇಳಿಬಿಡತ್ತೇನೆ.'

"ರಾಜಾಬಜಾರಿಗೆ ಫೋಟೊ ತೆಗೆದುಕೊಳ್ಳಲು ನನ್ನನ್ನು ಕರೆದುಕೊಂಡುಹೋಗಿದ್ದರು. ಅಂದು ನಾನು ರಾಜೇಂದ್ರಮಿತ್ರನ ಮನೆಗೆ ಹೋಗಿಬರಬೇಕೆಂದು ವ್ಯವಸ್ಥೆಯಾಗಿತ್ತು. ಕೇಶವನೇ ಮೊದಲಾದವರು ಅಲ್ಲಿಗೆ ಬರುವರೆಂದು ಕೇಳಿದ್ದೆ. ಅಲ್ಲಿ ಏನೇನು ಮಾತನಾಡಬೇಕು ಎಂಬುದನ್ನು ಮೊದಲೆ ನಿರ್ಧಾರ ಮಾಡಿಕೊಂಡಿದ್ದೆ. ಆದರೆ ರಾಜಾಬಜಾರಿಗೆ ಹೋಗುವುದರಲ್ಲಿ ಎಲ್ಲಾ ಮರೆತುಹೋಯಿತು. ಆಗ ನಾನು ಭಗವತಿಗೆ ಹೇಳಿದೆ: 'ತಾಯೆ, ನೀನೇ ಮಾತನಾಡು. ನನಗೆ ಏನು ತಾನೆ ಗೊತ್ತು?'

"ನನ್ನದು ಜ್ಞಾನಿಯ ಸ್ವಭಾವವಲ್ಲ. ಆತ ತಾನೇ ದೊಡ್ಡವನು ಎಂದು ಭಾವಿಸುತ್ತಾನೆ. ಆತ ಹೇಳುತ್ತಾನೆ: 'ಏನು, ನನಗೆ ರೋಗ?'

"ಕೊಯರ್‌ಸಿಂಗ್ ಒಮ್ಮೆ ನನಗೆ ಹೇಳಿದ: 'ನಿಮಗೆ ಇನ್ನೂ ದೇಹದ ಮೇಲೆ ಭಾವನೆ ಇದೆ.' ನನ್ನ ಸ್ವಭಾವ ಇದು—ನನ್ನ ತಾಯಿಗೆ ಎಲ್ಲಾ ಗೊತ್ತಿದೆ ಎಂಬುದು. ರಾಜೇಂದ್ರಮಿತ್ರನ ಮನೆಯಲ್ಲಿ ಮಾತನಾಡುವವಳು ಅವಳೇ. ಆಕೆಯ ಮಾತೇ ಮಾತು. ಸರಸ್ವತಿಯ ಜ್ಞಾನ-ಭಂಡಾರದ ಒಂದು ಕಿರಣ ಸಹಸ್ರಾರು ಮಂದಿ ಪಂಡಿತರನ್ನು ದಿಗ್ಭ್ರಮೆಗೊಳಿಸಿಬಿಡಬಲ್ಲದು.

"ಭಗವತಿ ನನ್ನನ್ನು ಭಕ್ತನ ಅವಸ್ಥೆಯಲ್ಲಿ—ವಿಜ್ಞಾನಿಯ ಅವಸ್ಥೆಯಲ್ಲಿ ಇಟ್ಟಿದಾಳೆ. ಈ ಕಾರಣದಿಂದಲೇ ನಾನು ರಾಖಾಲನೇ ಮೊದಲಾದವರೊಡನೆ ಹುಡುಗಾಟವಾಡುವುದು. ಆಕೆಯೇನಾದರೂ ನನ್ನನ್ನು ಜ್ಞಾನಿಯ ಅವಸ್ಥೆಯಲ್ಲಿ ಇಟ್ಟಿದ್ದರೆ ಇದೆಲ್ಲ ಸಾಧ್ಯವಾಗುತ್ತಿರಲಿಲ್ಲ.

"ಈ ಅವಸ್ಥೆಯಲ್ಲಿ ಕಂಡುಬರುತ್ತಿದೆ, ಭಗವತಿಯೇ ಎಲ್ಲವೂ ಆಗಿರುವುದು. ಎಲ್ಲೆಲ್ಲೂ ಆಕೆಯೇ ಕಾಣುತ್ತಿದಾಳೆ. ಕಾಳೀದೇವಾಲಯದಲ್ಲಿ ನನಗೆ ಅನುಭವವಾಯಿತು, ಎಲ್ಲವೂ ಭಗವತಿಯೇ ಆಗಿರುವುದು—ದುಷ್ಟರು ಕೂಡ, ಭಾಗವತ ಪಂಡಿತನ ಸೋದರ ಕೂಡ.

"ಒಮ್ಮೆ ನಾನು ರಾಮಲಾಲನ ತಾಯಿಯನ್ನು ಬಯ್ಯುವುದರಲ್ಲಿದ್ದು ತಡೆದುಕೊಳ್ಳಬೇಕಾಯಿತು. ಅವಳು ಕಂಡುಬಂದಳು ಭಗವತಿಯ ಒಂದು ರೂಪೇಆಗಿ. ಕುಮಾರಿಯರ ಅಂತರ್ಯದಲ್ಲಿ ಭಗವತಿ ಕಾಣಬರುವುದರಿಂದ

ನಾನು ಅವರನ್ನು ಪೂಜಿಸುತ್ತಿದೇನೆ. ನನ್ನ ಹೆಂಡತಿ ನನ್ನ ಕಾಲನ್ನು ಒತ್ತುತ್ತಾಳೆ, ಆದರೆ ಅನಂತರ ಆಕೆಗೆ ನಮಸ್ಕಾರ ಮಾಡುತ್ತೇನೆ.

"ನೀವು ನನ್ನ ಪಾದ ಮುಟ್ಟಿ ನಮಸ್ಕಾರ ಮಾಡುತ್ತಿದೀರಿ. ಹೃದೆ ಇಲ್ಲಿ ಇದ್ದುದೇ ಆಗಿದ್ದರೆ ಅವನ್ನು ಮುಟ್ಟಲು ಯಾರಿಗೆ ತಾನೆ ಧೈರ್ಯ ಉಂಟಾಗುತ್ತಿತ್ತು? ಪಾದ ಮುಟ್ಟಲು ಆತ ಯಾರನ್ನೂ ಬಿಟ್ಟುಕೊಡುತ್ತಿರಲಿಲ್ಲ. ಭಗವತಿ ನನ್ನನ್ನು ಎಲ್ಲರಲ್ಲೂ ಭಗವಂತನನ್ನು ನೋಡುವ ಅವಸ್ಥೆಯಲ್ಲಿ ಇಟ್ಟಿರುವುದರಿಂದ ನಾನು ಪ್ರತಿನಮಸ್ಕಾರ ಮಾಡಬೇಕಾಗಿದೆ.

"ನೋಡಿ, ದುಷ್ಟರನ್ನೂ ವರ್ಜಿಸಿಬಿಡುವ ಹಾಗಿಲ್ಲ. ತುಳಸಿ ದಳ ಒಣಗಿಹೋಗಿರಲಿ ಅಥವಾ ಬಹಳ ಪುಟ್ಟದಾಗಿರಲಿ—ಪೂಜೆಗೆ ಉಪಯೋಗ ಆಗೇ ಆಗುತ್ತದೆ."

**೨ನೆ ಮಾರ್ಚಿ ೧೮೮೪, ಫಾಲ್ಗುಣ ಶುಕ್ಲ ಪಂಚಮಿ, ಭಾನುವಾರ.**

ಪರಮಹಂಸರು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡೇ ಬ್ರಾಹ್ಮ ಸಮಾಜದ ತ್ರೈಲೋಕ್ಯ ಹಾಡುತ್ತಿದ್ದ ಭಜನೆಯನ್ನು ಕೇಳುತ್ತಿದಾರೆ. ಪರಮ-ಹಂಸರ ಶರೀರಾರೋಗ್ಯ ಎಂದಿನ ಸ್ಥಿತಿಗೆ ಇನ್ನೂ ಬಂದಿಲ್ಲ. ಇನ್ನೂ ಅವರ ತೋಳಿನಲ್ಲಿ ಪಟ್ಟಿ ಕಟ್ಟಲ್ಪಟ್ಟೇ ಇದೆ. ನರೇಂದ್ರ, ಸುರೇಂದ್ರ, ಮಾಸ್ಟರ್ ಇವರೇ ಅಲ್ಲದೆ ಇನ್ನೂ ಅನೇಕ ಮಂದಿ ಭಕ್ತರು ನೆಲದ ಮೇಲೆ ಕುಳಿತಿದಾರೆ.

ನರೇಂದ್ರನ ತಂದೆ ಹೈಕೋರ್ಟಿನ ಒಬ್ಬ ವಕೀಲನಾಗಿದ್ದ. ಆತ ಪರಲೋಕಪ್ರಾಪ್ತಿಯನ್ನು ಹೊಂದಿದನಂತರ ಆತನ ಪರಿವಾರ ವರ್ಗ ಬಹಳ ಕಷ್ಟದ ಮಡುವಿಗೆ ದುಮುಕಿದೆ. ಆತನ ಮನೆಯವರಿಗೆ ಕೆಲವು ವೇಳೆ ಯಾವ ಆಹಾರವೂ ದೊರೆಯದೆ ಉಪವಾಸವಿರಬೇಕಾಗುತ್ತಿದೆ. ನರೇಂದ್ರ ಈ ಕಷ್ಟಗಳ ದೆಸೆಯಿಂದ ಬಹಳ ಚಿಂತೆಗೊಳಗಾಗಿ ಕಾಲ ತಳ್ಳುತ್ತಿದಾನೆ.

ತ್ರೈಲೋಕ್ಯ ಭಗವತಿಯ ಸಂಬಂಧವಾಗಿ ಹಾಡುತ್ತಿದಾನೆ:

ನಿನ್ನೊಲವಿನ ಮಡಿಲೊಳಡಗಿ
ನಿನ್ನೆಡೆಗೇ ಕಣ್ಣ ಚಾಚಿ
ಓ ತಾಯೀ—ಎನ್ನುವೆ.
ಚಿದಾನಂದ ರಸಧಿಯಲ್ಲಿ
ಮಹಾಯೋಗ ನಿದ್ರೆಯಲ್ಲಿ
ನಾನು ಮುಳುಗಿ ಹೋಗುವೆ.
ತೆರೆದೆವೆಗಳ ಮುಚ್ಚಲಾರೆ

ಭವಭಯದಲಿ ಲೀನನಾದೆ
ನಿನ್ನೊಲವಿನ ಮಡಿಲಿನಲ್ಲಿ
ಸ್ನೇಹಾಂಚಲದಾಸರೆಯಲಿ
ನನ್ನನಿರಿಸು ಎನ್ನುವೆ.

ಪರಮಹಂಸರು ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಪ್ರೇಮಾಶ್ರುವನ್ನು ಸುರಿಸುತ್ತ ಹೇಳುತ್ತಿದಾರೆ: "ಆಹಾ! ಎಂಥ ಭಾವ!"

ತ್ರೈಲೋಕ್ಯ ಮತ್ತೆ ಹಾಡುತ್ತಿದಾನೆ:

ನನ್ನ ಲಜ್ಜೆಯ ನೀಗಿ, ನನ್ನ ಮಾನವನುಳಿಪ
ನೀನಲ್ಲದಿನ್ನಾರು ಗತಿಯು ನನಗೆ?
ನೀನೆನ್ನ ಪ್ರಾಣಪತಿ, ನೀನೆ ಪ್ರಾಣಾಧಾರ,
ನೀನೆ ಆಲಂಬನವು ಈ ದಾಸಗೆ!

ಈಗ ಹಾಡುತ್ತಿದಾನೆ:

ನಿನ್ನ ಪಾದದ ನೆಳಲ ಸೇರುತ
ಜಾತಿಕುಲದಭಿಮಾನವೆಲ್ಲವ
ನಾನು ಕಳೆಯುತ ನಿಂದೆನು.
ಲಜ್ಜೆ ಭಯಗಳ ದೂಡಿ ನಾ-
ನೇಕಾಂಗಿ ಪಯಣಿಗನಾದೆನು,
ಜಗದ ಮಂದಿಯ ಜೊತೆಗೆ ನೇಹಿಗ-
ರೆನ್ನ ನಿಂದಿಸಿ ತೊರೆದರು,
ನಿನ್ನ ಕೃಪೆಗೀ ಎಲ್ಲ ಬವಣೆಯ
ಸಹಿಸಿ ನಿನ್ನೆಡೆ ಬಂದೆನು.
ನೀನೆ ನನಗಿನ್ನಾಸರೆಯು ಗುರುವೇ,
ಕೊಲ್ಲು ಅಥವಾ ಕಾಪಿಡು
ನಿನ್ನ ಮಹಿಮೆಯು ನನ್ನ ಗೌರವ-
ದಲ್ಲಿ ಎಂಬುದ ನೆನಪಿಡು.
ನನ್ನ ಎದೆಯಧಿರಾಜ ನೀನೇ
ನನ್ನೊಳೊಲವಿನ ಕಿಡಿಯು ನೀನೇ
ನಿನಗೆ ತಿಳಿದೊಲು ನಡೆಯಿಸು.

ಮತ್ತೆ ಈಗ ಹಾಡುತ್ತಿದಾನೆ:

ಸಂಸಾರದ ಸೆರೆಯ ಬಿಡಿಸಿ
ನಿನ್ನೊಲವಿನ ಸೆರೆಯಲಿ
ನನ್ನ ಬಂಧಿಸಿರುವೆ ಗುರುವೆ
ರಕ್ಷಿಸು ನಿನ್ನಡಿಯಲಿ.
ನಿನ್ನೊಲವಿನ ಸುಧೆಯನೆರೆದು
ಹಗಲಿರುಳೂ ಪೋಷಿಸು—
ಎನ್ನುವನೀ ಪ್ರೇಮದಾಸ
ನಿನ್ನ ಚರಣ ದಾಸನು.

ಪರಮಹಂಸರು ಮತ್ತೆ ಪ್ರೇಮಾಶ್ರು ಸುರಿಸುತ್ತಿದಾರೆ. ಈಗ ಅವರೇ ರಾಮಪ್ರಸಾದನ ಒಂದು ಹಾಡಿನ ಕೆಲವು ಚರಣಗಳನ್ನು ಹಾಡಲಾರಂಭಿಸಿದಾರೆ:

ಯಶ-ಅಪಯಶ, ಕುರಸ - ಸುರಸ,
ಸಕಲ ರಸವು ನಿನ್ನದೇ;
ಸಕಲ ರಸೇಶ್ವರಿಯು ನೀನೆ,
ಇದರೊಳೇಕೆ ನೀನೀತೆರ
ರಸಭಂಗವ ಮಾಡುವೆ?

ಪರಮಹಂಸರು ತ್ರೈಲೋಕ್ಯನನ್ನು ಸಂಬೋಧಿಸಿ ಹೇಳುತ್ತಿದಾರೆ: "ಆಹಾ! ನಿನ್ನ ಹಾಡು ಎಷ್ಟು ಸೊಗಸಾದುವು! ಅವುಗಳಲ್ಲಿ ನಿಜವಾದ ಸತ್ತ್ವವಿದೆ. ಸಮುದ್ರಕ್ಕೆ ಯಾರು ಹೋಗಿದಾನೊ ಆತನೇ ಅಲ್ಲಿಂದ ನೀರು ತರಬಲ್ಲ."

ತ್ರೈಲೋಕ್ಯ ಮತ್ತೆ ಹಾಡುತ್ತಿದಾನೆ:

ನಿನ್ನದೇ ಹಾಡು, ನಿನ್ನದೇ ಕುಣಿತ, ನಿನ್ನದೇ ರಾಗ ತಾಳ;
'ಎಲ್ಲ ನನದೆಂದು' ತಿಳಿಯುತಿರುವ ನೀ ಭ್ರಾಂತಮೂಢಮನುಜ.
ನೆರಳ ಬೊಂಬೆ ನರ; ನಿನ್ನೊಡನಡೆಯಲು ದಿವ್ಯ ತೇಜನಹನು;
ದೇಹಯಂತ್ರದಲಿ ಕುಳಿತು ರಥವನ್ನು ನಡಸುವವಳು ನೀನು.
ಪಾಪ ಪುಣ್ಯಗಳ ಫಲವನೀಯುವಳು, ಮುಕ್ತಿದಾತೆ ನೀನು,
ಪಾಪಭಾರ ಪರಿತಾಪನಾದರೂ ಮುಕ್ತ ಭ್ರಾಂತನಿವನು!
ಸರ್ವಮೂಲ ನೀ, ಆತ್ಮದಾತ್ಮ ನೀ, ಹೃದಯದೊಡತಿ ನೀನು,
ನಿನ್ನ ಕರುಣೆಯಲಿ ಪರಮಪಾಪಿಯೂ ಪರಮಯೋಗಿಯಹನು!

ಹಾಡುವುದು ಮುಗಿಯಿತು. ಈಗ ಪರಮಹಂಸರು ಭಕ್ತರೊಡನೆ ಮಾತುಕತೆಯಾಡಲಾರಂಭಿಸಿದಾರೆ.

ಶ್ರೀರಾಮಕೃಷ್ಣರು: "ಭಗವಂತನೇ ಸೇವ್ಯ, ಭಗವಂತನೇ ಸೇವಕ— ಈ ಭಾವ ಪೂರ್ಣಜ್ಞಾನದ ಚಿಹ್ನೆ. ಮೊದಲು ಸಾಧಕ 'ನೇತಿ, ನೇತಿ' ಎಂದು ವಿಚಾರಮಾಡುತ್ತಾನೆ. ಅನಂತರ ಆತನಿಗೆ ಬೋಧೆಯಾಗುತ್ತದೆ, ಭಗವಂತನೊಬ್ಬನೇ ಸತ್ಯ ಉಳಿದುದೆಲ್ಲಾ ಮಿಥ್ಯೆ ಎಂಬುದಾಗಿ. ಬಳಿಕ ಅದೇ ಸಾಧಕನ ಅನುಭವಕ್ಕೆ ಬರುತ್ತದೆ, ಭಗವಂತನೇ ಎಲ್ಲವೂ ಆಗಿರುವುದು—ಮಾಯೆ, ಜೀವ, ಜಗತ್ತು ಎಲ್ಲವೂ. ಅನುಲೋಮದನಂತರ ವಿಲೋಮ. ಇದು ಪುರಾಣದ ಅಭಿಮತ. ಉದಾಹರಣೆಗೆ ಬೇಲದ ಹಣ್ಣಿನಲ್ಲಿ ತಿರುಳು, ಬೀಜ, ಕರಟ ಕೂಡಿಕೊಂಡಿವೆ. ಕರಟ, ಬೀಜಗಳನ್ನು ಪ್ರತ್ಯೇಕಿಸಿಬಿಟ್ಟರೆ ತಿರುಳು ದೊರೆಯುತ್ತದೆ. ಆದರೆ ಬೇಲದ ಹಣ್ಣಿನ ತೂಕ ಎಷ್ಟು ಎಂಬುದನ್ನು ತಿಳಿಯಬೇಕಾದರೆ, ಬೀಜ ಕರಟಗಳನ್ನು ಬಿಟ್ಟು ತೂಗಿದರೆ ಬೇಲದ ಹಣ್ಣಿನ ತೂಕ ಸಿಕ್ಕುವ ಹಾಗಿಲ್ಲ. ಈ ಕಾರಣದಿಂದ ಮೊದಲು ಜೀವಜಗತ್ತುಗಳನ್ನು ವರ್ಜಿಸಿ ಸಚ್ಚಿದಾನಂದನನ್ನು ಮುಟ್ಟಬೇಕು. ಆತನನ್ನು ಸಾಕ್ಷಾತ್ಕಾರ ಮಾಡಿಕೊಂಡನಂತರ ಕಂಡುಬರುತ್ತದೆ, ಆತನೇ ಈ ಜೀವ ಜಗತ್ತು ಆಗಿದಾನೆ ಎಂಬುದಾಗಿ. ತಿರುಳು ಯಾವ ವಸ್ತುವಿನಿಂದ ಉತ್ಪತ್ತಿಯಾಗಿರುವುದೊ ಅದೇ ವಸ್ತುವಿನಿಂದ ಬೀಜ ಕರಟ ಉತ್ಪತ್ತಿಯಾಗಿವೆ. ಇದು ಮಜ್ಜಿಗೆ ಬೆಣ್ಣೆ ಎರಡೂ ಒಂದೇ ವಸ್ತುವಿನಿಂದ ಉತ್ಪನ್ನವಾಗುವ ಹಾಗೆ.

"ಆದರೆ ಪ್ರಶ್ನೆ ಏಳಬಹುದು: 'ಸಚ್ಚಿದಾನಂದ ಇಷ್ಟೊಂದು ಗಟ್ಟಿ ಹೇಗೆ ಆದ?' ಈ ಭೂಮಿಯನ್ನು ಮುಟ್ಟಿನೋಡಿದರೆ ಅದು ಬಹಳ ಗಟ್ಟಿಯಾಗಿರುವಂತೆ ತೋರಿಬರುತ್ತದೆಯಲ್ಲ ಮತ್ತೆ. ಇದಕ್ಕೆ ಉತ್ತರ, ಶುಕ್ರ ಶೋಣಿತಗಳು ಬಹಳ ತೆಳುವಾದ ದ್ರವಗಳಾದರು ಕೂಡ ಅವುಗಳಿಂದ ಮನುಷ್ಯನ ಇಷ್ಟೊಂದು ದೊಡ್ಡ ಆಕಾರ ಉತ್ಪತ್ತಿಯಾಗುವುದಿಲ್ಲವೇ! ಭಗವಂತನಿಗೆ ಎಲ್ಲವೂ ಸಾಧ್ಯ. ಮೊದಲು ಅಖಂಡ ಸಚ್ಚಿದಾನಂದನ ಸಾಕ್ಷಾತ್ಕಾರ ಮಾಡಿಕೊಂಡು ಅನಂತರ ಕೆಳಕ್ಕೆ ಇಳಿದುಬಂದು ಈ ಜಗತ್ತಿನ ಕಡೆ ನೋಡು. ಆಗ ಕಂಡುಬರುತ್ತದೆ, ಎಲ್ಲವೂ ಆತನೇ ಆಗಿರುವುದು. ಈ ಜಗತ್ತು ಎಂದಿಗೂ ಆತನಿಂದ ಪ್ರತ್ಯೇಕವಲ್ಲ.

"ಎಲ್ಲಾ ತತ್ತ್ವಗಳೂ ಕೊನೆಗೆ ಆಕಾಶತತ್ತ್ವದಲ್ಲಿ ಲಯವಾಗುತ್ತವೆ.

ಮತ್ತೆ ಸೃಷ್ಟಿಯಾಗಬೇಕಾದಾಗ ಆಕಾಶತತ್ತ್ವದಿಂದ ಮಹತ್ತತ್ತ್ವ, ಮಹತ್ತತ್ತ್ವದಿಂದ ಅಹಂಕಾರ ಉತ್ಪತ್ತಿಯಾಗುತ್ತದೆ. ಇದೇ ರೀತಿಯಾಗಿ ಕ್ರಮಕ್ರಮೇಣ ಇಡೀ ಬ್ರಹ್ಮಾಂಡವೇ ಸೃಷ್ಟವಾಗುತ್ತದೆ. ಅನುಲೋಮ, ವಿಲೋಮ ನಡೆಯುತ್ತಲೇ ಇರುತ್ತದೆ. ಭಕ್ತ ಎಲ್ಲವನ್ನೂ ಸ್ವೀಕರಿಸುತ್ತಾನೆ. ಆತ ಅಖಂಡ ಸಚ್ಚಿದಾನಂದನನ್ನೂ ಸ್ವೀಕರಿಸುತ್ತಾನೆ, ಜೀವ ಜಗತ್ತುಗಳನ್ನೂ ಸ್ವೀಕರಿಸುತ್ತಾನೆ.

"ಆದರೆ ಯೋಗಿಯ ಮಾರ್ಗ ಬೇರೆ. ಆತ ಪರಮಾತ್ಮನನ್ನು ಮುಟ್ಟಿದನಂತರ ಹಿಂದಿರುಗಿಬರುವುದಿಲ್ಲ. ಪರಮಾತ್ಮನೊಡನೆ ಐಕ್ಯವಾಗಿ ಬಿಡುತ್ತಾನೆ.

"ಯಾವುದಾದರೂ ಒಂದು ನಿರ್ದಿಷ್ಟ ವಸ್ತುವಿನಲ್ಲಿ ಮಾತ್ರ ಭಗವಂತನನ್ನು ಯಾರು ಕಾಣುವನೊ ಆತನಿಗೆ 'ಖಂಡ ಜ್ಞಾನಿ' ಅಂತ ಹೆಸರು. ಆತನ ಭಾವನೆ ಅದೊಂದನ್ನು ಬಿಟ್ಟರೆ ಬೇರೆ ಯಾವುದರಲ್ಲೂ ಭಗವಂತನಿಲ್ಲ ಎಂದು.

"ಭಕ್ತರಲ್ಲಿ ಮೂರ ವಿಧ — ಅಧಮ, ಮಧ್ಯಮ, ಉತ್ತಮ. ಅಧಮ ಭಕ್ತ ಹೇಳುತ್ತಾನೆ: 'ಭಗವಂತ ಅಲ್ಲಿ.' ಎಂದರೆ, ಆತ ಆಕಾಶದ ಕಡೆಗೆ ಕೈ ತೋರಿಸುತ್ತಾನೆ. ಮಧ್ಯಮ ಭಕ್ತ ಹೇಳುತ್ತಾನೆ: 'ಭಗವಂತ ಹೃದಯಮಧ್ಯದಲ್ಲಿ ಅಂತರ್ಯಾಮಿ ರೂಪದಿಂದ ಇದ್ದಾನೆ.' ಉತ್ತಮ ಭಕ್ತ ಹೇಳುತ್ತಾನೆ: 'ಭಗವಂತನೇ ಎಲ್ಲವೂ ಆಗಿದ್ದಾನೆ. ಕಣ್ಣಿಗೆ ಏನೇನು ಬೀಳುವುದೊ ಎಲ್ಲವೂ ಆತನ ಒಂದೊಂದು ರೂಪ.' ನರೇಂದ್ರ ಹಿಂದೆ ಹಾಸ್ಯಮಾಡುತ್ತ ಹೇಳುತ್ತಿದ್ದ: 'ಹೌದು, ಭಗವಂತ ಎಲ್ಲವೂ ಆಗಿದ್ದಾನೆ! ಅದು ಹಾಗಿದ್ದರೆ ಈ ಬಟ್ಟಲೂ ಭಗವಂತ, ಆ ತಟ್ಟೆಯೂ ಭಗವಂತ!' (ಎಲ್ಲರೂ ನಗುತ್ತಿದ್ದಾರೆ.)

"ಆದರೆ ಭಗವಂತನ ದರ್ಶನ ದೊರೆಯಿತು ಎಂದರೆ ಎಲ್ಲಾ ಸಂದೇಹಗಳೂ ನಿವೃತ್ತಿಯಾಗಿಬಿಡುತ್ತವೆ. ಬರಿದೆ ಕಿವಿಯಲ್ಲಿ ಕೇಳುವುದಕ್ಕೂ ಪ್ರತ್ಯಕ್ಷ ನೋಡುವುದಕ್ಕೂ ಅಜಗಜಾಂತರ ವ್ಯತ್ಯಾಸ. ಕೇವಲ ಶ್ರವಣದಿಂದ ನೂರಕ್ಕೆ ನೂರು ಭಾಗ ಶ್ರದ್ಧೆಯುಂಟಾಗುವುದಿಲ್ಲ. ಸಾಕ್ಷಾತ್ಕಾರವಾಯಿತು ಎಂದರೆ ಶ್ರದ್ಧೆಗೆ ಇನ್ನು ಯಾವುದರ ಕೊರತೆಯೂ ಇರದು.

"ಭಗವಂತನ ದರ್ಶನವಾದನಂತರ ಕರ್ಮತ್ಯಾಗ ಆಗಿಬಿಡುತ್ತದೆ. ದೇವಾಲಯದಲ್ಲಿ ನನ್ನ ಪೂಜೆ ನಿಂತುಹೋದುದೂ ಹೀಗೆಯೇ. ಹಿಂದೆ

ಕಾಳೀದೇವಾಲಯದಲ್ಲಿ ಪೂಜೆ ಮಾಡುತ್ತಿದ್ದೆ. ಭಗವತಿ ಇದ್ದಕ್ಕಿದ್ದಹಾಗೆ ತೋರಿಸಿಬಿಟ್ಟಳು, ಎಲ್ಲವೂ ಚಿನ್ಮಯವಾಗಿರುವುದನ್ನ—ಪೂಜಾ ಪಾತ್ರೆಗಳು, ವೇದಿಕೆ, ಬಾಗಿಲು ಎಲ್ಲ ಚಿನ್ಮಯವಾಗಿರುವುದನ್ನ. ಮನುಷ್ಯರು, ಜೀವ, ಜಂತು—ಎಲ್ಲವೂ ಚಿನ್ಮಯವಾಗಿ ಕಂಡುವು. ಆಗ ಉನ್ಮತ್ತನ ಹಾಗೆ ಎಲ್ಲಾ ದಿಕ್ಕುಗಳಿಗೂ ಪುಷ್ಪವನ್ನು ಎರಚಲಾರಂಭಿಸಿದೆ. ಕಣ್ಣಿಗೆ ಬಿದ್ದು ದನ್ನೆಲ್ಲಾ ಪೂಜಿಸಲಾರಂಭಿಸಿದೆ.

"ಒಂದು ದಿನ ಪೂಜೆಯ ಸಮಯದಲ್ಲಿ ಶಿವನ ತಲೆಯ ಮೇಲೆ ವಜ್ರದಾಭರಣ ಇಡುತ್ತಿದ್ದೆ. ಆಗ ಭಗವತಿ ನನಗೆ ತೋರಿಸಿದಳು, ಈ ವಿರಾಟ್, ಈ ವಿಶ್ವವೇ ಶಿವನೆಂದು. ಅಂದಿನಿಂದ ಶಿವನನ್ನು ನಾನು ಪ್ರತಿಮೆಯ ಮೂಲಕ ಪೂಜಿಸುವುದು ಕೊನೆಗಂಡಿತು. ಇನ್ನೊಂದು ದಿನ ನಾನು ಹೂವು ಕೊಯ್ಯುತ್ತಿದ್ದೆ. ಇದ್ದಕ್ಕಿದ್ದಹಾಗೆ ಭಗವತಿ ನನಗೆ ತೋರಿ ಸಿದಳು, ಹೂವಿನ ಗಿಡಗಳೆಲ್ಲಾ ಒಂದೊಂದು ತುರಾಯಿ ಎಂದು."

ತ್ರೈಲೋಕ್ಯ: "ಆಹಾ! ಭಗವಂತನ ಸೃಷ್ಟಿರಚನೆ ಎಷ್ಟು ಸುಂದರ ವಾದ್ದು!"

ಶ್ರೀರಾಮಕೃಷ್ಣರು: "ಅಲ್ಲ, ಅದಲ್ಲ. ಇದ್ದಕ್ಕಿದ್ದಹಾಗೆ ತೋರಿಸಿ ಬಿಟ್ಟಳು. ನಾನು ಲೆಕ್ಕಾಚಾರ ಮಾಡಿ ಹಾಗೆ ಹೇಳಲಿಲ್ಲ. ತೋರಿಸಿದಳು, ಒಂದೊಂದು ಹೂವಿನ ಗಿಡವೂ ಒಂದೊಂದು ತುರಾಯಿ—ಅವುಗಳಿಂದ ವಿರಾಟ್ ಪುರುಷನ ಅಲಂಕಾರವಾಗಿದೆ ಎಂದು. ಅಂದಿನಿಂದ ನಾನು ಹೂವು ಕೊಯ್ಯುವುದು ನಿಂತುಹೋಯಿತು. ಮನುಷ್ಯನನ್ನೂ ನಾನು ಅದೇ ರೀತಿಯಾಗಿ ನೋಡುತ್ತೇನೆ. ಮನುಷ್ಯ ನನ್ನ ಕಣ್ಣಿಗೆ ಬಿದ್ದಾಗ ನನಗೆ ತೋರುತ್ತದೆ, ಭಗವಂತನೇ ಮನುಷ್ಯ ಶರೀರ ಧರಿಸಿ ಹಿಂದಕ್ಕೂ ಮುಂದಕ್ಕೂ ಜಗ್ಗಿ ಜಗ್ಗಿ ನಡೆಯುತ್ತಿದ್ದಾನೊ ಏನೊ ಎಂಬುದಾಗಿ— ಅಲೆಯ ಮೇಲೆ ತೇಲುತ್ತಿರುವ ದಿಂಬಿನ ಹಾಗೆ. ದಿಂಬು ಅಲೆಗಳೊಡನೆ ಚಲಿಸುತ್ತಿರುತ್ತದೆ—ಕೆಳಕ್ಕೆ ಬಿದ್ದು ಮೇಲಕ್ಕೆ ಎದ್ದು.

"ಈ ಶರೀರ ಎರಡು ದಿನದ್ದು. ಭಗವಂತನೇ ಸತ್ಯ. ಶರೀರ ಈಗಿದ್ದುದು ಈಗಿರದು. ಅನೇಕ ವರ್ಷಗಳ ಹಿಂದೆ ಯಾವಾಗ ನಾನು ಅಗ್ನಿಮಾಂದ್ಯದಿಂದ ಬಹಳನಾಗಿ ನರಳುತ್ತಿದ್ದೆನೊ ಆಗ ಹೃದೆ ನನಗೆ ಸಲಹೆ ಇತ್ತ: 'ಭಗವತಿಗೆ ಒಮ್ಮೆ ಪ್ರಾರ್ಥನೆ ಮಾಡಿ— ಗುಣಪಡಿಸಿಕೊಡ ಬೇಕೆಂದು.' ನನ್ನ ರೋಗವನ್ನು ಗುಣಪಡಿಸಿಕೊಡಬೇಕೆಂದು ಆಕೆಯನ್ನು

ಕೇಳಿಕೊಳ್ಳಲು ನನಗೆ ನಾಚಿಕೆಯಾಯಿತು. ನಾನು ಆಕೆಗೆ ಹೇಳಿದೆ: 'ತಾಯಿ, ನಾನು ಒಮ್ಮೆ ಏಷ್ಯಾಟಿಕ್ ಸೊಸೈಟಿ ವಸ್ತುಸಂಗ್ರಹಶಾಲೆಯಲ್ಲಿ ಮನುಷ್ಯನ ಎಲುಬುಗೂಡನ್ನು ನೋಡಿದೆ. ತಂತಿಯಿಂದ ಬಿಗಿದು ಅದನ್ನು ಮನುಷ್ಯನ ಆಕೃತಿಗೆ ತಂದಿದ್ದರು. ತಾಯಿ, ಈ ಶರೀರವನ್ನೂ ಆ ರೀತಿ ಯಾಗಿ ಸ್ವಲ್ಪ ಬಿಗಿದು ನಿಲ್ಲಿಸು. ಆಗ ನನಗೆ ನಿನ್ನ ನಾಮಗುಣಕೀರ್ತನೆ ಮಾಡಿಕೊಂಡಿರಲು ಸಾಧ್ಯವಾಗುತ್ತದೆ.'

"ಬದುಕಬೇಕೆಂಬ ಇಚ್ಛೆ ಏಕೆ ಉಂಟಾಗುತ್ತದೆ? ರಾವಣನ ವಧೆ ಯಾದನಂತರ ರಾಮಲಕ್ಷ್ಮಣರು ಲಂಕೆಯನ್ನು ಪ್ರವೇಶಿಸಿದರು. ಅವರು ರಾವಣನ ಅರಮನೆಗೆ ಹೋಗಿ ನೋಡುತ್ತಾರೆ, ರಾವಣನ ತಾಯಿ ನಿಕಷೆ ಅಲ್ಲಿಂದ ಓಡಿಹೋಗುತ್ತಿದ್ದಾಳೆ. ಲಕ್ಷ್ಮಣನಿಗೆ ಆಶ್ಚರ್ಯವಾಗಿ ಆತ ರಾಮನನ್ನು ಕೇಳಿದ: 'ಓ ರಾಮ, ನಿಕಷೆಯ ವಂಶವೆಲ್ಲಾ ಧ್ವಂಸವಾಗಿ ಹೋಗಿದೆ, ಆದರೂ ಆಕೆಗೆ ಪ್ರಾಣದ ಮೇಲೆ ಇಷ್ಟೊಂದು ಆಸೆಯಿದೆ ಯಲ್ಲ!' ರಾಮ ನಿಕಷೆಯನ್ನು ಹತ್ತಿರಕ್ಕೆ ಕರೆದು ಹೇಳಿದ: 'ಹೆದರಬೇಡ. ಏಕೆ ನೀನು ಹೆದರಿ ಓಡಿಹೋಗುತ್ತಿದ್ದೆಯಲ್ಲ?' ನಿಕಷೆ ಉತ್ತರವಿತ್ತಳು: 'ಹೇ ರಾಮ, ನಾನು ಹೆದರಿ ಓಡಿಹೋಗುತ್ತಿರಲಿಲ್ಲ. ನಾನು ಬದುಕಿ ಕೊಂಡಿದ್ದುದರಿಂದ ನಿನ್ನ ಇಷ್ಟೊಂದು ಲೀಲೆಗಳನ್ನು ನೋಡಲು ಸಾಧ್ಯ ವಾಯಿತು. ಬದುಕಿಕೊಂಡಿದ್ದರೆ ಇನ್ನೂ ಎಷ್ಟೋ ಲೀಲೆಗಳನ್ನು ನೋಡಲು ಸಾಧ್ಯವಾಗುತ್ತದೆ. ಆದ್ದರಿಂದ ಬದುಕಲು ಇಚ್ಛೆ.'

"ಆಸೆ ಇಲ್ಲದೆ ಇತ್ತು ಎಂದರೆ ಶರೀರ ಬದುಕಿರದು. (ನಗುತ್ತ) ನನಗೊಂದೆರಡು ಆಸೆಗಳಿದ್ದುವು. ನಾನು ಭಗವತಿಗೆ ಪ್ರಾರ್ಥನೆಮಾಡಿದ್ದೆ: 'ಹೇ ತಾಯಿ, ಕಾಮಕಾಂಚನತ್ಯಾಗಿಗಳ ಸಹವಾಸ ಕೊಡು.' ಮತ್ತೆ ಪ್ರಾರ್ಥಿಸಿದ್ದೆ: 'ನಿನ್ನ ಭಕ್ತರ ಮತ್ತು ಜ್ಞಾನಿಗಳ ಸಹವಾಸಮಾಡಬೇಕು ಅಂತ ಇಚ್ಛೆಯಿದೆ. ನನಗೆ ಸ್ವಲ್ಪ ನಡೆಯುವ ಶಕ್ತಿಯನ್ನು ಕೊಡು. ಅಲ್ಲಿ ಇಲ್ಲಿ ಸುತ್ತಿ ಅವರನ್ನೆಲ್ಲಾ ನೋಡಿಕೊಂಡುಬರುತ್ತೇನೆ.' ಆದರೆ ಭಗವತಿ ಹಾಗೆ ಸುತ್ತಿಬರುವ ಶಕ್ತಿಯನ್ನು ನನಗೆ ಕರುಣಿಸಲಿಲ್ಲ."

ತ್ರೈಲೋಕ್ಯ ನಗುತ್ತ: "ನಿಮ್ಮ ಎಲ್ಲಾ ಇಚ್ಛೆಗಳೂ ಪೂರ್ಣಗೊಂಡು ಬಿಟ್ಟವೆಯೇನು?"

ಶ್ರೀರಾಮಕೃಷ್ಣರು ನಗುತ್ತ: "ಇಲ್ಲ ಇನ್ನೂ ಸ್ವಲ್ಪ ಉಳಿದು ಕೊಂಡಿವೆ. (ಎಲ್ಲರೂ ನಗುತ್ತಿದ್ದಾರೆ.)

"ಈ ಶರೀರ ಅನಿತ್ಯವಾದ್ದು. ನನ್ನ ತೋಳಿಗೆ ಪೆಟ್ಟು ತಗುಲಿದಾಗ ನಾನು ಭಗವತಿಗೆ ಹೇಳಿದೆ: 'ತಾಯೆ, ಬಹಳವಾಗಿ ನೋಯುತ್ತಿದೆ.' ಒಡನೆಯೇ ಆಕೆ ನನಗೆ ತೋರಿಸಿದಳು ಗಾಡಿಯನ್ನ ಮತ್ತು ಅದನ್ನು ಹೊಡೆಯುವವನನ್ನ. ಗಾಡಿಯ ಸ್ಕ್ರೂ ಮೊಳೆಗಳು ಅಲ್ಲೊಂದು ಇಲ್ಲೊಂದು ಕಳಚಿಕೊಂಡಿದ್ದುವು. ಗಾಡಿ ಹೊಡೆಯುವವ ಓಡಿಸಿದ ಹಾಗೆ ಆ ಗಾಡಿ ಚಲಿಸುತ್ತಿತ್ತು. ಅದಕ್ಕೆ ತನ್ನದೇ ಆದ ಯಾವ ಶಕ್ತಿಯೂ ಇರಲಿಲ್ಲ.

"ಹಾಗಾದರೆ ಈ ದೇಹಕ್ಕೆ ಗಮನ ಕೊಡುತ್ತೇನಲ್ಲ ಏಕೆ? ಭಗವಂತನೊಡನೆ ಆನಂದಪಡಲು, ಆತನ ನಾಮಗುಣಕೀರ್ತನೆ ಮಾಡಲು, ಆತನ ಜ್ಞಾನಿಗಳನ್ನ, ಭಕ್ತರನ್ನ ಸಂಧಿಸಿ ಸುತ್ತಾಡಲು."

ನರೇಂದ್ರ ಪರಮಹಂಸರ ಮುಂದುಗಡೆ ನೆಲದ ಮೇಲೆ ಕುಳಿತಿದಾನೆ.

ಶ್ರೀರಾಮಕೃಷ್ಣರು ತ್ರೈಲೋಕ್ಯನೇ ಮೊದಲಾದ ಭಕ್ತರಿಗೆ: "ದೇಹದ ಸುಖ, ದುಃಖ ಇದ್ದೇ ಇವೆ. ನರೇಂದ್ರನ ಕಡೆ ನೋಡಿ. ಆತನ ತಂದೆ ಸತ್ತುಹೋಗಿಬಿಟ್ಟಿದಾನೆ, ಮನೆಯಲ್ಲಿ ಬಹಳ ಕಷ್ಟ. ಯಾವ ಮಾರ್ಗವೂ ಆತನಿಗೆ ತೋರಿಬರುತ್ತಿಲ್ಲ. ಭಗವಂತ ನಮ್ಮನ್ನ ಕೆಲವು ವೇಳೆ ಸುಖದಲ್ಲಿ, ಕೆಲವು ವೇಳೆ ದುಃಖದಲ್ಲಿ ಇಡುತ್ತಾನೆ."

ತ್ರೈಲೋಕ್ಯ: "ಅದೇನೊ ನಿಜ. ನರೇಂದ್ರನ ಮೇಲೆ ಭಗವಂತನ ದಯೆ ಉಂಟಾಗುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಇನ್ನು ಯಾವಾಗ? ಕಾಶಿಯ ಅನ್ನಪೂರ್ಣಾ ಛತ್ರದಲ್ಲಿ ಯಾರೂ ಹಸಿದಿರುವುದಿಲ್ಲವೆಂಬುದೇನೊ ನಿಜ. ಆದರೆ ಕೆಲಕೆಲವರು ಸಾಯಂಕಾಲದವರೆಗೂ ಹಸಿದು ಕುಳಿತಿರಬೇಕಾಗುತ್ತದೆ.

"ಒಮ್ಮೆ ಹೃದೆ ಶಂಭುಮಲ್ಲಿಕನನ್ನು ತನಗೆ ಸ್ವಲ್ಪ ದುಡ್ಡು ಬೇಕೆಂದು ಕೇಳಿದ. ಅಂಥ ವಿಷಯಗಳಲ್ಲಿ ಶಂಭುಮಲ್ಲಿಕನ ಸ್ವಭಾವ ಇಂಗ್ಲಿಷಿನವರ ಹಾಗೆ. ಆತ ಹೃದೆಗೆ ಹೇಳಿದ: 'ನಾನೇಕೆ ನಿನಗೆ ದುಡ್ಡು ಕೊಡಬೇಕು? ದುಡಿದು ಸಂಪಾದಿಸುವ ಶಕ್ತಿ ನಿನಗಿದೆ. ಈಗ ನೀನು ಅಲ್ಪಸ್ವಲ್ಪ ದುಡ್ಡನ್ನೂ ಸಂಪಾದಿಸುತ್ತಲೇ ಇದೀಯೆ. ನೀನು ಅತ್ಯಂತ ದರಿದ್ರನಾಗಿದ್ದರೆ ಆಗ ಒಮ್ಮೆ ನೋಡಬಹುದಾಗಿತ್ತು. ಕುರುಡ, ಕುಂಟ, ಹೆಳವರಿಗೆ ದಾನ ಮಾಡಿದರೆ ಅದು ಸಾರ್ಥಕವಾಗುತ್ತದೆ.' ಆಗ ಹೃದೆ ಆತನಿಗೆ ಉತ್ತರವಿತ್ತ: 'ಮಹಾಶಯ, ನೀವು ಹಾಗೆಲ್ಲ ಹೇಳಬೇಡಿ. ನನಗೆ ನಿಮ್ಮ ದುಡ್ಡೂ

ಬೇಕಾಗಿಲ್ಲ, ಕಾಸೂ ಬೇಕಾಗಿಲ್ಲ. ಭಗವಂತನ ಕೃಪೆಯಿಂದ ನಾನು ಕುಂಟನೊ, ಕುರುಡನೊ, ಹೆಳವನೊ ಅಥವಾ ಅತ್ಯಂತ ದರಿದ್ರನೊ ಆಗದೆ ಇರಲಿ! ನೀವು ಕೊಡಲೂ ಬೇಡಿ, ನಾನು ಸ್ವೀಕರಿಸುವುದೂ ಇಲ್ಲ.' "

ಭಗವಂತ ನರೇಂದ್ರನಿಗೆ ಇನ್ನೂ ಕೃಪೆಮಾಡದೆ ಇರುವುದನ್ನು ನೋಡಿ ಆತನ ಮೇಲೆ ಸಿಟ್ಟುಗೊಂಡಿರುವರೊ ಏನೊ ಎಂಬಂತೆ ಪರಮಹಂಸರು ಈ ಮಾತುಗಳನ್ನೆಲ್ಲಾ ಆಡಿದರು. ಆಗಾಗ ಅವರು ತಮ್ಮ ಸ್ನೇಹಪೂರಿತ ದೃಷ್ಟಿಯನ್ನು ನರೇಂದ್ರನ ಮೇಲೆ ಹಾಕುತ್ತಲೇ ಇದ್ದಾರೆ.

ನರೇಂದ್ರ: "ಈಗ ನಾನು ನಾಸ್ತಿಕಮತ ಗ್ರಂಥಗಳನ್ನು ಓದುತ್ತಿದ್ದೇನೆ."

ಶ್ರೀರಾಮಕೃಷ್ಣರು: "ಆಸ್ತಿಕಮತ, ನಾಸ್ತಿಕಮತ ಎರಡೂ ಇವೆ. ಮೊದಲನೆಯದನ್ನ ಏಕೆ ಸ್ವೀಕರಿಸಬಾರದು?"

ಸುರೇಂದ್ರ: "ಭಗವಂತ ನ್ಯಾಯಪರಾಯಣ. ಆತ ಭಕ್ತರ ಯೋಗಕ್ಷೇಮವನ್ನ ನೋಡೇ ನೋಡಿಕೊಳ್ಳುತ್ತಾನೆ."

ಶ್ರೀರಾಮಕೃಷ್ಣರು: "ಶಾಸ್ತ್ರಗಳು ಹೇಳುತ್ತವೆ, ಯಾರು ಪೂರ್ವ ಜನ್ಮಗಳಲ್ಲಿ ದಾನಾದಿ ಧರ್ಮಕಾರ್ಯಗಳನ್ನ ಮಾಡಿರುತ್ತಾರೊ ಅವರಿಗೆ ಈ ಜನ್ಮದಲ್ಲಿ ಧನ ದೊರೆಯುತ್ತೆ ಎಂಬುದಾಗಿ. ಆದರೆ ಸತ್ಯ ಏನು ಗೊತ್ತೆ? ಈ ಜಗತ್ತು ಭಗವಂತನ ಮಾಯೆಯಿಂದ ಜನಿತವಾಗಿದೆ. ಈ ಮಾಯಾಪ್ರಪಂಚದಲ್ಲಿ ಅನೇಕ ಗೊಂದಲಗಳಿವೆ. ಕಾರಣ-ಗೀರಣ ಏನೂ ಗೊತ್ತಾಗುವುದಿಲ್ಲ.

"ಭಗವಂತನ ಕಾರ್ಯವನ್ನ ಸ್ವಲ್ಪವೂ ಅರಿಯಲಾಗುವುದಿಲ್ಲ. ಭೀಷ್ಮ ಶರಶಯ್ಯೆಯಲ್ಲಿ ಮಲಗಿಕೊಂಡಿದ್ದಾಗ ಪಾಂಡವರು ಆತನನ್ನು ನೋಡಲು ಬಂದರು. ಅವರೊಡನೆ ಕೃಷ್ಣನೂ ಇದ್ದ. ಇದ್ದಕ್ಕಿದ್ದಹಾಗೆ ಭೀಷ್ಮ ಅಳಲಾರಂಭಿಸಿದ. ಪಾಂಡವರು ಕೃಷ್ಣನಿಗೆ ಹೇಳಿದರು: 'ಓ ಕೃಷ್ಣ, ಏನಾಶ್ಚರ್ಯ ಇದು! ಪಿತಾಮಹ ಅಷ್ಟ ವಸುಗಳಲ್ಲಿ ಒಬ್ಬ. ಇವನಂಥ ಜ್ಞಾನಿ ಈ ಜಗತ್ತಿನಲ್ಲೇ ಇಲ್ಲ. ಈತನೂ ಮೃತ್ಯು ಸನ್ನಿಹಿತವಾಗಿರುವಾಗ ಮಾಯೆಯ ದೆಸೆಯಿಂದ ಅಳುತ್ತಿದ್ದಾನಲ್ಲ!' ಕೃಷ್ಣ ಉತ್ತರವಿತ್ತ: 'ಭೀಷ್ಮ ಅದಕ್ಕಾಗಿ ಅಳುತ್ತಿಲ್ಲ. ಅದಕ್ಕೆ ಕಾರಣವನ್ನ ಆತನನ್ನೇ ಕೇಳಿ ತಿಳಿದುಕೊಳ್ಳೋಣ.' ಕಾರಣ ಕೇಳಿದಾಗ ಭೀಷ್ಮ ಉತ್ತರವಿತ್ತ: 'ಓ ಕೃಷ್ಣ, ಭಗವಂತನ ಕಾರ್ಯ ಸ್ವಲ್ಪವೂ ನನಗೆ ಅರ್ಥವಾಗುತ್ತಿಲ್ಲ. ನಾನು ಅಳು

ತ್ತಿದೇನೆ, ಸಾಕ್ಷಾತ್ ಭಗವಂತನೇ ಪಾಂಡವರೊಡನೆ ಸರ್ವದಾ ಇದ್ದು ಕೊಂಡಿದ್ದಾನೆ, ಆದರೂ ಅವರ ದುರ್ದಶೆಗೆ ಕೊನೆಯೇ ಇಲ್ಲವಲ್ಲ ಎಂದು. ಈ ಭಾವನೆ ಬಂದಾಗ ನನಗನಿಸುತ್ತದೆ, ಭಗವಂತನ ಕಾರ್ಯವನ್ನ ಸ್ವಲ್ಪವೂ ಅರಿತುಕೊಳ್ಳಲಾಗುವುದಿಲ್ಲ ಎಂದು.'

''ಭಗವಂತ ನನಗೆ ಪರಮಾತ್ಮನನ್ನು ತೋರಿಸಿದಾನೆ— ಯಾರನ್ನ ವೇದ, ಶುದ್ಧ ಆತ್ಮ ಎಂದು ಕರೆಯುವುದೊ ಆತನನ್ನ. ಆತನೇ ಕೇವಲ ಏಕಮಾತ್ರ ಅಚಲ ವಸ್ತು — ಸುಮೇರುವಿನ ಹಾಗೆ, ನಿರ್ಲಿಪ್ತ ಮತ್ತು ಸುಖ ದುಃಖಗಳಿಗತೀತ. ಆತನ ಮಾಯಾ ಕಾರ್ಯಗಳಲ್ಲಿ ಅನೇಕ ಗೊಂದಲಗಳಿವೆ. ಇದಾದಮೇಲೆ ಅದು, ಅದಾದಮೇಲೆ ಇದು ಎಂಬ ನಿಯಮ ನಿಬಂಧನೆಗಳಾವೂ ಇಲ್ಲ.''

ಸುರೇಂದ್ರ ನಗುತ್ತ : ''ಪೂರ್ವ ಜನ್ಮಗಳಲ್ಲಿ ದಾನ-ಗೀನ ಮಾಡಿದ್ದರೆ ತಾನೆ ನಮಗೆ ಈ ಜನ್ಮದಲ್ಲಿ ಐಶ್ವರ್ಯ ದೊರಕಬೇಕಾದರೆ? ಆದ್ದರಿಂದ ನಾವು ಈ ಜನ್ಮದಲ್ಲಿ ದಾನ-ಗೀನ ಮಾಡಬೇಕು.''

ಶ್ರೀರಾಮಕೃಷ್ಣರು : ''ಯಾರಲ್ಲಿ ಹಣವಿದೆಯೊ ಅವರು ಹಾಗೆ ಮಾಡಬೇಕಾದ್ದೆ. (ತ್ರೈಲೋಕ್ಯನಿಗೆ) ಜಯಗೋಪಾಲಸೇನನ ಹತ್ತಿರ ಹಣವಿದೆ. ಆತ ದಾನಧರ್ಮಾದಿ ಕಾರ್ಯಗಳನ್ನು ಮಾಡಬೇಕು. ಆತ ಹಾಗೆ ಮಾಡದಿರುವುದು ಅಪಯಶಸ್ಕರವಾದ್ದು. ಕೆಲಕೆಲವರಲ್ಲಿ ಹಣ ವಿದ್ದರೂ ಕೃಪಣರಾಗಿರುತ್ತಾರೆ. ಅವರು ಸತ್ತನಂತರ ಅವರ ಹಣವನ್ನು ಯಾರು ಅನುಭವಿಸಬೇಕಾಗಿದೆಯೊ ಯಾರಿಗೆ ತಾನೆ ಗೊತ್ತು.

''ಅಂದು ಜಯಗೋಪಾಲಸೇನ ಇಲ್ಲಿಗೆ ಬಂದಿದ್ದ. ಗಾಡಿ ಮಾಡಿ ಕೊಂಡು ಬಂದಿದ್ದ. ಗಾಡಿಯಲ್ಲಿ ಒಡೆದುಹೋದ ಲಾಂದ್ರಗಳಿದ್ದುವು. ಕುದುರೆ ಕಟುಕನಿಗೂ ಬೇಡದ ಹಾಗೆ ಇದ್ದುವು. ಗಾಡಿ ಹೊಡೆಯುವವ ಈಗತಾನೆ ಮೆಡಿಕಲ್ ಕಾಲೇಜಿನ ಆಸ್ಪತ್ರೆಯಿಂದ ಬಿಡುಗಡೆ ಹೊಂದಿ ಬಂದಿದಾನೊ ಏನೊ ಎಂಬಂತಿದ್ದ. ನನಗಾಗಿ ಒಂದೆರಡು ಕೊಳೆತ ದಾಳಿಂಬೆ ಹಣ್ಣು ತಂದಿದ್ದ!'' (ಎಲ್ಲರೂ ನಗುತ್ತಿದಾರೆ.)

ಸುರೇಂದ್ರ : ''ಜಯಗೋಪಾಲಸೇನ ಬ್ರಾಹ್ಮಸಮಾಜದ ಅನು ಯಾಯಿ. ಈಗ ಕೇಶವಸೇನನ ಬ್ರಾಹ್ಮಸಮಾಜದಲ್ಲಿ ಗಣ್ಯ ವ್ಯಕ್ತಿ ಯಾರೂ ಇಲ್ಲ ಅಂತ ಕಾಣುತ್ತೆ. ವಿಜಯಗೋಸ್ವಾಮಿ, ಶಿವನಾಥ

ಮತ್ತೆ ಇನ್ನೂ ಕೆಲವರು ಕೂಡಿ ಸಾಧಾರಣ ಬ್ರಾಹ್ಮಸಮಾಜ ಮಾಡಿ ಕೊಂಡಿದಾರೆ.''

ಶ್ರೀರಾಮಕೃಷ್ಣರು ನಗುತ್ತ: ''ಗೋವಿಂದ ಅಧಿಕಾರಿ ತನ್ನ ನಾಟಕ ಶಾಲೆಯಲ್ಲಿ ಒಳ್ಳೆಯ ನಟರನ್ನು ಇಟ್ಟುಕೊಳ್ಳುತ್ತಿರಲಿಲ್ಲ— ಅವರಿಗೆ ಲಾಭ ಹಂಚಬೇಕಾಗುತ್ತಲ್ಲ ಎಂದು. (ಎಲ್ಲರೂ ನಗುತ್ತಿದಾರೆ.)

''ಅಂದು ಕೇಶವಸೇನನ ಒಬ್ಬ ಶಿಷ್ಯನನ್ನು ನೋಡಿದೆ. ಕೇಶವಸೇನನ ಮನೆಯಲ್ಲಿ ನಾಟಕ ನಡೆಯುತ್ತಿತ್ತು. ಅದರಲ್ಲಿ ಆತ ಕಂಕುಳಲ್ಲಿ ಮಗು ಎತ್ತಿಕೊಂಡು ನರ್ತಿಸುತ್ತಿದ್ದ. ಆತ ಉಪನ್ಯಾಸ ಕೊಡುತ್ತಾನೆ ಅಂತ ಕೇಳಿದೇನೆ. ಆತ ತನಗೆ ತಾನೇ ಶಿಕ್ಷಣ ಕೊಟ್ಟುಕೊಂಡರೇ ಬೇಕಾದಷ್ಟು!''

ತ್ರೈಲೋಕ್ಯ ಹಾಡುತ್ತಿದಾನೆ.

ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು
ಮಹಾಭಾವ ರಾಸಲೀಲ ಮಾಧುರ್ಯದೊಳಾಡಿವೆ! . . .
(ಉ. ೩೧೬)

ಪರಮಹಂಸರು ತ್ರೈಲೋಕ್ಯನನ್ನು ಕೇಳಿಕೊಂಡರು, 'ನನ್ನನ್ನೂ ಉನ್ಮತ್ತನಾಗಿಸಲೆ ತಾಯೆ,'' ಎಂಬ ಹಾಡನ್ನು ಹಾಡುವಂತೆ.

ತ್ರೈಲೋಕ್ಯ ಹಾಡುತ್ತಿದಾನೆ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ! . . . (ಉ. ೧೪)



## ೨೦

# ಧರ್ಮ: ಗೃಹಸ್ಥರಿಗೆ ಮತ್ತು ಸನ್ಯಾಸಿಗಳಿಗೆ

೯ನೆ ಮಾರ್ಚ್ ೧೮೮೪, ಫಾಲ್ಗುಣ ಶುಕ್ಲ ದ್ವಾದಶಿ, ಭಾನುವಾರ.

ಶ್ರೀರಾಮಕೃಷ್ಣರು ಅನೇಕ ಮಂದಿ ಭಕ್ತರೊಡನೆ ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಅವರ ಮಧ್ಯೆ ಮಣಿಲಾಲ-ಮಲ್ಲಿಕ, ಸಿಂಥಿಯ ಕವಿರಾಜ ಮಹೇಂದ್ರ, ಬಲರಾಮ, ಮಾಸ್ಟರ್, ಭವನಾಥ, ರಾಖಾಲ, ಲಾಟು, ಹರೀಶ, ಕಿಶೋರಿ, ಶಿವಚಂದ್ರ ಮೊದಲಾದವರೂ ಕುಳಿತಿದಾರೆ. ಪರಮಹಂಸರ ತೋಳು ಇನ್ನೂ ಪಟ್ಟಿಯಿಂದ ಬಿಗಿಯಲ್ಪಟ್ಟಿದೆ. ಅದು ಬಹಳವಾಗಿ ನೋಯುತ್ತಿದ್ದರೂ ಪ್ರಾಯಿಕವಾಗಿ ಸಮಾಧಿಸ್ಥರಾಗಿಯೊ ಅಥವಾ ಭಕ್ತರಿಗೆ ಗಭೀರ ತತ್ತ್ವಗಳನ್ನು ಬೋಧಿಸುತ್ತಲೊ ಇರುತ್ತಿದಾರೆ.

ಮಣಿಮಲ್ಲಿಕ ಮತ್ತು ಭವನಾಥ ವಸ್ತು ಪ್ರದರ್ಶನ ಶಾಲೆಯ ಸಂಬಂಧವಾಗಿ ಮಾತು ಎತ್ತಿದರು. ಅದನ್ನು ಆಸಿಯಾ ಮ್ಯುಸೀಯಮ್‌ನ ಹತ್ತಿರ ಏರ್ಪಡಿಸಿದಾರೆ. ಅವರು ಹೇಳುತ್ತಿದಾರೆ: "ಅನೇಕ ಮಂದಿ ರಾಜರು ಬಹು ಅಮೂಲ್ಯ ವಸ್ತುಗಳನ್ನ ಕಳುಹಿಸಿದಾರೆ— ಚಿನ್ನದ ಮಂಚ, ಆ ತರಹದವನ್ನೇ. ಅವನ್ನ ನೋಡಬೇಕಾದ್ದೆ."

ಶ್ರೀರಾಮಕೃಷ್ಣರು ಭಕ್ತರಿಗೆ ನಗುತ್ತ: "ಹೌದು, ಅಲ್ಲಿಗೆ ಹೋದರೆ ಒಂದು ದೊಡ್ಡ ಉಪಕಾರವಾಗುತ್ತದೆ. ರಾಜಮಹಾರಾಜರು ಕಳುಹಿಸಿರುವ ಚಿನ್ನದ ಮಂಚ ಮೊದಲಾದುವುಗಳನ್ನು ನೋಡಿದನಂತರ ಅವೆಲ್ಲಾ ಕೇವಲ ಕಸಕಡ್ಡಿ ಎಂಬ ಬೋಧೆಯಾಗುತ್ತದೆ. ಅದಷ್ಟೇ ಎಷ್ಟೋ ಉಪಕಾರಿ. ನಾನು ಕಲ್ಕತ್ತಕ್ಕೆ ಹೋಗುವಾಗಲೆಲ್ಲಾ ಹೃದೆ ನನಗೆ ವೈಸ್‌ರಾಯ್‌ನ ಬಂಗಲೆ ತೋರಿಸಿ ಹೇಳುತ್ತಿದ್ದ: 'ಮಾವ, ಅಲ್ಲಿ ನೋಡಿ ವೈಸ್‌ರಾಯ್‌ನ ಬಂಗಲೆಯನ್ನ! ಎಷ್ಟೊಂದು ದೊಡ್ಡದೊಡ್ಡ ಕಂಬಗಳು!' ಭಗವತಿ ನನಗೆ ತೋರಿಸಿದಳು, ಅವು ಕೇವಲ ಮಣ್ಣಿನ ಇಟ್ಟಿಗೆಗಳನ್ನು ಒಂದರ ಮೇಲೊಂದು ಜೋಡಿಸಿರುವ ಜೋಡಣೆ ಎಂದು.

"ಭಗವಂತ ಮತ್ತು ಆತನ ಐಶ್ವರ್ಯ. ಭಗವಂತನೇ ಸತ್ಯ; ಆತನ ಐಶ್ವರ್ಯ ಎರಡು ದಿನದ್ದು. ಐಂದ್ರಜಾಲಿಕ ಮತ್ತು ಆತನ ಇಂದ್ರಜಾಲ.

ಇಂದ್ರಜಾಲವನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾಗಿಬಿಡುತ್ತಾರೆ, ಆದರೆ ಅದೆಲ್ಲಾ ಮಿಥ್ಯಾ. ಐಂದ್ರಜಾಲಿಕನೇ ಕೇವಲ ಸತ್ಯ. ಯಜಮಾನ ಮತ್ತು ಆತನ ತೋಟ. ಜನರಿಗೆ ತೋಟದ ಕಡೆಯೇ ದೃಷ್ಟಿ; ಆದರೆ ಅವರು ತೋಟದ ಯಜಮಾನನನ್ನ ಪತ್ತೆಮಾಡಿಕೊಳ್ಳಬೇಕು.''

ಮಣಿಮಲ್ಲಿಕ ಶ್ರೀರಾಮಕೃಷ್ಣರಿಗೆ: ''ವಸ್ತು ಪ್ರದರ್ಶನ ಶಾಲೆಯಲ್ಲಿ ಎಷ್ಟೊಂದು ದೊಡ್ಡ ಎಲೆಕ್ಟ್ರಿಕ್ ದೀಪ ಇಟ್ಟಿದಾರೆ! ಅದನ್ನು ನೋಡಿದಾಗ ನಮಗನಿಸುತ್ತದೆ, ಅಂಥ ದೊಡ್ಡ ದೀಪವನ್ನು ನಿರ್ಮಿಸಿದವನು ಎಂಥ ಅಸಾಧಾರಣ ವ್ಯಕ್ತಿಯಾಗಿ ಇರಬೇಕು ಎಂದು.''

ಶ್ರೀರಾಮಕೃಷ್ಣರು ಮಣಿಲಾಲನಿಗೆ: ''ಒಂದು ಮತವಿದೆ. ಅದು ಹೇಳುತ್ತದೆ, ಭಗವಂತನೆ ಎಲ್ಲವೂ ಆಗಿದಾನೆ ಎಂದು. ಆ ರೀತಿಯಾಗಿ ಹೇಳತಕ್ಕವರೂ ಭಗವಂತನೇ. ಸಚ್ಚಿದಾನಂದನೇ ಎಲ್ಲವೂ ಆಗಿದಾನೆ—ಸೃಷ್ಟಿಕರ್ತ, ಮಾಯೆ, ಜೀವ, ಜಗತ್ತು ಎಲ್ಲವೂ.''

ಈಗ ಮಾತುಕತೆ ವಿವಿಧ ವಸ್ತು ಸಂಗ್ರಹ ಶಾಲೆಯ ಸಂಬಂಧವಾಗಿ ಆರಂಭವಾಯಿತು.

ಶ್ರೀರಾಮಕೃಷ್ಣರು ಭಕ್ತರಿಗೆ: ''ಒಮ್ಮೆ ನಾನು ವಿವಿಧ ವಸ್ತು ಸಂಗ್ರಹ ಶಾಲೆಗೆ ಹೋಗಿದ್ದೆ. ಅಲ್ಲಿ ನನಗೆ ಜೀವ ಜಂತುಗಳ ಮತ್ತು ಸಸ್ಯಗಳ ಅವಶಿಷ್ಟವನ್ನು ತೋರಿಸಿದರು. ಒಂದು ಇಡೀ ಪ್ರಾಣಿಯೇ ಕಲ್ಲಿನಂತಾಗಿ ಬಿಟ್ಟಿತ್ತು! ಹಾಗೇ ನೋಡು, ಸಂಗದೋಷ ಏನು ಎಂಬುದನ್ನ! ಅದೇ ರೀತಿಯಾಗಿ ಸರ್ವದಾ ಸಾಧುಸಂಗ ಮಾಡಿದರೆ ಅವರಂತೇ ಆಗಿಬಿಡುತ್ತೇವೆ.''

ಮಣಿಮಲ್ಲಿಕ ನಗುತ್ತ: ''ನೀವು ಅಲ್ಲಿಗೆ ಹೋಗಿಬಂದಿದ್ದರೆ ನಮಗೆ ಹತ್ತು ಹದಿನೈದು ವರ್ಷಗಳವರೆಗೆ ಉಪದೇಶ ನಡೆಯುತ್ತಿತ್ತು.''

ಶ್ರೀರಾಮಕೃಷ್ಣರು: ''ಅದು ಹೇಗೆ? ಉಪಮೆಗಳಿಗಾಗೇನು?''

ಬಲರಾಮ: ''ಬೇಡಿ, ಹಾಗೆಲ್ಲಾ ನೀವು ಹೋಗಕೂಡದು. ಅಲ್ಲಿಗಿಲ್ಲಿಗೆ ಆ ರೀತಿಯಾಗಿ ಅಲೆದರೆ ನಿಮ್ಮ ಕೈ ಗುಣಹೊಂದದು.''

ಶ್ರೀರಾಮಕೃಷ್ಣರು: ''ನನಗೆ ಎರಡು ವಿಧದ ಚಿತ್ರಪಟ ಬೇಕಾಗಿವೆ. ಒಂದನೆಯದು—ಯೋಗಿ ಧುನಿ ಹೊತ್ತಿಸಿಕೊಂಡು ಅದರ ಬಳಿ ಕುಳಿತುಕೊಂಡಿರುವುದು. ಎರಡನೆಯದು—ಯೋಗಿ ಗಾಂಜಾ ಕುಡಿಯುವಾಗ ಅದು 'ಭಗ್, ಭಗ್' ಅಂತ ಹೊತ್ತಿ ಉರಿಯುತ್ತಿರುವುದು. ಈ ವಿಧದ ಚಿತ್ರಪಟಗಳನ್ನ ನೋಡಿದರೆ ಒಳ್ಳೆ ಉದ್ದೀಪನವಾಗುತ್ತದೆ. ಇದು

ಕೃತಕ ಸೀತಾಫಲದ ಹಣ್ಣು ನೋಡಿದರೆ, ನಿಜವಾದ ಸೀತಾಫಲದ ಹಣ್ಣಿನ ಭಾವನೆ ಬರುವುದಿಲ್ಲವೆ, ಹಾಗೆ.

"ಯೋಗಕ್ಕೆ ವಿಘ್ನ ಕಾಮಕಾಂಚನ. ಈ ಮನಸ್ಸು ಶುದ್ಧವಾಯಿತು ಎಂದರೆ ಯೋಗವುಂಟಾಗುತ್ತದೆ. ಮನಸ್ಸಿನ ನಿವಾಸಸ್ಥಾನ ಭ್ರೂಮಧ್ಯ; ಆದರೆ ಅದರ ದೃಷ್ಟಿ ಮಾತ್ರ ಲಿಂಗ, ಗುಹ್ಯ, ನಾಭಿಗಳ ಕಡೆ—ಎಂದರೆ ಕಾಮಕಾಂಚನಗಳ ಕಡೆ. ಸಾಧನೆ ಮಾಡಿದರೆ ಇದೇ ಮನಸ್ಸಿಗೆ ಊರ್ಧ್ವದೃಷ್ಟಿ ಉಂಟಾಗುತ್ತದೆ.

"ಯಾವ ಸಾಧನೆ ಮಾಡಿದರೆ ಮನಸ್ಸಿಗೆ ಊರ್ಧ್ವದೃಷ್ಟಿ ಉಂಟಾಗುತ್ತದೆ? ಸರ್ವದಾ ಸಾಧುಸಂಗ ಮಾಡಿದರೆ ಎಲ್ಲವನ್ನೂ ಅರಿತುಕೊಳ್ಳಬಹುದು. ಋಷಿಗಳು ಯಾವಾಗಲೂ ನಿರ್ಜನಪ್ರದೇಶದಲ್ಲಿ, ಇಲ್ಲದಿದ್ದರೆ ಸಾಧುಗಳೊಡನೆ ಇರುತ್ತಿದ್ದರು. ಆದ್ದರಿಂದ ಅವರು ಅನಾಯಾಸದಿಂದ ಕಾಮಕಾಂಚನ ತ್ಯಜಿಸಿ ಭಗವಂತನ ಕಡೆ ಮನಸ್ಸನ್ನು ತಿರುಗಿಸಿಡುತ್ತಿದ್ದರು. ಅವರಿಗೆ ಭಯ ಎಂಬುದೇ ಇರಲಿಲ್ಲ; ನಿಂದೆಯನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಲೇ ಇರಲಿಲ್ಲ.

"ತ್ಯಾಗ ಮಾಡಬೇಕಾಗಿದ್ದರೆ ಭಗವಂತನನ್ನು ಮನಶ್ಶಕ್ತಿಗಾಗಿ ಪ್ರಾರ್ಥನೆಮಾಡಬೇಕು. ಯಾವುದು ಮಿಥ್ಯೆಯೆಂದು ತೋರುವುದೊ ಅದನ್ನು ಕೂಡಲೇ ತ್ಯಜಿಸಿಬಿಡಬೇಕು. ಹಿಂದಿನ ಋಷಿಗಳಿಗೆ ಈ ವಿಧದ ಮನೋಬಲವಿತ್ತು. ಈ ಮನೋಬಲದಿಂದ ಅವರು ಇಂದ್ರಿಯಗಳನ್ನು ಜಯಿಸಿದ್ದರು. ಆಮೆ ಒಮ್ಮೆಯೇನಾದರೂ ತನ್ನ ಕೈಕಾಲುಗಳನ್ನು ಒಳಕ್ಕೆ ಸೆಳೆದುಕೊಂಡಿತು ಎಂದರೆ, ಅದನ್ನು ನಾಲ್ಕು ಹೋಳಾಗಿ ಕತ್ತರಿಸಿದರೂ ಅದು ಅವನ್ನು ಹೊರಕ್ಕೆ ಬಿಡದು.

"ಪ್ರಾಪಂಚಿಕ ಮನುಷ್ಯ ಕಪಟಿಯಾಗುತ್ತಾನೆ—ಸರಳನಾಗುವುದಿಲ್ಲ. ಬಾಯಲ್ಲಿ ಹೇಳುತ್ತಾನೆ ಭಗವಂತನನ್ನು ಪ್ರೀತಿಸುತ್ತೇನೆ ಎಂದು. ಆದರೆ ವಿಷಯಸುಖಗಳ ಕಡೆ ಅಷ್ಟೊಂದು ಮನಸ್ಸೆಳೆತ, ಕಾಮಕಾಂಚನಗಳ ಮೇಲೆ ಅಷ್ಟೊಂದು ಪ್ರೀತಿ, ಆ ಪ್ರೀತಿಯ ಅತ್ಯಲ್ಪ ಅಂಶವನ್ನೂ ಆತ ಭಗವಂತನ ಕಡೆಗೆ ತಿರುಗಿಸುವುದಿಲ್ಲ. ಆದರೂ ಬಾಯಲ್ಲಿ ಮಾತ್ರ ಹೇಳುತ್ತಾನೆ, ಭಗವಂತನನ್ನು ಪ್ರೀತಿಸುತ್ತೇನೆ ಎಂದು. (ಮಣಿಮಲ್ಲಿಕನಿಗೆ) ಕಪಟಾಚರಣೆಯನ್ನು ಬಿಟ್ಟುಬಿಡು."

ಮಣಿಮಲ್ಲಿಕ: "ಮನುಷ್ಯನ ಸಂಬಂಧವಾಗಿಯೊ ಅಥವಾ ಭಗವಂತನ ಸಂಬಂಧವಾಗಿಯೊ?"

ಶ್ರೀರಾಮಕೃಷ್ಣರು: "ಎಲ್ಲಾ ವಿಧದ್ದು. ಮನುಷ್ಯನ ಸಂಬಂಧವಾಗೂ ಬಿಟ್ಟುಬಿಡಬೇಕು, ಭಗವಂತನ ಸಂಬಂಧವಾಗೂ ಬಿಟ್ಟುಬಿಡಬೇಕು. ಏನೇ ಆಗಲಿ ಕಪಟಾಚರಣೆ ಮಾಡಕೂಡದು.

"ಭವನಾಥ ಎಷ್ಟು ಸರಳ! ವಿವಾಹವಾದನಂತರ ಬಂದು ನನಗೆ ಹೇಳಿದ: 'ಹೆಂಡತಿಯ ಮೇಲೆ ನನಗೆ ಅಷ್ಟೊಂದು ಪ್ರೀತಿಯುಂಟಾಗುತ್ತಿದೆಯಲ್ಲ ಏಕೆ?' ಆಹಾ, ಆತ ಅತ್ಯಂತ ಸರಳ!

"ಹೆಂಡತಿಯ ಮೇಲೆ ಪ್ರೀತಿಯುಂಟಾಗದೆ ಇರುತ್ತದೆಯೆ? ಇದೇ ಜಗನ್ಮಾತೆಯ ಭುವನಮೋಹಿನೀ ಮಾಯೆ ಎಂಬುದು. ಹೆಂಡತಿಯನ್ನು ಕಂಡರೆ ಭಾವನೆಯುಂಟಾಗುತ್ತದೆ, ಇಂಥಾ ಪ್ರಿಯವಸ್ತು ಈ ಜಗತ್ತಿನಲ್ಲಿ ಬೇರೊಂದಿಲ್ಲ, ಮುಂದೆ ಉದ್ಭವವಾಗುವುದೂ ಇಲ್ಲ—ಆಕೆ ಆತ್ಮೀಯಳು, ಜೀವನದಲ್ಲಿ ಮರಣದಲ್ಲಿ, ಇಹದಲ್ಲಿ ಪರದಲ್ಲಿ.

"ಮನುಷ್ಯ ಹೆಂಡತಿಯನ್ನು ಕಟ್ಟಿಕೊಂಡು ಎಷ್ಟೊಂದು ದುಃಖ ಅನುಭವಿಸುತ್ತಾನೆ! ಆದರೂ ಭಾವಿಸುತ್ತಾನೆ, ಇಂಥ ಆತ್ಮೀಯ ವಸ್ತು ಬೇರೊಂದಿಲ್ಲ ಎಂದು. ಏನು ದುರವಸ್ಥೆ ಇದು! ಒಬ್ಬ ಗೃಹಸ್ಥನಿಗೆ ಬರುತ್ತಿರೋ ಸಂಬಳ ತಿಂಗಳಿಗೆ ಇಪ್ಪತ್ತು. ಆಗಿವೆ, ಮೂರು ಮಕ್ಕಳು. ಅವಕ್ಕೆ ಸರಿಯಾಗಿ ಅನ್ನಹಾಕಲು ಶಕ್ತಿಯಿಲ್ಲ. ಚಾವಣಿಯಿಂದ ನೀರು ಸುಮ್ಮನೆ ಸೋರುತ್ತಿರುತ್ತದೆ. ಅದನ್ನು ಸರಿಪಡಿಸಲು ಕೈಯಲ್ಲಿ ಕಾಸಿಲ್ಲ. ಮಕ್ಕಳಿಗೆ ಹೊಸ ಪುಸ್ತಕ ಕೊಂಡುಕೊಡಲು ಶಕ್ತಿಯಿಲ್ಲ. ಅವುಗಳಿಗೆ ಉಪನಯನ ಮಾಡಲು ಗತಿಯಿಲ್ಲ. ಇವರ ಹತ್ತಿರ ಒಂದೆಂಟಾಣೆ, ಅವರ ಹತ್ತಿರ ಒಂದು ನಾಲ್ಕಾಣೆ— ಈ ರೀತಿಯಾಗಿ ಭಿಕ್ಷೆ ಬೇಡುತ್ತಿರುತ್ತಾನೆ!

"ವಿದ್ಯಾರೂಪಿಣಿ ಹೆಂಡತಿಯೇ ನಿಜವಾದ ಸಹಧರ್ಮಿಣಿ. ಭಗವಂತನ ಕಡೆಗೆ ಹೋಗಲು ಪತಿಗೆ ಬಹಳವಾಗಿ ಸಹಾಯಮಾಡುತ್ತಾಳೆ. ಒಂದೆರಡು ಮಕ್ಕಳಾದನಂತರ ಇಬ್ಬರೂ ಅಣ್ಣತಂಗಿಯರೋಪಾದಿಯಲ್ಲಿ ಇರುತ್ತಾರೆ. ಇಬ್ಬರೂ ಭಗವದ್ಭಕ್ತರೇ—ಭಗವಂತನ ದಾಸದಾಸಿಯರೇ. ಇವರ ಸಂಸಾರ ವಿದ್ಯಾ ಸಂಸಾರ. ಭಗವಂತನೊಡನೆ ಮತ್ತು ಆತನ ಭಕ್ತರೊಡನೆ ಸದಾ ಆನಂದದಿಂದ ಇರುತ್ತಾರೆ. ಇವರಿಗೆ ಗೊತ್ತಿದೆ, ಭಗವಂತನೇ ಏಕಮಾತ್ರ ಆತ್ಮೀಯ ಎಂದು— ಅನಾದಿಕಾಲದಿಂದ ಅನಂತಕಾಲದವರೆಗೆ

ತಮ್ಮವನೇ ಎಂದು. ಸುಖದಲ್ಲಿ, ದುಃಖದಲ್ಲಿ ಎಂದಿಗೂ ಆತನನ್ನು ಮರೆಯರು—ಪಾಂಡವರಂತೆ.

"ಸಂಸಾರಿಗಳ ಭಗವದನುರಾಗ ಬಹಳ ಕ್ಷಣಿಕವಾದ್ದು—ಕಾದ ಬಾಣಲೆಯ ಮೇಲೆ ಬಿದ್ದ ಹನಿ ನೀರಿನ ಹಾಗೆ. ಅದು 'ಚರ್' ಅಂತ ಶಬ್ದಮಾಡಿ ಒಂದು ಕ್ಷಣದೊಳಗೇ ಒಣಗಿಹೋಗುತ್ತದೆ. ಸಂಸಾರಿಗಳಿಗೆ ಭೋಗದ ಕಡೆ ಮನಸ್ಸಿರುತ್ತದೆ. ಆದ್ದರಿಂದ ಅವರಲ್ಲಿ ಭಗವಂತನಿಗಾಗಿ ಅನುರಾಗ, ವ್ಯಾಕುಲತೆ ಉಂಟಾಗುತ್ತಿಲ್ಲ.

"ಏಕಾದಶಿಗಳಲ್ಲಿ ಮೂರು ವಿಧ. ಮೊದಲನೆಯದು ನಿರ್ಜಲ ಏಕಾದಶಿ—ಇದರಲ್ಲಿ ನೀರನ್ನೂ ಕುಡಿಯಕೂಡದು. ಇದೇ ರೀತಿಯಾಗಿ ಪೂರ್ಣತ್ಯಾಗಿ ಸನ್ಯಾಸಿ ಒಮ್ಮೆಗೇ ಎಲ್ಲಾ ಭೋಗಗಳನ್ನೂ ತ್ಯಜಿಸಿಬಿಡುತ್ತಾನೆ. ಎರಡನೆಯದರಲ್ಲಿ ಹಾಲು ಸಂದೇಶ (ಸಿಹಿ ತಿಂಡಿ) ತಿನ್ನುವುದು. ಇದೇ ರೀತಿಯಾಗಿ ಭಕ್ತ ತನ್ನ ಮನೆಯಲ್ಲಿ ಸಾಮಾನ್ಯ ಭೋಗವಸ್ತುಗಳನ್ನು ಇಟ್ಟುಕೊಂಡಿರುತ್ತಾನೆ. ಮೂರನೆಯದು ಪೂರಿ ಪಲ್ಯ ತಿಂದು ಏಕಾದಶಿಯನ್ನು ಆಚರಿಸುವುದು. ಇದರಲ್ಲಿ ಹೊಟ್ಟೆ ಬಿರಿಯೋ ಹಾಗೆ ತಿನ್ನುವುದು. ಇದೂ ಸಾಲದೆಂದು ಒಂದೆರಡು ಚಿರೋಟಿಯನ್ನೂ ಹಾಲಿನಲ್ಲಿ ನೆನಸಿಟ್ಟುಕೊಂಡಿದ್ದು ಸ್ವಲ್ಪ ಹೊತ್ತಾದನಂತರ ತಿನ್ನುವುದು.

"ಜನ ಸಾಧನೆ ಭಜನೆಗಳನ್ನೇನೊ ಮಾಡುತ್ತಾರೆ, ಆದರೆ ಅವರ ಮನಸ್ಸು ಕಾಮಕಾಂಚನಗಳ ಕಡೆ—ಭೋಗದ ಕಡೆ ಹರಿಯುತ್ತಿರುತ್ತದೆ. ಆದ್ದರಿಂದ ಅವರ ಸಾಧನೆ ಭಜನೆ ಸರಿಯಾದ ಪ್ರತಿಫಲವನ್ನು ಕೊಡದು.

"ಹಾಜರಾ ಇಲ್ಲಿ ಬಹಳವಾಗಿ ಜಪ ತಪ ಮಾಡುತ್ತಿದ್ದ. ಆದರೆ ಆತನ ಊರಿನಲ್ಲಿ ಆತನಿಗೆ ಹೆಂಡತಿ ಮಕ್ಕಳು ಮನೆ, ಭೂಮಿ ಕಾಣಿ ಎಲ್ಲಾ ಇದ್ದುವು. ಆದ್ದರಿಂದ ಆತ ತನ್ನ ಜಪ ತಪಗಳೊಂದಿಗೆ ದಳ್ಳಾಳಿ ಕೆಲಸವನ್ನೂ ಮಾಡುತ್ತಿದ್ದ. ಈ ವಿಧದ ಜನರ ಮಾತು ನೆಟ್ಟಗಿರುವುದಿಲ್ಲ. ಈಗ ಹೇಳುತ್ತಾರೆ, ಮೀನು ತಿನ್ನುವುದಿಲ್ಲ ಎಂದು, ಮತ್ತೆ ತಿಂದುಬಿಡುತ್ತಾರೆ.

"ಹಣಕ್ಕಾಗಿ ಜನ ಏನನ್ನು ಮಾಡಲು ತಾನೆ ಹೇಸುವುದಿಲ್ಲ? ಸಾಧು, ಬ್ರಾಹ್ಮಣರ ಕೈಯಲ್ಲೂ ಹೊರೆ ಹೊರಿಸಿ ದುಡ್ಡು ಸಂಪಾದಿಸಲು ಸಿದ್ಧರಾಗಿರುತ್ತಾರೆ.

"ಸತ್ಪಾತ್ರರು ದೊರೆಯದೆ ಒಮ್ಮೊಮ್ಮೆ ನನ್ನ ಕೊಠಡಿಯಲ್ಲಿ ಸಂದೇಶ ಹಳಿಯದಾಗಿ ಕೆಟ್ಟುಹೋಗುತ್ತಿತ್ತು; ಆದರೂ ಅವನ್ನು ಪ್ರಾಪಂಚಿಕರಿಗೆ

ಕೊಡಲು ನನಗೆ ಇಚ್ಛೆಬರುತ್ತಿರಲಿಲ್ಲ. ಒಳ್ಳೆಯವರ ಕಾಲುತಂಬಿಗೆ ನೀರನ್ನು ಸ್ವೀಕರಿಸಲು ಕೂಡ ನನಗೆ ಸಾಧ್ಯವಾಗುತ್ತಿತ್ತು; ಆದರೆ ಈ ಪ್ರಾಪಂಚಿಕರ ತಂಬಿಗೆಯನ್ನು ಮುಟ್ಟಲೂ ಸಾಧ್ಯವಾಗುತ್ತಿರಲಿಲ್ಲ.

"ಧನಿಕರು ಹಾಜರಾನ ಕಣ್ಣಿಗೆ ಬೀಳುವುದೇ ತಡ, ಆತ ಅವರನ್ನು ತನ್ನ ಹತ್ತಿರಕ್ಕೆ ಕರೆದು ದೊಡ್ಡ ದೊಡ್ಡ ಲೆಕ್ಚರ್ ಕೊಡುತ್ತಿದ್ದ. ಅವರಿಗೆ ಹೇಳುತ್ತಿದ್ದ: 'ನೋಡಿ, ಇಲ್ಲಿ ರಾಖಾಲ-ಗೀಖಾಲ ಇದಾರಲ್ಲ, ಅವರಾರಿಗೂ ಜಪ ತಪ ಮಾಡಲು ಸಾಧ್ಯವಿಲ್ಲ. ತಮಾಷೆಮಾಡಿಕೊಂಡು ಸುಮ್ಮನೆ ಸುತ್ತಾಡುತ್ತಿರುತ್ತಾರೆ.'

"ಒಬ್ಬ ಮನುಷ್ಯ ಮೈಗೆ ಬೂದಿ ಬಳಿದುಕೊಳ್ಳುತ್ತ, ಉಪವಾಸ ಮಾಡುತ್ತ, ಕಠೋರ ತಪಸ್ಸು ಮಾಡುತ್ತ ಗುಹೆಯಲ್ಲಿ ವಾಸಿಸುತ್ತಿರಬಹುದು; ಆದರೆ ಆತನ ಮನಸ್ಸು ವಿಷಯಸುಖಗಳ ಕಡೆ, ಕಾಮಕಾಂಚನಗಳ ಕಡೆ ಇರುವುದಾದರೆ ಅಂಥವನಿಗೆ ನಾನು ಹೇಳುತ್ತೇನೆ: 'ನಿನ್ನ ನಡತೆಗೆ ನನ್ನ ಧಿಕ್ಕಾರ!' ಆದರೆ ಯಾವಾತನಿಗೆ ಕಾಮಕಾಂಚನಗಳ ಕಡೆ ಮನಸ್ಸಿಲ್ಲವೊ, ಯಾರು ಉಂಡು ತಿಂದು ಆನಂದದಿಂದ ಸುತ್ತಾಡುತ್ತಾನೊ ಆತನಿಗೆ ನಾನು ಹೇಳುತ್ತೇನೆ: 'ನೀನೇ ಧನ್ಯ!'

(ಮಣಿಲಾಲಮಲ್ಲಿಕನನ್ನು ತೋರಿಸಿ) "ಈತನ ಮನೆಯಲ್ಲಿ ಸಾಧುಗಳ ಚಿತ್ರಪಟವಿಲ್ಲ. ಅವನ್ನ ಇಟ್ಟುಕೊಂಡಿದ್ದರೆ ಭಗವದುದ್ದೀಪನವಾಗುತ್ತದೆ."

ಮಣಿಲಾಲಮಲ್ಲಿಕ: "ಇವೆ. ಕ್ರೈಸ್ತ ಭಕ್ತೆಯ ಒಂದು ಚಿತ್ರಪಟ ನನ್ನ ಮಗಳು ನಂದಿನಿಯ ಕೊಠಡಿಯಲ್ಲಿದೆ. ಅದರಲ್ಲಿ ಆ ಭಕ್ತೆ ಪ್ರಾರ್ಥನೆಯಲ್ಲಿ ತೊಡಗಿದಾಳೆ. ಇನ್ನೊಂದು ಚಿತ್ರಪಟವಿದೆ. ಅದರಲ್ಲಿ ಒಬ್ಬ, ಶ್ರದ್ಧೆ ಎಂಬ ಬೆಟ್ಟವನ್ನು ಹಿಡಿದುಕೊಂಡಿದಾನೆ; ಅದರ ಕೆಳಗೆ ಇದೆ ಅತಲಸ್ಪರ್ಶ ಸಾಗರ. ಶ್ರದ್ಧೆಯೆಂಬ ಬೆಟ್ಟವನ್ನು ಆತ ಕೈಬಿಟ್ಟ ಎಂದರೆ ಒಮ್ಮೆಗೇ ಅತಲದ ನೀರಿಗೆ ಬಿದ್ದುಬಿಡುತ್ತಾನೆ. ಇನ್ನೂ ಒಂದು ಚಿತ್ರಪಟವಿದೆ. ಅದರಲ್ಲಿ ಕೆಲವು ಮಂದಿ ಕನ್ಯೆಯರು ತಮ್ಮ ವರ ಬರುವನೆಂದು ದೀಪದ ಕಂಬಗಳಿಗೆ ಎಣ್ಣೆ ಹಾಕಿಕೊಂಡು ಕಾದು ಕುಳಿತುಕೊಂಡಿದಾರೆ. ಆದರೆ ಅವರ ಬಳಿಯಲ್ಲಿ ಒಬ್ಬ ಕನ್ಯೆ ನಿದ್ರಿಸುತ್ತಿದಾಳೆ. ವರ ಬಂದಾಗ ಆತನನ್ನು ನೋಡಲು ಆಕೆಗೆ ಸಾಧ್ಯವಾಗುವುದಿಲ್ಲ. ಇಲ್ಲಿ ಭಗವಂತನೇ ವರ."

ಶ್ರೀರಾಮಕೃಷ್ಣರು ನಗುತ್ತ: "ಹಾಗಿದ್ದರೆ ಬಹಳ ಒಳ್ಳೆಯದು."

ಮಣಿಲಾಲಮಲ್ಲಿಕ: "ಇನ್ನೂ ಕೆಲವು ಚಿತ್ರಪಟಗಳಿವೆ. ಶ್ರದ್ಧೆಯ ವೃಕ್ಷ, ಪಾಪ ಪುಣ್ಯಗಳ ಚಿತ್ರಪಟ ಇತ್ಯಾದಿ."

ಶ್ರೀರಾಮಕೃಷ್ಣರು ಭವನಾಥನಿಗೆ: "ಅವೆಲ್ಲಾ ಒಳ್ಳೆ ಚಿತ್ರಗಳೇ. ನೀನು ಹೋಗಿ ನೋಡಿಕೊಂಡು ಬಾ."

ಪರಮಹಂಸರು ಸ್ವಲ್ಪ ಹೊತ್ತಿನಿಂದ ಸುಮ್ಮನೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ಒಮ್ಮೊಮ್ಮೆ ಈ ಪಾಪ ಪುಣ್ಯಗಳ ಯೋಚನೆ ಬರುತ್ತದೆ. ನನಗೆ ಅವು ಹಿಡಿಸುತ್ತಿಲ್ಲ. ಮೊದಮೊದಲು ಪಾಪ-ಗೀಪಗಳ ಮತ್ತು ಅವುಗಳಿಂದ ಮುಕ್ತವಾಗುವುದರ ಕಡೆ ಮನಸ್ಸು ಕೊಡಬೇಕಾಗುತ್ತದೆ. ಆದರೆ ಭಗವಂತನ ಕೃಪೆಯಿಂದ ಆತನಲ್ಲಿ ಪ್ರೀತಿಯುಂಟಾಯಿತು ಎಂದರೆ, ರಾಗಭಕ್ತಿಯುಂಟಾಯಿತು ಎಂದರೆ ಪಾಪ ಪುಣ್ಯ ಎಲ್ಲಾ ಮರೆತೇ ಹೋಗಿಬಿಡುತ್ತವೆ. ಶಾಸ್ತ್ರ ಮತ್ತು ಶಾಸನ ಎಷ್ಟೋ ದೂರದಲ್ಲಿ ಬಿದ್ದು ಕೊಂಡಿರುತ್ತವೆ. ಅನುತಾಪ, ಪ್ರಾಯಶ್ಚಿತ್ತ ಇವುಗಳ ಭಾವನೆಯೇ ಮನಸ್ಸಿನಲ್ಲಿ ಏಳದು.

"ಪಾಪ-ಗೀಪಗಳ ಕಡೆ ಮನಸ್ಸು ಕೊಡುವುದು, ಸೊಟ್ಟ ಸೊಟ್ಟವಾಗಿ ತಿರುಗಿಕೊಂಡಿರುವ ನದಿಯ ಮೂಲಕ ಗುರಿಯನ್ನು ಮುಟ್ಟಿದ ಹಾಗೆ. ಈ ಪ್ರಯತ್ನದಲ್ಲಿ ಬಹಳವಾಗಿ ಕಷ್ಟಪಡಬೇಕಾಗುತ್ತದೆ. ಆದರೆ ಪ್ರವಾಹ ಬಂದು ಎಲ್ಲೆಲ್ಲೂ ನೀರು ತುಂಬಿರುವಾಗ ನೇರವಾಗೇ ಮುಂದುವರಿದು ಅಲ್ಪ ಸಮಯದಲ್ಲೇ ಗುರಿಯನ್ನು ಮುಟ್ಟಬಿಡಬಹುದು. ಆಗ ಎಲ್ಲೆಲ್ಲೂ ಒಂದು ಗಳುವಿನುದ್ದ ನೀರು ನಿಂತಿರುತ್ತದೆ.

"ಆಧ್ಯಾತ್ಮಿಕ ಜೀವನದ ಮೊದಲ ಅವಸ್ಥೆಯಲ್ಲಿ ಬಹಳವಾಗಿ ಸುತ್ತಿ ಸುತ್ತಿ ಮುಂದುವರಿಯಬೇಕಾಗುತ್ತದೆ; ಬಹಳವಾಗಿ ಕಷ್ಟಪಡಬೇಕಾಗುತ್ತದೆ. ಹೃದಯದಲ್ಲಿ ರಾಗಭಕ್ತಿಯುಂಟಾಯಿತು ಎಂದರೆ, ಆಗ ಎಲ್ಲವೂ ಸುಲಭವಾಗಿಬಿಡುತ್ತದೆ. ಇದು, ಗದ್ದೆ ಕಟಾವಾದನಂತರ ಅವುಗಳ ಮೇಲೆ ಯಾವ ದಿಕ್ಕಿಗೆ ಅಂದರೆ ಆ ದಿಕ್ಕಿಗೆ ಹೋಗಬಹುದಲ್ಲ, ಹಾಗೆ. ಕಟಾವಿಗೆ ಮುಂಚೆ ತೆವರಿಗಳ ಮೇಲೆ ಸುತ್ತಿ ಸುತ್ತಿ ಹೋಗಬೇಕಾಗಿತ್ತು, ಅನಂತರ ಯಾವ ದಿಕ್ಕಿಗೆ ಬೇಕಾದರೂ ಹೋಗಬಹುದು. ಒಂದು ಪಕ್ಷ ಗದ್ದೆಯಲ್ಲಿ ಕೂಳೆ ಇರುವುದಾದರೆ, ಕಾಲಿಗೆ ಮೆಟ್ಟು ಹಾಕಿಕೊಂಡು ಹೋಗಿಬಿಟ್ಟರೆ ಯಾವ ತೊಂದರೆಯೂ ಆಗದು. ವಿವೇಕ, ವೈರಾಗ್ಯ, ಗುರುವಾಕ್ಯದಲ್ಲಿ

ಶ್ರದ್ಧೆ ಇವು ಇದ್ದುವು ಎಂದರೆ ಸಾಧಕನಿಗೆ ಯಾವ ಕಷ್ಟವೂ ಉಂಟಾಗದು."

ಮಣಿಲಾಲಮಲ್ಲಿಕ ಶ್ರೀರಾಮಕೃಷ್ಣರಿಗೆ: "ಒಳ್ಳೇದು, ಧ್ಯಾನಕ್ಕೆ ಏನೇನು ನಿಯಮ? ಎಲ್ಲಿ ಧ್ಯಾನಮಾಡಬೇಕು?"

ಶ್ರೀರಾಮಕೃಷ್ಣರು: "ಹೃದಯ ಬಹಳ ಉತ್ತಮವಾದ ಸ್ಥಳ. ಅಲ್ಲಿ ಮಾಡಬಹುದು ಅಥವಾ ಸಹಸ್ರಾರದಲ್ಲಿ ಮಾಡಬಹುದು. ಈ ರೀತಿಯಾಗಿ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಆದರೆ ನಿನಗೆಲ್ಲಿ ಅಭಿರುಚಿ ಇರುವುದೊ ಅಲ್ಲಿ ಧ್ಯಾನಮಾಡಬಹುದು. ಎಲ್ಲಾ ಸ್ಥಳವೂ ಬ್ರಹ್ಮಮಯ. ಎಲ್ಲಿ ತಾನೆ ಆತನಿಲ್ಲ? ಯಾವಾಗ ನಾರಾಯಣ ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆ ದಾನ ಪಡೆದು ಸ್ವರ್ಗ, ಮರ್ತ್ಯ, ಪಾತಾಳಗಳನ್ನು ಅಳೆದು ಬಿಟ್ಟನೊ, ಇನ್ನು ಯಾವ ಸ್ಥಳ ತಾನೆ ಬಾಕಿ ಉಳಿದುಕೊಂಡಿದೆ? ಗಂಗಾತೀರ ಎಷ್ಟು ಮಟ್ಟಿಗೆ ಪವಿತ್ರವಾದ್ದೊ ಅಷ್ಟೇ ಮಟ್ಟಿಗೆ ಹೊಲಸು ಪ್ರದೇಶವೂ ಪವಿತ್ರವಾದ್ದೆ. ಇದೂ ಅಲ್ಲದೆ ಈ ಇಡೀ ಬ್ರಹ್ಮಾಂಡವೇ ಭಗವಂತನ ವಿರಾಟ್‌ಸ್ವರೂಪ ಎಂದು ಶಾಸ್ತ್ರದಲ್ಲಿ ಹೇಳಿದೆ.

"ಎರಡು ವಿಧದ ಧ್ಯಾನಗಳಿವೆ—ನಿರಾಕಾರ ಧ್ಯಾನ, ಸಾಕಾರ ಧ್ಯಾನ. ನಿರಾಕಾರ ಧ್ಯಾನ ಬಹಳ ಕಠಿನ. ಈ ಧ್ಯಾನದಲ್ಲಿ ಕಣ್ಣಿಗೆ ಕಾಣಬರುವ ಎಲ್ಲಾ ವಸ್ತುಗಳನ್ನೂ ಬ್ರಹ್ಮನಲ್ಲಿ ಲೀನಮಾಡಿಬಿಡಬೇಕು. ಅನಂತರ ಕೇವಲ ತನ್ನ ಸ್ವಸ್ವರೂಪದ ಮೇಲೆ ಚಿಂತನೆಮಾಡಬೇಕು. ಶಿವ ತನ್ನ ಸ್ವಸ್ವರೂಪದ ಮೇಲೆ ಚಿಂತನೆಮಾಡುತ್ತ ನರ್ತಿಸುತ್ತಾನೆ. ಆತ ಹೇಳುತ್ತಾನೆ: 'ನಾನು ಯಾರು! ನಾನು ಯಾರು!' ಇದಕ್ಕೆ 'ಶಿವಯೋಗ' ಅಂತ ಹೆಸರು. ಈ ವಿಧದ ಧ್ಯಾನದಲ್ಲಿ ದೃಷ್ಟಿಯನ್ನ ಭ್ರೂಮಧ್ಯದ ಕಡೆ ಇಡಬೇಕು. ಇದರಲ್ಲಿ 'ನೇತಿ' ನೇತಿ' ಮಾರ್ಗವನ್ನು ಅನುಸರಿಸಿ ಜಗತ್ತನ್ನು ತ್ಯಜಿಸಿ ಸ್ವಸ್ವರೂಪದ ಮೇಲೆ ಚಿಂತನೆಮಾಡಬೇಕು.

"ಇನ್ನೊಂದು ವಿಧದ ಧ್ಯಾನವಿದೆ. ಅದಕ್ಕೆ 'ವಿಷ್ಣುಯೋಗ' ಅಂತ ಹೆಸರು. ನಾಸಾಗ್ರದಲ್ಲಿ ದೃಷ್ಟಿಯಿಡಬೇಕಾಗುತ್ತದೆ—ಅರ್ಧವನ್ನ ಅಂತರ್ಯದ ಕಡೆ, ಇನ್ನರ್ಧವನ್ನ ಜಗತ್ತಿನ ಕಡೆ. ಸಾಕಾರದ ಮೇಲೆ ಧ್ಯಾನವನ್ನ ಹೀಗೆ ಮಾಡಬೇಕಾಗುತ್ತದೆ. ಶಿವ ಕೆಲವು ವೇಳೆ ಸಾಕಾರ ಧ್ಯಾನ ಮಾಡುತ್ತ ನರ್ತಿಸುತ್ತಾನೆ. ಆಗ ಆತ 'ರಾಮ! ರಾಮ!' ಎಂದು ಹೇಳುತ್ತ ನರ್ತಿಸುತ್ತಾನೆ."

ಪರಮಹಂಸರು ಈಗ ವಿವರಿಸುತ್ತಿದ್ದಾರೆ, ಓಂಕಾರವೆಂದರೇನು, ನಿಜವಾದ ಬ್ರಹ್ಮಜ್ಞಾನವಾವುದು, ಬ್ರಹ್ಮಸಾಕ್ಷಾತ್ಕಾರವಾದಮೇಲೆ ಏನವಸ್ಥೆ ಉಂಟಾಗುತ್ತದೆ ಎಂಬುವುಗಳ ವಿಷಯವಾಗಿ.

ಶ್ರೀರಾಮಕೃಷ್ಣರು: "ಓಂಕಾರಶಬ್ದವೇ ಬ್ರಹ್ಮ. ಋಷಿಗಳು, ಮುನಿಗಳು ಆ ಶಬ್ದಬ್ರಹ್ಮದ ಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡುತ್ತಿದ್ದರು. ಸಿದ್ಧಿ ದೊರೆಯಿತು ಅಂದರೆ ಕೇಳಬಹುದು ಆ ಶಬ್ದ—ಅನಾಹತಶಬ್ದ—ತಾನಾಗೇ ನಾಭಿಯಿಂದ ಮೇಲಕ್ಕೆ ಏಳುವುದನ್ನ.

"ಕೆಲವು ಮಂದಿ ಋಷಿಗಳು ಕೇಳುತ್ತಾರೆ: 'ಕೇವಲ ಈ ಶಬ್ದವನ್ನು ಕೇಳುವುದರಿಂದಲೇ ಏನು ದೊರೆಯುತ್ತದೆ?' ದೂರದಿಂದ ಸಮುದ್ರದ ಶಬ್ದಕಲ್ಲೋಲವನ್ನು ಕೇಳಬಹುದು. ಅದನ್ನು ಹಿಡಿದು ಮುಂದುವರಿದರೆ ಸಮುದ್ರವನ್ನು ಮುಟ್ಟಬಹುದು. ಎಲ್ಲಿಯವರೆಗೆ ಕಲ್ಲೋಲ ಎಂಬುದು ಇರುವುದೊ ಅಲ್ಲಿಯವರೆಗೆ ಸಮುದ್ರವೆಂಬುದೂ ಇರಲೇಬೇಕು. ಹಾಗೇ ಅನಾಹತಧ್ವನಿಯನ್ನು ಹಿಡಿದು ಹಿಡಿದು ಮುಂದುವರಿದರೆ ಅದರ ಪ್ರತಿಪಾದ್ಯ ಬ್ರಹ್ಮನನ್ನು ಮುಟ್ಟಬಹುದು. ಅದಕ್ಕೇ ಪರಮಪದ ಅಂತ ಹೆಸರು. ಆದರೆ 'ಅಹಂ' ಎಂಬುದು ಇತ್ತು ಎಂದರೆ ಆ ವಿಧದ ಸಾಕ್ಷಾತ್ಕಾರ ಸಾಧ್ಯವಿಲ್ಲ. ಯಾವ ಅವಸ್ಥೆಯಲ್ಲಿ 'ನಾನು', 'ನೀನು'; 'ಏಕ', 'ಅನೇಕ' ಯಾವುದೂ ಇರದೊ ಆ ಅವಸ್ಥೆಯಲ್ಲಿ ಬ್ರಹ್ಮದರ್ಶನ ದೊರೆಯುತ್ತದೆ.

"ಭಾವಿಸಿಕೊಳ್ಳಿ ಸೂರ್ಯ ಮತ್ತು ನೀರಿನಿಂದ ತುಂಬಿದ ಹತ್ತು ಘಟ ಇಲ್ಲಿ ಇವೆ ಎಂದು. ಪ್ರತಿಯೊಂದು ಘಟದಲ್ಲೂ ಸೂರ್ಯನ ಪ್ರತಿಬಿಂಬವನ್ನು ನೋಡಬಹುದು. ಈಗ ಕಂಡುಬರುತ್ತದೆ, ಒಬ್ಬ ನಿಜವಾದ ಸೂರ್ಯ ಮತ್ತು ಹತ್ತು ಪ್ರತಿಬಿಂಬಿತ ಸೂರ್ಯರು ಇರುವುದಾಗಿ. ಒಂದು ಪಕ್ಷ ಒಂಬತ್ತು ಘಟಗಳನ್ನು ಒಡೆದುಹಾಕಿಬಿಟ್ಟರೆ, ಉಳಿದುಕೊಳ್ಳುವುದು ಒಬ್ಬ ನಿಜವಾದ ಸೂರ್ಯ ಮತ್ತು ಆತನ ಒಂದು ಪ್ರತಿಬಿಂಬ. ಒಂದೊಂದು ಘಟವೂ ಒಂದೊಂದು ಜೀವವಿದ್ದ ಹಾಗೆ. ಪ್ರತಿಬಿಂಬದ ಮೂಲಕ ನಿಜವಾದ ಸೂರ್ಯನನ್ನು ಅರಿತುಕೊಳ್ಳಬಹುದು. ಜೀವಾತ್ಮನ ಮೂಲಕ ಪರಮಾತ್ಮನನ್ನು ಅರಿತುಕೊಳ್ಳಬಹುದು. ಜೀವಾತ್ಮ ಸಾಧನೆ ಭಜನೆ ಮಾಡಿದ್ದೇ ಆದರೆ, ಆತ ಪರಮಾತ್ಮನ ಸಾಕ್ಷಾತ್ಕಾರ ಪಡೆದು

ಕೊಳ್ಳಬಲ್ಲ. ಆ ಕೊನೆಯ ಘಟವನ್ನೂ ಒಡೆದುಹಾಕಿಬಿಟ್ಟನಂತರ ಏನು ಉಳಿದುಕೊಳ್ಳುತ್ತದೆ ಎಂಬುದನ್ನ ಬಾಯಿಂದ ಹೇಳಲಾಗುವುದಿಲ್ಲ

"ಜೀವ ಮೊದಮೊದಲು ಅಜ್ಞಾನಾವಸ್ಥೆಯಲ್ಲಿ ಮುಳುಗಿಕೊಂಡಿರುತ್ತದೆ. ಅದಕ್ಕೆ ಭಗವಂತನ ಜ್ಞಾನವಿರದು; ನಾನಾ ವಸ್ತುಗಳ ಜ್ಞಾನ—ಅನೇಕ ವಸ್ತುಗಳ ಜ್ಞಾನ ಇರುತ್ತದೆ. ಆದರೆ ಜ್ಞಾನ ದೊರೆತಾಗ ಅದಕ್ಕೆ ಬೋಧೆಯಾಗುತ್ತದೆ, ಭಗವಂತ ಸರ್ವಭೂತಗಳಲ್ಲೂ ಇದಾನೆ ಎಂದು. ಒಬ್ಬನ ಕಾಲಿಗೆ ಮುಳ್ಳು ಚುಚ್ಚಿಕೊಂಡಿದೆ ಅಂತ ಇಟ್ಟುಕೊಳ್ಳಿ. ಆತ ಇನ್ನೊಂದು ಮುಳ್ಳನ್ನು ಹುಡುಕಿತಂದು ಮೊದಲನೆ ಮುಳ್ಳನ್ನು ತೆಗೆದು ಹಾಕಿಬಿಡುತ್ತಾನೆ. ಎಂದರೆ, ಸಾಧಕ 'ಅಜ್ಞಾನ' ವೆಂಬ ಮುಳ್ಳನ್ನು 'ಜ್ಞಾನ' ವೆಂಬ ಮುಳ್ಳಿನಿಂದ ತೆಗೆದುಹಾಕುತ್ತಾನೆ. ವಿಜ್ಞಾನ ದೊರೆತಾಗ ಆತ ಎರಡು ಮುಳ್ಳನ್ನೂ ಬಿಸಾಡಿಬಿಡುತ್ತಾನೆ—ಅಜ್ಞಾನ ಮುಳ್ಳು, ಜ್ಞಾನ ಮುಳ್ಳು ಎರಡನ್ನೂ. ಬಳಿಕ ಆತ ರಾತ್ರಿ ಹಗಲು ಭಗವಂತನನ್ನು ಕೇವಲ ದರ್ಶನಮಾಡುತ್ತಿರುವುದೇ ಅಲ್ಲ, ಆತನೊಡನೆ ಮಾತುಕತೆಯಾಡುತ್ತಲೂ ಇರುತ್ತಾನೆ.

"ಯಾರು ಹಾಲಿನ ವಿಷಯವಾಗಿ ಕೇವಲ ಕೇಳಿದಾನೊ ಆತ ಇನ್ನೂ 'ಅಜ್ಞಾನಿ'. ಯಾರು ಹಾಲನ್ನು ನೋಡಿದಾನೊ ಆತನಿಗೆ ಜ್ಞಾನ ದೊರೆತಿದೆ. ಯಾರು ಹಾಲನ್ನು ಕುಡಿದು ಹೃಷ್ಟಪುಷ್ಟನಾಗಿದಾನೊ ಆತನಿಗೆ ವಿಜ್ಞಾನ ದೊರೆತಿದೆ."

ಈ ರೀತಿಯಾಗಿ ಪರಮಹಂಸರು ತಮ್ಮ ಮಾನಸಿಕ ಅವಸ್ಥೆಯ ಸಂಬಂಧವಾಗಿ ಭಕ್ತರಿಗೆ ತಿಳಿಸಿದರು. ಅವರು ನಿಜವಾಗಿಯೂ ಒಬ್ಬ ವಿಜ್ಞಾನಿ.

ಶ್ರೀರಾಮಕೃಷ್ಣರು ಭಕ್ತರಿಗೆ: "ಜ್ಞಾನಿ-ಸಾಧುವಿಗು, ವಿಜ್ಞಾನಿ-ಸಾಧುವಿಗು ವ್ಯತ್ಯಾಸವಿದೆ. ಜ್ಞಾನಿ-ಸಾಧು ಕುಳಿತುಕೊಳ್ಳುವ ವಿಧಾನವೇ ಬೇರೆ. ಆತ ಮೀಸೆ ಹುರಿಮಾಡಿ ಕುಳಿತುಕೊಳ್ಳುತ್ತಾನೆ. ಯಾರಾದರೂ ಆತನನ್ನು ನೋಡಲು ಬಂದರೆ ಅವರನ್ನು ಕೇಳುತ್ತಾನೆ: 'ಒಳ್ಳೇದು, ಏನಾದರೂ ಪ್ರಶ್ನೆ-ಗಿಶ್ನೆ ಉಂಟೊ?' ಆದರೆ ಯಾರು ಭಗವಂತನನ್ನು ಸತತ ದರ್ಶಿಸುತ್ತ ಆತನೊಡನೆ ಸ್ನೇಹಭಾವದಿಂದ ಮಾತುಕತೆಯಾಡುತ್ತಿರುವನೊ, ಆತನ ಎಂದರೆ ವಿಜ್ಞಾನಿಯ ಸ್ವಭಾವ ಜ್ಞಾನಿಯದಕ್ಕಿಂತ ಸಂಪೂರ್ಣ ಪ್ರತ್ಯೇಕ. ಆತ ಕೆಲವು ವೇಳೆ ಜಡನ ಹಾಗೆ, ಇನ್ನು ಕೆಲವು ವೇಳೆ

ಪಿಶಾಚಿಯ ಹಾಗೆ, ಮತ್ತೆ ಕೆಲವು ವೇಳೆ ಬಾಲಕನ ಹಾಗೆ, ಮತ್ತೂ ಕೆಲವು ವೇಳೆ ಉನ್ಮತ್ತನ ಹಾಗೆ ವರ್ತಿಸುತ್ತಿರುತ್ತಾನೆ.

"ಆತ ಸಮಾಧಿಸ್ಥನಾದಾಗ ಬಾಹ್ಯಜ್ಞಾನಶೂನ್ಯನಾಗಿ ಜಡನಂತೆ ಕಾಣಬರುತ್ತಾನೆ. ಎಲ್ಲವೂ ಬ್ರಹ್ಮಮಯವಾಗಿರುವುದನ್ನು ನೋಡಿ, ಆತ ಪಿಶಾಚಿಯ ಹಾಗೆ ವರ್ತಿಸುತ್ತಾನೆ; ಶುಚಿ ಅಶುಚಿಗಳ ಬೋಧೆ ಇರದು. ದೇಹಬಾಧೆ ತೀರಿಸಿಕೊಳ್ಳುತ್ತಿರುವಾಗ ಹಣ್ಣು ತಿಂದುಬಿಡುತ್ತಾನೆ—ಬಾಲಕನ ಹಾಗೆ. ಸ್ವಪ್ನದೋಷವಾದನಂತರ ಅಶುಚಿಯಾಯ್ತು ಎಂಬ ಬೋಧೆ ಇರುವುದಿಲ್ಲ—ಶುಕ್ರದಿಂದ ಈ ಶರೀರ ಉತ್ಪನ್ನವಾಗಿದೆಯಲ್ಲ ಎಂದು ಭಾವಿಸಿ. ಇದು ವಿಷ್ಟ, ಅದು ಮೂತ್ರ ಎಂಬ ಜ್ಞಾನವಿರದು. ಎಲ್ಲವೂ ಬ್ರಹ್ಮಮಯವಾಗಿ ಕಾಣುತ್ತವೆ. ಅನ್ನ ಸಾರುಗಳನ್ನ ಹೆಚ್ಚು ದಿನ ಹಾಗೇ ಇಟ್ಟರೆ ಅವೂ ವಿಷ್ಟದ ಅವಸ್ಥೆಗೆ ಇಳಿದುಬಿಡುತ್ತವೆ.

"ಮತ್ತೆ ಆತ ಉನ್ಮತ್ತನಂತಿರುತ್ತಾನೆ. ಆತನ ನಡತೆ, ನುಡಿ, ವ್ಯವಹಾರ ನೋಡಿ ಜನ ಭಾವಿಸಿಕೊಳ್ಳುತ್ತಾರೆ ಆತ ಒಬ್ಬ ಹುಚ್ಚ ಎಂದು. ಅಥವಾ ಕೆಲವು ವೇಳೆ ಬಾಲಕನಂತಿರುತ್ತಾನೆ, ಯಾವ ಬಂಧನವೂ ಇಲ್ಲದೆ—ಲಜ್ಜೆ, ದ್ವೇಷ, ಸಂಕೋಚ ಇತ್ಯಾದಿ ಯಾವೂ ಇಲ್ಲದೆ.

"ಭಗವಂತನ ದರ್ಶನ ದೊರೆತನಂತರ ಈ ಅವಸ್ಥೆ ಉಂಟಾಗುತ್ತದೆ. ಇದು ಚುಂಬಕ ಬೆಟ್ಟದ ಹತ್ತಿರ ಹಡಗು ಹೋಯಿತು ಎಂದರೆ ಅದರ ಸ್ಕ್ರೂ ಮೊಳೆ ಕಳಚಿ ಬಿದ್ದುಹೋಗೋದಿಲ್ಲವೆ, ಹಾಗೆ. ಭಗವಂತನ ದರ್ಶನ ದೊರೆತ ನಂತರ ಕಾಮಕ್ರೋಧಾದಿಗಳು ಇರಲಾರವು.

"ಒಮ್ಮೆ ಕಾಳೀದೇವಾಲಯಕ್ಕೆ ಸಿಡಿಲು ಹೊಡೆಯಿತು. ಹೋಗಿ ನೋಡಿದಾಗ, ಅದು ಸ್ಕ್ರೂ ಮೊಳೆಗಳ ಬಾಯನ್ನೆಲ್ಲಾ ಮೊಟಕುಮಾಡಿ ಬಿಟ್ಟಿತ್ತು.

"ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿರುವುದೊ ಆತನಿಂದ ಸಂತಾನೋತ್ಪಾದನೆ ಮಾಡುವ ಕಾರ್ಯ, ಸೃಷ್ಟಿಯನ್ನು ಮುಂದುವರಿಸುವ ಕಾರ್ಯ ಸಾಧ್ಯವಿಲ್ಲ. ಹಸಿ ಬತ್ತವನ್ನು ಹುಟ್ಟುಹಾಕಿದರೆ ಅದು ಮೊಳೆತು ಪೈರಾಗುತ್ತದೆ; ಆದರೆ ಬೇಯಿಸಿದ ಬತ್ತ ಮೊಳೆಯದು.

"ಯಾರಿಗೆ ಭಗವಂತನ ದರ್ಶನವಾಗಿರುವುದೊ ಆತನ 'ಅಹಂ' ಹೆಸರಿಗೆ ಮಾತ್ರ ಉಳಿದುಕೊಂಡಿರುತ್ತದೆ. ಆ 'ಅಹಂ' ಮೂಲಕ ಯಾವದುಷ್ಟ ಕೆಲಸವನ್ನೂ ಮಾಡಲಾಗುವುದಿಲ್ಲ. ಅದು ಹೆಸರಿಗೆ ಮಾತ್ರ ಇರುತ್ತದೆ—

ತೆಂಗಿನ ಮರದ ಮಟ್ಟೆಯ ಮಚ್ಚೆಯ ಹಾಗೆ. ಮಟ್ಟೆ ಬಿದ್ದುಹೋಗಿದೆ— ಈಗ ಕೇವಲ ಮಚ್ಚೆ ಮಾತ್ರ ಇದೆ.

"ನಾನು ಕೇಶವಸೇನನಿಗೆ ಹೇಳಿದೆ: '"ಅಹಂ" ಎಂಬುದನ್ನ— ನಾನು ಕರ್ತ, ನಾನು ಲೋಕಶಿಕ್ಷಣ ಕೊಡುತ್ತೇನೆ ಎಂಬ "ಅಹಂ" ಅನ್ನ ತ್ಯಾಗಮಾಡಿಬಿಡು.' ಕೇಶವಸೇನ ಉತ್ತರವಿತ್ತ: 'ಮಹಾಶಯರೆ, ಹಾಗಾದರೆ ಸಮಾಜ-ಗಿಮಾಜ ಏನೂ ಉಳಿಯದು.' ಅದಕ್ಕೆ ನಾನು ಉತ್ತರವಿತ್ತೆ: '"ದುಷ್ಟ ಅಹಂ" ಅನ್ನ ತ್ಯಜಿಸಿಬಿಡು.' 'ನಾನು ಭಗವಂತನ ದಾಸ', 'ನಾನು ಭಗವಂತನ ಭಕ್ತ' ಎಂಬ 'ಅಹಂ' ಅನ್ನ ತ್ಯಜಿಸಬೇಕಾಗಿಲ್ಲ. 'ದುಷ್ಟ ಅಹಂ' ನಮ್ಮಲ್ಲಿ ಇರುವುದರಿಂದ 'ಭಗವಂತನ ಅಹಂ' ಬಂದು ನಮ್ಮಲ್ಲಿ ನೆಲಸದು. ಉಗ್ರಾಣವನ್ನ ಒಬ್ಬ ನೋಡಿ ಕೊಳ್ಳುತ್ತಾ ಇದ್ದರೆ, ಮನೆಯ ಯಜಮಾನ ಆ ಕಡೆಗೆ ಸುಳಿಯುವುದೇ ಇಲ್ಲ.

(ಭಕ್ತರಿಗೆ) "ನೋಡಿ, ಈ ಕೈಗೆ ಪೆಟ್ಟು ತಗುಲಿದ್ದರಿಂದ ನನ್ನ ಸ್ವಭಾವ ಬದಲಾವಣೆಯನ್ನು ಹೊಂದುತ್ತಿದೆ. ಈಗ ಭಗವಂತ ಮನುಷ್ಯನ ಅಂತರ್ಯದಲ್ಲಿ ಉಳಿದ ಜೀವರಾಶಿಗಳಿಗಿಂತ ಹೆಚ್ಚಾಗಿ ವ್ಯಕ್ತವಾಗಿರುವುದು ನನಗೆ ಕಾಣಬರುತ್ತಿದೆ. ಆತ ನನಗೆ ಹೇಳುತ್ತಿರುವಂತಿದೆ: 'ನಾನು ಮನುಷ್ಯನ ಅಂತರ್ಯದಲ್ಲಿ ವಾಸವಾಗಿದೇನೆ. ನೀನು ಮನುಷ್ಯನೊಡನೆ ಆನಂದಪಡು.' ಮನುಷ್ಯರಲ್ಲಿಯೂ ಶುದ್ಧ ಭಕ್ತರಾದ ಮನುಷ್ಯರಲ್ಲಿ, ಇನ್ನೂ ಹೆಚ್ಚಾಗಿ ಪ್ರಕಾಶವಾಗಿದಾನೆ. ಅದಕ್ಕಾಗೆ ನಾನು ನರೇಂದ್ರ, ರಾಖಾಲ ಇವರಿಗಾಗಿ ಬಹಳವಾಗಿ ವ್ಯಾಕುಲಪಡುವುದು.

"ಸರೋವರ ತೀರದ ಉದ್ದಕ್ಕೂ ಚಿಕ್ಕ ಚಿಕ್ಕ ಬಿಲಗಳಿರುವುದುಂಟು. ಅಲ್ಲಿ ಮೀನು, ನಳ್ಳಿ ಇವೆಲ್ಲಾ ಬಂದು ಸೇರಿಕೊಳ್ಳುತ್ತವೆ. ಅದೇ ರೀತಿಯಾಗಿ ಮನುಷ್ಯನ ಅಂತರ್ಯದಲ್ಲಿ ಭಗವಂತನ ಪ್ರಕಾಶ ಹೆಚ್ಚಿನ ಪ್ರಮಾಣದಲ್ಲಿ ಇರುತ್ತದೆ. ಮನುಷ್ಯ ಸಾಲಗ್ರಾಮಕ್ಕಿಂತಲೂ ದೊಡ್ಡವನು ಎಂಬ ಹೇಳಿಕೆ ಇದೆ. ನರ ನಾರಾಯಣನೇ. ಪ್ರತಿಮೆಯಲ್ಲಿ ಭಗವಂತ ಆವಿರ್ಭಾವ ವಾಗುವಾಗ, ಇನ್ನು ಆತ ಮನುಷ್ಯನಲ್ಲಿ ಆವಿರ್ಭಾವವಾಗಲೊಲ್ಲನೆ?

"ಭಗವಂತ ನರಲೀಲೆ ನಡಸಲು ಮನುಷ್ಯರೂಪ ಧರಿಸಿ ಅವತರಿಸುತ್ತಾನೆ. ಉದಾಹರಣೆಗೆ ರಾಮಚಂದ್ರ, ಶ್ರೀಕೃಷ್ಣ, ಚೈತನ್ಯದೇವ.

ಅವತಾರಪುರುಷನ ಮೇಲೆ ಧ್ಯಾನಮಾಡಿದ್ದೇ ಆದರೆ, ಭಗವಂತನ ಮೇಲೆ ಧ್ಯಾನಮಾಡಿದ ಹಾಗೇ."

ಬ್ರಾಹ್ಮಸಮಾಜದ ಅನುಯಾಯಿ ಭಗವಾನ್‌ದಾಸ ಬಂದಿದಾನೆ.

ಶ್ರೀರಾಮಕೃಷ್ಣರು ಭಗವಾನ್‌ದಾಸನಿಗೆ: "ಋಷಿಗಳ ಧರ್ಮ, ಎಂದರೆ ಸನಾತನಧರ್ಮ ಅನಾದಿಕಾಲದಿಂದ ಬದುಕಿಬಂದಿದೆ, ಅನಂತ ಕಾಲದವರೆಗೆ ಬದುಕಿಯೂ ಇರುತ್ತದೆ. ಈ ಸನಾತನ ಧರ್ಮದಲ್ಲಿ ನಿರಾಕಾರ ಪೂಜೆ, ಸಾಕಾರ ಪೂಜೆ, ಈ ರೀತಿಯಾಗಿ ಎಲ್ಲಾ ವಿಧದ ಪೂಜೆಗಳೂ ಇವೆ; ಜ್ಞಾನಮಾರ್ಗ, ಭಕ್ತಿಮಾರ್ಗ ಎಲ್ಲಾ ಇವೆ. ಉಳಿದ ಧರ್ಮಗಳೆಲ್ಲ, ಎಂದರೆ ಆಧುನಿಕ ಧರ್ಮಗಳು ಕೆಲವು ಕಾಲ ಬದುಕಿರುತ್ತವೆ, ಅನಂತರ ನಶಿಸುತ್ತವೆ."

೨೩ನೆ ಮಾರ್ಚ್ ೧೮೮೫, ಚೈತ್ರ ಕೃಷ್ಣ ಏಕಾದಶಿ, ಭಾನುವಾರ.

ಪರಮಹಂಸರು ಮಧ್ಯಾಹ್ನದ ಊಟವಾದನಂತರ ರಾಖಾಲ, ರಾಮ ಮೊದಲಾದವರೊಡನೆ ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ಅವರ ಆರೋಗ್ಯ ಸರಿಯಾಗಿಲ್ಲ. ಕೈಗೆ ಇನ್ನೂ ಪಟ್ಟಿ ಕಟ್ಟಿಕೊಂಡಿದಾರೆ.

ಪರಮಹಂಸರು ಅಸ್ವಸ್ಥರಾಗಿದ್ದರೂ ಆನಂದದ ಸಂತೆಯನ್ನು ಕಟ್ಟಿದಾರೆ. ಪ್ರತಿದಿನವೂ ಭಕ್ತರು ಗುಂಪುಗುಂಪಾಗಿ ಬರುತ್ತಲೇ ಇದಾರೆ. ಯಾವಾಗ ನೋಡಿದರೂ ಭಗವತ್ಸಂಬಂಧವಾಗೇ ಮಾತುಕತೆ ನಡೆಯುತ್ತಿದೆ. ಆನಂದಲಹರಿ ಸುಮ್ಮನೆ ಹರಿಯುತ್ತಿದೆ. ಪರಮಹಂಸರು ಕೆಲವು ವೇಳೆ ಕೀರ್ತನೆಯಲ್ಲಿ ತೊಡಗಿ ಕೀರ್ತನಾನಂದವನ್ನ, ಇನ್ನು ಕೆಲವು ವೇಳೆ ಸಮಾಧಿಸ್ಥರಾಗಿ ಬ್ರಹ್ಮಾನಂದವನ್ನ ಅನುಭವಿಸುತ್ತಿದಾರೆ. ಭಕ್ತರು ಸ್ತಂಭೀಭೂತರಾಗಿ ಇವುಗಳನ್ನೆಲ್ಲಾ ನೋಡುತ್ತಿದಾರೆ.

ರಾಮ: "ಆರ್. ಮಿತ್ರನ ಕನ್ಯೆಯನ್ನು ನರೇಂದ್ರನಿಗೆ ಕೊಡುವುದಾಗಿ ಮಾತುಕತೆ ನಡೆದಿದೆ. ಬಹಳ ಹೆಚ್ಚಾಗಿ ವರದಕ್ಷಿಣೆ ಕೊಡುವುದಾಗಿ ಹೇಳಿದಾರಂತೆ."

ಶ್ರೀರಾಮಕೃಷ್ಣರು ನಗುತ್ತ: "ಹೌದು, ಅಲ್ಲೂ ಆತ ಒಬ್ಬ ದಳಪತಿ-ಗಿಳಪತಿ ಆಗಿಬಿಡಬಹುದು. ಯಾವ ಮಾರ್ಗ ಹಿಡಿದರೂ ಅದರಲ್ಲಿ ಆತ ಒಬ್ಬ ಮಹಾವ್ಯಕ್ತಿಯಾಗಿ ನಿಲ್ಲುತ್ತಾನೆ."

ನರೇಂದ್ರನ ಸಂಬಂಧವಾಗಿ ಮಾತುಕತೆ ಇನ್ನು ಹೆಚ್ಚಾಗಿ ಮುಂದುವರಿಯಲು ಪರಮಹಂಸರು ಪ್ರೋತ್ಸಾಹವೀಯಲಿಲ್ಲ.

ಶ್ರೀರಾಮಕೃಷ್ಣರು ರಾಮನಿಗೆ: "ಒಳ್ಳೇದು, ಅಸ್ವಸ್ಥನಾದರೆ ನನಗೆ ಇಷ್ಟೊಂದು ಪುಕ್ಕಲುತನ ಬಂದುಬಿಡುತ್ತದೆಯಲ್ಲ ಏಕೆ? ಒಮ್ಮೆ ಇವನನ್ನು ಇನ್ನೊಮ್ಮೆ ಅವನನ್ನು ನನಗೆ ಗುಣವಾಗೋ ಬಗೆ ಹೇಗೆ ಎಂದು ಕೇಳುತ್ತಿರುತ್ತೇನೆ. ನೋಡು, ನಂಬಿಕೆಯಿಟ್ಟರೆ ಎಲ್ಲರಲ್ಲೂ ಇಡಬೇಕು, ಇಲ್ಲದಿದ್ದರೆ ಯಾರಲ್ಲೂ ಕೂಡದು.

"ಭಗವಂತನೇ ಡಾಕ್ಟರು, ಕವಿರಾಜ ಎಲ್ಲಾ ಆಗಿದಾನೆ. ಆದ್ದರಿಂದ ಅವರೆಲ್ಲರಲ್ಲೂ ನಂಬಿಕೆ ಇಡಬೇಕು. ಅವರು ಕೇವಲ ಮನುಷ್ಯ ಮಾತ್ರರು ಎಂದು ಭಾವಿಸಿದರೆ ಅವರಲ್ಲಿ ಶ್ರದ್ಧೆಯಿಡಲಾಗೋದಿಲ್ಲ.

"ಶಂಭುವಿಗೆ ಬಲವಾದ ಸನ್ನಿ. ಡಾಕ್ಟರ್ ಸರ್ವಾಧಿಕಾರಿ ಆತನನ್ನು ಪರೀಕ್ಷಿಸಿ ಹೇಳಿದ, ಔಷಧದ ಉಷ್ಣ ಇದು ಎಂದು. ಹಲಧಾರಿ ಆತನಿಗೆ ತನ್ನ ಕೈ ತೋರಿಸಿದ. ಆತ ಹೇಳಿದ: 'ಎಲ್ಲಿ ನಿನ್ನ ಕಣ್ಣು? ನಿನಗೆ ಪ್ಲೀಹದ ರೋಗ.' ಹಲಧಾರಿ ಉತ್ತರವಿತ್ತ, ತನಗಂಥದೇನೂ ಇಲ್ಲವೆಂದು. ಆದರೆ ಡಾಕ್ಟರ್ ಮಧು ಒಳ್ಳೆ ಔಷಧ ಕೊಡುತ್ತಾನೆ."

ರಾಮು: "ಔಷಧದಿಂದಲೇನೂ ಉಪಕಾರವಾಗುವುದಿಲ್ಲ. ಆದರೆ ಅದು ಪ್ರಕೃತಿಗೆ ಬಹಳವಾಗಿ ಸಹಾಯಮಾಡುತ್ತದೆ."

ಶ್ರೀರಾಮಕೃಷ್ಣರು: "ಔಷಧದಿಂದ ಉಪಕಾರವಾಗದಿದ್ದಲ್ಲಿ, ಅಫೀಮು ಮಲಬದ್ಧತೆಯುನ್ನುಂಟುಮಾಡುತ್ತದೆಯಲ್ಲ, ಅದು ಹೇಗೆ?"

ರಾಮು ಈಗ ಕೇಶವಚಂದ್ರಸೇನನ ಸಾವಿನ ವಿಷಯವಾಗಿ ಮಾತು ಎತ್ತಿದಾನೆ.

ರಾಮು: "ನೀವು ಹೇಳಿದ್ದುದು ಸರಿ. ಗುಲಾಬಿಗಿಡ ಒಳ್ಳೆಯದಾಗಿದ್ದರೆ ತೋಟಗಾರ ಅದರ ಬೇರನ್ನು ಬಗೆದಿಡುತ್ತಾನೆ—ಅದು ಹಿಮವನ್ನು ಹೀರಿ ಇನ್ನೂ ಬಲಯುತವಾಗಲೆಂದು. ಸಿದ್ಧವಚನ ಫಲಿಸಿಬಿಟ್ಟಿತಲ್ಲ."

ಶ್ರೀರಾಮಕೃಷ್ಣರು: "ಅದೆಲ್ಲಾ ನನಗೆ ಗೊತ್ತಿಲ್ಲ. ನಾನು ಹಾಗೆ ಹೇಳಿದಾಗ ಗುಣಾಕಾರ, ಭಾಗಾಕಾರ ಹಾಕಿ ಹೇಳಲಿಲ್ಲ. ಆ ರೀತಿಯಾಗಿ ಹೇಳುತ್ತಿರುವವರು ನೀವು ಮಾತ್ರವೇ."

ರಾಮು: "ಬ್ರಾಹ್ಮಸಮಾಜದವರು ನಿಮ್ಮ ವಿಷಯವಾಗಿ ತಮ್ಮ ಮಾಸಪತ್ರಿಕೆಯಲ್ಲಿ (ಸುಲಭ ಸಮಾಚಾರ) ಪ್ರಕಟಿಸಿದಾರೆ."

ಶ್ರೀರಾಮಕೃಷ್ಣರು: "ನನ್ನ ವಿಷಯವಾಗಿ ಪ್ರಕಟಿಸಿದಾರೆಯೆ!

ಏನಿದೆಲ್ಲ! ಏಕೆ ಈಗ ಹಾಗೆ ಮಾಡಬೇಕು? ನಾನು ತಿಂದು ಉಂಡು ಆನಂದದಿಂದಿದ್ದೇನೆ. ನನಗೆ ಬೇರೇನೂ ಗೊತ್ತಿಲ್ಲ.

"ನಾನು ಒಮ್ಮೆ ಕೇಶವಸೇನನನ್ನು ಕೇಳಿದೆ: 'ನನ್ನ ವಿಷಯವಾಗಿ ಏಕೆ ಪ್ರಕಟಿಸಿದೀಯೆ?' ಆತ ಉತ್ತರವಿತ್ತ, ತಮ್ಮ ಹತ್ತಿರ ಜನ ಬರಲಿ ಎಂದು. ಮನುಷ್ಯನ ಸ್ವಶಕ್ತಿಯಿಂದಲೇ ಲೋಕಶಿಕ್ಷಣಕಾರ್ಯ ಸಾಗದು. ಭಗವಂತನ ಶಕ್ತಿ ಒದಗದಿದ್ದರೆ ಅವಿದ್ಯೆಯನ್ನು ಗೆಲ್ಲಲಾಗೋದಿಲ್ಲ.

"ಒಮ್ಮೆ ಇಬ್ಬರಿಗೆ ಕುಸ್ತಿ ನಡೆಯಿತು – ಹನುಮಾನ್‌ಸಿಂಗನಿಗು ಮತ್ತು ಪಂಜಾಬಿನ ಒಬ್ಬ ಮುಸಲ್ಮಾನನಿಗು. ಮುಸಲ್ಮಾನ ಒಳ್ಳೆ ಹೃಷ್ಟಪುಷ್ಟನಾಗಿ ಬೆಳೆದಿದ್ದ. ಆತ ಕುಸ್ತಿಮಾಡುವ ದಿನವೂ ಅಲ್ಲದೆ, ಅದರ ಹಿಂದಿನ ಹದಿನೈದು ದಿನಗಳಿಂದಲೂ ಮಾಂಸ, ತುಪ್ಪ ಮೊದಲಾದುವನ್ನ ಬಹಳ ಚೆನ್ನಾಗಿ ತಿಂದಿದ್ದ. ಎಲ್ಲರೂ ಭಾವಿಸಿದ್ದರು ಆತನೇ ಗೆಲ್ಲುವನೆಂದು. ಅತ್ತ ಕಡೆ ಹನುಮಾನ್‌ಸಿಂಗನನ್ನ ನೋಡಿದರೆ, ಉಡುಪೋ ಬಹಳ ಮಲಿನವಾಗಿತ್ತು. ಕೆಲವು ದಿನಗಳಿಂದ ಕಡಮೆ ಕಡಮೆಯಾಗಿ ಆಹಾರ ತೆಗೆದುಕೊಳ್ಳುತ್ತ ಮಹಾವೀರನ ಮಂತ್ರವನ್ನ ಜಪಿಸುತ್ತಲೇ ಬರುತ್ತಿದ್ದ. ಕುಸ್ತಿಮಾಡುವ ದಿನ ಪೂರ್ಣ ಉಪವಾಸ ಮಾಡಿದ್ದ. ಎಲ್ಲರೂ ಭಾವಿಸಿದ್ದರು, ಈತ ನಿಶ್ಚಯವಾಗಿ ಸೋಲುವನೆಂದು. ಆದರೆ ಅಂದು ಗೆದ್ದವನು ಹನುಮಾನ್‌ಸಿಂಗನೇ. ಯಾರು ಹದಿನೈದು ದಿನಗಳಿಂದ ಚೆನ್ನಾಗಿ ತಿಂದಿದ್ದನೊ ಆತನೇ ಸೋತುಹೋದ.

"ಪ್ರಕಟಣೆ-ಗಿಕಟಣೆಗಳಿಂದ ಏನು ಪ್ರಯೋಜನ? ಯಾರು ಲೋಕಶಿಕ್ಷಣವನ್ನು ಮಾಡಬೇಕಾಗಿರುವುದೊ, ಆತನಿಗೆ ಶಕ್ತಿ ಭಗವಂತನಿಂದಲೇ ಬರುತ್ತದೆ. ತ್ಯಾಗಿಯ ಕೈಯಲ್ಲಿ ವಿನಾ ಬೇರೆ ಯಾರ ಕೈಯಲ್ಲೂ ಲೋಕಶಿಕ್ಷಣ ಸಾಧ್ಯವಿಲ್ಲ. ನಾನಂತೂ ಪೆದ್ದರಲ್ಲಿ ಅಗ್ರಗಣ್ಯ!" (ಎಲ್ಲರೂ ನಗುತ್ತಿದಾರೆ.)

ಒಬ್ಬ ಭಕ್ತ: "ಹಾಗಿದ್ದ ಪಕ್ಷದಲ್ಲಿ ನಿಮ್ಮ ಮುಖದಿಂದ ವೇದ, ವೇದಾಂತ, ಇವೂ ಅಲ್ಲದೆ ಇನ್ನೂ ಏನೇನೊ ಹೊರಬರುತ್ತಿವೆಯಲ್ಲ, ಅದು ಹೇಗೆ?"

ಶ್ರೀರಾಮಕೃಷ್ಣರು ನಗುತ್ತ: "ನನ್ನ ಎಳೆ ವಯಸ್ಸಿನಲ್ಲಿ ಅಲ್ಲಿನ (ಕಾಮಾರಪುಕುರಿನ) ಲಾಹಾದವರ ಮನೆಯಲ್ಲಿ ಸಾಧುಗಳು ಏನನ್ನು ಓದುತ್ತಿದ್ದರೊ ಅದು ನನಗೆ ಅರ್ಥವಾಗುತ್ತಿತ್ತು. ಆದರೆ, ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಗೊತ್ತಾಗುತ್ತಿರಲಿಲ್ಲ. ಯಾರಾದರೂ ಪಂಡಿತರು ಬಂದು ಸಂಸ್ಕೃತದಲ್ಲಿ

ಮಾತನಾಡಿದರೆ ನನಗೆ ಅರ್ಥವಾಗುತ್ತದೆ. ಆದರೆ ನಾನೇ ಸಂಸ್ಕೃತದಲ್ಲಿ ಮಾತನಾಡಬೇಕೆಂದರೆ ಸಾಧ್ಯವಾಗೋದಿಲ್ಲ.

"ಭಗವಂತನ ಸಾಕ್ಷಾತ್ಕಾರ ಪಡೆಯುವುದೇ ಜೀವನದ ಉದ್ದೇಶ. ಲಕ್ಷ್ಯಕ್ಕೆ ಗುರಿಯಿಡುವ ಸಮಯದಲ್ಲಿ ಅರ್ಜುನ ಹೇಳಿದ: 'ನನಗೆ ಬೇರೇನೂ ಕಾಣುತ್ತಿಲ್ಲ—ಕೇವಲ ಹಕ್ಕಿಯ ಕಣ್ಣು ಮಾತ್ರವಲ್ಲದೆ. ರಾಜರೂ ಕಾಣಿಸುತ್ತಿಲ್ಲ, ಗಿಡವೂ ಕಾಣಿಸುತ್ತಿಲ್ಲ, ಹಕ್ಕಿ ಕೂಡ ಕಾಣಿಸುತ್ತಿಲ್ಲ.'

"ಭಗವಂತನ ಸಾಕ್ಷಾತ್ಕಾರ ದೊರೆತರೇ ಬೇಕಾದಷ್ಟು. ಸಂಸ್ಕೃತ ಗೊತ್ತಾಗದಿದ್ದರೆ ಮುಳುಗಿಹೋಗಿಬಿಡುವುದೇನು?

"ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ಯಾರು ವ್ಯಾಕುಲರಾಗಿದಾರೊ ಅವರು ಪಂಡಿತರಾಗಿದ್ದರೂ ಸರಿಯೆ ಅಥವಾ ನಿರಕ್ಷರ ಕುಕ್ಷಿಗಳಾಗಿದ್ದರೂ ಸರಿಯೆ ಆತನ ಕೃಪೆ ಆತನ ಮಕ್ಕಳ ಮೇಲೆಲ್ಲಾ ಒಂದೇ ಸಮಾನ. ತಂದೆಗೆ ತನ್ನ ಎಲ್ಲಾ ಮಕ್ಕಳ ಮೇಲೂ ಒಂದೇ ವಿಧವಾದ ಪ್ರೀತಿ. ಒಬ್ಬ ತಂದೆಗೆ ಐದು ಜನ ಮಕ್ಕಳು ಅಂತ ಇಟ್ಟುಕೊ. ಅವರಲ್ಲಿ ಒಬ್ಬಿಬ್ಬರು 'ಅಪ್ಪಾ' ಎಂಬುದಾಗಿಯೂ, ಕೆಲವರು 'ಪಪ್ಪಾ' ಎಂಬುದಾಗಿಯೂ, ಇನ್ನು ಕೆಲವರು 'ಪಾ' ಎಂಬುದಾಗಿಯೂ ಕರೆಯುವರು. ಈ ಕೊನೆಯ ಮಕ್ಕಳಿಗೆ ಆತನ ಹೆಸರನ್ನು ಪೂರ್ಣವಾಗಿ ಉಚ್ಚರಿಸಲಾಗುತ್ತಿಲ್ಲ. 'ಪಾ' ಎಂದು ಕರೆಯುವ ಮಕ್ಕಳಿಗಿಂತ 'ಅಪ್ಪಾ' ಎಂದು ಕರೆಯುವ ಮಕ್ಕಳನ್ನು ತಂದೆ ಅಧಿಕವಾಗಿ ಪ್ರೀತಿಸುತ್ತಾನೇನು? ಆತನಿಗೆ ಗೊತ್ತಿರುತ್ತದೆ ಈ ಮಕ್ಕಳು ಇನ್ನೂ ಚಿಕ್ಕ ಶಿಶುಗಳು, 'ಅಪ್ಪಾ' ಎಂದು ಕರೆಯಲು ಅವಕ್ಕೆ ಸಾಧ್ಯವಾಗುತ್ತಿಲ್ಲ ಎಂದು.

"ಈ ಕೈಗೆ ಪೆಟ್ಟು ತಗುಲಿದಂದಿನಿಂದ ನನ್ನ ಮಾನಸಿಕ ಅವಸ್ಥೆಯಲ್ಲಿ ಬದಲಾವಣೆ ಉಂಟಾಗುತ್ತಿದೆ. ನರಲೀಲೆಯ ಕಡೆ ಮನಸ್ಸಿನ ಒಲವು ಜಾಸ್ತಿಯಾಗುತ್ತಿದೆ. ಭಗವಂತನೇ ಮಾನವ ರೂಪ ಧರಿಸಿ ಕ್ರೀಡಿಸುತ್ತಿದಾನೆ. ಮಣ್ಣಿನ ಪ್ರತಿಮೆಯ ಮೂಲಕ ಆತನ ಪೂಜೆ ಸಾಧ್ಯವಾಗುವಾಗ, ಮನುಷ್ಯನ ಮೂಲಕ ಸಾಧ್ಯವಲ್ಲವೋ?

"ಒಮ್ಮೆ ಸಿಂಹಳದ್ವೀಪದ ಹತ್ತಿರ ಒಂದು ಹಡಗು ಮುಳುಗಿಹೋಯಿತು. ಅದರಲ್ಲಿದ್ದ ಒಬ್ಬ ವ್ಯಾಪಾರಿ ತೇಲಿಕೊಂಡುಬಂದು ಸಿಂಹಳದ್ವೀಪದ ದಡವನ್ನು ಮುಟ್ಟಿದ. ವಿಭೀಷಣನ ಸೇವಕರು ಆತನ ಆಜ್ಞೆಯ ಪ್ರಕಾರ ವ್ಯಾಪಾರಿಯನ್ನು ಆತನ ಹತ್ತಿರಕ್ಕೆ ಕರೆದುಕೊಂಡು

ಹೋದರು. 'ಆಹಾ! ಈತ ನಮ್ಮ ರಾಮಚಂದ್ರನಂಥ ಮೂರ್ತಿಯೇ! ಅದೇ ನರರೂಪ!' ಹೀಗೆಂದು ಹೇಳಿ ವಿಭೀಷಣ ಆನಂದದಿಂದ ತುಂಬಿ ತುಳುಕಾಡಲಾರಂಭಿಸಿದ. ಆ ವ್ಯಾಪಾರಿಯನ್ನು ವಸ್ತ್ರಾಭರಣಗಳಿಂದ ಸಿಂಗರಿಸಿ ಪೂಜಿಸಿ ಆತನಿಗೆ ಆರತಿ ಬೆಳಗಲಾರಂಭಿಸಿದ. ಮೊಟ್ಟಮೊದಲು ಈ ಕಥೆ ನನ್ನ ಕಿವಿಗೆ ಬಿದ್ದಾಗ ನನಗೆಷ್ಟು ಆನಂದವಾಯಿತು ಎಂಬುದನ್ನ ಬಾಯಿಂದ ವರ್ಣಿಸಲಾರೆ.

"ಒಮ್ಮೆ ವೈಷ್ಣವಚರಣ ಹೇಳಿದ: 'ಯಾರಿಗೆ ಯಾರ ಮೇಲೆ ಪ್ರೀತಿಯೊ ಅವರು ಆತನನ್ನೇ ತಮ್ಮ ಇಷ್ಟ ಎಂದು ಭಾವಿಸುವುದಾದರೆ ಅವರಿಗೆ ಭಗವಂತನ ಕಡೆಗೆ ಮನಸ್ಸನ್ನು ತಿರುಗಿಸುವುದು ಬಹಳ ಸುಲಭವಾಗಿ ಬಿಡುತ್ತದೆ.' ಕಾಮಾರಪುಕುರದ ಹತ್ತಿರವಿರುವ ಶ್ಯಾಮ್‌ಬಜಾರಿನ ಕರ್ತಾಭಜಾ ಎಂಬ ಸಂಪ್ರದಾಯದ ಗಂಡಸು ಹೆಂಗಸು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾರೆ: 'ನಿನಗೆ ಯಾರನ್ನು ಕಂಡರೆ ಇಷ್ಟ?' 'ಆ ವ್ಯಕ್ತಿಯನ್ನು ಕಂಡರೆ.' 'ಹಾಗಾದರೆ ಆತನೇ ನಿನ್ನ ಇಷ್ಟದೇವ ಎಂಬುದಾಗಿ ಅರಿತುಕೊ.' ಇದನ್ನು ಕೇಳಿದಾಗ ನಾನು ಹೇಳಿದೆ: 'ನನ್ನದು ಈ ವಿಧದ್ದಲ್ಲ. ನನ್ನದು ಮಾತೃಭಾವ.' ನೋಡಿದೆ ಮಾತಿನಲ್ಲೇನೊ ಮಲ್ಲರು, ಆದರೆ ವ್ಯಭಿಚಾರದಲ್ಲಿ ಸಿದ್ಧರು. ಹೆಂಗಸರು ನನ್ನನ್ನು ಕೇಳಿದರು, ತಮಗೆ ಮುಕ್ತಿ ದೊರಕದೆ ಎಂದು. ನಾನು ತಿಳಿಸಿದೆ: 'ಒಬ್ಬನಲ್ಲೇ ಭಗವಂತನೆಂಬ ನಿಷ್ಠೆ ಇರುವುದಾದರೆ ಮಾತ್ರ. ಐದು ಮಂದಿ ಪುರುಷರೊಡನೆ ಇದ್ದರೆ ದೊರಕದು.'"

ರಾಮ: "ಕೇದಾರಬಾಬು ಕರ್ತಾಭಜಾದವರ ಸ್ಥಳಕ್ಕೆ ಹೋಗಿದ್ದ ಅಂತ ಕಾಣುತ್ತೆ."

ಶ್ರೀರಾಮಕೃಷ್ಣರು: "ಆತ ಅನೇಕ ಹೂವುಗಳಿಂದ ಮಧುವನ್ನು ಶೇಖರಿಸುತ್ತಾನೆ. (ರಾಮ, ನಿತ್ಯಗೋಪಾಲ ಮೊದಲಾದವರಿಗೆ) ತನ್ನ ಇಷ್ಟದೇವನೇ ಭಗವಂತ ಎಂಬುದಾಗಿ ಭಕ್ತ ನೂರಕ್ಕೆ ನೂರು ಭಾಗ ನಂಬುವುದಾದರೆ, ಆತನಿಗೆ ಭಗವಂತನ ಸಾಕ್ಷಾತ್ಕಾರ ದೊರಕುತ್ತದೆ—ದರ್ಶನ ದೊರೆಯುತ್ತದೆ.

"ಹಿಂದಿನ ಕಾಲದವರಿಗೆ ಭಗವಂತನಲ್ಲಿ ಶ್ರದ್ಧೆ ಬಹಳ ಅಧಿಕವಾಗಿತ್ತು. ಹಲಧಾರಿಯ ತಂದೆಯ ಶ್ರದ್ಧೆ ಎಷ್ಟು ಅದ್ಭುತವಾದ್ದು! ಒಮ್ಮೆ ಆತ ತನ್ನ ಮಗಳ ಮನೆಗೆ ಹೋಗುತ್ತಿದ್ದ. ದಾರಿಯಲ್ಲಿ ಬಹು

ಸುಂದರವಾದ ಹೂವುಗಳು ಮತ್ತು ಬಿಲ್ವಪತ್ರೆ ಇರುವುದನ್ನು ಕಂಡು ದೇವರ ಪೂಜೆಗಾಗಿ ಅವನ್ನು ಕೊಯ್ದು ಐದಾರು ಮೈಲಿ ದೂರವನ್ನ ಮತ್ತೆ ಹಿಂದಿರುಗಿ ನಡೆದು ತನ್ನ ಮನೆಯನ್ನು ಸೇರಿದ.

"ಒಮ್ಮೆ ರಾಮಾಯಣ ನಾಟಕ ನಡೆಯುತ್ತಿತ್ತು. ಕೈಕೆ ರಾಮನನ್ನು ವನವಾಸಕ್ಕೆ ತೆರಳುವಂತೆ ಹೇಳಿದಳು. ನಾಟಕ ನೋಡಲು ಹೋಗಿದ್ದ ಹಲಧಾರಿಯ ತಂದೆ ಒಮ್ಮೆಗೇ ಎದ್ದು ನಿಂತ. ಯಾರು ಕೈಕೆ ಪಾರ್ಟು ವಹಿಸಿದ್ದನೊ ಆತನ ಹತ್ತಿರಕ್ಕೆ ಹೋಗಿ 'ಎಲಾ ಪಾಪಿ!' ಅಂತ ಹೇಳಿ ದೀಪ ತೆಗೆದುಕೊಂಡು ಆತನ ಮುಖ ಸುಡಲು ಹೋಗಿದ್ದ. ಆತ ಸ್ನಾನ ಮಾಡಿದನಂತರ ನೀರಿನಲ್ಲಿ ನಿಂತುಕೊಂಡು 'ರಕ್ತವರ್ಣಂ ಚತುರ್ಮುಖಮ್' ಎಂಬಿವೇ ಮೊದಲಾದ ಮಂತ್ರಗಳನ್ನು ಪಠಿಸಿ ಧ್ಯಾನಮಾಡುತ್ತಿದ್ದಾಗ, ಕಣ್ಣು ನೀರಿನಿಂದ ತುಂಬಿಕೊಂಡುಬಿಡುತ್ತಿತ್ತು.

"ನಮ್ಮ ತಂದೆ ಮರದ ಪಾದುಕೆಗಳನ್ನು ಹಾಕಿಕೊಂಡು ಬೀದಿಯಲ್ಲಿ ಹೋಗುವಾಗ ಗೌರವ ತೋರಿಸಲು ಅಂಗಡಿಯ ಜನ ಎದ್ದು ನಿಂತುಕೊಳ್ಳು ತ್ತಿದ್ದರು. ಹೇಳುತ್ತಿದ್ದರು: 'ಅಗೋ, ಅವರು ಅಲ್ಲಿ ಬರುತ್ತಿದಾರೆ!' ಅವರು ಹಲಧಾರಪುಕುರಿನಲ್ಲಿ ಸ್ನಾನಮಾಡುವ ವೇಳೆಯಲ್ಲಿ ಬೇರೆ ಯಾರಿಗೂ ನೀರಿಗಿಳಿಯಲು ಸಾಹಸವಾಗುತ್ತಿರಲಿಲ್ಲ. ಮುನ್ನವೇ ಕೇಳಿ ತಿಳಿದುಕೊಳ್ಳು ತ್ತಿದ್ದರು: 'ಏನು ಅವರು ಸ್ನಾನಮಾಡಿ ಹೋದರೇ?'

"'ರಘುವೀರಾ! ರಘುವೀರಾ!' ಎಂದು ಜಪಿಸುವಾಗ ನಮ್ಮ ತಂದೆಯ ಎದೆ ಕೆಂಪೇರುತ್ತಿತ್ತು. ನನಗೂ ಹಾಗೇ ಆಗುತ್ತಿತ್ತು. ಬೃಂದಾವನಕ್ಕೆ ಹುಲ್ಲುಗಾವಲಿನಿಂದ ಹಿಂದಿರುಗಿಬರುತ್ತಿದ್ದ ಗೋವುಗಳನ್ನು ನೋಡಿ ಭಗವದುದ್ದೀಪನವಾಗಿ ನನ್ನ ಶರೀರವೂ ಕೆಂಪೇರಿಬಿಟ್ಟಿತು.

"ಆಗಿನ ಕಾಲದ ಜನರಿಗೆ ಭಗವಂತನಲ್ಲಿ ಅತ್ಯಂತ ಶ್ರದ್ಧೆ. ಜನ ಹೇಳುವುದೂ ಉಂಟು ಆಗಿನ ಕಾಲದಲ್ಲಿ ಭಗವಂತ ಕಾಳೀರೂಪ ಧರಿಸಿ ನರ್ತಿಸುತ್ತಿದ್ದ, ಭಕ್ತ ನರ್ತನಕ್ಕೆ ಸರಿಯಾಗಿ ಕೈತಾಳ ಹಾಕುತ್ತಿದ್ದ ಎಂಬು ದಾಗಿ."

ಪಂಚವಟಿಯ ಕುಟೀರಕ್ಕೆ ಒಬ್ಬ ಹಠಯೋಗಿ ಬಂದಿದಾನೆ. ಏಡೇ-ದೇರ್ ಕೃಷ್ಣಕಿಶೋರನ ಮಗ ರಾಮಪ್ರಸನ್ನ ಮತ್ತು ಇನ್ನೂ ಕೆಲವು ಮಂದಿ ಆ ಹಠಯೋಗಿಯನ್ನ ಬಹಳ ಶ್ರದ್ಧಾಭಕ್ತಿಯಿಂದ ಕಾಣುತ್ತಿದಾರೆ. ಆತನಿಗೆ ಬೇಕಾಗುವ ಅಫೀಮು ಮತ್ತು ಹಾಲಿಗೆ ತಿಂಗಳಿಗೆ ಇಪ್ಪತ್ತೈದು

ರೂಪಾಯಿ ಖರ್ಚು ಬೇಕಾಗುತ್ತಿತ್ತು. ಆದ್ದರಿಂದ ರಾಮಪ್ರಸನ್ನ ಪರಮಹಂಸರನ್ನು ಪ್ರಾರ್ಥಿಸಿಕೊಂಡಿದ್ದ, ತಮ್ಮ ಹತ್ತಿರಕ್ಕೆ ಅನೇಕ ಮಂದಿ ಭಕ್ತರು ಬರುತ್ತಿದಾರೆ. ಅವರ ಕಿವಿ ಮೇಲೆ ತಾವು ಈ ಮಾತು ಹಾಕಿದರೆ ಹಠ-ಯೋಗಿಯ ಖರ್ಚುವೆಚ್ಚಗಳಿಗಾಗಿ ಸ್ವಲ್ಪ ದುಡ್ಡು ದೊರೆಯಬಹುದು ಎಂದು. ಪರಮಹಂಸರು ಈಗ ಕೆಲವು ಮಂದಿ ಭಕ್ತರಿಗೆ ಹೇಳುತ್ತಿದಾರೆ: "ಪಂಚವಟಿಗೆ ಒಬ್ಬ ಹಠಯೋಗಿ ಬಂದಿದಾನೆ. ಹೋಗಿ, ನೋಡಿ ಬನ್ನಿ. ಆತ ಎಂಥವನು ಎಂಬುದನ್ನು ತಿಳಿದು ಬನ್ನಿ."

ಠಾಕುರ್‌ದಾದ ಎಂಬ ಹೆಸರಿನ ಒಬ್ಬ ಯುವಕ ತನ್ನ ಒಬ್ಬಿಬ್ಬರು ಸ್ನೇಹಿತರೊಡನೆ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮ ಮಾಡುತ್ತಿದಾನೆ. ಆತನಿಗೆ ವಯಸ್ಸು ಇಪ್ಪತ್ತೇಳು ಇಪ್ಪತ್ತೆಂಟು ಇರಬಹುದು. ವರಾಹನಗರದಲ್ಲಿದೆ ಆತನಿಗೆ ಮನೆ. ಆತ ಒಬ್ಬ ಬ್ರಾಹ್ಮಣ ಪಂಡಿತನ ಮಗ. ಹರಿಕಥಾ ವೃತ್ತಿಯನ್ನು ಇಟ್ಟುಕೊಂಡಿದಾನೆ—ಸಂಸಾರದ ಖರ್ಚುವೆಚ್ಚಗಳಿಗಾಗಿ. ಒಮ್ಮೆ ಆತನಿಗೆ ವೈರಾಗ್ಯ ಬಂದು ಕೆಲವು ಕಾಲದ ಮಟ್ಟಿಗೆ ಮನೆ ಬಿಟ್ಟು ಹೊರಟುಹೋಗಿದ್ದ. ಈಗಲೂ ಸಾಧನೆ ಭಜನೆಯನ್ನ ಮಾಡುತ್ತಿದಾನೆ.

ಶ್ರೀರಾಮಕೃಷ್ಣರು: "ಏನು ನೀನು ನಡೆದು ಬಂದೆಯಾ? ಎಲ್ಲಿದೆ ಮನೆ?"

ದಾದ: "ಹೌದು, ನಡೆದು ಬಂದೆ. ವರಾಹನಗರದಲ್ಲಿದೆ ಮನೆ."

ಶ್ರೀರಾಮಕೃಷ್ಣರು: "ಇಲ್ಲಿಗೆ ಬಂದ ಉದ್ದೇಶ?"

ದಾದ: "ತಮ್ಮ ದರ್ಶನ ಮಾಡಿಹೋಗಲು. ಭಗವಂತನಿಗೆ ಪ್ರಾರ್ಥನೆ ಸಲ್ಲಿಸುತ್ತಿದೇನೆ. ಆದರೆ ಆಗಾಗ ಅಶಾಂತಿಯುಂಟಾಗುತ್ತದೆಯಲ್ಲ ಏಕೆ? ಒಂದು ನಾಲ್ಕೈದು ದಿನಗಳ ಮಟ್ಟಿಗೆ ಬಹಳ ಆನಂದದಿಂದಿರುತ್ತೇನೆ. ಅನಂತರ ಅಶಾಂತಿ. ಏಕೆ ಹೀಗೆ?"

ಶ್ರೀರಾಮಕೃಷ್ಣರು: "ಹಾಗೇನು? ಸರಿಯಾದ ರೀತಿಯಲ್ಲಿ ಜೋಡಣೆ ಆಗಿಲ್ಲ. ಯಂತ್ರ ಕೆಲಸ ಮಾಡುವವನು ಚಕ್ರಗಳ ಹಲ್ಲುಗಳು ಸರಿಯಾಗಿ ಕುಳಿತುಕೊಳ್ಳುವಂತೆ ಮಾಡುತ್ತಾನೆ. ಆಗ ಯಂತ್ರ ಸುಲಲಿತವಾಗಿ ನಡೆಯುತ್ತದೆ. ನಿನ್ನ ವಿಷಯದಲ್ಲಿ ಎಲ್ಲೋ ಒಂದು ಕಡೆ ಸ್ವಲ್ಪ ತಡೆ ಇದೆ."

ದಾದ: "ಹೌದು, ನಿಜ. ಹಾಗೇ ಆಗಿರಬೇಕು."

ಶ್ರೀರಾಮಕೃಷ್ಣರು: "ಮಂತ್ರೋಪದೇಶ ಪಡೆದಿದ್ದೀಯೇನು?"

ದಾದ: "ಹೌದು, ಪಡೆದಿದ್ದೇನೆ."

ಶ್ರೀರಾಮಕೃಷ್ಣರು: "ಮಂತ್ರದಲ್ಲಿ ಶ್ರದ್ಧೆಯಿರುವುದೆ?"

ಠಾಕುರ್ ದಾದನ ಒಬ್ಬ ಸ್ನೇಹಿತ ಹೇಳಿದ: "ಈತ ಬಹಳ ಚೆನ್ನಾಗಿ ಹಾಡಬಲ್ಲ." ಶ್ರೀರಾಮಕೃಷ್ಣರು ಆತನಿಗೆ ಹೇಳಿದರು ಹಾಡುವಂತೆ.

ಠಾಕುರ್ ದಾದ ಹಾಡುತ್ತಿದ್ದಾನೆ:

ಪ್ರೇಮ ಗಿರಿಕಂದರದ ಗುಹೆಯಲಿ ಯೋಗಿಯಾಗುತ ನಿಲ್ಲುವೆ
ದಿವ್ಯ ನಿತ್ಯಾನಂದ ನಿರ್ಝರದಲ್ಲಿ ಧ್ಯಾನದಿ ಮುಳುಗುವೆ.
ತತ್ತ್ವಫಲರಸ ಪಾನಗೈಯುತ ಜ್ಞಾನಕ್ಷುಧೆಯನು ತಣಿಸುವೆ
ಪರಮಪುರುಷನ ಪಾದವನು ವೈರಾಗ್ಯ ಕುಸುಮದಿ ಪೂಜಿಪೆ.
ಎದೆಯ ದಾಹಕೆ ನೀರನೆರೆಯಲು ಕೂಪಜಲವನ್ನರಸದೆ
ಶಾಂತಿವಾರಿಯನೆತ್ತಿ ಹೃದಯದ ಹೊನ್ನಗಿಂಡಿಯ ತುಂಬುವೆ.
ನಿನ್ನ ಪದಪದ್ಮಗಳ ಸುಧೆಯನು ದಿನವು ದಿನವೂ ಕುಡಿಯುತ,
ನಗುವೆ, ಕುಣಿಯುವೆ, ಅಳುವೆ, ಹಾಡುವೆ, ಪರಮತೋಷದಿ ಮೀಯುತ!

ಶ್ರೀರಾಮಕೃಷ್ಣರು: "ಆಹಾ! ಬಹಳ ಒಳ್ಳೆ ಹಾಡು ಇದು! 'ದಿವ್ಯ ನಿತ್ಯಾನಂದ ನಿರ್ಝರದಲ್ಲಿ!' 'ತತ್ತ್ವಫಲರಸ ಪಾನಗೈಯುತ!' 'ನಗುವೆ, ಕುಣಿಯುವೆ, ಅಳುವೆ, ಹಾಡುವೆ!' ನಿನ್ನಂಥವನ ಅಂತರ್ಯದಿಂದ ಇಂಥ ಹಾಡು! ನನಗೆ ಬಹಳ ಆನಂದವಾಗಿಬಿಟ್ಟಿದೆ. ಇನ್ನೇಕೆ ನಿನಗೆ ಯೋಚನೆ?

"ಸಂಸಾರದಲ್ಲಿ ಇದ್ದೆ ಎಂದರೆ, ಅದರ ಸುಖ ದುಃಖಗಳನ್ನ ಅನುಭವಿಸಲೇ ಬೇಕು. ಆಗಾಗ ಒಂದಷ್ಟು ಅಶಾಂತಿ ಉಂಟಾಗೇ ಉಂಟಾಗುತ್ತದೆ. ಕಾಡಿಗೆ ಕಟ್ಟಿದ ಕೊಠಡಿಯಲ್ಲಿ ವಾಸಿಸಿದರೆ ಮೈಗೆ ಅಲ್ಪ ಸ್ವಲ್ಪ ಕಾಡಿಗೆ ತಗಲೇ ತಗಲುತ್ತದೆ."

ದಾದ: "ಒಳ್ಳೇದು, ಈಗ ನಾನು ಏನು ಮಾಡಬೇಕು—ದಯವಿಟ್ಟು ತಿಳಿಸಿ."

ಶ್ರೀರಾಮಕೃಷ್ಣರು: "ಕೈತಾಳ ಹಾಕುತ್ತ ಬೆಳಗ್ಗೆ ಸಾಯಂಕಾಲ ಹರಿನಾಮಸಂಕೀರ್ತನೆ ಮಾಡು. ಇನ್ನೊಮ್ಮೆ ಬಾ—ನನ್ನ ಕೈ ಸ್ವಲ್ಪ ಗುಣಹೊಂದಲಿ."

ಮಹಿಮಚರಣ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿದ. ಶ್ರೀರಾಮಕೃಷ್ಣರು ಆತನಿಗೆ ಹೇಳಿದರು: "ಆಹಾ! ಈತ ಬಹಳ ಒಳ್ಳೆ ಹಾಡನ್ನು ಹಾಡಿದ. ಮತ್ತೆ ಹಾಡು ಆ ಹಾಡನ್ನ." ಠಾಕುರ್‌ದಾದ ಅದನ್ನು ಪುನರಾವೃತ್ತಿಮಾಡಿದ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ನೀನು ಆ ಶ್ಲೋಕಗಳನ್ನು ಹೇಳು—ಹರಿಭಕ್ತಿಯ ಸಂಬಂಧವಾದವು."

ಮಹಿಮಚರಣ ನಾರದಪಂಚರಾತ್ರದಿಂದ ಕೆಲವು ಶ್ಲೋಕಗಳನ್ನು ಎತ್ತಿ ಹೇಳಿದ:

ಪ್ರೇಮದೊಳಾರಾಧಿಸೆ ದೇವರ, ಈ ಜಪತಪವಿನ್ನೇಕೆ?
ಪ್ರೇಮದೊಳಾರಾಧಿಸದಿದ್ದರೆ ಈ ಜಪತಪವಿನ್ನೇಕೆ? ... (ಉ. ೩೨೦)

ಶ್ರೀರಾಮಕೃಷ್ಣರು: "ಆ ಭಾಗವೂ ಒಳ್ಳೆಯದೆ—'ಪಡೆ ಅವನಿಂ ವೈಷ್ಣವೋಕ್ತ ಹರಿಭಕ್ತಿಯನು!'."

ಮಹಿಮಚರಣ ಪಠಿಸುತ್ತಿದಾನೆ:

ಓ ಮಗು ಪರಬ್ರಹ್ಮ, ನಿನ್ನೀ ಜಪತಪವನು ನಿಲಿಸೋ!
ಜ್ಞಾನಸಿದ್ಧ ಶ್ರೀ ದ್ವಿಜವರ ಶಂಕರನೆಡೆ ನಡೆಯೋ.
ಭವನಿಗಳನಿಬಂಧಚ್ಛೇದನಕಾರಣಶಕ್ತಿಯನು
ಪಡೆ ಅವನಿಂ ವೈಷ್ಣವೋಕ್ತ ಹರಿಭಕ್ತಿಯನು!

ಶ್ರೀರಾಮಕೃಷ್ಣರು: "ಹೌದು, ಶಂಕರ ಹರಿಭಕ್ತಿಯನ್ನು ಕೊಡುತ್ತಾನೆ."

ಮಹಿಮಚರಣ: "ಪಾಶಮುಕ್ತನೇ ಸದಾಶಿವ."

ಶ್ರೀರಾಮಕೃಷ್ಣರು: "ಲಜ್ಜೆ, ದ್ವೇಷ, ಭಯ, ಸಂಕೋಚ—ಇವೆಲ್ಲಾ ಪಾಶಗಳೇ ನೀನೇನು ಹೇಳುತ್ತೀಯೆ?"

ಮಹಿಮಚರಣ: "ಹೌದು, ನಿಶ್ಚಯ. ಗೋಪನಮಾಡುವ ಇಚ್ಛೆ, ಹೊಗಳಿದಾಗ ಕುಗ್ಗುವುದು ಇವು ಕೂಡ."

ಶ್ರೀರಾಮಕೃಷ್ಣರು: "ಜ್ಞಾನಕ್ಕೆ ಎರಡು ಲಕ್ಷಣಗಳು. ಮೊದಲನೆಯದು ಕೂಟಸ್ಥಬುದ್ಧಿ. ಸಹಸ್ರಾರು ದುಃಖ, ಕಷ್ಟ, ವಿಪತ್ತು, ವಿಘ್ನ ಬಂದರೂ ಅಚಲವಾಗಿರುವಿಕೆ—ಕಮ್ಮಾರನ ಅಡಿಗಲ್ಲಿನ ಹಾಗೆ. ಸತತ ಕೊಡತಿ ಏಟು ಬೀಳುತ್ತಿದ್ದರೂ ಅದು ಎಂದಿನಂತೇ ಇರುತ್ತದೆ. ಎರಡನೆಯದು ಪುರುಷಕಾರ—ಒಳ್ಳೆ ಪೌರುಷ. ಕಾಮ ಕ್ರೋಧ ನಮಗೆ ಅನಿಷ್ಟ

ತರುತ್ತವೆ ತಾನೆ. ಅವನ್ನು ಒಮ್ಮೆಗೇ ತ್ಯಜಿಸಿಬಿಡುವ ಸ್ಥೈರ್ಯ. ಆಮೆ ತನ್ನ ಕೈಕಾಲುಗಳನ್ನು ಒಳಕ್ಕೆ ಸೆಳೆದುಕೊಂಡಿತೆಂದರೆ ಅದನ್ನು ನಾಲ್ಕು ಭಾಗವಾಗಿ ಕತ್ತರಿಸಿದರೂ ಅದು ಮಾತ್ರ ಅವನ್ನು ಹೊರಕ್ಕೆ ಬಿಡದು. (ಠಾಕುರ್‌ದಾದ ಮೊದಲಾದವರಿಗೆ) ವೈರಾಗ್ಯದಲ್ಲಿ ಎರಡು ವಿಧ—ತೀವ್ರ, ಮಂದ. ಮಂದ ವೈರಾಗ್ಯ—ಆಗುತ್ತಾ ಇದೆ, ಆಗುತ್ತೆ ಅನ್ನುವ ಹಾಗೆ; ಬಹಳ ನಿಧಾನವಾದ ತಾಳ. ತೀವ್ರ ವೈರಾಗ್ಯ—ಸಾಣೆ ಹಿಡಿಸಿದ ಕತ್ತಿಯ ಅಲಗಿನ ಹಾಗೆ; ಮಾಯಾ ಪಾಶವನ್ನ 'ಕಚ್, ಕಚ್' ಅಂತ ಕತ್ತರಿಸಿ ಬಿಡುತ್ತದೆ.

"ಒಬ್ಬ ರೈತ ಬಹಳ ದಿನಗಳಿಂದ ಕೆಲಸಮಾಡುತ್ತಿದ್ದಾನೆ. ಆದರೂ ಕೆರೆಯ ನೀರು ಮಾತ್ರ ಇನ್ನೂ ಆತನ ಗದ್ದೆಗೆ ಬಂದಿಲ್ಲ. ಆತನ ಮನಸ್ಸಿನಲ್ಲಿ ಪೌರುಷವಿಲ್ಲ. ಇನ್ನೊಬ್ಬ ಒಂದು ನಾಲ್ಕೈದು ದಿನ ಕೆಲಸಮಾಡಿದ ನಂತರ—'ಇಂದು ಗದ್ದೆಗೆ ನೀರು ತಂದಮೇಲೇನೇ ಕೆಲಸ ನಿಲ್ಲಿಸುವುದು' ಎಂದು ಪ್ರತಿಜ್ಞೆಮಾಡಿಕೊಳ್ಳುತ್ತಾನೆ. ಸ್ನಾನ ಊಟ ಇವುಗಳ ಭಾವನೆಯನ್ನೇ ಒಂದು ಮೂಲೆಗೆ ಕಟ್ಟಿಟ್ಟುಬಿಡುತ್ತಾನೆ. ಇಡೀ ದಿನವೆಲ್ಲಾ ಕೆಲಸ ಮಾಡುತ್ತಾನೆ. ಸಾಯಂಕಾಲದ ಹೊತ್ತಿಗೆ ಯಾವಾಗ ನೀರು ಆತನ ಗದ್ದೆಗೆ 'ಕಲ, ಕಲ' ಅಂತ ಬರಲಾರಂಭಿಸುತ್ತದೊ ಆಗ ಆತನಿಗೆ ಬಹಳ ಆನಂದವಾಗಿಬಿಡುತ್ತದೆ. ಅನಂತರ ಮನೆಗೆ ಹಿಂದಿರುಗಿ ಹೆಂಡತಿಗೆ ಹೇಳುತ್ತಾನೆ: 'ಕೊಡು, ಈಗ ಕೊಡು ಎಣ್ಣೆಯನ್ನ. ಸ್ನಾನಮಾಡುತ್ತೇನೆ.' ಸ್ನಾನ ಮುಗಿಸಿ, ಊಟ ಮಾಡಿ, ನಿಶ್ಚಿಂತನಾಗಿ ನಿದ್ರಿಸಲಾರಂಭಿಸುತ್ತಾನೆ.

"ಒಬ್ಬನ ಹೆಂಡತಿ ತನ್ನ ಪತಿಗೆ ಹೇಳಿದಳು: 'ನೋಡಿ, ಆ ಮನೆಯವರಿಗೆ ದೊಡ್ಡ ವೈರಾಗ್ಯ ಬಂದುಬಿಟ್ಟಿದೆ—ಆದರೆ ನಿಮ್ಮಲ್ಲಿ ಅಂಥದೇನು ಎಳ್ಳಷ್ಟೂ ಕಾಣುತ್ತಿಲ್ಲ. ಅವರಿಗೆ ಹದಿನಾರು ಜನ ಹೆಂಡತಿಯರಿದ್ದಾರೆ. ಒಬ್ಬೊಬ್ಬಳನ್ನಾಗಿ ತ್ಯಾಗಮಾಡುತ್ತಿದ್ದಾರೆ.' ಆಗ ಈಕೆಯ ಪತಿ ಸ್ನಾನಕ್ಕೆ ಹೊರಟಿದ್ದ. ಹೆಗಲ ಮೇಲೆ ಚೌಕ ಇತ್ತು. ಹೇಳಿದ: 'ಎಲೆ ಹುಚ್ಚಿ! ಆತನ ಕೈಯಲ್ಲಿ ತ್ಯಾಗ ಮಾಡಲು ಸಾಧ್ಯವಾಗೋದಿಲ್ಲ. ತ್ಯಾಗದಲ್ಲಿ ಕಿಂಚಿತ್ ಕಿಂಚಿತ್ ಎಂಬುದು ಉಂಟೇ? ನನ್ನ ಕೈಯಲ್ಲಿ ಸಾಧ್ಯ. ಇಗೋ ನೋಡು! ಹೊರಟೆ ನಾನು.' ಆತ ಮನೆಯ ವ್ಯವಸ್ಥೆ-ಗಿವಸ್ಥೆಯ ಸಂಬಂಧವಾಗಿ ಸ್ವಲ್ಪವೂ ಯೋಚಿಸದೆ, ಅದೇ ಅವಸ್ಥೆಯಲ್ಲಿ, ಎಂದರೆ ಹೆಗಲ ಮೇಲೆ

ಚೌಕ ಹಾಕಿಕೊಂಡಿದ್ದ ಹಾಗೇ ಮನೆ ಬಿಟ್ಟು ಹೊರಟೇ ಹೋದ. ಇದಕ್ಕೇ ತೀವ್ರ ವೈರಾಗ್ಯ ಅಂತ ಹೆಸರು.

"ಇನ್ನೊಂದು ವಿಧದ ವೈರಾಗ್ಯವಿದೆ. ಅದಕ್ಕೆ ಮರ್ಕಟ ವೈರಾಗ್ಯ ಅಂತ ಹೆಸರು. ಒಬ್ಬ ಸಂಸಾರದ ಬೇಗೆಯನ್ನು ತಡೆಯಲಾರದೆ ಕಾಷಾಯ ವಸ್ತ್ರ ಧರಿಸಿ ಕಾಶಿಗೆ ಹೋದ. ಬಹಳ ದಿನಗಳವರೆಗೆ ಆತನ ಸುದ್ದಿ ಸಮಾಚಾರವೇ ಗೊತ್ತಾಗಲಿಲ್ಲ. ಅನಂತರ ಮನೆಗೆ ಒಂದು ಪತ್ರ ಬಂತು. ಅದರಲ್ಲಿ ಬರೆದಿತ್ತು: 'ನೀವು ಚಿಂತಿಸಬೇಕಾಗಿಲ್ಲ. ನನಗೊಂದು ಕೆಲಸ ಸಿಕ್ಕಿದೆ.'

"ಸಂಸಾರದ ಬೇಗೆಯಂತು ಸತತ ಇದ್ದೇ ಇರುತ್ತದೆ. ಹೆಂಡತಿ ಅವಿಧೇಯಳಾಗಿರಬಹುದು. ತಿಂಗಳಿಗೆ ಬರುವ ಸಂಬಳ ಇಪ್ಪತ್ತು ರೂಪಾಯಿ. ಮಗುವಿಗೆ ಅನ್ನಪ್ರಾಶನ ಮಾಡಿಸಲು ಯೋಗ್ಯತೆಯಿಲ್ಲ. ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಲು ಸಾಮರ್ಥ್ಯವಿಲ್ಲ. ಮನೆ ಹರುಕು ಮುರುಕು. ಚಾವಣಿಯಿಂದ ನೀರು ಸೋರುತ್ತಿರುತ್ತದೆ. ಸರಿಪಡಿಸಲು ಕೈಯಲ್ಲಿ ಕಾಸಿಲ್ಲ.

"ಆದಕ್ಕಾಗೇ ಯುವಕರು ಬಂದಾಗ ನಾನು ಅವರನ್ನು ಕೇಳುವುದು, ನಿಮ್ಮ ಮನೆಯಲ್ಲಿ ಯಾರಾರಿದಾರೆ ಎಂದು. (ಮಹಿಮಚರಣನಿಗೆ) ನೀವು ಸಂಸಾರ ತ್ಯಾಗಮಾಡಬೇಕಾದ ಆವಶ್ಯಕತೆಯೇನಿದೆ? ಸಾಧುಗಳು ಎಷ್ಟೊಂದು ಕಷ್ಟಪಡಬೇಕು! ಒಬ್ಬನ ಹೆಂಡತಿ ತನ್ನ ಪತಿಗೆ ಹೇಳಿದಳು: 'ನೀವು ಸಂಸಾರವನ್ನ ತ್ಯಜಿಸಬೇಕು ಅಂತ ಇದೀರೇನು? ಏಕೆ? ನೋಡಿ, ನೀವು ಎಂಟು ಮನೆಗಳ ಹೊಸಲು ಹತ್ತಿ ಭಿಕ್ಷೆ ಬೇಡಬೇಕಾಗುತ್ತದೆ. ಆದರೆ ಈಗ ಒಂದು ಮನೆಯಿಂದಲೇ ನಿಮಗೆ ಎಲ್ಲಾ ದೊರೆಯುತ್ತಿದೆ. ಇದೇ ಮೇಲಲ್ಲವೇ?'

"ಅನ್ನಸತ್ರಗಳನ್ನು ಹುಡುಕುತ್ತ ಹುಡುಕುತ್ತ ಸಾಧುಗಳು ತಾವು ಮುಂದುವರಿಯುತ್ತಿದ್ದ ರಸ್ತೆಯನ್ನು ಬಿಟ್ಟು ಐದು ಆರು ಮೈಲಿ ದೂರ ಒಮ್ಮೊಮ್ಮೆ ಸುತ್ತಿ ಬರಬೇಕಾಗಿ ಬರಬಹುದು. ನೋಡಿದೇನೆ, ಜಗನ್ನಾಥ ದರ್ಶನ ಮಾಡಿಕೊಂಡು ರಾಜಮಾರ್ಗದಲ್ಲಿ ಬರುತ್ತಿದ್ದ ಸಾಧುಗಳು ಅನ್ನಸತ್ರಕ್ಕಾಗಿ ಅಡ್ಡದಾರಿ ಹಿಡಿಯಬೇಕಾಗಿ ಬರುತ್ತಿದ್ದುದನ್ನ.

"ನೀನು ಸಂಸಾರ ಜೀವನ ನಡೆಯಿಸಿಕೊಂಡು ಹೋಗುತ್ತಿದೀಯೆ. ಇದು ಒಳ್ಳೆಯದೇ—ಕೋಟೆಯೊಳಗಿನಿಂದ ಯುದ್ಧ. ಬಯಲಿನಲ್ಲಿ ನಿಂತು

ಯುದ್ಧಮಾಡಿದರೆ ಅನೇಕ ಅಸೌಕರ್ಯ. ವಿಪತ್ತೂ ಕಾದಿರುತ್ತವೆ. ಗುಂಡೂ ಬಂದು ಶರೀರದ ಮೇಲೆ ಬೀಳಬಹುದು.

"ಆದರೆ ಕೆಲವು ಕಾಲ ಏಕಾಂತದಲ್ಲಿ ಇದ್ದು ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡು ಬಳಿಕ ಬಂದು ಸಂಸಾರದಲ್ಲಿ ಇರಬೇಕು. ಜನಕ-ರಾಜ ಬ್ರಹ್ಮಜ್ಞಾನವನ್ನ ಪಡೆದುಕೊಂಡನಂತರ ಬಂದು ಸಂಸಾರದಲ್ಲಿದ್ದ. ಬ್ರಹ್ಮಜ್ಞಾನ ದೊರೆತನಂತರ ಎಲ್ಲಿ ಬೇಕಾದರಲ್ಲಿ ಇರಬಹುದು. ಅದರಿಂದ ಯಾವ ತೊಂದರೆಯೂ ಬಾರದು."

ಮಹಿಮಚರಣ: "ಮಹಾಶಯರೆ, ಮನುಷ್ಯ ಏಕೆ ವಿಷಯವಸ್ತುಗಳನ್ನು ಕಂಡರೆ ಮುಗ್ಧನಾಗಿ ಹೋಗುತ್ತಾನೆ."

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳದೆ ವಿಷಯವಸ್ತುಗಳ ಮಧ್ಯೆ ವಾಸಿಸುವುದರಿಂದ. ಆತನ ಸಾಕ್ಷಾತ್ಕಾರ ಪಡೆದುಕೊಂಡನಂತರ ಎಂದಿಗೂ ಮುಗ್ಧನಾಗೋದಿಲ್ಲ. ದೀಪದ ಚಿಟ್ಟೆಗೆ ಒಮ್ಮೆ ಏನಾದರೂ ಬೆಳಕು ಕಾಣಿಸಿಕೊಂಡಿತು ಎಂದರೆ ಅದಕ್ಕೆ ಕತ್ತಲೆ ಎಂದಿಗೂ ಹಿಡಿಸದು.

"ಭಗವಂತನ ಸಾಕ್ಷಾತ್ಕಾರ ದೊರಕಬೇಕಾದರೆ ಬ್ರಹ್ಮಚರ್ಯ ಪರಿಪಾಲನೆ ಮಾಡಲೇಬೇಕು. ಶುಕದೇವಾದಿಗಳು ಊರ್ಧ್ವರೇತಸರು. ಇವರ ವೀರ್ಯ ಎಂದಿಗೂ ಪತನವಾಗಲಿಲ್ಲ. ಇನ್ನು ಕೆಲವರಿದಾರೆ ಧೈರ್ಯರೇತಸರು—ಮೊದಲು ವೀರ್ಯವನ್ನ ಕಳೆದುಕೊಂಡಿದ್ದು ಅನಂತರ ಬ್ರಹ್ಮಚರ್ಯಪರಿಪಾಲನೆ ಮಾಡುತ್ತಿರುವವರು. ಹನ್ನೆರಡು ವರ್ಷಗಳ ಕಾಲ ಧೈರ್ಯರೇತಸರಾಗುವುದಾದರೆ ವಿಶೇಷ ಶಕ್ತಿ ಉಂಟಾಗುತ್ತದೆ. ಅವರ ಶರೀರದಲ್ಲಿ ಒಂದು ಹೊಸ ನಾಡಿ ಉತ್ಪನ್ನವಾಗುತ್ತದೆ. ಅದಕ್ಕೆ ಮೇಧಾನಾಡಿ ಅಂತ ಹೆಸರು. ಆ ನಾಡಿ ಉಂಟಾಯಿತು ಎಂದರೆ ಎಲ್ಲವೂ ಜ್ಞಾಪಕದಲ್ಲಿರುತ್ತದೆ, ಎಲ್ಲವನ್ನೂ ಅರಿಯಲು ಸಾಧ್ಯವಾಗುತ್ತದೆ.

"ವೀರ್ಯಪಾತದಿಂದ ಬಲ ಕುಗ್ಗುವುದು. ಸ್ವಪ್ನದೋಷವಾದಾಗ ಏನು ಹೊರಕ್ಕೆ ಬಂದುಬಿಡುವುದೊ ಅದರಿಂದ ಯಾವ ಹಾನಿಯೂ ತಟ್ಟದು. ಅದು ಆಹಾರದೋಷದಿಂದ ಉಂಟಾಗುತ್ತದೆ. ಆ ರೀತಿಯಾಗಿ ಹೋದನಂತರ ಏನು ಉಳಿದುಕೊಳ್ಳುವುದೊ ಅದೇ ಯಥೇಷ್ಟ. ಹಾಗೆಂದು ಹೆಂಗಸಿನ ಸಹವಾಸ ಮಾಡುವುದು ಸರಿಯಲ್ಲ.

"ಸ್ವಪ್ನದೋಷವಾದನಂತರ ಏನು ಉಳಿದುಕೊಳ್ಳುವುದೊ ಅದು

ಅತ್ಯಂತ 'ರಿಫೈನ್ಡ್'—ಪರಿಶುದ್ಧವಾದುದು. ಕಾಮಾರಪುಕುರಿನ ಲಾಹಾ ಮನೆತನದವರು ಒಮ್ಮೆ ಜೋನಿ ಬೆಲ್ಲದ ಗುಡಾಣಗಳನ್ನ ಇಟ್ಟಿದ್ದರು—ಪ್ರತಿಯೊಂದು ಗುಡಾಣದ ತಳದಲ್ಲೂ ಒಂದೊಂದು ರಂಧ್ರ ಮಾಡಿ. ಒಂದು ವರ್ಷವಾದನಂತರ ಅದನ್ನು ತೆಗೆದು ನೋಡಿದಾಗ ಒಳಗೆ ಎಲ್ಲಾ ಹರಳು ಕಟ್ಟಿಬಿಟ್ಟಿತ್ತು—ಕಲ್ಲುಸಕ್ಕರೆಯ ಹಾಗೆ. ನೀರಿನ ಭಾಗ ಎಷ್ಟು ಹೋಗಬೇಕಾಗಿತ್ತೊ ಅದು ಗುಡಾಣಗಳ ರಂಧ್ರದ ಮೂಲಕ ಹೊರಕ್ಕೆ ಬಂದುಬಿಟ್ಟಿತ್ತು.

"ಸನ್ಯಾಸಿ ಹೆಂಗಸನ್ನ ಸಂಪೂರ್ಣವಾಗಿ ತ್ಯಾಗಮಾಡಿಬಿಡಬೇಕು. ನೀವು ಆಗಲೇ ಸಿಕ್ಕಿಬಿದ್ದಿದೀರಿ; ಆದರೆ ಹೆದರಬೇಕಾಗಿಲ್ಲ.

"ಸನ್ಯಾಸಿ ಹೆಂಗಸಿನ ಚಿತ್ರಪಟ ಕೂಡ ನೋಡಕೂಡದು. ಸಾಧಾರಣ ಜನರ ಕೈಯಲ್ಲಿ ಇದು ಸಾಧ್ಯವಿಲ್ಲ. ಸ. ರಿ. ಗ. ಮ. ಪ. ಧ. ನಿ. 'ನಿ' ಯಲ್ಲಿ ಹೆಚ್ಚು ಹೊತ್ತು ನಿಲ್ಲಲಾಗುವುದಿಲ್ಲ.

"ಸನ್ಯಾಸಿ ವೀರ್ಯ ಕಳೆದುಕೊಳ್ಳುವುದೆಂದರೆ ಬಹಳ ಕೆಟ್ಟದ್ದು. ಆದ್ದರಿಂದ ಅವರು ಬಹಳ ಎಚ್ಚರಿಕೆಯಿಂದ ಇರಬೇಕು—ಹೆಂಗಸು ಕಣ್ಣಿಗೆ ಬೀಳದ ರೀತಿಯಲ್ಲಿ. ಹೆಂಗಸು ಭಕ್ತೆಯಾಗಿದ್ದರೂ ಆಕೆಯಿಂದ ಬಹಳ ದೂರದಲ್ಲೇ ಇರಬೇಕು. ಹೆಂಗಸಿನ ರೂಪ ಕಣ್ಣಿಗೆ ಬೀಳುವುದೇ ಹಾನಿಕರ. ಜಾಗ್ರದವಸ್ಥೆಯಲ್ಲಲ್ಲದಿದ್ದರೂ ಸ್ವಪ್ನಾವಸ್ಥೆಯಲ್ಲಿ ವೀರ್ಯ ಪತನವಾಗಿಬಿಡುತ್ತದೆ.

"ಸನ್ಯಾಸಿ ಜಿತೇಂದ್ರಿಯನಾಗಿದ್ದರೂ ಲೋಕಶಿಕ್ಷಣಕ್ಕಾಗಿ ಹೆಂಗಸಿನೊಡನೆ ಮಾತುಕತೆ ಆಡಕೂಡದು. ಹೆಂಗಸು ಭಕ್ತೆಯಾಗಿದ್ದರೂ ಆಕೆಯೊಡನೆ ಹೆಚ್ಚು ಹೊತ್ತು ಮಾತಾಡಕೂಡದು.

"ಸನ್ಯಾಸಿಯದು ನಿರ್ಜಲ ಏಕಾದಶಿ. ಇನ್ನೆರಡು ವಿಧದ ಏಕಾದಶಿಗಳಿವೆ—ಹಣ್ಣು ಹಂಪಲ ತಿಂದು, ಪೂರಿ ಪಲ್ಯ ತಿಂದು. ಪೂರಿ ಪಲ್ಯದ ಜೊತೆಗೆ ಒಂದೆರಡು ರೊಟ್ಟಿಗಳನ್ನು ಹಾಲಿನಲ್ಲಿ ನೆನಸಿ ಕೂಡ. (ಎಲ್ಲರೂ ನಗುತ್ತಿದಾರೆ.)

(ನಗುತ್ತ) "ನಿಮ್ಮ ಕೈಯಲ್ಲಿ ನಿರ್ಜಲ ಏಕಾದಶಿ ಸಾಧ್ಯವಿಲ್ಲ.

"ಒಮ್ಮೆ ಕೃಷ್ಣಕಿಶೋರ ಏಕಾದಶಿ ದಿವಸ ಪೂರಿ ಪಲ್ಯ ತಿಂದುದನ್ನು ನಾನು ನೋಡಿದೆ. ಹೃದೂಗೆ ಹೇಳಿದೆ: 'ಹೃದು, ನನಗೆ ಕೃಷ್ಣಕಿಶೋರನ ಏಕಾದಶಿ ಮಾಡಲು ಇಚ್ಛೆಯಾಗುತ್ತಿದೆ!' (ಎಲ್ಲರೂ ನಗುತ್ತಿದಾರೆ.)

ಹಾಗೇ ಒಂದು ಏಕಾದಶಿಯನ್ನ ಮಾಡಿದೆ. ಹೊಟ್ಟೊಡೆಯೋ ಹಾಗೆ ತಿಂದೆ. ಮಾರನೆ ದಿನ ಏನು ತಿನ್ನಲೂ ಆಗಲಿಲ್ಲ.'' (ನಗು.)

ಪಂಚವಟಿಗೆ ಹಠಯೋಗಿಯನ್ನು ನೋಡಿಬರಲು ಹೋಗಿದ್ದ ಭಕ್ತರೆಲ್ಲರೂ ಹಿಂದಿರುಗಿಬಂದಿದಾರೆ.

ಶ್ರೀರಾಮಕೃಷ್ಣರು ಅವರನ್ನು ಸಂಬೋಧಿಸಿ: ''ಏನು, ಆತ ನಿಮಗೆ ಹೇಗೆ ಕಂಡ? ನಿಮ್ಮ ಗಜ ಕಡ್ಡಿಯಿಂದ ಆತನನ್ನು ಅಳೆದುಬಂದಿದೀರಿ ತಾನೆ?''

ಪರಮಹಂಸರಿಗೆ ತೋರಿಬಂತು ಭಕ್ತರಲ್ಲಿ ಬಹುಭಾಗ ಜನರಿಗೆ ಆ ಹಠಯೋಗಿಗೆ ದುಡ್ಡು ಕೊಡಲು ಇಚ್ಛೆಯಿಲ್ಲದಿರುವ ಹಾಗೆ.

ಶ್ರೀರಾಮಕೃಷ್ಣರು: ''ಸಾಧುವಿಗೇನಾದರೂ ದುಡ್ಡು ಕೊಡಬೇಕಾಗಿ ಬಂದರೆ, ನಿಮಗೆ ಆತನನ್ನ ಕಂಡರೆ ಆಗೋದಿಲ್ಲ. ರಾಜೇಂದ್ರಮಿತ್ರನಿಗೆ ಎಂಟುನೂರು ರೂಪಾಯಿ ಸಂಬಳ ತಿಂಗಳಿಗೆ. ಪ್ರಯಾಗದಲ್ಲಿ ಕುಂಭ-ಮೇಳ ನೋಡಿ ಬಂದಿದ್ದ. ನಾನು ಆತನನ್ನು ಕೇಳಿದೆ: 'ಏನು ವಿಶೇಷ? ಮೇಳದಲ್ಲಿ ಯಾವಾವ ರೀತಿಯ ಸಾಧುಗಳನ್ನು ನೋಡಿಬಂದೆ?' ರಾಜೇಂದ್ರ ಉತ್ತರವಿತ್ತ: 'ಎಲ್ಲಿ, ಅಂಥ ದೊಡ್ಡ ಸಾಧುಗಳೇನು ಕಣ್ಣಿಗೇ ಬೀಳಲಿಲ್ಲವಲ್ಲ. ಒಬ್ಬರೇನೊ ಕಣ್ಣಿಗೆ ಬಿದ್ದರು.' ಆದರೆ ಅವರೂ ಹಣ ಸ್ವೀಕರಿಸುತ್ತಿದ್ದರು.'

''ನನಗೆ ನಾನೇ ಹೇಳಿಕೊಳ್ಳುತ್ತೇನೆ: 'ಸಾಧುವಿಗೆ ಯಾರೂ ದುಡ್ಡು, ಕಾಸು ಕೊಡದೆ ಇದ್ದರೆ ಆತ ಹೊಟ್ಟೆ ಸಾಕೋ ಬಗೆ ಹೇಗೆ?' ಇಲ್ಲಿ ದಕ್ಷಿಣೆ ಕೊಡಬೇಕಾಗಿಲ್ಲ; ಆದ್ದರಿಂದ ಎಲ್ಲರೂ ಬರುತ್ತಿದಾರೆ. ನನಗೆ ನಾನೇ ಹೇಳಿಕೊಳ್ಳುತ್ತೇನೆ: 'ಆಹಾ! ಅವರು ಹಣವನ್ನ ಬಹಳವಾಗಿ ಪ್ರೀತಿಸುತ್ತಾರೆ. ಅವರು ಅದರಲ್ಲೇ ತೃಪ್ತರಾಗಿರಲಿ.'''

ಪರಮಹಂಸರು ಈಗ ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿದಾರೆ. ಒಬ್ಬ ಭಕ್ತ ಚಿಕ್ಕ ಮಂಚದ ಉತ್ತರದ ಕೊನೆಯಲ್ಲಿ ಕುಳಿತು ಅವರ ಪಾದಗಳನ್ನು ಮೆಲ್ಲಗೆ ಒತ್ತುತ್ತಿದಾನೆ. ಪರಮಹಂಸರು ಆತನಿಗೆ ಮೆಲ್ಲಗೆ ಹೇಳುತ್ತಿದಾರೆ: ''ಯಾರು ನಿರಾಕಾರನೊ, ಆತನೇ ಸಾಕಾರನಾಗಿದಾನೆ. ಸಾಕಾರವನ್ನೂ ಒಪ್ಪಬೇಕು. ಕಾಳಿಯ ರೂಪವನ್ನು ಚಿಂತಿಸುತ್ತ ಚಿಂತಿಸುತ್ತ ಮುಂದುವರಿದರೆ ಸಾಧಕನಿಗೆ ಕಾಳಿಯ ರೂಪದರ್ಶನವೇ ಆಗುತ್ತದೆ. ಅನಂತರ ನೋಡಬಹುದು ಆ ರೂಪವೇ ಅಖಂಡದಲ್ಲಿ ಲೀನವಾಗುವುದನ್ನ. ಯಾರು ಅಖಂಡ ಸಚ್ಚಿದಾನಂದನೊ ಆತನೇ ಕಾಳಿ.''

ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಮಹಿಮ-ಚರಣನೇ ಮೊದಲಾದ ಭಕ್ತರೊಡನೆ ಕುಳಿತು ಆ ಹಠಯೋಗಿಯ ಸಂಬಂಧ ವಾಗಿ ಮಾತುಕತೆ ಆಡುತ್ತಿದಾರೆ. ಈಗ ಮಾತು ಕೃಷ್ಣಕಿಶೋರನ ಮಗ ರಾಮಪ್ರಸನ್ನನ ಸಂಬಂಧವಾಗಿ ಆರಂಭವಾಯಿತು. ಪರಮಹಂಸರಿಗೆ ಆ ಯುವಕನನ್ನು ಕಂಡರೆ ಬಹಳ ಪ್ರೀತಿ.

ಶ್ರೀ ರಾಮಕೃಷ್ಣರು: "ರಾಮಪ್ರಸನ್ನ ಗೊತ್ತುಗುರಿಯಿಲ್ಲದೆ ಸುಮ್ಮನೆ ಅಲೆದಾಡುತ್ತಿರುತ್ತಾನೆ. ಅಂದು ಇಲ್ಲಿಗೆ ಬಂದು ಕುಳಿತಿದ್ದ. ಒಂದು ಮಾತೂ ಆಡಲಿಲ್ಲ. ಪ್ರಾಣಾಯಾಮ ಮಾಡುತ್ತ ಮೂಗಿನ ಹೊಳ್ಳೆ ಗಳನ್ನು ಅದುಮಿ ಹಿಡಿದು ಕುಳಿತಿದ್ದ. ತಿನ್ನೋಕೆ ಕೊಟ್ಟೆ. ಮುಟ್ಟಲಿಲ್ಲ. ಇನ್ನೊಂದು ದಿನ ಕರೆದು ಇಲ್ಲಿ ಕೂರಿಸಿದೆ. ಕಾಲ ಮೇಲೆ ಕಾಲು ಹಾಕಿ-ಕೊಂಡು ಕುಳಿತುಕೊಂಡ—ಕ್ಯಾಪ್ಟೆನ್ ಕಡೆ ಕಾಲು ಚಾಚಿ. ಆತನ ತಾಯಿಯ ದುಃಖ ನೋಡಿ ನಾನು ಅಳುತ್ತಿರುತ್ತೇನೆ.

(ಮಹಿಮಚರಣನಿಗೆ) "ಆ ಹಠಯೋಗಿಯ ಸಂಬಂಧವಾಗಿ ನಿನಗೆ ಹೇಳುವಂತೆ ರಾಮಪ್ರಸನ್ನ ನನಗೆ ಹೇಳಿದಾನೆ. ದಿನದ ಖರ್ಚು ಆರೂವರೆ ಆಣೆ. ತಾನಾಗೇ ಬಂದು ಅದನ್ನು ಹೇಳುವ ಧೈರ್ಯ ಆತನಿಗಿಲ್ಲ."

ಮಹಿಮಚರಣ: "ಹೇಳಿದರೆ, ಆತನ ಮಾತಿಗೆ ಬೆಲೆ ಕೊಡು ವರಾರು?"

ಪರಮಹಂಸರು ಈಗ ತಮ್ಮ ಕೊಠಡಿಗೆ ಹಿಂದಿರುಗಿಬಂದು ತಮ್ಮ ಸ್ವಸ್ಥಾನದಲ್ಲಿ ಕುಳಿತುಕೊಂಡಿದಾರೆ. ಪಾನಿಹಾಟಿಯ ಮಣಿಸೇನ ತನ್ನ ಒಬ್ಬಿಬ್ಬರು ಸ್ನೇಹಿತರೊಡನೆ ಕೊಠಡಿಗೆ ಬಂದು ಕುಳಿತುಕೊಂಡು ಪರಮ-ಹಂಸರ ಪೆಟ್ಟು ತಗುಲಿದ ಕೈಯ ವಿಚಾರವಾಗಿ ಅವರನ್ನು ಕೇಳಿ ತಿಳಿದು ಕೊಳ್ಳುತ್ತಿದಾನೆ. ಆತನೊಡನೆ ಬಂದಿದ್ದ ಸ್ನೇಹಿತರಲ್ಲಿ ಒಬ್ಬ ಡಾಕ್ಟರ್. ಡಾಕ್ಟರ್ ಪ್ರತಾಪಮಜುಮದಾರ ಪರಮಹಂಸರಿಗೆ ಕೊಡುತ್ತಿದ್ದ ಔಷಧ ವನ್ನು ಆತ ಒಪ್ಪಲಿಲ್ಲ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ಆತನೇನು ಪೆದ್ದನಲ್ಲ. ಏಕೆ ನೀನು ಹಾಗೆ ಹೇಳುತ್ತಿದೀಯೆ?"

ಆ ಸಮಯಕ್ಕೆ ಸರಿಯಾಗಿ ಲಾಟು ಗಟ್ಟಿಯಾಗಿ ಕೂಗಿ ಹೇಳ ಲಾರಂಭಿಸಿದ: "ಅಯ್ಯೋ, ಔಷಧದ ಸೀಸೆ ಕೆಳಕ್ಕೆ ಬಿದ್ದು ಒಡೆದುಹೋಗಿ ಬಿಟ್ಟಿತಲ್ಲ!"

ಇನ್ನೂ ಸಾಯಂಕಾಲವಾಗಿಲ್ಲ. ಪರಮಹಂಸರು ತಮ್ಮ ಸ್ವಸ್ಥಾನದಲ್ಲಿ ಕುಳಿತು ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ. ಮಹಿಮಚರಣ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಕುಳಿತು ಮಣಿಸೇನನೊಡನೆ ಬಂದಿದ್ದ ಡಾಕ್ಟರೊಡನೆ ಉಚ್ಚಕಂಠದಿಂದ ಶಾಸ್ತ್ರಗಳ ಸಂಬಂಧವಾಗಿ ಮಾತುಕತೆ ಆಡುತ್ತಿದಾನೆ. ಪರಮಹಂಸರು ತಾವು ಕುಳಿತಲ್ಲೇ ಎಲ್ಲವನ್ನೂ ಕೇಳುತ್ತ ಸ್ವಲ್ಪ ನಕ್ಕು ಮಾಸ್ಟರಿಗೆ ಹೇಳುತ್ತಿದಾರೆ: "ಅಲ್ಲಿ ನೋಡು! ಸುಮ್ಮನೆ ಬಂಡಿ ಬಿಡುತ್ತಿದಾನೆ. ಇದು ರಜೋಗುಣದ ಪ್ರಭಾವ. ರಜೋಗುಣವಿದ್ದರೆ ಪಾಂಡಿತ್ಯ ತೋರಿಸಿಕೊಳ್ಳಬೇಕು, ಲೆಕ್ಚರ್ ಕೊಡಬೇಕು ಅಂತ ಅನಿಸುತ್ತದೆ. ಸತ್ತ್ವಗುಣದಿಂದ ಅಂತರ್ಮುಖತೆ ಉಂಟಾಗುತ್ತದೆ. ಸದ್ಗುಣಗಳನ್ನು ಬಚ್ಚಿಟ್ಟುಕೊಳ್ಳುವಂತೆ ಅದು ಪ್ರೇರೇಪಿಸುತ್ತದೆ. ಆದರೆ ಇದನ್ನು ಹೇಳಲೇ ಬೇಕಾಗುತ್ತದೆ, ಮಹಿಮಚರಣ ಬಹಳ ಒಳ್ಳೆ ದೊಡ್ಡ ಮನುಷ್ಯ. ಭಗವತ್ಸಂಬಂಧವಾದ ಮಾತುಕತೆ ಕಂಡರೆ ಬಹಳ ಉಲ್ಲಾಸ."

ಅಧರಸೇನ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮ ಮಾಡಿ ಮಾಸ್ಟರ ಹತ್ತಿರ ಕುಳಿತುಕೊಂಡ. ಈಗ ಕೆಲವು ದಿನಗಳಿಂದ ಆತ ಇಲ್ಲಿಗೆ ಬಂದಿರಲಿಲ್ಲ.

ಶ್ರೀರಾಮಕೃಷ್ಣರು: "ಏನು ಸಮಾಚಾರ? ಇಷ್ಟು ದಿನಗಳಿಂದ ಇಲ್ಲಿಗೆ ಬರಲಿಲ್ಲವಲ್ಲ ಏಕೆ?"

ಅಧರಸೇನ: "ಹೌದು, ಹೆಚ್ಚಾಗಿ ಕೆಲಸ ಬಂದುಬಿಟ್ಟಿತ್ತು. ಸ್ಕೂಲಿನ ಮೀಟಿಂಗು, ಇನ್ನೂ ಏನೇನೊ ಮೀಟಿಂಗುಗಳಿಗೆ ಹೋಗಬೇಕಾಗಿ ಬಂದುಬಿಟ್ಟಿತ್ತು."

ಶ್ರೀರಾಮಕೃಷ್ಣರು: "ಸ್ಕೂಲು, ಮೀಟಿಂಗು ಇವುಗಳಲ್ಲೇ ನಿರತನಾಗಿ ಎಲ್ಲವನ್ನೂ ಸುಮ್ಮನೆ ಮರೆತುಬಿಟ್ಟದ್ದೆಯಾ?"

ಅಧರಸೇನ ವಿನಯದಿಂದ: "ಹೌದು, ಎಲ್ಲವೂ ಮರೆತುಹೋಗಿ ಬಿಟ್ಟಿತ್ತು. ಈಗ ನಿಮ್ಮ ಕೈ ಹೇಗಿದೆ?"

ಶ್ರೀರಾಮಕೃಷ್ಣರು: "ಇಲ್ಲಿ ನೋಡು, ಇನ್ನೂ ಗುಣವಾಗಿಲ್ಲ. ಪ್ರತಾಪನ ಔಷಧವನ್ನು ತೆಗೆದುಕೊಳ್ಳುತ್ತಿದೇನೆ."

ಸ್ವಲ್ಪ ಹೊತ್ತಾದನಂತರ ಪರಮಹಂಸರು ಇದ್ದಕ್ಕಿದ್ದಹಾಗೆ ಅಧರಸೇನನ ಕಡೆ ತಿರುಗಿ ಹೇಳುತ್ತಿದಾರೆ: "ನೋಡು, ಇವೆಲ್ಲಾ ಅನಿತ್ಯ. ಮೀಟಿಂಗು, ಸ್ಕೂಲು, ಆಫೀಸು ಇವೆಲ್ಲಾ ಅನಿತ್ಯ. ಭಗವಂತನೊಬ್ಬನೇ

ವಸ್ತು ಉಳಿದುದೆಲ್ಲಾ ಅವಸ್ತು. ಇಡೀ ಮನಸ್ಸನ್ನಿಟ್ಟು ಭಗವಂತನನ್ನು ಪೂಜಿಸಬೇಕು.''

ಅಧರಸೇನ ಒಂದು ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದಾನೆ.

ಶ್ರೀರಾಮಕೃಷ್ಣರು: ''ಇವೆಲ್ಲಾ ಅನಿತ್ಯ. ಈ ಶರೀರ ಈಗಿದ್ದುದು ಈಗಿರದು. ಕಾಲವಿಳಂಬಮಾಡದೆ ಭಗವಂತನನ್ನು ಕರೆಯಲು ಉಪಕ್ರಮಿಸಬೇಕು.

''ನೀನು ಎಲ್ಲವನ್ನೂ ತ್ಯಾಗಮಾಡಬೇಕಾದ ಆವಶ್ಯಕತೆಯೇನಿಲ್ಲ. ಆಮೆಯ ಹಾಗೆ ಸಂಸಾರದಲ್ಲಿ ವಾಸಿಸು. ಆಮೆ ಸ್ವೇಚ್ಛೆಯಿಂದ ನೀರಿನಲ್ಲಿ ಈಜಾಡುತ್ತಿರುತ್ತದೆ, ಆದರೆ ಅದು ಮೊಟ್ಟೆಯನ್ನು ಮಾತ್ರ ದಡದಲ್ಲಿಟ್ಟಿರುತ್ತದೆ. ಅದರ ಇಡೀ ಮನಸ್ಸೆಲ್ಲ ಮೊಟ್ಟೆ ಎಲ್ಲೋ ಅಲ್ಲೇ.

''ಕ್ಯಾಪ್ಟೆನ್ ಎಂಥ ಒಳ್ಳೆ ಗುಣಗಳನ್ನು ಬೆಳೆಯಿಸಿಕೊಂಡಿದ್ದಾನೆ! ಪೂಜೆಗೆ ಕುಳಿತಾಗ ಆತನನ್ನು ಒಬ್ಬ ಋಷಿಯೇ ಅಂತ ಹೇಳಬಹುದು. ಕರ್ಪೂರದಿಂದ ಮಂಗಳಾರತಿ ಮಾಡುತ್ತಾನೆ. ಒಳ್ಳೊಳ್ಳೆ ಸ್ತೋತ್ರಗಳನ್ನು ಹೇಳುತ್ತಾನೆ. ಪೂಜೆ ಮುಗಿಸಿ ಎದ್ದಾಗ ಕಣ್ಣುಗಳು ಇರುವೆ ಕಡಿದುಬಿಟ್ಟವೆಯೊ ಏನೊ ಅನ್ನುವ ಹಾಗೆ ಕಾಣಬರುತ್ತವೆ. ಯಾವಾಗಲೂ ಗೀತೆ, ಭಾಗವತ ಇವೇ ಮುಂತಾದುವನ್ನು ಪಾರಾಯಣ ಮಾಡುತ್ತಿರುತ್ತಾನೆ. ಒಮ್ಮೆ ನಾನು ಆತನೆದುರು ಒಂದೆರಡು ಇಂಗ್ಲಿಷು ಶಬ್ದಗಳನ್ನು ಉಪಯೋಗಿಸಿಬಿಟ್ಟೆ. ಅದಕ್ಕೆ ಆತನಿಗೆ ಕೋಪ ಬಂದುಬಿಟ್ಟಿತು. ಹೇಳಿದ: 'ಇಂಗ್ಲಿಷು ವಿದ್ಯಾಭ್ಯಾಸ ಮಾಡಿರತಕ್ಕವರು ಭ್ರಷ್ಟಾಚಾರಿಗಳು.' ''

ಸ್ವಲ್ಪ ಹೊತ್ತಾದನಂತರ ಅಧರಸೇನ ಅತ್ಯಂತ ವಿನಯದಿಂದ ಶ್ರೀರಾಮಕೃಷ್ಣರಿಗೆ ಹೇಳುತ್ತಿದ್ದಾನೆ: ''ನೀವು ನಮ್ಮ ಮನೆಗೆ ಬಹಳ ಕಾಲದಿಂದ ಬಂದಿಲ್ಲ. ಬೈಠಕ್‌ಖಾನೆ ದುರ್ವಾಸನೆಯಿಂದ ಕೂಡಿದೆ. ಯಾವ ಕಡೆ ತಿರುಗಿ ನೋಡಿದರೂ ಕೇವಲ ಅಂಧಕಾರ.''

ಭಕ್ತನ ಈ ಮಾತು ಕೇಳಿ ಪರಮಹಂಸರ ಕರುಣೆಯ ಸಾಗರ ಅಲ್ಲೋಲಕಲ್ಲೋಲವಾಗಲಾರಂಭಿಸಿತು. ಅವರು ಇದ್ದಕ್ಕಿದ್ದಹಾಗೆ ಎದ್ದು ನಿಂತು ಭಾವಾವಿಷ್ಟರಾಗಿ ಅಧರಸೇನನ ಮತ್ತು ಮಾಸ್ಟರ ತಲೆ, ಹೃದಯಗಳನ್ನು ಸ್ಪರ್ಶಮಾಡಿ ಆಶೀರ್ವದಿಸಲಾರಂಭಿಸಿದ್ದಾರೆ. ಪ್ರೀತಿಯಿಂದ ಹೇಳುತ್ತಿದ್ದಾರೆ: ''ನೀವು ಸಾಕ್ಷಾತ್ ನಾರಾಯಣನೇ ಆಗಿ ಕಾಣುತ್ತಿದ್ದೀರಿ. ನೀವು ವಾಸ್ತವಿಕವಾಗಿ ನನ್ನವರೇ.''

ಈಗ ಮಹಿಮಚರಣ ಕೊಠಡಿಗೆ ಬಂದು ಕುಳಿತುಕೊಳ್ಳುತ್ತಿದಾನೆ.

ಶ್ರೀ ರಾಮಕೃಷ್ಣರು ಮಹಿಮಚರಣನಿಗೆ: "ಧೈರ್ಯರೇತಸರ ಸಂಬಂಧವಾಗಿ ನಾನು ಹೇಳುತ್ತಾ ಇದ್ದೆನಲ್ಲ ಅದು ನಿಜ. ವೀರ್ಯವನ್ನ ರಕ್ಷಿಸಿಕೊಳ್ಳದಿದ್ದರೆ ಈ ಉಪದೇಶಗಳನ್ನ ಗ್ರಹಿಸಲಾಗೋದಿಲ್ಲ.

"ಒಮ್ಮೆ ಒಬ್ಬ, ಚೈತನ್ಯದೇವನನ್ನು ಕೇಳಿದ: 'ನೀವು ಈ ಭಕ್ತರಿಗೆಲ್ಲ ಇಷ್ಟೊಂದಾಗಿ ಉಪದೇಶವೀಯುತ್ತಿದೀರಿ. ಆದರೆ ಇವರು ಸರಿಯಾದ ಉನ್ನತಿಯನ್ನ ಹೊಂದುತ್ತಿಲ್ಲವಲ್ಲ, ಏಕೆ?' ಚೈತನ್ಯದೇವ ಉತ್ತರವಿತ್ತ: 'ಇವರು ಹೆಂಗಸಿನ ಸಹವಾಸ ಮಾಡಿ ಎಲ್ಲಾ ಶಕ್ತಿಯನ್ನು ಕಳೆದುಕೊಂಡು ಬಿಡುತ್ತಿದಾರೆ. ಆದ್ದರಿಂದ ಗ್ರಹಿಸಲು ಸಾಧ್ಯವಾಗುತ್ತಿಲ್ಲ.' ತೂತು ಬಿಂದಿಗೆಯಲ್ಲಿ ನೀರು ತುಂಬಿಟ್ಟರೆ, ನೀರು ಕ್ರಮಕ್ರಮೇಣ ಹೊರಕ್ಕೆ ಬಂದು ಬಿಡುತ್ತದೆ."

ಮಹಿಮಚರಣನೇ ಮೊದಲಾದ ಭಕ್ತರು ಸುಮ್ಮನೆ ಕುಳಿತಿದಾರೆ. ಸ್ವಲ್ಪ ಹೊತ್ತಾದನಂತರ ಮಹಿಮಚರಣ ಕೇಳಿಕೊಳ್ಳುತ್ತಿದಾನೆ: "ಭಗವಂತನಲ್ಲಿ ನಮಗಾಗಿ ಪ್ರಾರ್ಥನೆ ಮಾಡಿ—ನಮಗೆ ಆ ಶಕ್ತಿ ಉಂಟಾಗುವ ಹಾಗೆ."

ಶ್ರೀರಾಮಕೃಷ್ಣರು: "ಈಗಲೂ ನೀವು ಎಚ್ಚರಿಕೆಯಿಂದಿರಬೇಕು. ಆಷಾಢಮಾಸದ ಮಳೆಯ ಪ್ರವಾಹವನ್ನ ತಡೆಯುವುದೆಂದರೆ ಸ್ವಲ್ಪ

ನೀರು ಬಹಳವಾಗಿ ಹರಿದುಹೋಗಿಬಿಟ್ಟಿದೆ.

ತುಕೊಂಡುಬಿಡುತ್ತದೆ."



## ೨೧

# ದಕ್ಷಿಣೇಶ್ವರದಲ್ಲಿ ಒಂದು ದಿನ

---

೯ನೆ ಏಪ್ರಿಲ್ ೧೮೮೫, ಚೈತ್ರ ಶುಕ್ಲ ನವಮಿ, ಶನಿವಾರ.

ಮಾಸ್ಟರ್ ದಕ್ಷಿಣೇಶ್ವರದ ದೇವಾಲಯಕ್ಕೆ ಬಂದಾಗ ಬೆಳಗಿನ ಎಂಟು. ಪರಮಹಂಸರು ತಮ್ಮ ಕೊಠಡಿಯಲ್ಲಿ ನಗುಮುಖರಾಗಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ನೆಲದ ಮೇಲೆ ಕೆಲವು ಮಂದಿ ಭಕ್ತರು ಕುಳಿತುಕೊಂಡಿದಾರೆ. ಅವರ ಮಧ್ಯದಲ್ಲಿ ಪ್ರಾಣಕೃಷ್ಣ ಮುಖ್ಯೋಪಾಧ್ಯಾಯನೂ ಕುಳಿತಿದಾನೆ.

ಪ್ರಾಣಕೃಷ್ಣ ಒಂದು ದೊಡ್ಡ ಮನೆತನಕ್ಕೆ ಸೇರಿದವನು. ಮನೆ ಇದೆ ಕಲ್ಕತ್ತದ ಉತ್ತರ ಭಾಗ ಶ್ಯಾಮಪುಕುರಿನಲ್ಲಿ. ಒಂದು ಇಂಗ್ಲಿಷು ಫರ್ಮಿನಲ್ಲಿ ದೊಡ್ಡದೊಂದು ಹುದ್ದೆ ದೊರಕಿದೆ. ಗೃಹಸ್ಥನಾದರೂ ವೇದಾಂತ ಚರ್ಚೆ ಕಂಡರೆ ಬಹಳ ಪ್ರೀತಿ. ಪರಮಹಂಸರನ್ನ ಬಹಳವಾಗಿ ಪ್ರೀತಿಸುತ್ತಿದಾನೆ. ಆಗಾಗ ಬಂದು ಅವರ ದರ್ಶನ ಮಾಡಿ ಹೋಗುತ್ತಿದಾನೆ. ಒಮ್ಮೆ ಪರಮ-ಹಂಸರನ್ನು ತಮ್ಮ ಮನೆಗೂ ಕರೆದುಕೊಂಡುಹೋಗಿ ಒಂದು ದೊಡ್ಡ ಮಹೋತ್ಸವವನ್ನೇ ಏರ್ಪಡಿಸಿದ್ದ. ಪ್ರತಿದಿನವೂ ಪ್ರಾತಃಕಾಲ ಗಂಗಾ ಸ್ನಾನ ಮಾಡುವ ಅಭ್ಯಾಸ ಇಟ್ಟುಕೊಂಡಿದಾನೆ. ದೋಣಿ ಅನುಕೂಲವಾಗಿ ದೊರೆತಾಗಲೆಲ್ಲಾ ನೇರವಾಗಿ ದಕ್ಷಿಣೇಶ್ವರಕ್ಕೆ ಬಂದುಬಿಡುತ್ತಿದಾನೆ.

ಇಂದು ಬೆಳಗ್ಗೆ ಪ್ರಾಣಕೃಷ್ಣ ದಕ್ಷಿಣೇಶ್ವರಕ್ಕೆ ಒಂದು ದೋಣಿಯನ್ನು ಬಾಡಿಗೆಗೆ ತೆಗೆದುಕೊಂಡು ತನ್ನ ಜೊತೆಯಲ್ಲಿ ಮಾಸ್ಟರನ್ನೂ ಕರೆದುಕೊಂಡು ಹೋಗಲು ಆತನನ್ನು ಕರೆದ. ದೋಣಿ ದಡ ಬಿಟ್ಟು ಸ್ವಲ್ಪ ದೂರ ಮುಂದು ವರಿಯುವುದರೊಳಗೇ ನದಿಯಲ್ಲಿ ಅಲೆ ಏಳಲಾರಂಭಿಸಿದುವು. ಮಾಸ್ಟರ್ ಹೆದರಿ ಆತನನ್ನು ಕೇಳಿಕೊಳ್ಳಲಾರಂಭಿಸಿದ ತನ್ನನ್ನು ಮತ್ತೆ ದಡಕ್ಕೆ ತಲುಪಿಸಿ ಬಿಡಬೇಕೆಂದು. ಆತ ಎಷ್ಟೇ ಧೈರ್ಯ ಕೊಟ್ಟರೂ ಮಾಸ್ಟರ್ ಮಾತ್ರ ಕೇಳಲಿಲ್ಲ. ಹೇಳುತ್ತಲೇ ಇದ್ದ : "ನನ್ನನ್ನು ಇಳಿಸಿಬಿಡಿ, ನನ್ನನ್ನು ಇಳಿಸಿ ಬಿಡಿ. ನಾನು ನಡೆದು ಬರುತ್ತೇನೆ, ನಾನು ನಡೆದು ಬರುತ್ತೇನೆ." ವಿಧಿ ಯಿಲ್ಲದೆ ಪ್ರಾಣಕೃಷ್ಣ ಆತನನ್ನು ದಡಕ್ಕೆ ತಲುಪಿಸಿ ತಾನು ದಕ್ಷಿಣೇಶ್ವರಕ್ಕೆ ಮುಂದುವರಿದ. ಮಾಸ್ಟರ್ ನಡೆದು ದಕ್ಷಿಣೇಶ್ವರವನ್ನು ಮುಟ್ಟಿದಾಗ

ಪ್ರಾಣಕೃಷ್ಣ ಆಗಲೇ ದಕ್ಷಿಣೇಶ್ವರವನ್ನು ತಲುಪಿ ಪರಮಹಂಸರೊಡನೆ ಮಾತುಕತೆಯಾಡುತ್ತಿದ್ದುದು ಆತನ ಕಣ್ಣಿಗೆ ಬಿತ್ತು.

ಶ್ರೀರಾಮಕೃಷ್ಣರು ಪ್ರಾಣಕೃಷ್ಣನಿಗೆ: "ಆದರೆ ಭಗವಂತ ಮನುಷ್ಯನಲ್ಲಿ ವಿಶೇಷವಾಗಿ ವ್ಯಕ್ತವಾಗಿದ್ದಾನೆ. ನೀನು ಕೇಳಬಹುದು: 'ಯಾವ ಮನುಷ್ಯನಲ್ಲಿ ಜೀವಿಗಳ ಹಸಿವು ಬಾಯಾರಿಕೆ ಇವೇ ಮೊದಲಾದ ಧರ್ಮಗಳು ಇವೆಯೊ, ಬಹುಶಃ ಯಾರು ರೋಗ ಶೋಕಗಳಿಂದಲೂ ನರಳುತ್ತಾನೊ ಅಂಥವನನ್ನು ಅವತಾರಪುರುಷ ಎನ್ನುವಬಗೆ ಹೇಗೆ?' ಅದಕ್ಕೆ ಉತ್ತರ: 'ಪಂಚಭೂತಗಳ ಬಲೆಗೆ ಸಿಕ್ಕಿ ಬ್ರಹ್ಮನೂ ನರಳುತ್ತಿದ್ದಾನೆ' ಎಂಬುದೇ.

"ಗೊತ್ತಿಲ್ಲವೆ ನಿನಗೆ, ರಾಮಚಂದ್ರ ಸೀತೆಗಾಗಿ ಶೋಕಾಕ್ರಾಂತನಾಗಿ ಅಳುತ್ತಿದ್ದುದು? ಮತ್ತೆ ನೋಡು ಹಿರಣ್ಯಾಕ್ಷನನ್ನು ವಧಿಸಲು ಭಗವಂತ ವರಾಹ ಅವತಾರ ಎತ್ತಿದುದನ್ನ. ಹಿರಣ್ಯಾಕ್ಷನ ವಧೆಯೇನೊ ಆಯಿತು, ಆದರೆ ನಾರಾಯಣ ಮಾತ್ರ ಸ್ವಧಾಮಕ್ಕೆ ಹಿಂದಿರುಗಲು ಇಚ್ಛೆಪಡಲಿಲ್ಲ. ವರಾಹ ರೂಪಿನಲ್ಲೇ ಆನಂದದಿಂದಿರಲಾರಂಭಿಸಿದ. ಅನೇಕ ಮರಿ-ಗಿರಿ ಆಗಿಬಿಟ್ಟು ಅವುಗಳೊಡನೆ ಸಂತೋಷದಿಂದ ಇರಲಾರಂಭಿಸಿದ. ದೇವತೆಗಳು ತಮ್ಮೊಳಗೆ ತಾವೇ ಮಾತನಾಡಿಕೊಳ್ಳಲಾರಂಭಿಸಿದರು: 'ಏನು ಮಾಡೋಣ? ಭಗವಂತ ಹಿಂದಿರುಗಲಿಚ್ಛಿಸುತ್ತಿಲ್ಲವಲ್ಲ!' ಬಳಿಕ ಎಲ್ಲರೂ ಶಿವನನ್ನು ಸಮೀಪಿಸಿ ವಿಷಯ ಏನು ಎಂಬುದನ್ನು ತಿಳಿಸಿದರು. ಶಿವ ಹೋಗಿ ಆತನಿಗೆ ಬೇಕಾದಷ್ಟು ಹೇಳಿದ. ಆದರೆ ಅದೊಂದನ್ನೂ ಕಿವಿಗೆ ಹಾಕಿಕೊಳ್ಳದೆ ಆತ ತನ್ನ ಮರಿಗಳಿಗೆ ಸ್ತನ ಕೊಡಲಾರಂಭಿಸಿದ. (ಎಲ್ಲರೂ ನಗುತ್ತಿದ್ದಾರೆ.) ಆಗ ಶಿವ ತನ್ನ ತ್ರಿಶೂಲದಿಂದ ವರಾಹ ಶರೀರವನ್ನು ಸೀಳಿಹಾಕಿದ. ಬಳಿಕ ನಾರಾಯಣ ಆ ಶರೀರದಿಂದ ಹೊರಕ್ಕೆ ಬಂದು 'ಹೆ! ಹೆ! ಹೆ!' ಅಂತ ನಗುತ್ತ ತನ್ನ ಸ್ವಧಾಮಕ್ಕೆ ಹಿಂದಿರುಗಿದ."

ಪ್ರಾಣಕೃಷ್ಣ ಪರಮಹಂಸರಿಗೆ: "ಮಹಾಶಯರೆ, ಅನಾಹತ ಶಬ್ದ ಎಂಬುದು ಏನು?"

ಶ್ರೀರಾಮಕೃಷ್ಣರು: "ಅನಾಹತ ಶಬ್ದ ತಾನಾಗೇ ಸರ್ವದಾ ಆಗುತ್ತಿರುತ್ತದೆ. ಅದು ಪ್ರಣವಧ್ವನಿ. ಪರಬ್ರಹ್ಮನಿಂದ ಬರುತ್ತಿದೆ, ಯೋಗಿಗಳು ಕೇಳಬಲ್ಲರು. ವಿಷಯಾಸಕ್ತ ಜೀವಕ್ಕೆ ಅದನ್ನು ಕೇಳಲು ಸಾಧ್ಯವಿಲ್ಲ. ಯೋಗಿಗೆ ಗೊತ್ತಾಗುತ್ತದೆ ಅದು ತನ್ನ ನಾಭಿಯಿಂದಲೂ

ಮತ್ತು ಕ್ಷೀರಸಾಗರಶಾಯಿ ಪರಬ್ರಹ್ಮನಿಂದಲೂ ಹೊರಡುತ್ತಿದೆ ಎಂಬುದಾಗಿ.''

ಪ್ರಾಣಕೃಷ್ಣ : ''ಮಹಾಶಯರೆ, ಪರಲೋಕದ ಸ್ವರೂಪವೇನು?''

ಶ್ರೀರಾಮಕೃಷ್ಣರು : ''ಕೇಶವಸೇನನೂ ಅದೇ ಪ್ರಶ್ನೆಯನ್ನು ಹಾಕಿದ. ಎಲ್ಲಿಯವರೆಗೆ ಮನುಷ್ಯ ಅಜ್ಞಾನದಲ್ಲಿರುವನೊ, ಅಂದರೆ ಎಲ್ಲಿಯವರೆಗೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುವುದಿಲ್ಲವೊ ಅಲ್ಲಿಯವರೆಗೆ ಆತ ಜನ್ಮವೆತ್ತಬೇಕಾಗಿರುತ್ತದೆ. ಆದರೆ ಬ್ರಹ್ಮಜ್ಞಾನ ದೊರೆತುಬಿಟ್ಟಿತು ಎಂದರೆ ಮತ್ತೆ ಈ ಜಗತ್ತಿಗೆ ಬರಬೇಕಾಗಿರೋಲ್ಲ. ಈ ಭೂಮಿಗಾಗಲಿ ಅಥವಾ ಇನ್ನಾವ ಲೋಕಕ್ಕಾಗಲಿ ಹೋಗಬೇಕಾಗಿರೋಲ್ಲ.

''ಕುಂಬಾರ ಮಡಕೆಗಳನ್ನು ಬಿಸಿಲಿನಲ್ಲಿ ಒಣಗಿಸಲಿಡುತ್ತಾನೆ. ನೋಡಿಲ್ಲವೆ, ಅವುಗಳಲ್ಲಿ ಬೆಂದ ಮತ್ತು ಹಸಿಯ ಮಡಕೆಗಳು ಇರುವುದನ್ನ? ದನಕರುಗಳು ಅವುಗಳ ಮೇಲೆ ನಡೆದುಹೋಗಿಬಿಟ್ಟರೆ, ಅವುಗಳಲ್ಲಿ ಕೆಲವು ಒಡೆದುಹೋಗಿಬಿಡುತ್ತವೆ. ಬೆಂದ ಮಡಕೆಗಳು ಒಡೆದುಹೋಗಿದ್ದರೆ ಕುಂಬಾರ ಅವನ್ನು ಬಿಸಾಡಿಬಿಡುತ್ತಾನೆ—ಅವು ಇನ್ನು ಯಾವ ಉಪಯೋಗಕ್ಕೂ ಬಾರದೆಹೋಗುವುದರಿಂದ. ಹಸಿ ಮಡಕೆಗಳು ಒಡೆದಿದ್ದರೆ ಅವನ್ನು ಮತ್ತೆ ಆರಿಸಿಕೊಳ್ಳುತ್ತಾನೆ. ಆ ಚೂರುಗಳನ್ನು ಮುದ್ದೆ ಮಾಡಿ ಚಕ್ರದಲ್ಲಿಟ್ಟು ಹೊಸ ಮಡಕೆಗಳನ್ನು ತಯಾರುಮಾಡುತ್ತಾನೆ. ಇದೇ ರೀತಿಯಾಗಿ ಎಲ್ಲಿಯವರೆಗೆ ಭಗವಂತನ ದರ್ಶನವನ್ನ ಪಡೆದುಕೊಳ್ಳುವುದಿಲ್ಲವೊ ಅಲ್ಲಿಯವರೆಗೆ ಮನುಷ್ಯ ಕುಂಬಾರನ ಕೈಗೆ ಸಿಕ್ಕಬೇಕಾಗುತ್ತದೆ, ಎಂದರೆ ಈ ಜಗತ್ತಿನಲ್ಲಿ ಮತ್ತೆ ಮತ್ತೆ ಜನ್ಮವೆತ್ತಬೇಕಾಗುತ್ತದೆ.

''ಬೇಯಿಸಿದ ಬತ್ತವನ್ನು ಬಿತ್ತುವುದರಿಂದ ಆಗುವ ಪ್ರಯೋಜನವೇನು? ಅದು ಎಂದಿಗೂ ಪೈರಾಗಿ ಬೆಳೆಯದು. ಮನುಷ್ಯ ಜ್ಞಾನಾಗ್ನಿಯಲ್ಲಿ ಬೆಂದುದೇ ಆದರೆ ಆತನಿಂದ ಮುಂದಕ್ಕೆ ಪ್ರಜೋತ್ಪತ್ತಿ ಸಾಧ್ಯವಿಲ್ಲ. ಆತ ಮುಕ್ತನಾಗಿಬಿಡುತ್ತಾನೆ.

''ಪುರಾಣದೃಷ್ಟಿಯಿಂದ ಭಕ್ತ ಬೇರೆ, ಭಗವಂತ ಬೇರೆ. ನಾನು ಬೇರೆ, ನೀನು ಬೇರೆ. ಶರೀರ ಒಂದು ತಟ್ಟೆ ಇದ್ದ ಹಾಗೆ. ಅದರೊಳಗೆ ಮನಸ್ಸು, ಬುದ್ಧಿ, ಅಹಂಕಾರ ಇವುಗಳ ರೂಪವನ್ನು ಧರಿಸಿರುವ ನೀರು ಇದೆ. ಬ್ರಹ್ಮ ಸೂರ್ಯನಿದ್ದ ಹಾಗೆ. ಆತ ನೀರಿನಲ್ಲಿ ಪ್ರತಿಬಿಂಬಿತನಾಗುತ್ತಾನೆ. ಭಕ್ತ ಈ ಕಾರಣದಿಂದ ಭಗವದ್ರೂಪವನ್ನು ದರ್ಶನಮಾಡುತ್ತಾನೆ.

"ವೇದಾಂತ ದೃಷ್ಟಿಯಿಂದ ಬ್ರಹ್ಮ ಮಾತ್ರವೇ ವಸ್ತು ಉಳಿದುದೆಲ್ಲಾ ಮಾಯೆ, ಸ್ವಪ್ನವಿದ್ದ ಹಾಗೆ, ಅವಸ್ತು. 'ಅಹಂ' ಎಂಬ ಕೋಲು ಸಚ್ಚಿದಾನಂದ ಸಾಗರದ ಮಧ್ಯದಲ್ಲಿ ಬಿದ್ದಿದೆ. (ಮಾಸ್ಟರಿಗೆ) ನಾನು ಹೇಳುವುದರ ಕಡೆ ಲಕ್ಷ್ಯವಿಟ್ಟು ಕೇಳು. 'ಅಹಂ' ಎಂಬ ಕೋಲನ್ನು ತೆಗೆದುಹಾಕಿಬಿಟ್ಟಿದ್ದೇ ಆದರೆ ಇನ್ನು ಉಳಿದುಕೊಳ್ಳುವುದು ಆ ಅಖಂಡ ಸಚ್ಚಿದಾನಂದ ಸಾಗರ. ಆದರೆ 'ಅಹಂ' ಎಂಬ ಕೋಲು ಅಲ್ಲಿ ಬಿದ್ದಿರುವವರೆಗೆ ಸಾಗರ ಎರಡಾಗಿ ಕಾಣಬರುತ್ತದೆ—ಈ ಕಡೆ ಒಂದು ಭಾಗ, ಆ ಕಡೆ ಒಂದು ಭಾಗ ಇರುವಂತೆ. ಬ್ರಹ್ಮಜ್ಞಾನ ದೊರೆತೊಡನೇ ಮನುಷ್ಯ ಸಮಾಧಿಸ್ಥನಾಗುತ್ತಾನೆ. ಆಗ ಈ 'ಅಹಂ' ಎಂಬುದು ನಿರ್ನಾಮವಾಗುತ್ತದೆ.

"ಆದರೆ ಲೋಕಶಿಕ್ಷಣಾರ್ಥವಾಗಿ ಶಂಕರಾಚಾರ್ಯರು 'ವಿದ್ಯಾ ಅಹಂ' ಎಂಬುದನ್ನು ಇಟ್ಟುಕೊಂಡಿದ್ದರು. (ಪ್ರಾಣಕೃಷ್ಣನಿಗೆ) ಆದರೆ ಜ್ಞಾನಿಗೆ ಕೆಲವು ಲಕ್ಷಣಗಳಿವೆ. ಕೆಲಕೆಲವರು ಭಾವಿಸುತ್ತಾರೆ, ತಾವು ಜ್ಞಾನಿಗಳಾಗಿಬಿಟ್ಟದೇವೆ ಎಂದು. ಜ್ಞಾನದ ಲಕ್ಷಣಗಳೇನು? ಜ್ಞಾನಿ ಯಾರಿಗೂ ತೊಂದರೆ ತರಲಾರ. ಬಾಲಕನಂತಾಗಿಬಿಡುತ್ತಾನೆ. ಉಕ್ಕಿನ ಕತ್ತಿ ಸ್ಪರ್ಶಮಣಿಯನ್ನು ಸ್ಪರ್ಶಿಸಿತು ಎಂದರೆ ಅದು ಚಿನ್ನದ ಕತ್ತಿಯಾಗಿಬಿಡುತ್ತದೆ. ಚಿನ್ನದ ಕತ್ತಿಯಿಂದ ಯಾವ ಹಿಂಸಾ ಕಾರ್ಯವೂ ಸಾಧ್ಯವಿಲ್ಲ. ಹೊರಗಿನಿಂದ ಕಾಣಬರಬಹುದು ಜ್ಞಾನಿಗೂ ಕೋಪ, ಅಹಂಕಾರ, ಇರುವಂತೆ. ಆದರೆ ವಸ್ತುತಃ ಇವಾವೂ ಇರೋದಿಲ್ಲ.

"ದೂರದಿಂದ, ನೆಲದ ಮೇಲೆ ಬಿದ್ದಿರೋ ಸುಟ್ಟ ಹಗ್ಗ ನಿಜವಾದ ಹಗ್ಗದ ಹಾಗೆ ತೋರಿಬರುತ್ತದೆ. ಆದರೆ ಹತ್ತಿರ ಬಂದು 'ಫೂ' ಎಂದು ಊದಿದರೆ ಎಲ್ಲಾ ಹಾರಿಹೋಗಿಬಿಡುತ್ತದೆ. ಜ್ಞಾನಿಯ ಕ್ರೋಧ, ಅಹಂಕಾರ ಕೇವಲ ತೋರಿಕೆಗಳು ಮಾತ್ರ; ಅವು ನಿಜವಾದುವಲ್ಲ.

"ಮಗುವಿಗೆ ಮಮಕಾರವಿಲ್ಲ. ಅದು ಆಟದ ಮನೆಯನ್ನು ಕಟ್ಟುತ್ತದೆ. ಯಾರಾದರೂ ಅದನ್ನು ಒಂದು ಸ್ವಲ್ಪ ಮುಟ್ಟಿದರೇ ಸಾಕು 'ಹೋ!' ಎಂದು ಆಕಾಶಕ್ಕೂ ಭೂಮಿಗೂ ನೆಗೆಯುತ್ತ ಅಳಲಾರಂಭಿಸುತ್ತದೆ. ಮರುಕ್ಷಣ ತಾನೇ ಎಲ್ಲವನ್ನೂ ನೆಲಸಮಮಾಡಿಬಿಡುತ್ತದೆ. ಈ ಕ್ಷಣದಲ್ಲಿ ಅದು ತನ್ನ ಬಟ್ಟೆಯ ಮೇಲೆ ಅಷ್ಟೊಂದು ಮಮತೆಯನ್ನು ತೋರಿಸಬಹುದು. ಅದು ಹೇಳುತ್ತದೆ: 'ನಮ್ಮ ತಂದೆ ತಂದುಕೊಟ್ಟಿದಾನೆ.

ಯಾರಿಗೂ ಕೊಡೋಲ್ಲವಪ್ಪ.' ಮರುಕ್ಷಣ ಅದರ ಕೈಗೊಂದು ಬೊಂಬೆ ಕೊಟ್ಟರೆ ಸಾಕು ಎಲ್ಲವನ್ನೂ ಮರೆತುಬಿಡುತ್ತದೆ. ಬಟ್ಟೆಯನ್ನು ಒಂದು ಕಡೆ ಬಿಸಾಡಿ ಹೊರಟುಹೋಗುತ್ತದೆ.

"ಇವೆಲ್ಲ ಜ್ಞಾನಿಯ ಲಕ್ಷಣ. ಮನೆಯಲ್ಲಿ ಬೇಕಾದಷ್ಟು ಭೋಗ ವಸ್ತುಗಳಿರಬಹುದು—ಸೋಫ, ಕುರ್ಚಿ, ಚಿತ್ರಪಟ, ಕುದುರೆ, ಗಾಡಿ ಇವೇ ಮೊದಲಾದುವು. ಆದರೆ ಯಾವಾಗ ಅಂದರೆ ಆವಾಗ ಎಲ್ಲವನ್ನೂ ತ್ಯಜಿಸಿ ಕಾಶಿಗೆ ಹೊರಟುಹೋಗಿಬಿಡುತ್ತಾನೆ.

"ವೇದಾಂತ ದೃಷ್ಟಿಯಿಂದ ಜಾಗ್ರದವಸ್ಥೆಯೂ ಸತ್ಯವಾದುದಲ್ಲ. ಒಮ್ಮೆ ಒಬ್ಬ ಸೌದೆ ಕಡಿಯುವವ ಸ್ವಪ್ನ ಕಾಣುತ್ತಿದ್ದ. ಇನ್ನೊಬ್ಬ ಬಂದು ಆತನನ್ನು ಎಳಿಸಿಬಿಟ್ಟುದಕ್ಕಾಗಿ ಆತ ಸಿಟ್ಟುಗೊಂಡು ಕೂಗಿಕೊಂಡ: 'ನನ್ನನ್ನೇಕೆ ಎಳಿಸಿಬಿಟ್ಟೆ? ಸ್ವಪ್ನ ಕಾಣುತ್ತಿದ್ದೆ—ನಾನು ರಾಜನಾಗಿರೋ ಹಾಗೆ, ನನಗೆ ಏಳು ಜನ ಮಕ್ಕಳಿರೋ ಹಾಗೆ. ಮಕ್ಕಳೆಲ್ಲರೂ ಒಳ್ಳೆ ವಿದ್ಯಾವಂತರಾಗಿಯೂ, ಧನುರ್ವಿದ್ಯಾಪಾರಂಗತರಾಗಿಯೂ ಬೆಳೆಯುತ್ತಿದ್ದರು. ನಾನು ಸಿಂಹಾಸನಾರೂಢನಾಗಿ ರಾಜ್ಯಭಾರ ಮಾಡುತ್ತಿದ್ದೆ. ನನ್ನ ಆ ಸುಖಮಯ ಸಂಸಾರವನ್ನು ಏಕೆ ನೀನು ಕೆಡಿಸಿಬಿಟ್ಟೆ?' ಆ ವ್ಯಕ್ತಿ ಉತ್ತರವಿತ್ತ: 'ಅದು ಕೇವಲ ಸ್ವಪ್ನ, ಎಳಿಸಿದ್ದರಿಂದ ಯಾವ ರಾಜ್ಯ ಮುಳುಗಿಹೋಗಿಬಿಟ್ಟಿತು?' ಸೌದೆ ಕಡಿಯುವವ ಹೇಳಿದ: 'ತಿಳಿಗೇಡಿ! ನಿನಗೆ ಅರ್ಥವಾಗುತ್ತಿಲ್ಲ. ನಾನು ಸೌದೆ ಕಡಿಯುವವನಾಗಿರೋದು ಎಷ್ಟು ಸತ್ಯವೊ, ಸ್ವಪ್ನದಲ್ಲಿ ನಾನು ರಾಜನಾಗಿದ್ದುದೂ ಅಷ್ಟೇ ಸತ್ಯ. ಸೌದೆ ಕಡಿಯುವವನಾಗಿರೋದು ಸತ್ಯವಾಗಿದ್ದ ಪಕ್ಷದಲ್ಲಿ ಸ್ವಪ್ನದಲ್ಲಿ ರಾಜನಾಗಿದ್ದುದೂ ಸತ್ಯವೇ.'"

ಪ್ರಾಣಕೃಷ್ಣ ಯಾವಾಗ ನೋಡಿದರೂ ಜ್ಞಾನದ ಸಂಬಂಧವಾಗಿಯೇ ಮಾತನಾಡುತ್ತಿರುತ್ತಾನೆ. ಅದಕ್ಕಾಗಿಯೇನು ಪರಮಹಂಸರು ಜ್ಞಾನಿಯ ಅವಸ್ಥೆಯನ್ನು ವರ್ಣಿಸಿದುದು? ಈಗ ಅವರು ವಿಜ್ಞಾನಿಯ ಅವಸ್ಥೆಯ ಸಂಬಂಧವಾಗಿ ವರ್ಣಿಸುತ್ತಿದಾರೆ.

ಶ್ರೀರಾಮಕೃಷ್ಣರು: "'ನೇತಿ, ನೇತಿ', 'ಇದಲ್ಲ, ಇದಲ್ಲ' ಎಂಬ ಮಾರ್ಗ ಅನುಸರಿಸಿ ಆತ್ಮಸಾಕ್ಷಾತ್ಕಾರ ಪಡೆದುಕೊಳ್ಳುವುದಕ್ಕೆ 'ಜ್ಞಾನ' ಅಂತ ಹೆಸರು. ಈ 'ನೇತಿ, ನೇತಿ' ಮಾರ್ಗ ಅನುಸರಿಸಿದರೆ ಸಮಾಧಿಯುಂಟಾಗಿ ಆತ್ಮಜ್ಞಾನ ದೊರೆಯುತ್ತದೆ.

"'ವಿಜ್ಞಾನ' ಎಂದರೆ ವಿಶೇಷ ರೂಪದ ಜ್ಞಾನ. ಕೆಲವರು ಹಾಲಿನ ವಿಷಯವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ, ಮತ್ತೆ ಕೆಲವರು ಅದನ್ನು ಕುಡಿದಿದಾರೆ. ಯಾರು ಅದರ ವಿಷಯವಾಗಿ ಕೇವಲ ಕೇಳಿದಾನೊ ಆತ 'ಅಜ್ಞಾನಿ.' ಯಾರು ಅದನ್ನು ನೋಡಿದಾನೊ ಆತ 'ಜ್ಞಾನಿ.' ಆದರೆ ಯಾರು ಅದನ್ನು ಕುಡಿದಿದಾನೊ ಆತನಿಗೆ 'ವಿಜ್ಞಾನ' ಎಂದರೆ ಅದರ ಸಂಬಂಧವಾಗಿ ವಿಶೇಷ ರೂಪದ ಜ್ಞಾನ ಉಂಟಾಗಿರುತ್ತದೆ. ಭಗವಂತನ ದರ್ಶನ ದೊರೆತನಂತರ ಭಕ್ತ ಆತನೊಡನೆ ಮಾತುಕತೆಯಾಡುತ್ತಾನೆ—ತನ್ನ ಪರಮ ಆತ್ಮೀಯನೊ ಏನೊ ಎಂಬಂತೆ. ಇದಕ್ಕೇ 'ವಿಜ್ಞಾನ' ಅಂತ ಹೆಸರು.

"ಮೊದಮೊದಲು 'ನೇತಿ, ನೇತಿ' ಮಾರ್ಗವನ್ನ ಅನುಸರಿಸಿ ವಿವೇಚಿಸಬೇಕಾಗುತ್ತದೆ: 'ಭಗವಂತ ಪಂಚಭೂತಗಳಲ್ಲ, ಇಂದ್ರಿಯಗಳಲ್ಲ, ಮನಸ್ಸು ಬುದ್ಧಿ ಅಹಂಕಾರಗಳಲ್ಲ. ಆತ ಎಲ್ಲಾ ಚತುರ್ವಿಂಶತಿ ತತ್ತ್ವಗಳಿಗೂ ಅತೀತ' ಎಂಬುದಾಗಿ. ನಿನಗೆ ಚಾವಣಿಯ ಮೇಲಕ್ಕೆ ಹತ್ತಿ ಹೋಗಬೇಕೆಂಬ ಇಚ್ಛೆಯಿದ್ದರೆ ಹಂತಗಳನ್ನೆಲ್ಲಾ ಒಂದೊಂದಾಗಿ ತ್ಯಜಿಸಿ ಮೇಲಕ್ಕೆ ಹತ್ತಬೇಕು. ಹಂತಗಳು ಎಂದಿಗೂ ಚಾವಣಿಯಲ್ಲ. ಆದರೆ ಚಾವಣಿಯ ಮೇಲಕ್ಕೆ ಹತ್ತಿದನಂತರ ಗೊತ್ತಾಗುತ್ತದೆ, ಯಾವ ವಸ್ತುಗಳಿಂದ—ಇಟ್ಟಿಗೆ, ಸುಣ್ಣ, ಇಟ್ಟಿಗೆ ಚೂರು—ಚಾವಣಿ ತಯಾರಾಗಿದೆಯೊ ಅದೇ ವಸ್ತುಗಳಿಂದ ಹಂತಗಳೂ ತಯಾರಾಗಿವೆ ಎಂದು. ಯಾರು ಪರಬ್ರಹ್ಮನೊ ಆತನೇ ಈ ಜೀವ ಜಗತ್ತು ಆಗಿದಾನೆ, ಚತುರ್ವಿಂಶತಿ ತತ್ತ್ವ ಆಗಿದಾನೆ. ಯಾರು ಆತ್ಮನೋ ಆತನೇ ಪಂಚಭೂತಗಳಾಗಿದಾನೆ. ಮಣ್ಣು ಇಷ್ಟು ಗಟ್ಟಿಯಾಗಿದೆಯಲ್ಲ ಏಕೆ, ಅದು ಆತ್ಮದಿಂದ ಉದ್ಭವವಾಗಿದ್ದ ಪಕ್ಷದಲ್ಲಿ ಎಂಬ ಪ್ರಶ್ನೆ ಏಳಬಹುದು. ಆತನ ಇಚ್ಛೆಯಿಂದ ಎಲ್ಲವೂ ಸಾಧ್ಯ. ಶುಕ್ರ ಶೋಣಿತಗಳಿಂದ ಮೂಳೆ, ಮಾಂಸ ಉತ್ಪತ್ತಿಯಾಗುತ್ತಿಲ್ಲವೆ? ಸಮುದ್ರದ ನೊರೆ ಎಷ್ಟು ಗಟ್ಟಿಯಾಗಿ ಮಾರ್ಪಡುತ್ತದೆ!

"ವಿಜ್ಞಾನ ದೊರೆತನಂತರ ಸಂಸಾರದಲ್ಲೂ ಇರಬಹುದು. ಆಗ ಬಹಳ ಸ್ಪಷ್ಟವಾಗಿ ಅನುಭವವಾಗುತ್ತದೆ, ಭಗವಂತನೇ ಈ ಜೀವ ಜಗತ್ತು ಆಗಿದಾನೆ, ಆತ ಈ ಸಂಸಾರದಿಂದ ಪ್ರತ್ಯೇಕವಲ್ಲ ಎಂಬುದಾಗಿ.

(ಪ್ರಾಣಕೃಷ್ಣನಿಗೆ) "ವಾಸ್ತವಾಂಶವೇನೆಂದರೆ, ದಿವ್ಯಚಕ್ಷು ಬೇಕು. ಮನಸ್ಸು ಶುದ್ಧವಾಯಿತೆಂದರೇ ಅದು ಉಂಟಾಗುತ್ತದೆ. ಉದಾಹರಣೆಗೆ

ತೆಗೆದುಕೊ ಕುಮಾರಿ ಪೂಜೆಯನ್ನ. ಆಕೆ ಉಟ್ಟಬಟ್ಟೆ ಕೆಡಿಸಿಕೊಳ್ಳೋ ಅವಸ್ಥೆಯ ಬಾಲಕಿ. ಆದರೂ ಆಕೆಯನ್ನು ಸಾಕ್ಷಾತ್ ಭಗವತಿಯೇ ಎಂದು ಪೂಜಿಸಿದೆ.

"ಒಂದು ಪಕ್ಕದಲ್ಲಿ ಹೆಂಡತಿ ಮಲಗಿದ್ದಾಳೆ, ಇನ್ನೊಂದು ಪಕ್ಕದಲ್ಲಿ ಮಗು. ಮನುಷ್ಯ ಇಬ್ಬರನ್ನೂ ಪ್ರೀತಿಸುತ್ತಾನೆ, ಆದರೆ ಬೇರೆ ಬೇರೆ ಭಾವನೆಗಳಿಂದ. ಇದರಿಂದ ವ್ಯಕ್ತಪಡುತ್ತದೆ, ಎಲ್ಲವೂ ಮನಸ್ಸನ್ನು ಅವಲಂಬಿಸಿದೆ ಎಂಬುದು. ಶುದ್ಧ ಮನಸ್ಸಿಗೆ ಒಂದು ಹೊಸ ದೃಷ್ಟಿ ಉಂಟಾಗುತ್ತದೆ. ಅದು ಉಂಟಾಯಿತೆಂದರೆ ಈ ಜಗತ್ತು ಭಗವನ್ಮಯ ವಾಗಿ ಕಾಣಬರುತ್ತದೆ. ಅದು ಹಾಗಾಗಬೇಕಾದರೆ ಸಾಧನೆ ಮಾಡಬೇಕು.

"ಸಾಧನೆ ಬೇಕು. ಇದನ್ನು ತಿಳಿದುಕೊಳ್ಳಬೇಕು, ಗಂಡಸಿಗೆ ಹೆಂಗಸಿನಲ್ಲಿ ಸಹಜವಾಗೇ ಆಸಕ್ತಿಯುಂಟಾಗಿಬಿಡುತ್ತದೆ. ಹೆಂಗಸು ಸ್ವಾಭಾವಿಕವಾಗೇ ಗಂಡಸನ್ನು ಪ್ರೀತಿಸುತ್ತಾಳೆ. ಗಂಡಸೂ ಸ್ವಾಭಾವಿಕ ವಾಗೇ ಹೆಂಗಸನ್ನು ಪ್ರೀತಿಸುತ್ತಾನೆ. ಆದ್ದರಿಂದ ಅವರು ಬಹು ಬೇಗ ತಮ್ಮ ಆದರ್ಶಗಳಿಂದ ವಿಮುಖರಾಗಿಬಿಡುತ್ತಾರೆ. ಆದರೆ ಇದನ್ನು ಹೇಳ ಬೇಕಾದ್ದೆ, ಸಂಸಾರದಲ್ಲಿ ಬಹಳ ಅನುಕೂಲಗಳಿವೆ. ಅನಿವಾರ್ಯವಾದಾಗ ಸ್ವಪತ್ನಿಯ ಸಹವಾಸ ಮಾಡಿಬಿಡಬಹುದು.

(ನಗುತ್ತ) "ಏನು ಮಾಸ್ಟರ್, ಏಕೆ ನಗುತ್ತಿದೀಯೆ?"

ಮಾಸ್ಟರ್ ತನಗೆ ತಾನೇ: "ಸಂಸಾರಿಗಳು ಎಲ್ಲವನ್ನೂ ಒಮ್ಮೆಗೇ ತ್ಯಾಗಮಾಡಲು ಶಕ್ತರಾಗಿಲ್ಲವೆಂದು ಪರಮಹಂಸರು ಈ ಮಿತಿಯವರೆಗೆ ಅನುಮತಿ ಇತ್ತಿದ್ದಾರೆ. ಹದಿನಾರು ಆಣೆ ಬ್ರಹ್ಮಚರ್ಯ ಸಂಸಾರಿಗಳಿಗೆ ಎಂದಿಗೂ ಸಾಧ್ಯವಿಲ್ಲವೇ?"

ಪಂಚವಟಿಯಲ್ಲಿದ್ದ ಹಠಯೋಗಿ ಪರಮಹಂಸರ ಕೊಠಡಿಯನ್ನು ಪ್ರವೇಶಿಸುತ್ತಿದ್ದಾನೆ. ಆತ ಕೇವಲ ಹಾಲು ಕುಡಿಯುತ್ತಾನೆ, ಅಫೀಮು ಸೇವಿಸುತ್ತಾನೆ. ಅನ್ನ-ಗಿನ್ನ ಏನನ್ನೂ ತಿನ್ನುವುದಿಲ್ಲ. ಅಫೀಮಿಗೆ, ಹಾಲಿಗೆ ದುಡ್ಡಿನ ಅಭಾವ. ಪರಮಹಂಸರು ಪಂಚವಟಿಯ ಕಡೆ ಹೋಗಿದ್ದಾಗ ಆತನೊಡನೆ ಮಾತುಕತೆಯಾಡಿ ಬಂದಿದ್ದರು. ಆ ಹಠ-ಯೋಗಿ ರಾಖಾಲನನ್ನು ಕೇಳಿಕೊಂಡಿದ್ದ, ಆತ ಪರಮಹಂಸರಿಗೆ ತನ್ನ ಸ್ಥಿತಿ ಯನ್ನು ವಿವರಿಸಿ ಹೇಳಿ ತನಗೊಂದು ಏನಾದರೂ ವ್ಯವಸ್ಥೆಯನ್ನು ಮಾಡಿಸಿ

ಕೊಡಬೇಕೆಂದು. ಕಲ್ಕತ್ತದಿಂದ ಬರುವ ಬಾಬುಗಳಿಗೆ ಆ ವಿಷಯವನ್ನ ತಿಳಿಸುವುದಾಗಿ ಪರಮಹಂಸರು ಆತನಿಗೆ ತಿಳಿಯಪಡಿಸಿದ್ದರು.

ಹಠಯೋಗಿ ಶ್ರೀರಾಮಕೃಷ್ಣರಿಗೆ: "ನೀವು ರಾಖಾಲನಿಗೆ ನನ್ನ ವಿಷಯವಾಗಿ ಏನು ತಿಳಿಸಿದ್ದಿರಿ?"

ಶ್ರೀರಾಮಕೃಷ್ಣರು: "ಹೌದು, ಹೇಳಿದ್ದೆ, ನೋಡೋಣ ಯಾರಾದರೂ ಬಾಬುಗಳು ಏನಾದರೂ ಕೊಡಲಿಚ್ಛಿಸುವುದಾದರೆ. ಆದರೆ—(ಪ್ರಾಣಕೃಷ್ಣನಿಗೆ) ನಿನಗೆ ಬಹುಶಃ ಇಂಥವರನ್ನು ಕಂಡರೆ ಹಿಡಿಸೋದಿಲ್ಲ ಅಂತ ಕಾಣುತ್ತೆ?"

ಪ್ರಾಣಕೃಷ್ಣ ಸುಮ್ಮನೆ ಕುಳಿತಿದಾನೆ. ಹಠಯೋಗಿ ಕೊಠಡಿಯನ್ನು ಬಿಟ್ಟು ಹೊರಕ್ಕೆ ಹೋದ. ಪರಮಹಂಸರು ಮಾತು ಮುಂದುವರಿಸುತ್ತಿದಾರೆ.

ಶ್ರೀರಾಮಕೃಷ್ಣರು ಪ್ರಾಣಕೃಷ್ಣನೇ ಮೊದಲಾದವರಿಗೆ: "ಸಂಸಾರದಲ್ಲಿ ಇರಬೇಕಾಗಿದ್ದರೆ ಸತ್ಯವಚನದಲ್ಲಿ ಅಚಲ ಶ್ರದ್ಧೆ ಇರಬೇಕು. ಸತ್ಯದಿಂದಲೇ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದು. ಸತ್ಯವಚನದಲ್ಲಿನ ಉತ್ಸಾಹ ಈಗ ನನಗೊಂದು ಸ್ವಲ್ಪ ಕಡಮೆಯಾಗಿದೆ. ಹಿಂದೆ ಬಹಳವಾಗಿತ್ತು. ನಾನು ಹೇಳಿದ್ದೇ ಆದರೆ: 'ಸ್ನಾನಮಾಡುತ್ತೇನೆ' ಎಂದು, ಗಂಗೆಗೆ ಇಳಿಯುವುದು, ಮಂತ್ರೋಚ್ಚಾರಣೆ ಮಾಡುವುದು, ತಲೆಯ ಮೇಲೆ ಒಂದಷ್ಟು ನೀರನ್ನೂ ಪ್ರೋಕ್ಷಿಸಿಕೊಳ್ಳುವುದು ಎಲ್ಲಾ ನಡೆದುಹೋಗಿಬಿಡುತ್ತಿದ್ದುವು. ಆದರೂ ಸಂದೇಹ ಬಂದುಬಿಡುತ್ತಿತ್ತು, ಪೂರ್ಣವಾಗಿ ಸ್ನಾನ ಆಯಿತೊ ಇಲ್ಲವೊ ಎಂಬುದಾಗಿ. ಬಹಿರ್ದೇಶಕ್ಕೆ ಒಂದು ಸ್ಥಳಕ್ಕೆ ಹೋಗಬೇಕೆಂದು ಸಂಕಲ್ಪ ಮಾಡಿಕೊಂಡಿದ್ದೆನೆಂದರೆ ಅಲ್ಲಿಗೆ ಹೋಗೇ ತೀರಬೇಕಾಗುತ್ತಿತ್ತು. ಒಮ್ಮೆ ರಾಮನ ಮನೆಗೆ ಹೋಗಿದ್ದೆ ಕಲ್ಕತ್ತದಲ್ಲಿ. ಏನೊ ಸುಮ್ಮನೆ ಹೇಳಿಬಿಟ್ಟೆ: 'ಪೂರಿಯನ್ನು ತಿನ್ನೋದಿಲ್ಲ' ಎಂದು. ಆದರೆ ಊಟಕ್ಕೆ ಕುಳಿತುಕೊಂಡಾಗ ಹಸಿವಾಗಲಾರಂಭಿಸಿತು. ಮೊದಲೇ ಹೇಳಿಬಿಟ್ಟಿದ್ದೆ ಪೂರಿಯನ್ನು ತಿನ್ನೋದಿಲ್ಲವೆಂದು. ಆದ್ದರಿಂದ ಸಿಹಿ ತಿಂಡಿಗಳನ್ನು ತಿಂದೇ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕಾಗಿ ಬಂತು. (ಎಲ್ಲರೂ ನಗುತ್ತಿದಾರೆ.)

"ಆದರೆ ಈಗ ಸತ್ಯವಚನದಲ್ಲಿನ ಉತ್ಸಾಹ ನನಗೊಂದು ಸ್ವಲ್ಪ ಕಡಮೆಯಾಗಿಬಿಟ್ಟಿದೆ. ಬಹಿರ್ದೇಶಕ್ಕೆ ಹೋಗಬೇಕೆಂದೆನಿಸುತ್ತಿಲ್ಲ, ಆದರೆ

ಹಾಗೆ ಹೇಳಿಬಿಟ್ಟಿದ್ದೆ. ಆಗ ಏನು ಮಾಡುವುದು? ಆ ವಿಷಯವಾಗಿ ರಾಮನನ್ನು ಕೇಳಿದೆ. ಆತ ಹೇಳಿದ, ಹೋಗಬೇಕಾಗಿಲ್ಲವೆಂದು. ಆಗ ನನಗೇ ನಾನು ವಾದಿಸಿ ಹೇಳಿಕೊಳ್ಳಲಾರಂಭಿಸಿದೆ: 'ಎಲ್ಲರೂ ಭಗವಂತರೇ. ಆದ್ದರಿಂದ ರಾಮನೂ ಭಗವಂತನೇ. ಆತನ ಮಾತು ಏಕೆ ಕೇಳಕೂಡದು? ಆನೆಯೇನೊ ನಿಶ್ಚಯವಾಗಿ ಭಗವಂತನೇ, ಆದರೆ ಮಾವಟಿಗನೂ ಭಗವಂತನೇ. ಮಾವಟಿಗ ಹೇಳುತ್ತಿರುವಾಗ ಆನೆಯ ಹತ್ತಿರ ಬರಕೂಡದು ಎಂಗು, ಆತನ ಮಾತು ಏಕೆ ನಾನು ಕೇಳಕೂಡದು?' ಈ ರೀತಿಯ ವಿಚಾರದಿಂದ ಸತ್ಯವಚನದಲ್ಲಿನ ಉತ್ಸಾಹ ಹಿಂದೆ ಇದ್ದುದಕ್ಕಿಂತ ಈಗ ಸ್ವಲ್ಪ ಕಡಮೆಯಾಗಿದೆ.

"ಈಗ ಕಂಡುಬರುತ್ತಿದೆ, ನನಗೆ ಬೇರೊಂದು ಅವಸ್ಥೆ ಬರುತ್ತಿರುವುದು. ವೈಷ್ಣವಚರಣ ಹೇಳಿ ಬಹಳ ಕಾಲವೇ ಆಗಿಹೋಯಿತು: 'ಮನುಷ್ಯನ ಅಂತರ್ಯದಲ್ಲಿ ಭಗವಂತನ ದರ್ಶನ ಮಾಡಲು ಸಾಧ್ಯವಾಯಿತು ಎಂದರೆ, ಪೂರ್ಣ ಜ್ಞಾನ ದೊರೆತಂತೆಯೇ.' ಈಗ ಕಂಡು ಬರುತ್ತಿದೆ, ಭಗವಂತನೇ ಒಂದೊಂದು ರೂಪದಿಂದ ಸುತ್ತಾಡುತ್ತಿರುವ ಹಾಗೆ—ಕೆಲವು ವೇಳೆ ಸಾಧುವಿನ ರೂಪದಿಂದ, ಇನ್ನು ಕೆಲವು ವೇಳೆ ಮೋಸಗಾರನ ರೂಪದಿಂದ, ಮತ್ತೆ ಕೆಲವು ವೇಳೆ ಠಕ್ಕನ ರೂಪದಿಂದ. ಏಕ್ಕಾಗೇ ನಾನು ಹೇಳುವುದು: 'ಸಾಧು ಭಗವಂತ, ಮೋಸಗಾರ ಭಗವಂತ, ಠಕ್ಕ ಭಗವಂತ, ಲುಚ್ಚ ಭಗವಂತ' ಎಂದು.

"ಈಗ ನನ್ನ ಸಮಸ್ಯೆ, ನಿಮಗೆಲ್ಲ ಊಟಕ್ಕೆ ಹಾಕೋ ಬಗೆ ಹೇಗೆ ಎಂದು. ಎಲ್ಲರಿಗೂ ಊಟಕ್ಕೆ ಹಾಕಲು ಇಚ್ಛೆಯಿದೆ. ಇದಕ್ಕಾಗೇ ಒಬ್ಬೊಬ್ಬನನ್ನಾಗಿ ಇಲ್ಲಿ ಇಟ್ಟುಕೊಂಡು ಊಟಕ್ಕೆ ಹಾಕುತ್ತಿರುವುದು."

ಪ್ರಾಣಕೃಷ್ಣ ಮಾಸ್ಟರ್ ಕಡೆ ನೋಡಿ ನಗುತ್ತ: "ಒಳ್ಳೇ ಮನುಷ್ಯ! (ಪರಮಹಂಸರಿಗೆ) ಮಹಾಶಯರೆ, ದೋಣಿಯಿಂದ ಇಳಿಸಿದನಂತರವೇ ನಮ್ಮನ್ನು ಮುಂದುವರಿಯಲು ಬಿಟ್ಟುಕೊಟ್ಟ."

ಶ್ರೀರಾಮಕೃಷ್ಣರು ನಗು ನಗುತ್ತ: "ಏಕೆ? ಏನಾಗಿತ್ತು?"

ಪ್ರಾಣಕೃಷ್ಣ: "ನಮ್ಮ ದೋಣಿಗೆ ಹತ್ತಿದ್ದ. ನದಿಯಲ್ಲಿ ಸ ಅಲೆ ಏಳುತ್ತಿರುವುದನ್ನು ನೋಡಿ ಹೇಳಲಾರಂಭಿಸಿದ: 'ನನ್ನನು ಬಿಡಿ! ನನ್ನನ್ನು ಇಳಿಸಿಬಿಡಿ!' (ಮಾಸ್ಟರಿಗೆ) ಅಲ್ಲಿಂದ ಹೇಗೆ

ಮಾಸ್ಟರ್ ನಗುತ್ತ: "ನಡೆದು."

ಪರಮಹಂಸರು ನಗುತ್ತಿದ್ದಾರೆ.

ಪ್ರಾಣಕೃಷ್ಣ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ಈ ಸಲ ಮನಸ್ಸುಮಾಡಿಕೊಂಡುಬಿಟ್ಟಿದೇನೆ ಕರ್ಮವನ್ನು ಬಿಟ್ಟುಬಿಡಬೇಕೆಂದು. ಕರ್ಮಕ್ಕೆ ಕೈ ಹಾಕಿದ್ದೇ ಆದರೆ, ಬೇರೆ ಏನನ್ನೂ ಸಾಧಿಸಲಾಗುವುದಿಲ್ಲ. (ಜೊತೆಯಲ್ಲಿದ್ದ ಬಾಬುವನ್ನು ತೋರಿಸಿ) ಈತನಿಗೆ ಕೆಲಸ ಕಲಿಸಿಕೊಡುತ್ತಾ ಇದೇನೆ. ನಾನು ಬಿಟ್ಟನಂತರ ಈತ ಅದನ್ನು ಮಾಡುತ್ತಾನೆ. ಇನ್ನು ನನ್ನ ಕೈಯಲ್ಲಿ ಸಾಧ್ಯವಿಲ್ಲ."

ಶ್ರೀರಾಮಕೃಷ್ಣರು: "ಹೌದು, ಬಹಳ ಕಷ್ಟವಾದ್ದು. ಈಗ ಕೆಲವು ಕಾಲ ನಿರ್ಜನಪ್ರದೇಶದಲ್ಲಿ ಭಗವಚ್ಚಿಂತನೆ ಮಾಡುವುದು ಬಹಳ ಒಳ್ಳೆಯದು. ನೀನೇನೊ ಹೇಳುತ್ತಾ ಇದೀಯೆ ಕೆಲಸ ಬಿಟ್ಟುಬಿಡುವುದಾಗಿ, ಕ್ಯಾಪ್ಟೆನ್ ಕೂಡ ಹಾಗೇ ಹೇಳುತ್ತಿದ್ದ. ಸಂಸಾರಿಗಳೇನೊ ಹಾಗೆ ಹೇಳುತ್ತಾರೆ; ಆದರೆ ಕಾರ್ಯತಃ ಮಾಡುವುದಿಲ್ಲ.

"ಬೇಕಾದಷ್ಟು ಮಂದಿ ಪಂಡಿತರು ಸಿಕ್ಕುತ್ತಾರೆ—ಜ್ಞಾನದ ಸಂಬಂಧವಾಗಿ ಮಾತನಾಡತಕ್ಕವರು. ಬಾಯಲ್ಲೇನೊ ಹೇಳುತ್ತಾರೆ, ಕಾರ್ಯತಃ ಏನೆಂದರೆ ಏನೂ ಇಲ್ಲ. ರಣಹದ್ದೇನೊ ಬಹಳ ಎತ್ತರಕ್ಕೆ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಸತ್ತ ಪ್ರಾಣಿಗಳ ಕಡೆಗೆ. ಹಾಗೆ ಇವರು ಕೂಡ; ಎಂದರೆ ಕಾಮಕಾಂಚನಗಳಲ್ಲಿ, ಸಂಸಾರದಲ್ಲಿ ಇವ ಆಸಕ್ತಿ. ಪಂಡಿತರು ವಿವೇಕವೈರಾಗ್ಯ ಸಂಪನ್ನರಾಗಿದ್ದಾರೆ ಎಂದು ಕೇ ದಾಗ ನನಗವರನ್ನು ಕಂಡರೆ ಸ್ವಲ್ಪ ಭಯವಾಗುತ್ತದೆ. ಇಲ್ಲದಿದ್ದರೆ ಅವರು ನನ್ನ ಕಣ್ಣಿಗೆ ನಾಯಿನರಿಗಳ ಹಾಗೆ, ಆಡುಕುರಿಗಳ ಹಾಗೆ ಕಾಣ ಬರುತ್ತಾರೆ."

ಪ್ರಾಣಕೃಷ್ಣ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಆತ ಮಾಸ್ಟರನ್ನು ಕೇಳಿದ: "ಏನು, ಜೊತೆಯಲ್ಲಿ ಬರುತ್ತೀಯಾ?"

ಮಾಸ್ಟರ್: "ನಮಸ್ಕಾರ! ದಯವಿಟ್ಟು ನೀವು ಹೋಗಿಬನ್ನಿ!"

ಪ್ರಾಣಕೃಷ್ಣ ನಕ್ಕು ಹೇಳುತ್ತಿದ್ದಾನೆ: "ನೀನು ದೋಣಿಯಲ್ಲಿ '" (ಎಲ್ಲರೂ ನಗುತ್ತಿದ್ದಾರೆ.)

ಾಸ್ಟರ್ ಪಂಚವಟಿಯ ಹತ್ತಿರ ಸ್ವಲ್ಪ ಸುತ್ತಾಡುತ್ತಿದ್ದು ಬಳಿಕ ್ನಾನ ಮಾಡಿದ. ಈಗ ರಾಧಾಕಾಂತ ಮತ್ತು ಭವತಾರಿಣಿಯ

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು, ಮೈಸೂರು.

| | ರೂ. | ಆ. | ಪೈ. |
|---|---|---|---|
| ಶ್ರೀ ರಾಮಕೃಷ್ಣ ವಚನವೇದ (ಪೂರ್ವಾರ್ಧ) .. | ೧೦ | ೦ | ೦ |
| ಶ್ರೀ ರಾಮಕೃಷ್ಣ ವಚನವೇದ (ಉತ್ತರಾರ್ಧ) .. | ೧೦ | ೦ | ೦ |
| ಕೊಲಂಬೊ ಇಂದ ಆಲ್ಮೋರಕೆ .. .. .. | ೫ | ೦ | ೦ |
| ಸಂವಾದ ತರಂಗಿಣಿ (ಸ್ವಾಮಿ ಶಿಷ್ಯ ಸಂವಾದ) .. | ೫ | ೦ | ೦ |
| ಶ್ರೀರಾಮಕೃಷ್ಣ ಉಪದೇಶಾಮೃತ .. .. | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .. .. | ೩ | ೮ | ೦ |
| ಪ್ರವಚನಾದಿ .. .. .. | ೩ | ೮ | ೦ |
| ಶ್ರೀರಾಮಕೃಷ್ಣ ಶಿಷ್ಯಕೋಟಿ .. .. .. | ೩ | ೮ | ೦ |
| ಸ್ತವಕುಸುಮಾಂಜಲಿ .. .. .. | ೩ | ೪ | ೦ |
| ಭಗವಾನ್ ಶ್ರೀ ರಾಮಕೃಷ್ಣ .. .. .. | ೩ | ೦ | ೦ |
| ಪತ್ರಮಾಲೆ .. .. .. | ೩ | ೦ | ೦ |
| ಜ್ಞಾನಯೋಗ .. .. .. | ೩ | ೦ | ೦ |
| ಗುರುವಿನೊಡನೆ ದೇವರಡಿಗೆ (ಕುವೆಂಪು) .. .. | ೩ | ೦ | ೦ |
| ಜೀವ ಈಶ್ವರ ಧರ್ಮ .. .. .. | ೩ | ೦ | ೦ |
| ರಾಜಯೋಗ .. .. .. | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ .. .. .. | ೨ | ೮ | ೦ |
| ಗೀತಾ ಪತ್ರಗಳು .. .. .. | ೨ | ೮ | ೦ |
| ಮುಂಚುನೋಟಕೆ ಹಿಂದೂಧರ್ಮ .. .. .. | ೨ | ೮ | ೦ |
| ಶ್ರೀ ಶಾರದಾದೇವಿ .. .. .. | ೨ | ೦ | ೦ |
| ಸಾಧಕನ ಕೈದೀವಿಗೆ .. .. .. | ೨ | ೦ | ೦ |
| ಪರಮಾರ್ಥ ಪ್ರಸಂಗ .. .. .. | ೨ | ೦ | ೦ |
| ಹೈಮಾಚಲ ಸಾನ್ನಿಧ್ಯದಲ್ಲಿ (ಹರಿದ್ವಾರದಿಂದ ಕೇದಾರ ಬದರಿಗೆ) | ೨ | ೦ | ೦ |
| ಕರ್ಮಯೋಗ .. .. .. | ೧ | ೮ | ೦ |
| ಸನಾತನ ಭಾರತ .. .. .. | ೧ | ೮ | ೦ |
| ಬ್ರಹ್ಮಾನಂದ ವಚನಸುಧೆ .. .. .. | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .. .. .. | ೧ | ೪ | ೦ |
| ಪರಿವ್ರಾಜಕ .. .. .. | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .. .. .. | ೧ | ೪ | ೦ |
| ಭಕ್ತಿಯೋಗ .. .. .. | ೧ | ೦ | ೦ |
| ಭಾರತದಲ್ಲಿ ಶಕ್ತಿಪೂಜೆ .. .. .. | ೧ | ೦ | ೦ |

| | ರೂ. | ಅ. | ಪೈ. |
|---|---|---|---|
| ಭಕ್ತಿ : ಗೌಣೀ ಮತ್ತು ಪರಾ .. .. .. | ೧ | ೦ | ೦ |
| ದಾರಿಯಲ್ಲಿ ದೀಪಧಾರಿ .. .. .. | ೧ | ೦ | ೦ |
| ಶ್ರೀ ಗುರುದೇವರ ವಚನ .. .. .. | ೧ | ೦ | ೦ |
| ಅಮರನಾಥ ಯಾತ್ರೆ .. .. .. | ೧ | ೦ | ೦ |
| ಧನ್ಯತೆಗೆ ದಾರಿ .. .. .. | ೧ | ೦ | ೦ |
| ಅನುಷ್ಠಾನ ವೇದಾಂತ .. .. .. | ೧ | ೦ | ೦ |
| ಧ್ಯಾನ ಚಿಂತನಾಧಾರಿ .. .. .. | ೧ | ೦ | ೦ |
| ವೇದಾಂತ .. .. .. | ೦ | ೧೦ | ೦ |
| ವಿದ್ಯಾಭ್ಯಾಸ .. .. .. | ೦ | ೧೦ | ೦ |
| ಹಿಂದೂ ಧರ್ಮಸಾರ .. .. .. | ೦ | ೧೦ | ೦ |
| ವರ್ತಮಾನ ಭಾರತ .. .. .. | ೦ | ೧೦ | ೦ |
| ವಿವೇಕವಾಣಿ .. .. .. | ೦ | ೧೦ | ೦ |
| ನನ್ನ ಗುರುದೇವ .. .. .. | ೦ | ೮ | ೧ |
| ಜ್ಞಾನಮಾರ್ಗ .. .. .. | ೦ | ೮ | |
| ಭಕ್ತಿಮಾರ್ಗ .. .. .. | ೦ | ೮ | |
| ಪುನರ್ಜನ್ಮ .. .. .. | ೦ | ೮ | |
| ಚಿಕಾಗೋ ಉಪನ್ಯಾಸ .. .. .. | ೦ | ೬ | |
| ಆರತಿ .. .. .. | ೦ | ೬ | |
| ಶ್ರೀ ರಾಮಕೃಷ್ಣ (ಸಂಕ್ಷಿಪ್ತ ಜೀವನ) | ೦ | ೫ | ೬ |
| ಸ್ವಾಮಿ ವಿವೇಕಾನಂದ ,, .. .. .. | ೦ | ೫ | ೧ |
| ಶ್ರೀ ಶಾರದಾದೇವಿ ,, .. .. .. | ೦ | ೫ | |
| ಮುಮುಕ್ಷು ಲಕ್ಷಣ .. .. .. | ೦ | ೪ | |
| ನನ್ನ ಜೀವನ ಮತ್ತು ಧ್ಯೇಯ .. .. .. | ೦ | ೪ | ೮ |
| ಈಶ್ವರಾನುರಾಗ .. .. .. | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ .. .. .. | ೦ | ೪ | ೦ |
| ಭಾರತ ಮಹಿಳೆ .. .. .. | ೦ | ೪ | ೦ |
| ಕರ್ಮರಹಸ್ಯ .. .. .. | ೦ | ೪ | ೦ |
| ಸಾಧನ .. .. .. | ೦ | ೪ | ೦ |
| ಪವಹಾರಿ ಬಾಬಾ .. .. .. | ೦ | ೪ | ೦ |
| ದೇವದೂತ ಏಸುಕ್ರಿಸ್ತ .. .. .. | ೦ | ೪ | ೦ |
| ಧ್ಯಾನ .. .. .. .. | ೦ | ೪ | ೦ |

ಹಾಗೆ ಹೇಳಿಬಿಟ್ಟಿದ್ದೆ. ಆಗ ಏನು ಮಾಡುವುದು? ಆ ವಿಷಯವಾಗಿ ರಾಮ-ನನ್ನು ಕೇಳಿದೆ. ಆತ ಹೇಳಿದ, ಹೋಗಬೇಕಾಗಿಲ್ಲವೆಂದು. ಆಗ ನನಗೇ ನಾನು ವಾದಿಸಿ ಹೇಳಿಕೊಳ್ಳಲಾರಂಭಿಸಿದೆ: 'ಎಲ್ಲರೂ ಭಗವಂತರೇ. ಆದ್ದರಿಂದ ರಾಮನೂ ಭಗವಂತನೇ. ಆತನ ಮಾತು ಏಕೆ ಕೇಳಕೂಡದು? ಆನೆಯೇನೊ ನಿಶ್ಚಯವಾಗಿ ಭಗವಂತನೇ, ಆದರೆ ಮಾವಟಿಗನೂ ಭಗವಂತನೇ. ಮಾವಟಿಗ ಹೇಳುತ್ತಿರುವಾಗ ಆನೆಯ ಹತ್ತಿರ ಬರಕೂಡದು ಎಂದು, ಆತನ ಮಾತು ಏಕೆ ನಾನು ಕೇಳಕೂಡದು?' ಈ ರೀತಿಯ ವಿಚಾರದಿಂದ ಸತ್ಯವಚನದಲ್ಲಿನ ಉತ್ಸಾಹ ಹಿಂದೆ ಇದ್ದುದಕ್ಕಿಂತ ಈಗ ಸ್ವಲ್ಪ ಕಡಮೆಯಾಗಿದೆ.

"ಈಗ ಕಂಡುಬರುತ್ತಿದೆ, ನನಗೆ ಬೇರೊಂದು ಅವಸ್ಥೆ ಬರುತ್ತಿರುವುದು. ವೈಷ್ಣವಚರಣ ಹೇಳಿ ಬಹಳ ಕಾಲವೇ ಆಗಿಹೋಯಿತು: 'ಮನುಷ್ಯನ ಅಂತರ್ಯದಲ್ಲಿ ಭಗವಂತನ ದರ್ಶನ ಮಾಡಲು ಸಾಧ್ಯವಾಯಿತು ಎಂದರೆ, ಪೂರ್ಣ ಜ್ಞಾನ ದೊರೆತಂತೆಯೇ.' ಈಗ ಕಂಡು ಬರುತ್ತಿದೆ, ಭಗವಂತನೇ ಒಂದೊಂದು ರೂಪದಿಂದ ಸುತ್ತಾಡುತ್ತಿರುವ ಹಾಗೆ—ಕೆಲವು ವೇಳೆ ಸಾಧುವಿನ ರೂಪದಿಂದ, ಇನ್ನು ಕೆಲವು ವೇಳೆ ಮೋಸಗಾರನ ರೂಪದಿಂದ, ಮತ್ತೆ ಕೆಲವು ವೇಳೆ ಠಕ್ಕನ ರೂಪದಿಂದ. ಇದಕ್ಕಾಗೇ ನಾನು ಹೇಳುವುದು: 'ಸಾಧು ಭಗವಂತ, ಮೋಸಗಾರ ಭಗವಂತ, ಠಕ್ಕ ಭಗವಂತ, ಲುಚ್ಚ ಭಗವಂತ' ಎಂದು.

"ಈಗ ನನ್ನ ಸಮಸ್ಯೆ, ನಿಮಗೆಲ್ಲ ಊಟಕ್ಕೆ ಹಾಕೋ ಬಗೆ ಹೇಗೆ ಎಂದು. ಎಲ್ಲರಿಗೂ ಊಟಕ್ಕೆ ಹಾಕಲು ಇಚ್ಛೆಯಿದೆ. ಇದಕ್ಕಾಗೇ ಒಬ್ಬೊಬ್ಬನನ್ನಾಗಿ ಇಲ್ಲಿ ಇಟ್ಟುಕೊಂಡು ಊಟಕ್ಕೆ ಹಾಕುತ್ತಿರುವುದು."

ಪ್ರಾಣಕೃಷ್ಣ ಮಾಸ್ಟರ್ ಕಡೆ ನೋಡಿ ನಗುತ್ತ: "ಒಳ್ಳೇ ಮನುಷ್ಯ! (ಪರಮಹಂಸರಿಗೆ) ಮಹಾಶಯರೆ, ದೋಣಿಯಿಂದ ಇಳಿಸಿದನಂತರವೇ ನಮ್ಮನ್ನು ಮುಂದುವರಿಯಲು ಬಿಟ್ಟುಕೊಟ್ಟ."

ಶ್ರೀರಾಮಕೃಷ್ಣರು ನಗು ನಗುತ್ತ: "ಏಕೆ? ಏನಾಗಿತ್ತು?"

ಪ್ರಾಣಕೃಷ್ಣ: "ನಮ್ಮ ದೋಣಿಗೆ ಹತ್ತಿದ್ದ. ನದಿಯಲ್ಲಿ ಸ್ವಲ್ಪ ಅಲೆ ಏಳುತ್ತಿರುವುದನ್ನು ನೋಡಿ ಹೇಳಲಾರಂಭಿಸಿದ: 'ನನ್ನನ್ನು ಇಳಿಸಿ ಬಿಡಿ! ನನ್ನನ್ನು ಇಳಿಸಿಬಿಡಿ!' (ಮಾಸ್ಟರಿಗೆ) ಅಲ್ಲಿಂದ ಹೇಗೆ ಬಂದೆ?"

ಮಾಸ್ಟರ್ ನಗುತ್ತ: "ನಡೆದು."

ಪರಮಹಂಸರು ನಗುತ್ತಿದ್ದಾರೆ.

ಪ್ರಾಣಕೃಷ್ಣ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ಈ ಸಲ ಮನಸ್ಸುಮಾಡಿಕೊಂಡುಬಿಟ್ಟಿದ್ದೇನೆ ಕರ್ಮವನ್ನು ಬಿಟ್ಟುಬಿಡಬೇಕೆಂದು. ಕರ್ಮಕ್ಕೆ ಕೈ ಹಾಕಿದ್ದೇ ಆದರೆ, ಬೇರೆ ಏನನ್ನೂ ಸಾಧಿಸಲಾಗುವುದಿಲ್ಲ. (ಜೊತೆಯಲ್ಲಿದ್ದ ಬಾಬುವನ್ನು ತೋರಿಸಿ) ಈತನಿಗೆ ಕೆಲಸ ಕಲಿಸಿಕೊಡುತ್ತಾ ಇದ್ದೇನೆ. ನಾನು ಬಿಟ್ಟನಂತರ ಈತ ಅದನ್ನು ಮಾಡುತ್ತಾನೆ. ಇನ್ನು ನನ್ನ ಕೈಯಲ್ಲಿ ಸಾಧ್ಯವಿಲ್ಲ."

ಶ್ರೀರಾಮಕೃಷ್ಣರು: "ಹೌದು, ಬಹಳ ಕಷ್ಟವಾದ್ದು. ಈಗ ಕೆಲವು ಕಾಲ ನಿರ್ಜನಪ್ರದೇಶದಲ್ಲಿ ಭಗವಚ್ಚಿಂತನೆ ಮಾಡುವುದು ಬಹಳ ಒಳ್ಳೆಯದು. ನೀನೇನೊ ಹೇಳುತ್ತಾ ಇದ್ದೀಯೆ ಕೆಲಸ ಬಿಟ್ಟುಬಿಡುವುದಾಗಿ, ಕ್ಯಾಪ್ಟನ್ ಕೂಡ ಹಾಗೇ ಹೇಳುತ್ತಿದ್ದ. ಸಂಸಾರಿಗಳೇನೊ ಹಾಗೆ ಹೇಳುತ್ತಾರೆ; ಆದರೆ ಕಾರ್ಯತಃ ಮಾಡುವುದಿಲ್ಲ.

"ಬೇಕಾದಷ್ಟು ಮಂದಿ ಪಂಡಿತರು ಸಿಕ್ಕುತ್ತಾರೆ—ಜ್ಞಾನದ ಸಂಬಂಧವಾಗಿ ಮಾತನಾಡತಕ್ಕವರು. ಬಾಯಲ್ಲೇನೊ ಹೇಳುತ್ತಾರೆ, ಕಾರ್ಯತಃ ಏನೆಂದರೆ ಏನೂ ಇಲ್ಲ. ರಣಹದ್ದೇನೊ ಬಹಳ ಎತ್ತರಕ್ಕೆ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಸತ್ತ ಪ್ರಾಣಿಗಳ ಕಡೆಗೆ. ಹಾಗೇ ಇವರು ಕೂಡ; ಎಂದರೆ ಕಾಮಕಾಂಚನಗಳಲ್ಲಿ, ಸಂಸಾರದಲ್ಲಿ ಇವರಿಗೆ ಆಸಕ್ತಿ. ಪಂಡಿತರು ವಿವೇಕವೈರಾಗ್ಯ ಸಂಪನ್ನರಾಗಿದ್ದಾರೆ ಎಂದು ಕೇಳಿದಾಗ ನನಗವರನ್ನು ಕಂಡರೆ ಸ್ವಲ್ಪ ಭಯವಾಗುತ್ತದೆ. ಇಲ್ಲದಿದ್ದರೆ ಅವರು ನನ್ನ ಕಣ್ಣಿಗೆ ನಾಯಿನರಿಗಳ ಹಾಗೆ, ಆಡುಕುರಿಗಳ ಹಾಗೆ ಕಾಣಬರುತ್ತಾರೆ."

ಪ್ರಾಣಕೃಷ್ಣ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡ. ಆತ ಮಾಸ್ಟರನ್ನು ಕೇಳಿದ: "ಏನು, ಜೊತೆಯಲ್ಲಿ ಬರುತ್ತೀಯಾ?"

ಮಾಸ್ಟರ್: "ನಮಸ್ಕಾರ! ದಯವಿಟ್ಟು ನೀವು ಹೋಗಿಬನ್ನಿ!"

ಪ್ರಾಣಕೃಷ್ಣ ನಕ್ಕು ಹೇಳುತ್ತಿದ್ದಾನೆ: "ನೀನು ದೋಣಿಯಲ್ಲಿ ಇನ್ನು!" (ಎಲ್ಲರೂ ನಗುತ್ತಿದ್ದಾರೆ.)

ಮಾಸ್ಟರ್ ಪಂಚವಟಿಯ ಹತ್ತಿರ ಸ್ವಲ್ಪ ಸುತ್ತಾಡುತ್ತಿದ್ದು ಬಳಿಕ ನದಿಯಲ್ಲಿ ಸ್ನಾನ ಮಾಡಿದ. ಈಗ ರಾಧಾಕಾಂತ ಮತ್ತು ಭವತಾರಿಣಿಯ



Kali, The Divine Mother, also known as Bhavatarini
ಭವತಾರಿಣಿ ಕಾಳಿ

ದೇವಾಲಯಗಳ ಕಡೆ ಮುಂದುವರಿಯುತ್ತಿದಾನೆ. ದರ್ಶನ ಪ್ರಣಾಮ ಗಳನ್ನು ಮುಗಿಸಿದನಂತರ ಭಾವಿಸುತ್ತಿದಾನೆ: "ಕೇಳಿದೇನೆ ಭಗವಂತ ನಿರಾಕಾರ ಎಂಬುದಾಗಿ. ಹಾಗಾದರೆ ಈ ಪ್ರತಿಮೆಗಳ ಮುಂದೆ ಏಕೆ ನಾನು ಪ್ರಣಾಮ ಮಾಡಿದ್ದು? ಪರಮಹಂಸರು ದೇವದೇವಿಯರನ್ನು ಒಪ್ಪುತ್ತಾರಲ್ಲ ಅದಕ್ಕಾಗಿಯೇನು? ನನಗಂತೂ ಭಗವಂತನ ಸಂಬಂಧ ವಾಗಿ ಏನೂ ಗೊತ್ತಿಲ್ಲ, ಅರ್ಥವೂ ಆಗುವುದಿಲ್ಲ. ಪರಮಹಂಸರಂಥವರೇ ಇವುಗಳಲ್ಲಿ ಶ್ರದ್ಧೆ ಇಟ್ಟರುವಾಗ, ಇನ್ನು ನಾನಾರು? ಒಪ್ಪಿಕೊಳ್ಳಲೇ ಬೇಕು."

ಈಗ ಮಾಸ್ಟರ್, ಭವತಾರಿಣಿ ಕಾಳಿಯ ಕಡೆ ದೃಷ್ಟಿಸಿ ನೋಡು ತ್ತಿದಾನೆ. ಕಾಣಬರುತ್ತಾ ಇದೆ, ಆಕೆ ತನ್ನ ಎಡ ಹಸ್ತದ್ವಯಗಳಲ್ಲಿ— ನರಮುಂಡ ಖಡ್ಗ ಹಿಡಿದುಕೊಂಡಿದಾಳೆ. ಬಲ ಹಸ್ತದ್ವಯಗಳಿಂದ ವರ ಅಭಯಗಳನ್ನು ನೀಡುತ್ತಿದಾಳೆ. ಒಂದು ದೃಷ್ಟಿಯಿಂದ ಭಯಂಕರ ಸ್ವರೂಪಿಣಿ, ಇನ್ನೊಂದು ದೃಷ್ಟಿಯಿಂದ ಭಕ್ತವತ್ಸಲಾ ಮಾತೆ. ಎರಡು ಭಾವಗಳೂ ಸಮಾವೇಶಗೊಂಡಿವೆ. ಭಕ್ತರಿಗೆ, ದೀನಹೀನರಿಗೆ ದಯಾ-ಮಯಿ, ಪ್ರೇಮಮಯಿ ತಾಯಿ. ಆದರೆ ಇದೂ ಸತ್ಯ, ಆಕೆ ಭಯಂಕರ ಸ್ವರೂಪಿಣಿ, ಕಾಲಕಾಮಿನಿ. ಒಂದೇ ಆಧಾರದಲ್ಲಿ ಏಕೆ ಎರಡು ಭಾವವೋ ಭಗವತಿಗೇ ಗೊತ್ತು.

ಕಾಳಿಯ ಸಂಬಂಧವಾಗಿ ಪರಮಹಂಸರು ಕೊಟ್ಟಿದ್ದ ಈ ವಿವರಣೆ ಯನ್ನು ಮಾಸ್ಟರ್ ಸ್ಮರಿಸಿಕೊಳ್ಳಲಾರಂಭಿಸಿದ್ದಾನೆ. ಈಗ ತನಗೆ ತಾನೇ ಹೇಳಿ ಕೊಳ್ಳುತ್ತಿದಾನೆ: "ಕೇಳಿದೇನೆ, ಕೇಶವಸೇನ ಪರಮಹಂಸರ ಎದುರಿನಲ್ಲಿ ಕಾಳಿಯನ್ನು ಒಪ್ಪಿಕೊಂಡ ಎಂದು. ಕೇಶವಸೇನ ಹೇಳುತ್ತಿದ್ದ ಹಾಗೆ, ಮೃಣ್ಮಯ ಆಧಾರದಲ್ಲಿರುವ ಚಿನ್ಮಯಿ ದೇವಿ ಈಕೆಯೇ ಏನು?"

ಈಗ ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದು ನೆಲದಮೇಲೆ ಕುಳಿತುಕೊಂಡಿದಾನೆ. ಸ್ನಾನಮಾಡಿ ಬಂದಿರುವುದನ್ನು ನೋಡಿ ಪರಮ ಹಂಸರು ಆತನಿಗೆ ಹಣ್ಣುಹಂಪಲಗಳ ಪ್ರಸಾದವನ್ನು ಕೊಡುತ್ತಿದಾರೆ. ಮನೆಯಲ್ಲಿ ಏನೊ ತೊಂದರೆಯಾದ್ದರಿಂದ ತನ್ನ ಪಾಠಶಾಲೆಯ ಹತ್ತಿರ ಒಂದು ಮನೆಯನ್ನ ಬಾಡಿಗೆಗೆ ತೆಗೆದುಕೊಂಡಿದಾನೆ. ಆತನ ತಂದೆ ಮತ್ತು ಸಹೋದರರು ಎಂದಿನ ಪಿತ್ರಾರ್ಜಿತ ಮನೆಯಲ್ಲೇ ವಾಸವಾಗಿದಾರೆ.

ಪರಮಹಂಸರ ಇಚ್ಛೆ, ಮಾಸ್ಟರ್ ತನ್ನ ಸ್ವಂತ ಮನೆಗೇ ಹೋಗಿ ಇರಬೇಕೆಂದು. ಏಕೆಂದರೆ, ಒಟ್ಟಿಗೆ ಇರುವ ಸಂಸಾರದಲ್ಲಿ ಭಗವಂತನ ಧ್ಯಾನಕ್ಕೆ ಅನೇಕ ಅನುಕೂಲತೆಗಳಿರುತ್ತವೆ. ಪರಮಹಂಸರು ಆಗಾಗ ಈ ರೀತಿಯಾಗಿ ಹೇಳುತ್ತಿದ್ದರೂ ಆತನ ದುರ್ದೈವವಶದಿಂದ ಮನೆಗೆ ಹಿಂದಿರುಗಿಹೋಗಲು ಸಾಧ್ಯವಾಗಿಲ್ಲ. ಈಗ ಪರಮಹಂಸರು ಅದೇ ವಿಷಯವಾಗಿ ಮಾತು ಎತ್ತಿದಾರೆ.

ಶ್ರೀರಾಮಕೃಷ್ಣರು: "ಏನು, ಈ ಸಲ ನೀನು ಮನೆಗೆ ಹೋಗಿ ಬಿಡುತ್ತೀಯೆ ತಾನೆ?"

ಮಾಸ್ಟರ್: "ಎಷ್ಟೇ ಪ್ರಯತ್ನಪಟ್ಟರೂ ಅಲ್ಲಿಗೆ ಹೋಗಬೇಕು ಅಂತ ಮನಸ್ಸಿನಲ್ಲಿ ಭಾವನೆಯೇ ಏಳುತ್ತಿಲ್ಲವಲ್ಲ."

ಶ್ರೀರಾಮಕೃಷ್ಣರು: "ಏಕೆ? ಈಗ ನಿಮ್ಮ ತಂದೆ ಮನೆಯ ವಾತಾವರಣವನ್ನೇ ಬದಲಾಯಿಸಿಬಿಟ್ಟಿದಾನೆ."

ಮಾಸ್ಟರ್: "ಮನೆಯಲ್ಲಿ ನಾನು ಬಹಳ ಕಷ್ಟ ಅನುಭವಿಸಿದೇನೆ. ಅಲ್ಲಿಗೆ ಹೋಗಲು ಏನು ಮಾಡಿದರೂ ಮನಸ್ಸಿಗೆ ಇಚ್ಛೆಯಾಗುತ್ತಿಲ್ಲ."

ಶ್ರೀರಾಮಕೃಷ್ಣರು: "ನಿನಗೆ ಯಾರನ್ನ ಕಂಡರೆ ಭಯ?"

ಮಾಸ್ಟರ್: "ಅವರೆಲ್ಲರನ್ನು."

ಶ್ರೀರಾಮಕೃಷ್ಣರು ಗಂಭೀರಸ್ವರದಿಂದ: "ನಿನಗೆ ದೋಣಿ ಹತ್ತಲು ಭಯವಾಗುತ್ತದೆಯಲ್ಲ, ಇದೂ ಹಾಗೆ."

ದೇವಾಲಯಗಳಲ್ಲಿ ಮಧ್ಯಾಹ್ನದ ಪೂಜೆ ಮುಗಿದಿದೆ. ಈಗ ಮಂಗಳಾರತಿ ನಡೆಯುತ್ತಿದೆ. ಗಂಟೆ, ಜಾಗಟೆ, ತಾಳಗಳನ್ನು ಹೊಡೆಯುತ್ತಿದಾರೆ. ಕಾಳೀದೇವಾಲಯ ಆನಂದದಿಂದ ಭರಿತವಾಗಿದೆ. ಮಂಗಳಾರತಿಯ ಶಬ್ದ ಕೇಳಿ ಭಿಕ್ಷುಕರು, ಸಾಧುಗಳು, ಅತಿಥಿಗಳು ಎಲ್ಲರೂ ಅತಿಥಿಶಾಲೆಯ ಕಡೆ ತ್ವರಿತದಿಂದ ಬರುತ್ತಿದಾರೆ. ಕೆಲವರ ಕೈಯಲ್ಲಿ ಎಲೆ, ಇನ್ನು ಕೆಲವರ ಕೈಯಲ್ಲಿ ತಟ್ಟೆ, ನೀರಿನ ಪಾತ್ರೆ ಇವೆ. ಈಗ ಎಲ್ಲರೂ ಪ್ರಸಾದ ಪಡೆಯುತ್ತಿದಾರೆ. ಮಾಸ್ಟರಿಗೂ ಪ್ರಸಾದ ದೊರೆಯಿತು.

ಪರಮಹಂಸರು ಪ್ರಸಾದ ಸ್ವೀಕರಿಸಿದನಂತರ ವಿಶ್ರಮಿಸಿಕೊಳ್ಳುತ್ತಿದಾರೆ. ಈಗ ರಾಮ, ಗಿರೀಂದ್ರ ಇನ್ನೂ ಕೆಲವು ಮಂದಿ ಭಕ್ತರು ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ

ಕುಳಿತುಕೊಳ್ಳುತ್ತಿದಾರೆ. ಕೇಶವಸೇನನ ನವವಿಧಾನದ ಸಂಬಂಧವಾಗಿ ಈಗ ಮಾತುಕತೆ ಆರಂಭವಾಗಿದೆ.

ರಾಮ ಶ್ರೀರಾಮಕೃಷ್ಣರಿಗೆ: "ಮಹಾಶಯರೆ, ನವವಿಧಾನದಿಂದ ಉಪಕಾರ ಸ್ವಲ್ಪವಾದರೂ ಆಗಿದೆ ಅಂತ ನನಗೆ ತೋರಿಬರುತ್ತಿಲ್ಲ. ಕೇಶವ ಬಾಬುವಿನಲ್ಲಿ ಏನಾದರೂ ಸತ್ತ್ವವಿದ್ದ ಪಕ್ಷದಲ್ಲಿ ಆತನ ಶಿಷ್ಯರ ಅವಸ್ಥೆ ಹೀಗೇಕೆ ಆಗುತ್ತಿತ್ತು? ನನ್ನ ದೃಷ್ಟಿಯಿಂದ ಆತನೊಳಗೆ ಏನೂ ಇಲ್ಲ. ಇದು ಒಳಗೆ ಬಕ್ಕರೆ ಚೂರು ಅಲ್ಲಾಡಿಸಿ ಕೊಠಡಿಗೆ ಬೀಗ ಹಾಕಿದ ಹಾಗೆ. ಜನ ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತಾರೆ, ಬೇಕಾದಷ್ಟು ಹಣ ಒಳಗೆ 'ಝುಣ, ಝುಣ' ಅಂತ ಶಬ್ದಮಾಡುತ್ತಿದೆ ಎಂದು, ಆದರೆ ಒಳಗಿರುವುದು ಕೇವಲ ಬಕ್ಕರೆಚೂರು ಮಾತ್ರ. ಹೊರಗಿನವರಿಗೆ ಒಳಗಿನ ಸಮಾಚಾರ ಸ್ವಲ್ಪವೂ ಗೊತ್ತಿಲ್ಲ."

ಶ್ರೀರಾಮಕೃಷ್ಣರು: "ಸ್ವಲ್ಪವಾದರೂ ಸತ್ತ್ವ ಇರಲೇಬೇಕು. ಇಲ್ಲದಿದ್ದರೆ ಇಷ್ಟೊಂದು ಜನ ಕೇಶವಸೇನನನ್ನು ಗೌರವಿಸುತ್ತಿದಾರಲ್ಲ ಏಕೆ? ಅದೇ ರೀತಿಯಾಗಿ ಶಿವನಾಥನನ್ನು ಗೌರವಿಸುತ್ತಿಲ್ಲವಲ್ಲ ಏಕೆ? ಭಗವಂತನ ಇಚ್ಛೆ ಇಲ್ಲದೆ ಇತ್ತು ಎಂದರೆ ಈ ರೀತಿಯದೊಂದು ಉಪಕ್ರಮ ಆಗುತ್ತಿರಲಿಲ್ಲ.

"ಆದರೆ ಸಂಸಾರವನ್ನು ತ್ಯಜಿಸದ ಹೊರತು ಆಚಾರ್ಯನ ಕೆಲಸ ಸಾಧ್ಯವಾಗೋದಿಲ್ಲ. ಜನರು ಆತನನ್ನು ಗೌರವಿಸರು. ಅವರು ಹೇಳುತ್ತಾರೆ: 'ಈತ ಸಂಸಾರಿ. ಕಾಮಕಾಂಚನವನ್ನ ರಹಸ್ಯವಾಗಿ ಅನುಭವಿಸುತ್ತಿದಾನೆ. ನಮಗೆ ಮಾತ್ರ ಹೇಳುತ್ತಿದಾನೆ, ಭಗವಂತನೇ ಸತ್ಯ, ಸಂಸಾರ ಸ್ವಪ್ನವತ್ ಅನಿತ್ಯ ಎಂದು.' ಸರ್ವಸಂಗಪರಿತ್ಯಾಗಿ ಆಗದ ಹೊರತು ಆತನ ಮಾತನ್ನ ಎಲ್ಲರೂ ಅನುಮೋದಿಸುವುದಿಲ್ಲ. ಪ್ರಾಪಂಚಿಕರಲ್ಲಿ ಕೆಲ ಕೆಲವರು ಆತನ ಅನುಯಾಯಿಗಳಾಗಬಹುದು. ಕೇಶವ ಸಂಸಾರಿಯಾಗಿದ್ದ; ಆದ್ದರಿಂದ ಆತನ ಮನಸ್ಸು ಸಂಸಾರದ ಕಡೆಗೂ ಇತ್ತು. ಆತ ಸಂಸಾರ ರಕ್ಷಣೆಯನ್ನು ನೋಡಿಕೊಳ್ಳಬೇಕಾದ್ದೆ. ಆದ್ದರಿಂದಲೇ ಆತ ಅಷ್ಟೊಂದು ಉಪನ್ಯಾಸಗಳನ್ನು ಕೊಟ್ಟರೂ ತನ್ನ ಸಂಸಾರವನ್ನ ಒಳ್ಳೆ ಸುವ್ಯವಸ್ಥಿತ ಸ್ಥಿತಿಯಲ್ಲಿ ಇಟ್ಟುಹೋಗಿದಾನೆ. ತನ್ನ ಮಗಳನ್ನ ಎಂಥ ಶ್ರೀಮಂತನಿಗೆ ವಿವಾಹಮಾಡಿದಾನೆ! ಮನೆಯ ಒಳಕ್ಕೆ ಹೋಗಿದ್ದೆ. ದೊಡ್ಡ ದೊಡ್ಡ

ಮಂಚಗಳು. ಸಂಸಾರಕ್ಕೆ ಕಾಲು ಹಾಕಿದರೆ ಕ್ರಮೇಣ ಇವೆಲ್ಲಾ ಬಂದು ಸೇರಿಕೊಳ್ಳುತ್ತವೆ. ಭೋಗದ ಆಲಯವೇ ಸಂಸಾರ.''

ರಾಮು: ''ಆ ಮಂಚಗಳು, ಮನೆ ಎಲ್ಲವೂ ಕೇಶವಸೇನ ಪಾಲು ಮಾಡಿಕೊಂಡಾಗ ಆತನಿಗೆ ದೊರೆತುವು. ನೋಡಿ ಕೇಶವಸೇನನಂಥವರು ಪಾಲು ತೆಗೆದುಕೊಳ್ಳುವುದೆ! ಮಹಾಶಯರೆ, ನೀವು ಏನು ಬೇಕಾದರೂ ಹೇಳಿ, ವಿಜಯಬಾಬು ನನಗೆ ಹೇಳಿದ, ಕೇಶವಬಾಬು ಆತನಿಗೆ ಹೇಳಿದ ನಂತೆ: 'ನಾನು ಕ್ರಿಸ್ತನ ಅಥವಾ ಗೌರಾಂಗನ ಅಂಶ. ನಿನಗೆ ಸಲಹೆ ಕೊಡುತ್ತೇನೆ, ನೀನೇ ಅದ್ವೈತಗೋಸ್ವಾಮಿ ಎಂದು ಹೇಳಿಕೊಳ್ಳ ಲಾರಂಭಿಸು.' ಆತ ಇನ್ನೂ ಏನು ಹೇಳುತ್ತಾನೆ ನಿಮಗೆ ಗೊತ್ತೆ? ನೀವೂ ನವವಿಧಾನದ ಅನುಯಾಯಿ ಎಂದು.'' (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ನಗುನಗುತ್ತ: ''ಇದೆಲ್ಲ ಯಾರಿಗೆ ಗೊತ್ತು? ಆದರೆ ನನಗೆ ಮಾತ್ರ ಆ 'ನವವಿಧಾನ' ಎಂಬುದರ ಅರ್ಥ ಸಹ ಗೊತ್ತಿಲ್ಲ.'' (ನಗು.)

ರಾಮು: ''ಕೇಶವಸೇನನ ಶಿಷ್ಯರು ಹೇಳುತ್ತಾರೆ, ಜ್ಞಾನ ಭಕ್ತಿಗಳ ಸಾಮಂಜಸ್ಯವನ್ನು ತೋರಿಸಿದವರಲ್ಲಿ ಕೇಶವಸೇನನೇ ಮೊದಲನೆಯವನು ಎಂದು.''

ಶ್ರೀರಾಮಕೃಷ್ಣರು ಆಶ್ಚರ್ಯಚಕಿತರಾಗಿ: ''ಅದು ಹೇಗೆ? ಹಾಗಾದರೆ ಅಧ್ಯಾತ್ಮರಾಮಾಯಣ ಎಲ್ಲಿಗೆ ಹೋಗಬೇಕು? ಅದರಲ್ಲಿ ನಾರದ ರಾಮಚಂದ್ರನನ್ನು ಸ್ತುತಿಮಾಡುತ್ತಾನೆ: 'ಹೇ ರಾಮ, ವೇದ ಗಳಲ್ಲಿ ಪರಬ್ರಹ್ಮನ ವಿಷಯ ಇದೆಯಲ್ಲ, ಆ ಪರಬ್ರಹ್ಮ ನೀನೇ. ನೀನೇ ಮನುಷ್ಯರೂಪ ಧರಿಸಿ ನಮ್ಮೊಡನೆ ಇದೀಯೆ. ನೀನೂ ಮನುಷ್ಯನೇ ಎಂಬುದಾಗಿ ನಮಗೆ ತೋರಿಬರುತ್ತಿದೆ; ಆದರೆ ವಸ್ತುತಃ ನೀನು ಮನುಷ್ಯನಲ್ಲ, ಆ ಪರಬ್ರಹ್ಮನೇ.' ರಾಮಚಂದ್ರ ಹೇಳುತ್ತಾನೆ: 'ನಾರದ, ನಿನ್ನನ್ನು ಬಹುವಾಗಿ ಮೆಚ್ಚಿದೇನೆ. ಯಾವ ವರ ಬೇಕಾದರೂ ಕೇಳು.' ನಾರದ ಉತ್ತರವೀಯುತ್ತಾನೆ: 'ಇನ್ನಾವ ವರ ಬೇಕು ನನಗೆ? ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆ ಕರುಣಿಸು. ನಿನ್ನ ಭುವನಮೋಹಿನೀ ಮಾಯೆಯಿಂದ ನಾನು ಮುಗ್ಧನಾಗದ ಹಾಗೆ ಮಾಡು!' ಇಡೀ ಅಧ್ಯಾತ್ಮರಾಮಾಯಣದಲ್ಲೆಲ್ಲಾ ಕೇವಲ ಜ್ಞಾನ ಭಕ್ತಿ ವಿಷಯವೇ.''

ಕೇಶವಸೇನನ ಶಿಷ್ಯ ಅಮೃತನ ಸಂಬಂಧವಾಗಿ ಮಾತು ಈಗ ಆರಂಭವಾಯಿತು.

ರಾಮ: "ಅಮೃತಬಾಬು ಏನೋ ಒಂದು ರೀತಿಯಾಗಿ ಆಗಿ ಬಿಟ್ಟಿದಾನೆ."

ಶ್ರೀರಾಮಕೃಷ್ಣರು: "ಹೌದು, ಅಂದು ಅಸ್ವಸ್ಥನಾಗಿ ತೋರಿಬಂದ."

ರಾಮ: "ಮಹಾಶಯರೆ, ನವವಿಧಾನದವರ ಲೆಕ್ಚರ್ ಸಂಬಂಧವಾಗಿ ಸ್ವಲ್ಪ ಕೇಳಿ. ಮೃದಂಗ ಬಾಜಿಸಲು ಆರಂಭಿಸಿದೊಡನೇ ಸಭಿಕರೆಲ್ಲರೂ ಘೋಷಿಸುತ್ತಾರೆ: 'ಕೇಶವಚಂದ್ರಸೇನಕೀ ಜಯ್!' ನೀವು ಹೇಳುವುದಿಲ್ಲವೆ, ನಿಂತ ನೀರಿನಲ್ಲಿ 'ದಲ್'[1] ಬೆಳೆಯುತ್ತದೆ ಎಂದು. ಆದ್ದರಿಂದ ಅಮೃತಬಾಬು ಒಂದು ದಿನ ಲೆಕ್ಚರ್ ಕೊಡುವಾಗ ಹೇಳಿದ: 'ಸಾಧು[2] ಹೇಳಿರುವುದೇನೊ ನಿಜ, ನಿಂತ ನೀರಿನಲ್ಲಿ "ದಲ್" ಬೆಳೆಯುತ್ತದೆ ಎಂದು. ಆದರೆ ಸೋದರರಿರಾ, ನಮಗೆ "ದಲ್" ಬೇಕು, ನಮಗೆ "ದಲ್" ಬೇಕು. ನಿಜವಾಗಿಯೂ, ಸತ್ಯವಾಗಿಯೂ ಹೇಳುತ್ತೇನೆ ನಮಗೆ "ದಲ್" ಬೇಕು.'"

ಶ್ರೀರಾಮಕೃಷ್ಣರು: "ಏನಿದು! ಛೆ, ಛೆ, ಛೆ! ಇದೆಂಥ ಲೆಕ್ಚರಪ್ಪ?"

ಕೆಲಕೆಲವರಿಗೆ ಹೊಗಳಿಸಿಕೊಳ್ಳಬೇಕು ಅಂತ ಆಸೆ. ಅದರ ಸಂಬಂಧವಾಗಿ ಈಗ ಮಾತುಕತೆ ಆರಂಭವಾಯಿತು.

ಶ್ರೀರಾಮಕೃಷ್ಣರು: "'ನಿಮಾಯಿಯ ಸನ್ಯಾಸ' ಎಂಬುದರ ವಿಷಯವಾಗಿ ಒಮ್ಮೆ ಹರಿಕಥೆ ನಡೆಯುತ್ತಿತ್ತು—ಕೇಶವಸೇನನ ಮನೆಯಲ್ಲಿ. ಅಲ್ಲಿಗೆ ನನ್ನನ್ನು ಕರೆದುಕೊಂಡುಹೋದರು. ಅಂದು ಕೇಳಿದೆ ಯಾರೊ ಒಬ್ಬ ಹೇಳಿದ್ದನ್ನು, ಕೇಶವ ಪ್ರತಾಪ ಇವರಿಬ್ಬರೂ ಗೌರಾಂಗ ನಿತಾಯಿ ಎಂಬುದಾಗಿ. ಪ್ರಸನ್ನ ನನ್ನನ್ನು ಕೇಳಿದ: 'ಹಾಗಾದರೆ ನೀವು ಯಾರು?' ನೋಡಿದೆ, ಕೇಶವಸೇನ ನನ್ನ ಕಡೆಗೇ ದೃಷ್ಟಿಸಿ ನೋಡುತ್ತಿದ್ದುದನ್ನ—ನನ್ನ ಬಾಯಿಂದ ಏನು ಉತ್ತರ ಬರುತ್ತದೆ ಎಂಬುದನ್ನು ಅರಿಯಲು. ನಾನು ಹೇಳಿದೆ: 'ನಾನು ನಿಮ್ಮ ದಾಸಾನುದಾಸ, ರೇಣುವಿನ ರೇಣು.' ಕೇಶವಸೇನ ನಗುತ್ತ ಹೇಳಿದ: 'ನೀನು ಅವರನ್ನು ಹಿಡಿಯಲಾರೆ!'"

1. ಬಂಗಾಲದಲ್ಲಿ ಇದಕ್ಕೆ ಎರಡು ಅರ್ಥ ಇವೆ—"ಪಾಚಿ", "ಗುಂಪು".

2. ಶ್ರೀರಾಮಕೃಷ್ಣಪರಮಹಂಸರನ್ನುದ್ದೇಶಿಸಿ.

ರಾಮು: "ಒಮ್ಮೊಮ್ಮೆ ಕೇಶವಸೇನ ಹೇಳುತ್ತಿದ್ದ, ನೀವು 'ಜಾನ್ ದಿ ಬ್ಯಾಪ್ಟಿಸ್ಟ್' ಎಂಬುದಾಗಿ."

ಒಬ್ಬ ಭಕ್ತ: "ಅದೇ ಅಲ್ಲ, ಇನ್ನು ಕೆಲವು ವೇಳೆ ಹೇಳುತ್ತಿದ್ದ, ನೀವು 'ನೈಂಟೀಂತ್ ಸೆಂಚುರಿ ಚೈತನ್ಯ' ಎಂಬುದಾಗಿ."

ಶ್ರೀರಾಮಕೃಷ್ಣರು: "ಹಾಗೆಂದರೇನು?"

ಭಕ್ತ: "ಈಗ ನಡೆಯುತ್ತಿರುವ ಕ್ರಿಸ್ತಶಕೆಯ ಶತಮಾನದಲ್ಲಿ ಚೈತನ್ಯದೇವ ಮತ್ತೆ ಅವತರಿಸಿದಾನೆ; ಆ ವ್ಯಕ್ತಿಯೇ ನೀವು."

ಶ್ರೀರಾಮಕೃಷ್ಣರು ಅನ್ಯಮನಸ್ಕರಾಗಿ: "ಏನು ಬೇಕಾದರೂ ಹೇಳಿಕೊಳ್ಳಲಿ. ಈಗ ಹೇಳು ನನ್ನ ಕೈ ಯಾವ ರೀತಿಯಾಗಿ ಗುಣ ಹೊಂದಬಲ್ಲದು? ಈಗ ಕೇವಲ ಈ ಭಾವನೆ, ಯಾವ ರೀತಿಯಾಗಿ ನನ್ನ ಕೈಯನ್ನು ಗುಣಪಡಿಸಿಕೊಳ್ಳುವುದು ಅಂತ."

ಈಗ ತ್ರೈಲೋಕ್ಯನ ಹಾಡುಗಾರಿಕೆಯ ಸಂಬಂಧವಾಗಿ ಮಾತುಕತೆ ಆರಂಭವಾಯಿತು. ಆತ ಕೇಶವನ ಸಮಾಜದಲ್ಲಿ ಭಗವಂತನ ನಾಮಗುಣ ಕೀರ್ತನೆ ಮಾಡುತ್ತಾನೆ.

ಶ್ರೀರಾಮಕೃಷ್ಣರು: "ಆಹ! ಎಷ್ಟು ಚೆನ್ನಾದ ಹಾಡು ಆತನವು!"

ರಾಮು: "ಎಲ್ಲಾ ಚೆನ್ನಾಗಿವೆಯೇನು?"

ಶ್ರೀರಾಮಕೃಷ್ಣರು: "ಹೌದು, ಚೆನ್ನಾಗಿವೆ. ಇಲ್ಲದಿದ್ದರೆ ಅವು ನನ್ನ ಮನಸ್ಸನ್ನು ಬಹಳವಾಗಿ ಆಕರ್ಷಿಸುತ್ತವೆಯಲ್ಲ ಅದು ಹೇಗೆ?"

ರಾಮು: "ನಿಮ್ಮ ಭಾವನೆಗಳನ್ನು ತೆಗೆದುಕೊಂಡು ಆತ ಆ ಹಾಡುಗಳನ್ನು ರಚಿಸಿದಾನೆ. ಕೇಶವಸೇನ ಉಪಾಸನೆ ಸಮಯದಲ್ಲಿ ನಿಮ್ಮ ಭಾವನೆಗಳನ್ನು ವಿವರಿಸಿ ಹೇಳುತ್ತಿದ್ದ. ತ್ರೈಲೋಕ್ಯ ಅವುಗಳಿಗನುಗುಣವಾಗಿ ಹಾಡುಗಳನ್ನು ರಚಿಸುತ್ತಿದ್ದ. ಇಲ್ಲಿ ನೋಡಿ, ಈ ಹಾಡು ಹೇಗಿದೆ:

ಪ್ರೇಮದ ಪೇಟೆಯೊಳಾನಂದದ ಮೇಳ,
ಭಕ್ತಸಂಗರಸರಂಗದಿ ಕಾಣ್ ಹರಿಲೀಲಾ!

ನೀವು ಭಕ್ತರೊಡನೆ ಆನಂದದಿಂದಿರುತ್ತೀರಿ. ಅದನ್ನು ನೋಡಿಕೊಂಡು ಹೋಗಿ ಈ ವಿಧದ ಹಾಡು ರಚಿಸಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಹೋಗು! ಸುಮ್ಮನೆ ನನ್ನನ್ನು ಕಾಡಿಸಬೇಡ. ನನ್ನನ್ನೇಕೆ ಇದರಲ್ಲಿ ಸಿಕ್ಕಿಸಿ ನರಳಿಸಬೇಕು ಅಂತ ಇದೀಯೆ?" (ಎಲ್ಲರೂ ನಗುತ್ತಿದಾರೆ.)

ಗಿರೀಂದ್ರ: "ಬ್ರಾಹ್ಮಸಮಾಜದವರು ಹೇಳುತ್ತಾರೆ, ಪರಮಹಂಸರಿಗೆ 'ಫ್ಯಾಕಲ್ಟಿ ಆಫ್ ಆರ್ಗನೈಸೇಷನ್' ಇಲ್ಲ ಎಂದು."

ಶ್ರೀರಾಮಕೃಷ್ಣರು: "ಇದರ ಅರ್ಥವೇನು?"

ಮಾಸ್ಟರ್: "ನಿಮಗೆ ಸಂಘ ನಡೆಯಿಸಿಕೊಂಡು ಹೋಗುವ ಶಕ್ತಿ ಇಲ್ಲ; ನಿಮಗೆ ಬುದ್ಧಿಶಕ್ತಿ ಸ್ವಲ್ಪ ಕಡಮೆ. ಹೀಗೆ ಅವರು ಹೇಳುತ್ತಾರಂತೆ." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ರಾಮನಿಗೆ: "ಹೇಳು ನೋಡೋಣ, ನನ್ನ ಕೈಗೆ ಏಕೆ ಪೆಟ್ಟು ತಗುಲಿತು? ನೀನು ಇದರ ಸಂಬಂಧವಾಗಿ ಹಾಗೇ ನಿಂತು-ಕೊಂಡು ಒಂದು ಲೆಕ್ಚರ್ ಕೊಡು. (ನಗು.)

"ಬ್ರಾಹ್ಮಸಮಾಜದವರು ಯಾವಾಗ ನೋಡಿದರೂ 'ನಿರಾಕಾರ, ನಿರಾಕಾರ' ಅನ್ನುತ್ತಲೇ ಇರುತ್ತಾರೆ. ಅದನ್ನೇನೊ ಒಪ್ಪಿಕೊಳ್ಳೋಣ. ಹೃತ್ಪೂರ್ವಕವಾಗಿ ಆತನನ್ನು ಕರೆದರೇ ಬೇಕಾದಷ್ಟು. ಪ್ರಾರ್ಥನೆ ಹೃತ್ಪೂರ್ವಕವಾಗಿದ್ದ ಪಕ್ಷದಲ್ಲಿ—ಭಗವಂತ ಅಂತರ್ಯಾಮಿಯಾಗಿರುವುದರಿಂದ—ಆತ ನಿಶ್ಚಯವಾಗಿ ತೋರಿಸಿಕೊಟ್ಟುಬಿಡುತ್ತಾನೆ, ತನ್ನ ನಿಜ-ಸ್ವರೂಪ ಏನು ಎಂಬುದನ್ನ.

"ಆದರೆ ಇದು ಒಳ್ಳೆಯದಲ್ಲ—ನಾವು ಏನು ಹೇಳುತ್ತೇವೆಯೊ ಅದೇ ಸರಿ, ಉಳಿದವರು ಹೇಳುವುದೆಲ್ಲ ತಪ್ಪು ಎಂದು ಹೇಳುವುದು. ನಾವು ನಿರಾಕಾರ ಅಂತ ಹೇಳುತ್ತೇವೆ; ಆದ್ದರಿಂದ ಆತ ನಿರಾಕಾರನೇ ವಿನಾ ಸಾಕಾರನಲ್ಲ. ನಾವು ಸಾಕಾರ ಅಂತ ಹೇಳುತ್ತೇವೆ; ಆದ್ದರಿಂದ ಆತ ಸಾಕಾರನೇ ವಿನಾ ನಿರಾಕಾರನಲ್ಲ. ಭಗವಂತ ಇಷ್ಟೇ ಎಂದು ಹೇಳಲು ಮನುಷ್ಯನಿಗೆ ಸಾಧ್ಯವೆ?

"ಈ ರೀತಿಯಾಗಿ ವೈಷ್ಣವರ ಮತ್ತು ಶಾಕ್ತರ ಮಧ್ಯೆ ಒಂದು ವಿಧವಾದ ಕಚ್ಚಾಟ ಇದೆ. ವೈಷ್ಣವ ಹೇಳುತ್ತಾನೆ: 'ನಮ್ಮ ಕೇಶವನೇ ಏಕಮಾತ್ರ ಉದ್ಧಾರಕ.' ಶಾಕ್ತ ಹೇಳುತ್ತಾನೆ: 'ನಮ್ಮ ಭಗವತಿಯೇ ಏಕಮಾತ್ರ ಉದ್ಧಾರಕಿ.'

"ಒಮ್ಮೆ ನಾನು ವೈಷ್ಣವಚರಣನನ್ನು ಮಥುರಬಾಬುವಿನ ಹತ್ತಿರಕ್ಕೆ ಕರೆದುಕೊಂಡುಹೋಗಿದ್ದೆ. ವೈಷ್ಣವಚರಣ ಬೈರಾಗಿ ಮತ್ತೆ ಪಂಡಿತ ಆಗಿದ್ದರೂ ಒಬ್ಬ ಗೊಡ್ಡುವೈಷ್ಣವ. ಮಥುರಬಾಬುವೋ ಭಗವತಿಯ ಭಕ್ತ. ಒಳ್ಳೊಳ್ಳೆ ಮಾತುಕತೆ ನಡೆಯುತ್ತಿತ್ತು. ಇದ್ದಕ್ಕಿದ್ದಹಾಗೆ ವೈಷ್ಣವ-

ಚರಣ ಹೇಳಿಬಿಟ್ಟ: 'ಮುಕ್ತಿಯನ್ನು ಕೊಡತಕ್ಕ ಏಕಮಾತ್ರ ಕರ್ತೃ ಕೇಶವನೇ.' ಕೇಶವ ಎಂಬ ಶಬ್ದವನ್ನು ಕೇಳಿದೊಡನೇ ಮಥುರಬಾಬುವಿನ ಮುಖ ಕೆಂಪಗಾಗಿಬಿಟ್ಟಿತು. ರೇಗಿ ಹೇಳಿದ: 'ಎಲಾ ಧೂರ್ತ! ನನ್ನ—!' (ಎಲ್ಲರೂ ನಗುತ್ತಿದಾರೆ.) ಆತ ಶಾಕ್ತನಲ್ಲವೆ, ಸುಮ್ಮನೆ ಬಿಡುತ್ತಾನೆಯೆ? ಆ ಪರಿಸ್ಥಿತಿ ನೋಡಿ ನಾನು ವೈಷ್ಣವಚರಣನನ್ನು ಮೊಳಕೈಯಿಂದ ಮೆತ್ತಗೆ ತಿವಿದೆ.

"ಯಾರನ್ನ ನೋಡಿದರೂ ಜನ ಸುಮ್ಮನೆ 'ಧರ್ಮ, ಧರ್ಮ' ಅನ್ನುತ್ತಲೇ ಇರುತ್ತಾರೆ; ಆದರೆ ಇವರೊಡನೆಯೂ ಜಗಳಕಾಯುತ್ತಾರೆ, ಅವರೊಡನೆಯೂ ಜಗಳಕಾಯುತ್ತಾರೆ. ಹಿಂದೂ, ಮುಸಲ್ಮಾನ, ಬ್ರಾಹ್ಮ-ಸಮಾಜ, ಶಾಕ್ತ, ವೈಷ್ಣವ, ಶೈವ ಸಂಪ್ರದಾಯದವರೆಲ್ಲರೂ ಪರಸ್ಪರ ಜಗಳಕಾಯುತ್ತಲೇ ಇರುತ್ತಾರೆ. ಈ ಬುದ್ಧಿ ಅವರಿಗಿಲ್ಲ, ಯಾರನ್ನ ಕೃಷ್ಣ ಅಂತ ಕರೆಯುತ್ತೇವೆಯೊ ಆತನನ್ನೇ ಶಿವ, ಆತನನ್ನೇ ಆದ್ಯಾಶಕ್ತಿ ಎಂದು ಕರೆಯುತ್ತೇವೆ; ಆತನನ್ನೇ ಏಸು, ಆತನನ್ನೇ ಅಲ್ಲಾ ಎಂದು ಕರೆಯುತ್ತೇವೆ ಎಂಬುದಾಗಿ ತಿಳಿಯುವಷ್ಟು. 'ಒಬ್ಬನೇ ರಾಮನಿಗೆ ಸಹಸ್ರಾರು ಹೆಸರು.'

"ವಸ್ತು ಒಂದೇ; ಹೆಸರು ವಿವಿಧ. ಎಲ್ಲರೂ ಆ ಒಂದು ವಸ್ತುವಿಗಾಗೇ ಹುಡುಕುತ್ತಿರುವುದು; ಆದರೆ ದೇಶ, ಪಾತ್ರಕ್ಕೆ ತಕ್ಕಂತೆ ಅದಕ್ಕೇ ಬೇರೆ ಬೇರೆ ಹೆಸರು. ಒಂದು ಕೊಳಕ್ಕೆ ಅನೇಕ ಘಟ್ಟ. ಹಿಂದುಗಳು ಒಂದು ಘಟ್ಟದಿಂದ ನೀರು ತರುತ್ತಾರೆ ಬಿಂದಿಗೆಯಲ್ಲಿ—ಹೇಳುತ್ತಾರೆ 'ನೀರು' ಎಂದು. ಮುಸಲ್ಮಾನರು ಇನ್ನೊಂದು ಘಟ್ಟದಿಂದ ನೀರು ತರುತ್ತಾರೆ ಚಕ್ಕಳದ ಚೀಲದಲ್ಲಿ—ಅವರು ಹೇಳುತ್ತಾರೆ 'ಪಾನಿ' ಎಂದು. ಕ್ರಿಶ್ಚಿಯನ್ನರು ಮತ್ತೊಂದು ಘಟ್ಟದಿಂದ ನೀರು ತರುತ್ತಾರೆ—ಅವರು ಹೇಳುತ್ತಾರೆ 'ವಾಟರ್' ಎಂದು. (ಎಲ್ಲರೂ ನಗುತ್ತಿದಾರೆ.) ಯಾರಾದರೂ ಹೇಳಿದ್ದೇ ಆದರೆ, ಇಲ್ಲ ಈ ವಸ್ತು ನೀರಲ್ಲ 'ಪಾನಿ', ಅಥವಾ ಪಾನಿಯಲ್ಲ 'ವಾಟರ್', ಅಥವಾ ವಾಟರ್ ಅಲ್ಲ 'ನೀರು' ಆಗ ಸುಮ್ಮನೆ ನಗಬೇಕಾಗುತ್ತದೆ. ಇದರಿಂದಲೇ ಘರ್ಷಣೆ, ಮನಸ್ತಾಪ, ಜಗಳ; ಧರ್ಮದ ಹೆಸರಿನಲ್ಲಿ ಹೊಡೆದಾಟ, ಬಡಿದಾಟ, ಕಚ್ಚಾಟ. ಇದೆಲ್ಲ ಒಳ್ಳೆಯದಲ್ಲ. ಎಲ್ಲರೂ ಭಗವಂತನ ಕಡೆಗೇ ಹೋಗುತ್ತಿದಾರೆ. ಹೃತ್ಪೂರ್ವಕತೆ, ವ್ಯಾಕುಲತೆ ಇತ್ತು ಎಂದರೆ, ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ.

(ಮಾಸ್ಟರಿಗೆ) "ಇದು ನಿನಗೆ. ವೇದ, ಪುರಾಣ, ತಂತ್ರ—ಎಲ್ಲಾ ಶಾಸ್ತ್ರಗಳಿಗೂ ಭಗವಂತನೊಬ್ಬನೇ, ಆ ಸಚ್ಚಿದಾನಂದನೊಬ್ಬನೇ ಬೇಕೇ ವಿನಾ ಬೇರೆ ಯಾರೂ ಬೇಕಾಗಿಲ್ಲ. ಯಾರನ್ನ ವೇದ 'ಸಚ್ಚಿದಾನಂದ ಬ್ರಹ್ಮ' ಎಂಬುದಾಗಿ ಕರೆಯುವುದೊ ಆತನನ್ನೇ ತಂತ್ರ 'ಸಚ್ಚಿದಾನಂದ ಶಿವ' ಎಂಬುದಾಗಿ ಕರೆಯುತ್ತದೆ. ಆತನನ್ನೇ ಪುರಾಣ ಮತ್ತೆ 'ಸಚ್ಚಿದಾ-ನಂದ ಕೃಷ್ಣ' ಎಂಬುದಾಗಿ ಕರೆಯುತ್ತದೆ."

ಪರಮಹಂಸರಿಗೆ ಯಾರೊ ಹೇಳಿದರು, ರಾಮು ತನ್ನ ಮನೆಯಲ್ಲಿ ಸ್ವಯಂಪಾಕ ಮಾಡಿ ತಿನ್ನುತ್ತಿದಾನೆ ಎಂಬುದಾಗಿ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನೂ ಸ್ವಯಂಪಾಕ ಮಾಡಿ ತಿನ್ನುತ್ತಿದೀಯೇನು?"

ಮಾಸ್ಟರ್: "ಇಲ್ಲ."

ಶ್ರೀರಾಮಕೃಷ್ಣರು: "ಪ್ರಯತ್ನಮಾಡಿ ನೋಡು. ಸ್ವಲ್ಪ ಹಸುವಿನ ತುಪ್ಪ ಹಾಕಿಕೊಂಡು ತಿನ್ನು. ಆಗ ನಿನ್ನ ಮನಸ್ಸು ಶರೀರ ಶುದ್ಧವಾಗುತ್ತವೆ."

ರಾಮುನ ಗೃಹಕೃತ್ಯದ ಸಂಬಂಧವಾಗಿ ಈಗ ಮಾತುಕತೆ ಆರಂಭವಾಯಿತು. ರಾಮುನ ತಂದೆ ಪರಮವೈಷ್ಣವ. ಮನೆಯಲ್ಲಿ ಶ್ರೀಧರನ ನಿತ್ಯಪೂಜೆ ನಡೆಯುತ್ತಿದೆ ರಾಮುನ ತಂದೆ ಎರಡನೆ ಸಾರಿ ಮದುವೆಯಾಗಿದಾನೆ—ಆಗ ರಾಮುನಿಗೆ ಎಳೆ ವಯಸ್ಸು. ತಂದೆ ಮತ್ತು ಬಲತಾಯಿ ರಾಮುನೊಡನೆ ಇದಾರೆ. ರಾಮುನಿಗು ಬಲತಾಯಿಗೂ ಸರಿಹೋಗುತ್ತಿರಲಿಲ್ಲ. ಇದು ತಂದೆಗು ಮಗನಿಗು ಆಗಾಗ ಮನಸ್ತಾಪವನ್ನು ತರುತ್ತಿತ್ತು.

ಇವುಗಳ ಸಂಬಂಧವಾಗಿ ಮಾತುಕತೆ ನಡೆಯುತ್ತಿದ್ದಾಗ ರಾಮು ಹೇಳಿದ: "ಆತ ಹಾಳಾಗಿ ಹೋದ."

ಶ್ರೀರಾಮಕೃಷ್ಣರು ಭಕ್ತರಿಗೆ: "ಕೇಳಿದಿರಾ? ತಂದೆ ಹಾಳಾಗಿ ಹೋದ, ಇವನು ಮಾತ್ರ ಸರಿಯಾಗಿದಾನೆ!"

ರಾಮು: "ಬಲತಾಯಿ ಮನೆಗೆ ಬಂದಳು ಎಂದರೇ ಅಶಾಂತಿ. ಒಂದಲ್ಲ ಒಂದು ತೊಂದರೆ ಇದ್ದೇ ಇರುತ್ತದೆ. ಈಗ ಮನೆ ಒಡೆದು ಹೋಗುವ ಸ್ಥಿತಿಯಲ್ಲಿದೆ. ಇದಕ್ಕಾಗೇ ನಾನು ಹೇಳುತ್ತಿರುವುದು. ಆಕೆ ತನ್ನ ತಂದೆ ಮನೆಗೆ ಹೋಗಿ ಇರಲಿ ಅಂತ."

ಗಿರೀಂದ್ರ ರಾಮುನಿಗೆ: "ನಿನ್ನ ಹೆಂಡತಿಯನ್ನು ಕೂಡ ನೀನು ಅಧೇ

ರೀತಿಯಾಗಿ ಏಕೆ ಆಕೆಯು ತೌರುಮನೆಯಲ್ಲಿ ಬಿಟ್ಟುಬಿಡಕೂಡದು?" (ನಗು.)

ಶ್ರೀರಾಮಕೃಷ್ಣರು ನಗುತ್ತ: "ಸತಿಪತಿಯರೇನು ಮಡಕೆ ಗುಡಾಣಗಳೇನು, ಗುಡಾಣ ಒಂದು ಕಡೆ ಬಿದ್ದಿರಲಿ ಮುಚ್ಚಳ ಇನ್ನೊಂದು ಕಡೆ ಬಿದ್ದಿರಲಿ ಎನ್ನುವುದಕ್ಕೆ? ಶಿವ ಒಂದು ಕಡೆ, ಶಕ್ತಿ ಇನ್ನೊಂದು ಕಡೆಯೆ?"

ರಾಮ: "ಮಹಾಶಯರೆ, ಈಗ ನಾವು ಆನಂದದಿಂದ ಇದೇವೆ. ಆಕೆ ಬಂದಳು ಎಂದರೆ ಸಂಸಾರ—ಒಡೆದುಹೋಗಿಬಿಡುತ್ತದೆ. ಅಂಥ ಸಂದರ್ಭದಲ್ಲಿ—"

ಶ್ರೀರಾಮಕೃಷ್ಣರು: "ಹಾಗಿದ್ದ ಪಕ್ಷದಲ್ಲಿ ಅವರಿಗೆ ಒಂದು ಹೊಸ ಮನೆಯನ್ನ ಕಟ್ಟಿಕೊಟ್ಟುಬಿಡು. ಅದೊಂದು ಮಾರ್ಗವಾಗುತ್ತೆ. ಅವರ ತಿಂಗಳು ತಿಂಗಳ ಖರ್ಚುವೆಚ್ಚವನ್ನೆಲ್ಲಾ ನೀನು ವಹಿಸಿಕೊಂಡುಬಿಡಬೇಕು. ತಂದೆತಾಯಿಗಳು ಎಷ್ಟೊಂದು ಪೂಜ್ಯರು! ರಾಖಾಲ ನನ್ನನ್ನು ಕೇಳಿದ, ತಾನು ತನ್ನ ತಂದೆಯ ಎಲೆಯಲ್ಲಿನ ಉಚ್ಛಿಷ್ಟವನ್ನು ತಿನ್ನಬಹುದೇ ಎಂದು. ನಾನು ಉತ್ತರವಿತ್ತೆ: 'ಏನಿದು ನೀನು ಕೇಳುವುದು? ಏನಾಗಿಬಿಟ್ಟಿದೆ ನಿನಗೆ ನೀನು ಹಾಗೆ ಕೇಳುವುದಕ್ಕೆ?' ಆದರೆ ಒಂದು ವಿಷಯ. ಯಾರು ಸಾತ್ತ್ವಿಕರೊ ಅವರು ತಮ್ಮ ಉಚ್ಛಿಷ್ಟವನ್ನು ಯಾರಿಗೂ ಕೊಡಲಿಚ್ಛಿಸರು; ಅಷ್ಟೇ ಏಕೆ, ನಾಯಿಗೂ ಕೊಡಲಿಚ್ಛಿಸರು."

ಗಿರೀಂದ್ರ: "ತಂದೆತಾಯಿಗಳು ಗುರುತರ ಅಪರಾಧವನ್ನೇ ಆಗಲಿ ಅಥವಾ ಭಯಂಕರ ಪಾಪಕೃತ್ಯವನ್ನೇ ಆಗಲಿ ಮಾಡಿದ್ದರೆ?"

ಶ್ರೀರಾಮಕೃಷ್ಣರು: "ಮಾಡಿದ್ದರೇನು? ತಾಯಿ ವ್ಯಭಿಚಾರಿಣಿಯಾಗಿದ್ದರೂ ಆಕೆಯನ್ನು ತ್ಯಜಿಸಕೂಡದು. ಯಾವುದೊ ಒಂದು ಮನೆಯವರ ಗುರುಪತ್ನಿಯ ಶೀಲ ಸರಿಯಾಗಿಲ್ಲದಿದ್ದುದರಿಂದ ಆ ಮನೆಯವರು ಹೇಳುತ್ತಿದ್ದರು, ಆಕೆಯ ಮಗನನ್ನು ಗುರುವನ್ನಾಗಿ ಸ್ವೀಕರಿಸಿಕೊಂಡುಬಿಡೋಣ ಎಂಬುದಾಗಿ. ಅದಕ್ಕೆ ನಾನು ಹೇಳಿದೆ: 'ಇದೇನಿದು? ಗೆಡ್ಡೆಯನ್ನು ಬಿಸುಟು ಮೊಳಕೆಯನ್ನು ಸ್ವೀಕರಿಸುವುದೆ? ಆಕೆಯ ಶೀಲ ನಷ್ಟವಾಗಿದ್ದರೇನಾಯಿತು? ನೀವು ಆಕೆಯನ್ನೇ ನಿಮ್ಮ ಇಷ್ಟದೇವತೆ ಎಂದು ಭಾವಿಸಿಕೊಳ್ಳಬೇಕು. "ನನ್ನ ಶ್ರೀಗುರು ಮದ್ಯಪಾನವ ದಿನವು ಮಾಡುತಲಿದ್ದರೂ, ಅವನೆ ನಿತ್ಯಾನಂದನೆನ್ನುತ ತಿಳಿವುದೆನ್ನೀ ಭಾವವು!""

"ತಂದೆತಾಯಿಗಳೇನು ಕಸಕಡ್ಡಿಗಳೇ? ಅವರು ಪ್ರೀತರಾದ

ಹೊರತು ಧರ್ಮ-ಗಿರ್ಮ ಯಾವುದೂ ಫಲ ಬಿಡದು. ಚೈತನ್ಯದೇವ ಯಾವಾಗ ನೋಡಿದರೂ ಪ್ರೇಮೋನ್ಮತ್ತನಾಗಿರುತ್ತಿದ್ದ. ಆದರೂ ಸನ್ಯಾಸ ತೆಗೆದುಕೊಳ್ಳುವ ಮುನ್ನ ಎಷ್ಟೊಂದು ದಿನ ಆತ ತನ್ನ ತಾಯಿಗೆ ಸಮಾಧಾನ ಹೇಳಬೇಕಾಯಿತು! ಆತ ಆಕೆಗೆ ಹೇಳಿದ: 'ಅಮ್ಮಾ, ವ್ಯಸನಪಡಬೇಡ. ಆಗಾಗ ಬಂದು ನಿನ್ನನ್ನು ನೋಡಿಹೋಗುತ್ತೇನೆ.'

(ಮಾಸ್ಟರಿಗೆ ಖಂಡಿಸುವ ದೃಷ್ಟಿಯಿಂದ) "ಮತ್ತೆ ನಿನಗೆ ಇದನ್ನು ಹೇಳುತ್ತೇನೆ. ನಿನ್ನ ತಂದೆತಾಯಿಗಳು ನಿನ್ನನ್ನು ಹೆತ್ತು ಹೊತ್ತು ಸಾಕಿ ಸಲಹಿ ಬೆಳಸಿದಾರೆ. ಈಗ ನಿನಗೇ ಅನೇಕ ಮಕ್ಕಳುಮರಿಗಳು ಆಗಿ ಬಿಟ್ಟಿವೆ. ಆದರೂ ನೀನು ಹೆಂಡತಿ ಕಟ್ಟಿಕೊಂಡು ಮನೆಬಿಟ್ಟು ಹೊರಟು ಹೋಗಿರುವೆಯಲ್ಲ! ತಂದೆತಾಯಿಯರಿಗೆ ಮೋಸಮಾಡಿ, ಹೆಂಡತಿ ಮಕ್ಕಳು ಕಟ್ಟಿಕೊಂಡು ಮನೆಬಿಟ್ಟು ಹೊರಕ್ಕೆ ಬಂದುಬಿಟ್ಟಿದೀಯೆ. ಆದರೂ ಭಾವಿಸುತ್ತಿದೀಯೆ ನೀನೊಬ್ಬ ಆಚಾರಶೀಲ ವೈಷ್ಣವ ಎಂಬುದಾಗಿ! ನಿಮ್ಮ ತಂದೆಗೆ ಯಾವುದರ ಅಭಾವವೂ ಇಲ್ಲ; ಹಾಗಿಲ್ಲದಿದ್ದರೆ ಹೇಳುತ್ತಿದ್ದೆ: 'ನೀನೊಬ್ಬ ಅಯೋಗ್ಯ!' ಎಂದು."

ಕೊಠಡಿಯಲ್ಲಿದ್ದವರೆಲ್ಲರೂ ಈಗ ಗಂಭೀರಮುದ್ರೆ ಹಾಕಿಕೊಂಡು ಸುಮ್ಮನೆ ಕುಳಿತಿದಾರೆ.

ಶ್ರೀರಾಮಕೃಷ್ಣರು: "ಅನೇಕ ಋಣಗಳಿವೆ: ದೇವಋಣ, ಋಷಿ ಋಣ, ಮಾತೃಋಣ, ಪಿತೃಋಣ, ಸ್ತ್ರೀಋಣ. ತಂದೆತಾಯಿಯರ ಋಣ ವನ್ನ ತೀರಿಸದೆ ಇದ್ದರೆ ಏನನ್ನು ಸಾಧಿಸಲೂ ಆಗುವುದಿಲ್ಲ. ಸತಿಯ ಋಣ ವನ್ನೂ ತೀರಿಸಬೇಕಾದ್ದೆ. ಹರೀಶ ಹೆಂಡತಿಯನ್ನು ತ್ಯಜಿಸಿ ಇಲ್ಲಿ ಬಂದು ಇದ್ದುಕೊಂಡಿದಾನೆ. ಆಕೆಯ ಅನ್ನಾಹಾರಾದಿಗಳಿಗೆ ಅನುಕೂಲವಿಲ್ಲದೆ ಇತ್ತು ಎಂದರೆ, ನಾನು ಆತನಿಗೆ ಹೇಳುತ್ತಿದ್ದೆ: 'ನೀನು ನೀಚರಲ್ಲಿ ಅಗ್ರ-ಗಣ್ಯ!' ಎಂದು.

"ಬ್ರಹ್ಮಜ್ಞಾನ ದೊರೆತನಂತರ ನಿನ್ನ ಸತಿಯನ್ನು ನೀನು ಸಾಕ್ಷಾತ್ ಭಗವತಿಯೇ ಎಂಬುದಾಗಿ ನೋಡಲಾರಂಭಿಸುತ್ತೀಯೆ. ಚಂಡಿಯಲ್ಲಿ ಹೇಳಿದೆ: 'ಭಗವತಿ ಎಲ್ಲಾ ಭೂತಗಳಲ್ಲಿಯೂ ಮಾತೃರೂಪೇಣ ಇದ್ದು ಕೊಂಡಿದಾಳೆ' ಎಂದು. ಆಕೆಯೇ ನಿನ್ನ ಹೆತ್ತ ತಾಯಿಯಾಗಿದಾಳೆ.

"ನಿನ್ನ ಕಣ್ಣಿಗೆ ಬೀಳುವ ಹೆಂಗಸರೆಲ್ಲರೂ ಭಗವತಿಯರೇ. ಅದಕ್ಕಾಗೇ ನಾನು ಬೃಂದೆಗೆ (ಸೇವಕಿಗೆ) ಒಂದು ಬೈಗುಳನ್ನೂ ಬಯ್ಯಲಾರೆ. ಕೆಲ

ಕೆಲವರು ಶ್ಲೋಕಗಳನ್ನ ನೀರು ಕುಡಿದ ಹಾಗೆ ಹೇಳಬಲ್ಲರು ಮತ್ತು ಗಹನ ಗಹನ ವಿಷಯಗಳನ್ನ ನಿರರ್ಗಳವಾಗಿ ಮಾತನಾಡಬಲ್ಲರು, ಆದರೆ ವ್ಯವಹಾರ ದಲ್ಲಿ ಮಾತ್ರ ಪ್ರತ್ಯೇಕ ಮೂರ್ತಿಗಳು. ರಾಮಪ್ರಸನ್ನ ಆ ಹಠಯೋಗಿಗೆ ಹೇಗೆ ಅಫೀಮು ಹಾಲು ಒದಗಿಸುವುದು ಎಂಬ ಚಿಂತನೆಯಲ್ಲೇ ಓಡಾಡು ತ್ತಿದಾನೆ. ಆತ ಹೇಳುತ್ತಾನೆ, ಸಾಧು ಸೇವೆ ಮಾಡಬೇಕೆಂದು ಮನು ಹೇಳಿದಾನೆ ಎಂಬುದಾಗಿ. ಆದರೆ ಆತನ ವೃದ್ಧ ತಾಯಿಗೆ ತಿನ್ನುವುದಕ್ಕೆ ಏನೆಂದರೆ ಏನೂ ಇಲ್ಲ. ತಾನೇ ಸಂತೆ ಪೇಟೆಗಳಿಗೆ ಹೋಗಿಬರುತ್ತಿದ್ದಾಳೆ. ಸುಮ್ಮನೆ ಕೋಪ ಉಕ್ಕಿಬರುತ್ತಿದೆ.

"ಆದರೆ ಒಂದು ವಿಷಯ. ಪ್ರೇಮೋನ್ಮಾದ ಉಂಟಾಗಿಬಿಟ್ಟಿತು ಎಂದರೆ, ಆಗ ಈತ ತಂದೆ, ಆಕೆ ತಾಯಿ, ಈಕೆ ಹೆಂಡತಿ ಎಂಬ ಭಾವನೆ ಎಲ್ಲಿರುತ್ತದೆ? ಭಕ್ತ ಭಗವಂತನನ್ನು ಅಷ್ಟೊಂದಾಗಿ ಪ್ರೀತಿಸುತ್ತಿರುತ್ತಾನೆ ಆತ ಹುಚ್ಚನಂತಾಗಿಬಿಡುತ್ತಾನೆ. ಅಂಥವನಿಗೆ ಯಾವ ಕರ್ತವ್ಯವೂ ಇರದು. ಆತ ಸಕಲ ಋಣಗಳಿಂದಲೂ ಮುಕ್ತ. ಪ್ರೇಮೋನ್ಮಾದ ವೆಂಬುದು ಏನು ಗೊತ್ತೆ? ಆ ಅವಸ್ಥೆ ಉಂಟಾದಾಗ ಈ ಜಗತ್ತೇ ಮರೆತು ಹೋಗಿಬಿಡುತ್ತದೆ. ಸ್ವಂತ ದೇಹವಿದೆಯಲ್ಲ ಅದು ಎಷ್ಟೊಂದು ಪ್ರಿಯ ವಸ್ತು! ಅದು ಕೂಡ ಮರೆತೇ ಹೋಗಿಬಿಡುತ್ತದೆ. ಈ ಅವಸ್ಥೆ ಚೈತನ್ಯ-ದೇವನಿಗೆ ಉಂಟಾಗಿತ್ತು. ಸಾಗರದೊಳಕ್ಕೆ ರಭಸದಿಂದ ನುಗ್ಗಿಬಿಟ್ಟ—ಅದು ಸಾಗರ ಎಂಬ ಜ್ಞಾನವಿಲ್ಲದೆ. ತತ್ತರಿಸಿ ತತ್ತರಿಸಿ ಆಗಾಗ ನೆಲದ ಮೇಲೆ ಬೀಳುತ್ತಲೇ ಇರುತ್ತಿದ್ದ. ಹಸಿವು, ಬಾಯಾರಿಕೆ, ನಿದ್ರೆ ಇವುಗಳ ಅರಿವು ಆತನಿಗಾಗುತ್ತಿರಲಿಲ್ಲ. ತನ್ನ ಶರೀರವೆಂಬುದೊಂದಿದೆ ಎಂಬ ಪ್ರಜ್ಞೆಯೇ ಆತನಿಗಿರುತ್ತಿರಲಿಲ್ಲ."

ಶ್ರೀರಾಮಕೃಷ್ಣರು ಇದ್ದಕ್ಕಿದ್ದಹಾಗೆ "ಹಾ, ಚೈತನ್ಯ!" ಎಂದು ಕೂಗುತ್ತ ಎದ್ದು ನಿಂತುಕೊಂಡಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಚೈತನ್ಯವೆಂದರೆ 'ಅಖಂಡ ಚೈತನ್ಯ'. ವೈಷ್ಣವಚರಣ ಹೇಳುತ್ತಿದ್ದ, ಗೌರಾಂಗ ಈ ಅಖಂಡ ಚೈತನ್ಯದ ಒಂದು ಗುಳ್ಳೆ ಎಂದು.

(ಹಿರಿಯ ಗೋಪಾಲನಿಗೆ) "ಏನು ನೀನು ಈಗ ತೀರ್ಥಯಾತ್ರೆಗೆ ಹೋಗಬೇಕು ಅಂತ ಇದೀಯೇನು?"

ಹಿರಿಯ ಗೋಪಾಲ: "ಹೌದು. ಸ್ವಲ್ಪ ಸುತ್ತಿಕೊಂಡುಬರೋಣ ಅಂತ."

ರಾಮು ಹಿರಿಯ ಗೋಪಾಲನಿಗೆ: "ಇವರು [ಪರಮಹಂಸರು] ಹೇಳುತ್ತಾರೆ, ಸಾಧು ಬಹೂದಕನಾದಮೇಲೆ ಕುಟೀಚಕನಾಗುತ್ತಾನೆ ಎಂದು. ತೀರ್ಥಯಾತ್ರೆಗೆ ಎಂದು ಅನೇಕ ಸ್ಥಳಗಳಿಗೆ ಹೋಗುವವನಿಗೆ 'ಬಹೂದಕ' ಅಂತ ಹೆಸರು. ತೀರ್ಥಯಾತ್ರೆಯನ್ನು ಮುಗಿಸಿ ಯಾರು ಒಂದು ಸ್ಥಳದಲ್ಲಿ ಸ್ಥಿರವಾಗಿ ಇರಲು ಆರಂಭಿಸುವನೊ ಆತನಿಗೆ 'ಕುಟೀಚಕ' ಅಂತ ಹೆಸರು.

"ಇವರು ಇದಕ್ಕೆ ಒಂದು ರೂಪಕ ಕಥೆಯನ್ನೂ ಹೇಳುತ್ತಾರೆ. ಒಮ್ಮೆ ಒಂದು ಹಕ್ಕಿ ಜಹಜಿನ ಧ್ವಜಸ್ತಂಭದ ಮೇಲೆ ಕುಳಿತುಕೊಂಡಿತು. ಜಹಜು ಗಂಗಾ ಮುಖವನ್ನು ಬಿಟ್ಟು ಸಮುದ್ರದ ಕಪ್ಪು ನೀರನ್ನು ಮುಟ್ಟಿದರೂ ಅದಕ್ಕೆ ತಾನು ಎಲ್ಲಿಗೆ ಮುಂದುವರಿಯುತ್ತಿದೇನೆ ಎಂಬುದರ ಪ್ರಜ್ಞೆಯೇ ಇರಲಿಲ್ಲ. ತಾನು ಸಮುದ್ರದೊಳಗೆ ಮುಂದುವರಿಯುತ್ತಿರುವುದರ ಅರಿವು ಅದಕ್ಕೆ ಉಂಟಾದೊಡನೇ ಅದು ತೀರ ಯಾವ ದಿಕ್ಕಿನಲ್ಲಿ ಇದೆ ಎಂಬುದನ್ನು ಅರಿಯಲು ಉತ್ತರ ದಿಕ್ಕಿನ ಕಡೆ ಹಾರಿಹೋಯಿತು. ಆ ಕಡೆ ಎಲ್ಲೂ ತೀರ-ಗೀರ ಯಾವುದೂ ಕಾಣಿಸದೆ ಹೋದುದರಿಂದ ಹಿಂದಿರುಗಿ ಬಂದು ಧ್ವಜಸ್ತಂಭದ ಮೇಲೆ ಕುಳಿತುಕೊಂಡಿತು. ಅಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ದಕ್ಷಿಣ ದಿಕ್ಕಿನ ಕಡೆ ಹಾರಿಹೋಯಿತು. ಆ ಕಡೆಯೂ ಎಲ್ಲೂ ತೀರ-ಗೀರ ಏನೂ ಕಣ್ಣಿಗೆ ಬೀಳಲಿಲ್ಲ. ಏದುತ್ತ ಏದುತ್ತ ಹಿಂದಿರುಗಿ ಬಂದು ಮತ್ತೆ ಧ್ವಜಸ್ತಂಭದ ಮೇಲೆ ಕುಳಿತುಕೊಂಡಿತು. ಮತ್ತೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡನಂತರ ಒಮ್ಮೆ ಪೂರ್ವ ದಿಕ್ಕಿಗೆ, ಇನ್ನೊಮ್ಮೆ ಪಶ್ಚಿಮ ದಿಕ್ಕಿಗೆ ಹಾರಿ ನೋಡಿತು. ಯಾವ ದಿಕ್ಕಿನಲ್ಲಿಯೂ ಯಾವಾಗ ತೀರ-ಗೀರ ಎಂಬುದು ಏನೂ ಕಾಣಬರಲಿಲ್ಲವೊ, ಆಗ ಅದು ಧ್ವಜಸ್ತಂಭದ ಮೇಲೆ ತೆಪ್ಪಗೆ ಕುಳಿತುಕೊಂಡುಬಿಟ್ಟಿತು."

ಶ್ರೀರಾಮಕೃಷ್ಣರು ಹಿರಿಯ ಗೋಪಾಲನಿಗೆ ಮತ್ತು ಉಳಿದ ಭಕ್ತರಿಗೆ: "ಎಲ್ಲಿಯವರೆಗೆ ಭಾವನೆ ಇರುವುದೊ ಭಗವಂತ 'ಅಲ್ಲಿ, ಅಲ್ಲಿ' ಎಂಬುದಾಗಿ ಅಲ್ಲಿಯವರೆಗೆ ಮನುಷ್ಯ ಅಜ್ಞಾನವಶನಾಗಿರುತ್ತಾನೆ. ಆದರೆ ಯಾವಾಗ ಭಾವನೆ ಬರುವುದೊ ಆತ 'ಇಲ್ಲಿ, ಇಲ್ಲಿ' ಎಂಬುದಾಗಿ ಆಗ ಆತನಿಗೆ ಜ್ಞಾನೋದಯವಾಗುತ್ತದೆ.

"ಒಬ್ಬನಿಗೆ ಗುಡುಗುಡಿ ಸೇದಲು ಇಚ್ಛೆಯಾಯಿತು. ಅದನ್ನು

ಹೊತ್ತಿಸಿಕೊಳ್ಳಲು ಆತ ಪಕ್ಕದ ಮನೆಗೆ ಹೋದ. ಆಗಲೇ ಬಹಳವಾಗಿ ರಾತ್ರಿಯಾಗಿಬಿಟ್ಟಿತ್ತು. ಅವರು ನಿದ್ದೆಮಾಡುತ್ತಿದ್ದರು. ಬಹಳ ಹೊತ್ತು ಕದ ತಟ್ಟಿದನಂತರ ಒಬ್ಬ ಎದ್ದುಬಂದು ಬಾಗಿಲು ತೆರೆದ. ಈತನನ್ನು ನೋಡಿ ಆತ ಕೇಳಿದ: 'ಏನಯ್ಯ, ಏನು ಸಮಾಚಾರ?' ಈತ ಉತ್ತರ ವಿತ್ತ: 'ಏನು, ಊಹಿಸಲಾರೆಯಾ? ಹೊಗೆಸೊಪ್ಪಿನ ನೆಶಾ ಇರುವುದು ನಿನಗೆ ಗೊತ್ತೇ ಇದೆಯಲ್ಲ. ಗುಡುಗುಡಿ ಹೊತ್ತಿಸಿಕೊಳ್ಳಲು ಬಂದಿದೇನೆ.' ಆಗ ಆತ ನಕ್ಕು ಹೇಳಿದ: 'ಹಹಹಃ! ನಿನ್ನ ಬುದ್ಧಿ ಒನಕೆ ಚಿಗುರೇ! ಇಷ್ಟು ಶ್ರಮವಹಿಸಿ ಬಂದದ್ದೂ ಅಲ್ಲದೆ ಜೊತೆಗೆ ಇಷ್ಟೊಂದು ಕದ ತಟ್ಟಿದ್ದೂ ಬೇರೆ! ನಿನ್ನ ಕೈಯಲ್ಲೆ ಉರಿಯುತ್ತಿರೋ ಲಾಟೀನು ಇದೆಯಲ್ಲ!' (ಎಲ್ಲರೂ ನಗುತ್ತಿದಾರೆ.)

"ಏನು ಬೇಕೊ ಅದು ಹತ್ತಿರವೇ ಇದೆ, ಆದರೂ ಜನ ಅಲ್ಲಿ ಇಲ್ಲಿ ಹುಡುಕುತ್ತಾರೆ."

ರಾಮ: "ಮಹಾಶಯರೆ, ಈಗ ನನಗೆ ಅರ್ಥವಾಗುತ್ತಿದೆ, ಏಕೆ ಗುರು ತನ್ನ ಕೆಲಕೆಲವು ಮಂದಿ ಶಿಷ್ಯರಿಗೆ ಹೇಳುತ್ತಾನೆ—ನಾಲ್ಕು ಧಾಮ ಗಳನ್ನೂ ಸುತ್ತಿಬರುವಂತೆ. ಒಮ್ಮೆ ಎಲ್ಲಾ ಕಡೆಯೂ ಸುತ್ತಿದನಂತರ ಆತನಿಗೆ ಅರ್ಥವಾಗುತ್ತದೆ ಇಲ್ಲಿ ಏನಿದೆಯೊ ಅಲ್ಲೂ ಅದೇ ಇದೆ ಎಂದು. ಅನಂತರ ಗುರುವಿನ ಹತ್ತಿರಕ್ಕೆ ಹಿಂದಿರುಗಿಬರುತ್ತಾನೆ. ಈ ಭ್ರಮಣ ಕಾರ್ಯವೆಲ್ಲಾ ಕೇವಲ ಗುರುವಾಕ್ಯದಲ್ಲಿ ಶ್ರದ್ಧೆಯುಂಟಾಗಲೋಸುಗ."

ಈ ಮಾತುಕತೆಗಳೆಲ್ಲ ಮುಗಿದು ಎಲ್ಲರೂ ಶಾಂತವಾಗಿ ಕುಳಿತಿದಾರೆ. ಈಗ ಪರಮಹಂಸರು ರಾಮನ ಗುಣಗಳನ್ನ ಶ್ಲಾಘನೆ ಮಾಡುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಆಹ, ರಾಮನಲ್ಲಿ ಎಷ್ಟೊಂದು ಗುಣ! ಎಷ್ಟೊಂದು ಮಂದಿ ಭಕ್ತರ ಸೇವೆ, ಪ್ರತಿಪಾಲನೆ ಮಾಡುತ್ತಾನೆ! (ರಾಮನಿಗೆ) ಅಧರಸೇನ ಹೇಳುತ್ತಿದ್ದ, ನೀನು ಆತನಿಗೆ ಬಹಳವಾಗಿ ಅಕ್ಕರೆ ತೋರಿಸಿದೆಯಂತೆ."

ಅಧರಸೇನನ ಮನೆ ಶೋಭಾಬಜಾರಿನಲ್ಲಿದೆ. ಆತ ಪರಮಹಂಸರ ಪರಮಭಕ್ತ. ಮನೆಯಲ್ಲಿ ಚಂಡಿ ಕೀರ್ತನೆ ಏರ್ಪಡಿಸಿದ್ದ. ಪರಮಹಂಸರೂ ಅಲ್ಲದೆ ಅನೇಕ ಮಂದಿ ಭಕ್ತರೂ ಅಲ್ಲಿಗೆ ಬಂದಿದ್ದರು. ಅಧರಸೇನ ರಾಮ ನನ್ನು ಆಮಂತ್ರಿಸಲು ಮರೆತುಬಿಟ್ಟಿದ್ದ. ರಾಮನಿಗೆ ಬಹಳ ಅಭಿಮಾನ. ಆತ ಜನರ ಹತ್ತಿರ ತನ್ನ ದುಃಖವನ್ನ ಪ್ರದರ್ಶಿಸಿಕೊಂಡಿದ್ದ. ಅದಕ್ಕಾಗಿ

ಅಧರಸೇನ ರಾಮನ ಮನೆಗೆ ಹೋಗಿದ್ದ—ತಾನು ಹಾಗೆ ಮರೆತುದಕ್ಕಾಗಿ ಆತನಿಂದ ಕ್ಷಮೆಬೇಡಲು.

ರಾಮ: "ಅದು ಅಧರಸೇನನ ತಪ್ಪಲ್ಲ. ನನಗೆ ಗೊತ್ತಾಯಿತು ಅದು ರಾಖಾಲನ ತಪ್ಪು ಎಂದು. ಆ ಭಾರ ರಾಖಾಲನ ಮೇಲೆ ಬಿದ್ದಿತ್ತು—"

ಶ್ರೀರಾಮಕೃಷ್ಣರು: "ರಾಖಾಲನನ್ನು ಹೊಣೆಯಾಗಿ ಮಾಡುವುದು ಸರಿಯಲ್ಲ. ಆತ ಇನ್ನೂ ಏನೂ ಅರಿಯದ ಹಸುಳೆ. ಗಂಟಲು ಅದುಮಿದರೆ ತಾಯಿಯ ಎದೆ ಹಾಲು ಹೊರಕ್ಕೆ ಬಂದುಬಿಡುತ್ತದೆ."

ರಾಮ: "ಮಹಾಶಯರೆ, ಹಾಗೇಕೆ ಮಾತಾಡುತ್ತಿದೀರಿ? ಚಂಡಿ ಕೀರ್ತನೆ ನಡೆಯಿತು—"

ಶ್ರೀರಾಮಕೃಷ್ಣರು: "ಅಧರಸೇನ ನಿನ್ನನ್ನು ಆಹ್ವಾನಿಸಲು ಮರೆತುಬಿಟ್ಟ, ಅಷ್ಟೆ. ಆತನಿಗೆ ಮರವು ಜಾಸ್ತಿ. ಇಲ್ಲಿ ಕೇಳು, ಅಂದು ಯದುಮಲ್ಲಿಕನ ಮನೆಗೆ ನನ್ನೊಡನೆ ಬಂದಿದ್ದ. ಹಿಂದಿರುಗಿ ಬರುವಾಗ ನಾನು ಆತನನ್ನು ಕೇಳಿದೆ, 'ಏನು ನೀನು ಸಿಂಹವಾಹಿನಿಗೆ ಕಾಣಿಕೆ ಅರ್ಪಿಸೋದಿಲ್ಲವೆ?' ಅದಕ್ಕೆ ಉತ್ತರವಿತ್ತ: 'ನನಗೆ ಗೊತ್ತಿರಲಿಲ್ಲ—ಕಾಣಿಕೆ ಅರ್ಪಿಸಬೇಕು ಎಂಬುದಾಗಿ.'

(ರಾಮನಿಗೆ) "ಒಂದು ಪಕ್ಷ ಆತ ನಿನ್ನನ್ನು ಆಹ್ವಾನಿಸಲೇ ಇಲ್ಲ ಅಂತ ಇಟ್ಟುಕೊ. ಭಗವಂತನ ನಾಮಗುಣಕೀರ್ತನೆ ನಡೆಯುತ್ತಿರೋ ಜಾಗಕ್ಕೆ ಬರಲೇಕೆ ಇಷ್ಟೊಂದು ಅಸಮಾಧಾನ? ಇಂಥ ಸ್ಥಳಗಳಿಗೆ ಯಾರು ಬೇಕಾದರೂ ಹೋಗಿಬರಬಹುದು. ಆಹ್ವಾನದ ಆವಶ್ಯಕತೆಯೇನಿರೋಲ್ಲ."



## ೨೨

# ನಟನೊಬ್ಬನಿಗೆ ಬುದ್ಧಿವಾದ

೨೪ನೆ ಮೇ ೧೮೮೪, ಜ್ಯೇಷ್ಠ ಅಮಾವಾಸ್ಯೆ, ಶನಿವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ. ಘಂಟೆ ಬೆಳಗಿನ ಹನ್ನೊಂದು. ರಾಖಾಲ, ಮಾಸ್ಟರ್ ಇವರೇ ಮೊದಲಾದ ಭಕ್ತರೂ ಅಲ್ಲಿ ಕುಳಿತಿದಾರೆ. ಹಿಂದಿನ ರಾತ್ರಿ ಫಲ-ಹಾರಿಣಿ ಕಾಳಿಯ ಪೂಜೆ ನಡೆಯಿತು. ಆ ಸಂದರ್ಭದಲ್ಲಿ ನಾಟ್ಯಮಂದಿರದಲ್ಲಿ ಬೆಳಗಿನ ಜಾವ "ವಿದ್ಯಾಸುಂದರ" ಎಂಬ ನಾಟಕ ನಡೆಯಿತು. ಪರಮ-ಹಂಸರು ಎಲ್ಲೋ ಸ್ವಲ್ಪ ಹೊತ್ತು ಅದನ್ನು ನೋಡಿದ್ದರು. ನಟರು ಸ್ನಾನ-ಗೀನ ಮುಗಿಸಿ ಪರಮಹಂಸರ ದರ್ಶನ ಪಡೆಯಲು ಕೊಠಡಿಗೆ ಬಂದಿದಾರೆ. ವಿದ್ಯಾಸುಂದರನ ಪಾರ್ಟು ವಹಿಸಿದ್ದ ಒಬ್ಬ ಗೌರ ವರ್ಣದ ಹುಡುಗ ಬಹಳ ಚೆನ್ನಾಗಿ ಅಭಿನಯಿಸಿದ್ದ. ಆತನೊಡನೆ ಪರಮಹಂಸರು ಈಗ ಬಹಳ ಆನಂದದಿಂದ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ನಟನಿಗೆ: "ನೀನು ಬಹಳ ಚೆನ್ನಾಗಿ ಅಭಿನಯಿಸಿದೆ. ಯಾರೇ ಆಗಲಿ ಹಾಡುವುದರಲ್ಲೊ, ಬಾಜಿಸುವುದರಲ್ಲೊ, ನರ್ತಿಸುವುದರಲ್ಲೊ ಅಥವಾ ಬೇರಾವ ಕಲೆಯಲ್ಲೊ ಇತರರನ್ನು ಮೀರಿಸಿದ್ದೇ ಆದರೆ, ಆತ ಪ್ರಯತ್ನಪಟ್ಟ ಪಕ್ಷಕ್ಕೆ ಬಹು ಬೇಗ ಭಗವತ್ಸಾಕ್ಷಾತ್ಕಾರ ಪಡೆದುಕೊಂಡುಬಿಡಬಲ್ಲ.

"ಯಾವ ರೀತಿಯಾಗಿ ನೀವು ಬಹಳವಾಗಿ ಅಭ್ಯಾಸಮಾಡಿ ಹಾಡಲು, ಬಾಜಿಸಲು, ನರ್ತಿಸಲು ಕಲಿಯುತ್ತೀರೊ, ಹಾಗೇ ಭಗವಂತನಲ್ಲಿ ಮನಸ್ಸು ನಿಲ್ಲಿಸಲೂ ಬಹಳವಾಗಿ ಅಭ್ಯಾಸಮಾಡಬೇಕು. ಪೂಜೆ, ಜಪ, ತಪ, ಧ್ಯಾನ ಇವನ್ನೆಲ್ಲ ಒಂದು ನಿಯಮಿತ ರೀತಿಯಾಗಿ ಅಭ್ಯಾಸ ಮಾಡಬೇಕು.

"ನಿನಗೆ ವಿವಾಹವಾಗಿರುವುದೇ? ಮಕ್ಕಳು ಮರಿ?"

ನಟ: "ಹೌದು. ಒಂದು ಹೆಣ್ಣು ಮಗು ಆಗಿದ್ದು ಸತ್ತುಹೋಯಿತು. ಈಗಿನ್ನೊಂದು ಆಗಿದೆ."

ಶ್ರೀರಾಮಕೃಷ್ಣರು: "ಒಂದು ಹುಟ್ಟಿ ಸತ್ತೂಹೋಯಿತೆ ಇಷ್ಟು ಬೇಗ! ನಿನಗಿನ್ನೂ ಅಲ್ಪ ವಯಸ್ಸಲ್ಲ! ಒಂದು ನಾಣ್ಣುಡಿ ಹೇಳುತ್ತದೆ:

'ಕೈ ಹಿಡಿದ ಮೂರನೆ ದಿನವೇ ಪತಿ ಸತ್ತುಹೋದ. ಅಳುತ್ತ ಇನ್ನೆಷ್ಟು ರಾತ್ರಿಯನ್ನು ತಳ್ಳಬೇಕೊ!' ಸಂಸಾರ ಸುಖ ಎಂಥದು ಎಂಬುದು ನಿನಗಾಗಲೆ ಅರ್ಥವಾಗಿರಬೇಕು. ಅದು ಕೇವಲ ಅಮಟೆಕಾಯಿನ ಹಾಗೆ. ಬರೀ ಸಿಪ್ಪೆ ಮತ್ತು ಬೀಜ. ತಿಂದುದೇ ಆದರೆ ಹೊಟ್ಟೆ ಶೂಲೆ.

"ನಾಟಕಶಾಲೆಯಲ್ಲಿ ನೀನೊಬ್ಬ ನಟನಾಗಿದೀಯೆ. ಅದು ಬಹಳ ಒಳ್ಳೆಯದೆ. ಆದರೆ ಅದು ಬಹಳ ಕಷ್ಟದ ಕೆಲಸ. ನಿನಗಿನ್ನೂ ಚಿಕ್ಕ ವಯಸ್ಸು; ಆದ್ದರಿಂದ ಈಗ ಗುಂಡು ಗುಂಡಾಗಿ ಇದೀಯೆ. ಅನಂತರ ಬಡಕಲಾಗಿಬಿಡುತ್ತೀಯೆ. ಸಾಮಾನ್ಯವಾಗಿ ನಟರಿಗೆಲ್ಲ ಇದೇ ಗತಿ: ಬತ್ತಿಹೋದ ಕೆನ್ನೆ, ಗುಡಾಣದಂಥ ಹೊಟ್ಟೆ, ಗಳುವಿನಂಥ ಕೈ ಕಾಲು. (ಎಲ್ಲರೂ ನಗುತ್ತಿದಾರೆ.)

"ನಾನೇಕೆ ನಿನ್ನ ಅಭಿನಯ ನೋಡುತ್ತ ಕುಳಿತಿದ್ದೆ ಗೊತ್ತೆ? ತಾಳ ಮೇಳ ಸಂಗೀತ ಬಹಳ ಚೆನ್ನಾಗಿತ್ತು. ಜೊತೆಗೆ ಭಗವತಿಯೂ ತೋರಿಸಿದಳು, ಭಗವಂತನೇ ನಟರ ರೂಪ ಧರಿಸಿ ಅಭಿನಯಿಸುತ್ತಾನೆ ಎಂಬುದಾಗಿ."

ನಟ: "ಒಳ್ಳೇದು, ಕಾಮಕ್ಕು ಕಾಮನೆಗು ವ್ಯತ್ಯಾಸವೇನು?"

ಶ್ರೀರಾಮಕೃಷ್ಣರು: "ಕಾಮ ಮರದ ಬೇರು ಇದ್ದ ಹಾಗೆ, ಕಾಮನೆ ರೆಂಬೆ, ಕೊಂಬೆ ಇದ್ದ ಹಾಗೆ.

"ಕಾಮ, ಕ್ರೋಧ, ಲೋಭ ಮೊದಲಾದ ಅರಿಷಡ್ವರ್ಗಗಳನ್ನ ಒಮ್ಮೆಗೇ ಸಮೂಲವಾಗಿ ನಿರ್ಮೂಲಮಾಡಲು ಸಾಧ್ಯವಿಲ್ಲ. ಆದ್ದರಿಂದ ಅವುಗಳ ಗತಿಯನ್ನು ಭಗವಂತನ ಕಡೆಗೆ ತಿರುಗಿಸಬೇಕು. ಕಾಮಪಡಬೇಕಾದರೆ, ಲೋಭಪಡಬೇಕಾದರೆ ಭಗವಂತನಲ್ಲಿ ಭಕ್ತಿಗಾಗಿ ಕಾಮಪಡಬೇಕು, ಆತನ ಸಾಕ್ಷಾತ್ಕಾರಕ್ಕಾಗಿ ಲೋಭಪಡಬೇಕು. ಹೆಮ್ಮೆಪಡಬೇಕಾದರೆ, ಅಹಂಕಾರಪಡಬೇಕಾದರೆ, ನಾನು ಭಗವಂತನ ದಾಸ, ಭಗವಂತನ ಪುತ್ರ ಎಂಬುದಾಗಿ ಹೆಮ್ಮೆಪಡಬೇಕು, ಅಹಂಕಾರಪಡಬೇಕು.

"ಇಡೀ ಮನಸ್ಸನ್ನು ಭಗವಂತನಿಗೆ ಅರ್ಪಿಸದೆ ಇದ್ದರೆ ಆತನ ದರ್ಶನ ದೊರೆಯದು. ಕಾಮಕಾಂಚನಗಳಲ್ಲಿ ಮನಸ್ಸನ್ನಿಟ್ಟರೆ ಅದು ಬರಿದೆ ಖರ್ಚಾಗಿಹೋಗುತ್ತದೆ. ಈಗ ನಿನ್ನನ್ನೇ ತೆಗೆದುಕೊ. ನಿನಗೆ ಮಕ್ಕಳು ಮರಿ ಆಗಿಬಿಟ್ಟಿವೆ; ನಾಟಕಶಾಲೆಯಲ್ಲಿ ಕೆಲಸ ಮಾಡಬೇಕಾಗಿ ಬಂದಿದೆ. ಈ ಹಲವಾರು ಕೆಲಸಕಾರ್ಯಗಳ ದೆಸೆಯಿಂದ ಮನಸ್ಸನ್ನು ಭಗವಂತನ ಕಡೆ ತಿರುಗಿಸಲಾಗುತ್ತಿಲ್ಲ.

"ಭೋಗ ಇತ್ತು ಎಂದರೆ, ಯೋಗ ಕಡಮೆ. ಭೋಗ ಇತ್ತು ಎಂದರೇ ಮತ್ತೆ ದುಃಖ. ಶ್ರೀಮದ್ಭಾಗವತದಲ್ಲಿ ಹೇಳಿದೆ, ಒಬ್ಬ ಅವ-ಧೂತನಿಗೆ ದೊರೆತ ಗುರುಗಳಲ್ಲಿ ಹದ್ದೂ ಒಂದು ಎಂದು. ಹದ್ದಿನ ಬಾಯಲ್ಲಿ ಒಂದು ಮೀನು ಇತ್ತು. ಅದನ್ನು ಕಂಡು ಸಾವಿರಾರು ಕಾಗೆಗಳು ಅದನ್ನು ಮುತ್ತಿದುವು. ಆ ಮೀನನ್ನು ಕಚ್ಚಿಕೊಂಡು ಆ ಹದ್ದು ಯಾವ ದಿಕ್ಕಿಗೆ ಹಾರಿಹೋದರೂ ಅದೇ ದಿಕ್ಕಿಗೆ ಕಾಗೆಗಳೂ 'ಕಾ, ಕಾ' ಎಂದು ಕೂಗುತ್ತ ಅದರ ಬೆನ್ನು ಹತ್ತುತ್ತಿದ್ದುವು. ಅಕಸ್ಮಾತ್ತಾಗಿ ಯಾವಾಗ ಆ ಹದ್ದಿನ ಬಾಯಿಂದ ಆ ಮೀನು ಬಿದ್ದುಹೋಯಿತೊ, ಆಗ ಕಾಗೆಗಳೆಲ್ಲವೂ ಆ ಮೀನು ಬಿದ್ದ ಕಡೆಗೆ ನುಗ್ಗಿ ಹದ್ದನ್ನು ಸುಮ್ಮನೆ ಬಿಟ್ಟುಬಿಟ್ಟವು.

"ಮೀನು ಎಂದರೆ ಭೋಗವಸ್ತು. ಭಾವನೆ, ಚಿಂತನೆಯೇ ಕಾಗೆ ಗಳು. ಎಲ್ಲಿ ಭೋಗವಿರುವುದೊ ಅಲ್ಲಿ ಭಾವನೆ, ಚಿಂತನೆ. ಭೋಗವನ್ನು ತ್ಯಜಿಸಿದೊಡನೇ ಶಾಂತಿ.

"ಮತ್ತೆ ನೋಡು ಅರ್ಥದಿಂದಲೇ ಅನರ್ಥ. ನೀವು ಸೋದರರು ಆನಂದದಿಂದ ಇದೀರಿ. ಪಾಲು ಹಂಚಿಕೊಳ್ಳುವಾಗ ಬರುತ್ತೆ ಎಲ್ಲೂ ಇಲ್ಲದ ತೊಂದರೆ. ಒಮ್ಮೊಮ್ಮೆ ನಾಯಿಗಳು ಒಂದರ ಮೈಯನ್ನೊಂದು ನೆಕ್ಕುತ್ತ ಸ್ನೇಹದಿಂದ ವರ್ತಿಸುತ್ತಿರುತ್ತವೆ. ಆದರೆ ಮನೆಯಿಂದ ಎಂಜಲೆಲೆ ಹಿತ್ತಲಿಗೆ ಬಂದು ಬೀಳುವುದೇ ತಡ ಪರಸ್ಪರ ಕಚ್ಚಾಡಿ ಸಾಯುತ್ತವೆ.

"ಆಗಾಗ ನೀನು ಇಲ್ಲಿಗೆ ಬಂದುಹೋಗುತ್ತಿರು. (ಮಾಸ್ಟರ್ ಮೊದಲಾದವರನ್ನು ತೋರಿಸಿ) ಇವರು ಭಾನುವಾರ ಮತ್ತು ಉಳಿದ ರಜಾ ದಿನಗಳಲ್ಲಿ ಇಲ್ಲಿಗೆ ಬರುವುದುಂಟು."

ನಟ: "ನಮಗೆ ಮೂರು ತಿಂಗಳ ಕಾಲ—ಶ್ರಾವಣ, ಭಾದ್ರಪದ, ಪುಷ್ಯ ಮಾಸಗಳಲ್ಲಿ, ಎಂದರೆ ವರ್ಷಾಕಾಲ ಮತ್ತು ಸುಗ್ಗೀಕಾಲಗಳಲ್ಲಿ ರಜಾ. ಖಂಡಿತ ಬರುತ್ತೇವೆ. ಅದು ನಮ್ಮ ಸೌಭಾಗ್ಯವೇ. ಇಲ್ಲಿಗೆ ಬರುವಾಗ ಇಬ್ಬರ ವಿಷಯವಾಗಿ ಕೇಳಿದೆವು—ನಿಮ್ಮ ಮತ್ತು ಜ್ಞಾನಾರ್ಣವರ ವಿಷಯ ವಾಗಿ."

ಶ್ರೀರಾಮಕೃಷ್ಣರು: "ನಿನ್ನ ಸೋದರರೊಡನೆ ಸ್ನೇಹದಿಂದಿರು. ಸ್ನೇಹದಿಂದಿದ್ದರೆ ನೋಡುವುದಕ್ಕೆ ಮಾಡುವುದಕ್ಕೆ ಎಲ್ಲ ಚೆನ್ನಾಗಿರುತ್ತದೆ. ನೀನು ನಾಟಕದಲ್ಲಿ ನೋಡಿರಬೇಕು, ಒಟ್ಟಿಗೆ ಎಲ್ಲರೂ ಹಾಡುವಾಗ

ಒಬ್ಬೊಬ್ಬರು ಒಂದೊಂದು ರಾಗ ಹಿಡಿದರೆ ನಾಟಕ ಕೆಟ್ಟುಹೋಗಿಬಿಡುವುದನ್ನ."

ನಟ: "ನಿಜ. ಅನೇಕ ಹಕ್ಕಿ ಬೇಡನ ಬಲೆಗೆ ಸಿಕ್ಕಿಕೊಳ್ಳುತ್ತವೆ. ಎಲ್ಲವೂ ಒಂದಾಗಿ ಪ್ರಯತ್ನಿಸಿ ಯಾವುದಾದರೂ ಒಂದು ದಿಕ್ಕಿಗೆ ಆ ಬಲೆಯನ್ನು ಹೊತ್ತು ಹಾರಿಹೋಗುವುದಾದರೆ ಅವುಗಳಲ್ಲಿ ಬಹು ಭಾಗ ಬಲೆಯಿಂದ ಬಿಡಿಸಿಕೊಳ್ಳಬಲ್ಲವು. ಆದರೆ ಅವು ವಿವಿಧ ದಿಕ್ಕುಗಳಿಗೆ ಹಾರಲಾರಂಭಿಸಿದರೆ ಬಿಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

"ನಾಟಕದಲ್ಲಿ ನೋಡಬಹುದು, ತಲೆಯ ಮೇಲೆ ತುಂಬಿದ ಕಲಶವನ್ನು ಹೊತ್ತುಕೊಂಡಿದ್ದರೂ ನರ್ತಿಸುವುದನ್ನ."

ಶ್ರೀರಾಮಕೃಷ್ಣರು: "ಸಂಸಾರದಲ್ಲಿರು, ಆದರೆ ತಲೆಯ ಮೇಲಿನ ಕಲಶ ಮಾತ್ರ ಕೆಳಕ್ಕೆ ಬೀಳದ ಹಾಗೆ ನೋಡಿಕೊ; ಅಂದರೆ ಭಗವಂತನ ಕಡೆಗೆ ಮನಸ್ಸು ಸತತ ಹರಿಯುತ್ತಿರುವಂತೆ ನೋಡಿಕೊಳ್ಳಬೇಕು.

"ನಾನು ಒಮ್ಮೆ ದಂಡಿನ ಸಿಪಾಯಿಗಳಿಗೆ ಹೇಳಿದೆ: 'ಪ್ರಾಪಂಚಿಕ ಕೆಲಸಗಳನ್ನು ಮಾಡುತ್ತೀರಿ, ಆದರೆ ಮೃತ್ಯುರೂಪದ ಒನಕೆ ಎಂದಾದರೂ ಒಂದು ದಿನ ಕೈಯ ಮೇಲೆ ಬಿದ್ದೇ ಬೀಳುತ್ತದೆ ಎಂಬುದನ್ನ ಮರೆಯದಿರಿ. ಅದರ ವಿಷಯವಾಗಿ ಎಚ್ಚತ್ತಿರಿ.

"ಕಾಮಾರಪುಕುರಿನಲ್ಲಿ ಬಡಗಿ ಹೆಂಗಸರು ಏತದಲ್ಲಿ ಅವಲಕ್ಕಿ ಕುಟ್ಟುತ್ತಾರೆ. ಒಬ್ಬಳು ಏತವನ್ನು ತುಳಿಯುತ್ತಾಳೆ, ಇನ್ನೊಬ್ಬಳು ಒರಳಿನ ಹತ್ತಿರ ಕುಳಿತು ಒಂದು ಕೈಯಿಂದ ತಳ್ಳಿಕೊಡುವುದು–ಗಿಳ್ಳಿಕೊಡುವುದು ಮಾಡುತ್ತಿರುತ್ತಾಳೆ. ಅದೇ ಸಮಯದಲ್ಲಿ ಮಗುವಿಗೆ ಎದೆಹಾಲು ಕೊಡುತ್ತ ಇನ್ನೊಂದು ಕೈಯಿಂದ ಬೇಯಿಸಿದ ಬತ್ತವನ್ನು ಬಾಣಲೆಯಲ್ಲಿ ಹುರಿಯುತ್ತಿರುತ್ತಾಳೆ. ಇವೂ ಅಲ್ಲದೆ ಗಿರಾಕಿಗಳೊಡನೆ ಮಾತುಕತೆಯಾಡುತ್ತಿರುತ್ತಾಳೆ: 'ನೀವು ಇಷ್ಟು ಬಾಕಿ ಕೊಡಬೇಕಾಗಿದೆ, ಕೊಟ್ಟು ಹೋಗಿ.' ಒಂದೇ ಸಮಯಲ್ಲಿ ಇಷ್ಟು ಕೆಲಸ ಮಾಡುತ್ತಿದ್ದರೂ ಆಕೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರುತ್ತಾಳೆ ಆ ಏತದ ಕಣ್ಣು ತನ್ನ ಕೈಯನ್ನು ಜಜ್ಜದ ಹಾಗೆ. ಅದೇ ರೀತಿಯಾಗಿ ಭಗವಂತನಲ್ಲಿ ಮನಸ್ಸಿಟ್ಟು, ಸಂಸಾರದ ನಾನಾ ಕಾರ್ಯಗಳನ್ನೂ ಮಾಡಲು ಸಾಧ್ಯ. ಆದರೆ ಅಭ್ಯಾಸವೂ ಬೇಕು; ಎಚ್ಚರಿಕೆಯೂ ಬೇಕು. ಆಗ ಎರಡು ಕಡೆಯೂ ಮನಸ್ಸಿಡಲು ಸಾಧ್ಯವಾಗುತ್ತದೆ."

ನಟ: "ಮಹಾಶಯರೆ, ಆತ್ಮ ದೇಹದಿಂದ ಪ್ರತ್ಯೇಕ ಎಂಬುದಕ್ಕೆ ಪ್ರಮಾಣವೇನು?"

ಶ್ರೀರಾಮಕೃಷ್ಣರು: "ಪ್ರಮಾಣ? ಭಗವಂತನನ್ನು ನೋಡಲು ಸಾಧ್ಯ. ತಪಸ್ಸು ಮಾಡಿದರೆ ಭಗವಂತನ ದರ್ಶನ ದೊರೆಯುತ್ತದೆ—ಆತನ ಕೃಪೆಯಿಂದ. ಋಷಿಗಳು ಆತ್ಮಸಾಕ್ಷಾತ್ಕಾರ ಮಾಡಿಕೊಂಡಿದ್ದರು. ವಿಜ್ಞಾನದಿಂದ (ಸೈಎನ್ಸ್‌ನಿಂದ) ಭಗವತ್ತತ್ತ್ವವನ್ನು ಅರಿಯಲಾಗೋದಿಲ್ಲ. ಅದರಿಂದ ಕೇವಲ ಇದರೊಡನೆ ಅದನ್ನು ಬೆರಸಿದರೆ ಇದಾಗುತ್ತದೆ, ಅದರೊಡನೆ ಇದನ್ನು ಬೆರಸಿದರೆ ಅದಾಗುತ್ತದೆ ಎಂಬುದಾಗಿ ಇಂದ್ರಿಯಗ್ರಾಹ್ಯ ವಸ್ತುಗಳ ಸಂಬಂಧವಾಗಿ ಮಾತ್ರ ಅರಿತುಕೊಳ್ಳಬಹುದು.

"ಆದ್ದರಿಂದ ನಮ್ಮ ಈ ವ್ಯಾವಹಾರಿಕ ಬುದ್ಧಿಯಿಂದ ಆಧ್ಯಾತ್ಮಿಕ ತತ್ತ್ವಗಳನ್ನು ಅರಿಯಲಾಗುವುದಿಲ್ಲ. ಅವನ್ನು ಅರಿಯಬೇಕಾದರೆ ಸಾಧು ಸತ್ಪುರುಷರ ಸಹವಾಸ ಮಾಡಬೇಕು. ಡಾಕ್ಟರೊಡನೆ ಸುತ್ತಿದರೆ ನಾಡಿ ನೋಡುವುದನ್ನು ಕಲಿತುಕೊಳ್ಳಬಹುದು."

ನಟ: "ಅದು ನಿಜ. ಈಗ ನನಗೆ ಅರ್ಥವಾಯಿತು."

ಶ್ರೀರಾಮಕೃಷ್ಣರು: "ಮೊದಲು ತಪಸ್ಸು ಮಾಡಬೇಕು. ಆ ಬಳಿಕವೇ ಭಗವಂತನ ಸಾಕ್ಷಾತ್ಕಾರ. ಶಾಸ್ತ್ರಗಳ ಶ್ಲೋಕಗಳನ್ನೆಲ್ಲ ಕಂಠಪಾಠ ಮಾಡಿಕೊಂಡರೂ ಏನೂ ದೊರೆಯದು. 'ಸಿದ್ಧಿ, ಸಿದ್ಧಿ'[1] ಅಂತ ಬಾಯಲ್ಲಿ ಮಾತ್ರವೇ ಹೇಳುತ್ತಿದ್ದರೆ ಅಮಲೇರದು. ಸಿದ್ಧಿಯನ್ನು ಕುಡಿಯಬೇಕು.

"ಭಗವದ್ದರ್ಶನದ ಸಂಬಂಧವಾಗಿ ಜನರಿಗೆ ವಿಶದಪಡಿಸಲಾಗೋದಿಲ್ಲ. ಐದು ವರ್ಷದ ಬಾಲಕನಿಗೆ ದಾಂಪತ್ಯ ಜೀವನದ ಸುಖ ಅಂದರೆ ಏನು ಎಂಬುದನ್ನ ಅರಿಯುವಂತೆ ಮಾಡಲಾಗೋದಿಲ್ಲ."

ನಟ: "ಒಳ್ಳೇದು, ಆತ್ಮಸಾಕ್ಷಾತ್ಕಾರಕ್ಕೆ ಮಾರ್ಗವೇನು?"

ಈಗ ರಾಖಾಲ ಊಟಮಾಡಬೇಕಾಗಿದೆ. ಆದರೆ ಕೊಠಡಿಯಲ್ಲಿ ಅಷ್ಟೊಂದು ಜನ ಇರುವುದನ್ನು ನೋಡಿ ಸ್ವಲ್ಪ ಶಂಕಿಸುತ್ತಿದಾನೆ. ಈಗ ಕೆಲ ಕಾಲದಿಂದ ಪರಮಹಂಸರು ರಾಖಾಲನನ್ನು ಗೋಪಾಲಭಾವದಿಂದ ನೋಡುತ್ತಿದಾರೆ. ಅದು ಯಶೋದೆಯ ವಾತ್ಸಲ್ಯಭಾವದ ತದ್ವತ್ತೇ!

ಶ್ರೀರಾಮಕೃಷ್ಣರು ರಾಖಾಲನಿಗೆ: "ಊಟಮಾಡು. ನಾಚಿಕೆಯಾದರೆ ಇವರು ಒಂದು ಕಡೆಗೆ ಬಂದು ನಿಂತುಕೊಳ್ಳಲಿ. (ಒಬ್ಬ ಭಕ್ತನಿಗೆ)

---

1. ಬಂಗಿಯ ಸೊಪ್ಪಿನಿಂದ ತಯಾರುಮಾಡಿದ ಒಂದು ವಿಧದ ಪಾನೀಯ.

ರಾಖಾಲನಿಗಾಗಿ ಸ್ವಲ್ಪ 'ಐಸ್' ಇಡು. (ರಾಖಾಲನಿಗೆ) ವನಹುಗ್ಲಿಗೆ ನೀನು ಮತ್ತೆ ಹೋಗುತ್ತೀಯೇನು? ಬಿಸಿಲಿನಲ್ಲಿ ಹೋಗಬೇಡ."

ರಾಖಾಲ ಊಟಕ್ಕೆ ಕುಳಿತುಕೊಂಡ. ಪರಮಹಂಸರು ಈಗ ಮತ್ತೆ ಆ ನಟನೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ನೀವೆಲ್ಲರೂ ಅತಿಥಿಶಾಲೆಗೆ ಹೋಗಿ ಏಕೆ ಪ್ರಸಾದ ಸ್ವೀಕರಿಸಲಿಲ್ಲ? ನೀವೆಲ್ಲ ಇಲ್ಲೆ ಊಟ ಮಾಡಿಬಿಟ್ಟಿದ್ದರೆ ಚೆನ್ನಾಗಿತ್ತಲ್ಲ."

ನಟ: "ಎಲ್ಲರ ಮತವೂ ಒಂದೇ ಅಲ್ಲವಲ್ಲ; ಆದ್ದರಿಂದ ಬೇರೆಬೇರೆ ಅಡಿಗೆ ಆಗುತ್ತಿದೆ. ಅತಿಥಿಶಾಲೆಯಲ್ಲಿ ಹೋಗಿ ಊಟಮಾಡಲು ಎಲ್ಲರಿಗೂ ಇಚ್ಛೆಯಿಲ್ಲ."

ಈಗ ರಾಖಾಲ ಊಟಮಾಡುತ್ತಿದಾನೆ. ಪರಮಹಂಸರು ಭಕ್ತರೊಡನೆ ವರಾಂಡದಲ್ಲಿ ಕುಳಿತು ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ನಟನಿಗೆ: "ನೀನು ಆತ್ಮಸಾಕ್ಷಾತ್ಕಾರದ ವಿಷಯವಾಗಿ ಕೇಳಿದೆಯಲ್ಲ, ಅದಕ್ಕೆ ಉಪಾಯ, ವ್ಯಾಕುಲತೆ. ಕಾಯಾ ವಾಚಾ ಮನಸಾ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸಬೇಕು. ಪಿತ್ತ ಅಧಿಕವಾದಾಗ ಕಾಮಾಲೆರೋಗ ಬರುತ್ತದೆ. ಆಗ ಎಲ್ಲವೂ ಹಳದಿಯಾಗಿ ಕಾಣುತ್ತವೆ; ಹಳದಿ ಬಣ್ಣ ಬಿಟ್ಟು ಬೇರಾವ ಬಣ್ಣವನ್ನೂ ನೋಡಲಾಗೋದಿಲ್ಲ. ನಿಮ್ಮೊಳಗೆ ಯಾರು ಕೇವಲ ಹೆಂಗಸಿನ ಪಾರ್ಟನ್ನೇ ತೆಗೆದುಕೊಳ್ಳುತ್ತಾರೊ ಅವರಿಗೆ ಪ್ರಕೃತಿಯ ಭಾವ ಬಂದುಬಿಡುತ್ತದೆ; ಹೆಂಗಸಿನ ಸಂಬಂಧವಾಗಿ ಚಿಂತಿಸಿ ಹೆಂಗಸಿನ ಹಾವಭಾವಗಳೆಲ್ಲಾ ಬಂದುಬಿಡುತ್ತವೆ. ಅದೇ ರೀತಿಯಾಗಿ ಭಗವಂತನ ಸಂಬಂಧವಾಗಿ ಹಗಲಿರುಳು ಚಿಂತಿಸುತ್ತಿದ್ದರೆ ಆತನ ಸತ್ತ್ವವೇ ನಮಗೆ ಬಂದುಬಿಡುತ್ತದೆ.

"ಮನಸ್ಸೆಂಬುದು ಅಗಸನ ಮನೆಯ ಬಟ್ಟೆಯ ಹಾಗೆ. ಅದನ್ನ ಯಾವ ಬಣ್ಣದಲ್ಲಿ ಅದ್ದುತ್ತೀವೆಯೊ, ಅದಕ್ಕೆ ಆ ಬಣ್ಣ ಬಂದುಬಿಡುತ್ತದೆ."

ನಟ: "ಆದರೆ, ಒಮ್ಮೆ ಮನಸ್ಸನ್ನ ಅಗಸನ ಮನೆಗೆ ಕಳುಹಿಸಬೇಕಲ್ಲ."

ಶ್ರೀರಾಮಕೃಷ್ಣರು: "ಹೌದು. ಮೊದಲು ಚಿತ್ತಶುದ್ಧಿ ಆಗಬೇಕು. ಬಳಿಕ ಅದನ್ನು ಭಗವಂತನ ಕಡೆಗೆ ತಿರುಗಿಸಿದರೆ ಅದಕ್ಕೆ ಭಗವಂತನ ಬಣ್ಣ

ಹತ್ತಿಕೊಂಡುಬಿಡುತ್ತದೆ. ಹಾಗೆ ಮಾಡುವುದನ್ನು ಬಿಟ್ಟು ಅದನ್ನು ಸಂಸಾರದ ಕಡೆಗೆ, ನಾಟ್ಯದ ಕಡೆಗೆ ತಿರುಗಿಸಿದರೆ ಅದಕ್ಕೆ ಆ ಬಣ್ಣ ಬಂದು ಬಿಡುತ್ತದೆ.''

ಪರಮಹಂಸರು ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿದ್ದ ಹಾಗೇ ಕಲ್ಕತ್ತದಿಂದ ಹರಿ, ನಾರಾಯಣ, ನರೇಂದ್ರವಂದ್ಯೋಪಾಧ್ಯಾಯ ಮೊದಲಾದವರು ಬಂದು ಅವರಿಗೆ ಸಾಷ್ಟಾಂಗಪ್ರಣಾಮ ಮಾಡಿದರು. ನರೇಂದ್ರವಂದ್ಯೋ-ಪಾಧ್ಯಾಯ ಪ್ರೆಸಿಡೆನ್ಸಿ ಕಾಲೇಜಿನ ಸಂಸ್ಕೃತ ಅಧ್ಯಾಪಕನ ಮಗ. ಮನೆಯಲ್ಲಿ ಒಬ್ಬರಿಗೊಬ್ಬರಿಗೆ ಸರಿಹೋಗದೆ ಇದ್ದುದರಿಂದ ಹೆಂಡತಿ ಮಕ್ಕಳೊಡನೆ ಶ್ಯಾಮಪುಕುರಿನಲ್ಲಿ ಪ್ರತ್ಯೇಕವಾಗಿ ವಾಸಮಾಡುತ್ತಿದಾನೆ. ನರೇಂದ್ರ ಅತ್ಯಂತ ಸರಳ ಜೀವಿ. ವಯಸ್ಸು ಇಪ್ಪತ್ತೊಂಬತ್ತೊ ಮೂವತ್ತೊ ಇರಬೇಕು. ಆತ ಧ್ಯಾನದ ಸಮಯದಲ್ಲಿ ಘಂಟಾನಿನಾದವೇ ಮೊದಲಾದ ಶಬ್ದಗಳನ್ನು ಕೇಳುತ್ತಿರುತ್ತಾನೆ. ಭಾರತದ ಅನೇಕ ಭಾಗಗಳನ್ನು ಸುತ್ತಿದಾನೆ, ಆಗಾಗ ಬಂದು ಪರಮಹಂಸರ ದರ್ಶನ ಮಾಡಿ ಹೋಗುತ್ತಿದಾನೆ.

ನಾರಾಯಣ ಹದಿನಾರೊ ಹದಿನೇಳೊ ವರ್ಷದ ಯುವಕ. ಆತನನ್ನು ಪರಮಹಂಸರು ಬಹಳವಾಗಿ ಪ್ರೀತಿಸುತ್ತಿದಾರೆ. ಆತ ಆಗಾಗ ಬಂದು ಪರಮಹಂಸರ ದರ್ಶನ ಮಾಡಿ ಹೋಗುತ್ತಿದಾನೆ.

ಹರಿ ತನ್ನ ಸೋದರರೊಡನೆ ಬಾಗ್‌ಬಜಾರಿನಲ್ಲಿರುವ ತಮ್ಮ ಸ್ವಂತ ಮನೆಯಲ್ಲಿ ಇದ್ದುಕೊಂಡಿದಾನೆ. ಜನರಲ್ ಅಸೆಂಬ್ಲಿ ಇನ್‌ಸ್ಟಿಟ್ಯೂಷನ್ನಿನಲ್ಲಿ ಮೆಟ್ರಿಕ್ಯುಲೇಷನ್ ಪಾಸುಮಾಡಿದಾನೆ. ತಾತ್ಕಾಲಿಕವಾಗಿ ಈಗ ಮನೆಯಲ್ಲೇ ಇದ್ದುಕೊಂಡು ಭಗವಚ್ಚಿಂತನೆ, ಶಾಸ್ತ್ರಪಾಠ, ಯೋಗಾಭ್ಯಾಸಗಳಲ್ಲಿ ಕಾಲವನ್ನು ಕಳೆಯುತ್ತಿದಾನೆ. ಆಗಾಗ ದಕ್ಷಿಣೇಶ್ವರಕ್ಕೆ ಬಂದು ಪರಮ-ಹಂಸರ ದರ್ಶನ ಮಾಡಿಕೊಂಡು ಹೋಗುತ್ತಿದಾನೆ. ಪರಮಹಂಸರು ಬಾಗ್‌ಬಜಾರಿನಲ್ಲಿರುವ ಬಲರಾಮನ ಮನೆಗೆ ಬಂದಾಗ ಒಮ್ಮೊಮ್ಮೆ ಆತನನ್ನು ಅಲ್ಲಿಗೆ ಕರಸಿಕೊಳ್ಳುತ್ತಿದ್ದರು.

ಶ್ರೀರಾಮಕೃಷ್ಣರು ಭಕ್ತರಿಗೆ: ''ಬುದ್ಧದೇವನ ಸಂಬಂಧವಾಗಿ ಬಹಳವಾಗಿ ಕೇಳಿದೇನೆ. ಆತ ದಶಾವತಾರಗಳಲ್ಲಿ ಒಂದು ಅವತಾರ. ಬ್ರಹ್ಮ ಅಚಲ, ಕೂಟಸ್ಥ, ನಿಷ್ಕ್ರಿಯ, ಬೋಧಸ್ವರೂಪ. ಬುದ್ಧಿಯಾವಾಗ ಈ ಬೋಧಸ್ವರೂಪದಲ್ಲಿ ಲಯವಾಗುವುದೊ, ಆಗ ಬ್ರಹ್ಮಜ್ಞಾನ ಉಂಟಾಗುತ್ತದೆ; ಮನುಷ್ಯ ಬುದ್ಧನಾಗಿಬಿಡುತ್ತಾನೆ.

"ತೋತಾಪುರಿ ಹೇಳುತ್ತಿದ್ದ, ಮನಸ್ಸು ಬುದ್ಧಿಯಲ್ಲಿ ಲಯಹೊಂದುತ್ತದೆ, ಬುದ್ಧಿ ಬೋಧಸ್ವರೂಪದಲ್ಲಿ ಲಯಹೊಂದುತ್ತದೆ ಎಂದು

"'ಅಹಂ' ಎಂಬುದು ಇರುವವರೆಗೆ ಬ್ರಹ್ಮಜ್ಞಾನ ಉಂಟಾಗದು. ಬ್ರಹ್ಮಜ್ಞಾನ ದೊರೆತನಂತರ, ಭಗವಂತನ ದರ್ಶನ ದೊರೆತನಂತರ 'ಅಹಂ' ಎಂಬುದು ನಾವು ಹೇಳಿದ ಹಾಗೆ ಕೇಳುತ್ತದೆ. ಇಲ್ಲದಿದ್ದರೆ ಅದು ಹಾಗೆ ಮಾಡದು. ನಾವೇ ನಮ್ಮ ನೆರಳನ್ನು ಹಿಡಿಯಲಾಗೋದಿಲ್ಲ. ಆದರೆ ಸೂರ್ಯ ನೆತ್ತಿಯ ಮೇಲಕ್ಕೆ ಬಂದಾಗ ಅರ್ಧಮೊಳದ ಒಳಗೇ ಅದು ಇರುತ್ತದೆ."

ಒಬ್ಬ ಭಕ್ತ: "ಭಗವಂತನ ದರ್ಶನ, ಅದು ಹೇಗಿರುತ್ತೆ?"

ಶ್ರೀರಾಮಕೃಷ್ಣರು: "ನೀನು ನಾಟಕ ನೋಡಿಲ್ಲವೇನು? ಪ್ರೇಕ್ಷಕರು ಸುಮ್ಮನೆ ಕುಳಿತು ಪರಸ್ಪರ ಮಾತುಕತೆಗಳನ್ನಾಡುತ್ತಿರುತ್ತಾರೆ. ಪರದೆ ಇದ್ದಕ್ಕಿದ್ದಹಾಗೆ ಮೇಲಕ್ಕೆ ಹೋಗುತ್ತದೆ. ಆಗ ಎಲ್ಲರ ಇಡೀ ಮನಸ್ಸು ಅಭಿನಯದ ಕಡೆಗೆ ಹೋಗುತ್ತದೆ; ಬೇರಾವ ಕಡೆಗೂ ದೃಷ್ಟಿ ಹೋಗದು. ಸಮಾಧಿಯನ್ನು ಹೊಂದುವುದೂ ಹೀಗೆಯೇ. ಮತ್ತೆ ಯಾವಾಗ ಪರದೆ ಕೆಳಕ್ಕೆ ಬೀಳುತ್ತದೊ ಆಗ ಎಲ್ಲರೂ ಸುತ್ತಮುತ್ತ ದೃಷ್ಟಿ ಹಾಕುತ್ತಾರೆ. ಅದೇ ರೀತಿಯಾಗಿ ಮಾಯಾರೂಪದ ಪರದೆ ಬಿದ್ದಾಗ ಮನುಷ್ಯ ಬಹಿರ್ಮುಖನಾಗಿ ಬಿಡುತ್ತಾನೆ.

(ನರೇಂದ್ರ ವಂದ್ಯೋಪಾಧ್ಯಾಯನಿಗೆ) "ನೀನು ಬಹಳವಾಗಿ ದೇಶ ಸಂಚಾರ ಮಾಡಿ ಬಂದಿದೀಯೆ. ಸಾಧುಗಳ ಸಂಬಂಧವಾಗಿ ಏನಾದರೂ ಸ್ವಲ್ಪ ಹೇಳು"

ವಂದ್ಯೋಪಾಧ್ಯಾಯ ಭೂತಾನಿನಲ್ಲಿ ಇಬ್ಬರು ಯೋಗಿಗಳನ್ನು ನೋಡಿದ್ದ. ಅವರು ದಿನವೂ ಅರ್ಧಸೇರು ಬೇವಿನ ಎಲೆ ರಸ ಕುಡಿಯುತ್ತಿದ್ದರು. ಅವರ ವಿಷಯವಾಗಿ ಈಗ ಸ್ವಲ್ಪ ಹೊತ್ತು ಮಾತನಾಡಿದ. ಆತ ಒಮ್ಮೆ ನರ್ಮದಾ ತೀರದಲ್ಲಿರುವ ಒಬ್ಬ ಸಾಧುವಿನ ಆಶ್ರಮಕ್ಕೆ ಹೋಗಿದ್ದ. ಆ ಸಾಧು ಪ್ಯಾಂಟು, ಕೋಟು ಹಾಕಿಕೊಂಡಿದ್ದ ಈ ಬಂಗಾಳಿ ಬಾಬುವನ್ನು ನೋಡಿ ಹೇಳಿದನಂತೆ: "ಈತನ ಮಡಿಯಲ್ಲಿ ಚೂರಿ ಇದೆ."

ಶ್ರೀರಾಮಕೃಷ್ಣರು: "ನೋಡು, ಸಾಧುಗಳ ಚಿತ್ರವನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕು. ಆಗ ಸರ್ವದಾ ಭಗವದುದ್ದೀಪನವಾಗುತ್ತದೆ."

ವಂದ್ಯೋಪಾಧ್ಯಾಯ: "ನಿಮ್ಮ ಭಾವಚಿತ್ರವನ್ನು ಮನೆಯಲ್ಲಿ

ಇಟ್ಟಿದೇನೆ; ಜೊತೆಗೆ ಬೆಟ್ಟದಲ್ಲಿ ವಾಸಿಸುತ್ತಿದ್ದ ಒಬ್ಬ ಸಾಧುವಿನದು ಕೂಡ. ಆತ ಅದರಲ್ಲಿ ಗಾಂಜಾದ ಚಿಲುಮೆಯನ್ನು ಹೊತ್ತಿಸುತ್ತಿದಾನೆ.''

ಶ್ರೀರಾಮಕೃಷ್ಣರು: ''ಇದು ನಿಜ, ಸಾಧುಗಳ ಚಿತ್ರವನ್ನು ನೋಡಿದರೆ ಉದ್ದೀಪನವುಂಟಾಗುತ್ತದೆ. ಇದು ಕೃತಕ ಸೀತಾಫಲದ ಹಣ್ಣನ್ನು ನೋಡಿದರೆ ನಿಜವಾದ ಸೀತಾಫಲದ ಹಣ್ಣಿನ ಉದ್ದೀಪನವಾಗುವ ಹಾಗೆ; ಯುವತಿಯನ್ನು ನೋಡಿದರೆ ಜನರಲ್ಲಿ ಭೋಗದ ಉದ್ದೀಪನವಾಗುವ ಹಾಗೆ. ಈ ಕಾರಣದಿಂದಲೇ ನಾನು ಹೇಳುತ್ತಿರುವುದು, ಸರ್ವದಾ ಸಾಧುಸಂಗ ಆವಶ್ಯಕ ಎಂದು.

(ವಂದ್ಯೋಪಾಧ್ಯಾಯನಿಗೆ) ''ಸಂಸಾರದ ಬೇಗೆಯ ರುಚಿ ನಿನಗಾಗಲೆ ಉಂಟಾಗಿದೆ. ಭೋಗ ಬೇಕೆಂದರೇ ಬೇಗೆ. ಹದ್ದಿನ ಬಾಯಲ್ಲಿ ಎಲ್ಲಿಯವರೆಗೆ ಮೀನು ಇತ್ತೊ ಅಲ್ಲಿಯವರೆಗೆ ಕಾಗೆ ಗುಂಪುಗುಂಪಾಗಿ ಬಂದು ಅದನ್ನು ಕಾಡಿಸುತ್ತಿದ್ದುವು.

''ಸಾಧುಸಂಗದಿಂದ ಶಾಂತಿ ದೊರೆಯುತ್ತದೆ. ಮೊಸಳೆ ಬಹಳ ಹೊತ್ತಿನವರೆಗೆ ನೀರಿನಲ್ಲಿ ಇರುತ್ತದೆ. ಒಮ್ಮೊಮ್ಮೆ ನೀರಿನ ಮೇಲಕ್ಕೆ ಬರುತ್ತದೆ—ಉಸಿರಾಡುವುದಕ್ಕೆ. ಆಗ ದೊಡ್ಡ ನಿಶ್ವಾಸವನ್ನು ಬಿಟ್ಟು ಅನ್ನುತ್ತದೆ, ಬದುಕಿದೆನಪ್ಪ ಎಂದು.''

ನಟ: ''ಮಹಾಶಯರೆ, ನೀವು ಭೋಗದ ವಿಷಯವಾಗಿ ಹೇಳಿದಿರಲ್ಲ ಅದು ಖಂಡಿತ ಸತ್ಯ. ಭಗವಂತನನ್ನು ಭೋಗಸುಖಕ್ಕಾಗಿ ಪ್ರಾರ್ಥನೆ ಮಾಡಿದ್ದೇ ಆದರೆ ಕೊನೆಗೆ ಅನೇಕ ವಿಪತ್ತುಗಳಿಗೆ ಒಳಗಾಗಬೇಕಾಗುತ್ತದೆ. ಮನಸ್ಸಿನಲ್ಲಿ ಎಷ್ಟೊಂದೊ ವಿಧದ ಕಾಮನೆ, ವಾಸನೆ ಉಂಟಾಗುತ್ತವೆ. ಆದರೆ ಅವುಗಳಲ್ಲಿ ಎಲ್ಲವೂ ಶ್ರೇಯಸ್ಕರವಾದುವಲ್ಲ. ಭಗವಂತ ಕಲ್ಪತರು. ಆತನನ್ನು ಏನು ಕೇಳಿದರೂ ಅದು ದೊರೆತುಬಿಡುತ್ತದೆ. ಒಬ್ಬನಿಗೆ ಭಾವನೆ ಬಂತು: 'ಭಗವಂತ ಕಲ್ಪತರು ತಾನೆ. ಹಾಗಾದರೆ ನೋಡೋಣ ಈಗ ಹುಲಿ ಬರುತ್ತದೆಯೆ.' ಹುಲಿಯ ಚಿಂತನೆ ಮಾಡಿದೊಡನೇ ಹುಲಿ ಬಂದುಬಿಟ್ಟಿತು; ಆತನನ್ನು ತಿಂದೂ ಬಿಟ್ಟಿತು.''

ಶ್ರೀರಾಮಕೃಷ್ಣರು: ''ಹೌದು ನಿಜ. ಜ್ಞಾಪಕದಲ್ಲಿಟ್ಟುಕೊಳ್ಳಬೇಕು ಹುಲಿ ಬರುತ್ತದೆ ಎಂಬುದನ್ನ. ನಾನು ಇನ್ನೇನು ತಾನೆ ಹೇಳಲಿ? ಭಗವಂತನ ಕಡೆ ಮನಸ್ಸಿಡು. ಆತನನ್ನು ಎಂದಿಗೂ ಮರೆಯಬೇಡ. ಸರಳ ಹೃದಯದಿಂದ ಆತನನ್ನು ಕರೆದರೆ ಆತ ತನ್ನ ದರ್ಶನವನ್ನು ಕೊಟ್ಟೇ

ಕೊಡುತ್ತಾನೆ. ಒಂದು ವಿಷಯ. ನಾಟಕದ ಕೊನೆಯಲ್ಲಿ ಏನಾದರೂ ಭಗವಂತನ ವಿಷಯವಾಗಿ ಹಾಡಿ ಅದನ್ನು ಕೊನೆಮಾಡು. ಹಾಗೆ ಮಾಡಿದ್ದೇ ಆದರೆ ನಟರು, ಹಾಡುವವರು, ಪ್ರೇಕ್ಷಕರು ಎಲ್ಲರೂ ಭಗವಚ್ಚಿಂತನೆ ಮಾಡುತ್ತ ಮಾಡುತ್ತ ಮನೆಗೆ ಹಿಂದಿರುಗುತ್ತಾರೆ.''

ನಟರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಈಗ ಬೀಳ್ಕೊಳ್ಳುತ್ತಿದಾರೆ.

ಇಬ್ಬರು ಭಕ್ತೆಯರು ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡುತ್ತಿದಾರೆ. ಉಪವಾಸದಿಂದಿದ್ದು ಪರಮಹಂಸರ ದರ್ಶನ ಮಾಡಲು ಬಂದಿದಾರೆ. ಅವರಿಬ್ಬರೂ ಅತ್ತಿಗೆನಾದಿನಿಯರು, ಇಬ್ಬರು ಸೋದರರ ವಧುಗಳು. ವಯಸ್ಸು ಇಪ್ಪತ್ತೆರಡೊ ಇಪ್ಪತ್ತುಮೂರೊ ಇರಬೇಕು. ಇಬ್ಬರೂ ಮಕ್ಕಳ ತಾಯಿಯರಾಗಿದಾರೆ. ತಲೆಗೆ ಮುಸುಕು ಹಾಕಿಕೊಂಡಿದಾರೆ.

ಶ್ರೀರಾಮಕೃಷ್ಣರು ಭಕ್ತೆಯರಿಗೆ: ''ನೋಡಿ, ನೀವು ಶಿವಪೂಜೆ ಮಾಡಿ. ಪೂಜೆಯನ್ನು ಹೇಗೆ ಮಾಡುವುದು ಎಂದರೆ, 'ನಿತ್ಯಕರ್ಮ' ಎಂಬ ಹೆಸರಿನ ಒಂದು ಪುಸ್ತಕ ಇದೆ, ಅದನ್ನು ಅನುಸರಿಸಿ ಮಾಡಿ. ಭಗವಂತನ ಪೂಜೆ ಮಾಡಬೇಕಾದರೆ, ಅದಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡಿಕೊಳ್ಳಲು ಬಹಳ ಸಮಯ ಹಿಡಿಯುತ್ತದೆ. ಹೂವು ಕೊಯ್ಯೋದು, ಚಂದನ ಮಾಡಿಕೊಳ್ಳೋದು, ಪೂಜಾ ಸಾಮಗ್ರಿಗಳನ್ನ ಬೆಳಗಿಕೊಳ್ಳೋದು, ನೈವೇದ್ಯಕ್ಕೆ ಸಿದ್ಧತೆ ಮಾಡಿಕೊಳ್ಳೋದು ಇವೇ ಮೊದಲಾದ ಕೆಲಸಗಳನ್ನು ಮಾಡುವಾಗಲೆಲ್ಲಾ ಮನಸ್ಸು ಭಗವಂತನ ಕಡೆಗೇ ಹರಿಯುತ್ತಿರುತ್ತದೆ. ಹೀನಬುದ್ಧಿ, ಕೋಪ, ದ್ವೇಷ ಇವೆಲ್ಲಾ ತೊಲಗಿಹೋಗುತ್ತವೆ. ನೀವಿಬ್ಬರೂ ಮಾತುಕತೆಗಳಾಡುವಾಗ ಭಗವಂತನ ವಿಷಯವಾಗೇ ಮಾತುಕತೆಗಳಾಡಿ.

''ಮುಖ್ಯವಾಗಿ ಮಾಡಬೇಕಾದ್ದೇನೆಂದರೆ, ಹೇಗಾದರೂ ಮಾಡಿ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಬೇಕು. ಒಮ್ಮೆಯೂ ಆತನನ್ನು ಮರೆಯಕೂಡದು. ಅದು ತೈಲಧಾರೆಯಂತೆ ಅವಿಚ್ಛಿನ್ನವಾಗಿರಬೇಕು. ಒಂದು ಇಟ್ಟಿಗೆಯನ್ನೇ ಆಗಲಿ ಅಥವಾ ಕಲ್ಲನ್ನೇ ಆಗಲಿ ಅದೇ ಭಗವಂತ ಎಂದು ಭಾವಿಸಿ ಶ್ರದ್ಧಾಭಕ್ತಿಯಿಂದ ಪೂಜಿಸುವುದಾದರೆ, ಅದರಿಂದಲೇ, ಭಗವಂತನ ಕೃಪೆಯಿಂದ, ಆತನ ದರ್ಶನ ದೊರೆತುಬಿಡುವ ಸಂಭವ.

"ಈಗತಾನೆ ಹೇಳಿದೆನಲ್ಲ ಶಿವಪೂಜೆಯ ವಿಷಯವಾಗಿ—ಇವನ್ನೆಲ್ಲ ಮಾಡಬೇಕು. ಒಮ್ಮೆ ಮನಸ್ಸು ಪರಿಪಕ್ವವಾಯಿತು ಎಂದರೆ, ಬಳಿಕ ಹೆಚ್ಚು ಕಾಲ ಪೂಜೆಪುರಸ್ಕಾರಗಳನ್ನ ಮುಂದುವರಿಸಬೇಕಾಗಿರುವುದಿಲ್ಲ. ಆಗ ಯಾವಾಗಲೂ ಮನಸ್ಸು ಯೋಗಮುಖವಾಗಿರುತ್ತದೆ, ಸರ್ವದಾ ಸ್ಮರಣ ಮನನ ನಡೆದುಕೊಂಡೇ ಹೋಗುತ್ತಿರುತ್ತದೆ."

ಅತ್ತಿಗೆ: "ನಮಗೇನಾದರೂ ಸ್ವಲ್ಪ ಉಪದೇಶ-ಗಿಪದೇಶ?"

ಶ್ರೀರಾಮಕೃಷ್ಣರು: "ನಾನು ಯಾರಿಗೂ ಮಂತ್ರೋಪದೇಶ ಮಾಡುತ್ತಿಲ್ಲ. ಮಂತ್ರೋಪದೇಶ ಮಾಡಿದ್ದೇ ಆದರೆ ಶಿಷ್ಯನ ಪಾಪ-ಗೀಪ ಗಳನ್ನೆಲ್ಲಾ ಹೊತ್ತುಕೊಳ್ಳಬೇಕಾಗುತ್ತದೆ. ಭಗವತಿ ನನ್ನನ್ನು ಬಾಲಕನ ಅವಸ್ಥೆಯಲ್ಲಿ ಇಟ್ಟಿದಾಳೆ. ಸದ್ಯಕ್ಕೆ ನೀವು ನಾನು ತಿಳಿಸಿರುವಂತೆ ಶಿವ ಪೂಜೆಯನ್ನು ಮಾಡಿ. ಆಗಾಗ ಇಲ್ಲಿಗೆ ಬರುತ್ತಿರಿ—ಮುಂದೆ ಭಗವಂತನ ಇಚ್ಛೆಯಂತೆ ಏನಾಗಬೇಕೊ ಅದು ಆಗುತ್ತದೆ. ಸ್ನಾನಜಾತ್ರೆಯ ದಿನ ಮತ್ತೆ ಇಲ್ಲಿಗೆ ಬರಲು ಪ್ರಯತ್ನಿಸಿ. ಮನೆಯಲ್ಲಿ ಭಗವನ್ನಾಮ ಮಾಡ ಬೇಕು ಎಂಬುದಾಗಿ ನಾನು ತಿಳಿಸಿದ್ದೆನಲ್ಲ, ನೀವು ಹಾಗೆ ಮಾಡುತ್ತಿದೀ ರೇನು?"

ಅತ್ತಿಗೆ: "ಹೌದು, ಮಾಡುತ್ತಿದೇವೆ."

ಶ್ರೀರಾಮಕೃಷ್ಣರು: "ಉಪವಾಸದಿಂದಿದ್ದೇಕೆ ಬಂದಿದೀರಿ? ಊಟ ಮಾಡಿ ಬರಬೇಕು. ಹೆಂಗಸರೆಲ್ಲರೂ ಭಗವತಿಯ ಒಂದೊಂದು ರೂಪ ವಾದ್ದರಿಂದ ಅವರು ಕಷ್ಟಪಡುವುದನ್ನು ನಾನು ನೋಡಲಾರೆ. ನೀವೆಲ್ಲರೂ ಭಗವತಿಯ ಒಂದೊಂದು ರೂಪವೇ. ಇನ್ನು ಮುಂದೆ ಊಟ ಮಾಡಿ ಬನ್ನಿ, ಆನಂದದಿಂದ ಇರಿ."

ಹೀಗೆಂದು ಹೇಳಿ ಪರಮಹಂಸರು ರಾಮಲಾಲನಿಗೆ ಸಂಜ್ಞೆಮಾಡಿ ದರು, ಭಕ್ತೆಯರಿಗೆ ಉಪಾಹಾರ ಕೊಡುವಂತೆ. ಫಲಹಾರಿಣೀದೇವಿಗೆ ಅರ್ಪಿಸಿದ್ದ ಹಣ್ಣು ಹಂಪಲಾದಿಗಳ ಪ್ರಸಾದ ಆ ಭಕ್ತೆಯರಿಗೆ ದೊರೆಯಿತು.

ಶ್ರೀರಾಮಕೃಷ್ಣರು ಹೇಳಿದರು: "ಈಗ ನೀವು ಒಂದು ಸ್ವಲ್ಪ ಉಪಾಹಾರ ಮಾಡಿದಿರಿ. ನನ್ನ ಮನಸ್ಸಿಗೆ ಸ್ವಲ್ಪ ಶಾಂತಿಯಾಯಿತು. ಹೆಂಗಸರು ಉಪವಾಸದಿಂದಿರುವುದನ್ನ ನಾನು ಕಣ್ಣಿಂದ ನೋಡಲಾರೆ."

ಘಂಟೆ ಸಾಯಂಕಾಲ ಐದು. ಪರಮಹಂಸರು ಶಿವದೇವಾಲಯಗಳ

ಹಂತಗಳ ಮೇಲೆ ಕುಳಿತಿದಾರೆ. ಹತ್ತಿರದಲ್ಲಿ ಅಧರಸೇನ, ಡಾಕ್ಟರ್ ಸಿತಾಯಿ, ಮಾಸ್ಟರ್ ಇವರೇ ಮೊದಲಾದ ಭಕ್ತರು ಕುಳಿತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ನೋಡಿ, ನನ್ನ ಸ್ವಭಾವ ಬದಲಾವಣೆ ಹೊಂದುತ್ತಿದೆ."

ಪರಮಹಂಸರು ಈಗ ಏನೊ ಒಂದು ರಹಸ್ಯ ವಿಷಯ ತಿಳಿಸಬೇಕೆಂಬುದಾಗಿ ಒಂದು ಹಂತ ಕೆಳಕ್ಕೆ ಇಳಿದು ಭಕ್ತರ ಹತ್ತಿರ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು: "ನೀವೆಲ್ಲರೂ ಭಕ್ತರು. ನಿಮಗೆ ಇದನ್ನು ತಿಳಿಸಲು ಯಾವ ಸಂಕೋಚವೂ ಆಗುತ್ತಿಲ್ಲ. ಈಗ ಕೆಲವು ಕಾಲದಿಂದ ನನಗೆ ಭಗವಂತನ ಚಿನ್ಮಯ ರೂಪ ದರ್ಶನ ಆಗುತ್ತಿಲ್ಲ. ಈಗ ಸಾಕಾರ ನರರೂಪದಿಂದ ಕಾಣಿಸಿಕೊಳ್ಳುತ್ತಿದಾನೆ. ನನ್ನ ಸ್ವಭಾವ ಭಗವಂತನ ರೂಪವನ್ನು ದರ್ಶನ, ಸ್ಪರ್ಶನ, ಆಲಿಂಗನ ಮಾಡಿಕೊಳ್ಳುವುದು. ಭಗವಂತ ಈಗ ಹೇಳುತ್ತಿದಾನೆ: 'ನೀನು ದೇಹಧಾರಣೆ ಮಾಡಿದೀಯೆ; ನನ್ನ ಸಾಕಾರ ನರರೂಪದೊಡನೆ ಆನಂದಪಡು.'

"ಭಗವಂತನೇನೊ ಸಕಲ ಜೀವರಾಶಿಗಳಲ್ಲೂ ಇದಾನೆ, ಆದರೆ ಮನುಷ್ಯನಲ್ಲಿ ಅಧಿಕವಾಗಿ ವ್ಯಕ್ತವಾಗಿದಾನೆ. ಮನುಷ್ಯನೇನು ಅಲ್ಪನೇ? ಭಗವಚ್ಚಿಂತನೆ ಮಾಡಬಲ್ಲ, ಅನಂತನ ಧ್ಯಾನ ಮಾಡಬಲ್ಲ. ಇದು ಅನ್ಯ ಜೀವಿಗಳ ಕೈಯಲ್ಲಿ ಸಾಧ್ಯವಿಲ್ಲ. ಅನ್ಯ ಜೀವಜಂತುಗಳಲ್ಲಿ, ಮರಗಿಡಗಳಲ್ಲಿ, ಸರ್ವಭೂತಗಳಲ್ಲೂ ಭಗವಂತ ಇದಾನೆ, ಆದರೆ ಆತ ಮನುಷ್ಯನಲ್ಲಿ ಹೆಚ್ಚಾಗಿ ವ್ಯಕ್ತವಾಗಿದಾನೆ. ಅಗ್ನಿ ಎಲ್ಲಾ ಭೂತಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಇದೆ; ಆದರೆ ಕಟ್ಟಿಗೆಯಲ್ಲಿ ಹೆಚ್ಚಾಗಿ ವ್ಯಕ್ತವಾಗಿದೆ. ರಾಮ ಲಕ್ಷ್ಮಣನಿಗೆ ಹೇಳಿದ: 'ಸೋದರ, ಹಾಗೇ ಆನೆ ಕಡೆ ನೋಡು. ಅದು ಎಷ್ಟು ದೊಡ್ಡ ಪ್ರಾಣಿ, ಆದರೆ ಅದರ ಕೈಯಲ್ಲಿ ಭಗವಂತನ ಚಿಂತನೆ ಸಾಧ್ಯವಿಲ್ಲ.'

"ಅವತಾರಪುರುಷರಲ್ಲಿ ಭಗವಂತ ಹೆಚ್ಚಾಗಿ ವ್ಯಕ್ತವಾಗಿರುತ್ತಾನೆ. ರಾಮ ಲಕ್ಷ್ಮಣನಿಗೆ ಹೇಳಿದ: 'ಸೋದರ, ಯಾರಲ್ಲೇ ಆಗಲಿ ಊರ್ಜಿತ ಭಕ್ತಿ ಬೆಳೆದು, ಆತ ಭಾವಪರವಶನಾಗಿ ನಗುವುದು, ಅಳುವುದು, ನರ್ತಿಸುವುದು, ಹಾಡುವುದು ಇವನ್ನು ಮಾಡುತ್ತಿದ್ದರೆ, ಆತನಲ್ಲಿ ನಾನು ನಿಜವಾಗಿಯೂ ಇದೇನೆ ಎಂಬುದನ್ನ ತಿಳಿದುಕೊ.'"

ಪರಮಹಂಸರು ಸುಮ್ಮನೆ ಕುಳಿತಿದಾರೆ. ಈಗ ಮತ್ತೆ ಮಾತುಕತೆ ಆಡಲು ಆರಂಭಿಸಿದಾರೆ.

ಶ್ರೀರಾಮಕೃಷ್ಣರು: "ಕೇಶವಸೇನ ಇಲ್ಲಿಗೆ ಅಡಿಗಡಿಗೆ ಬರುತ್ತಿದ್ದ. ಇಲ್ಲಿಗೆ ಬಂದನಂತರ ಬಹಳವಾಗಿ ಪರಿವರ್ತನೆ ಹೊಂದಿಬಿಟ್ಟ. ಕೊನೆಯಲ್ಲಿ ಒಬ್ಬ ಮಹಾ ವ್ಯಕ್ತಿ ಆಗಿಬಿಟ್ಟ. ಇಲ್ಲಿಗೆ ಅನೇಕ ಸಲ ಬಂದಿದ್ದ—ತನ್ನ ಅನುಯಾಯಿಗಳನ್ನೆಲ್ಲಾ ಕಟ್ಟಿಕೊಂಡು; ಒಂಟಿಯಾಗಿ ಬರಲೂ ಆತನಿಗೆ ಇಚ್ಛೆ ಇತ್ತು. ಜೀವನದ ಪ್ರಾರಂಭದಲ್ಲಿ ಕೇಶವನಿಗೆ ಸಾಧುಸಂಗ ದೊರೆಯಲಿಲ್ಲ.

"ಕೇಶವನನ್ನು ನಾನು ಕೊಲುತೊಲದಲ್ಲಿರುವ ಆತನ ಮನೆಗೆ ಹೋಗಿ ಸಂಧಿಸಿದೆ. ಹೃದೆ ನನ್ನೊಡನೆ ಬಂದಿದ್ದ. ಕೇಶವಸೇನ ಇದ್ದ ಕೊಠಡಿಗೇ ನಮ್ಮನ್ನು ಕರೆದುಕೊಂಡು ಹೋಗಿ ಕೂರಿಸಿದರು. ಮೇಜದ ಮೇಲೆ ಏನನ್ನೊ ಬರೆಯುತ್ತಿದ್ದ. ಸ್ವಲ್ಪ ಹೊತ್ತೇ ಆದನಂತರ ಬರೆಯುವುದನ್ನು ನಿಲ್ಲಿಸಿ ಕುರ್ಚಿಯಿಂದಿಳಿದುಬಂದು ನಮ್ಮೊಡನೆ ಕುಳಿತುಕೊಂಡ. ನಮಸ್ಕಾರ-ಗಿಮಸ್ಕಾರ ಏನನ್ನೂ ಮಾಡಲಿಲ್ಲ.

"ಇಲ್ಲಿಗೆ ಆಗಾಗ ಬರುತ್ತಿದ್ದ. ನಾನು ಒಂದು ದಿನ ಭಾವಾವಸ್ಥೆಯಲ್ಲಿ ಹೇಳಿದೆ: 'ಸಾಧು ಸತ್ಪುರುಷರ ಸಮ್ಮುಖದಲ್ಲಿ ಕಾಲಿನ ಮೇಲೆ ಕಾಲು ಹಾಕಿಕೊಂಡು ಕುಳಿತುಕೊಳ್ಳಬಾರದು. ಅದರಿಂದ ರಜೋಗುಣ ವೃದ್ಧಿಯಾಗಿಬಿಡುತ್ತದೆ.' ಆತ ಮತ್ತು ಆತನ ಅನುಯಾಯಿಗಳು ಬಂದೊಡನೇ ನಾನು ಅವರಿಗೆ ನಮಸ್ಕಾರಮಾಡಿಬಿಡುತ್ತಿದ್ದೆ. ಕ್ರಮೇಣ ಅವರು ಸಾಷ್ಟಾಂಗಪ್ರಣಾಮ ಮಾಡುವುದನ್ನು ಕಲಿತುಕೊಂಡರು.

"ನಾನು ಕೇಶವನಿಗೆ ಹೇಳಿದೆ: 'ನೀವು ಹರಿನಾಮಸಂಕೀರ್ತನೆ ಮಾಡಿ. ಕಲಿಯುಗದಲ್ಲಿ ಭಗವಂತನ ನಾಮಗುಣಕೀರ್ತನೆ ಮಾಡಬೇಕು.' ಅನಂತರ ಅವರು ತಾಳಮೃದಂಗಗಳೊಡನೆ ಭಗವನ್ನಾಮಗುಣಕೀರ್ತನೆ ಮಾಡಲಾರಂಭಿಸಿದರು.[1]

---

1. ಕೇಶವಸೇನ ಮತ್ತು ಆತನ ಅನುಯಾಯಿಗಳು ತಾಳಮೃದಂಗಗಳೊಡನೆ ಒಂದು ಕೆಲವು ವರ್ಷಗಳ ಕಾಲ ಬ್ರಹ್ಮನಾಮಸಂಕೀರ್ತನೆ ಮಾಡುತ್ತಿದ್ದರು. ಶ್ರೀರಾಮಕೃಷ್ಣರನ್ನು ೧೮೭೫ನೆ ಇಸವಿಯಲ್ಲಿ ಸಂಧಿಸಿದನಂತರ, ವಿಶೇಷವಾದ ಶ್ರದ್ಧಾಭಕ್ತಿಯಿಂದ ಹರಿನಾಮ, ಭಗವತಿಯ ನಾಮ ಇವುಗಳ ಕೀರ್ತನೆ ಮಾಡಲಾರಂಭಿಸಿದರು. [ಇದು 'ಮ', ಬಂಗಾಳಿಯ ಕಥಾಮೃತ Vನೆ ಭಾಗ ೧೧೩ನೆ ಪುಟದಲ್ಲಿ ಕೊಟ್ಟಿರುವ ಟಿಪ್ಪಣಿ.]

"ಹರಿನಾಮದಲ್ಲಿ ನನಗೆ ಶ್ರದ್ಧೆ ಮೊದಲು ಇದ್ದುದಕ್ಕಿಂತಲೂ ಅಧಿಕವಾಗಿ ಬಲಗೊಳ್ಳಲು ಕಾರಣ ಏನು ಗೊತ್ತೆ? ಈ ದೇವಾಲಯಕ್ಕೆ ಸಾಧು ಸತ್ಪುರುಷರು ಬಂದು ಹೋಗುತ್ತಿರುವುದು ನಿಮಗೆ ಗೊತ್ತೇ ಇದೆ. ಒಮ್ಮೆ ಒಬ್ಬ ಮುಲ್ತಾನಿ ಸಾಧು ಬಂದಿದ್ದ. ಗಂಗಾಸಾಗರಕ್ಕೆ ಹೋಗುವ ಪಾರ್ಟಿಗಾಗಿ ಇಲ್ಲಿ ಕಾದಿದ್ದ. (ಮಾಸ್ಟರನ್ನು ತೋರಿಸಿ) ಈತನ ವಯಸ್ಸಿನ ಸಾಧು. ಆತ ನನಗೆ ಹೇಳಿದ: 'ಈ ಯುಗಕ್ಕೆ ಉಪಾಯ ನಾರದೀಯ ಭಕ್ತಿ.'

"ಒಂದು ದಿನ ಕೇಶವಸೇನ ತನ್ನ ಅನುಯಾಯಿಗಳೊಡನೆ ಇಲ್ಲಿಗೆ ಬಂದಿದ್ದ. ರಾತ್ರಿ ಹತ್ತು ಘಂಟೆಯವರೆಗೆ ಇಲ್ಲೇ ಇದ್ದ. ಪ್ರತಾಪ ಮತ್ತೆ ಇನ್ನೂ ಕೆಲವರು ಹೇಳಿದರು, ರಾತ್ರಿಯನ್ನು ಇಲ್ಲೇ ಕಳೆದುಬಿಡೋಣ ಎಂದು. ಕೇಶವ ಹೇಳಿದ: 'ಇಲ್ಲ, ಸಾಧ್ಯವಿಲ್ಲ. ಮನೆಯಲ್ಲಿ ಕೆಲಸವಿದೆ. ಹೋಗಲೇ ಬೇಕು.' ಆಗ ನಾನು ನಕ್ಕು ಹೇಳಿದೆ: 'ಮೀನಿನ ಕುಕ್ಕೆಯ ಗಂಧ ಬಾರದಿದ್ದರೆ ನಿದ್ದೆ ಹತ್ತೋದಿಲ್ಲವೇನು?' ಒಬ್ಬ ಬೆಸ್ತರವಳು ಒಮ್ಮೆ ಒಬ್ಬ ಮಾಲಿಯ ಮನೆಗೆ ಅತಿಥಿಯಾಗಿ ಬಂದಳು. ಆಕೆ ಪೇಟೆಯಲ್ಲಿ ಮೀನನ್ನು ಮಾರಿ ಬರೀ ಕುಕ್ಕೆಯನ್ನು ಕೈಯಲ್ಲಿ ಹಿಡಿದುಕೊಂಡು ಬಂದಿದ್ದಳು. ಹೂವನ್ನು ಶೇಖರಿಸಿಡುವ ಕೊಠಡಿಯಲ್ಲಿ ಅವಳಿಗೆ ಮಲಗಲು ಸ್ಥಳ ದೊರೆಯಿತು. ಬಹಳ ಹೊತ್ತಿನವರೆಗೆ ಹೂವುಗಳ ಸುವಾಸನೆಯ ದೆಸೆಯಿಂದ ಆಕೆಗೆ ನಿದ್ದೆಯೇ ಹತ್ತಲಿಲ್ಲ. ಮನೆಯ ಯಜಮಾನಿ ಆಕೆಯ ಆ ಅವಸ್ಥೆಯನ್ನು ನೋಡಿ ಕೇಳಿದಳು: "ಏನಮ್ಮ, ನೀನು ಸುಮ್ಮನೆ ಹೊರಳಾಡುತ್ತಿದೀಯಲ್ಲ ಏಕೆ?" ಅವಳು ಉತ್ತರವಿತ್ತಳು: "ಇದೇಕೊ ಗೊತ್ತಾಗುತ್ತಿಲ್ಲ. ಬಹುಶಃ ಈ ಹೂವುಗಳ ಸುವಾಸನೆಯಿಂದ ನಿದ್ದೆ ಹತ್ತುತ್ತಿಲ್ಲ ಅಂತ ಕಾಣುತ್ತೆ. ದಯವಿಟ್ಟು ನೀನು ನನ್ನ ಮೀನಿನ ಕುಕ್ಕೆಯನ್ನು ತಂದುಕೊಡುತ್ತೀಯಾ? ಬಹುಶಃ ಆಗ ನಿದ್ದೆ ಹತ್ತಬಹುದು." ಕೊನೆಗೆ ಆ ಕುಕ್ಕೆಯನ್ನು ತಂದುಕೊಟ್ಟನಂತರ ಬೆಸ್ತರವಳು ಅದಕ್ಕೆ ನೀರು ಚಿಮುಕಿಸಿ ಮೂಗಿನ ಹತ್ತಿರ ಇಟ್ಟುಕೊಂಡದ್ದರಿಂದ ಚೆನ್ನಾಗಿ ನಿದ್ದೆ ಹತ್ತಿ ರಾತ್ರಿಯೆಲ್ಲಾ ಗೊರಕೆ ಹೊಡೆದಳು!'

"ಈ ಕಥೆ ಕೇಳಿ ಕೇಶವನ ಅನುಯಾಯಿಗಳೆಲ್ಲರೂ ಹೊಟ್ಟೆ ಹುಣ್ಣಾಗುವವರೆಗೆ ನಕ್ಕರು.

"ಕೇಶವ ಸಾಯಂಕಾಲವಾದನಂತರ ಸ್ನಾನಘಟ್ಟದ ಮೇಲೆ ಉಪಾಸನೆಯನ್ನು ಮುಗಿಸಿದ. ಅನಂತರ ನಾನು ಕೇಶವನಿಗೆ ಹೇಳಿದೆ: 'ನೋಡು,

ಭಗವಂತನೇ ಒಂದು ರೂಪದಲ್ಲಿ ಭಾಗವತ ಆಗಿದಾನೆ; ಆದ್ದರಿಂದ ವೇದ, ಪುರಾಣ, ತಂತ್ರ ಇವನ್ನೆಲ್ಲ ಪೂಜೆಮಾಡಬೇಕು. ಮತ್ತೆ ಆತ ಇನ್ನೊಂದು ರೂಪದಲ್ಲಿ ಭಕ್ತನಾಗಿದಾನೆ. ಭಕ್ತನ ಹೃದಯ ಆತನ ಬೈಠಕ್‌ಖಾನೆ. ಅಲ್ಲಿಗೆ ಹೋದರೆ ಸುಲಭವಾಗಿ ಮನೆಯ ಯಜಮಾನನನ್ನು ನೋಡಬಹುದು. ಆದ್ದರಿಂದ ಭಕ್ತನನ್ನು ಪೂಜಿಸಿದರೆ ಭಗವಂತನನ್ನು ಪೂಜಿಸಿದಂತೆಯೇ.'

"ಕೇಶವ ಮತ್ತು ಆತನ ಅನುಯಾಯಿಗಳು ಈ ಮಾತುಕತೆಗಳನ್ನೆಲ್ಲಾ ಚೆನ್ನಾಗಿ ಮನಸ್ಸಿಟ್ಟು ಕೇಳಿದರು. ಪೂರ್ಣಿಮೆಯಾಗಿದ್ದುದರಿಂದ ಎಲ್ಲೆಲ್ಲೂ ಬೆಳುದಿಂಗಳು. ನಾವೆಲ್ಲರೂ ಮುಖಮಂಟಪದಲ್ಲಿ ಕುಳಿತುಕೊಂಡಿದ್ದೆವು. ನಾನು ಹೇಳಿದೆ: 'ಈಗ ಎಲ್ಲರೂ ಹೇಳಿ: "ಭಾಗವತ—ಭಕ್ತ—ಭಗವಾನ್" ಅಂತ.' ಆಗ ಎಲ್ಲರೂ ಸೇರಿ ಏಕಕಂಠದಿಂದ ಹೇಳಿದರು: 'ಭಾಗವತ — ಭಕ್ತ — ಭಗವಾನ್.' ಮತ್ತೆ ಹೇಳಿದೆ: 'ಹೇಳಿ: "ಬ್ರಹ್ಮನೇ ಶಕ್ತಿ, ಶಕ್ತಿಯೇ ಬ್ರಹ್ಮ" ಅಂತ.' ಮತ್ತೆ ಅವರು ಏಕಕಂಠದಿಂದ ಹೇಳಿದರು: 'ಬ್ರಹ್ಮನೇ ಶಕ್ತಿ, ಶಕ್ತಿಯೇ ಬ್ರಹ್ಮ.' ಅವರಿಗೆ ನಾನು ಹೇಳಿದೆ: 'ಯಾರನ್ನ ನೀವು ಬ್ರಹ್ಮ ಅಂತ ಕರೆಯುತ್ತೀರೊ, ಆತನನ್ನೇ ನಾನು ತಾಯಿ ಎಂಬುದಾಗಿ ಕರೆಯುತ್ತೇನೆ. ತಾಯಿ ಎಂಬುದು ಒಳ್ಳೆ ಮಧುರ ನಾಮ.'

"ಆದರೆ ಯಾವಾಗ ನಾನು ಮತ್ತೆ ಹೇಳಿದೆನೊ: 'ಹೇಳಿ ಈಗ: "ಗುರು—ಕೃಷ್ಣ—ವೈಷ್ಣವ" ಎಂಬುದಾಗಿ', ಆಗ ಕೇಶವ ಹೇಳಿದ: 'ಮಹಾಶಯರೆ, ಅಲ್ಲಿಯವರೆಗೆ ಈಗ ಸದ್ಯಕ್ಕೆ ಬೇಡಿ. ಹಾಗೇನಾದರೂ ಮಾಡಿದ್ದೇ ಆದರೆ ಜನ ಭಾವಿಸಿಕೊಳ್ಳುತ್ತಾರೆ, ನಾವು ತೇಟ್ ವೈಷ್ಣವರೇ.'

"ನಾನು ಕೇಶವನಿಗೆ ಆಗಾಗ ಹೇಳುತ್ತಿದ್ದೆ: 'ನೀವು ಯಾರನ್ನ ಬ್ರಹ್ಮ ಅಂತ ಕರೆಯುತ್ತೀರೊ, ಆತನನ್ನೇ ನಾನು ಶಕ್ತಿ, ಆದ್ಯಾಶಕ್ತಿ ಅಂತ ಕರೆಯುತ್ತೇನೆ. ಯಾವಾಗ ಆತ ವಾಙ್ಮನಾತೀತ, ನಿರ್ಗುಣ, ನಿಷ್ಕ್ರಿಯನಾಗಿರುತ್ತಾನೊ ಆಗ ವೇದ ಆತನನ್ನು ಬ್ರಹ್ಮ ಅಂತ ಕರೆಯುತ್ತದೆ. ಯಾವಾಗ ಆತ ಸೃಷ್ಟಿಸ್ಥಿತಿಪ್ರಳಯಕಾರ್ಯಗಳನ್ನ ಮಾಡುತ್ತಾನೊ ಆಗ ಆತನನ್ನೇ ಶಕ್ತಿ, ಆದ್ಯಾಶಕ್ತಿ ಎಂಬುದಾಗಿ ಕರೆಯುತ್ತೇನೆ.'

"ಕೇಶವನಿಗೆ ಹೇಳಿದೆ: 'ಸಂಸಾರದಲ್ಲಿ ಭಗವಂತನ ಸಾಕ್ಷಾತ್ಕಾರ ದೊರೆಯುವುದು ಬಹಳ ಕಷ್ಟ. ಯಾವ ಕೊಠಡಿಯಲ್ಲಿ ಉಪ್ಪಿನಕಾಯಿ, ಹುಣಿಸೆಹಣ್ಣು, ನೀರಿನ ಗುಡಾಣ ಇವೆಯೋ ಆ ಕೊಠಡಿಯಲ್ಲೇ ವಿಷಮ-

ಶೀತಜ್ವರದ ರೋಗಿಯನ್ನು ಇಟ್ಟರೆ ಆತ ಗುಣಹೊಂದುವ ಬಗೆ ಹೇಗೆ? ಆದ್ದರಿಂದ ಆಗಾಗ ಸಾಧನೆಭಜನೆ ಮಾಡಲು ನಿರ್ಜನ ಪ್ರದೇಶಕ್ಕೆ ಹೋಗಿ ಇರಬೇಕು. ಮರದ ಬುಡ ದಪ್ಪವಾದನಂತರ ಆನೆಯನ್ನು ಬೇಕಾದರೆ ಅದಕ್ಕೆ ಕಟ್ಟಬಹುದು; ಆದರೆ ಎಳೆ ಸಸಿಯನ್ನ ಆಡು ದನಕರು ತಿಂದು ಬಿಡುತ್ತವೆ.' ಇದಕ್ಕಾಗೇ ಕೇಶವ ಉಪನ್ಯಾಸ ಕೊಡುವಾಗ ಹೇಳುತ್ತಿದ್ದ: 'ನೀವು ಹಣ್ಣಾದನಂತರ ಬೇಕಾದರೆ ಸಂಸಾರದಲ್ಲಿರಿ.'

(ಭಕ್ತರಿಗೆ) "ನೋಡಿ, ಕೇಶವ ಒಳ್ಳೆ ವಿದ್ಯಾವಂತ. ಇಂಗ್ಲಿಷಿನಲ್ಲಿ ಉಪನ್ಯಾಸ ಕೊಡುತ್ತಿದ್ದ. ಅನೇಕರು ಆತನಿಗೆ ಗೌರವ ತೋರಿಸುತ್ತಿದ್ದರು. ಅಷ್ಟೇ ಏಕೆ, ವಿಕ್ಟೋರಿಯಾ ರಾಣಿಯೇ ಆತನೊಡನೆ ಕುಳಿತು ಮಾತುಕತೆ ಆಡಿದಳು. ಆದರೆ ಆತ ಇಲ್ಲಿಗೆ ಬರುವಾಗ ಬರೀ ಮೈಯಲ್ಲಿ ಬರುತ್ತಿದ್ದ. ಸಾಧು ದರ್ಶನಕ್ಕೆ ಹೋದಾಗ ಕೈಯಲ್ಲಿ ಏನನ್ನಾದರೂ ತೆಗೆದುಕೊಂಡು ಹೋಗಬೇಕು. ಅದಕ್ಕಾಗಿ ಜೊತೆಯಲ್ಲಿ ಹಣ್ಣುಹಂಪಲ ತರುತ್ತಿದ್ದ. ಸಂಪೂರ್ಣವಾಗಿ, ಅಭಿಮಾನಶೂನ್ಯ.

(ಅಧರಸೇನನಿಗೆ) "ನೋಡು, ನೀನು ಒಬ್ಬ ದೊಡ್ಡ ವಿದ್ಯಾವಂತ. ಸಾಲದುದಕ್ಕೆ ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಬೇರೆ. ಆದರೂ ನೀನು ಪತ್ನಿಯ ಗುಲಾಮ. ಮುಂದೆ ಹೋಗು. ಚಂದನದ ಅರಣ್ಯದಿಂದಾಚೆಗೂ ಒಳ್ಳೆ ಒಳ್ಳೆಯ ವಸ್ತುಗಳಿವೆ—ಬೆಳ್ಳಿಯ ಗಣಿ, ಚಿನ್ನದ ಗಣಿ, ಹೀರ ಮಾಣಿಕ್ಯಗಳ ಗಣಿ ಇವೆ. ಸೌದೆ ಕಡಿಯುವವ ಅರಣ್ಯದಲ್ಲಿ ಸೌದೆ ಕಡಿಯುತ್ತಿದ್ದ; ಬ್ರಹ್ಮಚಾರಿ ಆತನಿಗೆ ಹೇಳಿದ: 'ಮುಂದೆ ಹೋಗು.'"

ಪರಮಹಂಸರು ಈಗ ಹಂತಗಳಿಂದ ಕೆಳಕ್ಕೆ ಇಳಿದು ಪ್ರಾಂಗಣದ ಮೂಲಕ ತಮ್ಮ ಕೊಠಡಿಗೆ ಬರುತ್ತಿದಾರೆ. ಜೊತೆಯಲ್ಲಿ ಅಧರಸೇನ, ಮಾಸ್ಟರ್ ಮೊದಲಾದವರು ಬರುತ್ತಿದಾರೆ. ಆ ಸಮಯಕ್ಕೆ ಸರಿಯಾಗಿ ರಾಮಚಟ್ಟೋಪಾಧ್ಯಾಯ ಬಂದು ಹೇಳಿದ, ಶ್ರೀ ಶಾರದಾದೇವಿಯವರ ಪರಿಚಾರಕನಿಗೆ ಕಾಲರಾ ತಗುಲಿದೆ.

ರಾಮಚಟ್ಟೋಪಾಧ್ಯಾಯ ಶ್ರೀರಾಮಕೃಷ್ಣರಿಗೆ: "ನಾನು ನಿಮಗೆ ಹತ್ತು ಘಂಟೆ ಸಮಯದಲ್ಲೇ ಬಂದು ತಿಳಿಸಿದೆ, ಆದರೆ ನೀವು ನನ್ನ ಕಡೆ ಗಮನವನ್ನೇ ಕೊಡಲಿಲ್ಲ."

ಶ್ರೀರಾಮಕೃಷ್ಣರು: "ನನ್ನ ಕೈಯಲ್ಲಿ ಏನು ಸಾಧ್ಯ?"

ರಾಮಚಟ್ಟೋಪಾಧ್ಯಾಯ: "ಹೌದು, ನಿಮ್ಮ ಕೈಯಲ್ಲಿ ಏನು

ತಾನೆ ಸಾಧ್ಯ! ಆದರೆ ರಾಖಾಲ, ರಾಮಲಾಲ ಇವರೇ ಮೊದಲಾದವರು ಇದ್ದರಲ್ಲ, ಅವರೂ ಏನೂ ಮಾಡಲಿಲ್ಲ.''

ಮಾಸ್ಟರ್: ''ಕಿಶೋರಿ ಔಷಧ ತರಲು ಹೋಗಿದಾನೆ, ಆಲಂಬಜಾರಿಗೆ.''

ಶ್ರೀರಾಮಕೃಷ್ಣರು: ''ಏನು, ಒಬ್ಬನೇ? ಎಲ್ಲಿಂದ ತರುತ್ತಾನೆ?''

ಮಾಸ್ಟರ್: ''ಹೌದು, ಒಬ್ಬನೇ. ಆಲಂಬಜಾರಿನಿಂದ ತರುತ್ತಾನೆ.''

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ನರ್ಸನ್ನು ಕೇಳಿಕೊಂಡು ಬಾ ಕಾಯಿಲೆ ಜಾಸ್ತಿಯಾಗಿಬಿಟ್ಟರೆ ಏನುಮಾಡಬೇಕು, ಗುಣಮುಖವಾಗುತ್ತಿದ್ದರೆ ಏನುಮಾಡಬೇಕು ಎಂಬುದರ ವಿಷಯವಾಗಿ.''

ಮಾಸ್ಟರ್: ''ಆಗಲಿ, ಕೇಳಿಬರುತ್ತೇನೆ.''

ಆ ಇಬ್ಬರು ಭಕ್ತೆಯರು ಬಂದು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಈಗ ಬೀಳ್ಕೊಳ್ಳುತ್ತಿದಾರೆ. ಪರಮಹಂಸರು ಅವರಿಗೆ ಮತ್ತೆ ಹೇಳುತ್ತಿದಾರೆ: ''ನಾನು ತಿಳಿಸಿದ ರೀತಿಯಲ್ಲಿ ಶಿವಪೂಜೆಯನ್ನು ಮಾಡಿ. ಮುಂದೆ ಬರುವಾಗ ಊಟ-ಗೀಟ ಮುಗಿಸಿ ಬನ್ನಿ. ಇಲ್ಲದಿದ್ದರೆ ನನ್ನ ಮನಸ್ಸಿಗೆ ತುಂಬ ಕಷ್ಟವುಂಟಾಗುತ್ತದೆ. ಸ್ನಾನಜಾತ್ರೆಯ ದಿನ ಮತ್ತೆ ಇಲ್ಲಿಗೆ ಬರಲು ಪ್ರಯತ್ನಿಸಿ.''

ಪರಮಹಂಸರು ತಮ್ಮ ಕೊಠಡಿಯ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಕುಳಿತಿದಾರೆ. ನರೇಂದ್ರವಂದ್ಯೋಪಾಧ್ಯಾಯ, ಹರಿ, ಮಾಸ್ಟರ್ ಮೊದಲಾದವರು ಅವರ ಹತ್ತಿರ ಕುಳಿತಿದಾರೆ. ನರೇಂದ್ರವಂದ್ಯೋಪಾಧ್ಯಾಯನ ಮನೆಯ ಕಷ್ಟಸುಖಗಳೆಲ್ಲಾ ಪರಮಹಂಸರಿಗೆ ಚೆನ್ನಾಗಿ ಗೊತ್ತಿದೆ.

ಶ್ರೀರಾಮಕೃಷ್ಣರು: ''ನೋಡು, 'ಒಂದು ತುಂಡು ಕೌಪೀನಕ್ಕಾಗಿ[1]' ಇಷ್ಟೊಂದು ಕಷ್ಟ. ಮನುಷ್ಯ ಹೆಂಡತಿಯನ್ನು ಕಟ್ಟಿಕೊಂಡು ಮಕ್ಕಳು

1. ಇದು ಒಂದು ಕಥೆ: ಒಂದು ಕಡೆ ಒಬ್ಬ ಸನ್ಯಾಸಿ ಇದ್ದ. ಆತನಲ್ಲಿದ್ದ ಸ್ವತ್ತು ಕೇವಲ ಎರಡು ಜೊತೆ ಕೌಪೀನ ಮಾತ್ರ. ಒಂದು ದಿನ ಒಂದು ಇಲಿ ಆತನ ಒಂದು ಕೌಪೀನವನ್ನು ಕಡಿದುಹಾಕಿತು. ಕೌಪೀನಗಳನ್ನು ಇಲಿಗಳ ಹಾವಳಿಯಿಂದ ಉಳಿಸಿಕೊಳ್ಳಲು ಆತ ಒಂದು ಬೆಕ್ಕನ್ನು ಸಾಕಿದ. ಆ ಬೆಕ್ಕಿಗೆ ಹಾಲು ಒದಗಿಸಲು ಒಂದು ಹಸುವನ್ನು ಸಾಕಬೇಕಾಗಿ ಬಂತು. ಹಸುವನ್ನು ನೋಡಿಕೊಳ್ಳಲು ಒಬ್ಬ ಸೇವಕನನ್ನು ನೇಮಿಸಬೇಕಾಯಿತು. ಕ್ರಮೇಣ ಹಸುಗಳ ಸಂಖ್ಯೆ

ಮರಿಗಳನ್ನ ಪಡೆದುಕೊಳ್ಳುತ್ತಾನೆ; ಆದ್ದರಿಂದ ಆತ ಚಾಕರಿಗಾಗಿ ಹೋಗಲೇ ಬೇಕಾಗುತ್ತದೆ. ಸಾಧು ಕೌಪೀನದ ದೆಸೆಯಿಂದ ಪೇಚಾಟಕ್ಕೆ ಸಿಕ್ಕಿಕೊಳ್ಳುತ್ತಾನೆ; ಗೃಹಸ್ಥ ಹೆಂಡತಿಯನ್ನು ಕಟ್ಟಿಕೊಂಡು. ಇದೂ ಅಲ್ಲದೆ ಮನೆಯಲ್ಲಿ ಜಗಳ-ಗಿಗಳ ಆಯಿತು ಎಂದರೆ, ಪ್ರತ್ಯೇಕ ಮನೆ ಮಾಡ ಬೇಕಾಗಿ ಬರುತ್ತದೆ. (ನಗುತ್ತ) ಒಮ್ಮೆ ಚೈತನ್ಯದೇವ ನಿತಾಯಿಗೆ ಹೇಳಿದ: 'ಇಲ್ಲಿ ಕೇಳು, ಇಲ್ಲಿ ಕೇಳು ಸೋದರ, ಸಂಸಾರಿ ಜೀವಕ್ಕೆ ಎಂದಿಗೂ ಮಾರ್ಗವೇ ಇಲ್ಲ!'"

ಮಾಸ್ಟರ್ ತನಗೆ ತಾನೇ: "ಪರಮಹಂಸರು ಬಹುಶಃ ಹೇಳುತ್ತಿರ ಬಹುದು ಅವಿದ್ಯಾ ಸಂಸಾರದ ಸಂಬಂಧವಾಗಿ. ಸಂಸಾರಿ ಜೀವರನ್ನ ಬಿಗಿದಿಟ್ಟಿರುವುದು ಅವಿದ್ಯಾ ಸಂಸಾರವೇ ಅಂತ ಕಾಣುತ್ತೆ."

ಮಾಸ್ಟರ ಮನೆಯಲ್ಲಿ ಒಬ್ಬರಿಗೊಬ್ಬರಿಗೆ ಸರಿಹೋಗದೆ ಇದ್ದುದರಿಂದ ಆತ ಪ್ರತ್ಯೇಕ ಮನೆ ಮಾಡಿಕೊಂಡಿದಾನೆ.

ಶ್ರೀರಾಮಕೃಷ್ಣರು ವಂದ್ಯೋಪಾಧ್ಯಾಯನಿಗೆ ಮಾಸ್ಟರನ್ನು ತೋರಿಸಿ: "ಈತನೂ ಪ್ರತ್ಯೇಕವಾಗಿ ಮನೆ ಮಾಡಿಕೊಂಡಿದಾನೆ. ನೀವಿಬ್ಬರೂ ಇದರಲ್ಲಿ ಒಂದು ಜೋಡಿ. ಒಂದು ಕಡೆ ಒಮ್ಮೆ ಇಬ್ಬರು ಅಪರಿಚಿತರು ಸಂಧಿಸಿದರು. ಒಬ್ಬ ಇನ್ನೊಬ್ಬನನ್ನು ಕೇಳಿದ: 'ಯಾವೂರಪ್ಪ ನೀನು?' ಅದಕ್ಕೆ ಆತ ಉತ್ತರವಿತ್ತ: 'ಓ, ನಾನು ಬಹಳ ದೂರದಿಂದ ಬಂದಿದೇನೆ, ವಿದೇಶಿ.' ಎರಡನೆಯವನು ಮೊದಲನೆಯವನನ್ನು ಕೇಳಿದ: 'ಹಾಗಾದರೆ, ನೀನಾವೂರಪ್ಪ?' ಅದಕ್ಕೆ ಆತ ಉತ್ತರವಿತ್ತ: 'ಅಯ್ಯೋ, ನಾನೆ! ನನ್ನ ನಲ್ಲೆಯನ್ನು ಬಿಟ್ಟು ಬಹಳ ದೂರ ಬಂದುಬಿಟ್ಟದೇನೆ, ವಿರಹಿ.' ಇಬ್ಬರೂ ಒಂದೇ ದೋಣಿಯಲ್ಲಿ ತೇಲುತ್ತಿದ್ದರು; ಆದ್ದರಿಂದ ಇಬ್ಬರೂ ಜೊತೆ ಯಾದರು. (ಎಲ್ಲರೂ ನಗುತ್ತಿದಾರೆ.)

---

ಬೆಳೆಯಿತು. ಅವುಗಳ ಮೇವಿಗಾಗಿ ಹುಲ್ಲುಗಾವಲು, ಗದ್ದೆ, ಹೊಲ ಇವನ್ನು ಕೊಂಡುಕೊಳ್ಳಬೇಕಾಯಿತು. ಅವನ್ನು ನೋಡಿಕೊಳ್ಳಲು ಸೇವಕರ ಸಂಖ್ಯೆಯನ್ನೂ ಹೆಚ್ಚಿಸಬೇಕಾಯಿತು. ಕೊನೆಗೆ ಆತ ಒಬ್ಬ ಜಮೀನುದಾರನ ಹಾಗೇ ಆದ. ಆಳು ಕಾಳು ಎಲ್ಲರನ್ನು ನೋಡಿಕೊಳ್ಳಲು ಆತ ವಿಧಿಯಿಲ್ಲದೆ ಒಬ್ಬಳು ಹೆಂಡತಿಯನ್ನೂ ಕಟ್ಟಿಕೊಳ್ಳಬೇಕಾಗಿ ಬಂತು. ಒಂದು ದಿನ ಆತನ ಸ್ನೇಹಿತ, ಇನ್ನೊಬ್ಬ ಸನ್ಯಾಸಿ, ಬಂದು ನೋಡಿ ಆತನ ಈ ಪರಿವರ್ತನೆಗಾಗಿ ಆಶ್ಚರ್ಯಪಟ್ಟ. ಕಾರಣ ಕೇಳಲಾಗಿ ಆತ ಹೇಳಿದ: "ಇದೆಲ್ಲ ಒಂದು ತುಂಡು ಕೌಪೀನಕ್ಕಾಗಿ!"

"ಆದರೆ ಭಗವಂತನಲ್ಲಿ ಶರಣಾಗತರಾದರೆ, ಬಳಿಕ ಹೆದರಿಕೊಳ್ಳ ಬೇಕಾಗಿರುವುದಿಲ್ಲ. ಆತನೇ ರಕ್ಷಿಸುತ್ತಾನೆ."

ಹರಿ: "ಒಳ್ಳೇದು, ಅನೇಕರಿಗೆ ಆತನ ಸಾಕ್ಷಾತ್ಕಾರ ಪಡೆದು ಕೊಳ್ಳಬೇಕಾದರೆ ಬಹಳ ಕಾಲ ಹಿಡಿಯುವುದಲ್ಲ, ಏಕೆ?"

ಶ್ರೀರಾಮಕೃಷ್ಣರು: "ಏಕೆ ಗೊತ್ತೆ? ಭೋಗ ಮತ್ತು ಕರ್ಮ ಮುಗಿದುಹೋಗದವರೆಗೆ ವ್ಯಾಕುಲತೆ ಉಂಟಾಗದು. ಡಾಕ್ಟರ್ ರೋಗಿಯ ಸಂಬಂಧವಾಗಿ ಹೇಳುವುದುಂಟು: 'ಈಗ ಕೆಲವು ದಿನ ಕಳೆಯಲಿ. ಅನಂತರ ಸಾಮಾನ್ಯ ಔಷಧದಿಂದಲೇ ಗುಣವಾಗಿಬಿಡುತ್ತದೆ.'

"ನಾರದ ರಾಮನಿಗೆ ಹೇಳಿದ: 'ರಾಮ, ನೀನು ನಿನ್ನ ಕಾಲವನ್ನ ಅಯೋಧ್ಯೆಯಲ್ಲೇ ಕಳೆಯುತ್ತಿದ್ದರೆ, ರಾವಣನ ವಧೆ ಆಗುವ ಬಗೆ ಹೇಗೆ? ನೀನು ಆ ಕಾರ್ಯಕ್ಕಾಗೇ ಅವತರಿಸಿರುವುದು.' ರಾಮ ಉತ್ತರವಿತ್ತ: 'ನಾರದ, ಸಕಾಲ ಬರಲಿ. ರಾವಣನ ಕರ್ಮ ಕ್ಷಯಹೊಂದಲಿ. ಆಗ ಆತನ ವಧೆಗೆ ಪ್ರಯತ್ನ ನಡೆಯುವುದು.'"

ಹರಿ: "ಒಳ್ಳೇದು, ಈ ಜಗತ್ತಿನಲ್ಲಿ ಇಷ್ಟೊಂದು ದುಃಖ ಇದೆಯಲ್ಲ, ಏಕೆ?"

ಶ್ರೀರಾಮಕೃಷ್ಣರು: "ಈ ಜಗತ್ತೆಂಬುದು ಭಗವಂತನ ಲೀಲೆ. ಇದು ಒಂದು ಆಟ ಇದ್ದ ಹಾಗೆ. ಈ ಲೀಲೆಯಲ್ಲಿ ಸುಖದುಃಖ, ಪಾಪ ಪುಣ್ಯ, ಜ್ಞಾನ ಅಜ್ಞಾನ, ಒಳ್ಳೇದು ಕೆಟ್ಟದ್ದು ಎಲ್ಲವೂ ಇವೆ. ದುಃಖ ಪಾಪ ಇವೆಲ್ಲ ಇಲ್ಲದೆ ಹೋಯಿತು ಎಂದರೆ ಲೀಲೆ ಸಾಧ್ಯವಿಲ್ಲ.

"ಕಣ್ಣುಮುಚ್ಚಾಲೆ ಆಟದಲ್ಲಿ ಹೋಗಿ ಅಜ್ಜಿಯನ್ನು ಮುಟ್ಟಿಬಿಟ್ಟರೆ ಆಕೆಗೆ ಸಂತೋಷವಾಗದು. ಭಗವಂತನ ಇಚ್ಛೆ, ಆಟ ಸ್ವಲ್ಪ ಕಾಲ ಮುಂದುವರಿಯಲಿ ಅಂತ. ಅನಂತರ—

ಇಂತು ಹಾರುವ ನೂರು ಸಾವಿರದ ಪಟಗಳಲಿ
ಒಂದೊ ಎರಡೋ ಹರಿದು ಬಿಡುಗಡೆಯ ಪಡೆದು
ಹೋಗುತಿರಲವುಗಳನು ನಿರುಕಿಸುತ ಈ ತಾಯಿ
ಕೈಯ ಚಪ್ಪಳೆ ತಟ್ಟಿ ನಲಿಯುತಿಹಳು.

ಅಂದರೆ ಭಗವಂತನ ದರ್ಶನ ದೊರೆತನಂತರ ಒಬ್ಬಿಬ್ಬರು ಮುಕ್ತರಾಗಿ ಬಿಡುತ್ತಾರೆ, ಬಹಳ ತಪಸ್ಸಿನನಂತರ, ಆತನ ಕೃಪೆಯಿಂದ. ಆಗ ಭಗವತಿ

ಆನಂದದಿಂದ ಕೈಚಪ್ಪಾಳೆ ಹಾಕುತ್ತಾಳೆ: 'ಭೇಷ್! ಕಿತ್ತುಕೊಂಡು ಬಿಟ್ಟೆವು!' ಅಂತ ಹೇಳುತ್ತ.''

ಹರಿ: ''ಭಗವಂತನಿಗೇನೊ ಆಟ, ಆದರೆ ನಮಗೆ ಪ್ರಾಣಸಂಕಟ.'

ಶ್ರೀರಾಮಕೃಷ್ಣರು ನಗುತ್ತ: ''ನೀನು ಅನ್ನಿಸಿಕೊಳ್ಳೋ ಈ 'ನೀನು' ಯಾರು ಹೇಳು ನೋಡೋಣ. ಎಲ್ಲವೂ ಭಗವಂತನೇ ಆಗಿದಾನೆ— ಮಾಯೆ, ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಎಲ್ಲ. 'ಹಾವಾಗಿ ಕಡಿಯುತ್ತೇನೆ, ಮಂತ್ರವಾದಿಯಾಗಿ ಗುಣಪಡಿಸುತ್ತೇನೆ.' ಭಗವಂತನೇ ವಿದ್ಯೆ, ಅವಿದ್ಯೆ ಎರಡೂ ಆಗಿದಾನೆ. ಅವಿದ್ಯಾ ಮಾಯೆಯಿಂದ ಅಜ್ಞಾನ ದಲ್ಲಿ ಮುಳುಗಿಕೊಂಡಿರುತ್ತಾನೆ; ವಿದ್ಯಾ ಮಾಯೆಯಿಂದ ಗುರುರೂಪ ಧರಿಸಿ ಮಂತ್ರವಾದಿಯಾಗಿ ಗುಣಪಡಿಸುತ್ತಾನೆ.

''ಅಜ್ಞಾನ, ಜ್ಞಾನ, ವಿಜ್ಞಾನ. ಜ್ಞಾನಿಗೆ ತೋರುತ್ತದೆ, ಇರುವವನು ಭಗವಂತನೊಬ್ಬನೇ, ಆತನೇ ಕರ್ತೃ, ಆತನೇ ಸೃಷ್ಟಿಸ್ಥಿತಿಪ್ರಳಯಕಾರ್ಯ ಮಾಡುತ್ತಾನೆ ಎಂಬುದಾಗಿ. ವಿಜ್ಞಾನಿಗೆ ತೋರುತ್ತದೆ, ಆತನೇ ಎಲ್ಲವೂ ಆಗಿದಾನೆ ಎಂಬುದಾಗಿ.

''ಮಹಾಭಾವ, ಪ್ರೇಮ ಉಂಟಾಯಿತು ಎಂದರೆ ಕಂಡುಬರುತ್ತದೆ ಭಗವಂತ ಹೊರತು ಬೇರೇನೂ ಇಲ್ಲ ಎಂಬುದಾಗಿ. ಭಾವದ ಹತ್ತಿರ ಭಕ್ತಿ ಕೇವಲ 'ಮಿಣಕ್, ಮಿಣಕ್' ಅನ್ನುತ್ತದೆ. ಭಾವ ಪಕ್ವವಾಯಿತು ಎಂದರೆ ಮಹಾಭಾವ, ಪ್ರೇಮ.

(ವಂದ್ಯೋಪಾಧ್ಯಾಯನಿಗೆ) ''ಧ್ಯಾನದ ಸಮಯದಲ್ಲಿ ಗಂಟೆಯ ಶಬ್ದ ಆಗುವುದನ್ನ ಈಗಲೂ ಕೇಳುತ್ತಿದೀಯೇನು?''

ವಂದ್ಯೋಪಾಧ್ಯಾಯ: ''ಹೌದು, ದಿನವೂ. ಜೊತೆಗೆ ಭಗವದ್ರೂಪ ದರ್ಶನ ಕೂಡ. ಮನಸ್ಸಿಗೆ ಒಂದು ಸಲ ರುಚಿ ಸಿಕ್ಕಿತು ಎಂದರೆ ಮತ್ತೆ ಅದು ಬಿಟ್ಟುಬಿಡುವುದೆ?''

ಶ್ರೀರಾಮಕೃಷ್ಣರು ನಗುತ್ತ: ''ಹೌದು, ನಿಜ. ಸೌದೆ ಒಮ್ಮೆ ಹೊತ್ತಿಕೊಂಡಿತು ಎಂದರೆ ಮತ್ತೆ ಅದು ಆರಿಹೋಗದು. (ಭಕ್ತರಿಗೆ) ಈತನಿಗೆ ಶ್ರದ್ಧೆಯ ಸಂಬಂಧವಾಗಿ ಅನೇಕ ಕಥೆ ಗೊತ್ತಿದೆ.''

ವಂದ್ಯೋಪಾಧ್ಯಾಯ: ''ನನಗೆ ಶ್ರದ್ಧೆ ಬಹಳ ಅಧಿಕ.''

ಶ್ರೀರಾಮಕೃಷ್ಣರು: ''ಏನಾದರೂ ಹೇಳು.''

ವಂದ್ಯೋಪಾಧ್ಯಾಯ: ''ಗುರು ಒಬ್ಬನಿಗೆ ಕುರಿಯ ಮಂತ್ರ ಹೇಳಿ-

ಕೊಟ್ಟು ಆತನಿಗೆ ತಿಳಿಸಿದ, ಕುರಿಯೇ ನಿನ್ನ ಇಷ್ಟದೇವ ಎಂದು. ಆ ಮಂತ್ರ ವನ್ನೇ ಜಪಿಸಿ ಆತನಿಗೆ ಸಾಕ್ಷಾತ್ಕಾರ ದೊರೆಯಿತು.

"ಒಬ್ಬ ಹುಲ್ಲುಕೊಯ್ಯುವವ ರಾಮನಾಮ ಜಪಿಸಿ ಗಂಗೆಯನ್ನು ದಾಟಬಿಟ್ಟ."

ಶ್ರೀರಾಮಕೃಷ್ಣರು: "ನಿನ್ನ ಮನೆ ಹೆಂಗಸರನ್ನು ಬಲರಾಮನ ಮನೆ ಹೆಂಗಸರೊಡನೆ ಕಳುಹಿಸು."

ವಂದ್ಯೋಪಾಧ್ಯಾಯ: "ಬಲರಾಮ ಯಾರು?"

ಶ್ರೀರಾಮಕೃಷ್ಣರು: "ಬಲರಾಮ ಗೊತ್ತಿಲ್ಲವೆ? ಬೋಸ್‌ಪಾರಾದಲ್ಲಿ ಆತನಿಗೆ ಮನೆ."

ಸರಳಸ್ವಭಾವಿಗಳನ್ನು ಕಂಡರೆ ಪರಮಹಂಸರು ಆನಂದದಿಂದ ತುಂಬಿತುಳುಕಾಡಲಾರಂಭಿಸುತ್ತಾರೆ. ವಂದ್ಯೋಪಾಧ್ಯಾಯ ಅತ್ಯಂತ ಸರಳ ಜೀವಿ. ನಿರಂಜನನೂ ಸರಳನಾಗಿದ್ದುದರಿಂದ ಪರಮಹಂಸರು ಆತನನ್ನೂ ಪ್ರೀತಿಸುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಾನು ಏಕೆ ನಿನಗೆ ಹೋಗಿ ನಿರಂಜನನನ್ನು ನೋಡಿಕೊಂಡು ಬಾ ಅಂತ ಹೇಳುತ್ತೇನೆ ಗೊತ್ತೆ? ಆತ ನಿಜವಾಗಿ ಸರಳನೊ ಅಲ್ಲವೊ ಎಂಬುದನ್ನು ಕಂಡುಹಿಡಿಯಲು."

**೨೪ನೆ ಮೇ ೧೮೮೫, ಜ್ಯೇಷ್ಠ ಶುಕ್ಲ ಪಾಡ್ಯಮಿ, ಭಾನುವಾರ.**

ಪರಮಹಂಸರು ಪಂಚವಟಿಯಲ್ಲಿ ಆ ಪುರಾತನ ಆಲದ ಮರದ ಕೆಳಗೆ ಕೇದಾರ, ಸುರೇಂದ್ರ, ಭವನಾಥ, ರಾಖಾಲ ಮೊದಲಾದ ಅನೇಕ ಮಂದಿ ಭಕ್ತರೊಡನೆ ದಕ್ಷಿಣಾಭಿಮುಖರಾಗಿ ಕುಳಿತುಕೊಂಡಿದಾರೆ. ಎಲ್ಲೋ ಕೆಲವರು ಮಾತ್ರ ಆ ಕಟ್ಟೆಯ ಮೇಲೇ ಪರಮಹಂಸರೊಡನೆ ಕುಳಿತಿದಾರೆ. ಉಳಿದವರೆಲ್ಲ ಕೆಳಗೆ ಸುತ್ತಲೂ ನಿಂತುಕೊಂಡಿದಾರೆ. ಪರಮಹಂಸರ ಜನ್ಮದಿನ ಬರುತ್ತದೆ ಫಾಲ್ಗುಣ ಮಾಸದಲ್ಲಿ ಶುಕ್ಲ ಬಿದಿಗೆ ದಿನ. ಆದರೆ ಅವರ ಕೈ ಗುಣಹೊಂದಿಲ್ಲದಿದ್ದುದರಿಂದ ಇದುವರೆಗೂ ಅದನ್ನು ಆಚರಿಸ ಲಿಲ್ಲ. ಈಗ ಅದು ಬಹಳವಾಗಿ ಗುಣಹೊಂದಿದೆ. ಆದ್ದರಿಂದ ಭಕ್ತರು ಅದನ್ನು ಇಂದು ಆಚರಿಸುತ್ತಿದಾರೆ. ಒಳ್ಳೆ ಪ್ರಖ್ಯಾತಳಾಗಿರುವ ಒಬ್ಬ ಕೀರ್ತನಕಾರೆ ಹಾಡುತ್ತಾಳೆ.

ಘಂಟೆ ಅಪರಾಹ್ನ ಒಂದು. ಪರಮಹಂಸರು ತಮ್ಮ ಕೊಠಡಿಯಲ್ಲಿ ಇಲ್ಲದಿರುವುದನ್ನು ನೋಡಿ ಮಾಸ್ಟರ್ ಪಂಚವಟಿಗೆ ಬರುತ್ತಿದಾನೆ. ಪರಮ-



The Panchavati
ಪಂಚವಟಿ

ಹಂಸರು ಎದುರಿಗೇ ಕುಳಿತಿರುವುದನ್ನು ನೋಡದೆ ಭಕ್ತರನ್ನು ಕೇಳುತ್ತಿದಾನೆ: "ಪರಮಹಂಸರೆಲ್ಲಿ?" ಇದನ್ನು ಕೇಳಿ ಭಕ್ತರೆಲ್ಲ ಗೊಳ್ಳೆಂದು ನಗುತ್ತಿದಾರೆ. ಒಡನೇ ಆತನಿಗೆ ಕಂಡುಬರುತ್ತದೆ ಪರಮಹಂಸರು ಎದುರಿಗೇ ಕುಳಿತುಕೊಂಡಿರುವುದು. ಮಾಸ್ಟರಿಗೆ ದಿಗ್ಭ್ರಮೆ ಹಿಡಿದಂತಾಗಿ ಈಗ ಆತ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ. ಅವರ ಎಡಭಾಗದಲ್ಲಿ ಕೇದಾರ, ಬಲಭಾಗದಲ್ಲಿ ವಿಜಯ ಕಟ್ಟೆಯ ಮೇಲೇ ಕುಳಿತುಕೊಂಡಿದಾರೆ. ಕೇದಾರ ಬ್ರಾಹ್ಮಸಮಾಜವನ್ನು ಬಿಟ್ಟಂದಿನಿಂದ ಆತನಿಗು ವಿಜಯನಿಗು ಮನಸ್ತಾಪ.

ಶ್ರೀರಾಮಕೃಷ್ಣರು ನಗುತ್ತ ಮಾಸ್ಟರಿಗೆ: "ನೋಡಿದೆಯಾ, ಹೇಗೆ ಇಬ್ಬರನ್ನೂ ಒಂದು ಕಡೆ ಸೇರಿಸಿಬಿಟ್ಟಿದೇನೆ?"

ಪರಮಹಂಸರು ೧೮೬೮ನೆ ಇಸವಿಯಲ್ಲಿ ಬೃಂದಾವನಕ್ಕೆ ಹೋಗಿದ್ದಾಗ ಅಲ್ಲಿಂದ ಒಂದು ಮಾಧವೀ ಲತೆಯನ್ನು ತಂದು ಪಂಚವಟಿಯಲ್ಲಿ ನೆಟ್ಟಿದ್ದರು. ಅದು ಈಗ ಬಹಳ ದೊಡ್ಡದಾಗಿಬಿಟ್ಟಿದೆ. ಚಿಕ್ಕ ಚಿಕ್ಕ ಮಕ್ಕಳು ಅದರ ಮೇಲೆ ಹತ್ತಿ ಅದನ್ನು ಹಿಡಿದುಕೊಂಡು ಜೋಲಾಡುವುದು, ಅದರ ಮೇಲೆ ಕುಣಿಯುವುದು ಇವೇ ಮೊದಲಾದುವನ್ನು ಮಾಡುತ್ತಿದ್ದರು. ಪರಮಹಂಸರು ಆನಂದದಿಂದ ಆ ಮಕ್ಕಳ ಕಡೆ ನೋಡುತ್ತ ಹೇಳುತ್ತಿದಾರೆ: "ಇವು ಕಪಿಯ ಮರಿಗಳೇ. ಕೆಳಕ್ಕೆ ಬಿದ್ದರೂ ಹತ್ತಿಹೋಗುವುದನ್ನು ಬಿಡವು." ಸುರೇಂದ್ರ ಕೆಳಗಡೆ ನಿಂತುಕೊಂಡಿರುವುದನ್ನು ನೋಡಿ ಪ್ರೀತಿಯಿಂದ ಹೇಳುತ್ತಿದಾರೆ: "ಬಾ ಮೇಲಕ್ಕೆ. ಕಾಲು ಇಳಿಬಿಟ್ಟುಕೊಂಡು ಸುಖವಾಗಿ ಕುಳಿತುಕೊಳ್ಳುವೆಯಂತೆ." ಸುರೇಂದ್ರ ಹಾಗೇ ಮಾಡಿದ. ಭವನಾಥ ಕೋಟು ಹಾಕಿಕೊಂಡು ಕುಳಿತಿರುವುದನ್ನು ನೋಡಿ ಸುರೇಂದ್ರ ಹೇಳುತ್ತಿದಾನೆ: "ಏನು, ನೀನು ವಿಲಾಯಿತಿಗೆ ಹೋಗುತ್ತಿದೀಯೇನು?"

ಶ್ರೀರಾಮಕೃಷ್ಣರು ನಗುತ್ತ: "ಭಗವಂತನೇ ನಮ್ಮ ವಿಲಾಯಿತಿ. ನಾನು ಒಮ್ಮೊಮ್ಮೆ ಬಟ್ಟೆಯನ್ನೆಲ್ಲಾ ಬಿಸುಟು ಆನಂದದಿಂದ ತಿರುಗುತ್ತಿದ್ದೆ. ಶಂಭುಮಲ್ಲಿಕ ಒಂದು ದಿನ ಹೇಳಿದ: 'ನೀವೂ ಇದಕ್ಕಾಗೇ ಅಂತ ಕಾಣುತ್ತೆ ಬತ್ತಲೆ ಓಡಾಡುವುದು—ಬಹಳ ಸುಖವಾಗಿರುತ್ತದೆ. ಒಂದು ದಿನ ನಾನೂ ಹಾಗೆ ಮಾಡಿ ನೋಡಿದೆ.'"

ಸುರೇಂದ್ರ: "ನಾನು ಆಫೀಸಿನಿಂದ ಮನೆಗೆ ಹಿಂದಿರುಗಿಬಂದು

ಕೋಟು, ಪ್ಯಾಂಟು ಬಿಚ್ಚುವಾಗ ಅಂದುಕೊಳ್ಳುತ್ತೇನೆ: 'ಹೇ ಭಗವತಿ, ಎಷ್ಟೊಂದು ಬಂಧನಗಳಿಂದ ನೀನು ನನ್ನನ್ನು ಬಂಧಿಸಿದೀಯೆ!' ''

ಶ್ರೀರಾಮಕೃಷ್ಣರು: '' ಅಷ್ಟ ಪಾಶಗಳಿಂದ—ಲಜ್ಜೆ, ದ್ವೇಷ, ಭಯ, ಜಾತ್ಯಭಿಮಾನ, ಸಂಕೋಚ, ಗೋಪನೇಚ್ಛೆ ಇವೇ ಮೊದಲಾದುವುಗಳಿಂದ.''

ಪರಮಹಂಸರು ಈಗ ಹಾಡುತ್ತಿದಾರೆ:

ಈ ಎದೆಯು ಕೊರೆಯುವುದು ಒಂದೆ ವ್ಯಥೆ ನನಗೆ:
ನೀನೊಡನೆ ಇದ್ದರೂ ನಾನೆಚ್ಚರಿದ್ದರೂ
ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ! . . .

ಮತ್ತೆ ಹಾಡುತ್ತಿದಾರೆ:

ಪಟವನಾಡಿಸುತಿಹಳು ಈ ನನ್ನ ಘನಶ್ಯಾಮೆ
ಜಗದ ಸಂಸಾರಗಳ ಪೇಟೆಯಲ್ಲಿ,
ಮಾಯೆಯೀ ಸೂತ್ರದಲಿ ಬಿಗಿದ ಪಟವೇರುತಿವೆ
ತುಂಬಿರುವ ಭರವಸೆಯ ಗಾಳಿಯಲ್ಲಿ.
ನರರಸ್ಥಿಪಂಜರದಿ ಮೂರು ಗುಣಗಳ ಬೆಸೆದು
ಮಾಡಿರುವಳೀ ತಾಯಿ ಕುಶಲ ಕಲೆಯ;
ಪಟದ ಸೂತ್ರದ ಮೇಲೆ ವಿಷಯದಂಟನು ಬಳಿದು
ಹರಿಯದಂತವುಗಳನು ರಚಿಸಿರುವಳು. . . .

ಶ್ರೀರಾಮಕೃಷ್ಣರು: '' 'ಮಾಯೆಯೀ ಸೂತ್ರದಲಿ' ಎಂದರೆ ಹೆಂಡತಿ ಮಕ್ಕಳು.

ಪಟದ ಸೂತ್ರದ ಮೇಲೆ ವಿಷಯದಂಟನು ಬಳಿದು

'ವಿಷಯದಂಟು' ಎಂದರೆ ಕಾಮಕಾಂಚನ.

'' ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳೂ ಮನುಷ್ಯನನ್ನು ತಮ್ಮ ವಶಮಾಡಿಕೊಂಡುಬಿಟ್ಟಿವೆ. ಇವು ಮೂರೂ ಸೋದರರಿದ್ದ ಹಾಗೇ. ಸತ್ತ್ವವಿತ್ತು ಎಂದರೆ ಅದು ರಜಸ್ಸನ್ನು ಸಹಾಯಕ್ಕೆ ಕರೆಯಬಲ್ಲದು; ರಜಸ್ಸು ತಮಸ್ಸಿನಿಂದ ಸಹಾಯ ಪಡೆಯಬಲ್ಲದು. ಮೂರು ಗುಣಗಳೂ ಡಕಾಯಿತರೇ. ತಮೋಗುಣ ವಿನಾಶಕಾರಿ. ರಜೋಗುಣ ಬಂಧನಕಾರಿ. ಸತ್ತ್ವಗುಣ ವಿಮೋಚನಕಾರಿಯೇನೊ ನಿಜ, ಆದರೆ ಭಗವಂತನ ಸಮೀಪಕ್ಕೆ ಕೊಂಡೊಯ್ಯಲಾರದು.''

ವಿಜಯ ನಗುತ್ತ: "ಸತ್ತ್ವವೂ ಡಕಾಯಿತ ತಾನೆ."

ಶ್ರೀರಾಮಕೃಷ್ಣರು ನಗುತ್ತ: "ಭಗವಂತನ ಹತ್ತಿರಕ್ಕೇನೊ ಅದು ಕರೆದುಕೊಂಡುಹೋಗಲಾರದು, ಆದರೆ ಮಾರ್ಗವನ್ನು ತೋರಿಸಿಕೊಟ್ಟು ಬಿಡುತ್ತದೆ."

ಭವನಾಥ: "ಬಹಳ ಅದ್ಭುತವಾದ ಮಾತು ಇವು."

ಶ್ರೀರಾಮಕೃಷ್ಣರು: "ಹೌದು, ಇದು ಬಹಳ ಗಹನವಾದ ವಿಷಯವೇ."

ಪರಮಹಂಸರ ಈ ಮಾತುಕತೆಗಳನ್ನೆಲ್ಲಾ ಕೇಳಿ ಭಕ್ತರಿಗೆ ಬಹಳ ಆನಂದವಾಗಿಬಿಟ್ಟದೆ.

ಶ್ರೀರಾಮಕೃಷ್ಣರು: "ಬಂಧನಕ್ಕೆ ಕಾರಣ ಕಾಮಕಾಂಚನ. ಕಾಮಕಾಂಚನವೇ ಸಂಸಾರ. ಕಾಮಕಾಂಚನವೇ ಭಗವಂತನ ದರ್ಶನ ಮಾಡಲು ಬಿಟ್ಟುಕೊಡಲೊಲ್ಲದು. (ಒಂದು ಚೌಕವನ್ನು ತಮ್ಮ ಮುಖದ ಎದುರು ಹಿಡಿದುಕೊಂಡು) ಈಗ ನನ್ನ ಮುಖ ನಿಮಗೆ ಕಾಣುವುದೇ? ಇಲ್ಲ. ಆವರಣವೆಂಬುದು ಇದೇ. ಈ ಕಾಮಕಾಂಚನವೆಂಬ ಆವರಣ ಹೋಯಿತು ಎಂದರೆ, ಚಿದಾನಂದನ ಸಾಕ್ಷಾತ್ಕಾರ.

"ಇಲ್ಲಿ ನೋಡಿ—ಯಾರು ಹೆಂಡತಿಯ ಸುಖವನ್ನ ತ್ಯಜಿಸುತ್ತಾನೊ, ಆತ ಈ ಜಗತ್ತಿನ ಸುಖವನ್ನು ತ್ಯಜಿಸಿದಂತೆಯೇ. ಭಗವಂತ ಆತನಿಗೆ ಅತಿ ಸಮೀಪದಲ್ಲೇ."

ಭಕ್ತರು ಈ ಮಾತುಕತೆಗಳನ್ನು ಶಾಂತವಾಗಿ ಕೇಳುತ್ತಿದಾರೆ—ಕೆಲವರು ಕುಳಿತು, ಕೆಲವರು ನಿಂತು.

ಶ್ರೀರಾಮಕೃಷ್ಣರು ಕೇದಾರ, ವಿಜಯ ಮೊದಲಾದವರಿಗೆ: "ಯಾರು ಹೆಂಡತಿಯ ಸುಖವನ್ನ ತ್ಯಜಿಸಿದಾನೊ, ಆತ ಈ ಜಗತ್ತಿನ ಸುಖವನ್ನ ತ್ಯಜಿಸಿದಂತೆಯೇ. ಕಾಮಕಾಂಚನವೇ ಆವರಣ. ನಿಮಗೆಲ್ಲ ಇಷ್ಟೊಂದು ದೊಡ್ಡ ದೊಡ್ಡ ಮೀಸೆ, ಆದರೂ ನೀವು ಅದರಲ್ಲೇ ಸಿಕ್ಕಿಬಿದ್ದಿದೀರಿ. ಇಲ್ಲವೆ ಹೇಳಿ. ನಿಮ್ಮ ಹೃದಯವನ್ನು ಒಳಹೊಕ್ಕು ನೋಡಿ."

ವಿಜಯ: "ಹೌದು, ಅದು ನಿಜ."

ಕೇದಾರ ಸ್ತಂಭೀಭೂತನಾಗಿ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಯಾರನ್ನ ನೋಡಿದರೂ, ಎಲ್ಲರೂ ಹೆಂಗಸಿನ ವಶರೇ. ಒಂದು ದಿನ ಕ್ಯಾಪ್ಟೆನ್ನನ ಮನೆಗೆ ಹೋಗಿದ್ದೆ. ಅಲ್ಲಿಂದ ರಾಮನ

ಮನೆಗೆ ಹೋಗಬೇಕಾಗಿತ್ತು. ಆದ್ದರಿಂದ ಕ್ಯಾಪ್ಟೆನ್ನನನ್ನು ಕೇಳಿದೆ: 'ಗಾಡಿ ಬಾಡಿಗೆ ಕೊಡು.' ಕ್ಯಾಪ್ಟೆನ್ ಹೋಗಿ ತನ್ನ ಹೆಂಡತಿಯನ್ನು ಕೇಳಿದ. ಅವಳೂ ಅಂಥವಳೆ! ಹೇಳಲಾರಂಭಿಸಿದಳು: 'ಏಕೆ? ಏಕೆ?' ಕೊನೆಗೆ ಕ್ಯಾಪ್ಟೆನ್ ಹಿಂದಿರುಗಿ ಬಂದು ಹೇಳಿದ: 'ರಾಮನೇ ಕೊಡುತ್ತಾನೆ.' ನೋಡಿ, ಗೀತೆ, ಭಾಗವತ, ವೇದಾಂತ ಎಲ್ಲವೂ ಹೆಂಗಸಿಗೆ ತಲೆ ಬಾಗುತ್ತಿವೆ! (ಎಲ್ಲರೂ ನಗುತ್ತಿದಾರೆ.)

"ಜನರು ದುಡ್ಡು ಕಾಸು ಎಲ್ಲವನ್ನೂ ಹೆಂಡತಿಯರ ವಶಕ್ಕೆ ಒಪ್ಪಿಸಿ ಬಿಡುತ್ತಾರೆ. ಹೇಳಿಕೊಳ್ಳುತ್ತಾರೆ: 'ಇದು ನನ್ನ ದುರದೃಷ್ಟ, ನನ್ನ ಕೈಯಲ್ಲಿ ಒಂದು ಬಿಡಿಗಾಸೂ ನಿಲ್ಲಲೊಲ್ಲದು!'

"ಒಬ್ಬ ಒಂದು ಆಫೀಸಿಗೆ ಕೆಲಸಕ್ಕಾಗಿ ಹೋದ. ಅಲ್ಲಿ ಅನೇಕ ಕೆಲಸ ಖಾಲಿಯಿದ್ದರೂ ಮ್ಯಾನೇಜರ್ ಕೊಡಲೊಪ್ಪಲಿಲ್ಲ. ಒಬ್ಬ ಸ್ನೇಹಿತ ಆ ಅರ್ಜಿದಾರನಿಗೆ ಹೇಳಿದ: 'ಹೋಗಿ ಹಿಡಿ ಗೊಲಾಪಿಯನ್ನ, ಕೆಲಸ ಸಿಕ್ಕಿಬಿಡುತ್ತದೆ.' ಗೊಲಾಪಿ ಮ್ಯಾನೇಜರ ಉಪಪತ್ನಿ.

"ಗಂಡಸರಿಗೆ ಗೊತ್ತಾಗುವುದಿಲ್ಲ ಹೆಂಗಸರು ತಮ್ಮನ್ನು ಎಷ್ಟು ಅಧೋಗತಿಗೆ ಎಳೆದುಬಿಡುತ್ತಾರೆ ಎಂಬುದು. ಒಮ್ಮೆ ನಾನು ಕೋಟೆಗೆ ಗಾಡಿಯಲ್ಲಿ ಕುಳಿತುಕೊಂಡು ಹೋದೆ. ಉದ್ದಕ್ಕೂ ಅನಿಸಿತು, ನಾನು ಮಟ್ಟವಾದ ರಸ್ತೆಯಲ್ಲೇ ಹೋಗುತ್ತಿದ್ದೇನೆ ಎಂಬುದಾಗಿ. ಕೊನೆಗೆ ಅಲ್ಲಿಗೆ ಹೋಗಿ ನೋಡುತ್ತೇನೆ, ನಾಲ್ಕು ಅಂತಸ್ತಿನಷ್ಟು ಎತ್ತರವನ್ನ ಕೆಳಕ್ಕೆ ಇಳಿದು ಬಿಟ್ಟಿದ್ದೇನೆ. ಅದು ಒಂದು ಇಳಿಜಾರು ರಸ್ತೆ.

"ಯಾರನ್ನ ಭೂತ ಮೆಟ್ಟಿಕೊಳ್ಳುತ್ತದೆಯೊ, ಆತನಿಗೆ ಗೊತ್ತಾಗು ವುದಿಲ್ಲ ತನ್ನನ್ನು ಭೂತ ಮೆಟ್ಟಿಕೊಂಡಿದೆ ಎಂಬುದಾಗಿ. ಆತ ಭಾವಿಸು ತ್ತಾನೆ, ತಾನು ನೆಟ್ಟಗಿದ್ದೇನೆ."

ವಿಜಯ ನಗುತ್ತ: "ಮಂತ್ರವಾದಿ ದೊರೆತುಬಿಟ್ಟಿದ್ದೇ ಆದರೆ ಅವನು ಆತನನ್ನು ನೆಟ್ಟಗೆಮಾಡಿಬಿಡುತ್ತಾನೆ."

ಪರಮಹಂಸರು ಅದಕ್ಕೆ ವಿಶೇಷವಾಗೇನು ಉತ್ತರಕೊಡದೆ ಕೇವಲ ಹೇಳಿದರು: "ಅದು ಭಗವಂತನ ಇಚ್ಛೆಯಂತೆ." ಮತ್ತೆ ಈಗ ಅವರು ಹೆಂಗಸರ ಸಂಬಂಧವಾಗಿ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಯಾರನ್ನು ಕೇಳಿದರೂ ಆತ ಹೇಳುತ್ತಾನೆ: 'ಹೌದು, ಮಹಾಶಯರೆ, ನನ್ನ ಹೆಂಡತಿ ಬಹಳ ಒಳ್ಳೆಯವಳು.' ಒಬ್ಬನ

ಬಾಯಲ್ಲೂ ಬರುವುದಿಲ್ಲ ತನ್ನ ಹೆಂಡತಿ ಕೆಟ್ಟವಳು ಎಂದು. (ಎಲ್ಲರೂ ನಗುತ್ತಿದಾರೆ.) ಯಾರು ಕಾಮಕಾಂಚನಗಳ ಮಧ್ಯೆ ವಾಸಿಸುತ್ತಾರೊ ಅವರಿಗೆ ಮತ್ತು ಹತ್ತಿಕೊಂಡು ಏನೂ ಗೊತ್ತಾಗಲೊಲ್ಲದು. ಯಾರು ಚದುರಂಗದಾಟ ಆಡುತ್ತಾರೊ ಅವರಿಗೆ ಅನೇಕ ವೇಳೆ ಹೊಳೆಯದು ಯಾವ ರೀತಿಯಾಗಿ ಕಾಯಿ ನಡಸಬೇಕು ಎಂಬುದು. ಆದರೆ ಯಾರು ಹತ್ತಿರ ಕುಳಿತುಕೊಂಡು ಆಟ ನೋಡುತ್ತಿರುತ್ತಾರೊ ಅವರಿಗೆ ಅದು ಬಹುಮಟ್ಟಿಗೆ ಚೆನ್ನಾಗಿ ಹೊಳೆಯುತ್ತದೆ.

"ಹೆಂಗಸು ಮಾಯಾರೂಪಿಣಿ. ನಾರದ ರಾಮನನ್ನು ಸ್ತೋತ್ರ ಮಾಡುವಾಗ ಹೇಳಿದಾನೆ: 'ಹೇ ರಾಮ, ಎಲ್ಲಾ ಪುರುಷರೂ ನಿನ್ನ ಅಂಶವೇ. ಎಲ್ಲಾ ಸ್ತ್ರೀಯರೂ ನಿನ್ನ ಮಾಯಾರೂಪಿಣಿ ಸೀತೆಯ ಅಂಶವೇ. ನನಗಿನ್ನಾವ ವರವೂ ಬೇಕಾಗಿಲ್ಲ—ಇದೊಂದು ವಿನಾ: ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿಯುಂಟಾಗುವಂತೆಯೂ, ನಿನ್ನ ಜಗನ್ಮೋಹಿನೀ ಮಾಯೆಯಿಂದ ನಾನು ಮುಗ್ಧನಾಗದಿರುವಂತೆಯೂ ಅನುಗ್ರಹಿಸು.'"

ಸುರೇಂದ್ರನ ತಮ್ಮ ಗಿರೀಂದ್ರ ಮತ್ತು ಆತನ ಅಣ್ಣನ ಮಕ್ಕಳು ನಗೇಂದ್ರನೇ ಮೊದಲಾದವರು ಬಂದಿದಾರೆ. ಗಿರೀಂದ್ರನಿಗೆ ಒಂದು ಆಫೀಸಿನಲ್ಲಿ ಕೆಲಸ ಸಿಕ್ಕಿದೆ. ನಗೇಂದ್ರ "ಲಾ" ಪರೀಕ್ಷೆಗೆ ಓದುತ್ತಿದಾನೆ.

ಶ್ರೀರಾಮಕೃಷ್ಣರು ಗಿರೀಂದ್ರ ಮೊದಲಾದವರಿಗೆ: "ನಿಮ್ಮ ಹಿತ-ಚಿಂತನೆಯಿಂದ ನಿಮಗೆ ಹೇಳುತ್ತೇನೆ, ನೀವು ಸಂಸಾರದಲ್ಲಿ ಆಸಕ್ತರಾಗಬೇಡಿ. ನೋಡಿ, ರಾಖಾಲನಿಗೆ ಈಗ ಜ್ಞಾನ, ಅಜ್ಞಾನಗಳ ಬೋಧೆ ಉಂಟಾಗಿದೆ. ಸದಸದ್ವಿಚಾರವನ್ನೂ ಮಾಡಬಲ್ಲ. ಆದ್ದರಿಂದ ಈಗ ನಾನು ಆತನಿಗೆ ಹೇಳುತ್ತಿದೇನೆ: 'ಮನೆಗೆ ಹೋಗು. ಒಮ್ಮೊಮ್ಮೆ ಬಂದು ನನ್ನೊಡನೆ ಒಂದೆರಡು ದಿನ ಇಲ್ಲಿ ಇದ್ದರೇ ಸಾಕು.'

"ನೀವು ಪರಸ್ಪರ ಸ್ನೇಹದಿಂದ ಬಾಳಿ ಬದುಕಿ. ಆಗ ಮಾತ್ರವೇ ನಿಮಗೆ ಶ್ರೇಯಸ್ಸುಂಟಾಗುವುದು, ಆನಂದದಿಂದಿರಬಲ್ಲಿರಿ. ನಟರೆಲ್ಲರೂ ಏಕಕಂಠದಿಂದ ಹಾಡಿದರೆ ತಾನೆ ನಾಟಕ ಚೆನ್ನಾಗಿ ಆಗಬೇಕಾದರೆ. ಆಗ ಕೇಳುವವರಿಗೂ ಆನಂದವುಂಟಾಗುತ್ತದೆ.

"ಭಗವಂತನಲ್ಲಿ ಬಹುಭಾಗ ಮನಸ್ಸನ್ನಿಟ್ಟು ಎಲ್ಲೊ ಅಲ್ಪಭಾಗ ಮನಸ್ಸಿನಿಂದ ಸಾಂಸಾರಿಕ ಕೆಲಸಕಾರ್ಯಗಳನ್ನು ಮಾಡಿ. ಸಾಧು ತನ್ನ ಮುಕ್ಕಾಲುಭಾಗ ಮನಸ್ಸನ್ನು ಭಗವಂತನಲ್ಲಿಟ್ಟು, ಕಾಲುಭಾಗ ಮನಸ್ಸಿ

ನಿಂದ ಉಳಿದ ಕೆಲಸಗಳನ್ನ ಮಾಡುತ್ತಾನೆ. ಆತ ಆಧ್ಯಾತ್ಮಿಕ ವಿಷಯ ವಾಗಿ ಬಹಳ ಎಚ್ಚತ್ತಿರುತ್ತಾನೆ. ಹಾವಿನ ಬಾಲವನ್ನೇನಾದರೂ ತುಳಿದು ಬಿಟ್ಟದ್ದೇ ಆದರೆ, ಮತ್ತೆ ಅದರಿಂದ ರಕ್ಷಿಸಿಕೊಳ್ಳುವುದು ಬಹಳ ಕಷ್ಟ. ಅದರ ಬಾಲ ಬಹಳ ಶೀಘ್ರವೇದಿ. ಅದೇ ರೀತಿಯಾಗಿ ಸಾಧುವಿನ ಅಧ್ಯಾತ್ಮ ಜೀವನಕ್ಕೆ ಭಂಗ ಬಂತೆಂದರೆ ಆತ ಸುಮ್ಮನಿರುವುದಿಲ್ಲ. ಆತನ ಇಡೀ ಜೀವನವೇ ಅದನ್ನು ಎದುರಿಸುವುದು.''

ಪರಮಹಂಸರು ಈಗ ಸರ್ವಮಠಗಳ ಕಡೆ ಹೋಗುತ್ತಿದಾರೆ. ಸಿಂಥಿಯ ಗೋಪಾಲನಿಗೆ ಹೇಳುತ್ತಿದಾರೆ, ತಮ್ಮ ಛತ್ರಿಯನ್ನು ಕೊಠಡಿ ಯಲ್ಲಿ ಇಟ್ಟುಬರುವಂತೆ. ಪಂಚವಟಿಯಲ್ಲಿ ಕೀರ್ತನೆ ನಡೆಯುವಂತೆ ವ್ಯವಸ್ಥೆಯಾಗಿದೆ. ಪರಮಹಂಸರು ಹಿಂದಿರುಗಿಬಂದು ಮತ್ತೆ ಪಂಚವಟಿ ಯಲ್ಲಿ ಕುಳಿತುಕೊಂಡಿದಾರೆ. ಕೀರ್ತನಕಾರೆ ಹಾಡುತ್ತಿದಾಳೆ. ಭಕ್ತರಲ್ಲಿ ಕೆಲವರು ಕುಳಿತುಕೊಂಡಿದಾರೆ, ಇನ್ನು ಕೆಲವರು ನಿಂತುಕೊಂಡಿದಾರೆ. ಇದ್ದಕ್ಕಿದ್ದಹಾಗೆ ಬಿರುಮಳೆ ಆರಂಭವಾಯಿತು. ಪರಮಹಂಸರು, ಭಕ್ತರು, ಎಲ್ಲರೂ ಕೊಠಡಿಗೆ ಹಿಂದಿರುಗುತ್ತಿದಾರೆ—ಕೊಠಡಿಯಲ್ಲೇ ಕೀರ್ತನೆಯನ್ನು ಮುಂದುವರಿಸುವಂತೆ ಸ್ಥಿರಮಾಡಿಕೊಂಡು.

ಶ್ರೀರಾಮಕೃಷ್ಣರು ಸಿಂಥಿಯ ಗೋಪಾಲನಿಗೆ: "ಏನು, ಛತ್ರಿ ತಂದೆಯಾ?"

ಗೋಪಾಲ: "ಇಲ್ಲ. ಕೀರ್ತನೆ ಕೇಳುತ್ತ ಕೇಳುತ್ತ ಮರೆತೇಬಿಟ್ಟೆ."

ಛತ್ರಿ ಪಂಚವಟಿಯಲ್ಲೇ ಬಿದ್ದಿದೆ. ಗೋಪಾಲ ಅಲ್ಲಿಗೆ ಓಡಿಹೋದ.

ಶ್ರೀರಾಮಕೃಷ್ಣರು: "ನಾನೂ ಸ್ವಲ್ಪ ಹಾಗೆಯೇ, ಆದರೆ ಇಷ್ಟು ದೂರದವರೆಗಲ್ಲ. ರಾಖಾಲನೂ ಇದೇ ಗುಂಪಿಗೆ ಸೇರಿದವನು. ಒಬ್ಬರು ನಿಮಂತ್ರಣ ಮಾಡಿದ್ದು ಹದಿಮೂರನೆ ತಾರೀಖು ಆಗಿದ್ದರೆ, ಹನ್ನೊಂದು ಅಂತಲೇ ಹೇಳಿಬಿಟ್ಟ. ಇನ್ನು ಗೋಪಾಲನೆ—ಗೊತ್ತೇ ಇದೆಯಲ್ಲ ದನ ಕಾಯೋವ ಅಂತ!" (ಎಲ್ಲರೂ ನಗುತ್ತಿದಾರೆ.)

ಕೀರ್ತನಕಾರೆ ಈಗ ಗೌರಾಂಗನ ಸನ್ಯಾಸದ ಸಂಬಂಧವಾಗಿ ಹಾಡುತ್ತಿ ದಾಳೆ. ಆಗಾಗ ಆಶುಕವಿತೆ ಮಾಡುತ್ತಿದಾಳೆ: "ಆತ ನಾರಿಯನ್ನು ಕಣ್ಣೆತ್ತಿಯೂ ನೋಡನು; ಅದು ಸನ್ಯಾಸಧರ್ಮಕ್ಕೆ ವಿರುದ್ಧ." "ಜೀವ ರಾಶಿಗಳ ದುಃಖವನ್ನು ನಿವಾರಿಸಲು ಕಾತರನಾಗಿರುವುದರಿಂದ, ನಾರಿಯ

ಕಡೆ ಕಣ್ಣೆತ್ತಿಯೂ ನೋಡನು.'' "ಇಲ್ಲದಿದ್ದರೆ ಗೌರಾಂಗನ ಅವತಾರ ಬರಿದೆ ವ್ಯರ್ಥವಾಗುತ್ತದೆ.''

ಪರಮಹಂಸರು ಗೌರಾಂಗನ ಸನ್ಯಾಸದ ಸಂಬಂಧವಾಗಿ ಕೇಳುತ್ತ ಕೇಳುತ್ತ ಇದ್ದ ಹಾಗೆ ಎದ್ದುನಿಂತುಕೊಂಡು ಸಮಾಧಿಸ್ಥರಾಗಿಬಿಟ್ಟರು. ಈಗ ಭಕ್ತರೆಲ್ಲರೂ ಅವರ ಕೊರಳಿಗೆ ಹೂವಿನ ಮಾಲೆಗಳನ್ನು ಹಾಕುತ್ತಿದಾರೆ. ಭವನಾಥ, ರಾಖಾಲ ಪರಮಹಂಸರನ್ನು ಹಿಡಿದುಕೊಂಡು ನಿಂತುಕೊಂಡಿದಾರೆ—ಅವರು ಬೀಳದೆ ಇರಲಿ ಎಂದು. ವಿಜಯ, ಕೇದಾರ, ರಾಮ, ಮಾಸ್ಟರ್, ಮನಮೋಹನ, ಲಾಟು ಮೊದಲಾದವರು ಪರಮಹಂಸರ ಸುತ್ತಲೂ ಗುಂಡಾಗಿ ನಿಂತುಕೊಂಡಿದಾರೆ. ಈಗ ಸಾಕ್ಷಾತ್ ಗೌರಾಂಗನೇ ಬಂದು ಭಕ್ತರೊಡನೆ ಹರಿನಾಮಸಂಕೀರ್ತನೆ ಮಾಡುತ್ತಿದಾನೊ ಏನೊ ಎಂಬಂತೆ ಕಾಣಬರುತ್ತಿದೆ.

ಪರಮಹಂಸರು ಕ್ರಮ ಕ್ರಮೇಣ ಪ್ರಕೃತಿಸ್ಥರಾಗುತ್ತಿದಾರೆ. ಆಗಾಗ ಸಚ್ಚಿದಾನಂದ ಕೃಷ್ಣನೊಡನೆ ಮಾತುಕತೆ ಆಡುತ್ತಿದಾರೆ. ಕೆಲವು ವೇಳೆ ಸುಮ್ಮನೆ "ಕೃಷ್ಣ! ಕೃಷ್ಣ!'' ಅನ್ನುತ್ತಲೇ ಇದಾರೆ. ಇನ್ನು ಕೆಲವು ವೇಳೆ ಅದೂ ಅವರಿಗೆ ಸಾಧ್ಯವಾಗುತ್ತಿಲ್ಲ. ಮತ್ತೆ ಈಗ ಹೇಳುತ್ತಿದಾರೆ: "ಕೃಷ್ಣ! ಕೃಷ್ಣ! ಕೃಷ್ಣ! ಕೃಷ್ಣ! ಸಚ್ಚಿದಾನಂದ! — ಏಕೆ, ಈಗ ಕೆಲವು ಕಾಲದಿಂದ ನಿನ್ನ ರೂಪ ಕಾಣಿಸಿಕೊಳ್ಳುತ್ತಿಲ್ಲವಲ್ಲ? ಈಗ ನಾನು ನಿನ್ನನ್ನು ಒಳಗೂ ಹೊರಗೂ ನೋಡುತ್ತಿದೇನೆ. ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಎಲ್ಲವೂ ನೀನೇ. ಮನಸ್ಸು, ಬುದ್ಧಿ ಎಲ್ಲವೂ ನೀನೇ. ಗುರು ಪ್ರಣಾಮ ಸ್ತೋತ್ರದಲ್ಲಿ ಹೇಳಿದೆ: 'ಚರಾಚರ ವಸ್ತುಗಳನ್ನೆಲ್ಲಾ ವ್ಯಾಪಿಸಿಕೊಂಡಿರುವ ಅಖಂಡ ಮಂಡಲಾಕಾರನಾದ ಯಾವ ಪರಬ್ರಹ್ಮನನ್ನು ಯಾರ ಕೃಪೆಯಿಂದ ನಾನು ಸಾಕ್ಷಾತ್ಕಾರ ಮಾಡಿಕೊಂಡೆನೊ ಅಂಥ ಗುರುವಿಗೆ ನನ್ನ ಪ್ರಣಾಮ.'

"ನೀನೇ ಅಖಂಡ. ಮತ್ತೆ ನೀನೇ ಚರಾಚರ ವಸ್ತುಗಳನ್ನೆಲ್ಲ ವ್ಯಾಪಿಸಿಕೊಂಡಿದೀಯೆ. ನೀನೇ ಆಧಾರ, ನೀನೇ ಆಧೇಯ. ಓ ಪ್ರಾಣ-ಕೃಷ್ಣ! ಮನಕೃಷ್ಣ! ಬುದ್ಧಿಕೃಷ್ಣ! ಆತ್ಮಕೃಷ್ಣ! ಪ್ರಾಣ ಹೇ ಗೋವಿಂದ ಮಮ ಜೀವನ!''

ವಿಜಯನೂ ಭಾವಾವಿಷ್ಟನಾಗಿದಾನೆ. ಪರಮಹಂಸರು ಹೇಳುತ್ತಿ

ದಾರೆ: "ಏನಪ್ಪ, ನೀನೂ ಪ್ರಜ್ಞೆತಪ್ಪಿದವನಾಗಿಬಿಟ್ಟೆಯಾ?" ವಿಜಯ ವಿನಯದಿಂದ ಹೇಳಿದ: "ಏನಿಲ್ಲ."

ಕೀರ್ತನಕಾರೆ ಮತ್ತೆ ಹಾಡುತ್ತಿದಾಳೆ—ಅಂಥ ಪ್ರೇಮದ ಸಂಬಂಧವಾಗಿ. ಆಕೆ ಈ ಆಶುಕವಿತೆಯನ್ನು ಮಾಡಿದಳೊ ಇಲ್ಲವೊ:

ಓ ನನ್ನ ಪ್ರಾಣ ವಧು, ನನ್ನ ಹೃದಿಮಂದಿರದಿ
ನಿನ್ನನಿರಿಸುತಲಿದ್ದೆ ಹಗಲು ಇರುಳೂ!

ಪರಮಹಂಸರು ಮತ್ತೆ ಸಮಾಧಿಸ್ಥರಾಗಿಬಿಟ್ಟರು. ಅವರ ಕೀಲುತಪ್ಪಿದ ಕೈ ಭವನಾಥನ ಹೆಗಲ ಮೇಲೆ ಕುಳಿತಿದೆ.

ಪರಮಹಂಸರಿಗೆ ಈಗ ಕಿಂಚಿತ್ ಬಾಹ್ಯ ಪ್ರಜ್ಞೆ ಬಂದಿದೆ. ಕೀರ್ತನ-ಕಾರೆ ಮತ್ತೆ ಆಶುಕವಿತೆ ಮಾಡುತ್ತಿದಾಳೆ:

ನಿನಗಾಗಿ ಎಲ್ಲವನು ತ್ಯಾಗಮಾಡಿದ್ದರೂ
ಇವನೇಕೆ ಇನಿತೊಂದು ನೋಯಬೇಕು?

ಪರಮಹಂಸರು ಕೀರ್ತನಕಾರೆಗೆ ನಮಸ್ಕಾರಮಾಡಿ ಕೀರ್ತನೆ ಕೇಳಲು ಕುಳಿತುಕೊಂಡರು. ಆಗಾಗ ಭಾವಾವಿಷ್ಟರಾಗುತ್ತಿದಾರೆ. ಕೀರ್ತನಕಾರೆ ಹಾಡುವುದನ್ನು ನಿಲ್ಲಿಸಿದಳು. ಪರಮಹಂಸರು ಈಗ ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ವಿಜಯ ಮೊದಲಾದವರಿಗೆ: "ಯಾವುದಕ್ಕೆ ಪ್ರೇಮ ಅಂತ ಹೇಳುತ್ತಾರೆ ಗೊತ್ತೆ? ಚೈತನ್ಯದೇವನಿಗೆ ಉಂಟಾಗಿತ್ತಲ್ಲ ಅದಕ್ಕೆ. ಯಾರಿಗೆ ಭಗವಂತನಲ್ಲಿ ಪ್ರೇಮ ಉಂಟಾಗುವುದೊ ಅವರಿಗೆ ಈ ಜಗತ್ತೆಂಬುದು ಇದೆ ಎಂಬುದೇ ಮರೆತುಹೋಗಿಬಿಡುತ್ತದೆ. ನೋಡಿ, ಇಷ್ಟು ಪ್ರಿಯವಾದ ಈ ದೇಹ, ಇದೂ ಮರೆತೇ ಹೋಗಿಬಿಡುತ್ತದೆ."

ಪ್ರೇಮ ಉಂಟಾದರೆ ಏನವಸ್ಥೆ ಬರುತ್ತದೆ ಎಂಬುದನ್ನು ಪರಮ-ಹಂಸರು ಒಂದು ಹಾಡು ಹಾಡಿ ತಿಳಿಸುತ್ತಿದಾರೆ:

ಓ, ಎಂದಿಗೋ ಇನ್ನೆಂದಿಗೋ,
ಎದೆಯೊಳೊಲವಿನ ಕಿಡಿಯು ಜ್ವಲಿಸುವ
ದಿವ್ಯ ಶುಭದಿನವೆಂದಿಗೋ! . . .

ಪರಮಹಂಸರು ನರ್ತಿಸುತ್ತಿದಾರೆ. ಅವರ ಜೊತೆಯಲ್ಲಿ ಭಕ್ತರೂ ನರ್ತಿಸುತ್ತಿದಾರೆ. ಪರಮಹಂಸರು ಮಾಸ್ಟರ ಕೈ ಹಿಡಿದೆಳೆದು ಆ ಗುಂಪಿನ ಜೊತೆಗೆ ದಬ್ಬಿದರು. ನರ್ತಿಸುತ್ತ ನರ್ತಿಸುತ್ತ ಇದ್ದ ಹಾಗೆ ಪರಮಹಂಸರು

ಮತ್ತೆ ಸಮಾಧಿಸ್ಥರಾಗಿಬಿಟ್ಟರು. ಚಿತ್ರದ ಗೊಂಬೆಯಂತೆ ನಿಂತುಕೊಂಡಿದಾರೆ. ಅವರನ್ನು ಪ್ರಕೃತಿಸ್ಥರನ್ನಾಗಿ ಮಾಡಲು ಕೇದಾರ ಈ ಶ್ಲೋಕವನ್ನು ಹೇಳಲಾರಂಭಿಸಿದ:

ಹೃದಯಕಮಲಮಧ್ಯೇ ನಿರ್ವಿಶೇಷಂ ನಿರೀಹಂ,
ಹರಿಹರ ವಿಧಿವೇದ್ಯಂ ಯೋಗಿಭಿರ್ಧ್ಯಾನಗಮ್ಯಮ್ । . . .

(ಉ. ೩೩೨)

ಪರಮಹಂಸರು ಕ್ರಮೇಣ ಪ್ರಕೃತಿಸ್ಥರಾಗುತ್ತಿದಾರೆ. ಈಗ ಕೆಳಗೆ ಕುಳಿತುಕೊಂಡು ಭಗವನ್ನಾಮ ಮಾಡುತ್ತಿದಾರೆ: "ಓಂ ಸಚ್ಚಿದಾನಂದ! ಗೋವಿಂದ! ಗೋವಿಂದ! ಗೋವಿಂದ! ಯೋಗಮಾಯಾ! ಭಾಗವತ—ಭಕ್ತ—ಭಗವಾನ್!"

ಪರಮಹಂಸರು ಕೀರ್ತನೆ ನಡೆದ ಸ್ಥಳದಿಂದ ಧೂಳಿಯನ್ನು ತೆಗೆದು ತಮ್ಮ ಹಣೆಗೆ ಹಚ್ಚಿಕೊಳ್ಳುತ್ತಿದಾರೆ.

ಈಗ ಪರಮಹಂಸರು ತಮ್ಮ ಕೊಠಡಿಯ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಕುಳಿತಿದಾರೆ. ಅವರ ಬಳಿಯಲ್ಲಿ ವಿಜಯ, ಭವನಾಥ, ಮಾಸ್ಟರ್, ಕೇದಾರ ಮೊದಲಾದವರು ಕುಳಿತಿದಾರೆ. ಪರಮಹಂಸರು ಆಗಾಗ ಹೇಳುತ್ತಿದಾರೆ: "ಹಾ, ಕೃಷ್ಣ ಚೈತನ್ಯ!" ಎಂದು.

ಶ್ರೀರಾಮಕೃಷ್ಣರು ವಿಜಯ ಮೊದಲಾದವರಿಗೆ: "ಕೊಠಡಿಯಲ್ಲಿ ಇಂದು ಬಹಳವಾಗಿ ಭಗವನ್ನಾಮ ನಡೆಯಿತು. ಅದಕ್ಕಾಗಿ ವಾತಾವರಣ ಭಗವನ್ಮಯವಾಗಿಬಿಟ್ಟಿದೆ."

ಭವನಾಥ: "ಜೊತೆಗೆ ಇಂದು ಸನ್ಯಾಸದ ವಿಷಯ ಬೇರೆ."

ಶ್ರೀರಾಮಕೃಷ್ಣರು: "ಅಹಹ, ಎಂಥ ಆದರ್ಶ!" ಹೀಗೆಂದು ಹೇಳಿ ಗೌರಾಂಗ ಮತ್ತು ನಿತಾಯಿಯ ಸಂಬಂಧವಾಗಿ ಹಾಡಲಾರಂಭಿಸಿದಾರೆ:

ಕುಂಭ ಕುಂಭಗಳಲಿ ತುಂಬಿ
ಗೌರಾಂಗನು ಪ್ರೇಮಸುಧೆಯ
ಕಡೆಯಿಲ್ಲದೆ ಸುರಿವನು.
ನಿತ್ಯಾನಂದನೆಲ್ಲರನೂ
ಅಕ್ಕರೆಯಲಿ ಕರೆವನು.
ಶಾಂತಿಪುರವು ಪ್ರೇಮಪೂರ-

ದಲ್ಲಿ ಇದೋ ಮುಳುಗಿತು
ನದಿಯಾ[1]ವೂ ಕೊಚ್ಚಿತು!

ಶ್ರೀರಾಮಕೃಷ್ಣರು ವಿಜಯ ಮೊದಲಾದವರಿಗೆ: "ಕೀರ್ತನಕಾರೆ ಸರಿಯಾಗೇ ಹೇಳಿದಳು: 'ಸನ್ಯಾಸಿ ಹೆಂಗಸನ್ನು ಕಣ್ಣೆತ್ತಿಯೂ ನೋಡ ಕೂಡದು.' ಇದು ಸನ್ಯಾಸಿಯ ಧರ್ಮ. ಎಂಥ ಮಹತ್ತಾದ ಆದರ್ಶ!"

ವಿಜಯ: "ಹೌದು, ನಿಶ್ಚಯವಾಗಿ."

ಶ್ರೀರಾಮಕೃಷ್ಣರು: "ಸನ್ಯಾಸಿಯನ್ನು ನೋಡಿ ತಾನೆ ಉಳಿದವರು ಸನ್ಮಾರ್ಗಿಗಳಾಗುವುದು. ಅದಕ್ಕಾಗಿ ಆತನಿಗೆ ಅಷ್ಟೊಂದು ಕಠಿನ ನಿಯಮ. ಸನ್ಯಾಸಿ ಹೆಂಗಸಿನ ಭಾವಚಿತ್ರವನ್ನೂ ನೋಡಕೂಡದು—ಎಂಥಾ ಕಠಿನ ನಿಯಮ! ಕರಿ ಆಡನ್ನು ಭಗವತಿಗೆ ಬಲಿಕೊಡಬೇಕು ಎಂಬ ನಿಯಮವಿದೆ—ಆದರೆ ಕಿಂಚಿತ್ ಗಾಯವಿದ್ದರೂ ಅದು ಅನರ್ಹವಾಗಿಬಿಡುತ್ತದೆ. ಸನ್ಯಾಸಿ ಹೆಂಗಸಿನ ಸಹವಾಸವನ್ನ ಮಾಡಕೂಡದೆಂಬುದಷ್ಟೇ ಅಲ್ಲ, ಆತ ಆಕೆ ಯೊಡನೆ ಮಾತುಕತೆಯನ್ನೂ ಆಡಕೂಡದು."

ವಿಜಯ: "ಚಿಕ್ಕ ಹರಿದಾಸ ಭಕ್ತೆಯರೊಡನೆ ಮಾತುಕತೆ ಆಡಿದ. ಅದನ್ನು ನೋಡಿ ಚೈತನ್ಯದೇವ ಆತನನ್ನು ತ್ಯಜಿಸಿಬಿಟ್ಟ."

ಶ್ರೀರಾಮಕೃಷ್ಣರು: "ಕಾಮಕಾಂಚನಗಳಲ್ಲಿ ಆಸಕ್ತನಾದ ಸನ್ಯಾಸಿ ದುರ್ಗಂಧದಿಂದ ಕೂಡಿದ ಸುಂದರಿಗೆ ಸರಿಸಮಾನ. ಆ ದುರ್ಗಂಧ ಆಕೆಯ ಸೌಂದರ್ಯವನ್ನು ವ್ಯರ್ಥವಾದುದನ್ನಾಗಿ ಮಾಡುತ್ತದೆ.

"ಒಮ್ಮೆ ಒಬ್ಬ ಮಾರ್ವಾಡಿ ನನ್ನ ಹೆಸರಿನಲ್ಲಿ ಹಣ ಇಡಲು ಪ್ರಯತ್ನಿಸಿದ. ಮಥುರಬಾಬು ಕೂಡ ನನ್ನ ಹೆಸರಿನಲ್ಲಿ ಒಂದು ಭೂಮಿಯನ್ನು ಮಾನ್ಯವಾಗಿ ಬಿಡಲು ಯತ್ನಿಸಿದ. ಯಾವುದಕ್ಕೂ ನಾನು ಒಪ್ಪಲಿಲ್ಲ.

"ಸನ್ಯಾಸಿಗೆ ಬಹಳ ಕಠಿನ ನಿಯಮ. ಸನ್ಯಾಸಿಯ ವೇಷ ಹಾಕಿಕೊಂಡರೆ ಸನ್ಯಾಸಿಯಂತೇ ವರ್ತಿಸಬೇಕು. ನೀನು ನಾಟಕದಲ್ಲಿ ನೋಡಿಲ್ಲವೇನು, ದೊರೆಯ ಪಾತ್ರ ವಹಿಸಿದವನು ದೊರೆಯಂತೆಯೇ, ಮಂತ್ರಿಯ ಪಾತ್ರ ವಹಿಸಿದವನು ಮಂತ್ರಿಯಂತೆಯೇ ವರ್ತಿಸುವುದನ್ನ?

"ಆದರೆ ಪರಮಹಂಸಾವಸ್ಥೆ ಬಂದಾಗ ಬಾಲಕನ ಅವಸ್ಥೆ ಬಂದು ಬಿಡುತ್ತದೆ. ಐದು ವರ್ಷದ ಬಾಲಕನಿಗೆ ಸ್ತ್ರೀಪುರುಷ ಜ್ಞಾನ ಇರದು.

---

1. ಗೌರಾಂಗನ ಜನ್ಮಸ್ಥಳ.

ಆದರೂ ಲೋಕಶಿಕ್ಷಣಕ್ಕಾಗಿ ಆತ ಎಚ್ಚರಿಕೆಯಿಂದ ವರ್ತಿಸಬೇಕಾಗುತ್ತದೆ.''

ಕೇಶವಸೇನ ಕಾಮಕಾಂಚನಗಳ ಮಧ್ಯೆ ಇದ್ದುದರಿಂದ ಲೋಕಶಿಕ್ಷಣಕಾರ್ಯಕ್ಕೆ ತಡೆ ಬಂತು ಎಂಬ ಮಾತನ್ನೆತ್ತಿ ಪರಮಹಂಸರು ವಿಜಯನಿಗೆ ಹೇಳುತ್ತಿದಾರೆ: ''ಆತ—ಅರ್ಥವಾಯಿತೆ?''

ವಿಜಯ: ''ಹೌದು, ಅರ್ಥವಾಯಿತು.''

ಶ್ರೀರಾಮಕೃಷ್ಣರು: ''ರಾಮ, ಕಾಮ ಎಂಬ ಎರಡು ಕಣಗಳನ್ನೂ ಕಾಯುತ್ತಿದ್ದುದರಿಂದ ಉನ್ನತವಾದುದೇನನ್ನೂ ಸಾಧಿಸಲಾಗಲಿಲ್ಲ.''

ವಿಜಯ: ''ಚೈತನ್ಯದೇವ ನಿತ್ಯಾನಂದನಿಗೆ ಹೇಳಿದ: 'ನಿತಾಯಿ, ನಾನು ಸಂಸಾರವನ್ನು ತ್ಯಜಿಸದೆ ಇದ್ದರೆ, ಜನರಿಗೆ ಶ್ರೇಯಸ್ಸನ್ನು ತರಲಾಗುವುದಿಲ್ಲ. ಎಲ್ಲರೂ ನನ್ನನ್ನೇ ಮೇಲ್ಪಂಕ್ತಿಯನ್ನಾಗಿ ಮಾಡಿಕೊಂಡು ಗೃಹಸ್ಥ ಜೀವನ ನಡಸಲು ಇಚ್ಛೆಪಟ್ಟುಬಿಡುವರು. ಕಾಮಕಾಂಚನಗಳನ್ನು ತ್ಯಜಿಸಿ ಹರಿಪಾದಪದ್ಮಗಳಲ್ಲಿ ತಮ್ಮ ಇಡೀ ಮನಸ್ಸನ್ನು ಇಡಲು ಯಾರೂ ಪ್ರಯತ್ನಿಸರು.' ''

ಶ್ರೀರಾಮಕೃಷ್ಣರು: ''ಹೌದು, ಚೈತನ್ಯದೇವ ಲೋಕಶಿಕ್ಷಣಕ್ಕಾಗೇ ಸಂಸಾರವನ್ನು ತ್ಯಜಿಸಿದ್ದು.

''ಸಾಧು, ಸನ್ಯಾಸಿ ತನ್ನ ಸ್ವಂತ ಶ್ರೇಯಸ್ಸಿಗಾಗೇ ಕಾಮಕಾಂಚನಗಳನ್ನು ತ್ಯಾಗಮಾಡಬೇಕಾಗುತ್ತದೆ. ಆತ ನಿರ್ಲಿಪ್ತನಾಗಿದ್ದರೂ, ಲೋಕಶಿಕ್ಷಣಕ್ಕಾಗಿ ಕಾಮಕಾಂಚನಗಳನ್ನ ಹತ್ತಿರ ಇಟ್ಟುಕೊಳ್ಳಕೂಡದು. ಸನ್ಯಾಸಿ ಎಂದರೆ ಸರ್ವಸಂಗಪರಿತ್ಯಾಗಿ, ಜಗದ್ಗುರು. ಆತನನ್ನು ನೋಡಿ ತಾನೆ ಜನ ಆಧ್ಯಾತ್ಮಿಕವಾಗಿ ಎಚ್ಚತ್ತುಕೊಳ್ಳುವುದು.''

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಭಕ್ತರೆಲ್ಲ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾರೆ.

೨೩

## ಸುರೇಂದ್ರನ ಮನೆಯಲ್ಲಿ ಉತ್ಸವ

೧೫ನೆ ಜೂನ್ ೧೮೮೪, ಜ್ಯೇಷ್ಠ ಕೃಷ್ಣ ಷಷ್ಠಿ, ಭಾನುವಾರ.

ಶ್ರೀರಾಮಕೃಷ್ಣರು ಪ್ರಾತಃಕಾಲವೇ ಕಾಕುರ್ಗಾಚಿ ಎಂಬ ಹಳ್ಳಿಯಲ್ಲಿರುವ ಸುರೇಂದ್ರನ ತೋಟದ ಮನೆಗೆ ಬಂದಿದಾರೆ. ಅದು ಕಲ್ಕತ್ತಕ್ಕೆ ಬಹಳ ಸಮೀಪದಲ್ಲೆ ಇದೆ. ಸುರೇಂದ್ರ ಪರಮಹಂಸರನ್ನು ಮತ್ತು ಅನೇಕ ಮಂದಿ ಭಕ್ತರನ್ನು ಅಲ್ಲಿಗೆ ಆಹ್ವಾನಿಸಿದ್ದ.

ಭಕ್ತರೆಲ್ಲರು ಕೀರ್ತನೆಯನ್ನು ಕೇಳಲು ತೋಟದ ಮನೆಯ ಹಾಲ್‌ನಲ್ಲಿ ಸಾಲು ಸಾಲಾಗಿ ನಿಂತುಕೊಂಡಿದಾರೆ. ಪ್ರಾತಃಕಾಲದಿಂದಲೇ ಕೀರ್ತನೆ ಆರಂಭವಾಗಿದೆ. ಕೀರ್ತನಕಾರರು ಗೌರಾಂಗನ ಸನ್ಯಾಸ, ಆತ ಕೃಷ್ಣಪ್ರೇಮದಿಂದ ಹುಚ್ಚನಂತಾಗಿರುವಿಕೆ, ಆತನನ್ನು ಕಾಣದೆ ನವದ್ವೀಪದ ಭಕ್ತರು ಕಾತರರಾಗಿ ಅಳುತ್ತಿರುವುದು ಇವುಗಳ ವಿಷಯವಾಗಿ ಹಾಡುತ್ತಿದಾರೆ.

ಕೀರ್ತನಕಾರರು ಹಾಡುತ್ತಿದ್ದಾರೆ:

ಮರಳಿ ಬಾ ಗೌರಾಂಗ ನಿನ್ನೂರಿಗೆ!

ಈಗ ಕೀರ್ತನಕಾರರು ಶ್ರೀಮತಿಯ (ರಾಧೆಯ) ವಿರಹಾವಸ್ಥೆಯ ಸಂಬಂಧವಾಗಿ ವರ್ಣನೆ ಮಾಡುತ್ತಿದಾರೆ. ಆ ವರ್ಣನೆಯನ್ನು ಕೇಳಿ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ಇದ್ದಕ್ಕಿದ್ದಹಾಗೆ ಎದ್ದು ನಿಂತು ಹೃದಯವಿದ್ರಾವಕ ಕರುಣ ಸ್ವರದಿಂದ ಆಶುಕವಿತೆ ಮಾಡುತ್ತಿದಾರೆ. ಹಾಡುತ್ತಿದಾರೆ: "ಹೇ ಸಖಿ, ಸಾಧ್ಯವಾದರೆ ನನ್ನ ಪ್ರಾಣವಲ್ಲಭ ಶ್ರೀಕೃಷ್ಣನನ್ನು ಇಲ್ಲಿಗೇ ಕರೆದುಕೊಂಡು ಬಾ, ಇಲ್ಲದಿದ್ದರೆ ಅಲ್ಲಿಗೇ ನನ್ನನ್ನು ಕರೆದುಕೊಂಡುಹೋಗು." ಹೀಗೆಂದು ಹಾಡಿ ಪರಮಹಂಸರು ರಾಧೆಯ ಭಾವನೆಯಲ್ಲಿ ತದ್ಗತರಾಗಿಬಿಟ್ಟಿದಾರೆ. ಅವರ ಬಾಯಿಂದ ಒಂದು ಮಾತೂ ಹೊರಬರುತ್ತಿಲ್ಲ. ದೇಹ ಸ್ಥಿರವಾಗಿದೆ. ಕಣ್ಣು ಅರ್ಧಮುಚ್ಚಿವೆ. ಸಂಪೂರ್ಣವಾಗಿ ಬಾಹ್ಯಜ್ಞಾನಶೂನ್ಯರಾಗಿದಾರೆ, ಎಂದರೆ ಸಮಾಧಿಸ್ಥರಾಗಿದಾರೆ.

ಬಹಳ ಹೊತ್ತೇ ಆಯಿತು—ಪರಮಹಂಸರಿಗೆ ಮತ್ತೆ ಬಾಹ್ಯಪ್ರಜ್ಞೆ ಬರಲು. ಮತ್ತೆ ಅದೇ ಕರುಣಾಮಯ ಕಂಠದಿಂದ ಹೇಳುತ್ತಿದಾರೆ: "ಹೇ ಸಖಿ, ನನ್ನನ್ನು ನನ್ನ ಪ್ರಾಣವಲ್ಲಭ ಕೃಷ್ಣನ ಹತ್ತಿರಕ್ಕೆ ಕರೆದು ಕೊಂಡುಹೋಗಿ ಬಿಟ್ಟು ನನ್ನನ್ನು ನೀನು ನಿನ್ನ ಬದ್ಧದಾಸಿಯನ್ನಾಗಿ ಮಾಡಿಕೊ. ನಾನು ಎಂದೆಂದಿಗೂ ನಿನ್ನ ದಾಸಿಯಾಗಿರುವೆನು. ಕೃಷ್ಣನನ್ನು ಹೇಗೆ ಪ್ರೀತಿಸಬೇಕು ಎಂಬುದನ್ನು ತೋರಿಸಿಕೊಟ್ಟವಳು ನೀನೇ. ಹೇ ಕೃಷ್ಣ! ಹೇ ಪ್ರಾಣವಲ್ಲಭ!"

ಕೀರ್ತನಕಾರರು ಕೀರ್ತನೆ ಮುಂದುವರಿಸುತ್ತಿದಾರೆ. ಶ್ರೀಮತಿ ಹೇಳುತ್ತಿದಾಳೆ: "ಸಖಿ, ನಾನು ಯಮುನೆಗೆ ನೀರು ತರಲು ಹೋಗುವುದಿಲ್ಲ. ಒಮ್ಮೆ ಕದಂಬದಡಿಯಲ್ಲಿ ನನ್ನ ಪ್ರಿಯಸಖನನ್ನು ನೋಡಿದೆ. ಅಲ್ಲಿಗೆ ಹೋದರೇ ನಾನು ವಿಹ್ವಲಳಾಗಿಬಿಡುತ್ತೇನೆ."

ಪರಮಹಂಸರು ಮತ್ತೆ ಭಾವಾವಿಷ್ಟರಾಗುತ್ತಿದಾರೆ. ನಿಟ್ಟುಸಿರನ್ನು ಬಿಟ್ಟು ಆಕಾಂಕ್ಷಿತರಾಗಿ ಹೇಳುತ್ತಿದಾರೆ: "ಆಹಾ! ಆಹಾ!"

ಕೀರ್ತನೆ ಮುಂದುವರಿಯುತ್ತಿದೆ. ರಾಧೆ ಹೇಳುತ್ತಿದಾಳೆ:

ನಿನ್ನಂಗದ ಸಂಗಸುಖವ ನಾನು ನೆನೆದ ಮಾತ್ರಕೆ
ನನ್ನಂಗದ ಬೇಗೆ ಹಿಂಗಿ ತಣ್ಣಗಾಯಿತೇತಕೆ!

ಕೀರ್ತನಕಾರರು ಆಗಾಗ ಆಶುಕವಿತೆ ಮಾಡುತ್ತಿದಾರೆ: "ಹೇ ಸಖಿಯರೆ, ನೀವು ಕಾದಿರಬಲ್ಲಿರಿ. ನನಗೆ ಒಮ್ಮೆ ಶ್ರೀಕೃಷ್ಣನನ್ನು, ನನ್ನ ಪ್ರಾಣವಲ್ಲಭನನ್ನು ತೋರಿಸಿ." ಮತ್ತೆ: "ಭೂಷಣಗಳಲ್ಲೆಲ್ಲಾ ಭೂಷಣನಾದ ಶ್ರೀಕೃಷ್ಣನನ್ನೇ ಕಳೆದುಕೊಂಡ ಮೇಲೆ ಇನ್ನೀ ಭೂಷಣಗಳೇಕೆ?" ಮತ್ತೆ: "ಅಯ್ಯೋ! ನನ್ನ ಸುದಿನಗಳು ಹೋಗಿ ದುರ್ದಿನಗಳು ಬಂದುಬಿಟ್ಟವೆ." ಕೊನೆಯದಾಗಿ: "ಈ ದುರ್ದಶೆಯ ದಿನಗಳು ಇಷ್ಟೊಂದು ಕಾಲ ತಳ್ಳುತ್ತಿವೆಯಲ್ಲ!"

ಪರಮಹಂಸರು ಆಶುಕವಿತೆ ಮಾಡುತ್ತಿದಾರೆ: "ಆ ಸುದಿನ ಇಂದೂ ಬರಲಿಲ್ಲವೇನು?" ಕೀರ್ತನಕಾರರು ಆಶುಕವಿತೆ ಮಾಡುತ್ತಿದಾರೆ: "ಎಷ್ಟೊಂದು ಕಾಲವಾಗಿ ಹೋಯಿತು. ಆ ಸುದಿನ ಇಂದೂ ಬರಲಿಲ್ಲವೇನು?"

ರಾಧೆ ತನ್ನ ಸಖಿಯರಿಗೆ ಹೇಳಿದ ಮಾತನ್ನು ಕೀರ್ತನಕಾರರು ಹಾಡುತ್ತಿದಾರೆ:

ನಾನು ಬದುಕಿರಲಾರೆ ಸಖಿಯರೆ
ನಾನು ಸಾಯುವೆ, ನಿಶ್ಚಯ.
ತಡೆಯಲಾರೆನು ತಡೆಯಲಾರೆನು
ಕೃಷ್ಣ ವಿರಹದ ಬೇಗೆಯ.
ಯಾರಿಗೊಪ್ಪಿಸಿ ಹೋಗಲಯ್ಯೋ
ನನ್ನ ಪ್ರೇಮದ ನಿಧಿಯನು?
ನಾನು ಸತ್ತರೆ ಚಿತೆಯ ಬೆಂಕಿಗೆ
ಒಡ್ಡದಿರಿ ಈ ತನುವನು.
ಬೇಡಿಕೊಳುವೆನು ಸಖಿಯರೇ, ಇದ-
ನೆಸೆಯ ಬೇಡಿರಿ ಯಮುನೆಗೆ,
ಏಕೆನಲು ಈ ದೇಹದಲಿ ನಾ-
ನೊಲಿದಿರುವೆ ಶ್ರೀಕೃಷ್ಣಗೆ!
ನನ್ನ ದೇಹವ ಬಿಗಿದು ಕಟ್ಟಿರಿ
ತಮಾಲ ವೃಕ್ಷದ ಕೊಂಬೆಗೆ
ನನ್ನ ತನುವೂ ಹೊಂದಿಕೊಳುವುದು
ಈ ತಮಾಲದ ಬಣ್ಣಕೆ;
ಏಕೆನಲು ಶ್ರೀ ಕೃಷ್ಣನಂತೆಯೆ
ಈ ತಮಾಲವು ಶ್ಯಾಮಲ
ನನ್ನ ಕಿರಿತನದಿಂದಲೂ
ಈ ಶ್ಯಾಮವರ್ಣವು ಮೋಹಕ!
ನನ್ನ ಈ ತನು ಶ್ಯಾಮಸೋರ್ವನಿ-
ಗಾಗಿಯೇ ಮುಡಿಪಾಗಿದೆ.
ಕೃಷ್ಣವರ್ಣದೊಳಿರಲಿ ಈ ತನು
ಅಗಲುವುದೆ ಬೇಡಾಗಿದೆ.

ರಾಧೆ ತನ್ನ ವಿರಹದ ಪರಮಾವಧಿಯನ್ನು ಮುಟ್ಟಿ ಮೂರ್ಛೆಹೋಗಿ ಬಿಡುತ್ತಾಳೆ.

ಹಾ, ನೆಲಕೆ ಬಿದ್ದಳಲ್ಲ ಮೂರ್ಛೆಹೋದ ರಾಧೆಯು
"ಕೃಷ್ಣ"—ಎಂಬ ಹೆಸರಿನೊಡನೆ ಮುಗಿದುವವಳ ಕಂಗಳು.
ಏನು, ಕತೆಯು ಮುಗಿಯಿತೇನು? ಅಯ್ಯೊ ಕೃಷ್ಣಪ್ರಿಯತಮೆ
ಒಂದೇ ಒಂದು ಚಣದ ಹಿಂದೆ ಮಾತಾಡಿದೆಯಲ್ಲವೆ?

ಬಳಿಗೆ ಬಂದರಲ್ಲಿನೋಡು ಅವಳ ಪ್ರಾಣಸಖಿಯರು
ಶಿಶಿರ ಗಂಧ ವಾರಿಯಿಂದ ಉಪಚಾರವ ಗೈವರು.
ಹಲವರಳುತ ನಿಂತಿರುವರು ರಾಧೆಗಾದ ಪಾಡಿಗೆ,
ತಣ್ಣೀರನು ಚಿಮುಕಿಸುವರು ಹಲವರವಳ ವದನಕೆ.

ಸಹಿಸಲಾರರೀ ಸಖಿಯರು ರಾಧೆಗಾದ ಗತಿಯನು
ಬಹುಶಃ ಮೇಲೇಳಬಹುದು ಇಷ್ಟರಲ್ಲೆ ರಾಧೆಯು,
ಆದರೊಂದೆ ಶಂಕೆ ನನಗೆ: ಕೃಷ್ಣಪ್ರೇಮ ಮೃತಳಿಗೆ
ಹರಣವ ತಂದೀವ ಶಕ್ತಿ ಇಹುದೆ ಶೀತವಾರಿಗೆ?

ರಾಧೆ ಮೂರ್ಛಿತಳಾಗಿರುವುದನ್ನು ನೋಡಿ ಸಖಿಯರು ಆಕೆಯ ಕಿವಿಯ ಹತ್ತಿರ ಕೃಷ್ಣನಾಮವನ್ನು ಪಠಿಸುತ್ತಿದಾರೆ. ಇದು ಆಕೆಗೆ ಕಿಂಚಿತ್ ಬಾಹ್ಯಪ್ರಜ್ಞೆಯನ್ನು ತರುತ್ತಿದೆ. ಎದುರಿಗಿರುವ ತಮಾಲವೃಕ್ಷವನ್ನು ನೋಡಿ ಭಾವಿಸುತ್ತಾಳೆ, ಶ್ರೀಕೃಷ್ಣನೇ ತನ್ನೆದುರಿಗೆ ನಿಂತಿರುವನೆಂದು.

ಶ್ಯಾಮನಾಮದಿಂದ ಹರಣ ಮರಳಿ ಬಂತು ರಾಧೆಗೆ
ಮುಗಿದ ಕಣ್ಣ ಮೆಲನೆ ತೆರೆದು ದಿಟ್ಟಿಸುವಳು ಸುಮ್ಮನೆ.
ಕೃಷ್ಣನೆಲ್ಲು ಕಾಣಲಿಲ್ಲ; ಕಂಬನಿಯೊಳು ನುಡಿವಳು:
"ಎಲ್ಲಿರುವನು ನನ್ನ ಕೃಷ್ಣ ಕರೆತನ್ನಿರಿ ಸಖಿಯರೇ,
ಯಾರ ಹೆಸರ ಕಿವಿಯಲುಸುರಿ ನನಗೆಚ್ಚರ ಗೈದಿರೋ
ಆತನನ್ನು ಒಮ್ಮೆ ನನ್ನ ಕಣ್ಣೆದುರಿಗೆ ತೋರಿರೇ."

ಕಪ್ಪು ಹೊಂಗೆ ತೊಂಗಲನ್ನು ತೂಗುತಿರಲು ಎದುರಿಗೆ,
ಆ ಅದನೇ ಕೃಷ್ಣನೆಂದು ದಿಟ್ಟಿಸುವಳು ಸುಮ್ಮನೆ!
"ಆ ಅಗೋ ಮಯೂರ ಪಿಂಛ! ಅವನ ಮುಡಿಯ ಕಾಣಿರೆ
ಎನಿತು ಸೊಗಸು ಎನಿತು ಸೊಗಸು"—ಎನುತ ಸಖಿಗೆ ತೋರಿರೆ,
ಯಾವುದೊ ನವಿಲೊಂದು ಅಲ್ಲಿ ಸುಳಿದಡಗಿತು ಎದುರಿಗೆ
ಅದನೆ ಕೃಷ್ಣ ಚೂಡವೆಂದು ಭ್ರಮಿಸಿದಳೀ ವಿಹ್ವಲೆ!

ಶ್ರೀಕೃಷ್ಣ ಮಥುರೆಗೆ ಹೋಗಿದಾನೆ—ರಾಜ್ಯಭಾರ ವಹಿಸಿಕೊಳ್ಳಲು. ಆತ ತನ್ನ ಬೃಂದಾವನದ ಉಡುಪು ಮತ್ತು ಕೊಳಲನ್ನು ತ್ಯಜಿಸಿ ಈಗ ರಾಜಯೋಗ್ಯ ಉಡಿಗೆ-ತೊಡಿಗೆಗಳನ್ನು ಹಾಕಿಕೊಂಡಿದಾನೆ. ರಾಧೆಯ ಸಖಿಯರು ಸಮಾಲೋಚನೆ ನಡಸಿ ಒಬ್ಬ ದೂತಿಯನ್ನು ಮಥುರೆಗೆ ಕಳುಹಿ

ಸುತ್ತಾರೆ. ಆಕೆ ದಾರಿಯಲ್ಲಿ ಒಬ್ಬ ಮಥುರಾಪುರಿ ಹೆಂಗಸಿನ ಪರಿಚಯ ಮಾಡಿಕೊಳ್ಳುತ್ತಾಳೆ. ಆಕೆಗೂ ಈ ದೂತಿಯ ವಯಸ್ಸೇ. ಆಕೆ ಈ ದೂತಿಯ ಊರು-ಗೀರು ಎಲ್ಲವನ್ನೂ ಕೇಳಿ ತಿಳಿದುಕೊಳ್ಳುತ್ತಾಳೆ.

ದೂತಿ ಹೇಳುತ್ತಾಳೆ: "ನಾನು ಹೋಗಿ ಆತನನ್ನು ಕರೆಯಬೇಕಾಗಿಲ್ಲ. ಆತ ತಾನಾಗೇ ನನ್ನ ಹತ್ತಿರಕ್ಕೆ ಬಂದುಬಿಡುತ್ತಾನೆ." ಬಾಯಲ್ಲಿ ಹಾಗೆಂದರೂ ಕೃಷ್ಣನ ಅರಮನೆಗೆ ಆ ಮಥುರೆಯ ಹೆಂಗಸಿನೊಡನೆ ಮುಂದು ವರಿಯುತ್ತಾಳೆ. ಬೀದಿಯಲ್ಲಿ ಹೋಗುತ್ತ ವ್ಯಾಕುಲದಿಂದ ಅಳುತ್ತ ಅಳುತ್ತ ಕೂಗಿಕೊಳ್ಳುತ್ತಿದಾಳೆ: "ಹೇ ಹರಿ, ಎಲ್ಲಿದೀಯೊ? ಹೇ ಗೋಪೀಜನ-ಜೀವನ! ಹೇ ಪ್ರಾಣವಲ್ಲಭ! ಹೇ ರಾಧಾವಲ್ಲಭ! ಹೇ ಲಜ್ಜಾನಿವಾರಣ ಹರಿ! ಒಮ್ಮೆ ನಮಗೆ ದರ್ಶನ ಕೊಡೊ! ನಾನು ಬಹಳ ಹೆಮ್ಮೆಯಿಂದ ಇಲ್ಲಿನ ನಿವಾಸಿಗಳಿಗೆ ಹೇಳಿಬಿಟ್ಟಿದೇನೆ: 'ನೀನೆ ಬಂದು ನನ್ನನ್ನು ಸಂಧಿಸುವೆ' ಎಂದು. ನನಗೆ ಅವಮಾನಮಾಡಬೇಡ ಕಣೋ."

ಬಿಂಕದಿ ನುಡಿವಳು ಮಥುರಾಪುರ ನಾರಿ:
"ಓ ನೀನಾರೇ ಗೋಪಕುಮಾರೀ,
ಚಕ್ರವರ್ತಿ ಶ್ರೀಕೃಷ್ಣನನೀತೆರ
ಹರಕು ಬಟ್ಟೆಯೊಳೆ ನೋಡುವೆನೆನ್ನುವ
ಹಳ್ಳಿಗಮಾರಿ?
"ಸಪ್ತದ್ವಾರಗಳ ಪಹರೆಯಾಚೆಗಿದೆ
ಕೃಷ್ಣನಿವಾಸ!
ಎಂತು ಬಂದೆ ನೀ, ನಿನಗೆಷ್ಟು ಧೈರ್ಯವೇ
ಕಾಪಿನರಮನೆಯ ನೀನೆಂತು ನುಗ್ಗುನೇ,
ಓ, ಬಿಡು ನಿನಗಿಲ್ಲ ಪ್ರವೇಶ."
ಗದ್ಗದದೊಳು ನುಡಿವಳು ಗೋಪಕುಮಾರಿ:
"ಓ ಪ್ರಿಯತಮ ಕೃಷ್ಣಾ
ಗೋಪೀಜನಮನ ಹಾರೀ,
ದಯಮಾಡಿಸು ಎಲ್ಲಿಹೆ ನೀ
ಸುಂದರ ಮೊಗದೋರಿ.
"ಓ ಗೋಪೀಜನವಲ್ಲಭ—ಮಥುರಾಪುರವಾಸ
ಓ ರಾಧಾಪ್ರಿಯತಮ ಬಾರಾ—ಹೃದಯನಿವಾಸ;

ಓ ಬಾರಾ, ಲಜ್ಜಾಭಯದೂರ,
ಬಾರಾ, ಗೋಪೀಜನಜೀವನಧನ
ಸಂರಕ್ಷಣ ಚತುರ!"

ಕೀರ್ತನಕಾರರು, "ಓ ಪ್ರಿಯತಮ ಕೃಷ್ಣಾ ಗೋಪೀಜನಮನ ಹಾರೀ, ದಯಮಾಡಿಸು ಎಲ್ಲಿಹೆ ನೀ" ಎಂದು ಹಾಡಿದೊಡನೇ ಪರಮ-ಹಂಸರು ಸಮಾಧಿಸ್ಥರಾಗಿಬಿಟ್ಟರು. ಕೀರ್ತನೆ ಇನ್ನೇನು ಮುಗಿಯಲಿರುವುದರಿಂದ ಕೀರ್ತನಕಾರರು ಉಚ್ಚಕಂಠದಿಂದ ಹಾಡಲಾರಂಭಿಸಿದಾರೆ. ಪರಮಹಂಸರು ಮತ್ತೆ ಎದ್ದುನಿಂತುಕೊಂಡು ಸಮಾಧಿಸ್ಥರಾಗಿಬಿಟ್ಟರು. ಈಗ ಕಿಂಚಿತ್ ಬಾಹ್ಯಪ್ರಜ್ಞೆ ಪಡೆದವರಾಗಿ ಅಸ್ಪಷ್ಟಸ್ವರದಿಂದ ಹೇಳುತ್ತಿದಾರೆ: "ಕಿಟ್ಣ! ಕಿಟ್ಣ!" ಅವರು ಭಾವಾವಿಷ್ಟರಾಗಿಬಿಟ್ಟಿರುವುದರಿಂದ ಕೃಷ್ಣನ ಹೆಸರನ್ನು ಸರಿಯಾಗಿ ಉಚ್ಚರಿಸಲೂ ಅವರ ಕೈಯಲ್ಲಿ ಆಗುತ್ತಿಲ್ಲ.

ರಾಧಾಕೃಷ್ಣರ ಮಿಲನವಾಯಿತು. ಕೀರ್ತನಕಾರರು ಆ ಮಿಲನದ ಸಂಬಂಧವಾಗಿ ಹಾಡುತ್ತಿದಾರೆ. ಪರಮಹಂಸರು ಈಗ ಆಶುಕವಿತೆ ಮಾಡುತ್ತಿದಾರೆ:

ಒರಗಿ ನಿಂತಿಹಳು ರಾಧಾ ರಮಣಿಯು
ಕೃಷ್ಣವಕ್ಷದಲ್ಲಿ
ತಮಾಲ ವೃಕ್ಷವ ತಬ್ಬಿತೊ ಎನೆ
ಬಂಗಾರದ ಬಳ್ಳಿ!

ಈಗ ನಾಮಸಂಕೀರ್ತನೆ ಆರಂಭವಾಯಿತು. ಕೀರ್ತನಕಾರರು ತಾಳ ಮೃದಂಗಗಳೊಡನೆ ಹಾಡುತ್ತಿದಾರೆ: "ರಾಧೇ ಗೋವಿಂದ ಜಯ್!" ಎಂದು. ಭಕ್ತರೆಲ್ಲರೂ ಉನ್ಮತ್ತರಾಗಿ ಹಾಡುತ್ತಿದಾರೆ. ಪರಮಹಂಸರು ನರ್ತಿಸುತ್ತಿದಾರೆ. ಭಕ್ತರು ಅವರ ಸುತ್ತಲೂ ಸುತ್ತುಗಟ್ಟಿ ಆನಂದದಿಂದ ನರ್ತಿಸುತ್ತಿದಾರೆ. "ರಾಧೇ ಗೋವಿಂದ ಜಯ್! ರಾಧೇ ಗೋವಿಂದ ಜಯ್!" ಎಂಬ ಘೋಷ ತೋಟದ ಮನೆಯಲ್ಲೆಲ್ಲಾ ಮರುದನಿ ಕೊಡುತ್ತಿದೆ.

ಕೀರ್ತನೆ ಮುಗಿಯಿತು. ಈಗ ಪರಮಹಂಸರು ಭಕ್ತರೊಡನೆ ಸುಮ್ಮನೆ ಕುಳಿತುಕೊಂಡಿದಾರೆ. ನಿರಂಜನ ಬಂದು ಪರಮಹಂಸರಿಗೆ ಸಾಷ್ಟಾಂಗಪ್ರಣಾಮ ಮಾಡಿದೊಡನೇ ಅವರು ಎದ್ದು ನಿಂತು ಹರ್ಷೋತ್ಕರ್ಷ ಮುಖ ಮತ್ತು ಕಣ್ಣುಗಳಿಂದ ಹೇಳುತ್ತಿದಾರೆ: "ನೀನೂ ಬಂದುಬಿಟ್ಟೆ!

(ಮಾಸ್ಟರಿಗೆ) ನೋಡು, ಈ ಹುಡುಗ ಬಹಳ ಸರಳ. ಪೂರ್ವಜನ್ಮಗಳಲ್ಲಿ ಬಹಳವಾಗಿ ತಪಸ್ಸು ಮಾಡದಿದ್ದರೆ ಸರಳತೆ ಉಂಟಾಗದು. ಕಪಟತೆ, ಲೆಕ್ಕಾಚಾರದ ಬುದ್ಧಿ ಮೊದಲಾದುವು ಇದ್ದುವು ಎಂದರೆ ಭಗವಂತನ ಸಾಕ್ಷಾತ್ಕಾರವನ್ನ ಪಡೆದುಕೊಳ್ಳಲಾಗೋದಿಲ್ಲ.

"ಕಾಣುವುದಿಲ್ಲವೆ, ಭಗವಂತ ಯಾರ ಮನೆಯಲ್ಲಿ ಅವತರಿಸಿದನೊ ಆ ಮನೆಯವರು ಅತ್ಯಂತ ಸರಳರಾಗಿದ್ದುದು? ದಶರಥ ಎಷ್ಟು ಸರಳ! ನಂದ—ಶ್ರೀಕೃಷ್ಣನ ತಂದೆ ಎಂಥ ಸರಳ ಜೀವಿ! ಜನ ಹೇಳುವುದುಂಟು: 'ಆಹಾ! ಈತನೆಷ್ಟು ಸರಳ! ಈತ ನಂದಘೋಷನೇ.'

(ನಿರಂಜನನಿಗೆ) "ನೋಡು, ನಿನ್ನ ಮುಖದ ಮೇಲೆ ಕಪ್ಪು ಮುಸುಕಿ ಕೊಂಡಿರುವ ಹಾಗೆ ಕಾಣುತ್ತಿದೆ. ನೀನು ಆಫೀಸಿನಲ್ಲಿ ಕೆಲಸಮಾಡುತ್ತಿಲ್ಲವೆ, ಅದಕ್ಕಾಗಿ. ಅಲ್ಲಿ ಲೆಕ್ಕ ಪತ್ರ ಇಡಬೇಕಾಗುತ್ತದೆ. ಅದೂ ಅಲ್ಲದೆ ಇನ್ನೂ ಅನೇಕ ವಿಧದ ಕೆಲಸಕಾರ್ಯಗಳನ್ನು ಮಾಡಬೇಕಾಗುತ್ತದೆ. ಈ ಎಲ್ಲ ಕಾರಣಗಳಿಂದ ಮನಸ್ಸು ಅಲ್ಲಿ ಯಾವಾಗಲೂ ಒಂದು ವಿಧವಾದ ಆಕಾಂಕ್ಷಾವಸ್ಥೆಯಲ್ಲಿರುತ್ತದೆ. ಸಂಸಾರಿಗಳಂತೆ ನೀನೂ ಚಾಕರಿ ಮಾಡುತ್ತಿದೀಯೆ; ಆದರೆ ಒಂದು ಸ್ವಲ್ಪ ವ್ಯತ್ಯಾಸವಿದೆ. ನೀನು ನಿನ್ನ ತಾಯಿಯ ಸಲುವಾಗಿ ಚಾಕರಿ ಸ್ವೀಕರಿಸಿದೀಯೆ. ತಾಯಿ ಪೂಜಾರ್ಹಳು, ಬ್ರಹ್ಮ-ಮಯಿಯ ಸ್ವರೂಪ. ಹೆಂಡತಿ ಮಕ್ಕಳಿಗಾಗಿ ನೀನು ಚಾಕರಿ ಮಾಡುತ್ತಿದ್ದುದೇ ಆಗಿದ್ದರೆ, ನಾನು ಹೇಳಿಬಿಡುತ್ತಿದ್ದೆ: 'ಛೀ, ಛೀ! ಹತ್ತುಸಲ ಛೀ! ನೂರು ಸಲ ಛೀ!'

(ಮಣಿಮಲ್ಲಿಕನಿಗೆ ನಿರಂಜನನನ್ನು ತೋರಿಸಿ) "ನೋಡು, ಈ ಹುಡುಗ ಬಹಳ ಸರಳ. ಆದರೆ ಈಗ ಸ್ವಲ್ಪ ಕಾಲದಿಂದ ಒಂದಿಷ್ಟು ಸುಳ್ಳು ಹೇಳುವುದು ಕಲಿತುಕೊಂಡುಬಿಟ್ಟಿದಾನೆ. ಇದೇ ಈತನಲ್ಲಿರುವ ದೋಷ. ಅಂದು ಹೇಳಿಹೋದ ಬರುತ್ತೇನೆ ಅಂತ, ಆದರೆ ಬರಲೇ ಇಲ್ಲ. (ನಿರಂಜನನಿಗೆ) ಇದಕ್ಕಾಗೇ ರಾಖಾಲ ನಿನ್ನನ್ನು ಕೇಳಿದ್ದು, ನೀನು ಏಡೇದೇರಕ್ಕೆ ಬಂದೂ ಏಕೆ ನನ್ನನ್ನು ನೋಡಲು ಬರಲಿಲ್ಲ ಎಂದು."

ನಿರಂಜನ: "ಅಲ್ಲಿಗೆ ಕೇವಲ ಎರಡು ದಿನಕ್ಕೆ ಮಾತ್ರ ಬಂದಿದ್ದುದು."

ಶ್ರೀರಾಮಕೃಷ್ಣರು ನಿರಂಜನನಿಗೆ ಮಾಸ್ಟರನ್ನು ತೋರಿಸಿ: "ಈತ ಹೆಡ್ಮಾಸ್ಟರ್. ನಿನ್ನನ್ನು ನೋಡಿಬರುವಂತೆ ನಾನು ಈತನನ್ನು ಕಳುಹಿಸಿದ್ದೆ.

(ಮಾಸ್ಟರಿಗೆ) ಅಂದು ನೀನು ಬಾಬುರಾಮನನ್ನು ನನ್ನ ಹತ್ತಿರಕ್ಕೆ ಕಳುಹಿಸಿದ್ದೆಯಾ?"

ಪರಮಹಂಸರು ಪಕ್ಕದ ಕೊಠಡಿಗೆ ಹೋಗಿ ಕೆಲವು ಮಂದಿ ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಆಹಾ, ಗೋಪಿಯರದು ಎಂಥ ಅನುರಾಗ! ತಮಾಲ ವೃಕ್ಷ ನೋಡಿದೊಡನೇ ಒಮ್ಮೆಗೇ ಪ್ರೇಮೋನ್ಮಾದ! ರಾಧೆಯ ವಿರಹಾಗ್ನಿ ಅಷ್ಟು ಉಜ್ಜ್ವಲವಾದ್ದು, ಕಣ್ಣಿನಲ್ಲಿ ನೀರು ಸ್ರವಿಸಿದೊಡನೇ ಅದು ಇಂಗಿಹೋಗುತ್ತಿತ್ತು—ನೀರು ಸ್ರವಿಸುವುದೇ ತಡ ಅದು ಆವಿಯಾಗಿ ಹೊರಟುಹೋಗುತ್ತಿತ್ತು! ಕೆಲಕೆಲವು ಸಮಯ ಆಕೆಯ ಭಾವ ಎಷ್ಟು ಗಭೀರವಾದುದು ಎಂಬುದು ಗೊತ್ತೇ ಆಗುತ್ತಿರಲಿಲ್ಲ. ವಿಶಾಲವಾದ ಸರೋವರಕ್ಕೆ ಆನೆ ಇಳಿದರೆ ಅದು ಜನರ ಗಮನಕ್ಕೇ ಬರುವುದಿಲ್ಲ."

ಮಾಸ್ಟರ್: "ಹೌದು, ನಿಜ. ಗೌರಾಂಗನಿಗೂ ಹೀಗೇ ಆಗಿತ್ತು. ಅರಣ್ಯವನ್ನು ನೋಡಿ ಅದು ಬೃಂದಾವನವೆಂದು, ಸಮುದ್ರ ನೋಡಿ ಅದು ಯಮುನೆಯೆಂದು ಆತ ತಪ್ಪು ಭಾವಿಸಿದ."

ಶ್ರೀರಾಮಕೃಷ್ಣರು: "ಆಹಾ! ಆ ಪ್ರೇಮದ ಒಂದು ಬಿಂದು ಯಾರಿಗಾದರೂ ಉಂಟಾಗುವುದಾದರೆ! ಅದು ಎಂಥ ಅನುರಾಗ! ಏನು ಪ್ರೀತಿ ಅದು! ರಾಧೆಯದು ಕೇವಲ ನೂರಕ್ಕೆ ನೂರು ಭಾಗವಲ್ಲ, ನೂರಕ್ಕೆ ನೂರಿಪ್ಪತ್ತೈದು ಭಾಗ ಅನುರಾಗ. ಇದಕ್ಕೇ ಪ್ರೇಮೋನ್ಮಾದ ಅಂತ ಹೆಸರು. ಮುಖ್ಯವಾಗಿ ಮಾಡಬೇಕಾದ್ದೇನೆಂದರೆ, ಭಗವಂತನನ್ನು ಪ್ರೀತಿಸಬೇಕು, ಆತನ ಸಾಕ್ಷಾತ್ಕಾರಕ್ಕಾಗಿ ವ್ಯಾಕುಲಪಡಬೇಕು. ನೀನು ಯಾವ ಮಾರ್ಗವನ್ನಾದರೂ ಅನುಸರಿಸು; ಸಾಕಾರದಲ್ಲಾದರೂ ಶ್ರದ್ಧೆಯಿಡು, ನಿರಾಕಾರದಲ್ಲಾದರೂ ಶ್ರದ್ಧೆಯಿಡು; ಭಗವಂತ ಮನುಷ್ಯರೂಪಿನಲ್ಲಿ ಅವತರಿಸುತ್ತಾನೆ ಎಂಬುದರಲ್ಲಿ ನಿನಗೆ ಶ್ರದ್ಧೆ ಇರಲಿ ಬಿಡಲಿ; ಆತನಲ್ಲಿ ಅನುರಾಗವಿದ್ದರೇ ಬೇಕಾದಷ್ಟು. ಆಗ ಆತ ತನ್ನ ನಿಜಸ್ವರೂಪ ಏನು ಎಂಬುದನ್ನ ತಾನಾಗೇ ತೋರಿಸಿಕೊಟ್ಟುಬಿಡುತ್ತಾನೆ. ಹುಚ್ಚನಾಗಬೇಕಾಗಿದ್ದರೆ, ಪ್ರಾಪಂಚಿಕ ವಸ್ತುಗಳಿಗಾಗಿ ಏಕೆ ಹುಚ್ಚನಾಗಬೇಕು? ಹುಚ್ಚನಾಗಬೇಕಾಗಿದ್ದರೆ, ಭಗವಂತನಿಗಾಗಿ ಹುಚ್ಚನಾಗು."

ಪರಮಹಂಸರು ಈಗ ಹಾಲ್‌ಗೆ ಹಿಂದಿರುಗಿ ಬಂದಿದಾರೆ. ಅವರ ಆಸನದ ಹತ್ತಿರ ಒಂದು ಒರಗುದಿಂಬನ್ನು ಹಾಕಲಾಯಿತು. ಅವರು

ಕುಳಿತುಕೊಳ್ಳುವಾಗ, "ಓಂ ತತ್ ಸತ್" ಎಂಬ ಮಂತ್ರ ಉಚ್ಚರಿಸಿ ಅದನ್ನು ಒರಗಿಕೊಂಡರು. ಅನೇಕ ಮಂದಿ ಪ್ರಾಪಂಚಿಕರು ಬಹುಶಃ ಅದನ್ನು ಉಪಯೋಗಿಸಿರಬೇಕು. ಅದಕ್ಕೇ ಅದನ್ನು ಆ ರೀತಿಯಾಗಿ ಶುದ್ಧಿ ಮಾಡಿದರು ಅಂತ ಕಾಣುತ್ತೆ. ಭವನಾಥ, ಮಾಸ್ಟರ್ ಮೊದಲಾದವರು ಅವರ ಹತ್ತಿರ ಕುಳಿತಿದಾರೆ. ಆಗಲೆ ಬಹಳ ಹೊತ್ತಾಗಿಬಿಟ್ಟಿದೆ. ಊಟಕ್ಕೆ ಎಲೆ-ಗಿಲೆಯನ್ನು ಹಾಕುವ ಸೂಚನೆಯೇ ಕಂಡುಬರುತ್ತಿಲ್ಲ. ಅವರು ಮಕ್ಕಳ ಹಾಗೆ ಇನ್ನು ತಡೆಯಲಾರದೆ ಕೇಳುತ್ತಿದಾರೆ: "ಏನು ಸಮಾಚಾರ, ಇನ್ನೂ ಊಟ-ಗೀಟದ ಪ್ರಸ್ತಾಪವೇ ಇಲ್ಲವಲ್ಲ? ನರೇಂದ್ರನೆಲ್ಲಿ?"

ಒಬ್ಬ ಭಕ್ತ ನಗುತ್ತ: "ಮಹಾಶಯರೆ, ರಾಮಬಾಬು ಮ್ಯಾನೇಜರ್. ಆತ ಎಲ್ಲವನ್ನೂ ನೋಡಿಕೊಳ್ಳುತ್ತಿದಾನೆ."

ಶ್ರೀರಾಮಕೃಷ್ಣರು ನಗುತ್ತ: "ಹಾಗೋ! ಅದಕ್ಕೇ ಹೀಗೆ."

ಒಬ್ಬ ಭಕ್ತ: "ಆತ ಎಲ್ಲಿ ಮ್ಯಾನೇಜರ್ ಆದರೂ, ಇದೇ ಗತಿ." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ಭಕ್ತರಿಗೆ: "ಸುರೇಂದ್ರನೆಲ್ಲಿ? ಆಹಾ, ಈಗ ಆತನಿಗೆ ಎಂಥ ಒಳ್ಳೆ ಸ್ವಭಾವ ಬಂದುಬಿಟ್ಟದೆ! ಆತ ಮುಚ್ಚುಮರೆ ಇಲ್ಲದೆ ಆಡಿಬಿಡತಕ್ಕವ; ಇದ್ದುದನ್ನು ಇದ್ದ ಹಾಗೆ ಹೇಳಲು ಸ್ವಲ್ಪವೂ ಹೆದರ ತಕ್ಕವನಲ್ಲ. ಮತ್ತೆ ನೋಡಿ, ಆತನದು ಮುಕ್ತಹಸ್ತ. ಸಹಾಯಕ್ಕಾಗಿ ಆತನನ್ನು ಸಮೀಪಿಸಿದವರು ಎಂದಿಗೂ ಬರಿಗೈಯಲ್ಲಿ ಹಿಂದಿರುಗುವಂತೆಯೇ ಇಲ್ಲ. (ಮಾಸ್ಟರಿಗೆ) ನೀನು ಭಗವಾನ್‌ದಾಸನನ್ನು[1] ನೋಡಲು ಹೋಗಿದ್ದೆ ಯಲ್ಲ, ಆತ ನಿನಗೆ ಹೇಗೆ ಕಂಡ ಹೇಳು ನೋಡೋಣ?"

ಮಾಸ್ಟರ್: "ಈಗ ಆತ ಬಹಳವಾಗಿ ಮುದುಕನಾಗಿಬಿಟ್ಟಿದಾನೆ. ಕಾಲ್ನಾಕ್ಕೆ ಹೋಗಿದ್ದೆ. ಅಲ್ಲಿ ರಾತ್ರಿವೇಳೆಯಲ್ಲಿ ಆತನನ್ನು ನೋಡಿದೆ. ಒಂದು ಹಾಸಿಗೆಯ ಮೇಲೆ ಮಲಗಿಕೊಂಡಿದ್ದ. ಒಬ್ಬ ಪ್ರಸಾದವನ್ನು ತಂದು ತಿನ್ನಿಸುತ್ತಿದ್ದ. ಗಟ್ಟಿಯಾಗಿ ಕೂಗಿ ಮಾತನಾಡಿದರೆ ಆತನಿಗೆ ಕೇಳಿಸುತ್ತದೆ. ನಾನು ನಿಮ್ಮ ವಿಷಯವಾಗಿ ಆತನಿಗೆ ಹೇಳಿದುದಕ್ಕಾಗಿ ಆತ ಹೇಳಿದ: 'ನಿನಗಿನ್ನೇನು ಚಿಂತೆ?'"

ಭವನಾಥ ಮಾಸ್ಟರಿಗೆ: "ನೀವು ಅನೇಕ ದಿನಗಳಿಂದ ದಕ್ಷಿಣೇಶ್ವರಕ್ಕೆ

1. ಒಬ್ಬ ದೊಡ್ಡ ವೈಷ್ಣವ ಭಕ್ತ.

ಹೋಗಲೇ ಇಲ್ಲ. ಪರಮಹಂಸರು ನಿಮ್ಮ ವಿಷಯವಾಗಿ ವಿಚಾರಿಸಿ, ಕೇಳಿದರು: 'ಮಾಸ್ಟರಿಗೆ ಈ ಸ್ಥಳ ಅರುಚಿಯಾಗಿಬಿಟ್ಟಿರುವುದೆ?' "

ಹೀಗೆಂದು ಹೇಳಿ ಭವನಾಥ ನಗಲಾರಂಭಿಸಿದ. ಪರಮಹಂಸರು ಅವರಿಬ್ಬರ ಮಾತುಕತೆಗಳನ್ನು ಕೇಳುತ್ತಿದ್ದರು. ಮಾಸ್ಟರನ್ನು ಪ್ರೀತಿಯಿಂದ ದೃಷ್ಟಿಸಿ ಆತನನ್ನು ಕೇಳುತ್ತಿದಾರೆ: "ಹೌದು, ಅದು ನಿಜ. ನೀನು ಬಹಳ ದಿನಗಳಿಂದ ಅಲ್ಲಿಗೆ ಬರಲೇ ಇಲ್ಲವಲ್ಲ ಏಕೆ?" ಮಾಸ್ಟರ್ ಏನೊ ಕುಂಟು ನೆವವನ್ನ ಕೊಡುತ್ತಿದಾನೆ.

ಈಗ ಮಹಿಮಚರಣ ಬಂದ. ಆತ ಕಾಶೀಪುರ ನಿವಾಸಿ. ಪರಮಹಂಸರಲ್ಲಿ ಆತನಿಗೆ ವಿಶೇಷವಾದ ಶ್ರದ್ಧಾ ಭಕ್ತಿ. ಸರ್ವದಾ ದಕ್ಷಿಣೇಶ್ವರಕ್ಕೆ ಹೋಗುತ್ತಲೇ ಇರುತ್ತಾನೆ. ಬ್ರಾಹ್ಮಣ. ಪಿತ್ರಾರ್ಜಿತ ಆಸ್ತಿ ಇದೆ. ಸ್ವತಂತ್ರ ಜೀವನ ನಡಸುತ್ತಿದಾನೆ. ಯಾರ ಕೈ ಕೆಳಗೂ ಕೆಲಸಮಾಡುತ್ತಿಲ್ಲ. ಸ್ವಲ್ಪ ಪಾಂಡಿತ್ಯವೂ ಇದೆ. ಇಂಗ್ಲಿಷ್ ಮತ್ತು ಸಂಸ್ಕೃತ ಗ್ರಂಥಗಳನ್ನನೇಕ ಓದಿದಾನೆ. ಯಾವಾಗಲೂ ವೇದಾಂತ ವಿಚಾರ ಮತ್ತು ಭಗವಚ್ಚಿಂತನೆ ಮಾಡುತ್ತಿರುತ್ತಾನೆ.

ಶ್ರೀರಾಮಕೃಷ್ಣರು ಮಹಿಮಚರಣನಿಗೆ: "ಏನಪ್ಪ ಇದು? ಇಲ್ಲಿಗೆ ಒಂದು ಜಹಜು ಬಂದು ನಿಂತುಬಿಟ್ಟಿದೆಯಲ್ಲ! (ಎಲ್ಲರೂ ನಗುತ್ತಿದಾರೆ.) ಇಂಥ ಸ್ಥಳಗಳಿಗೆ ಚಿಕ್ಕ ಪುಟ್ಟ ದೋಣಿ ಮಾತ್ರ ಬರಬಲ್ಲವು. ಆದರೆ ಒಂದು ವಿಷಯ. ಇದು ಮಳೆಗಾಲ!" (ನಗು.)

ಪರಮಹಂಸರು ಮಹಿಮಚರಣನೊಡನೆ ಮಾತುಕತೆ ಆಡುತ್ತಿದಾರೆ. ಆತನನ್ನು ಕೇಳುತ್ತಿದಾರೆ: "ಒಳ್ಳೇದು, ಜನರಿಗೆ ಅನ್ನದಾನ ಮಾಡಿದರೆ ಒಂದು ರೀತಿಯಲ್ಲಿ ಭಗವಂತನ ಸೇವೆಯನ್ನೇ ಮಾಡಿದಂತಾಗುತ್ತದೆ, ಅಲ್ಲವೇ? ಎಲ್ಲಾ ಜೀವಿಗಳಲ್ಲಿಯೂ ಆತ ಅಗ್ನಿರೂಪದಿಂದ ಇದಾನೆ. ಜನರಿಗೆ ಅನ್ನ ಹಾಕುವುದು ಎಂದರೆ, ಅಂತರ್ಯಾಮಿಯಾಗಿರುವ ಆತನಿಗೆ ಅರ್ಪಿಸಿದಂತೆಯೇ. ಆದರೆ ಹಾಗೆಂದು ದುಷ್ಟರಿಗೆ ಅನ್ನದಾನ ಮಾಡಕೂಡದು—ಅಂದರೆ ವ್ಯಭಿಚಾರಾದಿ ಮಹಾಪಾತಕಗಳನ್ನು ಮಾಡಿರತಕ್ಕವರಿಗೆ. ಅವರು ಎಲ್ಲಿ ಕುಳಿತುಕೊಳ್ಳುತ್ತಾರೊ ಆ ಜಾಗ ಏಳು ಮೊಳ ಆಳದವರೆಗೆ ಅಪವಿತ್ರವಾಗಿಬಿಡುತ್ತದೆ. ಒಮ್ಮೆ ಹೃದೆ ತನ್ನ ಊರಿನಲ್ಲಿ ಕೆಲವರಿಗೆ ಅನ್ನ ಹಾಕಿದ. ಅವರಲ್ಲಿ ಅನೇಕರು ಬಹಳ ಕೆಟ್ಟವರು. ನಾನು ಹೃದೂಗೆ ಹೇಳಿದೆ: 'ಇಲ್ಲಿ ಕೇಳು, ಇಂಥವರಿಗೆ ನೀನು ಅನ್ನ ಹಾಕಿದೆಯೊ, ಇಗೊ

ನಾನು ನಿನ್ನ ಮನೆಯಿಂದ ಹೊರಟೆ.' (ಮಹಿಮಚರಣನಿಗೆ) ನಾನು ಕೇಳಿದೇನೆ, ನೀನು ಹಿಂದೆ ಬಹಳವಾಗಿ ಅನ್ನದಾನ ಮಾಡುತ್ತಿದ್ದೆ ಎಂಬುದಾಗಿ. ಈಗ ಸಂಸಾರದ ವೆಚ್ಚ ಹೆಚ್ಚಾಗಿಬಿಟ್ಟಿದೆಯೇನು ?'' (ನಗು.)

ಈಗ ಎಲೆ ಹಾಕುತ್ತಿದಾರೆ—ದಕ್ಷಿಣ ವರಾಂಡದಲ್ಲಿ. ಪರಮಹಂಸರು ಮಹಿಮಚರಣನಿಗೆ ಹೇಳುತ್ತಿದಾರೆ: "ನೀನು ಒಳಕ್ಕೆ ಹೋಗಿ ನೋಡು ಅವರು ಏನು ಮಾಡುತ್ತಿದಾರೆ. ಸಾಧ್ಯವಾದರೆ ಒಂದು ಸ್ವಲ್ಪ ಹೊತ್ತು ಬಡಿಸು. ಆದರೆ ಅದನ್ನು ನಾನು ಹೇಳುವುದು ಸರಿಯಲ್ಲ.'' ಮಹಿಮಚರಣ ಉತ್ತರವೀಯುತ್ತಿದಾನೆ: "ಮೊದಲು ಅವರು ಇಲ್ಲಿಗೆ ತಂದಿಡಲಿ. ಆಮೇಲೆ ಬೇಕಾದರೆ ನೋಡುತ್ತೇನೆ.'' ಕೆಮ್ಮುತ್ತ ಅಡಿಗೆಮನೆ ಕಡೆಗೆ ಹೋದವನು ಒಡನೆಯೇ ಹಿಂದಿರುಗಿಬರುತ್ತಿದಾನೆ.

ಪರಮಹಂಸರು ಮತ್ತು ಭಕ್ತರು ಆನಂದದಿಂದ ಊಟಮಾಡಿ ಈಗ ವಿಶ್ರಮಿಸಿಕೊಳ್ಳುತ್ತಿದಾರೆ. ಅಪರಾಹ್ನ ಎರಡು ಘಂಟೆಯಾದನಂತರ ಬ್ರಾಹ್ಮಸಮಾಜಕ್ಕೆ ಸೇರಿದ ಪ್ರತಾಪಚಂದ್ರಮಜುಮದಾರ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಅಭಿವಾದನ ಮಾಡುತ್ತಿದಾನೆ. ಪರಮಹಂಸರೂ ತಲೆಯನ್ನು ತಗ್ಗಿಸಿ ನಮಸ್ಕಾರ ಮಾಡುತ್ತಿದಾರೆ. ಈಗ ಅವರಿಬ್ಬರೂ ಮಾತುಕತೆ ಆಡುತ್ತಿದಾರೆ.

ಪ್ರತಾಪ: "ಮಹಾಶಯರೆ, ಆರೋಗ್ಯಲಾಭಕ್ಕಾಗಿ ನಾನು ಡಾರ್ಜಿಲಿಂಗಿಗೆ ಹೋಗಿದ್ದೆ.''

ಶ್ರೀರಾಮಕೃಷ್ಣರು: "ಆದರೆ ನಿನ್ನ ಶರೀರವೇನು ಉತ್ತಮಗೊಂಡಂತೆ ತೋರುತ್ತಿಲ್ಲವಲ್ಲ. ನಿನಗೇನಾಗಿದೆ ?''

ಪ್ರತಾಪ: "ಕೇಶವಸೇನನಿಗೆ ಬಂದಿದ್ದ ರೋಗವೇ ನನಗೂ ಬಂದಿದೆ.''

ಈಗ ಕೇಶವಸೇನನ ಸಂಬಂಧವಾಗಿ ಮಾತುಕತೆ ಆರಂಭವಾಯಿತು. ಪ್ರತಾಪ ಹೇಳುತ್ತಿದಾನೆ: "ಕೇಶವನಲ್ಲಿ ವೈರಾಗ್ಯವನ್ನ ಬಾಲ್ಯಕಾಲದಿಂದಲೂ ನೋಡಬಹುದಾಗಿತ್ತು. ಆತ ಆಟ ಪಾಟ ವಿನೋದಗಳಲ್ಲಿ ತೊಡಗುತ್ತಿದ್ದುದು ಎಲ್ಲೋ ಅಪರೂಪಕ್ಕೊಮ್ಮೆ. ಹಿಂದೂ ಕಾಲೇಜಿನಲ್ಲಿ ಓದುತ್ತಿದ್ದ. ಅಲ್ಲಿ ಆತನಿಗು ಸತ್ಯೇಂದ್ರನಿಗು ಸ್ನೇಹ ಬೆಳೆಯಿತು. ಸತ್ಯೇಂದ್ರನ ಮೂಲಕ ಆತನ ತಂದೆ ದೇವೇಂದ್ರನಾಥಠಾಕುರನ ಪರಿಚಯ ಕೇಶವನಿಗೆ ಆಯಿತು. ಕೇಶವನಿಗೆ ಎರಡೂ ಇತ್ತು. ಯೋಗವೂ ಇತ್ತು,

ಭೋಗವೂ ಇತ್ತು. ಒಂದೊಂದು ಸಮಯ ಆತನ ಭಕ್ತಿ ಅಂಥ ಉಚ್ಚ ಸ್ಥಿತಿಯನ್ನು ಮುಟ್ಟಿಬಿಡುತ್ತಿತ್ತು, ಆತ ಬಾಹ್ಯಜ್ಞಾನಶೂನ್ಯನಾಗಿಬಿಡುತ್ತಿದ್ದ. ಗೃಹಸ್ಥರ ಹೃದಯಕ್ಕೆ ಧರ್ಮವನ್ನು ತುಂಬುವುದೇ ಆತನ ಜೀವನದ ಚರಮೋದ್ದೇಶವಾಗಿತ್ತು.''

ಈಗ ಒಬ್ಬ ಮಹಾರಾಷ್ಟ್ರ ಮಹಿಳೆಯ ಸಂಬಂಧವಾಗಿ ಮಾತುಕತೆ ಆರಂಭವಾಯಿತು.

ಪ್ರತಾಪ: ''ನಮ್ಮ ದೇಶದ ಮಹಿಳೆಯರಲ್ಲೂ ಕೆಲಕೆಲವರು ವಿಲಾಯತಿಗೆ ಹೋಗಿಬಂದಿದಾರೆ. ಒಬ್ಬ ಮಹಾರಾಷ್ಟ್ರ ಮಹಿಳೆ, ಒಳ್ಳೆ ಪಂಡಿತೆ, ವಿಲಾಯತಿಗೆ ಹೋಗಿಬಂದಿದಾಳೆ. ಆದರೆ ಆಕೆ ಈಗ ಕ್ರಿಶ್ಚಿಯನ್ ಆಗಿಬಿಟ್ಟಿದಾಳೆ. ಮಹಾಶಯರೆ, ಆಕೆಯ ಹೆಸರು ಕೇಳಿದೀರೇನು?''

ಶ್ರೀರಾಮಕೃಷ್ಣರು: ''ಇಲ್ಲ. ಆದರೆ ನೀನು ಹೇಳಿದುದನ್ನು ಕೇಳಿ ನನಗನಿಸುತ್ತಿದೆ, ಆಕೆಗೆ ಲೋಕಮಾನ್ಯಳಾಗಲು ಇಚ್ಛೆ ಇರಬೇಕು ಎಂಬುದಾಗಿ. ಈ ವಿಧವಾದ ಅಹಂಕಾರ ಒಳ್ಳೆಯದಲ್ಲ. 'ನಾನು ಮಾಡುತ್ತಿದೇನೆ' ಎಂಬ ಭಾವನೆ ಅಜ್ಞಾನದಿಂದ ಜನಿತವಾದ್ದು. ಆದರೆ 'ಹೇ ಭಗವಂತ, ಎಲ್ಲವನ್ನೂ ಮಾಡುತ್ತಿರುವವನು ನೀನೇ' ಎಂಬ ಭಾವನೆ ಜ್ಞಾನದಿಂದ ಉಂಟಾಗುತ್ತದೆ. ಭಗವಂತನೊಬ್ಬನೇ ಕರ್ತ, ಉಳಿದವರೆಲ್ಲರೂ ಅಕರ್ತರು.

'''ನಾನು, ನಾನು' ಅನ್ನುತ್ತಲೇ ಇದ್ದರೆ ಎಂಥ ದುರ್ಗತಿಯುಂಟಾಗುತ್ತದೆ ಎಂಬುದನ್ನ ಕರುವಿನ ದುರವಸ್ಥೆಯ ಸಂಬಂಧವಾಗಿ ಭಾವಿಸಿದರೇ ಅರ್ಥವಾಗಿಬಿಡುತ್ತದೆ. ಕರು ಕೂಗುತ್ತದೆ: 'ಹಾಮ್ ಮಾ! ಹಾಮ್ ಮಾ!' ಎಂಬುದಾಗಿ, ಅಂದರೆ 'ನಾನು! ನಾನು!' ಎಂದು. ನೋಡು ಅದರ ದುರ್ಗತಿಯನ್ನ! ಕೆಲವು ವೇಳೆ ಬೆಳಗಿನಿಂದ ಹಿಡಿದು ಸಾಯಂಕಾಲದವರೆಗೂ ನೇಗಿಲು ಎಳೆಯಬೇಕಾಗುತ್ತದೆ. ಇದು ಬಿಸಿಲು, ಅದು ಮಳೆ ಅನ್ನುವ ಹಾಗೇ ಇಲ್ಲ. ಕಟುಕ ಅದನ್ನು ಕತ್ತರಿಸಬಹುದು. ಮಾಂಸವನ್ನ ಜನ ತಿನ್ನುತ್ತಾರೆ; ಚರ್ಮವನ್ನ ಹದಮಾಡಿ ತೊಗಲನ್ನಾಗಿ ಮಾಡುತ್ತಾರೆ. ತೊಗಲಿನಿಂದ ಜೋಡು ಮುಂತಾದುವನ್ನು ತಯಾರುಮಾಡುತ್ತಾರೆ. ಜನ ಅವನ್ನು ಮೆಟ್ಟಿಕೊಂಡು ನಡೆಯುತ್ತಾರೆ. ಇಷ್ಟಕ್ಕೇ ಅದರ ದುರ್ಗತಿ ಮುಗಿಯುವಂತಿಲ್ಲ. ಅದೇ ತೊಗಲಿನಿಂದ ನಗಾರಿ ತಯಾರುಮಾಡುತ್ತಾರೆ. ಆ ನಗಾರಿಯನ್ನ ಕಡ್ಡಿಗಳಿಂದ ಚೆನ್ನಾಗಿ ಬಡಿಯುತ್ತಾರೆ. ಕೊನೆಗೆ ಅದರ

ಕರುಳನ್ನು ತೆಗೆದುಕೊಂಡು ಅದರಿಂದ ಹುರಿಯನ್ನು ತಯಾರುಮಾಡುತ್ತಾರೆ. ಆ ಹುರಿಯನ್ನು ಹತ್ತಿಬಿಡಿಸುವ ಯಂತ್ರಕ್ಕೆ ಕಟ್ಟಿ ಹತ್ತಿ ಎಕ್ಕುವಾಗ ಅದು ಶಬ್ದಮಾಡುತ್ತದೆ: 'ತುಹ್ಞೂ! ತುಹ್ಞೂ!', 'ನೀನು! ನೀನು!' ಎಂದು —ಅಂದರೆ, 'ಹೇ ಭಗವಂತ, ನೀನು ಕರ್ತ! ನೀನು ಕರ್ತ!' ಅದು ಮತ್ತೆಂದಿಗೂ ಶಬ್ದಮಾಡದು: 'ಹಾಮ್ ಮಾ! ಹಾಮ್ ಮಾ!' ಆಗ ಮಾತ್ರವೇ ಕರುವಿನ ದುರ್ಗತಿ ಕೊನೆಗಾಣುತ್ತದೆ. ಆಗ ಮಾತ್ರವೇ ಅದಕ್ಕೆ ಮುಕ್ತಿ. ಕರ್ಮಕ್ಷೇತ್ರಕ್ಕೆ ಅದು ಮತ್ತೆ ಬರಬೇಕಾಗಿ ಇರೋದಿಲ್ಲ.

"ಅದೇ ರೀತಿಯಾಗಿ ಜೀವ ಯಾವಾಗ ಹೇಳುತ್ತದೊ: 'ಹೇ ಭಗವಂತ, ನಾನು ಕರ್ತ ಅಲ್ಲ, ನೀನೇ ಕರ್ತ. ನಾನು ಯಂತ್ರ, ನೀನು ಯಂತ್ರಿಗ' ಎಂಬುದಾಗಿ, ಆಗ ಮಾತ್ರವೇ ಅದರ ಸಾಂಸಾರಿಕ ತಾಪತ್ರಯಗಳೆಲ್ಲ ಕೊನೆಗಾಣುತ್ತವೆ. ಆಗ ಮಾತ್ರವೇ ಜೀವಕ್ಕೆ ಮುಕ್ತಿ. ಮತ್ತೆ ಅದು ಕರ್ಮಕ್ಷೇತ್ರಕ್ಕೆ ಇಳಿಯಬೇಕಾಗಿರುವುದಿಲ್ಲ."

ಒಬ್ಬ ಭಕ್ತ: "ಮನುಷ್ಯನ ಅಹಂಕಾರ ನಾಶವಾಗುವುದಕ್ಕೆ ಮಾರ್ಗವೇನು?"

ಶ್ರೀರಾಮಕೃಷ್ಣರು: "ಭಗವಂತನ ದರ್ಶನವನ್ನು ಪಡೆದುಕೊಳ್ಳದವರೆಗೆ ಅಹಂಕಾರ ಹೋಗದು. ಯಾರಲ್ಲೇ ಆಗಲಿ ಅಹಂಕಾರವಿಲ್ಲದಿರುವುದು ತೋರಿಬಂದರೆ, ತಿಳಿದುಕೊಳ್ಳಬೇಕು ಅವರಿಗೆ ನಿಶ್ಚಯವಾಗಿ ಭಗವಂತನ ದರ್ಶನ ದೊರೆತಿದೆ ಎಂದು."

ಭಕ್ತ: "ಮಹಾಶಯರೆ, ಭಗವಂತನ ದರ್ಶನ ಆಗಿದೆ ಅಂತ ಅರಿಯುವ ಬಗೆ ಹೇಗೆ?"

ಶ್ರೀರಾಮಕೃಷ್ಣರು: "ಭಗವಂತನ ದರ್ಶನವಾಗಿರುವುದಕ್ಕೆ ಲಕ್ಷಣಗಳಿವೆ. ಶ್ರೀಮದ್ಭಾಗವತದಲ್ಲಿ ಹೇಳಿದೆ, ಯಾರಿಗೆ ಭಗವಂತನ ದರ್ಶನ ಆಗಿದೆಯೊ ಆತನಿಗೆ ನಾಲ್ಕು ಲಕ್ಷಣಗಳಿರುತ್ತವೆ. ಆತ ಕೆಲವು ವೇಳೆ ಬಾಲಕನ ಹಾಗೆ, ಇನ್ನು ಕೆಲವು ವೇಳೆ ಪಿಶಾಚಿಯ ಹಾಗೆ, ಮತ್ತೆ ಕೆಲವು ವೇಳೆ ಜಡನ ಹಾಗೆ, ಮತ್ತು ಕೆಲವು ವೇಳೆ ಉನ್ಮತ್ತನ ಹಾಗೆ ವರ್ತಿಸುತ್ತಾನೆ.

"ಯಾರಿಗೆ ಭಗವಂತನ ಸಾಕ್ಷಾತ್ಕಾರ ಆಗುವುದೊ ಆತನಿಗೆ ಬಾಲಕನ ಸ್ವಭಾವ ಬಂದುಬಿಡುತ್ತದೆ. ಆತ ತ್ರಿಗುಣಾತೀತನಾಗಿಬಿಡುತ್ತಾನೆ—

ಅವಾವುದಕ್ಕೂ ಬದ್ಧನಾಗಿರೋದಿಲ್ಲ. ಆತನಿಗೆ ಇದು ಶುಚಿ ಅದು ಅಶುಚಿ ಎಂಬ ಭೇದವಿರದು—ಆದ್ದರಿಂದ ಆತ ಪಿಶಾಚಿಯ ಹಾಗೆ ವರ್ತಿಸುತ್ತಾನೆ. ಮತ್ತೆ ಹುಚ್ಚನ ಹಾಗೆ ಕೆಲವು ವೇಳೆ ಬಹಳವಾಗಿ ನಗುತ್ತಾನೆ, ಇನ್ನು ಕೆಲವು ವೇಳೆ ಬಹಳವಾಗಿ ಅಳುತ್ತಾನೆ. ಈ ನಿಮಿಷ ಒಬ್ಬ ಷೋಕಿಲಾಲನ ಹಾಗೆ ಬಟ್ಟೆಬರೆ ಹಾಕಿಕೊಂಡಿರುತ್ತಾನೆ, ಮರುನಿಮಿಷ ಬರಿ ಬತ್ತಲೆಯಾಗಿ ಕಂಕುಳಿಗೆ ಬಟ್ಟೆ ಸಿಕ್ಕಿಸಿಕೊಂಡು ಸುತ್ತಾಡುತ್ತಿರುತ್ತಾನೆ—ಉನ್ಮತ್ತನ ಹಾಗೆ. ಮತ್ತೆ ಕೆಲವು ವೇಳೆ ಜಡನ ಹಾಗೆ ಸುಮ್ಮನೆ ಕುಳಿತಿರತ್ತಾನೆ.''

ಭಕ್ತ: ''ಭಗವಂತನ ದರ್ಶನ ದೊರೆತನಂತರ ಅಹಂಕಾರ ಸಂಪೂರ್ಣವಾಗಿ ಹೊರಟುಹೋಗುವುದೆ?''

ಶ್ರೀರಾಮಕೃಷ್ಣರು: ''ಹೌದು, ಕೆಲಕೆಲವು ವೇಳೆ ಭಗವಂತ ಅಹಂಕಾರವನ್ನ ಸಂಪೂರ್ಣವಾಗಿ ನಿರ್ಮೂಲಮಾಡಿಬಿಡುತ್ತಾನೆ—ಉದಾಹರಣೆಗೆ ಸಮಾಧಿ ಅವಸ್ಥೆಯಲ್ಲಿ. ಮತ್ತೆ ಪ್ರಾಯಿಕವಾಗಿ ಒಂದು ಕಿಂಚಿತ್ ಅಹಂಕಾರವನ್ನ ಇಟ್ಟಿರುತ್ತಾನೆ. ಆದರೆ ಆ ಅಹಂಕಾರದಿಂದ ಯಾವ ತೊಂದರೆಯೂ ಉಂಟಾಗದು—ಬಾಲಕನ ಅಹಂಕಾರವಿದೆಯಲ್ಲ ಅದರ ಹಾಗೆ. ಐದು ವರ್ಷದ ಬಾಲಕ 'ನಾನು, ನಾನು' ಅಂತಲೇನೊ ಹೇಳುತ್ತಾನೆ, ಆದರೆ ಆ ಅಹಂಕಾರ ಯಾರಿಗೂ ಯಾವ ತೊಂದರೆಯನ್ನೂ ತರದು. ಉಕ್ಕು ಸ್ಪರ್ಶವೇದಿಯನ್ನು ಮುಟ್ಟಿದ್ದೇ ಆದರೆ, ಅದು ಚಿನ್ನವಾಗಿಬಿಡುತ್ತದೆ. ಉಕ್ಕಿನ ಕತ್ತಿ ಚಿನ್ನದ ಕತ್ತಿಯಾಗಿಬಿಡುತ್ತದೆ. ಅದಕ್ಕೆ ಕತ್ತಿಯ ಆಕಾರವೇನೊ ಇರುತ್ತದೆ, ಆದರೆ ಅದರಿಂದ ಯಾವ ಹಿಂಸಾ ಕೃತ್ಯವೂ ಸಾಧ್ಯವಿಲ್ಲ. ಚಿನ್ನದ ಕತ್ತಿಯಿಂದ ಕಡಿಯೋ, ಕತ್ತರಿಸೋ ಕೆಲಸವನ್ನ ಮಾಡಲಾಗುವುದಿಲ್ಲ.

(ಪ್ರತಾಪನಿಗೆ) ''ನೀನು ವಿಲಾಯತಿಗೆ ಹೋಗಿದ್ದೆ. ಅಲ್ಲಿ ಏನೇನು ನೋಡಿಬಂದೆ ಹೇಳು ನೋಡೋಣ.''

ಪ್ರತಾಪ: ''ವಿಲಾಯತಿಯ ಜನ, ನೀವು 'ಕಾಂಚನ' ಅಂತ ಹೇಳುತ್ತೀರಲ್ಲ, ಅದನ್ನೇ ಪೂಜೆಮಾಡುತ್ತಾರೆ. ಅವಶ್ಯವಾಗಿ ಕೆಲಕೆಲವರು ಒಳ್ಳೆಯವರೂ, ಎಂದರೆ ಅನಾಸಕ್ತರೂ ಇದಾರೆ. ಆದರೆ ಸಾಮಾನ್ಯವಾಗಿ ಪ್ರತಿಯೊಂದರಲ್ಲೂ ರಜೋಗುಣದ ಪ್ರದರ್ಶನವನ್ನು ನೋಡಬಹುದು. ಅಮೆರಿಕದಲ್ಲೂ ಇದನ್ನೇ ನೋಡಿ ಬಂದೆ.''

ಶ್ರೀರಾಮಕೃಷ್ಣರು ಪ್ರತಾಪನಿಗೆ: "ವಿಷಯ ಕರ್ಮಗಳಲ್ಲಿ ಆಸಕ್ತಿ ಕೇವಲ ವಿಲಾಯತಿಯಲ್ಲೇ ಇದೆ ಅಂತಲೇನಿಲ್ಲ. ಎಲ್ಲೆಲ್ಲಿಯೂ ಇದೆ. ಆದರೆ ಗೊತ್ತೆ? ಕರ್ಮಕಾಂಡ, ಆದಿಕಾಂಡ. ಸತ್ತ್ವಗುಣವಿಲ್ಲದಿದ್ದರೆ—ಭಕ್ತಿ, ವಿವೇಕ, ವೈರಾಗ್ಯ, ದಯೆ ಇವೇ ಮೊದಲಾದುವು ಇಲ್ಲದಿದ್ದರೆ, ಭಗವಂತನ ಸಾಕ್ಷಾತ್ಕಾರವನ್ನ ಪಡೆಯಲಾಗೋದಿಲ್ಲ. ರಜೋಗುಣದಿಂದ ಕಾರ್ಯಕ್ಷೇತ್ರ ವಿಶಾಲವಾಗುತ್ತದೆ. ಅದರ ದೆಸೆಯಿಂದ ತಮೋಗುಣ ಬಂದುಬಿಡುತ್ತದೆ. ಅಧಿಕವಾಗಿ ಕೆಲಸ ಹೆಚ್ಚಿಸಿಕೊಂಡರೆ, ಅವು ಭಗವಂತನನ್ನು ಮರಸಿಬಿಡುತ್ತವೆ. ಕಾಮಕಾಂಚನಗಳಲ್ಲಿ ಆಸಕ್ತಿ ವೃದ್ಧಿಯಾಗಿ ಬಿಡುತ್ತದೆ.

"ಆದರೆ ಕರ್ಮವನ್ನ ಸಂಪೂರ್ಣವಾಗಿ ತ್ಯಜಿಸಲು ಸಾಧ್ಯವಿಲ್ಲ. ನಿನ್ನ ಸ್ವಭಾವವೇ ನಿನ್ನನ್ನು ಕೆಲಸದಲ್ಲಿ ತೊಡಗಿಸಿಬಿಡುತ್ತದೆ—ನಿನಗೆ ಇಚ್ಛೆ ಇರಲಿ ಬಿಡಲಿ. ಈ ಕಾರಣದಿಂದಲೇ ಶಾಸ್ತ್ರ ಹೇಳುತ್ತಿದೆ, ಅನಾಸಕ್ತರಾಗಿ ಕೆಲಸ ಮಾಡಿ—ಅಂದರೆ ಫಲಾಕಾಂಕ್ಷೆ ಇಲ್ಲದೆ ಕೆಲಸ ಮಾಡಿ ಅಂತ. ಉದಾಹರಣೆಗೆ ನೀನು ಪೂಜೆ, ಜಪ ತಪಾದಿಗಳನ್ನ ಮಾಡುತ್ತಿದೀಯೆ, ಆದರೆ ಲೋಕಮಾನ್ಯನಾಗಬೇಕೆಂದಾಗಲಿ ಅಥವಾ ಪುಣ್ಯ ಕಟ್ಟಿಕೊಳ್ಳಬೇಕೆಂದಾಗಲಿ ಮಾಡುತ್ತಿಲ್ಲ.

"ಈ ರೀತಿಯಾಗಿ ಅನಾಸಕ್ತಿಯಿಂದ ಕೆಲಸ ಮಾಡುವುದಕ್ಕೆ ಕರ್ಮಯೋಗ ಅಂತ ಹೆಸರು. ಇದು ಬಹಳ ಕಠಿನ. ಇದು ಕಲಿಯುಗ. ಸಹಜವಾಗೇ ಆಸಕ್ತಿ ಉಂಟಾಗಿಬಿಡುತ್ತದೆ. ಭಾವಿಸುತ್ತೇವೆ ಅನಾಸಕ್ತಿಯಿಂದ ಕೆಲಸ ಮಾಡುತ್ತಿದೇವೆ ಎಂಬುದಾಗಿ, ಆದರೆ ಎಲ್ಲಿಂದಲೋ ಆಸಕ್ತಿ ನಮ್ಮ ಹೃದಯವನ್ನು ಹೊಕ್ಕುಬಿಡುತ್ತದೆ—ಗೊತ್ತೇ ಆಗದ ಹಾಗೆ. ಪೂಜೆ ಮಹೋತ್ಸವ, ಮಾಡುತ್ತಿದೇವೆ; ಅನೇಕ ಮಂದಿ ದರಿದ್ರರಿಗೆ, ತಿರುಕರಿಗೆ ಅನ್ನ ಹಾಕುತ್ತಿದೇವೆ ಅಂತ ಇಟ್ಟುಕೊಳ್ಳಿ. ಭಾವಿಸಿಕೊಳ್ಳಬಹುದು, ಅನಾಸಕ್ತಿಯಿಂದ ಕೆಲಸ ಮಾಡುತ್ತಿದೇವೆ ಅಂತ. ಆದರೆ ನಮಗೆ ಗೊತ್ತೇ ಆಗದ ಹಾಗೆ ಎಲ್ಲಿಂದಲೊ ಲೋಕಮಾನ್ಯರಾಗಬೇಕೆಂಬ ಆಸೆ ಆಗಲೇ ನಮ್ಮ ಹೃದಯವನ್ನು ಹೊಕ್ಕುಬಿಟ್ಟಿರುವುದನ್ನು ನಾವು ನೋಡಬಹುದು. ಆದರೆ ಸಂಪೂರ್ಣ ಅನಾಸಕ್ತರಾಗುವ ಸಂಭವ ಕೇವಲ ಅವರಿಗೆ—ಅಂದರೆ ಯಾರಿಗೆ ಭಗವಂತನ ದರ್ಶನ ದೊರೆತಿದೆಯೊ ಅವರಿಗೆ."

ಒಬ್ಬ ಭಕ್ತ: "ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿಲ್ಲವೊ

ಅವರಿಗೆ ಮಾರ್ಗವೇನು? ಅವರು ಪ್ರಾಪಂಚಿಕ ಕರ್ಮಗಳನ್ನೆಲ್ಲಾ ಬಿಟ್ಟು ಬಿಡಬೇಕೇನು?''

ಶ್ರೀರಾಮಕೃಷ್ಣರು: ''ಕಲಿಯುಗಕ್ಕೆ ಭಕ್ತಿಯೋಗ—ನಾರದೀಯ ಭಕ್ತಿ. ಭಗವಂತನ ನಾಮಗುಣಕೀರ್ತನೆ ಮಾಡುವುದು ಮತ್ತು ವ್ಯಾಕುಲತೆ ಯಿಂದ ಪ್ರಾರ್ಥನೆ ಮಾಡುವುದು: 'ಹೇ ಭಗವಂತ, ಜ್ಞಾನವನ್ನು ನೀಡು, ಭಕ್ತಿಯನ್ನು ಕರುಣಿಸು, ದರ್ಶನವನ್ನು ಕೊಡು.' ಕರ್ಮಯೋಗ ಬಹಳ ಕಠಿನವಾದ್ದು. ಆದ್ದರಿಂದಲೇ ಪ್ರಾರ್ಥನೆ ಮಾಡಬೇಕು: 'ಹೇ ಭಗವಂತ, ನನ್ನ ಕೆಲಸಗಳನ್ನ ಕಡಮೆಮಾಡಿಕೊಡು. ಯಾವಾವುವನ್ನು ಮಾಡಲೇ ಬೇಕಾಗಿದೆಯೊ ಅವೆಲ್ಲವನ್ನೂ, ನಿನ್ನ ಕೃಪೆಯಿಂದ ಅನಾಸಕ್ತಿಯಿಂದ ಮಾಡ ಲಾಗುವಂತೆ ಪ್ರೇರೇಪಿಸು! ಕೆಲಸಗಳನ್ನ ಹೆಚ್ಚುಮಾಡಿಕೊಳ್ಳುವ ಇಚ್ಛೆಯೂ ಹೃದಯದಲ್ಲಿ ಮೂಡದ ಹಾಗೆ ಮಾಡು!'

''ಸಂಪೂರ್ಣವಾಗಿ ಕೆಲಸಗಳನ್ನು ಬಿಟ್ಟುಬಿಡಲು ಸಾಧ್ಯವಿಲ್ಲ. ಚಿಂತಿ ಸುವುದು, ಧ್ಯಾನಮಾಡುವುದು ಇವು ಕರ್ಮವೇ. ಭಕ್ತಿಯುಂಟಾಯಿತು ಎಂದರೆ ವಿಷಯ ಕರ್ಮ ತನಗೆ ತಾನೇ ಕಡಮೆಯಾಗಿಬಿಡುತ್ತವೆ; ಮತ್ತೆ ಅವು ರುಚಿಸವು. ಕಲ್ಲುಸಕ್ಕರೆ ಪಾನಕ ದೊರೆಯುವಾಗ ಜೋನಿ ಬೆಲ್ಲದ ಪಾನಕ ಕುಡಿಯಲು ಯಾರು ತಾನೆ ಹೋಗುತ್ತಾರೆ.?''

ಒಬ್ಬ ಭಕ್ತ: ''ವಿಲಾಯತಿಯ ಜನ ಯಾವಾಗ ನೋಡಿದರೂ ಒತ್ತಿ ಒತ್ತಿ ಹೇಳುತ್ತಿದಾರೆ: 'ಕಾರ್ಯಶೀಲರಾಗಿ, ಕಾರ್ಯಶೀಲರಾಗಿ' ಎಂದು. ಹಾಗಾದರೆ, ಕಾರ್ಯ ಜೀವನದ ಉದ್ದೇಶವಲ್ಲವೇನು?''

ಶ್ರೀರಾಮಕೃಷ್ಣರು: ''ಜೀವನದ ಉದ್ದೇಶ ಭಗವಂತನ ಸಾಕ್ಷಾ-ತ್ಕಾರ. ಕರ್ಮ, ಆದಿಕಾಂಡ; ಅದು ಜೀವನದ ಉದ್ದೇಶವಾಗಲಾರದು. ಆದರೆ ನಿಷ್ಕಾಮ ಕರ್ಮ ಒಂದು ಮಾರ್ಗವೇ ವಿನಾ ಉದ್ದೇಶವಲ್ಲ.

''ಶಂಭುಮಲ್ಲಿಕ ಒಮ್ಮೆ ನನ್ನನ್ನು ಬೇಡಿಕೊಂಡ: 'ದಯವಿಟ್ಟು ಆಶೀರ್ವಾದಮಾಡಿ ನನ್ನಲ್ಲಿ ಏನು ಹಣ ಉಳಿದುಕೊಂಡಿದೆಯೊ ಅದು ಸದ್ವಿನಿಯೋಗವಾಗುವಂತೆ—ಅಂದರೆ ಆಸ್ಪತ್ರೆ, ಡಿಸ್ಪೆನ್ಸರಿ, ರಸ್ತೆ, ಸ್ನಾನ-ಘಟ್ಟ, ಬಾವಿ ಮೊದಲಾದುವುಗಳ ನಿರ್ಮಾಣಕ್ಕೆ ಉಪಯೋಗವಾಗುವಂತೆ.' ನಾನು ಆತನಿಗೆ ಹೇಳಿದೆ: 'ಇವನ್ನೆಲ್ಲಾ ಅನಾಸಕ್ತಿಯಿಂದ ಮಾಡುವು ದಾದರೆ ಒಳ್ಳೆಯದೆ. ಆದರೆ ಬಹಳ ಕಠಿನ. ನೀನು ಏನು ಮಾಡಿದರೂ ಸರಿಯೆ, ಇದನ್ನು ಮಾತ್ರ ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊ, ಮಾನವ

ಜನ್ಮದ ಉದ್ದೇಶ ಭಗವಂತನ ಸಾಕ್ಷಾತ್ಕಾರವೇ ವಿನಾ ಆಸ್ಪತ್ರೆ ಡಿಸ್ಪೆನ್ಸರಿಗಳನ್ನು ಕಟ್ಟಿಸುವುದಲ್ಲ. ಭಾವಿಸಿಕೊ, ಭಗವಂತ ನಿನ್ನ ಸಮ್ಮುಖಕ್ಕೆ ಬಂದಿದಾನೆ; ಬಂದವನು ನಿನಗೆ ಹೇಳುತ್ತಿದಾನೆ: "ನನ್ನಿಂದ ಒಂದು ವರ ಪಡೆದುಕೊ." ಆಗ ನೀನು ಆತನನ್ನು ಬೇಡುತ್ತೀಯೊ: "ಹೇ ಭಗವಂತ, ನನಗೆ ಕೆಲವು ಆಸ್ಪತ್ರೆ ಡಿಸ್ಪೆನ್ಸರಿಗಳನ್ನು ಕಟ್ಟಿಸಿಕೊಡು" ಎಂದು, ಅಥವಾ ಬೇಡುವೆಯೊ: "ಹೇ ಭಗವಂತ, ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆಯೂ, ನಿನ್ನನ್ನು ನಾನು ಸರ್ವದಾ ದರ್ಶನಮಾಡುವಂತೆಯೂ ಕರುಣಿಸು" ಎಂದು? ಆಸ್ಪತ್ರೆ ಡಿಸ್ಪೆನ್ಸರಿ ಇವೆಲ್ಲ ಅನಿತ್ಯ ವಸ್ತು. ಭಗವಂತನೊಬ್ಬನೇ ವಸ್ತು, ಉಳಿದುದೆಲ್ಲಾ ಅವಸ್ತು. ಆತನ ದರ್ಶನ ದೊರೆತರೆ ಆಗ ಅನುಭವವಾಗುತ್ತದೆ, ಆತನೊಬ್ಬನೇ ಕರ್ತ, ನಾವೆಲ್ಲಾ ಅಕರ್ತರು ಎಂಬುದಾಗಿ. ಆದ್ದರಿಂದ ನಾವೇಕೆ ಭಗವಂತನನ್ನು ಮರೆತು ಅನೇಕ ಕೆಲಸಕಾರ್ಯಗಳಲ್ಲಿ ಸಿಕ್ಕಿ ನರಳಬೇಕು? ಮೊದಲು ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡುಬಿಟ್ಟದ್ದೇ ಆದರೆ, ಬಳಿಕ ಆತನಿಗೆ ಇಚ್ಛೆಯಿದ್ದರೆ ಆತ ನಮ್ಮ ಮೂಲಕ ಅನೇಕ ಆಸ್ಪತ್ರೆ ಡಿಸ್ಪೆನ್ಸರಿಗಳನ್ನು ಕಟ್ಟಿಸಿಕೊಳ್ಳಬಲ್ಲ.'

"ಇದಕ್ಕಾಗೇ ನಾನು ಹೇಳುವುದು ಕರ್ಮ ಆದಿಕಾಂಡ ಎಂದು. ಅದು ಎಂದಿಗೂ ಜೀವನದ ಉದ್ದೇಶವಲ್ಲ. ಸಾಧನೆಯನ್ನು ಮಾಡಿ ಮುಂಬರಿಯಬೇಕು. ಸಾಧನೆಯನ್ನು ಮಾಡುತ್ತ ಮಾಡುತ್ತ ಮುಂದುವರಿದರೆ ಕೊನೆಗೆ ಗೊತ್ತಾಗುತ್ತದೆ, ಭಗವಂತನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು, ಆತನ ಸಾಕ್ಷಾತ್ಕಾರವೇ ಜೀವನದ ಉದ್ದೇಶ ಎಂಬುದಾಗಿ.

"ಒಮ್ಮೆ ಒಬ್ಬ ಸೌದೆಕಡಿಯುವವ ಅರಣ್ಯಕ್ಕೆ ಸೌದೆ ಕಡಿದು ತರಲು ಹೋಗಿದ್ದ. ಅಲ್ಲಿ ಅಕಸ್ಮಾತ್ತಾಗಿ ಒಬ್ಬ ಬ್ರಹ್ಮಚಾರಿಯನ್ನು ಕಂಡ. ಆ ಬ್ರಹ್ಮಚಾರಿ ಹೇಳಿದ: 'ನೋಡಪ್ಪ, ಮುಂದಕ್ಕೆ ಹೋಗು.' ಸೌದೆಕಡಿಯುವವ ಮನೆಗೆ ಹಿಂದಿರುಗಿ ಬಂದು ಯೋಚಿಸಲಾರಂಭಿಸಿದ, ಬ್ರಹ್ಮಚಾರಿ ಮುಂದಕ್ಕೆ ಹೋಗುವಂತೆ ಏಕೆ ಹೇಳಿದ? ಹಾಗೇ ಸ್ವಲ್ಪ ಕಾಲ ಕಳೆಯಿತು. ಒಂದು ದಿನ ಆ ಬ್ರಹ್ಮಚಾರಿ ಹೇಳಿದ್ದು ಜ್ಞಾಪಕಕ್ಕೆ ಬಂತು. ಆಗ ಆತ ತನಗೆ ತಾನೇ ಹೇಳಿಕೊಳ್ಳುತ್ತಾನೆ: 'ಇಂದು ಇನ್ನೂ ಮುಂದಕ್ಕೆ ಹೋಗಿ ನೋಡುತ್ತೇನೆ.' ಅರಣ್ಯಕ್ಕೆ ಬಂದು ಇನ್ನೂ ಮುಂದಕ್ಕೆ ಹೋಗಿ ನೋಡುತ್ತಾನೆ, ಅಸಂಖ್ಯವಾಗಿ ಚಂದನ ಮರಗಳು

ಬೆಳೆದಿವೆ. ಆಗ ಆನಂದದಿಂದ ಬಂಡಿಗಟ್ಟಲೆ ಚಂದನ ಮರಗಳನ್ನು ಕತ್ತರಿಸಿ ತಂದ. ಅವನ್ನು ಪೇಟೆಯಲ್ಲಿ ಮಾರಿ ದೊಡ್ಡ ಹಣಗಾರನಾಗಿಬಿಟ್ಟ.

"ಹೀಗೇ ಕೆಲವು ದಿನಗಳನ್ನು ಕಳೆದನಂತರ ಮತ್ತೆ ಆ ಬ್ರಹ್ಮಚಾರಿ 'ಮುಂದಕ್ಕೆ ಹೋಗು' ಎಂಬುದಾಗಿ ಹೇಳಿದ್ದುದರ ಜ್ಞಾಪಕ ಬಂತು. ಅರಣ್ಯದಲ್ಲಿ ಇನ್ನೂ ಮುಂದಕ್ಕೆ ಹೋಗಿ ನೋಡುತ್ತಾನೆ, ಒಂದು ನದಿ ತೀರದಲ್ಲಿ ಬೆಳ್ಳಿಯ ಗಣಿ ಇದೆ. ಇದು ಹೀಗಿದೆ ಎಂದು ಆತ ಸ್ವಪ್ನದಲ್ಲೂ ಕಂಡಿರಲಿಲ್ಲ. ಬಳಿಕ ಗಣಿಯಿಂದ ಬೆಳ್ಳಿಯನ್ನು ಅಗೆದು ತೆಗೆದುಕೊಂಡು ಹೋಗಿ ಮಾರಲಾರಂಭಿಸಿದ. ಆತನಿಗೆ ಅಷ್ಟೊಂದು ಹಣ ದೊರೆಯಿತು, ಎಣಿಸಲೇ ಸಾಧ್ಯವಾಗಲಿಲ್ಲ!

"ಮತ್ತೆ ಕೆಲವು ದಿನ ಹಾಗೇ ಕಳೆದುವು. ಒಂದು ದಿನ ಸುಮ್ಮನೆ ಕುಳಿತು ಭಾವಿಸಲಾರಂಭಿಸಿದ: 'ಬ್ರಹ್ಮಚಾರಿ ನನಗೆ ಬೆಳ್ಳಿಯ ಗಣಿಯವರೆಗೆ ಮಾತ್ರ ಹೋಗು ಅಂತಲೇನು ಹೇಳಲಿಲ್ಲವಲ್ಲ; ಆತ ಹೇಳಿದ್ದು "ಮುಂದಕ್ಕೆ ಹೋಗು" ಅಂತ.' ಈ ಸಲ ನದಿಯನ್ನು ದಾಟಿ ಹೋಗಿ ನೋಡುತ್ತಾನೆ, ಚಿನ್ನದ ಗಣಿ ಇದೆ. ಆಗ ಆತ ಹರ್ಷೋದ್ಗಾರ ಮಾಡಿದ: 'ಓಹೋ! ಇದಕ್ಕೇ ಬ್ರಹ್ಮಚಾರಿ ಹೇಳಿದ್ದು "ಮುಂದಕ್ಕೆ ಹೋಗು" ಅಂತ!'

"ಇನ್ನೂ ಕೆಲವು ದಿನಗಳಾದ ಮೇಲೆ ಇನ್ನೂ ಮುಂದಕ್ಕೆ ಹೋಗಿ ನೋಡುತ್ತಾನೆ, ಹೀರ ಮಾಣಿಕ್ಯ ರಾಶಿ ರಾಶಿಯಾಗಿ ಬಿದ್ದಿವೆ. ಬಳಿಕ ಆತನಿಗೆ ಕುಬೇರನಿಗೆ ಸರಿಸಮಾನವಾದ ಐಶ್ವರ್ಯ ದೊರೆತುಬಿಟ್ಟಿತು.

"ಇದಕ್ಕಾಗೇ ನಾನು ಹೇಳುವುದು, ಈಗ ನೀನು ಯಾವ ಸ್ಥಿತಿಯಲ್ಲಿದ್ದರೂ ಸರಿಯೆ, ಮುಂದಕ್ಕೆ ಮುಂದುವರಿದರೆ ಇನ್ನೂ ಒಳ್ಳೆಯ ಸ್ಥಿತಿ ಬರುವುದು ಎಂದು. ಒಂದು ಸ್ವಲ್ಪ ಜಪ ಮಾಡಿ ಉದ್ದೀಪನವಾಗಿಬಿಟ್ಟ ಮಾತ್ರಕ್ಕೇ ಭಾವಿಸಬೇಕಾಗಿಲ್ಲ ದೊರೆಯಬೇಕಾದ್ದೆಲ್ಲ ದೊರೆತು ಬಿಟ್ಟಿತು ಎಂದು. ಕರ್ಮ ಎಂದಿಗೂ ಜೀವನದ ಉದ್ದೇಶವಲ್ಲ. ಇನ್ನೂ ಮುಂದುವರಿ; ಆಗ ಕರ್ಮವನ್ನ ನಿಷ್ಕಾಮ ಭಾವನೆಯಿಂದ ಮಾಡಲು ಸಾಧ್ಯವಾಗುತ್ತದೆ. ಆದರೆ ನಿಷ್ಕಾಮ ಕರ್ಮ ಮಾಡುವುದು ಬಹಳ ಕಠಿನ. ಆದ್ದರಿಂದ ಭಕ್ತಿಯಿಂದೊಡಗೂಡಿದ ವ್ಯಾಕುಲತೆಯಿಂದ ಭಗವಂತನಿಗೆ ಪ್ರಾರ್ಥನೆ ಸಲ್ಲಿಸು: 'ಹೇ ಭಗವಂತ, ನಿನ್ನ ಪಾದಪದ್ಮಗಳಲ್ಲಿ ನನಗೆ ಭಕ್ತಿಯುಂಟಾಗುವಂತೆ ಮಾಡು. ಕೆಲಸಗಳನ್ನು ಕಡಮೆಮಾಡಿಕೊಡು. ಯಾವಾವ ಕೆಲವು ಕರ್ಮಗಳನ್ನು ನಾನು ಮಾಡಲೇ ಬೇಕಾಗಿರುವುದೊ ಅವನ್ನು ನಿಷ್ಕಾಮ

ಭಾವನೆಯಿಂದ ಮಾಡಲು ಶಕ್ತನಾಗುವಂತೆ ಮಾಡು.' ಇನ್ನೂ ಮುಂದು ವರಿದರೆ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೆ. ಆತನ ದರ್ಶನ ದೊರೆಯುತ್ತದೆ. ಕ್ರಮೇಣ ಆತನೊಡನೆ ನೀನು ಮಾತುಕತೆಯನ್ನೂ ಆಡ ಬಹುದು."

ಕೇಶವಸೇನ ಸ್ವರ್ಗಸ್ಥನಾದ ಮೇಲೆ ವೇದಿಕೆಯನ್ನು ಯಾರು ಉಪ ಯೋಗಿಸಬೇಕು ಎಂಬುದರ ಸಂಬಂಧವಾಗಿ ಬ್ರಾಹ್ಮಸಮಾಜದಲ್ಲಿ ಒಡಕು ಹುಟ್ಟಿದೆ. ಈಗ ಮಾತುಕತೆ ಆ ವಿಷಯವಾಗಿ ಆರಂಭವಾಗಿದೆ.

ಶ್ರೀರಾಮಕೃಷ್ಣರು ಪ್ರತಾಪನಿಗೆ: "ಕೇಳಿದೇನೆ, ನಿನ್ನೊಡನೆ ವೇದಿ-ಕೆಯ ಸಂಬಂಧವಾಗಿ ಜಗಳ ನಡೆಯಿತು ಎಂಬುದಾಗಿ. ಯಾರು ನಿನ್ನೊಡನೆ ಜಗಳವಾಡಿದರೊ ಅವರು ಅನಾಮಧೇಯರು—ಕೇಳುವವರೇ ಇಲ್ಲದವರು.

(ಭಕ್ತರಿಗೆ) "ನೋಡಿ ಪ್ರತಾಪ, ಅಮೃತ ಇವರನ್ನ ಒಳ್ಳೆ ಶಬ್ದ ಕೊಡುವ ಶಂಖಕ್ಕೆ ಹೋಲಿಸಬಹುದು. ಉಳಿದವರಿದ್ದಾರಲ್ಲ, ಯಾರ ವಿಷಯವಾಗಿ ನಾವು ಅಷ್ಟೊಂದಾಗಿ ಕೇಳುತ್ತಿದೇವೆಯೊ, ಶಬ್ದ ಹೊರಡದ ಶಂಖಗಳೇ." (ಎಲ್ಲರೂ ನಗುತ್ತಿದಾರೆ.)

ಪ್ರತಾಪ: "ಮಹಾಶಯರೆ, ಶಬ್ದ ಕೊಡುವುದರ ವಿಷಯವಾಗಿ ಹೇಳುವುದಾದರೆ, ಯಾವುದಕ್ಕೂ ಬಾರದ ಮಾವಿನ ಓಟೆ ಕೂಡ ಶಬ್ದ ಕೊಡುತ್ತದೆಯಲ್ಲ!"

ಶ್ರೀರಾಮಕೃಷ್ಣರು ಪ್ರತಾಪನಿಗೆ: "ನೋಡು, ನಿಮ್ಮ ಬ್ರಾಹ್ಮ-ಸಮಾಜಕ್ಕೆ ಹೋಗಿ ಉಪನ್ಯಾಸ ಕೇಳಿದರೆ ಉಪನ್ಯಾಸಕನ ಭಾವ ಏನು ಎಂಬುದನ್ನ ಬಹಳ ಸುಲಭವಾಗಿ ಅರಿತುಕೊಂಡುಬಿಡಬಹುದು. ಒಮ್ಮೆ ನಾನು ಒಂದು ಹರಿ ಸಭೆಗೆ ಹೋಗಿದ್ದೆ. ಸಮಾಧ್ಯಾಯಿ ಎಂಬ ಪಂಡಿತ ಆಚಾರ್ಯ ಪೀಠವನ್ನು ಅಲಂಕರಿಸಿದ್ದ. ಆಶ್ಚರ್ಯ! ಆತ ಏನು ಹೇಳಿದ ಗೊತ್ತೆ? ಉಪನ್ಯಾಸಮಾಡುವಾಗ ಹೇಳಿದ: 'ಭಗವಂತ ನೀರಸ. ನಾವು ನಮ್ಮ ಪ್ರೇಮ ಭಕ್ತಿಯಿಂದ ಆತನನ್ನು ಸರಸನನ್ನಾಗಿ ಮಾಡಿಕೊಳ್ಳಬೇಕು.' ಆತನ ಈ ಮಾತು ಕೇಳಿ ನಾನು ಸುಮ್ಮನೆ ಚಕಿತನಾದೆ. ಆಗ ನನಗೆ ಒಂದು ಕಥೆ ಜ್ಞಾಪಕಕ್ಕೆ ಬಂತು. ಒಬ್ಬ ಹುಡುಗ ಹೇಳಿದ: 'ನಮ್ಮ ಸೋದರಮಾವನ ಮನೆಯಲ್ಲಿ ಅನೇಕ ಕುದುರೆ ಇವೆ. ಹೌದು, ಒಂದು ಕೊಟ್ಟಿಗೆ ತುಂಬ!' ಅದು ಕೊಟ್ಟಿಗೆಯಾಗಿದ್ದ ಪಕ್ಷದಲ್ಲಿ ಅಲ್ಲಿ ಕುದುರೆ ಇರಲು ಸಾಧ್ಯವೇ ಇಲ್ಲ. ಇದ್ದರೆ ಬಹುಶಃ ಗೋವು ಮಾತ್ರವೇ ಇದ್ದುವು

ಅಂತ ಕಾಣುತ್ತೆ. ಈ ರೀತಿಯಾದ ಅಸಂಬದ್ಧ ಮಾತು ಕೇಳಿದರೆ ಜನ ಏನು ತಿಳಿದುಕೊಳ್ಳುತ್ತಾರೆ? ತಿಳಿದುಕೊಳ್ಳುತ್ತಾರೆ, ಅಲ್ಲಿ ಕುದುರೆ-ಗಿದುರೆ ಏನೂ ಇಲ್ಲ ಎಂಬುದಾಗಿ!'' (ಎಲ್ಲರೂ ನಗುತ್ತಿದಾರೆ.)

ಒಬ್ಬ ಭಕ್ತ: ''ಕುದುರೆಗಳಂತು ಇಲ್ಲವೇ ಇಲ್ಲ. ಗೋವುಗಳೂ ಇಲ್ಲ ಅಂತ ಕಾಣುತ್ತೆ!'' (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು: ''ಹಾಗೇ ಯೋಚಿಸಿ ನೋಡು, ರಸಸ್ವರೂಪ ಭಗವಂತನನ್ನ ನೀರಸ ಅಂತ ಆತ ವರ್ಣಿಸಿದುದನ್ನ! ಇದು ಚೆನ್ನಾಗಿ ತೋರಿಸುತ್ತದೆ, ಆತ ಭಗವಂತ ಏನು ಎಂಬುದನ್ನ ಸ್ವಪ್ನದಲ್ಲೂ ಕಂಡಿಲ್ಲ ಎಂದು.

(ಪ್ರತಾಪನಿಗೆ) ''ನೋಡು, ನಿನಗೆ ಕೆಲವು ವಿಷಯ ಹೇಳಬೇಕೆಂದಿದೇನೆ. ನೀನು ವಿದ್ವಾಂಸವಂತ, ಬುದ್ಧಿವಂತ, ಗಂಭೀರ ಪ್ರಕೃತಿಯುಳ್ಳವ. ಕೇಶವ ಮತ್ತು ನೀನು ಹಿಂದೆ ಇದ್ದಿರಿ, ಗೌರಾಂಗ ಮತ್ತು ನಿತಾಯಿ ಸೋದರರ ಹಾಗೆ. ಉಪನ್ಯಾಸ ಕೊಡುವುದು, ಚರ್ಚೆ, ವಾದ ವಿವಾದ ಇವೆಲ್ಲ ಬೇಕಾದಷ್ಟು ಆಗಿವೆ. ಇನ್ನೂ ಅವು ನಿನಗೆ ರುಚಿಸುತ್ತಿರುವುವೇನು? ಈಗ ನೀನು ಮಾಡಬೇಕಾದ್ದು, ಮನಸ್ಸನ್ನೆಲ್ಲ ಏಕೀಕರಿಸಿ ಭಗವಂತನ ಕಡೆಗೆ ತಿರುಗಿಸುವ ಕೆಲಸ. ಭಗವಂತನಲ್ಲಿ ಸಂಪೂರ್ಣವಾಗಿ ತನ್ಮಯನಾಗು.''

ಪ್ರತಾಪ: ''ಹೌದು, ನೀವು ಹೇಳುವುದು ಖಂಡಿತ ಸರಿ. ನಾನು ಹಾಗೆ ಮಾಡಬೇಕಾದ್ದೇ. ಆದರೆ ನಾನು ಅವನ್ನೆಲ್ಲ ಮಾಡುತ್ತಿರುವುದು ಕೇಶವನ ಹೆಸರು ಉಳಿದುಕೊಂಡಿರಲಿ ಎಂದು.''

ಶ್ರೀರಾಮಕೃಷ್ಣರು ನಗುತ್ತ: ''ಈಗಲೇನೊ ನೀನು ಹೇಳುತ್ತಿದೀಯೆ, ಆತನ ಹೆಸರನ್ನು ಉಳಿಸಲು ಅವನ್ನೆಲ್ಲಾ ಮಾಡುತ್ತಿದೀಯೆ ಎಂದು; ಆದರೆ ಇನ್ನು ಸ್ವಲ್ಪ ದಿನ ಕಳೆದನಂತರ ಆ ಆಕಾಂಕ್ಷೆ ಇರದು. ಒಂದು ಕಥೆ ಹೇಳುತ್ತೇನೆ ಕೇಳು. ಒಬ್ಬ ಒಂದು ಬೆಟ್ಟದ ಮೇಲೆ ಒಂದು ಮನೆ ಕಟ್ಟಿಕೊಂಡಿದ್ದ. ಅದು ಮಣ್ಣಿನ ಮನೆಯೇ ಆದರೂ ಬಹಳ ಶ್ರಮವಹಿಸಿ ಕಟ್ಟಿದ್ದ. ಒಂದು ದಿನ ಒಂದು ದೊಡ್ಡ ಬಿರುಗಾಳಿ ಎದ್ದಿತು. ಮಣ್ಣಿನ ಮನೆ ಸುಮ್ಮನೆ ಅಲುಗಾಡಲಾರಂಭಿಸಿತು. ಅದನ್ನು ಹೇಗೆ ರಕ್ಷಿಸುವುದು ಎಂಬ ಯೋಚನೆ ಆತನಿಗೆ ಬಹಳವಾಗಿ ಹತ್ತಿಬಿಟ್ಟಿತು. ಆಗ ಆತ ವಾಯು-ದೇವನಿಗೆ ಪ್ರಾರ್ಥನೆ ಮಾಡಲಾರಂಭಿಸಿದ: 'ಹೇ ಪವನದೇವ, ದಯವಿಟ್ಟು

ಮನೆಯನ್ನು ನೆಲಸಮ ಮಾಡಿಬಿಡಬೇಡ!' ಆದರೆ ವಾಯುದೇವ ಆತನ ಪ್ರಾರ್ಥನೆಗೆ ಕಿವಿಗೊಡಲಿಲ್ಲ. ಮನೆ 'ಲಟ್, ಲಟ್' ಅಂತ ಶಬ್ದ ಮಾಡುತ್ತ ಮುರಿದು ಬೀಳುವುದರಲ್ಲಿತ್ತು. ಆಗ ಆತನಿಗೆ ಒಂದು ಯುಕ್ತಿ ಹೊಳೆಯಿತು. ಹನುಮಂತ ವಾಯುದೇವನ ಪುತ್ರ ಎಂಬುದು ಜ್ಞಾಪಕಕ್ಕೆ ಬಂತು. ಒಡನೇ ವ್ಯಸ್ತನಾಗಿ ಕೂಗಿಕೊಳ್ಳಲಾರಂಭಿಸಿದ: 'ವಾಯುದೇವ, ಮನೆಯನ್ನು ಬೀಳಿಸಬೇಡ. ಇದು ನಿನ್ನ ಮಗ ಹನುಮಂತನ ಮನೆ. ಇದನ್ನು ರಕ್ಷಿಸುವಂತೆ ಪ್ರಾರ್ಥಿಸಿಕೊಳ್ಳುತ್ತಿದೇನಪ್ಪ.' ಆದರೂ ಮನೆ ಮುರಿದುಬೀಳುವಂತೇ ಅಳ್ಳಾಡುತ್ತಿತ್ತು. ಆತನ ಪ್ರಾರ್ಥನೆಯನ್ನು ಯಾರೂ ಕೇಳುವಂತೇ ತೋರಿಬರಲಿಲ್ಲ. ಅನೇಕ ಸಲ 'ಇದು ಹನುಮಂತನ ಮನೆ! ಇದು ಹನುಮಂತನ ಮನೆ!' ಎಂದು ಕೂಗಿಕೊಂಡನಂತರ ನೋಡುತ್ತಾನೆ, ಪರಿಸ್ಥಿತಿಯೇನು ಬದಲಾಯಿಸಲಿಲ್ಲ. ಬಳಿಕ ಕೂಗಿಕೊಳ್ಳಲಾರಂಭಿಸಿದ: 'ಇದು ಲಕ್ಷ್ಮಣನ ಮನೆ! ಇದು ಲಕ್ಷ್ಮಣನ ಮನೆ!' ಇದರಿಂದಲೂ ಪರಿಸ್ಥಿತಿ ಬದಲಾಯಿಸಲಿಲ್ಲ. ಅನಂತರ ಕೂಗಿಕೊಳ್ಳಲಾರಂಭಿಸಿದ: 'ಇದು ರಾಮನ ಮನೆ! ಇದು ರಾಮನ ಮನೆ! ಬೀಳಿಸಬೇಡಪ್ಪ, ಹೇ ವಾಯುದೇವ! ನಮ್ರತೆಯಿಂದ ಪ್ರಾರ್ಥಿಸಿಕೊಳ್ಳುತ್ತಿದೇನಪ್ಪ!' ಇದರಿಂದಲೂ ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಮನೆ 'ಲಟ್, ಲಟ್' ಅಂತ ಶಬ್ದಮಾಡುತ್ತ ಮುರಿದು ಬೀಳಲಾರಂಭಿಸಿತು. ಆಗ ಇನ್ನೇನು ತಾನೆ ಮಾಡಿಯಾನು ಹೊರಕ್ಕೆ ಬಾರದೆ—ಪ್ರಾಣ ಉಳಿಸಿಕೊಳ್ಳಬೇಕಾಗಿದೆಯಲ್ಲ. ಮನೆಯಿಂದ ಹೊರಕ್ಕೆ ಓಡಿಬರುವಾಗ ಹೇಳಲಾರಂಭಿಸಿದ: 'ಹಾಳಾಗಿ ಹೋಗಲಿ! ಇದು ದೆವ್ವದ ಮನೆಯೋ!'

(ಪ್ರತಾಪನಿಗೆ) "ಕೇಶವನ ಹೆಸರನ್ನು ನೀನು ಉಳಿಸಿಡಬೇಕಾದ ಆವಶ್ಯಕತೆಯೇನಿಲ್ಲ. ಇದುವರೆಗೆ ಏನಾಯಿತೊ, ತಿಳಿದುಕೊ, ಎಲ್ಲ ಭಗವಂತನ ಇಚ್ಛೆಗನುಸಾರ ಎಂಬುದನ್ನ. ಆತನ ಇಚ್ಛೆಯಿಂದ ಆಯಿತು, ಆತನ ಇಚ್ಛೆಯಿಂದ ಹೋಗುತ್ತಿದೆ. ಅದಕ್ಕಾಗಿ ನೀನು ಏನು ತಾನೆ ಮಾಡಬಲ್ಲೆ? ಈಗ ನಿನ್ನ ಕರ್ತವ್ಯ ಭಗವಂತನಿಗೆ ನಿನ್ನ ಇಡೀ ಮನಸ್ಸನ್ನು ಕೊಡುವುದೇ—ಆತನ ಪ್ರೇಮ ಸಾಗರಕ್ಕೆ ದುಮುಕುವುದೇ."

ಹೀಗೆಂದು ಹೇಳಿ ಪರಮಹಂಸರು ತಮ್ಮ ಅತುಲನೀಯ ಕಂಠದಿಂದ ಹಾಡಲಾರಂಭಿಸಿದಾರೆ:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ... (ಉ. ೬೭)

ಶ್ರೀರಾಮಕೃಷ್ಣರು ಮತ್ತೆ ಪ್ರತಾಪನಿಗೆ: "ಹಾಡನ್ನು ಕೇಳಿದೆಯೊ? ಉಪನ್ಯಾಸ ವಾದ ವಿವಾದ ಎಲ್ಲ ಬೇಕಾದಷ್ಟು ಆಗಿವೆ. ಈಗ ಭಗವತ್ಸಾಗರಕ್ಕೆ ದುಮುಕು. ಈ ಸಾಗರಕ್ಕೆ ದುಮುಕಿದರೆ ಸಾಯುವ ಭಯವೇನಿಲ್ಲ; ಇದು ಅಮೃತ ಸಾಗರ. ಭಾವಿಸಬೇಡ ಇದು ಮನುಷ್ಯನ ತಲೆಯನ್ನು ಕೆಡಿಸಿಬಿಡುತ್ತದೆ ಎಂದು. ಎಂದಿಗೂ ಭಾವಿಸಬೇಡ ಹೆಚ್ಚಾಗಿ ಭಗವಚ್ಚಿಂತನೆ ಮಾಡಿದರೆ ಹುಚ್ಚು ಹಿಡಿದುಬಿಡುತ್ತದೆ ಎಂದು. ನಾನು ಒಮ್ಮೆ ನರೇಂದ್ರನಿಗೆ ಹೇಳಿದೆ—"

ಪ್ರತಾಪ: "ಮಹಾಶಯರೆ, ನರೇಂದ್ರ ಯಾರು?"

ಶ್ರೀರಾಮಕೃಷ್ಣರು: "ಓ, ಇದಾನೆ ಆ ಹೆಸರಿನ ಒಬ್ಬ ಹುಡುಗ. ನಾನು ನರೇಂದ್ರನಿಗೆ ಹೇಳಿದೆ: 'ನೋಡು, ಭಗವಂತ ರಸದ ಸಾಗರ. ನಿನಗೆ ಇಚ್ಛೆ ಆಗೋದಿಲ್ಲವೆ ಅದಕ್ಕೆ ದುಮುಕಲು? ಒಳ್ಳೇದು, ಭಾವಿಸಿಕೊ ಇಲ್ಲೊಂದು ಬಟ್ಟಲು ಪಾನಕ ಇದೆ, ನೀನೊಂದು ನೊಣ ಆಗಿದೀಯೆ ಎಂದು. ಎಲ್ಲಿ ಕುಳಿತುಕೊಂಡು ಪಾನಕ ಕುಡಿಯುತ್ತೀಯೆ, ಹೇಳು ನೋಡೋಣ?' ನರೇಂದ್ರ ಹೇಳಿದ: 'ನಾನು ಬಟ್ಟಲ ಅಂಚಿನಲ್ಲಿ ಕುಳಿತು ತಲೆಯನ್ನು ಚಾಚಿ ಕುಡಿಯುತ್ತೇನೆ.' ನಾನು ಕೇಳಿದೆ: 'ಏಕೆ? ಅಂಚಿನಲ್ಲಿ ಕುಳಿತು ಏಕೆ?' ಆತ ಉತ್ತರವಿತ್ತ: 'ಇನ್ನೂ ಮುಂದಕ್ಕೆ ಹೋದರೆ ಪಾನಕದಲ್ಲಿ ಮುಳುಗಿ ಸತ್ತುಹೋಗುತ್ತೇನೆ.' ಆಗ ನಾನು ಹೇಳಿದೆ: 'ಮಗು, ಸಚ್ಚಿದಾನಂದ ಸಾಗರದಲ್ಲಿ ಆ ವಿಧವಾದ ಭಯಕ್ಕೆ ಎಡೆಯಿಲ್ಲ. ಅದು ಅಮೃತ ಸಾಗರ. ಅದಕ್ಕೆ ದುಮುಕಿದರೆ ಮೃತ್ಯು ಉಂಟಾಗದು; ಮನುಷ್ಯ ಅಮರನಾಗಿಬಿಡುತ್ತಾನೆ. ಭಗವಂತನಿಗಾಗಿ ಉನ್ಮತ್ತನಾದರೆ ಮನುಷ್ಯ ತಲೆ ಕಳೆದುಕೊಳ್ಳುವುದಿಲ್ಲ.'

(ಭಕ್ತರಿಗೆ) "'ನಾನು', 'ನನ್ನದು' ಎಂಬುದೇ ಅಜ್ಞಾನ. ರಾಣಿ ರಾಸಮಣಿ ಕಾಳೀದೇವಾಲಯವನ್ನು ಕಟ್ಟಿಸಿದಳು ಎಂದು ಜನ ಹೇಳುವರೇ ವಿನಾ, ಭಗವಂತ ಕಟ್ಟಿಸಿದ ಅಂತ ಯಾರೂ ಹೇಳರು. ಬ್ರಾಹ್ಮಸಮಾಜವನ್ನ ಒಬ್ಬಾನೊಬ್ಬ ಸ್ಥಾಪಿಸಿದ ಅಂತ ಹೇಳುವರೇ ವಿನಾ, ಭಗವಂತನ ಇಚ್ಛೆಯಿಂದ ಅದು ಸ್ಥಾಪಿತವಾಯಿತು ಅಂತ ಯಾರೂ ಹೇಳರು. 'ನಾನು ಮಾಡುತ್ತೇನೆ' ಎಂಬ ಭಾವನೆಯೇ ಅಜ್ಞಾನ. ಇದಕ್ಕೆ ಬದಲಾಗಿ, 'ಹೇ

ಭಗವಂತ, ನೀನು ಕರ್ತ, ನಾನು ಅಕರ್ತ; ನೀನು ಯಂತ್ರಿಗ, ನಾನು ಯಂತ್ರ' ಎಂಬ ಭಾವನೆಯೇ ಜ್ಞಾನ. ಜ್ಞಾನ ದೊರೆತನಂತರ ಮನುಷ್ಯ ಹೇಳುತ್ತಾನೆ: 'ಹೇ ಭಗವಂತ, ನನ್ನದು ಎಂಬತಕ್ಕದ್ದು ಯಾವುದೂ ಇಲ್ಲ—ಈ ಮಂದಿರ ನನ್ನದಲ್ಲ, ಈ ಕಾಳೀದೇವಾಲಯ ನನ್ನದಲ್ಲ, ಈ ಸಮಾಜ ನನ್ನದಲ್ಲ. ಇವೆಲ್ಲಾ ನಿನ್ನವು. ಹೆಂಡತಿ, ಮಕ್ಕಳು, ಬಂಧು, ಬಳಗ ಎಂದಿಗೂ ನನ್ನವಲ್ಲ. ಎಲ್ಲವೂ ನಿನಗೆ ಸೇರಿದವೆ.'

"'ಇದು ನನಗೆ ಸೇರಿದ್ದು, ಇದು ನನಗೆ ಸೇರಿದ್ದು' ಎಂಬುದಾಗಿ ಈ ವಸ್ತುಗಳನ್ನ ಪ್ರೀತಿಸುವುದಕ್ಕೇ ಮಾಯೆ ಅಂತ ಹೆಸರು. ಆದರೆ ಎಲ್ಲ ವನ್ನೂ ಪ್ರೀತಿಸುವುದಕ್ಕೆ ದಯೆ ಅಂತ ಹೆಸರು. ಕೇವಲ ಬ್ರಾಹ್ಮಸಮಾಜ ದವರನ್ನು ಪ್ರೀತಿಸುವುದಕ್ಕೆ ಅಥವಾ ಕೇವಲ ತನ್ನ ಪರಿವಾರದವರನ್ನು ಪ್ರೀತಿಸುವುದಕ್ಕೆ ಮಾಯೆ ಅಂತ ಹೆಸರು; ಕೇವಲ ಸ್ವದೇಶದವರನ್ನು ಪ್ರೀತಿಸುವುದಕ್ಕೆ ಮಾಯೆ ಅಂತ ಹೆಸರು. ಆದರೆ ಎಲ್ಲಾ ದೇಶದ ಜನ ರನ್ನೂ ಪ್ರೀತಿಸುವುದಕ್ಕೆ, ಎಲ್ಲಾ ಧರ್ಮಗಳ ಜನರನ್ನೂ ಪ್ರೀತಿಸುವುದಕ್ಕೆ ದಯೆ ಅಂತ ಹೆಸರು. ಈ ವಿಧದ ಪ್ರೀತಿ ದಯೆಯಿಂದ ಉಂಟಾಗುತ್ತದೆ, ಭಕ್ತಿಯಿಂದ ಉಂಟಾಗುತ್ತದೆ.

"ಮಾಯೆ ಮನುಷ್ಯನನ್ನು ಬದ್ಧನನ್ನಾಗಿಯೂ, ಭಗವದ್ವಿಮುಖನ ನ್ನಾಗಿಯೂ ಮಾಡಿಬಿಡುತ್ತದೆ. ಆದರೆ ದಯೆ ಭಗವಂತನ ಸಾಕ್ಷಾತ್ಕಾರ ವನ್ನು ದೊರಕಿಸಿಕೊಡುತ್ತದೆ. ಶುಕದೇವ ಮತ್ತು ನಾರದಾದಿಗಳು ದಯಾವಂತರಾಗಿದ್ದರು."

ಪ್ರತಾಪ: "ಮಹಾಶಯರೆ, ಕೆಲವರು ನಿಮ್ಮೊಡನೆಯೇ ಇದ್ದು ಕೊಂಡಿದಾರಲ್ಲ, ಅವರಿಗೆ ಕ್ರಮೇಣ ಉನ್ನತಿ ಉಂಟಾಗುತ್ತಿದೆಯೇನು?"

ಶ್ರೀರಾಮಕೃಷ್ಣರು: "ನಾನು ಜನರಿಗೆ ಹೇಳುತ್ತೇನೆ, ಸಂಸಾರ-ಜೀವನ ತಪ್ಪೇನಲ್ಲ. ಆದರೆ ಅದರಲ್ಲಿ ದಾಸಿಯಂತಿರಬೇಕು, ಅಷ್ಟೆ. ದಾಸಿ ತನ್ನ ಯಜಮಾನನ ಮನೆಯ ಸಂಬಂಧವಾಗಿ ಹೇಳುತ್ತಾಳೆ: 'ನಮ್ಮ ಮನೆ.' ಆದರೆ ಆಕೆಯ ಸ್ವಂತ ಮನೆ ಯಾವುದೋ ಒಂದು ಹಳ್ಳಿಯಲ್ಲಿ ಇರಬಹುದು. ಯಜಮಾನನ ಮನೆ ತೋರಿಸಿ ಬಾಯಲ್ಲೇನೊ ಹೇಳುತ್ತಾಳೆ: 'ಇದು ನಮ್ಮ ಮನೆ' ಎಂದು, ಆದರೆ ಹೃದಯಾಂತರಾಳದಲ್ಲಿ ಆಕೆಗೆ ಚೆನ್ನಾಗಿ ಗೊತ್ತಿದೆ ಅದು ತನ್ನ ಮನೆಯಲ್ಲ ತನ್ನ ಮನೆ ದೂರದ ಹಳ್ಳಿಯಲ್ಲಿದೆ ಎಂದು. ಯಜಮಾನನ ಮಗುವನ್ನು ಲಾಲಿಸಿ ಪೋಷಿಸುತ್ತ ಒಮ್ಮೊಮ್ಮೆ ಹೇಳುತ್ತಾಳೆ:

'ನನ್ನ ಹರಿ ಬಹಳ ತುಂಟನಾಗಿಬಿಟ್ಟಿದಾನೆ.' ಅಥವಾ 'ನನ್ನ ಹರಿಗೆ ಸಿಹಿಯೇ ಸೇರದು.' ಆಕೆ, 'ನನ್ನ ಹರಿ' ಅಂತ ಬಾಯಲ್ಲೇನೊ ಹೇಳುತ್ತಾಳೆ, ಆದರೆ ಹೃದಯದಲ್ಲಿ ಚೆನ್ನಾಗಿ ಗೊತ್ತಿದೆ ಹರಿ ತನ್ನ ಮಗುವಲ್ಲ, ಯಜಮಾನನದು ಎಂಬುದು.

"ಇದಕ್ಕಾಗೇ ಇಲ್ಲಿಗೆ ಬರುವವರಿಗೆ ನಾನು ಹೇಳುತ್ತಿದೇನೆ: 'ಸಂಸಾರವನ್ನು ಏಕೆ ಬೇಡ ಅನ್ನುತ್ತೀರಿ? ಅದೇನು ತಪ್ಪಲ್ಲ. ಆದರೆ ಭಗವಂತನಲ್ಲಿ ಮನಸ್ಸಿಟ್ಟು ಅದರಲ್ಲಿರಬೇಕು. ಚೆನ್ನಾಗಿ ತಿಳಿದುಕೊಂಡುಬಿಡಿ ಮನೆ, ಮಠ, ಬಂಧು, ಬಳಗ ನಿಮ್ಮವಲ್ಲ ಎಂಬುದನ್ನ. ಅವೆಲ್ಲವೂ ಭಗವಂತನಿಗೆ ಸೇರಿದವು. ನಿಮ್ಮ ನಿಜವಾದ ಮನೆ ಇರುವುದು ಭಗವಂತನ ಹತ್ತಿರದಲ್ಲಿ.' ಮತ್ತೆ ಹೇಳುತ್ತೇನೆ: 'ಭಗವಂತನ ಪಾದಪದ್ಮಗಳಲ್ಲಿ ನಿಮಗೆ ಭಕ್ತಿಯುಂಟಾಗಬೇಕೆಂದು ವ್ಯಾಕುಲ ಹೃದಯದಿಂದ ಸರ್ವದಾ ಪ್ರಾರ್ಥನೆ ಮಾಡಿ.'"

ವಿಲಾಯತಿಯ ಸಂಬಂಧವಾಗಿ ಮಾತುಕತೆ ಮತ್ತೆ ಈಗ ಆರಂಭವಾಯಿತು. ಒಬ್ಬ ಭಕ್ತ ಹೇಳಿದ: "ಮಹಾಶಯರೆ, ಈಗಿನ ಕಾಲದ ವಿಲಾಯತಿಯ ಪಂಡಿತರು ಭಗವಂತನಿದಾನೆ ಎಂಬುದನ್ನು ಒಪ್ಪುತ್ತಿಲ್ಲ ವಂತೆ."

ಪ್ರತಾಪ: "ಬಾಯಲ್ಲಿ ಅವರು ಏನು ಬೇಕಾದರೂ ಹೇಳಿಕೊಳ್ಳಲಿ, ಹೃದಯದಲ್ಲಿ ಅವರು ಯಾರೂ ನಾಸ್ತಿಕರು ಎಂಬುದಾಗಿ ನನಗೆ ತೋರುತ್ತಿಲ್ಲ. ಈ ಜಗದ್ವ್ಯಾಪಾರದ ಹಿಂದೆ ಒಂದು ಮಹಾಶಕ್ತಿ ಇದೆ ಎಂಬುದನ್ನು ಅವರಲ್ಲನೇಕರು ಒಪ್ಪಿಕೊಳ್ಳಬೇಕಾಗಿ ಬಂದಿದೆ."

ಶ್ರೀರಾಮಕೃಷ್ಣರು: "ಅಷ್ಟಾದರೇ ಸಾಕು. ಶಕ್ತಿಯನ್ನು ಒಪ್ಪುತ್ತಾರೆ ತಾನೆ? ಅವರು ನಾಸ್ತಿಕರು ಹೇಗೆ ಆಗುತ್ತಾರೆ?"

ಪ್ರತಾಪ: "ಇದೂ ಅಲ್ಲದೆ, ಸತ್ಕಾರ್ಯಕ್ಕೆ ಸತ್ಫಲ, ದುಷ್ಕಾರ್ಯಕ್ಕೆ ದುಷ್ಫಲ ದೊರೆಯುತ್ತೆ ಎಂಬುದನ್ನೂ ಅವರು ಒಪ್ಪುತ್ತಾರೆ."

ಪ್ರತಾಪ ಇನ್ನೇನು ಪರಮಹಂಸರಿಂದ ಬೀಳ್ಕೊಳ್ಳುವುದರಲ್ಲಿದಾನೆ.

ಶ್ರೀರಾಮಕೃಷ್ಣರು ಪ್ರತಾಪನಿಗೆ: "ಇನ್ನೇನು ತಾನೆ ಹೇಳಲಿ ನಿನಗೆ? ಆದರೆ ಇಷ್ಟು ಹೇಳಬಲ್ಲೆ, ನೀನು ಜಗಳ ವಾದ ವಿವಾದ ಇವುಗಳಲ್ಲಿ ಸಿಕ್ಕಿಕೊಳ್ಳಬೇಡ ಎಂದು. ಇನ್ನೊಂದು ವಿಷಯ. ಕಾಮಕಾಂಚನವೇ ಕಾರಣ—ಭಗವಂತನಿಂದ ಮನುಷ್ಯ ವಿಮುಖನಾಗುವುದಕ್ಕೆ. ಆ ಕಡೆಗೆ

ಹೋಗಲು ಅವು ಬಿಟ್ಟುಕೊಡಲೊಲ್ಲವು. ನೋಡಿಲ್ಲವೆ ನೀನು, ಪ್ರತಿಯೊಬ್ಬನೂ ತನ್ನ ತನ್ನ ಹೆಂಡತಿಯನ್ನು ಕೇವಲ ಹೊಗಳುವುದನ್ನಲ್ಲದೆ ಬೇರೆ ಏನನ್ನೂ ಮಾಡದಿರುವುದನ್ನ? (ಎಲ್ಲರೂ ನಗುತ್ತಿದಾರೆ.) ಆಕೆ ಒಳ್ಳೆಯವಳಾಗಿರಲಿ, ಕೆಟ್ಟವಳಾಗಿರಲಿ—ಯಾರನ್ನೇ ಆಗಲಿ ನಿನ್ನ ಹೆಂಡತಿ ಹೇಗೆ ಎಂದು ಕೇಳಿದರೆ, ಒಡನೇ ಆತ ಉತ್ತರ ಕೊಡುತ್ತಾನೆ: 'ಓ ನಮ್ಮಾಕೆಯೆ, ಬಹಳ ಒಳ್ಳೆಯವಳು—' "

ಪ್ರತಾಪ ಈಗ ಎದ್ದು ನಿಂತು ಪರಮಹಂಸರಿಂದ ಬೀಳ್ಕೊಂಡು ಹೊರಟುಹೋಗುತ್ತಿದಾನೆ. ಪರಮಹಂಸರ ಅಮೃತಮಯ ಮಾತು, ಕಾಮಕಾಂಚನ ತ್ಯಾಗದ ಮಾತು ಅಲ್ಲಿಗೇ ನಿಂತುಹೋಯಿತು. ಸುರೇಂದ್ರನ ತೋಟದ ಗಿಡ ಮರಗಳ ಎಲೆಗಳು ದಕ್ಷಿಣ ದಿಕ್ಕಿನಿಂದ ಬೀಸುತ್ತಿದ್ದ ಗಾಳಿಯ ದೆಸೆಯಿಂದ ಮರ್ಮರ ಶಬ್ದ ಮಾಡುತ್ತಿದ್ದುವು. ಪರಮಹಂಸರ ಮಾತು-ಕತೆಗಳು ಆ ಶಬ್ದದೊಡನೆ ಬೆರೆತು, ಭಕ್ತರ ಹೃದಯವನ್ನು ಒಮ್ಮೆ ಮುಟ್ಟಿ, ಕೊನೆಗೆ ಅನಂತ ಆಕಾಶದಲ್ಲಿ ಲಯವಾಗಿಬಿಟ್ಟವು.

ಈಗ ಮಣಿಮಲ್ಲಿಕ ಪರಮಹಂಸರಿಗೆ ಹೇಳುತ್ತಿದಾನೆ: "ಮಹಾಶಯರೆ, ನೀವು ದಕ್ಷಿಣೇಶ್ವರಕ್ಕೆ ಹೊರಡಲು ಸಮಯ ಆಗಿಬಿಟ್ಟಿದೆ. ಇಂದು ಅಲ್ಲಿಗೆ ಕೇಶವಸೇನನ ತಾಯಿ ಮತ್ತು ಆತನ ಮನೆಯ ಹೆಂಗಸರು ತಮ್ಮನ್ನು ದರ್ಶನಮಾಡಲು ಬರುತ್ತಾರೆ. ಅವರಿಗೆ ನೀವು ಆಗ ಸಿಕ್ಕದೆಹೋಗಿಬಿಟ್ಟರೆ ಅವರು ದುಃಖಿತರಾಗಿ ಮನೆಗೆ ಹಿಂದಿರುಗುತ್ತಾರೆ."

ಕೆಲವು ತಿಂಗಳು ಮಾತ್ರ ಆಗಿವೆ ಕೇಶವಸೇನ ಸ್ವರ್ಗಸ್ಥನಾಗಿ. ಆ ಕಾರಣದಿಂದ ಆತನ ವೃದ್ಧ ತಾಯಿ ಮತ್ತು ಆತನ ಮನೆಯ ಹೆಂಗಸರು ಪರಮಹಂಸರ ದರ್ಶನ ಪಡೆಯಲು ಇಚ್ಛೆಪಟ್ಟಿದಾರೆ.

ಶ್ರೀರಾಮಕೃಷ್ಣರು ಮಣಿಮಲ್ಲಿಕನಿಗೆ: "ದಯವಿಟ್ಟು ಅವಸರಪಡಿಸಬೇಡ. ನನಗೆ ನಿದ್ದೆ-ಗಿದ್ದೆ ಬರಲೇ ಇಲ್ಲ. ನಾನು ಸುಮ್ಮನೆ ನುಗ್ಗಲಾರೆ. ಅವರು ದಕ್ಷಿಣೇಶ್ವರಕ್ಕೆ ಹೋಗುತ್ತಾರೆ ತಾನೆ. ಅದಕ್ಕಾಗಿ ನಾನೇನು ಮಾಡಬೇಕು? ಅವರು ಅಲ್ಲಿ ತೋಟ-ಗೀಟ ಎಲ್ಲವನ್ನು ಸುತ್ತಾಡಿ ಬಳಸಾಡಿ ಬಹಳವಾಗಿ ಆನಂದಪಡುತ್ತಾರೆ."

ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡನಂತರ ಪರಮಹಂಸರು ಈಗ ಹೊರಡಲು ಸಿದ್ಧರಾಗಿದಾರೆ. ಸುರೇಂದ್ರನ ಶ್ರೇಯಸ್ಸಿಗಾಗಿ ಮನಸ್ಸಿನಲ್ಲೇ ಪ್ರಾರ್ಥನೆಮಾಡುತ್ತಿದಾರೆ. ಪ್ರತಿಯೊಂದು ಕೊಠಡಿಗೂ ಹೋಗಿ ಮೃದು

ೃದು ಧ್ವನಿಯಿಂದ ಭಗವಂತನ ನಾಮೋಚ್ಚಾರಣೆ ಮಾಡುತ್ತಿದಾರೆ. ಎದ್ದಕ್ಕಿದ್ದಹಾಗೆ ಒಂದು ಕಡೆ ನಿಂತು ಹೇಳುತ್ತಿದಾರೆ: "ನಾನು ಊಟದ ಸಮಯದಲ್ಲಿ ಪೂರಿ ತಿನ್ನಲಿಲ್ಲ. ಈಗ ಒಂದೆರಡನ್ನ ತಂದುಕೊಡು." ಎಲ್ಲೋ ಒಂದು ಕಿಂಚಿತ್ತು ತಿಂದು ಹೇಳುತ್ತಿದಾರೆ: "ನಾನು ಹೀಗೆ ಮಾಡಿದ್ದರಲ್ಲಿ ಅರ್ಥವಿದೆ. ಪೂರಿಯನ್ನು ತಿನ್ನಲಿಲ್ಲ ಎಂಬ ಭಾವನೆ ಮನಸ್ಸಿನಲ್ಲಿ ಉಳಿದುಬಿಟ್ಟಿದ್ದೇ ಆದರೆ, ಮತ್ತೆ ಇಲ್ಲಿಗೆ ಅದಕ್ಕಾಗಿ ಬರಬೇಕಾಗಿ ಬಂದುಬಿಡುತ್ತದೆ." (ಎಲ್ಲರೂ ನಗುತ್ತಿದಾರೆ.)

ಮಣಿಮಲ್ಲಿಕ ನಗುತ್ತ: "ಒಳ್ಳೇದೆ. ನಾವೂ ನಿಮ್ಮನ್ನು ಹಿಂಬಾಲಿಸುತ್ತಿದ್ದೆವು."

ಭಕ್ತರೆಲ್ಲರೂ ನಗುತ್ತಿದಾರೆ.

೨೦ನೆ ಜೂನ್ ೧೮೮೪, ಜ್ಯೇಷ್ಠ ಕೃಷ್ಣ ಚತುರ್ದಶಿ, ಶುಕ್ರವಾರ.

ಮುಚ್ಚಂಜೆಯಾಗಿದೆ. ಪರಮಹಂಸರು ತಮ್ಮ ಕೊಠಡಿಯಲ್ಲಿ ಜಗನ್ಮಾತೆಯ ಧ್ಯಾನದಲ್ಲಿ ತನ್ಮಯರಾಗಿದಾರೆ. ಆಗಾಗ ಆಕೆಯ ಹೆಸರನ್ನು ಜಪಿಸುತ್ತಿದಾರೆ. ಕೊಠಡಿಯಲ್ಲಿ ರಾಖಾಲ, ಅಧರಸೇನ, ಮಾಸ್ಟರ್, ಇನ್ನೂ ಒಬ್ಬಿಬ್ಬರು ಕುಳಿತಿದಾರೆ.

ಈಗ ದೇವಾಲಯಗಳಲ್ಲಿ ಸಾಯಂ ಮಂಗಳಾರತಿ ಆರಂಭವಾಯಿತು. ಅಧರಸೇನ ಮಂಗಳಾರತಿಯನ್ನು ನೋಡಿಬರಲು ಎದ್ದುಹೋದ. ಪರಮ-ಹಂಸರು ಮಾಸ್ಟರೊಡನೆ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಒಳ್ಳೇದು, ಬಾಬುರಾಮನಿಗೆ ವ್ಯಾಸಂಗ ಮುಂದುವರಿಸಲು ಇಚ್ಛೆಯಿದೆಯೇನು? ಆತನಿಗೆ ಹೇಳಿದೆ: 'ನೀನು ಲೋಕಶಿಕ್ಷಣಕ್ಕಾಗಿ ವ್ಯಾಸಂಗ ಮುಂದುವರಿಸು.' ಸೀತೆಯ ಬಿಡುಗಡೆಯಾದನಂತರ ವಿಭೀಷಣ ಲಂಕೆಗೆ ರಾಜನಾಗಲು ಒಪ್ಪಲಿಲ್ಲ. ರಾಮ ಹೇಳಿದ: 'ನೀನು ಬುದ್ಧಿಹೀನರ ಕಣ್ಣು ತೆರೆಯಲು ರಾಜ್ಯಭಾರ ಸ್ವೀಕರಿಸು. ಇಲ್ಲದಿದ್ದರೆ ಅವರು ನಿನ್ನನ್ನು ಕೇಳುತ್ತಾರೆ, ನಿನಗೇನು ದೊರೆಯಿತು ನನ್ನ ಸೇವೆಯನ್ನು ಮಾಡಿದ್ದರಿಂದ ಎಂದು. ನಿನಗೆ ರಾಜ್ಯ ದೊರೆತುದಕ್ಕಾಗಿ ಅವರಿಗೆ ಬಹಳ ಆನಂದವಾಗಿಬಿಡುತ್ತದೆ.'

"ಇದು ನಿನ್ನ ಕಿವಿಗೆ ಮಾತ್ರ. ಅಂದು ನನಗೆ ಭಾವಾವಸ್ಥೆಯಲ್ಲಿ ಕಂಡುಬಂತು, ಬಾಬುರಾಮ, ಭವನಾಥ, ಹರೀಶ ಇವರದು ಪ್ರಕೃತಿಭಾವ ಎಂಬುದಾಗಿ. ಬಾಬುರಾಮ ಕಂಡುಬಂದ ಒಬ್ಬ ದೇವೀಮೂರ್ತಿಯ ಹಾಗೆ.

ಕೊರಳಲ್ಲಿ ಹಾರವಿತ್ತು. ಒಬ್ಬ ಸಖಿ ಜೊತೆಯಲ್ಲಿ ಇದ್ದಳು. ಆತನಿಗೆ ಸ್ವಪ್ನದಲ್ಲಿ ಏನೊ ಒಂದು ಅನುಭವ ದೊರೆಯಿತಂತೆ. ಆತನ ಶರೀರ ಶುದ್ಧ ವಾದ್ದು. ಸ್ವಲ್ಪ ಸಾಧನೆ ಮಾಡಿದರೇ ಆತ್ಮಜಾಗೃತಿಯುಂಟಾಗಿಬಿಡುತ್ತದೆ.

"ನೋಡು, ನನಗೆ ಈ ದೇಹ ರಕ್ಷಣೆಯ ಕೆಲಸ ಕಷ್ಟವಾಗಿ ತೋರು ತ್ತಿದೆ. ಬಾಬುರಾಮ ಬಂದು ನನ್ನೊಡನೆ ಇರುವುದಾದರೆ ಬಹಳ ಚೆನ್ನಾಗಿರುತ್ತದೆ. ನನಗೆ ಸೇವೆ ಮಾಡುತ್ತಿರುವ ಈ ಹುಡುಗರ ಸ್ವಭಾವ ಪರಿವರ್ತನೆಹೊಂದಿಬಿಡುತ್ತದೆ. ಲಾಟು ಯಾವಾಗಲೂ ಭಾವದಲ್ಲೇ ಹೊಳುಗಿದಾನೆ. ಆತ ಇನ್ನೇನು ಭಗವಂತನಲ್ಲಿ ಲಯವಾಗುವುದರಲ್ಲಿದಾನೆ. ಕಾಮಾಲನಿಗೆ ಅಂಥಾ ಆಧ್ಯಾತ್ಮಿಕ ಉನ್ನತಿ ಬಂದುಬಿಟ್ಟಿದೆ, ಆತನಿಗೇನೇ ತೋಟವು ಸೇವೆಮಾಡಬೇಕಾಗಿ ಬಂದಿದೆ. ನಾನೇ ಆತನಿಗೆ ನೀರು-ಗೀರು ದೆಸೆಂದುಕೊಡಬೇಕಾಗಿ ಬಂದುಬಿಟ್ಟಿದೆ. ನನಗೆ ಸೇವೆ ಮಾಡಲು ಆತನ ಕತ್ರೆಯಲ್ಲಿ ಸಾಧ್ಯವಿಲ್ಲ.

ಕೇ' "ಬಾಬುರಾಮ, ನಿರಂಜನ ಇವರನ್ನು ಬಿಟ್ಟರೆ ಬೇರೆ ಹುಡುಗರು ಯಾರಿದಾರೆ? ಮುಂದೆ ಬೇರೆ ಯಾರು ಬಂದರೂ, ನನಗನಿಸುತ್ತಿದೆ, ಅವರು ಉಪದೇಶ ಪಡೆದುಕೊಂಡು ಹೊರಟುಹೋಗತಕ್ಕವರೇ.

"ಆದರೆ ಬಾಬುರಾಮ ಒಮ್ಮೆಗೇ ಬಂದುಬಿಡಲಿ ಎಂದು ನಾನು ಹೇಳುತ್ತಿಲ್ಲ. ಹಾಗೆ ಮಾಡಿದರೆ ಮನೆಯಲ್ಲಿ ತೊಂದರೆಗಿಟ್ಟುಕೊಳ್ಳ ಬಹುದು. (ನಗುತ್ತ) ಆತನಿಗೆ ಹೇಳಿದರೆ: 'ಬಂದುಬಿಡು ಮತ್ತೆ', ಆತ ಉತ್ತರವೀಯುತ್ತಾನೆ: 'ಬರುವ ಹಾಗೆ ಮಾಡಿಕೊಳ್ಳಿ ನೀವು.' ರಾಖಾಲ-ನನ್ನು ನೋಡಿ ಆತ ಸುಮ್ಮನೆ ಅಳುತ್ತಾನೆ. ಆತ ಹೇಳುತ್ತಾನೆ: 'ರಾಖಾಲ ಇಲ್ಲಿ ಬಹಳ ಆನಂದದಿಂದ ಇದಾನೆ.'

"ರಾಖಾಲ ಇಲ್ಲಿ ಮನೆ ಹುಡುಗನ ಹಾಗೆ ಇದಾನೆ. ಚೆನ್ನಾಗಿ ಗೊತ್ತಿದೆ, ಆತ ಸಂಸಾರಾಸಕ್ತನಾಗೋದಿಲ್ಲ ಎಂಬುದು. ಹೇಳುತ್ತಿದಾನೆ: 'ಸಂಸಾರ ಸುಖ ಸಪ್ಪೆಯಾಗಿ ಕಾಣುತ್ತಿದೆ.' ಆತನ ಹೆಂಡತಿ ಇಲ್ಲಿಗೆ ಬಂದಿದ್ದಳು. ಹದಿನಾಲ್ಕು ವಯಸ್ಸು. ಇಲ್ಲಿಂದ ಕೊನ್ನಗರಕ್ಕೆ ಹೋದಳು. ಕೊನ್ನಗರಕ್ಕೆ ಆತನನ್ನೂ ಕರೆದರು. ಆದರೆ ಆತ ಹೋಗಲಿಲ್ಲ. ಹೇಳಿದ: 'ಆಮೋದ, ಆಹ್ಲಾದ ನನಗೆ ರುಚಿಸುತ್ತಿಲ್ಲ.'

"ನಿರಂಜನ ನಿನಗೆ ಹೇಗೆ ಕಾಣುತ್ತಾನೆ?"

ಮಾಸ್ಟರ್: "ಒಳ್ಳೆ ಸುಂದರ ಕಾಯ."

ಶ್ರೀರಾಮಕೃಷ್ಣರು: "ಕೇವಲ ಸುಂದರ ಕಾಯನೇ ಅಲ್ಲ, ಸರಳ. ಸರಳ ಜೀವಿ ಭಗವಂತನನ್ನು ಸುಲಭವಾಗಿ ಪಡೆದುಕೊಂಡುಬಿಡುತ್ತಾನೆ. ಸರಳ ಹೃದಯದಲ್ಲಿ ಉಪದೇಶ ಬೇಗ ಬೇರೂರುತ್ತದೆ. ಅಂಥ ಹೃದಯ ಉತ್ತು-ಗಿತ್ತು ಹದಮಾಡಿದ ಹೊಲದ ಹಾಗೆ. ಬೀಜ ಅಲ್ಲಿಗೆ ಬೀಳುವುದೇ ತಡ ಅದು ಹುಟ್ಟಿಕೊಂಡುಬಿಡುತ್ತದೆ. ಬೇಗ ಫಲವನ್ನೂ ಕೊಟ್ಟುಬಿಡುತ್ತದೆ.

"ನಿರಂಜನ ವಿವಾಹವಾಗೋದಿಲ್ಲ. ಕಾಮಕಾಂಚನವೇ ಮನುಷ್ಯನ ಬಂಧನಕ್ಕೆ ಕಾರಣ. ನೀನು ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಎಲೆಯಡಿಕೆ, ಹೊಗೆಸೊಪ್ಪು ಇವನ್ನು ತ್ಯಜಿಸಿಬಿಟ್ಟರೆ ಏನು ದೊರೆತೀತು? ಕಾಮಕಾಂಚನ ತ್ಯಾಗವೇ ತ್ಯಾಗ.

"ಭಾವಾವಸ್ಥೆಯಲ್ಲಿ ತೋರಿಬಂತು, ನಿರಂಜನ ಚಾಕರಿ ಮಾಡುತ್ತಿದ್ದರೂ, ಅದರಿಂದ ಆತನಿಗೆ ಯಾವ ತೊಂದರೆಯೂ ಉಂಟಾಗದು. ಆತ ತಾಯಿಗಾಗಿ ಉದ್ಯೋಗ ಸ್ವೀಕರಿಸಿದಾನೆ—ಅದು ತಪ್ಪಾದುದೇನಲ್ಲ.

"ನೀನು ಮಾಡುತ್ತಿರುವ ಕರ್ಮವೂ ನಿನಗೆ ತೊಂದರೆಯನ್ನು ತರದು. ಅದು ಒಳ್ಳೆ ಕೆಲಸವೆ. ಏನೋ ತಪ್ಪಿಗಾಗಿ ಒಬ್ಬ ಗುಮಾಸ್ತನನ್ನು ಜೈಲಿಗೆ ಕಳುಹಿಸಿದರು ಅಂತ ಇಟ್ಟುಕೊ. ಆತನನ್ನು ಅಲ್ಲಿ ಬಂಧಿಸಿ ಕೈಗೆ ಸಂಕೋಲೆ ಹಾಕುತ್ತಾರೆ. ಕೊನೆಗೆ ಆತನನ್ನು ಬಿಟ್ಟುಬಿಡುತ್ತಾರೆ. ಬಿಡುಗಡೆಯಾದನಂತರ 'ತಕತೈ, ತಕತೈ' ಅಂತ ಕುಣಿಯುತ್ತಿರುತ್ತಾನೇನು? ಎಂದಿಗೂ ಇಲ್ಲ. ಮತ್ತೆ ಗುಮಾಸ್ತೆಯ ಕೆಲಸವನ್ನೇ ಮಾಡುತ್ತಾನೆ. ನಿನಗೆ ಬರಿದೆ ಕೂಡಿಡುವ ಇಚ್ಛೆಯೇನಿಲ್ಲ. ನಿನ್ನ ಸಂಸಾರವನ್ನು ಕಾಪಾಡಲು ಮಾತ್ರ ಹಾಗೆ ಮಾಡುತ್ತಿದೀಯೆ. ಇಲ್ಲದಿದ್ದರೆ ಅವರು ಎಲ್ಲಿಗೆ ಹೋಗಬೇಕು?"

ಮಾಸ್ಟರ್: "ಯಾರಾದರೂ ಹೊತ್ತುಕೊಳ್ಳುವುದಾದರೆ ಬಿಟ್ಟುಬಿಡಲು ಸಿದ್ಧನಾಗಿದೇನೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಈಗ ನೀನು ಇದನ್ನೂ ಮಾಡಬೇಕು, ಅದನ್ನೂ ಮಾಡಬೇಕು."

ಮಾಸ್ಟರ್: "ಎಲ್ಲವನ್ನೂ ತ್ಯಜಿಸಿಬಿಡಲು ಸಾಧ್ಯವಾಗುವುದು ಒಂದು ದೊಡ್ಡ ಸೌಭಾಗ್ಯವೇ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಆದರೆ ಇದು ಸಂಸ್ಕಾರ ವಿದ್ದಂತೆ. ನೀನು ಮಾಡಬೇಕಾಗಿರುವ ಕರ್ಮ ಇನ್ನೂ ಸ್ವಲ್ಪ ಬಾಕಿ ಇದೆ. ಅದು ಮುಗಿದೊಡನೇ ನಿನಗೆ ಶಾಂತಿ—ಆಗ ನಿನಗೆ ಬಿಡುಗಡೆಯಾಗುತ್ತದೆ. ಆಸ್ಪತ್ರೆಗೆ ಹೋಗಿ ದಾಖಲಾದರೆ ಸುಲಭವಾಗಿ ಬಂದುಬಿಡಲಾಗೋದಿಲ್ಲ. ಸಂಪೂರ್ಣವಾಗಿ ಗುಣ ಆದರೇನೇ ಅವರು ಬಿಟ್ಟುಕೊಡುವುದು.

"ಭಕ್ತರು ಇಲ್ಲಿಗೆ ಬರುತ್ತಿದಾರಲ್ಲ ಅವರಲ್ಲಿ ಎರಡು ಗುಂಪಿನವ ರಿದಾರೆ. ಒಂದು ಗುಂಪಿನವರು ಪ್ರಾರ್ಥಿಸುತ್ತಾರೆ: 'ಹೇ ಭಗವಂತ, ನಮ್ಮನ್ನು ಉದ್ಧಾರಮಾಡು.' ಇನ್ನೊಂದು ಗುಂಪಿನವರು, ಅಂದರೆ ನನ್ನ ಅಂತರಂಗಿಗಳು, ಅವರು ಹಾಗೆ ಪ್ರಾರ್ಥಿಸೋದಿಲ್ಲ. ಅವರಿಗೆ ಈ ಎರಡು ವಿಷಯ ಗೊತ್ತಾಗಿಬಿಟ್ಟರೇ ಸಾಕು—ಮೊದಲನೆಯದು, ನಾನು (ಪರಮ-ಹಂಸರು) ಯಾರು ಎಂಬುದು. ಎರಡನೆಯದು, ತಾವು ಯಾರು, ತಮಗೂ ನನಗೂ ಏನು ಸಂಬಂಧ. ನೀನು ಈ ಎರಡನೆ ಗುಂಪಿಗೆ ಸೇರಿದ ವನು; ಇಲ್ಲದಿದ್ದರೆ . . .

"ಭವನಾಥ, ಬಾಬುರಾಮ ಮೊದಲಾದವರದು ಪ್ರಕೃತಿಭಾವ. ಹರೀಶ ಸೀರೆ ಉಟ್ಟುಕೊಂಡು ಮಲಗುತ್ತಾನೆ. ಬಾಬುರಾಮ ಹೇಳುತ್ತಾನೆ, ಪ್ರಕೃತಿಭಾವವೇ ತನಗೆ ರುಚಿಸುತ್ತದೆ ಎಂದು. ಆದ್ದರಿಂದ ನಾನು ಹೇಳು ವುದು ಸರಿ. ಭವನಾಥನದೂ ಅದೇ. ನರೇಂದ್ರ, ರಾಖಾಲ, ನಿರಂಜನ ಇವರದು ಪುರುಷಭಾವ.

"ಒಳ್ಳೇದು, ನನ್ನ ಕೈಗೆ ಪೆಟ್ಟು ತಗುಲಿದುದರ ಅರ್ಥವೇನು? ಹಿಂದೆ ಒಮ್ಮೆ ನಾನು ಭಾವಾವಸ್ಥೆಯಲ್ಲಿದ್ದಾಗ ಹಲ್ಲು ಮುರಿದುಹೋಯಿತು. ಈ ಸಲ ಕೈಗೆ ಪೆಟ್ಟು ಬಿದ್ದುಬಿಟ್ಟದೆ."

ಮಾಸ್ಟರ್ ಸುಮ್ಮನೆ ಕುಳಿತಿರುವುದನ್ನು ನೋಡಿ ಪರಮಹಂಸರೇ ಅದಕ್ಕೆ ಉತ್ತರಕೊಡುತ್ತಿದಾರೆ.

ಶ್ರೀರಾಮಕೃಷ್ಣರು: "ಕೈಗೆ ಪೆಟ್ಟು ತಗುಲಿದೆ—ಇಡೀ ಅಹಂಕಾರ ವನ್ನು ನಿರ್ಮೂಲಮಾಡುವುದಕ್ಕೆ. ಈಗ ಎಷ್ಟು ಪ್ರಯತ್ನಪಟ್ಟು ಹುಡುಕಿ ನೋಡಿದರೂ ನನ್ನ ಆಂತರ್ಯದಲ್ಲಿ 'ಅಹಂ' ಎಂಬುದು ತೋರಿಬರುತ್ತಿಲ್ಲ. ಹುಡುಕಿನೋಡುತ್ತೇನೆ, ಕೇವಲ ಭಗವಂತನೇ ಇದಾನೆ. ಅಹಂಕಾರ ಸಂಪೂರ್ಣವಾಗಿ ನಾಶವಾಗದ ಹೊರತು ಆತನ ಸಾಕ್ಷಾತ್ಕಾರವನ್ನು ಪಡೆ

ಯಲಾಗೋದಿಲ್ಲ. ಚಾತಕ ಪಕ್ಷಿಯ ಕಡೆ ನೋಡು. ಅದು ವಾಸಿಸು ವುದು ನೆಲದ ಮೇಲೆ, ಆದರೆ ಎಷ್ಟು ಎತ್ತರಕ್ಕೆ ಹಾರುತ್ತದೆ!

"ಕ್ಯಾಪ್ಟೆನ್ ಹೇಳುತ್ತಾನೆ, ನಾನು ಮೀನು ತಿನ್ನುವುದರಿಂದ ನನಗೆ ಯಾವ ಸಿದ್ಧಿಯೂ ದೊರೆಯಲಿಲ್ಲ ಎಂದು. ಒಮ್ಮೊಮ್ಮೆ ಶರೀರವೆಲ್ಲಾ ನಡುಗುತ್ತದೆ, ಎಲ್ಲಿ ಆ ಶಕ್ತಿಗಳು ನನಗೆ ಬಂದುಬಿಡುವುವೋ ಎಂದು. ಒಂದು ಪಕ್ಷ ಅವು ಉಂಟಾಗಿಬಿಟ್ಟದ್ದೇ ಆದರೆ ಈ ಸ್ಥಳ ಔಷಧಾಲಯ, ಆಸ್ಪತ್ರೆಗಳಾಗಿ ಪರಿಣಮಿಸಿಬಿಡುತ್ತದೆ. ಜನ ಬಂದು ಹೇಳಲಾರಂಭಿ ಸುತ್ತಾರೆ, ತಮ್ಮ ರೋಗವನ್ನು ಗುಣಪಡಿಸಿಕೊಡಬೇಕೆಂದು. ಸಿದ್ಧಿಯಿರು ವುದು ಒಳ್ಳೆಯದೆ?"

ಮಾಸ್ಟರ್: "ಒಳ್ಳೆಯದಲ್ಲ. ನೀವೇ ಹೇಳುತ್ತೀರಿ, ಅಷ್ಟ ಸಿದ್ಧಿ ಗಳಲ್ಲಿ ಒಂದು ಇದ್ದರೂ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲಾಗುವು ದಿಲ್ಲ ಎಂದು."

ಶ್ರೀರಾಮಕೃಷ್ಣರು: "ನೀನು ಹೇಳುವುದು ಸರಿ. ಹೀನಬುದ್ಧಿ ಯುಳ್ಳವರು ಮಾತ್ರ ಅವುಗಳಿಗಾಗಿ ಹಾತೊರೆಯುತ್ತಾರೆ. ಯಾರೇ ಆಗಲಿ ದೊಡ್ಡ ಮನುಷ್ಯನನ್ನ ಯಾವುದಕ್ಕಾದರೂ ಬೇಡಿಕೊಂಡರೆ, ಮತ್ತೆ ಆತ ನಿಂದ ಮೆಚ್ಚಿಗೆ ದೊರಕಿಸಿಕೊಳ್ಳಲಾಗೋದಿಲ್ಲ. ಆತ ಆ ಯಾಚಕನನ್ನ ತನ್ನ ಗಾಡಿಯಲ್ಲಿ ಕೂರಿಸಿಕೊಂಡುಹೋಗಲು ಅನುಮತಿ ಕೊಡುವುದಿಲ್ಲ. ಒಂದು ಪಕ್ಷ ಅನುಮತಿ ಕೊಟ್ಟರೂ ಹತ್ತಿರ ಕೂರಿಸಿಕೊಳ್ಳುವುದಿಲ್ಲ. ಆದ್ದ ರಿಂದ ನಿಷ್ಕಾಮ ಭಕ್ತಿ, ಅಹೇತುಕ ಭಕ್ತಿ—ಎಲ್ಲಾ ದೃಷ್ಟಿಯಿಂದಲೂ ಒಳ್ಳೆಯದು.

"ಸಾಕಾರ, ನಿರಾಕಾರ, ಎರಡೂ ಸತ್ಯ. ನೀನು ಏನು ಹೇಳು ತ್ತೀಯೆ? ನಿರಾಕಾರದಲ್ಲಿ ಮನಸ್ಸನ್ನು ಹೆಚ್ಚು ಹೊತ್ತು ಇಡಲಾಗೋದಿಲ್ಲ. ಆದ್ದರಿಂದ ಭಕ್ತರಿಗಾಗಿ ಸಾಕಾರ.

"ಕ್ಯಾಪ್ಟೆನ್ ಈ ವಿಷಯವಾಗಿ ಬಹಳ ಚೆನ್ನಾಗಿ ಹೇಳುತ್ತಾನೆ. ಹಕ್ಕಿ ಬಹಳ ಎತ್ತರಕ್ಕೆ ಹಾರಿ ದಣಿದನಂತರ ಮರದ ಮೇಲೆ ಇಳಿದು ವಿಶ್ರಮಿಸಿಕೊಳ್ಳುತ್ತದೆ. ಮೊದಲು ನಿರಾಕಾರ, ನಂತರ ಸಾಕಾರ.

"ನಿಮ್ಮ ಮನೆಗೆ ಒಮ್ಮೆ ಬರಬೇಕಾಗಿದೆ. ಭಾವಾವಸ್ಥೆಯಲ್ಲಿ ನೋಡಿದೆ, ಅಧರಸೇನನ ಮನೆ, ಸುರೇಂದ್ರನ ಮನೆ, ಬಲರಾಮನ ಮನೆ

ಇವು ನಾವೆಲ್ಲಾ ಒಟ್ಟಿಗೆ ಸೇರುವ ಮನೆಗಳು ಎಂಬುದನ್ನ. ಆದರೆ, ಅವರು ಇಲ್ಲಿಗೆ ಬರಲಿ ಬಿಡಲಿ, ನನಗೆಲ್ಲಾ ಒಂದೇ.''

ಮಾಸ್ಟರ್: ''ಹೌದು, ಹಾಗಲ್ಲದೆ ಮತ್ತಿನ್ನೇನು? ಸುಖಕ್ಕೆ ಹಾತೊರೆದರೆ ದುಃಖ ಬಂದೇ ಬರುತ್ತದೆ. ಆದರೆ ನೀವು ಇವೆರಡಕ್ಕೂ ಅತೀತರು.''

ಶ್ರೀರಾಮಕೃಷ್ಣರು: ''ಹೌದು. ಮತ್ತೆ, ನಾನು ನೋಡುತ್ತಿದೇನೆ, ಐಂದ್ರಜಾಲಿಕನನ್ನ ಮತ್ತು ಆತನ ಇಂದ್ರಜಾಲವನ್ನ. ಐಂದ್ರಜಾಲಿಕನೇ ಸತ್ಯ, ಆತನ ಇಂದ್ರಜಾಲ ಅನಿತ್ಯ—ಸ್ವಪ್ನದ ಹಾಗೆ. ನಾನು ಚಂಡೀ ಪಾಠ ಕೇಳಿದಾಗ ಈ ಅನುಭವ ಆಯಿತು. ಶುಂಭ, ನಿಶುಂಭರು ಈಗ ತಾನೆ ಹುಟ್ಟಿದರು ಅಂತ ಕೇಳಿದೆ. ಮತ್ತೆ ಕೆಲವು ಕ್ಷಣಗಳಲ್ಲೇ ಅವರು ಸತ್ತರು ಅಂತಲೂ ಕೇಳಿದೆ.''

ಮಾಸ್ಟರ್: ''ಹೌದು. ಒಮ್ಮೆ ನಾನು ಕಾಲ್ನಾಕ್ಕೆ ಗಂಗಾಧರ ನೊಡನೆ ಜಹಜಿನಲ್ಲಿ ಹೋಗುತ್ತಿದ್ದೆ. ನಮ್ಮ ಜಹಜಿಗೆ ಡಿಕ್ಕಿ ಹೊಡೆದು ಒಂದು ದೋಣಿಯ ಜನ, ಇಪ್ಪತ್ತು ಇಪ್ಪತ್ತೈದು ಮಂದಿ ಇರಬೇಕು, ಮುಳುಗಿಹೋದರು. ಜಹಜು ಮುಂದುವರಿಯುವಾಗ ಯಾವ ರೀತಿಯಾಗಿ ಅದರ ಹಿಂದೆ ಏಳುವ ನೊರೆ ಆ ಕ್ಷಣವೇ ನೀರಿನಲ್ಲಿ ಲೀನವಾಗಿಬಿಡುವುದೊ, ಅದೇ ರೀತಿಯಾಗಿ ಅವರೆಲ್ಲರೂ ಲೀನವಾಗಿಬಿಟ್ಟರು.

''ನಿಮ್ಮನ್ನು ಒಂದು ವಿಷಯ ಕೇಳಲೆ? ಇಂದ್ರಜಾಲವನ್ನು ನೋಡು ವಾಗ ಅದರಲ್ಲಿ ತೋರಿಬರುವ ದುಃಖದುರಿತಗಳಿಗಾಗಿ ಪ್ರೇಕ್ಷಕನ ಹೃದಯ ದಲ್ಲಿ ಮರುಕ ಹುಟ್ಟುವುದೆ? ಆ ಸಮಯದಲ್ಲಿ ಆತನಿಗೆ ಕರ್ತೃತ್ವಬೋಧೆ ಉಂಟಾಗುವುದೆ? ಕರ್ತೃತ್ವಬೋಧೆ ಉಂಟಾದರೆ ತಾನೆ ಮರುಕ ಹುಟ್ಟ ಬೇಕಾದರೆ?''

ಶ್ರೀರಾಮಕೃಷ್ಣರು: ''ಜ್ಞಾನಿ ಎಲ್ಲವನ್ನೂ ಒಮ್ಮೆಗೇ ನೋಡುತ್ತಾನೆ —ಭಗವಂತ, ಮಾಯೆ, ಜೀವ, ಜಗತ್ತು ಎಲ್ಲವನ್ನೂ. ಆತನಿಗೆ ಕಂಡುಬರು ತ್ತದೆ, ವಿದ್ಯಾಮಾಯೆ, ಅವಿದ್ಯಾಮಾಯೆ, ಜೀವ, ಜಗತ್ತು ಇವೆಲ್ಲ ಇವೆ, ಅದೇ ಸಮಯದಲ್ಲಿ ಇಲ್ಲ ಎಂಬುದಾಗಿ. ಎಲ್ಲಿಯವರೆಗೆ 'ಅಹಂ' ಎಂಬುದು ಇರುವುದೊ ಅಲ್ಲಿಯವರೆಗೆ ಅವೆಲ್ಲವೂ ಇರುತ್ತವೆ. ಜ್ಞಾನಖಡ್ಗದಿಂದ ಅವೆಲ್ಲವನ್ನೂ ಕತ್ತರಿಸಿಹಾಕಿದನಂತರ ಏನೂ ಇರದು. ಆಗ ತನ್ನ ಸ್ವಂತ

'ಅಹಂ' ಕೂಡ ಐಂದ್ರಜಾಲಿಕನ ಇಂದ್ರಜಾಲದ ಹಾಗೆ ಮಿಥ್ಯೆಯಾಗಿ ಕಂಡುಬರುತ್ತದೆ."

ಮಾಸ್ಟರ್ ತನ್ನಲ್ಲೇ ಅವುಗಳ ಸಂಬಂಧವಾಗಿ ಆಲೋಚಿಸುತ್ತ ಕುಳಿತಿದ್ದಂತೆಯೇ ಪರಮಹಂಸರು ಹೇಳಲಾರಂಭಿಸಿದರು: "ಇದು ಹೇಗೆ ಗೊತ್ತೆ? ಇದು ಇಪ್ಪತ್ತೈದು ಸಾಲು ದಳಗಳುಳ್ಳ ಹೂವನ್ನು ಒಂದೇ ಏಟಿಗೆ ಕತ್ತರಿಸಿದ ಹಾಗೆ.

"ಕರ್ತೃತ್ವಬೋಧೆಯೇ! ರಾಮ, ರಾಮ! ಶುಕದೇವ, ಶಂಕರಾಚಾರ್ಯ ಇವರೇ ಮೊದಲಾದವರು 'ವಿದ್ಯೆಯ ಅಹಂ' ಅನ್ನು ಇಟ್ಟುಕೊಂಡಿದ್ದರು. ದಯಾಗುಣ ಮನುಷ್ಯನಿಗೆ ಸೇರಿದ್ದಲ್ಲ, ಭಗವಂತನಿಗೆ ಸೇರಿದ್ದು. 'ವಿದ್ಯೆಯ ಅಹಂ'ಗೆ ಮಾತ್ರ ದಯೆಯನ್ನು ತೋರಿಸಲು ಸಾಧ್ಯ. 'ವಿದ್ಯೆಯ ಅಹಂ' ಹೊಂದಿರತಕ್ಕವನು ಭಗವಂತನೇ.

"ಇದೆಲ್ಲ ಕೇವಲ ಇಂದ್ರಜಾಲ ಎಂದು ಸಾವಿರಸಲ ನಿನಗೆ ಅನಿಸಬಹುದು; ಆದರೂ ನೀನು ಇನ್ನೂ ಮಾಯೆಯ ಅಧೀನದಲ್ಲೇ. ಆಕೆಯಿಂದ ತಪ್ಪಿಸಿಕೊಂಡು ಓಡಿಹೋಗುವ ಹಾಗಿಲ್ಲ. ನೀನು ಸ್ವತಂತ್ರನಲ್ಲ. ಆಕೆ ಮಾಡಿಸಿದ ಹಾಗೇ ಮಾಡಬೇಕಾಗುತ್ತದೆ. ಆ ಆದ್ಯಾಶಕ್ತಿ ಬ್ರಹ್ಮಜ್ಞಾನವನ್ನು ಕರುಣಿಸಿದರೆ ಮಾತ್ರ ನಿನಗೆ ಅದು ದೊರೆಯುತ್ತದೆ—ಆಗ ಮಾತ್ರವೇ ಎಲ್ಲವೂ ಇಂದ್ರಜಾಲವಾಗಿ ತೋರಿಬರುತ್ತದೆ; ಇಲ್ಲದಿದ್ದರೆ ಇಲ್ಲ.

"ಎಲ್ಲಿಯವರೆಗೆ ಒಂದು ಕಿಂಚಿತ್ತಾದರೂ ಸರಿಯೆ 'ಅಹಂ' ಎಂಬುದು ಇರುವುದೊ, ಅಲ್ಲಿಯವರೆಗೆ ವ್ಯಕ್ತಿ ಆದ್ಯಾಶಕ್ತಿಯ ಎಲ್ಲೆಯೊಳಗೇ ಇರಬೇಕಾಗುತ್ತದೆ. ಆಕೆಯ ಎಲ್ಲೆಯನ್ನು ಮೀರಿ ಹೋಗುವ ಹಾಗೇ ಇಲ್ಲ.

"ಆದ್ಯಾಶಕ್ತಿಯ ಸಹಾಯದಿಂದಲೇ ಭಗವಂತನ ಅವತಾರಲೀಲೆ. ಭಗವಂತ ತನ್ನ ಈ ಶಕ್ತಿಯಿಂದ ಮನುಷ್ಯನಾಗಿ ಅವತರಿಸುತ್ತಾನೆ. ಆಗ ಮಾತ್ರವೇ ಅವತಾರಪುರುಷನಿಗೆ ಕೆಲಸ ಮಾಡಲು ಸಾಧ್ಯವಾಗುತ್ತದೆ. ಎಲ್ಲವೂ ಭಗವತಿಯ ಶಕ್ತಿಯಿಂದಲೇ ಘಟಿಸುತ್ತವೆ.

"ಕಾಳೀದೇವಾಲಯದ ಹಿಂದಿನ ಖಜಾನ್ಚಿಯನ್ನು ಸ್ವಲ್ಪ ಸಹಾಯ ಮಾಡುವಂತೆ ಯಾರಾದರೂ ಕೇಳಿದರೆ, ಆತ ಉತ್ತರವೀಯುತ್ತಿದ್ದ:

'ಎರಡು ದಿನ ಬಿಟ್ಟುಕೊಂಡು ಬನ್ನಿ.' ಮೊದಲು ಆತ ಯಜಮಾನರಿಂದ ಅಪ್ಪಣೆ ಪಡೆದುಕೊಳ್ಳಬೇಕು.

"ಕಲಿಯುಗದ ಕೊನೆಯಲ್ಲಿ ಕಲ್ಕಿ ಅವತರಿಸುತ್ತಾನೆ. ಆತ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಜನ್ಮತಳೆಯುತ್ತಾನೆ. ಇದ್ದಕ್ಕಿದ್ದಹಾಗೆ ಅನಿರೀಕ್ಷಿತವಾಗಿ ಒಂದು ಕತ್ತಿ ಮತ್ತು ಒಂದು ಕುದುರೆ ಆತನಿಗೆ ದೊರೆಯುತ್ತವೆ. . . ."

ಅಧರಸೇನ ಮಂಗಳಾರತಿಗಳನ್ನು ಮುಗಿಸಿಕೊಂಡು ಈಗ ಪರಮ-ಹಂಸರ ಕೊಠಡಿಗೆ ಬಂದು ಕುಳಿತಿದಾನೆ.

ಶ್ರೀರಾಮಕೃಷ್ಣರು ಅಧರಸೇನ ಮೊದಲಾದವರಿಗೆ: "ಭುವನ ಇಲ್ಲಿಗೆ ಬಂದಿದ್ದಳು. ಜೊತೆಯಲ್ಲಿ ಇಪ್ಪತ್ತೈದು ಬೊಂಬಾಯಿ ಮಾವಿನ ಹಣ್ಣು, ಸಂದೇಶ, ರಸಗೊಳ್ಳ ಇವೇ ಮೊದಲಾದ ಸಿಹಿತಿಂಡಿಗಳನ್ನು ತಂದಿದ್ದಳು. ನನ್ನನ್ನು ಕೇಳಿದಳು: 'ಒಂದು ಮಾವಿನ ಹಣ್ಣು ತಿನ್ನುತ್ತೀರಾ?' ನಾನು ಉತ್ತರವಿತ್ತೆ: 'ನನಗೆ ಹೊಟ್ಟೆ ಭಾರವಾಗಿದೆ.' ನಿಜವಾಗಿಯೂ ನೋಡು, ಸ್ವಲ್ಪ ಸಿಹಿ ತಿಂಡಿ ತಿಂದೇ ಹೊಟ್ಟೆ ಎಷ್ಟು ಉಬ್ಬರಿಸಿಕೊಂಡುಬಿಟ್ಟದೆ!"

ಭುವನಮೋಹಿನಿ ಎಂಬ ಹೆಸರಿನ ದಾದಿ ಆಗಾಗ ಪರಮಹಂಸರ ದರ್ಶನ ಪಡೆಯಲು ಬರುತ್ತಿದಾಳೆ. ಪರಮಹಂಸರಿಗೆ ಎಲ್ಲರೂ—ವಿಶೇಷತಃ ಡಾಕ್ಟರುಗಳು, ಕವಿರಾಜರು, ದಾದಿಯರು—ತರುವ ತಿಂಡಿ ತೀರ್ಥಗಳನ್ನು ತಿನ್ನಲಾಗುತ್ತಿಲ್ಲ. ರೋಗಿಗಳು ಬಹಳವಾಗಿ ನರಳುತ್ತಿರುವುದನ್ನು ನೋಡಿಯೂ ಅವರು ಅವರಿಂದ ದುಡ್ಡನ್ನು ಸ್ವೀಕರಿಸುವುದರಿಂದ, ಪರಮಹಂಸರಿಗೆ ತಿನ್ನಲು ಸಾಧ್ಯವಾಗುತ್ತಿಲ್ಲ.

ಶ್ರೀರಾಮಕೃಷ್ಣರು: "ಕೇಶವಸೇನನ ತಾಯಿ, ತಂಗಿ, ಇನ್ನು ಕೆಲವರು ಆತನ ಸಂಬಂಧಿಗಳು ಇಲ್ಲಿಗೆ ಬಂದಿದ್ದರು; ಆಗ ಒಂದು ಸ್ವಲ್ಪ ನರ್ತಿಸಬೇಕಾಗಿ ಬಂತು. ಅವರನ್ನು ಸ್ವಲ್ಪ ಸಂತೋಷಪಡಿಸಬೇಕಾಗಿ ಬಂತು. ಮತ್ತೇನು ಮಾಡಲಿ? ಬಹಳವಾಗಿ ದುಃಖಿತರಾಗಿದ್ದರು!"



೨೪

## ಪಂಡಿತ ಶಶಧರ

---

**೨೫ನೆ ಜೂನ್ ೧೮೮೪, ಆಷಾಢ ಶುಕ್ಲ ದ್ವಿತೀಯ, ಬುಧವಾರ.**

ಇಂದು ಪೂರಿಯಲ್ಲಿ ರಥಜಾತ್ರೆ. ಈಶಾನನ ಆಹ್ವಾನಕ್ಕನುಸಾರ ಪರಮಹಂಸರು ಕಲ್ಕತ್ತದಲ್ಲಿರುವ ಆತನ ಮನೆಗೆ ಬೆಳಗ್ಗೆ ಹೊತ್ತಿಗೆ ಮುಂಚೆಯೇ ಬಂದುಬಿಟ್ಟಿದಾರೆ. ಅವರಿಗೆ ಪಂಡಿತ ಶಶಧರ ತರ್ಕಚೂಡಾ ಮಣಿಯನ್ನು ನೋಡಬೇಕು ಎಂಬ ಇಚ್ಛೆ ಬಹಳ ದಿನದಿಂದ ಇತ್ತು. ಆತ ಈಶಾನನ ಮನೆಯ ಹತ್ತಿರದಲ್ಲೇ ಒಂದು ಮನೆಯಲ್ಲಿ ಇಳಿದುಕೊಂಡಿದಾನೆ ಎಂಬುದನ್ನು ಕೇಳಿ, ಅಲ್ಲಿಗೆ ಅಪರಾಹ್ನ ಹೋಗಲು ನಿರ್ಧರಿಸಿದಾರೆ.

ಪರಮಹಂಸರೊಡನೆ ಹಾಜರಾ ಮತ್ತು ಇನ್ನೂ ಕೆಲವು ಮಂದಿ ಭಕ್ತರು ಬಂದಿದಾರೆ. ಈಶಾನ ಒಬ್ಬಿಬ್ಬರು ಬ್ರಾಹ್ಮಣ ಪಂಡಿತರನ್ನ ಮತ್ತು ಒಬ್ಬ ತಾಂತ್ರಿಕ ಭಕ್ತನನ್ನ ಆಹ್ವಾನಿಸಿದಾನೆ. ಈಶಾನನ ಮಕ್ಕಳು ಶ್ರೀಶನೇ ಮೊದಲಾದವರೂ ಕುಳಿತಿದಾರೆ.

ಆ ತಾಂತ್ರಿಕ ಭಕ್ತ ಹಣೆಗೆ ಕುಂಕುಮ ಇಟ್ಟುಕೊಂಡಿರುವುದು ಪರಮಹಂಸರ ಕಣ್ಣಿಗೆ ಬಿತ್ತು. ಅವರು ನಗುತ್ತ ಹೇಳುತ್ತಿದಾರೆ: "ಓಹೋ, ಈತನಿಗೆ ಬರೆ ಬಿದ್ದಿದೆ!"

ಈಗ ಮಾಸ್ಟರ್ ಮತ್ತು ನರೇಂದ್ರ ಕೊಠಡಿಗೆ ಬಂದು ಪರಮಹಂಸರಿಗೆ ಪ್ರಣಾಮಮಾಡುತ್ತಿದಾರೆ. ತಾವು ಈಶಾನನ ಮನೆಗೆ ಇಂದು ಹೋಗುವುದಾಗಿ ಮೊದಲೇ ಪರಮಹಂಸರು ಮಾಸ್ಟರಿಗೆ ತಿಳಿಸಿದ್ದರು.

ಊಟಕ್ಕೆ ಬಡಿಸುವುದು ಹೊತ್ತಾದುದರಿಂದ ಪರಮಹಂಸರು ತಮಾಷೆ ಮಾಡಲಾರಂಭಿಸಿದಾರೆ. ಹಸಿವು ಎಂಬತಕ್ಕದ್ದು ಎಷ್ಟು ಬಲ ಯುತವಾದ್ದು ಎಂಬುದರ ಸಂಬಂಧವಾಗಿ ಒಬ್ಬ ಪಂಡಿತ ಒಂದು ಸಂಸ್ಕೃತ ಶ್ಲೋಕವನ್ನು ಹೇಳುತ್ತಿದಾನೆ. ಅದನ್ನು ವ್ಯಾಖ್ಯಾನಮಾಡುತ್ತ ಆತ ಹೇಳುತ್ತಿದಾನೆ: "ದರ್ಶನಾದಿ ಶಾಸ್ತ್ರಗಳಿಗಿಂತ ಕಾವ್ಯ ಮನೋಹರವಾದ್ದು. ಕಾವ್ಯಪಠನೆಯಾಗುವಾಗ ಜನರಿಗೆ ಅನಿಸುತ್ತದೆ, ವೇದಾಂತ, ಸಾಂಖ್ಯ, ನ್ಯಾಯ, ಪಾತಂಜಲ ಈ ದರ್ಶನಗಳೆಲ್ಲ ಶುಷ್ಕ ಎಂಬುದಾಗಿ. ಕಾವ್ಯಕ್ಕಿಂತ ಸಂಗೀತ ಮನೋಹರವಾದ್ದು. ಸಂಗೀತ ಕಲ್ಲಿನಂಥ ಹೃದಯ

ಗಳನ್ನೂ ಕರಗಿಸಿಬಿಡುತ್ತದೆ. ಆದರೆ ಸುಂದರಿ ಸಂಗೀತಕ್ಕಿಂತಲೂ ಹೆಚ್ಚು ಆಕರ್ಷಕವಾದ ವಸ್ತು. ಆಕೆ ಏನಾದರೂ ಹತ್ತಿರ ಸುಳಿದಳು ಎಂದರೆ ಕಾವ್ಯ, ಸಂಗೀತ ಎರಡೂ ಒಂದು ಮೂಲೆಗೆ ಬಿದ್ದುಕೊಳ್ಳುತ್ತವೆ. ಇಡೀ ಮನಸ್ಸು ಆ ಯುವತಿಯ ಕಡೆ ಹರಿದುಹೋಗಿಬಿಡುತ್ತದೆ. ಆದರೆ ಯಾವಾಗ ಹಸಿವಾಗುವುದೊ, ಜಠರಾಗ್ನಿ ಪ್ರಜ್ವಲಿಸುವುದೊ ಆಗ ಕಾವ್ಯ, ಸಂಗೀತ, ಯುವತಿ ಯಾವೂ ರುಚಿಸವು. ಅನ್ನಚಿಂತೆ ಚಮತ್ಕಾರವಾದ್ದು!"

ಪರಮಹಂಸರು ನಗುತ್ತ ಹೇಳುತ್ತಿದ್ದಾರೆ: "ಈ ಪಂಡಿತ ಒಳ್ಳೆ ರಸಿಕ."

ಈಗ ನರೇಂದ್ರ ಹಾಡಲಾರಂಭಿಸಿದಾನೆ. ಸ್ವಲ್ಪ ಹೊತ್ತು ಹಾಡನ್ನು ಕೇಳಿ, ಪರಮಹಂಸರು ಮೇಲ್ಮಹಡಿಗೆ ವಿಶ್ರಮಿಸಿಕೊಳ್ಳಲು ಹೋಗುತ್ತಿದ್ದಾರೆ. ಮಾಸ್ಟರ್ ಮತ್ತು ಶ್ರೀಶ ಅವರನ್ನು ಹಿಂಬಾಲಿಸುತ್ತಿದ್ದಾರೆ. ಪರಮಹಂಸರಿಗೆ ಶ್ರೀಶನ ಪರಿಚಯಮಾಡಿಕೊಡುತ್ತ ಮಾಸ್ಟರ್ ಹೇಳುತ್ತಿದ್ದಾನೆ: "ಈತ ಒಬ್ಬ ಪಂಡಿತ. ಈತನದು ಅತಿಶಯವಾದ ಶಾಂತಪ್ರಕೃತಿ. ಬಾಲ್ಯದಲ್ಲಿ ನಾವಿಬ್ಬರೂ ಒಂದೇ ತರಗತಿಯಲ್ಲಿ ಓದುತ್ತಿದ್ದೆವು. ಈಗ ಈತ ವಕೀಲ ನಾಗಿದಾನೆ."

ಶ್ರೀರಾಮಕೃಷ್ಣರು: "ಇಂಥ ಒಳ್ಳೆ ಸ್ವಭಾವಿ ವಕೀಲನಾಗುವುದೆ!"

ಮಾಸ್ಟರ್: "ಹೌದು, ಈತ ಆ ಮಾರ್ಗ ಹಿಡಿದುದು ತಪ್ಪಾಯಿತು."

ಶ್ರೀರಾಮಕೃಷ್ಣರು: "ನನಗೆ ಕೆಲವು ಮಂದಿ ವಕೀಲರು ಗೊತ್ತಿದಾರೆ. ಅವರಲ್ಲಿ ಒಬ್ಬ ನನಗೆ ಬಹಳವಾಗಿ ಗೌರವ ತೋರಿಸುತ್ತಾನೆ. ಆತ ಸರಳಸ್ವಭಾವಿ. (ಶ್ರೀಶನಿಗೆ) ಭಗವಂತನ ವಿಷಯವಾಗಿ ನಿನ್ನ ಅಭಿಪ್ರಾಯವೇನು?"

ಶ್ರೀಶ: "ಭಗವಂತನೆಂಬುವನೊಬ್ಬ ಇದಾನೆ. ಆತನೇ ಎಲ್ಲವನ್ನೂ ಮಾಡುತ್ತಾನೆ. ಆದರೆ ನಾವು ಆತನಿಗೆ ಆರೋಪಿಸುವ ಗುಣಗಳು ಮಾತ್ರ ಸರಿಯಾದವುಗಳಲ್ಲ. ಭಗವಂತ ಏನೇನು ಎಂಬುದನ್ನು ಮನುಷ್ಯ ಅರಿಯ ಬಲ್ಲನೆ? ಆತ ಅನಂತ."

ಶ್ರೀರಾಮಕೃಷ್ಣರು: "ತೋಟದಲ್ಲಿ ಎಷ್ಟು ಮರಗಳಿವೆ, ಎಷ್ಟು ಕೊಂಬೆಗಳಿವೆ ಎಂಬುದರ ಲೆಕ್ಕಾಚಾರ ನಿನಗೇಕೆ ಬೇಕು? ನೀನು ತೋಟಕ್ಕೆ ಬಂದದ್ದು ಮಾವಿನ ಹಣ್ಣು ತಿನ್ನುವುದಕ್ಕೆ. ತಿಂದು ಆನಂದಪಡು. ಭಗ-

ವಂತನಲ್ಲಿ ಭಕ್ತಿ, ಪ್ರೇಮಗಳನ್ನು ಗಳಿಸಿಕೊಳ್ಳುವುದೇ ಮಾನವ ಜನ್ಮದ ಉದ್ದೇಶ. ಅವನ್ನು ಪಡೆದುಕೊಂಡು ಆನಂದದಿಂದಿರು.

"ನೀನು ಬಂದುದು ಮದ್ಯ ಕುಡಿಯುವುದಕ್ಕೆ. ಮದ್ಯದಂಗಡಿಯಲ್ಲಿ ಎಷ್ಟು ಪೀಪಾಯಿ ಮದ್ಯವಿದೆ ಎಂಬುದನ್ನು ತಿಳಿದುಕೊಳ್ಳುವುದರಿಂದ ನಿನಗಾಗುವ ಪ್ರಯೋಜನವೇನು? ನಿನಗೆ ಒಂದು ಲೋಟವೇ ಸಾಕು. ಭಗವಂತನ ಅನಂತ ಗುಣಗಳ ಸಂಬಂಧವಾಗಿ ಅರಿತುಕೊಳ್ಳುವುದರ ಆವಶ್ಯಕತೆ ತಾನೆ ಏನಿದೆ? ಆತನ ಗುಣ ಏನೇನು ಎಂಬುದನ್ನ ಅರಿತುಕೊಳ್ಳಲು ಒಂದು ಕೋಟಿ ವರ್ಷ ಪ್ರಯತ್ನಪಟ್ಟರೂ ಒಂದು ಕಿಂಚಿತ್ತನ್ನೂ ಅರಿತುಕೊಳ್ಳಲಾಗುವುದಿಲ್ಲ."

ಪರಮಹಂಸರು ಈಗ ಸುಮ್ಮನೆ ಕುಳಿತಿದಾರೆ. ಒಬ್ಬ ಬ್ರಾಹ್ಮಣ ಪಂಡಿತ ಕೊಠಡಿಯನ್ನು ಪ್ರವೇಶಿಸುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಸಂಸಾರದಲ್ಲಿ ಏನೆಂದರೆ ಏನೂ ಇಲ್ಲ. ಈಶಾನನ ಮನೆಯವರೆಲ್ಲರೂ ಒಳ್ಳೆಯವರೆ; ಆದ್ದರಿಂದ ಮನೆಯಲ್ಲಿ ಶಾಂತಿ. ಅದು ಹಾಗಿಲ್ಲದೆ, ಮಕ್ಕಳು ವಿಷಯಲಂಪಟರಾಗಿಯೂ, ಗಾಂಜಾಖೋರರಾಗಿಯೂ, ಕುಡುಕರಾಗಿಯೂ, ಅವಿಧೇಯರಾಗಿಯೂ, ಇನ್ನೂ ಅನೇಕ ದುರ್ಗುಣಗಳಿಂದ ಕೂಡಿದವರಾಗಿಯೂ ಇದ್ದಿದ್ದರೆ ಆಗ ಈತನ ದುಃಖ ದುರಿತಗಳಿಗೆ ಕೊನೆಯೇ ಇರುತ್ತಿರಲಿಲ್ಲ. ಈತನ ಮನೆಯವರೆಲ್ಲರಿಗೂ ಭಗವಂತನ ಕಡೆಗೇ ಮನಸ್ಸು. ಇವರದು ವಿದ್ಯಾ ಸಂಸಾರ. ಈ ವಿಧದ ಸಂಸಾರ ಬಹಳ ವಿರಳ. ಎಲ್ಲೋ ಎರಡು ಮೂರು ಮನೆಗಳಲ್ಲಿ ಮಾತ್ರ ನೋಡಿದೇನೆ. ಸಾಮಾನ್ಯವಾಗಿ ಸಂಸಾರಿಗಳ ಮನೆಯಲ್ಲಿ ಕೇವಲ ಜಗಳ, ಮನಸ್ತಾಪ, ದ್ವೇಷ, ಹೊಟ್ಟೆಕಿಚ್ಚು ಇವನ್ನೇ ನೋಡಬಹುದು. ಸಾಲದುದಕ್ಕೆ ರೋಗ, ಶೋಕ, ದಾರಿದ್ರ್ಯವೂ ಇರುತ್ತವೆ. ಇವನ್ನೆಲ್ಲಾ ಕಣ್ಣಿಂದ ನೋಡಿ ಭಗವತಿಗೆ ಪ್ರಾರ್ಥನೆಮಾಡಿದೆ: 'ಹೇ ತಾಯೆ, ಒಡನೆಯೇ ನನ್ನ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿಬಿಡು.'

"ನರೇಂದ್ರನ ತಾಪತ್ರಯದ ಕಡೆ ನೋಡು. ತಂದೆ ಸತ್ತುಹೋಗಿದಾನೆ. ಮನೆಯಲ್ಲಿ ತಿನ್ನುವುದಕ್ಕೆ ಏನೂ ಇಲ್ಲ. ಕೆಲಸ ಕಾರ್ಯಗಳಿಗಾಗಿ ಅಷ್ಟೊಂದು ಪ್ರಯತ್ನಮಾಡುತ್ತಿದಾನೆ, ಯಾವುದೂ ಸಿಕ್ಕುತ್ತಿಲ್ಲ. ಆತನ ಮನಸ್ಸು ಎಂಥ ಅವ್ಯವಸ್ಥಿತ ಸ್ಥಿತಿಯಲ್ಲಿದೆ ನೋಡು!

(ಮಾಸ್ಟರಿಗೆ) "ನೀನು ಹಿಂದೆ ಅಡಿಗಡಿಗೆ ದಕ್ಷಿಣೇಶ್ವರಕ್ಕೆ ಬರು

ತ್ತಿದ್ದೆ. ಈಗ ನೀನು ಅಪರೂಪಕ್ಕೆ ಒಮ್ಮೆ ಬರುತ್ತಿದೀಯಲ್ಲ ಏಕೆ? ಬಹುಶಃ ನಿನಗೆ ನಿನ್ನ ಹೆಂಡತಿಯ ಮೇಲೆ ವಿಶೇಷ ರೀತಿಯ ಪ್ರೀತಿ ಉಂಟಾಗಿಬಿಟ್ಟಿರಬೇಕು. ಅದಕ್ಕೇಕೆ ನಿನ್ನನ್ನು ದೂಷಿಸಲಿ? ಯಾವ ದಿಕ್ಕಿಗೆ ನೋಡಿದರೂ ಕಾಮಕಾಂಚನಗಳ ಪ್ರಭಾವವೇ. ಇದಕ್ಕಾಗೇ ನಾನು ಪ್ರಾರ್ಥನೆಮಾಡುತ್ತಿರುವುದು: 'ಹೇ ತಾಯೆ, ಮುಂದೆ ಎಂದಾದರೂ ನಾನು ಹುಟ್ಟಬೇಕಾಗಿ ಬಂದರೆ, ನನ್ನನ್ನು ಎಂದಿಗೂ ಸಂಸಾರಿಯನ್ನಾಗಿ ಮಾಡಬೇಡ.' "

ಬ್ರಾಹ್ಮಣ ಪಂಡಿತ: "ನೀವು ಹಾಗೇಕೆ ಪ್ರಾರ್ಥಿಸಬೇಕು? ಶಾಸ್ತ್ರ ಗೃಹಸ್ಥ ಜೀವನವನ್ನ ಬಹಳವಾಗಿ ಹೊಗಳಿವೆ."

ಶ್ರೀರಾಮಕೃಷ್ಣರು: "ಹೌದು, ಅದೇನೊ ನಿಜ. ಆದರೆ ಬಹಳ ಕಠಿನ. (ಮಾಸ್ಟರಿಗೆ) ನಾವೆಂಥ ತಪ್ಪು ಮಾಡಿಬಿಟ್ಟೆವು! ಅವರೆಲ್ಲ ಹಾಡುತ್ತಿದಾರೆ—ವಿಶೇಷತಃ ನರೇಂದ್ರ. ನಾವೆಲ್ಲರೂ ಕೊಠಡಿಯನ್ನು ಬಿಟ್ಟುಬಂದುಬಿಟ್ಟೆವಲ್ಲ!"

ಈಗ ಘಂಟೆ ಅಪರಾಹ್ನ ನಾಲ್ಕು. ಪರಮಹಂಸರು ಗಾಡಿಯಲ್ಲಿ ಕುಳಿತು ಪಂಡಿತ ಶಶಧರ ಇಳಿದುಕೊಂಡಿದ್ದ ಮನೆಗೆ ಹೋಗುತ್ತಿದಾರೆ. ಗಾಡಿಯನ್ನು ಹತ್ತುವುದೇ ತಡ ಸಮಾಧಿಸ್ಥರಾಗಿಬಿಟ್ಟರು. ಅವರು ಬಹಳ ಕಾಲ ಸಾಧನೆಯನ್ನು ಮಾಡಿದ್ದರಿಂದಲೂ, ಸತತ ಭಾವಾವಿಷ್ಟರಾಗೇ ಇರುವುದರಿಂದಲೂ ಅವರ ಶರೀರ ಬಹಳ ಕೋಮಲವಾಗಿಬಿಟ್ಟಿದೆ. ಅದು ಸಾಮಾನ್ಯ ಶ್ರಮವನ್ನೂ ಸಹಿಸಿಕೊಳ್ಳಲಾರದ ಸ್ಥಿತಿಗಿಳಿದುಬಿಟ್ಟಿದೆ. ಗಾಡಿಯಿಲ್ಲದೆ ಸ್ವಲ್ಪ ದೂರವನ್ನೂ ಅವರ ಕೈಯಲ್ಲಿ ನಡೆಯಲಾಗುತ್ತಿಲ್ಲ.

ಈಗ ಮಳೆಗಾಲ. ಸೋನೆ ಮಳೆ ರಸ್ತೆಯನ್ನು ಕೆಸರು ಮಾಡಿಬಿಟ್ಟಿದೆ. ಆಕಾಶದಲ್ಲಿ ಮೇಘ ಕಟ್ಟಿದೆ. ಭಕ್ತರು ಕಾಲುನಡಗೆಯಲ್ಲಿ ಗಾಡಿಯನ್ನು ಹಿಂಬಾಲಿಸುತ್ತಿದಾರೆ. ಗಾಡಿ ಆ ಮನೆಯ ಹತ್ತಿರಕ್ಕೆ ಬಂದೊಡನೆಯೆ, ಮನೆಯ ಯಜಮಾನ ಮತ್ತು ಆತನ ಮನೆಯವರೆಲ್ಲರೂ ಪರಮಹಂಸರನ್ನು ಎದುರುಗೊಂಡು ಅವರನ್ನು ಈಗ ಮಹಡಿಯಲ್ಲಿರುವ ಬೈಠಕ್‌ಖಾನೆಗೆ ಕರೆದುಕೊಂಡುಹೋಗುತ್ತಿದಾರೆ.

ಪರಮಹಂಸರು ಬೈಠಕ್‌ಖಾನೆಯನ್ನು ಮುಟ್ಟುವುದೇ ತಡ, ಪಂಡಿತ ಶಶಧರ ಮುಂದೆ ಬಂದು ಅವರನ್ನು ಆದರದಿಂದ ಕೊಠಡಿಗೆ ಬರಮಾಡಿಕೊಂಡ. ಈಗ ಅವರಿಗೆ ಶ್ರದ್ಧಾಭಕ್ತಿಗಳಿಂದ ಸಾಷ್ಟಾಂಗಪ್ರಣಾಮ

ಮಾಡಿ ಅವರನ್ನು ಒಂದು ಕಡೆ ಕೂರಿಸುತ್ತಿದಾನೆ. ನರೇಂದ್ರ, ರಾಖಾಲ, ರಾಮ, ಮಾಸ್ಟರ್ ಹಾಜರಾ ಇವರೇ ಮೊದಲಾದ ಭಕ್ತರು ಒಬ್ಬೊಬ್ಬರಾಗಿ ಕೊಠಡಿಯೊಳಕ್ಕೆ ಬಂದು ಪರಮಹಂಸರ ಮಾತುಕತೆಗಳನ್ನೆಲ್ಲಾ ಒಂದನ್ನೂ ತಪ್ಪದೆ ಕೇಳಲೋಸುಗ ಆದಷ್ಟು ಮಟ್ಟಿಗೆ ಅವರ ಹತ್ತಿರ ಹತ್ತಿರ ಸರಿದು ಕುಳಿತುಕೊಳ್ಳುತ್ತಿದಾರೆ.

ಪಂಡಿತ ಶಶಧರ ಯೌವನಾವಸ್ಥೆಯನ್ನು ಕಳೆದು ಪ್ರೌಢಾವಸ್ಥೆಗೆ ಕಾಲಿಟ್ಟಿದಾನೆ. ಆತನ ಮೈ ಹೊಂಬಣ್ಣ. ಕೊರಳಿಗೆ ರುದ್ರಾಕ್ಷಿ ಮಾಲೆ ಹಾಕಿಕೊಂಡಿದಾನೆ.

ಪಂಡಿತನನ್ನು ನೋಡಿದೊಡನೇ ಶ್ರೀರಾಮಕೃಷ್ಣರು ಸಮಾಧಿಸ್ಥರಾಗಿ ಬಿಟ್ಟರು. ಈಗ ಸ್ವಲ್ಪ ಬಾಹ್ಯಪ್ರಜ್ಞೆಯನ್ನು ಹೊಂದಿ ನಗುಮುಖದಿಂದ ಆತನನ್ನು ದಿಟ್ಟಿಸಿ ನೋಡುತ್ತ ನೋಡುತ್ತ ಹೇಳುತ್ತಿದಾರೆ: "ಭೇಷ್! ಭೇಷ್!" ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮತ್ತೆ ಹೇಳುತ್ತಿದಾರೆ: "ಒಳ್ಳೇದು, ನೀನು ಯಾವುದರ ಸಂಬಂಧವಾಗಿ ಉಪನ್ಯಾಸ ಕೊಡುತ್ತಿದೀಯೆ?"

ಶಶಧರ: "ಮಹಾಶಯರೆ, ನಾನು ಶಾಸ್ತ್ರಗಳ ಸಂಬಂಧವಾಗಿ ತಿಳಿಸಲು ಪ್ರಯತ್ನ ಮಾಡುತ್ತಿದೇನೆ."

ಶ್ರೀರಾಮಕೃಷ್ಣರು: "ಕಲಿಯುಗಕ್ಕೆ ನಾರದೀಯ ಭಕ್ತಿ. ಶಾಸ್ತ್ರಗಳಲ್ಲಿ ಕರ್ಮಗಳ ವಿಷಯವಾಗಿ ಹೇಳಿದೆಯಲ್ಲ, ಅವನ್ನು ಮಾಡಲು ಸಮಯವೆಲ್ಲಿ? ಈಗಿನ ಕಾಲದ ಜ್ವರಕ್ಕೆ ದಶಮೂಲಿಕೆಗಳ ಕಷಾಯ ಸರಿಹೋಗದು. ಆ ಕಷಾಯದಿಂದ ರೋಗಿಯನ್ನು ಗುಣಪಡಿಸಲು ಪ್ರಯತ್ನಪಟ್ಟರೆ ಆತ ಬದುಕುವುದೇ ಕಷ್ಟವಾಗಿಬಿಡುತ್ತದೆ. ಈಗಿನ ಕಾಲಕ್ಕೆ 'ಫೀವರ್ ಮಿಕ್ಸ್ಚರ್'. ಕರ್ಮ ಮಾಡುವಂತೆ ಹೇಳಬೇಕಾಗಿದ್ದರೆ, ಅಮುಖ್ಯ ಭಾಗವನ್ನು ಬೇರ್ಪಡಿಸಿ ಮುಖ್ಯವಾದುದರ ಸಂಬಂಧವಾಗಿ ಮಾತ್ರ ತಿಳಿಸಬೇಕು. ನಾನು ಜನರಿಗೆ ಹೇಳುತ್ತೇನೆ: 'ನೀವು ಸಂಧ್ಯಾವಂದನೆಯನ್ನು "ಅಪವಿತ್ರಃ ಪವಿತ್ರೋವಾ" ದಿಂದ ಹಿಡಿದು "ಅಹಂಭೋ ಅಭಿವಾದಯೇ" ಎನ್ನುವವರೆಗೂ ಮಾಡಬೇಕಾದ ಆವಶ್ಯಕತೆಯೇನಿಲ್ಲ. ನೀವು ಗಾಯತ್ರಿಯನ್ನು ಜಪಿಸಿದರೇ ಸಾಕು.' ಕರ್ಮದ ವಿಷಯವಾಗಿ ಸಾಂಗವಾಗಿ ತಿಳಿಸಬೇಕಾಗಿದ್ದರೆ, ಈಶಾನನಂಥ ಒಬ್ಬಿಬ್ಬರು ವ್ಯಕ್ತಿಗಳಿಗೆ ಮಾತ್ರ ತಿಳಿಸು.

"ನೀನು ಸಹಸ್ರ ಉಪನ್ಯಾಸಗಳನ್ನು ಬೇಕಾದರೂ ಕೊಡು,

ಪ್ರಾಪಂಚಿಕರನ್ನ ಒಂದು ಕಿಂಚಿತ್ತೂ ಬದಲಾಯಿಸಲಾರೆ. ಕಲ್ಲಿನ ಗೋಡೆಗೆ ಮೊಳೆ ಹೊಡೆಯಲಾಗುವುದೆ? ಮೊಳೆ ಮೊಂಡಾಗಿಹೋಗುವುದೇ ವಿನಾ ಗೋಡೆಗೆ ಏನೂ ಆಗದು. ಕತ್ತಿಯ ಏಟು ಕೊಟ್ಟರೆ ಮೊಸಳೆಗೆ ಏನಾದರೂ ಗಾಯ ಆಗುವುದೆ? ಸಾಧುವಿನ ಕಮಂಡಲು — ಸೋರೆಕಾಯಿನದು— ನಾಲ್ಕು ಧಾಮಗಳಿಗೂ ಹೋಗಿಬರುತ್ತದೆ. ಆದರೂ ಅದು ಹಿಂದೆ ಯಾವ ರೀತಿಯಾಗಿ ಕಹಿಯಾದ ವಸ್ತುವಾಗಿತ್ತೊ ಹಾಗೇ ಇರುತ್ತದೆ. ನಿನ್ನ ಉಪನ್ಯಾಸ ಪ್ರಾಪಂಚಿಕರಿಗೆ ಹೆಚ್ಚಾಗೇನು ಉಪಕಾರ ಮಾಡುತ್ತಿಲ್ಲ; ಕ್ರಮ ಕ್ರಮೇಣ ಇದು ನಿನಗೆ ಗೊತ್ತಾಗುತ್ತದೆ. ಕರು ಒಮ್ಮೆಗೇ ಎದ್ದು ನಿಂತುಕೊಳ್ಳಲಾರದು. ಆಗಾಗ ಕೆಳಕ್ಕೆ ಬೀಳುತ್ತದೆ, ಮತ್ತೆ ಏಳುತ್ತದೆ. ಅದು ಹಾಗೆ ಮಾಡೇ ತಾನೆ ಎದ್ದು ನಿಲ್ಲಲು ಮತ್ತು ನಡೆಯಲು ಕಲಿತು ಕೊಳ್ಳುತ್ತದೆ.

"ಯಾರು ಭಕ್ತ, ಯಾರು ಪ್ರಾಪಂಚಿಕ ಎಂಬುದು ನಿನಗೆ ಗೊತ್ತಾಗುತ್ತಿಲ್ಲ. ಅದು ನಿನ್ನ ತಪ್ಪೇನಲ್ಲ. ಬಿರುಗಾಳಿ ಆರಂಭವಾದ ಪ್ರಥಮದಲ್ಲಿ ಯಾವುದು ಹುಣಿಸೆ ಮರ, ಯಾವುದು ಮಾವಿನ ಮರ ಎಂಬುದನ್ನ ಗುರುತು ಹಿಡಿಯಲಾಗೋದಿಲ್ಲ.

"ಭಗವಂತನ ಸಾಕ್ಷಾತ್ಕಾರ ಆಗದವರೆಗೆ ಯಾರೂ ಒಮ್ಮೆಗೇ ಕರ್ಮಗಳನ್ನ ತ್ಯಜಿಸಲು ಸಾಧ್ಯವಾಗೋದಿಲ್ಲ. ಸಂಧ್ಯಾದಿ ಕರ್ಮಗಳನ್ನ ಎಲ್ಲಿಯವರೆಗೆ ಮಾಡಬೇಕಾಗುತ್ತದೆ? ಭಗವಂತನ ಹೆಸರನ್ನು ಕೇಳಿದೊಡನೇ ಎಲ್ಲಿಯವರೆಗೆ ಪ್ರೇಮಾಶ್ರು ಸುರಿಯೋದಿಲ್ಲವೊ, ರೋಮಾಂಚ ಆಗೋದಿಲ್ಲವೊ ಅಲ್ಲಿಯವರೆಗೆ. ಒಮ್ಮೆ 'ಓಂ, ರಾಮ!' ಎಂದು ಹೇಳಿದೊಡನೇ ಪ್ರೇಮಾಶ್ರು ಸುರಿಯಲಾರಂಭಿಸಿದರೆ, ಖಂಡಿತವಾಗಿ ತಿಳಿದುಕೊ ನಿನ್ನ ಕರ್ಮ ಮುಗಿದುಹೋಯಿತು ಎಂದು. ಬಳಿಕ ಸಂಧ್ಯಾದಿ ಕರ್ಮಗಳನ್ನ ಮಾಡಬೇಕಾಗಿರುವುದಿಲ್ಲ.

"ಕಾಯಿ ಆದೊಡನೇ ಹೂವು ಉದುರಿಹೋಗುತ್ತದೆ. ಭಕ್ತಿಯೇ ಕಾಯಿ, ಕರ್ಮವೇ ಹೂವು. ಸೊಸೆ ಗರ್ಭಿಣಿಯಾದರೆ ಆಕೆ ಹೆಚ್ಚಾಗಿ ಕೆಲಸ ಮಾಡಲಾರಳು. ಅತ್ತೆ ಆಕೆಯ ಕೆಲಸವನ್ನ ದಿನ ದಿನಕ್ಕೂ ಕಡಮೆ ಮಾಡಿಕೊಡುತ್ತಾಳೆ. ಒಂಬತ್ತು ತಿಂಗಳು ತುಂಬಿತು ಎಂದರೆ ಆಕೆಯನ್ನು ಯಾವ ಕೆಲಸ ಮಾಡಲೂ ಬಿಟ್ಟುಕೊಡುವುದಿಲ್ಲ. ಮಗು ಹುಟ್ಟಿದನಂತರ ಅದನ್ನು ಎತ್ತಿಕೊಂಡು ಆಡಿಸುವುದೇ ಆಕೆಯ ಕೆಲಸ. ಬೇರೆ ಯಾವ

ಕೆಲಸವನ್ನೂ ಮಾಡಬೇಕಾಗಿರುವುದಿಲ್ಲ. ಸಂಧ್ಯೆ ಗಾಯತ್ರಿಯಲ್ಲಿಯೂ, ಗಾಯತ್ರಿ ಪ್ರಣವದಲ್ಲಿಯೂ, ಪ್ರಣವ ಸಮಾಧಿಯಲ್ಲಿಯೂ ಲಯ ಹೊಂದುತ್ತವೆ. ಇದು ಗಂಟೆಯ ಶಬ್ದದ ಹಾಗೆ: ಟ–ಅ–ಮ್. ಯೋಗಿ ನಾದಬ್ರಹ್ಮನನ್ನು ಅನುಸರಿಸಿ ಪರಬ್ರಹ್ಮನಲ್ಲಿ ಲಯವಾಗುತ್ತಾನೆ. ಸಮಾಧಿಯಲ್ಲಿ ಆತನ ಸಂಧ್ಯಾದಿ ಕರ್ಮಗಳು ಲಯವಾಗಿಬಿಡುತ್ತವೆ. ಈ ರೀತಿಯಾಗಿ ಜ್ಞಾನಿಗಳ ಕರ್ಮ ಕೊನೆಗಾಣುತ್ತವೆ.''

ಪರಮಹಂಸರು ಸಮಾಧಿಯ ಸಂಬಂಧವಾಗಿ ಮಾತನಾಡುತ್ತ ಮಾತನಾಡುತ್ತ ತಾವೇ ಆ ಸ್ಥಿತಿಗೆ ಹೋಗಿಬಿಟ್ಟರು. ಅವರ ಮುಖ ಸ್ವರ್ಗ-ಸದೃಶ ಜ್ಯೋತಿಯನ್ನು ಚೆಲ್ಲಲಾರಂಭಿಸಿತು. ಬಾಹ್ಯಜ್ಞಾನಶೂನ್ಯರಾಗಿಬಿಟ್ಟಿದಾರೆ. ಬಾಯಿಂದ ಒಂದು ಮಾತೂ ಹೊರಡುತ್ತಿಲ್ಲ. ಕಣ್ಣು ಸ್ಥಿರವಾಗಿಬಿಟ್ಟಿವೆ. ಆತ್ಮೈಕ್ಯರಾಗಿಬಿಟ್ಟಿದಾರೆ. ಬಹಳ ಹೊತ್ತು ಆ ಅವಸ್ಥೆಯಲ್ಲೇ ಇದ್ದನಂತರ ಈಗ ಪ್ರಕೃತಿಸ್ಥರಾಗುತ್ತ ಬಾಲಕನ ಹಾಗೆ ಹೇಳುತ್ತಿದಾರೆ: ''ನೀರು ಕುಡಿಯಬೇಕು.'' ಸಮಾಧಿಯನ್ನು ಹೊಂದಿದನಂತರ ಯಾವಾಗ ಅವರು ನೀರು ಕುಡಿಯಲಿಚ್ಛಿಸುತ್ತಿದ್ದರೊ, ಆಗ ಭಕ್ತರಿಗೆ ತಿಳಿದು ಬರುತ್ತಿತ್ತು, ಇನ್ನು ಕ್ರಮೇಣ ಅವರು ಪ್ರಕೃತಿಸ್ಥರಾಗುವರು ಎಂದು.

ಪರಮಹಂಸರು ಇನ್ನೂ ಭಾವಸ್ಥರಾಗೇ ಹೇಳುತ್ತಿದಾರೆ: ''ಹೇ ತಾಯೆ, ಅಂದು ನೀನು ನನಗೆ ಈಶ್ವರಚಂದ್ರವಿದ್ಯಾಸಾಗರನನ್ನು ಸಂಧಿಸುವಂತೆ ಮಾಡಿದೆ. ಆಗ ಮತ್ತೆ ನಾನು ನಿನ್ನನ್ನು ಕೇಳಿಕೊಂಡಿದ್ದೆ, ಇನ್ನೊಬ್ಬ ಪಂಡಿತನನ್ನು ಸಂಧಿಸುವಂತೆ ಏರ್ಪಾಡುಮಾಡು ಎಂದು. ಅದಕ್ಕಾಗೇ ನೀನು ಈಗ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿದೀಯೆ.''

ಪಂಡಿತ ಶಶಧರನ ಕಡೆಗೆ ನೋಡಿ ಹೇಳುತ್ತಿದಾರೆ: ''ಏನಯ್ಯ! ನೀನು ಇನ್ನೂ ಸ್ವಲ್ಪ ಬಲಾಢ್ಯನಾಗು. ಇನ್ನೂ ಸ್ವಲ್ಪ ಕಾಲ ಸಾಧನೆ ಭಜನೆ ಮಾಡು. ನೀನು ಮರದ ಬುಡಕ್ಕೆ ಕಾಲು ಹಾಕುವುದೇ ತಡ, ಆಗಲೇ ಹಣ್ಣಿನ ಗೊಂಚಲ ಕಡೆ ಕೈ ನೀಡುತ್ತಿರುವೆಯಲ್ಲ! ಆದರೆ ನೀನು ಜನರ ಶ್ರೇಯಸ್ಸಿಗಾಗಿ ಇವನ್ನೆಲ್ಲಾ ಮಾಡುತ್ತಿದೀಯೆ.'' ಹೀಗೆಂದು ಹೇಳಿ ತಮ್ಮ ತಲೆಯನ್ನು ತಗ್ಗಿಸಿ ಶಶಧರನಿಗೆ ನಮಸ್ಕಾರ ಮಾಡುತ್ತಿದಾರೆ.

ಶ್ರೀರಾಮಕೃಷ್ಣರು ಮತ್ತೆ ಹೇಳುತ್ತಿದಾರೆ: ''ಮೊದಲು ನಿನ್ನ ವಿಷಯವಾಗಿ ಕೇಳಿದ್ದಾಗ ವಿಚಾರಿಸಿದೆ, ನೀನು ಒಬ್ಬ ಬರೀ ಪಂಡಿತನೊ

ಅಥವಾ ವಿವೇಕ ವೈರಾಗ್ಯವೂ ಇರುವುವೊ ಎಂದು. ಸದಸತ್ ವಿವೇಕ ವಿಲ್ಲದ ಪಂಡಿತ ಪಂಡಿತನೇ ಅಲ್ಲ.

"ಭಗವಂತನಿಂದ ಆದೇಶ ದೊರೆತಿದ್ದರೆ, ಆಗ ಲೋಕಶಿಕ್ಷಣ ತಪ್ಪಿನ ಕಾರ್ಯವೇನಲ್ಲ. ಆದೇಶ ಪಡೆದು ಲೋಕಶಿಕ್ಷಣ ಮಾಡಿದರೆ, ಆತನನ್ನು ಯಾರೂ ಸೋಲಿಸಲಾರರು. ವಾಗ್ದೇವಿಯ ಒಂದು ಕಿರಣ ಮಾತ್ರ ಬಿದ್ದುದೇ ಆದರೆ, ವ್ಯಕ್ತಿಗೆ ಅಂಥ ಶಕ್ತಿ ಬಂದುಬಿಡುತ್ತದೆ, ಆತನೆದುರು ದೊಡ್ಡ ದೊಡ್ಡ ಪಂಡಿತರೆಲ್ಲ ಎರೆಹುಳುವಿನಂತಾಗಿಬಿಡುತ್ತಾರೆ.

"ದೀಪ ಉರಿಯುತ್ತಿದ್ದರೆ ದೀಪದ ಚಿಟ್ಟೆ ಗುಂಪುಗುಂಪಾಗಿ ತಾವೇ ಬರುತ್ತವೆ — ಆಹ್ವಾನವೀಯಬೇಕಾಗಿರೋದಿಲ್ಲ. ಅದೇ ರೀತಿಯಾಗಿ ಯಾರಿಗೆ ಆದೇಶ ದೊರೆತಿದೆಯೊ ಆತ ಜನರನ್ನು ಕರೆಯಬೇಕಾಗಿರೋದಿಲ್ಲ. ಇಂಥ ಸಮಯದಲ್ಲಿ ಉಪನ್ಯಾಸ ಎಂದು ಪ್ರಕಟಣೆ ಹೊರಡಿಸಬೇಕಾಗಿರೋದಿಲ್ಲ. ಆತನಲ್ಲಿ ಅಂಥ ಅತಿಮಾನುಷ ಆಕರ್ಷಕ ಶಕ್ತಿ, ಜನರು ತಾವು ತಾವಾಗೇ ಬಂದು ಆತನನ್ನು ಮುತ್ತುತ್ತಾರೆ. ಆಗ ರಾಜ ಮಹಾರಾಜರೂ, ಬಾಬುಗಳೂ ಎಲ್ಲರೂ ಗುಂಪುಗುಂಪಾಗಿ ಬರಲಾರಂಭಿಸುತ್ತಾರೆ. ಬಂದು ಕೇಳಲಾರಂಭಿಸುತ್ತಾರೆ: 'ತಾವು ಏನನ್ನು ಸ್ವೀಕರಿಸಲು ಸಾಧ್ಯ? ಮಾವಿನ ಹಣ್ಣು, ಸಂದೇಶ, ಹಣ, ಶಾಲು ಇವನ್ನೆಲ್ಲಾ ತಂದಿದೇವೆ. ತಾವು ಯಾವುದನ್ನು ಕೃಪೆಯಿಟ್ಟು ಸ್ವೀಕರಿಸಬಲ್ಲಿರಿ?' ನಾನು ಅಂಥವರಿಗೆಲ್ಲ ಉತ್ತರ ಕೊಡುತ್ತೇನೆ: 'ದಯವಿಟ್ಟು ನೀವು ಇಲ್ಲಿಂದ ಹೊರಡಿ. ನನಗೆ ಅವು ಯಾವೂ ಬೇಕಾಗಿಲ್ಲ. ನನಗೇನೂ ಬೇಕಾಗಿಲ್ಲ.'

"ಸೂಜಿಗಲ್ಲು ಕಬ್ಬಿಣಕ್ಕೆ ಹೇಳುವುದೆ: 'ನನ್ನ ಹತ್ತಿರಕ್ಕೆ ಬಾ' ಎಂದು? ಅದು ಹಾಗೇನೂ ಮಾಡಬೇಕಾಗಿಲ್ಲ. ಕಬ್ಬಿಣ ತಾನಾಗೇ ಸೂಜಿಗಲ್ಲಿನ ಆಕರ್ಷಣದಿಂದ ಅದರ ಕಡೆ ಹಾರಿಬರುತ್ತದೆ.

"ಈ ವಿಧದ ವ್ಯಕ್ತಿ ಪಂಡಿತನಾಗಿಲ್ಲದಿರಬಹುದು. ಹಾಗೆಂದು ಭಾವಿಸಿಕೊಳ್ಳಬೇಡ ಆತನಿಗೆ ಜ್ಞಾನಾಭಾವವಿರಬಹುದು ಎಂಬುದಾಗಿ. ಪುಸ್ತಕ ಓದಿ ಜ್ಞಾನಿಯಾಗಲು ಸಾಧ್ಯವೇ? ಯಾರಿಗೆ ಭಗವಂತನಿಂದ ಆದೇಶ ದೊರೆತಿದೆಯೊ ಆತನಿಗೆ ಜ್ಞಾನಾಭಾವವಿರದು. ಆ ಜ್ಞಾನ ಭಗವಂತನಿಂದ ಬರುತ್ತದೆ—ಎಂದಿಗೂ ಬರಿದಾಗದು. ಕಾಮಾರಪುಕುರಿನಲ್ಲಿ ಧಾನ್ಯ ಅಳೆಯುವಾಗ ಒಬ್ಬ ಅಳೆಯುತ್ತಾ ಇರುತ್ತಾನೆ, ಇನ್ನೊಬ್ಬ ರಾಶಿಯನ್ನು ತಳ್ಳಿಕೊಡುತ್ತಾ ಇರುತ್ತಾನೆ. ಅದೇ ರೀತಿಯಾಗಿ ಯಾರಿಗೆ ಆದೇಶ

ದೊರೆಯುತ್ತದೆಯೊ ಆತ ಎಷ್ಟೇ ಲೋಕಶಿಕ್ಷಣವನ್ನು ಮಾಡುತ್ತಿದ್ದರೂ ಭಗವತಿ ಹಿಂದಿನಿಂದ ಜ್ಞಾನರಾಶಿಯನ್ನ ತಳ್ಳಿಕೊಡುತ್ತಲೇ ಇರುತ್ತಾಳೆ. ಆ ಜ್ಞಾನ ಎಂದಿಗೂ ಮುಗಿದುಹೋಗದು.

"ಭಗವತಿಯ ಕಟಾಕ್ಷ ಒಮ್ಮೆ ದೊರೆತುದೇ ಆದರೆ, ಬಳಿಕ ಜ್ಞಾನಾಭಾವವಿರುವುದೆ? ಇದಕ್ಕಾಗೇ ನಿನ್ನನ್ನು ಕೇಳುತ್ತಿದೇನೆ, ನಿನಗೇನಾದರೂ ಆದೇಶ ದೊರೆತಿದೆಯೆ ಎಂದು."

ಹಾಜರಾ: "ಹೌದು, ಖಂಡಿತವಾಗಿ ದೊರೆತಿರಬೇಕು. (ಶಶಧರನಿಗೆ) ಏನು ಮಹಾಶಯರೆ, ನಾನು ಹೇಳುವುದು ಸರಿ ತಾನೆ?"

ಶಶಧರ: "ಆದೇಶವೇ? ಇಲ್ಲ. ಅಂಥದೇನೂ ದೊರೆತಿಲ್ಲ."

ಮನೆಯ ಯಜಮಾನ: "ಆದೇಶ ದೊರೆತಿಲ್ಲದಿರುವುದೇನೊ ನಿಜ, ಆದರೆ ಕರ್ತವ್ಯದೃಷ್ಟಿಯಿಂದ ಉಪನ್ಯಾಸ ಕೊಡುತ್ತಿದಾನೆ."

ಶ್ರೀರಾಮಕೃಷ್ಣರು: "ಯಾರಿಗೆ ಆದೇಶ ದೊರೆತಿಲ್ಲವೊ, ಆತನ ಉಪನ್ಯಾಸ ಏನು ಉಪಕಾರ ಮಾಡೀತು? ಒಮ್ಮೆ ಒಬ್ಬ ಬ್ರಾಹ್ಮಭಕ್ತ ಉಪನ್ಯಾಸ ಕೊಡುತ್ತ ಕೊಡುತ್ತ ಹೇಳಲಾರಂಭಿಸಿದ: 'ಸೋದರ ಸೋದರಿಯರಾ, ನಾನು ಎಷ್ಟು ಮದ್ಯ ಕುಡಿಯುತ್ತಿದ್ದೆ!' ಇತ್ಯಾದಿ. ಇದನ್ನು ಕೇಳಿ ಸಭಿಕರು ತಮ್ಮೊಳಗೆ ತಾವೇ ಮಾತನಾಡಿಕೊಳ್ಳಲಾರಂಭಿಸಿದರು: 'ಅಯೋಗ್ಯ! ಏನು ಹೇಳುತ್ತಿದಾನೆ ನೋಡಿ? ಮದ್ಯ ಕುಡಿಯುತ್ತಿದ್ದನಂತೆ!' ಆತನ ಈ ಮಾತು ಆತನಿಗೆ ಖಂಡನೆಯನ್ನು ತಂದುಕೊಟ್ಟವು. ಇದು ಎತ್ತಿ ತೋರಿಸುತ್ತದೆ, ಮನುಷ್ಯ ಸತ್ಪುರುಷನಾಗಿಲ್ಲದಿದ್ದರೆ, ಆತನ ಉಪನ್ಯಾಸ ಯಾವ ಉಪಯೋಗಕ್ಕೂ ಬಾರವು ಎಂಬುದನ್ನ.

"ಬರಿಶಾಲದ ಒಬ್ಬ ನ್ಯಾಯಾಧೀಶ ಒಮ್ಮೆ ನನಗೆ ಹೇಳಿದ: 'ಮಹಾಶಯರೆ, ನೀವು ಪ್ರಚಾರಮಾಡಲು ಆರಂಭಿಸಿಬಿಡಿ. ನಾನೂ ಸೊಂಟಕಟ್ಟಿ ನಿಲ್ಲುತ್ತೇನೆ.' ನಾನು ಆತನಿಗೆ ತಿಳಿಸಿದೆ, ಜನ ಹೇಗೆ ಹಲಧಾರಪುಕುರಿನ ಕೆರೆ ಏರಿಯನ್ನು ಕುಲಗೆಡಿಸುತ್ತಿದ್ದರು, ಕೊನೆಗೆ ಹೇಗೆ ಅದು ಸರ್ಕಾರದ ಆಜ್ಞೆಯನ್ನು ಹೊತ್ತ ಜವಾನನ ಎಚ್ಚರಿಕೆಯ ಚೀಟಿಯಿಂದ ನಿಂತುಹೋಯಿತು ಎಂಬುದರ ವಿಷಯವಾಗಿ.

"ಇದಕ್ಕಾಗೇ ನಾನು ಹೇಳುವುದು, ಕೆಲಸಕ್ಕೆ ಬಾರದವರೆಲ್ಲಾ ಉಪನ್ಯಾಸ ಕೊಟ್ಟರೆ, ಅದು ಯಾವ ಪ್ರಯೋಜನಕ್ಕೂ ಬಾರದು ಎಂದು. ಭಗವಂತನಿಂದ ಬಂದ ಲಾಂಛನ ಹತ್ತಿರ ಇದ್ದರೆ ತಾನೆ ಜನ ಹೇಳಿದ ಹಾಗೆ

ಕೇಳುತ್ತಾರೆ. ಆತನಿಂದ ಆದೇಶವನ್ನು ಪಡೆದುಕೊಳ್ಳದಿದ್ದರೆ ಲೋಕ-ಶಿಕ್ಷಣ ಸಾಧ್ಯವಾಗದು. ಲೋಕಶಿಕ್ಷಣ ಮಾಡತಕ್ಕವನಿಗೆ ದೊಡ್ಡ ಶಕ್ತಿ ಬೇಕು. ಕಲ್ಕತ್ತದಲ್ಲಿ ಅನೇಕ ಹನುಮಾನ್‌ಪುರಿ[1]ಗಳಿದಾರೆ—ಅವರೊಡನೆ ನೀನು ಕುಸ್ತಿಯಾಡಬೇಕಾಗಿದೆ. (ಅಲ್ಲಿ ನೆರೆದಿದ್ದ ಜನರನ್ನು ತೋರಿಸಿ) ಇವರೆಲ್ಲ ಕೇವಲ ಆಡು ಕುರಿಗಳು!

"ಚೈತನ್ಯದೇವ ಒಬ್ಬ ಅವತಾರಪುರುಷ. ಆತ ಏನು ಮಾಡಿ ಹೋದನೊ, ಅದರಲ್ಲಿ ಈಗ ಏನು ತಾನೆ ಉಳಿದುಕೊಂಡಿದೆ ಹೇಳು ನೋಡೋಣ? ಅಂಥಾದ್ದರಲ್ಲಿ ಯಾರಿಗೆ ಆದೇಶವೇ ದೊರೆತಿರೋದಿಲ್ಲವೊ ಆತನ ಉಪನ್ಯಾಸಗಳಿಂದ ಯಾವ ಉಪಕಾರ ತಾನೆ ಆದೀತು? ಗಿ

"ಇದಕ್ಕಾಗೇ ನಾನು ಹೇಳುವುದು, ಭಗವಂತನ ಪಾದಪದ್ಮಗಳ. ಮಗ್ನನಾಗು ಎಂದು."

ಹೀಗೆಂದು ಹೇಳಿ ಪರಮಹಂಸರು ಪ್ರೇಮೋನ್ಮತ್ತರಾಗಿ ಹಾಡುತ್ತಿದಾರೆ

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ... (ಉ. ೬೭)

ಶ್ರೀರಾಮಕೃಷ್ಣರು ಮಾತು ಮುಂದುವರಿಸುತ್ತ ಹೇಳುತ್ತಿದಾರೆ: "ಈ ಸಾಗರದಲ್ಲಿ ಮುಳುಗಿದರೆ ಸಾವು ಉಂಟಾಗುವುದಿಲ್ಲ. ಇದು ಅಮೃತ ಸಾಗರ. ಒಮ್ಮೆ ನಾನು ನರೇಂದ್ರನಿಗೆ ಹೇಳಿದೆ: 'ಭಗವಂತ ಆನಂದರಸ ಸಾಗರ. ನೀನು ಆ ಸಮುದ್ರದಲ್ಲಿ ಮುಳುಗುಹಾಕುತ್ತೀಯೊ ಇಲ್ಲವೊ ಹೇಳು ನೋಡೋಣ. ಒಳ್ಳೇದು ಭಾವಿಸಿಕೊ, ಇಲ್ಲೊಂದು ಬಟ್ಟಲು ಪಾನಕ ಇದೆ, ನೀನು ಒಂದು ನೊಣ ಆಗಿದೀಯೆ ಅಂತ. ಎಲ್ಲಿ ಕುಳಿತು ಪಾನಕ ಕುಡಿಯುತ್ತೀಯೆ ಹೇಳು ನೋಡೋಣ?' ನರೇಂದ್ರ ಉತ್ತರವಿತ್ತ: 'ಬಟ್ಟಲ ಅಂಚಿನಲ್ಲಿ ಕುಳಿತು ಕತ್ತನ್ನು ಚಾಚಿ ಕುಡಿಯುತ್ತೇನೆ; ಹಾಗೆ ಮಾಡದೆ ಇನ್ನೂ ಒಳಕ್ಕೆ ಹೋದರೆ ನಿಸ್ಸಂದೇಹವಾಗಿ ಮುಳುಗಿಹೋಗಿಬಿಡುತ್ತೇನೆ.' ಆಗ ನಾನು ಹೇಳಿದೆ: 'ಆದರೆ ನೋಡು ಮಗು, ಇದು ಸಚ್ಚಿದಾನಂದ ಸಾಗರ. ಇದರಲ್ಲಿ ಮರಣದ ಭಯ ಎಂಬತಕ್ಕದ್ದೇ ಇಲ್ಲ. ಇದು ಅಮೃತ ಸಾಗರ. ಅಜ್ಞಾನಿಗಳು ಮಾತ್ರವೇ ಹೇಳುತ್ತಾರೆ, ಭಕ್ತಿ ಪ್ರೇಮಗಳನ್ನ ಅತಿಯಾಗಿ ಹೆಚ್ಚಿಸಿಕೊಳ್ಳಬಾರದು ಎಂದು. ಭಗವಂತನ ಪ್ರೇಮದಲ್ಲಿ "ಅತಿ" ಎಂಬುದು ಉಂಟೇ?'

1. ಒಬ್ಬ ಪ್ರಖ್ಯಾತ ಜಟ್ಟಿ.

(ಶಶಧರನಿಗೆ) “ಇದಕ್ಕಾಗೇ ನಾನು ನಿನಗೆ ಹೇಳುವುದು, ಸಚ್ಚಿದಾನಂದ ಸಾಗರದಲ್ಲಿ ಮುಳುಗು ಎಂದು. ಭಗವಂತನ ಸಾಕ್ಷಾತ್ಕಾರ ದೊರೆತುಬಿಟ್ಟಿದ್ದೇ ಆದರೆ, ಇನ್ನು ಯೋಚನೆ ಏಕೆ? ಆಗ ಆದೇಶವೂ ದೊರೆಯುತ್ತದೆ, ಲೋಕಶಿಕ್ಷಣವೂ ಆಗುತ್ತದೆ.

“ಅಮೃತ ಸಾಗರಕ್ಕೆ ಅನೇಕ ಮಾರ್ಗ. ಯಾವ ರೀತಿಯಿಂದಲಾದರೂ ಸರಿಯೆ ಆ ಸಾಗರಕ್ಕೆ ಹೋಗಿ ಬೀಳುವುದೇ ಬೇಕಾಗಿರುವುದು. ಭಾವಿಸಿಕೊ ಇಲ್ಲೊಂದು ಅಮೃತಕುಂಡ ಇದೆ ಎಂದು. ಯಾವ ರೀತಿಯಲ್ಲಾದರೂ ಸರಿಯೆ ಅದರ ಅಮೃತ ಒಂದು ಕಿಂಚಿತ್ ಬಾಯಿಗೆ ಬೀಳುವುದೇ ತಡ ಅಮರನಾಗಿಬಿಡುತ್ತೀಯೆ. ನೀನೇ ಅದರೊಳಕ್ಕೆ ನೆಗೆದಾದರೂ ಬೀಳು, ಅಥವಾ ಹಂತ ಹಂತವಾಗಿ ಇಳಿದು ಹೋಗಿಯಾದರೂ ಕುಡಿ, ಅಥವಾ ಯಾರಾದರೂ ನಿನ್ನನ್ನು ತಳ್ಳಿ ಅದರೊಳಕ್ಕೆ ಬೀಳಿಸಿಬಿಟ್ಟರೂ ಸರಿಯೆ ಫಲ ಮಾತ್ರ ಂದೇ. ಕಿಂಚಿತ್ ಅಮೃತವನ್ನ ಸವಿದರೇ ಅಮರನಾಗಿಬಿಡುತ್ತೀಯೆ.

“ಭಗವಂತನ ಸಾಕ್ಷಾತ್ಕಾರಕ್ಕೆ ಅನಂತ ಮಾರ್ಗ. ಅವುಗಳಲ್ಲಿ ಜ್ಞಾನ, ಭಕ್ತಿ, ಕರ್ಮ ಮಾರ್ಗಗಳಿವೆ. ಯಾವ ಮಾರ್ಗವನ್ನಾದರೂ ಅನುಸರಿಸು, ನಿಜವಾದ ಆಕಾಂಕ್ಷೆ ಇದ್ದರೆ, ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಸ್ಥೂಲವಾಗಿ ಹೇಳುವುದಾದರೆ ಯೋಗಗಳಲ್ಲಿ ಮೂರು ವಿಧ—ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ.

“ಜ್ಞಾನಯೋಗ—ಜ್ಞಾನಿ ಬ್ರಹ್ಮಜ್ಞಾನ ಪಡೆದುಕೊಳ್ಳಲು ಹಾತೊರೆಯುತ್ತಾನೆ. ‘ನೇತಿ, ನೇತಿ’, ‘ಇದಲ್ಲ, ಇದಲ್ಲ’ ಎಂಬ ವಿಚಾರದಲ್ಲಿ ತೊಡಗುತ್ತಾನೆ. ಸದಸದ್ವಿಚಾರದಲ್ಲಿ ತೊಡಗುತ್ತಾನೆ. ವಿಚಾರದ ಅಂತ್ಯವನ್ನು ಮುಟ್ಟಿದೊಡನೇ ಸಮಾಧಿಯುಂಟಾಗಿಬಿಡುತ್ತದೆ; ಬ್ರಹ್ಮಜ್ಞಾನ ದೊರೆತುಬಿಡುತ್ತದೆ.

“ಕರ್ಮಯೋಗ—ಕರ್ಮದ ಮೂಲಕ ಭಗವಂತನಲ್ಲಿ ಮನಸ್ಸನ್ನಿಡುವುದು. ನೀನು ಶಿಕ್ಷಣ ಕೊಡುತ್ತಿದೀಯಲ್ಲ ಅದೇ. ಅನಾಸಕ್ತಿಯಿಂದ ಪ್ರಾಣಾಯಾಮ, ಧ್ಯಾನ ಧಾರಣಾದಿಗಳನ್ನ ಮಾಡಿದರೇ, ಅದು ಕರ್ಮಯೋಗವಾಗಿಬಿಡುತ್ತದೆ. ಸಂಸಾರಿ ಅನಾಸಕ್ತನಾಗಿ ಭಗವಂತನಿಗೆ ಫಲ ಸಮರ್ಪಣೆ ಮಾಡಿ ಆತನಲ್ಲಿ ಭಕ್ತಿಯಿಟ್ಟು ಸಾಂಸಾರಿಕ ಕರ್ಮಗಳನ್ನ ಮಾಡಿದ್ದೇ ಆದರೆ, ಅದೂ ಕರ್ಮಯೋಗವಾಗಿಬಿಡುತ್ತದೆ. ಭಗವಂತನಿಗೆ

ಫಲಸಮರ್ಪಣೆ ಮಾಡಿ ಪೂಜೆ, ಜಪತಪಾದಿ ಕರ್ಮ ಮಾಡುವುದಕ್ಕೂ ಕರ್ಮಯೋಗ ಅಂತ ಹೆಸರು. ಭಗವಂತನ ಸಾಕ್ಷಾತ್ಕಾರವೇ ಕರ್ಮ-ಯೋಗದ ಲಕ್ಷ್ಯ.

"ಭಕ್ತಿಯೋಗ–ಭಗವಂತನ ನಾಮಗುಣಕೀರ್ತನೆಗಳನ್ನು ಮಾಡುತ್ತ ಆತನಲ್ಲಿ ಮನಸ್ಸನ್ನಿಡುವುದು. ಕಲಿಯುಗಕ್ಕೆ ಭಕ್ತಿಯೋಗ ಸುಲಭವಾದ್ದು. ಭಕ್ತಿಯೋಗವೇ ಯುಗಧರ್ಮ.

"ಕರ್ಮಯೋಗ ಬಹಳ ಕಠಿನ. ಮೊದಲನೆಯದಾಗಿ, ಆಗಲೇ ತಿಳಿಸಿದೇನೆ, ಸಮಯ ಎಲ್ಲಿ? ಶಾಸ್ತ್ರ ಏನೇನು ಕರ್ಮ ಮಾಡಬೇಕು ಅಂತ ಹೇಳುತ್ತದೆಯೊ ಅದಕ್ಕೆ ಸಮಯ ಎಲ್ಲಿ? ಕಲಿಯುಗದಲ್ಲಿ ಆಯುಸ್ಸು ಕಡಮೆ. ಇವೂ ಅಲ್ಲದೆ ಅನಾಸಕ್ತಿಯಿಂದ, ಅಂದರೆ ಫಲಕಾಮನೆಯನ್ನು ಮಾಡದೆ ಕರ್ಮ ಮಾಡುವುದು ಬಹಳ ಕಠಿನ. ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳದೆ ನಿಜವಾಗಿ ಅನಾಸಕ್ತನಾಗಲು ಆಗೋದಿಲ್ಲ. ಬಹುಶಃ ನಿನಗೆ ಗೊತ್ತಾಗದೆ ಇರಬಹುದು, ಆದರೆ ಎಲ್ಲಿಂದಲೊ ಆಸಕ್ತಿ ಬಂದು ಹೃದಯ ವನ್ನು ಹೊಕ್ಕುಬಿಡುತ್ತದೆ.

"ಜ್ಞಾನಯೋಗವೂ ಈ ಯುಗಕ್ಕೆ ಬಹಳ ಕಠಿನ. ಮೊದಲನೆಯ ದಾಗಿ ಜೀವ ಅನ್ನಗತಪ್ರಾಣ. ಎರಡನೆಯದಾಗಿ ಆಯುಸ್ಸು ಕಡಮೆ. ಮೂರನೆಯದಾಗಿ ದೇಹಬುದ್ಧಿ ಏನು ಮಾಡಿದರೂ ಹೋಗಲೊಲ್ಲದು. ದೇಹ ಬುದ್ಧಿ ಹೋಗದ ಹೊರತು ಬ್ರಹ್ಮಜ್ಞಾನ ದೊರೆಯುವ ಹಾಗೇ ಇಲ್ಲ. ಜ್ಞಾನಿ ಹೇಳುತ್ತಾನೆ: 'ನಾನೇ ಆ ಬ್ರಹ್ಮ; ನಾನು ಶರೀರವಲ್ಲ. ನಾನು ಹಸಿವು, ಬಾಯಾರಿಕೆ, ರೋಗ, ಶೋಕ, ಸುಖ, ದುಃಖ ಇವುಗಳೆಲ್ಲದರಿಂದಲೂ ಅತೀತ.' ರೋಗ, ಶೋಕ, ಸುಖ, ದುಃಖಗಳ ಬೋಧೆ ಇದ್ದುದೇ ಆದರೆ, ನೀನು ಜ್ಞಾನಿಯಾಗುವ ಬಗೆ ಹೇಗೆ? ಒಂದು ಕಡೆ ಕೈಗೆ ಮುಳ್ಳು ಚುಚ್ಚಿ ಕೊಂಡು ರಕ್ತ ಪ್ರವಾಹದೋಪಾದಿಯಲ್ಲಿ ಹರಿಯುತ್ತ ಬಹಳವಾಗಿ ನೋವು ಕೊಡುತ್ತಿರಬಹುದು; ಆದರೂ ಜ್ಞಾನಿಯಾಗಿದ್ದ ಪಕ್ಷದಲ್ಲಿ ನೀನು ಹೇಳ ಬೇಕಾಗುತ್ತದೆ: 'ಎಲ್ಲಿ, ನನ್ನ ಕೈಗೇನು ಮುಳ್ಳು ಚುಚ್ಚಿಕೊಂಡಿಲ್ಲವಲ್ಲ. ನನಗೇನೂ ಆಗಿಲ್ಲವಲ್ಲ.'

"ಆದ್ದರಿಂದ ಈ ಯುಗಕ್ಕೆ ಭಕ್ತಿಯೋಗ. ಇದರಿಂದ ಬೇರೆ ಬೇರೆ ಮಾರ್ಗಗಳಿಗಿಂತ ಬಹಳ ಸುಲಭವಾಗಿ ಭಗವಂತನನ್ನು ಸಮೀಪಿಸಬಹುದು. ಜ್ಞಾನಯೋಗ, ಕರ್ಮಯೋಗಗಳ ಮೂಲಕವಾಗಿಯೂ ಅಥವಾ ಬೇರೆ

ಬೇರೆ ಮಾರ್ಗಗಳ ಮೂಲಕವಾಗಿಯೂ ಭಗವಂತನನ್ನು ಮುಟ್ಟಬಹುದು, ಆದರೆ ಅವೆಲ್ಲಾ ಬಹಳ ಕಠಿನ.

"ಭಕ್ತಿಯೋಗ ಯುಗಧರ್ಮ. ಆದರೆ ಇದರ ಅರ್ಥ ಇದಲ್ಲ— ಭಕ್ತ ಒಂದು ಗುರಿಯನ್ನು ಮುಟ್ಟುತ್ತಾನೆ; ಜ್ಞಾನಿ, ಕರ್ಮಿಗಳು ಇನ್ನೊಂದು ಗುರಿಯನ್ನು ಮುಟ್ಟುತ್ತಾರೆ ಅಂತಲೇನಲ್ಲ. ಇದರ ಅರ್ಥ, ಯಾರಿಗೆ ಬ್ರಹ್ಮಜ್ಞಾನ ಬೇಕೊ ಆತ ಭಕ್ತಿ ಮಾರ್ಗವನ್ನು ಅನುಸರಿಸಿದರೂ ಆತನಿಗೆ ಅದೇ ಬ್ರಹ್ಮಜ್ಞಾನ ದೊರೆಯುತ್ತದೆ ಎಂಬುದಾಗಿ. ಭಕ್ತವತ್ಸಲನಾದ ಭಗವಂತ ಇಚ್ಛೆಪಟ್ಟದ್ದೇ ಆದರೆ ಬ್ರಹ್ಮಜ್ಞಾನವನ್ನ ಕೊಡಬಲ್ಲ.

"ಭಕ್ತನಿಗೆ ಭಗವಂತನ ಸಾಕಾರ ರೂಪವನ್ನು ನೋಡಲು, ಆತನೊಡನೆ ಮಾತುಕತೆಯಾಡಲು ಇಚ್ಛೆ. ಪ್ರಾಯಿಕವಾಗಿ ಆತ ಬ್ರಹ್ಮಜ್ಞಾನಕ್ಕಾಗಿ ಹಾತೊರೆಯುವುದಿಲ್ಲ. ಆದರೆ ಭಗವಂತ ಇಚ್ಛಾಮಯ. ಆತನಿಗೇನಾದರೂ ಖುಷಿ ಬಂದರೆ, ಭಕ್ತನನ್ನು ತನ್ನ ಸಕಲ ಐಶ್ವರ್ಯಕ್ಕೂ ಅಧಿಕಾರಿಯನ್ನಾಗಿ ಮಾಡಿಬಿಡುತ್ತಾನೆ. ಭಕ್ತಿಯನ್ನೂ ಕೊಡುತ್ತಾನೆ, ಜ್ಞಾನವನ್ನೂ ಕೊಡುತ್ತಾನೆ. ಹೇಗೋ ಮಾಡಿ ಕಲ್ಕತ್ತವನ್ನು ಮುಟ್ಟಿಬಿಟ್ಟದ್ದೇ ಆದರೆ, ಆ ದೊಡ್ಡ ಮೈದಾನ, ವಸ್ತುಪ್ರದರ್ಶನ ಶಾಲೆ ಇನ್ನೂ ಅನೇಕ ಸ್ಥಳಗಳನ್ನು ನೋಡಬಹುದು. ಈಗ ಯೋಚನೆ ಏನು ಎಂದರೆ, ಹೇಗೆ ಕಲ್ಕತ್ತಕ್ಕೆ ಬರುವುದು ಅಂತ.

"ಜಗನ್ಮಾತೆಯ ಸಾಕ್ಷಾತ್ಕಾರವನ್ನು ಪಡೆದುಕೊಂಡುದೇ ಆದರೆ, ಭಕ್ತಿಯೂ ದೊರೆಯುತ್ತದೆ, ಜ್ಞಾನವೂ ದೊರೆಯುತ್ತದೆ. ಭಾವಸಮಾಧಿಯಲ್ಲಿ ಭಗವದ್ರೂಪದರ್ಶನ ದೊರೆಯುತ್ತದೆ, ನಿರ್ವಿಕಲ್ಪ ಸಮಾಧಿಯಲ್ಲಿ ಅಖಂಡ ಸಚ್ಚಿದಾನಂದ ಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ನಿರ್ವಿಕಲ್ಪ ಸಮಾಧಿಯಲ್ಲಿ 'ಅಹಂ' ಎಂಬುದು, ನಾಮ ರೂಪ ಇವೆಲ್ಲ ಇರುವುದಿಲ್ಲ.

"ಭಕ್ತ ಪ್ರಾರ್ಥನೆಮಾಡುತ್ತಾನೆ: 'ಹೇ ಭಗವತಿ, ಸಕಾಮ ಕರ್ಮ ಕಂಡರೆ ನನಗೆ ಬಹಳ ಭಯ. ಅದರಲ್ಲಿ ಕಾಮನೆ ಇದೆ. ಅದನ್ನು ಮಾಡಿದರೇ ಫಲ ಅನುಭವಿಸಬೇಕಾಗುತ್ತದೆ. ಮತ್ತೇನೆಂದರೆ ಅನಾಸಕ್ತಿಯಿಂದ ಕರ್ಮ ಮಾಡುವುದು ಬಹಳ ಕಠಿನ. ಸಕಾಮ ಕರ್ಮ ಮಾಡಿದರೆ ನಿನ್ನನ್ನು ನಿಜವಾಗಿಯೂ ಮರೆತುಬಿಡುತ್ತೇನೆ. ಆದ್ದರಿಂದ ಅವು ನನಗೆ ಬೇಕಾಗಿಲ್ಲ. ನಿನ್ನ ಸಾಕ್ಷಾತ್ಕಾರ ದೊರೆಯುದವರೆಗೆ, ನನ್ನ ಕರ್ಮ ದಿನ ದಿನಕ್ಕೂ ಕಡಮೆ ಕಡಮೆಯಾಗುವ ಹಾಗೆ ಮಾಡು. ಆದರೆ ಯಾವ ಕರ್ಮ

ಗಳನ್ನ ನಾನು ಮಾಡಲೇ ಬೇಕಾಗಿರುವುದೊ ಅವನ್ನು ಅನಾಸಕ್ತಿಯಿಂದ ಮಾಡುವ ಹಾಗೆ ಶಕ್ತಿಯನ್ನು ಕರುಣಿಸು. ಅವನ್ನು ಮಾಡುತ್ತ ಮಾಡುತ್ತ ಮುಂದುವರಿದ ಹಾಗೆಲ್ಲ ಭಕ್ತಿಯೂ ಬೆಳೆಯುವಂತೆ ಮಾಡು. ನಿನ್ನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳದವರೆಗೆ ಹೊಸ ಕರ್ಮಗಳನ್ನ ಗಂಟುಹಾಕಿ ಕೊಳ್ಳಲು ನನ್ನ ಮನಸ್ಸು ಪ್ರಯತ್ನಿಸದ ಹಾಗೆ ಮಾಡು. ಆದರೆ, ನೀನು ಆದೇಶಮಾಡಿದಾಗ ಮಾತ್ರ ನಿನ್ನ ಕರ್ಮಗಳನ್ನ ಮಾಡುವೆನೇ ವಿನಾ, ಇಲ್ಲದಿದ್ದರೆ ಇಲ್ಲ.' "

ಶಶಧರ: " ಮಹಾಶಯರೆ, ನೀವು ತೀರ್ಥಯಾತ್ರೆಗೆ ಹೋಗಿದ್ದಾಗ ಎಲ್ಲಿಯವರೆಗೆ ಹೋಗಿದ್ದಿರಿ ? "

ಶ್ರೀರಾಮಕೃಷ್ಣರು: " ಓ, ಎಲ್ಲೊ ಕೆಲವು ಸ್ಥಳಗಳನ್ನು ನೋಡಿ ಬಂದೆ. (ನಗುತ್ತ) ಆದರೆ ಹಾಜರಾ ಬಹಳ ದೂರದವರೆಗೆ ಹೋಗಿದಾನೆ; ಎತ್ತರಕ್ಕೂ ಹತ್ತಿದಾನೆ. ಹೃಷೀಕೇಶಕ್ಕೆ ಹೋಗಿ ಬಂದಿದಾನೆ. ನಾನು ಅಷ್ಟುದೂರ ಹೋಗಲೂ ಇಲ್ಲ, ಅಷ್ಟು ಎತ್ತರಕ್ಕೆ ಹತ್ತಲೂ ಇಲ್ಲ.

" ಹದ್ದು, ರಣಹದ್ದು ಬಹಳ ಎತ್ತರಕ್ಕೆ ಹಾರಿಹೋಗುತ್ತವೆ, ಆದರೆ ದೃಷ್ಟಿ ಮಾತ್ರ ಹೆಣದ ಗುಂಡಿಗಳ ಕಡೆ. ಹೆಣದ ಗುಂಡಿ ಯಾವುದು ಗೊತ್ತೆ ? ಕಾಮಕಾಂಚನ.

" ಕುಳಿತಲ್ಲೆ ಕುಳಿತು ಭಕ್ತಿಯನ್ನು ಪಡೆದುಕೊಳ್ಳಲು ಸಾಧ್ಯವಾಗುವುದಾದರೆ, ತೀರ್ಥಯಾತ್ರೆಗೆ ಹೋಗುವುದರ ಆವಶ್ಯಕತೆ ಏನಿದೆ? ಕಾಶಿಗೆ ಹೋಗಿ ನೋಡುತ್ತೇನೆ, ಅಲ್ಲೂ ಇದೇ ಮರಗಿಡಗಳು, ಇದೇ ಹಸುರು ಹುಣಿಸೆ ಎಲೆ !

" ತೀರ್ಥಯಾತ್ರೆಗೆ ಹೋಗಿಯೂ ಭಕ್ತಿ ದೊರಕದೆ ಹೋದರೆ, ತೀರ್ಥ ಯಾತ್ರೆಯ ಫಲ ದೊರಕಿದಂತಾಗೋದಿಲ್ಲ. ಭಕ್ತಿಯೇ ಸಾರ, ಏಕಮಾತ್ರ ಪ್ರಯೋಜನ ವಸ್ತು. 'ಹದ್ದು, ರಣಹದ್ದು' ಏನು ಗೊತ್ತೆ? ಅನೇಕ ಮಂದಿ ಇದಾರೆ, ಬಹಳವಾಗಿ ಬಡಾಯಿಕೊಚ್ಚಿಕೊಳ್ಳುತ್ತಾರೆ. ಹೇಳುತ್ತಾರೆ, ಶಾಸ್ತ್ರದಲ್ಲಿ ಏನೇನು ಕರ್ಮ ಮಾಡಬೇಕು ಅಂತ ಹೇಳಿದೆಯೊ ಅವುಗಳಲ್ಲಿ ಬಹು ಭಾಗವನ್ನು ಮಾಡಿ ಮುಗಿಸಿಬಿಟ್ಟಿದೇವೆ ಎಂದು. ಅವರು ಹಾಗೆ ಜಂಬ ಕೊಚ್ಚಿಕೊಂಡರೂ, ಅವರ ಮನಸ್ಸು ಮಾತ್ರ ಅತ್ಯಂತ ವಿಷಯಾ ಸಕ್ತವಾಗಿರುತ್ತದೆ—ಹಣ, ಕಾಸು, ಗೌರವ, ಸಂಭ್ರಮ, ದೇಹಸುಖ, ಇವುಗಳಿಗಾಗೇ ವ್ಯಸ್ತವಾಗಿರುತ್ತದೆ."

ಶಶಧರ: "ಹೌದು, ನಿಜ. ತೀರ್ಥಯಾತ್ರೆಗೆ ಹೋಗುವುದು, ಕೌಸ್ತುಭಮಣಿ ಬೇಡವೆಂದು ಹೀರ ಮಾಣಿಕ್ಯಗಳಿಗಾಗಿ ಅರಸಿದಂತೆ."

ಶ್ರೀರಾಮಕೃಷ್ಣರು: "ನೋಡು, ಇದನ್ನು ತಿಳಿದುಕೊಂಡಿರು. ನೀನು ಜನರಿಗೆ ಸಾವಿರಾರು ಉಪದೇಶಗಳನ್ನು ಕೊಟ್ಟರೂ ಸಮಯ ಬಾರದೆ ಇದ್ದರೆ ಪ್ರತಿಫಲ ದೊರಕದು. ಮಗು ಮಲಗಿಕೊಳ್ಳುವಾಗ ತಾಯಿಗೆ ಹೇಳಿತು: 'ನನಗೆ ದೇಹಬಾಧೆ ಆದಾಗ ದಯವಿಟ್ಟು ನನ್ನನ್ನು ಎಬ್ಬಿಸಿ ಬಿಡು.' ತಾಯಿ ಹೇಳಿದಳು: 'ಮಗು, ದೇಹಬಾಧೆಯೇ ನಿನ್ನನ್ನು ಎಬ್ಬಿಸಿ ಬಿಡುತ್ತದೆ. ಅದಕ್ಕಾಗಿ ನೀನು ಸ್ವಲ್ಪವೂ ಚಿಂತಿಸಬೇಕಾಗಿಲ್ಲ.' (ಎಲ್ಲರೂ ನಗುತ್ತಿದಾರೆ.) ಅದೇ ರೀತಿಯಾಗಿ ಭಗವಂತನಿಗಾಗಿ ವ್ಯಾಕುಲತೆ ಸಕಾಲ ಬಂದೊಡನೇ ಉಂಟಾಗಿಬಿಡುತ್ತದೆ.

"ಮೂರು ಶ್ರೇಣಿಯ ವೈದ್ಯರಿದಾರೆ. ಮೊದಲನೆ ಶ್ರೇಣಿಯವರು ನಾಡಿ ಪರೀಕ್ಷಿಸಿ ಔಷಧದ ವ್ಯವಸ್ಥೆ ಮಾಡಿ ಹೊರಟುಹೋಗುತ್ತಾರೆ. ರೋಗಿಗೆ ಕೇವಲ ಹೇಳಿ ಹೋಗುತ್ತಾರೆ, ಔಷಧವನ್ನು ಕುಡಿಯುವಂತೆ. ಇವರು ಅಧಮ ಶ್ರೇಣಿಯ ವೈದ್ಯರು. ಇದೇ ರೀತಿಯಾಗೇ ಕೆಲವು ಮಂದಿ ಆಚಾರ್ಯರು ಉಪದೇಶ ಕೊಟ್ಟು ಹೊರಟುಹೋಗುತ್ತಾರೆ. ತಮ್ಮ ಉಪದೇಶ ಜನರಿಗೆ ಒಳ್ಳೆಯದನ್ನು ಮಾಡುತ್ತಿದೆಯೆ ಅಥವಾ ಕೆಟ್ಟದ್ದನ್ನು ಮಾಡುತ್ತಿದೆಯೆ ಎಂಬುದರ ಯೋಚನೆಯೇ ಅವರಿಗೆ ಬಾರದು. ತಮ್ಮ ಶಿಷ್ಯರ ವಿಷಯವಾಗಿ ಕಿಂಚಿತ್ತೂ ತಲೆಗೆ ಹಾಕಿಕೊಳ್ಳೋದಿಲ್ಲ.

"ಇನ್ನು ಕೆಲವು ಮಂದಿ ವೈದ್ಯರಿದಾರೆ. ಔಷಧದ ವ್ಯವಸ್ಥೆ ಮಾಡಿ ರೋಗಿಗೆ ಔಷಧ ಕುಡಿಯುವಂತೆ ಹೇಳುತ್ತಾರೆ. ರೋಗಿ ಕುಡಿಯಲಿಚ್ಛಿಸ ದಿದ್ದರೆ, ಆತನಿಗೆ ಅನೇಕ ವಿಧದಿಂದ ಹೇಳುತ್ತಾರೆ. ಇವರು ಮಧ್ಯಮ ಶ್ರೇಣಿಯ ವೈದ್ಯರು. ಹೀಗೇ ಮಧ್ಯಮ ಶ್ರೇಣಿಯ ಆಚಾರ್ಯರೂ ಇದಾರೆ. ಇವರು ಉಪದೇಶವನ್ನು ಕೊಡುವುದೂ ಅಲ್ಲದೆ, ಅದನ್ನು ಅನುಸರಿಸುವಂತೆ ಬಹಳವಾಗಿ ತಿಳಿಸಿಹೇಳುತ್ತಾರೆ.

"ಮತ್ತೆ ಉತ್ತಮ ವೈದ್ಯರಿದಾರೆ. ಒಳ್ಳೆ ಮಾತಿನಿಂದ ರೋಗಿ ಹೇಳಿದ ಹಾಗೆ ಕೇಳದಿದ್ದರೆ, ಬಲಾತ್ಕಾರವನ್ನೂ ಮಾಡಿಬಿಡುತ್ತಾರೆ. ಆವಶ್ಯಕತೆ ತೋರಿಬಂದರೆ ರೋಗಿಯ ಎದೆ ಮೇಲೆ ಮೊಳಕಾಲೂರಿ ಕುಳಿತು ಔಷಧ ಗಂಟಲಿನೊಳಕ್ಕೆ ಇಳಿಯುವ ಹಾಗೆ ಮಾಡಿಬಿಡುತ್ತಾರೆ. ಹಾಗೆಯೇ ಉತ್ತಮ ಶ್ರೇಣಿಯ ಆಚಾರ್ಯರಿದಾರೆ. ಇವರು ತಮ್ಮ ಶಿಷ್ಯರನ್ನು

ಭಗವದಭಿಮುಖಿಗಳನ್ನಾಗಿ ಮಾಡಲು ಬಲವನ್ನೂ ಉಪಯೋಗಿಸಿಬಿಡುತ್ತಾರೆ.''

ಶಶಧರ: ''ಮಹಾಶಯರೆ, ಉತ್ತಮ ಶ್ರೇಣಿಯ ಆಚಾರ್ಯರಿದ್ದರೆ, ಸಕಾಲ ಬಾರದೆ ಜ್ಞಾನ ದೊರೆಯೋದಿಲ್ಲ ಅಂತ ಹೇಳಿದಿರಲ್ಲ ಏಕೆ?''

ಶ್ರೀರಾಮಕೃಷ್ಣರು: ''ನಿನ್ನ ಪ್ರಶ್ನೆ ಯುಕ್ತವಾದ್ದೆ. ಯೋಚಿಸಿ ನೋಡು, ಔಷಧ ಹೊಟ್ಟೆಗೆ ಇಳಿಯದೆ ಬಾಯಿನಿಂದಲೇ ಹೊರಕ್ಕೆ ಬಂದು ಬಿಟ್ಟರೆ, ಆಗ ಉತ್ತಮ ವೈದ್ಯ ತಾನೆ ಏನು ಮಾಡಿಯಾನು? ಆತನೂ ಏನನ್ನೂ ಮಾಡಲಾರ.

''ಪಾತ್ರ ನೋಡಿ ಉಪದೇಶ ಕೊಡಬೇಕಾಗುತ್ತದೆ. ಆದರೆ ನೀನು ಹಾಗೆ ಮಾಡುತ್ತಿಲ್ಲ. ನನ್ನ ಹತ್ತಿರಕ್ಕೆ ಯಾರಾದರೂ ಯುವಕರು ಬಂದರೆ, ಅವರನ್ನು ಕೇಳುತ್ತೇನೆ: 'ನಿಮ್ಮ ಮನೆಯಲ್ಲಿ ಯಾರಾರಿದಾರೆ?' ಭಾವಿಸಿಕೊ, ಒಬ್ಬನಿಗೆ ತಂದೆ ಇಲ್ಲ; ತಂದೆಯ ಸಾಲದ ಹೊರೆ ಬೇರೆ ಬಿದ್ದಿದೆ ಅಂತ. ಆತ ಭಗವಂತನ ಕಡೆಗೆ ಮನಸ್ಸನ್ನು ಕೊಡುವ ಬಗೆ ಹೇಗೆ? ಏನು, ಕಿವಿಗೆ ಬಿತ್ತೇ?''

ಶಶಧರ: ''ಹೌದು, ಚೆನ್ನಾಗಿ ಕೇಳುತ್ತಿದೇನೆ.''

ಶ್ರೀರಾಮಕೃಷ್ಣರು: ''ಒಂದು ದಿನ ದಕ್ಷಿಣೇಶ್ವರ ದೇವಾಲಯಕ್ಕೆ ಅನೇಕ ಮಂದಿ ಸಿಕ್ ಸಿಪಾಯಿಗಳು ಬಂದಿದ್ದರು. ನಾನು ಅವರನ್ನು ಕಾಳೀದೇವಾಲಯದ ಮುಂಭಾಗದಲ್ಲಿ ಸಂಧಿಸಿದೆ. ಅವರಲ್ಲಿ ಒಬ್ಬ ಹೇಳಿದ: 'ಭಗವಂತ ದಯಾಮಯ.' ನಾನು ಕೇಳಿದೆ: 'ನಿಜವಾಗಿಯೂ! ಸತ್ಯ ಅಂತೀಯಾ? ನಿನಗೆ ಹೇಗೆ ಗೊತ್ತಾಯಿತು?' ಆತ ಉತ್ತರವಿತ್ತ: 'ಏಕೆ ಹಾಗೆ ಕೇಳುತ್ತೀರಿ? ಭಗವಂತ ನಮಗೆ ಅನ್ನಾಹಾರಾದಿಗಳನ್ನು ಒದಗಿಸಿ ಕೊಡುತ್ತಿದಾನೆ,— ಎಲ್ಲಾ ವಿಧದಿಂದಲೂ ನಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತಿದಾನೆ.' ನಾನು ಹೇಳಿದೆ: 'ಅದರಲ್ಲಿ ವಿಶೇಷತೆಯೇನಿದೆ? ಭಗವಂತ ನಮ್ಮೆಲ್ಲರ ತಂದೆ. ತಂದೆ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲಿಲ್ಲ ಅಂದರೆ, ಇನ್ನು ಬೇರೆ ಯಾರು ನೋಡಿಕೊಳ್ಳುತ್ತಾರೆ? ಪಕ್ಕದ ಹಳ್ಳಿಯವರು ಬಂದು ನೋಡಿಕೊಳ್ಳಬೇಕು ಅಂತ ನಿನ್ನ ಯೋಚನೆಯೇ?'''

ನರೇಂದ್ರ: ''ಹಾಗಾದರೆ ನಾವು ಭಗವಂತನನ್ನು ದಯಾಮಯ ಅಂತ ಕರೆಯಬೇಡವೆ?''

ಶ್ರೀರಾಮಕೃಷ್ಣರು: ''ಹಾಗೆ ಕರೆಯಬಾರದೆಂದು ನಾನು ಹೇಳುತ್ತಿ

ದೇನೆಯೇ? ನಾನು ಹೇಳಿದುದರ ಅರ್ಥ, ಭಗವಂತ ನಮ್ಮ ಸ್ವಂತದವನೇ ವಿನಾ ಪರಕೀಯನಲ್ಲ ಎಂದು.''

ಶಶಧರ: “ಅಮೌಲ್ಯ ಮಾತುಗಳು!”

ಶ್ರೀರಾಮಕೃಷ್ಣರು ನರೇಂದ್ರನಿಗೆ: “ನಿನ್ನ ಹಾಡನ್ನು ಸ್ವಲ್ಪ ಹೊತ್ತು ಕೇಳಿದೆ—ಆದರೆ ರುಚಿಸಲಿಲ್ಲ. ಅದಕ್ಕಾಗಿ ಎದ್ದು ಹೊರಟು ಬಂದೆ. ನಿನ್ನ ಮನಸ್ಸು ಈಗ ನೆಲಸಿದೆ ಉದ್ಯೋಗದ ಬೇಟೆಯ ಮೇಲೆ. ಆದ್ದರಿಂದ ಹಾಡು ಸಪ್ಪೆಯಾಗಿಬಿಟ್ಟವೆ.''

ನರೇಂದ್ರ ಲಜ್ಜೆಯಿಂದ ತಲೆಯನ್ನು ಸ್ವಲ್ಪ ತಗ್ಗಿಸಿಕೊಂಡು ಸುಮ್ಮನೆ ಕುಳಿತುಕೊಂಡಿದಾನೆ.

ಪರಮಹಂಸರು ಕುಡಿಯುವ ನೀರು ಕೇಳುತ್ತಿದಾರೆ. ಒಂದು ಲೋಟ ನೀರನ್ನು ಅವರ ಹತ್ತಿರ ತಂದಿಡಲಾಯಿತು. ಆ ನೀರನ್ನು ಅವರ ಕೈಯಲ್ಲಿ ಕುಡಿಯಲಾಗುತ್ತಿಲ್ಲ. ಇನ್ನೊಂದು ಲೋಟ ನೀರು ತರುವಂತೆ ಹೇಳುತ್ತಿದಾರೆ. ಅನಂತರ ಗೊತ್ತಾಯಿತು, ಮೊದಲಿನ ಲೋಟವನ್ನ ಯಾರೊ ಒಬ್ಬ ಘೋರ ಇಂದ್ರಿಯಾಸಕ್ತ ಸ್ಪರ್ಶಮಾಡಿದ್ದ ಎಂದು.

ಶಶಧರ ಹಾಜರಾಸಿಗೆ: “ನೀವೆಲ್ಲರೂ ಇವರೊಡನೆ ಹಗಲೂ ಇರುಳೂ ಇದ್ದುಕೊಂಡಿದೀರಿ. ನೀವು ಬಹಳ ಆನಂದದಿಂದ ಇರಲೇಬೇಕು.''

ಶ್ರೀರಾಮಕೃಷ್ಣರು ನಗುನಗುತ್ತ: “ನನಗಿಂದು ಶುಕ್ರದೆಸೆ ಒದಗಿಬಿಟ್ಟದೆ. ಶುಕ್ಲ ದ್ವಿತೀಯ ಚಂದ್ರನನ್ನು ನೋಡಿದಂತೆಯೇ ಆಗಿಬಿಟ್ಟದೆ. (ಎಲ್ಲರೂ ನಗುತ್ತಿದಾರೆ.) ದ್ವಿತೀಯ ಚಂದ್ರನ ಮಾತು ಏಕೆ ಎತ್ತಿದೆ ಗೊತ್ತೆ? ಸೀತೆ ಒಮ್ಮೆ ರಾವಣಸಿಗೆ ಹೇಳಿದಳು: ‘ನೀನು ಪೂರ್ಣಚಂದ್ರ; ನನ್ನ ರಾಮಚಂದ್ರ ಶುಕ್ಲ ದ್ವಿತೀಯ ಚಂದ್ರ.’ ರಾವಣನಿಗೆ ಇದರ ಗೂಢಾರ್ಥ ಗೊತ್ತಾಗಲಿಲ್ಲ. ಆತ ಭಾವಿಸಿದ, ಸೀತೆ ತನ್ನನ್ನು ಹೊಗಳುತ್ತಿದಾಳೆ ಎಂದು. ಆದ್ದರಿಂದ ಆತನಿಗೆ ಬಹಳ ಆನಂದವಾಗಿಬಿಟ್ಟತು. ಸೀತೆ ಹಾಗೆಂದು ಹೇಳಿದುದರ ಅರ್ಥ: ರಾವಣ ತನ್ನ ತುತ್ತತುದಿಯ ವೈಭವವನ್ನು ಮುಟ್ಟಿಬಿಟ್ಟದಾನೆ, ಇನ್ನು ಮುಂದೆ ದಿನದಿನಕ್ಕೂ ಪೂರ್ಣಚಂದ್ರನ ಹಾಗೆ ಕುಂದು ಕುಂದುತ್ತಾ ಬರುತ್ತಾನೆ. ಆದರೆ ರಾಮ ಶುಕ್ಲ ದ್ವಿತೀಯ ಚಂದ್ರ, ದಿನದಿನಕ್ಕೂ ವೃದ್ಧಿ ವೃದ್ಧಿಯಾಗುತ್ತಾ ಬರುತ್ತಾನೆ.''

ಪರಮಹಂಸರು ಶಶಧರನಿಂದ ಇನ್ನೇನು ಬೀಳ್ಕೊಳ್ಳುವುದರಲ್ಲಿದಾರೆ. ಆತ ತನ್ನ ಬಂಧುಬಾಂಧವರೊಡನೆ ಭಕ್ತಿಯಿಂದ ಪ್ರಣಾಮಮಾಡುತ್ತಿದಾನೆ.

ಪರಮಹಂಸರು ಭಕ್ತರೊಡನೆ ಈಶಾನನ ಮನೆಗೆ ಹಿಂದಿರುಗಿಬಂದಿದಾರೆ. ಇನ್ನೂ ಮುಚ್ಚಂಜೆಯಾಗಿಲ್ಲ. ಈಗ ಅವರು ಈಶಾನನ ಮನೆಯ ನೆಲ ಅಂತಸ್ತಿನಲ್ಲಿರುವ ಬೈಠಕ್‌ಖಾನೆಯಲ್ಲಿ ಕೆಲವು ಮಂದಿ ಭಕ್ತರು, ಭಾಗವತ ಪಂಡಿತ, ಈಶಾನ ಮತ್ತು ಆತನ ಮಕ್ಕಳು ಇವರೊಡನೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ನಗುತ್ತ ಈಶಾನನಿಗೆ: "ಶಶಧರನಿಗೆ ಹೇಳಿದೆ: 'ನೀನು ಮರದ ಬುಡಕ್ಕೆ ಕಾಲು ಹಾಕುವುದೇ ತಡ, ಆಗಲೇ ಹಣ್ಣಿನ ಗೊಂಚಲ ಕಡೆ ಕೈ ನೀಡುತ್ತಿರುವೆಯಲ್ಲ! ಇನ್ನೂ ಸ್ವಲ್ಪ ಕಾಲ ಸಾಧನೆ ಭಜನೆ ಮಾಡು, ಬಳಿಕ ಲೋಕಶಿಕ್ಷಣ ಮಾಡುವೆಯಂತೆ.'"

ಈಶಾನ: "ಪ್ರತಿಯೊಬ್ಬ ಪ್ರಚಾರಕನೂ ಭಾವಿಸುತ್ತಾನೆ, ತಾನು ಲೋಕಶಿಕ್ಷಣ ಮಾಡುತ್ತಿದೇನೆ ಎಂಬುದಾಗಿ. ಮಿಣುಕು ಹುಳು ಕೂಡ ಭಾವಿಸಬಹುದು, ತಾನು ಇಡೀ ಜಗತ್ತಿಗೇ ಬೆಳಕು ನೀಡುತ್ತಿದೇನೆ ಎಂದು. ಅದು ಹೀಗೆ ಭಾವಿಸಬಹುದೆಂದು ಭಾವಿಸಿ ಒಬ್ಬ ಅದನ್ನು ಸಂಬೋಧಿಸಿ ಹೇಳಿದ: 'ಎಲೈ ಮಿಣುಕು ಹುಳುವೆ, ನಿನ್ನ ಕೈಯಲ್ಲಿ ಈ ಜಗತ್ತಿಗೆ ಬೆಳಕು ಕೊಡಲು ಹೇಗೆ ಸಾಧ್ಯವಾದೀತು? ನೀನು ಕೇವಲ ಕತ್ತಲೆ ಎಷ್ಟು ಗಾಢವಾದ್ದು ಎಂಬುದನ್ನು ಮಾತ್ರ ಪ್ರಕಾಶಮಾಡಬಲ್ಲೆ.'"

ಶ್ರೀರಾಮಕೃಷ್ಣರು ನಗುತ್ತ: "ಆದರೆ ಶಶಧರ ಕೇವಲ ಪಂಡಿತನೇ ಅಲ್ಲ, ವಿವೇಕ ವೈರಾಗ್ಯವೂ ಇವೆ."

ಭಾಗವತ ಪಂಡಿತ ಶ್ರೀರಾಮಕೃಷ್ಣರಿಗೆ ಹೇಳಿದ: "ನೀವು ಮಹಾತ್ಮರು."

ಶ್ರೀರಾಮಕೃಷ್ಣರು: "ನಾರದ, ಪ್ರಹ್ಲಾದ, ಶುಕದೇವ ಇವರನ್ನ ಹಾಗೆ ಬೇಕಾದರೆ ಕರೆಯಬಹುದು. ನಾನು ಕೇವಲ ನಿಮ್ಮ ಒಂದು ಶಿಶು ಮಾತ್ರ.

"ಆದರೆ ಒಂದು ವಿಧದಲ್ಲಿ ಬೇಕಾದರೆ ಹಾಗೆ ಹೇಳಬಹುದು. ಒಂದು ಹೇಳಿಕೆ ಇದೆ, ಭಗವಂತನಿಗಿಂತ ಭಕ್ತ ದೊಡ್ಡವನು ಎಂದು—ಏಕೆಂದರೆ, ಭಕ್ತ ಭಗವಂತನನ್ನು ತನ್ನ ಹೃದಯದಲ್ಲಿ ಇಟ್ಟುಕೊಂಡು ಸುತ್ತಾಡುತ್ತಾನೆ. (ಎಲ್ಲರೂ ಆನಂದವನ್ನು ಸೂಚಿಸುತ್ತಿದಾರೆ.) ವೈಷ್ಣವ ಶಾಸ್ತ್ರದಲ್ಲಿ ಹೇಳಿದೆ: 'ಭಕ್ತ ಭಾವಿಸುತ್ತಾನೆ, ತಾನು ದೊಡ್ಡವನು ಭಗವಂತ ಚಿಕ್ಕವನು ಎಂಬುದಾಗಿ.' ಯಶೋದೆ ಕೃಷ್ಣನನ್ನು ಹಗ್ಗದಿಂದ ಕಟ್ಟಿಹಾಕಲು ಪ್ರಯತ್ನಿಸಿದಳು.

ಆಕೆ ನಂಬಿದ್ದಳು, ತಾನಲ್ಲದೆ ಬೇರೆ ಯಾರೂ ಕೃಷ್ಣನ ಯೋಗಕ್ಷೇಮ ನೋಡಿಕೊಳ್ಳಲಾರರು ಎಂದು.

"ಕೆಲವು ವೇಳೆ ಭಗವಂತ ಚುಂಬಕ, ಭಕ್ತ ಸೂಜಿ ಆಗುತ್ತಾರೆ— ಭಗವಂತ ಭಕ್ತನನ್ನು ಆಕರ್ಷಿಸಿಬಿಡುತ್ತಾನೆ. ಇನ್ನು ಕೆಲವು ವೇಳೆ ಭಕ್ತ ಚುಂಬಕ, ಭಗವಂತ ಸೂಜಿ ಆಗಿಬಿಡುತ್ತಾರೆ. ಭಕ್ತನ ಆಕರ್ಷಣೆ ಅಷ್ಟು ಬಲವಾದ್ದು, ಆತನ ಪ್ರೇಮಕ್ಕೆ ಮುಗ್ಧನಾಗಿ ಭಗವಂತ ಆತನ ಹತ್ತಿರಕ್ಕೆ ಹಾರಿಬರುತ್ತಾನೆ."

ಪರಮಹಂಸರು ಇನ್ನೇನು ದಕ್ಷಿಣೇಶ್ವರಕ್ಕೆ ಹೊರಡುವುದರಲ್ಲಿದಾರೆ. ಈಶಾನ ಮತ್ತು ಉಳಿದ ಭಕ್ತರು ಅವರ ಸುತ್ತ ನಿಂತಿದಾರೆ. ಹಾಗೇ ಮಾತನಾಡುತ್ತ ಈಶಾನನಿಗೆ ಬುದ್ಧಿವಾದವೀಯುತ್ತಿದಾರೆ.

ಶ್ರೀರಾಮಕೃಷ್ಣರು: "ಸಂಸಾರದಲ್ಲಿದ್ದರೂ ಯಾರು ಭಗವಂತನನ್ನು ಪ್ರಾರ್ಥಿಸುತ್ತಾನೊ ಆತ ವೀರಭಕ್ತ. ಭಗವಂತ ಭಾವಿಸುತ್ತಾನೆ: 'ಯಾರು ಸಂಸಾರವನ್ನು ತ್ಯಜಿಸಿದಾನೊ ಆತ ನನ್ನನ್ನು ಪ್ರಾರ್ಥಿಸಿಯೇ ಪ್ರಾರ್ಥಿಸುತ್ತಾನೆ. ನನ್ನ ಸೇವೆಯನ್ನು ಆತ ಮಾಡಲೇಬೇಕು. ಇದರಲ್ಲಿ ವಿಶೇಷತೆ ಯೇನಿದೆ? ಒಂದು ಪಕ್ಷ ಆತ ನನ್ನನ್ನು ಪ್ರಾರ್ಥಿಸದಿದ್ದರೆ ಎಲ್ಲರೂ ಆತನಿಗೆ ಛೀಮಾರಿ ಮಾಡಿಬಿಡುತ್ತಾರೆ. ಆದರೆ ಯಾರು ಸಂಸಾರದಲ್ಲಿದ್ದೂ ನನ್ನನ್ನು ಪ್ರಾರ್ಥಿಸುತ್ತಾನೊ, ಸಂಸಾರವೆಂಬ ಇಪ್ಪತ್ತು ಮಣದ ಕಲ್ಲನ್ನು ಒಂದು ಕಡೆಗೆ ತಳ್ಳಿ ನನ್ನ ದರ್ಶನ ಪಡೆಯಲು ಪ್ರಯತ್ನಿಸುತ್ತಾನೊ ಆತನೇ ಧನ್ಯ, ಆತನೇ ಮಹಾತ್ಮ, ಆತನೇ ವೀರಪುರುಷ.'"

ಪಂಡಿತ: "ನೀವು ಹೇಳುವುದು ಸರಿ. ಶಾಸ್ತ್ರವೂ ಹೀಗೇ ಹೇಳುತ್ತದೆ. ಮಹಾಭಾರತದಲ್ಲಿ ಧರ್ಮವ್ಯಾಧನ ಮತ್ತು ಪತಿವ್ರತೆಯ ಕಥೆ ಇದೆ. ಒಂದು ಅರಣ್ಯದಲ್ಲಿ ಒಬ್ಬ ತಪಸ್ವಿ ಧ್ಯಾನಮಾಡುತ್ತಿದ್ದಾಗ ಒಂದು ಕಾಗೆ ಆತನಿಗೆ ಉಪದ್ರವ ಕೊಡುತ್ತಿತ್ತು. ಒಂದು ದಿನ ಕೋಪ ಬಂದು ಆತ ಅದರ ಕಡೆಗೆ ರೇಗಿನೋಡಿದ. ಅದು ಒಡನೆಯೇ ಸುಟ್ಟು ಭಸ್ಮವಾಗಿ ಹೋಯಿತು. ಆತ ಭಾವಿಸಿಕೊಂಡ: 'ನಾನು ಕೇವಲ ದೃಷ್ಟಿಸಿದುದ ರಿಂದಲೇ ಈ ಕಾಗೆ ಸುಟ್ಟು ಭಸ್ಮವಾಗಿಹೋಯಿತು. ಆದ್ದರಿಂದ ನಾನು ಆಧ್ಯಾತ್ಮಿಕ ಜೀವನದಲ್ಲಿ ಬಹಳವಾಗಿ ಮುಂದುವರಿದಿರಲೇಬೇಕು.' ಒಂದು ದಿನ ಆತ ಒಂದು ಮನೆಗೆ ಭಿಕ್ಷೆಗೆ ಹೋದ. ಆ ಮನೆಯ ಹೆಂಗಸಿಗೆ ತನ್ನ ಪತಿಯಲ್ಲಿ ಅಷ್ಟೊಂದು ಶ್ರದ್ಧಾಭಕ್ತಿ, ಹಗಲಿರುಳೆನ್ನದೆ ಆತನ ಸೇವೆಯಲ್ಲೇ

ನಿರತಳಾಗಿದ್ದಳು. ಪತಿ ಮನೆಗೆ ಬಂದೊಡನೇ ಆತನ ಪಾದಗಳನ್ನು ತೊಳೆಯುತ್ತಿದ್ದಳು; ಅಷ್ಟೇ ಅಲ್ಲ, ಅವನ್ನ ತನ್ನ ತಲೆಗೂದಲಿಂದ ಒರಸುತ್ತಿದ್ದಳು. ಆ ತಪಸ್ವಿ 'ಭವತಿ ಭಿಕ್ಷಾಂ ದೇಹಿ' ಎಂದು ಹೇಳಿದಾಗ ಆಕೆ ತನ್ನ ಪತಿಯ ಸೇವೆಯಲ್ಲಿ ನಿರತಳಾಗಿದ್ದುದರಿಂದ ಆತನಿಗೆ ಒಡನೇ ಭಿಕ್ಷೆ ನೀಡಲು ಆಕೆಗೆ ಸಾಧ್ಯವಾಗಲಿಲ್ಲ. ಆತ ಸ್ವಲ್ಪ ಹೊತ್ತು ಕಾಯಬೇಕಾಗಿ ಬಂದುದರಿಂದ ರೇಗಿ ಕೂಗಲಾರಂಭಿಸಿದ: 'ಹೀಗೆ ಮಾಡಿದರೆ ನಿಮಗೆ ಶ್ರೇಯಸ್ಸಾಗೋದಿಲ್ಲ.' ಆ ಪತಿವ್ರತೆ ಮನೆ ಒಳಗಿನಿಂದಲೇ ಉತ್ತರವಿತ್ತಳು: 'ನಾನೇನು ಕಾಗೆ-ಗೀಗೆಯಲ್ಲ ಸುಟ್ಟುಬಿಡೋಕೆ. ಸ್ವಲ್ಪ ಹೊತ್ತು ಸಾವಧಾನದಿಂದಿರಿ. ಪತಿಯ ಸೇವೆಯನ್ನು ಮುಗಿಸಿದನಂತರ, ನಿಮಗೆ ಸತ್ಕಾರ ಮಾಡುತ್ತೇನೆ.' ಈ ಸಾಮಾನ್ಯ ಹೆಂಗಸು ತಾನು ಅರಣ್ಯದಲ್ಲಿ ಕಾಗೆಯನ್ನು ಸುಟ್ಟಿದ್ದನ್ನು ಅರಿತುಕೊಂಡಿರುವುದನ್ನು ನೋಡಿ, ತಪಸ್ವಿಗೆ ವಿಸ್ಮಯವೇ ಆಯಿತು. ಆ ತಪಸ್ವಿ ಆಕೆಯಿಂದ ಉಪದೇಶವನ್ನು ಯಾಚಿಸಿದ. ಆಕೆ ಆತನನ್ನು ಕಾಶಿಯಲ್ಲಿದ್ದ ಧರ್ಮವ್ಯಾಧನ ಹತ್ತಿರಕ್ಕೆ ಕಳುಹಿಸಿದಳು. ಆ ವ್ಯಾಧ ಮಾಂಸದಂಗಡಿ ಇಟ್ಟುಕೊಂಡಿದ್ದ. ಆತ ಕಟುಕನ ಕೆಲಸ ಮಾಡುತ್ತಿದ್ದರೂ, ತನ್ನ ತಂದೆತಾಯಿಗಳನ್ನು ಸಾಕ್ಷಾತ್ ಭಗವಂತನ ಮೂರ್ತಿಗಳೇ ಎಂದು ಎಣಿಸಿ ಅವರಿಗೆ ಹಗಲಿರುಳೂ ಸೇವೆ ಸಲ್ಲಿಸುತ್ತಿದ್ದ. ಆ ವ್ಯಾಧನನ್ನು ಸಂಧಿಸಿದನಂತರ ತಪಸ್ವಿಗೆ ಅನಿಸಿತು: 'ಈ ವ್ಯಾಧ ಕಟುಕನಾಗಿರುವುದಲ್ಲದೆ, ಸಂಸಾರಿ ಕೂಡ! ಇಂಥ ಮನುಷ್ಯ ನನಗೇನು ಬ್ರಹ್ಮಜ್ಞಾನೋಪದೇಶ ಕೊಡಬಲ್ಲನಪ್ಪ?' ಆದರೆ ಆ ವ್ಯಾಧ ಪೂರ್ಣಜ್ಞಾನಿಯಾಗಿದ್ದ. ಆತ ತನ್ನ ಕರ್ತವ್ಯವನ್ನು ಬಹಳ ನಿಷ್ಠೆಯಿಂದ ಮಾಡಿದುದರ ಫಲವಾಗಿ ಬ್ರಹ್ಮಜ್ಞಾನವನ್ನು ಪಡೆದುಕೊಂಡಿದ್ದ. ಆ ವ್ಯಾಧನ ಉಪದೇಶದಿಂದ ಆ ತಪಸ್ವಿಗೆ ಕೊನೆಗೆ ಬ್ರಹ್ಮಜ್ಞಾನ ದೊರೆಯಿತು.''

ಪರಮಹಂಸರು ಇನ್ನೇನು ಗಾಡಿ ಹತ್ತುವುದರಲ್ಲಿದಾರೆ. ಅವರು ಪಕ್ಕದಲ್ಲೇ ಇದ್ದ ಈಶಾನನ ಮಾವನ ಮನೆಯ ಬಾಗಿಲ ಹತ್ತಿರ ನಿಂತಿದಾರೆ. ಅವರ ಹತ್ತಿರ ಈಶಾನ ಮತ್ತು ಉಳಿದ ಭಕ್ತರೂ ನಿಂತುಕೊಂಡಿದಾರೆ—ಆಶೀರ್ವಾದ ಪಡೆಯಲು. ಪರಮಹಂಸರು ಮತ್ತೆ ಮಾತಾಡುತ್ತ ಈಶಾನನಿಗೆ ಹೇಳುತ್ತಿದಾರೆ: ''ಇರುವೆ ಹಾಗೆ ಸಂಸಾರದಲ್ಲಿ ವಾಸಿಸು. ಈ ಜಗತ್ತಿನಲ್ಲಿ ನಿತ್ಯ, ಅನಿತ್ಯ ಎರಡೂ ಬೆರೆತುಕೊಂಡಿವೆ—ಮರಳು, ಸಕ್ಕರೆಯ ಹಾಗೆ. ಇರುವೆಯಾಗಿ ಕೇವಲ ಸಕ್ಕರೆಯನ್ನೇ ಆರಿಸಿಕೊ.

"ಚಿಂದಾನಂದರಸ, ವಿಷಯರಸ ಬೆರೆತುಕೊಂಡಿವೆ—ನೀರು, ಹಾಲಿನ ಹಾಗೆ. ಹಂಸ ಪಕ್ಷಿಯಾಗಿ ಹಾಲನ್ನು ಕುಡಿದು ನೀರನ್ನು ತ್ಯಜಿಸಿಬಿಡು.

"ಈ ಜಗತ್ತಿನಲ್ಲಿ ಬಾತುಕೋಳಿಯ ಹಾಗೆ ಇರು. ಅದರ ರೆಕ್ಕೆ-ಪುಕ್ಕಗಳಲ್ಲಿ ನೀರು ಸೇರಿಕೊಳ್ಳುತ್ತದೆ, ಆದರೆ ಅದು ಅದನ್ನು ಒದರಿಬಿಡುತ್ತದೆ. ಈ ಸಂಸಾರದಲ್ಲಿ ಕೆಸರು ಮೀನಿನ ಹಾಗೆ ವಾಸಿಸು. ಅದು ಕೆಸರಿನೊಳಗೇ ಇದ್ದರೂ, ಅದರ ಮೈ ಮಾತ್ರ ಪರಿಷ್ಕಾರ ಪರಿಚ್ಛಿನ್ನ.

"ಈ ಜಗತ್ತು ಸತ್ಯದ ಮತ್ತು ತೋರಿಕೆಯ ಒಂದು ಮಿಶ್ರಣ. ತೋರಿಕೆಯನ್ನು ತ್ಯಜಿಸಿ ಸತ್ಯವನ್ನು ಸ್ವೀಕರಿಸು."

ಪರಮಹಂಸರು ಗಾಡಿಯನ್ನು ಹತ್ತಿ ದಕ್ಷಿಣೇಶ್ವರದ ಕಡೆ ಮುಂದುವರಿಯುತ್ತಿದಾರೆ.



೨೫

## ಪಂಡಿತ ಶಶಧರನಿಗೆ ಹಿತೋಪದೇಶ

**೩೦ನೆ ಜೂನ್ ೧೮೮೪, ಆಷಾಢ ಶುಕ್ಲ ಸಪ್ತಮಿ, ಸೋಮವಾರ.**

ಪರಮಹಂಸರ ಕೊಠಡಿಯಲ್ಲಿ ನೆಲದ ಮೇಲೆ ಮಂದಲಿಗೆ ಹಾಸಿದೆ. ಅದರ ಮೇಲೆ ಪರಮಹಂಸರು, ಪಂಡಿತ ಶಶಧರ ಮತ್ತು ಕೆಲವು ಮಂದಿ ಭಕ್ತರೊಡನೆ ಕುಳಿತುಕೊಂಡಿದಾರೆ. ಇನ್ನು ಕೆಲವು ಮಂದಿ ಬರಿ ನೆಲದ ಮೇಲೇ ಕುಳಿತುಕೊಂಡಿದಾರೆ. ಸುರೇಂದ್ರ, ಬಾಬುರಾಮ, ಮಾಸ್ಟರ್, ಹರೀಶ, ಲಾಟು, ಹಾಜರಾ, ಮಣಿಮಲ್ಲಿಕ ಇವರೇ ಮೊದಲಾದವರೂ ಕುಳಿತುಕೊಂಡಿದಾರೆ. ಸಮಯ ಈಗ ಅಪರಾಹ್ನ ನಾಲ್ಕು.

ಪರಮಹಂಸರು ಪಂಡಿತ ಶಶಧರನನ್ನ ಆರು ದಿನಗಳ ಹಿಂದೆ ಕಲ್ಕತ್ತ ದಲ್ಲಿ ಸಂಧಿಸಿದ್ದರು. ಇಂದು ಆತ ಪರಮಹಂಸರನ್ನು ಸಂಧಿಸಲು ದಕ್ಷಿ-ಣೇಶ್ವರಕ್ಕೆ ಬಂದಿದಾನೆ. ಆತನೊಡನೆ ಭೂಧರಚಟ್ಟೋಪಾಧ್ಯಾಯ ಮತ್ತು ಆತನ ಅಣ್ಣ ಕೂಡ ಬಂದಿದಾರೆ. ಇವರ ಮನೆಯಲ್ಲೇ ಪಂಡಿತ ಶಶಧರ ಕಲ್ಕತ್ತದಲ್ಲಿ ಇಳಿದುಕೊಂಡಿರುವುದು.

ಪಂಡಿತ ಜ್ಞಾನಮಾರ್ಗಿ. ಪರಮಹಂಸರು ಈ ಮಾರ್ಗ ಏನು ಎಂಬುದನ್ನ ಆತನಿಗೆ ವಿವರಿಸುತ್ತಿದಾರೆ. ಹೇಳುತ್ತಿದಾರೆ: "ಯಾರದು ನಿತ್ಯವೊ ಆತನದೇ ಲೀಲೆ ಕೂಡ. ಯಾರು ಅಖಂಡಸಚ್ಚಿದಾನಂದನೊ ಆತನೇ ಲೀಲೆಗಾಗಿ ಅನೇಕ ರೂಪಗಳನ್ನ ಧರಿಸಿದಾನೆ." ಭಗವಂತನ ಸಂಬಂಧವಾಗಿ ಮಾತಾಡುತ್ತ ಮಾತಾಡುತ್ತ ಆಗಾಗ ಬಾಹ್ಯಜ್ಞಾನಶೂನ್ಯ ರಾಗುತ್ತಿದಾರೆ. ಈಗ ಭಾವೋನ್ಮತ್ತರಾಗಿ ಪಂಡಿತನಿಗೆ ಹೇಳುತ್ತಿದಾರೆ: "ನೋಡು, ಬ್ರಹ್ಮ ಸುಮೇರುವಿನ ಹಾಗೆ ಅಚಲ ಮತ್ತು ಕೂಟಸ್ಥ. ಆದರೆ ಯಾರು ಅಚಲನೊ ಆತ ಚಲನೂ ಹೌದು."

ಪರಮಹಂಸರು ಈಗ ಪ್ರೇಮಾನಂದದಿಂದ ಮತ್ತರಾಗಿಬಿಟ್ಟಿದಾರೆ. ತಮ್ಮ ಎಂದಿನ ಮಧುರಕಂಠದಿಂದ ಹಾಡಲಾರಂಭಿಸಿದಾರೆ. ಒಂದಾದ ಮೇಲೊಂದು ಹಾಡನ್ನು ಹಾಡುತ್ತಲೇ ಇದಾರೆ:

ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು !
ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು. . . .

ಅನಂತರ ಹಾಡುತ್ತಿದ್ದಾರೆ:

ಹುಟ್ಟು ಸಾವಿಗೆ ಸಲುವ ಬರಿ ಮರ್ತ್ಯಳೆನಬೇಡ
ತಾಯಿ ಕಾಳಿಯನು.
ಇವಳ ಶ್ರೀನಾಮವನು ಜಪಿಸದಿರೆ ತಾಳುವನೆ
ಪರಮ ಶಿವನೂ ಕೂಡ ಕೊರಳ ಗರಳವನು?

ದೃಷ್ಟಿಮಾತ್ರದಿ ಜಗವ ಸೃಷ್ಟಿ—ಸ್ಥಿತಿ—ಲಯಗಳಲಿ
ತಿರುಗಿಸುವಳು.
ಸಕಲ ಬ್ರಹ್ಮಾಂಡಗಳ ತನ್ನ ಬಸಿರಲಿ ಧರಿಸಿ
ಕಾಪಿಡುವಳು!

ಅವಳ ಚರಣಾಶ್ರಯದಿ ತಲ್ಲಣವ ನೀಗುವರು
ದೇವಾಧಿದೇವರುಗಳು,
ಆ ಮಹಾಕಾಳನೇ ಇವಳ ಪದತಲದಲ್ಲಿ
ನಿತ್ಯವೂ ಬಿದ್ದಿರುವನು!

ಮತ್ತೆ ಹಾಡುತ್ತಿದ್ದಾರೆ:

ಬರಿಯ ಶಿವಸತಿಯಲ್ಲ ಈ ಮಹಾಕಾಳಿ;
ಈ ದಿಗಂಬರೆ ಜಗದ ದೈತ್ಯರನು ಸೀಳಿ
ಸುತ್ತುತಿರೆ, ಮೃತ್ಯುವೇ ಬಾಗಿರಲು ಪದಕೆ
ತನ್ನ ಕಾಲೂರಿಹಳು ಪರಶಿವನ ಎದೆಗೆ!

ಶಿವನ ಮೆಟ್ಟುವಳಿವಳು; ಓ ಎಂಥ ಗರತಿ!
ಇವಳ ಲೀಲೆಗೆ ಇಲ್ಲ ಏನೊಂದು ಇತಿಮಿತಿ.
ನೂರು ಬಗೆ ಈ ಲೀಲೆ; ಸಾವಧಾನದಲಿ
ನೀನರಿವೆ ಪರಿಶುದ್ಧ ಸಾಧನೆಯಲಿ!

ಮತ್ತೆ:

'ಜಯ್ ಕಾಳಿ'—ಎಂದು ನಾ ಕುಡಿಯುವೀ ದಿವ್ಯ ಮಧು
ಸಾಮಾನ್ಯ ಸುರೆಯಲ್ಲವೆಂದರಿಯದೆ,
ನನ್ನ ಇರವನು ಕಂಡು ಭಾವಿಸಿಹರೀ ಜನರು
ನಾನೊಬ್ಬ ಉನ್ಮತ್ತ ಕುಡುಕನೆಂದೇ!... (ಉ. ೭೮೬)

ಮತ್ತೆ:

ಅತಿ ಕಠೋರ ಸಾಧನೆಯಲಿ ತೊಡಗಿರುವೀ ಶಿವನು ಕೂಡ
ಇನ್ನಾದರು ಕಾಣದಿರಲು ಕಾಳೀಪದನೀಲವ
ಎಲ್ಲರಿಗೂ ಲಭಿಸಬಹುದೆ ಶ್ರೀ ಶ್ಯಾಮೆಯ ದರ್ಶನ
ಎಲ್ಲರಿಗೂ ದೊರೆಯಬಹುದೆ ಶ್ರೀ ಕಾಳಿಯ ಸಂಪದ? . . .

(ಉ. ೨೬೪)

ಪರಮಹಂಸರ ಭಾವಾವಸ್ಥೆಯ ತೀವ್ರತೆ ಈಗ ಸ್ವಲ್ಪ ಕಡಮೆಯಾಗುತ್ತಿದೆ. ಹಾಡುವುದನ್ನು ನಿಲ್ಲಿಸಿ, ಎದ್ದು ಹೋಗಿ ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಳ್ಳುತ್ತಿದಾರೆ.

ಪರಮಹಂಸರ ಹಾಡು ಕೇಳಿ ಪಂಡಿತ ಶಶಧರ ಮೋಹಗೊಂಡು ಬಿಟ್ಟಿದಾನೆ. ವಿನಯದಿಂದ ಪರಮಹಂಸರನ್ನು ಕೇಳುತ್ತಿದಾನೆ: "ಮತ್ತೆ ಹಾಡುವಿರೇನು?"

ಈಗ ಪರಮಹಂಸರು ಮತ್ತೆ ಹಾಡಲಾರಂಭಿಸಿದಾರೆ:

ಶ್ರೀ ಘನಶ್ಯಾಮೆಯ ಚರಣಾಕಾಶದಿ ಗಾಳಿಪಟದ ತೆರದಿ
ಹಾರುತಿರಲು ಮನ, ದುರಿತ ಕಲುಷ ಬಿರುಗಾಳಿಯು ಭರದಿ . . .

(ಉ. ೯೭೬)

ಮತ್ತೆ ಹಾಡುತ್ತಿದಾರೆ:

ಅರಿತೆ ನಾನು ಅರಿತೆ ನಾನು—ನಿಜದ ನೆಲೆಯನರಿತೆನು
ಭಾವದಂತರಂಗವರಿತ ವ್ಯಕ್ತಿಯೊಬ್ಬ ದೊರೆತನು. . . (ಉ. ೨೭೦)

ಮತ್ತೆ:

ತಾಯ ಶ್ರೀಪಾದದಲಿ ಜೀವವಿರಿಸಿದ ನನಗೆ
ಮೃತ್ಯುಭಯವೇನು?
ಆತ್ಮಶಿರಶಿಖೆಯಲ್ಲಿ ತಾಯ ನಾಮದ ಹಿಡಿದು
ಕಟ್ಟಿರುವೆನು!
ಈ ಜಗದ ಸಂತೆಯಲಿ ನನ್ನ ದೇಹವ ಮಾರಿ
ತಾಯ ಶ್ರೀನಾಮವನು ಕೊಂಡಿರುವೆನು!

ಪರಮಹಂಸರು, "ತಾಯ ಶ್ರೀನಾಮವನು ಕೊಂಡಿರುವೆನು!" ಎಂಬುದಾಗಿ ಹಾಡಿದೊಡನೇ ಪಂಡಿತ ಶಶಧರನ ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿತು. ಪರಮಹಂಸರು ಆ ಹಾಡನ್ನು ಮುಂದುವರಿಸುತ್ತಿದಾರೆ:

ಕಾಳೀನಾಮ ಕಲ್ಪತರುವನು ನಾನು
ಎದೆಯ ಅಂಗಳದಲ್ಲಿ ನೆಟ್ಟಿರುವೆನು.
ಯಮ ಬಂದು ನಿಂತಾಗ ನನ್ನ ಎದೆಯನು ತೆರೆದು
ಬೆಳೆಯುವೀ ವೃಕ್ಷವನು ತೋರಿಸುವೆನು.
ಅರಿವರ್ಗವನು ಕಿತ್ತು, ಭವಜಲಧಿಯಲಿ ನಾನು
"ಜಯ ದುರ್ಗೆ" ಎಂದೆಂದು ಹೊರಟಿರುವೆನು!

ಮತ್ತೆ ಹಾಡುತ್ತಿದ್ದಾರೆ:

ನಿನ್ನೊಳಗೇ ನೀನಿರು ಮನವೇ,
ಅನ್ಯಾಶ್ರಯದೊಳಗರಸದಿರು. . . . (ಉ. ೧೭೧)

ಮತ್ತೆ:

ಮುಕ್ತಿಪದವನು ನೀಡಲೆನಗೆ ಮನವಿದ್ದರೂ
ಶುದ್ಧ ಭಕ್ತಿಯ ಕೊಡಲು ಹಿಂಜರಿವೆನು. . . .

ಪಂಡಿತ ವೇದಾದಿ ಶಾಸ್ತ್ರಗಳನ್ನ ಅಧ್ಯಯನಮಾಡಿದಾನೆ. ಜ್ಞಾನ ಚರ್ಚೆಯಲ್ಲಿ ಆತನಿಗೆ ಆಸಕ್ತಿ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡು ಆತನನ್ನು ದೃಷ್ಟಿಸಿ ನೋಡುತ್ತ ರೂಪಕ ಕಥೆಗಳ ಮೂಲಕ ಉಪದೇಶವೀಯುತ್ತಿದಾರೆ.

ಶ್ರೀರಾಮಕೃಷ್ಣರು ಪಂಡಿತನಿಗೆ: "ವೇದಗಳೇ ಮೊದಲಾದ ಅನೇಕ ಶಾಸ್ತ್ರಗಳೇನೊ ಇವೆ. ಆದರೆ ಸಾಧನೆ ಮಾಡದೆ, ತಪಸ್ಸು ಮಾಡದೆ ಭಗವಂತನ ಸಾಕ್ಷಾತ್ಕಾರವನ್ನ ಮಾಡಿಕೊಳ್ಳಲಾಗೋದಿಲ್ಲ. 'ಆಗಮ, ನಿಗಮ, ತಂತ್ರ, ಷಡ್ ದರ್ಶನಗಳಲ್ಲೂ ದೊರೆಯನಾತನು.'

"ಆದರೆ ಶಾಸ್ತ್ರ ಏನು ಹೇಳುತ್ತವೆ ಎಂಬುದನ್ನು ಮೊದಲು ಅರಿತುಕೊಂಡು, ಬಳಿಕ ಅವುಗಳಿಗನುಸಾರ ಕೆಲಸಕಾರ್ಯಗಳನ್ನು ಮಾಡಬೇಕು. ಒಬ್ಬ ಒಂದು ಪತ್ರವನ್ನು ಕಳೆದುಕೊಂಡ. ಎಲ್ಲಿ ಇಟ್ಟುಬಿಟ್ಟಿದಾನೊ ಜ್ಞಾಪಕದಲ್ಲಿಲ್ಲ. ದೀಪ ಹಿಡಿದುಕೊಂಡು ಹುಡುಕಲಾರಂಭಿಸಿದ. ಇಬ್ಬರು ಮೂವರು ಸೇರಿ ಹುಡುಕಿದನಂತರ ಪತ್ರ ಸಿಕ್ಕಿತು. ಅದರಲ್ಲಿ ಬರೆದಿತ್ತು, ಐದು ಸೇರು ಸಂದೇಶ (ಸಿಹಿ ತಿಂಡಿ), ಒಂದು ಪಂಚೆ ಕಳುಹಿಸಬೇಕೆಂದು. ಆತ ಆ ಪತ್ರವನ್ನು ಓದಿಕೊಂಡು ಅದನ್ನು ಬಿಸಾಡಿಬಿಟ್ಟ. ಮತ್ತೆ ಆ ಪತ್ರದ ಆವಶ್ಯಕತೆಯೇನಿರಲಿಲ್ಲ ಆತನಿಗೆ. ಅನಂತರ ಅವನು ಮಾಡಬೇಕಾಗಿ

ಉಳಿದುಕೊಂಡದ್ದು, ಐದು ಸೇರು ಸಂದೇಶ, ಒಂದು ಪಂಚೆ ಕೊಂಡು ಕೊಂಡು ಕಳುಹಿಸುವುದೊಂದೇ.

"ಓದುವುದಕ್ಕಿಂತ ಕಿವಿಯಲ್ಲಿ ಕೇಳುವುದು ಮೇಲು, ಕಿವಿಯಲ್ಲಿ ಕೇಳುವುದಕ್ಕಿಂತ ಕಣ್ಣಿನಿಂದ ನೋಡುವುದು ಮೇಲು. ಗುರುವಿನ ಬಾಯಿಂದ ಅಥವಾ ಸಾಧುವಿನ ಬಾಯಿಂದ ಶಾಸ್ತ್ರಗಳನ್ನು ಕೇಳಿದರೆ, ಅವು ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನು ಮಾಡುತ್ತವೆ—ಅವುಗಳ ಅಮುಖ್ಯ ಭಾಗ ಗಳ ಕಡೆ ಮನಸ್ಸು ಕೊಡಬೇಕಾಗಿರುವುದಿಲ್ಲ. ಒಮ್ಮೆ ಹನುಮಂತ ಹೇಳಿದ: 'ಸೋದರ, ತಿಥಿ, ನಕ್ಷತ್ರ ಇವು ಯಾವೂ ನನಗೆ ಗೊತ್ತಿಲ್ಲ. ನಾನು ಸದಾ ಕೇವಲ ರಾಮಚಿಂತನೆ ಮಾಡುತ್ತಿದೇನೆ.'

"ಕಿವಿಯಲ್ಲಿ ಕೇಳುವುದಕ್ಕಿಂತ ಕಣ್ಣಿನಿಂದ ನೋಡುವುದು ಅತ್ಯಂತ ಮೇಲು. ಕಣ್ಣಿನಿಂದ ನೋಡಿದನಂತರ ಸಕಲ ಸಂದೇಹಗಳೂ ನಿವೃತ್ತಿ ಯಾಗಿಬಿಡುತ್ತವೆ. ಶಾಸ್ತ್ರಗಳಿಂದಲೇನೊ ಭಗವಂತನ ಸಂಬಂಧವಾಗಿ ಅನೇಕ ವಿಷಯಗಳನ್ನು ತಿಳಿದುಕೊಳ್ಳಬಹುದು; ಆದರೆ ಆತನ ಸಾಕ್ಷಾ ತ್ಕಾರ ಮಾಡಿಕೊಳ್ಳದೆ ಇದ್ದರೆ, ಆತನ ಪಾದಪದ್ಮಗಳಲ್ಲಿ ಭಕ್ತಿ ಉಂಟು ಮಾಡಿಕೊಳ್ಳದೆ ಇದ್ದರೆ, ಚಿತ್ತಶುದ್ಧಿ ಉಂಟುಮಾಡಿಕೊಳ್ಳದೆ ಇದ್ದರೆ ಎಲ್ಲವೂ ವ್ಯರ್ಥ. ಪಂಚಾಂಗದಲ್ಲಿ ಬರೆದಿರುತ್ತದೆ, ಇಪ್ಪತ್ತು ಕೊಳಗ ಮಳೆ ಬೀಳುವುದೆಂದು. ಆದರೆ ಅದನ್ನು ಹಿಂಡಿದರೆ ಒಂದು ತೊಟ್ಟು ನೀರೂ ಕೆಳಕ್ಕೆ ಬೀಳದು. ಒಂದೇ ಒಂದು ತೊಟ್ಟು ಹೇಳು, ಬೀಳದು.

"ಶಾಸ್ತ್ರಗಳ ಸಂಬಂಧವಾಗಿ ವಿಚಾರ ಎಲ್ಲಿಯವರೆಗೆ? ಭಗವಂತನ ಸಾಕ್ಷಾತ್ಕಾರ ಆಗದವರೆಗೆ. ದುಂಬಿ ಝೇಂಕರಿಸುತ್ತದೆ ಎಲ್ಲಿಯವರೆಗೆ? ಹೂವಿನ ಮೇಲೆ ಕೂರದವರೆಗೆ. ಹೂವಿನ ಮೇಲೆ ಕುಳಿತು ಮಧುಪಾನ ಮಾಡಲು ಆರಂಭಿಸಿದೊಡನೇ ಶಬ್ದ-ಗಿಬ್ದ ಎಲ್ಲ ನಿಂತುಹೋಗಿಬಿಡುತ್ತವೆ.

"ಆದರೆ ಒಂದು ವಿಷಯವನ್ನು ನೀನು ಜ್ಞಾಪಕದಲ್ಲಿ ಇಟ್ಟುಕೊಳ್ಳ ಬೇಕು. ಭಗವಂತನ ದರ್ಶನ ದೊರೆತನಂತರವೂ ಮಾತುಕತೆ ನಡೆಯ ಬಹುದು. ಅದು ಕೇವಲ ಭಗವಂತನ ಮತ್ತು ಆತನಲ್ಲಿ ದೊರೆಯುವ ಆನಂದದ ವಿಷಯವಾಗಿ ಮಾತ್ರವೇ. ಇದು ಕುಡುಕ, 'ಜೈ ಕಾಳಿ!' ಅಂತ ಹೇಳೋದಿಲ್ಲವೆ, ಹಾಗೆ. ಆತನಿಗೆ ಬೇರೇನೂ ಸಾಧ್ಯವಿಲ್ಲ, ಮತ್ತು ಹಿಡಿದಿರುವುದರಿಂದ. ಮತ್ತೆ ಇದು ದುಂಬಿ ಹೂವಿನ ಮೇಲೆ ಕುಳಿತು ಮಧುಪಾನ ಮಾಡಿದನಂತರ ಮೆಲ್ಲಗೆ ಅಸ್ಪಷ್ಟ ಧ್ವನಿ ಮಾಡುವ ಹಾಗೆ.

"ಜ್ಞಾನಿ, 'ನೇತಿ, ನೇತಿ', 'ಇದಲ್ಲ, ಇದಲ್ಲ' ಎಂದು ವಿಚಾರ ಮಾಡುತ್ತಾನೆ. ಹೀಗೇ ವಿಚಾರ ಮಾಡುತ್ತ ಮಾಡುತ್ತ ಮುಂದುವರಿದರೆ ಕೊನೆಗೆ ಎಲ್ಲಿ ಆತನಿಗೆ ಆನಂದ ದೊರೆಯುವುದೊ ಅದೇ ಬ್ರಹ್ಮ. ಜ್ಞಾನಿಯ ಸ್ವಭಾವವೇನು? ಆತ ಶಾಸ್ತ್ರಾನುಸಾರ ನಡೆದುಕೊಳ್ಳುತ್ತಾನೆ.

"ಒಮ್ಮೆ ನನ್ನನ್ನು ಚಾಣಕ ಎಂಬ ಸ್ಥಳಕ್ಕೆ ಕರೆದುಕೊಂಡುಹೋಗಿದ್ದರು. ಅಲ್ಲಿ ಕೆಲವು ಮಂದಿ ಸಾಧುಗಳು ಇದ್ದರು. ಅವರಲ್ಲಿ ಕೆಲವರು ಬಟ್ಟೆ ಹೊಲಿಯುತ್ತಿದ್ದರು. (ಎಲ್ಲರೂ ನಗುತ್ತಿದಾರೆ.) ನಾವು ಅಲ್ಲಿಗೆ ಹೋದೊಡನೇ ಆ ಕೆಲಸ ಅಲ್ಲಿಗೇ ನಿಲ್ಲಿಸಿ ಪದ್ಮಾಸನ ಹಾಕಿಕೊಂಡು ನಮ್ಮೊಡನೆ ಮಾತುಕತೆಗಳಾಡಲು ಆರಂಭಿಸಿದರು. (ಎಲ್ಲರೂ ನಗುತ್ತಿದಾರೆ.)

"ಭಗವಂತನ ಸಂಬಂಧವಾಗಿ ಪ್ರಶ್ನೆ ಹಾಕದ ಹೊರತು ತಾವಾಗೇ ಜ್ಞಾನಿಗಳು ಆತನ ಮಾತು ಎತ್ತುವುದಿಲ್ಲ. ಜನ ಅವರನ್ನು ಸಮೀಪಿಸಿದೊಡನೇ ಅವರಿಗೆ ಕೆಲವು ಕುಶಲಪ್ರಶ್ನೆಗಳನ್ನು ಹಾಕಿ ಸುಮ್ಮನಿದ್ದು ಬಿಡುತ್ತಾರೆ.

"ಆದರೆ ವಿಜ್ಞಾನಿಗಳ ಸ್ವಭಾವ ಬೇರೆ. ಅವರಿಗೆ ಈ ಜಗತ್ತಿನ ಎಲ್ಲದರ ಮೇಲೂ ಔದಾಸೀನ್ಯ. ಒಮ್ಮೊಮ್ಮೆ ಅವರು ಉಟ್ಟಿದ್ದ ಬಟ್ಟೆ ಕಳಚಿ ಎಲ್ಲೋ ಬಿದ್ದುಹೋಗಿಬಿಡಬಹುದು ಅಥವಾ ಅವನ್ನು ಕಂಕುಳಲ್ಲಿ ಇರುಕಿಕೊಂಡು ಮಕ್ಕಳ ಹಾಗೆ ಸುತ್ತಾಡಬಹುದು.

"ಭಗವಂತನಿದಾನೆ ಎಂಬುದಾಗಿ ತಿಳಿದುಕೊಂಡಿರುವವನಿಗೆ 'ಜ್ಞಾನಿ' ಅಂತ ಹೆಸರು. ಕಟ್ಟಿಗೆಯಲ್ಲಿ ನಿಶ್ಚಯವಾಗಿಯೂ ಬೆಂಕಿ ಇದೆ ಎಂಬುದಾಗಿ ಅರಿತುಕೊಂಡಿರುವವನೇ ಜ್ಞಾನಿ. ಆದರೆ ಯಾರು ಅದನ್ನು ಹೊತ್ತಿಸಿ, ಅದರಿಂದ ಅಡಿಗೆ ಮಾಡಿ ತೇಗು ಬರುವವರೆಗೆ ಊಟಮಾಡುವನೊ ಆತನೇ ವಿಜ್ಞಾನಿ. ವಿಜ್ಞಾನಿಯ ಅಷ್ಟ ಪಾಶಗಳೂ ಕಳಚಿಹೋಗುತ್ತವೆ—ಕಾಮ ಕ್ರೋಧಾದಿಗಳ ಚಿಹ್ನೆ ಮಾತ್ರ ಉಳಿದುಕೊಂಡಿರುತ್ತವೆ."

ಪಂಡಿತ: "'ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ' ಅಂದರೆ, 'ಆತನ ಹೃದಯಗ್ರಂಥಿಗಳೆಲ್ಲ ಕತ್ತರಿಸಿಹೋಗುತ್ತವೆ; ಎಲ್ಲಾ ಸಂಶಯಗಳೂ ನಿವೃತ್ತಿಯಾಗಿಬಿಡುತ್ತವೆ.'"

ಶ್ರೀರಾಮಕೃಷ್ಣರು: "ಹೌದು, ನಿಜ. ಒಮ್ಮೆ ಒಂದು ಜಹಜು ಸಮುದ್ರದ ಮೂಲಕ ಹೋಗುತ್ತಿತ್ತು. ಇದ್ದಕ್ಕಿದ್ದಹಾಗೆ ಅದರ ಕಬ್ಬಿಣದ

ಕೀಲು, ಮೊಳೆ, ಸ್ಕ್ರೂ ಎಲ್ಲಾ ಕಳಚಿ ಬಿದ್ದುಹೋದುವು. ಹತ್ತಿರ ಚುಂಬಕದ ಬೆಟ್ಟ ಇದ್ದುದರಿಂದ ಅದು ಹಾಗಾಯಿತು.

"ನಾನು ಆಗಾಗ ಕೃಷ್ಣಕಿಶೋರನ ಮನೆಗೆ ಹೋಗುತ್ತಿದ್ದೆ. ಒಂದು ದಿನ ಅಲ್ಲಿಗೆ ಹೋಗಿದ್ದಾಗ ಆತ ನನ್ನನ್ನು ಕೇಳಿದ: 'ನೀವು ಎಲಡಿಕೆ ಹಾಕಿಕೊಳ್ಳುತ್ತೀರಲ್ಲ ಏಕೆ?' ನಾನು ಉತ್ತರವಿತ್ತೆ: 'ನನ್ನ ಖುಷಿ. ಇಚ್ಛೆಬಂತು ಎಂದರೆ, ಎಲಡಿಕೆ ಹಾಕಿಕೊಳ್ಳುವುದಲ್ಲದೆ, ಕನ್ನಡಿಯಲ್ಲಿ ಮುಖವನ್ನೂ ನೋಡಿಕೊಳ್ಳುತ್ತೇನೆ, ಸಾವಿರಾರು ಯುವತಿಯರ ಮಧ್ಯೆ ಬರೀ ಬತ್ತಲೆ ಕುಣಿದಾಡಿಯೂ ಬಿಡುತ್ತೇನೆ.' ಕೃಷ್ಣಕಿಶೋರನನ್ನು ಆತನ ಹೆಂಡತಿ ಗದರಿಸಿ ಹೇಳಿದಳು: 'ನೀವು ಹಾಗೆ ಕೇಳಿದಿರೇನು? ಯಾರೊಡನೆ ಹೇಗೆ ಮಾತಾಡಬೇಕು ಎಂಬುದು ನಿಮಗೆ ಸ್ವಲ್ಪವೂ ಗೊತ್ತಿಲ್ಲ.'

"ಈ ಅವಸ್ಥೆಯಲ್ಲಿ ಕಾಮಕ್ರೋಧಾದಿಗಳೆಲ್ಲ ಭಸ್ಮವಾಗಿ ಹೋಗುತ್ತವೆ. ಅದರಿಂದ ಶರೀರವೇನೂ ಬದಲಾಯಿಸಿಬಿಡೋದಿಲ್ಲ. ಉಳಿದವರ ಶರೀರದ ಹಾಗೇ ಇರುತ್ತದೆ. ಆದರೆ ಒಳಗಡೆ ಎಲ್ಲ ಖಾಲಿಯಾಗಿರುತ್ತದೆ, ನಿರ್ಮಲವಾಗಿರುತ್ತದೆ."

ಒಬ್ಬ ಭಕ್ತ: "ಭಗವಂತನ ದರ್ಶನ ದೊರೆತಮೇಲೂ ಈ ಶರೀರ ಬದುಕಿಕೊಂಡಿರುವುದೆ?"

ಶ್ರೀರಾಮಕೃಷ್ಣರು: "ಕೆಲಕೆಲವರ ಶರೀರ ಸ್ವಲ್ಪ ಕೆಲಸಗಳಿಗಾಗಿ—ಲೋಕಶಿಕ್ಷಣಕ್ಕಾಗಿ ಉಳಿದುಕೊಂಡಿರುತ್ತದೆ. ಗಂಗಾ ಸ್ನಾನದಿಂದ ಪಾಪ ಹೋಗಿ ಮುಕ್ತಿ ದೊರೆಯುತ್ತದೆ, ಆದರೆ ಕುರುಡು ಮಾತ್ರ ಹೋಗುವುದಿಲ್ಲ. ಆದರೆ ಇದು ನಿಜ, ಹಿಂದಿನ ಪಾಪಕರ್ಮಗಳ ಫಲಭೋಗವನ್ನು ಅನುಭವಿಸಲು ಎಷ್ಟು ಜನ್ಮಗಳನ್ನು ಎತ್ತಬೇಕಾಗಿತ್ತೊ ಅವನ್ನು ಮತ್ತೆ ಎತ್ತಬೇಕಾಗಿರೋದಿಲ್ಲ. ಯಾವ ಕರ್ಮಗಳ ದೆಸೆಯಿಂದ ಪ್ರಸ್ತುತ ಶರೀರ ಉದ್ಭವವಾಯಿತೊ, ಅವು ಮುಗಿಯುವವರೆಗೆ ಮಾತ್ರ ಅದು ಬದುಕಿಕೊಂಡಿರುತ್ತದೆ; ಉಳಿದ ಜನ್ಮಗಳನ್ನ ಮತ್ತೆ ಎತ್ತಬೇಕಾಗಿರೋದಿಲ್ಲ. ಕಾಮಕ್ರೋಧಾದಿಗಳೆಲ್ಲ ಸುಟ್ಟು ಭಸ್ಮ ಆಗಿಬಿಡುತ್ತವೆ. ಶರೀರ ಮಾತ್ರ ಉಳಿದುಕೊಂಡಿರುತ್ತದೆ ಇನ್ನು ಸ್ವಲ್ಪ ಕಾಲ—ಕೆಲವು ಕಾರ್ಯಗಳನ್ನ ಮುಗಿಸಲು."

ಪಂಡಿತ: "ಅದಕ್ಕೇ 'ಸಂಸ್ಕಾರ' ಅಂತ ಹೆಸರು."

ಶ್ರೀರಾಮಕೃಷ್ಣರು: "ವಿಜ್ಞಾನಿ ಸತತ ಭಗವದ್ದರ್ಶನ ಮಾಡುತ್ತಿರುತ್ತಾನೆ. ಅದಕ್ಕೇ ಆತನಿಗೆ ಈ ಜಗತ್ತಿನ ಕಡೆ ಉದಾಸೀನಭಾವ.

ಈ ಕಣ್ಣುಗಳನ್ನು ತೆರೆದುಕೊಂಡೇ ಆತನ ದರ್ಶನಮಾಡುತ್ತಾನೆ. ಕೆಲವು ವೇಳೆ ನಿತ್ಯದಿಂದ ಲೀಲೆಗೆ ಇಳಿದುಬರುತ್ತಾನೆ, ಇನ್ನು ಕೆಲವು ವೇಳೆ ಲೀಲೆಯಿಂದ ನಿತ್ಯಕ್ಕೆ ಹತ್ತಿಹೋಗುತ್ತಾನೆ.''

ಪಂಡಿತ: ''ಇದು ನನಗೆ ಅರ್ಥವಾಗಲಿಲ್ಲ.''

ಶ್ರೀರಾಮಕೃಷ್ಣರು: ''ಜ್ಞಾನಿ, 'ನೇತಿ, ನೇತಿ', 'ಇದಲ್ಲ, ಇದಲ್ಲ' ಎಂದು ವಿಚಾರ ಮಾಡಿ ಕೊನೆಗೆ ನಿತ್ಯ ಅಖಂಡ ಸಚ್ಚಿದಾನಂದನನ್ನು ಮುಟ್ಟಿಬಿಡುತ್ತಾನೆ. ಆತ ಈ ರೀತಿಯಾಗಿ ವಿಚಾರ ಮಾಡುತ್ತಾನೆ: 'ಬ್ರಹ್ಮ ಜೀವವಲ್ಲ, ಜಗತ್ತಲ್ಲ, ಚತುರ್ವಿಂಶತಿ ತತ್ತ್ವಗಳಲ್ಲ.' ಈ ವಿಧವಾದ ವಿಚಾರದಿಂದ ಕೊನೆಗೆ ಸಚ್ಚಿದಾನಂದನ ಸಾಕ್ಷಾತ್ಕಾರ ದೊರೆಯುತ್ತದೆ. ಆಗ ಆತನಿಗೆ ಅನುಭವವಾಗುತ್ತದೆ, ಆತನೇ ಇದೆಲ್ಲ ಆಗಿರುವ ಹಾಗೆ—ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಎಲ್ಲ.

''ಹಾಲಿಗೆ ಹೆಪ್ಪು ಹಾಕಿ ಮೊಸರು ಮಾಡಿ ಕಡೆದು ಬೆಣ್ಣೆ ತೆಗೆಯಬೇಕು. ಬೆಣ್ಣೆಯನ್ನು ತೆಗೆದನಂತರ ಅರ್ಥವಾಗುತ್ತದೆ, ಬೆಣ್ಣೆ ಮಜ್ಜಿಗೆಗೆ ಸೇರಿದ್ದು, ಮಜ್ಜಿಗೆ ಬೆಣ್ಣೆಗೆ ಸೇರಿದ್ದು ಎಂಬುದಾಗಿ. ತೊಗಟೆ ಕಾಂಡಕ್ಕೆ ಸೇರಿದ್ದು, ಕಾಂಡ ತೊಗಟೆಗೆ ಸೇರಿದ್ದು.''

ಪಂಡಿತ ನಗುತ್ತ ಭೂಧರನಿಗೆ: ''ಅರ್ಥವಾಯಿತೆ? ಇದನ್ನು ತಿಳಿದುಕೊಳ್ಳುವುದು ಬಹಳ ಕಷ್ಟ.''

ಶ್ರೀರಾಮಕೃಷ್ಣರು: ''ಬೆಣ್ಣೆಯ ಉತ್ಪನ್ನದೊಡನೆ ಮಜ್ಜಿಗೆಯೂ ಉತ್ಪನ್ನವಾಗಲೇ ಬೇಕು. ಬೆಣ್ಣೆಯ ಭಾವನೆಯೊಡನೆ ಮಜ್ಜಿಗೆಯ ಭಾವನೆಯನ್ನೂ ಮಾಡಲೇ ಬೇಕು—ಏಕೆಂದರೆ ಮಜ್ಜಿಗೆ ಉತ್ಪನ್ನವಾಗದಿದ್ದರೆ ಬೆಣ್ಣೆಯೂ ಉತ್ಪನ್ನವಾಗುವ ಹಾಗಿಲ್ಲ. ಈ ಕಾರಣದಿಂದ ನಿತ್ಯವನ್ನು ಒಪ್ಪಿಕೊಂಡರೆ ಲೀಲೆಯನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಮೊದಲು ವಿಲೋಮ ಅನಂತರ ಅನುಲೋಮ. ಸಾಕಾರ ನಿರಾಕಾರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡನಂತರ ಈ ಅವಸ್ಥೆ ಉಂಟಾಗುತ್ತದೆ. ಸಾಕಾರ ಚಿನ್ಮಯ ರೂಪ; ನಿರಾಕಾರ ಅಖಂಡ ಸಚ್ಚಿದಾನಂದ.

''ಬ್ರಹ್ಮನೇ ಎಲ್ಲವೂ ಆಗಿದಾನೆ. ಆದ್ದರಿಂದ ವಿಜ್ಞಾನಿಗೆ ಈ ಜಗತ್ತು ಒಂದು 'ಆನಂದ ಭವನ'. ಆದರೆ ಜ್ಞಾನಿಗೆ ಒಂದು 'ಮಾಯೆಯ ಚೌಕಟ್ಟು'. ರಾಮಪ್ರಸಾದ ಈ ಜಗತ್ತನ್ನು ಒಂದು 'ಮಾಯೆಯ ಚೌಕಟ್ಟು' ಎಂದು ವರ್ಣನೆ ಮಾಡಿದ. ಇನ್ನೊಬ್ಬ ಅದಕ್ಕೆ ಎದುರುತ್ತರ ಕೊಟ್ಟ:

ಈ ಜಗವೆಂಬುದು ಮೋಜಿನ ಮನೆಯೊ !
ಇದರೊಳು ನಾ ಮನಬಂದೊಲು ನಡೆವೆ. . . ( ಉ. ೨೯೯ )

"ವಿಜ್ಞಾನಿ ಭಗವದಾನಂದವನ್ನ ವಿಶೇಷ ರೀತಿಯಾಗಿ ಅನುಭವಿಸುತ್ತಾನೆ. ಕೆಲವರು ಹಾಲಿನ ಸಂಬಂಧವಾಗಿ ಕೇಳಿದಾರೆ, ಇನ್ನು ಕೆಲವರು ಅದನ್ನು ನೋಡಿದಾರೆ, ಮತ್ತೆ ಕೆಲವರು ಅದನ್ನು ಕುಡಿದಿದಾರೆ. ವಿಜ್ಞಾನಿ ಹಾಲನ್ನು ಕುಡಿದಿರುವುದೂ ಅಲ್ಲದೆ, ಕುಡಿದನಂತರ ಆನಂದವನ್ನೂ ಪಟ್ಟಿದಾನೆ, ಹೃಷ್ಟಪುಷ್ಟನೂ ಆಗಿದಾನೆ."

ಪರಮಹಂಸರು ಈಗ ಸುಮ್ಮನೆ ಕುಳಿತಿದಾರೆ. ಪಂಡಿತನಿಗೆ ಹೇಳುತ್ತಿದಾರೆ, ಗುಡುಗುಡಿ ಸೇದುವಂತೆ. ಆತ ಆಗ್ನೇಯ ವರಾಂಡಕ್ಕೆ ಹೋದ ಗುಡುಗುಡಿ ಕುಡಿಯಲು. ಕುಡಿದು ಮುಗಿಸಿದನಂತರ ಆತ ಕೊಠಡಿಗೆ ಹಿಂದಿರುಗಿಬಂದು ಭಕ್ತರ ಮಧ್ಯೆ ನೆಲದ ಮೇಲೆ ಕುಳಿತುಕೊಳ್ಳುತ್ತಿದಾನೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಮಾತುಕತೆಯಾಡಲು ಈಗ ಆರಂಭಿಸಿದಾರೆ.

ಶ್ರೀರಾಮಕೃಷ್ಣರು ಪಂಡಿತನಿಗೆ: "ನಿನಗೆ ಇದನ್ನು ತಿಳಿಸಬೇಕು ಅಂತ ಇದೇನೆ. ಆನಂದದಲ್ಲಿ ಮೂರು ವಿಧ—ವಿಷಯಾನಂದ, ಭಜನಾನಂದ, ಬ್ರಹ್ಮಾನಂದ. ಯಾವುದರ ಕಡೆ ಜನ ಸರ್ವದಾ ನುಗ್ಗುತ್ತಿರುವರೊ, ಎಂದರೆ ಕಾಮಕಾಂಚನಗಳ ಆನಂದದ ಕಡೆ, ಅದಕ್ಕೆ ವಿಷಯಾನಂದ ಅಂತ ಹೆಸರು. ಭಗವಂತನ ನಾಮಗುಣಕೀರ್ತನೆಯಿಂದ ದೊರೆಯುವ ಆನಂದಕ್ಕೆ ಭಜನಾನಂದ ಅಂತ ಹೆಸರು. ಭಗವಂತನ ದರ್ಶನದಿಂದ ಯಾವ ಆನಂದ ದೊರೆಯುತ್ತದೆಯೊ ಅದಕ್ಕೆ ಬ್ರಹ್ಮಾನಂದ ಅಂತ ಹೆಸರು. ಬ್ರಹ್ಮಾನಂದ ದೊರೆತನಂತರ ಹಿಂದಿನ ಕಾಲದ ಋಷಿಗಳು ಸಾಂಪ್ರದಾಯಿಕ ರೀತಿ ನೀತಿಗಳ ಎಲ್ಲೆಯನ್ನು ದಾಟಿಹೋಗಿಬಿಡುತ್ತಿದ್ದರು.

"ಚೈತನ್ಯದೇವನಿಗೆ ಮೂರು ವಿಧದ ಅವಸ್ಥೆ ಉಂಟಾಗುತ್ತಿದ್ದುವು—ಅಂತರ್ದಶಾವಸ್ಥೆ, ಅರ್ಧ ಬಾಹ್ಯದಶಾವಸ್ಥೆ, ಬಾಹ್ಯದಶಾವಸ್ಥೆ. ಅಂತರ್ದಶಾವಸ್ಥೆಯಲ್ಲಿ ಭಗವಂತನನ್ನು ದರ್ಶನಮಾಡುತ್ತ ಸಮಾಧಿಸ್ಥನಾಗುತ್ತಿದ್ದ—ಜಡಸಮಾಧಿಯ ಅವಸ್ಥೆ ಉಂಟಾಗುತ್ತಿತ್ತು. ಅರ್ಧ ಬಾಹ್ಯದಶಾವಸ್ಥೆಯಲ್ಲಿ ಒಂದು ಕಿಂಚಿತ್ ಬಾಹ್ಯ ಪ್ರಜ್ಞೆ ಆತನಿಗೆ ಇರುತ್ತಿತ್ತು. ಬಾಹ್ಯದಶಾವಸ್ಥೆಯಲ್ಲಿದ್ದಾಗ ಭಗವಂತನ ನಾಮಗುಣಕೀರ್ತನೆ ಮಾಡಲು ಆತನಿಗೆ ಸಾಧ್ಯವಾಗುತ್ತಿತ್ತು."

ಹಾಜರಾ ಪಂಡಿತನಿಗೆ: "ಈಗ ನಿನ್ನ ಸಂದೇಹಗಳೆಲ್ಲ ನಿವೃತ್ತಿಯಾಗಿ ಬಿಟ್ಟುವು."

ಶ್ರೀರಾಮಕೃಷ್ಣರು ಪಂಡಿತನಿಗೆ: "ಯಾವುದಕ್ಕೆ ಸಮಾಧಿ ಅಂತ ಹೇಳುತ್ತಾರೆ? ಯಾವ ಅವಸ್ಥೆಯಲ್ಲಿ ಮನಸ್ಸು ಬ್ರಹ್ಮನಲ್ಲಿ ಲಯವಾಗುವುದೊ ಆ ಅವಸ್ಥೆಗೆ. ಜ್ಞಾನಿಗೆ ಜಡಸಮಾಧಿ ಉಂಟಾಗುತ್ತದೆ—ಆಗ 'ಅಹಂ' ಇರದು. ಭಕ್ತಿಯೋಗದ ಮೂಲಕ ದೊರೆಯುವ ಸಮಾಧಿಗೆ 'ಚೇತನ ಸಮಾಧಿ' ಅಂತ ಹೆಸರು. ಇದರಲ್ಲಿ ಸೇವ್ಯ ಸೇವಕನ, ರಸ ರಸಿಕನ, ಆಸ್ವಾದ್ಯ ಆಸ್ವಾದಕನ 'ಅಹಂ' ಉಳಿದುಕೊಂಡಿರುತ್ತದೆ. ಭಗವಂತ ಸೇವ್ಯ; ಭಕ್ತ ಸೇವಕ. ಭಗವಂತ ರಸಸ್ವರೂಪ; ಭಕ್ತ ರಸಿಕ. ಭಗವಂತ ಆಸ್ವಾದ್ಯ; ಭಕ್ತ ಆಸ್ವಾದಕ. 'ಸಕ್ಕರೆಯಾಗಲು ಇಚ್ಛೆಯಿಲ್ಲ. ಸಕ್ಕರೆ ತಿನ್ನಲು ಇಚ್ಛೆ.'"

ಪಂಡಿತ: "ಭಗವಂತ ಒಂದು ಪಕ್ಷ ಭಕ್ತನ 'ಅಹಂ' ಅನ್ನು ಸಂಪೂರ್ಣವಾಗಿ ನಾಶಮಾಡಿ ಆತನನ್ನು ಸಕ್ಕರೆಯನ್ನಾಗಿ ಮಾಡಿಕೊಂಡು ಬಿಟ್ಟರೆ?"

ಶ್ರೀರಾಮಕೃಷ್ಣರು ನಗುತ್ತ: "ಬಾ, ಬಾ ಇಲ್ಲಿ! ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು. 'ತಾಯಿ ಕೌಸಲ್ಯೇ, ನಿನ್ನ ಮನಸ್ಸಿನ ದುಗುಡ ಏನು ಎಂಬುದನ್ನ ದಯವಿಟ್ಟು ಹೊರಗೆಡಹಮ್ಮಾ!' (ಎಲ್ಲರೂ ನಗುತ್ತಿದಾರೆ.) ನಾರದ, ಸನಕ, ಸನಂದ, ಸನತ್ಕುಮಾರ ಇವರ ವಿಷಯವಾಗಿ ಶಾಸ್ತ್ರಗ್ರಂಥಗಳಲ್ಲಿ ಹೇಳಿರುವುದು ಏನು ಮತ್ತೆ?"

ಪಂಡಿತ: "ಹೌದು, ಅವರ ವಿಷಯವಾಗಿ ಇದೆ—ಶಾಸ್ತ್ರಗ್ರಂಥಗಳಲ್ಲಿ."

ಶ್ರೀರಾಮಕೃಷ್ಣರು: "ಅವರು ಜ್ಞಾನಿಗಳಾಗಿದ್ದರೂ ಭಕ್ತನ 'ಅಹಂ' ಅನ್ನು ಇಟ್ಟುಕೊಂಡಿದ್ದರು. ನೀನು ಭಾಗವತವನ್ನು ಓದಿಲ್ಲ?"

ಪಂಡಿತ: "ಸ್ವಲ್ಪ ಭಾಗವನ್ನು ಓದಿದೇನೆ, ಪೂರ್ಣವಾಗಿ ಇಲ್ಲ."

ಶ್ರೀರಾಮಕೃಷ್ಣರು: "ಪ್ರಾರ್ಥನೆ ಮಾಡು. ಭಗವಂತ ದಯಾಮಯ. ಆತ ಭಕ್ತರ ಪ್ರಾರ್ಥನೆಗೆ ಕಿವಿಗೊಡೋಲ್ಲ ಅಂತ ತಿಳಿದುಕೊಂಡಿದೀಯೇನು? ಆತ ಕಲ್ಪತರು. ಪ್ರಾರ್ಥಿಸಿದ್ದೆಲ್ಲಾ ದೊರೆಯುತ್ತದೆ."

ಪಂಡಿತ: "ಇವುಗಳ ಸಂಬಂಧವಾಗಿ ನಾನು ಇಷ್ಟೊಂದು ಆಳಕ್ಕೆ ಹೋಗಿರಲಿಲ್ಲ. ಈಗ ನನಗೆ ಚೆನ್ನಾಗಿ ಅರ್ಥವಾಗುತ್ತಿದೆ."

ಶ್ರೀರಾಮಕೃಷ್ಣರು: "ಬ್ರಹ್ಮಜ್ಞಾನವನ್ನು ಕೃಪೆಮಾಡಿದನಂತರವೂ ಭಗವಂತ ಭಕ್ತನಲ್ಲಿ ಸ್ವಲ್ಪ 'ಅಹಂ' ಅನ್ನು ಉಳಿಸಿಬಿಟ್ಟಿರುತ್ತಾನೆ. ಆ 'ಅಹಂ', 'ಭಕ್ತನ ಅಹಂ', 'ವಿದ್ಯೆಯ ಅಹಂ'. ಆ 'ಅಹಂ' ಮೂಲಕ ಭಕ್ತ ಭಗವಂತನ ಅನಂತ ಲೀಲೆಯನ್ನು ಆಸ್ವಾದಿಸುತ್ತಾನೆ.

"ಕುಟ್ಟಿ ಕುಟ್ಟಿ ಒನಕೆ ಬಹಳವಾಗಿ ಸವೆದುಹೋಗಿ ಎಲ್ಲೊ ಅದರ ಒಂದು ಕಿಂಚಿತ್ತು ಭಾಗ ಮಾತ್ರ ಉಳಿದುಕೊಂಡಿತ್ತು. ಅದು ಒಮ್ಮೆ ಜೊಂಡಿನ ಪೊದೆಯೊಳಕ್ಕೆ ಬಿದ್ದುಹೋಗಿ ಯದುವಂಶದ ನಾಶಕ್ಕೇ ಮೂಲ ಕಾರಣವಾಗಿಬಿಟ್ಟಿತು. ವಿಜ್ಞಾನಿ 'ಭಕ್ತನ ಅಹಂ', 'ವಿದ್ಯೆಯ ಅಹಂ' ಇಟ್ಟುಕೊಳ್ಳುತ್ತಾನೆ—ಆಸ್ವಾದನಕ್ಕಾಗಿ, ಲೋಕಶಿಕ್ಷಣಕ್ಕಾಗಿ.

"ಹಿಂದಿನ ಕಾಲದ ಋಷಿಗಳದು ಬಹಳ ಪುಕ್ಕಲ ಸ್ವಭಾವ. ಅವರನ್ನು ಬಹಳ ಸುಲಭವಾಗಿ ಹೆದರಿಸಿಬಿಡಬಹುದಾಗಿತ್ತು. ಅವರ ಮಾನಸಿಕ ಪ್ರವೃತ್ತಿ ಏನಾಗಿತ್ತು ಗೊತ್ತೆ? 'ಯಾವ ರೀತಿಯಿಂದಲಾದರೂ ನನಗೆ ಮುಕ್ತಿ ದೊರೆತುಬಿಟ್ಟರೆ ಸಾಕು; ಉಳಿದವರನ್ನು ಕಟ್ಟಿಕೊಂಡು ನನಗೇನು?' ಎನ್ನುವ ಸ್ವಭಾವ. ಬೆಂಡು ಹೇಗೊ ಮಾಡಿ ತಾನು ಮಾತ್ರ ತೇಲಿಕೊಂಡು ಹೋಗಬಲ್ಲದು; ಆದರೆ ಅದರ ಮೇಲೆ ಒಂದು ಪುಟ್ಟ ಹಕ್ಕಿ ಕುಳಿತು ಕೊಂಡರೂ ಮುಳುಗಿಹೋಗಿಬಿಡುತ್ತದೆ. ನಾರದಾದಿ ಋಷಿಗಳು ಹೆಮ್ಮರ ಇದ್ದ ಹಾಗೆ. ಅದು ತಾನೂ ತೇಲಿಕೊಂಡುಹೋಗುವುದಲ್ಲದೆ, ಅನೇಕ ಜೀವಜಂತುಗಳನ್ನೂ ಹೊತ್ತುಕೊಂಡುಹೋಗಬಲ್ಲದು. ಜಹಜು ತಾನೂ ಸಮುದ್ರವನ್ನು ದಾಟಬಿಡುವುದಲ್ಲದೆ, ಇತರರನ್ನೂ ಸಮುದ್ರದಾಚೆಗೆ ಕರೆದೊಯ್ಯುತ್ತದೆ.

"ನಾರದಾದಿ ಆಚಾರ್ಯಪುರುಷರು ವಿಜ್ಞಾನಿಗಳು—ಉಳಿದ ಋಷಿ ಗಳಿಗಿಂತ ಹೆಚ್ಚು ಸಾಹಸವುಳ್ಳವರು. ಅವರನ್ನು ನಿಪುಣ ಪಗಡೆಯಾಟಗಾರ ನಿಗೆ ಹೋಲಿಸಬಹುದು. ಆತ ದಾಳ ಬಿಡುವಾಗ ಕೂಗಿಕೊಳ್ಳುತ್ತಾನೆ: 'ಈಗ ಎಷ್ಟು ಬೇಕು? ಆರೊ? ಇಲ್ಲ, ಐದು! ತಕೋ ಐದು!' ಆತ ಕೇಳಿದ ಗರ ಬೀಳುತ್ತಿರುತ್ತದೆ. ಆತ ಅತ್ಯಂತ ನಿಪುಣ ಆಟಗಾರ. ಆಟ ವಾಡುತ್ತಿರುವಾಗ ಒಮ್ಮೊಮ್ಮೆ ಮೀಸೆಯನ್ನೂ ಹುರಿಮಾಡುತ್ತಿರುತ್ತಾನೆ.

"ಬರಿಯ ಜ್ಞಾನಿ ಭಯಗ್ರಸ್ತ. ಆತನದು ಅಭ್ಯಾಸವಿಲ್ಲದ ಪಗಡೆ ಯಾಟಗಾರನ ಮನೋವೃತ್ತಿ—ಹೇಗೊ ಕಾಯಿಯನ್ನು ಹಣ್ಣುಮಾಡಿ ಕೊಂಡುಬಿಟ್ಟರೆ ಸಾಕಪ್ಪ ಎನ್ನುವ ಮನೋವೃತ್ತಿ. ಆದರೆ ವಿಜ್ಞಾನಿ

ಯಾವುದಕ್ಕೂ ಹೆದರೋದಿಲ್ಲ. ಆತ ಸಾಕಾರ, ನಿರಾಕಾರ ಸಾಕ್ಷಾತ್ಕಾರ ಮಾಡಿಕೊಂಡುಬಿಟ್ಟಿದಾನೆ. ಭಗವಂತನೊಡನೆ ಮಾತುಕತೆ ಆಡಿದಾನೆ. ಭಗವದಾನಂದವನ್ನ ಅನುಭವಿಸಿದಾನೆ.

"ಮನಸ್ಸು ಧ್ಯಾನದ ಮೂಲಕ ಅಖಂಡ ಸಚ್ಚಿದಾನಂದನಲ್ಲಿ ಲಯವಾಗಿಹೋದರೂ ಆನಂದವೇ, ಲಯವಾಗದೆ ಲೀಲೆಯಲ್ಲಿ ನೆಲಸಿದ್ದರೂ ಆನಂದವೇ ವಿಜ್ಞಾನಿಗೆ.

"ಬರಿಯ ಜ್ಞಾನಿಯದು ಕೇವಲ ಒಂದೇ ಸ್ವರ. ಯಾವಾಗ ನೋಡಿದರೂ ವಿಚಾರದಲ್ಲಿ ತೊಡಗಿರುತ್ತಾನೆ: 'ಇದಲ್ಲ, ಇದಲ್ಲ. ಈ ಇಡೀ ಜಗತ್ತು ಸ್ವಪ್ನದ ಹಾಗೆ.' ಆದರೆ ನಾನು 'ಎರಡು ಕೈಗಳನ್ನೂ ಮೇಲಕ್ಕೆ ಎತ್ತಿಬಿಟ್ಟಿದೇನೆ'. ಆದ್ದರಿಂದ ನಾನು ಎಲ್ಲವನ್ನೂ ಸ್ವೀಕರಿಸುತ್ತೇನೆ.

"ಒಂದು ಕಥೆ ಕೇಳು. ಒಮ್ಮೆ ಒಬ್ಬ ಹೆಂಗಸು ತನ್ನ ನೆಯ್ಗೆ ಗೆಳತಿಯನ್ನು ನೋಡಿಕೊಂಡುಬರಲು ಆಕೆಯ ಮನೆಗೆ ಹೋದಳು. ನೆಯ್ಗೆಯವಳು ಆ ಸಮಯದಲ್ಲಿ ದಾರ ತೆಗೆಯುತ್ತಿದ್ದಳು—ವಿವಿಧ ಬಗೆಯ ರೇಷ್ಮೆದಾರಗಳನ್ನ. ತನ್ನ ಗೆಳತಿ ಬಂದುದನ್ನು ನೋಡಿ ನೆಯ್ಗೆಯವಳಿಗೆ ಬಹಳ ಆನಂದವಾಗಿಬಿಟ್ಟು ಆಕೆ ಗೆಳತಿಗೆ ಹೇಳಿದಳು: 'ಗೆಳತಿ, ನೀನು ಬಂದುದನ್ನು ನೋಡಿ ನನಗೆಷ್ಟು ಆನಂದವಾಗಿಬಿಟ್ಟಿದೆ ಎಂಬುದನ್ನ ನಾನು ಬಾಯಿಂದ ವರ್ಣಿಸಲಾರೆ. ಸ್ವಲ್ಪ ಕುಳಿತುಕೊಂಡಿರು, ಉಪಾಹಾರ ತೆಗೆದುಕೊಂಡುಬರುತ್ತೇನೆ.' ನೆಯ್ಗೆಯವಳು ಅಡಿಗೆಮನೆಗೆ ಹೋದಳು. ಹತ್ತಿರದಲ್ಲಿ ಬಿದ್ದಿದ್ದ ವಿವಿಧ ಬಣ್ಣದ ರೇಷ್ಮೆದಾರಗಳನ್ನು ನೋಡಿ ಈಕೆಗೆ ಲೋಭ ಉಂಟಾಯಿತು. ಒಂದು ಕಟ್ಟನ್ನು ತೆಗೆದು ಕಂಕುಳಿಗೆ ಸೇರಿಸಿದಳು. ನೆಯ್ಗೆಯವಳು ಉಪಾಹಾರ ತೆಗೆದುಕೊಂಡುಬಂದು ಬಹಳ ಉತ್ಸಾಹದಿಂದ ಈಕೆಗೆ ಉಪಾಹಾರ ಮಾಡಿಸಿದಳು. ನೆಯ್ಗೆಯವಳ ಕಣ್ಣು ದಾರದ ಕಡೆಗೆ ಬಿದ್ದೊಡನೇ ಆಕೆಗೆ ಗೊತ್ತಾಗಿಬಿಟ್ಟಿತು, ತನ್ನ ಗೆಳತಿ ಒಂದು ಕಟ್ಟು ದಾರವನ್ನ ಹೊಡೆದುಬಿಟ್ಟಿರುವುದು. ಅದನ್ನು ಹಿಂದಿರುಗಿ ಪಡೆಯಲು ಆಕೆ ಒಂದು ಯುಕ್ತಿ ಹೂಡಿದಳು. ಆಕೆ ತನ್ನ ಗೆಳತಿಗೆ ಹೇಳಿದಳು: 'ಗೆಳತಿ, ಬಹಳ ದಿನಗಳಾದ ಮೇಲೆ ಇಂದು ನಿನ್ನ ದರ್ಶನ. ಇಂದು ಒಳ್ಳೆ ಶುಭದಿನವೇ. ನಾವಿಬ್ಬರೂ ಸ್ವಲ್ಪ ಹೊತ್ತು ನರ್ತಿಸೋಣ ಅಂತ ಬಹಳ ಉತ್ಕಟೇಚ್ಛೆಯಾಗುತ್ತಿದೆ ನನಗೆ.' ಈಕೆಯೂ ಹೇಳಿದಳು: 'ನನಗೂ

ಬಹಳ ಆನಂದವಾಗಿಬಿಟ್ಟಿದೆ.' ಬಳಿಕ ಇಬ್ಬರೂ ನರ್ತಿಸಲು ತೊಡಗಿದರು. ಈಕೆ ಕೈಯನ್ನು ಮೇಲಕ್ಕೆ ಎತ್ತದೆ ನರ್ತಿಸುತ್ತಿರುವುದನ್ನು ನೋಡಿ ಆಕೆ ಹೇಳಿದಳು: 'ಗೆಳತಿ, ನಾವು ಎರಡು ಕೈಗಳನ್ನೂ ಮೇಲಕ್ಕೆ ಎತ್ತಿ ನರ್ತಿಸೋಣ. ಇಂದು ಒಳ್ಳೆ ಆನಂದದ ದಿನ.' ಆದರೆ ಈಕೆ ಒಂದು ಕೈಯನ್ನು ಕಂಕುಳಿಗೆ ಒತ್ತಿಹಿಡಿದು, ಇನ್ನೊಂದು ಕೈಯನ್ನು ಮೇಲಕ್ಕೆ ಎತ್ತಿ ನರ್ತಿಸಲಾರಂಭಿಸಿದಳು. ಆಗ ಆಕೆ ಹೇಳಿದಳು: 'ಇದೇನಿದು? ಏಕೆ ಒಂದೇ ಕೈ ಎತ್ತಿ ನರ್ತಿಸುತ್ತಿದೀಯೆ? ಎರಡು ಕೈಗಳನ್ನೂ ಎತ್ತಿ ನರ್ತಿಸು. ನೋಡು ನನ್ನ ಕಡೆ. ಇಗೋ ನೋಡು, ನಾನು ಹೇಗೆ ಎರಡು ಕೈಗಳನ್ನೂ ಎತ್ತಿ ನರ್ತಿಸುತ್ತಿದೇನೆ.' ಆದರೆ ಈಕೆ ಒಂದು ಕೈಯನ್ನು ಇನ್ನೂ ಕಂಕುಳಿಗೆ ಒತ್ತಿಹಿಡಿದುಕೊಂಡು ನಗುತ್ತ ನಗುತ್ತ ಇನ್ನೊಂದು ಕೈಯನ್ನು ಮಾತ್ರವೇ ಮೇಲಕ್ಕೆತ್ತಿ ನರ್ತಿಸುತ್ತ ಹೇಳಲಾರಂಭಿಸಿದಳು: 'ಗೆಳತಿ, ನನಗೆ ಬರೋ ನರ್ತನ ಈ ತರದ್ದೇ.'"

ಪರಮಹಂಸರು ಮಾತು ಮುಂದುವರಿಸುತ್ತಿದಾರೆ: "ನಾನು ಕಂಕುಳನ್ನ ಕೈಯಿಂದ ಒತ್ತಿ ಹಿಡಿದುಕೊಂಡಿಲ್ಲ. ಎರಡು ಕೈಗಳನ್ನೂ ಬಿಟ್ಟುಬಿಟ್ಟಿದೇನೆ. ನನಗೆ ಯಾವುದರ ಭಯವೂ ಇಲ್ಲ. ನಾನು ನಿತ್ಯ, ಲೀಲೆ ಎರಡನ್ನೂ ಸ್ವೀಕರಿಸುತ್ತೇನೆ.

"ನಾನು ಕೇಶವಸೇನನಿಗೆ ಹೇಳಿದೆ: '"ಅಹಂ" ಅನ್ನು ತ್ಯಜಿಸದವರೆಗೆ ಭಗವಂತನ ಸಾಕ್ಷಾತ್ಕಾರ ಸಾಧ್ಯವಾಗೋದಿಲ್ಲ.' ಅದಕ್ಕೆ ಆತ ಹೇಳಿದ: 'ಹಾಗಾದರೆ, ಮಹಾಶಯರೆ, ನನ್ನ ಸಮಾಜ-ಗಿಮಾಜ ಒಂದೂ ಬದುಕುವ ಹಾಗೇ ಇಲ್ಲ.' ನಾನು ಹೇಳಿದೆ: '"ಅಪಕ್ವ ಅಹಂ", "ದುಷ್ಟ ಅಹಂ" ಇವನ್ನು ಮಾತ್ರ ತ್ಯಜಿಸು ಅಂತ ನಾನು ಹೇಳುತ್ತಿದೇನೆ. ಆದರೆ "ಪಕ್ವ ಅಹಂ", "ಬಾಲಕ ಅಹಂ", "ದಾಸ ಅಹಂ", "ವಿದ್ಯಾ ಅಹಂ" ಇವುಗಳಿಂದ ಯಾವ ಕೆಡುಕೂ ಉಂಟಾಗದು.'

"'ಸಂಸಾರಿಯ ಅಹಂ', 'ಅವಿದ್ಯಾ ಅಹಂ', ಎಂದರೆ 'ಅಪಕ್ವ ಅಹಂ' ಒಂದು ದಪ್ಪ ಕೋಲು ಇದ್ದ ಹಾಗೆ. ಸಚ್ಚಿದಾನಂದ ಸಾಗರದ ನೀರನ್ನು ಈ ಕೋಲು ಎರಡು ಭಾಗವಾಗಿ ಮಾಡಿರುವ ಹಾಗೆ ಕಾಣುತ್ತದೆ. ಆದರೆ 'ದಾಸ ಅಹಂ', 'ಬಾಲಕ ಅಹಂ', 'ವಿದ್ಯಾ ಅಹಂ' ನೀರಿನ ಮೇಲೆಳೆದ ಗೆರೆಯ ಹಾಗೆ. ಇದು ಒಂದೇ ಸಾಗರ ಎಂಬುದು ಸ್ಪಷ್ಟವಾಗಿ ಕಾಣಬರುತ್ತದೆ. ಸಾಗರ ಎರಡು ಭಾಗವಾಗಿರುವಂತೇನೊ ಆ ಗೆರೆ ತೋರಿಸ

ಬಹುದು, ಆದರೆ ವಾಸ್ತವಿಕವಾಗಿ ಅದು ಒಂದೇ ಸಾಗರ ಎಂಬುದನ್ನ ಸ್ಪಷ್ಟವಾಗಿ ನೋಡಬಹುದು.

"ಶಂಕರಾಚಾರ್ಯರು 'ವಿದ್ಯಾ ಅಹಂ' ಇಟ್ಟುಕೊಂಡಿದ್ದರು— ಲೋಕಶಿಕ್ಷಣಕ್ಕಾಗಿ. ಬ್ರಹ್ಮಜ್ಞಾನ ದೊರೆತನಂತರವೂ ಅನೇಕರ ಅಂತರ್ಯದಲ್ಲಿ ಭಗವಂತ 'ವಿದ್ಯಾ ಅಹಂ' ಅಥವಾ 'ಭಕ್ತ ಅಹಂ' ಇಡುತ್ತಾನೆ. ಹನುಮಂತ ಸಾಕಾರ ನಿರಾಕಾರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡನಂತರ ಸೇವ್ಯ ಸೇವಕಭಾವದಲ್ಲಿ, ಭಕ್ತಭಾವದಲ್ಲಿ ಇರುತ್ತಿದ್ದ. ಆತ ರಾಮನಿಗೆ ಹೇಳಿದ: 'ಹೇ ರಾಮ, ಕೆಲವು ವೇಳೆ ಭಾವಿಸುತ್ತೇನೆ, ನೀನು ಪೂರ್ಣ, ನಾನು ಅಂಶ. ಇನ್ನು ಕೆಲವು ವೇಳೆ ಭಾವಿಸುತ್ತೇನೆ, ನೀನು ಸೇವ್ಯ, ನಾನು ಸೇವಕ. ಆದರೆ ರಾಮ, ತತ್ತ್ವಜ್ಞಾನ ಉಂಟಾದಾಗ ಕಂಡುಬರುತ್ತದೆ, ನೀನೇ ನಾನು, ನಾನೇ ನೀನು.'

"ಯಶೋದೆ ಕೃಷ್ಣವಿರಹ ತಾಳಲಾರದೆ ರಾಧೆಯ ಹತ್ತಿರಕ್ಕೆ ಹೋದಳು. ಆಕೆಯ ಕಷ್ಟವನ್ನು ಮನಗಂಡು ರಾಧೆ ತನ್ನ ನಿಜಸ್ವರೂಪವನ್ನು ತೋರಿಸಿದಳು. ಆಕೆ ಯಶೋದೆಗೆ ಹೇಳಿದಳು: 'ಕೃಷ್ಣ ಚಿದಾತ್ಮ, ನಾನು ಚಿಚ್ಛಕ್ತಿ. ನನ್ನಿಂದ ಒಂದು ವರ ಬೇಡಿಕೊ.' ಯಶೋದೆ ಹೇಳಿದಳು: 'ನನಗೆ ಬ್ರಹ್ಮಜ್ಞಾನ ಬೇಕಾಗಿಲ್ಲ. ನನಗೀ ವರ ಕೊಡು: ಧ್ಯಾನದ ಸಮಯದಲ್ಲಿ ಗೋಪಾಲನ ರೂಪವನ್ನ ಸರ್ವದಾ ನೋಡುವ ಹಾಗೆ; ಕೃಷ್ಣಭಕ್ತಸಂಗ ಸರ್ವದಾ ದೊರೆಯುವ ಹಾಗೆ; ಭಕ್ತರ ಸೇವೆಯನ್ನು ಮಾಡಲು ಸಾಧ್ಯವಾಗುವ ಹಾಗೆ; ಆತನ ನಾಮಗುಣಕೀರ್ತನೆಯನ್ನು ಸತತ ಮಾಡಲಾಗುವ ಹಾಗೆ.'

"ಒಮ್ಮೆ ಗೋಪಿಯರಿಗೆ ಇಚ್ಛೆಯಾಗಿಬಿಟ್ಟಿತು ಭಗವಂತನ ಈಶ್ವರೀಯ ರೂಪ ನೋಡಬೇಕೆಂದು. ಕೃಷ್ಣ ಅವರಿಗೆ ಹೇಳಿದ, ಯಮುನೆಯಲ್ಲಿ ಒಂದು ಮುಳುಗು ಹಾಕೋ ಹಾಗೆ. ಮುಳುಗು ಹಾಕುವುದೇ ತಡ ಎಲ್ಲರೂ ವೈಕುಂಠಕ್ಕೆ ಬಂದುಬಿಟ್ಟರು. ಅಲ್ಲಿ ಭಗವಂತನ ಷಡೈಶ್ವರ್ಯ-ಪೂರ್ಣ ರೂಪದ ದರ್ಶನವೇನೊ ಆಯಿತು, ಆದರೆ ಅವರಿಗೆ ಅದು ಹಿಡಿಸಲಿಲ್ಲ. ಆಗ ಅವರು ಕೃಷ್ಣನನ್ನು ಕೇಳಿಕೊಂಡರು: 'ನಮಗೆ ಗೋಪಾಲನ ದರ್ಶನ, ಗೋಪಾಲನ ಸೇವೆ ಮಾತ್ರ ದೊರೆಯುವಂತಾಗಲಿ. ನಮಗಿನ್ನೇನೂ ಬೇಕಾಗಿಲ್ಲ.'

"ಮಥುರೆಗೆ ಹೋಗುವ ಮುನ್ನ ಕೃಷ್ಣ ಮನಸ್ಸುಮಾಡಿಕೊಂಡಿದ್ದ

ಗೋಪಿಯರಿಗೆ ಬ್ರಹ್ಮಜ್ಞಾನ ಕೊಟ್ಟು ಹೋಗಬೇಕೆಂದು. ಆತ ಅವರಿಗೆ ಹೇಳಿದ: 'ನಾನು ಎಲ್ಲಾ ಭೂತಗಳ ಒಳಗೂ ಹೊರಗೂ ಇದೇನೆ. ನೀವು ನನ್ನನ್ನು ಈ ಒಂದು ರೂಪದಲ್ಲಿ ಮಾತ್ರವೇ ಏಕೆ ನೋಡುತ್ತಿರಬೇಕು?' ಗೋಪಿಯರೆಲ್ಲರೂ ಒಕ್ಕೊರಳಿನಿಂದ ಕೂಗಿಕೊಳ್ಳಲಾರಂಭಿಸಿದರು: 'ಓ ಕೃಷ್ಣ, ನಮ್ಮನ್ನು ಬಿಟ್ಟು ಹೊರಟುಹೋಗಬೇಕು ಅಂತ ಇದೀಯೇನು? ಅದಕ್ಕಾಗೇನು ಈ ಬ್ರಹ್ಮಜ್ಞಾನೋಪದೇಶ?'

"ಗೋಪಿಯರ ಭಾವ ಯಾವುದು ಗೊತ್ತೆ? 'ನಾವು ರಾಧೆಯ ಗುಂಪಿಗೆ ಸೇರಿದವರು; ರಾಧೆ ನಮ್ಮವಳು.'"

ಒಬ್ಬ ಭಕ್ತ: "ಈ 'ಭಕ್ತ ಅಹಂ' ಎಂಬುದು ಪೂರ್ತಿಯಾಗಿ ಹೋಗೋದೇ ಇಲ್ಲವೆ?"

ಶ್ರೀರಾಮಕೃಷ್ಣರು: "ಅದು ಒಮ್ಮೊಮ್ಮೆ ಹೊರಟುಹೋಗುತ್ತದೆ. ಆಗ ಬ್ರಹ್ಮಜ್ಞಾನ ದೊರೆತು ಸಮಾಧಿ ಉಂಟಾಗಿರುತ್ತದೆ. ನನ್ನದೂ ಹೋಗುತ್ತದೆ, ಆದರೆ ಬಹಳ ಹೊತ್ತಿನವರೆಗಲ್ಲ. ಸ, ರಿ, ಗ, ಮ, ಪ, ಧ, ನಿ. 'ನಿ' ಯಲ್ಲಿ ಹೆಚ್ಚು ಹೊತ್ತು ಕಂಠ ಇಡಲಾಗೋದಿಲ್ಲ. ಕೆಳಗಿನ ಮನೆಗಳಿಗೆ ಇಳಿಯಬೇಕಾಗುತ್ತದೆ. ನಾನು ಭಗವತಿಗೆ ಪ್ರಾರ್ಥನೆಮಾಡುತ್ತೇನೆ: 'ಹೇ ತಾಯಿ, ನನಗೆ ಬ್ರಹ್ಮಜ್ಞಾನ ಕೊಡಬೇಡ.' ಹಿಂದೆ ಇಲ್ಲಿಗೆ ಸಾಕಾರವಾದಿಗಳು ಬಹಳವಾಗಿ ಬರುತ್ತಿದ್ದರು. ಅನಂತರ ಆಧುನಿಕ ಬ್ರಹ್ಮಜ್ಞಾನಿಗಳು (ಬ್ರಾಹ್ಮಸಮಾಜದವರು) ಬರಲಾರಂಭಿಸಿದರು. ಹಿಂದೆ ಪ್ರಾಯಿಕವಾಗಿ ಸಮಾಧಿಯುಂಟಾಗಿ ಬಾಹ್ಯಜ್ಞಾನಶೂನ್ಯನಾಗಿರುತ್ತಿದ್ದೆ. ಆಗ ಬಾಹ್ಯಪ್ರಜ್ಞೆ ಬಂದೊಡನೇ ಪ್ರಾರ್ಥನೆಮಾಡುತ್ತಿದ್ದೆ: 'ಹೇ ತಾಯಿ, ನನಗೆ ಬ್ರಹ್ಮಜ್ಞಾನ ಕರುಣಿಸಬೇಡ.'"

ಪಂಡಿತ: "ನಾವು ಪ್ರಾರ್ಥನೆಮಾಡಿದರೆ, ಭಗವಂತ ಕಿವಿಗೊಡುವನೇನು?"

ಶ್ರೀರಾಮಕೃಷ್ಣರು: "ಭಗವಂತ ಕಲ್ಪತರು. ಬೇಡಿದ್ದೆಲ್ಲಾ ದೊರೆತುಬಿಡುತ್ತದೆ. ಆದರೆ ಕಲ್ಪತರುವಿನ ಕೆಳಗೆ ನಿಂತು ಪ್ರಾರ್ಥನೆ ಮಾಡಬೇಕು. ಆಗ ಮಾತ್ರವೇ ಪ್ರಾರ್ಥನೆ ಸಫಲಗೊಳ್ಳುತ್ತದೆ. ಆದರೆ ಒಂದು ವಿಷಯ. ಭಗವಂತ ಭಾವಗ್ರಾಹಿ. ಜನ ಏನೇನನ್ನು ಭಾವಿಸಿ ಸಾಧನೆ ಮಾಡುತ್ತಾರೊ, ಅವರಿಗೆ ಅದರಂತೇ ಫಲ ದೊರೆಯುತ್ತದೆ. ಮನಸ್ಸಿನಂತೆ ಮಹಾದೇವ. ಒಬ್ಬ ಐಂದ್ರಜಾಲಿಕ ತನ್ನ ಇಂದ್ರಜಾಲವನ್ನ

ಒಬ್ಬ ದೊರೆಯ ಮುಂದೆ ತೋರಿಸುತ್ತಿದ್ದ. ಮಧ್ಯೆ ಮಧ್ಯೆ ಹೇಳುತ್ತಿದ್ದ: 'ಓ ರಾಜ, ದುಡ್ಡು ಕೊಡು! ಬಟ್ಟೆ ಬರೆ ಕೊಡು!' ಇದ್ದಕ್ಕಿದ್ದಹಾಗೆ ಆತನ ನಾಲಗೆ ಗಂಟಲಿನ ಒಳಕ್ಕೆ ಹೋಗಿ ಸಿಕ್ಕಿಕೊಂಡುಬಿಟ್ಟಿತು. ಕುಂಭಕ ಉಂಟಾಗಿಬಿಟ್ಟಿತು. ಅವನ ಬಾಯಿಂದ ಒಂದು ಮಾತೂ ಇಲ್ಲ, ಶಬ್ದವೂ ಇಲ್ಲ. ಸ್ಪಂದಹೀನನಾಗಿಬಿಟ್ಟ. ಜನ ಭಾವಿಸಿಕೊಂಡರು, ಆತ ಸತ್ತುಹೋದ ಎಂದು. ಆಗ ಎಲ್ಲರೂ ಕೂಡಿ ಒಂದು ಇಟ್ಟಿಗೆಯ ಸಮಾಧಿ ಕಟ್ಟಿ ಆತ ಇದ್ದ ಅವಸ್ಥೆಯಲ್ಲೇ ಆತನನ್ನು ಅದರಲ್ಲಿ ಹೂಳಿಬಿಟ್ಟರು. ಒಂದು ಸಾವಿರ ವರ್ಷಗಳಾದನಂತರ ಯಾರೊ ಕೆಲವರು ಆ ಸಮಾಧಿಯನ್ನು ಬಗೆದು ನೋಡಿದರು. ಆಗ ಅವರಿಗೆ ಕಂಡುಬಂತು, ಯಾರೊ ಒಬ್ಬ ಸಮಾಧಿಸ್ಥನಾಗಿ ಅಲ್ಲಿ ಕುಳಿತಿರುವುದು. ಜನ, ಆತ ಒಬ್ಬ ಮಹಾಪುರುಷನೇ ಎಂದು ಭಾವಿಸಿ ಆತನನ್ನು ಪೂಜಿಸಲಾರಂಭಿಸಿದರು. ಆತನನ್ನು ಹಿಡಿದು ಸ್ವಲ್ಪ ಅಲುಗಾಡಿಸಿ ನೋಡಲಾಗಿ, ಆತನ ನಾಲಗೆ ಸ್ವಸ್ಥಾನಕ್ಕೆ ಹಿಂದಿರುಗಿತು. ಒಡನೇ ಆತನಿಗೆ ಬಾಹ್ಯಪ್ರಜ್ಞೆ ಬಂದು ಕೂಗಿಕೊಳ್ಳಲಾರಂಭಿಸಿದ: 'ಕಣ್ಣು-ಕಟ್ಟೇ ಬಾ! ಭ್ರಮೆಯೇ ಬಾ! ಓ ರಾಜ, ದುಡ್ಡುಕೊಡು! ಬಟ್ಟೆ ಬರೆ ಕೊಡು!'

"ನಾನು ಅಳುತ್ತ ಭಗವತಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದೆ: 'ಹೇ ತಾಯಿ, ನನ್ನ ವಿಚಾರಬುದ್ಧಿಗೆ ವಜ್ರಾಘಾತ ಬೀಳಲಿ.'"

ಪಂಡಿತ: "ಹಾಗಾದರೆ, ನಿಮಗೂ ವಿಚಾರಬುದ್ಧಿ ಇತ್ತು?"

ಶ್ರೀರಾಮಕೃಷ್ಣರು: "ಹೌದು. ಒಮ್ಮೆ ಇತ್ತು."

ಪಂಡಿತ: "ಹಾಗಾದರೆ ಆಶೀರ್ವಾದ ಮಾಡಿಬಿಡಿ ನಮ್ಮದೂ ಹೋಗುವಂತೆ. ನಿಮ್ಮದರಿಂದ ನೀವು ಹೇಗೆ ಮುಕ್ತರಾದಿರಿ?"

ಶ್ರೀರಾಮಕೃಷ್ಣರು: "ಓ, ಹೇಗೊ ಮಾಡಿ."

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಮತ್ತೆ ಈಗ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಭಗವಂತ ಕಲ್ಪತರು. ಆತನನ್ನು ಸಮೀಪಿಸಿ ಬೇಡಿಕೊಳ್ಳಬೇಕಾಗುತ್ತದೆ. ಆಗ ಬೇಡಿದ್ದೆಲ್ಲಾ ದೊರೆಯುತ್ತದೆ.

"ಭಗವಂತ ಎಷ್ಟೊಂದು ವಸ್ತುಗಳನ್ನ ಸೃಷ್ಟಿಸಿದಾನೆ! ಈ ಅನಂತ ಬ್ರಹ್ಮಾಂಡವೇ ಆತನದು. ಆತನ ಅನಂತ ಐಶ್ವರ್ಯಗಳ ಜ್ಞಾನ ನಮಗೇಕೆ ಬೇಕು? ಒಂದು ಪಕ್ಷ ಅರಿತುಕೊಳ್ಳಬೇಕೆಂಬ ಇಚ್ಛೆಯಿದ್ದರೆ,

ಮೊದಲು ಆತನ ಸಾಕ್ಷಾತ್ಕಾರ ಪಡೆದುಕೊಂಡುಬಿಡಬೇಕು. ಬಳಿಕ ಆತನೇ ತಿಳಿಸಿಕೊಟ್ಟುಬಿಡುತ್ತಾನೆ. ಯದುಮಲ್ಲಿಕನಿಗೆ ಎಷ್ಟು ಮನೆ, ಎಷ್ಟು ಲೇವಾದೇವಿ ಪತ್ರ ಇವೆ ಎಂಬುವುಗಳ ಸಮಾಚಾರ ನಮಗೇಕೆ ಬೇಕು? ನಮಗೆ ಬೇಕಾಗಿರುವುದು, ಹೇಗೊ ಮಾಡಿ ಆತನನ್ನು ಸಂಧಿಸಿ ಆತನೊಡನೆ ಸ್ನೇಹ ಬೆಳಸಿಕೊಳ್ಳುವುದೇ—ಹಳ್ಳಕೊಳ್ಳಗಳನ್ನ ದಾಟಿಯೊ, ಅರ್ಜಿಯ ಮೂಲಕವೊ ಅಥವಾ ಜವಾನನಿಂದ ದಬ್ಬಿಸಿಕೊಂಡೊ. ಸ್ನೇಹ ಬೆಳೆದ ನಂತರ ಆಸ್ತಿ-ಪಾಸ್ತಿ ಏನೇನಿದೆ ಎಂದು ಪ್ರಶ್ನಿಸಿದರೆ ಆತನೇ ಎಲ್ಲವನ್ನೂ ಹೇಳಿಬಿಡುತ್ತಾನೆ. ಯಜಮಾನನೊಡನೆ ಸ್ನೇಹ ಬೆಳಸಿಕೊಂಡುಬಿಟ್ಟರೆ, ಆತನ ಕೈ ಕೆಳಗಿನವರೆಲ್ಲಾ ಗೌರವ ತೋರಿಸುತ್ತಾರೆ. (ಎಲ್ಲರೂ ನಗುತ್ತಿದಾರೆ.)

"ಕೆಲಕೆಲವರಿಗೆ ಭಗವಂತನ ಐಶ್ವರ್ಯದ ಜ್ಞಾನ ಬೇಕಾಗಿರೋದಿಲ್ಲ. ಮದ್ಯದಂಗಡಿಯಲ್ಲಿ ಎಷ್ಟು ಮಣ ಮದ್ಯವಿದೆ ಎಂಬುದರ ಸಮಾಚಾರ ನಮಗೇಕೆ ಬೇಕು? ಒಂದೊಂದು ಸೀಸೆಯೇ ಸಾಕು ನಮಗೆ. ಭಗವಂತನ ಐಶ್ವರ್ಯದ ಜ್ಞಾನ ಬೇಕೆಂದು ಇಚ್ಛಿಸುವ ಬಗೆ ಹೇಗೆ—ಸ್ವಲ್ಪ ಕುಡಿಯುವುದರಲ್ಲೆ ಮತ್ತು ಬಂದುಬಿಡುವಾಗ?

"ಭಕ್ತಿಯೋಗ, ಜ್ಞಾನಯೋಗ ಎಲ್ಲವೂ ಮಾರ್ಗವೆ. ಯಾವ ಮಾರ್ಗ ಹಿಡಿದುಹೋದರೂ ಭಗವಂತ ದೊರೆತುಬಿಡುತ್ತಾನೆ. ಭಕ್ತಿ-ಮಾರ್ಗ ಸುಲಭವಾದ್ದು. ಜ್ಞಾನ ವಿಚಾರಮಾರ್ಗ ಬಹಳ ಕಠಿನ. ಯಾವ ಮಾರ್ಗ ಒಳ್ಳೆಯದು ಎಂದು ಬಹಳವಾಗಿ ವಿಚಾರದಲ್ಲಿ ತೊಡಗುವುದರ ಆವಶ್ಯಕತೆ ಏನಿದೆ? ಈ ವಿಷಯವಾಗಿ ವಿಜಯನೊಡನೆ ನಾನು ಅನೇಕ ದಿನ ಮಾತುಕತೆಯಾಡಿದೆ. ಒಮ್ಮೆ ನಾನು ಒಬ್ಬನ ವಿಷಯವಾಗಿ ಆತನಿಗೆ ತಿಳಿಸಿದೆ. ಆತ ಪ್ರಾರ್ಥನೆಮಾಡುತ್ತಿದ್ದ: 'ಹೇ ಭಗವಂತ, ನೀನು ಯಾರು ಎಂತು ಎಂಬುದನ್ನ ನನಗೆ ತೋರಿಸಿಕೊಡು.'

"ಜ್ಞಾನ ವಿಚಾರಮಾರ್ಗ ಬಹಳ ಕಠಿನ. ಪಾರ್ವತಿ ತನ್ನ ತಂದೆಯಾದ ಗಿರಿರಾಜನಿಗೆ ತನ್ನ ಅನೇಕ ಈಶ್ವರೀಯ ರೂಪಗಳನ್ನು ತೋರಿಸಿ ಹೇಳಿದಳು: 'ತಂದೆ, ನಿಮಗೆ ಬ್ರಹ್ಮಜ್ಞಾನ ಬೇಕಾದರೆ, ಸಾಧುಸಂಗ ಮಾಡಿ.'

"ಬ್ರಹ್ಮ ಏನು ಎಂಬುದನ್ನ ಬಾಯಿಂದ ವರ್ಣಿಸಲಾಗೋದಿಲ್ಲ. ರಾಮಗೀತೆಯಲ್ಲಿ ಹೇಳಿದೆ, ಕೇವಲ ತಟಸ್ಥಲಕ್ಷಣದಿಂದ ಆತನನ್ನು

ವರ್ಣಿಸಬಹುದು. ಉದಾಹರಣೆಗೆ 'ಗಂಗೆಯ ಮೇಲೆ ಗೊಲ್ಲರ ದೊಡ್ಡಿ' ಎಂದು ಹೇಳುವಾಗ, ಅದರ ನಿಜವಾದ ಅರ್ಥ ಗೊಲ್ಲರ ದೊಡ್ಡಿ ಗಂಗೆಯ ದಡದ ಮೇಲಿದೆ ಎಂಬುದಾಗಿ ಆಗುವ ಹಾಗೆ.

"ನಿರಾಕಾರ ಬ್ರಹ್ಮನ ಸಾಕ್ಷಾತ್ಕಾರ ದೊರೆಯದೇಯೇನು? ಆದರೆ ಬಹಳ ಕಠಿನ. ವಿಷಯಬುದ್ಧಿ ಕಿಂಚಿತ್ತಿದ್ದರೂ ದೊರಕದು. ಇಂದ್ರಿಯ ವಸ್ತುಗಳು, ಎಂದರೆ ರೂಪ, ರಸ, ಗಂಧ, ಸ್ಪರ್ಶ, ಶಬ್ದ ಇವನ್ನು ತ್ಯಜಿಸಿದ ನಂತರವೇ, ಮನೋನಾಶವಾದ ಮೇಲೇ ಅಂತರ್ಯದಲ್ಲಿ ಬೋಧೆಯ ಬೋಧ ಆಗುತ್ತದೆ. ಅದೂ ಇಷ್ಟುಮಾತ್ರವೇ—ಭಗವಂತನಿದಾನೆ ಎಂಬುವ ಅನುಭವ ಮಾತ್ರ."

ಪಂಡಿತ: "ಶಾಸ್ತ್ರದಲ್ಲಿ ಹೇಳಿದೆ: 'ಅಸ್ತೀತ್ಯೇವೋಪಲಬ್ಧವ್ಯ' ಎಂದು, ಅಂದರೆ, 'ಭಗವಂತ ಇದಾನೆ ಎಂಬ ಅನುಭವ ಪಡೆದುಕೊಳ್ಳಬೇಕು' ಎಂದು."

ಶ್ರೀರಾಮಕೃಷ್ಣರು: "ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳಬೇಕಾದರೆ ಯಾವುದಾದರೂ ಒಂದು ಭಾವವನ್ನ ಆಶ್ರಯಿಸಿಕೊಳ್ಳಬೇಕಾಗುತ್ತದೆ—ವೀರಭಾವವನ್ನೊ, ಸಖೀಭಾವವನ್ನೊ, ದಾಸೀಭಾವವನ್ನೊ, ಸಂತಾನಭಾವವನ್ನೊ."

ಮಣಿಮಲ್ಲಿಕ: "ಆಗ ಮಾತ್ರವೇ ಭಗವಂತನಲ್ಲಿ ಆಸಕ್ತಿ ಉಂಟಾಗುತ್ತದೆ."

ಶ್ರೀರಾಮಕೃಷ್ಣರು: "ನಾನು ಸಖೀಭಾವದಲ್ಲಿ ಅನೇಕ ದಿನ ಇದ್ದೆ. ಆಗ ನಾನು ಹೇಳುತ್ತಿದ್ದೆ: 'ನಾನು ಆನಂದಮಯಿ ಬ್ರಹ್ಮಮಯಿಯ ದಾಸಿ. ಎಲೌ ಬ್ರಹ್ಮಮಯಿಯ ದಾಸಿಯರಾ, ನನ್ನನ್ನೂ ಒಬ್ಬ ದಾಸಿಯನ್ನಾಗಿ ಮಾಡಿಕೊಳ್ಳಿ! ಬಳಿಕ ನಾನು "ಬ್ರಹ್ಮಮಯಿಯ ದಾಸಿ ನಾನು" ಎಂಬುದಾಗಿ ಹೇಳುತ್ತ ಹೇಳುತ್ತ ಹೆಮ್ಮೆಯಿಂದ ಸುತ್ತಾಡಲಾರಂಭಿಸುತ್ತೇನೆ.'

"ಕೆಲಕೆಲವರಿಗೆ ಯಾವ ಸಾಧನೆಯನ್ನೂ ಮಾಡದೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಅವರಿಗೆ ನಿತ್ಯಸಿದ್ಧರೆಂದು ಹೆಸರು. ಜಪತಪಾದಿ ಸಾಧನೆ ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡಿರತಕ್ಕವರಿಗೆ ಸಾಧನಸಿದ್ಧರೆಂದು ಹೆಸರು. ಮತ್ತೆ ಕೃಪಾಸಿದ್ಧರೆಂಬುವರು ಇದಾರೆ. ಉದಾಹರಣೆಗೆ ಸಹಸ್ರಾರು ವರ್ಷಗಳಿಂದ ಅಂಧಕಾರದಲ್ಲಿ

ಮುಳುಗಿದ್ದ ಕೊಠಡಿಗೆ ಬೆಳಕು ತಂದರೆ ಅದು ಒಡನೇ ಬೆಳಕಾಗೋದಿಲ್ಲವೆ, ಹಾಗೇ ಇವರ ವಿಷಯವಾಗಿ ಕೂಡ.

"ಮತ್ತೂ ಇದಾರೆ ಹಠಾತ್ ಸಿದ್ಧರೆಂಬುವರು. ಇವರ ವಿಷಯ ಹೇಗೆ ಎಂದರೆ, ಒಬ್ಬ ಬಡ ಹುಡುಗನ ಮೇಲೆ ಒಬ್ಬ ಧನಿಕನ ಕಣ್ಣುಬಿದ್ದರೆ ಹೇಗಾಗುತ್ತೊ ಹಾಗೆ. ಆತ ಆ ಹುಡುಗನಿಗೆ ತನ್ನ ಮಗಳನ್ನು ಕೊಟ್ಟು ವಿವಾಹಮಾಡಿ, ಮನೆ-ಮಠ, ಆಸ್ತಿ-ಪಾಸ್ತಿ, ಕುದುರೆಗಾಡಿ, ಸೇವಕ ಸೇವಕಿಯರು ಇತ್ಯಾದಿಗಳನ್ನ ವರದಕ್ಷಿಣೆಯಾಗಿ ಕೊಟ್ಟುಬಿಡುತ್ತಾನೆ.

"ಇನ್ನೂ ಇದಾರೆ ಸ್ವಪ್ನ ಸಿದ್ಧರೆಂಬುವರು. ಇವರಿಗೆ ಸ್ವಪ್ನದಲ್ಲಿ ಭಗವಂತನ ದರ್ಶನ ದೊರೆತುಬಿಟ್ಟಿರುತ್ತದೆ."

ಸುರೇಂದ್ರ ನಗುತ್ತ: "ಈಗ ನಾವು ನಿದ್ದೆಮಾಡೋಣ. ಏಳುವುದರಲ್ಲೇ ಶ್ರೀಮಂತರಾಗಿಬಿಟ್ಟಿರೋಣ."

ಶ್ರೀರಾಮಕೃಷ್ಣರು ಕೃಪಾದೃಷ್ಟಿಯಿಂದ: "ನೀನು ಆಗಲೇ ಒಬ್ಬ ಶ್ರೀಮಂತ. 'ಕ' ಎಂಬ ಅಕ್ಷರಕ್ಕೆ 'ಆ'ಕಾರ ಸೇರಿಸಿದರೆ ಅದು 'ಕಾ' ಆಗುತ್ತದೆ. ಮತ್ತೆ ಅದಕ್ಕೆ 'ಆ'ಕಾರ ಸೇರಿಸುವುದು ಬರಿದೆ ವ್ಯರ್ಥ. ಸೇರಿಸಿದರೂ ಮತ್ತೆ ಅದು 'ಕಾ' ನೇ. (ಎಲ್ಲರೂ ನಗುತ್ತಿದಾರೆ.)

"ನಿತ್ಯಸಿದ್ಧರು ಒಂದು ಪ್ರತ್ಯೇಕ ಶ್ರೇಣಿಗೆ ಸೇರಿದವರು. ಅವರು ಅರಣಿಕಡ್ಡಿಯ ಹಾಗೆ. ಸ್ವಲ್ಪ ಉಜ್ಜಿದರೇ ಹೊತ್ತಿಕೊಂಡುಬಿಡುತ್ತದೆ. ಉಜ್ಜದೆಯೂ ಅದರಿಂದ ಬೆಂಕಿ ಉತ್ಪನ್ನಮಾಡಬಹುದು. ಸ್ವಲ್ಪ ಸಾಧನೆ ಮಾಡಿದರೇ ನಿತ್ಯಸಿದ್ಧರು ಭಗವಂತನ ಸಾಕ್ಷಾತ್ಕಾರವನ್ನುಪಡೆದು ಕೊಂಡುಬಿಡುತ್ತಾರೆ—ಇನ್ನು ಕೆಲವು ವೇಳೆ ಯಾವ ಸಾಧನೆಯನ್ನೂ ಮಾಡದೆಯೆ. ಆದರೆ ಅವರು ಆತನ ಸಾಕ್ಷಾತ್ಕಾರ ಪಡೆದುಕೊಂಡ ನಂತರ ಸಾಧನೆ ಮಾಡುತ್ತಾರೆ. ಅವರು ಕುಂಬಳಕಾಯಿ ಅಥವಾ ಸೋರೆ ಕಾಯಿ ಗಿಡದ ಹಾಗೆ—ಮೊದಲು ಕಾಯಿ, ಅನಂತರ ಹೂವು."

ಪಂಡಿತ ಕುಂಬಳಕಾಯಿ, ಸೋರೆಕಾಯಿ ದೃಷ್ಟಾಂತ ಕೇಳಿ ನಗುತ್ತಿದಾನೆ.

ಶ್ರೀರಾಮಕೃಷ್ಣರು: "ಪ್ರಹ್ಲಾದನ ದೃಷ್ಟಾಂತವೂ ಇದೆ. ಆತ ಒಬ್ಬ ನಿತ್ಯಸಿದ್ಧ. ಆತ 'ಕ' ಎಂಬ ಅಕ್ಷರವನ್ನು[1] ಬರೆಯುವುದೇ ತಡ, ಆತನ ಕಣ್ಣಿನಿಂದ ಪ್ರೇಮಾಶ್ರು ಸುರಿಯಲಾರಂಭಿಸಿಬಿಟ್ಟಿತು."

1. 'ಕ' ಎಂಬ ಅಕ್ಷರ ಪ್ರಹ್ಲಾದನಿಗೆ ಕೃಷ್ಣನ ಜ್ಞಾಪಕವನ್ನು ತಂದುಬಿಡುತ್ತಿತ್ತು.

ಪಂಡಿತನ ವಿನಯಭಾವ ನೋಡಿ ಪರಮಹಂಸರಿಗೆ ಬಹಳ ಆನಂದ ವಾಗಿಬಿಟ್ಟಿದೆ. ಈಗ ಆತನನ್ನು ಭಕ್ತರ ಮುಂದೆ ಹೊಗಳುತ್ತಿದಾರೆ.

ಶ್ರೀರಾಮಕೃಷ್ಣರು: "ಈತನಿಗೆ ಒಳ್ಳೆ ಸ್ವಭಾವ ಇದೆ. ಮಣ್ಣಿನ ಗೋಡೆಗೆ ಮೊಳೆ ಹೊಡೆಯಲು ಸ್ವಲ್ಪವೂ ಕಷ್ಟವಾಗೋದಿಲ್ಲ. ಆದರೆ ಒಂದು ಕಲ್ಲಿಗೆ ಹೊಡೆಯಲು ಪ್ರಯತ್ನಿಸಿದರೆ ಮೊಳೆಯ ಮೊನೆಯೇ ಮುರಿದು ಹೋಗುತ್ತದೆ; ಕಲ್ಲಿಗೆ ಏನೆಂದರೇನೂ ಆಗುವುದಿಲ್ಲ. ಈ ಜಗತ್ತಿನಲ್ಲಿ ಅಂಥ ಜನರಿದಾರೆ, ಒಂದು ಸಾವಿರ ಸಲ ಭಗವಂತನ ವಿಷಯವಾಗಿ ಕೇಳಿದರೂ ಅವರಿಗೆ ಒಂದು ಕಿಂಚಿತ್ತೂ ಆತ್ಮಜಾಗೃತಿ ಉಂಟಾಗೋದಿಲ್ಲ. ಅವರನ್ನು ಮೊಸಳೆಗೆ ಹೋಲಿಸಬಹುದು. ಅದರ ಶರೀರಕ್ಕೆ ಕತ್ತಿಯ ಏಟು ತಾಕೋದೇ ಇಲ್ಲ."

ಪಂಡಿತ: "ಆದರೆ ಭರ್ಜಿಯಿಂದ ಮೊಸಳೆಯ ಹೊಟ್ಟೆಯನ್ನು ಚುಚ್ಚಿಬಿಡಬಹುದು." (ಎಲ್ಲರೂ ನಗುತ್ತಿದಾರೆ.)

ಶ್ರೀರಾಮಕೃಷ್ಣರು ನಗುತ್ತ: "ಶಾಸ್ತ್ರಗಳ ರಾಶಿಯನ್ನೇ ಓದಿದರೂ ಏನು ತಾನೆ ದೊರೆಯುತ್ತದೆ? ಫಿಲಾಸೊಫಿ (ತತ್ತ್ವಶಾಸ್ತ್ರ) ಓದಿದರೆ ತಾನೆ ಏನು ದೊರೆಯುತ್ತದೆ? ದೊಡ್ಡ ದೊಡ್ಡದಾಗಿ ಮಾತಾಡಿಬಿಡುವುದರಿಂದ ತಾನೆ ಏನು ದೊರೆಯುತ್ತದೆ? ಬಿಲ್ಲುವಿದ್ಯೆ ಕಲಿಯಬೇಕಾಗಿದ್ದರೆ ಮೊದಲು ಬಾಳೆ ಗಿಡವನ್ನ ಗುರಿಯನ್ನಾಗಿ ಮಾಡಿಕೊಳ್ಳಬೇಕು, ಅನಂತರ ಬೆಂಡನ್ನ, ಅನಂತರ ದೀಪದ ಕುಡಿಯನ್ನ, ಅನಂತರ ಹಾರಿಹೋಗುತ್ತಿರುವ ಹಕ್ಕಿಯನ್ನ. ಮೊದಲು ಸಾಕಾರದಲ್ಲಿ ಮನಸ್ಸನ್ನು ಸ್ಥಿರಮಾಡಿಕೊಳ್ಳಬೇಕಾಗುತ್ತದೆ.

"ಅನಂತರ ತ್ರಿಗುಣಾತೀತರೆಂಬ ಭಕ್ತರಿದಾರೆ—ನಿತ್ಯ ಭಕ್ತರು ನಾರದಾದಿಗಳ ಹಾಗೆ. ಇವರ ದೃಷ್ಟಿಯಲ್ಲಿ ಶ್ಯಾಮ ಚಿನ್ಮಯ, ಧಾಮ ಚಿನ್ಮಯ, ಸೇವಕ ಚಿನ್ಮಯ; ಭಗವಂತ ನಿತ್ಯ, ಭಕ್ತ ನಿತ್ಯ, ಧಾಮ ನಿತ್ಯ.

"'ನೇತಿ, ನೇತಿ', 'ಇದಲ್ಲ, ಇದಲ್ಲ' ಎಂದು ಯಾರು ಜ್ಞಾನ ವಿಚಾರದಲ್ಲಿ ತೊಡಗುತ್ತಾರೊ, ಅವರು ಅವತಾರವನ್ನು ಒಪ್ಪುವುದಿಲ್ಲ. ಹಾಜರಾ ಬಹಳ ಚೆನ್ನಾಗಿ ಹೇಳುತ್ತಾನೆ, ಭಗವಂತ ಅವತರಿಸುವುದು ಭಕ್ತರಿಗಾಗೇ ವಿನಾ ಜ್ಞಾನಿಗಳಿಗಾಗಿ ಅಲ್ಲ. ಏಕೆಂದರೆ, ಅವರು 'ಸೋಽಹಮ್' ಎಂಬ ಭಾವನೆಯಿಂದ ತುಷ್ಟರಾಗಿಬಿಟ್ಟಿರುತ್ತಾರೆ."

ಭಕ್ತರೂ ಪರಮಹಂಸರೂ ಸುಮ್ಮನೆ ಕುಳಿತಿದಾರೆ. ಈಗ ಪಂಡಿತ ಮಾತಾಡಲಾರಂಭಿಸಿದಾನೆ.

ಪಂಡಿತ: "ಒಳ್ಳೇದು, ಕಾಠಿನ್ಯ ಪ್ರವೃತ್ತಿಯಿಂದ ಮುಕ್ತವಾಗುವ ಬಗೆ ಹೇಗೆ? ನಗುವುದರ ಕಡೆ ನೋಡಿದರೆ, ಮಾಂಸಖಂಡಗಳ, ಸ್ನಾಯುಗಳ ಕಾರ್ಯ ಮನಸ್ಸಿಗೆ ಬರುತ್ತದೆ. ಶೋಕ ಸ್ನಾಯು ರಚನೆ ಎಂಥದು ಎಂಬುದನ್ನು ಮನಸ್ಸಿಗೆ ತರುತ್ತದೆ."

ಶ್ರೀರಾಮಕೃಷ್ಣರು ನಗುತ್ತ: "ಇದಕ್ಕಾಗೇ ನಾರಾಯಣಶಾಸ್ತ್ರಿ ಹೇಳುತ್ತಿದ್ದ: 'ಶಾಸ್ತ್ರಾಧ್ಯಯನದಿಂದ ಆಗುವ ಕೆಡುಕೇನೆಂದರೆ, ಅದು ತರ್ಕ, ವಿಚಾರ ಇವನ್ನ ಅತಿಯಾಗಿ ಬೆಳಸಿಬಿಡುತ್ತದೆ.'"

ಪಂಡಿತ: "ಹಾಗಾದರೆ ನಮಗೆ ಯಾವ ಮಾರ್ಗವೂ ಇಲ್ಲವೆ?"

ಶ್ರೀರಾಮಕೃಷ್ಣರು: "ಇದೆ—ವಿವೇಕಮಾರ್ಗ. ಒಂದು ಹಾಡಿನಲ್ಲಿ ಈ ಚರಣ ಇದೆ: 'ಆಕೆಯ ಮಗನಾದ ವಿವೇಕನನ್ನು ಸತ್ಯದ ವಿಷಯವಾಗಿ ಕೇಳು.'

"ವಿವೇಕ, ವೈರಾಗ್ಯ, ಭಗವಂತನಲ್ಲಿ ಅನುರಾಗ—ಇವೇ ಮಾರ್ಗ. ವಿವೇಕವಿಲ್ಲದೆ ಇತ್ತು ಎಂದರೆ, ಮಾತುಕತೆ ಸರಿಯಾಗಿ ಹೊರಡವು. ಸಮಾಧ್ಯಾಯಿ ಒಮ್ಮೆ ಬಹಳ ಹೊತ್ತು ಧರ್ಮದ ವಿಷಯವಾಗಿ ಮಾತನಾಡಿ ಕೊನೆಗೆ ಹೇಳಿದ: 'ಭಗವಂತ ನೀರಸ' ಎಂದು. ಒಮ್ಮೆ ಒಬ್ಬ ಹೇಳಿದ: 'ನಮ್ಮ ಸೋದರಮಾವನ ದನದ ಕೊಟ್ಟಿಗೆ ತುಂಬ ಕುದುರೆ ಇವೆ' ಎಂದು. ದನದ ಕೊಟ್ಟಿಗೆಯಲ್ಲಿ ಕುದುರೆ ಕಟ್ಟುತ್ತಾರೆಯೆ? (ನಗುತ್ತ) ನೀನು ಚಾಣಾದೊಡೆಯಂತೆ (ಸಿಹಿ ತಿಂಡಿ) ಆಗಿಬಿಟ್ಟಿದೀಯೆ. ಈಗ ನಿನ್ನನ್ನ ಒಂದು ನಾಲ್ಕೈದು ದಿನ ಸಕ್ಕರೆ ಪಾಕದಲ್ಲಿ ನೆನಸಿಟ್ಟರೆ ನಿನಗೂ ಮೇಲು ಪರರಿಗೂ ಮೇಲು. ಏನು, ನಾಲ್ಕೈದು ದಿನ ಮಾತ್ರ!"

ಪಂಡಿತ ನಗುತ್ತ: "ಚಾಣಾದೊಡೆ ಸೀದುಹೋಗಿ ಕರಿ ಆಗಿಬಿಟ್ಟಿದೆ."

ಶ್ರೀರಾಮಕೃಷ್ಣರು ನಗುತ್ತ: "ಇಲ್ಲ! ಇಲ್ಲ! ಅದಕ್ಕೆ ಜಿರಲೆ ಬಣ್ಣ ಬಂದಿದೆ. ಸರಿಯಾದ ಬಣ್ಣ!"

ಹಾಜರಾ: "ಚೆನ್ನಾಗಿ ಬೆಂದಿದೆ. ಈಗ ರಸವನ್ನ ಚೆನ್ನಾಗಿ ಕುಡಿಯಬಲ್ಲದು."

ಶ್ರೀರಾಮಕೃಷ್ಣರು: "ನೋಡು, ಶಾಸ್ತ್ರಗಳನ್ನ ಹೆಚ್ಚಾಗಿ ಓದುವುದರ ಆವಶ್ಯಕತೆಯೇನಿಲ್ಲ. ಹೆಚ್ಚಾಗಿ ಓದಿದರೆ, ತರ್ಕ ವಿಚಾರ ಇವುಗಳ ಕಡೆ ಮನಸ್ಸು ಓಡುವುದು. ತೋತಾಪುರಿ ಹೀಗೆ ನನಗೆ ಉಪ-

ದೇಶವೀಯುತ್ತಿದ್ದ: ಗೀತೆ ಎಂಬ ಪದವನ್ನ ಒಂದು ಹತ್ತು ಸಲ ಉಚ್ಚರಿಸಿದರೆ ಅದು ಏನಾಗಿ ಕೇಳಬರುವುದೊ, ಅದೇ ಗೀತೆಯ ಸಾರ. ಅಂದರೆ 'ಗೀತೆ', 'ಗೀತೆ' ಎಂದು ಒಂದು ಹತ್ತು ಸಲ ಉಚ್ಚರಿಸುವುದರಲ್ಲಿ ಅದು 'ತ್ಯಾಗಿ', 'ತ್ಯಾಗಿ' ಎಂಬುದಾಗಿ ಕೇಳಿಬರಲಾರಂಭಿಸುತ್ತದೆ.

"ಮಾರ್ಗ—ವಿವೇಕ, ವೈರಾಗ್ಯ, ಭಗವಂತನಲ್ಲಿ ಅನುರಾಗ. ಎಂಥ ಅನುರಾಗ? ಭಗವಂತನಿಗಾಗಿ ಪ್ರಾಣವ್ಯಾಕುಲತೆ—ಹಸು ಕರುವಿನ ಹಿಂದೆ ವ್ಯಾಕುಲತೆಯಿಂದ ಓಡುವಂತೆ."

ಪಂಡಿತ: "ವೇದದಲ್ಲಿ ಹೀಗೇ ಹೇಳಿದೆ: 'ಹೇ ಭಗವಂತ, ಹಸು ತನ್ನ ಕರುವಿಗಾಗಿ ಕೂಗುವಂತೆ, ನಾವು ನಿನಗಾಗಿ ಕರೆಯುತ್ತೇವೆ.'"

ಶ್ರೀರಾಮಕೃಷ್ಣರು: "ವ್ಯಾಕುಲತೆಯೊಡನೆ ಅಳು. ವಿವೇಕ, ವೈರಾಗ್ಯ ಇವುಗಳಿಂದ ಎಲ್ಲವನ್ನೂ ತ್ಯಜಿಸಿಬಿಟ್ಟದ್ದೇ ಆದರೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ನಿಜವಾದ ವ್ಯಾಕುಲತೆ ಉಂಟಾಯಿತು ಎಂದರೆ, ಉನ್ಮತ್ತನ ಅವಸ್ಥೆ ಬಂದುಬಿಡುತ್ತದೆ—ಸಾಧಕ ಜ್ಞಾನಮಾರ್ಗಿಯಾದರೂ ಸರಿಯೆ, ಭಕ್ತಿಮಾರ್ಗಿಯಾದರೂ ಸರಿಯೆ. ದುರ್ವಾಸನಿಗೆ ಜ್ಞಾನೋನ್ಮಾದ ಉಂಟಾಗಿತ್ತು.

"ಸಂಸಾರಿಯ ಜ್ಞಾನಕ್ಕೂ ಸರ್ವಸಂಗಪರಿತ್ಯಾಗಿಯ ಜ್ಞಾನಕ್ಕೂ ಅಜಗಜಾಂತರ ವ್ಯತ್ಯಾಸ. ಸಂಸಾರಿಯ ಜ್ಞಾನ—ದೀಪದ ಬೆಳಕಿನ ಹಾಗೆ—ಮನೆಯ ಒಳಗೆ ಮಾತ್ರ ಬೆಳಕು ಕೊಡುತ್ತದೆ. ಅಂದರೆ ಅದರಿಂದ ಆತ ತನ್ನನ್ನು ಮತ್ತು ತನ್ನ ಸಂಸಾರದವರನ್ನು ಹೊರತು ಬೇರೆ ಯಾರನ್ನೂ ನೋಡಲಾರ. ಸರ್ವಸಂಗಪರಿತ್ಯಾಗಿಯ ಜ್ಞಾನ ಸೂರ್ಯನ ಬೆಳಕು ಇದ್ದ ಹಾಗೆ. ಆ ಬೆಳಕಿನಿಂದ ಮನೆಯ ಒಳಗೆ ಹೊರಗೆ ಎಲ್ಲವನ್ನೂ ನೋಡಬಹುದು. ಚೈತನ್ಯದೇವನ ಜ್ಞಾನ ಸೌರಜ್ಞಾನ— ಜ್ಞಾನಸೂರ್ಯನ ಬೆಳಕು. ಇದೂ ಅಲ್ಲದೆ ಆತನ ಅಂತರ್ಯದಲ್ಲಿ ಭಕ್ತಿಚಂದ್ರನ ತಂಪಾದ ಬೆಳಕೂ ಇತ್ತು. ಬ್ರಹ್ಮಜ್ಞಾನ, ಭಕ್ತಿಪ್ರೇಮ—ಎರಡೂ ಇದ್ದುವು.

(ಪಂಡಿತನಿಗೆ) "ಭಗವಂತನ ಸಾಕ್ಷಾತ್ಕಾರವನ್ನು ಅಭಾವಮುಖ, ಅಂದರೆ 'ನೇತಿ, ನೇತಿ', ಭಾವಮುಖ, ಅಂದರೆ 'ಇತಿ, ಇತಿ' ಈ ಎರಡು ಮಾರ್ಗಗಳಿಂದಲೂ ಪಡೆಯಬಹುದು. ಮೊದಲನೆಯದು, ವಿವೇಕ ವೈರಾಗ್ಯಗಳಿಂದ ಕೂಡಿದ ಅಭಾವಸೂಚಕ ಮಾರ್ಗ; ಎರಡನೆಯದು, ಭಾವಭಕ್ತಿಗಳಿಂದ ಕೂಡಿದ ಭಾವಸೂಚಕ ಮಾರ್ಗ. ನೀನು ಅಭಾವ

ಸೂಚಕ ಮಾರ್ಗವನ್ನ, ಅಂದರೆ ಜ್ಞಾನಮಾರ್ಗವನ್ನ ಪ್ರಚಾರಮಾಡುತ್ತಿದೀಯೆ. ಆದರೆ ಅದು ಬಹಳ ಕಠಿನ ಸನ್ನಿವೇಶವನ್ನು ತಂದೊಡ್ಡುತ್ತದೆ: ಅಲ್ಲಿ ಈತ ಗುರು ಆತ ಶಿಷ್ಯ ಎಂಬ ಭೇದವೇ ಇರದು. ಜನಕರಾಜನ ಹತ್ತಿರಕ್ಕೆ ಶುಕದೇವ ಬ್ರಹ್ಮಜ್ಞಾನಾರ್ಥಿಯಾಗಿ ಹೋದ. ಜನಕ ಹೇಳಿದ: 'ನೀನು ಮೊದಲೇ ಗುರುದಕ್ಷಿಣೆ ಕೊಟ್ಟುಬಿಡಬೇಕು. ಬ್ರಹ್ಮಜ್ಞಾನ ದೊರೆತನಂತರ ನೀನು ಗುರುದಕ್ಷಿಣೆ ಕೊಡುವ ಹಾಗೇ ಇಲ್ಲ, ಏಕೆಂದರೆ ಆಗ ಗುರುಶಿಷ್ಯ ಭೇದವಿರದು.'

"ಭಾವಸೂಚಕ, ಅಭಾವಸೂಚಕ ಎಲ್ಲಾ ಮಾರ್ಗಗಳೇ. ಅನಂತ ಮತ, ಅನಂತ ಪಥ. ಆದರೆ ಒಂದು ವಿಷಯ. ಕಲಿಯುಗಕ್ಕೆ ನಾರದೀಯ ಭಕ್ತಿ—ಇದೇ ಆಜ್ಞೆ. ಈ ಮಾರ್ಗದಲ್ಲಿ ಮೊದಲನೆಯದು ಭಕ್ತಿ; ಅದು ಪಕ್ವವಾಯಿತು ಎಂದರೆ ಭಾವ. ಭಾವಕ್ಕಿಂತ ಉಚ್ಚವಾದುವು ಮಹಾಭಾವ, ಪ್ರೇಮ. ಮಹಾಭಾವ, ಪ್ರೇಮ ಜೀವರಿಗೆ ಉಂಟಾಗವು. ಯಾರಿಗೆ ಅವು ದೊರೆತಿವೆಯೊ ಅವರಿಗೆ ವಸ್ತುಲಾಭ, ಎಂದರೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಟ್ಟಿರುತ್ತದೆ."

ಪಂಡಿತ: "ಧಾರ್ಮಿಕ ವಿಷಯಗಳನ್ನ ಬೋಧಿಸಬೇಕಾದರೆ ಬಹಳವಾಗಿ ಮಾತುಕತೆಗಳನ್ನ ಖರ್ಚುಮಾಡಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ನೀನು 'ತಲೆ, ಬಾಲ' ತೆಗೆದು, ಅಂದರೆ ಮುಖ್ಯಾಂಶವನ್ನು ಮಾತ್ರ ಬೋಧಿಸು."

ಈಗ ಮಣಿಮಲ್ಲಿಕನೊಡನೆ ಪಂಡಿತ ಮಾತುಕತೆ ಆಡುತ್ತಿದ್ದಾನೆ. ಮಣಿಮಲ್ಲಿಕ ಬ್ರಾಹ್ಮಸಮಾಜದ ಅನುಯಾಯಿ. ಪಂಡಿತ ಬ್ರಾಹ್ಮಸಮಾಜದ ಗುಣ ಅವಗುಣ ಇವುಗಳ ವಿಷಯವಾಗಿ ಬಹಳ ಜೋರಿನಿಂದ ತರ್ಕಮಾಡುತ್ತಿದ್ದಾನೆ. ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತು ಕಿರುನಗೆ ನಗುತ್ತ ಆತನ ಕಡೆ ನೋಡುತ್ತಿದ್ದಾರೆ. ಈಗ ಹೇಳುತ್ತಿದ್ದಾರೆ: "ಇದು ಸತ್ತ್ವದ ತಮಸ್ಸು—ವೀರನ ಭಾವ. ಇವೆಲ್ಲ ಬೇಕಾದ್ದೆ. ಅನ್ಯಾಯ, ಅಸತ್ಯ ಕಂಡರೆ ಸುಮ್ಮನೆ ಬಾಯಿಮುಚ್ಚಿ ಕುಳಿತಿರಕೂಡದು. ಭಾವಿಸಿಕೊ ಒಬ್ಬ ಭ್ರಷ್ಟ ಹೆಂಗಸು ನಿನ್ನ ಪಾರಮಾರ್ಥಿಕ ಜೀವನವನ್ನ ನಾಶಮಾಡಲಿಚ್ಛಿಸಿದಾಳೆ ಎಂದು. ಆಗ ವೀರಭಾವವನ್ನ ತಾಳಿ ಗರ್ಜಿಸಬೇಕು: 'ಎಲಾ ಹೆಮ್ಮಾರಿ, ನನ್ನನ್ನು ಅಧೋಗತಿಗೆ ಎಳೆಯಲು ಇಚ್ಛಿಸಿದೆಯಾ? ಈ ಕ್ಷಣವೇ ನಿನ್ನನ್ನು ಎರಡು ತುಂಡಾಗಿ ಕತ್ತರಿಸಿಬಿಡುವೆ.'"

ಪರಮಹಂಸರು ನಗುತ್ತ ಪಂಡಿತನಿಗೆ ಹೇಳುತ್ತಿದಾರೆ: "ಮಣಿಮಲ್ಲಿಕ ಬ್ರಾಹ್ಮಸಮಾಜದ ಅನುಯಾಯಿ—ಬಹಳ ಕಾಲದಿಂದ. ಆತನ ಹೃದಯಕ್ಕೆ ನಿನ್ನ ಭಾವನೆಗಳನ್ನ ಹಾಕಲಾಗೋದಿಲ್ಲ. ಪೂರ್ವ ಸಂಸ್ಕಾರ ಸುಮ್ಮನೆ ದಾರಿ ಬಿಡುವುದೆ? ಒಬ್ಬ ಹಿಂದೂ ದೊಡ್ಡ ಭಕ್ತನಾಗಿದ್ದ—ಸರ್ವದಾ ಜಗದಂಬೆಯ ಪೂಜೆ, ನಾಮಗುಣಕೀರ್ತನೆ ಮಾಡುತ್ತಿದ್ದ. ಮಹಮ್ಮದೀಯರು ರಾಜ್ಯ ಗೆದ್ದುಕೊಂಡನಂತರ ಬಲಾತ್ಕರಿಸಿ ಆತನನ್ನು ಅವರು ಮಹಮ್ಮದೀಯನ ನ್ನಾಗಿ ಮಾಡಿದರು. ಅವರು ಆತನಿಗೆ ಹೇಳಿದರು: 'ಈಗ ನೀನು ಮಹಮ್ಮದೀಯನಾಗಿದೀಯೆ. ಹೇಳು "ಅಲ್ಲಾ" ಅಂತ. ಇನ್ನು ಮೇಲೆ ನೀನು ಕೇವಲ ಅಲ್ಲಾನಾಮವನ್ನೇ ಜಪಿಸಬೇಕು.' ಆತ ಬಹಳ ಕಷ್ಟಪಟ್ಟು 'ಅಲ್ಲಾ', 'ಅಲ್ಲಾ' ಎಂದು ಹೇಳಲಾರಂಭಿಸಿದ. ಆದರೆ ಒಮ್ಮೊಮ್ಮೆ ಹೇಳಿಬಿಡುತ್ತಿದ್ದ, 'ಜಗದಂಬೆ', 'ಜಗದಂಬೆ' ಎಂದೂ. ಅದನ್ನು ನೋಡಿ ಮಹಮ್ಮದೀಯರು ಆತನನ್ನು ಹೊಡೆಯಲು ಹೋದರು. ಆಗ ಆತ ಹೇಳಿದ: 'ನಿಮ್ಮನ್ನು ಪ್ರಾರ್ಥಿಸಿಕೊಳ್ಳುತ್ತೇನೆ, ಕೊಲ್ಲಬೇಡಿ. ನಿಮ್ಮ "ಅಲ್ಲಾ" ನಾಮವನ್ನ ಹೇಳಲು ಬಹಳವಾಗಿ ಪ್ರಯತ್ನಿಸುತ್ತಿದೇನೆ. ಆದರೆ ನಮ್ಮ ಜಗದಂಬೆ ನನ್ನ ಕಂಠದವರೆಗೂ ತುಂಬಿಕೊಂಡುಬಿಟ್ಟದಾಳೆ. ಆಕೆ ನಿಮ್ಮ "ಅಲ್ಲಾ" ನನ್ನು ಹೊರಕ್ಕೆ ದಬ್ಬಿಬಿಡುತ್ತಿದಾಳೆ.' (ಎಲ್ಲರೂ ನಗುತ್ತಿದಾರೆ.)

(ಪಂಡಿತನಿಗೆ) "ಮಣಿಮಲ್ಲಿಕನಿಗೆ ಏನೂ ಹೇಳಬೇಡ. ನೀನು ಅರಿತುಕೊಳ್ಳಬೇಕು, ರುಚಿಭೇದವಿದೆ ಎಂಬುದನ್ನ, ಹೊಟ್ಟೆಗೆ ತಕ್ಕಂತೆ ಆಹಾರ ಎಂಬುದನ್ನ. ಭಗವಂತ ನಾನಾ ಧರ್ಮ, ನಾನಾ ಮತಗಳನ್ನ ಸೃಷ್ಟಿಸಿದಾನೆ—ಅಧಿಕಾರಿಭೇದಕ್ಕನುಗುಣವಾಗಿ. ಎಲ್ಲರೂ ಬ್ರಹ್ಮಜ್ಞಾನಕ್ಕೆ ಅಧಿಕಾರಿಗಳಲ್ಲ. ಅದಕ್ಕಾಗೇ ಆತ ಸಾಕಾರ ಪೂಜೆಯ ವ್ಯವಸ್ಥೆ ಮಾಡಿದಾನೆ.

"ತಾಯಿ ಮಕ್ಕಳಿಗಾಗಿ ಮೀನು ಕೊಂಡುಕೊಂಡುಬಂದಿದಾಳೆ. ಆ ಮೀನು ಹಾಕಿ ಸಾರು, ಚಟ್ನಿ, ಬಜ್ಜಿ, ಪಲಾವು ತಯಾರುಮಾಡುತ್ತಾಳೆ. ಎಲ್ಲರ ಹೊಟ್ಟೆಗೂ ಪಲಾವು ಸರಿಹೋಗದು. ಅದಕ್ಕಾಗೇ ಕೆಲವು ಮಕ್ಕಳಿಗೆ ಮೀನಿನ ಸಾರು ತಯಾರುಮಾಡುತ್ತಾಳೆ— ಅವಕ್ಕೆ ಜೀರ್ಣಶಕ್ತಿ ಬಹಳ ಕಡಮೆ. ಇನ್ನು ಕೆಲವು ಚಟ್ನಿಯನ್ನೊ ಅಥವಾ ಬಜ್ಜಿಯನ್ನೊ

ತಿನ್ನುತ್ತವೆ. ಒಬ್ಬೊಬ್ಬರ ಪ್ರಕೃತಿ ಒಂದೊಂದು ವಿಧ. ಹಾಗೇ ಅಧಿಕಾರಿ-ಭೇದ ಕೂಡ.''

ಎಲ್ಲರೂ ಸುಮ್ಮನೆ ಕುಳಿತಿದಾರೆ. ಪರಮಹಂಸರು ಪಂಡಿತನಿಗೆ ಹೇಳುತ್ತಿದಾರೆ: ''ಈಗ ಹೋಗಿ ದೇವಾಲಯಗಳನ್ನು ನೋಡಿಕೊಂಡು ಬಾ. ಅನಂತರ ಉದ್ಯಾನವನದಲ್ಲೂ ಸ್ವಲ್ಪ ಸುತ್ತಾಡಿ ಬಾ.'' ಈಗ ಘಂಟೆ ಸಾಯಂಕಾಲ ಐದೂವರೆ. ಪಂಡಿತ ತನ್ನ ಸ್ನೇಹಿತರೊಡನೆಯೂ, ಇನ್ನು ಕೆಲವು ಮಂದಿ ಭಕ್ತರೊಡನೆಯೂ ಕೂಡಿ ಕೊಠಡಿಯನ್ನು ಬಿಟ್ಟು ಹೊರಟ.

ಈಗ ಪರಮಹಂಸರು ಮಾಸ್ಟರೊಡನೆ ಗಂಗೆಯ ಸ್ನಾನ ಘಟ್ಟದ ಕಡೆಗೆ ಬರುತ್ತಿದಾರೆ. ಅವರು ಮಾಸ್ಟರಿಗೆ ಹೇಳುತ್ತಿದಾರೆ: ''ಬಾಬುರಾಮ ಈಗ ಹೇಳುತ್ತಿದಾನೆ: 'ಓದುವುದು-ಗೀದುವುದರಿಂದ ಏನು ದೊರೆಯುತ್ತದೆ?' '' ಗಂಗಾ ತೀರದ ಹತ್ತಿರ ಮತ್ತೆ ಪರಮಹಂಸರು ಪಂಡಿತನನ್ನು ಸಂಧಿಸಿದರು. ಆತನನ್ನು ಕೇಳುತ್ತಿದಾರೆ: ''ಏನು, ಕಾಳೀದೇವಾಲಯಕ್ಕೆ ಹೋಗೋಲ್ಲ?'' ಪಂಡಿತ ಉತ್ತರವಿತ್ತ: ''ಹೋಗುತ್ತೇನೆ. ಬನ್ನಿ ನೀವೂ ಜೊತೆಯಲ್ಲಿ, ದರ್ಶನಮಾಡಿಬರೋಣ.''

ನಗುಮುಖರಾಗಿ ಪರಮಹಂಸರು ಮುಖಮಂಟಪದ ಮೂಲಕ ಕಾಳೀ ದೇವಾಲಯದ ಕಡೆ ಮುಂದುವರಿಯುತ್ತಿದಾರೆ. ಪಂಡಿತನಿಗೆ ಹೇಳುತ್ತಿದಾರೆ: ''ಒಂದು ಹಾಡು ಕೇಳು.''

ಅವರು ಹಾಡುತ್ತಿದಾರೆ:

ಕಾಲರೂಪೆ ದಿಗಂಬರೀ
ಹೃದಯಪದ್ಮ ಭಾಸ್ಕರೀ,
ನಿಜವಾಗಿಯು ಕಪ್ಪಾಗಿಹಳೆ ನನ್ನ ತಾಯಿ ಕಾಳಿ? . . .

ಪರಮಹಂಸರು ಮುಖಮಂಟಪದಿಂದಿಳಿದು ಅಂಗಳಕ್ಕೆ ಬಂದಾಗ ಪಂಡಿತನಿಗೆ ಒಂದು ಹಾಡಿನ ಚರಣವೊಂದನ್ನು ಎತ್ತಿಹೇಳುತ್ತಿದಾರೆ:

ಹೃದಯಮಂದಿರದಲ್ಲಿ ಜ್ಞಾನದೀಪಿಗೆ ಹಚ್ಚಿ
ಬ್ರಹ್ಮಮಯಿ ಮಾತಾಯ ಮುಖವ ನೋಡು!

ದೇವಾಲಯಕ್ಕೆ ಬಂದನಂತರ ಪರಮಹಂಸರು ಭಗವತಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಿದಾರೆ. ಆಕೆಯ ಪಾದಪದ್ಮಗಳು ದಾಸವಾಳದ ಹೂವು, ಬಿಲ್ವದಳಗಳಿಂದ ಅಲಂಕೃತವಾಗಿವೆ. ತ್ರಿನಯನೆಯಾದ ಆಕೆ

ತನ್ನ ಭಕ್ತರನ್ನ ಅತ್ಯಂತ ಕೃಪಾದೃಷ್ಟಿಯಿಂದ ನೋಡುತ್ತಿದಾಳೆ. ಕೈಗಳಿಂದ ವರ, ಅಭಯಗಳನ್ನು ನೀಡುತ್ತಿದಾಳೆ. ಕಾಶಿಯ ರೇಷ್ಮೆ ಸೀರೆ ಉಟ್ಟು, ವಿವಿಧ ಆಭರಣಗಳನ್ನು ತೊಟ್ಟುಕೊಂಡಿದಾಳೆ.

ಭಗವತಿಯ ದರ್ಶನ ಮಾಡಿದನಂತರ ಭೂಧರನ ಅಣ್ಣ ಹೇಳುತ್ತಿದಾನೆ: "ಕೇಳಿದೇನೆ, ನವೀನಭಾಸ್ಕರನಿಂದ ಈ ಮೂರ್ತಿ ಕೆತ್ತಲ್ಪಟ್ಟಿತು ಎಂದು." ಅದನ್ನು ಕೇಳಿ ಪರಮಹಂಸರು ಹೇಳುತ್ತಿದಾರೆ: "ಅದು ನನಗೆ ಗೊತ್ತಿದೆ. ಆದರೆ ನನಗೆ ಈಕೆ ಚಿನ್ಮಯಿ."

ಪರಮಹಂಸರು ಈಗ ಭಕ್ತರೊಡನೆ ತಮ್ಮ ಕೊಠಡಿಗೆ ಹಿಂದಿರುಗುತ್ತಿದಾರೆ. ಬಾಬುರಾಮನಿಗೆ ಹೇಳುತ್ತಿದಾರೆ: "ಬಾ ನಮ್ಮೊಡನೆ." ಮಾಸ್ಟರೂ ಅವರನ್ನು ಹಿಂಬಾಲಿಸುತ್ತಿದಾನೆ.

ಮುಚ್ಚಂಜೆಯಾಗಿದೆ. ಪರಮಹಂಸರು ತಮ್ಮ ಕೊಠಡಿಯ ಪಶ್ಚಿಮಕ್ಕಿರುವ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಕುಳಿತಿದಾರೆ. ಭಾವಸ್ಥರಾಗಿದಾರೆ—ಪೂರ್ಣವಾಗಿ ಅಲ್ಲ. ಹತ್ತಿರ ಬಾಬುರಾಮ, ಮಾಸ್ಟರ್ ಕುಳಿತಿದಾರೆ.

ಈಗ ಕೆಲವು ದಿನಗಳಿಂದ ರಾಖಾಲ ಪರಮಹಂಸರೊಡನೆ ಇದ್ದುಕೊಂಡಿಲ್ಲ. ಆದ್ದರಿಂದ ಅವರ ಸೇವೆಗೆ ಸ್ವಲ್ಪ ತೊಂದರೆಯಾಗಿಬಿಟ್ಟಿದೆ. ಆತನಲ್ಲದೆ ಇನ್ನೂ ಕೆಲವು ಮಂದಿ ಭಕ್ತರು ಪರಮಹಂಸರೊಡನೆ ಇದ್ದುಕೊಂಡಿದಾರೆ, ಆದರೆ ಪರಮಹಂಸರು ಭಾವಾವಿಷ್ಟರಾದಾಗ ಅವರಾರೂ ಬಂದು ಅವರನ್ನು ಮುಟ್ಟಲಾಗುತ್ತಿರಲಿಲ್ಲ. ಆದ್ದರಿಂದ ಅವರು ಬಾಬುರಾಮನಿಗೆ ಸೂಚಿಸುತ್ತಿದಾರೆ: "ನೀನು ಇಲ್ಲೇ ಇದ್ದುಬಿಡು. ಆಗ ಬಹಳ ಚೆನ್ನಾಗಿಬಿಡುತ್ತದೆ. ನನ್ನ ಈ ಅವಸ್ಥೆಯಲ್ಲಿ ಬೇರೆಯವರು ಯಾರೂ ಬಂದು ನನ್ನನ್ನು ಮುಟ್ಟಲಾಗೋದಿಲ್ಲ."

ಪಂಡಿತ ದೇವಾಲಯಗಳನ್ನೆಲ್ಲ ನೋಡಿದನಂತರ ಹಿಂದಿರುಗಿ ಪರಮಹಂಸರ ಕೊಠಡಿಗೆ ಬಂದಿದಾನೆ. ವರಾಂಡದಿಂದಲೆ ಪರಮಹಂಸರು ಆತನಿಗೆ ಹೇಳುತ್ತಿದಾರೆ: "ಸ್ವಲ್ಪ ಉಪಾಹಾರ ಮಾಡು." ಪಂಡಿತ ಉತ್ತರವಿತ್ತ: "ನಾನಿನ್ನೂ ಸಂಧ್ಯಾವಂದನೆ ಮಾಡಿಲ್ಲ." ಪರಮಹಂಸರು ಥಟ್ಟನೆ ಎದ್ದುನಿಂತು ಭಾವೋನ್ಮತ್ತರಾಗಿ ಹಾಡಲಾರಂಭಿಸಿದಾರೆ:

**ಏತಕೆ, ಇನ್ನೇತಕೆ?**
**ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ**
**ಪುಣ್ಯಕ್ಷೇತ್ರಗಳೇತಕೆ? . . .**

ಪರಮಹಂಸರು ಪ್ರೇಮೋನ್ಮತ್ತರಾಗಿ ಹೇಳುತ್ತಿದಾರೆ: "ಸಂಧ್ಯೆ ಎಷ್ಟು ಕಾಲದವರೆಗೆ? 'ಓಂ' ಎಂದು ಉಚ್ಚರಿಸಿದೊಡನೇ ಮನಸ್ಸು ಭಗವಂತನಲ್ಲಿ ಲಯವಾಗದವರೆಗೆ."

ಪಂಡಿತ: "ಹಾಗಾದರೆ ಮೊದಲು ಉಪಾಹಾರ ಮುಗಿಸಿಕೊಂಡು ಅನಂತರ ಸಂಧ್ಯಾವಂದನೆ ಮಾಡುತ್ತೇನೆ."

ಶ್ರೀರಾಮಕೃಷ್ಣರು: "ನಿನ್ನ ಜೀವನದ ಪ್ರವಾಹಕ್ಕೆ ತಡೆಯೊಡ್ಡಲಿಚ್ಛೆ ಯಿಲ್ಲ. ಸಮಯ ಬಾರದೆ ತ್ಯಾಗಮಾಡುವುದು ಶ್ರೇಯಸ್ಕರವಾದ್ದಲ್ಲ. ಕಾಯಿ ಹಣ್ಣಾದರೆ ಹೂವು ತಾನಾಗೇ ಉದುರಿಹೋಗುತ್ತದೆ. ಮಟ್ಟೆ ಇನ್ನೂ ಹಸಿಯಾಗಿರೋವಾಗ ಅದನ್ನು ಬಲಾತ್ಕಾರದಿಂದ ಕೀಳಬಾರದು. ಆ ರೀತಿಯಾಗಿ ಅದನ್ನು ಕಿತ್ತುಹಾಕಿದರೆ ಮರಕ್ಕೆ ಕೇಡಾಗುತ್ತದೆ."

ಸುರೇಂದ್ರ ಮನೆಗೆ ಹೊರಡಲು ಸಿದ್ಧನಾಗುತ್ತಿದಾನೆ. ತನ್ನ ಸ್ನೇಹಿತರನ್ನ ತನ್ನ ಗಾಡಿಗೆ ಹತ್ತುವ ಹಾಗೆ ಹೇಳುತ್ತಿದಾನೆ. ಪರಮ-ಹಂಸರು ಇನ್ನೂ ಭಾವಸ್ಥರಾಗೇ ಹೇಳುತ್ತಿದಾರೆ: "ನಿನ್ನ ಕುದುರೆಯ ಶಕ್ತಿಗೆ ಮೀರಿ ಜನ ತುಂಬಬೇಡ." ಸುರೇಂದ್ರ ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಂಡ. ಪಂಡಿತ ಸಂಧ್ಯಾವಂದನೆ ಮಾಡಲು ಕೊಠಡಿಯನ್ನು ಬಿಟ್ಟು ಹೋಗುತ್ತಿದಾನೆ. ಮಾಸ್ಟರ್ ಮತ್ತು ಬಾಬುರಾಮ ಪರಮಹಂಸರಿಗೆ ಪ್ರಣಾಮಮಾಡುತ್ತಿದಾರೆ. ಇವರು ಕಲ್ಕತ್ತಕ್ಕೆ ಹೊರಡಲಿದಾರೆ. ಪರಮಹಂಸರು ಇನ್ನೂ ಭಾವಸ್ಥರಾಗೇ ಇದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಮಾತು ಹೊರಡುತ್ತಿಲ್ಲ. ಒಂದು ಸ್ವಲ್ಪ ಇರು."

ಮಾಸ್ಟರ್ ಕುಳಿತುಕೊಂಡಿದಾನೆ. ಪರಮಹಂಸರ ಅನುಮತಿಗಾಗಿ ಕಾಯುತ್ತಿದಾನೆ. ಪರಮಹಂಸರು ಕೈಸನ್ನೆಯಿಂದ ಬಾಬುರಾಮನಿಗೆ ಹೇಳು ತ್ತಿದಾರೆ, ಕುಳಿತುಕೊಂಡು ಬೀಸಣಿಗೆಯಿಂದ ತಮಗೆ ಸ್ವಲ್ಪ ಗಾಳಿ ಬೀಸುವಂತೆ. ಬಾಬುರಾಮ ಈಗ ಗಾಳಿ ಬೀಸುತ್ತಿದಾನೆ. ಮಾಸ್ಟರೂ ಬೀಸುತ್ತಿದಾನೆ.

ಶ್ರೀರಾಮಕೃಷ್ಣರು ಪ್ರೇಮದೃಷ್ಟಿಯಿಂದ ಮಾಸ್ಟರಿಗೆ: "ಈಗ ನೀನು ಪದೇ ಪದೇ ಬರುತ್ತಿಲ್ಲವಲ್ಲ ಏಕೆ?"

ಮಾಸ್ಟರ್: "ವಿಶೇಷ ಕಾರಣವೇನಿಲ್ಲ. ಮನೆಯಲ್ಲಿ ಕೆಲಸವಿರುತ್ತಿತ್ತು."

ಶ್ರೀರಾಮಕೃಷ್ಣರು: "ಬಾಬುರಾಮ ಯಾವ ಅಂತಸ್ತಿಗೆ ಸೇರಿದವನು ಎಂಬುದರ ಅರಿವು ನಿನ್ನೆ ನನಗಾಗಿಬಿಟ್ಟಿತು. ಅದಕ್ಕಾಗೇ ನಾನು ಈತನನ್ನು ಇಲ್ಲೇ ಇರುವಂತೆ ಅಷ್ಟಾಗಿ ಒತ್ತಾಯಪಡಿಸಿದುದು. ತಾಯಿ ಹಕ್ಕಿ ಸಕಾಲಕ್ಕೆ ಮೊಟ್ಟೆಯನ್ನು ಒಡೆಯುತ್ತದೆ. ಇವರು ಶುದ್ಧ ಆತ್ಮ— ಇನ್ನೂ ಕಾಮಕಾಂಚನದ ಬಲೆಗೆ ಬಿದ್ದಿಲ್ಲ. ಏನು ಹೇಳುತ್ತೀಯೆ?"

ಮಾಸ್ಟರ್: "ಹೌದು. ಇನ್ನೂ ಯಾವ ಕರೆಯೂ ಆಗಿಲ್ಲ."

ಶ್ರೀರಾಮಕೃಷ್ಣರು: "ಹೊಸ ಮಡಕೆ—ಹಾಲು ಇಟ್ಟರೆ ಕೆಡೋದಿಲ್ಲ."

ಮಾಸ್ಟರ್: "ಹೌದು, ನಿಜ."

ಶ್ರೀರಾಮಕೃಷ್ಣರು: "ಬಾಬುರಾಮ ಇಲ್ಲೆ ಇರಬೇಕಾದ ಆವಶ್ಯಕತೆ ಬಂದಿದೆ. ನನಗೆ ಬರುತ್ತದೆಯಲ್ಲ ಆ ಅವಸ್ಥೆ ಆಗ ಇಂಥವರ ಸಹಾಯ ಬೇಕಾಗುತ್ತದೆ. ಈತ ಹೇಳುತ್ತಿದಾನೆ, ಒಮ್ಮೆಗೇ ಬಂದು ಇಲ್ಲಿ ಇದ್ದುಬಿಡಲಾಗೋದಿಲ್ಲ, ಅದು ಮನೆಯಲ್ಲಿ ಅಸಮಾಧಾನವನ್ನು ಎಬ್ಬಿಸಿಬಿಡುತ್ತದೆ. ಈತನ ನಂಟರಿಷ್ಟರು ತೊಂದರೆ ಕೊಡಲಾರಂಭಿಸಿಬಿಡುತ್ತಾರೆ. ನಾನು ಕೇಳಿಕೊಂಡಿದೇನೆ, ಶನಿವಾರ ಭಾನುವಾರ ಬರೋ ಹಾಗೆ."

ಪಂಡಿತ ತನ್ನ ಸ್ನೇಹಿತರೊಡನೆ ಕೊಠಡಿಯನ್ನು ಪ್ರವೇಶಿಸುತ್ತಿದಾನೆ. ಸಂಧ್ಯಾವಂದನೆ ಮುಗಿಸಿದಾನೆ. ಉಪಾಹಾರ ತೆಗೆದುಕೊಳ್ಳಲು ಈಗ ಸಿದ್ಧನಾಗಿದಾನೆ. ಭೂಧರ ಪರಮಹಂಸರನ್ನು ಕೇಳುತ್ತಿದಾನೆ: "ನಮಗೆ ಭಗವಂತನ ಸಾಕ್ಷಾತ್ಕಾರ ದೊರೆಯುವುದೆ? ನಾವು ಹೇಗೆ ಮುಂದುವರಿಯಬೇಕು ದಯವಿಟ್ಟು ಸ್ವಲ್ಪ ತಿಳಿಸಿ."

ಶ್ರೀರಾಮಕೃಷ್ಣರು: "ನೀವೆಲ್ಲರೂ ಮುಮುಕ್ಷುಗಳು. ವ್ಯಾಕುಲತೆ ಇತ್ತು ಎಂದರೆ, ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಶ್ರಾದ್ಧದ ಅನ್ನ ತಿನ್ನಬೇಡಿ. ಸಂಸಾರದಲ್ಲಿ ದುಶ್ಶೀಲ ಹೆಂಗಸಿನಂತಿರಿ. ಆಕೆ ಮನೆ ಕೆಲಸಗಳನ್ನೇನೊ ಬಹಳ ನಿಗಾದಿಂದ ಮಾಡುತ್ತಾಳೆ, ಆದರೆ ಆಕೆಯ ಮನಸ್ಸು ಮಾತ್ರ ಹಗಲಿರುಳೂ ಉಪಪತಿಯ ಮೇಲೇ ನೆಲಸಿರುತ್ತದೆ. ನೀವು ಸಂಸಾರದ ಕೆಲಸಕಾರ್ಯಗಳನ್ನೇನೊ ಮಾಡಿ, ಆದರೆ ನಿಮ್ಮ ಮನಸ್ಸನ್ನು ಮಾತ್ರ ಭಗವಂತನ ಅಡಿದಾವರೆಗಳಲ್ಲಿ ಇಟ್ಟುಬಿಡಿ."

ಪಂಡಿತ ಉಪಾಹಾರ ಮಾಡಿ ಮುಗಿಸಿದ.

ಶ್ರೀರಾಮಕೃಷ್ಣರು ಪಂಡಿತನಿಗೆ: "ನೀನು ನಿಶ್ಚಯವಾಗಿಯೂ ಭಗವದ್ಗೀತೆಯನ್ನು ಓದಿದೀಯೆ. ಅದು ಹೇಳುತ್ತದೆ, ಯಾರನ್ನ ಎಲ್ಲರೂ ಸ್ತುತಿಸುತ್ತಾರೊ, ಗೌರವಿಸುತ್ತಾರೊ ಆತನಲ್ಲಿ ಭಗವಂತನ ಶಕ್ತಿ ವಿಶೇಷ ವಾಗಿ ವ್ಯಕ್ತವಾಗಿದೆ ಎಂದು."

ಪಂಡಿತ ಗೀತೆಯಿಂದ "ಯದ್ಯದ್ವಿಭೂತಿಮತ್ಸತ್ವಂ" ಎಂಬ ಶ್ಲೋಕ ವನ್ನು ಉದ್ಧರಿಸಿ ಹೇಳಿದ.

ಶ್ರೀರಾಮಕೃಷ್ಣರು: "ನಿನ್ನ ಅಂತರ್ಯದಲ್ಲಿ ನಿಜವಾಗಿಯೂ ಭಗವಂತನ ಶಕ್ತಿ ವ್ಯಕ್ತವಾಗಿದೆ."

ಪಂಡಿತ: "ನಾನು ಏನು ವ್ರತ ಕೈಗೊಂಡಿದೇನೊ ಅದನ್ನು ಪೂರ್ಣ ಮಾಡಲು ಪಟ್ಟುಹಿಡಿದು ಕೆಲಸ ಮಾಡಲೆ?"

ಪರಮಹಂಸರು ವಿಧಿಯಿಲ್ಲದೆ ಹೇಳಬೇಕಾಯಿತು: "ಮಾಡು, ಆಗುತ್ತೆ." ಅವರು ಒಡನೇ ಬೇರೆ ಮಾತು ಎತ್ತಿಬಿಟ್ಟರು.

ಶ್ರೀರಾಮಕೃಷ್ಣರು: "ಶಕ್ತಿಯನ್ನು ಒಪ್ಪಿಕೊಳ್ಳಲೇ ಬೇಕು. ವಿದ್ಯಾಸಾಗರ ಒಮ್ಮೆ ನನ್ನನ್ನು ಕೇಳಿದ: 'ಕೆಲವರಿಗಿಂತ ಕೆಲವರಿಗೆ ಭಗವಂತ ಹೆಚ್ಚು ಶಕ್ತಿ ಕೊಟ್ಟಿದಾನೇನು?' ನಾನು ಉತ್ತರವಿತ್ತೆ: 'ಹಾಗಿಲ್ಲದಿದ್ದರೆ ಒಬ್ಬ ಒಂದು ನೂರು ಜನರನ್ನ ಕೊಂದುಬಿಡುತ್ತಾನಲ್ಲ, ಅದು ಹೇಗೆ? ವಿಕ್ಟೋರಿಯಾ ರಾಣಿಗೆ ಅಷ್ಟೊಂದು ಗೌರವ ಕೀರ್ತಿ ಹೇಗೆ ಬರುತ್ತಿತ್ತು—ಆಕೆಯಲ್ಲಿ ಶಕ್ತಿ ಅಧಿಕವಾಗಿರದಿದ್ದ ಪಕ್ಷದಲ್ಲಿ? ಇದನ್ನು ನೀನು ಒಪ್ಪುತ್ತೀಯೆ ತಾನೆ?' ಆಗ ಒಪ್ಪಿಕೊಂಡ."

ಪಂಡಿತ ಮತ್ತು ಆತನ ಸ್ನೇಹಿತರು ಪರಮಹಂಸರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಅವರಿಂದ ಬೀಳ್ಕೊಳ್ಳುವುದರಲ್ಲಿದಾರೆ. ಪರಮಹಂಸರು ಪಂಡಿತನಿಗೆ ಹೇಳುತ್ತಿದಾರೆ: "ಮತ್ತೆ ಬರಬೇಕು. ಗಾಂಜಾಖೋರನಿಗೆ ಗಾಂಜಾಖೋರರನ್ನು ಕಂಡರೆ ಬಹಳ ಆನಂದ. ಅವರು ಒಬ್ಬರನ್ನೊಬ್ಬರು ಆಲಿಂಗನಮಾಡಿಕೊಂಡೂ ಬಿಡಬಹುದು. ಉಳಿದವರನ್ನು ಕಂಡಾಗ ಅವರು ನಾಚಿ ತಲೆ ತಗ್ಗಿಸಿಕೊಂಡುಬಿಡುತ್ತಾರೆ. ಹಸು ತನ್ನ ಜೊತೆ ಹಸುವನ್ನು ಕಂಡಾಗ ಅದನ್ನು ನೆಕ್ಕುತ್ತದೆ; ಬೇರೆ ಹಸು ಸಿಕ್ಕಿದರೆ ಅದನ್ನು ಗುದ್ದಲು ಹೋಗುತ್ತದೆ." (ಎಲ್ಲರೂ ನಗುತ್ತಿದಾರೆ.)

ಪಂಡಿತ ಹೊರಟುಹೋದ. ಪರಮಹಂಸರು ನಗುತ್ತ ಹೇಳುತ್ತಿ

ದಾರೆ: "ಡೈಲ್ಯೂಟ್ (ನೀರಾಗಿ) ಆಗಿಬಿಟ್ಟ ಒಂದೇ ದಿನಕ್ಕೆ. ನೋಡಿ ದೆಯೊ ಎಂಥಾ ವಿನಯಿ! ಎಲ್ಲವನ್ನೂ ಒಪ್ಪಿಕೊಂಡುಬಿಟ್ಟ."

ಬೆಳುದಿಂಗಳು ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಹಾಲು ಚೆಲ್ಲಿದ ಹಾಗೆ ಬಿದ್ದಿದೆ. ಪರಮಹಂಸರು ಇನ್ನೂ ಅಲ್ಲೇ ಕುಳಿತಿದಾರೆ. ಮಾಸ್ಟರ್ ಇನ್ನೇನು ಮನೆಗೆ ಹೊರಡುವುದರಲ್ಲಿದಾನೆ. ಆತ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ.

ಶ್ರೀರಾಮಕೃಷ್ಣರು ಪ್ರೇಮಪೂರಿತರಾಗಿ: "ಈಗ ಹೋಗಲೇ ಬೇಕೆ?"

ಮಾಸ್ಟರ್: "ಹೌದು. ಹೋಗಿಬರುತ್ತೇನೆ."

ಶ್ರೀರಾಮಕೃಷ್ಣರು: "ಭಕ್ತರೆಲ್ಲರ ಮನೆಗೂ ಒಂದೊಂದು ದಿನ ಹೋಗಿಬರಬೇಕೆಂದು ಒಮ್ಮೆ ಯೋಚನೆ ಬಂತು. ನಿನ್ನ ಮನೆಗೂ ಒಂದು ದಿನ. ಏನು, ಒಪ್ಪಿಗೆಯೆ?"

ಮಾಸ್ಟರ್: "ಬಹಳ ಒಳ್ಳೆಯದು."

೩ನೆ ಜುಲೈ ೧೮೮೪, ಆಷಾಢ ಶುಕ್ಲ ದಶಮಿ, ಗುರುವಾರ.

ಪರಮಹಂಸರು ಕಲ್ಕತ್ತದಲ್ಲಿ ಬಲರಾಮನ ಮನೆಯಲ್ಲಿ ಕುಳಿತು ಕೊಂಡಿದಾರೆ. ಇಂದು ಪೂರಿಯಲ್ಲಿ ಪುನರಾಗಮನರಥಜಾತ್ರೆ. ಬಲ-ರಾಮನ ಮನೆಯಲ್ಲೂ ಇಂದು ಜಗನ್ನಾಥನ ಪೂಜೆ. ಈತನ ಹತ್ತಿರ ಒಂದು ಚಿಕ್ಕ ರಥ ಇದೆ. ಅದನ್ನು ವರಾಂಡದಲ್ಲಿ ಇಂದು ಎಳೆಯುತ್ತಾರೆ.

ಬಲರಾಮನ ತಂದೆ ಅತ್ಯಂತ ನಿಷ್ಠಾವಂತ ವೈಷ್ಣವ. ಆತ ಪ್ರಾಯಿಕ ವಾಗಿ ಬೃಂದಾವನದಲ್ಲಿರುವ ತಮ್ಮ ಒಂದು ಕುಂಜದಲ್ಲಿ ಒಬ್ಬನೆ ಇದ್ದು ಕೊಂಡು ಧ್ಯಾನಭಜನೆಗಳಲ್ಲೇ ತನ್ನ ಅಧಿಕ ಸಮಯವನ್ನು ಕಳೆಯುತ್ತಿ ದಾನೆ. ಉಳಿದ ವೇಳೆ ಭಕ್ತಿಗ್ರಂಥಗಳನ್ನು ಓದುತ್ತ ಭಕ್ತರೊಡನೆ ಬೆರೆ ಯುತ್ತ ಆನಂದದಿಂದ ಇದ್ದುಕೊಂಡಿದಾನೆ. ಆತನಿಗೆ ಪರಮಹಂಸರ ದರ್ಶನ ದೊರೆಯಲಿ ಎಂದು ಬಲರಾಮ ಆತನನ್ನು ಪತ್ರದ ಮೇಲೆ ಪತ್ರ ಬರೆದು ಕರಸಿಕೊಂಡಿದಾನೆ.

ಪರಮಹಂಸರು ಅತ್ಯಂತ ಆನಂದಾವಸ್ಥೆಯಲ್ಲಿ ಇದಾರೆ. ರಾಮ, ಬಲರಾಮನ ತಂದೆ, ಮಾಸ್ಟರ್, ಮನಮೋಹನ, ಇನ್ನೂ ಹಲವು ಮಂದಿ ಯುವಕಭಕ್ತರು ಅವರ ಹತ್ತಿರ ಕುಳಿತಿದಾರೆ. ಅವರು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ಬಲರಾಮನ ತಂದೆಗೆ ಮತ್ತು ಉಳಿದವರಿಗೆ: "ಭಕ್ತಮಾಲೆ ಎಂಬುದು ವೈಷ್ಣವರ ಒಂದು ಗ್ರಂಥ. ಅದು ಬಹಳ ಒಳ್ಳೆ ಪುಸ್ತಕ—ಭಕ್ತರ ವಿಷಯ ಅದರಲ್ಲಿ ತುಂಬಿದೆ. ಆದರೆ ಒಂದೇ ಸ್ವರದ್ದು. ಅದರಲ್ಲಿ ಒಂದು ಕಡೆ ಭಗವತಿ ವಿಷ್ಣುಮಂತ್ರವನ್ನು ತೆಗೆದುಕೊಳ್ಳುವಂತೆ ಗ್ರಂಥಕರ್ತ ಮಾಡಿದಾನೆ.

"ಒಮ್ಮೆ ನಾನು ಮಥುರಬಾಬುವಿನೆದುರಿಗೆ ವೈಷ್ಣವಚರಣನನ್ನು ಬಹಳವಾಗಿ ಹೊಗಳಿ ಆತನನ್ನು ತನ್ನ ಮನೆಗೆ ಆಹ್ವಾನಿಸುವಂತೆ ಮಾಡಿದೆ. ಮಥುರಬಾಬು ವೈಷ್ಣವಚರಣನನ್ನು ಅತ್ಯಂತ ಆದರದಿಂದ ಕಂಡ. ಬೆಳ್ಳಿಯ ತಟ್ಟೆ ಬಟ್ಟಲುಗಳನ್ನು ಹೊರಕ್ಕೆ ತೆಗೆದು ಉಪಾಹಾರ ಮಾಡಿಸುವುದರವರೆಗೂ ಹೋಗಿಬಿಟ್ಟಿತು ಅತಿಥಿ ಸತ್ಕಾರ. ಇಷ್ಟೆಲ್ಲ ಆದಮೇಲೆ ಏನಾಯಿತು ಗೊತ್ತೆ? ವೈಷ್ಣವಚರಣ ಮಥುರಬಾಬುವಿನ ಮುಂದೆ ಹೇಳಿಬಿಟ್ಟ: 'ನಮ್ಮ ಕೇಶವಮಂತ್ರೋಪದೇಶವನ್ನ ಪಡೆದುಕೊಳ್ಳದವರೆಗೆ ನಿನಗೆ ಏನೂ ದೊರೆಯದು.' ಮಥುರಬಾಬು ಶಾಕ್ತ; ಭಗವತಿಯ ಉಪಾಸಕ. ಮುಖ ಕೆಂಪೇರಿತು. ವೈಷ್ಣವಚರಣನಿಗೆ ನಾನು ಆಗ ಒಂದು ಒಳಶುಂಠಿ ಕೊಟ್ಟೆ.

"ಶ್ರೀಮದ್ಭಾಗವತ—ಅದರಲ್ಲೂ ಈ ರೀತಿಯ ವಚನಗಳಿವೆಯಂತೆ. ಅದರಲ್ಲಿ ಒಂದು ಕಡೆ ಹೇಳಿದೆಯಂತೆ: 'ಕೇಶವಮಂತ್ರೋಪದೇಶ ಪಡೆದುಕೊಳ್ಳದೆ ಭವಸಾಗರವನ್ನು ದಾಟಲು ಪ್ರಯತ್ನಿಸುವುದು, ನಾಯಿ ಬಾಲ ಹಿಡಿದು ಮಹಾಸಾಗರವನ್ನು ದಾಟಲು ಪ್ರಯತ್ನಿಸಿದ ಹಾಗೆ' ಎಂದು. ಪ್ರತಿಯೊಬ್ಬ ಮತಸ್ಥನೂ ತನ್ನ ಮತವೇ ದೊಡ್ಡದು ಎಂದು ಸಾರಿಹೋಗಿದಾನೆ.

"ಶಾಕ್ತರೂ ವೈಷ್ಣವರನ್ನ ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ವೈಷ್ಣವರು ಹೇಳುತ್ತಾರೆ: 'ಶ್ರೀ ಕೃಷ್ಣನೇ ನಮ್ಮನ್ನು ಈ ಭವಸಾಗರದಿಂದ ದಾಟಿಸಬಲ್ಲ ಅಂಬಿಗ.' ಅದಕ್ಕೆ ಪ್ರತೀಕಾರವಾಗಿ ಶಾಕ್ತರು ಹೇಳುತ್ತಾರೆ: 'ನಿಜ, ನಿಜ! ನಾವು ಒಪ್ಪುತ್ತೇವೆ. ನಮ್ಮ ಭಗವತಿ ರಾಜರಾಜೇಶ್ವರಿ. ಅಂಬಿಗನ ಕೆಲಸ ಮಾಡೋ ದರದು ಏನು ಬಂದಿದೆ ಆಕೆಗೆ. ಆ ಕೆಲಸ ಮಾಡಲು ಆಕೆ ಆ ಟೊಣೆಯ ಕೃಷ್ಣನನ್ನ ನೇಮಕಮಾಡಿದಾಳೆ.' (ಎಲ್ಲರೂ ನಗುತ್ತಿದಾರೆ.)

"ಇದೂ ಅಲ್ಲದೆ ಜನ ತಮ್ಮ ತಮ್ಮ ಮತಗಳ ಸಂಬಂಧವಾಗಿ ಎಷ್ಟು

ಒಣ ಹೆಮ್ಮೆ ಪಡುತ್ತಾರೆ! ಕಾಮಾರಪುಕುರಿನ ಹತ್ತಿರವಿರುವ ಶ್ಯಾಮ-ಬಾಜಾರ್ ಎಂಬ ಹಳ್ಳಿಯಲ್ಲಿ ಅನೇಕ ಮಂದಿ ನೆಯ್ಗೆಯವರಿದಾರೆ. ಅವರಲ್ಲಿ ಅನೇಕರು ವೈಷ್ಣವರು—ಬಹಳವಾಗಿ ಜಂಬ ಕೊಚ್ಚುತ್ತಾರೆ. ಅವರು ಹೇಳುತ್ತಾರೆ: 'ಈತ ಯಾವ ವಿಷ್ಣುವನ್ನು ಪೂಜಿಸುತ್ತಾನೆ? ಪಾಲನ ವಿಷ್ಣುವನ್ನೇ? ನಾವು ಆತನನ್ನು ಕಣ್ಣೆತ್ತಿಯೂ ನೋಡುವುದಿಲ್ಲ!' ಅಥವಾ: 'ಯಾವ ಶಿವನನ್ನ? ನಾವು ಆತ್ಮಾರಾಮ ಶಿವನನ್ನ, ಆತ್ಮಾರಾಮೇಶ್ವರ ಶಿವನನ್ನ ಒಪ್ಪುತ್ತೇವೆ.' ಅಥವಾ ಮತ್ತೆ: 'ಸ್ವಲ್ಪ ವಿಶದವಾಗಿ ತಿಳಿಸಿ ನೀವು ಯಾವ ಹರಿಯನ್ನು ಪೂಜಿಸುತ್ತಾ ಇದೀರಿ.' ಅವರು ನೂಲು ತೆಗೆಯುತ್ತ ಹೀಗೆಲ್ಲಾ ಹರಟುತ್ತಿರುತ್ತಾರೆ.

"ರತಿಯ ತಾಯಿ, ರಾಣಿ ಕಾತ್ಯಾಯನಿಯ ಆಪ್ತಗೆಳತಿ. ಆಕೆ ವೈಷ್ಣವಚರಣನ ಗುಂಪಿಗೆ ಸೇರಿದವಳು. ಒಳ್ಳೆ ಗೊಡ್ಡು ವೈಷ್ಣವಿ. ನನ್ನನ್ನು ನೋಡಿಹೋಗಲು ಅಡಿಗಡಿಗೆ ಬರುತ್ತಿದ್ದಳು. ನನಗೆ ತೋರಿಸುತ್ತಿದ್ದ ಭಕ್ತಿಯಲ್ಲಿ ಯಾರೂ ಆಕೆಯನ್ನು ಮೀರಿಸಿದವರೇ ಇಲ್ಲ. ಒಂದು ದಿನ ನಾನು ಭಗವತಿ ಕಾಳಿಯ ಪ್ರಸಾದ ತಿನ್ನುತ್ತಿರುವುದನ್ನು ನೋಡಿ, ಒಡನೇ ಹಿಂದಿರುಗಿಬಿಟ್ಟಳು. ಅಂದಿನಿಂದ ಆಕೆಯ ನೆಳಲೂ ನನ್ನ ಕಣ್ಣಿಗೆ ಬಿದ್ದಿಲ್ಲ.

"ಯಾರಿಗೆ ಸಮನ್ವಯ ದೃಷ್ಟಿ ಇರುವುದೊ ಆತನೇ ನಿಜವಾದ ಮನುಷ್ಯ. ಪ್ರಾಯಿಕವಾಗಿ ಜನ ಒಂದು ಸ್ವರದವರೇ. ಆದರೆ ನನಗೆ ಕಂಡುಬರುತ್ತಿದೆ, ಎಲ್ಲವೂ ಆ ಒಬ್ಬನನ್ನೇ ಸೂಚಿಸುತ್ತಿವೆ ಎಂಬುದಾಗಿ. ಶಾಕ್ತ, ವೈಷ್ಣವ, ವೇದಾಂತ ಎಲ್ಲಾ ಮತಗಳೂ ಆ ಪರಬ್ರಹ್ಮನನ್ನೇ ಸೂಚಿಸುತ್ತವೆ. ಯಾರು ನಿರಾಕಾರನೊ ಆತನೇ ಸಾಕಾರ, ಆತನದೇ ಈ ನಾನಾ ರೂಪಗಳೆಲ್ಲ. 'ನಿರ್ಗುಣ ನನ್ನ ತಂದೆ, ಸಗುಣ ನನ್ನ ತಾಯಿ. ಯಾರನ್ನ ಹೊಗಳುವುದು? ಯಾರನ್ನ ತೆಗಳುವುದು? ತಕ್ಕಡಿಯ ಬಟ್ಟಲೆರಡೂ ಒಂದೇ ಸಮತೂಕ.'

"ವೇದ ಯಾರ ವಿಷಯವಾಗಿ ಹೇಳುತ್ತದೊ, ತಂತ್ರವೂ ಆತನ ವಿಷಯವಾಗೇ, ಪುರಾಣವೂ ಆತನ ವಿಷಯವಾಗೇ ಹೇಳುತ್ತವೆ. ಎಲ್ಲವೂ ಆ ಒಬ್ಬ ಸಚ್ಚಿದಾನಂದನ ವಿಷಯವಾಗೇ ಹೇಳುತ್ತವೆ. ಯಾರದು ನಿತ್ಯವೊ, ಆತನದೇ ಲೀಲೆ. ವೇದದಲ್ಲಿ ಹೇಳಿದೆ: 'ಓಂ ಸಚ್ಚಿದಾನಂದ ಬ್ರಹ್ಮ' ಎಂದು, ತಂತ್ರದಲ್ಲಿ: 'ಓಂ ಸಚ್ಚಿದಾನಂದ ಶಿವ, ಶಿವಃ ಕೇವಲ,

ಕೇವಲ ಶಿವಃ' ಎಂಬುದಾಗಿ, ಪುರಾಣದಲ್ಲಿ: 'ಓಂ ಸಚ್ಚಿದಾನಂದ ಕೃಷ್ಣ' ಅಂತ. ಆ ಒಬ್ಬ ಸಚ್ಚಿದಾನಂದನ ವಿಷಯವೇ ವೇದ, ಪುರಾಣ, ತಂತ್ರ ಎಲ್ಲದರಲ್ಲೂ. ವೈಷ್ಣವ ಶಾಸ್ತ್ರದಲ್ಲಿ ಹೇಳಿದೆ, ಕೃಷ್ಣನೇ ಕಾಳಿಯಾಗಿದಾನೆ ಎಂದು.''

ಪರಮಹಂಸರು ವರಾಂಡದ ಕಡೆಗೆ ಕೆಲವು ನಿಮಿಷಗಳ ಮಟ್ಟಿಗೆ ಹೋಗಿದ್ದು ಈಗ ಹಿಂದಿರುಗಿ ಬರುತ್ತಿದಾರೆ. ಅವರು ವರಾಂಡದ ಕಡೆಗೆ ಹೋಗುತ್ತಿದ್ದಾಗ ವಿಶ್ವಂಭರನ ಮಗಳು, ವಯಸ್ಸು ಆರೇಳು ಇರಬೇಕು, ಅವರಿಗೆ ನಮಸ್ಕಾರ ಮಾಡಿದಳು. ಅವರು ಕೊಠಡಿಗೆ ಹಿಂದಿರುಗಿದನಂತರ ಆ ಬಾಲಕಿ ಅವರೊಡನೆ ಮಾತುಕತೆ ಆಡುತ್ತಿದಾಳೆ. ಆ ಹುಡುಗಿಯೊಡನೆ ಅದೇ ವಯಸ್ಸಿನ ಒಬ್ಬಿಬ್ಬರು ಹುಡುಗಿಯರೂ ಬಂದಿದಾರೆ.

ಬಾಲಕಿ ಶ್ರೀರಾಮಕೃಷ್ಣರಿಗೆ: "ನಿಮಗೆ ನಾನು ನಮಸ್ಕಾರ ಮಾಡಿದೆ. ನೀವು ಕಣ್ಣೆತ್ತಿಯೂ ನೋಡಲಿಲ್ಲವಲ್ಲ.''

ಶ್ರೀರಾಮಕೃಷ್ಣರು ನಗುತ್ತ: "ಎಲ್ಲಿ? ನೀನು ಮಾಡಿದ್ದು ಕಣ್ಣಿಗೇ ಬೀಳಲಿಲ್ಲವಲ್ಲ.''

ಬಾಲಕಿ: "ಹಾಗಾದರೆ ಸ್ವಲ್ಪ ನಿಲ್ಲಿ, ಮತ್ತೆ ನಮಸ್ಕಾರ ಮಾಡುತ್ತೇನೆ— ಸ್ವಲ್ಪ ನಿಲ್ಲಿ ಆ ಪಾದಕ್ಕೂ. ಪರಮಹಂಸರು ನಗುತ್ತ ನಗುತ್ತ ಕುಳಿತುಕೊಳ್ಳುತ್ತಿದಾರೆ. ಈಗ ನೆಲದವರೆಗೂ ತಲೆ ತಗ್ಗಿಸಿ ಆ ಬಾಲಕಿಗೆ ಪ್ರತಿನಮಸ್ಕಾರ ಮಾಡುತ್ತಿದಾರೆ. ಅವರು ಹುಡುಗಿಗೆ ಹಾಡುವಂತೆ ಹೇಳುತ್ತಿದಾರೆ. ಆ ಬಾಲಕಿ ಹೇಳುತ್ತಿದಾಳೆ: "ದೇವರಾಣೆಗೂ ನನಗೆ ಬಾರದು.'' ಪರಮಹಂಸರು ಆಕೆಗೆ ಹಾಡುವಂತೆ ಒತ್ತಿ ಹೇಳಿದಾಗ ಆ ಬಾಲಕಿ ಉತ್ತರಕೊಟ್ಟಳು: "ದೇವರಾಣೆಗೂ ಅಂತ ಹೇಳಿದ ಮೇಲೂ ನನ್ನನ್ನು ಬಲಾತ್ಕರಿಸುವುದು ಸರಿಯೆ?'' ಈಗ ಪರಮಹಂಸರು ಆ ಬಾಲಕಿಯರೊಡನೆ ಹುಡುಗಾಟವಾಡುತ್ತ ಅವರ ಮುಂದೆ ವಿನೋದದ ಹಾಡು ಹಾಡುತ್ತಿದಾರೆ:

ನಿನ್ನಿನಿಯ ಬಂದಾಗ ಮುನಿಸಿಕೊಂಡಾನು, ಬಾ
ಬಾಚಿ ಸಿಂಗರಿಸುವೆನು ನಿನ್ನ ಹೆರಳ!

ಆ ಬಾಲಕಿಯರು ಮತ್ತು ಭಕ್ತರು ನಗುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಪರಮಹಂಸನ ಸ್ವಭಾವ ಐದು ವರ್ಷದ ಮಗುವಿನ ಹಾಗೆ. ಎಲ್ಲವೂ ಆತನಿಗೆ ಚಿನ್ಮಯವಾಗಿ ತೋರಿ

ಬರುತ್ತವೆ. ನಾನು ಹಿಂದೆ ಕಾಮಾರಪುಕುರಿನಲ್ಲಿದ್ದಾಗ ರಾಮುಲಾಲನ ಸೋದರ ಶಿವರಾಮನಿಗೆ ನಾಲ್ಕೋ ಐದೋ ವಯಸ್ಸು. ಒಂದು ದಿನ ಆತ ಒಂದು ಕಟ್ಟೆಯ ದಡದಲ್ಲಿ ಮಿಡಿತೆ ಹಿಡಿಯುತ್ತಿದ್ದ. ಎಲೆ ಅಲುಗಾಡು ತ್ತಿದ್ದುವು. ಅವುಗಳ ಶಬ್ದ ನಿಲ್ಲಿಸಲು ಅವಕ್ಕೆ ಹೇಳಿದ: 'ಚುಪ್! ಚುಪ್! ನಾನು ಮಿಡಿತೆ ಹಿಡಿಯಬೇಕು.' ಒಂದು ದಿನ ಬಿರುಗಾಳಿ ಮಳೆ ಎದ್ದು, ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಶಿವರಾಮ ನನ್ನೊಡನೆ ಕೊಠಡಿ ಯಲ್ಲಿದ್ದ. ಆಕಾಶ ಸುಮ್ಮನೆ ಮಿಂಚುತ್ತಿತ್ತು. ಬಾಗಿಲು ತೆಗೆದು ಹೊರ ಗಡೆ ಹೋಗಲು ಆತ ತವಕಪಟ್ಟ. ನಾನು ಆತನನ್ನು ಬಯ್ದು ತಡೆದೆ. ಆದರೂ ಆಗಾಗ ಹೊರಕ್ಕೆ ಇಣಿಕಿ ನೋಡುತ್ತಲೇ ಇದ್ದ. ಆಕಾಶ ಮಿಂಚು ವುದನ್ನು ನೋಡಿ ಕೂಗಿಕೊಂಡ: 'ಚಿಕ್ಕಪ್ಪ, ನೋಡಲ್ಲಿ! ಅವರು ಮತ್ತೆ ಚಕಮುಕಿ ಕಲ್ಲು ಹೊಡೆಯುತ್ತಿದಾರೆ!'

"ಪರಮಹಂಸ ಒಂದು ಚಿಕ್ಕ ಮಗು ಇದ್ದ ಹಾಗೆ—ಆತ್ಮ ಪರ ಇಲ್ಲ, ಐಹಿಕ ಸಂಬಂಧದಲ್ಲಿ ಆಸಕ್ತಿ ಇಲ್ಲ. ಶಿವರಾಮ ಒಂದು ದಿನ ನನ್ನನ್ನು ಕೇಳಿದ: 'ಚಿಕ್ಕಪ್ಪ, ನೀನು ನಮ್ಮ ತಂದೆಯ ತಮ್ಮನೊ ಅಥವಾ ಭಾವನೊ?'

"ಪರಮಹಂಸ ಒಂದು ಚಿಕ್ಕ ಮಗು ಇದ್ದ ಹಾಗೆ. ಆತನಿಗೆ ಗತಿ, ವಿಧಿ ಇವುಗಳ ಭಾವನೆಯೇ ಇರೋಲ್ಲ. ಎಲ್ಲವೂ ಬ್ರಹ್ಮಮಯವಾಗಿ ಕಾಣಬರುತ್ತವೆ—ಎಲ್ಲಿಗೆ ಹೋಗುತ್ತಿರುವುದು, ಎಲ್ಲಿಗೆ ಬರುತ್ತಿರುವುದು ಎಂಬುವುಗಳ ಭಾವನೆಯೇ ಇರೋಲ್ಲ. ಶಿವರಾಮ ದುರ್ಗಾಪೂಜೆ ನೋಡಲು ಹೃದಯನ ಮನೆಗೆ ಹೋಗಿದ್ದ. ಆ ಮನೆ ಬಿಟ್ಟು ತನ್ನಷ್ಟಕ್ಕೆ ತಾನೆ ಯಾವ ಕಡೆಗೊ ಸುಮ್ಮನೆ ಹೊರಟುಹೋಗಿಬಿಟ್ಟ. ದಾರಿಯಲ್ಲಿ ನಾಲ್ಕು ವರ್ಷದ ಆ ಬಾಲಕ ದಿಕ್ಕಿಲ್ಲದೆ ಹೋಗುತ್ತಿರುವುದನ್ನು ಒಬ್ಬ ಕಂಡು ಆತನನ್ನು ಕೇಳಿದ: 'ನೀನು ಎಲ್ಲಿಂದ ಬಂದೆ?' ಆತನಿಗೆ ಯಾವ ಉತ್ತರ ಕೊಡಲೂ ಆಗಲಿಲ್ಲ. ಕೇವಲ ಹೇಳಿದ: 'ಚಪ್ಪರ.' ಅಂದರೆ, ದುರ್ಗಾಪೂಜೆ ನಡೆ ಯುತ್ತಿದ್ದ ಚಪ್ಪರದಿಂದ ಎಂದು. ಆ ಅಪರಿಚಿತ ಮತ್ತೆ ಆತನನ್ನು ಕೇಳಿದ: 'ನೀನು ಯಾರ ಮನೆಯಿಂದ ಬಂದೆ?' ಆಗ ಕೇವಲ ಆತ ಹೇಳಿದ: 'ಅಣ್ಣ.'

"ಪರಮಹಂಸನಿಗೆ ಕೆಲವು ವೇಳೆ ಉನ್ಮತ್ತನ ಅವಸ್ಥೆ ಉಂಟಾಗು ತ್ತದೆ. ನನಗೆ ಪ್ರೇಮೋನ್ಮಾದ ಉಂಟಾದಾಗ ಶಿವಲಿಂಗ ಜ್ಞಾನದಿಂದ

ನನ್ನ ಲಿಂಗವನ್ನೇ ನಾನು ಪೂಜಿಸುತ್ತಿದ್ದೆ. ಆದರೆ ಈಗ ಅದು ಸಾಧ್ಯವಿಲ್ಲ. ದಕ್ಷಿಣೇಶ್ವರ ದೇವಾಲಯ ಪ್ರತಿಷ್ಠೆಯಾದ ಕೆಲವು ದಿನಗಳನಂತರ ಅಲ್ಲಿಗೆ ಒಬ್ಬ ಹುಚ್ಚ ಬಂದಿದ್ದ—ಪೂರ್ಣ ಜ್ಞಾನಿ. ಕಾಲಿಗೆ ಹರಿದುಹೋದ ಜೋಡು ಹಾಕಿಕೊಂಡಿದ್ದ. ಒಂದು ಕೈಯಲ್ಲಿ ಒಂದು ತುಂಡು ಗಳುವನ್ನು, ಇನ್ನೊಂದು ಕೈಯಲ್ಲಿ ಮಾವಿನ ಸಸಿಯ ಒಂದು ಚಟ್ಟಿಯನ್ನು ಹಿಡಿದು ಕೊಂಡಿದ್ದ. ಯಾವ ಆಚಾರಕ್ಕೂ ಬದ್ಧನಾಗಿರಲಿಲ್ಲ. ಗಂಗೆಯಲ್ಲಿ ಸ್ನಾನ ಮಾಡಿದನಂತರ ಸಂಧ್ಯಾವಂದನೆಯೆ, ಆಹ್ನಿಕವೆ ಏನನ್ನೂ ಮಾಡಲಿಲ್ಲ. ಪಂಚೆ ಸೆರಗಿನಲ್ಲಿ ಏನನ್ನು ಕಟ್ಟಿಕೊಂಡುಬಂದಿದ್ದನೊ ಅದನ್ನೇ ತಿಂದ. ಅನಂತರ ಕಾಳೀದೇವಾಲಯಕ್ಕೆ ಹೋಗಿ ಸ್ತೋತ್ರ ಮಾಡಲಾರಂಭಿಸಿದ. ದೇವಾಲಯ ಸುಮ್ಮನೆ ನಡುಗಲಾರಂಭಿಸಿತು. ಹಲಧಾರಿ ಆಗ ಕಾಳಿಯ ಗರ್ಭಗುಡಿಯಲ್ಲಿದ್ದ. ಅಲ್ಲಿನವರು ಆತನನ್ನು ಅತಿಥಿಶಾಲೆಯಲ್ಲಿ ಕುಳಿತು ಕೊಂಡು ಊಟಮಾಡಲು ಬಿಟ್ಟುಕೊಡಲಿಲ್ಲ. ಅದಕ್ಕಾಗೇನೂ ಆತನಿಗೆ ಕೋಪ ಬರಲಿಲ್ಲ. ನಾಯಿಗಳು ತಿನ್ನುತ್ತಿದ್ದ ಎಂಜಲೆಲೆ ಗುಂಡಿಯಿಂದ ಅನ್ನ ಎತ್ತಿಕೊಂಡು ತಿನ್ನಲಾರಂಭಿಸಿದ. ಆಗಾಗ ನಾಯಿಗಳನ್ನು ಒಂದು ಕಡೆಗೆ ತಳ್ಳಿ ಆ ಎಲೆಗಳಲ್ಲಿದ್ದುದನ್ನು ತಾನೇ ತಿಂದ. ಆತ ಹಾಗೆ ಮಾಡಿದರೂ ನಾಯಿಗಳು ಆತನಿಗೇನನ್ನೂ ಮಾಡಲಿಲ್ಲ. ಹಲಧಾರಿ ಆತನನ್ನು ಹಿಂಬಾಲಿಸಿ ಕೇಳಿದ: 'ನೀನು ಯಾರು? ಏನು, ನೀನು ಪೂರ್ಣ ಜ್ಞಾನಿಯೇ?' ಆತ ಪಿಸುಗುಟ್ಟಿದ: 'ಹ್ಞೂ! ಪೂರ್ಣ ಜ್ಞಾನಿ, ಚುಪ್!' ಈ ಸಮಾಚಾರವನ್ನೆಲ್ಲ ಹಲಧಾರಿ ನನಗೆ ತಿಳಿಸಿದಾಗ, ನನ್ನ ಹೃದಯ 'ಡಬ್, ಡಬ್' ಎಂದು ಹೊಡೆದುಕೊಳ್ಳಲಾರಂಭಿಸಿತು. ನಾನು ಹೃದಯ ನನ್ನು ಬಿಗಿಯಾಗಿ ಹಿಡಿದುಕೊಂಡೆ. ಭಗವತಿಗೆ ಹೇಳಿದೆ: 'ತಾಯೆ, ಏನು ನನಗೂ ಈ ಅವಸ್ಥೆ ಬಂದುಬಿಡುವುದೆ?' ನಾವೆಲ್ಲರೂ ಆತನನ್ನು ನೋಡಲು ಹೋದೆವು. ನಮ್ಮೊಡನೆ ಒಳ್ಳೆ ಜ್ಞಾನದ ವಿಷಯವಾಗಿ ಮಾತನಾಡಿದ. ಪರರು ಆತನನ್ನು ಸಮೀಪಿಸಿದಾಗ ಹುಚ್ಚನಂತೆ ವರ್ತಿಸುತ್ತಿದ್ದ. ಆತ ದೇವಾಲಯದಿಂದ ಹೊರಟುಹೋದಾಗ ಹಲಧಾರಿ ಆತನನ್ನು ಬಹಳ ದೂರದವರೆಗೆ ಹಿಂಬಾಲಿಸಿದ. ಗೇಟನ್ನು ದಾಟಿದನಂತರ ಆತ ಹಲಧಾರಿಗೆ ಹೇಳಿದ: 'ನಾನು ನಿನಗೆ ಇನ್ನೇನು ತಾನೆ ಹೇಳಲಿ? ಯಾವಾಗ ನಿನ್ನಲ್ಲಿ ಈ ಗುಂಡಿಯ ನೀರಿಗು ಆ ಗಂಗೆಯ ನೀರಿಗು ಯಾವ ವಿಧದ ಭೇದಬುದ್ಧಿ

ಇರದೊ ಆಗ ತಿಳಿದುಕೊ ನಿನಗೆ ಪೂರ್ಣ ಜ್ಞಾನ ದೊರೆತಿದೆ ಎಂಬುದಾಗಿ.' ಬಳಿಕ ಆತ ಜೋರು ಜೋರಾಗಿ ಕಾಲು ಹಾಕುತ್ತ ಹೊರಟುಹೋದ."

ಪರಮಹಂಸರು ಮಾಸ್ಟರೊಡನೆ ಮಾತಾಡುತ್ತಿದಾರೆ. ಭಕ್ತರು ಹತ್ತಿರ ಕುಳಿತಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಶಶಧರನ ಸಂಬಂಧವಾಗಿ ನಿನ್ನ ಅಭಿಪ್ರಾಯವೇನು?"

ಮಾಸ್ಟರ್: "ಬಹಳ ಒಳ್ಳೆಯವ."

ಶ್ರೀರಾಮಕೃಷ್ಣರು: "ಒಳ್ಳೆ ಬುದ್ಧಿವಂತ, ಅಲ್ಲವೆ?'

ಮಾಸ್ಟರ್: "ಹೌದು, ಒಳ್ಳೆ ಪಾಂಡಿತ್ಯ ಇದೆ."

ಶ್ರೀರಾಮಕೃಷ್ಣರು: "ಗೀತೆ ಹೇಳಿದೆ— ಯಾರನ್ನ ಅನೇಕರು ಹೊಗಳುತ್ತಾರೊ, ಗೌರವಿಸುತ್ತಾರೊ, ಆತನಲ್ಲಿ ಭಗವಂತನ ಶಕ್ತಿ ವಿಶೇಷ ವಾಗಿ ವ್ಯಕ್ತವಾಗಿದೆ ಎಂದು. ಆದರೆ ಆತ ಮಾಡಬೇಕಾದ ಕೆಲಸ ಇನ್ನೂ ಸ್ವಲ್ಪ ಬಾಕಿ ಇದೆ. ಕೇವಲ ಪಾಂಡಿತ್ಯದಿಂದಲೇ ಏನು ದೊರೆತೀತು? ಸ್ವಲ್ಪ ತಪಸ್ಸು ಮಾಡಬೇಕು—ಸ್ವಲ್ಪ ಸಾಧನೆ ಭಜನೆ ಮಾಡಬೇಕು.

"ಗೌರೀಪಂಡಿತ ಸಾಧನೆ ಮಾಡಿದ್ದ. ಆತ ದೇವಿಯ ಸಂಬಂಧ ವಾಗಿ ಸ್ತೋತ್ರ ಮಾಡುವಾಗ, ಉಳಿದ ಪಂಡಿತರು ಆತನ ಎದುರು ಎರೆ ಹುಳುವಿನಂತಾಗಿಬಿಡುತ್ತಿದ್ದರು.

"ನಾರಾಯಣಶಾಸ್ತ್ರಿ ಕೂಡ ಬರೀ ಪಂಡಿತನೇ ಆಗಿರಲಿಲ್ಲ, ಸಾಧನೆ ಭಜನೆಯನ್ನೂ ಮಾಡಿದ್ದ. ಆತ ಇಪ್ಪತ್ತೈದು ವರ್ಷಗಳ ಕಾಲ ಒಂದೇ ಸಮನೆ ವೇದಾಧ್ಯಯನ ಮಾಡಿದ್ದ. ನ್ಯಾಯಶಾಸ್ತ್ರ ಒಂದನ್ನೇ ಏಳು ವರ್ಷ-ಗಳ ಕಾಲ ಓದಿದ್ದ. ಆದರೂ 'ಹರ, ಹರ' ಎಂದು ಹೇಳುತ್ತ ಹೇಳುತ್ತ ಇದ್ದ ಹಾಗೇ ಭಾವಸ್ಥನಾಗಿಬಿಡುತ್ತಿದ್ದ. ಜಯಪುರದ ರಾಜ ಆತನನ್ನು ತನ್ನ ಸಭಾ ಪಂಡಿತನನ್ನಾಗಿ ಮಾಡಿಕೊಳ್ಳಲು ಇಚ್ಛೆಪಟ್ಟ. ಆದರೆ ನಾರಾಯಣ-ಶಾಸ್ತ್ರಿ ಅದಕ್ಕೆ ಒಪ್ಪಲಿಲ್ಲ. ಪ್ರಾಯಿಕವಾಗಿ ಆತ ದಕ್ಷಿಣೇಶ್ವರದಲ್ಲೇ ಇರುತ್ತಿದ್ದ. ವಸಿಷ್ಠಾಶ್ರಮಕ್ಕೆ ಹೋಗಬೇಕೆಂದು ಆತನಿಗೆ ಉತ್ಕಟೇಚ್ಛೆ— ತಪಸ್ಸುಮಾಡಲು. ಪದೇ ಪದೇ ಹಾಗೆ ನನಗೆ ಹೇಳುತ್ತಲೇ ಇರುತ್ತಿದ್ದ. ಅಲ್ಲಿಗೆ ಹೋಗಬೇಡವೆಂದು ನಾನು ಆತನಿಗೆ ಹೇಳಿದೆ. ಆಗ ಆತ ಹೇಳಿದ: 'ನಾನು ಯಾವಾಗ ಸಾಯುತ್ತೇನೊ ಯಾರಿಗೆ ತಾನೆ ಗೊತ್ತು? ಮತ್ತೆ

ಸಾಧನೆ ಮಾಡುವುದಾವಾಗ? ಈ ದಿನವಿದ್ದವರು ನಾಳೆ ಇರೋದಿಲ್ಲ.' ಆತ ಬಹಳವಾಗಿ ಕೇಳಿಕೊಂಡಮೇಲೆ ಹೋಗಲು ಅನುಮತಿ ಕೊಟ್ಟೆ. ಕೆಲ ಕೆಲವರು ಹೇಳುತ್ತಿದಾರೆ, ಆತ ಸತ್ತುಹೋದ—ತಪಸ್ಸುಮಾಡುತ್ತಿದ್ದ ಹಾಗೆ ಎಂದು. ಇನ್ನು ಕೆಲವರು ಹೇಳುತ್ತಿದಾರೆ, ಬದುಕಿಕೊಂಡಿದಾನೆ—ಈಗತಾನೆ ರೈಲ್ವೆ ಗಾಡಿಗೆ ಹತ್ತಿಸಿ ಬಂದೆವು.

"ನಾನು ಕೇಶವಸೇನನನ್ನು ಸಂಧಿಸುವುದಕ್ಕೆ ಮುನ್ನ ನಾರಾಯಣ ಶಾಸ್ತ್ರಿಗೆ ಹೇಳಿಕಳುಹಿಸಿದೆ ಆತ ಎಂಥವನು ಎಂಬುದನ್ನು ನೋಡಿಕೊಂಡು ಬರುವಂತೆ. ಆತ ಬಂದು ತಿಳಿಸಿದ, ಕೇಶವಸೇನ ಜಪಸಿದ್ಧ ಎಂದು. ನಾರಾಯಣಶಾಸ್ತ್ರಿಗೆ ಜ್ಯೋತಿಶ್ಶಾಸ್ತ್ರ ಗೊತ್ತಿತ್ತು. ಹೇಳಿದ, ಕೇಶವಸೇನ ಒಳ್ಳೆ ನಕ್ಷತ್ರದಲ್ಲಿ ಹುಟ್ಟಿದಾನೆ ಎಂದು. ಅನಂತರ ನಾನು ಹೃದಯನನ್ನು ಜೊತೆಯಲ್ಲಿ ಕರೆದುಕೊಂಡು ಬೇಲಘರದ ತೋಟದ ಮನೆಗೆ ಹೋಗಿ ಆತನನ್ನು ಸಂಧಿಸಿದೆ. ಆತನನ್ನು ನಾನು ಕಂಡೊಡನೇ ಹೇಳಿದೆ: 'ಇಲ್ಲಿ ಇರತಕ್ಕವರಲ್ಲಿ ಕೇವಲ ಈತನಿಗೇ ಬಾಲ ಬಿದ್ದುಹೋಗಿದೆ. ಈತ ನೀರಿನಲ್ಲೂ ಇರಬಲ್ಲ, ಭೂಮಿಯ ಮೇಲೂ ಇರಬಲ್ಲ.'

"ಕೇಶವಸೇನ ನನ್ನನ್ನು ಪರೀಕ್ಷೆಮಾಡಲು ಮೂರು ಜನ ತನ್ನ ಅನುಯಾಯಿಗಳನ್ನು ದಕ್ಷಿಣೇಶ್ವರಕ್ಕೆ ಕಳುಹಿಸಿದ್ದ. ಆ ಗುಂಪಿನಲ್ಲಿ ಪ್ರಸನ್ನನೂ ಒಬ್ಬ. ಹಗಲೂ ಇರಳೂ ನನ್ನನ್ನು ಪರೀಕ್ಷೆ ಮಾಡಿ ಅವರು ಕೇಶವಸೇನನಿಗೆ ವರದಿ ಒಪ್ಪಿಸಬೇಕಾಗಿತ್ತು. ಅವರು ನನ್ನ ಕೊಠಡಿಯಲ್ಲಿದ್ದರು. ರಾತ್ರಿಯನ್ನು ಅಲ್ಲೇ ಕಳೆಯಬೇಕೆಂದಿದ್ದರು. ಯಾವಾಗ ನೋಡಿದರೂ 'ದಯಾಮಯ, ದಯಾಮಯ' ಅಂತ ಹೇಳುತ್ತ ಬೋಧೆ ಮಾಡಲಾರಂಭಿಸಿದರು: 'ನೀವು ಕೇಶವಸೇನನನ್ನು ಹಿಡಿಯಿರಿ. ಆಗ ನಿಮಗೆ ಒಳ್ಳೆಯದಾಗುತ್ತದೆ.' ನಾನು ಅವರಿಗೆ ತಿಳಿಸಿದೆ: 'ನಾನು ಸಾಕಾರ ಒಪ್ಪುತ್ತೇನೆ.' ಅನಂತರವೂ ಅವರು 'ದಯಾಮಯ, ದಯಾಮಯ' ಅನ್ನುತ್ತಲೇ ಇದ್ದರು. ಆಗೊಂದು ಮಾನಸಿಕ ಅವಸ್ಥೆ ನನಗೆ ಬಂತು. ನಾನು ಅವರಿಗೆ ಹೇಳಿದೆ: 'ಹೊರಡಿ ಇಲ್ಲಿಂದ!' ಕೊಠಡಿಯಲ್ಲಿ ಮಲಗಲು ಅವರನ್ನು ಬಿಟ್ಟುಕೊಡಲೇ ಇಲ್ಲ. ಅವರು ಜಗಲಿಗೆ ಎದ್ದುಹೋಗಿ ಮಲಗಿಕೊಂಡರು. ಕ್ಯಾಪ್ಟೆನ್ ಕೂಡ ನನ್ನನ್ನು ಸಂಧಿಸಿದ ಮೊದಲನೆ ರಾತ್ರಿಯನ್ನ ದಕ್ಷಿಣೇಶ್ವರದಲ್ಲೇ ಕಳೆದ.

"ನಾರಾಯಣಶಾಸ್ತ್ರಿ ದಕ್ಷಿಣೇಶ್ವರದಲ್ಲಿ ಇದ್ದಾಗ ಮೈಕೇಲ[1] ಅಲ್ಲಿಗೆ ಬಂದಿದ್ದ. ಮಥುರಬಾಬುವಿನ ಹಿರಿಯ ಮಗ ದ್ವಾರಕನಾಥಬಾಬು ಆತನನ್ನು ಅಲ್ಲಿಗೆ ಕರೆದುಕೊಂಡುಬಂದಿದ್ದ. ಕಾಳೀದೇವಾಲಯದ ಯಜಮಾನರು ಪಕ್ಕದಲ್ಲೇ ಇದ್ದ ಮದ್ದಿನ ಕಾರ್ಖಾನೆಯ ಆಂಗ್ಲ ಧಣಿಗಳ ಮೇಲೆ ವ್ಯಾಜ್ಯ ಹೂಡಬೇಕಾಗಿತ್ತು. ಅದಕ್ಕಾಗಿ ಅವರು ಆತನನ್ನು ಅಲ್ಲಿಗೆ ಕರೆದುಕೊಂಡುಬಂದು ಸಲಹೆ ತೆಗೆದುಕೊಂಡರು. ಮ್ಯಾನೇಜರ ಆಫೀಸಿನ ಪಕ್ಕದಲ್ಲಿದ್ದ ದೊಡ್ಡ ಕೊಠಡಿಯಲ್ಲಿ ನಾನು ಆತನನ್ನು ಸಂಧಿಸಿದುದು. ನಾರಾಯಣಶಾಸ್ತ್ರಿ ನನ್ನೊಡನೆ ಅಲ್ಲಿಗೆ ಬಂದಿದ್ದ. ನಾನು ಆತನಿಗೆ ಹೇಳಿದೆ, ಮೈಕೇಲನೊಡನೆ ಮಾತುಕತೆಯಾಡುವಂತೆ. ಮೈಕೇಲನಿಗೆ ಸಂಸ್ಕೃತದಲ್ಲಿ ಮಾತುಕತೆಯಾಡಲು ಕಷ್ಟವಾಗಿ ತೋರಿತು. ತಪ್ಪು ಮಾಡಲಾರಂಭಿಸಿದ. ಬಳಿಕ ಬಂಗಾಳಿಯಲ್ಲಿ ಮಾತನಾಡಲಾರಂಭಿಸಿದರು. ನಾರಾಯಣಶಾಸ್ತ್ರಿ ಆತನನ್ನು ಕೇಳಿದ: 'ನೀನು ನಿನ್ನ ಸ್ವಧರ್ಮವನ್ನ ಏಕೆ ಬಿಟ್ಟುಬಿಟ್ಟೆ?' ಮೈಕೇಲ ಹೊಟ್ಟೆ ತೋರಿಸಿ ಹೇಳಿದ: 'ಇದಕ್ಕಾಗಿ ಬಿಡಬೇಕಾಗಿ ಬಂತು.' ಆಗ ನಾರಾಯಣಶಾಸ್ತ್ರಿ ಹೇಳಿದ: 'ಹೊಟ್ಟೆಪಾಡಿಗಾಗಿ ಸ್ವಧರ್ಮವನ್ನೇ ತ್ಯಜಿಸತಕ್ಕ ಮನುಷ್ಯನೊಡನೆ ನಾನು ಏನುತಾನೆ ಮಾತನಾಡಲಿ?' ಅನಂತರ ಮೈಕೇಲ ನನ್ನನ್ನು ಕೇಳಿಕೊಂಡ, ಏನನ್ನಾದರೂ ಹೇಳಬೇಕೆಂದು. ನಾನು ಹೇಳಿದೆ: 'ಇದೇಕೊ ನನಗೆ ಗೊತ್ತಿಲ್ಲ, ಏನು ಮಾತಾಡುವುದಕ್ಕೂ ಇಚ್ಛೆಯಾಗುತ್ತಿಲ್ಲ. ಯಾರೊ ನನ್ನ ಬಾಯನ್ನ ಅದುಮಿ ಹಿಡಿದಿರುವಂತಿದೆ.'"

ಮನಮೋಹನ: "ಚೌಧುರಿ ಇಲ್ಲಿಗೆ ಬರುವುದಿಲ್ಲ. ಆತ ಹೇಳಿದ: ಆ ಫರಿದ್‌ಪುರದ ಮೂರ್ಖ, ಶಶಧರ ಅಲ್ಲಿಗೆ ಬರುತ್ತಾನೆ. ಆದ್ದರಿಂದ ನಾನು ಬರೋದಿಲ್ಲ.'"

ಚೌಧುರಿ ಕಲ್ಕತ್ತ ವಿಶ್ವವಿದ್ಯಾನಿಲಯದ ಎಂ.ಎ. ಆಗಿದ್ದ. ಮುನ್ನೂರೊ ನಾನೂರೊ ರೂಪಾಯಿ ಸಂಬಳ. ಮೊದಲನೆ ಹೆಂಡತಿ ಸತ್ತನಂತರ ದೊಡ್ಡ ವೈರಾಗ್ಯ ಬಂದುಬಿಟ್ಟಿತ್ತು, ಆದರೆ ಮತ್ತೆ ಮದುವೆಯಾದ. ಆಗಾಗ ದಕ್ಷಿಣೇಶ್ವರಕ್ಕೆ ಬಂದುಹೋಗುತ್ತಿದಾನೆ.

ಶ್ರೀರಾಮಕೃಷ್ಣರು: "ಆತನದು ಎಂಥಾ ಹೀನಬುದ್ಧಿ! ವಿದ್ಯೆಯ

1. ಮೈಕೇಲಮಧುಸೂಧನದತ್ತ ಒಬ್ಬ ವಕೀಲ. ಬಂಗಾಳಿಯ ಮಹಾಕವಿಗಳಲ್ಲಿ ಒಬ್ಬ. ಕ್ರೈಸ್ತ ಧರ್ಮಕ್ಕೆ ಮತಾಂತರಹೊಂದಿದ್ದ.

ಅಹಂಕಾರವಿದೆ. ಸಾಲದುದಕ್ಕೆ ಎರಡನೆ ಸಲ ವಿವಾಹ ಬೇರೆ ಆಗಿದಾನೆ. ಈ ಜಗತ್ತು ಆತನ ದೃಷ್ಟಿಯಿಂದ ಒಂದಂಗೈಯಗಲ ಇದ್ದ ಹಾಗೆ!

(ಭಕ್ತರಿಗೆ) "ಕಾಮಕಾಂಚನಾಸಕ್ತಿ ಮನುಷ್ಯನನ್ನ ಹೀನಬುದ್ಧಿಯುಳ್ಳವನನ್ನಾಗಿ ಮಾಡಿಬಿಡುತ್ತದೆ. ಹರಮೋಹನ ಮೊದಲನೆ ಸಲ ನನ್ನನ್ನು ಸಂಧಿಸಿದಾಗ ಆತನಲ್ಲಿ ಒಳ್ಳೆ ಲಕ್ಷಣಗಳಿರುವುದು ನನಗೆ ಕಂಡು ಬಂತು. ಆತನನ್ನು ನೋಡಬೇಕೆಂದು ನಾನು ಬಹಳವಾಗಿ ವ್ಯಾಕುಲಪಡುತ್ತಿದ್ದೆ. ಆಗ ಆತನಿಗೆ ವಯಸ್ಸು ಹದಿನೇಳೊ ಹದಿನೆಂಟೊ. ಆಗಾಗ ಆತನಿಗಾಗಿ ಕರೆ ಕಳುಹಿಸುತ್ತಿದ್ದೆ. ಆದರೂ ಆತ ಬರುತ್ತಿರಲಿಲ್ಲ. ಈಗ ಹೆಂಡತಿಯನ್ನು ಕರೆದುಕೊಂಡುಬಂದು ಪ್ರತ್ಯೇಕವಾಗಿ ವಾಸಮಾಡುತ್ತಿದಾನೆ. ಹಿಂದೆ ಸೋದರಮಾವನ ಮನೆಯಲ್ಲಿ ಇದ್ದ. ಅದು ಬಹಳ ಚೆನ್ನಾಗಿತ್ತು. ಆಗ ಸಂಸಾರದ ಯಾವ ಜಂಜಾಟವೂ ಇರಲಿಲ್ಲ. ಈಗ ಪ್ರತ್ಯೇಕವಾಗಿ ಮನೆ ಮಾಡಿಕೊಂಡು ದಿನವೂ ಹೆಂಡತಿಯ ಸಲುವಾಗಿ ಪೇಟೆಗೆ ಹೋಗಬೇಕಾಗಿಬಂದಿದೆ. ಅಂದು ದಕ್ಷಿಣೇಶ್ವರಕ್ಕೆ ಬಂದಿದ್ದ. ನಾನು ಆತನಿಗೆ ಹೇಳಿದೆ: 'ಹೋಗು, ಇಲ್ಲಿಂದ ಹೊರಟುಹೋಗು! ಕಣ್ಣೆತ್ತಿ ನೋಡಲೂ ನನಗಾಗುತ್ತಿಲ್ಲ.'"

ಈಗ ಪರಮಹಂಸರು ಜಗನ್ನಾಥನನ್ನು ದರ್ಶನಮಾಡಿಬರಲು ದೇವರ ಮನೆಗೆ ಹೋಗುತ್ತಿದಾರೆ. ದರ್ಶನ ಮಾಡಿದನಂತರ ಪುಷ್ಪಾಂಜಲಿಯನ್ನು ಅರ್ಪಿಸುತ್ತಿದಾರೆ. ಬಲರಾಮನ ಮನೆಯ ಹೆಂಗಸರಿಗೆ ಪರಮಹಂಸರ ದರ್ಶನ ದೊರೆತುದಕ್ಕಾಗಿ ಬಹಳ ಆನಂದವಾಗಿಬಿಟ್ಟಿದೆ.

ಪರಮಹಂಸರು ಬೈಠಕ್‌ಖಾನೆಗೆ ಹಿಂದಿರುಗಿಬಂದು ಹೇಳುತ್ತಿದಾರೆ: "ಪ್ರಾಪಂಚಿಕರ ಪೂಜೆ, ಜಪ, ತಪ ಇವೆಲ್ಲ ಹುಚ್ಚು ರೇಗಿದಾಗ ಮಾತ್ರ. ಯಾರಿಗೆ ಭಗವಂತನ ಹೊರತು ಬೇರೇನೂ ಗೊತ್ತಿಲ್ಲವೊ ಅವರು ತಮ್ಮ ಪ್ರತಿಯೊಂದು ಉಸಿರಿನೊಡನೆಯೂ ಆತನನ್ನು ನೆನೆಯುತ್ತಾರೆ. ಕೆಲವರು ಮನಸ್ಸು ಮನಸ್ಸಿನಲ್ಲೇ ಸರ್ವದಾ 'ರಾಮ, ರಾಮ' ಎಂದು ಜಪ ಮಾಡುತ್ತಿರುತ್ತಾರೆ. ಜ್ಞಾನಮಾರ್ಗಿಗಳೂ 'ಸೋಽಹಮ್' ಜಪವನ್ನ ಮಾಡುತ್ತಾರೆ. ಇನ್ನು ಕೆಲವರಲ್ಲಿ ನೋಡಬಹುದು, ನಾಲಗೆ ಸರ್ವದಾ ಆಡುತ್ತಿರುವುದನ್ನ. ಯಾವಾಗಲೂ ಸ್ಮರಣ ಮನನ ಮಾಡುತ್ತಲೇ ಇರಬೇಕು."

ಪಂಡಿತ ಶಶಧರ ತನ್ನ ಒಬ್ಬಿಬ್ಬರು ಗೆಳೆಯರೊಡನೆ ಕೊಠಡಿಯನ್ನು

ಪ್ರವೇಶಿಸಿ, ಪರಮಹಂಸರಿಗೆ ಪ್ರಣಾಮಮಾಡಿ ಒಂದು ಕಡೆ ಕುಳಿತು ಕೊಳ್ಳುತ್ತಿದಾನೆ.

ಶ್ರೀರಾಮಕೃಷ್ಣರು ನಗುತ್ತ: "ನಾವೆಲ್ಲರೂ ವಧುವಿನ ಹಾಸಿಗೆ ಹತ್ತಿರ ಕಾದುಕೊಂಡೇ ಕುಳಿತಿದೇವೆ—ವರ ಎಷ್ಟು ಹೊತ್ತಿಗೆ ಬರುತ್ತಾನೆ ಅಂತ."

ಪಂಡಿತ ನಗುತ್ತಿದಾನೆ. ಕೊಠಡಿ ಭಕ್ತರಿಂದ ತುಂಬಿದೆ. ಬಲರಾಮನ ತಂದೆ, ಡಾಕ್ಟರ್ ಪ್ರತಾಪ ಇವರೂ ಭಕ್ತರ ಮಧ್ಯೆ ಕುಳಿತಿದಾರೆ. ಪರಮ-ಹಂಸರು ಮಾತು ಮುಂದುವರಿಸುತ್ತಿದಾರೆ.

ಶ್ರೀರಾಮಕೃಷ್ಣರು ಶಶಧರನಿಗೆ: "ಜ್ಞಾನದ ಮೊದಲನೆ ಚಿಹ್ನೆ ಶಾಂತ ಸ್ವಭಾವ, ಎರಡನೆಯದು ಅಭಿಮಾನಶೂನ್ಯತೆ. ನಿನಗೆ ಈ ಎರಡು ಗುಣಗಳೂ ಇವೆ. ಜ್ಞಾನಿಗೆ ಇನ್ನೂ ಕೆಲವು ಗುಣಗಳಿವೆ. ಆತ ಸಾಧು ಗಳ ಮುಂದೆ ತ್ಯಾಗಿ, ಕರ್ಮಕ್ಷೇತ್ರದಲ್ಲಿ—ಅಂದರೆ ಲೆಕ್ಚರ್-ಗಿಕ್ಚರ್ ಕೊಡೋ ಸಮಯದಲ್ಲಿ ಸಿಂಹಸದೃಶ, ಹೆಂಡತಿಯ ಎದುರು ರಸಿಕ ರಾಜ, ರಸಿಕ ಪಂಡಿತ. (ಎಲ್ಲರೂ ನಗುತ್ತಿದಾರೆ.)

"ವಿಜ್ಞಾನಿಯ ಸ್ವಭಾವ ಪ್ರತ್ಯೇಕ. ಉದಾಹರಣೆಗೆ ಚೈತನ್ಯ-ದೇವನದು. ಆತ ಬಾಲಕನ ಹಾಗೆ, ಉನ್ಮತ್ತನ ಹಾಗೆ, ಜಡನ ಹಾಗೆ, ಪಿಶಾಚನ ಹಾಗೆ ವರ್ತಿಸುತ್ತಾನೆ. ಬಾಲಕನ ಅವಸ್ಥೆಯಲ್ಲಿ ಇರುವಾಗ, ಕೆಲವು ವೇಳೆ ಏನೂ ಅರಿಯದ ಹಸುಳೆಯ ಹಾಗೆ ವರ್ತಿಸುತ್ತಾನೆ, ಇನ್ನು ಕೆಲವು ವೇಳೆ ಚಿಕ್ಕ ಹುಡುಗನ ಹಾಗೆ ಹುಡುಗಾಟವಾಡುತ್ತಿರುತ್ತಾನೆ, ಮತ್ತೆ ಕೆಲವು ವೇಳೆ ಉಪದೇಶವೀಯುತ್ತಾನೆ—ವೀರ ಯುವಕ ವ್ಯಕ್ತಿಯ ಹಾಗೆ."

ಪಂಡಿತ: "ಯಾವ ವಿಧದ ಭಕ್ತಿಯಿಂದ ಆತನ ಸಾಕ್ಷಾತ್ಕಾರ ಪಡೆದುಕೊಳ್ಳಬಹುದು?"

ಶ್ರೀರಾಮಕೃಷ್ಣರು: "ಮನುಷ್ಯನ ಪ್ರಕೃತಿಗೆ ತಕ್ಕಂತೆ ಭಕ್ತಿಯಲ್ಲಿ ಮೂರು ವಿಧ: ಸಾತ್ತ್ವಿಕ ಭಕ್ತಿ, ರಾಜಸಿಕ ಭಕ್ತಿ, ತಾಮಸಿಕ ಭಕ್ತಿ.

"ಭಕ್ತನಲ್ಲಿ ಸಾತ್ತ್ವಿಕ ಭಕ್ತಿ ಉಂಟಾಗಿರುವುದನ್ನ ಕೇವಲ ಭಗವಂತ ನೊಬ್ಬನೇ ಅರಿತುಕೊಳ್ಳಬಲ್ಲ. ಇವರಲ್ಲಿ ಬಾಹ್ಯಾಡಂಬರವೇನಿರುವುದಿಲ್ಲ. ಈ ವಿಧದ ಭಕ್ತಿಯುಳ್ಳವನಿಗೆ ಏಕಾಂತದಲ್ಲಿರುವುದು ಬಹಳವಾಗಿ ಹಿಡಿ ಸುತ್ತದೆ. ಬಹುಶಃ ಸೊಳ್ಳೆ ಪರದೆಯೊಳಗೆ ಕುಳಿತು ಧ್ಯಾನ ಮಾಡಬಹುದು. ಅದು ಯಾರಿಗೂ ಗೊತ್ತೇ ಆಗೋದಿಲ್ಲ. ಸತ್ತ್ವದ ಸತ್ತ್ವ, ಎಂದರೆ

ವಿಶುದ್ಧ ಸತ್ತ್ವ ಉಂಟಾಯಿತು ಎಂದರೆ, ಭಗವಂತನ ದರ್ಶನಕ್ಕಾಗಿ ಇನ್ನು ತಡವೇನಿರೋದಿಲ್ಲ. ಇದು ಅರುಣೋದಯವಾದೊಡನೇ ಅರ್ಥವಾಗೋದಿಲ್ಲವೆ ಇನ್ನು ಸೂರ್ಯೋದಯಕ್ಕೆ ತಡವೇನಿಲ್ಲ ಅಂತ, ಹಾಗೆ.

"ರಾಜಸಿಕ ಭಕ್ತಿ ಯಾರಿಗೆ ಉಂಟಾಗುತ್ತದೆಯೊ ಆತನಿಗೆ ಇಚ್ಛೆಯುಂಟಾಗುತ್ತದೆ—ಜನ ನೋಡಲಿ ತಾನು ಒಬ್ಬ ಭಕ್ತ ಎಂಬುದನ್ನು ಎಂದು. ಆತ ಷೋಡಶೋಪಚಾರಗಳಿಂದ ಭಗವಂತನ ಪೂಜೆ ಮಾಡುತ್ತಾನೆ. ರೇಷ್ಮೆ ಉಡಿಗೆ ಉಟ್ಟು ದೇವಾಲಯಕ್ಕೆ ಹೋಗುತ್ತಾನೆ. ಕೊರಳಿಗೆ ಮಧ್ಯೆ ಮಧ್ಯೆ ಮುತ್ತಿನ ಮತ್ತು ಚಿನ್ನದ ಮಣಿಗಳನ್ನು ಪೋಣಿಸಿರುವ ರುದ್ರಾಕ್ಷಿ ಮಾಲೆ ಹಾಕಿಕೊಳ್ಳುತ್ತಾನೆ.

"ತಾಮಸಿಕ ಭಕ್ತಿಯುಳ್ಳ ಮನುಷ್ಯನ ನಡೆ, ನುಡಿ, ವ್ಯವಹಾರ ಡಕಾಯಿತನ ಹಾಗೆ. ಡಕಾಯಿತ ರಾಜರಸ್ತೆಯಲ್ಲೇ ದರೋಡೆ ಮಾಡಿಬಿಡುತ್ತಾನೆ. ಒಂದು ಹತ್ತು ಜನ ಪೊಲೀಸಿನವರು ಬಂದರೂ ಹೆದರುವುದಿಲ್ಲ. ಕೂಗಿಕೊಳ್ಳುತ್ತಾನೆ: 'ಹೊಡಿ! ಬಡಿ! ಸುಲಿ!' ಅದೇ ರೀತಿಯಾಗಿ ತಾಮಸಿಕ ಭಕ್ತ ಉನ್ಮತ್ತನ ಹಾಗೆ ಕೂಗಿಕೊಳ್ಳುತ್ತಾನೆ: 'ಹರ! ಹರ! ಹರ! ವ್ಯೋಮ್! ವ್ಯೋಮ್! ಜೈ ಕಾಳಿ!' ಮನಸ್ಸು ಬಹಳ ಶಕ್ತಿಯುತವಾಗಿರುತ್ತೆ. ಭಗವಂತನಲ್ಲಿ ಉಜ್ಜ್ವಲ ಶ್ರದ್ಧೆ ಇರುತ್ತೆ.

"ಶಾಕ್ತನಿಗೆ ಈ ರೀತಿಯ ಶ್ರದ್ಧೆ ಇರುತ್ತದೆ. ಆತ ಹೇಳುತ್ತಾನೆ: 'ಏನು? ಒಮ್ಮೆ ಕಾಳೀನಾಮ, ದುರ್ಗಾನಾಮ, ಪಠಿಸಿದೇನೆ! ಒಮ್ಮೆ ರಾಮನಾಮ ಪಠಿಸಿದೇನೆ! ಇನ್ನು ನನ್ನಲ್ಲಿ ಪಾಪ ಅಂದರೆ?'

"ವೈಷ್ಣವರದು ಅತ್ಯಂತ ದೀನ ನಮ್ರ ಭಾವ. (ಬಲರಾಮನ ತಂದೆ ಕಡೆ ನೋಡಿ) ಅವರು ಜಪಮಾಲೆ ತಿರುಗಿಸುತ್ತ, ಅಳುತ್ತ ಕರೆಯುತ್ತ ಹೇಳುತ್ತಾರೆ: 'ಹೇ ಕೃಷ್ಣ, ದಯೆ ತೋರೋ! ನಾವು ಅಧಮರು! ನಾವು ಪಾಪಿಗಳು!'

"ಮನುಷ್ಯ ಅಂಥ ಉಜ್ಜ್ವಲ ಶ್ರದ್ಧೆಯುಳ್ಳವನಾಗಿರಬೇಕು, ಆತ ಹೇಳುವಂತಾಗಬೇಕು: 'ಭಗವಂತನ ಹೆಸರು ಪಠಿಸಿದೇನೆ ನಾನು, ನನ್ನಲ್ಲಿ ಇನ್ನೂ ಪಾಪ ಅಂದರೆ!' ಇದು ಎಷ್ಟು ಶೋಚನೀಯವಾದ್ದು—ಹಗಲೂ ಇರುಳೂ ಹರಿನಾಮ ಮಾಡುವುದೂ, ಅದೇ ಉಸಿರಿನಲ್ಲಿ ತಾನು ಪಾಪಿ ಅಂತಲೂ ಹೇಳಿಕೊಳ್ಳುವುದು!"

ಹೀಗೆ ಹೇಳುತ್ತ ಹೇಳುತ್ತ ಇದ್ದ ಹಾಗೆ, ಪರಮಹಂಸರು ಪ್ರೇಮೋನ್ಮತ್ತರಾಗಿ ಹಾಡಲಾರಂಭಿಸಿದಾರೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀನಾಮವನು ಜಪಿಸುತಿರಲು . . .

ಅವರು ಮತ್ತೆ ಹಾಡುತ್ತಿದಾರೆ:

ಶಿವಸಂಗದೊಳಾನಂದದಿ ತಾಯಿ ಕುಣಿಯುತಿರುವಳು.
ದಿವ್ಯ ಮಧುವ ಕುಡಿದು ಕೂಡ, ಹೆಜ್ಜೆತಪ್ಪದಿರುವಳು.
ಶಿವಶಿವೆಯರ ಪದಘಾತಕೆ ನೆಲವೆ ನಡುಗಿದೆ.
ಲಜ್ಜೆಭಯಗಳೆಂಬುವೆಲ್ಲ ಎಲ್ಲೊ ಬಿದ್ದಿವೆ!

ಪಂಡಿತ ಶಶಧರ ಪ್ರೇಮಾಶ್ರು ಸುರಿಸುತ್ತಿದಾನೆ. ವೈಷ್ಣವಚರಣ ಈಗ ಹಾಡಲಾರಂಭಿಸಿದಾನೆ:

ಶ್ರದ್ಧೆಯ ಸರೋವರದಿ ತಾಯನಾಮದ ನೌಕೆ
ತೇಲುತಿದೆ ನೋಡು! . . . ( ಉ. ೩೯ )

ಪರಮಹಂಸರು ಈ ಹಾಡನ್ನು ಕೇಳುತ್ತಿದ್ದ ಹಾಗೆ ಭಾವಾವಿಷ್ಟರಾಗುತ್ತಿದಾರೆ.

ಈಗ ಪರಮಹಂಸರೇ ಹಾಡುತ್ತಿದಾರೆ:

ಅಂದು—
ನಂದಗೋಕುಲದಲ್ಲಿ ಗೋಪಾಲನಾದಂದು, . . . ( ಉ. ೬೯ )

ಈಗ ಪರಮಹಂಸರು ಸಮಾಧಿಸ್ಥರಾಗಿಬಿಟ್ಟಿದಾರೆ. ಪಂಡಿತ ಶಶಧರ ಮತ್ತೆ ಪ್ರೇಮಾಶ್ರು ಸುರಿಸುತ್ತಿದಾನೆ.

ಪರಮಹಂಸರು ಪ್ರಕೃತಿಸ್ಥರಾಗುತ್ತಿದಾರೆ. ಶಶಧರನನ್ನು ತೋರಿಸಿ ಮಾಸ್ಟರಿಗೆ ಹೇಳುತ್ತಿದಾರೆ: "ನೀವು ಏಕೆ ಆತನನ್ನು ಸ್ವಲ್ಪ ಕೆಣಕಬಾರದು?" ಅವರ ಇಚ್ಛೆ, ಮಾಸ್ಟರೇ ಆಗಲಿ ಅಥವಾ ಬೇರೆ ಭಕ್ತರೇ ಆಗಲಿ ಶಶಧರನಿಗೆ ಏನಾದರೂ ಪ್ರಶ್ನೆ ಹಾಕಲಿ ಎಂದು.

ರಾಮದಯಾಳು ಶಶಧರನಿಗೆ: "ಬ್ರಹ್ಮನ ರೂಪ ಕೇವಲ ಕಲ್ಪನೆ ಎಂಬುದಾಗಿ ಶಾಸ್ತ್ರ ಹೇಳುತ್ತದೆಯಲ್ಲ, ಆ ಕಲ್ಪನೆಯನ್ನು ಮಾಡಿದವರು ಯಾರು?"

ಶಶಧರ: "ಬ್ರಹ್ಮ ತಾನೇ ಅದನ್ನು ಮಾಡುತ್ತಾನೆ—ಮನುಷ್ಯನ ಕಲ್ಪನೆಯಲ್ಲ."

ಪ್ರತಾಪ: "ಏಕೆ ಅವನು ಹಾಗೆ ಮಾಡುತ್ತಾನೆ?"

ಶ್ರೀರಾಮಕೃಷ್ಣರು: "ಏಕೆ ಅಂತಲೆ? ಆತ ಇತರರೊಡನೆ ಪರಾಮರ್ಶೆ ಮಾಡಿ ಏನನ್ನೂ ಮಾಡುವುದಿಲ್ಲ. ಆತನ ಖುಷಿ. ಆತ ಇಚ್ಛಾಮಯ. ಏಕೆ ಹಾಗೆ ಮಾಡುತ್ತಾನೆ ಎಂಬ ಸಮಾಚಾರ ಕಟ್ಟಿಕೊಂಡು ನಮಗೇನು? ತೋಟಕ್ಕೆ ಬಂದುದು ಮಾವಿನ ಹಣ್ಣು ತಿನ್ನಲು. ತಿನ್ನು ಹಣ್ಣನ್ನ. ತೋಟದಲ್ಲಿ ಮರಗಳೆಷ್ಟಿವೆ, ಎಷ್ಟು ಸಾವಿರ ಕೊಂಬೆಗಳಿವೆ, ಎಷ್ಟು ಲಕ್ಷ ಎಲೆಗಳಿವೆ—ಎಂಬೀ ಲೆಕ್ಕಾಚಾರದಿಂದ ನಮಗಾಗೋ ಪ್ರಯೋಜನವೇನು? ವೃಥಾ ತರ್ಕ, ವಿಚಾರ ಇವುಗಳಲ್ಲಿ ತೊಡಗಿದರೆ ವಸ್ತು ಲಾಭ ದೊರಕದು."

ಪ್ರತಾಪ: "ಹಾಗಾದರೆ, ಇನ್ನು ವಿಚಾರ ಮಾಡಲೇ ಕೂಡದು ಅಂತೀರಾ?"

ಶ್ರೀರಾಮಕೃಷ್ಣರು: "ವೃಥಾ ತರ್ಕ, ವಿಚಾರ ಇವನ್ನು ಮಾಡಬೇಡ. ಆದರೆ ಸದಸದ್ವಿಚಾರ ಮಾಡು—ಯಾವುದು ನಿತ್ಯ, ಯಾವುದು ಅನಿತ್ಯ ಎಂಬುದರ ಸಂಬಂಧವಾಗಿ ವಿಚಾರ ಮಾಡು. ಕಾಮಕ್ರೋಧಗಳಿಂದ ಉದ್ರಿಕ್ತನಾದಾಗ, ಶೋಕಾನ್ವಿತನಾದಾಗ ಖಂಡಿತ ವಿಚಾರದಲ್ಲಿ ತೊಡಗು."

ಶಶಧರ: "ಅದು ಪ್ರತ್ಯೇಕ ಸಮಾಚಾರ. ಅದಕ್ಕೆ ವಿವೇಕಾತ್ಮಕ ವಿಚಾರ ಅಂತ ಹೆಸರು."

ಶ್ರೀರಾಮಕೃಷ್ಣರು: "ಹೌದು, ಸದಸದ್ವಿಚಾರ."

ಎಲ್ಲರೂ ಮೌನವಾಗಿ ಕುಳಿತಿದಾರೆ. ಮತ್ತೆ ಪರಮಹಂಸರು ಪಂಡಿತನನ್ನು ಸಂಬೋಧಿಸಿ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಹಿಂದೆ ದೊಡ್ಡ ದೊಡ್ಡವರು ಅಲ್ಲಿಗೆ ಬರುತ್ತಿದ್ದರು."

ಶಶಧರ: "ಅಂದರೆ ಐಶ್ವರ್ಯವಂತರೇನು?"

ಶ್ರೀರಾಮಕೃಷ್ಣರು: "ಅಲ್ಲ. ದೊಡ್ಡ ದೊಡ್ಡ ಪಂಡಿತರು."

ಇಷ್ಟರಲ್ಲಿ ಜಗನ್ನಾಥನ ಆ ಪುಟ್ಟ ರಥವನ್ನ ಜಗಲಿ ಮೇಲಕ್ಕೆ ಎಳೆದು ತಂದಿದಾರೆ. ರಥದೊಳಗೆ ಜಗನ್ನಾಥನ, ಬಲರಾಮನ ಮತ್ತು ಸುಭದ್ರೆಯ ವಿಗ್ರಹಗಳನ್ನಿಟ್ಟು ಅವನ್ನು ನಾನಾ ವಿಧ ಹೂವುಗಳಿಂದ, ಹಾರಗಳಿಂದ, ಬಗೆ ಬಗೆಯ ಆಭರಣಗಳಿಂದ, ಪೀತಾಂಬರಾದಿ ವಸ್ತ್ರಗಳಿಂದ ಅಲಂಕಾರ

ಮಾಡಿದಾರೆ. ಬಲರಾಮನದು ಸಾತ್ತ್ವಿಕ ಪೂಜೆ, ಯಾವ ಆಡಂಬರವೂ ಇಲ್ಲ. ಹೊರಗಿನವರಿಗೆ ಗೊತ್ತೇ ಇರಲಿಲ್ಲ ಈತನ ಮನೆಯಲ್ಲಿ ರಥೋತ್ಸವ ಅಂತ. ಈಗ ಪರಮಹಂಸರು ಮತ್ತು ಭಕ್ತರು ರಥದ ಹತ್ತಿರಕ್ಕೆ ಬರುತ್ತಿದಾರೆ. ಪರಮಹಂಸರು ಆ ರಥದ ಹಗ್ಗ ಹಿಡಿದು ಸ್ವಲ್ಪ ದೂರ ಆ ವರಾಂಡದಲ್ಲಿ ಎಳೆದರು. ಈಗ ಹಾಡಲಾರಂಭಿಸಿದಾರೆ:

ಗೌರಾಂಗನು ಹುಟ್ಟಿದೂರು
ಅವನ ಪ್ರೇಮ ಹಿಲ್ಲೋಲದಿ
ಸ್ಪಂದಿಸುತಿದೆ ಮೋದದಿ!

ಅವರು ಮತ್ತೆ ಹಾಡುತ್ತಿದಾರೆ:

ಹರಿನಾಮವನು ಸುತಿಸಿ, ಆನಂದಬಾಷ್ಪವನು
ಕರೆವಣ್ಣತಮ್ಮದಿರು, ಇವರು ನೋಡು! . . . (ಉ. ೯೨)

ಪರಮಹಂಸರು ಭಕ್ತರೊಡಗೂಡಿ ನರ್ತಿಸುತ್ತಿದಾರೆ. ಗಾಯಕ ಮತ್ತು ಆತನ ಮಂಡಲಿಯವರು ಪರಮಹಂಸರೊಡನೆ ನರ್ತಿಸುತ್ತ ಹಾಡಲಾರಂಭಿಸಿದಾರೆ. ಸ್ವಲ್ಪ ಹೊತ್ತಿನಲ್ಲೇ ಇಡೀ ವರಾಂಡ ಜನರಿಂದ ತುಂಬಿಹೋಯಿತು. ಹೆಂಗಸರು ಪಕ್ಕದ ಕೊಠಡಿಯಿಂದ ಈ ಪ್ರೇಮಾನಂದವನ್ನ ನೋಡುತ್ತಿದಾರೆ. ಅನಿಸಿತು, ಶ್ರೀವಾಸನ ಮನೆಯಲ್ಲಿ ಶ್ರೀ ಗೌರಾಂಗನೇ ಭಕ್ತರೊಡಗೂಡಿ ಹರಿಪ್ರೇಮದಿಂದ ಮತ್ತನಾಗಿ ನರ್ತಿಸುತ್ತಿದಾನೊ ಏನೊ ಎಂಬಂತೆ.

ಈಗ ಇನ್ನೂ ಸಾಯಂಕಾಲವಾಗಿಲ್ಲ. ಪರಮಹಂಸರು ಬೈಠಕ್ ಖಾನೆಗೆ ಹಿಂದಿರುಗಿಬಂದು ಭಕ್ತರೊಡನೆ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಶಶಧರನಿಗೆ: "ಇದಕ್ಕೇ ಭಜನಾನಂದ ಅಂತ ಹೆಸರು. ಸಂಸಾರಿಗಳು ವಿಷಯಾನಂದದಲ್ಲಿ—ಅಂದರೆ ಕಾಮಕಾಂಚನಾನಂದದಲ್ಲಿ ಮಗ್ನರಾಗಿರುತ್ತಾರೆ. ಭಜನೆ ಮಾಡುತ್ತ ಮಾಡುತ್ತ ಯಾವಾಗ ಭಗವಂತನ ಕೃಪೆ ದೊರಕುವುದೊ, ಆಗ ಆತ ತನ್ನ ದರ್ಶನ ಕೊಡುತ್ತಾನೆ—ಆಗ ಬ್ರಹ್ಮಾನಂದ."

ಶಶಧರ ಮತ್ತು ಭಕ್ತರು ಪರಮಹಂಸರ ಈ ಮಾತುಗಳನ್ನ ಬಾಯಿಬಿಟ್ಟುಕೊಂಡೇ ಕೇಳುತ್ತಿದಾರೆ.

ಶಶಧರ ವಿನೀತಭಾವದಿಂದ: "ಮಹಾಶಯರೆ, ಯಾವ ರೀತಿಯ

ವ್ಯಾಕುಲತೆ ಉಂಟಾದರೆ ಈ ರೀತಿಯ ಆನಂದಾವಸ್ಥೆ ಮನಸ್ಸಿಗೆ ಉಂಟಾಗುತ್ತದೆ?''

ಶ್ರೀರಾಮಕೃಷ್ಣರು: ''ಭಗವಂತನ ದರ್ಶನಮಾಡಬೇಕೆಂದು ಯಾವಾಗ ಪ್ರಾಣ ಸುಮ್ಮನೆ ಚಟಪಟಗುಟ್ಟುವುದೊ, ಆಗ ಈ ವ್ಯಾಕುಲತೆ ಉಂಟಾಗುತ್ತದೆ. ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿದ: 'ಬಾ ನಿನಗೆ ತೋರಿಸಿಕೊಡುತ್ತೇನೆ, ಯಾವ ರೀತಿಯ ವ್ಯಾಕುಲತೆ ಉಂಟಾದರೆ ಭಗ-ವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಹುದು.' ಹೀಗೆಂದು ಹೇಳಿ ಒಂದು ಕೊಳಕ್ಕೆ ಕರೆದುಕೊಂಡುಹೋಗಿ ಶಿಷ್ಯನನ್ನು ನೀರಿನಲ್ಲಿ ಮುಳುಗಿಸಿ ಆತನನ್ನು ನೀರಿನೊಳಗೇ ಅದುಮಿಹಿಡಿದುಕೊಂಡ. ಕೆಲವು ಕ್ಷಣಗಳ ನಂತರ ಆತನನ್ನು ಮೇಲಕ್ಕೆ ಎತ್ತಿ ಕೇಳಿದ: 'ನೀರಿನೊಳಗಿದ್ದಾಗ ನಿನ್ನ ಪ್ರಾಣ ಏನು ಹೇಳುತ್ತಿತ್ತು?' ಶಿಷ್ಯ ಉತ್ತರವಿತ್ತ: 'ಪ್ರಾಣ ಒಂದು ಗುಟುಕು ಉಸಿರಿಗಾಗಿ ಸುಮ್ಮನೆ ಚಟಪಟಗುಟ್ಟುತ್ತಿತ್ತು.' ''

ಶಶಧರ: ''ಹೌದು! ಹೌದು! ಹಾಗೆ. ಈಗ ನನಗೆ ಅರ್ಥವಾಗುತ್ತಿದೆ.''

ಶ್ರೀರಾಮಕೃಷ್ಣರು: ''ಭಗವಂತನನ್ನು ಪ್ರೀತಿಸುವುದೇ ಅತ್ಯಂತ ಆವಶ್ಯಕವಾಗಿ ಬೇಕಾದ್ದು. ಭಕ್ತಿಯೇ ಸಾರ. ನಾರದ ರಾಮನನ್ನು ಪ್ರಾರ್ಥಿಸಿಕೊಂಡ: 'ಹೇ ರಾಮಚಂದ್ರ, ನಿನ್ನ ಪಾದಪದ್ಮಗಳಲ್ಲಿ ನನಗೆ ಸತತ ಶುದ್ಧ ಭಕ್ತಿ ಉಂಟಾಗುವಂತೆಯೂ, ನಿನ್ನ ಭುವನಮೋಹಿನೀ ಮಾಯೆಯಿಂದ ನಾನು ಮುಗ್ಧನಾಗದೆ ಇರುವಂತೆಯೂ ಕರುಣಿಸು.' ರಾಮಚಂದ್ರ ಹೇಳಿದ: 'ಇನ್ನೂ ಬೇರೆ ಯಾವುದಾದರೂ ವರ ಕೇಳಿಕೊ.' ನಾರದ ಹೇಳಿದ: 'ನನಗಿನ್ನೇನೂ ಬೇಕಾಗಿಲ್ಲ. ನಿನ್ನ ಪಾದಪದ್ಮಗಳಲ್ಲಿ ನನಗೆ ಶುದ್ಧಭಕ್ತಿ ಉಂಟಾಗುವಂತೆ ಕೃಪೆಮಾಡು. ಇದೊಂದೇ ನನ್ನ ಪ್ರಾರ್ಥನೆ.' ''

ಪಂಡಿತ ಶಶಧರ ಇನ್ನೇನು ಹೊರಡುವುದರಲ್ಲಿದಾನೆ. ಪರಮ-ಹಂಸರು ಆತನಿಗೊಂದು ಗಾಡಿಯನ್ನು ತೆಗೆದುಕೊಂಡುಬರುವಂತೆ ಹೇಳುತ್ತಿದಾರೆ.

ಶಶಧರ: ''ದಯವಿಟ್ಟು ಬೇಡಿ. ಸುಮ್ಮನೆ ನಡೆದುಹೋಗಿಬಿಡುತ್ತೇನೆ.''

ಶ್ರೀರಾಮಕೃಷ್ಣರು ನಗುತ್ತ: "ಎಲ್ಲಾದರೂ ಉಂಟೆ! 'ನೀನು ಬ್ರಹ್ಮನ ಧ್ಯಾನಕ್ಕೂ ನಿಲುಕದವನು.'"

ಶಶಧರ: "ಈಗ ಹೋಗಬೇಕಾದ ಆವಶ್ಯಕತೆಯೇನಿರಲಿಲ್ಲ, ಆದರೆ ಸಂಧ್ಯಾವಂದನೆ ಮಾಡಬೇಕಾಗಿದೆ."

ಶ್ರೀರಾಮಕೃಷ್ಣರು: "ಭಗವತಿ ನನ್ನ ಸಂಧ್ಯಾದಿ ಕರ್ಮಗಳನ್ನೆಲ್ಲ ನಿಲ್ಲಿಸಿಬಿಟ್ಟಿದಾಳೆ. ಸಂಧ್ಯಾದಿಗಳನ್ನು ಮಾಡುವುದು ಮನಸ್ಸನ್ನು ಶುದ್ಧ ಪಡಿಸಲಿಕ್ಕೆ. ಆ ಅವಸ್ಥೆಯಲ್ಲಿ ಈಗ ನಾನಿಲ್ಲ."

ಪರಮಹಂಸರು ಈಗ ಒಂದು ಹಾಡಿನ ಈ ಕೆಲ ಚರಣಗಳನ್ನು ಹಾಡಲಾರಂಭಿಸಿದಾರೆ:

ಶುಚಿ ಅಶುಚಿಯನೊಂದಾಗಿಸಿ ನೀನೆಂದಿಗೆ
ದಿವ್ಯ ಧಾಮದಲಿ ಮಲಗುವೆಯೋ,
ಈ ಇಬ್ಬರು ಹೆಂಡಿರ ನೀನೆಂದೊಟ್ಟಿಗೆ
ತೃಪ್ತಿಯೊಳಾಳಲು ಕಲಿಯುವೆಯೋ
ಆ ಅಂದೇ ಶ್ರೀ ಶ್ಯಾಮೆಯ ದರುಶನವೋ! . . . (ಉ. ೭೩೭)

ಪಂಡಿತ ಶಶಧರ ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಂಡ.

ರಾಮ: "ನಾನು ನಿನ್ನೆ ಹೋಗಿ ಶಶಧರನನ್ನು ಸಂಧಿಸಿ ಬಂದೆ. ನೀವು ಹಾಗೆ ಹೇಳಿದ್ದಿರಲ್ಲ."

ಶ್ರೀರಾಮಕೃಷ್ಣರು: "ಹೇಳಿದ್ದೆನೇನು? ಜ್ಞಾಪಕದಲ್ಲಿಲ್ಲ. ಆದರೆ ನೀನು ಅಲ್ಲಿಗೆ ಹೋಗಿದ್ದುದು ಬಹಳ ಒಳ್ಳೆಯದೆ."

ರಾಮ: "'ಇಂಡಿಯನ್ ಎಂಪೈರ್' ಎಂಬ ಪತ್ರಿಕೆಯ ಸಂಪಾದಕ ನಿಮ್ಮನ್ನು ನಿಂದಿಸುತ್ತಿದ್ದ."

ಶ್ರೀರಾಮಕೃಷ್ಣರು: "ನಿಂದಿಸಿದರೆ ನಿಂದಿಸಿಕೊಳ್ಳಲಿ. ಅದರಿಂದ ಆಗೋದೇನು?"

ರಾಮ: "ಆಮೇಲೆ ಏನಾಯಿತು ಎಂಬುದನ್ನು ಸ್ವಲ್ಪ ಕೇಳಿ. ನಿಮ್ಮ ವಿಷಯವಾಗಿ ನಾನು ಆತನಿಗೆ ತಿಳಿಸಿದನಂತರ ನನ್ನನ್ನು ಬಿಟ್ಟು-ಕೊಡಲೇ ಆತನಿಗೆ ಮನಸ್ಸಾಗಲಿಲ್ಲ. ನಿಮ್ಮ ವಿಷಯವಾಗಿ ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕು ಅಂತ ಆತ ಅತ್ಯಂತ ಕಾತರನಾಗಿಬಿಟ್ಟ."

ಮುಚ್ಚಂಜೆಯಾಗಿದೆ. ಪರಮಹಂಸರು ಜಗನ್ಮಾತೆಯ ನಾಮ ಪಠಿ

ಸುತ್ತಿದಾರೆ—ರಾಮನಾಮ, ಕೃಷ್ಣನಾಮ, ಹರಿನಾಮ ಪಠಿಸುತ್ತಿದಾರೆ. ಭಕ್ತರು ನಿಶ್ಶಬ್ದರಾಗಿ ಕುಳಿತು ಕೇಳುತ್ತಿದಾರೆ. ಅವರ ನಾಮಸಂಕೀರ್ತನೆ ಅಷ್ಟು ಸವಿಯಾಗಿದೆ, ಮಧುವರ್ಷಣೆಯೇ ಆಗುತ್ತಿದೆಯೊ ಏನೊ ಎಂಬಂತೆ ತೋರುತ್ತಿದೆ. ಇಂದು ಬಲರಾಮನ ಮನೆ ನವದ್ವೀಪವೇ ಆಗಿಬಿಟ್ಟಿದೆಯೊ ಏನೊ ಎಂಬಂತಿದೆ. ಜಗಲಿ ನವದ್ವೀಪದಂತಿದೆ, ಬೈಠಕ್‌ಖಾನೆ ಬೃಂದಾವನದಂತಿದೆ.

ಇಂದಿನ ರಾತ್ರಿಯೇ ಪರಮಹಂಸರು ದಕ್ಷಿಣೇಶ್ವರಕ್ಕೆ ಹೋಗಬೇಕಾಗಿದೆ. ಬಲರಾಮ ಅವರನ್ನು ಮನೆಯ ಒಳಕ್ಕೆ ಕರೆದುಕೊಂಡುಹೋಗುತ್ತಿದಾನೆ—ಉಪಾಹಾರ ಮಾಡಿಸಲು. ಈ ಸುಯೋಗ ಉಪಯೋಗಿಸಿಕೊಂಡು ಭಕ್ತೆಯರು ಅವರಿಗೆ ಪ್ರಣಾಮಮಾಡುತ್ತಿದಾರೆ.

ಭಕ್ತರು ಬೈಠಕ್‌ಖಾನೆಯಲ್ಲಿ ಸಂಕೀರ್ತನೆ ಮಾಡುತ್ತ ಪರಮಹಂಸರ ಹಿಂದಿರುಗುವಿಕೆಗಾಗಿ ಕಾಯುತ್ತಿದಾರೆ. ಪರಮಹಂಸರು ಈಗ ಹಿಂದಿರುಗಿ ಬಂದು ಭಕ್ತರೊಡನೆ ಸೇರಿಕೊಂಡು ಹಾಡುತ್ತಿದಾರೆ.

ಕೀರ್ತನೆ ಮುಂದುವರಿಯುತ್ತಿದೆ :

ಶ್ರೀವಾಸನ ಸಖ ಗೌರಾಂಗನು ಅದೊ
ನರ್ತಿಸುವನು ಅಲ್ಲಿ,
ಭಕ್ತವೃಂದವೂ ಮಗ್ನವಾಗಿಹುದು
ಹರಿನಾಮದ ಸುಧೆಯಲ್ಲಿ
ನರ್ತಿಪ ಗೌರಾಂಗನ ಬಂಗಾರದ ಮೈ ನಾಂದಿದೆ
ಆನಂದದ ಕಣ್ಣೀರಿನಲಿ !

ಶ್ರೀರಾಮಕೃಷ್ಣರು ಆಶುಕವಿತೆ ಮಾಡುತ್ತಿದಾರೆ :

ಹರಿಕೀರ್ತನೆಯಲಿ ನರ್ತಿಸುತಿರುವನು
ಶಚಿ ನಂದನ ಗೌರಾಂಗ
ಮಮ ಪ್ರಾಣಪ್ರಿಯ ಗೌರಾಂಗ !

೨೬

# ಅಧರಸೇನನ ಮನೆಯಲ್ಲಿ ಉತ್ಸವ

೩ನೆ ಆಗಸ್ಟ್ ೧೮೮೪, ಶ್ರಾವಣ ಶುಕ್ಲ ದ್ವಾದಶಿ, ಭಾನುವಾರ.

ಪರಮಹಂಸರು ದಕ್ಷಿಣೇಶ್ವರದ ತಮ್ಮ ಕೊಠಡಿಯಲ್ಲಿ ಮಧ್ಯಾಹ್ನದ ಊಟ ಮುಗಿಸಿಕೊಂಡು ಕುಳಿತುಕೊಂಡಿದ್ದಾರೆ. ಘಂಟೆ ಅಪರಾಹ್ನ ಎರಡು. ಶಿವಪುರದಿಂದ ಬಾವುಲರೆಂಬ ಹೆಸರಿನ ಗಾಯಕರ ಒಂದು ಗುಂಪು ಬಂದಿದೆ. ಭವಾನೀಪುರದ ಅನೇಕ ಮಂದಿ ಭಕ್ತರು, ಬಲರಾಮ ಮತ್ತು ಮಾಸ್ಟರ್ ಕೊಠಡಿಯಲ್ಲಿ ಕುಳಿತುಕೊಂಡಿದ್ದಾರೆ. ರಾಖಾಲ, ಲಾಟು, ಹರೀಶ ಪರಮಹಂಸರೊಡನೇ ಇದ್ದಾರೆ. ಅವರೂ ಕುಳಿತುಕೊಂಡಿದ್ದಾರೆ.

ಈಗ ಪರಮಹಂಸರು ಶಿವಪುರದ ಬಾವುಲ ಗಾಯಕರನ್ನು ಸಂಬೋಧಿಸಿ ಮಾತುಕತೆ ಆಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಕಾಮಕಾಂಚನಗಳಲ್ಲಿ ಮನಸ್ಸು ನೆಲಸಿದ್ದರೆ ಯೋಗ ಸಾಧ್ಯವಾಗೋದಿಲ್ಲ. ಸಾಧಾರಣ ಜೀವರ ಮನಸ್ಸು ಲಿಂಗ, ಗುಹ್ಯ, ನಾಭಿ ಇವುಗಳಲ್ಲಿ ನೆಲಸಿರುತ್ತದೆ. ಬಹಳವಾಗಿ ಸಾಧನೆ ಭಜನೆ ಮಾಡಿದನಂತರ ಕುಲಕುಂಡಲಿನಿ ಜಾಗೃತಿಗೊಳ್ಳುತ್ತದೆ. ಯೋಗಿಗಳು ಹೇಳುತ್ತಾರೆ, ಬೆನ್ನೆಲುಬಿನಲ್ಲಿ ಇಡಾ, ಪಿಂಗಳಾ, ಸುಷುಮ್ನಾ ಎಂಬ ಮೂರು ನಾಡಿಗಳು ಇವೆ ಎಂಬುದಾಗಿ. ಸುಷುಮ್ನಾದ ಮಧ್ಯೆ ಮಧ್ಯೆ ಒಟ್ಟು ಆರು ಪದ್ಮಗಳಿವೆ. ಅವುಗಳಲ್ಲಿ ಅತ್ಯಂತ ಕೆಳಗಿನದೇ ಮೂಲಾಧಾರ ಪದ್ಮ. ಅನಂತರ ಅನುಕ್ರಮವಾಗಿ ಇವೆ ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧ, ಆಜ್ಞಾ ಪದ್ಮಗಳು. ಇವುಗಳಿಗೆ ಷಟ್ಚಕ್ರ ಅಂತಲೂ ಹೇಳುತ್ತಾರೆ. ಕುಲಕುಂಡಲಿನಿ ಜಾಗೃತಗೊಂಡಿತು ಎಂದರೆ ಅದು ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ ಪದ್ಮಗಳನ್ನು ದಾಟಿ ಹೃದಯ ಮಧ್ಯದಲ್ಲಿರುವ ಅನಾಹತ ಪದ್ಮಕ್ಕೆ ಬರುತ್ತದೆ. ಬಳಿಕ ಅಲ್ಲಿ ನೆಲಸಿರುತ್ತದೆ. ಆಗ ಮನಸ್ಸು ಲಿಂಗ, ಗುಹ್ಯ, ನಾಭಿ ಇವುಗಳ ಕಡೆ ಹರಿದುಹೋಗುವುದನ್ನು ತ್ಯಜಿಸಿ ಚೇತನಗೊಳ್ಳುತ್ತದೆ. ಆಗ ಅದಕ್ಕೆ ಜ್ಯೋತಿ ದರ್ಶನ ಆಗುತ್ತದೆ. ಸಾಧಕ ಆಗ ಆಶ್ಚರ್ಯಚಕಿತನಾಗಿ ಆ ಜ್ಯೋತಿಯನ್ನು ನೋಡುತ್ತ ಕೂಗಿಕೊಳ್ಳುತ್ತಾನೆ: 'ಇದು ಏನು? ಇದು ಏನು?'

“ಕುಲಕುಂಡಲಿನಿ ಈ ಆರು ಚಕ್ರಗಳನ್ನೂ ಭೇದಿಸಿ ಕೊನೆಗೆ ಸಹಸ್ರಾರ ಪದ್ಮವನ್ನು ಮುಟ್ಟಿದಾಗ ಸಾಧಕನಿಗೆ ಸಮಾಧಿ ಉಂಟಾಗುತ್ತದೆ.

“ವೇದಗಳು ಈ ಚಕ್ರಗಳನ್ನ ‘ಭೂಮಿ’ ಎಂಬ ಹೆಸರಿನಿಂದ ಕರೆಯುತ್ತವೆ. ಅವುಗಳ ದೃಷ್ಟಿಯಿಂದ ಒಟ್ಟು ಏಳು ಭೂಮಿಗಳಿವೆ. ಹೃದಯ ಚತುರ್ಥ ಭೂಮಿ. ತಂತ್ರಶಾಸ್ತ್ರದ ದೃಷ್ಟಿಯಿಂದ ಇದೇ ಜಾಗದಲ್ಲಿ ಅನಾಹತ ಎಂಬ ಪದ್ಮವಿದೆ. ಅದಕ್ಕೆ ಹನ್ನೆರಡು ದಳಗಳಿವೆ.

“ವಿಶುದ್ಧ ಚಕ್ರವೇ ಪಂಚಮ ಭೂಮಿ. ಈ ಸ್ಥಳಕ್ಕೆ ಮನಸ್ಸು ಹತ್ತಿತು ಎಂದರೆ, ಭಗವತ್ಕಥೆಯನ್ನು ಆಡಲು ಮತ್ತು ಕೇಳಲು ಮಾತ್ರವೇ ಹೃದಯ ವ್ಯಾಕುಲಪಡುತ್ತದೆ. ಈ ಚಕ್ರದ ಸ್ಥಾನ ಕಂಠ. ಇದು ಷೋಡಶ ದಳದ ಪದ್ಮ. ಯಾರ ಮನಸ್ಸು ಈ ಚಕ್ರವನ್ನು ಮುಟ್ಟಿರುವುದೊ ಅವರೆದುರಿಗೆ ಪ್ರಾಪಂಚಿಕ ಮಾತುಕತೆ, ಅಂದರೆ ಕಾಮಕಾಂಚನಗಳ ಮಾತುಕತೆ ನಡೆಯಿತು ಎಂದರೆ ಅವರಿಗೆ ಬಹಳ ಕಷ್ಟವಾಗುತ್ತದೆ. ಈ ವಿಧದ ಮಾತುಕತೆ ಅವರ ಕಿವಿಗೆ ಬಿತ್ತು ಎಂದರೆ, ಅವರು ಅಲ್ಲಿಂದ ಎದ್ದು ಹೊರಟುಹೋಗಿಬಿಡುತ್ತಾರೆ.

“ಅನಂತರ ಆರನೆ ಭೂಮಿ, ಅಂದರೆ ಆಜ್ಞಾ ಚಕ್ರ. ಇದಕ್ಕೆ ಎರಡೇ ದಳ. ಇಲ್ಲಿಗೆ ಕುಲಕುಂಡಲಿನಿ ಹತ್ತಿಬಂದಿತು ಎಂದರೆ, ಭಗವಂತನ ರೂಪದರ್ಶನ ದೊರೆಯುತ್ತದೆ. ಆದರೆ ಇನ್ನೂ ಒಂದು ಸ್ವಲ್ಪ ತಡೆ ಇರುತ್ತದೆ. ಉದಾಹರಣೆಗೆ ಲಾಟೀನಿನೊಳಗಿರುವ ದೀಪ. ಮನಸ್ಸಿಗೆ ಅನ್ನಿಸುತ್ತದೆ ಇನ್ನೇನು ಹೋಗಿ ದೀಪವನ್ನು ಮುಟ್ಟಿಬಿಡೋಣ ಎಂಬುದಾಗಿ. ಆದರೆ ಗಾಜನ್ನು ಹಾಕಿರುವುದರಿಂದ ಮುಟ್ಟಲಾಗೋದಿಲ್ಲ.

“ಕಟ್ಟಕಡೆಯದಾಗಿ ಏಳನೆ ಭೂಮಿ, ಎಂದರೆ ಸಹಸ್ರಾರ ಪದ್ಮ. ಕುಂಡಲಿನಿ ಇಲ್ಲಿಗೆ ಬಂತು ಎಂದರೆ, ಸಮಾಧಿಯುಂಟಾಗುತ್ತದೆ. ಈ ಸಹಸ್ರದಳ ಪದ್ಮದಲ್ಲಿ ಸಚ್ಚಿದಾನಂದ ಶಿವ ವಾಸವಾಗಿದಾನೆ. ಇಲ್ಲಿ ಕುಂಡ-ಲಿನಿ ಶಕ್ತಿ ಶಿವನೊಡನೆ ಒಂದಾಗುತ್ತದೆ. ಇದಕ್ಕೆ ಶಿವ-ಶಕ್ತಿಯರ ಮಿಲನ ಅಂತ ಹೆಸರು.

“ಕುಂಡಲಿನಿ ಸಹಸ್ರಾರವನ್ನು ಮುಟ್ಟಿದನಂತರ ಮನಸ್ಸು ಸಮಾಧಿಸ್ಥವಾಗುತ್ತದೆ. ಆಗ ಸಾಧಕ ಬಾಹ್ಯಜ್ಞಾನಶೂನ್ಯನಾಗುತ್ತಾನೆ. ಬಳಿಕ ಆತ ತನ್ನ ದೇಹರಕ್ಷಣೆಯ ಕಡೆ ಮನಸ್ಸು ಕೊಡಲಾಗೋದಿಲ್ಲ. ಬಾಯಿಗೆ ಹಾಲು ಹಾಕಿದರೆ ಅದು ಕಟಬಾಯಿಯಿಂದ ಹೊರಕ್ಕೆ ಬಂದುಬಿಡುತ್ತದೆ.

ಈ ಅವಸ್ಥೆಯಲ್ಲಿ ಪ್ರಾಣವಾಯು ಇಪ್ಪತ್ತೊಂದು ದಿನಗಳವರೆಗೆ ಇದ್ದು ಅನಂತರ ಹೊರಟುಹೋಗುತ್ತದೆ. ಜಹಜು ಸಮುದ್ರದಲ್ಲಿ ಕಪ್ಪು ನೀರನ್ನು ಮುಟ್ಟಿತು ಎಂದರೆ, ಮತ್ತೆ ಹಿಂದಿರುಗಿಬಾರದು. ಆದರೆ ಈಶ್ವರಕೋಟಿ ಗಳು, ಎಂದರೆ ಅವತಾರಾದಿ ಪುರುಷರು ಈ ಸಮಾಧಿಯ ಅವಸ್ಥೆಯಿಂದ ಕೆಳಕ್ಕೆ ಇಳಿದುಬರಬಲ್ಲರು. ಅವರಿಗೆ ಭಕ್ತರೊಡನೆ ಬೆರೆಯಲು, ಭಗವಂತ ನನ್ನು ಪ್ರೀತಿಸಲು ಇಚ್ಛೆಯಿರುವುದರಿಂದ ಅಲ್ಲಿಂದ ಇಳಿದುಬರಬಲ್ಲರು. ಭಗವಂತ ಅವರಲ್ಲಿ 'ವಿದ್ಯಾ ಅಹಂ' ಅಥವಾ 'ಭಕ್ತ ಅಹಂ' ಇಡುತ್ತಾನೆ —ಲೋಕಶಿಕ್ಷಣಕ್ಕಾಗಿ. ಅವರ ಮನಸ್ಸು ಆರನೆ ಮತ್ತು ಏಳನೆ ಭೂಮಿ ಗಳ ಮಧ್ಯೆ ಓಡಾಡುತ್ತಿರುತ್ತದೆ—ಈ ಎರಡು ಭೂಮಿಗಳ ಮಧ್ಯೆ ಅವರು ದೋಣಿ ಪಂದ್ಯ ನಡೆಸುತ್ತಿರುವರೊ ಏನೊ ಎಂಬಂತೆ.

"ಸಮಾಧಿ ದೊರೆತನಂತರ 'ವಿದ್ಯಾ ಅಹಂ' ಅನ್ನು ಕೆಲಕೆಲವರು ಇಚ್ಛೆಪಟ್ಟು ಇಟ್ಟುಕೊಳ್ಳುತ್ತಾರೆ. ಆ 'ಅಹಂ' ಅವರಲ್ಲಿ ಯಾವ ಆಸಕ್ತಿ ಯನ್ನೂ ಬೆಳಸದು. ಅದು ನೀರಿನ ಮೇಲೆ ಎಳೆದ ಗೆರೆಯ ಹಾಗೆ.

"ಹನುಮಂತ ಸಾಕಾರ ನಿರಾಕಾರಗಳ ಸಾಕ್ಷಾತ್ಕಾರ ಪಡೆದು ಕೊಂಡನಂತರ 'ದಾಸ ಅಹಂ' ಇಟ್ಟುಕೊಂಡಿದ್ದ. ನಾರದ, ಸನಕ, ಸನಂದ, ಸನಾತನ, ಸನತ್ಕುಮಾರ ಇವರೇ ಮೊದಲಾದವರು ಬ್ರಹ್ಮಜ್ಞಾನ ದೊರೆತನಂತರ 'ದಾಸ ಅಹಂ', 'ಭಕ್ತ ಅಹಂ' ಇಟ್ಟುಕೊಂಡಿದ್ದರು. ಇವರು ಜಹಜಿನ ಹಾಗೆ, ತಾವೇ ಈ ಭವಸಾಗರವನ್ನು ದಾಟುವುದಲ್ಲದೆ ಅನೇಕರನ್ನೂ ಹೊತ್ತು ದಾಟಿಸಿಬಿಡಬಲ್ಲರು.

"ಪರಮಹಂಸರಲ್ಲಿ ಎರಡು ವಿಧ—ನಿರಾಕಾರವಾದಿ, ಸಾಕಾರವಾದಿ. ನಿರಾಕಾರವಾದಿ—ಉದಾಹರಣೆಗೆ ತ್ರೈಲಿಂಗ ಸ್ವಾಮಿ. ಈ ವಿಧದ ಪರಮ- ಹಂಸರು ಸ್ವಶ್ರೇಯೋಭಿಲಾಷಿಗಳು—ತಮಗೆ ಮುಕ್ತಿ ದೊರೆತರೇ ಸಾಕು ಅನ್ನುವವರು.

"ಬ್ರಹ್ಮಜ್ಞಾನ ದೊರೆತನಂತರವೂ ಸಾಕಾರವಾದಿ ಪರಮಹಂಸರು ಲೋಕಶಿಕ್ಷಣಕ್ಕಾಗಿ ಭಕ್ತಿಯನ್ನು ಆಶ್ರಯಿಸಿಕೊಂಡು ಬದುಕಿರುತ್ತಾರೆ. ಇಂಥವರು ತುಂಬಿದ ಕೊಡ ಇದ್ದ ಹಾಗೆ. ತನ್ನ ಕೊಡದಿಂದ ಉಳಿದ ಪಾತ್ರೆಗಳಿಗೆ ನೀರು ಹಂಚುತ್ತಿರುತ್ತಾರೆ. ಇವರು ತಾವು ಏನೇನು ಸಾಧನೆ ಮಾಡಿ ಭಗವಂತನ ಸಾಕ್ಷಾತ್ಕಾರ ಪಡೆದರೊ ಆ ವಿಷಯಗಳನ್ನೆಲ್ಲಾ ಲೋಕಶಿಕ್ಷಣಕ್ಕಾಗಿ, ಲೋಕಹಿತಕ್ಕಾಗಿ ಬೋಧಿಸುತ್ತಾರೆ. ಜನ ಬಹಳ

ಶ್ರಮ ವಹಿಸಿ ಕುಡಿಯೋ ನೀರಿಗೆಂದು ಬಾವಿ ತೋಡುತ್ತಾರೆ—ಹಾರೆ, ಗುದ್ದಲಿ, ಕುಕ್ಕೆ ಇವನ್ನು ಉಪಯೋಗಿಸಿ. ನೀರು ದೊರೆತನಂತರ ಕೆಲ ಕೆಲವರು ಹಾರೆ, ಗುದ್ದಲಿ, ಕುಕ್ಕೆ ಎಲ್ಲವನ್ನೂ ಬಾವಿಯೊಳಗೇ ಬಿಟ್ಟುಬಿಡುತ್ತಾರೆ—ಅವು ಇನ್ನೇಕೆ ಎಂದು. ಆದರೆ ಇನ್ನು ಕೆಲವರು ಅವನ್ನು ಬಾವಿಯ ಹತ್ತಿರವೇ ಹಾಕಿರುತ್ತಾರೆ—ಪರರ ಉಪಯೋಗಕ್ಕೆ ಬರಲೆಂದು.

"ಕೆಲವರು ಮುಚ್ಚುಮರೆಯಲ್ಲಿ ಮಾವಿನ ಹಣ್ಣನ್ನು ತಿನ್ನುವುದೂ ಅಲ್ಲದೆ, ಅದರ ಚಿಹ್ನೆಯೇ ಇಲ್ಲದ ರೀತಿಯಲ್ಲಿ ಬಾಯಿ ಒರಸಿಕೊಂಡು ಬಿಡುತ್ತಾರೆ. ಇನ್ನು ಕೆಲವರು ಇತರರಿಗೂ ಹಂಚಿ ತಾವೂ ತಿನ್ನುತ್ತಾರೆ—ಲೋಕಶಿಕ್ಷಣಕ್ಕಾಗಿ, ಭಗವದ್ರಸವನ್ನ ಸವಿಯಲಿಕ್ಕಾಗಿ. 'ಸಕ್ಕರೆ ತಿನ್ನಬೇಕು ಅಂತ ಇಚ್ಛೆ. ಸಕ್ಕರೆ ಆಗಬೇಕು ಅಂತ ಇಚ್ಛೆಯಿಲ್ಲ.'

"ಗೋಪಿಯರಿಗೂ ಬ್ರಹ್ಮಜ್ಞಾನ ಮುಡಿಪಾಗಿತ್ತು. ಆದರೆ ಅವರಿಗೆ ಅದು ಬೇಡವಾಗಿತ್ತು. ಅವರು ವಾತ್ಸಲ್ಯಭಾವದಿಂದಲೊ, ಸಖ್ಯಭಾವದಿಂದಲೊ, ಮಧುರಭಾವದಿಂದಲೊ, ದಾಸೀಭಾವದಿಂದಲೊ ಭಗವಂತನೊಡನೆ ಆನಂದಪಡಬೇಕೆಂದು ಇಚ್ಛಿಸುತ್ತಿದ್ದರು."

ಶಿವಪುರದ ಭಕ್ತರು ಗೋಪೀಯಂತ್ರ ಹಿಡಿದು ಹಾಡಲಾರಂಭಿಸಿದಾರೆ. ಅದರ ಮೊದಲನೆ ಚರಣ:

ನಾವು ಪಾಪಿಗಳಯ್ಯ—ಉದ್ಧರಿಸೊ ಕರುಣಾಮಯಾ.

ಶ್ರೀರಾಮಕೃಷ್ಣರು ಭಕ್ತರಿಗೆ: "ಭಯದಿಂದ ಹೆದರಿ ಭಗವಂತನನ್ನು ಪೂಜಿಸುವುದಿದೆಯಲ್ಲ ಇದು ಪ್ರವರ್ತಕನ ಭಾವ. ಆತನ ಸಾಕ್ಷಾತ್ಕಾರ ದೊರಕಿಸಿಕೊಡುವ ಹಾಡುಗಳನ್ನು ಹಾಡಿ. ಆನಂದದಾಯಕ ಹಾಡುಗಳನ್ನು ಹಾಡಿ.

(ರಾಖಾಲನಿಗೆ) "ನವೀನ ನಿಯೋಗಿಯ ಮನೆಯಲ್ಲಿ ಅಂದು ಎಷ್ಟು ಸೊಗಸಾಗಿ ಹಾಡಿದರು: 'ಹರಿರಸಮದಿರೆಯ ಕುಡಿದು ನಿರಂತರ ಉನ್ಮತ್ತನ ತೆರ ನೀನಿರುತ' ಎಂಬ ಹಾಡನ್ನು! ಯಾವಾಗ ನೋಡಿದರೂ ಸಂಸಾರ ತಾಪತ್ರಯದ ಮಾತುಕತೆ, ಚಿಂತನೆ ಇವುಗಳಲ್ಲೇ ನಿರತವಾಗಿರುವುದು ಒಳ್ಳೆಯದಲ್ಲ. ಭಗವಂತನ ಸಂಬಂಧವಾಗಿ ಹಾಡುವಾಗ ಆನಂದವನ್ನು ಉದ್ರೇಕಿಸತಕ್ಕಂಥ, ಪ್ರೇಮೋನ್ಮತ್ತತೆಯನ್ನು ಉಂಟುಮಾಡತಕ್ಕ ಹಾಡುಗಳನ್ನು ಹಾಡಬೇಕು."

ಶಿವಪುರದ ಒಬ್ಬ ಭಕ್ತ: "ನೀವು ಹಾಡೋದಿಲ್ಲವೆ?"

ಶ್ರೀರಾಮಕೃಷ್ಣರು: "ನಾನು ಏನು ಹಾಡಲಿ? ಒಳ್ಳೇದು, ಪ್ರೇರಣೆ ಯಾದಾಗ ಹಾಡುತ್ತೇನೆ."

ಈಗ ಪರಮಹಂಸರು ಹಾಡುತ್ತಿದಾರೆ. ಕಣ್ಣು ಊರ್ಧ್ವದೃಷ್ಟಿ ಯುಳ್ಳವಾಗಿವೆ. ಹಾಡುತ್ತಿದಾರೆ:

ಜಗವೇ ಮುಳುಗಿತು ನರ್ತಿಪ ಗೌರನ
ದಿವ್ಯ ಪ್ರೇಮದ ಅಲೆಗಳಲಿ
ಈ ಒಲವೆನ್ನನು ಸೆಳೆಯಿತು, ನುಂಗಿತು
ಕಣ್ಣು ಮಿಟುಕಿಸುವ ಹೊತ್ತಿನಲಿ!
ಭವಸಾಗರ ಕೂಪದೊಳಿರುವೆಮ್ಮನು
ಈ ಗೌರಾಂಗನ ರೀತಿಯಲಿ
ಕರುಣಿಸಿ ಕೈವಿಡಿದೆತ್ತುವ ಧೀರರು
ಇನ್ನಾರಿರುವರು ಲೋಕದಲಿ!

ಅವರು ಮತ್ತೆ ಹಾಡುತ್ತಿದಾರೆ:

ಮುಳುಗು ಮುಳುಗು ಮನವೇ—
ಹಿರಿಯೊಲವಿನ ಕಡಲಾಳಕೆ . . . (ಉ. ೬೭)

ಈಗ ಹಾಡುತ್ತಿದಾರೆ:

ಅತಿ ಕಠೋರ ಸಾಧನೆಯಲಿ ತೊಡಗಿರುವೀ ಶಿವನು ಕೂಡ
ಇನ್ನಾದರು ಕಾಣದಿರಲು ಕಾಳೀಪದನೀಲವ . . . (ಉ. ೨೬೪)

ಮತ್ತೆ:

ಸಾಗುತಿಹುದು ಚಿತ್ತಭೃಂಗ
ಕಾಳೀಪದನೀಲಕಮಲ ಮಧುಪಾನದ ಆಸೆಗೆ! . . . (ಉ. ೧೩೫)

ಮತ್ತೆ ಹಾಡುತ್ತಿದಾರೆ:

ನಿನ್ನದೇ ಈ ಯಂತ್ರ? ಎಂಟು ಗೇಣಿನ ಬೊಂಬೆ!
ಯಾವ ಆಟಕೆ ಇದನು ನೀ ಮಾಡಿದೆ? . . .

ಪರಮಹಂಸರು ಈ ಕೊನೆಯ ಹಾಡನ್ನು ಹಾಡುತ್ತ ಹಾಡುತ್ತ ಇದ್ದ ಹಾಗೇ ಸಮಾಧಿಸ್ಥರಾಗಿಬಿಟ್ಟಿದಾರೆ. ಭಕ್ತರೆಲ್ಲರೂ ನಿಶ್ಶಬ್ದರಾಗಿ ಅವರನ್ನು ನೋಡುತ್ತಿದಾರೆ. ಈಗ ಕಿಂಚಿತ್ ಪ್ರಕೃತಿಸ್ಥರಾಗಿ ಭಗವತಿ-ಯೊಡನೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಹೇಳುತ್ತಿದಾರೆ: "ತಾಯಿ, ಮೇಲಿಂದ ಕೆಳಕ್ಕೆ

ಇಳಿದು ಬಾ.'' ತಮ್ಮ ಮನಸ್ಸು ಇನ್ನೂ ಸಹಸ್ರಾರದಲ್ಲೇ ಬಳಸಾಡುತ್ತಿದೆ ಎಂಬುದನ್ನು ಪರಮಹಂಸರು ಸೂಚಿಸಿದರೇನು ?

ಶ್ರೀರಾಮಕೃಷ್ಣರು ಮತ್ತೆ ಹೇಳುತ್ತಿದಾರೆ: ''ದಯವಿಟ್ಟು ಕೆಳಕ್ಕೆ ಇಳಿದು ಬಾ. ಈ ರೀತಿಯಾಗಿ ನನ್ನನ್ನು ಸುಮ್ಮನೆ ಕಾಡಿಸಬೇಡ. ಇಲ್ಲಿ ಸುಮ್ಮನೆ ಕುಳಿತುಕೊ.

''ಹೇ ತಾಯೆ, ಪ್ರತಿಯೊಬ್ಬನ ಭವಿಷ್ಯತ್ತೂ ಅವನವನ ಸಂಸ್ಕಾರವನ್ನು ಅವಲಂಬಿಸಿರುತ್ತದೆ. ನಾನು ಇವರಿಗೆ ಏನನ್ನು ತಾನೆ ಹೇಳಲಿ. ವಿವೇಕ ವೈರಾಗ್ಯ ಇಲ್ಲದೆ ಇತ್ತು ಎಂದರೆ ಏನೂ ದೊರೆಯದು.''

ಪರಮಹಂಸರು ಈಗ ಪೂರ್ಣ ಪ್ರಕೃತಿಸ್ಥರಾಗಿ ಹೇಳುತ್ತಿದಾರೆ: ''ವೈರಾಗ್ಯದಲ್ಲಿ ಅನೇಕ ಬಗೆ. ಒಂದು ವಿಧದ್ದಿದೆ, ಅದಕ್ಕೆ ಮರ್ಕಟ ವೈರಾಗ್ಯ ಅಂತ ಹೆಸರು—ಸಂಸಾರದ ಬೇಗೆ ತಾಳಲಾರದೆ ಉಂಟಾಗುವ ವೈರಾಗ್ಯ. ಇದು ಹೆಚ್ಚು ದಿನ ನಿಲ್ಲಲೊಲ್ಲದು. ಬಳಿಕ ನಿಜವಾದ ವೈರಾಗ್ಯವೆಂಬುದಿದೆ—ಎಲ್ಲವೂ ಇದೆ, ಯಾವುದರ ಕೊರತೆಯೂ ಇಲ್ಲ, ಆದರೂ ಎಲ್ಲವೂ ಮಿಥ್ಯೆಯಾಗಿ ಬೋಧೆಯಾಗುತ್ತದೆ.

''ವೈರಾಗ್ಯ ಒಮ್ಮೆಗೇ ಉಂಟಾಗಿಬಿಡದು. ಸಮಯ ಬಾರದಿದ್ದರೆ ಉಂಟಾಗದು. ಆದರೆ ಒಂದು ವಿಷಯ—ಕೇಳಿಟ್ಟುಕೊಂಡಿರುವುದು ಒಳ್ಳೆಯದು. ಸಮಯ ಬಂದೊದಗಿದಾಗ ಅನಿಸುತ್ತದೆ: 'ಓ ಈ ವಿಷಯ ಕೇಳಿದ್ದೆನಲ್ಲ' ಎಂದು.

''ಇನ್ನೊಂದು ವಿಷಯ. ಈ ವಿಧದ ಮಾತುಕತೆ ಕೇಳುತ್ತ ಕೇಳುತ್ತ ವಿಷಯವಾಸನೆ ಸ್ವಲ್ಪ ಸ್ವಲ್ಪವಾಗಿ ಕಡಮೆಯಾಗಲಾರಂಭಿಸುತ್ತದೆ. ಮದ್ಯಪಾನದ ನಶಾವನ್ನು ಕಡಮೆಮಾಡಿಕೊಳ್ಳಲು ಅಕ್ಕಿ ತೊಳೆದ ನೀರನ್ನು ಸ್ವಲ್ಪ ಸ್ವಲ್ಪವಾಗಿ ಕುಡಿಯುತ್ತಲೇ ಇರಬೇಕು.

''ಬ್ರಹ್ಮಜ್ಞಾನಕ್ಕೆ ಅಧಿಕಾರಿಗಳು ಬಹಳ ಕಡಮೆ. ಗೀತೆಯಲ್ಲಿ ಹೇಳಿದೆ: 'ಸಹಸ್ರ ಸಹಸ್ರ ಜನರಲ್ಲಿ ಎಲ್ಲೊ ಒಬ್ಬ ಬ್ರಹ್ಮಜ್ಞಾನಕ್ಕಾಗಿ ಹಾತೊರೆಯುತ್ತಾನೆ. ಈ ರೀತಿಯಾಗಿ ಹಾತೊರೆಯತಕ್ಕ ಸಹಸ್ರ ಸಹಸ್ರ ಜನರಲ್ಲಿ ಎಲ್ಲೋ ಒಬ್ಬನಿಗೆ ಮಾತ್ರ ಬ್ರಹ್ಮಜ್ಞಾನ ದೊರೆಯಬಹುದು' ಎಂಬುದಾಗಿ.''

ಒಬ್ಬ ಭಕ್ತ ಗೀತೆಯ ''ಮನುಷ್ಯಾಣಾಂ ಸಹಸ್ರೇಷು . . .'' ಎಂಬ ಶ್ಲೋಕವನ್ನು ಉದ್ಧರಿಸಿದ.

ಶ್ರೀರಾಮಕೃಷ್ಣರು: "ಸಂಸಾರದಲ್ಲಿ ಆಸಕ್ತಿ ಕಡಮೆಯಾದಷ್ಟೂ ಜ್ಞಾನ ವೃದ್ಧಿಯಾಗುತ್ತಾ ಬರುತ್ತದೆ. ಆಸಕ್ತಿ ಎಂದರೆ ಕಾಮಕಾಂಚನಾಸಕ್ತಿ.

"ಭಗವತ್ಪ್ರೇಮ ಎಲ್ಲರಿಗೂ ಉಂಟಾಗದು. ಗೌರಾಂಗನಿಗೆ ಉಂಟಾಗಿತ್ತು. ಜೀವರಿಗೆ ಭಾವ ಸಾಧ್ಯವಾಗಬಹುದು—ಇಷ್ಟು ಮಾತ್ರವೇ ಇವರಿಗೆ. ಈಶ್ವರಕೋಟಿಗಳಿಗೆ, ಅಂದರೆ ಅವತಾರಾದಿಗಳಿಗೆ ಪ್ರೇಮ ಉಂಟಾಗುತ್ತದೆ. ಪ್ರೇಮ ಉಂಟಾಯಿತು ಎಂದರೆ ಈ ಜಗತ್ತು ಮಿಥ್ಯೆ ಎಂಬ ಬೋಧೆ ಆಗೇ ಆಗುತ್ತದೆ; ಜೊತೆಗೆ ಈ ಶರೀರ ಇದೆಯಲ್ಲ, ಇಷ್ಟೊಂದು ಪ್ರೀತಿಕರವಾದ ವಸ್ತು, ಇದು ಕೂಡ ಮರೆತೇ ಹೋಗಿಬಿಡುತ್ತದೆ.

"ಪಾರ್ಸಿಗಳ ಒಂದು ಪುಸ್ತಕದಲ್ಲಿ ಬರೆದಿದೆ, ಚರ್ಮದೊಳಗೆ ಮಾಂಸವಿದೆ, ಮಾಂಸದೊಳಗೆ ಮೂಳೆ, ಮೂಳೆಯೊಳಗೆ ಮಜ್ಜೆ, ಇತ್ಯಾದಿ ಇತ್ಯಾದಿ, ಕೊನೆಗೆ ಎಲ್ಲದರ ಒಳಗೆ ಇದೆ ಪ್ರೇಮ. ಪ್ರೇಮದಿಂದ ಸಾಧಕ ಕೋಮಲನಾಗಿಯೂ, ಮೃದುವಾಗಿಯೂ ಆಗಿಬಿಡುತ್ತಾನೆ. ಪ್ರೇಮದ ದೆಸೆಯಿಂದ ಕೃಷ್ಣ ತ್ರಿಭಂಗಿಯಾಗಿಬಿಟ್ಟದಾನೆ.

"ಪ್ರೇಮ ಉಂಟಾಯಿತು ಎಂದರೆ, ಸಚ್ಚಿದಾನಂದನನ್ನು ಕಟ್ಟಿಹಾಕಲು ಒಂದು ಹಗ್ಗ ದೊರೆತ ಹಾಗೆ. ಆತನ ದರ್ಶನ ಮಾಡಬೇಕೆಂಬ ಇಚ್ಛೆಯಾದಾಗಲೆಲ್ಲ ಆ ಹಗ್ಗವನ್ನು ಹಿಡಿದು ಎಳೆದರೇ ಸಾಕು. ಕರೆದಾಗಲೆಲ್ಲಾ ಬಂದು ದರ್ಶನವೀಯುತ್ತಾನೆ.

"ಭಕ್ತಿ ಪಕ್ವವಾಯಿತು ಎಂದರೆ ಭಾವ. ಭಾವ ಉಂಟಾಯಿತು ಎಂದರೆ, ಸಾಧಕ ಸಚ್ಚಿದಾನಂದನ ಸಂಬಂಧವಾಗಿ ಭಾವಿಸಿ ಮೂಕನಾಗಿಬಿಡುತ್ತಾನೆ. ಮತ್ತೆ, ಭಾವ ಪಕ್ವವಾಯಿತು ಎಂದರೆ, ಮಹಾಭಾವ—ಪ್ರೇಮ. ಇದು ಮಾವಿನ ಕಾಯಿಗೂ, ಹಣ್ಣಿಗೂ ಇರುವ ವ್ಯತ್ಯಾಸದ ಹಾಗೆ. ಶುದ್ಧ ಭಕ್ತಿಯೇ ಸಾರ, ಉಳಿದುದೆಲ್ಲಾ ಮಿಥ್ಯೆ.

"ಒಮ್ಮೆ ನಾರದನ ಸ್ತೋತ್ರಕ್ಕೆ ಮೆಚ್ಚಿ ಶ್ರೀರಾಮ ಆತನಿಗೆ ಹೇಳಿದ ಒಂದು ವರ ಬೇಡಿಕೊಳ್ಳುವಂತೆ. ನಾರದ ಶುದ್ಧ ಭಕ್ತಿಗಾಗಿ ಪ್ರಾರ್ಥಿಸಿಕೊಂಡು ಹೇಳಿದ: 'ಹೇ ರಾಮ, ನಿನ್ನ ಜಗನ್ಮೋಹಿನೀ ಮಾಯೆಯಿಂದ ನಾನು ಮುಗ್ಧನಾಗದ ಹಾಗೆ ಮಾಡು.' ರಾಮ ಹೇಳಿದ: 'ಅದೇನೊ ಸರಿಯೆ. ಬೇರೆ ಯಾವುದಾದರೂ ವರ ಕೇಳು.' ನಾರದ ಹೇಳಿದ: 'ನನಗಿನ್ನೇನೂ ಬೇಕಾಗಿಲ್ಲ—ಕೇವಲ ಭಕ್ತಿ ಮಾತ್ರ.'

"ಈ ಭಕ್ತಿಯನ್ನು ಗಳಿಸಿಕೊಳ್ಳುವ ಬಗೆ ಹೇಗೆ? ಮೊದಲು ಸಾಧು ಸಂಗ ಮಾಡಬೇಕು. ಸತ್ಸಂಗ ಮಾಡಿದರೆ ಭಗವಂತನ ಸಂಬಂಧವಾಗಿ ಶ್ರದ್ಧೆಯುಂಟಾಗುತ್ತದೆ. ಅನಂತರ ನಿಷ್ಠೆ. ಭಗವಂತನ ಮಾತುಕತೆ ಹೊರತು ಬೇರೇನು ಕೇಳಲೂ ಇಚ್ಛೆಯಾಗದು. ಭಗವತ್ಸಂಬಂಧವಾದ ಕೆಲಸಕಾರ್ಯಗಳನ್ನೇ ಮಾಡಲು ಇಚ್ಛೆಯಾಗುತ್ತದೆ. ನಿಷ್ಠೆಯನಂತರ ಭಕ್ತಿ. ಅನಂತರ ಭಾವ, ಮಹಾಭಾವ, ಪ್ರೇಮ, ವಸ್ತುಲಾಭ. ಮಹಾ-ಭಾವ, ಪ್ರೇಮ ಅವತಾರಾದಿಗಳಿಗೆ ದೊರೆಯುತ್ತದೆ.

"ಸಂಸಾರಿ ಜೀವರ ಜ್ಞಾನ, ಭಕ್ತರ ಜ್ಞಾನ, ಅವತಾರಪುರುಷರ ಜ್ಞಾನ ಒಂದೇ ಸಮವಾದುವಲ್ಲ. ಸಂಸಾರಿ ಜೀವರ ಜ್ಞಾನ ಒಂದು ಹಣತೆಯ ಬೆಳಕು ಇದ್ದ ಹಾಗೆ—ಮನೆಯ ಒಳಪ್ರದೇಶ ಮಾತ್ರ ಬೆಳಕಾಗುತ್ತದೆ. ಆ ಬೆಳಕಿನಿಂದ ಊಟ-ಗೀಟ, ಮನೆಗೆಲಸ, ಶರೀರ ರಕ್ಷಣೆ, ಮಕ್ಕಳ ಪೋಷಣೆ ಇತ್ಯಾದಿ ಸಾಧ್ಯ.

"ಭಕ್ತರ ಬೆಳಕು ಚಂದ್ರನ ಬೆಳಕು ಇದ್ದ ಹಾಗೆ. ಅದು ಮನೆಯ ಒಳಗೆ ಹೊರಗೆ ಇರುವುದನ್ನೆಲ್ಲ ಪ್ರಕಾಶಗೊಳಿಸುತ್ತದೆ. ಆದರೆ ಬಹಳ ದೂರದಲ್ಲಿರುವ ವಸ್ತುಗಳನ್ನು ಅಥವಾ ಬಹಳ ಪುಟ್ಟ ವಸ್ತುಗಳನ್ನು ಆ ಬೆಳಕಿನಿಂದ ನೋಡಲಾಗೋದಿಲ್ಲ.

"ಅವತಾರಾದಿಗಳ ಬೆಳಕು ಸೂರ್ಯನ ಬೆಳಕು ಇದ್ದ ಹಾಗೆ. ಒಳಗೆ ಹೊರಗೆ, ದೊಡ್ಡದು ಚಿಕ್ಕದು—ಎಲ್ಲವನ್ನೂ ಅವರು ನೋಡಬಲ್ಲರು.

"ಸಂಸಾರಿ ಜೀವರ ಮನಸ್ಸು ಬಗ್ಗಡದ ನೀರಾಗಿಬಿಟ್ಟಿರುವುದೇನೊ ನಿಜ. ಆದರೆ ಅದಕ್ಕೆ ಶುದ್ಧೀಕರಣ ವಸ್ತು ಹಾಕಿದರೆ ಮತ್ತೆ ಅದು ಶುದ್ಧ ಆಗಬಹುದು. ವಿವೇಕ ವೈರಾಗ್ಯಗಳೇ ಶುದ್ಧೀಕರಣ ವಸ್ತು."

ಈಗ ಪರಮಹಂಸರು ಶಿವಪುರದ ಭಕ್ತರೊಡನೆ ಮಾತುಕತೆ ಆಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ನೀವೇನಾದರೂ ಕೇಳಬೇಕು ಅಂತ ಇದ್ದರೆ ಕೇಳಿ."

ಒಬ್ಬ ಭಕ್ತ: "ಇಷ್ಟು ಹೊತ್ತೂ ನೀವು ಆಡಿದ ಮಾತುಕತೆಗಳನ್ನೆಲ್ಲ ಕೇಳಿದೆವಲ್ಲ."

ಶ್ರೀರಾಮಕೃಷ್ಣರು: "ಇವುಗಳನ್ನೆಲ್ಲ ಕೇಳಿಟ್ಟುಕೊಂಡಿರುವುದು ಒಳ್ಳೆಯದು. ಆದರೆ ಸಮಯ ಬಾರದಿದ್ದರೆ ಏನೂ ಆಗದು. ಜ್ವರ ಎಳ್ಳು

ಸಿಡಿಯುವಂತಿರುವಾಗ ಕ್ವೈನ ಕೊಟ್ಟರೆ ಅದು ಯಾವ ಪ್ರಯೋಜನಕ್ಕೆ ಬಂದೀತು? 'ಫೀವರ್ ಮಿಕ್ಸ್ಚರ್' ಕೊಟ್ಟು ಮಲ-ಗಿಲವೆಲ್ಲ ಶುದ್ಧಿಯಾಗಿ ಜ್ವರ ಸ್ವಲ್ಪ ಇಳಿಯಿತು ಎಂದರೆ, ಆಗ ಕ್ವೈನ ಕೊಡಬೇಕು. ಇನ್ನು ಕೆಲವರಿಗೆ ಜ್ವರ ತಾನಾಗೇ ನಿಂತುಹೋಗುತ್ತದೆ—ಕ್ವೈನ ಕೊಡದೆ ಇದ್ದರೂ. ಒಂದು ಮಗು ಮಲಗಿಕೊಳ್ಳುವಾಗ ತನ್ನ ತಾಯಿಗೆ ಹೇಳಿತು: 'ಅಮ್ಮ, ನನಗೆ ದೇಹಬಾಧೆ ಉಂಟಾದಾಗ ನನ್ನನ್ನು ಎಬ್ಬಿಸಿಬಿಡು.' ತಾಯಿ ಉತ್ತರವಿತ್ತಳು: 'ಮಗು, ನಾನು ನಿನ್ನನ್ನು ಎಬ್ಬಿಸಬೇಕಾಗಿರೋದಿಲ್ಲ. ದೇಹಬಾಧೆಯೇ ನಿನ್ನನ್ನು ಎಬ್ಬಿಸಿಬಿಡುತ್ತದೆ.'

"ಬಗೆಬಗೆಯ ಪ್ರವೃತ್ತಿಯುಳ್ಳ ಜನ ಇಲ್ಲಿಗೆ ಬರುತ್ತಾರೆ. ಕೆಲವರು ಭಕ್ತರೊಡನೆ ದೋಣಿಯಲ್ಲಿ ಬರುತ್ತಾರೆ. ಅವರಿಗೆ ಭಗವದ್ವಿಷಯ ಹಿಡಿಸದು. ತಮ್ಮ ಸ್ನೇಹಿತರನ್ನ ಮೊಳಕೈಯಿಂದ ಮೆತ್ತಗೆ ತಿವಿಯುತ್ತಲೇ ಇರುತ್ತಾರೆ: 'ಯಾವಾಗ ಹೋಗೋಣ? ಯಾವಾಗ ಹೋಗೋಣ?' ಏನು ಮಾಡಿದರೂ ತಮ್ಮ ಸ್ನೇಹಿತರು ಇನ್ನೂ ಏಳದಿರುವುದನ್ನು ನೋಡಿ, ಅವರು ಹೇಳುತ್ತಾರೆ: 'ಹಾಗಾದರೆ ನೀವು ಬರುವವರೆಗೆ ನಾವು ದೋಣಿಯಲ್ಲಿ ಹೋಗಿ ಕುಳಿತಿರುತ್ತೇವೆ.'

"ಯಾರಿಗೆ ಇದೇ ಪ್ರಥಮ ಮಾನುಷ ಜನ್ಮವೊ ಅವರಿಗೆ ವಿಷಯ ಸುಖಗಳ ಅನುಭವ ಬೇಕಾಗಿರುತ್ತದೆ. ಮಾಡಬೇಕಾದ ಕಾರ್ಯಗಳು ಇನ್ನೂ ಉಳಿದುಕೊಂಡಿದ್ದರೆ, ಅವರಿಗೆ ಆತ್ಮಜಾಗೃತಿ ಉಂಟಾಗದು."

ಪರಮಹಂಸರು ಸರ್ವೆ ಮರಗಳ ಕಡೆಗೆ ಹೊರಟದಾರೆ. ಅವರು ನಗುತ್ತ ಆ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ನಿಂತು ಮಾಸ್ಟರನ್ನು ಕೇಳುತ್ತಿದಾರೆ: "ಒಳ್ಳೇದು, ನನ್ನದು ಯಾವ ರೀತಿಯ ಅವಸ್ಥೆ?"

ಮಾಸ್ಟರ್ ನಗುತ್ತ: "ನಿಮ್ಮದು ಮೇಲುಗಡೆ ಸಹಜಾವಸ್ಥೆ, ಆದರೆ ಆಂತರ್ಯ ಗಭೀರವಾದ್ದು. ನಿಮ್ಮ ಅವಸ್ಥೆ ಏನು ಎಂಬುದನ್ನು ಅರಿತುಕೊಳ್ಳುವುದು ಬಹಳ ಕಠಿನ."

ಶ್ರೀರಾಮಕೃಷ್ಣರು ನಗುತ್ತ: "ಹೌದು ಇದು ಸಿಮೆಂಟು ನೆಲ ಇದ್ದ ಹಾಗೆ. ಜನ ಅದರ ಮೇಲ್ಭಾಗವನ್ನು ಮಾತ್ರ ನೋಡಬಲ್ಲರು. ಅದರೊಳಗಡೆ ಏನೇನು ಇದೆ ಎಂಬುದು ಅವರಿಗೆ ಗೊತ್ತಾಗುವುದಿಲ್ಲ."

ಘಂಟೆ ಅಪರಾಹ್ನ ನಾಲ್ಕು. ಬಲರಾಮನೇ ಮೊದಲಾದ ಭಕ್ತರು ಕಲ್ಕತ್ತಕ್ಕೆ ಹಿಂದಿರುಗಲು ದೋಣಿ ಹತ್ತುತ್ತಿದಾರೆ. ಗಂಗೆ ಇಳಿಮುಖ

ಳಾಗಿದ್ದಾಳೆ. ದಕ್ಷಿಣ ದಿಕ್ಕಿನಿಂದ ಗಾಳಿ ಬೀಸುತ್ತಿದೆ. ಗಂಗೆ ತರಂಗ ಮಾಲೆಗಳಿಂದ ವಿಭೂಷಿತಳಾಗಿದ್ದಾಳೆ. ಬಹಳ ಹೊತ್ತಿನಿಂದ ಮಾಸ್ಟರ್ ಆ ದೃಶ್ಯವನ್ನು ನೋಡುತ್ತಲೇ ಇದ್ದಾನೆ. ಬಾಗ್‌ಬಾಜಾರಿನ ಕಡೆ ಹೋಗುತ್ತಿದ್ದ ಬಲರಾಮನ ದೋಣಿ ಕಣ್ಮರೆಯಾದನಂತರ, ಮಾಸ್ಟರ್ ಪರಮ-ಹಂಸರ ಹತ್ತಿರಕ್ಕೆ ಹಿಂದಿರುಗುತ್ತಿದ್ದಾನೆ.

ಪರಮಹಂಸರು ಈಗ ಆ ಅರ್ಧಚಂದ್ರಾಕೃತಿಯ ವರಾಂಡದಿಂದಿಳಿದು ಸರ್ವೆ ಮರಗಳ ಕಡೆಗೆ ಮುಂದುವರಿಯುತ್ತಿದ್ದಾರೆ. ವಾಯುವ್ಯ ದಿಕ್ಕಿನಲ್ಲಿ ಬಹಳ ಸುಂದರವಾದ ಮೋಡಗಳು ಎದ್ದಿವೆ. ಪರಮಹಂಸರು ಮಾಸ್ಟರನ್ನು ಕೇಳುತ್ತಿದ್ದಾರೆ: "ಏನು, ಮಳೆ ಬರಬಹುದೆ? ದಯವಿಟ್ಟು ಛತ್ರಿ ತೆಗೆದು ಕೊಂಡು ಬಾ." ಮಾಸ್ಟರ್ ಛತ್ರಿಯನ್ನು ತಂದುಕೊಟ್ಟ. ಲಾಟು ಕೂಡ ಅವರನ್ನು ಹಿಂಬಾಲಿಸುತ್ತಿದ್ದಾನೆ. ಪಂಚವಟಿಯ ಹತ್ತಿರಕ್ಕೆ ಬಂದನಂತರ ಪರಮಹಂಸರು ಲಾಟುವನ್ನು ಕೇಳುತ್ತಿದ್ದಾರೆ: "ನೀನು ದಿನ ದಿನಕ್ಕೂ ಕೃಶವಾಗುತ್ತಿದ್ದೀಯಲ್ಲ ಏಕೆ?"

ಲಾಟು: "ಹಸಿವೇ ಆಗುತ್ತಿಲ್ಲ."

ಶ್ರೀರಾಮಕೃಷ್ಣರು: "ಅದೊಂದೇ ಏನು ಕಾರಣ? ಈಗಿನ ಹವ ಕೂಡ ಚೆನ್ನಾಗಿಲ್ಲ. ಬಹುಶಃ ಧ್ಯಾನವನ್ನೂ ಹೆಚ್ಚಾಗಿ ಮಾಡುತ್ತಿರಬೇಕು? (ಮಾಸ್ಟರಿಗೆ) ನೀನು ಈ ಕೆಲಸ ಮಾಡಬೇಕಾಗಿದೆ. ನೀನು ಬಾಬುರಾಮನಿಗೆ ಹೇಳು, ರಾಖಾಲ ಇಲ್ಲಿ ಇಲ್ಲದಾಗ ಒಂದೆರಡು ದಿನದ ಮಟ್ಟಿಗೆ ಇಲ್ಲಿ ಆತ ಇದ್ದು ಹೋಗಬೇಕೆಂದು. ಇಲ್ಲದಿದ್ದರೆ ನನಗೆ ಬಹಳ ತೊಂದರೆಯಾಗಿ ಬಿಡುತ್ತದೆ."

ಮಾಸ್ಟರ್: "ಆಗಲಿ, ಹೇಳುತ್ತೇನೆ."

ಪರಮಹಂಸರು ಮಾಸ್ಟರನ್ನು ಕೇಳುತ್ತಿದ್ದಾರೆ, ಬಾಬುರಾಮ ಸರಳ ಹೌದೊ ಅಲ್ಲವೊ ಎಂಬುದಾಗಿ.

ಶ್ರೀರಾಮಕೃಷ್ಣರು ಈಗ ಸರ್ವೆ ಮರಗಳ ಕಡೆಯಿಂದ ದಕ್ಷಿಣಾಭಿಮುಖವಾಗಿ ಬರುತ್ತಿದ್ದಾರೆ. ಲಾಟು ಮತ್ತು ಮಾಸ್ಟರ್ ಪಂಚವಟಿಯ ಕೆಳಗೆ ಉತ್ತರಾಭಿಮುಖರಾಗಿ ನಿಂತು ಅವರನ್ನು ನೋಡುತ್ತಿದ್ದಾರೆ. ಪರಮ-ಹಂಸರ ಹಿನ್ನೆಲೆಯಲ್ಲಿ ಕಾರ್ಮುಗಿಲು ಗಗನಮಂಡಲವನ್ನು ಅಲಂಕರಿಸಿ ಜಾಹ್ನವಿಯಲ್ಲಿ ಪ್ರತಿಬಿಂಬಿತವಾಗುತ್ತಿದೆ. ಆ ಕಾರಣದಿಂದ ಗಂಗೆ ಕೃಷ್ಣ ವರ್ಣ ಧರಿಸಿದ್ದಾಳೆ. ಈ ಶಿಷ್ಯರ ಕಣ್ಣಿಗೆ ಪರಮಹಂಸರು ಕಾಣಬರುತ್ತಿದ್ದಾರೆ—

ಸಾಕ್ಷಾತ್ ಭಗವಂತನೇ ದೇಹಧಾರಣೆಮಾಡಿಕೊಂಡು ಮರ್ತ್ಯದಲ್ಲಿ ಭಕ್ತರ ಸಲುವಾಗಿ ಕಲುಷವಿನಾಶಿನಿಯಾದ, ಹರಿಪಾದಾಂಬುಜ ಸಂಭೂತಳಾದ, ಸುರನದಿಯಾದ ಗಂಗೆಯ ತೀರದಲ್ಲಿ ಚಲಿಸುತ್ತಿರುವನೊ ಏನೊ ಎಂಬಂತೆ. ಸಾಕ್ಷಾತ್ತಾಗಿ ಆತನೇ ಇಲ್ಲಿ ಇರುವುದರಿಂದ ವೃಕ್ಷ, ಲತೆ, ಬಳ್ಳಿ, ಉದ್ಯಾನ-ಮಾರ್ಗ, ದೇವಾಲಯ, ವಿಗ್ರಹ, ಸೇವಕಗಣ, ದ್ವಾರಪಾಲಕಗಣ, ಪ್ರತಿಯೊಂದು ಧೂಳೀಕಣ ಎಲ್ಲವೂ ಆನಂದದಿಂದ ಹಿಗ್ಗುತ್ತಿವೆ.

ಪರಮಹಂಸರು ಹಿಂದಿರುಗಿಬಂದು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿದಾರೆ. ತಮಗಾಗಿ ಯಾರೊ ಒಬ್ಬ ಬ್ರಹ್ಮಚಾರಿ ತಯಾರುಮಾಡಿದ್ದ ಔಷಧವನ್ನು ಅವರು ಬಹಳವಾಗಿ ಹೊಗಳುತ್ತಿದಾರೆ. ಆತನ ಮಾತೆತ್ತಿ ಹಾಜರಾ ಹೇಳುತ್ತಿದಾನೆ: "ಈಗ ಆತ ಸಂಸಾರಕ್ಕೆ ಸಿಕ್ಕಿ ಸುಮ್ಮನೆ ನರಳುತ್ತಿದಾನೆ. ಕೊನ್ನಗರದಿಂದ ನಬಾಯಿಚೈತನ್ಯ ಬಂದಿದಾನೆ. ಆದರೆ ನೋಡಿ, ಗೃಹಸ್ಥನಾಗಿಯೂ ಆತ ಕಾಷಾಯವಸ್ತ್ರಧಾರಿಯಾಗಿರುವುದನ್ನ!"

ಶ್ರೀರಾಮಕೃಷ್ಣರು: "ನಾನು ಏನು ಹೇಳಲಿ? ನೋಡು, ಕಾಣ ಬರುತ್ತಿದೆ, ಭಗವಂತ ತಾನೇ ಈ ಎಲ್ಲಾ ಮಾನುಷ ರೂಪ ಧರಿಸಿರುವ ಹಾಗೆ. ಆದ್ದರಿಂದ ಯಾರಿಗೂ ಏನೂ ಹೇಳಲಾರೆ."

ಹಾಜರಾ: "ನರೇಂದ್ರ ಮತ್ತೆ ಮೊಕದ್ದಮೆಯಲ್ಲಿ ಸಿಕ್ಕಿಬಿದ್ದಿದಾನೆ."

ಶ್ರೀರಾಮಕೃಷ್ಣರು: "ಆತ ಶಕ್ತಿಯನ್ನು ಒಪ್ಪುತ್ತಿಲ್ಲ. ದೇಹ-ಧಾರಣೆಮಾಡಿಕೊಂಡು ಬಂದುದೇ ಆದರೆ ಶಕ್ತಿಯನ್ನು ಒಪ್ಪಲೇ ಬೇಕು."

ಹಾಜರಾ: "ನರೇಂದ್ರ ಹೇಳುತ್ತಾನೆ: 'ನಾನು ಒಪ್ಪಿಕೊಂಡುಬಿಟ್ಟುದೇ ಆದರೆ ಎಲ್ಲರೂ ಒಪ್ಪಿಕೊಂಡುಬಿಡುತ್ತಾರೆ. ಆದ್ದರಿಂದ ಸಾಧ್ಯವಾಗುತ್ತಿಲ್ಲ.'"

ಶ್ರೀರಾಮಕೃಷ್ಣರು: "ಹಾಗೆಂದು ಆತ ಶಕ್ತಿಯೇ ಇಲ್ಲ ಎನ್ನುವಷ್ಟು ದೂರ ಹೋಗುವುದು ಸರಿಯಲ್ಲ. ಈಗ ಆತ ಶಕ್ತಿಯ ಎಲ್ಲೆಯಲ್ಲಿದಾನೆ. ನ್ಯಾಯಾಧೀಶ ಕೂಡ, ಸಾಕ್ಷ್ಯ ಕೊಡಬೇಕಾಗಿ ಬಂದ ಪಕ್ಷದಲ್ಲಿ, ತನ್ನ ಪೀಠದಿಂದಿಳಿದು ಬಂದು ಸಾಕ್ಷಿಕಟ್ಟೆಯಲ್ಲಿ ನಿಲ್ಲಬೇಕಾಗುತ್ತದೆ.

(ಮಾಸ್ಟರಿಗೆ) "ಈಚೆಗೇನಾದರೂ ನೀನು ನರೇಂದ್ರನನ್ನು ಸಂಧಿಸಿದೆಯಾ?"

ಮಾಸ್ಟರ್: "ಇಲ್ಲ, ಈಗ ಕೆಲವು ದಿನದಿಂದ ಇಲ್ಲ."

ಶ್ರೀರಾಮಕೃಷ್ಣರು: "ಒಮ್ಮೆ ಆತನನ್ನು ಸಂಧಿಸಿ ಗಾಡಿ ಮಾಡಿಕೊಂಡು ಕರೆದುಕೊಂಡು ಬಾ.

(ಹಾಜರಾನಿಗೆ) "ಒಳ್ಳೇದು ಆತನಿಗು ಇದಕ್ಕು [ತಮಗು] ಏನು ಸಂಬಂಧ?"

ಹಾಜರಾ: "ನಿಮ್ಮಿಂದ ಸಹಾಯ ಅಪೇಕ್ಷಿಸುತ್ತಿದ್ದಾನೆ."

ಶ್ರೀರಾಮಕೃಷ್ಣರು: "ಹಾಗಾದರೆ ಭಾವನಾಥ? ಸುಸಂಸ್ಕಾರವಿಲ್ಲದಿದ್ದ ಪಕ್ಷದಲ್ಲಿ ಆತ ಇಷ್ಟಾಗಿ ಇಲ್ಲಿಗೆ ಬರುತ್ತಿದ್ದನೆ? ಒಳ್ಳೇದು, ಹರೀಶ, ಲಾಟು ಇವರೊ? ಅವರು ಯಾವಾಗಲೂ ಧ್ಯಾನದಲ್ಲೇ ಇರುತ್ತಾರೆ. ಇವೆಲ್ಲ ಏನು ಮತ್ತೆ?"

ಹಾಜರಾ: "ಅದೇನೊ ಸರಿಯೆ. ಏನಿದು, ಅವರು ಯಾವಾಗಲೂ ಧ್ಯಾನದಲ್ಲೇ ತೊಡಗಿರುವುದು? ಅವರು ಇಲ್ಲಿ ಇರುವುದು ನಿಮ್ಮ ಸೇವೆಗಾಗಿ ಮಾತ್ರವಾದರೆ, ಅದು ಬೇರೆ ವಿಷಯ."

ಶ್ರೀರಾಮಕೃಷ್ಣರು: "ಎಲ್ಲವೂ ಸಕಾಲಕ್ಕೆ ಬರುತ್ತದೆ. ಅವರು ಹೊರಟುಹೋಗಿ ಬೇರೆಯವರು ಬರಬಹುದು."

ಹಾಜರಾ ಕೊಠಡಿಯಿಂದ ಎದ್ದು ಹೊರಟುಹೋದ. ಮುಚ್ಚಂಜೆಯಾಗಲು ಇನ್ನೂ ಸಮಯವಿದೆ. ಪರಮಹಂಸರು ಏಕಾಂತದಲ್ಲಿ ಮಾಸ್ಟರೊಡನೆ ಮಾತುಕತೆ ಆಡುತ್ತಿದ್ದಾರೆ.

ಶ್ರೀರಾಮಕೃಷ್ಣರು: "ಒಳ್ಳೇದು, ನಾನು ಭಾವಾವಸ್ಥೆಯಲ್ಲಿ ಏನೇನೊ ಮಾತಾಡಿಕೊಳ್ಳುತ್ತೇನಲ್ಲ, ಅದು ಜನರನ್ನು ಆಕರ್ಷಿಸುತ್ತಾ ಇದೆಯೇನು?"

ಮಾಸ್ಟರ್: "ಹೌದು. ಬಹಳವಾಗಿ."

ಶ್ರೀರಾಮಕೃಷ್ಣರು: "ಜನರ ಭಾವನೆಯೇನು? ಭಾವಾವಸ್ಥೆ ನೋಡಿದರೆ ಅವರಿಗೇನಾದರೂ ಅರ್ಥವಾಗುತ್ತದೆಯೆ?"

ಮಾಸ್ಟರ್: "ಆಗುತ್ತಿದೆ, ಒಂದೇ ಆಧಾರದಲ್ಲಿ ಜ್ಞಾನ, ಪ್ರೇಮ, ವೈರಾಗ್ಯಗಳಿರುವುದೂ ಅಲ್ಲದೆ, ಸರಳಸ್ವಭಾವ ಬೇರೆ ಇದೆಯಲ್ಲ ಎಂದು. ನಿಮ್ಮ ಅಂತರ್ಯದಲ್ಲಿ ಭಗವದನುಭವಗಳ ದೊಡ್ಡ ದೊಡ್ಡ ಜಹಜು ಹಾದುಹೋಗಿಬಿಟ್ಟಿವೆ; ಆದರೂ ನೀವು ಅತ್ಯಂತ ಸರಳರಾಗೇ ತೋರಿಬರುತ್ತಿದೀರಿ! ನಿಮ್ಮ ಈ ಅವಸ್ಥೆ ಅನೇಕರಿಗೆ ಅರ್ಥವಾಗುತ್ತಿಲ್ಲ. ಆದರೆ ಕೆಲವರು ನಿಮ್ಮ ಈ ಅವಸ್ಥೆಯಿಂದಲೇ ಆಕರ್ಷಿತರಾಗುತ್ತಿದ್ದಾರೆ."

ಶ್ರೀರಾಮಕೃಷ್ಣರು: "ಘೋಷ್ಪಾರದ ವೈಷ್ಣವರು ಭಗವಂತನನ್ನು 'ಸಹಜ' ಅಂದರೆ 'ಸರಳ' ಅಂತ ಕರೆಯುತ್ತಾರೆ. ಅವರು ಹೇಳುತ್ತಾರೆ, ಮನುಷ್ಯ ಸರಳನಾಗದ ಹೊರತು ಸರಳನನ್ನು ಅರಿಯಲಾಗೋದಿಲ್ಲ ಎಂದು. (ಮಾಸ್ಟರಿಗೆ) ನನ್ನಲ್ಲಿ 'ಅಹಂ' ಇದೆಯೆ?"

ಮಾಸ್ಟರ್: "ಹೌದು, ಸ್ವಲ್ಪ ಇದೆ—ಶರೀರ ರಕ್ಷಣೆಗಾಗಿ, ಭಕ್ತರೊಡನೆ ಭಗವದಾನಂದ ಸವಿಯಲಿಕ್ಕಾಗಿ, ಜನರಿಗೆ ಜ್ಞಾನೋಪದೇಶ ಕೊಡಲಿಕ್ಕಾಗಿ. ವಿಶೇಷವಾಗಿ ಭಗವತಿಗೆ ಪ್ರಾರ್ಥನೆಮಾಡಿ ಅದೊಂದಿಷ್ಟನ್ನು ಇಟ್ಟುಕೊಂಡಿದೀರಿ."

ಶ್ರೀರಾಮಕೃಷ್ಣರು: "ಇಲ್ಲ. ನಾನು ಅದನ್ನು ಇಟ್ಟುಕೊಂಡಿಲ್ಲ. ಭಗವತಿಯೇ ಅದನ್ನು ಇಟ್ಟಿದಾಳೆ. ಒಳ್ಳೇದು, ನನಗೆ ಭಾವಾವೇಶ ಬಂದಾಗ ಏನಾಗುತ್ತದೆ?"

ಮಾಸ್ಟರ್: "ನೀವು ಸ್ವಲ್ಪ ಹೊತ್ತಿನ ಹಿಂದೆ ಹೇಳಿದಿರಲ್ಲ, 'ಆರನೆ ಭೂಮಿಗೆ' ಮನಸ್ಸು ಹತ್ತಿ ನಿಮಗೆ ಭಗವಂತನ ರೂಪದರ್ಶನ ಆಗುತ್ತೆ; ಬಳಿಕ ನೀವು ಮಾತುಕತೆಯಾಡಲು ಆರಂಭಿಸಿದಾಗ 'ಐದನೆ ಭೂಮಿಗೆ' ಮನಸ್ಸು ಇಳಿದುಬಿಡುತ್ತದೆ ಎಂಬುದಾಗಿ."

ಶ್ರೀರಾಮಕೃಷ್ಣರು: "ಎಲ್ಲವನ್ನೂ ಭಗವತಿಯೇ ಮಾಡುತ್ತಾಳೆ. ನನಗೆ ಏನೂ ಗೊತ್ತಿಲ್ಲ."

ಮಾಸ್ಟರ್: "ಇದಕ್ಕಾಗೇ ಜನ ಬಹಳವಾಗಿ ಆಕರ್ಷಿತರಾಗುತ್ತಿರುವುದು. ಒಳ್ಳೇದು, ನಾನು ಒಂದು ಪ್ರಶ್ನೆ ಹಾಕಲೆ? ಶಾಸ್ತ್ರದಲ್ಲಿ ಎರಡು ಅಭಿಪ್ರಾಯಗಳಿವೆ. ಒಂದು ಪುರಾಣದ ದೃಷ್ಟಿಯಿಂದ ಕೃಷ್ಣ ಚಿದಾತ್ಮ, ರಾಧೆ ಚಿಚ್ಛಕ್ತಿ; ಇನ್ನೊಂದರ ದೃಷ್ಟಿಯಿಂದ ಕೃಷ್ಣನೇ ಕಾಳಿ—ಆದ್ಯಾಶಕ್ತಿ. ಇದು ಹೇಗೆ?"

ಶ್ರೀರಾಮಕೃಷ್ಣರು: "ಈ ಎರಡನೆಯದು ದೇವೀಪುರಾಣದ ಹಾಗೆ. ಇದರಲ್ಲಿ ಹೇಳಿದೆ, ಕಾಳಿಯೇ ಕೃಷ್ಣ ಆಗಿಬಿಟ್ಟಿದಾಳೆ ಎಂಬುದಾಗಿ. ಇದು ನಿಜವಾದರೆ ತಾನೆ ಏನು? ಭಗವಂತ ಅನಂತ, ಮಾರ್ಗವೂ ಅನಂತ."

ಈ ಮಾತುಕತೆಗಳನ್ನೆಲ್ಲ ಕೇಳಿ ಮಾಸ್ಟರ್ ಆಶ್ಚರ್ಯಚಕಿತನಾಗಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಈಗ ಹೇಳುತ್ತಿದಾನೆ: "ಓ, ಈಗ ನನಗೆ ಅರ್ಥವಾಗುತ್ತಿದೆ. ನೀವು ಹೇಳುವ ಹಾಗೆ, ಮುಖ್ಯವಾಗಿ ಮಾಡಬೇಕಾಗಿರುವ ಕೆಲಸ ಚಾವಣಿಯ ಮೇಲಕ್ಕೆ ಹತ್ತುವುದು. ಅದನ್ನ ಯಾವ

ವಿಧದಿಂದ ಮಾಡಿದರೂ ಕೆಲಸ ಕೈಗೂಡಿದ ಹಾಗೇ—ಹಗ್ಗದಿಂದಲೊ, ಬಂಬಿನಿಂದಲೊ ಅಥವಾ ಮತ್ತಾವುದರಿಂದಲೊ.''

ಶ್ರೀರಾಮಕೃಷ್ಣರು: "ಈಗ ನೀನು ಇದನ್ನು ಅರ್ಥಮಾಡಿಕೊಂಡಿದೀಯಲ್ಲ ಇದು ಭಗವಂತನ ಕೃಪೆಯಿಂದಲೇ. ಭಗವಂತನ ಕೃಪೆ ದೊರೆಯದೆ ಇತ್ತು ಎಂದರೆ ಸಂಶಯ ನಿವೃತ್ತಿಯಾಗೋದಿಲ್ಲ.

"ಮುಖ್ಯ ವಿಷಯವೇನೆಂದರೆ, ಹೇಗಾದರೂ ಮಾಡಿ ಭಗವಂತನಲ್ಲಿ ಭಕ್ತಿ ಉಂಟಾಗುವಂತೆ, ಪ್ರೇಮ ಉಂಟಾಗುವಂತೆ ಮಾಡಿಕೊಳ್ಳಬೇಕು. ಅನೇಕ ವಿಷಯಗಳ ಸಂಬಂಧವಾಗಿ ತಿಳಿದುಕೊಳ್ಳುವುದರಿಂದ ಆಗೋ ಪ್ರಯೋಜನವೇನು ? ಒಂದು ಮಾರ್ಗ ಹಿಡಿದು ಮುಂದು ಮುಂದುವರಿಯುತ್ತಿದ್ದ ಹಾಗೇ ಭಗವಂತನಲ್ಲಿ ಪ್ರೀತಿ ಉಂಟಾಗಿಬಿಟ್ಟಿತು ಎಂದರೆ, ಕಾರ್ಯ ಕೈಗೂಡಿದ ಹಾಗೆ. ಪ್ರೀತಿ ಉಂಟಾಗಿಬಿಟ್ಟಿತು ಎಂದರೆ ನಿಜವಾಗಿಯೂ ಆತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಅನಂತರ, ಆವಶ್ಯಕವಾಗಿದ್ದ ಪಕ್ಷದಲ್ಲಿ ಆತ ಎಲ್ಲವನ್ನೂ ತಿಳಿಸಿಕೊಟ್ಟುಬಿಡುತ್ತಾನೆ—ಎಲ್ಲಾ ಮಾರ್ಗಗಳ ವಿಷಯವಾಗೂ ತಿಳಿಸಿಕೊಟ್ಟುಬಿಡುತ್ತಾನೆ. ಭಗವಂತನಲ್ಲಿ ಪ್ರೀತಿ ಉಂಟಾಗಿಬಿಟ್ಟರೇ ಎಲ್ಲಾ ಮುಗಿದ ಹಾಗೆ—ಉಳಿದ ವಿಷಯಗಳ ವಿಚಾರದ ಆವಶ್ಯಕತೆಯೇನಿರದು. ಮಾವಿನ ಹಣ್ಣು ತಿನ್ನಲು ಬಂದಿದೀಯೆ ತೋಟಕ್ಕೆ. ಅವನ್ನು ತಿಂದು ಹೋಗು. ಎಷ್ಟು ಕೊಂಬೆಗಳಿವೆ, ಎಷ್ಟು ಎಲೆಗಳಿವೆ, ಇವೇ ಮೊದಲಾದುವುಗಳ ಲೆಕ್ಕಾಚಾರದ ಆವಶ್ಯಕತೆಯೇನಿಲ್ಲ. ಹನುಮಂತನ ಭಾವ ಆರೋಪಿಸಿಕೊಳ್ಳುವುದು ಒಳ್ಳೆಯದು: 'ನನಗೆ ವಾರ, ತಿಥಿ, ನಕ್ಷತ್ರ ಇವುಗಳ ವಿಷಯ ಏನೂ ಗೊತ್ತಿಲ್ಲ; ಕೇವಲ ರಾಮಚಿಂತನೆ ಮಾಡುತ್ತಿದೇನೆ.'"

ಮಾಸ್ಟರ್: "ಈಗ ನನಗೆ ಇಚ್ಛೆಯಾಗುತ್ತಿದೆ, ನನ್ನ ಕೆಲಸಕಾರ್ಯಗಳು ಬಹಳವಾಗಿ ಕಡಮೆಯಾಗಿಬಿಟ್ಟು, ನನ್ನ ಮನಸ್ಸು ಭಗವಂತನ ಕಡೆಗೆ ಅಧಿಕವಾಗಿ ಹರಿದುಹೋಗುವಂತಾಗಲೆಂದು.''

ಶ್ರೀರಾಮಕೃಷ್ಣರು: "ಆಹ! ಅದರಲ್ಲೇನು ಸಂದೇಹ. ಆದರೆ ಜ್ಞಾನಿ ನಿರ್ಲಿಪ್ತನಾಗಿ ಸಂಸಾರದಲ್ಲಿ ಇರಬಲ್ಲ.''

ಮಾಸ್ಟರ್: "ಅದೇನೊ ನಿಜ. ಆದರೆ ನಿರ್ಲಿಪ್ತನಾಗಿ ಇರಬೇಕಾದರೆ ವಿಶೇಷ ಶಕ್ತಿ ಬೇಕಲ್ಲ."

ಶ್ರೀರಾಮಕೃಷ್ಣರು: "ಹೌದು, ಅದು ನಿಜ. ಆದರೆ ಹಿಂದೆ

ನೀನು ಭಗವಂತನನ್ನು ಸಂಸಾರ ಜೀವನಕ್ಕಾಗಿ ಪ್ರಾರ್ಥಿಸಿರಬೇಕು. ಕೃಷ್ಣ ರಾಧೆಯ ಹೃದಯದಲ್ಲಿ ವಾಸವಾಗಿದ್ದ; ಆದರೆ ರಾಧೆಗೆ ಇಚ್ಛೆಯಾಯಿತು ಮನುಷ್ಯರೂಪದಲ್ಲಿ ಆತನೊಡನೆ ಕ್ರೀಡಿಸಬೇಕೆಂದು. ಆದಕ್ಕಾಗೇ ಬೃಂದಾವನ ಲೀಲೆ. ಈಗ ಭಗವಂತನಿಗೆ ಪ್ರಾರ್ಥನೆ ಮಾಡು ನಿನ್ನ ಕೆಲಸ ಕಾರ್ಯಗಳನ್ನ ಕಡಮೆಮಾಡಿಕೊಡುವಂತೆ. ನೀನು ಮಾನಸಿಕವಾಗಿ ತ್ಯಜಿಸಲು ಶಕ್ತನಾದರೇ ಎಲ್ಲಾ ನಿನಗೆ ದೊರೆತುಬಿಡುತ್ತದೆ."

ಮಾಸ್ಟರ್: "ಇದು ಯಾರಿಗೆ ಬಾಹ್ಯ ತ್ಯಾಗ ಸಾಧ್ಯವಿಲ್ಲವೊ ಅವರಿಗೆ ಮಾತ್ರ. ಆದರೆ ಉತ್ತಮ ಮಟ್ಟದವರೆಗೆ ಪೂರ್ಣ ತ್ಯಾಗ—ಮಾನಸಿಕ ತ್ಯಾಗ ಮತ್ತು ಬಾಹ್ಯ ತ್ಯಾಗ."

ಪರಮಹಂಸರು ಸುಮ್ಮನೆ ಕುಳಿತಿದ್ದು ಈಗ ಮತ್ತೆ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು: "ಈಗ ನಾನು ಸ್ವಲ್ಪ ಹೊತ್ತಿನ ಹಿಂದೆ ವೈರಾಗ್ಯದ ವಿಷಯವಾಗಿ ಮಾತಾಡಿದೆನಲ್ಲ ಅದು ನಿನಗೆ ಹೇಗೆ ಹಿಡಿಸಿತು?"

ಮಾಸ್ಟರ್: "ಬಹಳ ಚೆನ್ನಾಗಿ."

ಶ್ರೀರಾಮಕೃಷ್ಣರು: "ವೈರಾಗ್ಯ ಅಂದರೆ ಏನು ಹೇಳು ನೋಡೋಣ?"

ಮಾಸ್ಟರ್: "ವೈರಾಗ್ಯವೆಂದರೆ ಕೇವಲ ಸಂಸಾರದ ಮೇಲಿನ ವಿರಾಗವಲ್ಲ. ಭಗವಂತನ ಕಡೆ ಅನುರಾಗ; ಸಂಸಾರದ ಕಡೆ ವಿರಾಗ."

ಶ್ರೀರಾಮಕೃಷ್ಣರು: "ಹೌದು, ಸರಿಯಾಗಿ ಹೇಳಿದೆ. ಸಂಸಾರಿಗೆ ಹಣದ ಆವಶ್ಯಕತೆಯೇನೊ ಇದೆ, ಆದರೆ ಅದಕ್ಕಾಗಿ ಹಗಲಿರುಳು ಚಿಂತಿಸಬೇಕಾಗಿಲ್ಲ. 'ಯದೃಚ್ಛಾಲಾಭ'— ಇದೇ ಒಳ್ಳೆಯದು. ಸಂಚಯ ಮಾಡಿಡಲು ಬಹಳವಾಗಿ ಶ್ರಮಿಸಬೇಡ. ಯಾರು ಭಗವಂತನಿಗೆ ಮನಸ್ಸು ಪ್ರಾಣಗಳನ್ನ ಅರ್ಪಿಸಿಬಿಟ್ಟಿದಾರೊ, ಯಾರು ಆತನ ಭಕ್ತರೊ, ಶರಣಾಗತರಾಗಿದಾರೊ ಅವರು ಅವುಗಳ ಕಡೆ ಅಷ್ಟೊಂದು ಮನಸ್ಸು ಕೊಡುವುದಿಲ್ಲ. ಸಂಪಾದಿಸಿದ ಹಾಗೆ ಖರ್ಚೂ ಆಗುತ್ತಿರುತ್ತದೆ. ಹಣ ಒಂದು ಕಡೆಯಿಂದ ಬರುತ್ತಿರುತ್ತದೆ, ಇನ್ನೊಂದು ಕಡೆಯಿಂದ ಖರ್ಚಾಗಿಬಿಡುತ್ತಿರುತ್ತದೆ. ಇದಕ್ಕೇ 'ಯದೃಚ್ಛಾಲಾಭ' ಅಂತ ಹೆಸರು. ಹೀಗೆಂದು ಗೀತೆಯಲ್ಲಿ ಹೇಳಿದೆ."

ಶ್ರೀರಾಮಕೃಷ್ಣರು ಹರಿಪದನ ಸಂಬಂಧವಾಗಿ ಮಾತೆತ್ತಿ ಹೇಳುತ್ತಿದಾರೆ: "ಅಂದು ಆತ ಇಲ್ಲಿಗೆ ಬಂದಿದ್ದ."

ಮಾಸ್ಟರ್: "ಆತನಿಗೆ ಹರಿಕಥೆ ಗೊತ್ತಿದೆ. ಪ್ರಹ್ಲಾದ ಚರಿತ್ರೆ, ಶ್ರೀಕೃಷ್ಣ ಜನ್ಮ—ಇವನ್ನ ಬಹಳ ಚೆನ್ನಾಗಿ ಮಾಡಬಲ್ಲ. ಕಂಠ ಬಹಳ ಚೆನ್ನಾಗಿದೆ."

ಶ್ರೀರಾಮಕೃಷ್ಣರು: "ಹಾಗೇನು? ಅಂದು ಆತನ ಕಣ್ಣುಗಳ ಕಡೆ ನೋಡಿದೆ. ಅಂತರ್ದೃಷ್ಟಿ ಇತ್ತು. ಆತನನ್ನು ಕೇಳಿದೆ: 'ನೀನು ಬಹಳವಾಗಿ ಧ್ಯಾನದಲ್ಲಿ ತೊಡಗುತ್ತಿದೀಯೇನು?' ಆಗ ಆತ ಸುಮ್ಮನೆ ತಲೆ ತಗ್ಗಿಸಿ ಕುಳಿತುಕೊಂಡ. ನಾನು ಆತನಿಗೆ ಹೇಳಿದೆ: 'ಬೇಡಪ್ಪ, ಅಷ್ಟೊಂದಾಗಿ ಮಾಡಬೇಡ.'"

ಮುಚ್ಚಂಜೆಯಾಗಿದೆ. ಪರಮಹಂಸರು ಭಗವತಿಯ ನಾಮವನ್ನು ಜಪಿಸುತ್ತ ಆಕೆಯ ಧ್ಯಾನದಲ್ಲಿ ತೊಡಗಿದಾರೆ. ದೇವಾಲಯಗಳಲ್ಲಿ ಮಂಗಳಾರತಿ ನಡೆಯುತ್ತಿದೆ. ಚಂದ್ರ ಉದಯಿಸುತ್ತಿದಾನೆ. ದೇವಾಲಯ, ಪ್ರಾಂಗಣ, ಉದ್ಯಾನವನ ಎಲ್ಲ ಚಂದ್ರನ ಬೆಳಕಿನಿಂದ ಸ್ನಾನಮಾಡುತ್ತಿವೆ. ಗಂಗೆಯಲ್ಲಿದ್ದಿದ್ದ ಲಕ್ಷಾಂತರ ಕಿರುದೆರೆಗಳ ಮೇಲೆ ಚಂದ್ರ ಸುಮ್ಮನೆ ನಲಿದಾಡುತ್ತಿದಾನೆ. ಈಗ ಘಂಟೆ ರಾತ್ರಿ ಎಂಟು. ಪರಮಹಂಸರೊಡನೆ ರಾಖಾಲ ಮತ್ತು ಮಾಸ್ಟರ್ ಕುಳಿತುಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಬಾಬುರಾಮ ಹೇಳುತ್ತಾನೆ: 'ಸಂಸಾರ ಜೀವನ! ಅಬ್ಬಬ್ಬ!'"

ಮಾಸ್ಟರ್: "ಅದು ಅವರಿಂದ ಇವರಿಂದ ಕೇಳಿದ ಮಾತು. ಸಂಸಾರದ ವಿಷಯ ಅವನಿಗೇನು ಗೊತ್ತಿದೆ?"

ಶ್ರೀರಾಮಕೃಷ್ಣರು: "ಹೌದು, ಅದೇನೊ ನಿಜ. ನಿರಂಜನನನ್ನು ನೋಡಿದೀಯಾ? ಆತ ಅತ್ಯಂತ ಸರಳ."

ಮಾಸ್ಟರ್: "ಹೌದು, ನೋಡಿದೇನೆ. ಆತನ ರೂಪೇ ಆಕರ್ಷಿಸಿಬಿಡುತ್ತದೆ. ಆತನ ಕಣ್ಣುಗಳು ಎಷ್ಟು ಭಾವಪ್ರದರ್ಶಕವಾಗಿವೆ!"

ಶ್ರೀರಾಮಕೃಷ್ಣರು: "ಕೇವಲ ಕಣ್ಣುಗಳೇ ಅಲ್ಲ—ಇಡೀ ವ್ಯಕ್ತಿಯೇ. ಮದುವೆಯ ಪ್ರಯತ್ನ ನಡೆಯಿತು. ಆಗ ಆತ ಹೇಳಿದ: 'ನನ್ನನ್ನೇಕೆ ಮುಳುಗಿಸಲು ಪ್ರಯತ್ನಿಸುತ್ತಿದೀರಿ?' (ನಗುತ್ತ) ನೋಡು, ಇದರ ನಿಜಸ್ಥಿತಿ ತಿಳಿಸು. ಜನ ಹೇಳುತ್ತಾರೆ, ಹಗಲೆಲ್ಲಾ ದುಡಿದು

ಹೋಗಿ ಹೆಂಡತಿಯೊಡನೆ ಬೆರೆತರೆ ಬಹಳ ಆನಂದ ಉಂಟಾಗುತ್ತದೆ ಎಂಬು ದಾಗಿ.''

ಮಾಸ್ಟರ್: ''ಹೌದು, ಆ ರೀತಿಯ ಭಾವನೆ ಉಳ್ಳವರಿಗೆ ಅದು ಹಾಗೆ ಆಗುವುದೇನೊ ನಿಜ. (ರಾಖಾಲನ ಕಡೆ ನೋಡಿ ನಗುತ್ತಾನೆ) ಪರೀಕ್ಷೆ ನಡೆಯುತ್ತಿದೆ. ಅಂತರ್ಯವನ್ನ ಬಯಲು ಮಾಡಿಬಿಡುತ್ತದೆ.''

ಶ್ರೀರಾಮಕೃಷ್ಣರು ನಗುತ್ತ: ''ತಾಯಿ ಹೇಳುತ್ತಾಳೆ: 'ನನ್ನ ಮಗನಿಗೆ ಒಂದು ಗೊತ್ತು ಗುರಿ ಮಾಡಿಕೊಟ್ಟುಬಿಟ್ಟೆನೆಂದರೆ ಬದುಕಿಕೊಂಡೆ ನಪ್ಪ! ಆಗ ಆತ ಅದರ ನೆರಳಲ್ಲಿ ಕುಳಿತು ವಿಶ್ರಮಿಸಿಕೊಳ್ಳುತ್ತಾನೆ, ಪ್ರಪಂಚದ ಬೇಗೆಯನ್ನು ತಾಳಲಾರದೆ ಹೋದಾಗ.' ''

ಮಾಸ್ಟರ್: ''ಹೌದು, ನಿಜ. ಆದರೆ ವಿವಿಧ ಮಟ್ಟದ ತಂದೆ ತಾಯಿಗಳಿದಾರೆ. ಮುಕ್ತನಾದ ತಂದೆ ತನ್ನ ಮಕ್ಕಳನ್ನು ಮದುವೆಯ ಬಂಧನದಿಂದ ಕಟ್ಟಹಾಕೋದಿಲ್ಲ. ಹಾಗೇನಾದರೂ ಮಾಡಿದ್ದೇ ಆದರೆ ಆತ ಒಳ್ಳೆ ಮುಕ್ತಪುರುಷನೇ!''

ಅಧರಸೇನ ಕಲ್ಕತ್ತದಿಂದ ಬಂದು ಪರಮಹಂಸರಿಗೆ ಪ್ರಣಾಮ ಮಾಡಿ ಒಂದು ಕಡೆ ಕುಳಿತುಕೊಂಡ. ಈಗ ಕಾಳಿಯನ್ನು ದರ್ಶನಮಾಡಿ ಬರಲು ದೇವಾಲಯದ ಕಡೆ ಹೋಗುತ್ತಿದಾನೆ. ಮಾಸ್ಟರೂ ಆತನನ್ನು ಹಿಂಬಾಲಿಸುತ್ತಿದಾನೆ.

ಮಾಸ್ಟರ್ ಗಂಗೆಯ ಸ್ನಾನಘಟ್ಟದ ಹತ್ತಿರ ಕುಳಿತಿದಾನೆ. ನದಿ ಯಲ್ಲಿ ಉಬ್ಬರ ಈಗತಾನೆ ಆರಂಭವಾಗಿದೆ. ಮಾಸ್ಟರ್ ಏಕಾಂತದಲ್ಲಿ ಕುಳಿತು ನೆನಸಿಕೊಳ್ಳುತ್ತಿದಾನೆ ಪರಮಹಂಸರ ಅದ್ಭುತ ಜೀವನಚರಿತ್ರೆ ಯನ್ನ—ಅವರ ಅದ್ಭುತ ಸಮಾಧಿಯ ಅವಸ್ಥೆ, ಮುಹುರ್ಮುಹುರ್ಭಾವ, ಪ್ರೇಮಾನಂದ, ಅವಿಶ್ರಾಂತ ಭಗವತ್ಸಂಬಂಧವಾದ ಮಾತುಕತೆ, ಭಕ್ತ ರಲ್ಲಿಟ್ಟಿರುವ ಅಕೃತ್ರಿಮ ಪ್ರೀತಿ, ಬಾಲಕನಂಥ ವ್ಯವಹಾರ ಇವೇ ಮೊದ ಲಾದುವುಗಳನ್ನ. ಮತ್ತೆ ಭಾವಿಸುತ್ತಿದಾನೆ, ಇವರು ಯಾರಿರಬೇಕು? ಏನು ಭಗವಂತನೇ ಭಕ್ತರ ಸಲುವಾಗಿ ಇವರ ರೂಪದಲ್ಲಿ ದೇಹಧಾರಣೆ ಮಾಡಿಕೊಂಡು ಬಂದಿದಾನೇನು?

ಅಧರಸೇನ ಮತ್ತು ಮಾಸ್ಟರ್ ಪರಮಹಂಸರ ಕೊಠಡಿಗೆ ಬಂದಿ ದಾರೆ. ಅಧರಸೇನ ಚಿಟ್ಟಗಾಂಗಿಗೆ ತನ್ನ ಕಚೇರಿಯ ಕಾರ್ಯಾರ್ಥವಾಗಿ

ಹೋಗಿದ್ದ. ಅಲ್ಲಿ ಆತ ಚಂದ್ರನಾಥ ಮತ್ತು ಸೀತಾಕುಂಡಗಳಿಗೆ ಯಾತ್ರೆ ಹೋಗಿದ್ದ. ಈಗ ಅವುಗಳ ಸಂಬಂಧವಾಗಿ ವರ್ಣನೆ ಮಾಡುತ್ತಿದಾನೆ.

ಅಧರಸೇನ: "ಸೀತಾಕುಂಡದ ನೀರಿನಿಂದ ಉರಿ 'ಭಗ್, ಭಗ್' ಅಂತ ಏಳುತ್ತಿರುತ್ತದೆ."

ಶ್ರೀರಾಮಕೃಷ್ಣರು: "ಅದು ಹೇಗೆ ಸಾಧ್ಯ?"

ಅಧರಸೇನ: "ನೀರಿನಲ್ಲಿ ರಂಜಕವಿದೆ."

ರಾಮಚಟ್ಟೋಪಾಧ್ಯಾಯ ಈಗ ಕೊಠಡಿಗೆ ಬಂದಿದಾನೆ. ಪರಮಹಂಸರು ಅಧರಸೇನನ ಎದುರು ಆತನನ್ನು ಹೊಗಳುತ್ತಿದಾರೆ.

ಶ್ರೀರಾಮಕೃಷ್ಣರು: "ರಾಮ ಇಲ್ಲಿ ಇರುವುದರಿಂದ ನಮಗೆ ಯಾವ ಯೋಚನೆಯೂ ಇಲ್ಲ. ಹರೀಶ, ಲಾಟು ಇವರನ್ನ ಹುಡುಕಿ-ಗಿಡುಕಿ ಕರೆದು ಕೊಂಡುಬಂದು ಊಟಮಾಡಿಸುತ್ತಾನೆ. ಅವರು ಉದ್ಯಾನವನದ ಯಾವಾವುದೊ ಮೂಲೆಗಳಲ್ಲಿ ಕುಳಿತು ಧ್ಯಾನಮಗ್ನರಾಗಿರುವುದುಂಟು. ಅಲ್ಲಿಗೆಲ್ಲಾ ಹೋಗಿ ಸಕಾಲಕ್ಕೆ ಕರೆದುಕೊಂಡುಬರುತ್ತಾನೆ."

೬ನೆ ಸೆಪ್ಟೆಂಬರ್ ೧೮೮೪, ಭಾದ್ರಪದ ಕೃಷ್ಣ ಪಾಡ್ಯಮಿ, ಶನಿವಾರ.

ಪರಮಹಂಸರು ಅಧರಸೇನನ ಮನೆಯ ಎರಡನೆ ಅಂತಸ್ತಿನಲ್ಲಿರುವ ಬೈಠಕ್‌ಖಾನೆಯಲ್ಲಿ ಕುಳಿತುಕೊಂಡಿದಾರೆ. ಅವರ ಹತ್ತಿರ ನರೇಂದ್ರ, ಮುಖ್ಯೋಪಾಧ್ಯಾಯ ಸೋದರರು, ಭವನಾಥ, ಮಾಸ್ಟರ್, ಚುನಿಲಾಲ, ಹಾಜರಾ ಇವರೇ ಮೊದಲಾದ ಭಕ್ತರು ಕುಳಿತಿದಾರೆ. ಘಂಟೆ ಅಪರಾಹ್ನ ಮೂರು.

ನರೇಂದ್ರನ ಹಾಡುಗಾರಿಕೆಗಾಗಿ ವ್ಯವಸ್ಥೆ ನಡೆಯುತ್ತಿದೆ. ಆತ ತಂಬೂರಿಯನ್ನು ಶ್ರುತಿಮಾಡುತ್ತಿದ್ದ ಹಾಗೇ ತಂತಿಯೊಂದು ಕಿತ್ತುಹೋಗಿ ಬಿಟ್ಟಿತು. ಪರಮಹಂಸರು ಕೂಗಿಕೊಂಡರು: "ಓ! ಏನು ಮಾಡಿ ಬಿಟ್ಟೆಯೋ?" ನರೇಂದ್ರ ಈಗ ತಬಲವನ್ನು ಶ್ರುತಿಮಾಡುತ್ತಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ: "ನಿನ್ನ ತಬಲ ಕೆನ್ನೆಗೆ ಏಟು ಬಿದ್ದ ಶಬ್ದ ಕೊಡುತ್ತಿದೆ!"

ನರೇಂದ್ರ ಕೀರ್ತನೆಯ ಮಾತೆತ್ತಿ ಹೇಳುತ್ತಿದಾನೆ: "ಕೀರ್ತನೆಯಲ್ಲಿ ತಾಳಬದ್ಧತೆ ಇಲ್ಲ. ಅದಕ್ಕಾಗಿಯೇ ಅದು ಅಷ್ಟೊಂದು ಜನಪ್ರಿಯವಾಗಿರುವುದು. ಜನ ಅದನ್ನು ಬಹಳವಾಗಿ ಪ್ರೀತಿಸುತ್ತಾರೆ."

ಶ್ರೀರಾಮಕೃಷ್ಣರು: "ಏನು ಬುದ್ಧಿಯಿಲ್ಲದ ಮಾತು! ಅದರಲ್ಲಿ ಕರುಣರಸ ತುಂಬಿರುವುದರಿಂದ ಜನ ಪ್ರೀತಿಸುತ್ತಾರೆ."

ನರೇಂದ್ರ ಹಾಡುತ್ತಿದಾನೆ:

ಬಲುಮಧುರವೊ ನಿನ್ನ ಹೆಸರು
ಕಿವಿಗೆ ಸುಧೆಯು ಕರೆವುದು! . . . (ಉ. ೪೬೭)

ಆತ ಮತ್ತೆ ಹಾಡುತ್ತಿದಾನೆ:

ಇನ್ನೆಷ್ಟು ದಿನ ನಾನು ಬರಿಯ ವಿಫಲತೆಯಲ್ಲಿ
ತೊಳಲಬೇಕೋ . . . (ಉ. ೭೩೨)

ಶ್ರೀರಾಮಕೃಷ್ಣರು ಹಾಜರಾನಿಗೆ ನಗುತ್ತ: "ಈತ ನನ್ನ ಮುಂದೆ ಹಾಡಿದ ಮೊದಲನೆ ಹಾಡೇ ಇದು."

ನರೇಂದ್ರ ಇನ್ನೂ ಒಂದೆರಡು ಹಾಡುಗಳನ್ನು ಹಾಡಿದ. ಈಗ ವೈಷ್ಣವಚರಣ ಹಾಡುತ್ತಿದಾನೆ:

ನೀ ಮಥುರೆಯೊಳು ರಾಜವೈಭವದಿ ಮುಳುಗಿರಲು
ನಾವು ನಿನ್ನನು ಈಗ ಅರಿವುದೆಂತು? . . . (ಉ. ೫೪೩)

ಶ್ರೀರಾಮಕೃಷ್ಣರು: "'ಹರಿನಾಮವನು ನುಡಿಸು ಓ ನನ್ನ ವೀಣೆ' ಎಂಬುದು ಒಮ್ಮೆ ನಡೆಯಲಿ."

ವೈಷ್ಣವಚರಣ ಹಾಡುತ್ತಿದಾನೆ:

ಹರಿನಾಮವನು ನುಡಿಸು ಓ ನನ್ನ ವೀಣೆ
ಹರಿಚರಣವಲ್ಲದೆಯೆ ಪರಮಪದ ಕಾಣೆ. . . . (ಉ. ೫೩೯)

ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಪರಮಹಂಸರು ಭಾವಾವಿಷ್ಟರಾಗಿಬಿಡುತ್ತಿದಾರೆ. "ಆಹ! ಆಹ!" ಎಂದು ಹೇಳುತ್ತ ಹೇಳುತ್ತ ಇದ್ದ ಹಾಗೆ ಸಮಾಧಿಸ್ಥರಾಗಿಬಿಟ್ಟರು. ಭಕ್ತರು ಅವರ ಸುತ್ತ ಕುಳಿತು ಅವರನ್ನು ಏಕದೃಷ್ಟಿಯಿಂದ ನೋಡುತ್ತಿದಾರೆ. ಕೊಠಡಿ ಜನರಿಂದ ಕಿಕ್ಕಿರಿದು ತುಂಬಿದೆ.

ಗಾಯಕ ಮತ್ತೆ ಹಾಡುತ್ತಿದಾನೆ. ಆತ ಭಗವತ್ಪ್ರೇಮದ ವಿಷಯವಾಗಿ ಆಶುಕವಿತೆಗಳನ್ನು ಮಾಡಿದಂತೆಲ್ಲ ಪರಮಹಂಸರು ಎದ್ದು ನಿಂತು ನರ್ತಿಸುತ್ತಿದಾರೆ. ಈಗ ತಾವೇ ಕೆಲವು ಆಶುಕವಿತೆಗಳನ್ನು ಮಾಡಿ ಕೈಗಳೆರಡನ್ನೂ ಮೇಲಕ್ಕೆ ಎತ್ತಿ ನರ್ತಿಸುತ್ತಿದಾರೆ. ಹಾಗೇ ನರ್ತಿಸುತ್ತಿದ್ದ ಹಾಗೆ ಸಮಾಧಿಸ್ಥರಾಗಿಬಿಟ್ಟು ಮಂಡಿಯೂರಿ ಕುಳಿತು ತಲೆಯನ್ನು ಒರಗು

ದಿಂಬಿನ ಮೇಲೆ ಇಟ್ಟುಕೊಂಡಿದಾರೆ. ಗಾಯಕ ಭಾವೋನ್ಮತ್ತನಾಗಿ ಹೊಸ ಹೊಸ ಹಾಡುಗಳನ್ನು ಹಾಡುತ್ತಿದಾನೆ. ಪರಮಹಂಸರು ಈಗ ಮತ್ತೆ ಎದ್ದು ನಿಂತು ಆಶುಕವಿತೆಗಳನ್ನು ಮಾಡುತ್ತ ನರ್ತಿಸುತ್ತಿದಾರೆ. ಪರಮ-ಹಂಸರ ಈ ಅಪೂರ್ವ ನೃತ್ಯ ನೋಡಿ ನರೇಂದ್ರನೇ ಮೊದಲಾದವರಿಗೆ ಸುಮ್ಮನೆ ಕುಳಿತಿರಲಾಗಲಿಲ್ಲ. ಎಲ್ಲರೂ ಪರಮಹಂಸರ ಜೊತೆಗೆ ಸೇರಿ ನರ್ತಿಸುತ್ತಿದಾರೆ. ಪರಮಹಂಸರು ನರ್ತಿಸುತ್ತ ನರ್ತಿಸುತ್ತ ಅಡಿಗಡಿಗೆ ಸಮಾಧಿಸ್ಥರಾಗುತ್ತಿದಾರೆ. ಈಗ ಗಾಢಸಮಾಧಿಸ್ಥರಾಗಿಬಿಟ್ಟಿದಾರೆ—ಅಂತರ್ದಶೆ ಬಂದಿದೆ. ಬಾಯಲ್ಲಿ ಒಂದು ಮಾತೂ ಇಲ್ಲ. ಇಡೀ ಶರೀರ ಸ್ಥಿರವಾಗಿಬಿಟ್ಟಿದೆ. ಭಕ್ತರು ಅವರ ಸುತ್ತ ಸುತ್ತುತ್ತ ಸುತ್ತುತ್ತ ನರ್ತಿಸುತ್ತಿದಾರೆ. ಈಗ ಅವರಿಗೆ ಅರ್ಧ ಬಾಹ್ಯದಶೆ ಬಂದಿದೆ—ಚೈತನ್ಯದೇವನಿಗೆ ಉಂಟಾಗುತ್ತಿತ್ತಲ್ಲ, ಹಾಗೆ. ಸಿಂಹಪರಾಕ್ರಮದಿಂದ ನರ್ತಿಸುತ್ತಿದಾರೆ. ಇನ್ನೂ ಅವರ ಬಾಯಿಂದ ಯಾವ ಮಾತೂ ಹೊರಡುತ್ತಿಲ್ಲ. ಪ್ರೇಮದಿಂದ ಉನ್ಮತ್ತರಾಗಿದಾರೆ. ಈಗ ಕಿಂಚಿತ್ ಪ್ರಕೃತಿಸ್ಥರಾಗಿದಾರೆ. ಆಶುಕವಿತೆ ಮಾಡುತ್ತ ಹಾಡುತ್ತಿದಾರೆ. ಇಂದು ಅಧರಸೇನನ ಬೈಠಕ್‌ಖಾನೆ ಶ್ರೀವಾಸನ[1] ಪ್ರಾಂಗಣವಾಗಿಬಿಟ್ಟಿದೆ. ಹರಿನಾಮದ ಘೋಷ ಕೇಳಿ ರಸ್ತೆಯಲ್ಲಿ ಅನೇಕ ಜನ ಗುಂಪುಕಟ್ಟಿಬಿಟ್ಟಿದಾರೆ.

ಭಕ್ತರೊಡನೆ ಬಹಳ ಹೊತ್ತಿನವರೆಗೆ ನರ್ತನ ಮಾಡಿ ಈಗ ಪರಮಹಂಸರು ಕೆಳಗೆ ಕುಳಿತುಕೊಂಡಿದಾರೆ—ಇನ್ನೂ ಭಾವಾವಿಷ್ಟರಾಗೇ. ಆ ಅವಸ್ಥೆಯಲ್ಲೆ ನರೇಂದ್ರನಿಗೆ ಹೇಳುತ್ತಿದಾರೆ: "ಆ ಹಾಡು—'ನನ್ನನೂ ಉನ್ಮತ್ತನಾಗಿಸೆಲೆ ತಾಯೆ,' ಎಂಬುದು."

ನರೇಂದ್ರ ಹಾಡುತ್ತಿದಾನೆ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ! . . . (ಉ. ೧೪)

ಶ್ರೀರಾಮಕೃಷ್ಣರು: "ಅದು—'ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು' ಎಂಬ ಹಾಡು."

ನರೇಂದ್ರ ಹಾಡುತ್ತಿದಾನೆ:

ಚಿದಾನಂದ ಸಿಂಧುವಿನಲಿ ಪ್ರೇಮಾನಂದದಲೆಗಳು
ಮಹಾಭಾವ ರಾಸಲೀಲ ಮಾಧುರ್ಯದೊಳಾಡಿವೆ! . . .

1. ಶ್ರೀವಾಸ ಶ್ರೀ ಚೈತನ್ಯನ ಒಡನಾಡಿ.

ಶ್ರೀರಾಮಕೃಷ್ಣರು: "ಅದನ್ನು ಕೂಡ—'ಉದಯಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು' ಎಂಬ ಹಾಡನ್ನ. ಬಹುಶಃ ಅದು ತುಂಬ ದೊಡ್ಡದು ಅಂತ ಕಾಣುತ್ತೆ, ಅಲ್ಲವೆ? ಒಳ್ಳೇದು, ಮೆಲ್ಲಗೆ ಹಾಡು."

ನರೇಂದ್ರ ಹಾಡುತ್ತಿದಾನೆ:

ಉದಯಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು
ಪ್ರೇಮಸಿಂಧು ಉಕ್ಕಿ ಹರಿದು ಲೋಕಗಳೇ ನಾಂದು!...

ಶ್ರೀರಾಮಕೃಷ್ಣರು: "ಇದನ್ನ ಹಾಡೋದಿಲ್ಲವೆ— 'ಹರಿರಸಮದಿರೆಯ ಕುಡಿದು ನಿರಂತರ' ಎಂಬುದನ್ನ?"

ನರೇಂದ್ರ ಹಾಡುತ್ತಿದಾನೆ:

ಹರಿರಸಮದಿರೆಯ ಕುಡಿದು ನಿರಂತರ
ಉನ್ಮತ್ತನ ತೆರ ನೀನಿರುತ . . . (ಉ. ೪೭೯)

ಪರಮಹಂಸರು ಆಶುಕವಿತೆ ಮಾಡುತ್ತಿದಾರೆ:

ಪ್ರೇಮಮತ್ತರಾಗಿ ಹರಿಯ, ಬಾಷ್ಪದೊಡನೆ ನೆನೆಯಿರೋ!

ಮತ್ತೆ:

ಭಾವಮತ್ತರಾಗಿ ಹರಿಯ, ಬಾಷ್ಪದೊಡನೆ ನೆನೆಯಿರೋ!

ಪರಮಹಂಸರು ಮತ್ತು ಭಕ್ತರು ಈಗ ವಿಶ್ರಮಿಸಿಕೊಳ್ಳುತ್ತಿದಾರೆ. ನರೇಂದ್ರ ಮೆಲ್ಲಗೆ ಪರಮಹಂಸರನ್ನು ಕೇಳುತ್ತಿದಾನೆ: "ದಯವಿಟ್ಟು ನೀವು ಆ ಹಾಡನ್ನು ಹಾಡುತ್ತೀರಾ?"

ಶ್ರೀರಾಮಕೃಷ್ಣರು: "ನನ್ನ ಗಂಟಲು ಸ್ವಲ್ಪ ಕಟ್ಟಿಕೊಂಡು ಬಿಟ್ಟಿದೆ."

ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಈಗ ನರೇಂದ್ರನನ್ನು ಕೇಳುತ್ತಿದಾರೆ: "ಯಾವುದನ್ನ?"

ನರೇಂದ್ರ: "'ಸಕಲ ಭುವನ ಮನ ದೀಪಕನ' ಎಂಬುದನ್ನ."

ಶ್ರೀರಾಮಕೃಷ್ಣರು ಮೆಲ್ಲಮೆಲ್ಲಗೆ ಹಾಡುತ್ತಿದಾರೆ:

ಕರೆದುತಂದರಾರಿಲ್ಲಿಗೆ ಗೌರನ
ಸಕಲ ಭುವನ ಮನ ದೀಪಕನ
ಕಾಳಮೇಘದಲಿ ಮಿಂಚೆಸೆವಂದದ
ಅಲಕಾವೃತ ಮುಖಮಂಡಲನ!...

ಈಗ ಪರಮಹಂಸರು ಗೋಪಿಯರ ಕೃಷ್ಣವಿರಹದ ಸಂಬಂಧವಾಗಿ ಹಾಡುತ್ತಿದಾರೆ:

ಇನ್ನೂ ಕಾಣೆನು ಕೃಷ್ಣನ, ನಾ-
ನಿನ್ನೂ ಕಾಣೆನು ಸಖಿಯೇ, . . .

ಈಗ ಹಾಡುವುದು ಮುಗಿಯಿತು. ಪರಮಹಂಸರು ಭಕ್ತರೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ನಗುತ್ತ: "ಹಾಜರಾ ನರ್ತಿಸಿದ."

ನರೇಂದ್ರ: "ಹೌದು, ಸ್ವಲ್ಪ."

ಶ್ರೀರಾಮಕೃಷ್ಣರು: "ಏನು, ಸ್ವಲ್ಪವೇ?"

ನರೇಂದ್ರ: "ಹೌದು, ಆತನೊಡನೆ ಆತನ ಹೊಟ್ಟೆಯೂ ನರ್ತಿಸಿತು." (ಎಲ್ಲರೂ ನಗುತ್ತಿದಾರೆ.)

ಪಂಡಿತ ಶಶಧರ ಯಾವ ಮನೆಯಲ್ಲಿ ಇಳಿದುಕೊಂಡಿದ್ದನೊ ಆ ಮನೆಗೆ ಪರಮಹಂಸರನ್ನು ಆಮಂತ್ರಿಸುವ ಮಾತುಕತೆ ನಡೆಯುತ್ತಿದೆ.

ಶ್ರೀರಾಮಕೃಷ್ಣರು: "ಕೇಳಿದೇನೆ ಆತನ ಸ್ವಭಾವ ಒಳ್ಳೆಯದಲ್ಲ ಎಂದು—ಲುಚ್ಚ ಮನುಷ್ಯ."

ನರೇಂದ್ರ: "ಅದಕ್ಕೇ ಅಂದು ನೀವು ಆತ ಮುಟ್ಟಿದ ಲೋಟದಿಂದ ನೀರು ಕುಡಿಯಲಿಲ್ಲ. ನಿಮಗೆ ಹೇಗೆ ಗೊತ್ತಾಯಿತು ಆತನ ಸ್ವಭಾವ ಸರಿಯಾಗಿಲ್ಲ ಎಂದು?"

ಶ್ರೀರಾಮಕೃಷ್ಣರು ನಗುತ್ತ: "ಹಾಜರಾನಿಗೆ ಅದೇ ತರದ ಘಟನೆ ಇನ್ನೊಂದು ಗೊತ್ತಿದೆ. ಅದು ಸಿಹೋರಿನಲ್ಲಿ ಹೃದೆಯ ಮನೆಯಲ್ಲಿ ನಡೆಯಿತು."

ಹಾಜರಾ: "ಆತ ಒಬ್ಬ ವೈಷ್ಣವ. ನನ್ನೊಡನೆ ಇವರನ್ನು [ಶ್ರೀರಾಮಕೃಷ್ಣರನ್ನು] ದರ್ಶನ ಮಾಡಲು ಬಂದಿದ್ದ. ಆತ ಬಂದು ಕುಳಿತುಕೊಳ್ಳುವುದೇ ತಡ ಇವರು ಆತನ ಕಡೆ ಬೆನ್ನು ಹಾಕಿ ಕುಳಿತುಕೊಂಡುಬಿಟ್ಟರು."

ಶ್ರೀರಾಮಕೃಷ್ಣರು: "ಆತನ ಶೀಲ ಸರಿಯಾಗಿಲ್ಲವೆಂದು ಅನಂತರ ತಿಳಿದು ಬಂತು. (ನರೇಂದ್ರನಿಗೆ) ಹಿಂದೆ ಹೇಳುತ್ತಿದ್ದೆಯಲ್ಲ ನನ್ನ ಈ ಅವಸ್ಥೆಗಳೆಲ್ಲ ಮಾನಸಿಕ ಭ್ರಾಂತಿ ಅಂತ."

ನರೇಂದ್ರ: "ಆಗ ನನಗೆ ಅದು ಹೇಗೆ ಗೊತ್ತಾಗಬೇಕು? ಈಗ ನನಗೆ ಗೊತ್ತಾಗುತ್ತಿದೆ ಅವೆಲ್ಲಾ ಸರಿ ಎಂದು."

ಪರಮಹಂಸರಿಗೆ ಮತ್ತು ಭಕ್ತರಿಗೆ ಅಧರಸೇನ ಒಳ್ಳೆ ಔತಣ ಏರ್ಪಡಿಸಿದಾನೆ. ಈಗ ಆತ ಊಟಕ್ಕೆ ಏಳಿಸುತ್ತಿದಾನೆ. ಪರಮಹಂಸರು ಮುಖ್ಯೋಪಾಧ್ಯಾಯ ಸೋದರರಿಗೆ ಹೇಳುತ್ತಿದಾರೆ: "ಏನು, ನೀವು ಊಟಕ್ಕೆ ಏಳೋದಿಲ್ಲ?" ಅವರು ವಿನಯದಿಂದ ಹೇಳುತ್ತಿದಾರೆ: "ದಯವಿಟ್ಟು ಕ್ಷಮಿಸಿ."

ಶ್ರೀರಾಮಕೃಷ್ಣರು ನಗುತ್ತ: "ಇವರು ಎಲ್ಲವನ್ನೂ ಮಾಡುತ್ತಿದಾರೆ, ಕೇವಲ ಇದೊಂದರಲ್ಲಿ ಮಾತ್ರ ಸಂಕೋಚ."

ಅಧರಸೇನ ಕೀಳು ಜಾತಿಗೆ ಸೇರಿದವನು. ಆದ್ದರಿಂದ ಪರಮಹಂಸರ ಬ್ರಾಹ್ಮಣ ಭಕ್ತರು ಆತನ ಮನೆಯಲ್ಲಿ ಊಟಮಾಡಲು ಮೊದ ಮೊದಲು ಹಿಂಜರಿಯುತ್ತಿದ್ದರು. ಪರಮಹಂಸರೇ ಅಲ್ಲಿ ಆಗಾಗ ಊಟಮಾಡುತ್ತಿರುವುದನ್ನು ನೋಡಿ ಅವರು ಕೊನೆಗೆ ತಮ್ಮ ಮನಸ್ಸನ್ನು ಬದಲಾಯಿಸಿದರು.

ಘಂಟೆ ರಾತ್ರಿ ಒಂಬತ್ತು. ಪರಮಹಂಸರು ಭಕ್ತರೊಡನೆ ಬೈಠಕ್ ಖಾನೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದಾರೆ. ಅವರು ದಕ್ಷಿಣೇಶ್ವರಕ್ಕೆ ಹಿಂದಿರುಗಲು ವ್ಯವಸ್ಥೆ ನಡೆಯುತ್ತಿದೆ.

ನಾಳೆ ದಿನ ಪರಮಹಂಸರನ್ನು ಆನಂದಪಡಿಸಲು ಮುಖ್ಯೋಪಾಧ್ಯಾಯ ಸೋದರರು ದಕ್ಷಿಣೇಶ್ವರದಲ್ಲಿ ಕೀರ್ತನೆ ನಡೆಯುವಂತೆ ಏರ್ಪಾಡು ಮಾಡಿದಾರೆ. ಶ್ಯಾಮದಾಸ ಕೀರ್ತನೆ ಮಾಡುತ್ತಾನೆ. ರಾಮ ಆತನಿಂದ ಕೀರ್ತನೆ ಕಲಿಯುತ್ತಿದಾನೆ. ಪರಮಹಂಸರು ನರೇಂದ್ರನಿಗೆ ಹೇಳುತ್ತಿದಾರೆ, ಮರುದಿನ ಬಂದು ಕೀರ್ತನೆ ಕೇಳಬೇಕೆಂದು.

ಶ್ರೀರಾಮಕೃಷ್ಣರು ನರೇಂದ್ರನಿಗೆ: "ನಾಳೆ ಬಾ—ಏನು?"

ನರೇಂದ್ರ: "ಪ್ರಯತ್ನ ಮಾಡುತ್ತೇನೆ."

ಶ್ರೀರಾಮಕೃಷ್ಣರು: "ಅಲ್ಲೇ ಸ್ನಾನ-ಗೀನ ಮಾಡಿ ಊಟಮಾಡುವೆಯಂತೆ. (ಮಾಸ್ಟರನ್ನು ತೋರಿಸಿ) ಈತನೂ ಅಲ್ಲಿಗೇ ಊಟಕ್ಕೆ ಬರುತ್ತಾನೆ. (ಮಾಸ್ಟರಿಗೆ) ಈಗ ನಿನಗೆ ಗುಣವಾಗಿದೆಯೆ? ಈಗೇನು ಪಥ್ಯ-ಗಿಥ್ಯ ಇಲ್ಲ ತಾನೆ?"

ಮಾಸ್ಟರ್: "ಇಲ್ಲ. ಬರುತ್ತೇನೆ."

ನಿತ್ಯಗೋಪಾಲ ಬೃಂದಾವನದಲ್ಲಿದಾನೆ. ಚುನಿಲಾಲ ಬೃಂದಾವನ

ದಿಂದ ಹಿಂದಿರುಗಿಬಂದು ಈಗ ಕೆಲವು ದಿನ ಮಾತ್ರ ಆಗಿವೆ. ಪರಮಹಂಸರು ನಿತ್ಯಗೋಪಾಲನ ಸುದ್ದಿ ಸಮಾಚಾರವನ್ನ ಆತನಿಂದ ಕೇಳಿ ತಿಳಿದುಕೊಳ್ಳುತ್ತಿದಾರೆ.

ಪರಮಹಂಸರು ಇನ್ನೇನು ದಕ್ಷಿಣೇಶ್ವರಕ್ಕೆ ಹೊರಡಲಿದಾರೆ. ಮಾಸ್ಟರ್ ಅವರ ಪಾದಗಳ ಮೇಲೆ ತನ್ನ ತಲೆಯನ್ನಿಟ್ಟು ಸಾಷ್ಟಾಂಗ ಪ್ರಣಾಮ ಮಾಡುತ್ತಿದಾನೆ. ಪರಮಹಂಸರು ಪ್ರೀತಿಯಿಂದ ಆತನಿಗೆ ಹೇಳುತ್ತಿದಾರೆ: "ಹಾಗಾದರೆ ಅಲ್ಲಿಗೆ ಬಾ. ನರೇಂದ್ರ! ಭವನಾಥ! ನಾಳೆ ಅಲ್ಲಿಗೆ ಬನ್ನಿ." ಈಗ ಅನೇಕ ಮಂದಿ ಭಕ್ತರೊಡನೆ ದಕ್ಷಿಣೇಶ್ವರಕ್ಕೆ ಹಿಂದಿರುಗುತ್ತಿದಾರೆ.

ಉಳಿದ ಭಕ್ತರು ಪರಮಹಂಸರ ಅಪೂರ್ವ ನರ್ತನ ಮತ್ತು ಗೀತಗಳನ್ನು ಸ್ಮರಿಸಿಕೊಳ್ಳುತ್ತ ಸುಮ್ಮನೆ ನಗುತ್ತಿದ್ದ ಬೆಳ್ದಿಂಗಳಿನಲ್ಲಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಿದಾರೆ.



## ೨೭

# ದಕ್ಷಿಣೇಶ್ವರದಲ್ಲಿ

೭ನೆ ಸೆಪ್ಟೆಂಬರ್ ೧೮೮೩, ಭಾದ್ರಪದ ಕೃಷ್ಣ ಬಿದಿಗೆ, ಭಾನುವಾರ.

ಘಂಟೆ ಬೆಳಗಿನ ಹನ್ನೊಂದು. ಪರಮಹಂಸರು ದಕ್ಷಿಣೇಶ್ವರದಲ್ಲಿ ತಮ್ಮ ಕೊಠಡಿಯೊಳಗೆ ಕುಳಿತುಕೊಂಡಿದಾರೆ. ಅವರಿನ್ನೂ ತಮ್ಮ ಮಧ್ಯಾಹ್ನದ ಊಟ ಮುಗಿಸಿಲ್ಲ.

ಇಂದು ಇಲ್ಲಿ ಶ್ಯಾಮದಾಸನ ಕೀರ್ತನೆ ನಡೆಯಲಿದೆ. ಬಾಬುರಾಮ, ಮಾಸ್ಟರ್, ಮನಮೋಹನ, ಭವನಾಥ, ಕಿಶೋರಿ, ಚುನಿಲಾಲ, ಹರಿಪದ, ಮುಖ್ಯೋಪಾಧ್ಯಾಯ ಸೋದರರು, ರಾಮ, ಸುರೇಂದ್ರ, ತಾರಕ, ನಿರಂಜನ ಮತ್ತು ಇನ್ನೂ ಕೆಲವರು ಬಂದಿದಾರೆ. ಲಾಟು, ಹರೀಶ ಮತ್ತು ಹಾಜರಾ ಪರಮಹಂಸರೊಡನೇ ಇದಾರೆ.

ಶ್ರೀರಾಮಕೃಷ್ಣರಿಗೆ ಮಾಸ್ಟರ್ ಪ್ರಣಾಮಮಾಡಿದಾಗ ಅವರು ಕೇಳಿದರು: "ನರೇಂದ್ರ ಎಲ್ಲಿ? ಏನು ಆತ ಬರುತ್ತಿಲ್ಲವೆ?" ಮಾಸ್ಟರ್ ಉತ್ತರವಿತ್ತ, ಆತನಿಗೆ ಬರಲಾಗಲಿಲ್ಲ ಎಂದು.

ಒಬ್ಬ ಬ್ರಾಹ್ಮಣಭಕ್ತ ರಾಮಪ್ರಸಾದನ ಹಾಡುಗಳನ್ನು ಪರಮಹಂಸರಿಗೆ ಒಂದು ಪುಸ್ತಕದಿಂದ ಆಗಾಗ ಓದಿ ಹೇಳುತ್ತಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ, ಮುಂದುವರಿಸುವಂತೆ. ಆ ಬ್ರಾಹ್ಮಣ ಒಂದು ಹಾಡನ್ನು ಓದಿದ. ಅದರ ಮೊದಲನೆ ಚರಣ: "ಹೇ ತಾಯೆ, ವಸನ ಧರಿಸು."

ಶ್ರೀರಾಮಕೃಷ್ಣರು: "ದಯವಿಟ್ಟು ನಿಲ್ಲಿಸು! ಇಂಥವು ಯಾವ ಕೆಲಸಕ್ಕೂ ಬಾರದವು. ಭಕ್ತಿಪ್ರದ ಹಾಡುಗಳನ್ನು ಓದು."

ಆ ಬ್ರಾಹ್ಮಣ ಓದುತ್ತಿದಾನೆ:

> ತಾಯಿ ದುರ್ಗೆಯ ನಿಜವನರಿಯುವ ಧೀರರಾರೋ ಜಗದೊಳು!
> ಆರು ದರುಶನ ವೇದ ಶಾಸ್ತ್ರ ಪುರಾಣವರಿಯದು ಅವಳನು. . . .

(ಉ. ೧೩೦)

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿನ್ನೆ ಅಧರಸೇನನ ಮನೆಯಲ್ಲಿ ಭಾವಾವಸ್ಥೆಯಲ್ಲಿ ಒಂದು ಕಡೆಗೇ ಹೆಚ್ಚು ಭಾರ ಹಾಕಿ ಬಹಳ ಹೊತ್ತು

ನಿಂತುಕೊಂಡಿದ್ದರಿಂದ ಕಾಲು ನೋಯುತ್ತಿದೆ; ಅದಕ್ಕಾಗಿ ಇನ್ನು ಮೇಲೆ ಭಕ್ತರ ಮನೆಗೆ ಹೋದಾಗಲೆಲ್ಲ ಬಾಬುರಾಮನನ್ನು ಕರೆದುಕೊಂಡು ಹೋಗ ಬೇಕು ಅಂತ ಮಾಡಿಕೊಂಡಿದ್ದೇನೆ. ಆತ ಒಬ್ಬ ಸಹಾನುಭೂತಿ ಜೀವ.''

ಹೀಗೆಂದು ಹೇಳಿ ಪರಮಹಂಸರು ಹಾಡುತ್ತಿದಾರೆ:

ಎಂತೊರೆಯಲಿ ಸಖಿ ನನ್ನೆದೆಯೊಳಗನು ?
ಬಾಯಿಗೆ ಇಕ್ಕಿದೊಲಿದೆ ಬೀಗ! . . . ( ಉ. ೧೨ )

ಶ್ರೀರಾಮಕೃಷ್ಣರು: ''ಬಾವುಲರು ಈ ವಿಧದ ಹಾಡು ಹಾಡುತ್ತಾರೆ. ಅವರು ಇನ್ನೊಂದು ವಿಧದ ಹಾಡನ್ನೂ ಹಾಡುತ್ತಾರೆ:

ಭಿಕ್ಷಾಪಾತ್ರೆಯ ಹಿಡಿದು ಸುತ್ತುತಿಹ
ಓ ಪರಿವ್ರಾಜಕ, ನಿಲ್ಲು ಒಂದು ಚಣ ಬಾಗಿಲಲಿ.
ನಿನ್ನ ಕಾಂತಿಯುತ ಮುಖಮಂಡಲವನು
ನೋಡುವೆನೊಮ್ಮೆಗೆ ಸನಿಹದಲಿ.

''ಶಾಕ್ತ ಮತದ ಪ್ರಕಾರ ಸಿದ್ಧಪುರುಷನಿಗೆ 'ಕೌಲ್' ಅಂತ ಹೆಸರು, ವೇದಾಂತದ ಪ್ರಕಾರ 'ಪರಮಹಂಸ' ಅಂತ. ಆತನನ್ನೇ ಬಾವುಲರು 'ಸ್ಹಾಯ್' ಅಂತ ಕರೆಯುತ್ತಾರೆ. ಅವರು ಹೇಳುತ್ತಾರೆ: '''ಸ್ಹಾಯ್'' ಗಿಂತ ದೊಡ್ಡವರು ಬೇರೆ ಯಾರೂ ಇಲ್ಲ.' ಬಾವುಲ ಸಿದ್ಧಪುರುಷನಾದ ಎಂದರೆ ಒಬ್ಬ 'ಸ್ಹಾಯ್' ಆಗಿಬಿಡುತ್ತಾನೆ. ಆಗ ಎಲ್ಲ ಅಭೇದ. ಕೊರ ಳಿನ ಮಾಲೆಯ ಅರ್ಧ ಭಾಗ ಗೋವಿನ ಮೂಳೆಯ ಮಣಿಗಳಿಂದ ಕೂಡಿ ರುತ್ತದೆ, ಇನ್ನರ್ಧ ಭಾಗ ತುಳಸಿ ಮಣಿಗಳಿಂದ. ಆತ ತುತ್ತತುದಿಯ ಸತ್ಯ ವನ್ನು ಕರೆಯುತ್ತಾನೆ 'ಅಲೇಖ್' ಅಂದರೆ 'ಅವಿಜ್ಞೇಯ' ಎಂದು. ವೇದ ಹೇಳುತ್ತದೆ 'ಬ್ರಹ್ಮ' ಅಂತ; ಬಾವುಲರು ಹೇಳುತ್ತಾರೆ 'ಅಲೇಖ್' ಅಂತ. ಜೀವಗಳ ಸಂಬಂಧವಾಗಿ ಹೇಳುತ್ತಾರೆ: 'ಅಲೇಖದಿಂದ ಬರು ತ್ತವೆ, ಅಲೇಖಕ್ಕೆ ಹಿಂದಿರುಗುತ್ತವೆ.' ಅಂದರೆ, ಜೀವಾತ್ಮ ಅವ್ಯಕ್ತದಿಂದ ಬಂದು ಮತ್ತೆ ಅವ್ಯಕ್ತದಲ್ಲಿ ಲಯವಾಗುತ್ತದೆ. ಬಾವುಲರು ಕೇಳುತ್ತಾರೆ: 'ಹವದ ವಿಷಯ ನಿನಗೆ ಗೊತ್ತೆ?' ಅಂದರೆ, ಕುಲಕುಂಡಲಿನಿ ಜಾಗೃತಿ ಗೊಂಡಾಗ ಇಡಾ, ಪಿಂಗಳಾ, ಸುಷುಮ್ನಾ ಇವುಗಳ ಮೂಲಕ ಹರಿಯು ತ್ತದೆಯಲ್ಲ ಮಹಾವಾಯು ಅದರ ವಿಷಯ. ಅವರು ಮತ್ತೆ ಕೇಳುತ್ತಾರೆ: 'ನೀನು ಯಾವ ಅಂತಸ್ತಿನಲ್ಲಿದ್ದೀಯೆ?' ಅವರ ದೃಷ್ಟಿಯಿಂದ ಆರು ಅಂತಸ್ತುಗಳಿವೆ—ಯೋಗಿಗಳ ಷಟ್ಚಕ್ರಗಳ ಹಾಗೆ. ಅವರಲ್ಲಿ ಒಬ್ಬ ತಾನು

ಐದನೆ ಅಂತಸ್ತಿನಲ್ಲಿದೇನೆ ಎಂದು ಹೇಳಿದರೆ, ಆತನ ಮನಸ್ಸು ಐದನೆಯದಾದ ವಿಶುದ್ಧ ಚಕ್ರಕ್ಕೆ ಹತ್ತಿದೆ ಎಂದು ಅರ್ಥ. (ಮಾಸ್ಟರಿಗೆ) ಆಗ ಆತನಿಗೆ ನಿರಾಕಾರ ದರ್ಶನ ದೊರೆಯುತ್ತದೆ.''

ಹೀಗೆಂದು ಹೇಳಿ ಪರಮಹಂಸರು ಹಾಡುತ್ತಿದಾರೆ:

ಈ ಕಮಲ ದಳಗಳಲಿ ಆಕಾಶವಡಗಿಹುದು

ಅದನು ದಾಟಲು ಎಲ್ಲ ಆಕಾಶವಹುದು!

ಶ್ರೀರಾಮಕೃಷ್ಣರು: ''ಒಮ್ಮೆ ಒಬ್ಬ ಬಾವುಲ ಇಲ್ಲಿಗೆ ಬಂದಿದ್ದ. ನಾನು ಆತನನ್ನು ಕೇಳಿದೆ: 'ನಿನ್ನ ಪಾಕದ ಕೆಲಸ ಮುಗಿದುಹೋಯಿತೆ? ಕೊಪ್ಪರಿಗೆಯನ್ನು ಒಲೆಯಿಂದ ಕೆಳಕ್ಕೆ ಇಳಿಸಿಬಿಟ್ಟಿದೀಯ?' ರಸವನ್ನು ಚೆನ್ನಾಗಿ ಕಾಯಿಸಿದಷ್ಟೂ ಅದು ರಿಫೈನ್ಡ್ (ಪರಿಷ್ಕೃತ) ಆಗುತ್ತಾ ಬರುತ್ತದೆ. ಒಲೆಯ ಮೇಲೆ ಇಡುವಾಗ ಅದು ಕೇವಲ ಕಬ್ಬಿನ ರಸವೇ. ಅನಂತರ ಬೆಲ್ಲ, ಅನಂತರ ಸಕ್ಕರೆ, ಅನಂತರ ಕಲ್ಲುಸಕ್ಕರೆ ಇತ್ಯಾದಿಯಾಗಿ ಆಗುತ್ತದೆ. ಕುದಿಸುತ್ತಾ ಕುದಿಸುತ್ತಾ ಮುಂದುವರಿದ ಹಾಗೆ ಅದು ಇನ್ನೂ ಇನ್ನೂ ಪರಿಷ್ಕೃತ ಪರಿಷ್ಕೃತ ಆಗುತ್ತಿರುತ್ತದೆ.

''ಕೊಪ್ಪರಿಗೆಯನ್ನು ಯಾವಾಗ ಇಳಿಸುತ್ತಾರೆ? ಅಂದರೆ, ಸಾಧನೆ ಮುಗಿಯುವುದು ಯಾವಾಗ? ಇಂದ್ರಿಯಜಯವನ್ನು ಹೊಂದಿದಾಗ. ಉದಾಹರಣೆಗೆ ಜಿಗುಣೆಯ ಬಾಯಿಗೆ ಸುಣ್ಣ ಹಾಕಿದರೆ ಯಾವ ರೀತಿಯಾಗಿ ಅದು ಕಚ್ಚಿರುವುದನ್ನು ಬಿಟ್ಟು ಕೆಳಕ್ಕೆ ಬಿದ್ದುಹೋಗುವುದೊ, ಅದೇ ರೀತಿಯಾಗಿ ಇಂದ್ರಿಯಗಳು ಶಿಥಿಲವಾಗಿ ಮನುಷ್ಯನನ್ನು ಬಿಟ್ಟು ತೊಲಗುತ್ತವೆ. ಆ ಅವಸ್ಥೆಯಲ್ಲಿ ಮನುಷ್ಯ ರಮಣಿಯೊಡನೆ ಇರಬಲ್ಲ, ಆದರೆ ಸಂಪೂರ್ಣ ಕಾಮವಿಹೀನನಾಗಿ.

''ಬಾವುಲರಲ್ಲನೇಕರು ರಾಧಾತಂತ್ರವನ್ನು ಅನುಸರಿಸುತ್ತಾರೆ. ಪಂಚತತ್ತ್ವ, ಅಂದರೆ ಪೃಥಿವಿ, ಜಲ, ಅಗ್ನಿ, ವಾಯು, ಆಕಾಶ ತತ್ತ್ವಗಳನ್ನು ಉಪಯೋಗಿಸಿ ಸಾಧನೆ ಮಾಡುತ್ತಾರೆ. ಈ ವಿಧದ ಸಾಧನೆ ಬಹಳ ಅಶ್ಲೀಲವಾದುವು. ಇದು ಕಕ್ಕಸದ ಬಾಗಿಲ ಮೂಲಕ ಮನೆಗೆ ಬಂದ ಹಾಗೆ.

''ಒಂದು ದಿನ ನಾನು ಊಟಮಾಡುತ್ತಿದ್ದಾಗ ಒಬ್ಬ ಬಾವುಲ ಬಂದ. ಬಂದು ಕೇಳಿದ: 'ನೀವೇ ಊಟ ಮಾಡುತ್ತಿದೀರೊ ಅಥವಾ ಬೇರೆ ಯಾರಿಗಾದರೂ ಊಟ ಮಾಡಿಸುತ್ತಿದೀರೊ?' ಇದರ ಅರ್ಥ,

ಯಾರು ಸಿದ್ಧಪುರುಷನೊ ಆತ ನೋಡುತ್ತಾನೆ, ತನ್ನ ಅಂತರ್ಯದಲ್ಲಿ ಭಗವಂತನಿರುವುದನ್ನ ಎಂದು. ಈ ಮತದ ದೃಷ್ಟಿಯಂತೆ ಸಿದ್ಧಪುರುಷರಾದವರು ಉಳಿದ ಮತಗಳ ಜನರನ್ನು ಕರೆಯುತ್ತಾರೆ 'ಜೀವ' ಅಂತ. ಇವರು ಅವರೊಡನೆ ಮಾತುಕತೆಯಾಡೋದಿಲ್ಲ; ಹೇಳುತ್ತಾರೆ—ಇಲ್ಲಿ 'ಜೀವ' ಇವೆ ಎಂದು.

"ಬಾವುಲರು ಸಿದ್ಧಾವಸ್ಥೆಯನ್ನು ಕರೆಯುತ್ತಾರೆ, 'ಸಹಜಾವಸ್ಥೆ' ಅಂತ. ಈ ಅವಸ್ಥೆಗೆ ಎರಡು ಲಕ್ಷಣಗಳಿವೆ. ಮೊದಲನೆಯದು—ಕೃಷ್ಣ-ಗಂಧ ಸಿದ್ಧನ ಶರೀರದಲ್ಲಿರದು. ಎರಡನೆಯದು—ತಾವರೆ ಮೇಲೆ ದುಂಬಿ ಕುಳಿತುಕೊಳ್ಳುತ್ತದೆ, ಆದರೆ ಮಕರಂದವನ್ನು ಮಾತ್ರ ಕುಡಿಯೋದಿಲ್ಲ. ಮೊದಲನೆಯದರ ಅರ್ಥ, ಆತ ಭಗವದ್ಭಾವಗಳನ್ನೆಲ್ಲಾ ಅಂತರ್ಯದಲ್ಲೇ ಇಟ್ಟುಕೊಳ್ಳುತ್ತಾನೆ; ಹೊರಗಡೆ ಅವುಗಳ ಯಾವ ವ್ಯಕ್ತತೆಯೂ ಇರದು; ಭಗವನ್ನಾಮವನ್ನು ಕೂಡ ಬಾಯಿಂದ ಹೊರಗೆಡಹುವುದಿಲ್ಲ ಅಂತ. ಎರಡನೆಯದರ ಅರ್ಥ, ಆತನಿಗೆ ಕಾಮಿನಿಯಲ್ಲಿ ಆಸಕ್ತಿ ಇಲ್ಲ ಅಂತ—ಅಂದರೆ ಜಿತೇಂದ್ರಿಯ.

"ಬಾವುಲರು ವಿಗ್ರಹಗಳನ್ನು ಪೂಜಿಸಲಿಚ್ಛಿಸೋದಿಲ್ಲ. ಅವರಿಗೆ ಬೇಕು, ಬದುಕಿರುವ ಮನುಷ್ಯ. ಅದಕ್ಕಾಗೆ ಅವರ ಒಂದು ಗುಂಪಿಗೆ 'ಕರ್ತಾಭಜಾ' ಅಂತ ಹೆಸರು. ಅಂದರೆ ಯಾರು ಕರ್ತನನ್ನ—ಗುರುವನ್ನ—ಭಗವದ್ಭಾವನೆಯಿಂದ ಭಜಿಸುತ್ತಾರೊ, ಪೂಜಿಸುತ್ತಾರೊ ಅವರು.

"ನೋಡಿದೆಯೊ, ಎಷ್ಟೊಂದು ಮತಗಳಿವೆ? ಪ್ರತಿಯೊಂದು ಮತವೂ ಒಂದೊಂದು ಪಥ. ಅನಂತ ಮತ, ಅನಂತ ಪಥ."

ಭವನಾಥ: "ಹಾಗಾದರೆ ನಮಗೆ ಮಾರ್ಗ?"

ಶ್ರೀರಾಮಕೃಷ್ಣರು: "ಯಾವುದಾದರೂ ಒಂದನ್ನು ಬಲವಾಗಿ ಹಿಡಿದುಕೊಳ್ಳಬೇಕು. ಮನೆಯ ಚಾವಣಿಗೆ ಹತ್ತಿ ಹೋಗಬೇಕಾಗಿದ್ದರೆ, ಕಲ್ಲಿನ ಮೆಟ್ಟಲಸಾಲಿನಿಂದಾಗಲಿ, ಏಣಿಯಿಂದಾಗಲಿ, ಹಗ್ಗದ ಏಣಿಯಿಂದಾಗಲಿ, ಕೇವಲ ಹಗ್ಗದಿಂದಾಗಲಿ ಅಥವಾ ಕೇವಲ ಬಂಬಿನಿಂದಲೇ ಆಗಲಿ ಹತ್ತಿಹೋಗಿಬಿಡಬಹುದು. ಆದರೆ ಇದರ ಮೇಲೆ ಒಂದಷ್ಟು ದೂರ, ಅದರ ಮೇಲೆ ಒಂದಷ್ಟು ದೂರ ಹೀಗೇ ಹತ್ತುತ್ತಿದ್ದರೆ ಚಾವಣಿಯನ್ನು ಮುಟ್ಟಲಾಗೋದಿಲ್ಲ. ಯಾವುದಾದರೂ ಒಂದನ್ನ ಹಿಡಿದು ಬಿಡದೆ ಹತ್ತಬೇಕು. ಭಗವಂತನ ಸಾಕ್ಷಾತ್ಕಾರ ದೊರಕಬೇಕಾಗಿದ್ದರೆ ಯಾವು

ದಾದರೂ ಒಂದು ಮಾರ್ಗವನ್ನು ವಜ್ರಮುಷ್ಟಿಯಿಂದ ಹಿಡಿದು ಮುಂದು ವರಿಯಬೇಕು.

"ಎಲ್ಲ ಮತಗಳೂ ಒಂದೊಂದು ಮಾರ್ಗ ಎಂಬುದನ್ನು ಮನಸ್ಸಿಗೆ ಚೆನ್ನಾಗಿ ಒತ್ತಬೇಕು. ನಮ್ಮದೇ ಸರಿಯಾದ ಮಾರ್ಗ ಉಳಿದವರದೆಲ್ಲಾ ಮಿಥ್ಯಾ ಎಂದು ಎಂದಿಗೂ ಭಾವಿಸಕೂಡದು. ವಿದ್ವೇಷಭಾವನೆಗೆ ಎಂದಿಗೂ ಎಡೆ ಕೊಡಕೂಡದು.

"ಒಳ್ಳೇದು, ನಾನು ಯಾವ ಪಥಾವಲಂಬಿ? ಕೇಶವಸೇನ ಹೇಳು ತ್ತಿದ್ದ: 'ನೀವು ನಮ್ಮ ಪಥಕ್ಕೆ ಸೇರಿದವರು—ನಿರಾಕಾರದ ಕಡೆ ಮುಂದು ವರಿಯುತ್ತಿದೀರಿ.' ಶಶಧರ ಹೇಳುತ್ತಾನೆ: 'ನೀವು ನಮ್ಮ ಪಥಕ್ಕೆ ಸೇರಿ ದವರು.' ವಿಜಯಗೋಸ್ವಾಮಿಯೂ ಹೇಳುತ್ತಾನೆ: 'ನೀವು ನಮ್ಮ ಪಥಕ್ಕೆ ಸೇರಿದ ವ್ಯಕ್ತಿಗಳು.'"

ಪರಮಹಂಸರು ಪಂಚವಟಿಯ ಕಡೆ ಮಾಸ್ಟರೇ ಮೊದಲಾದ ಒಬ್ಬಿಬ್ಬರು ಭಕ್ತರೊಡನೆ ಮುಂದುವರಿಯುತ್ತಿದಾರೆ. ಘಂಟೆ ಮಧ್ಯಾಹ್ನ ಹನ್ನೆರಡು. ಗಂಗೆಯಲ್ಲಿ ಉಬ್ಬರ ಬರುವ ಸಮಯ.

ಅವರು ಪಂಚವಟಿಯಲ್ಲಿ ಕಾದು ನಿಂತಿದಾರೆ ಸಮುದ್ರದ ಏರುತೆರೆ ಯನ್ನು ನೋಡಲು.

ಶ್ರೀರಾಮಕೃಷ್ಣರು ಭಕ್ತರಿಗೆ: "ಉಬ್ಬರ ಇಳಿತ ಎಷ್ಟು ಆಶ್ಚರ್ಯ ಕರವಾದುವು! ಆದರೆ ಇದನ್ನು ನೋಡು. ಸಮುದ್ರದ ಹತ್ತಿರ ನದಿ ಯೊಳಗೆ ಈ ಉಬ್ಬರವಿಳಿತಗಳನ್ನ ನೋಡಬಹುದು; ಆದರೆ ಸಮುದ್ರದಿಂದ ದೂರದಲ್ಲಿ ನದಿ ಒಂದೇ ದಿಕ್ಕಿಗೆ ಹರಿಯುತ್ತದೆ. ಇದರ ಇಂಗಿತಾರ್ಥವೇನು? ಇದರಿಂದ ನಾವು ಒಂದು ಪಾಠ ಕಲಿತುಕೊಳ್ಳಬಹುದು. ಯಾರು ಭಗ-ವಂತನಿಗೆ ಅತ್ಯಂತ ಸಮೀಪದಲ್ಲಿದಾರೊ ಅವರಲ್ಲಿ ಭಕ್ತಿ, ಭಾವ ಇವೇ ಮೊದಲಾದುವು ಉಂಟಾಗುತ್ತವೆ. ಇನ್ನು ಕೆಲವರಲ್ಲಿ—ಉದಾಹರಣೆಗೆ ಈಶ್ವರಕೋಟಿಗಳಲ್ಲಿ—ಮಹಾಭಾವ, ಪ್ರೇಮ ಇವು ಕೂಡ ಉಂಟಾಗುತ್ತವೆ.

(ಮಾಸ್ಟರಿಗೆ) "ಒಳ್ಳೇದು, ಈ ಉಬ್ಬರವಿಳಿತ ಹೇಗಾಗುತ್ತವೆ?"

ಮಾಸ್ಟರ್: "ಪಾಶ್ಚಾತ್ಯ ಜ್ಯೋತಿಶ್ಶಾಸ್ತ್ರದ ಪ್ರಕಾರ ಇವು ಸೂರ್ಯ ಚಂದ್ರರ ಆಕರ್ಷಣೆಯಿಂದಾಗುತ್ತವೆ."

ಇದನ್ನು ವಿವರಿಸಿ ಹೇಳಲು ಮಾಸ್ಟರ್ ನೆಲದ ಮೇಲೆ ನಕ್ಷೆ ಬರೆದು ಪರಮಹಂಸರಿಗೆ ಚಂದ್ರ, ಸೂರ್ಯ, ಭೂಮಿ ಇವುಗಳ ಗತಿಯನ್ನು ತೋರಿ

ಸುತ್ತಿದಾನೆ. ಪರಮಹಂಸರು ಅವುಗಳ ಕಡೆ ಒಂದು ನಿಮಿಷ ನೋಡೇ ಹೇಳುತ್ತಿದಾರೆ: "ದಯವಿಟ್ಟು ಸಾಕು! ಆಗಲೆ ತಲೆ ನೋಯಲಾರಂಭಿಸಿದೆ."

ಇಷ್ಟರಲ್ಲೇ ಸಮುದ್ರದ ಏರುತೆರೆ ಬರುತ್ತಿರುವುದರ ಶಬ್ದ ಕೇಳಿಬಂತು. ಒಡನೆಯೆ ಅದು ಬಂದು ದಡವನ್ನು ಅಪ್ಪಳಿಸಿ ಉತ್ತರದ ಕಡೆ ನುಗ್ಗಲಾರಂಭಿಸಿತು. ಪರಮಹಂಸರು ನೆಟ್ಟ ಕಣ್ಣುಗಳಿಂದ ಅದರ ಕಡೆ ನೋಡುತ್ತಿದಾರೆ. ದೂರದಲ್ಲಿದ್ದ ಒಂದು ದೋಣಿಯನ್ನು ನೋಡಿ ಬಾಲಕನ ಹಾಗೆ ಕೂಗಿಕೊಳ್ಳುತ್ತಿದಾರೆ: "ಅಲ್ಲಿ ನೋಡು! ಅಲ್ಲಿ ನೋಡು! ಆ ದೋಣಿಯ ದುಸ್ಥಿತಿಯನ್ನ! ಅದರ ಗತಿ ಏನಾಗುವುದೊ?"

ಪರಮಹಂಸರು ಮತ್ತು ಮಾಸ್ಟರ್ ಪಂಚವಟಿಯಲ್ಲಿ ಕುಳಿತುಕೊಂಡಿದಾರೆ. ಪರಮಹಂಸರು ತಮ್ಮ ಛತ್ರಿಯನ್ನು ಸಿಮೆಂಟಿನ ಕಟ್ಟೆಯ ಮೇಲೆ ಇಟ್ಟಿದಾರೆ. ಅವರು ನಾರಾಯಣ[1] ಎಂಬ ಹೆಸರಿನ ಹುಡುಗನನ್ನು ಸಾಕ್ಷಾತ್ ಭಗವಂತನೇ ಎಂಬ ದೃಷ್ಟಿಯಿಂದ ನೋಡುತ್ತಿದಾರೆ. ಆದ್ದರಿಂದ ಆತನನ್ನು ಕಂಡರೆ ಬಹಳ ಪ್ರೀತಿ. ಆತ ಸ್ಕೂಲಿನಲ್ಲಿ ಓದುತ್ತಿದಾನೆ. ಈಗ ಮಾತುಕತೆ ಆತನ ಸಂಬಂಧವಾಗಿ ಆರಂಭವಾಯಿತು.

ಶ್ರೀರಾಮಕೃಷ್ಣರು: "ನಾರಾಣನ ಸ್ವಭಾವ ಎಷ್ಟು ಒಳ್ಳೇದು ನೋಡಿದೀಯೆ ತಾನೆ? ಆತ ಎಲ್ಲರೊಡನೂ ಬೆರೆಯಬಲ್ಲ—ಮಕ್ಕಳಾದಿಯಾಗಿ ಮುದುಕರವರೆಗೆ. ಇದು, ಒಂದು ವಿಶೇಷವಾದ ಶಕ್ತಿಯಿಲ್ಲದಿದ್ದರೆ ಸಾಧ್ಯವಿಲ್ಲ. ಇದೂ ಅಲ್ಲದೆ ಎಲ್ಲರೂ ಆತನನ್ನು ಪ್ರೀತಿಸುತ್ತಾರೆ. ಒಳ್ಳೆಯದು, ಆತ ನಿಜವಾಗಿಯೂ ಸರಳನೇ?"

ಮಾಸ್ಟರ್: "ಹೌದು. ಬಹಳ ಸರಳ ಅಂತ ಅನಿಸುತ್ತದೆ."

ಶ್ರೀರಾಮಕೃಷ್ಣರು: "ನಿಮ್ಮ ಮನೆಗೆ ಆತ ಬರುತ್ತಿರುತ್ತಾನಂತಲ್ಲ?"

ಮಾಸ್ಟರ್: "ಹೌದು. ಒಂದೆರಡು ಸಲ ಬಂದಿದ್ದ."

ಶ್ರೀರಾಮಕೃಷ್ಣರು: "ನೀನು ಆತನಿಗೊಂದು ರೂಪಾಯಿ ಕೊಡಬಲ್ಲೆಯಾ? ಅಥವಾ ನಾನು ಕಾಳಿಗೆ[2] ಹೇಳಲೊ?"

---

1. ಪರಮಹಂಸರು ಆತನನ್ನು ಪ್ರೀತಿಯಿಂದ 'ನಾರಾಣ' ಎಂದು ಕರೆಯುತ್ತಿದ್ದರು.

2. ಪರಮಹಂಸರ ಒಬ್ಬ ಭಕ್ತ.

ಮಾಸ್ಟರ್: "ಬೇಡಿ. ನಾನೇ ಕೊಡುತ್ತೇನೆ."

ಶ್ರೀರಾಮಕೃಷ್ಣರು: "ಬಹಳ ಒಳ್ಳೆಯದು. ಭಗವಂತನಲ್ಲಿ ಯಾರಿಗೆ ಅನುರಾಗವಿದೆಯೊ ಅವರಿಗೆ ಸಹಾಯ ನೀಡುವುದು ಮೇಲು. ಹಣದ ಸದ್ವಿನಿಯೋಗವಾಗುತ್ತದೆ ಆಗ. ಎಲ್ಲವನ್ನೂ ಸಂಸಾರದ ಮೇಲೇ ಸುರಿದರೆ ದೊರೆಯುವುದೇನು?"

ಕಿಶೋರಿಗೆ ಮಕ್ಕಳು ಮರಿ ಆಗಿಬಿಟ್ಟವೆ. ಸಂಬಳ ಸಾರಿಗೆ ಕಡಮೆ— ಸಾಕಾಗುತ್ತಿಲ್ಲ. ಪರಮಹಂಸರು ಮಾಸ್ಟರಿಗೆ ಹೇಳುತ್ತಿದಾರೆ: "ನಾರಾಣ ಹೇಳಿದ, ತಾನು ಕಿಶೋರಿಗೆ ಒಂದು ಕೆಲಸವನ್ನು ಕೊಡಿಸಿಕೊಡುವುದಾಗಿ. ಇದನ್ನು ಆತನಿಗೆ ಜ್ಞಾಪಕಮಾಡು.

ಪರಮಹಂಸರು ಈಗ ಸರ್ವೆ ಮರಗಳ ಕಡೆ ಹೋಗುತ್ತಿದಾರೆ. ಅಲ್ಲಿಂದ ಹಿಂದಿರುಗಿ ಪಂಚವಟಿಗೆ ಬಂದು ಮಾಸ್ಟರಿಗೆ ಹೇಳುತ್ತಿದಾರೆ: "ವರಾಂಡದಲ್ಲಿ ಒಂದು ಮುಂದಲಿಗೆ ಹಾಕುವಂತೆ ಯಾರಿಗಾದರೂ ಹೇಳು. ನಾನು ಇನ್ನು ಸ್ವಲ್ಪ ಹೊತ್ತಿನಲ್ಲೇ ಅಲ್ಲಿಗೆ ಬರುತ್ತೇನೆ—ಸ್ವಲ್ಪ ಹೊತ್ತು ಮಲಗಿಕೊಂಡಿರುತ್ತೇನೆ."

ಪರಮಹಂಸರು ತಮ್ಮ ಕೊಠಡಿಗೆ ಹಿಂದಿರುಗಿಬಂದು ನೋಡುತ್ತಾರೆ, ಯಾರೂ ಅವರ ಛತ್ರಿಯನ್ನು ಪಂಚವಟಿಯಿಂದ ತಂದಿಲ್ಲ. ಈಗ ಹೇಳುತ್ತಿದಾರೆ: "ಛತ್ರಿಯನ್ನು ತರಬೇಕು ಅಂತ ನಿಮಗಾರಿಗೂ ಅನಿಸಲೇ ಇಲ್ಲವಲ್ಲ! ಅಧಿಕಪ್ರಸಂಗಿಗಳಿಗೆ ಎದುರಿಗಿರುವುದೂ ಕಣ್ಣಿಗೆ ಬೀಳುವುದಿಲ್ಲ. ಒಬ್ಬ ಇನ್ನೊಬ್ಬನ ಮನೆಗೆ ಗುಡುಗುಡಿ ಹೊತ್ತಿಸಿಕೊಳ್ಳಲು ಹೋಗಿದ್ದ— ತನ್ನ ಕೈಯಲ್ಲೇ ಉರಿಯುತ್ತಿರುವ ಲಾಟೀನು ಇದ್ದರೂ! ಇನ್ನೊಬ್ಬ ತನ್ನ ಚೌಕಕ್ಕಾಗಿ ಎಲ್ಲೆಲ್ಲೂ ಹುಡುಕಾಡಿಬಿಟ್ಟ. ಕೊನೆಗೆ ನೋಡಿಕೊಳ್ಳುತ್ತಾನೆ, ಅದು ತನ್ನ ಹೆಗಲ ಮೇಲೇ ಇದೆ!"

ಪರಮಹಂಸರು ಕಾಳೀದೇವಾಲಯದ ಅನ್ನಪ್ರಸಾದವನ್ನು ಸ್ವೀಕರಿಸುತ್ತಿದಾರೆ. ಈಗ ಘಂಟೆ ಅಪರಾಹ್ನ ಒಂದು. ಊಟವಾದನಂತರ ಪರಮಹಂಸರು ವಿಶ್ರಮಿಸಿಕೊಳ್ಳಲೆಂದು, ಭಕ್ತರಿಗೆ ಹೇಳಲಾಯಿತು ಹೊರಗೆ ಹೋಗಿ ಕುಳಿತುಕೊಳ್ಳುವಂತೆ. ಈಗ ಪರಮಹಂಸರು ವಿಶ್ರಮಿಸಿಕೊಳ್ಳುತ್ತಿದಾರೆ. ಅವರು ಬಾಬುರಾಮನಿಗೆ ಹೇಳುತ್ತಿದಾರೆ: "ಬಾ. ನನ್ನ ಹತ್ತಿರ ಬಂದು ಕುಳಿತುಕೊ." ಬಾಬುರಾಮ ಉತ್ತರವೀಯುತ್ತಿದಾನೆ:

"ನಾನು ತಾಂಬೂಲ ತಯಾರಿಸುತ್ತಿದ್ದೇನೆ." ಅದಕ್ಕೆ ಹೇಳುತ್ತಿದಾರೆ: "ಈಗ ಸದ್ಯ ಅದನ್ನು ಒತ್ತಟ್ಟಿಗಿಟ್ಟು ಬಾ."

ಭಕ್ತರು ಪಂಚವಟಿಯಲ್ಲಿ ಬಕುಳ ವೃಕ್ಷದ ಕೆಳಗೆ ಕುಳಿತುಕೊಂಡಿದಾರೆ. ಆಗತಾನೆ ಬೃಂದಾವನದಿಂದ ಹಿಂದಿರುಗಿ ಬಂದಿದ್ದ ತಾರಕ ತನ್ನ ಯಾತ್ರೆಯ ಸಂಬಂಧವಾಗಿ ತಿಳಿಸುತ್ತಿದಾನೆ.

ಪರಮಹಂಸರು ತಮ್ಮ ಚಿಕ್ಕ ಮಂಚದ ಮೇಲೆ ಕುಳಿತುಕೊಂಡಿದಾರೆ, ಭಕ್ತರು ನೆಲದ ಮೇಲೆ. ಶ್ಯಾಮದಾಸ ತನ್ನ ಪಾರ್ಟಿಯವರೊಡನೆ ಗೋಪಿಯರ ಕೃಷ್ಣವಿರಹದ ಸಂಬಂಧವಾಗಿ ಹಾಡುತ್ತಿದಾನೆ:

ಸುಂದರ ಸರಸಿಯು ಮರುವನವಾಯಿತು
ಗೋಪೀ ಜನಮನ ಕಂಗಳಿಗೆ
ಬಾನ ಮೋಡದೆಡೆ ನೋಡುತ ಚಾತಕ
ಹರಣವ ನೀಗಿತು ತೃಷೆಯೊಳಗೆ !

ಪರಮಹಂಸರು ಎಲ್ಲೋ ಕಿಂಚಿತ್ ಭಾವಾವಿಷ್ಟರೇನೊ ಆದರು, ಆದರೆ ಕೀರ್ತನೆ ಕಳೆಕಟ್ಟುತ್ತಿಲ್ಲ. ಆದ್ದರಿಂದ ಕೊನ್ನಗರದ ನಬಾಯಿ ಚೈತನ್ಯನಿಗೆ ಹೇಳುತ್ತಿದಾರೆ, ಕೀರ್ತನೆ ಮಾಡುವಂತೆ. ನಬಾಯಿ ಮನಮೋಹನನ ಚಿಕ್ಕಪ್ಪ. ವಿರಾಮ ವೇತನವನ್ನು ಪಡೆಯುತ್ತ ಗಂಗಾ ತೀರದಲ್ಲಿರುವ ಕೊನ್ನಗರದಲ್ಲಿ ಸಾಧನೆ ಭಜನೆ ಮಾಡುತ್ತ ಕಾಲ ತಳ್ಳುತ್ತಿದಾನೆ. ಪರಮಹಂಸರ ದರ್ಶನ ಪಡೆಯಲು ಆಗಾಗ ದಕ್ಷಿಣೇಶ್ವರಕ್ಕೆ ಬರುತ್ತಲೇ ಇದಾನೆ.

ನಬಾಯಿ ಉಚ್ಚ ಸಂಕೀರ್ತನೆಯನ್ನು ಮಾಡುತ್ತಿದಾನೆ. ಪರಮಹಂಸರು ಮಂಚದಿಂದೆದ್ದು ಬಂದು ನರ್ತಿಸುತ್ತಿದಾರೆ. ನಬಾಯಿ ಮತ್ತು ಭಕ್ತರೆಲ್ಲರೂ ಅವರ ಸುತ್ತಲೂ ಸುತ್ತಿ ಸುತ್ತಿ ನರ್ತಿಸುತ್ತ ಹಾಡುತ್ತಿದಾರೆ. ಕೀರ್ತನೆ ಬಹಳ ಚೆನ್ನಾಗಿ ಕಳೆ ಕಟ್ಟಿಬಿಟ್ಟಿದೆ. ಮಹಿಮಚರಣನೂ ನರ್ತಿಸಲಾರಂಭಿಸಿದಾನೆ.

ಕೀರ್ತನೆ ಮುಗಿಯಿತು. ಪರಮಹಂಸರು ತಮ್ಮ ಮಂಚದ ಮೇಲೆ ಕುಳಿತಿದಾರೆ. ಈಗ ಅವರು ಭಾವದಿಂದ ಮತ್ತರಾಗಿ ಊರ್ಧ್ವದೃಷ್ಟಿಯುಳ್ಳವರಾಗಿ ಭಗವತಿಯ ಸಂಬಂಧವಾಗಿ ಹಾಡುತ್ತಿದಾರೆ:

ನಿನ್ನ ನಿತ್ಯಾನಂದದಾಚೆಗೆ ತಳ್ಳದಿರು ನೀನೆನ್ನನು.
ನಿನ್ನ ಪಾದವನಲ್ಲದೀತನು ಬೇರೆ ಏನೂ ಕಾಣನು. . . . ( ಉ. ೨೩ ).

ಅವರು ಮತ್ತೆ ಹಾಡುತ್ತಿದಾರೆ:

ಭಾವುಕನ ಭಾವದೊಲು ಅವನೊಳುದಿಸುವ ಒಲವು,
ಆ ಒಲವಿಗನುಸಾರ ಅವನು ಪಡೆಯುವ ಫಲವು; . . .

ಮತ್ತೆ:

ನಿನ್ನದೀ ಮರಳು ಮನೆ
ನಿನ್ನದೀ ಲೋಕ;
ಬಣ್ಣಿಸಲೆ ನಿನ್ನ ಗುಣ?
ನಾನಾದೆ ಮೂಕ!
ಆನೆಯಿದ್ದೂ ಕೂಡ
ನೀ ಪಾದಚಾರಿ!
ಮುತ್ತುರತ್ನಗಳಿದ್ದು,
ನರಶಿರೋಧಾರಿ!
ಜಟಿಲತಮ ಸಂಸಾರ
ಕಾಂತಾರದೊಳಗೆ
ನೀನೆ ಕಾಪಿಡಬೇಕು
ಕೃಪೆಯ ಕೈಯೊಳಗೆ.

ಮತ್ತೆ ಹಾಡುತ್ತಿದಾರೆ:

ಏತಕೆ, ಇನ್ನೇತಕೆ?
ಕಾಶಿ ಕಾಂಚಿಯೊ, ಗಯೆಯೊ ಗಂಗೆಯೊ
ಪುಣ್ಯಕ್ಷೇತ್ರಗಳೇತಕೆ? . . .

ಮತ್ತೆ:

ನಿನ್ನೊಳಗೇ ನೀನಿರು ಮನವೇ,
ಅನ್ಯಾಶ್ರಯದೊಳಗರಸದಿರು. . . . ( ಉ. ೧೭೧ )

ಅನಂತರ:

ಸಾಗುತಿಹುದು ಚಿತ್ತಭೃಂಗ
ಕಾಳೀಪದನೀಲಕಮಲ ಮಧುಪಾನದ ಆಸೆಗೆ! . . . (ಉ. ೧೩೫)

ಮತ್ತೆ:

ಅಂತರಂಗದಲಿ ಶ್ರೀ ಘನಶ್ಯಾಮೆಯ
ಆದರಿಸೆಲೆ ಮನವೇ. . . . ( ಉ. ೩೬೯ )

ಪರಮಹಂಸರು ಈ ಹಾಡನ್ನು ಹಾಡುತ್ತ ಹಾಡುತ್ತ ಇದ್ದ ಹಾಗೆ ಎದ್ದು ನಿಂತುಕೊಂಡುಬಿಟ್ಟಿದಾರೆ. ಬಹುಮಟ್ಟಿಗೆ ಪ್ರೇಮೋನ್ಮತ್ತರಾಗಿ ಬಿಟ್ಟಿದಾರೆ. ಅವರು ಭಕ್ತರ ಕಡೆ ತಿರುಗಿ ಮತ್ತೆ ಮತ್ತೆ ಹೇಳುತ್ತಿದಾರೆ: "ಅಂತರಂಗದಲಿ ಶ್ರೀ ಘನಶ್ಯಾಮೆಯ ಆದರಿಸೆಲೆ ಮನವೇ." ಈಗ ಮತ್ತೆ ನರ್ತಿಸುತ್ತ ಹಾಡಲಾರಂಭಿಸಿದಾರೆ:

ಕಾಲರೂಪೆ ದಿಗಂಬರೀ
ಹೃದಯಪದ್ಮ ಭಾಸ್ಕರೀ,
ನಿಜವಾಗಿಯುಂ ಕಪ್ಪಗಿಹಳೆ ನನ್ನ ತಾಯಿ ಕಾಳಿ?

ಪರಮಹಂಸರು ಹಾಡುತ್ತ ಹಾಡುತ್ತ ಇದ್ದ ಹಾಗೆ ತೂಗಾಡುತ್ತಿರುವುದನ್ನು ನೋಡಿ ನಿರಂಜನ ಅವರನ್ನು ಹಿಡಿದುಕೊಳ್ಳಲು ಹೋಗುತ್ತಿದಾನೆ. ಅವರು ಪ್ರೀತಿಪೂರ್ವಕವಾಗಿ ಆತನಿಗೆ ಹೇಳುತ್ತಿದಾರೆ: "ದಯವಿಟ್ಟು ಮುಟ್ಟಬೇಡ." ಪರಮಹಂಸರು ನರ್ತಿಸುತ್ತಿರುವುದನ್ನು ನೋಡಿ ಭಕ್ತರೂ ಎದ್ದು ನಿಂತಿದಾರೆ. ಪರಮಹಂಸರು ಮಾಸ್ಟರ ಕೈ ಹಿಡಿದು ಹೇಳುತ್ತಿದಾರೆ: "ಮೂರ್ಖನ ಹಾಗೆ ವರ್ತಿಸಬೇಡ! ನರ್ತಿಸು!"

ಪರಮಹಂಸರು ತಮ್ಮ ಮಂಚದ ಮೇಲೆ ಕುಳಿತಿದಾರೆ. ಇನ್ನೂ ಭಾವೋನ್ಮತ್ತರಾಗೇ ಇದಾರೆ. ಭಾವ ಕಿಂಚಿತ್ ಇಳಿದನಂತರ ಹೇಳುತ್ತಿದಾರೆ: "ಓಂ! ಓಂ! ಓಂ! ಓಂ! ಓಂ! ಓಂ! ಕಾಳಿ!" ಈಗ ಹೇಳುತ್ತಿದಾರೆ: "ಗುಡುಗುಡಿ ಸೇದಬೇಕು." ಭಕ್ತರಲ್ಲನೇಕರು ಅವರ ಸುತ್ತ ನಿಂತಿದಾರೆ. ಮಹಿಮಚರಣ ನಿಂತುಕೊಂಡು ಪರಮಹಂಸರಿಗೆ ಗಾಳಿ ಬೀಸುತ್ತಿದಾನೆ. ಪರಮಹಂಸರು ಆತನಿಗೆ ಹೇಳುತ್ತಿದಾರೆ, ಕೆಳಗೆ ಕುಳಿತುಕೊಂಡು ವೇದಗಳಿಂದ ಮಂತ್ರೋಚ್ಚಾರಣೆ ಮಾಡುವ ಹಾಗೆ. ಈಗ ಮಹಿಮಚರಣ ಮಹಾನಿರ್ವಾಣತಂತ್ರದಿಂದ ಕೆಲವು ಸ್ತೋತ್ರಗಳನ್ನು ಪಠಿಸುತ್ತಿದಾನೆ:

ಓಂ ನಮಸ್ತೇ ಸತೇ ಸರ್ವಲೋಕಾಶ್ರಯಾಯ
ನಮಸ್ತೇ ಚಿತೇ ವಿಶ್ವರೂಪಾತ್ಮಕಾಯ ।
ನಮೋಽದ್ವೈತತತ್ತ್ವಾಯ ಮುಕ್ತಿಪ್ರದಾಯ
ನಮೋ ಬ್ರಹ್ಮಣೇ ವ್ಯಾಪಿನೇ ನಿರ್ಗುಣಾಯ ॥ (III. ೫೯)

ತ್ವಮೇಕಂ ಶರಣ್ಯಂ ತ್ವಮೇಕಂ ವರೇಣ್ಯಂ
ತ್ವಮೇಕಂ ಜಗತ್ಕಾರಣಂ ವಿಶ್ವರೂಪಮ್ ।

ತ್ವಮೇಕಂ ಜಗತ್ಕರ್ತೃಪಾತೃಪ್ರಹರ್ತೃ
ತ್ವಮೇಕಂ ಪರಂ ನಿಶ್ಚಲಂ ನಿರ್ವಿಕಲ್ಪಮ್ ॥ (III. ೬೦)

ಭಯಾನಾಂ ಭಯಂ ಭೀಷಣಂ ಭೀಷಣಾನಾಂ
ಗತಿಃ ಪ್ರಾಣಿನಾಂ ಪಾವನಂ ಪಾವನಾನಾಮ್ ।
ಮಹೋಚ್ಚೈಃ ಪದಾನಾಂ ನಿಯಂತೃ ತ್ವಮೇಕಂ
ಪರೇಷಾಂ ಪರಂ ರಕ್ಷಣಂ ರಕ್ಷಣಾನಾಮ್ ॥ (III. ೬೧)

ಪರೇಶ ಪ್ರಭೋ ಸರ್ವರೂಪಾವಿನಾಶಿನ್
ಅನಿರ್ದೇಶ್ಯ ಸರ್ವೇಂದ್ರಿಯಾಗಮ್ಯ ಸತ್ಯ ।
ಅಚಿಂತ್ಯಾಕ್ಷರ ವ್ಯಾಪಕಾವ್ಯಕ್ತತತ್ತ್ವ
ಜಗದ್ಭಾಸಕಾಧೀಶ ಪಾಯಾದಪಾಯಾತ್ ॥ (III. ೬೨)

ತದೇಕಂ ಸ್ಮರಾಮಸ್ತದೇಕಂ ಭಜಾಮ-
ಸ್ತದೇಕಂ ಜಗತ್ಸಾಕ್ಷಿರೂಪಂ ನಮಾಮಃ ।
ತದೇಕಂ ನಿಧಾನಂ ನಿರಾಲಂಬಮೀಶಂ
ಭವಾಂಭೋಧಿಪೋತಂ ಶರಣ್ಯಂ ವ್ರಜಾಮಃ ॥ (III. ೬೩)*

ಪರಮಹಂಸರು ಕೈ ಮುಗಿದುಕೊಂಡು ಸ್ತೋತ್ರಗಳನ್ನು ಕೇಳುತ್ತಿದಾರೆ. ಸ್ತೋತ್ರಪಾಠ ಮುಗಿಯಿತು. ಈಗ ಅವರು ಭಕ್ತಿಭಾವದಿಂದ ಬ್ರಹ್ಮನಿಗೆ ನಮಸ್ಕಾರ ಮಾಡುತ್ತಿದಾರೆ. ಭಕ್ತರೂ ಹಾಗೇ ಮಾಡುತ್ತಿದಾರೆ.

ಅಧರಸೇನ ಕಲ್ಕತ್ತದಿಂದ ಬಂದು ಪರಮಹಂಸರಿಗೆ ಪ್ರಣಾಮ ಮಾಡುತ್ತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇಂದು ಬಹಳವಾಗಿ ಆನಂದ ದೊರೆತುಬಿಟ್ಟಿತು. ಭಗವಂತನ ನಾಮಗುಣಕೀರ್ತನೆ ಎಷ್ಟು ಆನಂದವನ್ನು ಉಂಟುಮಾಡುತ್ತದೆ! ಅಲ್ಲವೆ?"

ಮಾಸ್ಟರ್: "ಹೌದು, ನಿಜ."

ಮಹಿಮಚರಣ ಜ್ಞಾನಚರ್ಚೆ ಮಾಡುತ್ತಿರುತ್ತಾನೆ. ಇಂದು ಆತ ಭಗವನ್ನಾಮಗುಣಸಂಕೀರ್ತನೆಯಲ್ಲಿ ಭಾಗವಹಿಸಿದುದೂ ಅಲ್ಲದೆ, ನರ್ತಿಸಿಯೂ ಬಿಟ್ಟ. ಇದು ಪರಮಹಂಸರಿಗೆ ಬಹಳ ಆನಂದವನ್ನು ಉಂಟುಮಾಡಿಬಿಟ್ಟಿದೆ.

---

* ಪರಿಶಿಷ್ಟ ೧ರಲ್ಲಿ ೯ನ್ನು ನೋಡಿ.

ಇನ್ನೇನು ಮುಚ್ಚಂಜೆಯಾಗುವುದರಲ್ಲಿದೆ. ಭಕ್ತರಲ್ಲನೇಕರು ಪರಮ-ಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾರೆ. ಪರಮ-ಹಂಸರ ಕೊಠಡಿಗೆ ದೀಪ ಹಚ್ಚಿ ಧೂಪ ಹಾಕಲಾಯಿತು. ಸ್ವಲ್ಪ ಹೊತ್ತಿನಲ್ಲೆ ಚಂದ್ರೋದಯವಾಗಲಾರಂಭಿಸಿತು. ಬೆಳ್ದಿಂಗಳು ಎಲ್ಲೆಲ್ಲೂ ಹಾಲು ಚೆಲ್ಲಿದಂತೆ ಹಬ್ಬಿದೆ.

ಪರಮಹಂಸರು ತಮ್ಮ ಮಂಚದ ಮೇಲೆ ಕುಳಿತುಕೊಂಡು ಭಗವತಿಯ ಧ್ಯಾನದಲ್ಲಿ ತೊಡಗಿದಾರೆ. ಆಗಾಗ ಭಗವತಿಯ ನಾಮಜಪ ಮಾಡುತ್ತಿದಾರೆ. ಅಧರಸೇನ ನೆಲದ ಮೇಲೆ ಕುಳಿತುಕೊಂಡಿದಾನೆ. ಮಾಸ್ಟರ್ ಮತ್ತು ನಿರಂಜನನೂ ಅಲ್ಲಿ ಕುಳಿತಿದಾರೆ. ಈಗ ಪರಮಹಂಸರು ಅಧರ-ಸೇನನೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಏನು! ಈಗತಾನೆ ಬಂದೆಯಾ! ಬೇಕಾದಷ್ಟು ಕೀರ್ತನೆ ನರ್ತನ ನಡೆಯಿತು. ರಾಮನ ಸಂಗೀತ ಉಪಾಧ್ಯಾಯ ಶ್ಯಾಮದಾಸನ ಕೀರ್ತನೆ ನಡೆಯಿತು. ಆದರೆ ನನಗೆ ಮಾತ್ರ ಹಿಡಿಸಲಿಲ್ಲ; ಎದ್ದು ನರ್ತಿಸುವಂತೆ ಮನಸ್ಸಾಗಲಿಲ್ಲ. ಅನಂತರ ಆತನ ಶೀಲದ ಸಂಬಂಧವಾಗಿ ತಿಳಿದುಬಂತು. ಮನುಷ್ಯನ ತಲೆಯಲ್ಲಿ ಎಷ್ಟೊಂದು ಕೂದಲುಗಳಿವೆಯೊ ಅಷ್ಟೊಂದು ಜನ ಉಪಪತ್ನಿಯರಿದಾರಂತೆ ಆತನಿಗೆ!

"ನಿನಗೆ ಕೆಲಸ ಸಿಕ್ಕಿತೆ?"

ಅಧರಸೇನ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್. ತಿಂಗಳಿಗೆ ಮುನ್ನೂರು ರೂಪಾಯಿ ಸಂಬಳ. ಕಲ್ಕತ್ತದ ಮುನಿಸಿಪಾಲಿಟಿಯ ಉಪಾಧ್ಯಕ್ಷನ ಪದವಿಗೆ ಅರ್ಜಿ ಹಾಕಿಕೊಂಡಿದಾನೆ. ಆ ಪದವಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿ ಸಂಬಳ. ಆ ಪದವಿಯನ್ನು ದೊರಕಿಸಿಕೊಳ್ಳಲು ಅಧರಸೇನ ಹೋಗಿ ದೊಡ್ಡ ದೊಡ್ಡ ಮನುಷ್ಯರನ್ನ ಕಂಡುಬಂದಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ ಮತ್ತು ನಿರಂಜನನಿಗೆ: "ಹಾಜರಾ ನನಗೆ ಹೇಳಿದ: 'ನೀವು ಅಧರಸೇನನಿಗಾಗಿ ಭಗವತಿಗೆ ಪ್ರಾರ್ಥನೆಮಾಡಿ, ಆತನಿಗೆ ಆ ಕೆಲಸ ದೊರೆಯಲಿ ಎಂದು.' ಅಧರಸೇನನೂ ನನ್ನನ್ನು ಕೇಳಿಕೊಂಡಿದ್ದ. ನಾನು ಭಗವತಿಗೆ ಪ್ರಾರ್ಥನೆಮಾಡಿದೆ: 'ಹೇ ತಾಯೆ, ಅಧರ-ಸೇನ ನಿನ್ನ ದರ್ಶನಕ್ಕಾಗಿ ಇಲ್ಲಿಗೆ ಬಂದು ಹೋಗಿ ಮಾಡುತ್ತಿದಾನೆ. ನಿನಗಿಚ್ಛೆಯಿರುವುದಾದರೆ ಆತನಿಗೆ ಆ ಕೆಲಸ ದೊರೆಯಲಿ.' ಆದರೆ ಆ ಪ್ರಾರ್ಥನೆಯೊಡನೇ ಆಕೆಗೆ ತಿಳಿಸಿದೆ: 'ತಾಯೆ, ಆತನದು ಎಂಥ ಹೀನಬುದ್ಧಿ!

ಜ್ಞಾನ, ಭಕ್ತಿ ಇವುಗಳಿಗಾಗಿ ಪ್ರಾರ್ಥನೆಮಾಡದೆ ಇಂಥ ಅಲ್ಪ ವಸ್ತುಗಳಿಗಾಗಿ ಪ್ರಾರ್ಥನೆ ಮಾಡುತ್ತ ಇದಾನಲ್ಲ!'

(ಅಧರಸೇನನಿಗೆ) "ಏಕೆ ನೀನು ಆ ಹೀನಬುದ್ಧಿಯುಳ್ಳವರ ಹತ್ತಿರಕ್ಕೆಲ್ಲಾ ಸಲಾಮು ಹೊಡೆಯಲು ಹೋಗಿದ್ದೆ? ಇಲ್ಲಿಗೆ ಬಂದು ಎಲ್ಲವನ್ನೂ ಇಷ್ಟೊಂದು ನೋಡಿದೀಯೆ, ಮಾಡಿದೀಯೆ, ಕೇಳಿದೀಯೆ! 'ರಾತ್ರಿಯೆಲ್ಲಾ ರಾಮಾಯಣ ಕೇಳಿ ಬೆಳಗಾಗೆದ್ದು ರಾಮನಿಗು ಸೀತೆಗು ಏನು ಸಂಬಂಧ ಅಂತ ಕೇಳುವುದು!' "

ಅಧರಸೇನ: "ಸಂಸಾರ ನಡಸಿಕೊಂಡು ಹೋಗಬೇಕಾದರೆ, ಹೀಗೆಲ್ಲಾ ಮಾಡದಿದ್ದರೆ ಅದು ನಡೆಯುವುದಿಲ್ಲ. ಹಾಗೆ ಮಾಡಕೂಡದು ಅಂತಲೇನೂ ನೀವು ನಮಗೆ ಹೇಳಿರಲಿಲ್ಲವಲ್ಲ. ಏನು, ಹೇಳಿದ್ದಿರಾ?"

ಶ್ರೀರಾಮಕೃಷ್ಣರು: "ನಿವೃತ್ತಿಯೇ ಶ್ರೇಯಸ್ಕರವಾದ್ದು, ಪ್ರವೃತ್ತಿ ಅಲ್ಲ. ಒಮ್ಮೆ ನಾನು ಪ್ರೇಮೋನ್ಮತ್ತನಾಗಿದ್ದಾಗ ನನ್ನ ಸಂಬಳದ ರಶೀತಿಗೆ ರುಜು ಹಾಕಲು ನನಗೆ ಹೇಳಿಕಳುಹಿಸಿದರು, ನಾನೂ ಎಲ್ಲರ ಹಾಗೆ ಹೋಗಿ ಖಜಾನ್ಚಿಯ ಹತ್ತಿರ ರುಜು ಹಾಕಿಬರಬೇಕೆಂದು. ನಾನು ಖಜಾನ್ಚಿಗೆ ತಿಳಿಸಿದೆ: 'ಇದು ನನ್ನ ಕೈಯಲ್ಲಿ ಸಾಧ್ಯವಿಲ್ಲ. ನನಗೆ ಸಂಬಳ ಬೇಕಾಗಿಲ್ಲ. ಇಚ್ಛೆ ಇದ್ದರೆ ನೀವು ಅದನ್ನು ಬೇರೆ ಯಾರಿಗಾದರೂ ಕೊಟ್ಟುಬಿಡಬಹುದು.' ನಾನು ಕೇವಲ ಭಗವಂತನ ದಾಸ. ಬೇರೆ ಯಾರಿಗೆ ತಾನೆ ನಾನು ದಾಸನಾಗಲು ಹೋಗಲಿ? ಊಟ ನನಗೆ ಹೊತ್ತೂ ಗೊತ್ತಿಗೆ ಸರಿಯಾಗಿ ದೊರೆಯದಿರುವುದನ್ನು ನೋಡಿ, ಮಲ್ಲಿಕ ಒಬ್ಬ ಅಡಿಗೆಯವನನ್ನ ನೇಮಿಸಿದ. ತಿಂಗಳು ತಿಂಗಳ ಖರ್ಚುವೆಚ್ಚಗಳಿಗಾಗಿ ಒಂದು ರೂಪಾಯಿ ಕೊಡುತ್ತಿದ್ದ. ಅದನ್ನು ತೆಗೆದುಕೊಳ್ಳಲು ಒಂದು ವಿಧವಾದ ನಾಚಿಕೆ ಆಗುತ್ತಿತ್ತು. ಹೇಳಿಕಳುಹಿಸಿದಾಗಲೆಲ್ಲಾ ಆತನ ಹತ್ತಿರಕ್ಕೆ ಓಡಿಹೋಗಬೇಕಾಗುತ್ತಿತ್ತು. ಸ್ವಂತ ಇಚ್ಛೆಯಿಂದ ಹೋದರೆ ಅದು ಬೇರೆ ಸಮಾಚಾರ.

"ಸಂಸಾರ ಜೀವನ ನಡಸಿಕೊಂಡು ಹೋಗಬೇಕಾದರೆ ಹೀನಬುದ್ಧಿಯ ಮನುಷ್ಯರ ಕೈಕಾಲುಗಳನ್ನು ಹಿಡಿದು ದಮ್ಮಯ್ಯ ದತ್ತಯ್ಯ ಅನ್ನಬೇಕಾಗುವುದೇ ಅಲ್ಲದೆ, ಇನ್ನೂ ಏನೇನೊ ಮಾಡಬೇಕಾಗುತ್ತದೆ. ನನಗೀ ದಿವ್ಯ ಅವಸ್ಥೆ ಬಂದನಂತರ, ನನ್ನ ಸುತ್ತಮುತ್ತಲೂ ಇರುವ ಸ್ಥಿತಿ ಪರಿಸ್ಥಿತಿಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿ ನಾನು ಭಗವತಿಗೆ ಹೇಳಿದೆ: 'ಐಶ್ವರ್ಯ

ವಂತರನ್ನು ಮುಖಸ್ತುತಿ ಮಾಡಬೇಕೆಂಬ ಪ್ರವೃತ್ತಿ ನನ್ನ ಮನಸ್ಸಿನಲ್ಲಿ ಏಳದ ರೀತಿಯಲ್ಲಿ ಒಡನೇ ಅದನ್ನು ಪರಿವರ್ತಿಸಿಬಿಡು.'

(ಅಧರಸೇನನಿಗೆ) "ನಿನಗೀಗಿರುವ ಉದ್ಯೋಗದಲ್ಲೇ ತೃಪ್ತನಾಗಿರು. ಜನ ಐವತ್ತೊ ಅಥವಾ ನೂರೊ ರೂಪಾಯಿ ಸಂಬಳ ಬರುವ ಉದ್ಯೋಗಕ್ಕಾಗೇ ಬಹಳವಾಗಿ ಹಾತೊರೆಯೋವಾಗ ನಿನಗೆ ಮುನ್ನೂರು ರೂಪಾಯಿ ಸಂಬಳ ಬರುತ್ತಿದೆ! ನೀನು ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟ್. ಕಾಮಾರಪುಕುರಿನಲ್ಲಿ ಒಬ್ಬ ಡೆಪ್ಯುಟಿ ಮ್ಯಾಜಿಸ್ಟ್ರೇಟನ್ನು ನೋಡಿದ್ದೆ. ಆತನ ಹೆಸರು ಈಶ್ವರಘೋಷಾಲ. ಆತ ಪೇಟ ಸುತ್ತುತ್ತಿದ್ದ. ಆತನ ಎದುರು ಮನುಷ್ಯರ ಮೂಳೆ ಕೂಡ ನಡುಗುತ್ತಿದ್ದುವು. ನಾನು ಬಾಲ್ಯಕಾಲದಲ್ಲಿ ಆತನನ್ನು ನೋಡಿದ್ದೆ. ಡೆಪ್ಯುಟಿ ಮ್ಯಾಜಿಸ್ಟ್ರೇಟ್ ಏನು ಒಬ್ಬ ಸಾಮಾನ್ಯ ಪುರುಷನೇ!

"ಈಗ ನೀನು ಯಾರ ಕೈ ಕೆಳಗೆ ಇದೀಯೊ ಆತನ ಕೈ ಕೆಳಗೇ ಇರು. ಒಬ್ಬ ಯಜಮಾನನ ಕೈ ಕೆಳಗೆ ಕೆಲಸ ಮಾಡಿದರೇ ಮನಸ್ಸು ಕೆಟ್ಟುಹೋಗಿ ಬಿಡುತ್ತದೆ; ಅಂಥಾದ್ದರಲ್ಲಿ ಹತ್ತು ಜನ ಯಜಮಾನರ ಕೈ ಕೆಳಗೆ!

"ಒಮ್ಮೆ ಒಬ್ಬ ಹೆಂಗಸು ಒಬ್ಬ ಮುಸಲ್ಮಾನನಲ್ಲಿ ಅನುರಕ್ತಳಾಗಿ ಆತನೊಡನೆ ಮಾತುಕತೆಯಾಡಲು ಆತನನ್ನು ತನ್ನ ಮನೆಗೆ ಕರಸಿಕೊಂಡಳು. ಆತ ಒಳ್ಳೆ ಧಾರ್ಮಿಕ. ಆತ ಆಕೆಗೆ ಹೇಳಿದ: 'ನಾನು ನೀರು ಮನೆಗೆ ಹೋಗಬೇಕಾಗಿದೆ. ನೀರಿನ ಪಾತ್ರೆಗಾಗಿ ಮನೆಗೆ ಹೋಗಿಬರುತ್ತೇನೆ.' ಆ ಹೆಂಗಸು ಹೇಳಿದಳು: 'ಎಲ್ಲ ಇಲ್ಲೆ ನಡೆಯಲಿ. ನಾನು ಪಾತ್ರೆ ಕೊಡುತ್ತೇನೆ.' ಆಗ ಆತ ಹೇಳಿದ: 'ಸಾಧ್ಯವಿಲ್ಲ. ನಾನು ಪ್ರಥಮತಃ ಯಾವ ಪಾತ್ರೆಯ ಎದುರು ನಿರ್ಲಜ್ಜತನಾದೆನೊ ಆ ಪಾತ್ರೆಯನ್ನೇ ಉಪಯೋಗಿಸುತ್ತೇನೆ. ಮತ್ತೆ ಹೊಸದೊಂದರ ಎದುರು ನಿರ್ಲಜ್ಜತನಾಗಲಾರೆ.' ಹೀಗೆಂದು ಹೇಳಿ ಆತ ಮನೆಗೆ ಹಿಂದಿರುಗಿ ಹೊರಟುಹೋದ. ಆ ಹೆಂಗಸಿಗೂ ಬುದ್ಧಿ ಬಂತು. ಆತ ಹೊಸ ನೀರಿನ ಪಾತ್ರೆ ಎಂದು ಉಪಯೋಗಿಸಿದುದರ ಅರ್ಥ ಏನೆಂಬುದನ್ನು ಆಕೆ ತಿಳಿದುಕೊಂಡಳು."

ನರೇಂದ್ರ ಪಿತೃವಿಯೋಗವಾದನಂತರ ಬಹಳ ಕಷ್ಟಕ್ಕೆ ಸಿಕ್ಕಿಕೊಂಡಿದಾನೆ. ತಾಯಿ ಮತ್ತು ಸೋದರ ಸೋದರಿಯರ ಉದರ ಪೋಷಣೆಗಾಗಿ ಕೆಲಸ ಹುಡುಕುತ್ತಿದಾನೆ. ವಿದ್ಯಾಸಾಗರನ ಬೋಬಾಜಾರ್ ಸ್ಕೂಲಿನಲ್ಲಿ ಕೆಲವು ಕಾಲ ಹೆಡ್‌ಮಾಸ್ಟರ್ ಕೆಲಸ ಮಾಡಿದ್ದ.

ಅಧರಸೇನ: "ಒಳ್ಳೆಯದು, ನರೇಂದ್ರನಿಗೆ ಯಾವುದಾದರೂ ಒಂದು ಕೆಲಸ ದೊರಕಿಸಿಕೊಟ್ಟರೆ ಮಾಡುತ್ತಾನೇನು?"

ಶ್ರೀರಾಮಕೃಷ್ಣರು: "ಹೌದು, ಮಾಡುತ್ತಾನೆ. ಆತ ತಾಯಿ, ಸೋದರ ಸೋದರಿಯರನ್ನ ಸಾಕಬೇಕಾಗಿದೆ."

ಅಧರಸೇನ: "ಒಳ್ಳೇದು, ನರೇಂದ್ರನಿಗೆ ಐವತ್ತು ರೂಪಾಯಿನದೇ ಸಾಕೊ ಅಥವಾ ನೂರು ರೂಪಾಯಿನದು ಬೇಕೊ. ಆತ ನೂರು ರೂಪಾಯಿನ ದಕ್ಕೆ ಪ್ರಯತ್ನ ಮಾಡುತ್ತಾನೇನು?"

ಶ್ರೀರಾಮಕೃಷ್ಣರು: "ಪ್ರಾಪಂಚಿಕರು ಹಣವನ್ನ ಬಹಳವಾಗಿ ಪ್ರೀತಿಸುತ್ತಾರೆ—ಭಾವಿಸುತ್ತಾರೆ, ಇಂಥ ವಸ್ತು ಈ ಜಗತ್ತಿನಲ್ಲಿ ಬೇರೊಂದು ಇಲ್ಲ ಎಂದು. ಒಮ್ಮೆ ಶಂಭುಮಲ್ಲಿಕ ಹೇಳಿದ: 'ನನ್ನ ಸಕಲ ಐಶ್ವರ್ಯ ಗಳನ್ನೂ ಭಗವಂತನ ಪಾದಪದ್ಮಗಳಲ್ಲಿ ಅರ್ಪಿಸಿಬಿಡಬೇಕೆಂಬುದು ನನ್ನ ಇಚ್ಛೆ.' ಆದರೆ ಭಗವಂತನಿಗೆ ಪ್ರಾಪಂಚಿಕ ಐಶ್ವರ್ಯ ಬೇಕಾಗಿರುವುದೆ? ಆತನಿಗೆ ಬೇಕಾಗಿದೆ—ಭಕ್ತರ ಜ್ಞಾನ, ಭಕ್ತಿ, ವಿವೇಕ, ವೈರಾಗ್ಯ.

"ರಾಧಾಕಾಂತದೇವಾಲಯದಿಂದ ಆಭರಣ ಕಳವಾದಾಗ ಮಥುರ-ಬಾಬು ಹೇಳಿದ: 'ಹೇ ಭಗವಂತ, ನಿನ್ನ ಕೈಯಲ್ಲಿ ನಿನ್ನ ಆಭರಣಗಳನ್ನು ರಕ್ಷಿಸಿಕೊಳ್ಳಲಾಗಲಿಲ್ಲವಲ್ಲ! ಇದು ಎಂಥಾ ನಾಚಿಕೆಗೇಡಿತನ!' ಆತ ಒಮ್ಮೆ ನನಗೆ ಒಂದು ತಾಲೂಕನ್ನು ಜಹಗೀರಾಗಿ ಕೊಡಬೇಕೆಂದು ಇಚ್ಛೆಪಟ್ಟು, ಅದರ ಸಂಬಂಧವಾಗಿ ಹೃದೂನೊಡನೆ ಸಮಾಲೋಚನೆ ನಡ ಸುತ್ತಿದ್ದ. ನಾನು ಕಾಳೀದೇವಾಲಯದಿಂದಲೇ ಎಲ್ಲವನ್ನೂ ಕೇಳಿದೆ. ಬಳಿಕ ನಾನು ಆತನಿಗೆ ಹೇಳಿದೆ: 'ದಯವಿಟ್ಟು ಆ ಪ್ರಸ್ತಾಪವನ್ನೇ ಬಿಟ್ಟು ಬಿಡು. ನೀನು ಹಾಗೆ ಮಾಡಿದ್ದೇ ಆದರೆ ಅದು ನನಗೆ ಬಹಳ ದೊಡ್ಡ ವಿಪತ್ತನ್ನು ತಂದೊಡ್ಡಿಬಿಡುತ್ತದೆ.'"

ಅಧರಸೇನ: "ನಾನು ನಿಸ್ಸಂದೇಹದಿಂದ ಹೇಳುತ್ತೇನೆ, ಈ ಜಗತ್ತು ಸೃಷ್ಟಿಯಾದಂದಿನಿಂದ ನಿಮ್ಮಂಥವರು ಆರೇಳು ಜನಕ್ಕಿಂತ ಹೆಚ್ಚಾಗಿ ಜನ್ಮ ತಳೆದಿಲ್ಲ."

ಶ್ರೀರಾಮಕೃಷ್ಣರು: "ಅದು ಹೇಗೆ? ನಿಶ್ಚಯವಾಗಿಯೂ ತ್ಯಾಗೀ ಪುರುಷರಿದಾರೆ. ಐಶ್ವರ್ಯವನ್ನು ತ್ಯಜಿಸಿದೊಡನೇ ಜನರಿಗೆ ಗೊತ್ತಾಗಿ ಬಿಡುತ್ತದೆ, ಆತ ಯಾರು ಎಂಬುದು. ಆದರೆ ಇದೂ ನಿಜ, ಜನರಿಗೆ ಗೊತ್ತಾಗದವರೂ ಇದಾರೆ. ಪಶ್ಚಿಮ ಭಾರತದಲ್ಲಿ ಅಂಥವರಿಲ್ಲ?"

ಅಧರಸೇನ: "ಕಲ್ಕತ್ತದಲ್ಲಿ ನನಗೆ ತಿಳಿದಿರುವ ಹಾಗೆ ಒಬ್ಬರಿದಾರೆ—ದೇವೇಂದ್ರನಾಥಠಾಕುರ್."

ಶ್ರೀರಾಮಕೃಷ್ಣರು: "ಏನು ಹೇಳಿದೆ? ಆತನಷ್ಟು ಈ ಪ್ರಾಪಂಚಿಕ ಸುಖಗಳನ್ನು ಅನುಭವಿಸಿರತಕ್ಕವರು ಬೇರೆ ಯಾರಿದಾರೆ? ಒಮ್ಮೆ ನಾನು ಮಥುರಬಾಬುವಿನೊಡನೆ ಆತನ ಮನೆಗೆ ಹೋಗಿದ್ದೆ. ಚಿಕ್ಕ ಪುಟ್ಟ ಮಕ್ಕಳು ಆತನಿಗೆ ಬೇಕಾದಷ್ಟು. ಮನೆ ಡಾಕ್ಟರ್ ಬಂದು ಔಷಧ ಬರೆಯುತ್ತಾ ಕುಳಿತಿದ್ದ. ಆತನಿಗೆ ಎಂಟು ಗಂಡು ಮಕ್ಕಳೂ ಅಲ್ಲದೆ ಹೆಣ್ಣು ಮಕ್ಕಳೂ ಇದಾರೆ. ಅಂಥವನು ಭಗವಂತನ ಧ್ಯಾನ ಮಾಡದೆ ಇನ್ನು ಬೇರೆ ಯಾರು ಮಾಡಬೇಕು? ಅಷ್ಟು ಸುಖೋಪಭೋಗಗಳನ್ನು ಅನುಭವಿಸಿಯೂ ಆತ ಭಗವಂತನ ಧ್ಯಾನ ಮಾಡದೆ ಇದ್ದಿದ್ದರೆ ಜನ ಆತನಿಗೆ ಛೀಮಾರಿ ಮಾಡಿ ಬಿಡುತ್ತಿದ್ದರು."

ನಿರಂಜನ: "ಆದರೆ ಆತ ತನ್ನ ತಂದೆಯ ಸಾಲವನ್ನೆಲ್ಲಾ ತೀರಿಸಿ ಬಿಟ್ಟ."

ಶ್ರೀರಾಮಕೃಷ್ಣರು: "ಆ ಮಾತುಕತೆಗಳನ್ನೆಲ್ಲಾ ಒಂದು ಕಡೆಗೆ ಕಟ್ಟಿಡು. ಸುಮ್ಮನೆ ನನ್ನನ್ನು ರೇಗಿಸಬೇಡ. ಶಕ್ತಿ ಇದ್ದೂ ತಂದೆಯ ಸಾಲವನ್ನು ತೀರಿಸದೆ ಇದ್ದವನನ್ನ ಮನುಷ್ಯ ಅಂತ ಕರೆಯಬಹುದೇ? ಆದರೆ ಸಂಸಾರಿಗಳು ಪೂರ್ಣವಾಗಿ ಸಂಸಾರದಲ್ಲಿ ಮುಳುಗಿಹೋಗಿರುತ್ತಾರೆ. ಅವರಿಗೆ ಹೋಲಿಸಿದರೆ ಆತ ಎಷ್ಟೋ ಮೇಲು. ಆತನಿಂದ ಅವರು ಎಷ್ಟೋ ಕಲಿತುಕೊಳ್ಳಬಹುದು.

"ನಿಜವಾದ ತ್ಯಾಗೀ ಭಕ್ತನಿಗು ಸಂಸಾರೀ ಭಕ್ತನಿಗು ಅಜಗಜಾಂತರ ವ್ಯತ್ಯಾಸ. ನಿಜವಾದ ಸನ್ಯಾಸಿ, ಅಂದರೆ ತ್ಯಾಗೀ ಭಕ್ತ ಜೇನು ಹುಳು ಇದ್ದ ಹಾಗೆ. ಜೇನು ಹುಳು ಹೂವಿನ ಮೇಲೆ ಹೊರತು ಬೇರೆ ಯಾವುದರ ಮೇಲೂ ಕೂರದು. ಮಧುವನ್ನು ಹೊರತು ಬೇರೆ ಏನನ್ನೂ ಸೇವಿಸದು. ಆದರೆ ಸಂಸಾರೀ ಭಕ್ತ ಸಾಮಾನ್ಯ ನೊಣ ಇದ್ದ ಹಾಗೆ. ಅದು ಸಿಹಿ ತಿಂಡಿಗಳ ಮೇಲೂ ಕೂರುತ್ತದೆ, ಕೊಳೆತ ಗಾಯಗಳ ಮೇಲೂ ಕೂರುತ್ತದೆ. ಆತ ಈ ನಿಮಿಷ ಭಗವದ್ಭಾವನೆಯಿಂದ ತುಂಬಿತುಳುಕಾಡುತ್ತಿದ್ದವನು ಮರು ನಿಮಿಷ ಕಾಮಕಾಂಚನಗಳಲ್ಲಿ ಮತ್ತನಾಗಿರುತ್ತಾನೆ.

"ನಿಜವಾದ ತ್ಯಾಗೀ ಭಕ್ತ ಚಾತಕ ಪಕ್ಷಿ ಇದ್ದ ಹಾಗೆ. ಅದು ಸ್ವಾತಿ ಮಳೆಯ ನೀರನ್ನು ವಿನಾ ಬೇರೆ ಯಾವ ನೀರನ್ನೂ ಕುಡಿಯದು. ಏಳು

ಸಮುದ್ರಗಳಲ್ಲೂ, ಎಲ್ಲಾ ನದಿಗಳಲ್ಲೂ ನೀರು ತುಂಬಿತುಳುಕಾಡುತ್ತಿದ್ದರೂ ಅವ್ರೊಂದನ್ನೂ ಅದು ಮುಟ್ಟದು. ತ್ಯಾಗೀಭಕ್ತ ಕಾಮಕಾಂಚನಗಳನ್ನ ಇಕ್ಕಳದಿಂದಲೂ ಮುಟ್ಟೋದಿಲ್ಲ. ಕಾಮಕಾಂಚನಗಳನ್ನ ಹತ್ತಿರ ಇಟ್ಟು ಕೊಳ್ಳೋದಿಲ್ಲ—ಆಸಕ್ತಿ ಉಂಟಾಗಿಬಿಡಬಹುದೆಂದು.''

ಅಧರಸೇನ: ''ಚೈತನ್ಯದೇವನೂ ಪ್ರಾಪಂಚಿಕ ಸುಖಗಳನ್ನ ಅನುಭವಿಸಿದ್ದನಲ್ಲ.''

ಶ್ರೀರಾಮಕೃಷ್ಣರು ಆಶ್ಚರ್ಯಚಕಿತರಾಗಿ: ''ಏನು? ಯಾವ ಪ್ರಾಪಂಚಿಕ ಸುಖಗಳನ್ನ?''

ಅಧರಸೇನ: ''ಪಾಂಡಿತ್ಯ! ಗೌರವ! ಇವುಗಳ ಸುಖವನ್ನ.''

ಶ್ರೀರಾಮಕೃಷ್ಣರು: ''ಅನ್ಯರ ದೃಷ್ಟಿಗೆ ಅದು ಗೌರವವಾಗಿ ತೋರಬಹುದು, ಆದರೆ ಆತನ ದೃಷ್ಟಿಗೆ ಅದು ಏನೂ ಅಲ್ಲ. ನೀನೂ ನನಗೆ ಗೌರವ ತೋರಿಸುತ್ತ ಇದೀಯೆ, ಹಾಗೇ ನಿರಂಜನ ಕೂಡ. ಆದರೆ ನನ್ನ ದೃಷ್ಟಿಯಿಂದ ಎರಡೂ ಒಂದೇ. ಸತ್ಯವಾಗಿ ಹೇಳುತ್ತೇನೆ: ಒಬ್ಬ ಧನಿಕನನ್ನ ಕೈಗೆ ಹಾಕಿಕೊಳ್ಳಬೇಕೆಂಬ ಭಾವನೆಯೇ ನನ್ನ ತಲೆಯನ್ನು ಹೊಗದು. ಸುರೇಂದ್ರ ಒಮ್ಮೆ ಹೇಳಿದನಂತೆ, ನನ್ನನ್ನು ಉದ್ಧಾರಮಾಡಿಬಿಡುವವನ ಹಾಗೆ, ನಾನು ರಾಖಾಲನನ್ನು ನನ್ನ ಹತ್ತಿರ ಇಟ್ಟುಕೊಂಡಿರುವುದರಿಂದ ಆತನ ತಂದೆ ನನ್ನ ಮೇಲೆ ಮೊಕದ್ದಮೆ ಹೂಡಿಬಿಡಬಹುದು ಎಂದು. ಮನಮೋಹನ ಈ ಸಮಾಚಾರವನ್ನು ನನಗೆ ತಿಳಿಸಿದಾಗ, ನಾನು ರೇಗಿ ಹೇಳಿದೆ: 'ಯಾವನೊ ಈ ಸುರೇಂದ್ರ? ಅವನಿಗೆ ಎದೆಕೆಚ್ಚು ಎಷ್ಟಿರಬೇಕು ಹಾಗೆ ಮಾತಾಡಬೇಕಾಗಿದ್ದರೆ? ಅವನಿಗೆ ಸೇರಿದ ಒಂದು ಜಮಖಾನ ಮತ್ತು ತಲೆದಿಂಬು ಇಲ್ಲಿ ಇವೆ. ಅವನು ಸ್ವಲ್ಪ ಹಣ ಕೊಡುತ್ತಾನೆ. ಅದಕ್ಕೋ ಇಷ್ಟೊಂದು ಅಹಂಕಾರದ ಮಾತುಗಳು?' ''

ಅಧರಸೇನ: ''ತಿಂಗಳಿಗೆ ಹತ್ತು ರೂಪಾಯಿ ಕೊಡುತ್ತಾ ಇದಾನಂತೆ, ಅಲ್ಲವೆ?''

ಶ್ರೀರಾಮಕೃಷ್ಣರು: ''ಹತ್ತು ರೂಪಾಯಿನಿಂದ ಎರಡು ತಿಂಗಳು ನಡೆಯುತ್ತದೆ. ಭಕ್ತರು ಇಲ್ಲಿ ಇರುತ್ತಾರೆ—ಅವರಿಗಾಗಿ ಅವನು ಕೊಡುತ್ತಾನೆ. ಪುಣ್ಯ ಕಟ್ಟಿಕೊಳ್ಳೋನು ಅವನು. ಅದರಿಂದ ನನಗೆ ಬಂದುದೇನು? ನಾನು ರಾಖಾಲ, ನರೇಂದ್ರ ಇವರೇ ಮೊದಲಾದವರನ್ನ ಪ್ರೀತಿಸುತ್ತಿದೇನೆ. ಅದು ಸ್ವಾರ್ಥಕ್ಕಾಗೇನು?''

ಮಾಸ್ಟರ್: "ನಿಮ್ಮದು ತಾಯಿಯ ಪ್ರೀತಿ ಹಾಗೆ."

ಶ್ರೀರಾಮಕೃಷ್ಣರು: "ತಾಯಿಯ ಪ್ರೀತಿ ನಿಸ್ವಾರ್ಥವಾದದ್ದೇ. ಆದರೂ ಆ ಪ್ರೀತಿಯ ಹಿನ್ನೆಲೆಯಲ್ಲಿ ಮಕ್ಕಳು ಬೆಳೆದು ಮುಂದೆ ತನ್ನನ್ನು ಕಾಪಾಡುವರೆಂಬ ನಿರೀಕ್ಷಣೆ ಇದೆ. ಆದರೆ ನಾನು ಇವರನ್ನು ಪ್ರೀತಿಸುತ್ತೇನೆ, ಇವರಲ್ಲಿ ಸಾಕ್ಷಾತ್ ಭಗವಂತನನ್ನೇ ನೋಡಿ. ಇದು ಬರಿದೆ ಮಾತಲ್ಲ.

(ಅಧರಸೇನನಿಗೆ) "ಇಲ್ಲಿ ಕೇಳು. ದೀಪವನ್ನು ಹೊತ್ತಿಸಿದನಂತರ ದೀಪದ ಚಿಟ್ಟೆಗಳಿಗೆ ಅಭಾವವಿರದು. ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡರೆ ಆತ ಎಲ್ಲವನ್ನೂ ದೊರಕಿಸಿಕೊಟ್ಟುಬಿಡುತ್ತಾನೆ—ಯಾವುದರ ಅಭಾವವೂ ಇರದು. ಭಗವಂತ ಹೃದಯಮಧ್ಯದಲ್ಲಿ ಬಂದು ನೆಲಸಿದರೆ ಆತನಿಗೆ ಸೇವೆ ಸಲ್ಲಿಸಲು ಅನೇಕ ಮಂದಿ ಮುಂದೆ ಬರುತ್ತಾರೆ.

"ಒಮ್ಮೆ ಎಳೆ ವಯಸ್ಸಿನ ಒಬ್ಬ ಸನ್ಯಾಸಿ ಒಬ್ಬ ಗೃಹಸ್ಥರ ಮನೆಗೆ ಭಿಕ್ಷೆಗೆ ಹೋದ. ಆತ ಆಜನ್ಮ ಸನ್ಯಾಸಿ. ಸಂಸಾರದ ವಿಷಯ ಎಳ್ಳಷ್ಟೂ ಗೊತ್ತಿರಲಿಲ್ಲ. ಆ ಮನೆಯ ಒಬ್ಬ ಯುವತಿ ಭಿಕ್ಷೆ ನೀಡಿದಳು. ಆತ ಆಕೆಯ ತಾಯಿಯನ್ನು ಕೇಳಿದ: 'ತಾಯಿ, ಈಕೆಯ ಎದೆಯ ಮೇಲೆ ಕುರು ಎದ್ದಿವೆಯೇನು?' ತಾಯಿ ಉತ್ತರವಿತ್ತಳು: 'ಇಲ್ಲ ಮಗು. ಈಕೆಯ ಹೊಟ್ಟೆಯಲ್ಲಿ ಮಕ್ಕಳಾಗುವುವು ಎಂದು ಭಗವಂತ ಈಕೆಗೆ ಸ್ತನ ಕೊಟ್ಟಿದಾನೆ—ಈ ಸ್ತನಗಳಿಂದ ಮಕ್ಕಳು ಹಾಲು ಕುಡಿಯುತ್ತವೆ.' ಆಗ ಸನ್ಯಾಸಿ ಹೇಳಿದ: 'ಹಾಗಾದರೆ ಇನ್ನೇಕೆ ಚಿಂತೆ? ಇನ್ನು ನಾನೇಕೆ ಭಿಕ್ಷೆಗೆ ಬರಲಿ? ಯಾರು ನನ್ನನ್ನು ಸೃಷ್ಟಿಸಿದಾನೊ ಆತ ನನಗೆ ಆಹಾರ ಕೊಡುತ್ತಾನೆ.'

"ಕೇಳು. ಯಾರು ತನ್ನ ಉಪಪತಿಗಾಗಿ ಸರ್ವಸ್ವವನ್ನೂ ತ್ಯಜಿಸಿ ಬಂದಳೊ ಅವಳು, ಆವಶ್ಯಕವೆನಿಸಿದರೆ, ಹೇಳಬೇಡ: 'ಹೇ ನೀಚ! ನಿನ್ನ ಎದೆಯ ಮೇಲೆ ಕುಳಿತು ನಿನ್ನನ್ನು ನುಂಗಿಕೊಂಡುಬಿಡುತ್ತೇನೆ' ಅಂತ?

"ತೋತಾಪುರಿ ಒಮ್ಮೆ ನನಗೆ ತಿಳಿಸಿದ, ಯಾರೊ ಒಬ್ಬ ರಾಜ ಚಿನ್ನದ ತಟ್ಟೆ ಬಟ್ಟಲು ಉಪಯೋಗಿಸಿ ಸಾಧುಗಳಿಗೆ ಸಂತರ್ಪಣೆ ಏರ್ಪಡಿಸಿದ್ದುದರ ವಿಷಯವಾಗಿ. ಕಾಶಿಯ ಮಠಗಳಲ್ಲಿ ನೋಡಿದೇನೆ, ಮಠಾಧೀಶರಿಗೆ ಜನ ಎಷ್ಟು ಗೌರವ ತೋರಿಸುತ್ತಾರೆ ಎಂಬುದನ್ನ. ಉತ್ತರ ದೇಶದ ದೊಡ್ಡ ದೊಡ್ಡ ಧನಿಕರು 'ಏನಪ್ಪಣೆ' ಅಂತ ಕೈಕಟ್ಟಿ ನಿಂತಿರುತ್ತಿದ್ದರು! ಆದರೆ ನಿಜವಾದ ಸನ್ಯಾಸಿ, ಅಂದರೆ ನಿಜವಾದ ತ್ಯಾಗೀ ಪುರುಷ

ಚಿನ್ನದ ತಟ್ಟೆಗಳಿಗೂ ಹಾತೊರೆಯೋದಿಲ್ಲ, ಗೌರವಕ್ಕೂ ಹಾತೊರೆಯೋದಿಲ್ಲ. ಭಗವಂತ ನೋಡಿಕೊಳ್ಳುತ್ತಾನೆ, ಆತನಿಗೆ ಯಾವುದರ ಅಭಾವವೂ ಇಲ್ಲದ ಹಾಗೆ. ತನ್ನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಏನೇನು ಬೇಕೊ ಎಲ್ಲವನ್ನೂ ಭಗವಂತ ಭಕ್ತನಿಗೆ ದೊರಕಿಸಿಕೊಡುತ್ತಾನೆ.

(ಅಧರಸೇನನಿಗೆ) "ನೀನು ಒಬ್ಬ ಕಾರ್ಯನಿರ್ವಾಹಕ. ನಿನಗೆ ಬೇರೆ ಇನ್ನೇನು ಹೇಳಲಿ? ಏನು ಸರಿ ಅಂತ ತೋರುತ್ತೊ ಹಾಗೆ ಮಾಡು. ನಾನೊಬ್ಬ ದಡ್ಡ—ನಿರಕ್ಷರಕುಕ್ಷಿ."

ಅಧರಸೇನ ನಗುತ್ತ ಭಕ್ತರಿಗೆ: "ಈಗ ಇವರು ನನ್ನನ್ನು ಪರೀಕ್ಷಿಸುತ್ತಿದಾರೆ."

ಶ್ರೀರಾಮಕೃಷ್ಣರು ನಗುತ್ತ: "ನಿವೃತ್ತಿಯೇ ಒಳ್ಳೆಯದು. ಕೇಳಲಿಲ್ಲ ನೀನು, ಸಂಬಳದ ರಸೀತಿಗೆ ನಾನು ರುಜು ಹಾಕದೆ ಹೋದುದನ್ನ? ಭಗವಂತನೇ ವಸ್ತು, ಉಳಿದುದೆಲ್ಲಾ ಅವಸ್ತು."

ಹಾಜರಾ ಕೊಠಡಿಯನ್ನು ಪ್ರವೇಶಿಸಿ ನೆಲದ ಮೇಲೆ ಭಕ್ತರೊಡನೆ ಕುಳಿತುಕೊಳ್ಳುತ್ತಿದಾನೆ. ಹಾಜರಾ ಆಗಾಗ ಹೇಳುತ್ತಿರುತ್ತಾನೆ: "ಸೋಽಹಮ್! ಸೋಽಹಮ್!", "ನಾನೇ ಅವನು! ನಾನೇ ಅವನು!" ಎಂಬುದಾಗಿ. ಲಾಟು ಮೊದಲಾದವರಿಗೆ ಹೇಳುತ್ತಾನೆ: "ಭಗವಂತನನ್ನು ಫಲಪುಷ್ಪಾದಿಗಳಿಂದ ಪೂಜಿಸುವುದರಿಂದ ದೊರೆಯೋ ಪ್ರಯೋಜನವೇನು? ಇದು, ಅವನಿಗೆ ಸೇರಿದುದನ್ನೆ ಅವನಿಗೇ ಅರ್ಪಿಸಿದ ಹಾಗಾಗುತ್ತದೆ." ಇದನ್ನು ಒಮ್ಮೆ ಆತ ನರೇಂದ್ರನಿಗೆ ಹೇಳಿದ್ದ.

ಈಗ ಪರಮಹಂಸರು ಹಾಜರಾನೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ನಾನು ಲಾಟುವಿಗೆ ವಿವರಿಸಿ ಹೇಳಿದೆ, ಭಕ್ತ ನಿಜವಾಗಿ ಯಾರನ್ನ ಪೂಜೆ ಮಾಡುತ್ತಾನೆ ಎಂಬುದರ ವಿಷಯವಾಗಿ."

ಹಾಜರಾ: "ಭಕ್ತ, ತಾನು ತನಗೇ ಪ್ರಾರ್ಥನೆಮಾಡಿಕೊಳ್ಳುತ್ತಾನೆ."

ಶ್ರೀರಾಮಕೃಷ್ಣರು: "ಇದು ತುತ್ತತುದಿಯ ಅವಸ್ಥೆಯ ಮಾತು-ಕತೆ. ಆ ಅವಸ್ಥೆಯನ್ನು ಮುಟ್ಟಲೋಸುಗವೇ ಸಾಧನೆಭಜನೆ—ಆತನ ನಾಮಗುಣಕೀರ್ತನೆ. ತನ್ನಲ್ಲಿ ತನ್ನನ್ನು ಅರಿತುಕೊಂಡುಬಿಟ್ಟುದೇ ಆದರೆ ಅಲ್ಲಿಗೆ ಎಲ್ಲ ಮುಗಿದ ಹಾಗೆ. ಇದನ್ನು ಅರಿತುಕೊಳ್ಳುವುದಕ್ಕಾಗೇ ಸಾಧನೆ. ಈ ಶರೀರಧಾರಣೆ ಆ ಉದ್ದೇಶಕ್ಕಾಗೇ. ಚಿನ್ನದ ಪ್ರತಿಮೆಯನ್ನು ಎರಕ

ಹೊಯ್ಯುದವರೆಗೆ ಅಚ್ಚಿನ ಆವಶ್ಯಕತೆ; ಹೊಯ್ದನಂತರ ಅಚ್ಚನ್ನು ಬಿಸಾಡಿ ಬಿಡುತ್ತಾರೆ. ಭಗವಂತನ ಸಾಕ್ಷಾತ್ಕಾರವಾದನಂತರ ಈ ಶರೀರವನ್ನು ತ್ಯಜಿಸಿಬಿಡಬಹುದು.

"ಭಗವಂತ ಕೇವಲ ಒಳಗೇ ಇಲ್ಲ; ಒಳಗೂ ಇದಾನೆ, ಹೊರಗೂ ಇದಾನೆ. ಕಾಳೀದೇವಾಲಯದಲ್ಲಿ ಭಗವತಿ ನನಗೆ ತೋರಿಸಿದಳು ಎಲ್ಲವೂ ಚಿನ್ಮಯವಾಗಿರುವುದನ್ನ, ಅಂದರೆ ಎಲ್ಲವೂ ತಾನೇ ಆಗಿರುವುದನ್ನ—ಪ್ರತಿಮೆ, ನಾನು, ಪೂಜಾ ಪಾತ್ರೆಗಳು, ಹೊಸಲು, ಅಮೃತಶಿಲೆಯ ನೆಲ ಎಲ್ಲವೂ ಚಿನ್ಮಯವಾಗಿರುವುದನ್ನ.

"ಈ ಸಾಕ್ಷಾತ್ಕಾರವನ್ನು ಹೊಂದಲೋಸುಗವೇ ಪ್ರಾರ್ಥನೆ, ಸಾಧನೆ ಭಜನೆ, ನಾಮಗುಣಕೀರ್ತನೆ ಮಾಡುವುದು. ಇದಕ್ಕಾಗೇ ಆತನನ್ನು ಪ್ರೀತಿಸುವುದು. ಆ ಹುಡುಗರು[1] ಕೆಳ ಅಂತಸ್ತಿನಲ್ಲಿದಾರೆ; ಇನ್ನೂ ಅವರು ಆ ಉಚ್ಚ ಅವಸ್ಥೆಯನ್ನು ಮುಟ್ಟಿಲ್ಲ. ಅವರು ಭಕ್ತಿಮಾರ್ಗದಲ್ಲಿ ನಡೆಯುತ್ತಿದಾರೆ. ಅವರಿಗೆ 'ಸೋಽಹಮ್', 'ನಾನೇ ಅವನು' ಇತ್ಯಾದಿ ಏನೂ ಹೇಳಬೇಡ."

ಹಕ್ಕಿ ಹೇಗೆ ತನ್ನ ಮರಿಗಳನ್ನು ತನ್ನ ರೆಕ್ಕೆಯಿಂದ ಮುಚ್ಚಿ ರಕ್ಷಿಸುವುದೊ ಹಾಗೆ ಪರಮಹಂಸರು ತಮ್ಮ ಭಕ್ತರನ್ನು ರಕ್ಷಿಸಿಡುತ್ತಿದಾರೆ.

ಅಧರಸೇನ ಮತ್ತು ನಿರಂಜನ ಉಪಾಹಾರ ಮಾಡಲು ಜಗಲಿಯ ಕಡೆ ಹೋಗುತ್ತಿದಾರೆ. ಸ್ವಲ್ಪ ಹೊತ್ತಿನಲ್ಲೆ ಹಿಂದಿರುಗಿಬಂದರು.

ಅಧರಸೇನ ನಗುತ್ತ: "ನಾವೆಲ್ಲ ಇಷ್ಟೊಂದು ಮಾತಾಡಿದೆವು. (ಮಾಸ್ಟರನ್ನು ತೋರಿಸಿ) ಒಂದು ಮಾತೂ ಆಡಲಿಲ್ಲವಲ್ಲ ಈತ!"

ಶ್ರೀರಾಮಕೃಷ್ಣರು: "ಕೇಶವಸೇನನ ಸಮಾಜದಲ್ಲಿ ನಾಲ್ಕು ಡಿಗ್ರಿ ಪಡೆದುಕೊಂಡಿದ್ದ ಒಬ್ಬ ಯುವಕ ಇದ್ದ. ಜನ ನನ್ನೊಡನೆ ವಾದಿಸುವುದನ್ನು ನೋಡಿ ಆತ ಸುಮ್ಮನೆ ನಗುತ್ತಿರುತ್ತಿದ್ದ. ಆತ ಹೇಳುತ್ತಿದ್ದ: 'ಇವರೊಡನೆಯೇ ತರ್ಕಕ್ಕೆ ಹೋಗುವುದು! ಇದು ಎಂಥ ತಿಳಿಗೇಡಿತನ!' ಆತನನ್ನು, ಸ್ವಲ್ಪ ಕಾಲವಾದನಂತರ, ಮತ್ತೆ ಕೇಶವಸೇನನ ಸಮಾಜದಲ್ಲಿ ನೋಡಿದೆ—ಆದರೆ ಆ ಹಿಂದಿನ ಕಾಂತಿ ಆತನ ಮುಖದಲ್ಲಿರಲಿಲ್ಲ."

ಶ್ರೀರಾಮಕೃಷ್ಣರ ರಾತ್ರಿ ಆಹಾರ—ಭಗವತಿ ಕಾಳಿಗೆ ಅರ್ಪಿಸಿದ ಒಂದೆರಡು ಪೂರಿ ಮತ್ತು ಒಂದು ಸ್ವಲ್ಪ ರವೆ ಪಾಯಸ ಮಾತ್ರ. ನೆಲದ

1. ಲಾಟು ಮೊದಲಾದ ಯುವಕರು.

ಮೇಲೆ ಕುಳಿತು ಆಹಾರ ತೆಗೆದುಕೊಳ್ಳುತ್ತಿದ್ದಾರೆ. ಮಾಸ್ಟರ್ ಮತ್ತು ಲಾಟು ಕೊಠಡಿಯಲ್ಲಿದ್ದಾರೆ. ಭಕ್ತರು ಸಂದೇಶಾದಿ ಸಿಹಿ ತಿಂಡಿಗಳನ್ನು ಪರಮಹಂಸರಿಗಾಗಿ ತಂದಿದ್ದಾರೆ. ಒಂದು ಚೂರು ಸಂದೇಶವನ್ನು ಮುಟ್ಟಿ ಲಾಟುವನ್ನು ಕೇಳುತ್ತಿದ್ದಾರೆ: "ಇದನ್ನು ತಂದ ನೀಚನಾರು?" ಅದನ್ನು ರವೆ ಪಾಯಸದ ಬಟ್ಟಲಿಂದ ತೆಗೆದು ಹೊರಕ್ಕೆ ಹಾಕುತ್ತಿದ್ದಾರೆ. ಮಾಸ್ಟರ್ ಮತ್ತು ಲಾಟುವಿಗೆ ಹೇಳುತ್ತಿದ್ದಾರೆ: "ನನಗೆ ಆತನ ವಿಷಯವೆಲ್ಲಾ ಚೆನ್ನಾಗಿ ಗೊತ್ತು. ಆತನ ಶೀಲ ಚೆನ್ನಾಗಿಲ್ಲ."

ಲಾಟು: "ನಿಮಗೆ ಈ ಸಿಹಿ ತಿಂಡಿಯನ್ನು ಕೊಡಲೆ?"

ಶ್ರೀರಾಮಕೃಷ್ಣರು: "ಕಿಶೋರಿ ತಂದಿದ್ದಾನೆ."

ಲಾಟು: "ಇದು ನಿಮಗೆ ಒಗ್ಗುವುದೆ?"

ಶ್ರೀರಾಮಕೃಷ್ಣರು ನಗುತ್ತ: "ಹೌದು."

ಮಾಸ್ಟರ್ ಆಂಗ್ಲವಿದ್ಯಾಭ್ಯಾಸ ಪಡೆದಿದ್ದಾನೆ. ಪರಮಹಂಸರು ಆತನಿಗೆ ಹೇಳುತ್ತಿದ್ದಾರೆ: "ಸಿಕ್ಕಿಸಿಕ್ಕಿದವರು ತರುವುದನ್ನೆಲ್ಲಾ ನಾನು ತಿನ್ನಲಾರೆ. ನೀನು ಇದನ್ನು ಒಪ್ಪುತ್ತೀಯಾ?"

ಮಾಸ್ಟರ್: "ಕ್ರಮೇಣ ಎಲ್ಲವನ್ನೂ ಒಪ್ಪಲೇ ಬೇಕಾಗುತ್ತದೆ."

ಶ್ರೀರಾಮಕೃಷ್ಣರು: "ನಿಜ, ನೀನು ಹೇಳುವುದು ಸರಿ."

ಊಟವಾದನಂತರ ಆ ಅರ್ಧಚಂದ್ರಾಕೃತಿಯ ಜಗಲಿಗೆ ಹೋಗಿ ಕೈ ತೊಳೆದುಕೊಳ್ಳುತ್ತಿದ್ದಾರೆ. ಮಾಸ್ಟರ್ ಅವರ ಕೈಗೆ ನೀರು ಹಾಕುತ್ತಿದ್ದಾನೆ. ಪರಮಹಂಸರು ಮಾಸ್ಟರನ್ನು ಕೇಳುತ್ತಿದ್ದಾರೆ: "ಹಾಗಾದರೆ, ನಾರಾಣನಿಗೆ ಒಂದು ರೂಪಾಯಿ ಕೊಡುತ್ತೀಯೆ ತಾನೆ?" ಮಾಸ್ಟರ್ ಉತ್ತರವೀಯುತ್ತಿದ್ದಾನೆ: "ನಿಸ್ಸಂದೇಹವಾಗಿ."

ಶರತ್ಕಾಲದ ನೀಲಾಕಾಶದಲ್ಲಿ ಚಂದ್ರೋದಯವಾಗಿದೆ. ಚಂದ್ರ ಭಾಗೀರಥಿಯ ವಕ್ಷಸ್ಥಳದ ಮೇಲೆ ಸುಮ್ಮನೆ ನಲಿದಾಡುತ್ತಿದ್ದಾನೆ. ಈಗ ಇಳಿತ. ಭಾಗೀರಥಿ ದಕ್ಷಿಣವಾಹಿನಿಯಾಗಿದ್ದಾಳೆ.

೧೪ನೆ ಸೆಪ್ಟೆಂಬರ್ ೧೮೮೪, ಭಾದ್ರಪದ ಕೃಷ್ಣ ದಶಮಿ, ಭಾನುವಾರ.

ಪರಮಹಂಸರು ತಮ್ಮ ಕೊಠಡಿಯಲ್ಲಿ ನರೇಂದ್ರ, ಭವನಾಥ, ಮುಖ್ಯೋಪಾಧ್ಯಾಯ ಸೋದರರು ಮತ್ತು ಇನ್ನೂ ಕೆಲವು ಭಕ್ತರೊಡನೆ ಕುಳಿತುಕೊಂಡಿದ್ದಾರೆ. ರಾಖಾಲ ಬೃಂದಾವನದಲ್ಲಿ ಬಲರಾಮನೊಡನೆ

ಇದಾನೆ. ಈಗ ಆತ ಅಲ್ಲಿ ಜ್ವರದಿಂದ ನರಳುತ್ತಿದಾನೆ. ನರೇಂದ್ರ ಈಗ ಸಮೀಪಿಸುತ್ತಿರುವ "ಲಾ" ಪರೀಕ್ಷೆಗೆ ಸಿದ್ಧನಾಗುತ್ತಿದಾನೆ.

ಜ್ಞಾನಬಾಬು ಬಂದಿದಾನೆ. ಆತ ನಾಲ್ಕು ವಿಶ್ವವಿದ್ಯಾನಿಲಯದ ಡಿಗ್ರಿಗಳನ್ನು ಪಡೆದಿದಾನೆ. ಸರ್ಕಾರಿ ಕೆಲಸದಲ್ಲಿದಾನೆ. ಈಗ ಘಂಟೆ ಬೆಳಗಿನ ಹನ್ನೊಂದು.

ಶ್ರೀರಾಮಕೃಷ್ಣರು ಜ್ಞಾನಬಾಬುವನ್ನು ನೋಡಿ: "ಏನಪ್ಪ ಇದು! ಇದ್ದಕ್ಕಿದ್ದ ಹಾಗೆ ಜ್ಞಾನೋದಯ!"

ಜ್ಞಾನಬಾಬು ನಗುತ್ತ: "ಹೌದು, ಬಹಳ ಸುಕೃತ ಮಾಡಿದ್ದರೆ ತಾನೆ ಜ್ಞಾನೋದಯವಾಗಬೇಕಾದರೆ."

ಶ್ರೀರಾಮಕೃಷ್ಣರು: "ನಿನ್ನ ಹೆಸರೇ ಜ್ಞಾನ. ಅಂಥಾದ್ದರಲ್ಲಿ ನಿನಗೆ ಅಜ್ಞಾನ ಎಲ್ಲಿಂದ? ಓ, ನನಗೆ ಈಗ ಅರ್ಥವಾಯಿತು. ಎಲ್ಲಿ ಜ್ಞಾನವಿದೆಯೊ ಅಲ್ಲಿ ಅಜ್ಞಾನವೂ ಇರುತ್ತದೆ. ವಸಿಷ್ಠದೇವ ದೊಡ್ಡ ಜ್ಞಾನಿ, ಆದರೂ ಪುತ್ರಶೋಕಾನ್ವಿತನಾಗಿ ಅತ್ತ. ಆದ್ದರಿಂದ ನೀನು ಜ್ಞಾನಾಜ್ಞಾನಗಳಿಗೆ ಅತೀತನಾಗಿಬಿಡು. ಕಾಲಿಗೆ ಅಜ್ಞಾನವೆಂಬ ಮುಳ್ಳು ಚುಚ್ಚಿಕೊಂಡಿದೆ. ಅದನ್ನು ತೆಗೆಯಲು ಜ್ಞಾನವೆಂಬ ಮುಳ್ಳು ಆವಶ್ಯಕ. ಮುಳ್ಳು ತೆಗೆದನಂತರ ಎರಡು ಮುಳ್ಳನ್ನೂ ಬಿಸಾಡಿಬಿಡುತ್ತಾರೆ. 'ಮಾಯೆಯ ಚೌಕಟ್ಟಿದು ಈ ಸಂಸಾರ!' ಎಂಬುದಾಗಿ ಜ್ಞಾನಿ ಹೇಳುತ್ತಾನೆ. ಆದರೆ ಯಾರು ಜ್ಞಾನಾಜ್ಞಾನಗಳಿಗತೀತನೊ ಆತ ಹೇಳುತ್ತಾನೆ: 'ಈ ಜಗವೆಂಬುದು ಮೋಜಿನ ಮನೆಯೊ!' ಆತನಿಗೆ ತೋರಿಬರುತ್ತದೆ, ಭಗವಂತನೇ ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಎಲ್ಲ ಆಗಿರುವುದಾಗಿ.

"ಭಗವಂತನ ಸಾಕ್ಷಾತ್ಕಾರ ಪಡೆದುಕೊಂಡನಂತರ ಬೇಕಾದರೆ ಸಂಸಾರದಲ್ಲಿರಬಹುದು. ಆಗ ನಿರ್ಲಿಪ್ತನಾಗಿ ಇರಲು ಸಾಧ್ಯ. ಕಾಮಾರಪುಕುರಿನಲ್ಲಿ ಬಡಗಿಯ ಹೆಂಗಸರನ್ನು ನೋಡಿದೇನೆ—ಏತದಿಂದ ಅವಲಕ್ಕಿ ಕುಟ್ಟುತ್ತಾರೆ. ಅವರಲ್ಲಿ ಒಬ್ಬಳು ಒಂದು ಕೈಯಿಂದ ಬತ್ತ ತಳ್ಳಿಕೊಡುತ್ತಿರುತ್ತಾಳೆ, ಇನ್ನೊಂದು ಕೈಯಿಂದ ಮಗುವಿಗೆ ಸ್ತನ್ಯಪಾನ ಮಾಡಿಸುತ್ತಿರುತ್ತಾಳೆ. ಅದೇ ಸಮಯದಲ್ಲಿ ಆಕೆ ಗಿರಾಕಿಗಳೊಡನೆ ಮಾತುಕತೆ ಆಡುತ್ತಿರುತ್ತಾಳೆ. ಅವರಿಗೆ ಹೇಳುತ್ತಾಳೆ: 'ನೀವು ಎರಡಾಣೆ ಕೊಡಬೇಕಾಗಿದೆ. ಅದನ್ನು ಕೊಟ್ಟು ಹೋಗಿ.' ಆದರೆ ಆಕೆಯ ಮುಕ್ಕಾಲು ಭಾಗ

ಮನಸ್ಸೆಲ್ಲ ತನ್ನ ಕೈ ಮೇಲೇ—ಏತದ ಮೊನೆ ಎಲ್ಲಿ ಅದರ ಮೇಲೆ ಬಿದ್ದು ಬಿಡುವುದೊ ಅಂತ.

"ಮನುಷ್ಯ ತನ್ನ ಮುಕ್ಕಾಲು ಭಾಗ ಮನಸ್ಸನ್ನು ಭಗವಂತನಲ್ಲಿ ಇಟ್ಟು ಉಳಿದ ಕಾಲು ಭಾಗದಿಂದ ಈ ಜಗತ್ತಿನ ಕೆಲಸಕಾರ್ಯಗಳನ್ನ ಮಾಡಿಕೊಂಡುಹೋಗಬೇಕು."

ಪಂಡಿತ ಶಶಧರನ ಮಾತೆತ್ತಿ ಪರಮಹಂಸರು ಭಕ್ತರಿಗೆ ಹೇಳುತ್ತಿದಾರೆ: "ಅವನದು ಕೇವಲ ಒಂದೇ ರಾಗ—ಬರೀ ಶುಷ್ಕ ಜ್ಞಾನ-ವಿಚಾರ.

"ಯಾರ ಕೈಯಲ್ಲಿ ನಿತ್ಯವನ್ನು ಮುಟ್ಟಿದನಂತರ ಲೀಲೆಯಲ್ಲಿ ಇರಲು ಸಾಧ್ಯವಾಗುವುದೊ, ಮತ್ತೆ ಯಾರು ಲೀಲೆಯಿಂದ ನಿತ್ಯಕ್ಕೆ ಹತ್ತಿ ಹೋಗಬಲ್ಲನೊ ಆತನಿಗೇ ಪಕ್ವ ಜ್ಞಾನ, ಪಕ್ವ ಭಕ್ತಿ ದೊರೆತಿರುತ್ತದೆ. ನಾರದನೇ ಮೊದಲಾದವರು ಬ್ರಹ್ಮಜ್ಞಾನ ದೊರೆತನಂತರವೂ ಭಕ್ತಿಯನ್ನು ಅವಲಂಬಿಸಿಕೊಂಡು ಇದ್ದರು. ಇದಕ್ಕೇ 'ವಿಜ್ಞಾನ' ಅಂತ ಹೆಸರು.

"ಬರೀ ಶುಷ್ಕ ಜ್ಞಾನವಿದೆಯಲ್ಲ, ಇದು ಸಾಮಾನ್ಯ ಆಕಾಶಬಾಣದ ಹಾಗೆ; 'ಫುಸ್' ಅಂತ ಮೇಲಕ್ಕೆ ಹೋಗಿ ಕೆಲವು ಕಿಡಿಗಳನ್ನು ಒದರಿ ನಾಶವಾಗಿಬಿಡುತ್ತದೆ. ಆದರೆ ನಾರದ, ಶುಕದೇವ ಇವರೇ ಮೊದಲಾದವರ ಜ್ಞಾನ ಒಂದು ಒಳ್ಳೆ ಆಕಾಶಬಾಣ ಇದ್ದ ಹಾಗೆ; ಸ್ವಲ್ಪ ಹೊತ್ತು ವಿವಿಧ ಬಣ್ಣಗಳ ಕಿಡಿಗಳನ್ನು ಕಾರುತ್ತಿದ್ದು ತೆಪ್ಪಗಾಗುತ್ತದೆ; ಮತ್ತೆ ಹೊಸ ಕಿಡಿಗಳನ್ನು ಉದುರಿಸುತ್ತಿದ್ದು ಮತ್ತೆ ತೆಪ್ಪಗಾಗುತ್ತದೆ; ಈ ರೀತಿಯಾಗಿ ಅದು ಮಾಡುತ್ತಲೇ ಹೋಗುತ್ತಿರುತ್ತದೆ. ಆ ಋಷಿಗಳಿಗೆ ಭಗವಂತನಲ್ಲಿ ಪ್ರೇಮ ಉಂಟಾಗಿತ್ತು. ಪ್ರೇಮವಿದೆಯಲ್ಲ ಅದು ಸಚ್ಚಿದಾನಂದನನ್ನು ಮುಟ್ಟಲು ಸಹಾಯಕವಾಗುವ ಹಗ್ಗ."

ಪರಮಹಂಸರು ಮಧ್ಯಾಹ್ನದ ಊಟ ಮುಗಿಸಿಕೊಂಡು ವಿಶ್ರಮಿಸಿಕೊಳ್ಳುತ್ತಿದಾರೆ. ಭವನಾಥ, ಮಾಸ್ಟರ್, ಮುಖ್ಯೋಪಾಧ್ಯಾಯ ಸೋದರರು, ಹಾಜರಾ, ಇನ್ನೂ ಅನೇಕ ಮಂದಿ ಭಕ್ತರು ಬಕುಳ ವೃಕ್ಷದ ಕೆಳಗೆ ಕುಳಿತು ಮಾತುಕತೆ ಆಡುತ್ತಿದಾರೆ. ಈಗ ಪರಮಹಂಸರು ಸರ್ವೆ ಮರಗಳ ಕಡೆಗೆ ಹೋಗುತ್ತಿದ್ದವರು ಬಂದು ಭಕ್ತರ ಹತ್ತಿರ ಕುಳಿತಿದಾರೆ.

ಹಾಜರಾ ಚಿಕ್ಕಗೋಪಾಲನಿಗೆ: "ಇವರಿಗೆ [ಪರಮಹಂಸರಿಗೆ] ಗುಡುಗುಡಿ ತಯಾರುಮಾಡಿ ಕೊಡು."

ಶ್ರೀರಾಮಕೃಷ್ಣರು ನಗುತ್ತ: "ನಿನಗೇ ಬೇಕಾಗಿದೆ ಅಂತ ನೇರ ವಾಗಿ ಹೇಳಿಬಿಡಬಾರದೆ?" (ಎಲ್ಲರೂ ನಗುತ್ತಿದಾರೆ.)

ಮುಖ್ಯೋಪಾಧ್ಯಾಯ ಹಾಜರಾನಿಗೆ: "ನೀವು ಇವರಿಂದ [ಪರಮ-ಹಂಸರಿಂದ] ಬಹಳವಾಗಿ ಬುದ್ಧಿ ಕಲಿತುಕೊಂಡಿರಬೇಕು."

ಶ್ರೀರಾಮಕೃಷ್ಣರು ನಗುತ್ತ: "ಇಲ್ಲ, ಇಲ್ಲ. ಈತನಿಗೆ ಬಾಲ್ಯ ದಿಂದಲೇ ಈ ತರದ ಬುದ್ಧಿ." (ಎಲ್ಲರೂ ನಗುತ್ತಿದಾರೆ.)

ಈಗ ಪರಮಹಂಸರು ಸರ್ವೆ ಮರಗಳ ಕಡೆಯಿಂದ ಹಿಂದಿರುಗಿ ಬರುತ್ತಿದಾರೆ. ಅವರು ಭಾವಾವಿಷ್ಟರಾಗಿ ಉನ್ಮತ್ತನ ಹಾಗೆ ಕಾಲು ಹಾಕುತ್ತಿದಾರೆ. ಕೊಠಡಿಯನ್ನು ಮುಟ್ಟುವುದರಲ್ಲಿ ಪ್ರಕೃತಿಸ್ಥರಾದರು.

ಪರಮಹಂಸರ ಕೊಠಡಿಯಲ್ಲಿ ಅನೇಕ ಮಂದಿ ಭಕ್ತರು ಬಂದು ನೆರೆದಿದಾರೆ. ಕೊನ್ನಗರದ ಭಕ್ತರೊಡನೆ ಒಬ್ಬ ಸಾಧಕ ಹೊಸದಾಗಿ ಬಂದಿದಾನೆ. ವಯಸ್ಸು ಐವತ್ತರ ಮೇಲೆ ಇರಬೇಕು. ಪಾಂಡಿತ್ಯದ ಅಭಿಮಾನ ಬಹಳವಾಗಿ ಇರುವಂತೆ ತೋರಿಬರುತ್ತಿದೆ.

ಪರಮಹಂಸರು ತಮ್ಮ ಕೊಠಡಿಯ ಮಧ್ಯದಲ್ಲಿ ನಿಂತುಕೊಂಡು ಇದ್ದಕ್ಕಿದ್ದಹಾಗೆ ಮಾಸ್ಟರಿಗೆ ಹೇಳುತ್ತಿದಾರೆ: "ಆತ ಬಂದಿದ್ದ—ನಾರಾಣ."

ನರೇಂದ್ರ ವರಾಂಡದಲ್ಲಿ ಹಾಜರಾ ಮೊದಲಾದವರೊಡನೆ ಮಾತುಕತೆ ಆಡುತ್ತಿದಾನೆ. ಮಾತನ್ನು ಕೊಠಡಿಯಿಂದಲೇ ಚೆನ್ನಾಗಿ ಕೇಳಬಹುದಾಗಿತ್ತು.

ಶ್ರೀರಾಮಕೃಷ್ಣರು ನರೇಂದ್ರನನ್ನು ಸೂಚಿಸಿ: "ದೊಡ್ಡ ಮಾತಾಳಿ! ಆದರೆ ಈಗ ಮನೆಯ ತೊಂದರೆಯಿಂದ ಬಹಳವಾಗಿ ಚಿಂತೆಗೆ ಒಳಗಾಗಿದಾನೆ."

ಮಾಸ್ಟರ್: "ಹೌದು, ಅದು ನಿಜ."

ಶ್ರೀರಾಮಕೃಷ್ಣರು: "ವಿಪತ್ತನ್ನೇ ಸಂಪತ್ತು ಅಂತ ಭಾವಿಸುತ್ತೇನೆ ಅಂತ ಆತ ಒಮ್ಮೆ ಹೇಳಿರಲಿಲ್ಲವೆ. ಏನು, ಹೇಳಿದ್ದ ತಾನೆ?"

ಮಾಸ್ಟರ್: "ಆತನದು ಬಹಳ ಬಲಯುತವಾದ ಮನಸ್ಸು."

ಒಬ್ಬ ಭಕ್ತ: "ಯಾವುದರಲ್ಲೇ ಆಗಲಿ ಆತ ಬಲಹೀನನಾಗಿರುವನೇ?"

ಕೊನ್ನಗರದ ಒಬ್ಬ ಭಕ್ತ ಸಾಧಕನ ಕಡೆ ಬೆರಳುಮಾಡಿ ಪರಮ-

ಹಂಸರಿಗೆ ಹೇಳುತ್ತಿದಾನೆ: "ಮಹಾಶಯರೆ, ಈತ ನಿಮ್ಮನ್ನು ಸಂಧಿಸಲು ಬಂದಿದಾನೆ. ನಿಮ್ಮನ್ನು ಏನೇನೊ ಪ್ರಶ್ನೆ ಕೇಳಬೇಕೆಂದಿದಾನೆ." ಸಾಧಕ ತಲೆ ಎತ್ತಿ ನೆಟ್ಟಗೆ ಕುಳಿತಿದಾನೆ.

ಸಾಧಕ: "ಮಹಾಶಯರೆ, ಮಾರ್ಗವೇನು?"

ಶ್ರೀರಾಮಕೃಷ್ಣರು: "ಗುರುವಾಕ್ಯದಲ್ಲಿ ಶ್ರದ್ಧೆ. ಗುರುವಿನ ಉಪದೇಶವನ್ನು ಅನುಕ್ರಮವಾಗಿ ಆಚರಿಸಿದರೆ ಭಗವಂತನ ಸಾಕ್ಷಾತ್ಕಾರ ದೊರೆತುಬಿಡುತ್ತದೆ. ಇದು ದಾರವನ್ನು ಅನುಸರಿಸಿ ಅನುಸರಿಸಿ ಕೊನೆಗೆ ವಸ್ತುವನ್ನು ಮುಟ್ಟುವ ಹಾಗೆ."

ಸಾಧಕ: "ಭಗವಂತನನ್ನು ದರ್ಶನಮಾಡಲಾಗುವುದೆ?"

ಶ್ರೀರಾಮಕೃಷ್ಣರು: "ಆತ ವಿಷಯಬುದ್ಧಿಗಗೋಚರ. ಕಾಮಕಾಂಚನಾಸಕ್ತಿ ಲೇಶಮಾತ್ರವಿದ್ದರೂ ಆತನ ಸಾಕ್ಷಾತ್ಕಾರವನ್ನ ಪಡೆದುಕೊಳ್ಳಲಾಗೋದಿಲ್ಲ. ಆದರೆ ಶುದ್ಧ ಮನಸ್ಸು, ಶುದ್ಧ ಬುದ್ಧಿಗೆ ಗೋಚರ—ಅಂದರೆ ಯಾವ ಮನಸ್ಸಿನಲ್ಲಿ, ಯಾವ ಬುದ್ಧಿಯಲ್ಲಿ ಲೇಶಮಾತ್ರವೂ ಆಸಕ್ತಿ ಇರದೊ ಅವುಗಳಿಗೆ. ಶುದ್ಧ ಮನಸ್ಸು, ಶುದ್ಧ ಬುದ್ಧಿ, ಶುದ್ಧ ಆತ್ಮ—ಎಲ್ಲಾ ಒಂದೇ ವಸ್ತು."

ಸಾಧಕ: "ಆದರೆ ಶಾಸ್ತ್ರ ಹೇಳುತ್ತದೆ: 'ಯತೋ ವಾಚೋ ನಿವರ್ತಂತೇ। ಅಪ್ರಾಪ್ಯ ಮನಸಾ ಸಹ।', 'ಯಾರನ್ನು ಅರಿಯಲಾರದೆ ವಾಕ್ಕು ಮತ್ತು ಹಾಗೇ ಮನಸ್ಸು ಕೂಡ ಹಿಂದಿರುಗುವುವೊ' ಎಂಬುದಾಗಿ. ಆತ ವಾಕ್ಕು ಮತ್ತು ಮನಸ್ಸುಗಳಿಗೆ ಅಗೋಚರ."

ಶ್ರೀರಾಮಕೃಷ್ಣರು: "ಸಾಕು ನಿಲ್ಲಿಸು! ಸಾಧನೆ ಮಾಡದೆ ಶಾಸ್ತ್ರಗಳ ಅರ್ಥವನ್ನ ಅರಿಯಲಾಗೋದಿಲ್ಲ. ಬರಿದೆ ಬಂಗಿ ಸೊಪ್ಪು ಬಂಗಿ ಸೊಪ್ಪು ಅನ್ನುತ್ತಿದ್ದರೆ ಏನಾದೀತು? ಪಂಡಿತರು ಶ್ಲೋಕಗಳನ್ನ ನಿರರ್ಗಳವಾಗಿ ಹೇಳಿಬಿಡಬಲ್ಲರು—ಆದರೆ ಅದರಿಂದ ಏನು ದೊರೆಯುತ್ತದೆ? ಬಂಗಿ ಸೊಪ್ಪನ್ನ ಮೈ ಮೇಲೆ ಲೇಪ ಹಾಕಿಕೊಂಡರೂ ಏನೂ ಆಗದು—ಅರೆದು ಕುಡಿಯಬೇಕು. ಬರಿದೆ ಹೇಳುತ್ತಿದ್ದರೆ ಏನಾದೀತು, 'ಹಾಲಿನಲ್ಲಿ ಬೆಣ್ಣೆ ಇದೆ', 'ಹಾಲಿನಲ್ಲಿ ಬೆಣ್ಣೆ ಇದೆ' ಅಂತ? ಹಾಲಿಗೆ ಹೆಪ್ಪು ಹಾಕಿ, ಮೊಸರು ಮಾಡಿ ಕಡೆ. ಆಗ ತಾನೆ ಬೆಣ್ಣೆ ಸಿಕ್ಕಬೇಕಾದರೆ."

ಸಾಧಕ: "ನೀವು ಬೆಣ್ಣೆ ತೆಗೆಯುವ ವಿಷಯ ಹೇಳಿದಿರಿ. ನೀವೂ ಶಾಸ್ತ್ರಗಳನ್ನು ಉದ್ಧರಿಸುತ್ತ ಇದೀರಲ್ಲ."

ಶ್ರೀರಾಮಕೃಷ್ಣರು: "ಶಾಸ್ತ್ರಗಳನ್ನು ಉದ್ಧರಿಸುವುದರಿಂದ ಅಥವಾ ಕೇಳುವುದರಿಂದ ಏನು ದೊರೆತೀತು? ಅವನ್ನು ರಕ್ತಗತ ಮಾಡಿಕೊಳ್ಳಬೇಕು. ಪಂಚಾಂಗದಲ್ಲಿ ಬರೆದಿರುತ್ತದೆ, ಇಪ್ಪತ್ತು ಕೊಳಗ ಮಳೆ ಬೀಳುವುದೆಂದು—ಆದರೆ ಅದನ್ನು ಹಿಂಡಿದರೆ ಒಂದು ತೊಟ್ಟು ನೀರೂ ಬೀಳದು."

ಸಾಧಕ: "ಬೆಣ್ಣೆ ತೆಗೆಯುವುದು—ನೀವು ತೆಗೆದಿದೀರೇನು?"

ಶ್ರೀರಾಮಕೃಷ್ಣರು: "ನಾನು ತೆಗೆದಿದೇನೊ ಬಿಟ್ಟಿದೇನೊ ಆ ಮಾತು ಹಾಗಿರಲಿ. ಈ ವಿಷಯಗಳನ್ನೆಲ್ಲ ಪರರಿಗೆ ತಿಳಿಸುವುದು ಎಂದರೆ ಬಹಳ ಕಷ್ಟ. ಒಂದು ಪಕ್ಷ ಯಾರಾದರೂ ಕೇಳಿದರೆ: 'ತುಪ್ಪ ಹೇಗೆ ರುಚಿಸುತ್ತದೆ?', ಅದಕ್ಕೆ ಉತ್ತರ: 'ತುಪ್ಪ ತುಪ್ಪದ ಹಾಗೆ ರುಚಿಸುತ್ತದೆ.'

"ಇವನ್ನೆಲ್ಲಾ ಅರ್ಥಮಾಡಿಕೊಳ್ಳಬೇಕಾದರೆ ಸಾಧುಸಂಗ ಆವಶ್ಯಕ. ಯಾವುದು ಕಫದ ನಾಡಿ, ಯಾವುದು ಪಿತ್ತದ ನಾಡಿ, ಯಾವುದು ವಾಯುವಿನ ನಾಡಿ—ಎಂಬುದನ್ನು ಅರಿತುಕೊಳ್ಳಬೇಕಾದರೆ ವೈದ್ಯನೊಡನೆ ಇರಬೇಕಾಗುತ್ತದೆ."

ಸಾಧಕ: "ಕೆಲಕೆಲವರಿಗೆ ಬೇರೆಯವರ ಜೊತೆಯಲ್ಲಿ ಇರಬೇಕು ಅಂದರೇ ಬೇಜಾರು."

ಶ್ರೀರಾಮಕೃಷ್ಣರು: "ಹಾಗಾಗುತ್ತದೆ, ಜ್ಞಾನ ದೊರೆತನಂತರ—ಭಗವಂತನ ಸಾಕ್ಷಾತ್ಕಾರ ದೊರೆತನಂತರ. ಆದರೆ ಅದಕ್ಕೆ ಮುಂಚೆ ಸಾಧಕನಿಗೆ ಸಾಧುಸಂಗ ಬೇಡ?"

ಸಾಧಕ ಸುಮ್ಮನೆ ಕುಳಿತಿದಾನೆ. ಈಗ ಆತ ಸ್ವಲ್ಪ ಸಿಟ್ಟುಗೊಂಡು ಹೇಳುತ್ತಿದಾನೆ: "ನೀವು ಭಗವಂತನ ಸಾಕ್ಷಾತ್ಕಾರ ಪಡೆದಿದೀರಾ—ಪ್ರತ್ಯಕ್ಷವಾಗಿ ಆಗಲಿ, ಪರೋಕ್ಷವಾಗಿ ಆಗಲಿ. ಸಾಧ್ಯವಾದರೆ ಇದಕ್ಕೆ ಉತ್ತರ ಕೊಡಿ, ಇಲ್ಲದಿದ್ದರೆ ಸುಮ್ಮನೆ ಇದ್ದುಬಿಡಿ—ಹಾಗಿಚ್ಛೆಸಿದರೆ." ಪರಮಹಂಸರು ನಗುತ್ತ ಹೇಳುತ್ತಿದಾರೆ: "ನಾನು ಏನು ಹೇಳಲಿ? ಕೇವಲ ಸೂಚನೆ ಕೊಡಲು ಸಾಧ್ಯ."

ಸಾಧಕ: "ಅದನ್ನೇ ಕೊಡಿ ಮತ್ತೆ."

ನರೇಂದ್ರ ಹಾಡಲಿದಾನೆ. ಆತ ಹೇಳುತ್ತಿದಾನೆ: "ಯಾರೂ ಮೃದಂಗವನ್ನೇ ತಂದಿಲ್ಲವಲ್ಲ."

ಚಿಕ್ಕಗೋಪಾಲ: "ಮಹಿಮಚರಣನ ಹತ್ತಿರ ಇದೆ."

ಶ್ರೀರಾಮಕೃಷ್ಣರು ಮಧ್ಯೆ ಬಾಯಿ ಹಾಕಿ: "ಬೇಡಿ ಅವನದಾವುದನ್ನೂ ಇಲ್ಲಿಗೆ ತರಬೇಡಿ."

ಈಗ ಕೊನ್ನಗರದ ಒಬ್ಬ ಭಕ್ತ ಹಾಡುತ್ತಿದಾನೆ. ಪರಮಹಂಸರು ಆಗಾಗ ಸಾಧಕನ ಕಡೆ ಕಣ್ಣು ಹಾಕುತ್ತಲೇ ಇದಾರೆ. ಈಗ ಗಾಯಕ ಮತ್ತು ನರೇಂದ್ರ ಸಂಗೀತ ಕಲೆಯ ಸಂಬಂಧವಾಗಿ ಒಂದು ದೊಡ್ಡ ಚರ್ಚೆಯಲ್ಲಿ ತೊಡಗಿಬಿಟ್ಟಿದಾರೆ. ಸಾಧಕ ಗಾಯಕನಿಗೆ ಹೇಳುತ್ತಿದಾನೆ: "ನೀನೂ ಕಡಮೆಯೇನಲ್ಲ! ಈ ವಿಧವಾದ ಚರ್ಚೆಯಿಂದ ಏನು ಪ್ರಯೋಜನ?" ಇನ್ನೊಬ್ಬನೂ ಈ ಚರ್ಚೆಯಲ್ಲಿ ತಲೆ ಹಾಕಿದ್ದ. ಪರಮಹಂಸರು ಆತನ ಕಡೆ ಬೆರಳುಮಾಡಿ ಸಾಧಕನಿಗೆ ಹೇಳುತ್ತಿದಾರೆ: "ಆತನಿಗೇನೂ ನೀನು ಹೇಳಲೇ ಇಲ್ಲವಲ್ಲ?" ಸಾಧಕನ ವ್ಯವಹಾರ ತೋರಿಸಿತು, ಆತ ಆ ಕೊನ್ನಗರದ ಭಕ್ತರೊಡನೆ ಸ್ನೇಹಭಾವದಿಂದ ಇಲ್ಲ ಎಂಬುದನ್ನ.

ನರೇಂದ್ರ ಹಾಡುತ್ತಿದಾನೆ:

ಇನ್ನೆಷ್ಟು ದಿನ ನಾನು ಬರಿಯ ವಿಫಲತೆಯಲ್ಲಿ
ತೊಳಲಬೇಕೋ . . . (ಉ. ೭೩೨)

ಸಾಧಕ ಹಾಡನ್ನು ಕೇಳುತ್ತ ಕೇಳುತ್ತ ಧ್ಯಾನಸ್ಥನಾಗಿಬಿಟ್ಟಿದಾನೆ. ಘಂಟೆ ಅಪರಾಹ್ನ ನಾಲ್ಕು. ಪಶ್ಚಿಮದಿಂದ ಬಿಸಿಲು ಬಂದು ಆತನ ಶರೀರದ ಮೇಲೆ ಬೀಳುತ್ತಿರುವುದನ್ನು ನೋಡಿ ಪರಮಹಂಸರು ಒಡನೆ ಎದ್ದು ಬಂದು ಒಂದು ಛತ್ರಿಯನ್ನು ತೆರೆದು ಅಡ್ಡಲಾಗಿ ಇಟ್ಟಿದಾರೆ.

ನರೇಂದ್ರ ಮತ್ತೆ ಹಾಡುತ್ತಿದಾನೆ:

ಎಂತು ಕರೆಯಲಯ್ಯ ನಿನ್ನ
ಸಕಲ ಪುಣ್ಯ ದೀಪನ
ಪಾಪ ಪಂಕ ಮಲಿನ ನಾನು
ಬೆಂಕಿಗೆಸೆದ ತೃಣಕಣ
ಆದರು ಇದು ಸುಡದು ನೋಡು
ಈ ಪಾಪದ ಬಂಧನ!
ಸರ್ವ ಪಾಪ ಹರಣ ನೀನು
ಎನ್ನುವುದೀ ಲೋಕವೆ
ನಿನ್ನನೆಷ್ಟು ನೆನೆದರೂ
ನಡುಗುತಿಹುದು ನನ್ನೆದೆ!

ಬರುವನೆಂತು ಈ ಪಾತಕಿ
ನಿನ್ನ ಪುಣ್ಯ ಪಥದಲಿ?
ಎಳೆದುಕೊ ನಿನ್ನಡಿಯ ಗುಡಿಗೆ
ನಿನ್ನ ಕೃಪೆಯ ಕೈಯಲಿ!

ಮತ್ತೆ ಆತ ಹಾಡುತ್ತಿದಾನೆ:

ಬಲು ಮಧುರವೊ ನಿನ್ನ ಹೆಸರು
ಕಿವಿಗೆ ಸುಧೆಯ ಕರೆವುದು!
ದೀನಶರಣ ಪ್ರಾಣರಮಣ
ಅಮೃತಭವನ ಧನವಿದು.

ನಿನ್ನ ಹೆಸರ ಕೀರ್ತಿಸಿದರೆ
ನಾವು ಅಮರರಪ್ಪೆವೊ
ಚಿಂತೆಗಡಲು ನಿಮಿಷದಲ್ಲಿ
ಬತ್ತುತ ಬಯಲಪ್ಪುದೊ!

ಹೃದಯದಲ್ಲಿ ನಿನ್ನ ಮಧುರ
ಗಾಯನವನೆ ಗೈವೆವು!
ಹೃದಯನಾಥ, ಚಿದಾನಂದ;
ನಿರುತ ನಿನ್ನ ನೆನೆವೆವು.

ನರೇಂದ್ರ ಯಾವಾಗ ಹಾಡಿದನೊ ಇಲ್ಲವೊ: "ನಿನ್ನ ಹೆಸರ ಕೀರ್ತಿಸಿದರೆ ನಾವು ಅಮರರಪ್ಪೆವೊ" ಎಂಬ ಚರಣವನ್ನ, ಪರಮಹಂಸರು ಒಡನೆ ಸಮಾಧಿಸ್ಥರಾಗಿಬಿಟ್ಟರು. ಸಮಾಧಿಯ ಆರಂಭದಲ್ಲಿ ಅವರ ಬೆರಳುಗಳು, ವಿಶೇಷತಃ ಹೆಬ್ಬೆರಳುಗಳು ಕಂಪಿಸಲಾರಂಭಿಸಿದುವು. ಕೊನ್ನಗರದ ಭಕ್ತರು ಪರಮಹಂಸರ ಸಮಾಧಿ ಅವಸ್ಥೆಯನ್ನು ಇದುವರೆಗೆ ನೋಡಿರಲಿಲ್ಲ. ಪರಮಹಂಸರು ಸುಮ್ಮನೆ ಕುಳಿತಿರುವುದನ್ನು ನೋಡಿ ಆ ಭಕ್ತರು ಎದ್ದು ಹೊರಡಲಾರಂಭಿಸಿದರು. ಭವನಾಥ ಅವರನ್ನು ಕೇಳುತ್ತಿದಾನೆ: "ಏಕೆ ಹೊರಟುಹೋಗುತ್ತಿದೀರಿ? ಇದು ಇವರ ಸಮಾಧಿ ಅವಸ್ಥೆ." ಮತ್ತೆ ಅವರು ಕುಳಿತುಕೊಳ್ಳುತ್ತಿದಾರೆ.

ನರೇಂದ್ರ ಹಾಡುತ್ತಿದಾನೆ:

ಹಗಲಿರುಳೂ ಶ್ರಮಿಸಿ ನಾನು
ಸಿದ್ಧಪಡಿಸಿ ಕಾದಿರುವೆನು

ನನ್ನ ಹೃದಯ ಪೀಠವ,
ಓ ಎಂದಿಗೆ ನೀನು ಬಂದು
ನನಗೆ ಕೃಪೆಯ ಗೈವೆ ಎಂದು
ಕಾಯುತಿರುವೆ ಮಾರ್ಗವ!

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ತಮ್ಮ ಮಂಚದಿಂದ ಕೆಳಕ್ಕೆ ಇಳಿದು ಬಂದು ನರೇಂದ್ರನ ಹತ್ತಿರ ನೆಲದ ಮೇಲೆ ಕುಳಿತುಕೊಳ್ಳುತ್ತಿದಾರೆ. ನರೇಂದ್ರ ಮತ್ತೆ ಹಾಡುತ್ತಿದಾನೆ:

ಉದಯಿಪನದೊ ಚಿದಾಕಾಶದಲ್ಲಿ ಪೂರ್ಣ ಇಂದು
ಪ್ರೇಮಸಿಂಧು ಉಕ್ಕಿ ಹರಿದು ಲೋಕಗಳೇ ನಾಂದು! . . .

(ಉ. ೩೬)

ನರೇಂದ್ರ ಈ ಎರಡನೆ ಚರಣವನ್ನು ಹಾಡಿದೊಡನೇ ಪರಮಹಂಸರು ಎದ್ದು ನಿಂತುಕೊಂಡು ಸಮಾಧಿಸ್ಥರಾಗಿಬಿಟ್ಟಿದಾರೆ.

ಪರಮಹಂಸರು ಬಹಳ ಹೊತ್ತಿನವರೆಗೆ ಅದೇ ಅವಸ್ಥೆಯಲ್ಲಿ ಇದ್ದು ಈಗ ಕಿಂಚಿತ್ ಪ್ರಕೃತಿಸ್ಥರಾಗಿ ಮಂದಲಿಗೆ ಮೇಲೆ ಕುಳಿತುಕೊಳ್ಳುತ್ತಿದಾರೆ. ನರೇಂದ್ರ ಹಾಡುವುದನ್ನು ಮುಗಿಸಿದ. ಈಗ ಆತ ತಂಬೂರಿಯನ್ನು ಅದರ ಸ್ಥಳಕ್ಕೆ ತೂಗಹಾಕುತ್ತಿದಾನೆ. ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಆ ಅವಸ್ಥೆಯಲ್ಲೇ ಹೇಳುತ್ತಿದಾರೆ: "ತಾಯೆ, ಇದೇನಿದು ನೋಡು. ಬೆಣ್ಣೆ ಕಡೆದು ಬಾಯಲ್ಲಿ ಹಾಕಿಕೊಡಬೇಕಂತಲ್ಲ ಜನರಿಗೆ. ಗಾಳಕ್ಕೆ ಎರೆಹುಳು ಕಟ್ಟಿ ನೀರಿಗೆ ಬಿಸಾಡಲೊಲ್ಲರಂತೆ; ಗಾಳದ ಕಡ್ಡಿ ಹಿಡಿದು ಕುಳಿತುಕೊಳ್ಳಲೊಲ್ಲರಂತೆ; ಆದರೆ ಮೀನನ್ನು ಮಾತ್ರ ಹಿಡಿದು ಅವರ ಕೈಗೆ ಕೊಡಬೇಕಂತೆ! ಇದು ಎಂಥ ತಂಟೆಯ ಕೆಲಸ! ತಾಯೆ, ಇನ್ನು ಎಂದಿಗೂ ವಾದಕ್ಕೆ ಕಿವಿಗೊಡೆನು. ನೀಚರು ಅದನ್ನು ನನ್ನ ಮೇಲೆ ಬಲಾತ್ಕರಿಸಲು ಬರುತ್ತಾರೆ. ಏನು ಕಷ್ಟ ಇದು! ಅದರಿಂದ ಕೊಡವಿಕೊಂಡುಬಿಡುತ್ತೇನೆ. ಭಗವಂತ ವೇದವಿಚಾರಗಳಿಗೆ ಅತೀತ. ವೇದ, ವೇದಾಂತ, ಶಾಸ್ತ್ರ ಇವುಗಳ ಅಧ್ಯಯನದಿಂದ ಆತನ ಸಾಕ್ಷಾತ್ಕಾರ ಪಡೆಯಲು ಸಾಧ್ಯವಾಗುವುದೇ? (ನರೇಂದ್ರನಿಗೆ) ಅರ್ಥವಾಯಿತೆ? ವೇದ ಕೇವಲ ಸೂಕ್ಷ್ಮ ಸೂಚನೆಯನ್ನು ಮಾತ್ರ ಕೊಡಬಲ್ಲವು."

ನರೇಂದ್ರ ಮತ್ತೆ ತಂಬೂರಿಯನ್ನು ತರುವಂತೆ ಒಬ್ಬನಿಗೆ ಹೇಳಿದ.

ಪರಮಹಂಸರು ಹೇಳುತ್ತಿದಾರೆ: "ನಾನು ಹಾಡುತ್ತೇನೆ." ಅವರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಈಗ ಹಾಡುತ್ತಿದಾರೆ:

ಈ ಎದೆಯ ಕೊರೆಯುವುದು ಒಂದೆ ವ್ಯಥೆ ನನಗೆ:
ನೀನೊಡನೆ ಇದ್ದರೂ ನಾನೆಚ್ಚರಿದ್ದರೂ
ಕಳ್ಳತನವಾಯ್ತಲ್ಲ ನನ್ನ ಮನೆಯೊಳಗೆ! . . .

ಪರಮಹಂಸರು ಹೇಳುತ್ತಿದಾರೆ: "ಹೇ ತಾಯೆ, ನನ್ನನ್ನು ವಿಚಾರದಲ್ಲಿ ತೊಡಗುವಂತೆ ಏಕೆ ಮಾಡುತ್ತಿದೀಯೆ?" ಅವರು ಮತ್ತೆ ಹಾಡುತ್ತಿದಾರೆ:

ಅರಿತೆ ನಾನು ಅರಿತೆ ನಾನು—ನಿಜದ ನೆಲೆಯನರಿತೆನು
ಭಾವದಂತರಂಗವರಿತ ವ್ಯಕ್ತಿಯೊಬ್ಬ ದೊರೆತನು. . . . (ಉ. ೨೭೦).

ಪರಮಹಂಸರು ಹೇಳುತ್ತಿದಾರೆ: "ನಾನು ಪ್ರಜ್ಞೆಯಿಂದ ಇದೇನೆ." ಆದರೆ ಅವರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಅವರು ಮತ್ತೆ ಹಾಡುತ್ತಿದಾರೆ:

'ಜಯ್ ಕಾಳಿ'—ಎಂದು ನಾ ಕುಡಿಯುವೀ ದಿವ್ಯ ಮಧು
ಸಾಮಾನ್ಯ ಸುರೆಯಲ್ಲವೆಂದರಿಯದೆ, . . . (ಉ. ೭೮೬)

ಪರಮಹಂಸರು ಹೇಳಿದ್ದರು: "ಹೇ ತಾಯೆ, ಇನ್ನು ಎಂದಿಗೂ ವಾದಕ್ಕೆ ಕಿವಿಗೊಡೆನು" ಎಂದು. ಈಗ ನರೇಂದ್ರ ಹಾಡುತ್ತಿದಾನೆ:

ನನ್ನನೂ ಉನ್ಮತ್ತನಾಗಿಸೆಲೆ ತಾಯೆ,
ನಿನ್ನ ಭಕ್ತಿಯ ಮಧುರ ಮಧುಪಾನದಿಂದ! . . . (ಉ. ೧೪)

ಶ್ರೀರಾಮಕೃಷ್ಣರು ಕಿಂಚಿತ್ ನಗುತ್ತ ನಗುತ್ತ ಹೇಳುತ್ತಿದಾರೆ: "ಹೇ ತಾಯೆ, ನನ್ನನ್ನು ಉನ್ಮತ್ತನಾಗಿಸು! ಭಗವಂತನನ್ನು ಜ್ಞಾನ ವಿಚಾರಗಳಿಂದ, ಶಾಸ್ತ್ರ ವಿಚಾರಗಳಿಂದ ಪಡೆಯಲಾಗೋದಿಲ್ಲ." ಕೊನ್ನಗರದ ಗಾಯಕನ ಹಾಡುಗಾರಿಕೆ ಕೇಳಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ಆತನನ್ನು ವಿನಯದಿಂದ ಕೇಳಿಕೊಳ್ಳುತ್ತಿದಾರೆ: "ಬಾಬು, ದಯವಿಟ್ಟು ಆನಂದಮಯಿಯ ಒಂದು ಹಾಡನ್ನ."

ಗಾಯಕ: "ದಯವಿಟ್ಟು ಕ್ಷಮಿಸಿ."

ಶ್ರೀರಾಮಕೃಷ್ಣರು ಕೈ ಮುಗಿದು: "ಸಾಧ್ಯವಿಲ್ಲ. ನನಗೆ ಬಲಾತ್ಕರಿಸಲು ಹಕ್ಕಿದೆ."

ಹೀಗೆಂದು ಹೇಳಿ ಪರಮಹಂಸರು ಗೋಪಿಯರ ಭಾವವನ್ನು

ಆರೋಪಿಸಿಕೊಂಡು ಒಂದು ಕೀರ್ತನೆಯಿಂದ ಈ ಕೆಲವು ಚರಣಗಳನ್ನು ಹಾಡುತ್ತಿದಾರೆ:

ಕೃಷ್ಣನ ವಿಷಯದಿ ಮುನಿಸನು ತಾಳಲು
ರಾಧೆಗು ಇದೆ ಹಕ್ಕು,
ಅವನಿಗಾಗಿ ಇರುಳೆಲ್ಲವು ಕಾದಳು
ನಿದ್ದೆಯನೂ ಮಿಕ್ಕು!

ಪರಮಹಂಸರು ಈಗ ಗಾಯಕನಿಗೆ ಹೇಳುತ್ತಿದಾರೆ: "ಬಾಬು, ನೀನು ಬ್ರಹ್ಮಮಯಿಯ ಶಿಶು. ಆಕೆ ಎಲ್ಲಾ ಜೀವರಾಶಿಗಳಲ್ಲೂ ಇದಾಳೆ. ಆದ್ದರಿಂದ ನಿನ್ನನ್ನು ಬಲಾತ್ಕರಿಸಲು ಹಕ್ಕಿದೆ. ಒಬ್ಬ ರೈತ ತನ್ನ ಗುರುವಿಗೆ ಹೇಳಿದ: 'ಆವಶ್ಯಕ ತೋರಿಬಂದರೆ ನಿಮ್ಮನ್ನು ಚೆನ್ನಾಗಿ ಬಡಿದು ನೀರು-ಗಾಯಿ ಹಣ್ಣುಗಾಯಿ ಮಾಡಿ ನಿಮ್ಮಿಂದ ಮಂತ್ರೋಪದೇಶ ಪಡೆಯುತ್ತೇನೆ.'"

ಗಾಯಕ ನಗುತ್ತ: "ಏನು, ಎಕ್ಕಡದೇಟು ಕೊಟ್ಟೀ?"

ಶ್ರೀರಾಮಕೃಷ್ಣರು ನಗುತ್ತ: "ಇಲ್ಲ! ಅಷ್ಟು ದೂರ ಹೋಗೋಲ್ಲ."

ಪರಮಹಂಸರು ಮತ್ತೆ ಭಾವಾವಿಷ್ಟರಾಗಿ ಹೇಳುತ್ತಿದಾರೆ: "ಪ್ರವರ್ತಕ, ಸಾಧಕ, ಸಿದ್ಧ, ಸಿದ್ಧರಸಿದ್ಧ. ನೀನು ಸಿದ್ಧನೊ ಅಥವಾ ಸಿದ್ಧರ ಸಿದ್ಧನೊ? ಬೇಗೇಳು! ಹಾಡು."

ಕೊನೆಗೆ ಗಾಯಕ ಒಪ್ಪಿ, ಮೊದಲು ಆಲಾಪನೆ ಮಾಡಿ ಅನಂತರ ಹಾಡಲಾರಂಭಿಸಿದ.

ಪರಮಹಂಸರು ಆಲಾಪನೆ ಕೇಳಿ ಹೇಳುತ್ತಿದಾರೆ: "ಇದೇ ನನಗೆ ಆನಂದವನ್ನು ತರುತ್ತಾ ಇದೆ."

ಹಾಡುವುದು ಮುಗಿಯಿತು. ಕೊನ್ನಗರದ ಭಕ್ತರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾರೆ. ಸಾಧಕ ಕೈಮುಗಿದು ಹೇಳುತ್ತಿದಾನೆ: "ಮಹಾತ್ಮರೆ, ಹೋಗಿಬರುತ್ತೇನೆ."

ಪರಮಹಂಸರು ಇನ್ನೂ ಭಾವಾವಿಷ್ಟರಾಗೇ ಇದಾರೆ. ಭಗವತಿಯೊಡನೆ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ಹೇ ತಾಯಿ, ನಾನೊ; ನೀನೊ? ನಾನು ಮಾಡುತ್ತೇನೆಯೇ? ಇಲ್ಲ, ಇಲ್ಲ! ನೀನು. ಇದುವರೆಗೆ ಚರ್ಚೆಯನ್ನು ಕೇಳಿದವಳು ನೀನೊ ಅಥವಾ ನಾನೊ? ಇಲ್ಲ, ನಾನಲ್ಲ. ನೀನೇ."

ಪರಮಹಂಸರು ಪ್ರಕೃತಿಸ್ಥರಾಗಿದಾರೆ. ನರೇಂದ್ರ, ಭವನಾಥ ಮೊದಲಾದವರೊಡನೆ ಆ ಸಾಧಕನ ವಿಷಯವಾಗಿ ಮಾತುಕತೆ ಆಡುತ್ತಿದಾರೆ.

ಭವನಾಥ ನಗುತ್ತ: "ಅವನೆಂಥಾ ಮನುಷ್ಯ?"

ಶ್ರೀರಾಮಕೃಷ್ಣರು: "ತಮೋಗುಣೀ ಭಕ್ತ."

ಭವನಾಥ: "ಬಹಳವಾಗಿ ಶ್ಲೋಕಗಳನ್ನ ಉದ್ಧರಿಸಬಲ್ಲ."

ಶ್ರೀರಾಮಕೃಷ್ಣರು: "ನಾನು ಒಮ್ಮೆ ಒಬ್ಬನಿಗೆ ಒಬ್ಬ ಸಾಧುವಿನ ವಿಷಯವಾಗಿ ಹೇಳಿದೆ: 'ಆತ ಒಬ್ಬ ರಾಜಸಿಕ ಸಾಧು. ಆತನಿಗೇಕೆ ಭಿಕ್ಷೆ-ಗಿಕ್ಷೆಗಳನ್ನ ನೀಡಬೇಕು?' ಈ ಮಾತು ಕೇಳಿ ಇನ್ನೊಬ್ಬ ಸಾಧು ನನಗೆ ಪಾಠ ಕಲಿಸಿದ. ಆತ ಹೇಳಿದ: 'ಹಾಗೆಂದೂ ನೀವು ಹೇಳಕೂಡದು. ಸಾಧುಗಳಲ್ಲಿ ಮೂರು ವಿಧ—ಸಾತ್ತ್ವಿಕ, ರಾಜಸಿಕ, ತಾಮಸಿಕ.' ಅಂದಿನಿಂದ ನಾನು ಎಲ್ಲಾ ವಿಧದ ಸಾಧುಗಳನ್ನೂ ಗೌರವಿಸುತ್ತಿದ್ದೇನೆ."

ನರೇಂದ್ರ ನಗುತ್ತ: "ಏನು? ಇದು 'ಆನೆ ಭಗವಂತನ' ಹಾಗೇನು? ಎಲ್ಲರೂ ನಿಜವಾಗಿ ಭಗವಂತನೇ."

ಶ್ರೀರಾಮಕೃಷ್ಣರು ನಗುತ್ತ: "ಭಗವಂತನೇ ವಿದ್ಯಾ, ಅವಿದ್ಯಾ ರೂಪಗಳಲ್ಲಿ ಕ್ರೀಡಿಸುತ್ತಿದಾನೆ. ಎರಡನ್ನೂ ನಾನು ವಂದಿಸುತ್ತೇನೆ. ಚಂಡಿಯಲ್ಲಿ ಹೇಳಿದೆ: 'ಭಗವತಿ ಸೌಭಾಗ್ಯವಂತರ ಲಕ್ಷ್ಮಿಯಾಗಿದಾಳೆ, ದೌರ್ಭಾಗ್ಯವಂತರ ಅಲಕ್ಷ್ಮಿಯಾಗಿದಾಳೆ' ಎಂದು. (ಭವನಾಥನಿಗೆ) ಇದು ವಿಷ್ಣುಪುರಾಣದಲ್ಲಿದೆಯೋ?"

ಭವನಾಥ ನಗುತ್ತ: "ಅದು ನನಗೆ ಗೊತ್ತಿಲ್ಲ. ಕೊನ್ನಗರದ ಭಕ್ತರಿಗೆ ನಿಮ್ಮ ಸಮಾಧಿ ಅವಸ್ಥೆ ಏನು ಎಂಬುದು ಗೊತ್ತಾಗದೆ, ಇನ್ನೇನು ಎದ್ದು ಹೊರಡುವುದರಲ್ಲಿದ್ದರು."

ಶ್ರೀರಾಮಕೃಷ್ಣರು: "ಅವರಿಗೆ ಮತ್ತೆ ಕುಳಿತುಕೊಳ್ಳುವಂತೆ ಹೇಳಿದವರಾರು?"

ಭವನಾಥ ನಗುತ್ತ: "ನಾನೇ ಆ ಮಹಾಪುರುಷ!"

ಶ್ರೀರಾಮಕೃಷ್ಣರು: "ನೀನು ಜನರನ್ನು ಇಲ್ಲಿಗೆ ಎಳೆದುಕೊಂಡು ಬರುವುದರಲ್ಲೂ ಗಟ್ಟಿಗ, ಓಡಿಸಿಬಿಡುವುದರಲ್ಲೂ ಗಟ್ಟಿಗ!"

ನರೇಂದ್ರ ಆ ಕೊನ್ನಗರದ ಗಾಯಕನೊಡನೆ ನಡಸಿದ ಚರ್ಚೆಯ ಸಂಬಂಧವಾಗಿ ಈಗ ಮಾತುಕತೆ ಆರಂಭವಾಯಿತು.

ಮುಖ್ಯೋಪಾಧ್ಯಾಯ: "ನರೇಂದ್ರ ಆತನನ್ನ ಸುಮ್ಮನೆ ಬಿಡಲಿಲ್ಲ."

ಶ್ರೀರಾಮಕೃಷ್ಣರು: "ಅದು ಸರಿಯೆ. ಈ ವಿಧದ ಛಲ ಬೇಕು. ಇದಕ್ಕೆ 'ಸಾತ್ತ್ವಿಕ ತಮಸ್ಸು' ಅಂತ ಹೆಸರು. ಜನ ಹೇಳುವುದಕ್ಕೆಲ್ಲ ಸುಮ್ಮನೆ ತಲೆ ಬಾಗಿಸುತ್ತಿರಬೇಕೇ? ವೇಶ್ಯೆಗೆ ಹೇಳಿಬಿಡುವುದೇ: 'ಒಳ್ಳೇದು, ನಿನಗಿಚ್ಛೆಯಿದ್ದಂತೆ ಮಾಡಿಕೊ' ಅಂತ? ಆಕೆಗೆ ಕಿವಿಗೊಡುವುದೇ? ಒಮ್ಮೆ ರಾಧೆಗೆ ಸ್ವಲ್ಪ ಮುನಿಸು ಬಂತು. ಆಗ ಒಬ್ಬ ಸಖಿ ಹೇಳಿದಳು: 'ಶ್ರೀಮತಿಗೆ (ರಾಧೆಗೆ) ಅಹಂಕಾರ ಬಂದುಬಿಟ್ಟಿದೆ.' ಇನ್ನೊಬ್ಬ ಸಖಿ, ಬೃಂದೆ, ಹೇಳಿದಳು: 'ಆ "ಅಹಂ" ಯಾರದು? ಅದು ಕೃಷ್ಣನಿಗೆ ಸೇರಿದ್ದೇ. ಆಕೆ ಕೃಷ್ಣನ ಗರ್ವದಿಂದ ಗರ್ವಿತಳಾಗಿದಾಳೆ.'"

ಈಗ ಭಗವನ್ನಾಮ ಮಾಹಾತ್ಮ್ಯದ ಸಂಬಂಧವಾಗಿ ಮಾತುಕತೆ ಆರಂಭವಾಗಿದೆ.

ಭವನಾಥ: "ಹರಿನಾಮ ನನಗೆ ಬಹಳವಾಗಿ ನೆಮ್ಮದಿ ತರುತ್ತದೆ."

ಶ್ರೀರಾಮಕೃಷ್ಣರು: "ಯಾರು ಪಾಪವನ್ನು ಹರಣಮಾಡುತ್ತಾನೊ ಆತನೇ ಹರಿ. ಹರಿ ತ್ರಿತಾಪವನ್ನು ಹರಣಮಾಡುತ್ತಾನೆ. ಚೈತನ್ಯದೇವ ಹರಿನಾಮವನ್ನು ಪ್ರಚಾರಮಾಡಿದ; ಆದ್ದರಿಂದ ಅದು ಒಳ್ಳೆಯದೇ ಆಗಿರಬೇಕು. ನೋಡು, ಚೈತನ್ಯದೇವ ಒಬ್ಬ ದೊಡ್ಡ ಪಂಡಿತನೇ ಅಲ್ಲದೆ, ಅವ-ತಾರಪುರುಷ ಬೇರೆ. ಆತ ಹರಿನಾಮವನ್ನು ಪ್ರಚಾರ ಮಾಡಿದ್ದರಿಂದ ಅದು ನಿಸ್ಸಂದೇಹವಾಗಿ ಒಳ್ಳೆಯದೇ ಆಗಿರಬೇಕು. (ನಗುತ್ತ) ಒಮ್ಮೆ ಕೆಲವು ಮಂದಿ ರೈತರು ಒಂದು ಸಮಾರಾಧನೆಗೆ ಬಂದಿದ್ದರು. ಅವರನ್ನು ಕೇಳಲಾಯಿತು, ಅಮಟೆ ಕಾಯಿನ ಗೊಜ್ಜು ತಿನ್ನುತ್ತೀರಾ ಅಂತ. ಅವರು ಉತ್ತರವಿತ್ತರು: 'ಅದು ನೀವೆಲ್ಲರೂ ತಿನ್ನುವ ವಸ್ತುವಾಗಿದ್ದರೆ, ನಮಗೂ ಕೊಡಿ. ನೀವು ಅದನ್ನು ತಿನ್ನುವಾಗ ಅದು ಒಳ್ಳೆಯ ವಸ್ತುವೇ ಆಗಿರಬೇಕು.' (ಎಲ್ಲರೂ ನಗುತ್ತಿದಾರೆ.)

(ಮುಖ್ಯೋಪಾಧ್ಯಾಯ ಸೋದರರಿಗೆ) "ನಾನು ಶಿವನಾಥಶಾಸ್ತ್ರಿಯನ್ನು ಸಂಧಿಸಬೇಕು ಅಂತ ಇದೇನೆ. ನಿಮ್ಮ ಗಾಡಿಯಲ್ಲೇ ನೀವು ಕರೆದು ಕೊಂಡುಹೋಗುವುದಾದರೆ, ನಾನು ಬೇರೊಂದು ಗಾಡಿಯನ್ನ ಮಾಡಬೇಕಾದ ಆವಶ್ಯಕತೆಯೇನೂ ಬರೋದಿಲ್ಲ."

ಮುಖ್ಯೋಪಾಧ್ಯಾಯ: "ಆಗಲಿ, ಒಂದು ದಿನ ಅಲ್ಲಿಗೆ ಹೋಗೋಣ."

ಶ್ರೀರಾಮಕೃಷ್ಣರು ಭಕ್ತರಿಗೆ: "ಒಳ್ಳೇದು, ಬ್ರಾಹ್ಮಸಮಾಜದವರಿಗೆ

ನನ್ನ ಕಂಡರೆ ಹಿಡಿಸುತ್ತದೆಯೇ? ಅವರು ಸಾಕಾರವಾದಿಗಳನ್ನ ಬಹಳ ವಾಗಿ ನಿಂದಿಸುತ್ತಾರಲ್ಲ.''

ಮಹೇಂದ್ರಮುಖ್ಯೋಪಾಧ್ಯಾಯ ತೀರ್ಥಯಾತ್ರೆಗೆ ಹೋಗಬೇಕು ಅಂತ ಇದಾನೆ. ಆತ ಅದನ್ನು ಪರಮಹಂಸರಿಗೆ ತಿಳಿಸುತ್ತಿದಾನೆ.

ಶ್ರೀರಾಮಕೃಷ್ಣರು ನಗುತ್ತ: "ಏಕೆ ಹೀಗೆ? ಪ್ರೇಮದ ಮೊಳಕೆ ಇನ್ನೇನು ತಲೆದೋರುವುದರಲ್ಲಿದೆ ಅನ್ನುವಷ್ಟರಲ್ಲೇ ಹೊರಡಬೇಕು ಅಂತ ಇದೀಯಾ? ಮೊದಲು ಮೊಳಕೆ ಬರುತ್ತದೆ, ಅನಂತರ ಗಿಡವಾಗುತ್ತದೆ, ಅನಂತರ ಫಲಬಿಡುತ್ತದೆ. ನಿನ್ನೊಡನೆ ಮಾತುಕತೆಯಾಡುತ್ತ ನಾವು ಬಹಳ ಆನಂದಪಡುತ್ತಿದೇವೆ.''

ಮಹೇಂದ್ರಮುಖ್ಯೋಪಾಧ್ಯಾಯ: "ಇಚ್ಛೆಯಾಗಿಬಿಟ್ಟದೆ ಸ್ವಲ್ಪ ಸುತ್ತಾಡಿಕೊಂಡುಬರೋಣ ಅಂತ. ಬೇಗ ಬಂದುಬಿಡುತ್ತೇನೆ.''

ಘಂಟೆ ಅಪರಾಹ್ನ ಐದು. ಪರಮಹಂಸರು ತಮ್ಮ ಕೊಠಡಿಯಿಂದ ಹೊರಕ್ಕೆ ಬಂದಿದಾರೆ. ಭಕ್ತರು ಉದ್ಯಾನವನದಲ್ಲಿ ಸುತ್ತಾಡುತ್ತಿದಾರೆ. ಅವರಲ್ಲನೇಕರು ಇನ್ನೇನು ಮನೆಗೆ ಹಿಂದಿರುಗಲಿದಾರೆ.

ಪರಮಹಂಸರು ಉತ್ತರ ವರಾಂಡದಲ್ಲಿ ಹಾಜರಾನೊಡನೆ ಮಾತುಕತೆ ಆಡುತ್ತಿದಾರೆ. ಈಗ ಕೆಲವು ಕಾಲದಿಂದ ನರೇಂದ್ರ ಅಡಿಗಡಿಗೆ ಗುಹನ ಹಿರಿಯ ಮಗ ಅನ್ನದಾನನ್ನು ಸಂಧಿಸುತ್ತಿರುವುದರ ಸಂಬಂಧವಾಗಿ ಮಾತುಕತೆ ನಡೆಯುತ್ತಿದೆ.

ಹಾಜರಾ: "ಅನ್ನದಾ ಕಠೋರ ತಪಸ್ವಿಯಾಗಿಬಿಟ್ಟದಾನೆ ಅಂತ ಕೇಳಿದೇನೆ. ಆಹಾರವನ್ನು ಎಲ್ಲೊ 'ಕಿಂಚಿತ್ ಮಾತ್ರ ತೆಗೆದುಕೊಳ್ಳುತ್ತಾನಂತೆ. ನಾಲ್ಕು ದಿನಕ್ಕೊಮ್ಮೆ ಅನ್ನ ತಿನ್ನುತ್ತಾನಂತೆ.''

ಶ್ರೀರಾಮಕೃಷ್ಣರು: "ಹಾಗೇನು? 'ಯಾರಿಗೆ ತಾನೆ ಗೊತ್ತು? ಧಾರ್ಮಿಕ ವೇಷದಿಂದಲೂ ಭಗವಂತ ದೊರೆತರೂ ದೊರೆತುಬಿಡ ಬಹುದು!' ''

ಹಾಜರಾ: "ನರೇಂದ್ರ ಆಗಮನಿ[1] ಹಾಡುಗಳನ್ನು ಹಾಡಿದ.''

ಶ್ರೀರಾಮಕೃಷ್ಣರು ಉತ್ಸುಕರಾಗಿ: "ಹೇಗಿತ್ತು?''

ಕಿಶೋರಿ ಪರಮಹಂಸರ ಹತ್ತಿರ ನಿಂತಿದಾನೆ. ಅವರು ಆತನನ್ನು ಕೇಳುತ್ತಿದಾರೆ: "ಏನು ಆರೋಗ್ಯವೆ?''

---

1. ಶ್ರೀದುರ್ಗೆಯನ್ನು ಎದುರುಗೊಳ್ಳುವ ಹಾಡುಗಳು.

ಪರಮಹಂಸರು ತಮ್ಮ ಕೊಠಡಿಯ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ನಿಂತುಕೊಂಡಿದಾರೆ. ಚಳಿಗಾಲವಾದ್ದರಿಂದ ಕಾಷಾಯ ಬಣ್ಣದಲ್ಲಿ ಅದ್ದಿದ ಫ್ಲ್ಯಾನೆಲ್ ಬಟ್ಟೆಯ ಷರಟು ತೊಟ್ಟುಕೊಂಡಿದಾರೆ. ನರೇಂದ್ರನನ್ನು ಕೇಳುತ್ತಿದಾರೆ: "ನೀನು[1] ಆಗಮನಿ ಹಾಡು ಹಾಡಿದೆಯಾ?"

ಪರಮಹಂಸರು ನರೇಂದ್ರ ಮತ್ತು ಮಾಸ್ಟರೊಡನೆ ಗಂಗಾ ತೀರಕ್ಕೆ ಬಂದಿದಾರೆ.

ನರೇಂದ್ರ ಆಗಮನಿ ಹಾಡು ಹಾಡುತ್ತಿದಾನೆ:

ಹೌದೇನೇ ಉಮಾ ಹೌದೇನೆ
ಜನವೆನ್ನುವುದಿದು ನಿಜವೇನೇ?— . . . (ಉ. ೧೫)

ಪರಮಹಂಸರು ನಿಂತುಕೊಂಡೇ ಹಾಡು ಕೇಳುತ್ತಿದಾರೆ. ಕೇಳುತ್ತ ಕೇಳುತ್ತ ಇದ್ದ ಹಾಗೆ ಭಾವಾವಿಷ್ಟರಾಗಿಬಿಟ್ಟದಾರೆ. ಹೊತ್ತು ಮುಳುಗಲು ಇನ್ನೂ ಸ್ವಲ್ಪ ಸಮಯ ಇದೆ. ಸೂರ್ಯ ಬಾನಂಚಿನ ಹತ್ತಿರ ಕಾಣಿಸಿಕೊಳ್ಳುತ್ತಿದಾನೆ. ಪರಮಹಂಸರು ಭಾವಾವಿಷ್ಟರಾಗಿ ನಿಂತಿದಾರೆ. ಅವರ ಪಕ್ಕದಲ್ಲಿ ಹರಿಯುತ್ತಿರುವ ಗಂಗೆ ಉತ್ತರವಾಹಿನಿಯಾಗಿದಾಳೆ. ಉಬ್ಬರ ಬಂದು ಈಗ ಸ್ವಲ್ಪ ಹೊತ್ತು ತಾನೆ ಆಗಿದೆ. ಅವರ ಹಿಂದುಗಡೆ ಪುಷ್ಪೋದ್ಯಾನ. ಅವರ ಬಲ ಪಕ್ಕದಲ್ಲಿ ನಹಬತ್‌ಖಾನೆ ಮತ್ತು ಪಂಚವಟಿ ಕಣ್ಣಿಗೆ ಬೀಳುತ್ತಿವೆ. ನರೇಂದ್ರ ಅವರ ಹತ್ತಿರವೇ ನಿಂತು ಹಾಡು ಹಾಡುತ್ತಿದಾನೆ. ಈಗ ಮುಂಗತ್ತಲು ಕಾಲಿಕ್ಕುತ್ತಿದೆ.

ನರೇಂದ್ರನೇ ಮೊದಲಾದವರು ಪರಮಹಂಸರಿಂದ ಬೀಳ್ಕೊಂಡನಂತರ ಅವರು ತಮ್ಮ ಕೊಠಡಿಗೆ ಹಿಂದಿರುಗಿ ಬಂದಿದಾರೆ. ಈಗ ಜಗನ್ಮಾತೆಯ ಧ್ಯಾನದಲ್ಲಿ ತೊಡಗಿ ಆಕೆಯ ನಾಮಜಪ ಮಾಡುತ್ತಿದಾರೆ.

ಯದುಮಲ್ಲಿಕ ಕಾಳೀದೇವಾಲಯದ ಪಕ್ಕದಲ್ಲಿರುವ ತನ್ನ ತೋಟಕ್ಕೆ ಬಂದಿದಾನೆ. ಆತ ಪರಮಹಂಸರಿಗಾಗಿ ಹೇಳಿಕಳುಹಿಸಿದಾನೆ. ಅಧರಸೇನ ಕಲ್ಕತ್ತದಿಂದ ಬಂದಿದಾನೆ. ಈಗ ಆತ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ. ಪರಮಹಂಸರು ಲಾಟುವಿಗೆ ಹೇಳುತ್ತಿದಾರೆ, ಲಾಟೇನು ಹೊತ್ತಿಸಿಕೊಂಡು ಹೊರಡು— ಯದುಮಲ್ಲಿಕನ ತೋಟಕ್ಕೆ ಹೋಗಿ ಬರೋಣ.

---

1. ನರೇಂದ್ರ ಆಗ ಬ್ರಾಹ್ಮಸಮಾಜದ ಅನುಯಾಯಿಯಾಗಿದ್ದುದರಿಂದ ಆತನಿಗೆ ದೇವ ದೇವಿಯರಲ್ಲಿ ನಂಬಿಕೆ ಇರಲಿಲ್ಲ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೀನು ನಾರಾಣನನ್ನು ಏಕೆ ಕರೆದುಕೊಂಡುಬರಲಿಲ್ಲ?"

ಮಾಸ್ಟರ್: "ನಾನೂ ನಿಮ್ಮೊಡನೆ ಬರಲೇ?"

ಶ್ರೀರಾಮಕೃಷ್ಣರು: "ಅಲ್ಲಿಗೆ ಬರಬೇಕು ಅಂತೀಯಾ? ಅಧರಸೇನ ಮೊದಲಾದವರು ಇಲ್ಲಿ ಇದಾರಲ್ಲ. ಒಳ್ಳೇದು, ಬಾ. ಮುಖ್ಯೋಪಾಧ್ಯಾಯ ಸೋದರರಿಗೂ ಬರಲಿಚ್ಛೆಯಿದೆಯೇ? (ಮುಖ್ಯೋಪಾಧ್ಯಾಯ ಸೋದರರಿಗೆ) ಬನ್ನಿ ಹೋಗೋಣ. ಇಷ್ಟೊಂದು ಜನ ಒಟ್ಟಿಗೆ ಹೋದರೆ ಬೇಗ ಹಿಂದಿರುಗಿ ಬಂದುಬಿಡಬಹುದು."

ಪರಮಹಂಸರು ಯದುಮಲ್ಲಿಕನ ಬೈಠಕ್‌ಖಾನೆಗೆ ಬಂದಿದಾರೆ. ಒಳ್ಳೆ ಸುಸಜ್ಜಿತ ಬೈಠಕ್‌ಖಾನೆ. ಕೊಠಡಿಯ ಒಳಗೆ, ವರಾಂಡದಲ್ಲಿ ಎಲ್ಲೆಲ್ಲೂ ದೀಪ ಉರಿಯುತ್ತಿವೆ. ಯದುಮಲ್ಲಿಕ ಒಬ್ಬಿಬ್ಬರು ಸ್ನೇಹಿತರೊಡನೆ ಕುಳಿತುಕೊಂಡು ಚಿಕ್ಕ ಮಕ್ಕಳೊಡನೆ ಆಟವಾಡುತ್ತಿದಾನೆ. ಸೇವಕರೆಲ್ಲ ಕೈ ಕಟ್ಟಿ ನಿಂತಿದಾರೆ. ಯದುಮಲ್ಲಿಕ ನಗುನಗುತ್ತ ಕುಳಿತುಕೊಂಡೇ ಪರಮಹಂಸರನ್ನು ಒಳಕ್ಕೆ ಬರಮಾಡಿಕೊಂಡ. ಪರಮಹಂಸರು ಬಹಳ ಕಾಲದಿಂದಲೂ ಪರಿಚಿತರಾದ ಸ್ನೇಹಿತರೊ ಏನೊ ಎಂಬಂತೆ ಅವರೊಡನೆ ವ್ಯವಹರಿಸಲಾರಂಭಿಸಿದ.

ಯದುಮಲ್ಲಿಕ ಗೌರಾಂಗನ ಭಕ್ತ. ಆತ ಸ್ಟಾರ್ ಥಿಯೇಟರಿನಲ್ಲಿ ಚೈತನ್ಯಲೀಲೆಯನ್ನು ನೋಡಿಕೊಂಡು ಈಗತಾನೆ ಬಂದಿದಾನೆ. ಅದರ ವಿಷಯವಾಗಿ ಆತ ಪರಮಹಂಸರಿಗೆ ವರ್ಣನೆಮಾಡುತ್ತಿದಾನೆ. ಪರಮಹಂಸರು ಆನಂದದಿಂದ ಆತನ ವರ್ಣನೆಯನ್ನು ಕೇಳುತ್ತ ಅಲ್ಲಿದ್ದ ಮಕ್ಕಳೊಡನೆ ಆಟವಾಡುತ್ತಿದಾರೆ. ಮಾಸ್ಟರ್ ಮತ್ತು ಮುಖ್ಯೋಪಾಧ್ಯಾಯ ಸೋದರರು ಅವರ ಹತ್ತಿರ ಕುಳಿತಿದಾರೆ. ಹಾಗೇ ಮಾತಾಡುತ್ತ ಪರಮಹಂಸರು ಯದುಮಲ್ಲಿಕನಿಗೆ ಹೇಳುತ್ತಿದಾರೆ, ಅಧರಸೇನನಿಗೆ ಕಲ್ಕತ್ತದ ಮುನಿಸಿಪಾಲಿಟಿಯ ಉಪಾಧ್ಯಕ್ಷನ ಪದವಿ ಸಿಕ್ಕಲಿಲ್ಲವಂತೆ ಎಂಬುದಾಗಿ. ಯದುಮಲ್ಲಿಕ ಉತ್ತರವೀಯುತ್ತಿದಾನೆ, ಆತನಿಗಿನ್ನೂ ಚಿಕ್ಕ ವಯಸ್ಸಾದ್ದರಿಂದ ಮತ್ತೆ ಪ್ರಯತ್ನಮಾಡಬಹುದಲ್ಲ. ಯದುಮಲ್ಲಿಕನ ಇಚ್ಛೆಗನುಸಾರ ಪರಮಹಂಸರು ಗೌರಾಂಗನ ಮೇಲಿನ ಕೆಲವು ಹಾಡುಗಳನ್ನು ಹಾಡಿದರು.

ಹಾಡುವುದು ಮುಗಿದನಂತರ ಮುಖ್ಯೋಪಾಧ್ಯಾಯ ಸೋದರರು

ಹೊರಡಲು ಸಿದ್ಧರಾಗುತ್ತಿದಾರೆ. ಪರಮಹಂಸರೂ ಹೊರಡಲು ಮೇಲಕ್ಕೆ ಎದ್ದರು. ಆದರೆ ಭಾವಾವಿಷ್ಟರಾಗಿದಾರೆ. ಕೊಠಡಿಯ ಹೊರಗಿನ ವರಾಂಡಕ್ಕೆ ಬರುವುದೇ ತಡ ಸಮಾಧಿಸ್ಥರಾಗಿ ನಿಂತುಕೊಂಡಿದಾರೆ. ಆ ತೋಟದ ಕಾವಲುಗಾರ ಒಳ್ಳೆ ಭಕ್ತ. ಪರಮಹಂಸರನ್ನು ಆಗಾಗ ತನ್ನ ಮನೆಗೆ ಕರೆದುಕೊಂಡುಹೋಗಿ ಅವರಿಗೆ ತಿಂಡಿ ತೀರ್ಥಗಳನ್ನು ಕೊಡುತ್ತಿದ್ದ. ಪರಮಹಂಸರು ಇನ್ನೂ ಸಮಾಧಿಸ್ಥರಾಗಿ ನಿಂತಿದಾರೆ. ಕಾವಲುಗಾರ ದೊಡ್ಡ ಬೀಸಣಿಗೆಯಿಂದ ಬೀಸುತ್ತ ನಿಂತಿದಾನೆ. ತೋಟದ ಮ್ಯಾನೇಜರ್ ರತನ ಬಂದು ಪರಮಹಂಸರಿಗೆ ಪ್ರಣಾಮಮಾಡಿದ. ಪರಮಹಂಸರು ಅಷ್ಟರಲ್ಲಿ ಪ್ರಕೃತಿಸ್ಥರಾಗಿ "ನಾರಾಯಣ! ನಾರಾಯಣ" ಎಂದು ಉಚ್ಚರಿಸಿ ಆ ಕಾವಲುಗಾರನ ಮತ್ತು ಮ್ಯಾನೇಜರ ಕ್ಷೇಮಸಮಾಚಾರ ವಿಚಾರಿಸುತ್ತಿದಾರೆ. ಈಗ ಭಕ್ತರೊಡಗೂಡಿ ಪರಮಹಂಸರು ಹೆಬ್ಬಾಗಿಲ ಮೂಲಕ ತಮ್ಮ ಕೊಠಡಿಗೆ ಹಿಂದಿರುಗುತ್ತಿದಾರೆ.

ಶ್ರೀರಾಮಕೃಷ್ಣರು ಮುಖ್ಯೋಪಾಧ್ಯಾಯ ಸೋದರರಿಗೆ ಮಾಸ್ಟರನ್ನು ತೋರಿಸಿ: "ಈತನನ್ನು ಆಗಾಗ ಸಂಧಿಸಿ."

ಪ್ರಿಯಮುಖ್ಯೋಪಾಧ್ಯಾಯ: "ಇನ್ನು ಮೇಲೆ ಈತ ನಮಗೆ ಉಪಾಧ್ಯಾಯನಾಗುತ್ತಾನೆ."

ಶ್ರೀರಾಮಕೃಷ್ಣರು: "ಗಾಂಜಾಖೋರನಿಗೆ ಗಾಂಜಾಖೋರ ದೊರೆತರೆ ಆತನೊಡನೆ ಆನಂದಪಡುವುದೇ ಆತನ ಸ್ವಭಾವ. ಆತನ ಹತ್ತಿರಕ್ಕೆ ಒಬ್ಬ ಅಮೀರ ಬಂದನೆಂದರೆ, ಆತನನ್ನು ಆತ ಮಾತಾಡಿಸುವುದು ಕೂಡ ಇಲ್ಲ; ಆದರೆ ಒಬ್ಬ ದರಿದ್ರ ಗಾಂಜಾಖೋರ ಬಂದನೆಂದರೂ ಸರಿಯೆ ಆತನನ್ನು ತಬ್ಬಿತಕ್ಕೈಸಿ ಆತನೊಡನೆ ಆನಂದಪಡುತ್ತಾನೆ." (ಎಲ್ಲರೂ ನಗುತ್ತಿದಾರೆ.)

ಘಂಟೆ ರಾತ್ರಿ ಒಂಭತ್ತು. ಮುಖ್ಯೋಪಾಧ್ಯಾಯ ಸೋದರರು ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಂಡರು. ಅಧರಸೇನ ಮತ್ತು ಮಾಸ್ಟರ್ ನೆಲದ ಮೇಲೆ ಕುಳಿತಿದಾರೆ. ಪರಮಹಂಸರು ಅಧರಸೇನನೊಡನೆ ರಾಖಾಲನ ಸಂಬಂಧವಾಗಿ ಮಾತುಕತೆ ಆಡುತ್ತಿದಾರೆ.

ರಾಖಾಲ ಬೃಂದಾವನದಲ್ಲಿ ಬಲರಾಮನೊಡನಿದಾನೆ. ಅವನ ಶರೀರಾರೋಗ್ಯ ಸರಿಯಾಗಿಲ್ಲವೆಂದು ಕೆಲವು ದಿನಗಳ ಹಿಂದೆ ಒಂದು ಪತ್ರ ಬಂತು. ಪರಮಹಂಸರು ಆತನ ಸಂಬಂಧವಾಗಿ ಅಷ್ಟೊಂದು ವ್ಯಸನಾ

ಕ್ರಾಂತರಾಗಿದಾರೆ, ಮೂರು ದಿನಗಳ ಹಿಂದೆ ಹಾಜರಾನೆದುರು, ಮಕ್ಕಳ ಹಾಗೆ ಅತ್ತುಬಿಟ್ಟರು. ಅಧರಸೇನ ರಾಖಾಲನಿಗೆ ಒಂದು ರೆಜಿಸ್ಟರ್ಡ್ ಪತ್ರ ಕಳುಹಿಸಿದಾನೆ. ಇನ್ನೂ ಯಾವ ಉತ್ತರವೂ ಆತನಿಂದ ಬಂದಿಲ್ಲ.

ಶ್ರೀರಾಮಕೃಷ್ಣರು ಅಧರಸೇನನಿಗೆ: "ನಾರಾಣನಿಗೆ ಬೃಂದಾವನದಿಂದ ಒಂದು ಪತ್ರ ಬಂದಿದೆ. ನಿನ್ನದಕ್ಕೆ ಇನ್ನೂ ಉತ್ತರವೇ ಬರಲಿಲ್ಲವಲ್ಲ?"

ಅಧರಸೇನ: "ಹೌದು, ಇನ್ನೂ ಬಂದಿಲ್ಲ."

ಶ್ರೀರಾಮಕೃಷ್ಣರು: "ಮಾಸ್ಟರಿಗೂ ಬೃಂದಾವನದಿಂದ ಒಂದು ಪತ್ರ ಬಂದುಬಿಟ್ಟದೆ."

ಮಾಸ್ಟರ್ ಮತ್ತು ಅಧರಸೇನ ಪರಮಹಂಸರನ್ನು ಸ್ಟಾರ್ ಥಿಯೇಟರಿಗೆ ಕರೆದುಕೊಂಡುಹೋಗಿ ಚೈತನ್ಯಲೀಲೆಯನ್ನು ತೋರಿಸಿಕೊಂಡುಬರುವುದರ ಸಂಬಂಧವಾಗಿ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ನಗುತ್ತ: "ಯದುಮಲ್ಲಿಕ ಹೇಳಿದ: 'ಒಂದು ರೂಪಾಯಿನ ಸೀಟಿನಿಂದಲೇ[1] ಚೆನ್ನಾಗಿ ನೋಡಿಬರಬಹುದು. ಬಹಳ ಅಗ್ಗ!' ಒಮ್ಮೆ ನಾವು ಪಾನಿಹಾಟಿಗೆ ಹೋಗಿಬರಬೇಕೆಂದು ಯೋಚನೆ ಮಾಡುತ್ತಿದ್ದೆವು. ಯದುಮಲ್ಲಿಕ ನಮಗೆ ಪ್ರಯಾಣಿಕರ ದೋಣಿಗೆ ಹತ್ತೋ ಹಾಗೆ ಉಪದೇಶವಿತ್ತ. (ಎಲ್ಲರೂ ನಗುತ್ತಿದಾರೆ.)

"ಹಿಂದೆ ಭಗವಂತನ ಸಂಬಂಧವಾಗಿ ಸ್ವಲ್ಪ ಕೇಳಬೇಕು, ಮಾಡಬೇಕು ಅಂತ ಆತನಿಗೆ ಇಚ್ಛೆಯಿತ್ತು. ಆತನ ಮನೆಗೆ ಒಬ್ಬ ಭಕ್ತ ಹೋಗಿ ಬರುವುದು ಮಾಡುತ್ತಿದ್ದ. ಈಗ ಆತನ ಸುಳಿವೇ ಅಲ್ಲಿ ಇಲ್ಲ. ಯದುಮಲ್ಲಿಕನನ್ನು ಸರ್ವದಾ ಹೊಗಳುಭಟ್ಟರು ಮುತ್ತಿ ಆತನನ್ನು ನಾಶಪಡಿಸುತ್ತಿದಾರೆ. ಆತನದು ಲೆಕ್ಕಾಚಾರದ ಸ್ವಭಾವ. ನಾನು ಆತನ ಮನೆಗೆ ಕಾಲಿಡುವುದೇ ತಡ ಆತ ಕೇಳುತ್ತಾನೆ: 'ಗಾಡಿಯ ಬಾಡಿಗೆ ಎಷ್ಟು?' ನಾನು ಹೇಳುತ್ತೇನೆ: 'ಅದನ್ನೆಲ್ಲ ನಿನಗೆ ಹೇಳಿಕೊಳ್ಳುವುದರಿಂದ ಏನು ಪ್ರಯೋಜನವೂ ಆಗುವ ಹಾಗಿಲ್ಲ. ನೀನು ಎರಡೂವರೆ ರೂಪಾಯನ್ನು ಮಾತ್ರ ಕೊಟ್ಟುಬಿಡು.' ಆಗ ಆತ ಸುಮ್ಮನಾಗಿಬಿಟ್ಟು ಎರಡೂವರೆ ರೂಪಾಯಿಯನ್ನೇ ಕೊಡುತ್ತಾನೆ." (ಎಲ್ಲರೂ ನಗುತ್ತಿದಾರೆ.)

---

1. ಯದುಮಲ್ಲಿಕ ದೊಡ್ಡ ಧನಿಕನಾಗಿದ್ದರೂ ಅತ್ಯಂತ ಜಿಪುಣ.

ಆಗಲೆ ಬಹಳವಾಗಿ ರಾತ್ರಿಯಾಗಿಬಿಟ್ಟಿದೆ. ಅಧರಸೇನ ಪರಮ-ಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾನೆ. ಪರಮ-ಹಂಸರು ಮಾಸ್ಟರಿಗೆ ಹೇಳುತ್ತಿದಾರೆ, ನಾರಾಣನನ್ನು ತನ್ನೊಡನೆ ಕರೆದು ಕೊಂಡುಬರುವಂತೆ.



೨೮

## ಸ್ಟಾರ್ ಥಿಯೇಟರಿನಲ್ಲಿ (೧)

೧೯ನೆ ಸೆಪ್ಟೆಂಬರ್ ೧೮೮೪, ಭಾದ್ರಪದ ಅಮಾವಾಸ್ಯೆ, ಶುಕ್ರವಾರ.

ಇಂದು ಮಹಾಲಯ ಅಮಾವಾಸ್ಯೆ. ಘಂಟೆ ಅಪರಾಹ್ನ ಎರಡು. ಶ್ರೀರಾಮಕೃಷ್ಣರು ತಮ್ಮ ಕೊಠಡಿಯಲ್ಲಿ ಮಾಸ್ಟರ್, ಮಹೇಂದ್ರಮುಖ್ಯೋಪಾಧ್ಯಾಯ, ಪ್ರಿಯಮುಖ್ಯೋಪಾಧ್ಯಾಯ, ಬಾಬುರಾಮ, ಹರೀಶ, ಕಿಶೋರಿ, ಲಾಟು ಇವರೇ ಮೊದಲಾದವರೊಡನೆ ಕುಳಿತುಕೊಂಡಿದಾರೆ. ಕೆಲವರು ನೆಲದ ಮೇಲೆ ಕುಳಿತಿದಾರೆ, ಇನ್ನು ಕೆಲವರು ನಿಂತುಕೊಂಡಿದಾರೆ, ಮತ್ತೆ ಕೆಲವರು ಆಗಾಗ ಕೊಠಡಿಗೆ ಬಂದುಹೋಗುತ್ತಿದಾರೆ. ಹಾಜರಾ ವರಾಂಡದಲ್ಲಿ ಕುಳಿತಿದಾನೆ. ರಾಖಾಲ ಇನ್ನೂ ಬೃಂದಾವನದಲ್ಲೇ ಬಲರಾಮನೊಡನೆ ಇದಾನೆ.

ಶ್ರೀರಾಮಕೃಷ್ಣರು ಭಕ್ತರಿಗೆ: “ನಾನು ಕಲ್ಕತ್ತದಲ್ಲಿ ಕ್ಯಾಪ್ಟೆನ್ನನ ಮನೆಗೆ ಹೋಗಿದ್ದೆ. ಹಿಂದಿರುಗಿಬರುವಷ್ಟರಲ್ಲಿ ಬಹಳವಾಗಿ ರಾತ್ರಿಯೇ ಆಗಿ ಬಿಟ್ಟಿತು. ಆತ ಎಂಥಾ ವಿನಯಿ! ಎಷ್ಟೊಂದು ಭಕ್ತಿ! ರೇಷ್ಮೆವಸ್ತ್ರ ಉಟ್ಟು ಮಂಗಳಾರತಿ ಮಾಡುತ್ತಾನೆ. ಮೊದಲು ಮೂರು ಬತ್ತಿಗಳ, ಅನಂತರ ಒಂದು ಬತ್ತಿಯ, ಕೊನೆಗೆ ಕರ್ಪೂರದ ಆರತಿ ಎತ್ತುತ್ತಾನೆ. ಆರತಿಯ ಸಮಯದಲ್ಲಿ ಯಾರೊಡನೆಯೂ ಮಾತಾಡುವುದಿಲ್ಲ. ಬರೀ ಕೈ ಸನ್ನೆಯಿಂದಲೇ ನನಗೆ ಕುಳಿತುಕೊಳ್ಳುವಂತೆ ಹೇಳಿದ. ಪೂಜೆಯ ಸಮಯದಲ್ಲಿ ಆತನ ಕಣ್ಣುಗಳು ಭಾವದಿಂದ ಉದ್ರೇಕಗೊಳ್ಳುತ್ತವೆ— ಅವನ್ನು ಕಣಜ ಕಡಿದುಬಿಟ್ಟಿವೆಯೊ ಏನೊ ಎಂಬಂತೆ. ಆತನಿಗೆ ಹಾಡಲು ಬರೋದಿಲ್ಲ, ಆದರೆ ಬಹಳ ಚೆನ್ನಾಗಿ ಸ್ತೋತ್ರಪಾಠ ಮಾಡಬಲ್ಲ. ತಾಯಿಯ ಎದುರಿನಲ್ಲಿ ಆತ ಆಕೆಯನ್ನು ಒಂದು ಪೀಠದಲ್ಲಿ ಕೂರಿಸಿ ತಾನು ಕೆಳಗಡೆ ಕುಳಿತುಕೊಳ್ಳುತ್ತಾನೆ.

“ಕ್ಯಾಪ್ಟೆನ್ನನ ತಂದೆ ಆಂಗ್ಲ ಸೇನೆಯಲ್ಲಿ ಹವಾಲದಾರನಾಗಿದ್ದ. ರಣರಂಗದಲ್ಲಿ ಆತ ಒಂದು ಕೈಯಲ್ಲಿ ಬಂದೂಕ ಹಿಡಿದುಕೊಂಡು ಇನ್ನೊಂದು ಕೈಯಿಂದ ಶಿವಪೂಜೆ ಮಾಡುತ್ತಿದ್ದ. ಆತನ ಸೇವಕ ಆತನಿಗೆ ಮಣ್ಣಿನ ಶಿವಲಿಂಗ ಮಾಡಿಕೊಡುತ್ತಿದ್ದ. ಶಿವಪೂಜೆಯನ್ನು ಮಾಡದ ಹೊರತು

ಆತ ಒಂದು ತೊಟ್ಟು ನೀರನ್ನೂ ಮುಟ್ಟುತ್ತಿರಲಿಲ್ಲ. ಆತನಿಗೆ ವರ್ಷಕ್ಕೆ ಆರು ಸಾವಿರ ರೂಪಾಯಿ ಸಂಬಳ ಬರುತ್ತಿತ್ತು.

"ಕ್ಯಾಪ್ಟೆನ್ ಆಗಾಗ ತನ್ನ ತಾಯಿಯನ್ನು ಕಾಶಿಗೆ ಕಳುಹಿಸುತ್ತಾನೆ. ಅಲ್ಲಿ ಹನ್ನೆರಡೊ ಹದಿಮೂರೊ ಜನ ಆಕೆಯ ಸೇವೆಯಲ್ಲಿ ನಿರತರಾಗಿರುತ್ತಾರೆ; ಖರ್ಚು ಬಹಳ ಆಗುತ್ತದೆ. ವೇದಾಂತ, ಗೀತೆ, ಭಾಗವತ ಇವೆಲ್ಲ ಆತನಿಗೆ ಕಂಠಸ್ಥವಾಗಿವೆ. ಆತ ಹೇಳುತ್ತಿರುತ್ತಾನೆ, ಕಲ್ಕತ್ತದ ಬಾಬುಗಳು ಮ್ಲೇಚ್ಛರನ್ನು ಅನುಕರಿಸುತ್ತಿದಾರೆ ಎಂದು.

"ಚಿಕ್ಕ ವಯಸ್ಸಿನಲ್ಲಿ ಆತ ಹಠಯೋಗವನ್ನು ಅಭ್ಯಾಸಮಾಡಿದ್ದ. ಅದಕ್ಕಾಗಿ ಆತ ನಾನು ಸಮಾಧಿಯಲ್ಲಿ ಅಥವಾ ಭಾವಾವಸ್ಥೆಯಲ್ಲಿ ಇರುವಾಗ ನನ್ನ ತಲೆಯನ್ನು ಹಿಡಿದು ಸವರುತ್ತಾನೆ. ಆತನ ಹೆಂಡತಿ ಬೇರೆ ದೇವರನ್ನು, ಅಂದರೆ ಗೋಪಾಲನನ್ನು ಪೂಜೆಮಾಡುತ್ತಾಳೆ. ಈ ಸಲ ಆಕೆ ಅಷ್ಟೊಂದು ಕೃಪಣತೆ ತೋರಿಸಲಿಲ್ಲ. ಆಕೆಯೂ ಗೀತೆಯೇ ಮೊದಲಾದ ಶಾಸ್ತ್ರ ಗ್ರಂಥಗಳನ್ನು ಓದಿದಾಳೆ. ಅವರಿಬ್ಬರದೂ ಎಂಥಾ ಭಕ್ತಿ!

"ಒಮ್ಮೆ ಅವರು ಆಡಿನ ಮಾಂಸ ಹಾಕಿ ಪಲ್ಯ ತಯಾರುಮಾಡಿದ್ದರು. ಕ್ಯಾಪ್ಟೆನ್ ಹೇಳಿದ: 'ಇದನ್ನು ಹದಿನೈದು ದಿನದವರೆಗೂ ಇಟ್ಟುಕೊಂಡು ತಿನ್ನಬಹುದು.' ಆಕೆ ಹೇಳಿದಳು: 'ಇಲ್ಲ, ಇಲ್ಲ! ಏಳು ದಿನ ಮಾತ್ರ.' ನನಗೆ ಅದು ಬಹಳ ರುಚಿಕರವಾಗಿತ್ತು. ಅವರಿಗೆ ಪಲ್ಯಗಳನ್ನ ಎಲ್ಲೊ ಸ್ವಲ್ಪ ಸ್ವಲ್ಪ ಮಾತ್ರ ಬಡಿಸುವ ಅಭ್ಯಾಸ. ಅವು ನನಗೆ ಅವರಿಗಿಂತ ಸ್ವಲ್ಪ ಹೆಚ್ಚಾಗಿ ಬೇಕಾಗಿರುವುದನ್ನು ಅರಿತು, ಈಗ ನನಗೆ ಸ್ವಲ್ಪ ಹೆಚ್ಚಾಗೇ ಬಡಿಸುತ್ತಾರೆ. ಊಟವಾದನಂತರ ಕ್ಯಾಪ್ಟೆನ್ನನೊ ಅಥವಾ ಆತನ ಹೆಂಡತಿಯೊ ನನಗೆ ಬೀಸಣಿಗೆಯಿಂದ ಗಾಳಿ ಬೀಸುತ್ತಾರೆ.

"ಅವರ ಭಕ್ತಿ ಬಹಳ ವಿಶೇಷವಾದ್ದು—ಸಾಧುಗಳಿಗೆ ವಿಶೇಷ ಸನ್ಮಾನ ತೋರಿಸುತ್ತಾರೆ. ಪಶ್ಚಿಮ ಭಾರತದ ಜನರಿಗೆ ಸಾಧುಗಳಲ್ಲಿ ವಿಶೇಷವಾದ ಶ್ರದ್ಧಾಭಕ್ತಿ. ನೇಪಾಳದ ಜಂಗ್‌ಬಹದೂರನ ಮತ್ತು ಆತನ ಅಣ್ಣನ ಮಕ್ಕಳು ಇಲ್ಲಿಗೆ ದೇವಾಲಯ ನೋಡಲು ಬಂದಿದ್ದರು. ಅವರು ನನಗೆ ಬಹಳವಾಗಿ ಗೌರವ ತೋರಿಸಿದರು. ಒಮ್ಮೆ ನೇಪಾಳ್ ದೇಶದ ಒಬ್ಬ ಹುಡುಗಿ ಕ್ಯಾಪ್ಟೆನ್‌ನೊಡನೆ ಇಲ್ಲಿಗೆ ಬಂದಿದ್ದಳು. ದೊಡ್ಡ ಭಕ್ತೆ—ವಿವಾಹವಾಗಿರಲಿಲ್ಲ. ಆಕೆಗೆ ಗೀತಗೋವಿಂದ ಕಂಠಸ್ಥವಾಗಿತ್ತು. ಮಥುರ-ಬಾಬುವಿನ ಮಗ ದ್ವಾರಕಬಾಬು ಮೊದಲಾದವರು ಆಕೆ ಹಾಡುವುದನ್ನು

ಕೇಳಬೇಕು ಅಂತ ಇಚ್ಛಿಸಿದರು. ಆಕೆ ಗೀತಗೋವಿಂದವನ್ನು ಹಾಡುತ್ತಿದ್ದಾಗ ದ್ವಾರಕಬಾಬು ಕರವಸ್ತ್ರದಿಂದ ಆಗಾಗ ತನ್ನ ಕಣ್ಣುಗಳನ್ನು ಒರಸಿಕೊಳ್ಳುತ್ತಲೇ ಇದ್ದ. ವಿವಾಹವನ್ನೇಕೆ ಮಾಡಿಕೊಳ್ಳಲಿಲ್ಲ ಎಂದು ಪ್ರಶ್ನಿಸಿದಾಗ, ಆಕೆ ಉತ್ತರವಿತ್ತಳು: 'ನಾನು ಭಗವಂತನ ದಾಸಿ. ಬೇರೆ ಯಾರ ದಾಸಿಯಾಗಲು ಹೋಗಲಿ?' ಆಕೆಯ ಜನರೆಲ್ಲರೂ ಆಕೆಯನ್ನು ಸಾಕ್ಷಾತ್ ಭಗವತಿಯೇ ಎಂಬ ದೃಷ್ಟಿಯಿಂದ ಗೌರವಿಸುತ್ತಾರೆ—ಶಾಸ್ತ್ರಗಳು ಹೇಳುವ ಹಾಗೆ.

(ಮಹೇಂದ್ರಮುಖ್ಯೋಪಾಧ್ಯಾಯನಿಗೆ ಮತ್ತು ಉಳಿದವರಿಗೆ) "ನೀವು ಇಲ್ಲಿಗೆ ಬರುತ್ತಿರುವುದರಿಂದ ನಿಮಗೆ ಉಪಕಾರ ಆಗುತ್ತಿದ್ದರೆ ನನಗೆ ಬಹಳ ಆನಂದ. (ಮಾಸ್ಟರಿಗೆ) ಇಲ್ಲಿಗೆ ಜನ ಬರುತ್ತಿದಾರಲ್ಲ ಏಕೆ? ನನ್ನಲ್ಲಿ ಅಂಥ ಪಾಂಡಿತ್ಯ-ಗೀಂಡಿತ್ಯ ಏನೂ ಇಲ್ಲವಲ್ಲ."

ಮಾಸ್ಟರ್: "ಭಗವಂತನ ಶಕ್ತಿ ನಿಮ್ಮಲ್ಲಿದೆ. ಅದಕ್ಕಾಗಿ ಇಷ್ಟೊಂದು ಆಕರ್ಷಣೆ. ಆಕರ್ಷಿಸುತ್ತಿರುವುದು—ನಿಮ್ಮಲ್ಲಿರುವ ಭಗವಂತನ ಶಕ್ತಿ."

ಶ್ರೀರಾಮಕೃಷ್ಣರು: "ಇದೆಲ್ಲ ಯೋಗಮಾಯೆಯ ಆಕರ್ಷಣೆ. ಆಕೆ ಮೋಡಿ ಹಾಕುತ್ತಾಳೆ. ಭಗವಲ್ಲೀಲೆಯೆಲ್ಲವೂ ಯೋಗಮಾಯೆಯ ಸಹಾಯದಿಂದ.

"ಗೋಪಿಯರ ಪ್ರೀತಿ, ಜಾರೆ ತನ್ನ ಉಪಪತಿಯಲ್ಲಿಟ್ಟಿರುವ ಪ್ರೀತಿಯ ಹಾಗೆ. ಅವರಿಗೆ ಕೃಷ್ಣನಲ್ಲಿ ಪ್ರೇಮೋನ್ಮಾದ ಉಂಟಾಗಿತ್ತು. ಜಾರೆಗೆ ತನ್ನ ಸ್ವಂತ ಪತಿಯ ಮೇಲೆ ಅಷ್ಟೊಂದು ಪ್ರೀತಿ ಉಂಟಾಗದು. ಆಕೆಗೆ ಯಾರಾದರೂ ಹೇಳಿದರೆ: 'ನೋಡಿ, ನಿಮ್ಮ ಯಜಮಾನರು ಬಂದಿದಾರೆ', ಆಕೆ ಉತ್ತರವೀಯುತ್ತಾಳೆ: 'ಅದಕ್ಕೇನು ಮಾಡಬೇಕು? ಒಲೆ ಮೇಲೆ ಅನ್ನ ಸಾರು ಇದೆ. ಬಡಿಸಿಕೊಂಡು ಊಟಮಾಡುತ್ತಾರೆ.' ಆದರೆ ಯಾರೊ ಒಬ್ಬ ಹೊಸಬ—ರಸಿಕ, ಸುಂದರ, ಸರಸಿ—ಬಂದಿದಾನೆ ಎಂಬುದಾಗಿ ಕೇಳಿದೊಡನೇ ಆತನನ್ನು ನೋಡಲು ಎದ್ದು ಓಡಿಹೋಗಿ ಪರದೆ ಹಿಂದಿನಿಂದ ಇಣಿಕಿ ನೋಡಲಾರಂಭಿಸುತ್ತಾಳೆ.

"ನೀವು ಕೇಳಬಹುದು: 'ನಾವು ಭಗವಂತನನ್ನು ನೋಡಿಲ್ಲ. ಆತನ ಮೇಲೆ, ಗೋಪಿಯರಿಗೆ ಆದ ಹಾಗೆ, ಯಾವ ರೀತಿಯಾಗಿ ಆಕರ್ಷಣೆ ಉಂಟಾದೀತು?' ನೋಡದೆ ಇದ್ದರೂ ಸಾಧ್ಯ. 'ಭಗವಂತ ಯಾರು

ಎಂಬುದು ನನಗೆ ಗೊತ್ತಿಲ್ಲ. ಆತನ ಹೆಸರು ಮಾತ್ರ ಕೇಳಿದೇನೆ. ಅಷ್ಟೇ ನನ್ನ ಮನಸ್ಸನ್ನು ಆತನಲ್ಲಿ ನೆಟ್ಟುಬಿಟ್ಟಿದೆ.' "

ಒಬ್ಬ ಭಕ್ತ: "ಒಳ್ಳೇದು, ಗೋಪಿಯರ ವಸ್ತ್ರಾಪಹರಣದ ಇಂಗಿತ ವೇನು?"

ಶ್ರೀರಾಮಕೃಷ್ಣರು: "ಅಷ್ಟಪಾಶಗಳಲ್ಲಿ ಎಲ್ಲವನ್ನೂ ಗೋಪಿಯರು ಕಳೆದುಕೊಂಡಿದ್ದರು—ಕೇವಲ ಲಜ್ಜೆಯನ್ನು ವಿನಾ. ಅದಕ್ಕಾಗೇ ಶ್ರೀಕೃಷ್ಣ ಅವರ ವಸ್ತ್ರವನ್ನು ಅಪಹರಿಸಿ ಆ ಪಾಶದಿಂದಲೂ ಅವರನ್ನು ಮುಕ್ತರನ್ನಾಗಿ ಮಾಡಿದ. ಭಗವಂತನ ಸಾಕ್ಷಾತ್ಕಾರ ದೊರೆತರೆ ಎಲ್ಲಾ ಪಾಶಗಳೂ ನಾಶವಾಗಿ ಹೋಗುತ್ತವೆ. (ಮಹೇಂದ್ರಮುಖ್ಯೋಪಾಧ್ಯಾಯ ನಿಗೆ ಮತ್ತು ಉಳಿದವರಿಗೆ) ಭಗವಂತನ ಕಡೆ ಆಕರ್ಷಣೆ ಎಲ್ಲರಿಗೂ ಉಂಟಾ ಗದು—ವಿಶೇಷ ವ್ಯಕ್ತಿಗಳಿಗೆ ಮಾತ್ರ. ಸಂಸ್ಕಾರವಿದ್ದರೆ ಉಂಟಾಗುತ್ತದೆ. ಹಾಗಿಲ್ಲದಿದ್ದ ಪಕ್ಷದಲ್ಲಿ ಬಾಗ್‌ಬಾಜಾರಿನ ಅಷ್ಟೊಂದು ಜನರಲ್ಲಿ ಕೇವಲ ನೀವು ಮಾತ್ರವೇ ಇಲ್ಲಿಗೆ ಬರಲು ಕಾರಣವೇನು? ತಿಪ್ಪೆಗುಂಡಿಯಲ್ಲಿ ಗುಲಾಬಿ ಗಿಡ ಬೆಳೆಯದು. ಮಲಯ ಪರ್ವತದಿಂದ ಬರೋ ಮಾರುತ ತಾಕಿದರೆ ಹತ್ತಿಯ ಗಿಡ, ಆಲದ ಮರ, ಅಶ್ವತ್ಥ ವೃಕ್ಷ ಇನ್ನೂ ಕೆಲವು ಹೊರತು ಉಳಿದವೆಲ್ಲವೂ ಚಂದನದ ಮರ ಆಗಿಬಿಡುತ್ತವೆ.

(ಮುಖ್ಯೋಪಾಧ್ಯಾಯ ಸೋದರರಿಗೆ) "ನಿಮಗೆ ಯಾವುದರ ಅಭಾವವೂ ಇಲ್ಲ, ಅನುಕೂಲಸ್ಥರಾಗಿದೀರಿ. ಸಾಧಕ ಯೋಗಭ್ರಷ್ಟ ನಾದರೆ ಆತನಿಗೆ ಭಾಗ್ಯವಂತರ ಮನೆಯಲ್ಲಿ ಜನ್ಮ ಉಂಟಾಗುತ್ತದೆ. ಮತ್ತೆ ಆತ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆ ಮುಂದುವರಿಸುತ್ತಾನೆ."

ಮಹೇಂದ್ರಮುಖ್ಯೋಪಾಧ್ಯಾಯ: "ಸಾಧಕ ಯೋಗಭ್ರಷ್ಟನಾಗಿ ಏಕೆ ಆಗುತ್ತಾನೆ?"

ಶ್ರೀರಾಮಕೃಷ್ಣರು: "ಭಗವಂತನ ಧ್ಯಾನ ಮಾಡುತ್ತ ಮಾಡುತ್ತ ಸಾಧಕನಿಗೆ ಇದ್ದಕ್ಕಿದ್ದಹಾಗೆ ಭೋಗಲಾಲಸೆ ಉಂಟಾಗಿಬಿಡಬಹುದು. ಹೀಗಾದುದೇ ಆದರೆ ಆತ ಯೋಗಭ್ರಷ್ಟನಾಗಿಬಿಡುತ್ತಾನೆ. ಮುಂದಿನ ಜನ್ಮದಲ್ಲಿ ಸುಸಂಸ್ಕಾರಗಳಿಂದ ಕೂಡಿದ ಜನ್ಮ ದೊರೆಯುತ್ತದೆ."

ಮಹೇಂದ್ರ: "ಹಾಗಾದರೆ ಮಾರ್ಗವೇನು?"

ಶ್ರೀರಾಮಕೃಷ್ಣರು: "ಕಾಮನೆ ಇರುವವರೆಗೆ, ಭೋಗಲಾಲಸೆ ಇರುವವರೆಗೆ ಮುಕ್ತಿ ದೊರಕದು. ಆದ್ದರಿಂದ ತಿನ್ನುವುದು, ಉಡುವುದು,

ರಮಿಸುವುದು-ಗಿಮಿಸುವುದು ಇವುಗಳನ್ನೆಲ್ಲ ಬೇಗ ಮುಗಿಸಿಕೊಂಡುಬಿಡು. (ನಗುತ್ತ) ಕೊನೆಯದರ ವಿಷಯವಾಗಿ ಏನು ಹೇಳುತ್ತೀಯೆ? ಸ್ವಂತ ಪತ್ನಿಯೊಡನೊ ಅಥವಾ ಪರರ ಪತ್ನಿಯೊಡನೊ? (ಮಾಸ್ಟರ್ ಮತ್ತು ಮಹೇಂದ್ರ ನಗುತ್ತಿದಾರೆ.)

"ಭೋಗಲಾಲಸೆ ಇಟ್ಟುಕೊಂಡಿರುವುದು ಒಳ್ಳೆಯದಲ್ಲ. ಅದಕ್ಕಾಗೆ ನಾನು ಮನಸ್ಸಿನಲ್ಲಿ ಎದ್ದ ಆಸೆಗಳನ್ನು ಒಡನೆ ಪೂರ್ಣಮಾಡಿಕೊಂಡುಬಿಡುತ್ತಿದ್ದೆ. ಬಡೊಬಾಜಾರಿನ ಬಣ್ಣ ಕಟ್ಟಿದ ಸಂದೇಶಗಳನ್ನು ತಿನ್ನಬೇಕು ಅಂತ ಇಚ್ಛೆಯಾಯಿತು. ಇವರು ಕೊಂಡುಕೊಂಡು ಬಂದು ನನಗೆ ಕೊಟ್ಟರು. ಬಹಳವಾಗಿ ತಿಂದೆ—ಬಳಿಕ ಕಾಯಿಲೆ.

"ನನ್ನ ಬಾಲ್ಯ ಕಾಲದಲ್ಲಿ ಒಂದು ದಿನ ಗಂಗೆಯಲ್ಲಿ ಸ್ನಾನಮಾಡುತ್ತಿದ್ದಾಗ ಒಬ್ಬ ಹುಡುಗ ನಡುವಿಗೆ ಚಿನ್ನದ ಉಡಿದಾರ ಕಟ್ಟಿಕೊಂಡಿದ್ದುದನ್ನು ನೋಡಿದ್ದೆ. ನನಗೀ ಭಗವದುನ್ಮಾದ ಬಂದನಂತರ ಅದೇ ತರದ ಉಡಿದಾರ ಕಟ್ಟಿಕೊಳ್ಳಬೇಕು ಅಂತ ಇಚ್ಛೆಯಾಯಿತು. ಹೆಚ್ಚು ಹೊತ್ತು ಕಟ್ಟಿಕೊಂಡಿರಲಾಗಲಿಲ್ಲ. ಕಟ್ಟಿಕೊಂಡ ಒಡನೇ ನನ್ನ ಶರೀರದೊಳಗೆ ಒಂದು ವಿಧವಾದ ವಾಯು ತಾಳಲಾರದ ನೋವನ್ನು ಉಂಟುಮಾಡುತ್ತ ಊರ್ಧ್ವಾಭಿಮುಖವಾಗಿ ಏಳಲಾರಂಭಿಸಿತು—ಚಿನ್ನ ಶರೀರಕ್ಕೆ ತಾಕಿತಲ್ಲ ಅದಕ್ಕಾಗಿ. ಕಟ್ಟಿಕೊಂಡ ಸ್ವಲ್ಪ ಹೊತ್ತಿನೊಳಗೇ ಅದನ್ನು ಬಿಚ್ಚಬೇಕಾಯಿತು. ಇಲ್ಲದಿದ್ದರೆ ಅದನ್ನು ಕಿತ್ತುಬಿಸಾಡಬೇಕಾಗಿ ಬರುತ್ತಿತ್ತು.

"ಒಮ್ಮೆ ನನಗೆ ಇಚ್ಛೆಯಾಯಿತು ವಿವಿಧ ಪಟ್ಟಣಗಳ ಪ್ರಸಿದ್ಧಿಯಾದ ಸಿಹಿ ತಿಂಡಿಗಳನ್ನು ತಿನ್ನಬೇಕು ಅಂತ. (ಎಲ್ಲರೂ ನಗುತ್ತಿದಾರೆ.) ಚಂಡಿಯನ್ನು ಶಂಭು ಹಾಡುವುದನ್ನ ಕೇಳಬೇಕು ಅಂತ ಇಚ್ಛೆಯಾಯಿತು. ಅದನ್ನು ಕೇಳಿದನಂತರ ಮತ್ತೆ ಅದನ್ನೇ ರಾಜನಾರಾಯಣನ ಕೈಯಲ್ಲಿ ಹಾಡಿಸಿ ಕೇಳಬೇಕು ಅಂತ ಇಚ್ಛೆಯಾಯಿತು. ಅದೂ ಪೂರ್ಣವಾಯಿತು.

"ಅನೇಕ ಮಂದಿ ಸಾಧುಗಳು ಆ ಸಮಯದಲ್ಲಿ ಬರುತ್ತಿದ್ದರು. ಇಚ್ಛೆಯಾಯಿತು, ಅವರ ಸೇವೆಗಾಗಿ ಪ್ರತ್ಯೇಕವಾದ ಒಂದು ಉಗ್ರಾಣ ಆಗಬೇಕೆಂದು. ಮಥುರಬಾಬು ಹಾಗೇ ವ್ಯವಸ್ಥೆ ಮಾಡಿದ. ಆ ಉಗ್ರಾಣದಿಂದ ಸಾಧುಗಳಿಗೆ ಸದಾವರ್ತ, ಸೌದೆ ಇವೇ ಮೊದಲಾದುವು ದೊರೆಯುತ್ತಿದ್ದುವು.

"ಒಮ್ಮೆ ಮನಸ್ಸಿನಲ್ಲಿ ಇಚ್ಛೆ ಎದ್ದಿತು, ಒಳ್ಳೆ ಜರಿ ಶಾಲು ಹೊದ್ದು

ಕೊಳ್ಳಬೇಕೆಂದು ಮತ್ತು ಬೆಳ್ಳಿಯ ಗುಡುಗುಡಿಯಿಂದ ತಂಬಾಕು ಸೇದಬೇಕೆಂದು. ಮಥುರಬಾಬು ಒಂದು ಹೊಸ ಶಾಲು ಮತ್ತು ಗುಡುಗುಡಿಯನ್ನ ಕಳುಹಿಸಿಕೊಟ್ಟ. ಶಾಲು ಹೊದ್ದುಕೊಂಡೆ. ಆ ಗುಡುಗುಡಿಯಿಂದ ತಂಬಾಕನ್ನು ವಿವಿಧ ರೀತಿಯಾಗಿ ಸೇದಿದೆ—ಕೆಲವು ವೇಳೆ ದಿಂಬನ್ನು ಈ ರೀತಿಯಾಗಿ ಒರಗಿಕೊಂಡು, ಇನ್ನು ಕೆಲವು ವೇಳೆ ಆ ರೀತಿಯಾಗಿ ಒರಗಿಕೊಂಡು, ಮತ್ತೆ ಕೆಲವು ವೇಳೆ ಮೇಲಕ್ಕೆ ತಲೆ ಎತ್ತಿ, ಮತ್ತೂ ಕೆಲವು ವೇಳೆ ತಲೆಯನ್ನು ತಗ್ಗಿಸಿ. ಬಳಿಕ ನನಗೆ ನಾನೇ ಹೇಳಿಕೊಂಡೆ: 'ಹೇ ಮನಸ್ಸೆ, ಇದಕ್ಕೇ ಬೆಳ್ಳಿಯ ಗುಡುಗುಡಿಯಿಂದ ತಂಬಾಕು ಸೇದುವಿಕೆ ಅಂತ ಹೆಸರು.' ಹೀಗೆಂದು ಹೇಳಿ ಗುಡುಗುಡಿಯನ್ನು ತ್ಯಜಿಸಿಬಿಟ್ಟೆ. ಶಾಲನ್ನು ಕೆಲವು ನಿಮಿಷಗಳ ವರೆಗೆ ಹೊದ್ದುಕೊಂಡಿದ್ದು, ಅನಂತರ ಅದನ್ನು ತೆಗೆದು ನೆಲದ ಮೇಲೆ ಬಿಸಾಡಿ, ಕಾಲಿನಿಂದ ಚೆನ್ನಾಗಿ ತುಳಿದು, ಅದರ ಮೇಲೆ 'ಥೂ, ಥೂ' ಅಂತ ಉಗುಳಿ, ಹೇಳಲಾರಂಭಿಸಿದೆ: 'ಇದಕ್ಕೇ ಜರಿ ಶಾಲು ಅಂತ ಹೆಸರು! ಈ ಶಾಲನ್ನು ಉಪಯೋಗಿಸುವುದರಿಂದ ರಜೋಗುಣ ವೃದ್ಧಿಯಾಗುತ್ತದೆ.' "

ಬಲರಾಮನೊಡನೆ ರಾಖಾಲ ಬೃಂದಾವನದಲ್ಲಿದಾನೆ. ಮೊದಮೊದಲು ಆತ ಬೃಂದಾವನವನ್ನು ಬಹಳವಾಗಿ ಹೊಗಳಿ ಮತ್ತು ವರ್ಣಿಸಿ ಕಾಗದ ಬರೆಯುತ್ತಿದ್ದ. ಮಾಸ್ಟರಿಗೆ ಬರೆದಿದ್ದ: "ಇದು ಅತ್ಯಂತ ಉತ್ತಮ ಸ್ಥಾನ. ಇಲ್ಲಿಗೆ ದಯವಿಟ್ಟು ಬನ್ನಿ. ಗಂಡು ಹೆಣ್ಣು ನವಿಲುಗಳು ನರ್ತಿಸುತ್ತಿರುತ್ತವೆ. ನೃತ್ಯ, ಸಂಗೀತ ಸತತ ನಡೆಯುತ್ತಲೇ ಇರುತ್ತವೆ. ಆನಂದವಾಹಿನಿ ಸುಮ್ಮನೆ ಹರಿಯುತ್ತಲೇ ಇದೆ." ಆದರೆ ಆತನಿಗೆ ಅನಂತರ ಜ್ವರ ಬಂದುಬಿಟ್ಟಿತು. ಪರಮಹಂಸರು ಅದನ್ನು ಕೇಳಿ ಬಹಳ ಚಿಂತಾಕುಲರಾಗಿದಾರೆ. ಆತನಿಗೆ ಗುಣವಾಗಲೆಂದು ಭಗವತಿ ಚಂಡಿಗೆ ಹರಕೆ ಹೊತ್ತಿದಾರೆ. ಈಗ ಆತನ ಸಂಬಂಧವಾಗಿ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ರಾಖಾಲ ಇಲ್ಲಿ ಕುಳಿತು ನನ್ನ ಕಾಲು ಒತ್ತುತ್ತ ಒತ್ತುತ್ತ ಇದ್ದ ಹಾಗೆ ಆತನಿಗೆ ಮೊಟ್ಟಮೊದಲನೆ ಭಾವ ಉಂಟಾಯಿತು. ಒಬ್ಬ ಭಾಗವತ ಪಂಡಿತ ಈ ಕೊಠಡಿಯಲ್ಲಿ ಕುಳಿತು ಭಾಗವತ ಪ್ರವಚನ ಮಾಡುತ್ತಿದ್ದ. ಅದನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ ಆತನ ಶರೀರ ಆಗಾಗ ಕಂಪಿಸಲಾರಂಭಿಸಿತು. ಕೊನೆಗೆ ಒಮ್ಮೆಗೇ ಸ್ಥಿರವಾಗಿಬಿಟ್ಟಿತು.

"ಎರಡನೆಯ ಸಲ ಭಾವ ಬಲರಾಮನ ಮನೆಯಲ್ಲಿ—ಭಾವ ಬಂದು ನೆಲದ ಮೇಲೆ ಬಿದ್ದಿದ್ದ. ಆತನ ನೆಲೆ ಸಾಕಾರದ್ದು. ನಿರಾಕಾರದ ಮಾತು ಕಿವಿಗೆ ಬಿದ್ದೊಡನೇ ಎದ್ದುಹೋಗಿಬಿಡುತ್ತಾನೆ.

"ಆತನಿಗೆ ಗುಣವಾಗಲೆಂದು ಚಂಡಿಗೆ ಹರಕೆ ಹೊತ್ತಿದೇನೆ. ಆತ ನನ್ನ ಮೇಲೆ ತನ್ನ ಭಾರವನ್ನೆಲ್ಲಾ ಹಾಕಿಬಿಟ್ಟಿದಾನೆ—ಮನೆ, ಮಠ ಎಲ್ಲ ವನ್ನೂ ತೊರೆದು. ನಾನೇ ಆತನನ್ನು ಆತನ ಹೆಂಡತಿಯ ಹತ್ತಿರಕ್ಕೆ ಕಳುಹಿ ಸುತ್ತಿದ್ದೆ—ಭೋಗಪಡಬೇಕಾದ್ದು ಸ್ವಲ್ಪ ಬಾಕಿ ಉಳಿದುಕೊಂಡಿತ್ತು.

( ಮಾಸ್ಟರನ್ನು ತೋರಿಸಿ ) "ರಾಖಾಲ ಈತನಿಗೆ ಬೃಂದಾವನದಿಂದ ಬರೆದಿದಾನೆ, ಇದು ಬಹಳ ಒಳ್ಳೆ ಜಾಗ—ಸುತ್ತಲೂ ಗಂಡು ಹೆಣ್ಣು ನವಿಲು ನರ್ತಿಸುತ್ತಿರುತ್ತವೆ ಅಂತ. ಈಗ ನೋಡೋಣ ಗಂಡು ಹೆಣ್ಣು ನವಿಲು ಆತನಿಗೆ ಮಾಡೋದನ್ನ! ಬಹಳವಾಗಿ ಜ್ವರದಿಂದ ನರಳುತ್ತಿದಾನೆ. ಅದು ನನಗೆ ಸಂಕಟ ತಂದುಬಿಟ್ಟಿದೆ.

"ಅಲ್ಲಿ ಬಲರಾಮನೊಡನೆ ಇದ್ದುಕೊಂಡಿದಾನೆ. ಆಹ, ಬಲರಾಮ ನದು ಎಂಥ ಒಳ್ಳೆ ಸ್ವಭಾವ! ನನಗಾಗಿ ಬಲರಾಮ ಒರಿಸ್ಸಾಕ್ಕೆ ಹೋಗು ತ್ತಿಲ್ಲ. ಅಲ್ಲಿ ಆತನಿಗೆ ಒಂದು ದೊಡ್ಡ ಜಮೀನುದಾರಿ ಇದೆ. ಆತನ ಸೋದರ ಅಲ್ಲಿಂದ ಮಾಸಾಶನ ಕಳುಹಿಸದೆ ಬಲರಾಮನಿಗೆ ಬರೆದಿದ್ದ: 'ನೀನು ಇಲ್ಲಿಗೇ ಬಂದುಬಿಡು. ಕಲ್ಕತ್ತದಲ್ಲೇಕೆ ನೀನು ಬರಿದೆ ಹಣ ಖರ್ಚುಮಾಡಬೇಕು?' ಆದರೆ ಆತ ಹಾಗೆ ಮಾಡಲಿಲ್ಲ—ನನ್ನ ಸಹವಾಸ ಕ್ಕಾಗಿ. ಆತನಿಗೆ ಭಗವಂತನಲ್ಲಿ ಎಷ್ಟೊಂದು ಪ್ರೀತಿ! ಹಗಲೂ ಇರುಳೂ ಭಗವಂತನ ಸೇವೆಯಲ್ಲೇ ನಿರತನಾಗಿರುತ್ತಾನೆ. ಆತನ ತೋಟಗಾರರು ಯಾವಾಗ ನೋಡಿದರೂ ಆತನ ದೇವರ ಪೂಜೆಗೆ ಹೂವು ಕಟ್ಟುತ್ತಲೇ ಇರು ತ್ತಾರೆ. ತನ್ನ ಖರ್ಚನ್ನು ಸ್ವಲ್ಪ ಕಡಮೆಮಾಡಿಕೊಳ್ಳಲು ಬೃಂದಾವನಕ್ಕೆ ಹೋಗಿ ನಾಲ್ಕು ತಿಂಗಳ ಕಾಲ ಇದ್ದು ಬರುತ್ತಾನೆ. ಆತನಿಗೆ ಇನ್ನೂರು ರೂಪಾಯಿ ಮಾಸಾಶನ ದೊರೆಯುತ್ತಿದೆ.

"ನಾನು ಯುವಕರನ್ನ ಬಹಳವಾಗಿ ಪ್ರೀತಿಸುತ್ತಿದೇನಲ್ಲ, ಏಕೆ? ಅವರನ್ನು ಕಾಮಕಾಂಚನ ಇನ್ನೂ ಸ್ಪರ್ಶಿಸದೆ ಇರುವುದರಿಂದ. ನನಗೆ ತೋರಿಬರುತ್ತಿದೆ, ಅವರು ನಿತ್ಯಸಿದ್ಧರ ಗುಂಪಿಗೆ ಸೇರಿರುವುದು.

"ನರೇಂದ್ರ ಮೊಟ್ಟಮೊದಲು ಇಲ್ಲಿಗೆ ಬಂದಿದ್ದಾಗ ಮಾಸಲು ಬಟ್ಟೆ ಹಾಕಿಕೊಂಡು ಬಂದಿದ್ದ; ಆದರೆ ಆತನ ಕಣ್ಣು ಮುಖ ನೋಡಿ ಅನಿಸಿತು,

ಅಂತರ್ಯದಲ್ಲಿ ಏನೊ ವಿಶೇಷವಾದ್ದು ಇದೆ ಎಂಬುದಾಗಿ. ಆಗ ಆತನಿಗೆ ಹೆಚ್ಚಾಗಿ ಹಾಡು ಗೊತ್ತಿರಲಿಲ್ಲ. ಒಂದೆರಡು ಹಾಡು ಹಾಡಿದ: 'ಓ ನಡೆಯೊ ಹೋಗೋಣ ನಮ್ಮ ನೆಲೆಗೆ!' ಮತ್ತು 'ಇನ್ನೆಷ್ಟು ದಿನ ನಾನು ಬರಿಯ ವಿಫಲತೆಯಲ್ಲಿ ತೊಳಲಬೇಕೋ?'

"ಆತ ಇಲ್ಲಿಗೆ ಬಂದಾಗಲೆಲ್ಲ, ಕೊಠಡಿ ಜನರಿಂದ ತುಂಬಿದ್ದರೂ, ಕೇವಲ ಆತನೊಡನೇ ಮಾತುಕತೆಯಾಡಲು ಆರಂಭಿಸಿಬಿಡುತ್ತಿದ್ದೆ. ಆಗ ಆತ ಹೇಳುತ್ತಿದ್ದ: 'ಅವರೊಡನೆಯೂ ಮಾತನಾಡಿ.' ಅನಂತರ ಬಾಕಿಯುವ ರೊಡನೆ ಮಾತುಕತೆಯಾಡಲು ಪ್ರಾರಂಭಿಸುತ್ತಿದ್ದೆ.

"ಆತನನ್ನು ನೋಡಬೇಕೆಂಬ ಹುಚ್ಚು ಹಿಡಿದು ಆತನಿಗಾಗಿ ಯದು ಮಲ್ಲಿಕನ ತೋಟದಲ್ಲಿ ಅಳುತ್ತಿದ್ದೆ. ಇಲ್ಲಿ ಭೋಲಾನಾಥನ ಕೈ ಹಿಡಿದು ಕೊಂಡು ಆತನಿಗಾಗಿ ಅತ್ತೆ. ಭೋಲಾನಾಥ ಹೇಳಿದ: 'ಮಹಾಶಯರೆ, ಒಬ್ಬ ಕಾಯಸ್ಥ ಯುವಕನಿಗಾಗಿ ನೀವು ಈ ರೀತಿಯಾಗಿ ವರ್ತಿಸುವುದು ಸರಿಯಲ್ಲ.' ಆ ದೊಡ್ಡ ಹೊಟ್ಟೆಯ ಬ್ರಾಹ್ಮಣ ಪ್ರಾಣಕೃಷ್ಣ ಕೈ ಮುಗಿದು ಹೇಳಿದ: 'ಮಹಾಶಯರೆ, ಆತ ಕೇವಲ ಸಾಮಾನ್ಯ ವಿದ್ಯಾವಂತ; ಆತನಿ ಗೇಕೆ ನೀವು ಇಷ್ಟೊಂದು ವ್ಯಸ್ತರಾಗುತ್ತಿದೀರಿ?'

"ಭವನಾಥ ನರೇಂದ್ರ ಇಬ್ಬರೂ ಒಂದು ಜೊತೆ—ಗಂಡ ಹೆಂಡತಿ ಯರೊ ಏನೊ ಎಂಬಂತೆ. ಅದಕ್ಕಾಗಿ ನಾನು ಭವನಾಥನಿಗೆ ಹೇಳಿದೆ, ನರೇಂದ್ರನ ಮನೆಯ ಹತ್ತಿರ ಒಂದು ಕೊಠಡಿಯನ್ನ ಬಾಡಿಗೆಗೆ ತೆಗೆದು ಕೊಳ್ಳುವಂತೆ. ಅವರಿಬ್ಬರೂ ನಿರಾಕಾರದ ನೆಲೆಗೆ ಸೇರಿದಾರೆ.

"ನಾನು ಯುವಕರಿಗೆ ಎಚ್ಚರಿಕೆ ಕೊಟ್ಟುಬಿಡುತ್ತಿದೇನೆ, ಹೆಂಗಸ ರೊಡನೆ ಹೆಚ್ಚು ಕಾಲ ಕಳೆಯದಿರುವಂತೆ ಮತ್ತು ಅವರನ್ನು ಆಗಾಗ ಹೋಗಿ ಸಂಧಿಸದಿರುವಂತೆ. ಹರಿಪದ ಘೋಷಪಾರದ ಒಬ್ಬ ಹೆಂಗಸಿನ ಬಲೆಗೆ ಬಿದ್ದಿದಾನೆ. ಆಕೆ ವಾತ್ಸಲ್ಯಭಾವ ತೋರಿಸುತ್ತಿದಾಳೆ. ಹರಿಪದ ಇನ್ನೂ ಚಿಕ್ಕ ಹುಡುಗ. ಆತನಿಗೆ ಏನೂ ಗೊತ್ತಾಗದು. ಆ ಸಂಪ್ರ ದಾಯದ ಹೆಂಗಸರು ಯುವಕರನ್ನು ಕಂಡರೆ ಹಾಗೆ ವರ್ತಿಸುತ್ತಾರೆ. ಕೇಳಿದೆ, ಹರಿಪದ ಆಕೆಯ ತೊಡೆಯ ಮೇಲೆ ಮಲಗಿಕೊಳ್ಳುತ್ತಾನೆ, ಆಕೆ ತನ್ನ ಕೈಯಿಂದ ಆತನಿಗೆ ಆಹಾರ ತಿನ್ನಿಸುತ್ತಾಳೆ ಎಂದು. ನಾನು ಆತನಿಗೆ ಹೇಳಬೇಕೆಂದಿದೇನೆ: 'ಹಾಗೆ ಮಾಡುವುದು ಒಳ್ಳೆಯದಲ್ಲ.' ಕೊನೆಗೆ ಆಕೆ ತೋರಿಸುತ್ತಿರುವ ಆ ವಾತ್ಸಲ್ಯಭಾವ ಗೀತ್ಸಲ್ಯಭಾವ ಆಗಿಬಿಡುತ್ತದೆ.

ಆ ಸಂಪ್ರದಾಯದ ಹೆಂಗಸರು ಗಂಡಸರೊಡನೆ ಸಾಧನೆಮಾಡುತ್ತಾರೆ. ಅವರು ಗಂಡಸನ್ನು ಕೃಷ್ಣ ಎಂದು ಕಂಡು ಆತನನ್ನು 'ರಾಗಕೃಷ್ಣ' ಅಂತ ಕರೆಯುತ್ತಾರೆ. ಆ ಸಂಪ್ರದಾಯದ ಗುರು ಹೆಂಗಸನ್ನು ಕೇಳುತ್ತಾನೆ: 'ನಿನಗೆ ರಾಗಕೃಷ್ಣ ದೊರೆತಿದ್ದಾನೆಯೆ?' ಆಕೆ ಉತ್ತರವೀಯುತ್ತಾಳೆ: 'ಹೌದು, ದೊರೆತಿದ್ದಾನೆ.'

"ಅಂದು ಆ ಹೆಂಗಸು ಇಲ್ಲಿಗೆ ಬಂದಿದ್ದಳು. ಆಕೆ ಸುತ್ತಮುತ್ತಲು ಕಣ್ಣುಹಾಕುತ್ತಿದ್ದ ರೀತಿ ನನಗೆ ಸರಿ ಎಂದು ತೋರಲಿಲ್ಲ. ನಾನು ಆಕೆಗೆ ಹೇಳಿದೆ: 'ನೀನು ಹರಿಪದನೊಡನೆ ಈಗ ವರ್ತಿಸುತ್ತಿರುವಂತೆ ಬೇಕಾದರೆ ವರ್ತಿಸು, ಆದರೆ ಆತನ ಸಂಬಂಧವಾಗಿ ಕೆಟ್ಟಭಾವನೆಯನ್ನು ಮಾತ್ರ ಎಂದಿಗೂ ಮಾಡಬೇಡ.'

"ಯುವಕರು ಈಗ ಸಾಧನಾವಸ್ಥೆಯಲ್ಲಿದ್ದಾರೆ. ಅವರಿಗೆ ಈಗ ಬೇಕಾಗಿರುವುದು ಕೇವಲ ತ್ಯಾಗ. ಸನ್ಯಾಸಿ, ಹೆಂಗಸರ ಚಿತ್ರಪಟ ಕೂಡ ನೋಡಕೂಡದು. ನಾನು ಅವರಿಗೆ ಹೇಳುತ್ತಿದ್ದೇನೆ: 'ಹೆಂಗಸು ಭಕ್ತೆಯಾದರೂ ಆಕೆಯ ಹತ್ತಿರ ಕುಳಿತು ಆಕೆಯೊಡನೆ ಮಾತುಕತೆ ಆಡಬೇಡಿ. ನಿಂತುಕೊಂಡು ಬೇಕಾದರೆ ಒಂದೆರಡು ಮಾತು ಆಡಿ ಕಳುಹಿಸಿಬಿಡಿ.' ಸಿದ್ಧ-ಪುರುಷನೂ ಹೀಗೆ ವರ್ತಿಸಬೇಕಾಗುತ್ತದೆ—ತನ್ನ ಸ್ವಂತ ರಕ್ಷಣೆಗಾಗಿ ಮತ್ತು ಲೋಕಶಿಕ್ಷಣಕ್ಕಾಗಿ. ಹೆಂಗಸರು ನನ್ನನ್ನು ನೋಡಲು ಬಂದಾಗ ನಾನೂ ಸ್ವಲ್ಪ ಹೊತ್ತಾದನಂತರ ಅವರಿಗೆ ಹೇಳುತ್ತೇನೆ: 'ಹೋಗಿ ದೇವರ ದರ್ಶನ ಮಾಡಿಕೊಂಡು ಬನ್ನಿ.' ಹಾಗೂ ಅವರು ಎದ್ದುಹೋಗದಿದ್ದರೆ, ನಾನೇ ಎದ್ದು ಕೊಠಡಿಯಿಂದ ಹೊರಕ್ಕೆ ಬಂದುಬಿಡುತ್ತೇನೆ. ನನ್ನನ್ನು ನೋಡಿ ಉಳಿದವರೂ ಪಾಠ ಕಲಿತುಕೊಳ್ಳುತ್ತಾರೆ.

"ಒಳ್ಳೇದು, ಈ ಯುವಕರೆಲ್ಲ ಇಲ್ಲಿಗೆ ಬರುತ್ತಿದ್ದಾರೆ, ನೀವೆಲ್ಲರೂ ಇಲ್ಲಿಗೆ ಬರುತ್ತಿದ್ದೀರಿ; ಏನು ಕಾರಣದಿಂದ ಹೇಳಬಲ್ಲೆಯಾ? ಇದರ (ಪರಮಹಂಸರ) ಒಳಗೆ ಏನೊ ಒಂದು ಇರಬೇಕು; ಇಲ್ಲದಿದ್ದರೆ ನಿಮ್ಮೆಲ್ಲರಿಗು ಇಂಥ ಮನಸ್ಸೆಳೆತ, ಆಕರ್ಷಣೆ ಉಂಟಾಗೋ ಬಗೆ ಹೇಗೆ?

"ಒಮ್ಮೆ ನಾನು ಹೃದೂನ ಊರು ಸಿಹೋರಿಗೆ ಹೋಗಿದ್ದೆ. ಅಲ್ಲಿಂದ ನನ್ನನ್ನು ಶ್ಯಾಮಬಾಜಾರಿಗೆ ಕರೆದುಕೊಂಡು ಹೋಗಿದ್ದರು. ಆ ಹಳ್ಳಿಯ ಒಳಕ್ಕೆ ಕಾಲಿಡಲು ಮುನ್ನವೇ ನನಗೆ ಗೌರಾಂಗನ ದರ್ಶನವಾಯಿತು. ಅಲ್ಲಿ ಗೌರಾಂಗನ ಭಕ್ತರಿದ್ದಾರೆ ಎಂಬುದನ್ನು ಅದು ಸೂಚಿಸಿತು. ಅಂಥ

ಆಕರ್ಷಣೆ ಅಲ್ಲಿ—ಏಳು ಹಗಲು, ಏಳು ರಾತ್ರಿ ಜನ ನನ್ನನ್ನು ಸುಮ್ಮನೆ ಸುತ್ತಿಕೊಂಡುಬಿಟ್ಟರು! ಯಾವಾಗ ನೋಡಿದರೂ ಕೇವಲ ಕೀರ್ತನೆ, ನೃತ್ಯ. ಕಾಂಪೌಂಡ್ ಮೇಲೆಲ್ಲಾ ಜನ! ಮರಗಳ ಮೇಲೆಲ್ಲಾ ಜನ!

"ನಾನು ನಟವರಗೋಸ್ವಾಮಿಯ ಮನೆಯಲ್ಲಿ ಇಳಿದುಕೊಂಡಿದ್ದೆ. ಅಲ್ಲೂ, ಹಗಲೂ ಇರುಳೂ ಜನ ತುಂಬಿಕೊಂಡೇ ಇರುತ್ತಿದ್ದರು. ಜನರ ಗುಂಪಿನಿಂದ ತಪ್ಪಿಸಿಕೊಳ್ಳಲು ಬೆಳಗಾಗೆದ್ದು ಒಬ್ಬ ಬಡಗಿಯ ಮನೆಗೆ ಹೋಗಿ ಇದ್ದುಬಿಡುತ್ತಿದ್ದೆ. ಆದರೇನು, ಅಲ್ಲಿಗೂ ಸ್ವಲ್ಪ ಹೊತ್ತಿನಲ್ಲೆ ಜನರ ಗುಂಪು ಬಂದುಬಿಡುತ್ತಿತ್ತು. ಮದ್ದಲೆ, ತಾಳ ಎಲ್ಲವನ್ನೂ ಜೊತೆಯಲ್ಲೇ ತಂದುಬಿಡುತ್ತಿದ್ದರು. ಮತ್ತೆ ಅಲ್ಲಿ ಮದ್ದಲೆಯ 'ತಾಕುಟ! ತಾಕುಟ!' ಶಬ್ದ. ಊಟ-ಗೀಟ ಅಪರಾಹ್ನ ಮೂರು ಘಂಟೆಗೇನೇ.

"ಸುದ್ದಿ ಹಬ್ಬಿಬಿಟ್ಟಿತು—ಏಳು ಸಲ ಸತ್ತು, ಏಳು ಸಲವೂ ಬದುಕಿ-ಬಂದ ಒಬ್ಬ ಮನುಷ್ಯ ಬಂದಿದಾನೆ ಅಂತ. ನನಗೆ ನೆಗಡಿ, ತಲೆನೋವು ಬಂದುಬಿಡಬಹುದೆಂದು ಹೆದರಿ ಹೃದೆ ಆ ಗುಂಪಿನಿಂದ ನನ್ನನ್ನು ಬಿಡಿಸಿ ಗದ್ದೆ ಬಯಲಕಡೆ ಎಳೆದುಕೊಂಡುಹೋಗುತ್ತಿದ್ದ. ಅಲ್ಲಿಗೂ ಜನ ಇರುವೆ ಸಾಲಿನೋಪಾದಿಯಲ್ಲಿ ಬರಲಾರಂಭಿಸಿಬಿಡುತ್ತಿದ್ದರು. ಮತ್ತೆ ತಾಳಗಳ ಮತ್ತು ಮದ್ದಲೆಯ 'ತಾಕುಟ! ತಾಕುಟ!' ಶಬ್ದ. ಹೃದೆ ಬಯ್ದು ಹೇಳುತ್ತಿದ್ದ: 'ಏಕೆ ಹೀಗೆ ನೀವು ನಮ್ಮನ್ನು ಕಾಡಿಸುತ್ತಾ ಇದೀರಿ? ನಾವು ಎಂದೂ ಕೀರ್ತನೆಯನ್ನ ಕೇಳೇ ಇಲ್ಲವೆ?'

"ಅಲ್ಲಿನ ಗೋಸಾಯಿಗಳು (ವೈಷ್ಣವ ಅರ್ಚಕರು) ನಮ್ಮೊಡನೆ ಒಂದು ದಿನ ಜಗಳಕಾಯಲು ಬಂದಿದ್ದರು. ಅವರು ಭಾವಿಸಿಕೊಂಡಿದ್ದರು, ನಾವು ಅವರಿಗೆ ಸಲ್ಲುವ ಕಾಣಿಕೆಗಳನ್ನೆಲ್ಲ ಭಕ್ತರಿಂದ ವಸೂಲುಮಾಡಿಕೊಂಡು ಹೋಗಿಬಿಡಬಹುದೆಂದು. ಅವರೇ ನೋಡಿದರು, ನಾನು ಒಂದು ತುಂಡು ಬಟ್ಟೆಯನ್ನೇ ಆಗಲಿ ಅಥವಾ ಒಂದು ಎಳೆ ನೂಲನ್ನೇ ಆಗಲಿ ಮುಟ್ಟದೇ ಇರುವುದನ್ನ. ಯಾರೊ ವೈಷ್ಣವ ಪಂಡಿತರಿಗೆಲ್ಲ ತಿಳಿಸಿದ್ದರು ನಾನು ಒಬ್ಬ ಬ್ರಹ್ಮಜ್ಞಾನಿ ಅಂತ. ಅದಕ್ಕಾಗಿ ಅವರು ನನ್ನನ್ನು ಪರೀಕ್ಷಿಸಲು ಬಂದಿದ್ದರು. ಅವರಲ್ಲಿ ಒಬ್ಬ ಪ್ರಶ್ನೆ ಹಾಕಿದ: 'ಇವರಿಗೆ ಮಾಲೆ, ತಿಲಕ ಇಲ್ಲವಲ್ಲ ಏಕೆ?' ಅವರಲ್ಲೇ ಒಬ್ಬ ಉತ್ತರವಿತ್ತ: 'ತೆಂಗಿನ ಮಟ್ಟೆಯ ಹಾಗೆ ಅವು ತಾವು ತಾವಾಗೇ ಬಿದ್ದುಹೋಗಿವೆ.' ತೆಂಗಿನ

ಮಟ್ಟಿಯ ದೃಷ್ಟಾಂತವನ್ನ ನಾನು ಅಲ್ಲಿ ಕಲಿತುಕೊಂಡೆ. ಬ್ರಹ್ಮಜ್ಞಾನ ದೊರೆತರೆ ಉಪಾಧಿ ತಾವು ತಾವಾಗೇ ಕಳಚಿ ಬಿದ್ದುಹೋಗುತ್ತವೆ.

"ದೂರ ದೂರದ ಗ್ರಾಮಗಳಿಂದಲೂ ಜನ ಬಂದು ಅಲ್ಲಿ ಸೇರಿಬಿಡುತ್ತಿದ್ದರು. ರಾತ್ರಿಯನ್ನೂ ಅಲ್ಲೇ ಕಳೆದುಬಿಡುತ್ತಿದ್ದರು. ಆಕರ್ಷಣೆ ಅಂದರೆ ಏನು ಎಂಬುದು ನನಗೆ ಅಲ್ಲಿ (ಶ್ಯಾಮಬಾಜಾರಿನಲ್ಲಿ) ಅರ್ಥವಾಯಿತು. ಭಗವಂತ ಅವತರಿಸಿದಾಗ ಆತ ತನ್ನ ಯೋಗಮಾಯೆಯ ಸಹಾಯದಿಂದ ಜನರನ್ನು ಆಕರ್ಷಿಸುತ್ತಾನೆ. ಜನ ಸರ್ಪಮುಗ್ಧರಾಗಿಬಿಡುತ್ತಾರೆ."

ಪರಮಹಂಸರು ಮುಖ್ಯೋಪಾಧ್ಯಾಯ ಸೋದರರೊಡನೆ ಮತ್ತು ಉಳಿದ ಭಕ್ತರೊಡನೆ ಮಾತುಕತೆ ಆಡುತ್ತ ಆಡುತ್ತ ಘಂಟೆ ಅಪರಾಹ್ನ ಮೂರು ಆಯಿತು. ರಾಧಿಕಾಗೋಸ್ವಾಮಿ ಕೊಠಡಿಯನ್ನು ಪ್ರವೇಶಿಸಿ ಪರಮಹಂಸರಿಗೆ ಪ್ರಣಾಮಮಾಡುತ್ತಿದಾನೆ. ಆತ ಪರಮಹಂಸರನ್ನು ದರ್ಶನಮಾಡಿದ್ದು ಇದೇ ಮೊದಲನೆ ಸಲ. ಈಗ ಆತ ಒಂದು ಕಡೆ ಕುಳಿತುಕೊಳ್ಳುತ್ತಿದಾನೆ.

ಶ್ರೀರಾಮಕೃಷ್ಣರು: "ಏನು, ನೀನು ಅದ್ವೈತಗೋಸ್ವಾಮಿಯ ವಂಶಕ್ಕೆ ಸೇರಿದವನೇ?"

ಗೋಸ್ವಾಮಿ: "ಹೌದು."

ಈ ಮಾತನ್ನು ಕೇಳಿ ಪರಮಹಂಸರು ಆತನಿಗೆ ಕೈ ಮುಗಿಯುತ್ತಿದಾರೆ.

ಶ್ರೀರಾಮಕೃಷ್ಣರು: "ಅದ್ವೈತಗೋಸ್ವಾಮಿಯ ವಂಶ—ನಿನ್ನಲ್ಲಿ ಆತನ ಗುಣಗಳು ಇದ್ದೇ ಇರಬೇಕು. ಸಿಹಿ ಮಾವಿನ ಮರ ಸಿಹಿ ಹಣ್ಣುಗಳನ್ನೇ ವಿನಾ ಎಂದಿಗೂ ಹುಳಿಯಾದ್ದನ್ನು ಬಿಡದು. ಆದರೆ ನೆಲದ ಗುಣಕ್ಕನುಸಾರ ಕೆಲವು ಮರ ದೊಡ್ಡ ದೊಡ್ಡ ಹಣ್ಣುಗಳನ್ನ, ಇನ್ನು ಕೆಲವು ಚಿಕ್ಕ ಚಿಕ್ಕ ಹಣ್ಣುಗಳನ್ನ ಬಿಡುತ್ತವೆ. ಏನು, ನಿಜ ತಾನೆ?"

ಗೋಸ್ವಾಮಿ ವಿನಯದಿಂದ: "ಹೌದು. ಆದರೆ ನನಗೆ ಏನು ತಾನೆ ಗೊತ್ತಿದೆ."

ಶ್ರೀರಾಮಕೃಷ್ಣರು: "ನೀನು ಏನು ಬೇಕಾದರೂ ಹೇಳಿಕೊ, ಜನ ನಿನ್ನನ್ನು ಹಾಗೆ ನುಣುಚಿಕೊಳ್ಳಲು ಬಿಟ್ಟುಕೊಡುವರೆ? ಬ್ರಾಹ್ಮಣರಲ್ಲಿ ಎಷ್ಟೇ ದೋಷವಿದ್ದರೂ ಅವರು ಭಾರದ್ವಾಜ, ಶಾಂಡಿಲ್ಯ ಇವರೇ ಮೊದಲಾದ ಋಷಿಗಳ ಗೋತ್ರಕ್ಕೆ ಸೇರಿದವರಾದ್ದರಿಂದ ಅವರು ಎಲ್ಲರಿಂದಲೂ ಪೂಜನೀಯರೇ. (ಮಾಸ್ಟರಿಗೆ) ಗರುಡನ ಕಥೆ ತಿಳಿಸು."

ಮಾಸ್ಟರ್ ಸುಮ್ಮನೆ ಕುಳಿತಿದಾನೆ.

ಶ್ರೀರಾಮಕೃಷ್ಣರು: "ಯಾರ ವಂಶದಲ್ಲಿಯೇ ಆಗಲಿ ಮಹಾಪುರುಷರು ಜನ್ಮವೆತ್ತಿದ್ದ ಪಕ್ಷದಲ್ಲಿ ಅವರು ಆ ವಂಶದವರನ್ನ ಮೇಲಕ್ಕೆ ಎತ್ತಿಬಿಡುತ್ತಾರೆ—ಎಷ್ಟೇ ದೋಷಗಳಿಂದ ಕೂಡಿದ್ದರೂ. ಗಂಧರ್ವರು ಕೌರವರನ್ನು ಬಂಧಿಸಿದಾಗ ಯುಧಿಷ್ಠಿರ ಹೋಗಿ ಅವರನ್ನು ಬಿಡಿಸಿದ—ದುರ್ಯೋಧನ ಪಾಂಡವರ ಶತ್ರುವಾಗಿದ್ದರೂ, ಆತನ ದೆಸೆಯಿಂದ ಪಾಂಡವರಿಗೆ ವನವಾಸ ಬಂದಿದ್ದರೂ.

"ಇದೂ ಅಲ್ಲದೆ ಧಾರ್ಮಿಕ ವೇಷಭೂಷಣಗಳಿಗೆ ಗೌರವ ತೋರಿಸಬೇಕಾಗುತ್ತದೆ. ಸೋಗು ಕಣ್ಣಿಗೆ ಬಿತ್ತು ಎಂದರೇ ನಿಜವಾದ ವಸ್ತುವಿನ ಉದ್ದೀಪನವಾಗುತ್ತದೆ. ಚೈತನ್ಯದೇವ ಒಮ್ಮೆ ಒಂದು ಕತ್ತೆಗೆ ಧಾರ್ಮಿಕ ವೇಷಭೂಷಣ ತೊಡಿಸಿ ಅದಕ್ಕೆ ಸಾಷ್ಟಾಂಗಪ್ರಣಾಮ ಮಾಡಿದನಂತೆ.

"ಗರುಡನನ್ನು ನೋಡಿದರೆ ಜನ ಕೈ ಮುಗಿಯುತ್ತಾರಲ್ಲ ಏಕೆ? ಕಂಸ ದೇವಕಿಯ ಶಿಶುವನ್ನು ಕೊಲ್ಲಲು ಹೋದಾಗ, ಆ ಶಿಶುವಿನ ರೂಪ ಧರಿಸಿದ್ದ ಭಗವತಿ ಗರುಡನ ರೂಪ ತಾಳಿ ಅಂತರ್ಧಾನವಾಗಿಬಿಡುತ್ತಾಳೆ. ಅದಕ್ಕಾಗೆ ಈಗಲೂ ಜನ ಆ ಹಕ್ಕಿಯನ್ನು ಕಂಡರೆ ಕೈ ಮುಗಿಯುತ್ತಾರೆ.

"ಚಾನಕ್ ಎಂಬ ಹೆಸರಿನ ದಂಡು ಪ್ರದೇಶಕ್ಕೆ ಒಬ್ಬ ಆಂಗ್ಲೇಯ ಪ್ರವೇಶಮಾಡುತ್ತಿರುವುದನ್ನು ನೋಡಿ ಅಲ್ಲಿದ್ದ ಸಿಪಾಯಿಗಳೆಲ್ಲರೂ ಆತನಿಗೆ ಸಲ್ಯೂಟ್ ಮಾಡಿದರು. ಕೊಯರ್‌ಸಿಂಗ್ ಅದಕ್ಕೆ ಕಾರಣ ತಿಳಿಸಿದ: 'ಆಂಗ್ಲೇಯರ ಆಳ್ವಿಕೆಯಲ್ಲಿರುವುದರಿಂದ ನಾವು ಅವರಿಗೆ ಸಲ್ಯೂಟ್ ಮಾಡಬೇಕಾಗಿದೆ.'

"ಶಾಕ್ತರು ತಂತ್ರಶಾಸ್ತ್ರವನ್ನು, ವೈಷ್ಣವರು ಪುರಾಣವನ್ನು ಅನುಸರಿಸುತ್ತಾರೆ. ವೈಷ್ಣವರು ಯಾವ ಸಾಧನೆಯನ್ನು ಮಾಡುತ್ತಾರೊ ಅದನ್ನು ಪ್ರಕಾಶಗೊಳಿಸುವುದರಲ್ಲಿ ದೋಷವೇನಿಲ್ಲ. ಆದರೆ, ಶಾಕ್ತರದೆಲ್ಲ ಗೋಪ್ಯ. ಆದ್ದರಿಂದ ಶಾಕ್ತನನ್ನು ಸಂಪೂರ್ಣವಾಗಿ ಅರಿತುಕೊಳ್ಳುವುದು ಬಹಳ ಕಷ್ಟ.

(ಗೋಸ್ವಾಮಿಗೆ) "ನೀವೆಲ್ಲರೂ ಒಳ್ಳೆಯ ಜನ. ಎಷ್ಟು ಜಪ ಮಾಡುತ್ತೀರಿ! ಹರಿನಾಮವನ್ನು ಎಷ್ಟೊಂದು ಮಾಡುತ್ತೀರಿ!"

ಗೋಸ್ವಾಮಿ ವಿನಯದಿಂದ: "ನಾವೇನು ಮಹಾ ಮಾಡಿಬಿಡುತ್ತಿದೇವೆ! ನಾನು ಅತ್ಯಂತ ಅಧಮ."

ಶ್ರೀರಾಮಕೃಷ್ಣರು ನಗುತ್ತ: "ದೀನತೆ—ಇದು ಇರಬೇಕಾದ್ದೆ. ಇನ್ನೊಂದು ದೃಷ್ಟಿ ಇದೆ: 'ನಾನು ಹರಿನಾಮ ಮಾಡುತ್ತಿದ್ದೇನೆ. ನನ್ನಲ್ಲಿ ಇನ್ನು ಪಾಪ ಅಂದರೆ?' ಎಂಬುದು. ಯಾರು ಹಗಲಿರುಳು ಜಪಿಸುತ್ತಾನೊ: 'ನಾನು ಪಾಪಿ! ನಾನು ಪಾಪಿ! ನಾನು ಅಧಮ! ನಾನು ಅಧಮ!' ಅಂತ, ಆತ ಹಾಗೇ ಆಗಿಹೋಗಿಬಿಡುತ್ತಾನೆ. ಎಂಥಾ ಅಶ್ರದ್ಧೆ! ಭಗವಂತನ ಹೆಸರನ್ನು ಅಷ್ಟೊಂದು ಜಪಿಸುತ್ತಿದ್ದರೂ 'ಪಾಪಿ! ಪಾಪಿ!' ಅಂತ ಹೇಳಿಕೊಳ್ಳುತ್ತಲೇ ಇರೋದು!"

ಗೋಸ್ವಾಮಿ ಪರಮಹಂಸರ ಈ ಮಾತನ್ನ ಬಾಯಿ ಬಿಟ್ಟುಕೊಂಡು ಕೇಳಿದ.

ಶ್ರೀರಾಮಕೃಷ್ಣರು: "ನಾನು ಬೃಂದಾವನದಲ್ಲಿ ವೈಷ್ಣವರಂತೇ ಬಟ್ಟೆ ಬರೆ ಹಾಕಿಕೊಳ್ಳುತ್ತಿದ್ದೆ—ಹದಿನೈದು ದಿನಗಳ ಮಟ್ಟಿಗೆ. (ಭಕ್ತರಿಗೆ) ಎಲ್ಲಾ ಭಾವಗಳಲ್ಲೂ ಕೆಲಕೆಲ ದಿನ ಇರುತ್ತಿದ್ದೆ. ಆಗಮಾತ್ರವೇ ಶಾಂತಿ ದೊರೆಯುತ್ತಿತ್ತು. (ನಗುತ್ತ) ನಾನು ಎಲ್ಲಾ ಸಾಧನೆಗಳನ್ನೂ ಮಾಡಿದೇನೆ; ಎಲ್ಲಾ ಮಾರ್ಗಗಳನ್ನೂ ಒಪ್ಪುತ್ತೇನೆ. ಶಾಕ್ತರನ್ನೂ ಗೌರವಿಸುತ್ತೇನೆ, ವೈಷ್ಣವರನ್ನೂ ಗೌರವಿಸುತ್ತೇನೆ; ಹಾಗೇ ವೇದಾಂತವಾದಿಗಳನ್ನು ಕೂಡ. ಇಲ್ಲಿಗೆ ಅದಕ್ಕಾಗೆ ಎಲ್ಲಾ ಮತದ ಜನರೂ ಬರುತ್ತಿರುವುದು. ಪ್ರತಿಯೊಬ್ಬರೂ ಭಾವಿಸುತ್ತಾರೆ, ನಾನು ಅವರ ಸಂಪ್ರದಾಯಕ್ಕೆ ಸೇರಿದವನು ಎಂದು. ಈಗಿನ ಕಾಲದ ಬ್ರಹ್ಮಜ್ಞಾನಿಗಳನ್ನೂ[1] ನಾನು ಗೌರವಿಸುತ್ತೇನೆ.

"ಒಬ್ಬನ ಹತ್ತಿರ ಒಂದು ಕೊಳದಪ್ಪಲೆ ಬಣ್ಣ ಇದ್ದಿತು. ಆ ಬಣ್ಣದ ವಿಶೇಷ ಗುಣ ಏನೆಂದರೆ, ಯಾರಾರು ಯಾವಾವ ಬಣ್ಣವನ್ನು ತಮ್ಮ ಬಟ್ಟೆಗೆ ಹಾಕಿಕೊಡಬೇಕು ಅಂತ ಕೇಳುತ್ತಿದ್ದರೊ, ಅದೇ ಬಣ್ಣದಿಂದ ಆಯಾಯ ಬಣ್ಣಗಳನ್ನ ಹಾಕಿಕೊಡಬಹುದಾಗಿತ್ತು. ಆದರೆ ಒಬ್ಬ ಜಾಣ ಆ ಬಣ್ಣ ಹಾಕುವವನನ್ನು ಕೇಳಿದ: 'ನೀನು ಯಾವ ಬಣ್ಣದಿಂದ ಎಲ್ಲಾ ಬಣ್ಣಗಳನ್ನೂ ಹಾಕಿಕೊಡುತ್ತಾ ಇದೀಯೊ, ಆ ಮೂಲಬಣ್ಣದ ಬಣ್ಣವನ್ನೇ ನನ್ನದಕ್ಕೆ ಹಾಕಿಕೊಡು.' (ಎಲ್ಲರೂ ನಗುತ್ತಿದಾರೆ.)

"ನಾನೇಕೆ ಒಂದೇ ಸ್ವರ ಊದುವವನಾಗಲಿ? ನಾನು ಹೀಗಿದ್ದರೆ ಈ ಸಂಪ್ರದಾಯದವರು ಬರುವುದಿಲ್ಲವಲ್ಲ ಎಂಬ ಭಯ ನನಗಿಲ್ಲ. ಜನ

1. ಬ್ರಾಹ್ಮಸಮಾಜದ ಅನುಯಾಯಿಗಳು.

ಬರಲಿ ಬಿಡಲಿ ಅದಕ್ಕಾಗಿ ನಾನು ಕಿಂಚಿತ್ತೂ ಚಿಂತಿಸುತ್ತಿಲ್ಲ. ಜನರನ್ನ ಕೈಯಲ್ಲಿ ಇಟ್ಟುಕೊಳ್ಳುವ ಭಾವನೆಯೇ ನನ್ನ ಮನಸ್ಸಿನಲ್ಲಿ ಏಳುತ್ತಿಲ್ಲ. ಅಧರಸೇನ ತನಗೊಂದು ದೊಡ್ಡ ಉದ್ಯೋಗಕ್ಕಾಗಿ ನಾನು ಭಗವತಿಗೆ ಪ್ರಾರ್ಥನೆ ಮಾಡಬೇಕೆಂದು ತಿಳಿಸಿದ, ಆದರೆ ಆತನಿಗೆ ಅದು ದೊರೆಯ ಲಿಲ್ಲ. ಅದಕ್ಕಾಗಿ ಆತ ನನ್ನ ಸಂಬಂಧವಾಗಿ ಬೇರೆ ವಿಧವಾಗಿ ಭಾವಿಸುವು ದಾದರೆ ನನಗೇನು ಅಂಜಿಕೆ?

"ಒಂದು ದಿನ ನಾನು ಕೇಶವಸೇನನ ಮನೆಗೆ ಹೋಗಿದ್ದಾಗ ಅಲ್ಲಿ ನನಗೊಂದು ಹೊಸ ಭಾವ ಬಂದಿರುವುದು ನನ್ನ ಅರಿವಿಗೆ ಬಂತು. ಬ್ರಾಹ್ಮ-ಸಮಾಜದವರು ಯಾವಾಗ ನೋಡಿದರೂ 'ನಿರಾಕಾರ! ನಿರಾಕಾರ!' ಅಂತ ಹೇಳುತ್ತಲೇ ಇರುತ್ತಾರೆ. ಆದ್ದರಿಂದ ಭಾವದಲ್ಲಿ ಭಗವತಿಗೆ ಹೇಳಿದೆ: 'ತಾಯೆ, ನೀನು ಇಲ್ಲಿಗೆ ಬರಬೇಡ. ಇವರು ನಿನ್ನ ರೂಪ-ಗೀಪ ಗಳನ್ನ ಒಪ್ಪುತ್ತಿಲ್ಲ.'"

ಸ್ವಮತಾಭಿಮಾನಕ್ಕೆ ವಿರುದ್ಧವಾಗಿ ಪರಮಹಂಸರು ಆಡಿದ ಮಾತು ಕತೆಗಳನ್ನೆಲ್ಲ ಗೋಸ್ವಾಮಿ ಸದ್ದಿಲ್ಲದೆ ಕೇಳಿದ.

ಶ್ರೀರಾಮಕೃಷ್ಣರು ನಗುತ್ತ: "ವಿಜಯ ಈಗ ಒಳ್ಳೆಯ ಮಾನಸಿಕ ಸ್ಥಿತಿಯಲ್ಲಿದಾನೆ. 'ಹರಿ! ಹರಿ!' ಎಂದು ಹೇಳುತ್ತ ಹೇಳುತ್ತ ಇದ್ದ ಹಾಗೆ ನೆಲದ ಮೇಲೆ ಬಿದ್ದುಬಿಡುತ್ತಾನೆ. ಬೆಳಗಿನ ಜಾವ ನಾಲ್ಕು ಘಂಟೆ ಯವರೆಗೆ ಕೀರ್ತನೆ, ಧ್ಯಾನ ಇವುಗಳಲ್ಲೇ ನಿರತನಾಗಿರುತ್ತಾನೆ. ಈಗ ಕಾಷಾಯ ವಸ್ತ್ರ ಧರಿಸುತ್ತಿದಾನೆ. ಭಗವದ್ವಿಗ್ರಹ ಕಣ್ಣಿಗೆ ಬಿತ್ತು ಎಂದರೇ ಸಾಷ್ಟಾಂಗಪ್ರಣಾಮ. ಒಮ್ಮೆ ಆತ ನನ್ನೊಡನೆ ಗದಾಧರನ[1] ಶಾಲಾಗೃಹಕ್ಕೆ ಬಂದ. ಗದಾಧರ ಧ್ಯಾನಮಾಡುತ್ತಿದ್ದ ಸ್ಥಳವನ್ನು ನಾನು ಆತನಿಗೆ ತೋರಿ ಸಿದೆ. ಒಡನೆಯೇ ಅಲ್ಲಿಗೆ ಒಂದು ಸಾಷ್ಟಾಂಗಪ್ರಣಾಮ ಹಾಕಿದ. ಚೈತನ್ಯದೇವನ ಪಟದ ಮುಂದೆ ಮತ್ತೆ ಸಾಷ್ಟಾಂಗಪ್ರಣಾಮ ಮಾಡಿದ."

ಗೋಸ್ವಾಮಿ: "ರಾಧಾಕೃಷ್ಣ ಮೂರ್ತಿಗಳ ಎದುರಿಗೆ?"

ಶ್ರೀರಾಮಕೃಷ್ಣರು: "ಅಲ್ಲಿಯೂ ಸಾಷ್ಟಾಂಗಪ್ರಣಾಮ ಮಾಡಿದ. ಒಳ್ಳೆ ಆಚಾರವಂತ."

ಗೋಸ್ವಾಮಿ: "ಹಾಗಾದರೆ ನಾವು ಈಗ ಆತನನ್ನ ನಮ್ಮ ಸಂಪ್ರ ದಾಯಕ್ಕೆ ಸೇರಿಸಿಕೊಳ್ಳಬಹುದಲ್ಲ."

1. ಒಬ್ಬ ಪ್ರಖ್ಯಾತ ವೈಷ್ಣವ ಸಂತ.

ಶ್ರೀರಾಮಕೃಷ್ಣರು : "ಜನ ಏನಂದುಕೊಳ್ಳುತ್ತಾರೆ ಎಂಬುದರ ಮೇಲೇನು ಆತ ಅಷ್ಟೊಂದು ಮನಸ್ಸು ಕೊಡುವುದಿಲ್ಲ."

ಗೋಸ್ವಾಮಿ : "ಅದಕ್ಕಾಗಿ ಅಲ್ಲ. ಸಮಾಜ ಕೃತಾರ್ಥವಾಗಿ ಬಿಡುತ್ತದೆ, ಅದಕ್ಕೆ ಅಂಥ ಮನುಷ್ಯ ದೊರೆತುದೇ ಆದರೆ."

ಶ್ರೀರಾಮಕೃಷ್ಣರು : "ನನ್ನನ್ನು ಬಹಳವಾಗಿ ಗೌರವಿಸುತ್ತಾನೆ. ಆದರೆ ಆತನನ್ನು ಸಂಧಿಸುವುದೇ ಬಹಳ ಕಷ್ಟ. ಇಂದು ಢಾಕಾಕ್ಕೆ, ನಾಳೆ ಇನ್ನೊಂದು ಜಾಗಕ್ಕೆ—ಹೀಗೆ ಕರೆ ಆತನಿಗೆ ಬರುತ್ತಲೇ ಇರುತ್ತವೆ. ಯಾವಾಗಲೂ ವ್ಯಸ್ತನಾಗೇ ಇರುತ್ತಾನೆ. ಸಾಧಾರಣ ಬ್ರಾಹ್ಮಸಮಾಜ ದಲ್ಲಿ ಒಂದು ದೊಡ್ಡ ಗೊಂದಲ ಎದ್ದಿದೆ."

ಗೋಸ್ವಾಮಿ : "ಮಹಾಶಯರೆ, ಕಾರಣ ?"

ಶ್ರೀರಾಮಕೃಷ್ಣರು : "ಬ್ರಾಹ್ಮಸಮಾಜದವರು ಆತನಿಗೆ (ವಿಜಯ ನಿಗೆ) ಹೇಳುತ್ತಾರೆ: 'ನೀನು ಸಾಕಾರವಾದಿಗಳೊಡನೆ ಬೆರೆಯುತ್ತಾ ಇದೀಯೆ. ನೀನು ವಿಗ್ರಹಾರಾಧಕ.' ವಿಜಯ ಬಹಳ ಉದಾರಿ ಮತ್ತು ಸರಳ. ವ್ಯಕ್ತಿ ಸರಳನಾಗದ ಹೊರತು ಭಗವಂತನ ಕೃಪೆ ಬಂದೊದಗದು."

ಈಗ ಪರಮಹಂಸರು ಮುಖ್ಯೋಪಾಧ್ಯಾಯ ಸೋದರರೊಡನೆ ಮಾತುಕತೆ ಆಡುತ್ತಿದಾರೆ. ಅಣ್ಣ ಮಹೇಂದ್ರನಿಗೆ ಸ್ವಂತ ವ್ಯಾಪಾರ ಇದೆ. ತಮ್ಮ ಪ್ರಿಯನಾಥನಿಗೆ ಎಂಜಿನಿಯರ್ ಕೆಲಸ ಇತ್ತು. ಸಾಕಾದಷ್ಟು ಸಂಪಾದನೆ ಮಾಡಿಕೊಂಡು ಆ ಕೆಲಸವನ್ನು ಬಿಟ್ಟುಬಿಟ್ಟಿದಾನೆ. ಮಹೇಂದ್ರನ ವಯಸ್ಸು ಮೂವತ್ತೈದೊ ಮೂವತ್ತಾರೊ ಇರಬೇಕು. ಅವರಿಗೆ ಮನೆ ಕಲ್ಕತ್ತದಲ್ಲೂ ಇದೆ, ಹಳ್ಳಿಯಲ್ಲೂ ಇದೆ.

ಶ್ರೀರಾಮಕೃಷ್ಣರು ನಗುತ್ತ : "ಸ್ವಲ್ಪ ಉದ್ದೀಪನವಾಗುತ್ತಿದೆಯಲ್ಲ ಅಂತ ಸುಮ್ಮನೆ ಇದ್ದುಬಿಡಬೇಡಿ. ಮುಂದೆ ಹೋಗಿ. ಚಂದನದ ಕಾಡಿನ ನಂತರ ಇನ್ನೂ ಇವೆ—ಬೆಳ್ಳಿಯ ಗಣಿ, ಚಿನ್ನದ ಗಣಿ, ಇತ್ಯಾದಿ."

ಪ್ರಿಯನಾಥ ನಗುತ್ತ : "ಮಹಾಶಯರೆ, ಕಾಲಿಗೆ ಬೇಡಿ ಬಿದ್ದು ಬಿಟ್ಟಿದೆ. ಮುಂದೆಹೋಗಲು ಬಿಟ್ಟುಕೊಡುತ್ತಿಲ್ಲ."

ಶ್ರೀರಾಮಕೃಷ್ಣರು : "ಕಾಲಿಗೆ ಬೇಡಿ ಬಿದ್ದಿದ್ದರೆ ಏನು ತೊಂದರೆ ? ಮುಖ್ಯವಾದ್ದು ಮನಸ್ಸು. ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ.

"ಒಂದು ಕಥೆ ಕೇಳು. ಇಬ್ಬರು ಸ್ನೇಹಿತರಿದ್ದರು. ಒಬ್ಬ ವೇಶ್ಯೆಯ

ಮನೆಗೆ ಹೋದ, ಇನ್ನೊಬ್ಬ ಭಾಗವತ ಕೇಳಲು ಹೋದ. ಮೊದಲನೆಯ ವನು ಭಾವಿಸಲಾರಂಭಿಸಿದ: 'ನನ್ನ ಜನ್ಮಕ್ಕೆ ಬೆಂಕಿ ಹಾಕ! ನನ್ನ ಸ್ನೇಹಿತ ಭಾಗವತ ಕೇಳುತ್ತಿದಾನೆ, ನಾನು ಇಲ್ಲಿ ಯಾವ ಗುಂಡಿಯಲ್ಲಿ ಬಿದ್ದಿದೇನೆ!' ಎರಡನೆಯವನು ಭಾವಿಸಲಾರಂಭಿಸಿದ: 'ನನ್ನ ಜನ್ಮವನ್ನ ತೆಗೆದುಕೊಂಡು ಹೋಗಿ ನೀರು ನೆಳಲಿಲ್ಲದ ಜಾಗದಲ್ಲಿ ಚೆನ್ನಾಗಿ ಸುಡಬೇಕು! ನನ್ನ ಸ್ನೇಹಿತ ಅಲ್ಲಿ ಎಷ್ಟು ಆಮೋದ ಆಹ್ಲಾದಗಳಲ್ಲಿ ತೊಡಗಿರಬೇಕು, ಆದರೆ ನಾನೆಂಥ ಪೆದ್ದಭಟ್ಟ!' ಅವರಿಬ್ಬರೂ ಸತ್ತನಂತರ ಮೊದಲನೆಯವನನ್ನ ವಿಷ್ಣು-ದೂತರು ಕರೆದುಕೊಂಡು ಹೋದರು—ವೈಕುಂಠಕ್ಕೆ, ಎರಡನೆಯವನನ್ನು ಯಮದೂತರು ಕರೆದುಕೊಂಡುಹೋದರು—ನರಕಕ್ಕೆ.''

ಪ್ರಿಯನಾಥ: ''ಮನಸ್ಸು ನನ್ನ ವಶದಲ್ಲಿಲ್ಲವಲ್ಲ.''

ಶ್ರೀರಾಮಕೃಷ್ಣರು: ''ಏಕೆ ಹಾಗೆ? ಅಭ್ಯಾಸಯೋಗ ಇದೆಯಲ್ಲ. ಅಭ್ಯಾಸ ಮಾಡು, ನೋಡುವೆಯಂತೆ ಮನಸ್ಸು ನೀನು ಬೇಕು ಅಂದ ಕಡೆಗೇ ಹೋಗುತ್ತದೆ. ಮನಸ್ಸೆಂಬುದು ಅಗಸನ ಮನೆಯಿಂದ ಬಂದ ಬಟ್ಟೆಯ ಹಾಗೆ. ಕೆಂಪು ಬಣ್ಣದಲ್ಲಿ ಅದ್ದಿದರೆ ಕೆಂಪು, ನೀಲಿ ಬಣ್ಣದಲ್ಲಿ ಅದ್ದಿದರೆ ನೀಲಿ ಆಗಿಬಿಡುತ್ತದೆ. ಯಾವ ಬಣ್ಣದಲ್ಲಿ ಅದ್ದುತ್ತೀಯೊ ಆ ಬಣ್ಣವನ್ನ ಅದು ಹಿಡಿದುಕೊಂಡುಬಿಡುತ್ತದೆ.

(ಗೋಸ್ವಾಮಿಗೆ) ''ಕೇಳಬೇಕಾದ್ದು ಏನಾದರು ಇದೆಯೆ?''

ಗೋಸ್ವಾಮಿ ಅತ್ಯಂತ ವಿನಯದಿಂದ: ''ಏನಿಲ್ಲ. ತಮ್ಮ ದರ್ಶನ ಆಯಿತಲ್ಲ. ಜೊತೆಗೆ ಇಷ್ಟು ಹೊತ್ತಿನಿಂದ ಎಲ್ಲವನ್ನೂ ಕೇಳಿದೇನಲ್ಲ.''

ಶ್ರೀರಾಮಕೃಷ್ಣರು: ''ಹೋಗಿ ದೇವಾಲಯಗಳನ್ನು ನೋಡಿಕೊಂಡು ಬಾ.''

ಗೋಸ್ವಾಮಿ ಅತ್ಯಂತ ವಿನಯದಿಂದ: ''ತಮ್ಮ ಮುಖದಿಂದ ಒಂದೆರಡು ಚೈತನ್ಯಮಹಾಪ್ರಭುವಿನ ಗುಣಾನುಕೀರ್ತನೆ.''

ಪರಮಹಂಸರು ಹಾಡುತ್ತಿದಾರೆ:

> ಗೌರವರ್ಣವಾಯಿತೇಕೆ ಇಂದು ನನ್ನ ತನುರುಚಿ?
> ಯುಗ ಯುಗಗಳು ಕಳೆಯಬೇಕು. . .

ಮತ್ತೆ ಹಾಡುತ್ತಿದಾರೆ:

> ಬೃಂದಾವನದೆಡೆ ನೋಡುತ ಗೌರನು
> ಕಂಬನಿಯನು ಸುರಿಸುವನು,

ಅಳುವನು, ನಗುವನು, ಹಾಡುತ ಕುಣಿವನು
ಆನಂದದ ಕಡಲಾಗಿಹನು.
ಯಾವ ಕಾಡನೋ ಬೃಂದಾವನವೆನ್ನುತ
ಈ ಕಡಲನೆ ಯಮುನೆಯ ಹೊನಲೆಂದು
ಭಾವಿಸಿ ನೆಲದಲಿ ಹೊರಳುವನು.

ಹಾಡುವುದು ಮುಗಿಯಿತು. ಈಗ ಪರಮಹಂಸರು ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು ಗೋಸ್ವಾಮಿಗೆ: "ಈಗ ನಿಮ್ಮ ಸಂಪ್ರದಾಯಕ್ಕನುಸಾರ ಹಾಡಿದೆ. ಶಾಕ್ತರೇ ಆಗಲಿ, ಘೋಷಪಾರದವರೇ ಆಗಲಿ, ಮತ್ತಾರೇ ಆಗಲಿ ಬಂದರೂ ಅವರಂತೆ ನಾನು ಹಾಡಬೇಕಾಗಿದೆ.

"ಇಲ್ಲಿಗೆ ಎಲ್ಲಾ ವಿಧದ ಸಂಪ್ರದಾಯದವರೂ ಬರುತ್ತಾರೆ—ವೈಷ್ಣವರು, ಶಾಕ್ತರು, ಕರ್ತಾಭಜಾದವರು, ವೇದಾಂತವಾದಿಗಳು, ಈಗಿನ ಬ್ರಹ್ಮಜ್ಞಾನಿಗಳು (ಬ್ರಾಹ್ಮಸಮಾಜದವರು) ಎಲ್ಲಾ; ಇಲ್ಲಿ[1] ಎಲ್ಲರ ಭಾವಗಳೂ ಇರುವುದರಿಂದ. ಭಗವಂತನ ಇಚ್ಛೆಯಿಂದಲೇ ವಿವಿಧ ಧರ್ಮಗಳು, ವಿವಿಧ ಮತಗಳು ಉದ್ಭವವಾಗಿವೆ. ಯಾರಿಗೆ ಯಾವುದು ಹಿಡಿಸುತ್ತದೊ ಅವರಿಗೆ ಅದನ್ನು ಕೊಡುತ್ತಾನೆ. ತಾಯಿ ತನ್ನ ಎಲ್ಲಾ ಮಕ್ಕಳಿಗೂ ಮೀನಿನ ಪಲಾವು ಮಾಡಿ ಬಡಿಸೋದಿಲ್ಲ. ಎಲ್ಲರ ಹೊಟ್ಟೆಗೂ ಅದು ಸರಿಹೋಗದು. ಅದಕ್ಕಾಗಿ ಆಕೆ ಕೆಲವರಿಗೆ ಮೀನಿನ ಸಾರು ಮಾಡಿ ಬಡಿಸುತ್ತಾಳೆ. ಪ್ರತಿಯೊಬ್ಬನೂ ತನ್ನ ತನ್ನ ಪ್ರಕೃತಿಗನುಸಾರ, ತನ್ನ ತನ್ನ ಭಾವಕ್ಕನುಗುಣವಾಗಿ ಮುಂದುವರಿಯುತ್ತಿರುತ್ತಾನೆ.

"ಬರೋಯಾರಿ[2] ಸಮಯದಲ್ಲಿ ಅನೇಕ ಬಗೆಯ ಮೂರ್ತಿಗಳನ್ನು ಮಾಡಿ ಪೂಜೆ ಮಾಡುತ್ತಾರೆ. ವಿವಿಧ ಸಂಪ್ರದಾಯದ ಜನ ಅಲ್ಲಿ ಒಟ್ಟುಗೂಡುತ್ತಾರೆ. ರಾಧಾಕೃಷ್ಣ, ಹರ-ಪಾರ್ವತಿ, ಸೀತಾ-ರಾಮ ಈ ಮೂರ್ತಿಗಳನ್ನ ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಬೇರೆ ಸ್ಥಳಗಳಲ್ಲಿ ಇಟ್ಟು ಪೂಜಿಸುತ್ತಾರೆ. ಪ್ರತಿಯೊಂದು ಮೂರ್ತಿಯ ಹತ್ತಿರವೂ ಜನ ಗುಂಪುಕಟ್ಟಿ ನಿಂತಿರುತ್ತಾರೆ. ವೈಷ್ಣವರು ಹೆಚ್ಚಾಗಿ ರಾಧಾ-ಕೃಷ್ಣರ ಹತ್ತಿರ, ಶಾಕ್ತರು

1. ಪರಮಹಂಸರಲ್ಲಿ.

2. ಊರೊಟ್ಟಿನ ಹಬ್ಬ—ಬಂಗಾಳದಲ್ಲಿ.

ಹರ-ಪಾರ್ವತಿಯರ ಹತ್ತಿರ, ರಾಮ ಭಕ್ತರು ಸೀತಾ-ರಾಮರ ಹತ್ತಿರ ಸೇರುತ್ತಾರೆ.

"ಆದರೆ ಯಾರ ಮನಸ್ಸು ಒಂದು ಕಿಂಚಿತ್ತೂ ಭಗವಂತನ ಕಡೆಗೆ ಹರಿಯಲೊಲ್ಲದೊ ಅವರಿಗೂ ಒಂದು ಪ್ರತ್ಯೇಕ ಸ್ಥಳವಿದೆ. ಅವರಿಗೆ ವೇಶ್ಯೆ ಉಪಪತಿಯನ್ನ ಬರಲು ತೆಗೆದುಕೊಂಡು ಹೊಡೆಯುತ್ತಾ ಇರುವ ಮೂರ್ತಿ. ಇಂಥಾ ಮೂರ್ತಿಗಳನ್ನೂ ಆ ಹಬ್ಬದಲ್ಲಿ ಒಂದು ಕಡೆ ಇಡುತ್ತಾರೆ. ಆ ವಿಧದ ಜನರು ಅಲ್ಲಿಗೆ ಹೋಗಿ ನಿಂತುಕೊಂಡು ಆ ಮೂರ್ತಿಗಳನ್ನ ಬಾಯಿಬಿಟ್ಟು ಕೊಂಡು ನೋಡುತ್ತ ಬಂಧುಗಳಿಗೆ ಕೂಗಿಹೇಳುತ್ತಾರೆ: 'ಏನ್ರೋ, ಅಲ್ಲೇ ನಿದೆ ಮಣ್ಣು ! ಇಲ್ಲಿಗೆ ಬಂದು ನೋಡ್ರೋ ತಮಾಷೇನಾ!'" (ಎಲ್ಲರೂ ನಗುತ್ತಿದಾರೆ.)

ಗೋಸ್ವಾಮಿ ಪರಮಹಂಸರಿಗೆ ಪ್ರಣಾಮಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾನೆ.

ಘಂಟೆ ಸಾಯಂಕಾಲ ಐದು. ಪರಮಹಂಸರು ತಮ್ಮ ಕೊಠಡಿಯ ಅರ್ಧಚಂದ್ರಾಕೃತಿಯ ವರಾಂಡದಲ್ಲಿ ಬಾಬುರಾಮ, ಲಾಟು, ಮುಖ್ಯೋಪಾಧ್ಯಾಯ ಸೋದರರು, ಮಾಸ್ಟರ್ ಇವರೇ ಮೊದಲಾದ ಭಕ್ತರೊಡನೆ ಕುಳಿತು ಕೊಂಡಿದಾರೆ.

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ನಾನೇಕೆ ಒಂದೇ ಸ್ವರ ಊದುವವನಾಗಲಿ? ಗೋಸ್ವಾಮಿಗಳು ಗೊಡ್ಡು ವೈಷ್ಣವರು. ಅವರು ಭಾವಿಸುತ್ತಾರೆ ತಮ್ಮ ಮತವೇ ಸರಿ, ಉಳಿದವರದೆಲ್ಲ ತಪ್ಪು ಎಂಬುದಾಗಿ. ನಾನು ಮಾತನಾಡಿದ್ದು ಆತನಿಗೆ ಚೆನ್ನಾಗಿ ತಾಕಿರಬೇಕು. (ನಗುತ್ತ) ಆನೆಯ ತಲೆಯನ್ನು ಅಂಕುಶದಿಂದ ಚುಚ್ಚಬೇಕು; ತಲೆ ಅದರ ಮರ್ಮಸ್ಥಾನವಂತೆ."

ಪರಮಹಂಸರು ಈಗ ಯುವಕರೊಡನೆ ಹುಡುಗಾಟವಾಡುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ನಾನು ಈ ಯುವಕರಿಗೆ ಕೇವಲ ಸಸ್ಯಾಹಾರವನ್ನೇ ಕೊಡುತ್ತಿಲ್ಲ; ಆಗಾಗ ಸ್ವಲ್ಪ ಮೀನು ತೊಳೆದ ನೀರನ್ನೂ ಕೊಡುತ್ತಿದೇನೆ. ಇಲ್ಲದಿದ್ದರೆ ಇವರು ಇಲ್ಲಿಗೆ ಬರುತ್ತಾ ಇದ್ದರೆ?"

ಮುಖ್ಯೋಪಾಧ್ಯಾಯ ಸೋದರರು ವರಾಂಡದಿಂದ ಎದ್ದು ಹೋಗುತ್ತಿದಾರೆ—ಉದ್ಯಾನವನದಲ್ಲಿ ಸುತ್ತಾಡಿಬರಲು.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಾನು ತಮಾಷೆ ಮಾಡಿದ್ದು ಮುಖ್ಯೋಪಾಧ್ಯಾಯ ಸೋದರರನ್ನು ಬೇಜಾರುಪಡಿಸಿತೇನು ?"

ಮಾಸ್ಟರ್: "ಏಕೆ ಬೇಜಾರುಪಡಿಸೀತು ? ಕ್ಯಾಪ್ಟೆನ್ ಹೇಳಿದಾನೆ, ನಿಮ್ಮದು ಬಾಲಕ ಸ್ವಭಾವ ಅಂತ. ಭಗವಂತನ ಸಾಕ್ಷಾತ್ಕಾರ ದೊರೆತ ನಂತರ ಬಾಲಕ ಸ್ವಭಾವ ಬಂದುಬಿಡುತ್ತದೆ."

ಶ್ರೀರಾಮಕೃಷ್ಣರು: "ಅದೇನೊ ನಿಜ. ಆತ ಕೆಲವು ವೇಳೆ ಬಾಲಕನ ಹಾಗೆ, ಇನ್ನು ಕೆಲವು ವೇಳೆ ಹುಡುಗನ ಹಾಗೆ, ಮತ್ತೆ ಕೆಲವು ವೇಳೆ ಯುವಕನ ಹಾಗೆ ವರ್ತಿಸುತ್ತಾನೆ. ಹುಡುಗನ ಅವಸ್ಥೆಯಲ್ಲಿ ಹುಡುಗಾಟವಾಡುತ್ತಿರುತ್ತಾನೆ. ಒಮ್ಮೊಮ್ಮೆ ಕೋಡಂಗಿಯ ಹಾಗೂ ಮಾತುಕತೆ ಆಡಬಹುದು. ಯುವಕನ ಅವಸ್ಥೆಯಲ್ಲಿ ಗರ್ಜಿಸುವ ಸಿಂಹದ ಹಾಗೆ ಲೋಕಶಿಕ್ಷಣ ಕೊಡುತ್ತಾನೆ. ನೀನು ಮುಖ್ಯೋಪಾಧ್ಯಾಯ ಸೋದರರಿಗೆ ನನ್ನ ಮಾನಸಿಕ ಅವಸ್ಥೆಯನ್ನು ವಿವರಿಸಿ ತಿಳಿಸು."

ಮಾಸ್ಟರ್: "ನಾನೇನೂ ಹಾಗೆ ಮಾಡಬೇಕಾಗಿಲ್ಲ. ಅಷ್ಟು ಬುದ್ಧಿಯಿಲ್ಲವೆ ಅವರಿಗೆ ?"

ಮತ್ತೆ ಪರಮಹಂಸರು ಯುವಕರೊಡನೆ ಹುಡುಗಾಟವಾಡುತ್ತಿದಾರೆ. ಈಗ ಒಬ್ಬ ಭಕ್ತನಿಗೆ ಹೇಳುತ್ತಿದಾರೆ: "ಇಂದು ಅಮಾವಾಸ್ಯೆ. ರಾತ್ರಿ ಕಾಳೀದೇವಾಲಯಕ್ಕೆ ಹೋಗು."

ಮುಚ್ಚಂಜೆಯಾಗಿದೆ. ಸಾಯಂ ಮಂಗಳಾರತಿಯ ಶಬ್ದ ಕೇಳಿಬರುತ್ತಿದೆ. ಪರಮಹಂಸರು ಬಾಬುರಾಮನಿಗೆ ಹೇಳುತ್ತಿದಾರೆ: "ಹೊರಡು ಕಾಳೀದೇವಾಲಯಕ್ಕೆ ನನ್ನೊಡನೆ." ಅವರೂ ಬಾಬುರಾಮ ಕಾಳೀದೇವಾಲಯದ ಕಡೆ ಮುಂದುವರಿಯುತ್ತಿದಾರೆ. ಮಾಸ್ಟರೂ ಅವರನ್ನು ಹಿಂಬಾಲಿಸುತ್ತಿದಾನೆ. ವರಾಂಡದಲ್ಲಿ ಹರೀಶ ಕುಳಿತಿರುವುದನ್ನು ನೋಡಿ ಪರಮಹಂಸರು ಹೇಳುತ್ತಿದಾರೆ: "ಇವನಿಗೆ ಭಾವ ಬಂದುಬಿಟ್ಟಿದೆ ಅಂತ ಕಾಣುತ್ತೆ !"

ಪ್ರಾಂಗಣದ ಮೂಲಕ ನಡೆಯುತ್ತ ನಡೆಯುತ್ತ ಪರಮಹಂಸರು ಮತ್ತು ಭಕ್ತರು ರಾಧಾಕಾಂತದೇವಾಲಯದ ಎದುರು ಮಂಗಳಾರತಿ ನೋಡಲು ನಿಂತಿದಾರೆ. ಈಗ ಕಾಳೀದೇವಾಲಯದ ಕಡೆ ಮುಂದುವರಿಯುತ್ತಿದಾರೆ. ಮುಂದು ಮುಂದುವರಿಯುತ್ತ ಇದ್ದ ಹಾಗೆ ಕೈಗಳನ್ನು ಮೇಲಕ್ಕೆ ಎತ್ತಿ ಭಗವತಿಯನ್ನು ಕರೆಯುತ್ತಿದಾರೆ: "ಹೇ ತಾಯಿ ! ಹೇ ಬ್ರಹ್ಮಮಯಿ !"

ಪರಮಹಂಸರು ಗರ್ಭಗುಡಿಯ ಮುಂಭಾಗಕ್ಕೆ ಬಂದು ಭಗವತಿಗೆ ಸಾಷ್ಟಾಂಗಪ್ರಣಾಮ ಮಾಡುತ್ತಿದಾರೆ. ಮಂಗಳಾರತಿ ನಡೆಯುತ್ತಿದೆ. ಈಗ ಗರ್ಭಗುಡಿಯನ್ನು ಪ್ರವೇಶಿಸಿ ಭಗವತಿಗೆ ಚಾಮರ ಬೀಸುತ್ತಿದಾರೆ.

ಮಂಗಳಾರತಿ ಮುಗಿಯಿತು. ಎಲ್ಲರೂ ಒಟ್ಟಿಗೆ ದೇವಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಿದಾರೆ. ಇಂದು ಅಮಾವಾಸ್ಯೆ. ಪರಮಹಂಸರು ಭಾವಾವಿಷ್ಟರಾಗಿದಾರೆ. ಪ್ರೇಮೋನ್ಮತ್ತತೆಯಿಂದ ತುಂಬಿತುಳುಕಾಡುತ್ತಿದಾರೆ. ಉನ್ಮತ್ತನ ಹಾಗೆ ಕಾಲು ಹಾಕುತ್ತ ಬಾಬುರಾಮನ ಕೈ ಹಿಡಿದುಕೊಂಡು ತಮ್ಮ ಕೊಠಡಿಗೆ ಹಿಂದಿರುಗಿಬರುತ್ತಿದಾರೆ.

ಪರಮಹಂಸರ ಕೊಠಡಿಯ ಪಶ್ಚಿಮ ವರಾಂಡದಲ್ಲಿ ಒಂದು ದೀಪ ಉರಿಯುತ್ತಿದೆ. ಪರಮಹಂಸರು ಆ ವರಾಂಡಕ್ಕೆ ಬಂದು ಕುಳಿತುಕೊಂಡು ಹೇಳುತ್ತಿದಾರೆ: "ಹರಿಃ ಓಂ! ಹರಿಃ ಓಂ! ಹರಿಃ ಓಂ!" ಈಗ ಕೆಲವು ತಂತ್ರೋಕ್ತ ಮಂತ್ರಗಳನ್ನೂ ಪಠಿಸುತ್ತಿದಾರೆ. ಸ್ವಲ್ಪ ಹೊತ್ತು ಅಲ್ಲೆ ಕುಳಿತಿದ್ದು ಈಗ ತಮ್ಮ ಕೊಠಡಿಗೆ ಬಂದು ಚಿಕ್ಕ ಮಂಚದ ಮೇಲೆ ಪೂರ್ವಾಭಿಮುಖವಾಗಿ ಕುಳಿತಿದಾರೆ. ಇನ್ನೂ ಭಾವೋನ್ಮತ್ತರಾಗೇ ಇದಾರೆ. ಭಗವತಿಯನ್ನು ಸಂಬೋಧಿಸಿ ಹೇಳುತ್ತಿದಾರೆ: "ಹೇ ತಾಯೆ, ಮೊದಲು ನಾನು ಹೇಳುವುದು, ಅನಂತರ ನೀನು ಮಾಡುವುದು—ಓ, ಇದು ತಿಳಿಗೇಡಿತನ! ಮಾತಾಡುವುದು ಅಂದರೆ ಏನು? ಸಂಕೇತದಿಂದ ತಿಳಿಸುವಿಕೆಯಲ್ಲದೆ ಬೇರೇನೂ ಅಲ್ಲ. ಒಬ್ಬ ಹೇಳುತ್ತಾನೆ: 'ನಾನು ಊಟಮಾಡುತ್ತೇನೆ.' ಮತ್ತೆ, ಇನ್ನೊಬ್ಬ ಹೇಳುತ್ತಾನೆ: 'ಹೋಗು! ನಾನು ಕಿವಿಗೊಡೋಲ್ಲ.' ಒಳ್ಳೇದು ತಾಯೆ, ನಾನು ಊಟ ಮಾಡುವುದಿಲ್ಲವೆಂದು ಒಂದು ಪಕ್ಷ ಹೇಳಿದ್ದೆ ಅಂತ ಇಟ್ಟುಕೊ; ಹಾಗೆ ಹೇಳಿಬಿಟ್ಟಾಕ್ಷಣಕ್ಕೆ ನನಗೆ ಹಸಿವಾಗಲೊಲ್ಲದೆ? ಬಾಯಿ ಬಿಟ್ಟು ಹೇಳಿದರೇ ನೀನು ಕಿವಿಗೊಡುವೆ; ಅಂತರ್ಯದಲ್ಲಿ ವ್ಯಾಕುಲಪಟ್ಟರೆ ನೀನು ಕಿವಿಗೊಡೋಲ್ಲ ಅಂತಲೇನು? ನೀನು ಎಂದಾದರೂ ಹಾಗೆ ಮಾಡತಕ್ಕವಳೆ? ನೀನು ಏನಾಗಿದೀಯೊ ಅದೇ ಆಗಿದೀಯೆ. ಆದ್ದರಿಂದ ನಾನೇಕೆ ನಿನಗೆ ತಿಳಿಸಹೋಗಲಿ? ನಾನೇಕೆ ನಿನಗೆ ಪ್ರಾರ್ಥನೆಮಾಡಹೋಗಲಿ? ನೀನು ಮಾಡಿಸಿದ ಹಾಗೆ ಮಾಡುತ್ತೇನೆ. ಹೋಗು, ಎಲ್ಲಾ ಹದಗೆಟ್ಟು ಹೋಯಿತು! ವಿಚಾರ ಮಾಡುವಂತೆ ಏಕೆ ನನ್ನನ್ನು ತೊಡಗಿಸಿದೀಯೆ?"

ಪರಮಹಂಸರ ಈ ಮಾತುಕತೆಗಳನ್ನೆಲ್ಲ ಕೇಳಿ ಭಕ್ತರು ಆಶ್ಚರ್ಯ-

ಚಕಿತರಾಗಿಬಿಟ್ಟಿದಾರೆ. ಪರಮಹಂಸರು ಈಗ ಭಕ್ತರ ಕಡೆ ದೃಷ್ಟಿ ಹಾಕುತ್ತಿದಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಭಗವಂತನ ಸಾಕ್ಷಾತ್ಕಾರ ದೊರಕ ಬೇಕಾದರೆ ಒಳ್ಳೆ ಸಂಸ್ಕಾರ ಬೇಕು. ಏನಾದರೂ ಒಂದು ಸ್ವಲ್ಪ ತಪಸ್ಸನ್ನ—ಈ ಜನ್ಮದಲ್ಲಾದರೂ ಸರಿಯೆ, ಹಿಂದಿನ ಜನ್ಮದಲ್ಲಾದರೂ ಸರಿಯೆ—ಮಾಡಿರಬೇಕು.

"ದ್ರೌಪದಿಯ ಸೀರೆಯನ್ನು ದುರ್ಯೋಧನನ ಅನುಯಾಯಿಗಳು ಸೆಳೆಯುತ್ತಿದ್ದಾಗ, ಅತ್ಯಂತ ವ್ಯಾಕುಲತೆಯಿಂದ ಕೂಡಿದ ಆಕೆಯ ರೋದನ ವನ್ನು ಕೇಳಿ ಭಗವಂತ ಆಕೆಗೆ ದರ್ಶನಕೊಟ್ಟು ಹೇಳಿದ: 'ನೀನು ಯಾರಿಗೇ ಆಗಲಿ ಎಂದಾದರೂ ವಸ್ತ್ರದಾನ ಮಾಡಿದೀಯಾ ಸ್ವಲ್ಪ ಹಾಗೇ ಆಲೋಚಿಸಿ ನೋಡು. ಹಾಗೆ ನೀನು ಮಾಡಿದ್ದೇ ಆಗಿದ್ದರೆ ನಿನ್ನ ಮಾನ-ಭಂಗ ಎಂದಿಗೂ ಆಗದು.' ದ್ರೌಪದಿ ಹೇಳಿದಳು: 'ಹೌದು, ಜ್ಞಾಪಕಕ್ಕೆ ಬರುತ್ತಾ ಇದೆ. ಒಬ್ಬ ಋಷಿ ಸ್ನಾನಮಾಡುತ್ತಿದ್ದ. ಆತನ ಕೌಪೀನ ವನ್ನ ಪ್ರವಾಹ ಹೊತ್ತುಕೊಂಡುಹೊರಟುಹೋಯಿತು. ಆಗ ನಾನು ನನ್ನ ಸೀರೆಯ ಅರ್ಧ ಭಾಗವನ್ನು ಹರಿದು ಆತನಿಗೆ ಕೊಟ್ಟೆ.' ಆಗ ಭಗವಂತ ಹೇಳಿದ: 'ಹಾಗಾದರೆ ನೀನು ಸ್ವಲ್ಪವೂ ಹೆದರಬೇಕಾಗಿಲ್ಲ.'"

ಮಾಸ್ಟರ್ ಒಂದು ಚಿಕ್ಕ ಕಾಲೊರಸಿನ (ಫುಟ್‌ರಗ್ಗಿನ) ಮೇಲೆ ಕುಳಿತಿದಾನೆ.

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನಿನಗೆ ಅದು ಅರ್ಥವಾಯಿತೆ?"

ಮಾಸ್ಟರ್: "ಹೌದು, ಆ ಸಂಸ್ಕಾರದ ವಿಷಯ ತಾನೆ."

ಶ್ರೀರಾಮಕೃಷ್ಣರು: "ಒಮ್ಮೆ ಹೇಳು ನೋಡೋಣ, ನಾನು ಏನು ಹೇಳಿದೆ."

ಮಾಸ್ಟರ್ ದ್ರೌಪದಿಯ ಕಥೆಯನ್ನ ಪುನರಾವೃತ್ತಿಮಾಡುತ್ತಾನೆ.

ಹಾಜರಾ ಕೊಠಡಿಯನ್ನು ಪ್ರವೇಶಿಸುತ್ತಾನೆ. ಆತ ಈಗ ಎರಡು ವರ್ಷಗಳಿಂದ ಪರಮಹಂಸರೊಡನೆ ದಕ್ಷಿಣೇಶ್ವರದಲ್ಲೆ ವಾಸಿಸುತ್ತಿದಾನೆ. ೧೮೮೦ನೆ ಇಸವಿಯಲ್ಲಿ ಆತ ಪರಮಹಂಸರನ್ನು ಹೃದಯನ ಊರು ಸಿಹೋರಿ ನಲ್ಲಿ ಸಂಧಿಸಿದ. ಹಾಜರಾನ ಊರೂ ಸಿಹೋರಿನ ಹತ್ತಿರವೇ. ಅಲ್ಲಿ ಆತ-ನಿಗೆ ಅಲ್ಪ ಸ್ವಲ್ಪ ಭೂಮಿ ಕಾಣಿ, ಮನೆ ಮಠ ಇವೆ. ಹೆಂಡತಿ ಮಕ್ಕಳೂ ಇದಾರೆ. ಸ್ವಲ್ಪ ಸಾಲವೂ ಇದೆ. ಬಾಲ್ಯದಿಂದಲೂ ಆತನ ಮನಸ್ಸು

ಭಗವಂತನ ಕಡೆಗೆ ಹರಿಯುತ್ತಿದೆ. ಅದಕ್ಕಾಗಿ ಆತ ಸಾಧು ಸತ್ಪುರುಷರ ಸಹವಾಸ ಮಾಡುತ್ತಿದಾನೆ. ಪರಮಹಂಸರು ತಮ್ಮೊಡನೆ ದಕ್ಷಿಣೇಶ್ವರದಲ್ಲಿ ಇರುವಂತೆ ಆತನಿಗೆ ಹೇಳಿದಾರೆ. ಆತನೂ ಪರಮಹಂಸರ ಯೋಗಕ್ಷೇಮ ನೋಡಿಕೊಳ್ಳುತ್ತಿದಾನೆ. ಆದರೆ ಆತನ ಮನಸ್ಸು ಅರಗಿಸಿಕೊಳ್ಳದೇ ಇದ್ದ ಧಾರ್ಮಿಕ ಭಾವನೆಗಳ ಕಲಸು ಮೇಲೋಗರದಂತಿದೆ. ಆತ ಜ್ಞಾನಮಾರ್ಗಾವಲಂಬಿ. ಪರಮಹಂಸರ ಭಕ್ತಿಪ್ರವೃತ್ತಿ ಮತ್ತು ಅವರು ಯುವಕರಿಗೆ ತೋರಿಸುತ್ತಿದ್ದ ಆದರ ಅಕ್ಕರೆ ಆತನಿಗೆ ಹಿಡಿಸುತ್ತಿಲ್ಲ. ಕೆಲವು ವೇಳೆಯೇನೊ ಆತ ಪರಮಹಂಸರನ್ನು ಒಬ್ಬ ಮಹಾಪುರುಷರೆಂದೇ ಪರಿಗಣಿಸುತ್ತಾನೆ, ಆದರೆ ಇನ್ನು ಕೆಲವು ವೇಳೆ ಅವರು ಬರೀ ಸಾಮಾನ್ಯ ಮನುಷ್ಯರೇ ಎಂದು ಭಾವಿಸಿ ಅವರನ್ನು ನಿಂದಿಸುತ್ತಿರುತ್ತಾನೆ. ಆತ ತನ್ನ ಸಮಯದ ಬಹು ಭಾಗವನ್ನ ಜಪಮಾಲೆ ತಿರುಗಿಸುತ್ತಲೇ ಕಳೆಯುತ್ತಿದಾನೆ. ರಾಖಾಲನೇ ಮೊದಲಾದ ಯುವಕಭಕ್ತರು ತನ್ನನ್ನು ಅನುಕರಿಸದೆ ಇರುವುದಕ್ಕಾಗಿ ಅವರನ್ನು ನಿಂದಿಸುತ್ತಿರುತ್ತಾನೆ. ಆತ ಒಬ್ಬ ಗೊಡ್ಡು ಆಚಾರವಂತ. ವಯಸ್ಸು ಸುಮಾರು ಮೂವತ್ತೆಂಟು ಇರಬಹುದು.

ಹಾಜರಾ ಕೊಠಡಿಯನ್ನು ಪ್ರವೇಶಿಸಿದೊಡನೇ ಪರಮಹಂಸರು ಕಿಂಚಿತ್ ಭಾವಾವಿಷ್ಟರಾಗಿ, ಆ ಅವಸ್ಥೆಯಲ್ಲೇ ಮಾತಾಡುತ್ತಿದಾರೆ.

ಶ್ರೀರಾಮಕೃಷ್ಣರು ಹಾಜರಾನಿಗೆ: "ನೀನು ಏನು ಹಿಡಿದಿದೀಯೊ ಅದು ಸರಿಯಾದ ಮಾರ್ಗವೇ, ಆದರೆ ಅದನ್ನು ಉಪಯೋಗಿಸಿಕೊಳ್ಳುವ ರೀತಿ ಸರಿಯಾಗಿಲ್ಲ. ಯಾರಲ್ಲೂ ತಪ್ಪು ಕಂಡುಹಿಡಿಯಬೇಡ—ಒಂದು ಕ್ರಿಮಿಯಲ್ಲಿ ಕೂಡ. ಭಕ್ತಿಗಾಗಿ ಭಗವಂತನನ್ನು ಪ್ರಾರ್ಥನೆಮಾಡುತ್ತೀಯಲ್ಲ, ಹಾಗೇ ಯಾರಲ್ಲೂ ತಪ್ಪು ಕಂಡುಹಿಡಿಯದೆ ಇರುವುದಕ್ಕಾಗೂ ಪ್ರಾರ್ಥನೆಮಾಡು."

ಹಾಜರಾ: "ಭಕ್ತಿಗಾಗಿ ಪ್ರಾರ್ಥನೆಮಾಡಿದರೆ ಆತ ಕೇಳುತ್ತಾನೇನು ? !"

ಶ್ರೀರಾಮಕೃಷ್ಣರು: "ನಿಜವಾಗಿಯೂ. ಆ ವಿಷಯವಾಗಿ ನಿನಗೆ ಒಂದು ಸಾವಿರ ಸಲ ಆಶ್ವಾಸನೆ ಕೊಡಬಲ್ಲೆ. ಆದರೆ ಪ್ರಾರ್ಥನೆ ಹೃತ್ಪೂರ್ವಕವಾದ್ದಾಗಿರಬೇಕು, ವ್ಯಾಕುಲತೆಯಿಂದ ಕೂಡಿರಬೇಕು. ಪ್ರಾಪಂಚಿಕರು ಹೆಂಡತಿಮಕ್ಕಳಿಗಾಗಿ ಅಳುವಂತೆ ಅವರು ಭಗವಂತನಿಗಾಗಿ ಅಳಬಲ್ಲರೆ? ಕಾಮಾರಪುಕುರಿನಲ್ಲಿ ಒಬ್ಬನ ಹೆಂಡತಿ ಒಮ್ಮೆ ಕಾಯಿಲೆ ಬಿದ್ದಳು.

ಆಕೆ ಬದುಕೋಲ್ಲ ಅಂತ ಭಾವಿಸಿ 'ಥರ, ಥರ' ಅಂತ ಗಂಡ ನಡುಗಲಾರಂಭಿಸಿದ—ಮೂರ್ಛಿತನಾಗುವುದರಲ್ಲಿದ್ದ. ಆ ರೀತಿಯಾಗಿ ಭಗವಂತನಿಗಾರು ವ್ಯಾಕುಲಪಡುತ್ತಾರೆ?"

ಹಾಜರಾ ಪರಮಹಂಸರ ಪಾದಧೂಳಿ ತೆಗೆದುಕೊಳ್ಳಲು ಮುಂದುವರಿಯುತ್ತಿದಾನೆ.

ಶ್ರೀರಾಮಕೃಷ್ಣರು ಹಿಂದೆಗೆದು: "ಏಕೆ ಇದೆಲ್ಲ?"

ಹಾಜರಾ: "ಯಾರು ಕೃಪೆಮಾಡಿ ತಮ್ಮ ಹತ್ತಿರ ಇಟ್ಟುಕೊಂಡಿದಾರೊ ಅವರ ಪಾದಧೂಳಿಯನ್ನ ನಾನೇಕೆ ತೆಗೆದುಕೊಳ್ಳಬಾರದು?"

ಶ್ರೀರಾಮಕೃಷ್ಣರು: "ಭಗವಂತನನ್ನು ತುಷ್ಟಿಗೊಳಿಸು ಎಲ್ಲರೂ ತುಷ್ಟರಾಗಿಬಿಡುತ್ತಾರೆ. 'ತಸ್ಮಿನ್ ತುಷ್ಟೇ ಜಗತ್ ತುಷ್ಟಮ್।', 'ಭಗವಂತ ತುಷ್ಟನಾದರೆ ಜಗತ್ತು ತುಷ್ಟವಾಗಿಬಿಡುತ್ತದೆ.' ಒಮ್ಮೆ ಶ್ರೀಕೃಷ್ಣಪರಮಾತ್ಮ ದ್ರೌಪದಿಯ ಅಡಿಗೆ ಪಾತ್ರೆಗೆ ಅಂಟಿಕೊಂಡಿದ್ದ ಸೊಪ್ಪನ್ನು ತಿಂದು ಹೇಳಿದ: 'ನನಗೆ ತೃಪ್ತಿಯಾಗಿಬಿಟ್ಟಿತು.' ಒಡನೇ ಇಡೀ ಜಗತ್ತಿಗೆ, ಅದರ ಜೀವರಾಶಿಗಳಿಗೆಲ್ಲಾ ತೃಪ್ತಿಯಾಗಿಬಿಟ್ಟಿತು—ಹೊಟ್ಟೆ ತುಂಬಿ ತೇಗೂ ಬಂದುಬಿಟ್ಟಿತು. ಆದರೆ ಋಷಿಗಳು ತಿಂದಾಗ ಈ ಜಗತ್ತಿಗೆ ತೃಪ್ತಿ, ಆ ರೀತಿಯ ತೇಗು ಉಂಟಾಯಿತೇನು?

(ಹಾಜರಾನಿಗೆ) "ಜ್ಞಾನಿಗಳು ಬ್ರಹ್ಮಜ್ಞಾನ ದೊರೆತನಂತರವೂ ಲೋಕಶಿಕ್ಷಣಾರ್ಥವಾಗಿ ಪೂಜಾದಿ ಕರ್ಮಗಳನ್ನ ಮಾಡಿಕೊಂಡು ಹೋಗುತ್ತಿರುತ್ತಾರೆ. ನಾನು ಕಾಳೀದೇವಾಲಯಕ್ಕೆ ಹೋಗುತ್ತಿದೇನೆ ಮತ್ತು ಈ ಕೊಠಡಿಯ ಎಲ್ಲಾ ಪಟಗಳಿಗೂ ನಮಸ್ಕಾರ ಮಾಡುತ್ತಿದೇನೆ; ಆದ್ದರಿಂದ ಇಲ್ಲಿ ಎಲ್ಲರೂ ಹಾಗೇ ಮಾಡುತ್ತಿದಾರೆ. ಇದೂ ಅಲ್ಲದೆ ಒಮ್ಮೆ ಅಭ್ಯಾಸವಾಗಿಬಿಟ್ಟಿತು ಎಂದರೆ, ಮತ್ತೆ ಹಾಗೆ ಮಾಡದಿದ್ದರೆ ಮನಸ್ಸಿಗೆ ಏನೊ ಒಂದು ವಿಧವಾದ ಅಶಾಂತಿಯುಂಟಾಗುತ್ತದೆ.

"ಒಂದು ದಿನ ನಾನು ಆಲದ ಮರದ ಕೆಳಗೆ ಒಬ್ಬ ಸನ್ಯಾಸಿಯನ್ನ ಕಂಡೆ. ಆತ ಒಂದೇ ಪೀಠದ ಮೇಲೆ ಗುರುಪಾದುಕೆ ಮತ್ತು ಸಾಲಗ್ರಾಮ ಎರಡನ್ನೂ ಇಟ್ಟು ಪೂಜೆಮಾಡುತ್ತಿದ್ದ. ನಾನು ಕೇಳಿದೆ: 'ಜ್ಞಾನ ಈ ಮಟ್ಟವನ್ನು ಮುಟ್ಟಿಬಿಟ್ಟದ್ದೇ ಆಗಿದ್ದರೆ ಇನ್ನು ಪೂಜೆಯನ್ನು ಏಕೆ ಮಾಡುತ್ತಾ ಇದೀಯೆ?' ಆತ ಉತ್ತರವಿತ್ತ: 'ಎಲ್ಲಾ ಕೆಲಸಕಾರ್ಯಗಳನ್ನೂ ಮಾಡಿಕೊಂಡುಹೋಗುತ್ತಿರುವಾಗ ಇದೊಂದನ್ನ ಮಾತ್ರ ಏಕೆ

ಬಿಟ್ಟುಬಿಡಬೇಕು? ಈ ಪಾದಗಳಿಗೆ ಹೂವು ಅರ್ಪಿಸುವಾಗ ಆ ಪಾದಗಳಿಗೂ ಕೆಲವನ್ನು ಅರ್ಪಿಸಿಬಿಡುತ್ತೇನೆ, ಅಷ್ಟೆ.'

"ದೇಹವಿರುವವರೆಗೆ ಕರ್ಮತ್ಯಾಗ ಮಾಡುವ ಹಾಗಿಲ್ಲ. ಕೆರೆಯ ತಳದಲ್ಲಿ ಕೆಸರಿರುವವರೆಗೆ ಗುಳ್ಳೆ ಎದ್ದೇ ಏಳುತ್ತವೆ.

(ಹಾಜರಾನಿಗೆ) "ಒಂದರ ಜ್ಞಾನ ಇತ್ತು ಎಂದರೆ, ಅನೇಕದರ ಜ್ಞಾನ ಇದ್ದೇ ಇರುತ್ತದೆ. ಕೇವಲ ಶಾಸ್ತ್ರಾಧ್ಯಯನದಿಂದ ಏನು ದೊರೆತೀತು? ಶಾಸ್ತ್ರದಲ್ಲಿ ಸಕ್ಕರೆ ಮರಳು ಎರಡೂ ಬೆರೆತುಕೊಂಡಿವೆ. ಮರಳಿನಿಂದ ಸಕ್ಕರೆಯನ್ನು ಪ್ರತ್ಯೇಕಿಸುವುದೆಂದರೆ ಬಹಳ ಕಠಿನ. ಆದ್ದರಿಂದ ಶಾಸ್ತ್ರಗಳ ಮರ್ಮವನ್ನ ಸಾಧುಮುಖದಿಂದ, ಗುರುಮುಖದಿಂದ ಕೇಳಿ ತಿಳಿದುಕೊಳ್ಳಬೇಕು. ಬಳಿಕ ಶಾಸ್ತ್ರಗಳ ಆವಶ್ಯಕತೆಯೇನಿರುತ್ತೆ?

(ಭಕ್ತರಿಗೆ) "ಎಲ್ಲವನ್ನೂ ಸಾಂಗವಾಗಿ ತಿಳಿದುಕೊಂಡು ಬಳಿಕ ಮುಳುಗಿ. ಕೆರೆಯ ಒಂದು ಜಾಗದಲ್ಲಿ ಕೊಡ ಮುಳುಗಿಕೊಂಡಿದೆ ಅಂತ ಇಟ್ಟುಕೊ. ಆ ಜಾಗ ಯಾವುದು ಎಂಬುದನ್ನು ಸರಿಯಾಗಿ ಅರಿತುಕೊಂಡು ಅಲ್ಲಿ ಮುಳುಗಬೇಕು.

"ಶಾಸ್ತ್ರದ ಮರ್ಮವನ್ನ ಗುರುಮುಖದಿಂದ ಕೇಳಿ ತಿಳಿದುಕೊಂಡು, ಅನಂತರ ಸಾಧನೆಯಲ್ಲಿ ತೊಡಗಬೇಕು. ಸಾಧನೆ ಸರಿಯಾಗಿ ನಡೆಯಿತು ಎಂದರೆ, ಭಗವಂತನ ಪ್ರತ್ಯಕ್ಷದರ್ಶನ ದೊರೆತುಬಿಡುತ್ತದೆ. ಗುರು ಹೇಳಿರುವ ರೀತಿಯಲ್ಲಿ ಸಂಪೂರ್ಣವಾಗಿ ಸಾಧನೆಯಲ್ಲಿ ಮುಳುಗಿಹೋದರೆ ತಾನೆ ಅದನ್ನು ಸರಿಯಾಗಿ ಅನುಸರಿಸಿದಂತಾಗುತ್ತದೆ. ಸುಮ್ಮನೆ ಕುಳಿತು ಕುಳಿತು ಶಾಸ್ತ್ರಗಳ ಸಂಬಂಧವಾಗಿ ವಿಚಾರದಲ್ಲೇ ತೊಡಗಿ ಕಾಲಕಳೆಯುತ್ತಿದ್ದರೆ ದೊರಕುವ ಫಲವೇನು? ಅಯ್ಯೊ, ಎಂಥ ತಿಳಿಗೇಡಿಗಳು! ಕೇವಲ ಮಾರ್ಗದ ಸಂಬಂಧವಾಗೇ ವಿಚಾರದಲ್ಲಿ ತೊಡಗಿ ಸತ್ತು ಸುಣ್ಣವಾಗುತ್ತಾರೆ. ಸಾಧನೆಯಲ್ಲಿ ಮುಳುಗರು. ಇದು ಎಷ್ಟು ಶೋಚನೀಯವಾದ್ದು!

"ನೀವು ಹೇಳಬಹುದು, ಮುಳುಗಿದರೂ ತಿಮಿಂಗಿಲ ಮೊಸಳೆಗಳ ಭಯ, ಅಂದರೆ ಕಾಮಕ್ರೋಧಾದಿಗಳ ಭಯ ಇದ್ದೇ ಇರುತ್ತದೆ ಎಂದು. ಅರಿಸಿನವನ್ನ ಮೈಗೆ ಸವರಿಕೊಂಡು ಮುಳುಗಿ; ಆಗ ಅವು ಹತ್ತಿರ ಸುಳಿಯವು. ವಿವೇಕವೈರಾಗ್ಯಗಳೇ ಅರಿಸಿನ.

(ಭಕ್ತರಿಗೆ) "ಭಗವಂತ ನನ್ನ ಕೈಯಿಂದ ಅನೇಕ ಬಗೆಯ ಸಾಧನೆಗಳನ್ನು ಮಾಡಿಸಿದಾನೆ. ಮೊದಲು ಪುರಾಣಮತಕ್ಕನುಸಾರ, ಅನಂತರ

ತಂತ್ರ ಮತಕ್ಕನುಸಾರ. ಬಳಿಕ ವೇದ ಮತಕ್ಕನುಸಾರವಾಗಿಯೂ. ಮೊದಲು ಪಂಚವಟಿಯಲ್ಲಿ ಸಾಧನೆಮಾಡುತ್ತಿದ್ದೆ. ತುಳಸಿವನ ಬೆಳಸಿ ಅದರ ಮಧ್ಯದಲ್ಲಿ ಕುಳಿತು ಧ್ಯಾನಮಾಡುತ್ತಿದ್ದೆ. ಕೆಲವು ವೇಳೆ ವ್ಯಾಕುಲನಾಗಿ 'ತಾಯಿ! ತಾಯಿ!' ಅಂತ ಕೂಗುತ್ತಿದ್ದೆ. ಇನ್ನು ಕೆಲವು ವೇಳೆ 'ರಾಮ! ರಾಮ!' ಅನ್ನುತ್ತಿದ್ದೆ.

"'ರಾಮ! ರಾಮ!' ಅನ್ನುತ್ತಿದ್ದಾಗ, ಹನುಮಂತನ ಭಾವ ಆರೋಪಿಸಿಕೊಂಡು ಕುಂಡೆಗೆ ಬಾಲ ಕಟ್ಟಿಕೊಂಡಿರುತ್ತಿದ್ದೆ. ಆಗ ನನಗೆ ಪ್ರೇಮೋನ್ಮಾದ. ಆ ಸಮಯದಲ್ಲಿ ರೇಷ್ಮೆವಸ್ತ್ರ ಉಟ್ಟು ದೇವರನ್ನು ಪೂಜೆ ಮಾಡುತ್ತಿದ್ದೆ. ಆ ಪೂಜೆಯಲ್ಲಿ ಎಷ್ಟು ಆನಂದ ದೊರೆಯುತ್ತಿತ್ತು!

"ತಂತ್ರ ಮತದ ಸಾಧನೆಯನ್ನು ಮಾಡಿದೆ—ಬಿಲ್ವವೃಕ್ಷದ ಕೆಳಗೆ. ಆ ಸಮಯದಲ್ಲಿ ತುಳಸಿ ಗಿಡ, ಕಾಡು ಗಿಡ ಎರಡೂ ಒಂದೇ ಆಗಿ ಕಾಣುತ್ತಿದ್ದುವು. ಆ ಅವಸ್ಥೆಯಲ್ಲಿ ನರಿಯ ಉಚ್ಛಿಷ್ಟವನ್ನು[1] ತಿನ್ನುತ್ತಿದ್ದೆ. ಅದು ಇಡೀ ರಾತ್ರಿಯೆಲ್ಲಾ ತೆರೆದು ಬಿದ್ದಿರುತ್ತಿತ್ತು; ಅದನ್ನು ಹಾವು ತಿಂದಿತ್ತೊ ಹಲ್ಲಿ ತಿಂದಿತ್ತೊ ಭಗವಂತನೇ ಬಲ್ಲ; ಆ ಉಚ್ಛಿಷ್ಟವೇ ಆಗ ನನ್ನ ಆಹಾರ.

"ಕೆಲವು ವೇಳೆ ನಾಯಿಯ ಮೇಲೆ ಸವಾರಿಮಾಡುತ್ತ ಅದರ ಬಾಯಿಗೆ ಪೂರಿಯ ತುಂಡನ್ನು ಹಾಕುತ್ತಿದ್ದೆ, ನಾನೂ ತಿನ್ನುತ್ತಿದ್ದೆ. ಎಲ್ಲವೂ ಭಗವನ್ಮಯವಾಗಿ ಕಾಣುತ್ತಿತ್ತು. 'ಸರ್ವಂ ವಿಷ್ಣುಮಯಂ ಜಗತ್।' ಅವಿದ್ಯೆಯನ್ನು ನಾಶಪಡಿಸದಿದ್ದರೆ ಭಗವಂತನ ಸಾಕ್ಷಾತ್ಕಾರ ದೊರೆಯದು; ಅದಕ್ಕಾಗಿ ಹುಲಿಯ ಭಾವವನ್ನು ಆರೋಪಿಸಿಕೊಂಡು ಅವಿದ್ಯೆಯನ್ನು ನುಂಗಿಬಿಡುತ್ತಿದ್ದೆ.

"ವೇದ ಮತದ ಸಾಧನೆ ಸಮಯದಲ್ಲಿ ಸನ್ಯಾಸ ಸ್ವೀಕರಿಸಿದೆ. ಆಗ ಮುಖಮಂಟಪದಲ್ಲೇ ಇರುತ್ತಿದ್ದೆ. ಹೃದೂಗೆ ಹೇಳುತ್ತಿದ್ದೆ: 'ನಾನು ಸನ್ಯಾಸಿಯಾಗಿದೇನೆ. ಆದ್ದರಿಂದ ನಾನು ಇಲ್ಲೇ ಊಟಮಾಡುತ್ತೇನೆ.'

"ಭಗವತಿಯ ಎದುರು ಪ್ರತಿಜ್ಞೆಮಾಡಿದೆ, ಭಗವಂತನ ದರ್ಶನ ದೊರೆಯದಿದ್ದ ಪಕ್ಷದಲ್ಲಿ ಕತ್ತು ಕೊಯ್ದುಕೊಂಡುಬಿಡುತ್ತೇನೆ ಎಂದು. ಭಗವತಿಗೆ ಹೇಳಿದೆ: 'ಹೇ ತಾಯೆ, ನಾನೊಬ್ಬ ಮೂರ್ಖ. ನೀನು ನನಗೆ ತಿಳಿಸಿಕೊಡು ವೇದ, ಪುರಾಣ, ತಂತ್ರ ಇವೇ ಮೊದಲಾದ ಶಾಸ್ತ್ರಗಳಲ್ಲಿ

1. ನರಿ ಭಗವತಿ ಕಾಳಿಯ ಸಹಚರ ಪ್ರಾಣಿ ಎಂದು ತಾಂತ್ರಿಕ ಪೂಜೆಯ ಸಮಯದಲ್ಲಿ ಅದಕ್ಕೆ ಆಹಾರ ಕೊಡುತ್ತಾರೆ.

ಏನೇನಿದೆ ಎಂಬುದನ್ನ. ಭಗವತಿ ಹೇಳಿದಳು: 'ವೇದಾಂತದ ಸಾರ ಬ್ರಹ್ಮ ಸತ್ಯ, ಜಗತ್ತು ಮಿಥ್ಯೆ.' ವೇದದ ಸಚ್ಚಿದಾನಂದ ಬ್ರಹ್ಮನೇ, ತಂತ್ರದ ಸಚ್ಚಿದಾನಂದ ಶಿವ, ಪುರಾಣದ ಸಚ್ಚಿದಾನಂದ ಕೃಷ್ಣ. ಗೀತೆ ಎಂದು ಹತ್ತು ಸಲ ಉಚ್ಚರಿಸಿದರೆ ಅದು ಏನಾಗಿ ಕೇಳಿಬರುವುದೊ ಅದೇ ಅದರ ಸಾರ. ಎಂದರೆ 'ತ್ಯಾಗಿ! ತ್ಯಾಗಿ!' ಆಗು ಎಂಬುದೇ.

"ಯಾವಾಗ ಭಗವಂತನ ಸಾಕ್ಷಾತ್ಕಾರ ದೊರೆಯುತ್ತದೊ ಆಗ ವೇದ, ವೇದಾಂತ, ಪುರಾಣ, ತಂತ್ರ ಇವೆಲ್ಲ ಎಷ್ಟೋಂದೊ ಕೆಳಗೆ ಬಿದ್ದು ಕೊಂಡಿರುತ್ತವೆ! (ಹಾಜರಾನಿಗೆ) ಸಮಾಧಿಯಲ್ಲಿ 'ಓಂ' ಎಂದು ಉಚ್ಚರಿಸ ಲಾಗೋದಿಲ್ಲ. ಏಕೆ ಹೀಗೆ? ಸಮಾಧಿಯಿಂದ ಬಹಳ ದೂರ ಕೆಳಕ್ಕೆ ಇಳಿದು ಬಾರದವರೆಗೆ 'ಓಂ' ಅಂತ ಉಚ್ಚರಿಸಲು ಸಾಧ್ಯವಾಗುತ್ತಿಲ್ಲ.

"ಭಗವಂತನ ಪ್ರತ್ಯಕ್ಷ ದರ್ಶನ ದೊರೆತನಂತರ ಏನೇನು ಅವಸ್ಥೆ ಉಂಟಾಗುತ್ತೆ ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಿದೆಯೊ ಅವೆಲ್ಲಾ ನನ ಗಾದುವು. ನಾನು ಬಾಲಕನ ಹಾಗೆ, ಉನ್ಮತ್ತನ ಹಾಗೆ, ಪಿಶಾಚಿಯ ಹಾಗೆ, ಜಡನ ಹಾಗೆ ವರ್ತಿಸಬೇಕಾಯಿತು.

"ಶಾಸ್ತ್ರಗಳಲ್ಲಿ ಹೇಳಿರುವ ಹಾಗೇ ದರ್ಶನಗಳಾಗುತ್ತಿದ್ದುವು. ಕೆಲವು ವೇಳೆ ಕಾಣುತ್ತಿತ್ತು, ಈ ಇಡೀ ಜಗತ್ತು ಬೆಂಕಿ ಕಿಡಿಗಳಿಂದ ತುಂಬಿ ತುಳು ಕಾಡುತ್ತಿರುವಂತೆ. ಇನ್ನು ಕೆಲವು ವೇಳೆ ಕಾಣುತ್ತಿತ್ತು, ಸುತ್ತಲೂ ಪಾದ-ರಸದ ಸರೋವರವಿರುವ ಹಾಗೆ. ಅದು ಸುಮ್ಮನೆ ಥಗಥಗಿಸುತ್ತಿರುತ್ತಿತ್ತು. ಮತ್ತೆ ಕೆಲವು ವೇಳೆ ಈ ಜಗತ್ತು ದ್ರವರೂಪದ ಬೆಳ್ಳಿಯ ಸಾಗರದ ಹಾಗೆ ಕಾಣುತ್ತಿತ್ತು. ಮತ್ತೂ ಕೆಲವು ವೇಳೆ ಕಾಣುತ್ತಿತ್ತು, ಸಕಲ ದಿಕ್ಕುಗಳೂ ಮೋಂಬತ್ತಿಯ ಬೆಳಕಿನಿಂದ ಬೆಳಗುತ್ತಿರುವಂತೆ. ನನ್ನ ಅನುಭವಗಳೆಲ್ಲಾ ಶಾಸ್ತ್ರಗಳು ಹೇಳುವುದರೊಡನೆ ಹೊಂದಿಕೊಂಡುವು.

"ಮತ್ತೆ ಅನುಭವವಾಯಿತು, ಭಗವಂತನೇ ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಆಗಿರುವಂತೆ. ಇದು ಚಾವಣಿಗೆ ಹತ್ತಿ ಮತ್ತೆ ಮೆಟ್ಟಲಸಾಲ ಮೂಲಕ ಕೆಳಕ್ಕೆ ಇಳಿದ ಹಾಗೆ. ಅನುಲೋಮ, ವಿಲೋಮ.[1]

---

1. ಅಂದರೆ, ಸೃಷ್ಟಿಯ ಸಮಯದಲ್ಲಿ ಭಗವಂತನೇ ಈ ಇಡೀ ಬ್ರಹ್ಮಾಂಡದ ರೂಪದಲ್ಲಿ ವ್ಯಕ್ತವಾಗುತ್ತಾನೆ; ಪ್ರಳಯಕಾಲದಲ್ಲಿ ಆತನಲ್ಲೇ ಈ ನಾಮರೂಪಾತ್ಮಕ ಜಗತ್ತು ಲಯವಾಗಿಬಿಡುತ್ತದೆ.

"ಓ, ಆಗ ಭಗವಂತ ನನ್ನನ್ನು ಎಂಥ ಅವಸ್ಥೆಯಲ್ಲಿ ಇಟ್ಟಿದ್ದ! ಒಂದು ಅನುಭವ ಆಗುವುದರೊಳಗೇ ಇನ್ನೊಂದು ಕಾದಿರುತ್ತಿತ್ತು. ಇದು, ಬತ್ತ ಕುಟ್ಟೋ ಏತದ ಚಲನೆಯಂತೆ ನಡೆಯುತ್ತಿತ್ತು—ಒಂದು ತುದಿ ಕೆಳಕ್ಕೆ ಹೋಯಿತು ಎಂದರೆ, ಮತ್ತೊಂದು ತುದಿ ಮೇಲಕ್ಕೆ ಹೋಗಿಬಿಡುವ ಹಾಗೆ.

"ನಾನು ಅಂತರ್ಮುಖನಾದಾಗಲೂ, ಅಂದರೆ ಸಮಾಧಿಸ್ಥನಾದಾಗಲೂ ಭಗವಂತನನ್ನೇ ನೋಡುತ್ತಿದ್ದೆ; ಅನಂತರ ಮನಸ್ಸು ಬಾಹ್ಯ ಜಗತ್ತಿನ ಮಟ್ಟಕ್ಕೆ ಇಳಿದಾಗಲೂ ಅದೇ ಭಗವಂತನನ್ನ ನೋಡುತ್ತಿದ್ದೆ. ಕನ್ನಡಿಯ ಮುಂಭಾಗದಲ್ಲಿ ನೋಡಿದರೂ ಭಗವಂತನೇ ಕಾಣುತ್ತಿದ್ದ; ಅದರ ಹಿಂಭಾಗದಲ್ಲಿ ನೋಡಿದರೂ ಅದೇ ಭಗವಂತ ಕಾಣುತ್ತಿದ್ದ."

ಭಕ್ತರೆಲ್ಲರೂ ಆಶ್ಚರ್ಯಚಕಿತರಾಗಿ ಪರಮಹಂಸರ ಈ ಮಾತುಗಳನ್ನು ಕೇಳುತ್ತಿದಾರೆ.

(ಮುಖ್ಯೋಪಾಧ್ಯಾಯ ಸೋದರರಿಗೆ) "ಕ್ಯಾಪ್ಟೆನ್‌ದು ನಿಜವಾದ ಸಾಧಕನ ಅವಸ್ಥೆ. ಐಶ್ವರ್ಯವಿತ್ತು ಎಂದರೆ ಆಸಕ್ತನಾಗಲೇ ಬೇಕು ಎಂಬುದೇನಿಲ್ಲ. ಶಂಭುಮಲ್ಲಿಕ ಹೇಳುತ್ತಿದ್ದ ಹೃದೂಗೆ: 'ಹೃದೂ, ನಾನು ಗಂಟು ಮೂಟೆ ಎಲ್ಲ ಕಟ್ಟಿ ಸಿದ್ಧನಾಗಿ ಕುಳಿತಿದೇನೆ.' ಅದಕ್ಕೆ ನಾನು ಹೇಳಿದೆ: 'ದೇವರ ದಯೆಯಿಂದ ಹಾಗಾಗದಿರಲಿ! ಏನು ಅವಲಕ್ಷಣದ ಮಾತು ನಿನ್ನ ಬಾಯಿಂದ?' ಶಂಭುಮಲ್ಲಿಕ ಉತ್ತರವಿತ್ತ: 'ಅದು ಹಾಗಲ್ಲ. ದಯವಿಟ್ಟು ಹರಸಿ, ನಾನು ನನ್ನ ಸ್ವತ್ತನ್ನೆಲ್ಲ ಬಿಸಾಡಿಬಿಟ್ಟು ಭಗವಂತನ ಕಡೆಗೆ ಹೋಗುವ ಹಾಗೆ.'

"ಭಗವದ್ಭಕ್ತರಾದವರು ಸ್ವಲ್ಪವೂ ಹೆದರಬೇಕಾಗಿಲ್ಲ. ಭಕ್ತರು ಭಗವಂತನ ಆತ್ಮೀಯರು. ಆತ ಅವರನ್ನು ಎಳೆದುಕೊಂಡುಬಿಡುತ್ತಾನೆ. ದುರ್ಯೋಧನನೇ ಮೊದಲಾದ ಕೌರವರನ್ನ ಗಂಧರ್ವರು ಬಂಧಿಸಿದಾಗ ಯುಧಿಷ್ಠಿರ ಹೋಗಿ ಬಿಡಿಸಿದ. ಆಗ ಯುಧಿಷ್ಠಿರ ಹೇಳಿದ: 'ಸ್ವಬಾಂಧವರಿಗೆ ಹಾಗೆ ಆಯಿತು ಎಂದರೆ, ಅದು ನಮಗೇ ಕಳಂಕ ತರುತ್ತದೆ.'"

ಘಂಟೆ ರಾತ್ರಿ ಒಂಬತ್ತು. ಮುಖ್ಯೋಪಾಧ್ಯಾಯ ಸೋದರರು ಮನೆಗೆ ಹಿಂದಿರುಗಲು ಸಿದ್ಧವಾಗುತ್ತಿದಾರೆ. ಪರಮಹಂಸರು ಮಂಚದಿಂದಿಳಿದು ಕೊಠಡಿ ಮತ್ತು ವರಾಂಡದಲ್ಲಿ ಸುತ್ತಾಡುತ್ತಿದಾರೆ. ವಿಷ್ಣುದೇವಾಲಯದಲ್ಲಿ ಹಾಡುತ್ತಿದ್ದ ಕೀರ್ತನೆ ಕಿವಿಗೆ ಬೀಳುತ್ತಿದೆ. ಒಬ್ಬ ಭಕ್ತ

ಹೇಳಿದ, ಆ ಹಾಡುತ್ತಿರುವವರ ಗುಂಪಿನಲ್ಲಿ ಲಾಟು, ಹರೀಶ ಕೂಡ ಇದಾರೆ ಎಂದು.

ಪರಮಹಂಸರು ಮತ್ತು ಭಕ್ತರು ವಿಷ್ಣುದೇವಾಲಯಕ್ಕೆ ಬಂದು ದೇವರಿಗೆ ಸಾಷ್ಟಾಂಗಪ್ರಣಾಮ ಮಾಡುತ್ತಿದಾರೆ. ಕಾಳೀದೇವಾಲಯದಲ್ಲಿ ಕೆಲಸಮಾಡುತ್ತಿದ್ದ ಬ್ರಾಹ್ಮಣರು, ಅಂದರೆ ಅರ್ಚಕರು, ಪರಿಚಾರಕರು, ಅಡಿಗೆಯವರು ಮತ್ತು ಸೇವಕರು ಎಲ್ಲರೂ ಕೂಡಿ ನಾಮಸಂಕೀರ್ತನೆ ಮಾಡುತ್ತಿದಾರೆ. ಪರಮಹಂಸರು ಅಲ್ಲೆ ನಿಂತುಕೊಂಡು ಉತ್ಸಾಹಕೊಡುತ್ತಿದಾರೆ. ಹಿಂದಿರುಗಿ ತಮ್ಮ ಕೊಠಡಿಗೆ ಬರುತ್ತ ಭಕ್ತರಿಗೆ ಹೇಳುತ್ತಿದಾರೆ: "ನೋಡಿ, ಇವರಲ್ಲಿ ಕೆಲವರು ಪಾತ್ರೆ ಪದಾರ್ಥಗಳನ್ನು ಬೆಳಗಿಕೊಡುತ್ತಾರೆ, ಇನ್ನು ಕೆಲವರು ವೇಶ್ಯೆಯರ ಮನೆಗೆ ಹೋಗುತ್ತಾರೆ."

ಪರಮಹಂಸರು ಕೊಠಡಿಗೆ ಬಂದು ಚಿಕ್ಕಮಂಚದ ಮೇಲೆ ಕುಳಿತಿದಾರೆ. ವಿಷ್ಣುದೇವಾಲಯದಲ್ಲಿ ಸಂಕೀರ್ತನೆ ಮಾಡುತ್ತಿದ್ದವರು ಬಂದು ಪರಮಹಂಸರಿಗೆ ಪ್ರಣಾಮಮಾಡುತ್ತಿದಾರೆ. ಪರಮಹಂಸರು ಅವರಿಗೆ ಹೇಳುತ್ತಿದಾರೆ: "ಹಣಕ್ಕಾಗಿ ಜನ ಬೆವರು ಸುರಿಸೋ ಹಾಗೆ ಭಗವನ್ನಾಮ ಗುಣಕೀರ್ತನೆ ಮಾಡಿ ಬೆವರು ಸುರಿಸಬೇಕು. ಯೋಚನೆಮಾಡಿದೆ, ನಿಮ್ಮ ಜೊತೆಗೆ ಸೇರಿ ನರ್ತಿಸೋಣ ಅಂತ; ಆದರೆ ನೀವೇ ಹಾಡೋದು-ಗೀಡೋದು, ನರ್ತನ-ಗಿರ್ತನ ಎಲ್ಲವನ್ನು ಬಹಳ ಚೆನ್ನಾಗಿ ಮಾಡುತ್ತಿದ್ದಿರಿ. ಮಸಾಲೆ-ಗಿಸಾಲೆ, ಒಗ್ಗರಣೆ-ಗಿಗ್ಗರಣೆ ಎಲ್ಲವನ್ನೂ ಬಹಳ ಚೆನ್ನಾಗಿ ಹಾಕಿಬಿಟ್ಟಿದ್ದಿರಿ. ಅದಕ್ಕೆ ನಾನು ಸೇರಿಸುವುದೇನೂ ಉಳಿದುಕೊಂಡಿರಲಿಲ್ಲ. ಆಗಾಗ ಈ ರೀತಿಯಾಗಿ ನೀವು ನಾಮಗುಣಕೀರ್ತನೆ ಮಾಡುವುದು ಬಹಳ ಒಳ್ಳೆಯದು."

ಮುಖ್ಯೋಪಾಧ್ಯಾಯ ಸೋದರರು ಪರಮಹಂಸರಿಗೆ ಪ್ರಣಾಮ ಮಾಡಿ ಅವರಿಂದ ಬೀಳ್ಕೊಳ್ಳುತ್ತಿದಾರೆ. ಅವರ ಗಾಡಿ ಸಿದ್ಧವಾಗಿ ಕೊಠಡಿಯ ಉತ್ತರ ವರಾಂಡದ ಹತ್ತಿರ ನಿಂತಿದೆ. ಪರಮಹಂಸರು ಉತ್ತರ ದಿಕ್ಕನ್ನು ನೋಡುತ್ತ ಅದೇ ವರಾಂಡದಲ್ಲಿ ನಿಂತಿದಾರೆ. ಅವರ ಎಡ ಭಾಗದಲ್ಲಿ ಗಂಗೆ ಹರಿಯುತ್ತಿದಾಳೆ; ಮುಂದುಗಡೆ ನಹಬತ್‌ಖಾನೆ, ಪುಷ್ಪೋದ್ಯಾನ ಮತ್ತು ಕುಟೀರ; ಬಲಭಾಗದಲ್ಲಿ ಹೆಬ್ಬಾಗಿಲವರೆಗೆ ಹಬ್ಬಿದೆ ಸುಂದರ ರಸ್ತೆ. ಇಂದು ಅಮಾವಾಸ್ಯೆಯಾದ್ದರಿಂದ, ಎಲ್ಲೆಲ್ಲೂ ಅಂಧಕಾರ. ಒಬ್ಬ ಭಕ್ತ ಲಾಟೀನು ಹಿಡಿದು ನಿಂತಿದಾನೆ. ಭಕ್ತರೆಲ್ಲರೂ ಪರಮಹಂಸರಿಗೆ ಪ್ರಣಾಮಮಾಡಿ ಒಬ್ಬೊಬ್ಬರಾಗಿ ಅವರಿಂದ ಬೀಳ್ಕೊಳ್ಳು

ತ್ತಿದಾರೆ. ಕುದುರೆ ಎಳೆಯಲಾರದಷ್ಟು ಜನ ಗಾಡಿಯಲ್ಲಿ ತುಂಬಿರುವಂತೆ ಕಾಣುತ್ತಿದೆ. ಪರಮಹಂಸರು ಹೇಳುತ್ತಿದಾರೆ: "ಕುದುರೆ ಅಷ್ಟೊಂದು ಜನರನ್ನು ಎಳೆಯಬಲ್ಲದೆ?"

ಪರಮಹಂಸರು ಇನ್ನೂ ನಿಂತುಕೊಂಡೇ ಇದಾರೆ. ಭಕ್ತರು ಆ ಭಕ್ತವತ್ಸಲ ಮೂರ್ತಿಯನ್ನು ನೋಡುತ್ತ ನೋಡುತ್ತ ಕಲ್ಕತ್ತದ ಕಡೆ ಮುಂದುವರಿಯುತ್ತಿದಾರೆ.

೨೧ನೆ ಸೆಪ್ಟೆಂಬರ್ ೧೮೮೪, ಆಶ್ವೀಜ ಶುಕ್ಲ ಬಿದಿಗೆ, ಭಾನುವಾರ.

ಪರಮಹಂಸರ ಕೊಠಡಿಯಲ್ಲಿ ಅನೇಕ ಜನ ಭಕ್ತರು ಬಂದು ಸೇರಿ ದಾರೆ—ರಾಮ, ಮಹೇಂದ್ರಮುಖ್ಯೋಪಾಧ್ಯಾಯ, ಚುನಿಲಾಲ, ಮಾಸ್ಟರ್ ಇವರೇ ಮೊದಲಾದವರು. ಚುನಿಲಾಲ ಈಗತಾನೆ ಬೃಂದಾವನದಿಂದ ಹಿಂದಿರುಗಿಬಂದಿದಾನೆ. ಬಲರಾಮ ಮತ್ತು ರಾಖಾಲರೊಡನೆ ಈತನೂ ಬೃಂದಾವನಕ್ಕೆ ಹೋಗಿದ್ದ. ರಾಖಾಲ, ಬಲರಾಮ ಇನ್ನೂ ಅಲ್ಲೆ ಇದಾರೆ. ನಿತ್ಯಗೋಪಾಲನೂ ಬೃಂದಾವನದಲ್ಲೆ ಇದಾನೆ. ಪರಮಹಂಸರು ಚುನಿ-ಲಾಲನೊಡನೆ ಬೃಂದಾವನದ ಸಂಬಂಧವಾಗಿ ಮಾತುಕತೆ ಆಡುತ್ತಿದಾರೆ.

ಶ್ರೀರಾಮಕೃಷ್ಣರು: "ರಾಖಾಲನ ಆರೋಗ್ಯ ಹೇಗಿದೆ?"

ಚುನಿಲಾಲ: "ಈಗ ಆತ ಆರೋಗ್ಯದಿಂದಿದಾನೆ."

ಶ್ರೀರಾಮಕೃಷ್ಣರು: "ನಿತ್ಯಗೋಪಾಲ ಹಿಂದಿರುಗುವುದಿಲ್ಲ?"

ಚುನಿಲಾಲ: ಆತ ಇನ್ನೂ ಅಲ್ಲೆ ಇದ್ದ."

ಶ್ರೀರಾಮಕೃಷ್ಣರು: "ನಿನ್ನ ಮನೆಯವರನ್ನ ಯಾರು ಹಿಂದಿರುಗಿ ಕರೆದುಕೊಂಡುಬರುತ್ತಾರೆ?"

ಚುನಿಲಾಲ: "ಬಲರಾಮ ಹೇಳಿದಾನೆ, ಒಳ್ಳೆಯವರನ್ನ ಜೊತೆ-ಮಾಡಿ ಕಳುಹಿಸುವುದಾಗಿ. ಅವರ ಹೆಸರು ತಿಳಿಸಲಿಲ್ಲ."

ಪರಮಹಂಸರು ಈಗ ಮಹೇಂದ್ರಮುಖ್ಯೋಪಾಧ್ಯಾಯನೊಡನೆ ನಾರಾಯಣ ಎಂಬ ಹೆಸರಿನ ಒಬ್ಬ ಹುಡುಗನ ಸಂಬಂಧವಾಗಿ ಮಾತಾ ಡುತ್ತಿದಾರೆ. ಆತ ಸ್ಕೂಲಿನಲ್ಲಿ ಓದುತ್ತಿದಾನೆ. ವಯಸ್ಸು ಹದಿನಾರೊ, ಹದಿನೇಳೊ. ಪರಮಹಂಸರ ಹತ್ತಿರಕ್ಕೆ ಆಗಾಗ ಬರುತ್ತಿದಾನೆ. ಅವರು ಆತನನ್ನು ಬಹಳವಾಗಿ ಪ್ರೀತಿಸುತ್ತಿದಾರೆ.

ಶ್ರೀರಾಮಕೃಷ್ಣರು: "ಬಹಳ ಸರಳ, ಅಲ್ಲವೆ?"

ಸರಳ ಎಂಬ ಪದ ಅವರ ಬಾಯಿಂದ ಹೊರಟಿತೊ ಇಲ್ಲವೊ ಅವರ ಮುಖ ಆನಂದದಿಂದ ನಲಿಯಲಾರಂಭಿಸಿತು.

ಮಹೇಂದ್ರ: "ಹೌದು, ಬಹಳ ಸರಳ."

ಶ್ರೀರಾಮಕೃಷ್ಣರು: "ಅಂದು ಆತನ ತಾಯಿ ಇಲ್ಲಿಗೆ ಬಂದಿದ್ದಳು. ಆಕೆಯಲ್ಲಿ ಅಭಿಮಾನವಿರುವುದನ್ನು ನೋಡಿ ನನಗೆ ಸ್ವಲ್ಪ ಹೆದರಿಕೆಯಾಯಿತು. ನೀವೆಲ್ಲರೂ ಇಲ್ಲಿಗೆ ಬರುತ್ತಿರುವುದನ್ನ, ಕ್ಯಾಪ್ಟೆನ್ ಇಲ್ಲಿಗೆ ಬರುತ್ತಿರುವುದನ್ನ ಅಂದು ಆಕೆ ನೋಡಿದಳು. ಆಗ ಆಕೆಯ ಮನಸ್ಸಿಗೆ ತಟ್ಟಿರಬೇಕು, ಕೇವಲ ತಾನು ಮತ್ತು ತನ್ನ ಮಗ ನಾರಾಣನೇ ಅಲ್ಲ ಇಲ್ಲಿಗೆ ಬರುತ್ತಿರೋರು! (ಎಲ್ಲರೂ ನಗುತ್ತಿದಾರೆ.) ಇಲ್ಲಿ ಸ್ವಲ್ಪ ಕಲ್ಲುಸಕ್ಕರೆ ಇತ್ತು. ಅದನ್ನು ನೋಡಿ ಹೇಳಿದಳು, ಬಹಳ ಸೊಗಸಾದ ಕಲ್ಲುಸಕ್ಕರೆ. ಆಗ ಆಕೆಗೆ ಗೊತ್ತಾಯಿತು, ಇಲ್ಲಿ ತಿಂಡಿ ತೀರ್ಥಗಳಿಗಾಗಿ ಯಾವ ಅಭಾವವೂ ಇಲ್ಲ. ಆಕೆಯ ಎದುರಿಗೇ ಬಾಬುರಾಮನಿಗೆ ನಾನು ಹೇಳಿದೆ ಅಂತ ಕಾಣುತ್ತೆ, ತನಗಾಗಿ ಮತ್ತು ನಾರಾಣನಿಗಾಗಿ ಸ್ವಲ್ಪ ಸಂದೇಶ ಇಟ್ಟುಕೊಳ್ಳುವಂತೆ. ಗಣುವಿನ ತಾಯಿ ನನಗೆ ತಿಳಿಸಿದಳು, ನಾರಾಣ ಇಲ್ಲಿಗೆ ಬರುವುದಕ್ಕಾಗಿ ದೋಣಿ ಬಾಡಿಗೆಗಾಗಿ ತನ್ನ ತಾಯನ್ನ ಯಾವಾಗಲೂ ಪೀಡಿಸುತ್ತಲೇ ಇರುತ್ತಾನೆ. ನಾರಾಣನ ತಾಯಿ ನನಗೆ ಹೇಳಿದಳು: 'ನೀವು ನಾರಾಣನಿಗೆ ದಯವಿಟ್ಟು ಮದುವೆ ಮಾಡಿಕೊಳ್ಳುವಂತೆ ಹೇಳಿ.' ಆದಕ್ಕೆ ನಾನು ಹೇಳಿದೆ: 'ಇದೆಲ್ಲ ಹಣೆಯಲ್ಲಿ ಬರೆದಿದ್ದಂತೆ ಆಗುತ್ತದೆ.' ನಾನೇಕೆ ಇದಕ್ಕೆಲ್ಲ ತಲೆ ಹಾಕಲಿ? (ಎಲ್ಲರೂ ನಗುತ್ತಿದಾರೆ.) ಆತನಿಗೆ ಓದು ಬರಹದ ಕಡೆ ಅತಿಯಾಗಿ ಮನಸ್ಸಿಲ್ಲ. ಅದಕ್ಕಾಗಿ ಆತನ ತಾಯಿ ನನಗೆ ಹೇಳಿದಳು: 'ಸ್ವಲ್ಪ ಚೆನ್ನಾಗಿ ಓದುವಂತೆ ಆತನಿಗೆ ಹೇಳಿ.' ನಾನು ಆಗ ನಾರಾಣನಿಗೆ ಹೇಳಿದೆ: 'ಸ್ವಲ್ಪ ಚೆನ್ನಾಗಿ ಓದು' ಅಂತ. ಮತ್ತೆ ಆತನ ತಾಯಿ ನನಗೆ ಹೇಳಿದಳು: ''ಸ್ವಲ್ಪ ಗದರಿಸಿ ಹೇಳಿ.' (ಎಲ್ಲರೂ ನಗುತ್ತಿದಾರೆ.)

(ಚುನಿಲಾಲನಿಗೆ) "ಏನು, ಇಲ್ಲಿಗೆ ಗೋಪಾಲ ಬರುತ್ತಿಲ್ಲವಲ್ಲ ಏಕೆ?"

ಚುನಿಲಾಲ: "ಆತನಿಗೆ ಆಮಶಂಕೆಯಾಗಿದೆ."

ಶ್ರೀರಾಮಕೃಷ್ಣರು: "ಔಷಧ ತೆಗೆದುಕೊಳ್ಳುತ್ತಿದಾನೆಯೆ?"

ಶ್ರೀರಾಮಕೃಷ್ಣರು ಇಂದು ಸ್ಟಾರ್ ಥಿಯೇಟರಿನಲ್ಲಿ ಚೈತನ್ಯಲೀಲೆ

ಯನ್ನು ನೋಡಲು ಕಲ್ಕತ್ತಕ್ಕೆ ಹೋಗಲಿದಾರೆ. ಮಹೇಂದ್ರಮುಖ್ಯೋಪಾ-ಧ್ಯಾಯ ಅವರನ್ನು ತನ್ನ ಗಾಡಿಯಲ್ಲಿ ಕರೆದುಕೊಂಡುಹೋಗುತ್ತಾನೆ. ಎಲ್ಲಿ ಕುಳಿತುಕೊಂಡರೆ ಚೆನ್ನಾಗಿ ಕಾಣುತ್ತದೆ ಎಂಬುದರ ವಿಷಯವಾಗಿ ಈಗ ಮಾತುಕತೆ ನಡೆಯುತ್ತಿದೆ. ಒಂದು ರೂಪಾಯಿನ ಸೀಟಿನಲ್ಲಿ ಕುಳಿತು ಕೊಂಡರೆ ಚೆನ್ನಾಗಿ ನೋಡಬಹುದು ಎಂದು ಒಬ್ಬ ಭಕ್ತ ಹೇಳಿದ. ರಾಮ ಹೇಳಿದ: "ಅವರು ಅಲ್ಲಿಗೆ ಹೋಗಿ ಏಕೆ ಕುಳಿತುಕೊಳ್ಳಬೇಕು? ಒಂದು ಬಾಕ್ಸ್‌ನಲ್ಲಿ ಕೂರಿಸುತ್ತೇನೆ." ಪರಮಹಂಸರು ನಗುತ್ತಿದಾರೆ. ಒಬ್ಬ ಭಕ್ತ ಹೇಳಿದ, ಈ ನಾಟಕದಲ್ಲಿ ವೇಶ್ಯೆಯರೂ ಅಭಿನಯಿಸುತ್ತಾರೆ. ಚೈತನ್ಯ ದೇವ, ನಿತಾಯಿ ಮೊದಲಾದವರ ಪಾರ್ಟನ್ನು ಅವರು ವಹಿಸುತ್ತಾರೆ.

ಶ್ರೀರಾಮಕೃಷ್ಣರು ಭಕ್ತರಿಗೆ: "ಅವರನ್ನು ಸಾಕ್ಷಾತ್ ಆನಂದ-ಮಯಿಯರೇ ಎಂದು ನೋಡುತ್ತೇನೆ. ಅವರಲ್ಲಿ ಒಬ್ಬಳು ಚೈತನ್ಯದೇವನ ಪಾರ್ಟು ವಹಿಸಿಬಿಟ್ಟಾಕ್ಷಣಕ್ಕೆ ಮುಳುಗಿಹೋಗಿಬಿಡುವುದೇನು? ಕೃತಕ ಸೀತಾಫಲದ ಹಣ್ಣು ನಿಜವಾದ ಸೀತಾಫಲದ ಉದ್ದೀಪನವನ್ನು ತರುತ್ತದೆ. ಒಬ್ಬ ಕೃಷ್ಣಭಕ್ತ ಒಂದು ರಸ್ತೆಯಲ್ಲಿ ಹೋಗುತ್ತಿದ್ದಾಗ ನೋಡಿದ ಸುತ್ತಲೂ ಅನೇಕ ಗೊಬ್ಬಳಿ ಮರಗಳಿರುವುದನ್ನ. ಆ ದೃಶ್ಯ ಒಡನೆಯೇ ಆತನನ್ನು ಭಾವಾವಿಷ್ಟನನ್ನಾಗಿ ಮಾಡಿಬಿಟ್ಟಿತು. ಆತನ ಜ್ಞಾಪಕಕ್ಕೆ ಬಂದಿತು, ಶ್ಯಾಮಸುಂದರನ ದೇವಾಲಯದ ಉದ್ಯಾನವನದ ಗುದ್ದಲಿಗಳಿಗೆ ಆ ಮರದ ಕಾವುಗಳನ್ನು ಉಪಯೋಗಿಸುತ್ತಿರುವುದು. ಆ ಮರಗಳು ಆತನಿಗೆ ಕೃಷ್ಣನ ನೆನಪನ್ನು ತಂದುಬಿಟ್ಟುವು. ಒಮ್ಮೆ ನನ್ನನ್ನು ಕಲ್ಕತ್ತದ ಮೈದಾನದಲ್ಲಿ ಆಕಾಶಬುಟ್ಟಿಗಳ ಹಾರಾಟವನ್ನು ನೋಡಿಬರಲು ಕರೆದುಕೊಂಡುಹೋಗಿ ದ್ದರು. ಅಲ್ಲಿ ಒಬ್ಬ ಆಂಗ್ಲೇಯರ ಹುಡುಗ ತ್ರಿಭಂಗಿಯಾಗಿ ನಿಂತು ಒಂದು ಮರವನ್ನು ಒರಗಿಕೊಂಡಿದ್ದ ದೃಶ್ಯ ನನ್ನ ಕಣ್ಣಿಗೆ ಬಿತ್ತು. ಅದನ್ನು ನೋಡಿದೊಡನೇ ನನಗೆ ಕೃಷ್ಣನ ಉದ್ದೀಪನವಾಗಿಬಿಟ್ಟಿತು; ಸಮಾಧಿಸ್ಥ ನಾಗಿಬಿಟ್ಟೆ.

"ಒಮ್ಮೆ ಚೈತನ್ಯದೇವ ಒಂದು ಹಳ್ಳಿಯ ಮಾರ್ಗವಾಗಿ ಹೋಗು ತ್ತಿದ್ದ. ಯಾರೊ ಹೇಳಿದರು, ಆ ಹಳ್ಳಿಯ ಮಣ್ಣಿನಿಂದ ಮೃದಂಗವನ್ನು ತಯಾರುಮಾಡುತ್ತಾರೆ ಎಂದು. ಮೃದಂಗ ಎಂಬ ಶಬ್ದ ಕಿವಿಗೆ ಬಿದ್ದೊಡನೇ ಸಂಕೀರ್ತನೆಯ ನೆನಪು ಬಂದು ಭಾವಾವಿಷ್ಟನಾಗಿಬಿಟ್ಟ.

"ರಾಧೆ ಮೇಘವನ್ನೊ, ನವಿಲು ಕಂಠವನ್ನೊ ನೋಡಿದಳು ಎಂದರೆ,

ಆಕೆಯ ಕೈಯಲ್ಲಿ ಸುಮ್ಮನಿರಲಾಗುತ್ತಿರಲಿಲ್ಲ. ಆಕೆಗೆ ಶ್ರೀಕೃಷ್ಣನ ಉದ್ದೀಪನವಾಗಿಬಿಟ್ಟು ಬಾಹ್ಯಜ್ಞಾನಶೂನ್ಯಳಾಗಿಬಿಡುತ್ತಿದ್ದಳು.''

ಪರಮಹಂಸರು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಈಗ ಮಾತುಕತೆಯಾಡುತ್ತಿದಾರೆ.

ಶ್ರೀರಾಮಕೃಷ್ಣರು: ''ರಾಧೆಗೆ ಮಹಾಭಾವ ಉಂಟಾಗಿತ್ತು. ಗೋಪಿಯರ ಪ್ರೇಮದ ಹಿನ್ನೆಲೆಯಲ್ಲಿ ಯಾವ ಕಾಮನೆಯೂ ಇರಲಿಲ್ಲ. ನಿಜವಾದ ಭಕ್ತ ಭಗವಂತನಿಂದ ಏನನ್ನೂ ಅಪೇಕ್ಷಿಸುವುದಿಲ್ಲ. ಕೇವಲ ಶುದ್ಧ ಭಕ್ತಿಗಾಗಿ ಪ್ರಾರ್ಥನೆಮಾಡುತ್ತಾನೆ. ಯಾವ ಶಕ್ತಿಯೇ ಆಗಲಿ, ಅಥವಾ ಸಿದ್ಧಿಯೇ ಆಗಲಿ ಯಾವುದೂ ಆತನಿಗೆ ಬೇಕೆನಿಸದು.

''ಸಿದ್ಧಿಗಳಿಂದ ಕೂಡಿದ್ದರೆ ಅನೇಕ ತೊಂದರೆಗಳಿಗೆ ಈಡಾಗಬೇಕಾಗಿ ಬರುತ್ತದೆ. ತೋತಾಪುರಿ ಇದನ್ನು ಒಂದು ಕಥೆಯ ಮೂಲಕ ನನಗೆ ಮುಂದಟ್ಟುಮಾಡಿಸಿದ. ಒಮ್ಮೆ ಒಬ್ಬ ಸಿದ್ಧ ಸಮುದ್ರದ ಬಳಿ ಕುಳಿತುಕೊಂಡಿದ್ದ. ಇದ್ದಕ್ಕಿದ್ದಹಾಗೆ ಬಿರುಗಾಳಿ ಎದ್ದಿತು. ಅದು ಆತನಿಗೆ ಕಿರಿಕಿರಿಯನ್ನುಂಟುಮಾಡಿತು; ಆದ್ದರಿಂದ ಆತ ಹೇಳಿದ: 'ಈ ಬಿರುಗಾಳಿ ನಿಂತುಹೋಗಲಿ.' ಆತನ ಇಚ್ಛೆ ನಡೆಯದೆಹೋಗುವ ಹಾಗಿಲ್ಲ. ಆ ಸಮಯದಲ್ಲಿ ಒಂದು ಹಡಗು ಎಲ್ಲಾ ಪಟಗಳನ್ನೂ ಕಟ್ಟಿ ಪೂರ್ಣವೇಗದಿಂದ ಹೋಗುತ್ತಿತ್ತು. ಗಾಳಿ ಯಾವಾಗ ಥಟ್ಟನೆ ನಿಂತುಹೋಯಿತೊ ಒಡನೇ ಹಡಗು ಮಗುಚಿಕೊಂಡು ಮುಳುಗಿಹೋಯಿತು. ಅದರೊಡನೆ ಹಡಗಿನಲ್ಲಿದ್ದವರೂ ನೀರುಪಾಲಾದರು. ಅಷ್ಟು ಜನ ನೀರುಪಾಲಾದುದರ ಪಾಪ ಆ ಸಿದ್ಧನ ತಲೆಯ ಮೇಲೆ ಬಂತು. ಆ ಪಾಪದ ದೆಸೆಯಿಂದ ಆತ ಸಿದ್ಧಿಗಳನ್ನೂ ಕಳೆದುಕೊಂಡ, ಜೊತೆಗೆ ಆತನಿಗೆ ನರಕ ಪ್ರಾಪ್ತಿಯೂ ದೊರೆಯಿತು.

''ಒಮ್ಮೆ ಒಬ್ಬ ಸಾಧುವಿಗೆ ದೊಡ್ಡದೊಡ್ಡ ಸಿದ್ಧಿಗಳು ದೊರೆತುಬಿಟ್ಟದ್ದರಿಂದ ಸ್ವಲ್ಪ ಅಹಂಕಾರ ಉಂಟಾಗಿಬಿಟ್ಟಿತ್ತು. ಆದರೂ ಆ ಸಾಧು ಬಹಳ ಒಳ್ಳೆಯವ ಮತ್ತು ತಪಸ್ವಿ ಕೂಡ. ಒಂದು ದಿನ ಭಗವಂತ ಇನ್ನೊಬ್ಬ ಸಾಧುವಿನ ವೇಷ ಧರಿಸಿ ಆತನನ್ನು ಸಮೀಪಿಸಿ ಹೇಳಿದ: 'ಮಹಾರಾಜ್, ಕೇಳಿದೇನೆ ತಮಗೆ ದೊಡ್ಡದೊಡ್ಡ ಸಿದ್ಧಿಗಳು ದೊರೆತಿವೆ ಅಂತ.' ಆ ಸಾಧು ಈ ಸಾಧುವನ್ನು ಬಹಳವಾಗಿ ಆದರಿಸಿ ಒಳ್ಳೆ ಆಸನದಲ್ಲಿ ಕೂರಿಸಿದ. ಆ ಸಮಯಕ್ಕೆ ಸರಿಯಾಗಿ ಒಂದು ಆನೆ ಪಕ್ಕದ ರಸ್ತೆ

ಯಲ್ಲಿ ಹೋಗುತ್ತಿತ್ತು. ಆಗ ಈ ಸಾಧು ಆ ಸಾಧುವನ್ನು ಕೇಳಿದ: 'ಮಹಾರಾಜ್, ನೀವು ಮನಸ್ಸು ಮಾಡಿದರೆ ಆ ಆನೆಯನ್ನು ಸಾಯಿಸಿಬಿಡ ಬಲ್ಲಿರಾ?' ಆ ಸಾಧು ಉತ್ತರವಿತ್ತ: 'ಹೌದು, ಸಾಧ್ಯ.' ಹೀಗೆಂದು ಹೇಳಿ ಒಂದು ಚಿಟಿಕೆ ಬೂದಿ ತೆಗೆದುಕೊಂಡು ಮಂತ್ರಿಸಿ ಆ ಆನೆಯ ಕಡೆ ಬಿಸಾಡಿದ. ಒಡನೇ ಆ ಆನೆ ಕೈಕಾಲು ಒದರುತ್ತ ಕೆಳಕ್ಕೆ ಉರುಳಿ ಸತ್ತು ಹೋಯಿತು. ಆಗ ಈ ಸಾಧು ಹೇಳಿದ: 'ನಿಮ್ಮಲ್ಲಿ ಎಂಥ ಅದ್ಭುತ ಶಕ್ತಿ! ಆನೆಯನ್ನು ಸಾಯಿಸೇಬಿಟ್ಟಿರಲ್ಲ!' ಆ ಸಾಧು ನಗಲಾರಂಭಿಸಿದ. ಆಗ ಈ ಸಾಧು ಕೇಳಿದ: 'ಒಳ್ಳೇದು, ಆ ಆನೆಗೆ ಮತ್ತೆ ಜೀವ ಬರಿಸಬಲ್ಲಿರಾ?' ಆ ಸಾಧು ಉತ್ತರವಿತ್ತ: 'ಹೌದು. ಅದೂ ಸಾಧ್ಯ.' ಆತ ಇನ್ನೊಂದು ಚಿಟಿಕೆ ಮಂತ್ರಿಸಿದ ಬೂದಿಯನ್ನು ಆ ಆನೆಯ ಕಡೆ ಬಿಸಾಡಿದ. ಒಡನೆ ಆ ಆನೆ ದಡಮಡಗುಟ್ಟಿಕೊಂಡು ಎದ್ದುನಿಂತುಕೊಂಡಿತು. ಆಗ ಈ ಸಾಧು ಹೇಳಿದ: 'ನಿಮ್ಮಲ್ಲಿ ಅದ್ಭುತ ಶಕ್ತಿ ಇದೆ! ಆದರೆ ಒಂದು ಪ್ರಶ್ನೆ ಹಾಕ ಬೇಕೆಂದಿದೇನೆ. ಈಗ ನೀವು ಆ ಆನೆಯನ್ನು ಸಾಯಿಸಿದಿರಿ ಮತ್ತೆ ಅದಕ್ಕೆ ಜೀವ ಬರಿಸಿದಿರಿ. ಅದರಿಂದ ನಿಮಗೆ ಏನು ಉಪಕಾರ ಆದ ಹಾಗಾಯಿತು? ನಿಮಗೆ ಯಾವ ಉನ್ನತಿಯಾದರೂ ದೊರೆಯಿತೆ? ಅದ ರಿಂದ ನಿಮಗೆ ಭಗವಂತನ ಸಾಕ್ಷಾತ್ಕಾರವೇನಾದರೂ ದೊರೆಯಿತೆ?' ಹೀಗೆಂದು ಹೇಳಿ ಈ ಸಾಧು ಅಂತರ್ಧಾನನಾಗಿಬಿಟ್ಟ.

"ಧರ್ಮಮಾರ್ಗ ಬಹಳ ಸೂಕ್ಷ್ಮವಾದ್ದು. ಕಿಂಚಿತ್ ಕಾಮನೆ ಇದ್ದರೂ ಭಗವಂತನ ಸಾಕ್ಷಾತ್ಕಾರ ದೊರೆಯದು. ಸೂಜಿಗೆ ದಾರ ಪೋಣಿಸಬೇಕಾದರೆ, ದಾರದ ಕೊನೆಗೆ ಒಂದು ಚಿಕ್ಕ ಅಡ್ಡೆಳೆ ಅಂಟಿಕೊಂಡಿ ದ್ದರೂ ಸಾಧ್ಯವಾಗೋದಿಲ್ಲ.

"ಕೃಷ್ಣ ಅರ್ಜುನನಿಗೆ ಹೇಳಿದ: 'ಗೆಳೆಯ, ನೀನು ನನ್ನ ಸಾಕ್ಷಾತ್ಕಾರ ವನ್ನು ಪಡೆದುಕೊಳ್ಳಬೇಕೆಂದಿದ್ದರೆ, ಅಷ್ಟಸಿದ್ಧಿಗಳಲ್ಲಿ ಒಂದು ನಿನ್ನಲ್ಲಿ ಇದ್ದರೂ ಸಾಧ್ಯವಾಗೋದಿಲ್ಲ.' ಏಕೆ ಹೀಗೆ ಗೊತ್ತೆ? ಸಿದ್ಧಿ ಇತ್ತು ಎಂದರೆ, ಅಹಂಕಾರ ಉಂಟಾಗುತ್ತದೆ. ಅಹಂಕಾರ ಭಗವಂತನನ್ನು ಮರಸಿ ಬಿಡುತ್ತದೆ.

"ಒಮ್ಮೆ ಒಬ್ಬ ಶ್ರೀಮಂತ ಬಂದಿದ್ದ—ಮೆಳ್ಳೆಗಣ್ಣ. ಆತ ಹೇಳಿದ: 'ನೀವು ಪರಮಹಂಸರು ತಾನೆ, ಬಹಳ ಒಳ್ಳೆಯದು. ನೀವು ನನಗಾಗಿ ಒಂದು ಸ್ವಸ್ತ್ಯಯನ ಮಾಡಬೇಕು.' ಅವನದು ಎಂಥಾ ಹೀನಬುದ್ಧಿ!

ಆತ ನನ್ನನ್ನು 'ಪರಮಹಂಸ' ಅಂತ ಕರೆದೂ 'ಸ್ವಸ್ತ್ಯಯನ ಮಾಡ ಬೇಕು' ಅಂತ ಹೇಳಿದ್ದನ್ನು ನೋಡಿ! ಸ್ವಸ್ತ್ಯಯನದಿಂದ ಒಳ್ಳೆಯದನ್ನು ಮಾಡುವುದು—ಇದು ಸಿದ್ಧಿಯ ಕಾರ್ಯವೇ.

"ಅಹಂಕಾರವಿತ್ತು ಎಂದರೆ, ಭಗವಂತನ ಸಾಕ್ಷಾತ್ಕಾರ ದೊರೆ ಯದು. ಅಹಂಕಾರದ ಸ್ವರೂಪ ಗೊತ್ತೆ? ಅದು ಒಂದು ದಿಣ್ಣೆ ಇದ್ದ ಹಾಗೆ. ಅಲ್ಲಿ ಮಳೆಯ ನೀರು ಶೇಖರವಾಗಲಾರದು; ಕೆಳಕ್ಕೆ ಇಳಿದು ಬಂದುಬಿಡುತ್ತದೆ. ತಗ್ಗು ಪ್ರದೇಶದಲ್ಲಿ ನೀರು ಶೇಖರವಾಗುತ್ತದೆ. ಅಲ್ಲಿ ಬೀಜ ಮೊಳೆತು ದೊಡ್ಡ ಮರಗಳಾಗುತ್ತವೆ. ಬಳಿಕ ಆ ಮರಗಳು ಫಲ ಕೊಡುತ್ತವೆ.

"ಇದಕ್ಕಾಗೆ ನಾನು ಹಾಜರಾನಿಗೆ ಹೇಳುತ್ತಿರುವುದು: 'ನೀನೊ-ಬ್ಬನೇ ಜ್ಞಾನಿ, ಉಳಿದವರೆಲ್ಲ ಪೆದ್ದರು ಅಂತ ಎಂದೂ ಭಾವಿಸಬೇಡ.' ಎಲ್ಲರನ್ನೂ ಪ್ರೀತಿಸಬೇಕು. ಯಾರೂ ಪರರಲ್ಲ. ಎಲ್ಲರಲ್ಲೂ ಆ ಒಬ್ಬ ಭಗವಂತನೇ ವಾಸಿಸುತ್ತಿದಾನೆ. ಆತನಿಲ್ಲದ ವಸ್ತುವೇ ಇಲ್ಲ.

"ಭಗವಂತ ಪ್ರಹ್ಲಾದನಿಗೆ ಹೇಳಿದ: 'ಒಂದು ವರವನ್ನು ಬೇಡಿಕೊ.' ಪ್ರಹ್ಲಾದ ಹೇಳಿದ: 'ನನಗೆ ನಿನ್ನ ದರ್ಶನ ದೊರೆತುಬಿಟ್ಟಿದೆ. ನನಗಿನ್ನೇನೂ ಬೇಕಾಗಿಲ್ಲ.' ಆದರೆ ಭಗವಂತ ಆತನನ್ನು ಸುಮ್ಮನೆ ಬಿಡ ಲಿಲ್ಲ. ಆಗ ಪ್ರಹ್ಲಾದ ಹೇಳಿದ: 'ನೀನು ವರ ಕೊಡಬೇಕೆಂದಿದ್ದರೆ, ನನಗೆ ಈ ವರ ಕೊಡು—ಯಾರು ನನಗೆ ಕಷ್ಟ ಕೊಟ್ಟಿದಾರೊ ಅವರಿಗೆ ಶಿಕ್ಷೆ ಯಾಗದ ಹಾಗೆ.' ಇದರ ಅರ್ಥ, ಆ ಹಿಂಸಕರ ರೂಪಿನಲ್ಲಿ ಕಷ್ಟ ಕೊಟ್ಟ ವನು ಭಗವಂತನೇ. ಆ ಹಿಂಸಕರಿಗೆ ಶಿಕ್ಷೆ ವಿಧಿಸಿದ್ದೇ ಆದರೆ, ಅದನ್ನು ಭಗವಂತನಿಗೇ ವಿಧಿಸಿದಂತಾಗುತ್ತದೆ.

"ರಾಧೆಗೆ ಪ್ರೇಮೋನ್ಮಾದ ಉಂಟಾಗಿತ್ತು. ಭಕ್ತ್ಯುನ್ಮಾದ ಎಂಬುದೂ ಇದೆ. ಉದಾಹರಣೆಗೆ ಹನುಮಂತನದು. ಸೀತೆ ಅಗ್ನಿಪ್ರವೇಶ ಮಾಡುತ್ತಿ ರುವುದನ್ನು ನೋಡಿ, ರಾಮನನ್ನು ಕೊಲ್ಲಲು ಹೋಗಿಬಿಟ್ಟಿದ್ದ. ಮತ್ತೆ ಇದೆ ಜ್ಞಾನೋನ್ಮಾದ. ಒಮ್ಮೆ ಒಬ್ಬ ಜ್ಞಾನಿ ಹುಚ್ಚನ ಹಾಗೆ ಕಂಡು ಬಂದ. ಆತ ಈ ಕಾಳೀದೇವಾಲಯ ಪ್ರತಿಷ್ಠೆಯಾದ ಕೆಲವು ದಿನಗಳಲ್ಲೇ ಇಲ್ಲಿಗೆ ಬಂದಿದ್ದ. ಜನ ಹೇಳಿದರು, ಆತ ರಾಮಮೋಹನರಾಯನ ಬ್ರಾಹ್ಮಸಭೆಯ ಅನುಯಾಯಿ. ಆತ ಒಂದು ಕಾಲಿಗೆ ಒಂದು ಹರಿದು ಹೋದ ಜೋಡು ಹಾಕಿಕೊಂಡಿದ್ದ. ಒಂದು ಕೈಯಲ್ಲಿ ಒಂದು ಕೋಲನ್ನು

ಇನ್ನೊಂದು ಕೈಯಲ್ಲಿ ಮಾವಿನ ಸಸಿಯ ಒಂದು ಚಟ್ಟೆಯನ್ನ ಹಿಡಿದು ಕೊಂಡಿದ್ದ. ಗಂಗೆಯಲ್ಲಿ ಸ್ನಾನಮಾಡಿ ಕಾಳೀದೇವಾಲಯವನ್ನು ಪ್ರವೇಶಿಸಿದ. ಆಗ ಹಲಧಾರಿ ಕಾಳಿಯ ಗರ್ಭಗುಡಿಯಲ್ಲಿ ಕುಳಿತಿದ್ದ. ಆವೇಶ-ಪೂರಿತನಾಗಿ ದೇವಿಯ ಸಂಬಂಧವಾದ ಕೆಲವು ಶ್ಲೋಕಗಳನ್ನು ಹೇಳಿದ. ಅನಂತರ ಒಂದು ನಾಯಿಯನ್ನು ಸಮೀಪಿಸಿ ಅದರ ಕಿವಿ ಹಿಡಿದುಕೊಂಡು ಅದರ ಉಚ್ಛಿಷ್ಟವನ್ನು ತಿಂದ. ನಾಯಿಯೂ ಸುಮ್ಮನೇ ಇತ್ತು. ನನಗೂ ಆಗ ಭಗವದುನ್ಮಾದ ಬರಲು ಆರಂಭವಾಗಿಬಿಟ್ಟಿತ್ತು. ನಾನು ಹೃದೂನ ಕತ್ತು ಹಿಡಿದುಕೊಂಡು ಹೇಳಿದೆ: 'ಏನು ಹೃದೂ! ನನಗೂ ಆ ಅವಸ್ಥೆ ಉಂಟಾಗುತ್ತದೆಯೇ?'

"ನನಗೆ ಪ್ರೇಮೋನ್ಮಾದ ಬಂದಿತ್ತು. ನಾರಾಯಣಶಾಸ್ತ್ರಿ ಬಂದು ನೋಡುತ್ತಾನೆ, ನಾನು ಒಂದು ಗಳುವಿನ ತುಂಡನ್ನು ಹೆಗಲ ಮೇಲೆ ಇಟ್ಟು ಕೊಂಡು ಸುಮ್ಮನೆ ಸುತ್ತಾಡುತ್ತಿದೇನೆ. ಅದನ್ನು ನೋಡಿ ಆತ ಜನರಿಗೆ ಹೇಳಿದ: 'ಇವರಿಗೆ ಪ್ರೇಮೋನ್ಮಾದ ಬಂದುಬಿಟ್ಟದೆ.' ಆ ಅವಸ್ಥೆಯಲ್ಲಿ ಜಾತಿ-ಗೀತಿಯ ಭಾವನೆಯೇ ನನ್ನ ತಲೆಗೆ ಬರುತ್ತಿರಲಿಲ್ಲ. ಒಬ್ಬ ನೀಚ ಜಾತಿಯವನ ಹೆಂಡತಿ ಸೊಪ್ಪನ್ನು ಬೇಯಿಸಿ ಕಳುಹಿಸುತ್ತಿದ್ದಳು. ನಾನು ತಿಂದುಬಿಡುತ್ತಿದ್ದೆ.

"ಕಾಳೀದೇವಾಲಯದ ಅತಿಥಿಶಾಲೆಯಲ್ಲಿ ಭಿಕ್ಷುಕರು ಊಟಮಾಡಿ ಹೋದನಂತರ ಬಿದ್ದಿರುತ್ತಿದ್ದ ಎಂಜಲು ಎಲೆಗಳನ್ನು ಒಮ್ಮೆ ತೆಗೆದು ನನ್ನ ತಲೆಗೆ ಮತ್ತು ಬಾಯಿಗೆ ಮುಟ್ಟಿಸಿದೆ. ಅದನ್ನು ನೋಡಿ ಹಲಧಾರಿ ನನಗೆ ಹೇಳಿದ: 'ಏನು ಕೆಲಸ ಮಾಡಿಬಿಟ್ಟೆ? ಭಿಕ್ಷುಕರ ಎಂಜಲು ತಿಂದುಬಿಟ್ಟೆಯಲ್ಲ. ನಿನ್ನ ಮಕ್ಕಳು ಮರಿಗಳನ್ನ ಯಾರು ತಾನೆ ತಂದುಕೊಳ್ಳುತ್ತಾರೆ?' ನನಗೆ ಆಗ ಕೋಪ ಬಂತು. ಹಲಧಾರಿ ನನ್ನ ಸಂಬಂಧಿ, ನನಗಿಂತ ಹಿರಿಯವ. ಆದರೂ ಅದು ನನ್ನನ್ನು ಸುಮ್ಮನೆ ಇರಿಸಬಲ್ಲುದೆ? ನಾನು ರೇಗಿ ಹೇಳಿದೆ: 'ಎಲಾ ನೀಚ! ನೀನು ತಾನೆ ಗೀತೆ, ವೇದಾಂತ ಇವುಗಳ ಸಂಬಂಧವಾಗಿ ಪ್ರತಿಷ್ಠೆ ತೋರಿಸುತ್ತಿರುವವನು? ನೀನು ತಾನೆ ಜನರಿಗೆ ಬೋಧಿಸುತ್ತಿರುವವನು, ಬ್ರಹ್ಮ ಸತ್ಯ, ಜಗತ್ತು ಮಿಥ್ಯಾ ಅಂತ? ಆದರೂ ನೀನು ನನಗೆ ಮಕ್ಕಳಾಗುತ್ತೆ ಅಂತ ಭಾವಿಸುತ್ತಿದೀಯಾ! ಗೀತಾಪಾಠ ಮಾಡುತ್ತಿರುವ ನಿನ್ನ ಬಾಯಿಗೆ ಬೆಂಕಿ ಹಾಕ!'

(ಮಾಸ್ಟರಿಗೆ) "ನೋಡು, ಕೇವಲ ಪುಸ್ತಕ ಪಾಂಡಿತ್ಯದಿಂದ ಏನೂ

ದೊರೆಯೋದಿಲ್ಲ. ಮೃದಂಗಬಾಜನ ಶಾಸ್ತ್ರವನ್ನು ಬಹಳ ಚೆನ್ನಾಗಿ ಕಂಠ-ಪಾಠ ಮಾಡಿಬಿಡಬಹುದು. ಆದರೆ ಹಾಗೇ ಬಾಜಿಸುವುದು ಬಹಳ ಕಠಿನ."

ಶ್ರೀರಾಮಕೃಷ್ಣರು ತಮ್ಮ ಪ್ರೇಮೋನ್ಮಾದದ ವರ್ಣನೆಯನ್ನು ಮುಂದುವರಿಸುತ್ತಿದಾರೆ: "ಒಮ್ಮೆ ಮಥುರಬಾಬುವಿನೊಡನೆ ವಿಹಾರಾರ್ಥವಾಗಿ ಕೆಲವು ದಿನಗಳ ಮಟ್ಟಿಗೆ ಪುಟ್ಟ ದೋಣಿಯಲ್ಲಿ ಹೋಗಿದ್ದೆ. ಆ ಸಂದರ್ಭದಲ್ಲಿ ನವದ್ವೀಪಕ್ಕೆ ಹೋಗಿದ್ದೆವು. ಒಂದು ದಿನ ಆ ದೋಣಿಯ ಅಂಬಿಗರು ಅಡಿಗೆ ಮಾಡುವುದನ್ನ ನೋಡುತ್ತ ನಿಂತಿದ್ದೆ. ಮಥುರಬಾಬು ನನ್ನನ್ನು ಕೇಳಿದ: 'ಬಾಬಾ, ಅಲ್ಲಿ ನಿಂತುಕೊಂಡು ಏನುಮಾಡುತ್ತಿದೀರಿ?' ನಾನು ನಗುತ್ತ ಉತ್ತರವಿತ್ತೆ: 'ಅಂಬಿಗರು ಬಹಳ ಚೆನ್ನಾಗಿ ಅಡಿಗೆ ಮಾಡುತ್ತಿದಾರೆ.' ಮಥುರಬಾಬುವಿಗೆ ಅನಿಸಿತು, ನಾನು ಅವರಿಂದ ಆಹಾರ ಕೇಳಿ ಈಸಿಕೊಂಡು ತಿಂದುಬಿಡಬಹುದೆಂದು. ಅದಕ್ಕಾಗಿ ಆತ ನನ್ನನ್ನು ಕೂಗಿದ: 'ಬಾಬಾ, ಬೇಗ ಇಲ್ಲಿಗೆ ಬಂದುಬಿಡಿ! ಬೇಗ ಇಲ್ಲಿಗೆ ಬಂದು ಬಿಡಿ!'

"ಆದರೆ ಈಗ ಹಾಗೆ ಮಾಡಲಾರೆ. ಆ ಅವಸ್ಥೆ ಈಗ ನನಗಿಲ್ಲ. ಈಗ ಅಡಿಗೆಯವನು ಬ್ರಾಹ್ಮಣನಾಗಿರಬೇಕು, ಆತ ಆಚಾರಶೀಲನಾಗಿರಬೇಕು, ಮಾಡಿದ ಅಡಿಗೆ ಭಗವಂತನಿಗೆ ಅರ್ಪಿತವಾಗಿರಬೇಕು; ಆಗ ಮಾತ್ರವೇ ನಾನು ಊಟಮಾಡಲು ಸಾಧ್ಯವಾಗುತ್ತದೆ.

"ಓ ನನಗೆ ಏನೇನವಸ್ಥೆ ಬಂದಿದ್ದುವು. ಕಾಮಾರಪುಕುರಿನಲ್ಲಿ ಚಿನೇಶಂಕರಿಯೇ ಮೊದಲಾದ ನನ್ನ ಬಾಲ್ಯ ಸ್ನೇಹಿತರಿಗೆ ಹೇಳಿದೆ: 'ಏನ್ರೊ, ನಿಮ್ಮ ಕಾಲಿಗೆ ಅಡ್ಡಬೀಳುತ್ತೇನೆ ಕಣ್ರೋ, ಒಮ್ಮೆಯಾದರೂ "ಹರಿ" ಎಂಬುದಾಗಿ ನಿಮ್ಮ ಬಾಯಿಂದ ಹೇಳ್ರೋ!' ಅವರ ಕಾಲಿಗೆಲ್ಲಾ ಇನ್ನೇನು ಅಡ್ಡಬೀಳುವುದರಲ್ಲಿದ್ದೆ. ಆಗ ಚಿನೇಶಂಕರಿ ಹೇಳಿದ: 'ಲೋ, ಇದು ನಿನ್ನ ಪ್ರಥಮ ಅನುರಾಗ ಕಣೋ; ಆದ್ದರಿಂದ ಎಲ್ಲರೂ ನಿನಗೆ ಒಂದೇ ಸಮನಾಗಿ ತೋರುತ್ತಿದಾರೆ.' ಬಿರುಗಾಳಿ ಬಂದು ದೂಳು ಎದ್ದಾಗ ಮಾವಿನ ಮರ, ಹುಣಿಸೆ ಮರ ಎಲ್ಲಾ ಒಂದೇ ರೀತಿಯಾಗಿ ಕಾಣುತ್ತವೆ. ಇದು ಈ ಜಾತಿಯ ಮರ, ಅದು ಆ ಜಾತಿಯ ಮರ ಎಂಬುದಾಗಿ ಪತ್ತೆಹಚ್ಚ ಲಾಗೋದಿಲ್ಲ."

ಒಬ್ಬ ಭಕ್ತ: "ಭಕ್ತಿಯ ಉನ್ಮಾದವೇ ಆಗಲಿ, ಪ್ರೇಮೋನ್ಮಾದವೇ

ಆಗಲಿ, ಜ್ಞಾನೋನ್ಮಾದವೇ ಆಗಲಿ ಸಂಸಾರಿಗೆ ಉಂಟಾಗಿಬಿಟ್ಟಿದ್ದೇ ಆದರೆ, ಆತ ಸಂಸಾರ ಕಾರ್ಯಗಳನ್ನ ನಡಸಿಕೊಂಡುಹೋಗುವ ಬಗೆ ಹೇಗೆ ?''

ಶ್ರೀರಾಮಕೃಷ್ಣರು ಆತನನ್ನು ದೃಷ್ಟಿಸಿ: ''ಯೋಗಿಗಳಲ್ಲಿ ಎರಡು ವಿಧ—ವ್ಯಕ್ತ, ಗುಪ್ತ. ಗುಪ್ತಯೋಗಿಯನ್ನು ಸಂಸಾರದಲ್ಲಿ ನೋಡಬಹುದು. ಬೇರೆ ಯಾರಿಗೂ ಆತ ಗೊತ್ತಾಗೋದಿಲ್ಲ. ಸಂಸಾರಿಗಳಿಗೆ ಮಾನಸಿಕ ತ್ಯಾಗವೇ ವಿನಾ ಬಾಹ್ಯಿಕ ತ್ಯಾಗವಲ್ಲ.''

ರಾಮು: ''ಇದು ಮಕ್ಕಳನ್ನು ಸಂತೈಸುವ ಮಾತು. ಸಂಸಾರಿ ಜ್ಞಾನಿಯಾಗಬಲ್ಲನೇ ವಿನಾ ಎಂದಿಗೂ ವಿಜ್ಞಾನಿಯಾಗಲಾರ.''

ಶ್ರೀರಾಮಕೃಷ್ಣರು: ''ಕೊನೆಯಲ್ಲಿ ಆತ ವಿಜ್ಞಾನಿಯಾಗಲು ಸಾಧ್ಯ. ಬಲಾತ್ಕಾರದಿಂದ ಸಂಸಾರತ್ಯಾಗ ಒಳ್ಳೆಯದಲ್ಲ.''

ರಾಮು: ''ಕೇಶವಸೇನ ಹೇಳುತ್ತಿದ್ದ: 'ಅವರ (ಪರಮಹಂಸರ) ಹತ್ತಿರಕ್ಕೆ ಜನ ಏಕೆ ಅಷ್ಟೊಂದಾಗಿ ಹೋಗುತ್ತಿದಾರೆ? ಒಂದು ದಿನ ಅವರು ''ಕಚಕ್'' ಅಂತ ಚುಚ್ಚಿಬಿಡುತ್ತಾರೆ, ಆಗ ಅಲ್ಲಿಂದ ಓಡಿಬರಬೇಕಾಗಿ ಬಂದುಬಿಡುತ್ತದೆ.'''

ಶ್ರೀರಾಮಕೃಷ್ಣರು: ''ನಾನೇಕೆ 'ಕಚಕ್' ಅಂತ ಜನರನ್ನು ಚುಚ್ಚಲಿ. ನಾನು ಜನರಿಗೆ ಹೇಳುತ್ತೇನೆ: 'ಇದನ್ನೂ ಮಾಡಿ, ಅದನ್ನೂ ಮಾಡಿ; ಸಂಸಾರವನ್ನೂ ನಡಸಿಕೊಂಡು ಹೋಗಿ, ಭಗವಂತನನ್ನೂ ಕರೆಯುತ್ತಿರಿ!' ಎಲ್ಲವನ್ನೂ ತ್ಯಜಿಸಿಬಿಡುವಂತೆ ನಾನು ಹೇಳುತ್ತಿಲ್ಲವಲ್ಲ. (ನಗುತ್ತ) ಒಂದು ದಿನ ಕೇಶವಸೇನ ಉಪನ್ಯಾಸ ಮಾಡಿದ. ಆಗ ಹೇಳಿದ: 'ಹೇ ಭಗವಂತ, ದಯವಿಟ್ಟು ಕೃಪೆಮಾಡು, ನಾವು ಭಕ್ತಿನದಿಯಲ್ಲಿ ಮುಳುಗಿ ಸಚ್ಚಿದಾನಂದ ಸಾಗರವನ್ನು ತಲುಪಿಬಿಡುವ ಹಾಗೆ.' ಹೆಂಗಸರೆಲ್ಲರೂ ಪರದೆ ಹಿಂದೆ ಕುಳಿತಿದ್ದರು. ನಾನು ಕೇಶವಸೇನನಿಗೆ ಹೇಳಿದೆ: 'ನೀವೆಲ್ಲರೂ ಒಮ್ಮೆಗೇ ನದಿಯಲ್ಲಿ ಮುಳುಗಿಬಿಡಲು ಹೇಗೆ ಸಾಧ್ಯವಾದೀತು?' ಹೆಂಗಸರ ಕಡೆ ಬೆರಳುಮಾಡಿ ಹೇಳಿದೆ: 'ಆಗ ಅವರ ಗತಿ ಏನಾಗಬೇಕು? ಆಗಾಗ ದಡಕ್ಕೆ ಬಂದು ಹೋಗುತ್ತಿರಿ. ಒಮ್ಮೆ ಮುಳುಗಿ ಮತ್ತೊಮ್ಮೆ ಎದ್ದು ಬಂದುಬಿಡಿ.' ಕೇಶವಸೇನ ಮತ್ತು ಉಳಿದವರೆಲ್ಲರೂ ನಗಲಾರಂಭಿಸಿದರು.

''ಹಾಜರಾ ಹೇಳುತ್ತಾನೆ: 'ನೀವು ರಾಜಸಿಕ ಜನರನ್ನು ಬಹಳವಾಗಿ ಪ್ರೀತಿಸುತ್ತಿದೀರಿ—ಬೇಕಾದಷ್ಟು ಹಣ-ಕಾಸು, ಕೀರ್ತಿ-ಗೌರವ ಇರುವ

ವರನ್ನ.' ಅದು ಹಾಗಿದ್ದ ಪಕ್ಷದಲ್ಲಿ, ಹರೀಶ, ನೋಟೊ[1] ಇವರನ್ನು ಪ್ರೀತಿಸುತ್ತಿದೇನಲ್ಲ ಏಕೆ ಮತ್ತೆ? ನರೇಂದ್ರನನ್ನು ಪ್ರೀತಿಸುತ್ತಿದೇನಲ್ಲ ಏಕೆ ಮತ್ತೆ? ಆತನಿಗೆ ಸುಟ್ಟ ಬಾಳೆಕಾಯಿ ತಿನ್ನೋಕೆ ಉಪ್ಪಿಗೂ ಗತಿಯಿಲ್ಲ!"

ಪರಮಹಂಸರು ತಮ್ಮ ಕೊಠಡಿಯಿಂದ ಹೊರಕ್ಕೆ ಬಂದು ಸರ್ವೆ ಮರಗಳ ಕಡೆ ಮಾಸ್ಟರೊಡನೆ ಮಾತಾಡುತ್ತ ಮಾತಾಡುತ್ತ ಮುಂದುವರಿಯುತ್ತಿದಾರೆ. ಒಬ್ಬ ಭಕ್ತ ಕೈಯಲ್ಲಿ ಒಂದು ಚೌಕ ಮತ್ತು ನೀರಿನ ತಂಬಿಗೆ ಹಿಡಿದುಕೊಂಡು ಅವರನ್ನು ಹಿಂಬಾಲಿಸುತ್ತಿದಾನೆ. ಪರಮಹಂಸರು ತಾವು ಸ್ಟಾರ್ ಥಿಯೇಟರಿಗೆ ಹೋಗುವುದರ ಸಂಬಂಧವಾಗಿ ಮಾತಾಡುತ್ತಿದಾರೆ. ಅವರು ಮಾಸ್ಟರಿಗೆ ಹೇಳುತ್ತಿದಾರೆ: "ರಾಮು ಹೇಳಿದ್ದು ರಾಜಸಿಕ ಜನರಿಗೆ ಅನ್ವಯಿಸತಕ್ಕದ್ದು. ಅಷ್ಟು ಬೆಲೆಯಾದ ಟಿಕೆಟ್ ಕೊಂಡುಕೊಳ್ಳುವುದರ ಆವಶ್ಯಕತೆಯೇನಿದೆ?"

ಘಂಟೆ ಸಾಯಂಕಾಲ ಐದು. ಪರಮಹಂಸರು ಮಹೇಂದ್ರಮುಖ್ಯೋಪಾಧ್ಯಾಯನ ಗಾಡಿಯಲ್ಲಿ ಕುಳಿತು ಕಲ್ಕತ್ತಕ್ಕೆ ಬರುತ್ತಿದಾರೆ. ಗಾಡಿಯಲ್ಲಿ ಮಾಸ್ಟರ್, ಮಹೇಂದ್ರಮುಖ್ಯೋಪಾಧ್ಯಾಯ, ಇನ್ನೂ ಕೆಲವು ಮಂದಿ ಭಕ್ತರೂ ಕುಳಿತಿದಾರೆ. ಪರಮಹಂಸರು ಭಗವಚ್ಚಿಂತನೆ ಮಾಡುತ್ತ ಮಾಡುತ್ತ ಇದ್ದ ಹಾಗೆ ಭಾವಸಮಾಧಿಯಲ್ಲಿ ಮಗ್ನರಾಗಿಬಿಟ್ಟದಾರೆ. ಹಾಗೇ ಬಹಳ ಹೊತ್ತಿನವರೆಗೆ ಇದ್ದು ಈಗ ಪ್ರಕೃತಿಸ್ಥರಾಗುತ್ತಿದಾರೆ. ತಮಗೆ ತಾವೇ ಈಗ ಹೇಳಿಕೊಳ್ಳುತ್ತಿದಾರೆ: "ಹಾಜರಾ ನನಗೆ ಬುದ್ಧಿ ಕಲಿಸಲು ಬರುತ್ತಿದಾನೆ! ನೀಚ!" ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳುತ್ತಿದಾರೆ: "ನಾನು ನೀರು ಕುಡಿಯಬೇಕು." ಬಾಹ್ಯ ಜಗತ್ತಿಗೆ ಮನಸ್ಸು ತರಲು ಪರಮಹಂಸರು ಈ ಮಾತನ್ನ ಪ್ರಾಯಿಕವಾಗಿ ಸಮಾಧಿ ದೊರೆತ ನಂತರ ಹೇಳುವುದುಂಟು.

ಮಹೇಂದ್ರ ಮಾಸ್ಟರಿಗೆ: "ನಾನು ಅವರಿಗೆ ಸ್ವಲ್ಪ ಫಲಾಹಾರ ತೆಗೆದುಕೊಂಡುಬರಲೆ?"

ಮಾಸ್ಟರ್: "ಬೇಡಿ. ಈಗ ಅವರು ಏನನ್ನೂ ತಿನ್ನುವುದಿಲ್ಲ."

ಮಹೇಂದ್ರ ಹಾತೀಬಾಗಾನ್ ಎಂಬ ಜಾಗದಲ್ಲಿದ್ದ ತನ್ನ ಹಿಟ್ಟು ಮಾಡುವ ಮಿಲ್ಲಿಗೆ ಪರಮಹಂಸರನ್ನು ಕರೆದುಕೊಂಡುಹೋಗುತ್ತಿದಾನೆ. ಅಲ್ಲಿ ಅವರು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಸ್ಟಾರ್ ಥಿಯೇಟರಿಗೆ ತೆರಳುತ್ತಾರೆ.

1. ಪರಮಹಂಸರು ಲಾಟುವನ್ನು ಹಾಗೆ ಕರೆಯುತ್ತಿದ್ದರು.

ಮಹೇಂದ್ರನ ತಂದೆಗೆ ಪರಮಹಂಸರ ಪರಿಚಯ ಇಲ್ಲದೆ ಇದ್ದುದರಿಂದ ಆತ ಅವರನ್ನು ತನ್ನ ಮನೆಗೆ ಕರೆದುಕೊಂಡುಹೋಗಲಿಲ್ಲ. ಮಹೇಂದ್ರನ ಎರಡನೆ ತಮ್ಮ ಪ್ರಿಯನಾಥನೂ ಪರಮಹಂಸರ ಭಕ್ತ.

ಪರಮಹಂಸರು ರತ್ನಗಂಬಳಿಯನ್ನು ಹಾಸಿದ್ದ ಒಂದು ಮಂಚದ ಮೇಲೆ ಕುಳಿತು ಭಗವಂತನ ಸಂಬಂಧವಾಗಿ ಮಾತುಕತೆ ಆಡುತ್ತಿದ್ದಾರೆ.

ಶ್ರೀರಾಮಕೃಷ್ಣರು ಮಾಸ್ಟರ್ ಮೊದಲಾದವರಿಗೆ: "ಒಮ್ಮೆ ಚೈತನ್ಯ-ಚರಿತಾಮೃತವನ್ನು ಕೇಳುತ್ತ ಕೇಳುತ್ತ ಇದ್ದ ಹಾಗೆ, ಹಾಜರಾ ಹೇಳಿದ: 'ಈ ಘಟನೆಗಳೆಲ್ಲಾ ಶಕ್ತಿಯ ಕ್ರೀಡೆ; ವಿಭುವಿಗು, ಎಂದರೆ ಬ್ರಹ್ಮನಿಗು ಇವಕ್ಕು ಯಾವ ಸಂಬಂಧವೂ ಇಲ್ಲ.' ವಿಭುವಿಲ್ಲದೆ ಶಕ್ತಿ ಎಂದಿಗಾದರೂ ಪ್ರತ್ಯೇಕವಾಗಿ ಇರಬಲ್ಲಳೆ? ಇಲ್ಲಿನ[1] ಮತವನ್ನ ಹಾಜರಾ ರದ್ದುಮಾಡಲು ಪ್ರಯತ್ನಿಸುತ್ತಿದ್ದಾನೆ.

"ನನಗೆ ಅನುಭವವಾಗಿದೆ, ಬ್ರಹ್ಮ ಮತ್ತು ಶಕ್ತಿ ಅಭೇದ—ನೀರು ಮತ್ತು ಅದರ ತೋಯುವ ಶಕ್ತಿ, ಬೆಂಕಿ ಮತ್ತು ಅದರ ಸುಡುವ ಶಕ್ತಿ ಇವುಗಳ ಹಾಗೆ. ಬ್ರಹ್ಮ ವಿಭುರೂಪದಿಂದ ಸರ್ವಭೂತಗಳಲ್ಲಿಯೂ ಇದ್ದಾನೆ—ಆದರೆ ಕೆಲವದರಲ್ಲಿ ಅಧಿಕವಾಗಿಯೂ, ಇನ್ನು ಕೆಲವದರಲ್ಲಿ ಕಡಮೆಯಾಗಿಯೂ ವ್ಯಕ್ತವಾಗಿ. ಹಾಜರಾ ಮತ್ತೆ ಹೇಳುತ್ತಾನೆ: 'ಭಗವಂತನ ಸಾಕ್ಷಾತ್ಕಾರ ದೊರೆತುದೇ ಆದರೆ, ಭಕ್ತನಿಗೂ ಭಗವಂತನ ಹಾಗೇ ಷಡೈಶ್ವರ್ಯಗಳು ಉಂಟಾಗುತ್ತವೆ; ಅವು ಅವನಲ್ಲಿ ಇರುತ್ತವೆ, ಆತ ಉಪಯೋಗಿಸಲಿ ಬಿಡಲಿ.'"

ಮಾಸ್ಟರ್: "ಷಡೈಶ್ವರ್ಯಗಳು ಕೈಯಲ್ಲಿರುವುದು ಒಳ್ಳೆಯದು!"
(ಎಲ್ಲರೂ ನಗುತ್ತಿದ್ದಾರೆ.)

ಶ್ರೀರಾಮಕೃಷ್ಣರು ನಗುತ್ತ: "ಹೌದು, ಕೈಯಲ್ಲಿರಬೇಕು! ಇದು ಎಂಥ ಹೀನಬುದ್ಧಿ! ಯಾರು ಐಶ್ವರ್ಯಗಳನ್ನ ಎಂದೂ ಭೋಗಿಸಿಲ್ಲವೊ, ಆತ ಅವುಗಳಿಗಾಗಿ ಹಾತೊರೆಯುತ್ತಾನೆ. ಆದರೆ ನಿಜವಾದ ಭಕ್ತ ಎಂದೂ ಅವುಗಳಿಗಾಗಿ ಪ್ರಾರ್ಥನೆಮಾಡೋದಿಲ್ಲ."

ಪರಮಹಂಸರು ಕೈಕಾಲು ತೊಳೆದುಕೊಂಡನಂತರ ಅವರಿಗೆ ಗುಡುಗುಡಿಯನ್ನ ಅರ್ಪಿಸಲಾಯಿತು. ಅವರು ಮಾಸ್ಟರ ಕಡೆ ತಿರುಗಿ ಹೇಳುತ್ತಿದ್ದಾರೆ: "ಮುಚ್ಚಂಜೆಯಾಗಿದೆಯೆ? ಆಗಿದ್ದರೆ ಈಗ ಗುಡುಗುಡಿ

1. ತಮ್ಮನ್ನು ಸೂಚಿಸಿ.

ಸೇದೋದಿಲ್ಲ. ಮುಚ್ಚಂಜೆಯಲ್ಲಿ ಎಲ್ಲಾ ಕೆಲಸಕಾರ್ಯಗಳನ್ನೂ ಬಿಟ್ಟು ಭಗವಂತನ ಸ್ಮರಣೆಮಾಡಬೇಕು.'' ಹೀಗೆಂದು ಹೇಳಿ ತಮ್ಮ ಕೈಯ ಮೇಲಿನ ರೋಮಗಳ ಕಡೆ ನೋಡುತ್ತಿದಾರೆ—ಎಣಿಸಲಾಗುವುದೆ ಇಲ್ಲವೆ ಎಂಬು ದನ್ನು ಅರಿಯಲು. ಎಣಿಸಲಾಗದಿದ್ದರೆ ಮುಚ್ಚಂಜೆಯಾಗಿದೆ ಅಂತ ಅರ್ಥ.

ಪರಮಹಂಸರ ಗಾಡಿ ಬೀಡನ್ ಬೀದಿಯಲ್ಲಿ ಸ್ಟಾರ್ ಥಿಯೇಟರ್ ಎದುರಿಗೆ ಬಂದು ನಿಂತಿದೆ. ಘಂಟೆ ರಾತ್ರಿ ಎಂಟು. ಪರಮಹಂಸರೊಡನೆ ಮಾಸ್ಟರ್, ಬಾಬುರಾಮ, ಮಹೇಂದ್ರಮುಖ್ಯೋಪಾಧ್ಯಾಯ, ಇನ್ನೂ ಒಬ್ಬಿಬ್ಬರು ಭಕ್ತರು ಬಂದಿದಾರೆ. ಟಿಕೆಟ್ ಕೊಂಡುಕೊಳ್ಳಲು ಪ್ರಯತ್ನ ನಡೆಯುತ್ತಿದೆ. ಥಿಯೇಟರಿನ ಮ್ಯಾನೇಜರ್ ಗಿರೀಶಚಂದ್ರಘೋಷ ತನ್ನ ಕೆಲವು ಮಂದಿ ಕೆಲಸಗಾರರೊಡನೆ ಗಾಡಿಯನ್ನು ಸಮೀಪಿಸುತ್ತಿದಾನೆ. ಆತ ಪರಮಹಂಸರನ್ನು ಆದರದಿಂದ ಎದುರುಗೊಂಡು ಎಲ್ಲರನ್ನೂ ಮಹಡಿಯ ಮೇಲಕ್ಕೆ ಕರೆದುಕೊಂಡುಹೋಗುತ್ತಿದಾನೆ. ಗಿರೀಶಘೋಷ ಪರಮಹಂಸರ ಹೆಸರು ಕೇಳಿದ್ದ. ಪರಮಹಂಸರು ನಾಟಕ ನೋಡಲು ಬಂದಿರುವುದನ್ನು ನೋಡಿ ಆತನಿಗೆ ಬಹಳ ಆನಂದ ಆಗಿಬಿಟ್ಟಿದೆ. ಪರಮಹಂಸರನ್ನು ಒಂದು ಬಾಕ್ಸಿನಲ್ಲಿ ಕೂರಿಸಲಾಯಿತು. ಅವರ ಪಕ್ಕದಲ್ಲಿ ಮಾಸ್ಟರ್ ಕುಳಿತಿದಾನೆ. ಬಾಬುರಾಮ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ಹಿಂದುಗಡೆ ಕುಳಿತಿ ದಾರೆ.

ನಾಟ್ಯಾಲಯ ದೀಪಗಳಿಂದ ಪೂರ್ಣ ಪ್ರಕಾಶವಾಗಿದೆ. ಹಳ್ಳದಲ್ಲೂ ಜನ ತುಂಬಿದಾರೆ. ಬಾಕ್ಸ್‌ಗಳೂ ಭರ್ತಿಯಾಗಿವೆ. ಪ್ರತಿಯೊಂದು ಬಾಕ್ಸಿನ ಹಿಂದೆಯೂ ಒಬ್ಬೊಬ್ಬ ಸೇವಕ ನಿಂತು ಗಾಳಿ ಬೀಸುತ್ತಿದಾನೆ. ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿದೆ. ಅವರು ಮಗುವಿನ ಹಾಗೆ ನಗುತ್ತ ಮಾಸ್ಟರಿಗೆ ಹೇಳುತ್ತಿದಾರೆ: "ಅಹ, ಇಲ್ಲಿ ಬಹಳ ಚೆನ್ನಾಗಿ ಕಾಣುತ್ತಿದೆ! ಇಲ್ಲಿಗೆ ಬಂದದ್ದು ಬಹಳ ಒಳ್ಳೆಯದೇ ಆಯಿತು. ಅನೇಕ ಮಂದಿ ಒಟ್ಟಿಗೆ ಇರುವುದನ್ನು ನೋಡಿದರೆ ನನಗೆ ಉದ್ದೀಪನವಾಗಿಬಿಡುತ್ತದೆ. ಆಗ ಸ್ಪಷ್ಟವಾಗಿ ತೋರಿಬರುತ್ತದೆ, ಎಲ್ಲವೂ ಭಗವಂತನೇ ಆಗಿರುವು ದಾಗಿ.''

ಮಾಸ್ಟರ್: "ಅದು ನಿಜ.''

ಶ್ರೀರಾಮಕೃಷ್ಣರು: "ಈ ಸೀಟಿಗೆ ಎಷ್ಟು?''

ಮಾಸ್ಟರ್: "ಏನೂ ತೆಗೆದುಕೊಳ್ಳುವುದಿಲ್ಲ. ನೀವು ಇಲ್ಲಿಗೆ ಬಂದು ದನ್ನು ನೋಡಿ ಅವರಿಗೆ ಬಹಳ ಆನಂದವಾಗಿಬಿಟ್ಟಿದೆ."

ಶ್ರೀರಾಮಕೃಷ್ಣರು: "ಎಲ್ಲಾ ಭಗವತಿಯ ಮಾಹಾತ್ಮ್ಯೆ."

ನಾಟಕ ಇನ್ನೇನು ಆರಂಭವಾಗಲಿದೆ. ಇಂದಿನ ನಾಟಕ ಚೈತನ್ಯ-ದೇವನ ಬಾಲ್ಯಲೀಲೆಯ ಸಂಬಂಧವಾಗಿ. ಚೈತನ್ಯದೇವನ ಹುಟ್ಟಿದ ಹೆಸರು ನಿಮಾಯಿ ಅಂತ. ಗೌರ್, ಗೋರ, ಗೌರಾಂಗ ಎಂಬುವು ಅಡ್ಡ ಹೆಸರುಗಳು. ಪರದೆ ಮೇಲಕ್ಕೆ ಹೋಗುತ್ತಿದೆ. ಪ್ರೇಕ್ಷಕರೆಲ್ಲರೂ ರಂಗ-ಭೂಮಿಯ ಕಡೆ ನೋಡುತ್ತಿದಾರೆ.

ಮೊದಲನೆ ದೃಶ್ಯ ಪಾಪ ಮತ್ತು ಆರು ರಿಪುಗಳ ಸಭೆ. ಅವರ ಹಿಂದೆ ಕಾಣುವ ಅರಣ್ಯದ ಒಂದು ದಾರಿಯಲ್ಲಿ ವಿವೇಕ, ವೈರಾಗ್ಯ, ಭಕ್ತಿ ಇವರ ಮಾತು-ಕತೆ ನಡೆಯುತ್ತಿದೆ.

ಭಕ್ತಿ ತನ್ನ ಸಂಗಾತಿಗಳಿಗೆ ಹೇಳುತ್ತಿದಾಳೆ: "ಗೌರಾಂಗ ನದೀಯಾದಲ್ಲಿ ಜನ್ಮ ತಳೆದಿದಾನೆ. ವಿದ್ಯಾಧರರು, ಮುನಿಗಳು, ಋಷಿಗಳು ತಮ್ಮ ವೇಷ ಮರಸಿ-ಕೊಂಡು ಆತನ ದರ್ಶನ ಪಡೆಯಲು ಧರೆಗೆ ಇಳಿದುಬಂದಿದಾರೆ."

ಆಕೆ ಹಾಡುತ್ತಿದಾಳೆ:

ದಿಟಕು ಧನ್ಯವಾಯ್ತು ಧರಣಿ ಗೌರಾಂಗನ ಉದಯದಿ,
ರಥವೇರಿದ ವಿದ್ಯಾಧರಗಣ ಬರುತಿದೆ ಮೋದದಿ,
ಋಷಿ ಮುನಿಗಳು ತೇಲಿಬಂದರಿತ್ತ ಪ್ರೇಮಪೂರದಿ!

ವಿದ್ಯಾಧರರು, ಮುನಿಗಳು, ಋಷಿಗಳು ಗೌರಾಂಗನನ್ನು ಭಗವಂತನ ಅವತಾರ ಎಂಬ ಜ್ಞಾನದಿಂದ ನೋಡುತ್ತ ಆತನನ್ನು ಸ್ತೋತ್ರಮಾಡುತ್ತಿದಾರೆ.

ಪರಮಹಂಸರು ಈ ದೃಶ್ಯವನ್ನು ನೋಡಿ ಭಾವದಿಂದ ತುಂಬಿ ತುಳು ಕಾಡುತ್ತಿದಾರೆ. ಮಾಸ್ಟರಿಗೆ ಹೇಳುತ್ತಿದಾರೆ: "ಆಹ! ಆಹ! ಆ ಕಡೆ ನೋಡು!"

ಋಷಿಗಳು:

ದೀನರೊಳು ದಯೆ ತೋರೊ ಕೇಶವ, ಕುಂಜಕಾನನಚಾರೀ!

ದೇವಿಯರು:

ಮಾಧವ ಮನಮೋಹನ, ಮೋಹನ ಮುರಲೀಧಾರೀ!

ಎಲ್ಲರೂ ಒಟ್ಟಿಗೆ:

ಹರಿಯೆನ್ನೊ, ಹರಿಯೆನ್ನೊ, ಹರಿಯೆನ್ನೊ ಮನವೇ!

ಋಷಿಗಳು :

ವ್ರಜಕಿಶೋರ, ಕಾಲೀಯಹರ, ಕಾತರಭಯಭಂಜನಾ!

ದೇವಿಯರು :

ನಯನ ಬಾಣದಲಿ ನವಿಲುಗರಿಯೊಳಗೆ ರಾಧಿಕಹೃದಿರಂಜನಾ!

ಋಷಿಗಳು :

ಗೋವರ್ಧನಧಾರಣ—ವನಕುಸುಮಭೂಷಣ—ದಾಮೋದರ ಕಂಸದರ್ಪಹಾರೀ!

ದೇವಿಯರು :

ಶ್ಯಾಮ ರಾಸರಸವಿಹಾರೀ!

ಎಲ್ಲರೂ ಒಟ್ಟಿಗೆ :

ಹರಿಯೆನ್ನೊ, ಹರಿಯೆನ್ನೊ, ಹರಿಯೆನ್ನೊ ಮನವೇ!

ವಿದ್ಯಾಧರಿಯರು ಈ ಚರಣ ಹಾಡಿದಾಗ,

ನಯನ ಬಾಣದಲಿ ನವಿಲುಗರಿಯೊಳಗೆ ರಾಧಿಕಹೃದಿರಂಜನಾ!

ಪರಮಹಂಸರು ಗಾಢ ಸಮಾಧಿಸ್ಥರಾಗಿಬಿಟ್ಟರು. ಗಾನಗೋಷ್ಠಿ ಹಾಡುತ್ತಲೇ ಇತ್ತು. ಆದರೆ ಅವರಿಗೆ ಆಗ ಬಾಹ್ಯಪ್ರಜ್ಞೆ ಇರಲಿಲ್ಲ.

ಎರಡನೆ ದೃಶ್ಯ : ನಿಮಾಯಿಯ ತಂದೆ ಜಗನ್ನಾಥಮಿಶ್ರನ ಮನೆಗೆ ಒಬ್ಬ ಅತಿಥಿ ಬಂದಿದ್ದಾನೆ. ಬಾಲಕ ನಿಮಾಯಿ ಆನಂದದಿಂದ ತನ್ನ ಗೆಳೆಯರೊಡನೆ ಹಾಡುತ್ತ ಆಟವಾಡುತ್ತಿದ್ದಾನೆ :

ಓ ಎಲ್ಲಿದೆ ಬೃಂದಾವನ ತೋರಿರೊ  
ಎಲ್ಲಿ ಯಶೋದಾ ತಾಯಿ?  
ಎಲ್ಲಿ ನನ್ನ ಆ ಧವಳ ಶ್ಯಾಮಲಿ?  
ಎಲ್ಲಿದೆ ಮೋಹನ ಮುರಲಿ?

ಎಲ್ಲಿ ನನ್ನ ಪಿತ ನಂದಗೋಪ, ಮ-  
ತ್ತೆಲ್ಲಿಹನಾ ಬಲರಾಮ?  
ಎಲ್ಲಿ ನನ್ನ ಪ್ರಿಯ ಸ್ನೇಹಿತರಿಬ್ಬರು,  
ಆ ಶ್ರೀಧಾಮ ಸುಧಾಮ?

ಯಮುನಾ ತಟದೆಡೆ ವಂಶೀವಟದೆಡೆ  
ಪ್ರಿಯ ಗೋಪೀ ಜನವೆಲ್ಲಿ?

ನನ್ನ ಪ್ರಾಣಸಖಿ ರಾಧಾರಮಣಿಯು
ಹುದುಗಿರುವಳು ಇನ್ನೆಲ್ಲಿ

ಅತಿಥಿ ಕಣ್ಣುಮುಚ್ಚಿ ಭಗವಂತನಿಗೆ ಅನ್ನನೈವೇದ್ಯ ಅರ್ಪಿಸುತ್ತಿದಾನೆ. ನಿಮಾಯಿ ಓಡಿಹೋಗಿ ಆ ಅನ್ನವನ್ನ ತಿನ್ನುತ್ತಿದಾನೆ. ಅತಿಥಿಗೆ ನಿಮಾಯಿ ಭಗವಂತನ ಅವತಾರ ಎಂಬುದು ಗೊತ್ತಾಗಿ ದಶಾವತಾರಸ್ತೋತ್ರದಿಂದ ಆತನನ್ನು ಪ್ರಸನ್ನಗೊಳಿಸಲು ಪ್ರಯತ್ನಿಸುತ್ತಿದಾನೆ. ಜಗನ್ನಾಥಮಿಶ್ರ ಮತ್ತು ಆತನ ಹೆಂಡತಿ ಶಚೀದೇವಿ ಇವರಿಂದ ಅತಿಥಿ ಬೀಳ್ಕೊಳ್ಳುವುದರಲ್ಲಿದಾನೆ.

ಈಗ ಆತ ಒಂದು ಸ್ತೋತ್ರವನ್ನು ಹಾಡುತ್ತಿದಾನೆ:

ಜಯತು ಗೌರ, ನಿತ್ಯಾನಂದ ಜಯ ಜಯ ಭವತಾರಣ
ಅನಾಥ ಶರಣ ಜೀವ ಪ್ರಾಣ ಭೀತಿ ಭಯ ನಿವಾರಣ.
ಯುಗ ಯುಗದಲಿ ನವ ಲೀಲಾ ನವ ರಂಗ,
ನವ ತರಂಗ ನವ ಪ್ರಸಂಗ
ಧರಾಭಾರ ಧಾರಣ!
ತಾಪಹಾರಿ, ಪ್ರೇಮವಾರಿ
ಸತತ ರಾಸರಸ ವಿಹಾರಿ
ದೀನ ಶರಣ ಕಲುಷ ಹರಣ ದುಷ್ಟ ದಮನ ಕಾರಣ.

ಪರಮಹಂಸರು ಈ ಸ್ತೋತ್ರವನ್ನು ಕೇಳಿ ಭಾವದಿಂದ ತುಂಬಿ ತುಳುಕಾಡಲಾರಂಭಿಸಿದಾರೆ:

ಮೂರನೆ ದೃಶ್ಯ: ನವದ್ವೀಪದ ಗಂಗಾತೀರ. ಗಂಗೆಯಲ್ಲಿ ಸ್ನಾನ ಮಾಡಿದನಂತರ ಬ್ರಾಹ್ಮಣ ಗಂಡಸರು ಹೆಂಗಸರು ಘಟ್ಟಗಳಲ್ಲಿ ಕುಳಿತು ಪೂಜೆಗಳಲ್ಲಿ ತೊಡಗಿದಾರೆ. ನಿಮಾಯಿ ನೈವೇದ್ಯವನ್ನು ಕದ್ದು ತಿನ್ನುತ್ತಿದಾನೆ. ಅದನ್ನು ನೋಡಿ ಒಬ್ಬ ಬ್ರಾಹ್ಮಣ ಬಹಳ ಕೋಪಗೊಂಡು ಹೇಳುತ್ತಿದಾನೆ: "ಎಲಾ ಧೂರ್ತ! ವಿಷ್ಣುವಿಗೆ ಅರ್ಪಿಸಿದ ನೈವೇದ್ಯವನ್ನು ಕದ್ದು ತಿಂದುಬಿಡುತ್ತಾ ಇದೀಯಾ! ಇಹ, ಪರ ಎರಡೂ ಇಲ್ಲದವನಾಗುವೆ!" ಆತ ಹಾಗೆಂದರೂ ನಿಮಾಯಿ ಕದ್ದುಕೊಂಡು ಓಡಿಹೋಗುವುದರಲ್ಲಿದಾನೆ. ಹೆಂಗಸರಲ್ಲಿ ಅನೇಕರು ಆತನನ್ನು ಬಹಳವಾಗಿ ಪ್ರೀತಿಸುತ್ತಿದಾರೆ. ನಿಮಾಯಿ ಹೊರಟುಹೋಗುತ್ತಿರುವುದನ್ನು ನೋಡಿ ಅವರು ಅದನ್ನು ಸಹಿಸಲಾರದೆ ತಾರಸ್ವರದಿಂದ ಕೂಗುತ್ತಿದಾರೆ: "ಓ ನಿಮಾಯಿ, ಹಿಂದಕ್ಕೆ ಬಾ!" ನಿಮಾಯಿ ಕಿವಿಗೊಡಲಿಲ್ಲ.

ಒಬ್ಬ ಹೆಂಗಸಿಗೆ ನಿಮಾಯಿಯನ್ನು ಹಿಂದಕ್ಕೆ ಬರಿಸುವ ಮಹಾಮಂತ್ರ ಗೊತ್ತಿತ್ತು. ಆಕೆ "ಹರಿಯೆನ್ನೊ! ಹರಿಯೆನ್ನೊ!" ಅಂತ ಹೇಳಲಾರಂಭಿಸಿದಾಳೆ. ಒಡನೆ ನಿಮಾಯಿ "ಹರಿಯೆನ್ನೊ! ಹರಿಯೆನ್ನೊ!" ಎಂದು ಹೇಳುತ್ತ ಹೇಳುತ್ತ ಹಿಂದಿರುಗಿಬರಲಾರಂಭಿಸಿದಾನೆ.

ಪರಮಹಂಸರ ಪಕ್ಕದಲ್ಲಿ ಮಾಸ್ಟರ್ ಕುಳಿತಿದಾನೆ. ಪರಮಹಂಸರಿಗೆ ಇನ್ನು ಸುಮ್ಮನೆ ಕುಳಿತಿರಲಾಗಲಿಲ್ಲ. "ಆಹಾ" ಅಂತ ಹೇಳುತ್ತ ಪ್ರೇಮಾಶ್ರು ಸುರಿಸುತ್ತಿದಾರೆ. ಅವರು ಬಾಬುರಾಮ ಮತ್ತು ಮಾಸ್ಟರಿಗೆ ಹೇಳುತ್ತಿದಾರೆ: "ನೋಡಿ, ನನಗೆ ಭಾವವೇ ಆಗಲಿ, ಸಮಾಧಿಯೇ ಆಗಲಿ ಉಂಟಾದರೆ ಗೊಂದಲ ಎಬ್ಬಿಸಬೇಡಿ. ಇಲ್ಲದಿದ್ದರೆ ಪ್ರಾಪಂಚಿಕರು ನಾನೊಬ್ಬ ಠಕ್ಕ ಅಂತ ಭಾವಿಸಬಹುದು."

ನಾಲ್ಕನೆ ದೃಶ್ಯ: ನಿಮಾಯಿಯ ಉಪನಯನ. ಆತ ಕಾಷಾಯವಸ್ತ್ರಧಾರಿಯಾಗಿದಾನೆ. ಆತನ ತಾಯಿ ಶಚಿ ಮತ್ತು ಅಕ್ಕಪಕ್ಕದ ಹೆಂಗಸರು ಆತನ ಸುತ್ತಲೂ ನಿಂತಿದಾರೆ. ಆತ ಹಾಡುತ್ತ ಭಿಕ್ಷೆ ಬೇಡುತ್ತಿದಾನೆ:

ನೀಡಿರೊಂದೇ ಒಂದು ತುತ್ತನು ನನ್ನ ಭಿಕ್ಷಾಪಾತ್ರೆಗೆ
ಜಗದ ಹಿರಿಪಥವಲೆವ ಈ ಏಕಾಂಗಿ ನೂತನ ಯೋಗಿಗೆ!
ನಂದಗೋಕುಲವ್ರಜರೆ ಸಂದೆನು ನಾನು ನಿಮ್ಮೀ ಒಲುಮೆಗೆ
ಅದಕೆ ಯುಗಯುಗ ನಾನು ಬರುವೆನು ಹಸಿದು ನಿಮ್ಮಯ ಭಿಕ್ಷೆಗೆ!

ಅಲ್ಲಗೋ ಜಾರಿಹುದು ನೇಸರು ಪಶ್ಚಿಮಾದ್ರಿಯ ಮಡಿಲಲಿ,
ಹುಡುಕಲೇ ಬೇಕಲ್ಲ ಮನೆಯನು ಇನ್ನು ಯಮುನಾ ತಟದಲಿ!
ನನ್ನ ಕಂಬನಿಯುದುರಿ ಬೆರೆದಿವೆ ಹರಿವ ಯಮುನೆಯ ಜಲದಲಿ,
ಮುಂದೆ ಹರಿದಿದೆ ಯಮುನೆ ಎಲ್ಲಿಗೊ ಮಧುರ ಮರ್ಮರ ಸ್ವರದಲಿ!

ನಿಮಾಯಿ ಒಬ್ಬ ಹೊರತು ಉಳಿದವರೆಲ್ಲರೂ ರಂಗಭೂಮಿಯಿಂದ ಹೊರಟು ಹೋಗುತ್ತಾರೆ. ದೇವತೆಗಳು ಬ್ರಾಹ್ಮಣಬ್ರಾಹ್ಮಣಿಯರ ವೇಷ ಧರಿಸಿ ನಿಮಾಯಿಯನ್ನು ಸ್ತೋತ್ರಮಾಡುತ್ತಿದಾರೆ.

ಪುರುಷಗಣ:

ಬೆಳುದಿಂಗಳ ಮೈಯವನೇ
ನರವಾಮನನಾದವನೇ
ನಮೋ ನಮೋ ನಿನಗೆ ನಮೋ.

ಸ್ತ್ರೀಗಣ:

ಗೋಪೀಜನ ಮೋಹನನೇ
ಬೃಂದಾವನ ಕುಂಜಗಳಲಿ
ಕೊಳಲೂದುತ ಅಲೆವವನೇ.

ನಿಮಾಯಿ:

ಜಯ ರಾಧೆ, ಶ್ರೀರಾಧೆ.

ಪುರುಷಗಣ:

ವ್ರಜ ಬಾಲಕ ಸಖನೇ
ಮದನನ ಮುರಿದವನೇ.

ಸ್ತ್ರೀಗಣ:

ಗೋಪೀಜನ ಪ್ರಿಯತಮನೇ
ಈ ಯಮುನೆಯ ಅಲೆ ಅಲೆಗಳ
ಮರುಳಾಗಿಸಿ ನಿಂತವನೇ.

ಪುರುಷಗಣ:

ನಾರಾಯಣ, ಅಸುರಾರೀ
ಸುರಗಣಗಳ ಕಾದವನೇ.

ಸ್ತ್ರೀಗಣ:

ಗೋಪೀಜನ ಜೀವನನೇ
ವ್ರಜ ಕಿಶೋರ ಕೃಷ್ಣನೇ
ನಮೋ ನಮೋ ನಿನಗೆ ನಮೋ.

ನಿಮಾಯಿ:

ಜಯ ರಾಧೆ, ಶ್ರೀರಾಧೆ.

ಪರಮಹಂಸರು ಈ ಹಾಡನ್ನು ಕೇಳುತ್ತ ಕೇಳುತ್ತ ಇದ್ದ ಹಾಗೇ ಸಮಾಧಿಸ್ಥರಾಗಿಬಿಟ್ಟದಾರೆ. ಪರದೆ ಬೀಳುತ್ತಿದೆ. ವಾದ್ಯ ಮೇಳ ಮುಂದು ವರಿಯುತ್ತಿದೆ.

ಐದನೆ ದೃಶ್ಯ: ಅದ್ವೈತಗೋಸ್ವಾಮಿ ಮನೆಯ ಮುಂಭಾಗದಲ್ಲಿ ಶ್ರೀವಾಸನೇ ಮೊದಲಾದ ಭಕ್ತರು ಮಾತುಕತೆ ಆಡುತ್ತಿದಾರೆ. ಮುಕುಂದ ಸುಮಧುರ ಕಂಠ ದಿಂದ ಹಾಡುತ್ತಿದಾನೆ:

ಏಳು ಮನವೇ ಏಳು ಮೇಲೇಳು,
ಮಾಯೆ ಬಿಗಿದೀ ಮಧುರ ಬಂಧನವ ಸೀಳು.
ಓ ಏಳು—ನೀನಾರು, ಇಲ್ಲಿಗೇತಕೆ ಬಂದೆ ಎನ್ನುವೆಚ್ಚರಕೆ;
ಏನು ಮರುಳೋ ನಿನಗೆ, ಮರೆದು ಮಲಗಿದೆಯಲ್ಲ
ಜಗದ ಮಂಪರಕೆ!
ಏಳಿನ್ನು, ಮಲಗದಿರು; ಕಣ್ಣಬಿಡು ಕವಿದಿರುವ
ದುಸ್ವಪ್ನದಿಂದ;
ನಿನ್ನೊಳೇ ತುಳುಕುತಿದೆ ದಿವ್ಯ ಆನಂದ!
ಬಾ ಹೊರಗೆ, ಕವಿದ ಭ್ರಾಂತಿಯ ತಮದ ಸೆರೆಯೊಳಗಿನಿಂದ
ತಮವು ಹರಿಯಲಿ ಹೊಳೆಯುವೆಳನೇಸರಿಂದ!

ಶ್ರೀರಾಮಕೃಷ್ಣರು ಈ ಹಾಡನ್ನು ಹಾಡಿದವನ ಕಂಠವನ್ನು ಬಹಳ ವಾಗಿ ಹೊಗಳುತ್ತಿದಾರೆ.

ಆರನೆ ದೃಶ್ಯ: ನಿಮಾಯಿ ತನ್ನ ಮನೆಯಲ್ಲಿ ಇದಾನೆ. ಶ್ರೀವಾಸ ಆತನನ್ನು ಸಂಧಿಸಲು ಅಲ್ಲಿಗೆ ಬಂದಿದಾನೆ. ಮೊದಲು ಆತ ಶಚಿಯನ್ನು ಸಂಧಿಸುತ್ತಾನೆ. ಶಚಿ ಅಳುತ್ತ ಹೇಳುತ್ತಿದಾಳೆ: "ನಿಮಾಯಿ ಗೃಹಕೃತ್ಯದ ಯಾವ ಕೆಲಸಕಾರ್ಯಗಳಿಗೂ ಮನಸ್ಸು ಕೊಡುತ್ತಿಲ್ಲ. ನನ್ನ ಹಿರಿಯ ಮಗ ವಿಶ್ವರೂಪ ಸನ್ಯಾಸಿಯಾಗಿ ಹೊರಟು ಹೋದ. ಅಂದಿನಿಂದ ನನ್ನ ಹೃದಯ ಬಹಳ ದುಃಖಕ್ಕೆ ಈಡಾಗಿದೆ. ನಿಮಾಯಿಯೂ ಎಲ್ಲಿ ಹಾಗೇ ಮಾಡಿಬಿಡುವನೊ ಏನೊ ಎಂಬ ಭಯ ನನ್ನ ಹೃದಯವನ್ನು ನಿರಂತರ ಕಂಪಿಸುತ್ತಿದೆ."

ನಿಮಾಯಿ ಅಲ್ಲಿಗೆ ಬರುತ್ತಾನೆ. ಶಚಿ ಶ್ರೀವಾಸನಿಗೆ ಹೇಳುತ್ತಿದಾಳೆ: "ಅಹ, ನೋಡಿ, ನೀವೇ ನೋಡಿ, ಆತ ಹುಚ್ಚನಂತಾಗಿಬಿಟ್ಟಿರುವುದನ್ನ. ಪ್ರೇಮಾಶ್ರುಗಳಿಂದ ಆತನ ಎದೆ ನೆನೆದುಹೋಗಿಬಿಡುತ್ತದೆ. ಹೇಳಿ, ದಯವಿಟ್ಟು ಹೇಳಿ ಅವನನ್ನು ಈ ಅವಸ್ಥೆಯಿಂದ ಮುಕ್ತನನ್ನಾಗಿ ಮಾಡುವ ಬಗೆ ಹೇಗೆ."

ನಿಮಾಯಿ ಶ್ರೀವಾಸನನ್ನು ನೋಡಿದೊಡನೆ, ಆತನ ಎರಡು ಪಾದಗಳನ್ನೂ ಬಲವಾಗಿ ಹಿಡಿದುಕೊಂಡು ಅಳುತ್ತ ಹೇಳುತ್ತಿದಾನೆ: "ಏನು ಮಾಡಲಿ ಪೂಜ್ಯರೆ, ಏನುಮಾಡಲಿ—ನನಗಿನ್ನೂ ಕೃಷ್ಣಭಕ್ತಿ ದೊರೆತಿಲ್ಲವಲ್ಲ! ನನ್ನ ಅಧಮ ಜನ್ಮ ವೃಥಾ ಕಳೆದುಹೋಗುತ್ತಿದೆಯಲ್ಲ! ಪ್ರಭು, ಹೇಳಿ ಕೃಷ್ಣ ಎಲ್ಲಿದಾನೆ? ಕೃಷ್ಣ ಎಲ್ಲಿ ದೊರೆಯುತ್ತಾನೆ ಹೇಳಿ. ನಿಮ್ಮ ಪಾದಧೂಳಿಯನ್ನು ನನಗೆ ಅನುಗ್ರಹಿಸಿ ಆಶೀರ್ವಾದ ಮಾಡಿ, ವನಮಾಲಿ ನನಗೆ ದೊರೆಯುವ ಹಾಗೆ."

ಪರಮಹಂಸರು ಮಾಸ್ಟರ ಕಡೆಗೆ ತಿರುಗಿ ಏನನ್ನೊ ಹೇಳಲು ಪ್ರಯತ್ನಮಾಡುತ್ತಿದ್ದಾರೆ, ಆದರೆ ಸಾಧ್ಯವಾಗುತ್ತಿಲ್ಲ. ಕಂಠ ಬಿಗಿದು-ಕೊಳ್ಳುತ್ತಿದೆ; ಪ್ರೇಮಾಶ್ರು ಕೆನ್ನೆಗಳ ಮೇಲೆ ಹರಿಯುತ್ತಿದೆ; ಏಕದೃಷ್ಟಿಯಿಂದ ನೋಡುತ್ತಿದ್ದಾರೆ, ನಿಮಾಯಿ ಶ್ರೀವಾಸನ ಪಾದಗಳನ್ನ ಹಿಡಿದುಕೊಂಡು ಅಳುತ್ತ ಹೇಳುತ್ತಿರುವುದನ್ನ: "ಏನು ಮಾಡಲಿ ಪೂಜ್ಯರೆ, ಏನು ಮಾಡಲಿ—ನನಗಿನ್ನೂ ಕೃಷ್ಣಪ್ರೇಮ ದೊರೆತಿಲ್ಲವಲ್ಲ!"

ನಿಮಾಯಿ ಒಂದು ಪಾಠಶಾಲೆ ತೆರೆದಿದ್ದಾನೆ, ಆದರೆ ಅತನ ಕೈಯಲ್ಲಿ ಪಾಠ ಹೇಳಿಕೊಡಲಾಗುತ್ತಿಲ್ಲ. ನಿಮಾಯಿ ಗಂಗಾದಾಸನ ಕೈಕೆಳಗೆ ಓದಿದ್ದ. ಆತ ನಿಮಾಯಿಗೆ ಬುದ್ಧಿಹೇಳಲು ಬರುತ್ತಿದ್ದಾನೆ. ಆತ ಶ್ರೀವಾಸನಿಗೆ ಹೇಳುತ್ತಿದ್ದಾನೆ: "ಪೂಜ್ಯ ಶ್ರೀವಾಸರೆ, ಇಲ್ಲಿ ಕೇಳಿ! ನಾವು ಬ್ರಾಹ್ಮಣರೂ ಆಗಿರುವುದಲ್ಲದೆ, ವಿಷ್ಣು-ಪೂಜೆಯಲ್ಲೂ ನಿರತರಾಗಿದೇವೆ. ನೀವೆಲ್ಲಾ ಸೇರಿಕೊಂಡು ನಿಮಾಯಿಯ ಸಾಂಸಾರಿಕ ಜೀವನಕ್ಕೆ ಕೊಡಲಿ ಹಾಕುತ್ತಿದೀರಿ."

ಶ್ರೀರಾಮಕೃಷ್ಣರು ಮಾಸ್ಟರಿಗೆ: "ಇದು ಸಂಸಾರಿಗಳು ಕೊಡುವ ಉಪದೇಶ—ಇದನ್ನೂ ಮಾಡಬೇಕು, ಅದನ್ನೂ ಮಾಡಬೇಕು. ಸಂಸಾರಿಗಳು ಉಪದೇಶಕೊಡುವಾಗ ಬೋಧಿಸುತ್ತಾರೆ, ಎರಡು ಕಡೆಯೂ—ರಾಮ, ಕಾಮ—ಆಸಕ್ತಿ ಇಡುವ ಹಾಗೆ."

ಮಾಸ್ಟರ್: "ಹೌದು, ನಿಜ."

ಈಗ ಗಂಗಾದಾಸ ನಿಮಾಯಿಗೆ ಬುದ್ಧಿಹೇಳುತ್ತಿದ್ದಾನೆ. ಆತ ಹೇಳುತ್ತಿದ್ದಾನೆ: "ನಿಮಾಯಿ, ನಿನಗೆ ನಿಸ್ಸಂದೇಹವಾಗಿ ಶಾಸ್ತ್ರಜ್ಞಾನ ಉಂಟಾಗಿದೆ. ನನ್ನೊಡನೆ ತರ್ಕಿಸು. ಸಂಸಾರಧರ್ಮಕ್ಕಿಂತ ಉತ್ತಮವಾದ್ದು ಬೇರೆ ಯಾವುದಿದೆ ನನಗೆ ತಿಳಿಸು ನೋಡೋಣ. ನೀನು ಗೃಹಸ್ಥ. ನೀನು ಗೃಹಸ್ಥಧರ್ಮವನ್ನು ಬಿಟ್ಟು ಬೇರೆ ಧರ್ಮಕ್ಕೆ ಏಕೆ ಕೈಹಾಕಿದೀಯೆ?"

ಶ್ರೀರಾಮಕೃಷ್ಣರು ಮಾಸ್ಟರಿಗೆ: "ನೋಡಿದೆಯೋ? ಎರಡು ಕಡೆಗೂ ಆಸಕ್ತಿ ಇಡುವಂತೆ ಬೋಧಿಸುತ್ತಿರುವುದನ್ನ!"

ಮಾಸ್ಟರ್: "ಹೌದು, ನಿಜ."

ನಿಮಾಯಿ ಗಂಗಾದಾಸನಿಗೆ ಹೇಳುತ್ತಿದ್ದಾನೆ: "ನಾನು ಬೇಕೂ ಅಂತ ಸಂಸಾರಧರ್ಮವನ್ನು ಉಪೇಕ್ಷಿಸುತ್ತಿಲ್ಲ. ಅದಕ್ಕೆ ಬದಲು ನನ್ನ ಇಚ್ಛೆ ಎಲ್ಲಾ ನಡೆದುಕೊಂಡುಹೋಗಲಿ ಅಂತ. ಆದರೆ, ಮಹಾಶಯರೆ, ಇದು ಏಕೆ ಹೀಗಾಗುತ್ತೊ ನನಗೆ ಗೊತ್ತಿಲ್ಲ. ಏನೊ ಒಂದು ನನ್ನನ್ನು ಆಕರ್ಷಿಸಿಬಿಡುತ್ತಿದೆ. ಏನು

ಮಾಡುವುದೊ ನನಗೆ ಬೇರೆ ಗೊತ್ತಿಲ್ಲ. ದಡದ ಹತ್ತಿರವೇ ಇರೋಣ ಅಂತ ಪ್ರಯತ್ನಮಾಡುತ್ತೇನೆ, ಆದರೆ ಅದು ಸಾಧ್ಯವಾಗುತ್ತಿಲ್ಲ. ಆ ಕಡೆಗೆ ಪ್ರಾಣ ಸುಮ್ಮನೆ ಧಾವಿಸುತ್ತಿರುತ್ತದೆ. ನಾನು ನಿಸ್ಸಹಾಯಕ. ಆ ಅಖಂಡ ಸಾಗರಕ್ಕೆ ಒಮ್ಮೆಗೇ ದುಮುಕಿಬಿಡುವಂತೆ ನನ್ನ ಜೀವ ನನ್ನನ್ನು ಸತತ ಬಲಾತ್ಕರಿಸುತ್ತಿದೆ.''

ಶ್ರೀರಾಮಕೃಷ್ಣರು: ''ಆಹಾ!''

ಏಳನೆ ದೃಶ್ಯ: ನಿತ್ಯಾನಂದ ನವದ್ವೀಪಕ್ಕೆ ಬಂದಿದಾನೆ. ನಿತ್ಯಾನಂದ ನಿಮಾಯಿಗಾಗಿ ಹುಡುಕುತ್ತಿದಾನೆ; ಹಾಗೇ ನಿಮಾಯಿಯೂ ನಿತ್ಯಾನಂದನಿಗಾಗಿ ಹುಡುಕುತ್ತಿದಾನೆ. ಇಬ್ಬರೂ ಒಂದು ಜಾಗದಲ್ಲಿ ಒಬ್ಬರನ್ನೊಬ್ಬರು ಸಂಧಿಸುತ್ತಾರೆ. ನಿಮಾಯಿ ಈಗ ಹೇಳುತ್ತಿದಾನೆ: ''ನನ್ನ ಜೀವನ ಸಾರ್ಥಕವಾಯಿತು! ನನ್ನ ಕನಸು ಇಂದು ನನಸಾಯಿತು! ಸ್ವಪ್ನದಲ್ಲಿ ನನಗೆ ದರ್ಶನ ಕೊಟ್ಟು ಅದೃಶ್ಯರಾಗಿ ಬಿಟ್ಟದ್ದಿರಿ.''

ಶ್ರೀರಾಮಕೃಷ್ಣರು ಮಾಸ್ಟರಿಗೆ ಗದ್ಗದ ಸ್ವರದಿಂದ ಹೇಳುತ್ತಿದಾರೆ: ''ನಿಮಾಯಿ ಹೇಳುತ್ತಿದಾನೆ, ಆತನನ್ನು ಸ್ವಪ್ನದಲ್ಲಿ ತಾನು ಕಂಡುದಾಗಿ.''

ನಿಮಾಯಿಗೆ ಭಗವದಾವೇಶ ಬಂದುಬಿಟ್ಟಿದೆ. ಆತ ಅದ್ವೈತಗೋಸ್ವಾಮಿ, ಶ್ರೀವಾಸ, ಹರಿದಾಸ ಇವರೇ ಮೊದಲಾದವರೊಡನೆ ಮಾತುಕತೆಯಾಡುತ್ತಿದಾನೆ. ನಿಮಾಯಿಯ ಭಾವ ಏನು ಎಂಬುದನ್ನು ಅರಿತು ಅದಕ್ಕನುಗುಣವಾಗಿ ನಿತಾಯಿ ಒಂದು ಹಾಡು ಹಾಡುತ್ತಿದಾನೆ:

ಕೃಷ್ಣನೆಲ್ಲಿ ಕೃಷ್ಣನೆಲ್ಲಿ, ಕಾಣಲಿಲ್ಲ ಆತನ
ಶೂನ್ಯವಾಯ್ತು ಬೃಂದಾವನದೀ ನಿಕುಂಜಕಾನನ.
ತಂದುಕೊಡಿರೆ ಓ ಸಖಿಯರೆ, ನನಗೆ ನನ್ನ ನಲ್ಲನ
ಈ ರಾಧೆಗೆ ಅವನಲ್ಲದೆ ಬೇರೆ ಇಲ್ಲ ಜೀವನ!

ಪರಮಹಂಸರು ಹಾಡನ್ನು ಕೇಳುತ್ತ ಕೇಳುತ್ತಲೆ ಸಮಾಧಿಸ್ಥರಾಗಿ ಬಿಟ್ಟಿದಾರೆ. ಬಹಳ ಹೊತ್ತಿನಿಂದಲೂ ಅದೇ ಸ್ಥಿತಿಯಲ್ಲಿದಾರೆ. ವಾದ್ಯ-ಮೇಳ ಮುಂದುವರಿಯುತ್ತಿದೆ. ಪರಮಹಂಸರು ಈಗ ಪ್ರಕೃತಿಸ್ಥರಾಗುತ್ತಿದಾರೆ. ಈ ಸಮಯಕ್ಕೆ ಸರಿಯಾಗೇ ಖರದಾರ ಗ್ರಾಮದ ಮತ್ತು ನಿತ್ಯಾ-ನಂದಗೋಸ್ವಾಮಿಯ ವಂಶಕ್ಕೆ ಸೇರಿದ ಒಬ್ಬ ಯುವಕ ಬಾಕ್ಸನ್ನು ಪ್ರವೇಶಿಸಿ ಪರಮಹಂಸರ ಕುರ್ಚಿಯ ಹತ್ತಿರ ನಿಂತುಕೊಂಡ. ಆತನನ್ನು ನೋಡಿ ಪರಮಹಂಸರಿಗೆ ಬಹಳ ಆನಂದವಾಗಿಬಿಟ್ಟಿತು. ಆತನ ಕೈ ಹಿಡಿದು ಕೊಂಡು ಆತನೊಡನೆ ಅಕ್ಕರೆಯಿಂದ ಮಾತುಕತೆಯಾಡುತ್ತಿದಾರೆ. ಆಗಾಗ

ಹೇಳುತ್ತಲೇ ಇದ್ದಾರೆ: "ನೀನು ಇಲ್ಲೇ ಕುಳಿತುಕೊಂಡುಬಿಡು. ನೀನು ಇಲ್ಲಿ ಇದ್ದರೆ ನನಗೆ ಉದ್ದೀಪನವಾಗಿಬಿಡುತ್ತದೆ." ಈಗ ಪ್ರೀತಿಯಿಂದ ಆತನ ಕೈಯೊಡನೆ ಆಟವಾಡುತ್ತಿದ್ದಾರೆ. ಮುಖವನ್ನು ಸವರುತ್ತ ಆದರ ತೋರಿಸುತ್ತಿದ್ದಾರೆ.

ಆ ಯುವಕ ಹೊರಟುಹೋದನಂತರ ಪರಮಹಂಸರು ಮಾಸ್ಟರಿಗೆ ಹೇಳುತ್ತಿದ್ದಾರೆ: "ಆ ಹುಡುಗ ದೊಡ್ಡ ಪಂಡಿತ. ಆತನ ತಂದೆ ದೊಡ್ಡ ಭಗವದ್ಭಕ್ತ. ನಾನು ಖರದಾರಿಗೆ ಶ್ಯಾಮಸುಂದರದೇವರನ್ನು ನೋಡಿ ಬರಲು ಹೋದಾಗಲೆಲ್ಲ ಒಂದು ನೂರು ರೂಪಾಯಿಗೂ ದೊರೆಯದ ಭಗವಂತನ ಪ್ರಸಾದವನ್ನು ತಂದು ನನಗೆ ತಿನ್ನಿಸುತ್ತಾನೆ. ಆ ಹುಡುಗನಲ್ಲಿ ಒಳ್ಳೆ ಲಕ್ಷಣಗಳಿವೆ. ಆತನನ್ನು ಒಂದು ಕಿಂಚಿತ್ತು ಕುಲುಕಿಬಿಟ್ಟರೇ ಆತನಲ್ಲಿ ಆತ್ಮಜಾಗೃತಿ ಉಂಟಾಗಿಬಿಡುತ್ತದೆ. ಆತನನ್ನು ನೋಡಿದರೇ ನನ್ನಲ್ಲಿ ತೀವ್ರ ಉದ್ದೀಪನವಾಗಿಬಿಡುತ್ತದೆ. ಆತನೇನಾದರೊ ಇಲ್ಲಿ ಇನ್ನು ಸ್ವಲ್ಪ ಹೊತ್ತು ಇದ್ದುಬಿಟ್ಟಿದ್ದರೆ ನಾನು ಭಾವಾವಿಷ್ಟನಾಗಿ ಎದ್ದು ನಿಂತು ಬಿಡುತ್ತಿದ್ದೆ."

ಎಂಟನೆ ದೃಶ್ಯ: ಪರದೆ ಮೇಲಕ್ಕೆ ಹೋಗುತ್ತಿದೆ. ನಿತ್ಯಾನಂದ ತನ್ನ ಗೆಳೆಯರೊಡನೆ ಹರಿನಾಮೋಚ್ಚಾರಣೆ ಮಾಡುತ್ತ ರಾಜಮಾರ್ಗದಲ್ಲಿ ಮೆರವಣಿಗೆ ಯಲ್ಲಿ ಹೋಗುತ್ತಿದ್ದಾನೆ. ಎಲ್ಲಾ ಧಾರ್ಮಿಕರ ಆಜನ್ಮ ಶತ್ರುಗಳಾದ ಜಗಾಯಿ, ಮಾಧಾಯಿ ಎಂಬ ಇಬ್ಬರು ಪುಂಡರನ್ನು ಆತ ದಾರಿಯಲ್ಲಿ ಸಂಧಿಸುತ್ತಾನೆ. ಮಾಧಾಯಿ ಬಕ್ಕರೆ ಚೂರಿನಿಂದ ನಿತಾಯಿಯನ್ನು ಹೊಡೆಯುತ್ತಾನೆ. ನಿತಾಯಿಯ ತಲೆ ಒಡೆದು ರಕ್ತ ಸುಮ್ಮನೆ ಸುರಿಯುತ್ತಿದೆ. ಆದರೆ ಆತ ಪ್ರೇಮೋನ್ಮತ್ತನಾಗಿರು ವುದರಿಂದ ಅದರ ಕಡೆಗೆ ಆತನ ಗಮನವೇ ಹೋಗುತ್ತಿಲ್ಲ.

ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿದ್ದಾರೆ.

ನಿತಾಯಿ ಆಲಿಂಗಿಸಿಕೊಳ್ಳುತ್ತಾನೆ, ಜಗಾಯಿ ಮಾಧಾಯಿ ಎಂಬ ಇಬ್ಬರು ಪುಂಡರನ್ನೂ. ಈಗ ಆತ ಹಾಡುತ್ತಿದ್ದಾನೆ:

ಬಾ ಜಗಾಯಿ ; ಬಾ ಮಾಧಾಯಿ ;
ಹರಿನಾಮವ ಸವಿದಾನಂದದಿ ಕುಣಿಯೋಣ . . . . ( ಉ. ೭೯೩ )

ಈಗ ನಿಮಾಯಿ ಶಚೀದೇವಿಗೆ ತನ್ನ ಸನ್ಯಾಸದ ವಿಷಯವಾಗಿ ತಿಳಿಸುತ್ತಾನೆ. ಶಚೀದೇವಿ ಮೂರ್ಛಿತಳಾಗಿ ಕೆಳಕ್ಕೆ ಬೀಳುತ್ತಾಳೆ.

ಈ ದೃಶ್ಯವನ್ನು ನೋಡಿ ಪ್ರೇಕ್ಷಕರಲ್ಲನೇಕರು ಹಾಹಾಕಾರವನ್ನು

ಎಬ್ಬಿಸುತ್ತಿದಾರೆ. ಪರಮಹಂಸರು ಸ್ಥಿರವಾಗಿ ಕುಳಿತುಕೊಂಡು ರಂಗ-ಭೂಮಿಯ ಕಡೆ ಏಕದೃಷ್ಟಿಯಿಂದ ನೋಡುತ್ತಿದಾರೆ. ಅವರ ಕಡೆಗಣ್ಣಿನಲ್ಲಿ ಕೇವಲ ಒಂದು ಹನಿ ನೀರು ಶೇಖರವಾಗಿರುವುದು ಕಂಡುಬಂತು. ನಾಟಕ ಸಮಾಪ್ತಿಯಾಯಿತು.

ಪರಮಹಂಸರು ಇನ್ನೇನು ಗಾಡಿಗೆ ಹತ್ತುವುದರಲ್ಲಿದಾರೆ. ಒಬ್ಬ ಭಕ್ತ ಕೇಳುತ್ತಿದಾನೆ, ನಾಟಕ ಹೇಗಿತ್ತು ಎಂದು. ಶ್ರೀರಾಮಕೃಷ್ಣರು ನಗುತ್ತ ನಗುತ್ತ ಹೇಳುತ್ತಿದಾರೆ: "ಅಸಲು ನಕಲು ಎರಡೂ ಒಂದೇ ಆಗಿ ತೋರಿದುವು."

ಗಾಡಿ ಮಹೇಂದ್ರನ ಮಿಲ್ಲಿನ ಕಡೆಗೆ ಮುಂದುವರಿಯುತ್ತಿದೆ. ಇದ್ದಕ್ಕಿದ್ದಹಾಗೆ ಪರಮಹಂಸರು ಭಾವಾವಿಷ್ಟರಾಗಿಬಿಟ್ಟಿದಾರೆ. ಪ್ರೇಮಭಾವದಿಂದ ತಮಗೆ ತಾವೇ ಹೇಳಿಕೊಳ್ಳುತ್ತಿದಾರೆ: "ಹೇ ಕೃಷ್ಣ! ಹೇ ಕೃಷ್ಣ! ಜ್ಞಾನ ಕೃಷ್ಣ! ಪ್ರಾಣ ಕೃಷ್ಣ! ಮನ ಕೃಷ್ಣ! ಆತ್ಮ ಕೃಷ್ಣ! ದೇಹ ಕೃಷ್ಣ!" ಮತ್ತೆ ಹೇಳುತ್ತಿದಾರೆ: "ಪ್ರಾಣ ಹೇ ಗೋವಿಂದ, ಮಮ ಜೀವನ!"

ಗಾಡಿ ಮಿಲ್ಲನ್ನು ಮುಟ್ಟಿತು. ಬಹಳ ಸಡಗರದಿಂದ ಮಹೇಂದ್ರ ಪರಮಹಂಸರಿಗೆ ಉಪಾಹಾರ ಮಾಡಿಸುತ್ತಿದಾನೆ. ಮಾಸ್ಟರ್ ಅವರ ಹತ್ತಿರವೇ ಕುಳಿತಿದಾನೆ. ಪರಮಹಂಸರು ಆತನಿಗೆ ಪ್ರೀತಿಯಿಂದ ಹೇಳುತ್ತಿದಾರೆ: "ನೀನೂ ಸ್ವಲ್ಪ ತೆಗೆದುಕೊ." ಆತನ ಕೈಗೆ ಸ್ವಲ್ಪ ಸಿಹಿ ತಿಂಡಿಗಳನ್ನು ಹಾಕುತ್ತಿದಾರೆ.

ಈಗ ಪರಮಹಂಸರು ದಕ್ಷಿಣೇಶ್ವರದ ಕಡೆ ಮುಂದುವರಿಯುತ್ತಿದಾರೆ. ಗಾಡಿಯಲ್ಲಿ ಮಹೇಂದ್ರ ಮತ್ತು ಇನ್ನೂ ಒಬ್ಬಿಬ್ಬರು ಭಕ್ತರು ಕುಳಿತಿದಾರೆ. ಪರಮಹಂಸರು ಆನಂದದಿಂದ ತುಂಬಿತುಳುಕಾಡುತ್ತಿದಾರೆ. ಈಗ ಅವರು ಗೌರಾಂಗ ಮತ್ತು ನಿತಾಯಿಯ ಸಂಬಂಧವಾಗಿ ಒಂದು ಹಾಡು ಹಾಡುತ್ತಿದಾರೆ. ಮಾಸ್ಟರೂ ಅವರೊಡನೆ ಹಾಡುತ್ತಿದಾನೆ:

ಗೌರಾಂಗ ನಿತ್ಯಾನಂದರೆನ್ನುವ
ದಿವ್ಯ ಸೋದರವರ್ಯರೇ, . . . (ಉ. ೧೩೩)

ಮಹೇಂದ್ರ ತೀರ್ಥಯಾತ್ರೆಗೆ ಹೋಗಬೇಕೆಂದಿದಾನೆ. ಆತ ಆ ವಿಷಯವಾಗಿ ಪರಮಹಂಸರೊಡನೆ ಮಾತುಕತೆ ಆಡುತ್ತಿದಾನೆ.

ಶ್ರೀರಾಮಕೃಷ್ಣರು ನಗುತ್ತ: "ನಿನ್ನ ಹೃದಯದಲ್ಲಿ ಭಗವತ್ಪ್ರೇಮ

ಈಗತಾನೆ ಅಂಕುರವಾಗಿದೆ. ಅದನ್ನೇಕೆ ಒಣಗಿಸಿಬಿಡಬೇಕು ಅಂತ ಮಾಡಿಕೊಂಡಿದೀಯೆ? ಆದಷ್ಟು ಬೇಗ ಬಂದುಬಿಡು. ನಿನ್ನ ಮನೆಗೆ ಬರಬೇಕೆಂದು ಬಹಳ ದಿನದಿಂದಲೂ ಯೋಚಿಸುತ್ತಿದ್ದೆ. ಈಗ ಅದು ಪೂರ್ಣಗೊಂಡಿತು. ನನಗೆ ಬಹಳ ಆನಂದವಾಗಿಬಿಟ್ಟಿದೆ."

ಮಹೇಂದ್ರ: "ಮಹಾಶಯರೆ, ನನ್ನ ಜೀವನ ಸಾರ್ಥಕವಾಯಿತು."

ಶ್ರೀರಾಮಕೃಷ್ಣರು: "ನಿನ್ನ ಜೀವನ ಎಂದೊ ಸಾರ್ಥಕಗೊಂಡುಬಿಟ್ಟಿತು. ನಿನ್ನ ತಂದೆಯೂ ಬಹಳ ಒಳ್ಳೆಯವನೆ. ಅಂದು ನಾನು ಆತನನ್ನು ನೋಡಿದೆ. ಆತನಿಗೆ ಅಧ್ಯಾತ್ಮರಾಮಾಯಣದಲ್ಲಿ ಶ್ರದ್ಧೆ."

ಮಹೇಂದ್ರ: "ಕೃಪೆಮಾಡಿ, ನನಗೆ ಭಕ್ತಿಯುಂಟಾಗುವಂತೆ."

ಶ್ರೀರಾಮಕೃಷ್ಣರು: "ನೀನು ಅತ್ಯಂತ ಉದಾರಿ ಮತ್ತು ಸರಳ ಸ್ವಭಾವಿ. ಮನುಷ್ಯ ಉದಾರಿ, ಸರಳ ಆಗದಿದ್ದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲಾಗೋದಿಲ್ಲ. ಕಪಟಿಗಳಿಗೆ ಆತ ಬಹಳ ಬಹಳ ದೂರ."

ಮಹೇಂದ್ರ ಶಾಮಬಾಜಾರಿನ ಹತ್ತಿರ ಪರಮಹಂಸರಿಂದ ಬೀಳ್ಕೊಂಡ. ಗಾಡಿ ಮುಂದುವರಿಯುತ್ತಿದೆ—ತನ್ನ ಗುರಿಗೆ.



# ಪರಿಶಿಷ್ಟ ೧
## ಸಂಸ್ಕೃತ ಶ್ಲೋಕಗಳ ಸರಳಾನುವಾದ

೧. ಹೇ ಭಗವಂತ ನೀನು ನಮ್ಮ ತಂದೆ. ತಂದೆಯೋಪಾದಿಯಲ್ಲಿ ನಮಗೆ ಸದ್ಬುದ್ಧಿಯನ್ನು ಕೊಡು. ನಮ್ಮನ್ನು ಎಂದಿಗೂ ನಾಶಗೊಳಿಸಬೇಡ. ವಂದನೆಗಳು ನಿನಗೆ.

(ಶುಕ್ಲ ಯಜುರ್ವೇದ ಸಂಹಿತಾ XXXVII, ೨೦.)

೨. ಬ್ರಹ್ಮ ಸತ್ಯರೂಪ, ಜ್ಞಾನಮಯ, ಅನಂತ.

(ತೈತ್ತಿರೀಯೋಪನಿಷತ್ ೨, ೧.)

ಬ್ರಹ್ಮ ಆನಂದರೂಪದಿಂದ ಅಮೃತನಾಗಿ ಪ್ರಕಾಶಿಸುತ್ತಾನೆ.

(ಮುಂಡಕೋಪನಿಷತ್ ೨, ೨, ೭.)

ಬ್ರಹ್ಮ ಶಾಂತವೂ ಮಂಗಳವೂ ಅದ್ವೈತವೂ ಆಗಿದ್ದಾನೆ.

(ಮಾಂಡೂಕ್ಯೋಪನಿಷತ್ ೭.)

ಬ್ರಹ್ಮ ಶುದ್ಧನೂ ಪಾಪದಿಂದ ನಿರ್ಲಿಪ್ತನೂ ಆಗಿದ್ದಾನೆ.

(ಈಶಾವಾಸ್ಯೋಪನಿಷತ್ ೮.)

೩. ಈ ಜಗತ್ತಿಗೆ ಕಾರಣನಾದ, ಸತ್‌ಸ್ವರೂಪನಾದ ನಿನಗೆ ವಂದನೆಗಳು. ಸರ್ವಲೋಕಗಳಿಗೂ ಆಶ್ರಯನಾದ, ಚಿತ್‌ಸ್ವರೂಪನಾದ ನಿನಗೆ ವಂದನೆಗಳು.

(ಬ್ರಹ್ಮಸ್ತೋತ್ರದ ಒಂದನೆ ಪದ್ಯದ ಮೊದಲನೆ ಪಾದದಂತಿದೆ.)

೪. ಬ್ರಹ್ಮ ಅದ್ವಿತೀಯನು, ನಿಷ್ಕಲನು, ವ್ಯೋಮಾತೀತನು, ನಿರಂಜನನು, ಅಪ್ರತರ್ಕ್ಯನು, ಅವಿಜ್ಞೇಯನು, ಉತ್ಪತ್ತಿ ವಿನಾಶ ಇಲ್ಲದವನು.

(ಉತ್ತರಗೀತೆ ೧, ೧.)

೫. ದ್ವಿಜರಿಗೆ ಅಗ್ನಿಯೇ ದೇವರು. ಮುನಿಗಳಿಗೆ ಹೃತ್ಕಮಲದಲ್ಲಿರುವ ಭಗವಂತನೇ ದೇವರು. ಅಲ್ಪಮತಿಗಳಿಗೆ ಪ್ರತಿಮೆಯೇ ದೇವರು. ಸಮದರ್ಶಿ ಜ್ಞಾನಿಗಳಿಗೆ ಪ್ರತಿಯೊಂದೂ ದೇವರೇ.

(ಉತ್ತರಗೀತೆ ೧, ೮.)

೬. ಯಾರಲ್ಲಿ (ಸೃಷ್ಟಿ ಎಂಬ) ಇಂದ್ರಜಾಲ ಕಲ್ಪಿತವಾಗಿದೆಯೊ; ಯಾರ ಮನೋವಿಲಾಸದಿಂದ ಈ ಜಗತ್ತಿನ ಚರಾಚರ ವಸ್ತುಗಳೆಲ್ಲಾ

ಪ್ರಕಾಶಗೊಳ್ಳುವುವೊ; ಯಾರು ಸಚ್ಚಿತ್ಸುಖನೊ, ಪರಮಾತ್ಮರೂಪನೊ, ನಿಜಬೋಧರೂಪನೊ ಅಂಥ ಕಾಶಿಕನೇ ನಾನು.

( ಕಾಶೀಪಂಚಕ ೨. )

೭. ತೈಲಧಾರೆಯ ಹಾಗೆ ಅವಿಚ್ಛಿನ್ನವಾಗಿಯೂ, ಘಂಟೆಯ ದೀರ್ಘ ನಿನಾದದ ಹಾಗೆ ಪರಂಪರೆಯಾಗಿಯೂ ('ಓಂ' ಎಂಬುದು ಕೇಳಿಬರುತ್ತದೆ.)

೮. ಸಮಾಧಿಸ್ಥನಿಗೆ ಊರ್ಧ್ವಲೋಕಗಳೂ ಆತ್ಮಮಯವಾಗಿ, ಅಧೋಲೋಕಗಳೂ ಆತ್ಮಮಯವಾಗಿ, ಮಧ್ಯಲೋಕಗಳೂ ಆತ್ಮಮಯವಾಗಿ ತೋರಿಬರುತ್ತವೆ.

( ಇದರ ಮೊದಲನೆ ಪಾದ ರಾಮಗೀತೆಯ ೮,೧ಗಳ ರಂತಿದೆ. )

೯. ಎಲ್ಲಾ ಲೋಕಗಳಿಗೂ ಆಶ್ರಯನಾದ, ಸತ್‌ಸ್ವರೂಪನಾದ ಹೇ ಬ್ರಹ್ಮನೇ, ನಿನಗೆ ನಮಸ್ಕಾರ. ವಿಶ್ವರೂಪಾತ್ಮಕನಾದ, ಚಿತ್‌ಸ್ವರೂಪ-ನಾದ ಹೇ ಬ್ರಹ್ಮನೇ, ನಿನಗೆ ವಂದನೆ. ಮುಕ್ತಿಯನ್ನು ಕೊಡತಕ್ಕವನಾದ, ಅದ್ವೈತತತ್ತ್ವಸ್ವರೂಪನಾದ ಹೇ ಬ್ರಹ್ಮನೇ, ನಿನಗೆ ನಮಸ್ಕಾರ. ನಿರ್ಗುಣನಾದ, ಸರ್ವವ್ಯಾಪಿಯಾದ ಹೇ ಬ್ರಹ್ಮನೇ, ನಿನಗೆ ನಮಸ್ಕಾರ. ( ಮಹಾನಿರ್ವಾಣ ತಂತ್ರ III. ೫೯.)

ಶರಣ್ಯ ಕೇವಲ ನೀನೊಬ್ಬನೇ. ವರೇಣ್ಯ ಕೇವಲ ನೀನೊಬ್ಬನೇ. ಕೇವಲ ನೀನೇ ಈ ಜಗತ್ತಿಗೆ ಕಾರಣ. ನೀನೇ ಈ ವಿಶ್ವರೂಪವನ್ನು ಧರಿಸಿದ್ದೀಯೆ. ಕೇವಲ ನೀನೇ ಈ ಜಗತ್ತಿನ ಕರ್ತೃ, ಪಾತೃ, ಪ್ರಹರ್ತೃ. ಕೇವಲ ನೀನೇ ಪರನು, ನಿಶ್ಚಲನು, ನಿರ್ವಿಕಲ್ಪನು. (ಮಹಾನಿರ್ವಾಣ ತಂತ್ರ III ೬೦.)

ಭಯಂಕರವಾದುವುಗಳಿಗೇ ಭಯಂಕರನಾದ, ಭೀಕರವಾದುವುಗಳಿಗೇ ಭೀಕರನಾದ, ಪಾವನವಾದುವುಗಳಿಗೇ ಪಾವನ ಮೂರ್ತಿಯಾದ ಹೇ ಬ್ರಹ್ಮ, ನೀನು ಸಕಲ ಜೀವರಾಶಿಗಳಿಗೂ ಆಶ್ರಯಸ್ಥಾನವಾಗಿದ್ದೀಯೆ. ಬಹಳ ಉಚ್ಚ ಸ್ಥಾನದಲ್ಲಿರುವವರೆಲ್ಲರಿಗೂ ನೀನೇ ಒಡೆಯ. ಕೇವಲ ನೀನೇ ವರಿಷ್ಠರಿಗೆಲ್ಲಾ ವರಿಷ್ಠ. ಕೇವಲ ನೀನೇ ರಕ್ಷಕರಿಗೆಲ್ಲಾ ರಕ್ಷಕ. ( ಮಹಾನಿರ್ವಾಣ ತಂತ್ರ III. ೬೧.)

ಹೇ ವರಿಷ್ಠನೆ, ಹೇ ಪ್ರಭುವೆ, ನೀನು ಅವಿನಾಶಿಯಾಗಿಯೂ, ಅನಿರ್ದೇಶ್ಯನಾಗಿಯೂ ಇದ್ದೀಯೆ; ಆದರೂ ಸಕಲ ರೂಪಗಳನ್ನೂ

ಧರಿಸಿದ್ದೀಯೆ. ನೀನು ಇಂದ್ರಿಯಗಳಿಗೆ ಅಗಮ್ಯನಾಗಿದ್ದೀಯೆ, ಆದರೂ ನೀನೇ ಸತ್‌ಸ್ವರೂಪನಾಗಿಯೂ, ಅಚಿಂತ್ಯನಾಗಿಯೂ, ಅಕ್ಷರನಾಗಿಯೂ ಇದ್ದೀಯೆ. ನೀನೇ ಸರ್ವವ್ಯಾಪಿಯಾಗಿಯೂ, ಅವ್ಯಕ್ತ ತತ್ತ್ವವಾಗಿಯೂ ಆಗಿದ್ದೀಯೆ. ಈ ಜಗತ್ತಿನ ಒಡೆಯನಾದ ಮತ್ತು ಪ್ರಕಾಶಕನಾದ ಹೇ ಬ್ರಹ್ಮನೇ ನಮ್ಮನ್ನು ಅಪಾಯಗಳಿಂದ ಕಾಪಾಡು. (ಮಹಾನಿರ್ವಾಣ ತಂತ್ರ III. ೬೨.)

ಕೇವಲ ನಿನ್ನನ್ನೇ ನಾವು ಧ್ಯಾನಿಸುತ್ತೇವೆ. ಕೇವಲ ನಿನ್ನನ್ನೇ ನಾವು ಭಜಿಸುತ್ತೇವೆ. ಜಗತ್ಸಾಕ್ಷಿರೂಪನಾದ ಕೇವಲ ನಿನ್ನನ್ನೇ ನಾವು ನಮಿಸುತ್ತೇವೆ. ನಮ್ಮ ಏಕೈಕ ಆಧಾರವಾಗಿದ್ದರೂ ತಾನು ಮಾತ್ರ ಆಧಾರ ರಹಿತನಾದ, ಈ ಭವಸಾಗರದ ನೌಕೆಯಾದ ಹೇ ಬ್ರಹ್ಮನೇ, ನಿನ್ನಲ್ಲಿ ನಾವು ಶರಣುಹೊಂದುತ್ತೇವೆ.

(ಮಹಾನಿರ್ವಾಣ ತಂತ್ರ III. ೬೩.)



## ಗೀತ ಮತ್ತು ಶ್ಲೋಕಗಳ ಅಕಾರಾದಿ

ಪುಟ.

